ಆಚಾರ್ಯ ಸ್ಮೃತಿ ಗ್ರಂಥಮಾಲಾ – 50

॥ ಶ್ರೀ ಬಾದರಾಯಣೋ ವಿಜಯತೇ ॥

ಬ್ರಹ್ಮಾಂಡ–ಹರಿವಂಶ–ಗರುಡ–ಆದಿತ್ಯ–ಭವಿಷ್ಯೋತ್ತರ–ಸ್ಕಾಂದಪುರಾಣಾಂತರ್ಗತಂ

# ಶ್ರೀವೆಂಕಟೇಶಮಾಹಾತ್ಮ್ಯಂ



ಅನುವಾದಕರು:

ಪಂಡಿತ ಹನುಮೇಶಾಚಾರ್ಯ ಗಂಗೂರ ಜಾಲಿಹಾಳ

ಶ್ರೀಮತ್ಪರಮಪೂಜ್ಯ ಆಚಾರ್ಯ ಸೇವಾ ಪ್ರತಿಷ್ಠಾನ

– 587 112

॥ ದಿಗ್ವಿಜಯ ರಾಮೋ ವಿಜಯತೇ ॥ ॥ ಶ್ರೀ ಲಕ್ಷ್ಮೀವೆಂಕಟೇಶ್ವರ ಪ್ರಸನ್ನ ॥ ॥ ಶ್ರೀ ಗಾಳಿಆಂಜನೇಯ ಸ್ವಾಮಿ ಪ್ರಸನ್ನ ॥



# ಶ್ರೀ ಮಹಾಲಕ್ಷ್ಮೀಯಜ್ಞ

ಹಾಗೂ

# ಶ್ರೀ ಮಹಾಲಕ್ಷ್ಮೀ ಸಂಕೀರ್ತನಮಾಲಾ

30 ಏಪ್ರಿಲ್ – 1 ಮೇ, 2012

ಜಗದ್ಗುರು ಶ್ರೀ ಮನ್ಮಧ್ವಾಚಾರ್ಯ ಮೂಲ ಮಹಾಸಂಸ್ಥಾನ ಶ್ರೀಮದುತ್ತರಾದಿ ಮಠಾಧೀಶರಾದ ಪರಮಪೂಜ್ಯ

ಶ್ರೀ ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರ ಅನುಗ್ರಹ ಆಶೀರ್ವಾದಗಳೊಂದಿಗೆ

'ಭಾಗವಹಿಸಿ' 'ದರ್ಶಿಸಿ' 'ಧನ್ಯರಾಗಿ'

॥ ಶ್ರೀ ಬಾದರಾಯಣೋ ವಿಜಯತೇ ॥

ಬ್ರಹ್ಮಾಂಡ–ಹರಿವಂಶ–ಗರುಡ–ಆದಿತ್ಯ–ಭವಿಷ್ಯೋತ್ತರ–ಸ್ಕಾಂದಪುರಾಣಾಂತರ್ಗತಂ

# ಶ್ರೀವೆಂಕಟೇಶಮಾಹಾತ್ಮ್ಯಂ

## ಕನ್ನಡ ಸರಳಾನುವಾದ ಸಹಿತಂ


ಅನುವಾದಕರು

**ಪಂಡಿತ ಹನುಮೇಶಾಚಾರ್ಯ ಗಂಗೂರ ಜಾಲಿಹಾಳ**


(ಪಂಡಿತ ಪೂಜ್ಯ ಶ್ರೀಮಧ್ವಾಚಾರ್ಯ ಗಂಗೂರ, ಜಾಲೀಹಾಳ ಇವರ ವಿಸ್ತೃತ ಮುನ್ನುಡಿಯೊಂದಿಗೆ)


–ಪ್ರಕಾಶಕರು–

**ಶ್ರೀಮತ್ಪರಮಪೂಜ್ಯ ಆಚಾರ್ಯ ಸೇವಾ ಪ್ರತಿಷ್ಠಾನ**

ಜಾಲೀಹಾಳ – 587 112

(ತಾಲೂಕು ಬದಾಮಿ, ಜಿಲ್ಲಾ ಬಾಗಲಕೋಟೆ.)

Bhagavan Shree Vedabyasa Praneetam
**SHREE VENKATESHAMAAHAATMYAM**

*Edited critically with translation, explainatory notes & critical evaluation by*
**Pandit Hanumeshacharya Gangur, Jalihal**

*Translation and editorial assistance*
Ranganathacharya Gangur


| | | |
|---|---|---|
| First Edition | 1994 | 1500 copies |
| Second Edition | 2006 | 800 copies |
| Third Edition | 2006 | 1000 copies |
| Enlarged & Revised 4th Edition | 2016 | 1000 copies |

No.of pages: 868+40+12





*Published by*
SRIMAT PARAMA POOJYA ACHARYA SEVA PRATISHTANA
Jalihal-587 112, Tq. Badami, Dist. Bagalkot.

*Copies can be had fromn:-*
Ranganathacharya Gangur
#665, 3rd cross, Patel Nagar, Hospet-583201

*DTP By*
Ranganathacharya Gangur, Hospet
H K Srinivas Rao, Banglore

*SAMPADA PRINTERS&PUBLISHERS Hospet- 583 201*

॥ ಶ್ರೀಲಕ್ಷ್ಮೀವೇಂಕಟೇಶ್ವರಃ ಪ್ರಸೀದತು ॥



ಕಲ್ಯಾಣಾದ್ಭುತಗಾತ್ರಾಯ ಕಾಮಿತಾರ್ಥಪ್ರದಾಯಿನೇ ।
ಶ್ರೀಮದ್ವೇಂಕಟನಾಥಾಯ ಶ್ರೀನಿವಾಸಾಯ ತೇ ನಮಃ ॥

॥ ಮಹಾಲಕ್ಷ್ಮೀಃ ಪ್ರಸೀದತು ॥




ಅಮಾನವವನಜಸ್ಥಾನ ಸರಸೀಕುಲಸಂಕುಲೇ ।
ರಮಾ ಕೊಲ್ಹಾಪುರಕ್ಷೇತ್ರೇ ವಸತೀತಿ ಕಿಮದ್ಭುತಮ್ ॥

# ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು



ಅಭ್ರಮಂ ಭಂಗರಹಿತಮಜಡಂ ವಿಮಲಂ ಸದಾ ।
ಆನಂದತೀರ್ಥಮತುಲಂ ಭಜೇ ತಾಪತ್ರಯಾಪಹಮ್ ॥

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ ಪ್ರಾತಃಸ್ಮರಣೀಯ

# ಶ್ರೀ ಶ್ರೀ 1008 ಶ್ರೀಮತ್ಸತ್ಯಧ್ಯಾನತೀರ್ಥಗುರುಸಾರ್ವಭೌಮರು



ದುರ್ವಾದಿದಿಗಿಭೇಂದ್ರಾಣಾಂ ಪಂಚಾಸ್ಯ ಇವ ಯೋಽಭವತ್ ।
ಅಪಾರನಿರ್ಮಲಜ್ಞಾನಂ ಧ್ಯಾನತೀರ್ಥಗುರುಂ ಭಜೇ ॥

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯತ್ವಾದ್ಯನೇಕಗುಣಗಣಾಲಂಕೃತರಾದ
ಶ್ರೀಮಜ್ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ ಶ್ರೀಮದುತ್ತರಾದಿಮಠಾಧೀಶರಾದ,
ಜ್ಞಾನಭಕ್ತಿವೈರಾಗ್ಯಾದಿಸದ್ಗುಣಮಂಡಿತರೂ ಅಖಂಡ ಪ್ರವಚನ ಸುಧೆಯಿಂದ
ಸಮಸ್ತಸಜ್ಜನರನ್ನುದ್ಧರಿಸುತ್ತಿರುವವರೂ ಆದ ಪರಮ ಪೂಜ್ಯರಾದ

# ಶ್ರೀ 1008 ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರು



ಚಿರಾಧಾಟೀಕತಾಂ ಧಾಟೀ ಮಾನಸೇ ಮಮ ಸರ್ವದಾ ।
ಸತ್ಯಾತ್ಮತೀರ್ಥವಚಸಾಂ ಸತಾಂ ಕೋಟೀರಕೈಃ ಸ್ತುತಾ ॥

ತಪಸ್ವಿಪ್ರವರರೂ, ವಿದ್ವನ್ಮಣಿಗಳೂ, ಶ್ರೀಮತ್ಸತ್ಯಧ್ಯಾನತೀರ್ಥಶ್ರೀಪಾದಂಗಳವರ
ಪರಮಪ್ರಿಯ ಶಿಷ್ಯರೂ ಆದ ಪರಮಪೂಜ್ಯ

# ಶ್ರೀ ಗಂಗೂರು ರಾಮಾಚಾರ್ಯರು, ಜಾಲೀಹಾಳ



ಶ್ರೀಮದ್ವೈರಾಗ್ಯಭಕ್ತಿಪ್ರಮುಖಶುಭಗುಣಶ್ರೇಣಿಮಾಣಿಕ್ಯವಾರ್ಧಿಃ
ಮೀಮಾಂಸಾತರ್ಕಶಬ್ದಶ್ರುತಿಶಿಖರಮುಖಪ್ರೌಢಶಾಸ್ತ್ರ ಪ್ರಚಂಡಃ ॥
ಜಾಲೀಹಾಳಾಖ್ಯಗ್ರಾಮೇ ವಿರಚಿತವಸತಿಃ ಶಿಷ್ಯಸಂವರ್ಧನಾಯ
ಶ್ರೀರಾಮಾರ್ಯಃ ಪ್ರಸನ್ನಃ ಪ್ರದಿಶತು ಸತತಂ ಜ್ಞಾನಮವ್ಯಾಹತಂ ನಃ ॥

# ಸಮರ್ಪಣ

ಶ್ರೀ ಶ್ರೀನಿವಾಸದೇವರ ಪರಮಾನುಗ್ರಹಕ್ಕೆ ಪಾತ್ರರಾಗಿ,
ಪ್ರಾಣದೇವರ-ವೇದವ್ಯಾಸದೇವರ ಪರಮೋಪಾಸಕರಾಗಿ,
ಶ್ರೀ 1008 ಶ್ರೀಸತ್ಯಧ್ಯಾನತೀರ್ಥ ಗುರುಸಾರ್ವಭೌಮರ ಪರಮಪ್ರಿಯ ಶಿಷ್ಯರಾಗಿ,
ನ್ಯಾಯವೇದಾಂತವ್ಯಾಕರಣಮೀಮಾಂಸಾದಿಸಕಲಶಾಸ್ತ್ರ ಪಾರಾವಾರ ಪಾರೀಣರಾಗಿ,
ಅಪಾರಪಾಂಡಿತ್ಯ, ಅದ್ರಾಷ್ಯವೈದುಷ್ಯ, ನಿಸ್ಸೀಮವೈರಾಗ್ಯ, ಅಗಾಧ ತಪಸ್ಸುಗಳಿಂದ ಅಪರೋಕ್ಷೀಕೃತಶ್ರೀಶರಾಗಿ,
ತಮ್ಮ ತಪೋಮಹಿಮೆಗಳಿಂದ ಭಕ್ತಜನರ ಇಷ್ಟಾರ್ಥಗಳನ್ನು ಪೂರೈಸುತ್ತಾ,
ಅನವರತ ಶ್ರೀಮನ್ನ್ಯಾಯಸುಧಾದಿಪ್ರೌಢಪ್ರಬಂಧಪ್ರವಚನನಿರತರಾಗಿ, ಯೋಗಶಕ್ತಿಯಿಂದ
ಶ್ರೀ ಶ್ರೀನಿವಾಸದೇವರ ಬ್ರಹ್ಮೋತ್ಸವದ ಅಂತಿಮದರ್ಶನ ಪಡೆದು, ತಮ್ಮ ದೇಹತ್ಯಾಗದ ವಿಷಯವನ್ನು
ಪೂರ್ವದಲ್ಲಿಯೇ ತಿಳಿಸಿ, ವೈಕುಂಠಯಾತ್ರೆಯ ಸಂದರ್ಭದಲ್ಲಿ ಕಿವಿಯಲ್ಲಿ ಧರಿಸಿದ ತುಳಸೀದಳವು
ದಹನವಾಗದಂತೆ ಸಂರಕ್ಷಿಸಿ, ಭಕ್ತಜನರಿಗೆ ದರ್ಶನವಿತ್ತ ಮಹಾಮಹಿಮರೂ, ತಪಸ್ಸಾರಶರೀರಿಗಳೂ,
ದಿಗಂತವಿಶ್ರಾಂತಕೀರ್ತರೂ ಆದ
ವಿದ್ವನ್ಮಣಿ ತಪೋನಿಧಿ
ಪರಮಪೂಜ್ಯ

## ಶ್ರೀಗಂಗೂರು ರಾಮಾಚಾರ್ಯರು, ಜಾಲೀಹಾಳ

ಇವರ ಪರಮಪವಿತ್ರ ಸನ್ನಿಧಾನದಲ್ಲಿ ಗ್ರಂಥಪ್ರಕಾಶನರೂಪವಾದ ಈ ಅಲ್ಪಸೇವೆಯು
ಸಮರ್ಪಿತವಾಗಿರುವದು.

ಪ್ರಕಾಶಕರು
**ಪರಮಪೂಜ್ಯ ಶ್ರೀ ಆಚಾರ್ಯ ಸೇವಾ ಪ್ರತಿಷ್ಠಾನ**
**ಜಾಲೀಹಾಳ**

# ಕೃತಜ್ಞತಾ ನಮನ

ತಮ್ಮ ಅಂತಿಮದಿನಗಳಲ್ಲಿ ನಮ್ಮಿಂದ ಪ್ರಕಾಶಿತವಾಗುತ್ತಿರುವ 'ಆಚಾರ್ಯಸ್ಮೃತಿಗ್ರಂಥಮಾಲೆ'ಯ 50ನೆಯ ಕುಸುಮವಾದ "ಶ್ರೀವೇಂಕಟೇಶ ಮಾಹಾತ್ಮೆ"ಯ ಕರಡನ್ನು ಅವಲೋಕಿಸಿ, ಆನಂದಿಸಿ, ಆಶೀರ್ವದಿಸಿದ ಮತ್ತು ಪ್ರತಿಷ್ಠಾನದ ಎಲ್ಲ ಕಾರ್ಯಗಳಿಗೆ ಮಾರ್ಗದರ್ಶಕರಾಗಿ ಅನುಗ್ರಹಿಸುತ್ತಿದ್ದ, ಶ್ರೀ 1008 ಶ್ರೀ ಸತ್ಯಧ್ಯಾನತೀರ್ಥ ಪೂಜ್ಯಚರಣಪ್ರಿಯಶಿಷ್ಯರಾದ, ವಿದ್ವನ್ಮಣಿಗಳೂ, ತಪಸ್ವಿಪ್ರವರೂ ಆದ ಶ್ರೀಮತ್ ಪರಮಪೂಜ್ಯ ಆಚಾರ್ಯರ (ಗಂಗೂರು ರಾಮಾಚಾರ್ಯರು, ಜಾಲೀಹಾಳ ಅವರ) ಪ್ರಥಮ ಹಾಗೂ ದ್ವಿತೀಯ ಸತ್ಪುತ್ರರಾಗಿ ಜನಿಸಿ, ಅವರ ಸೇವಾ ತತ್ಪರರಾಗಿ ನ್ಯಾಯ-ವೇದಾಂತ-ವ್ಯಾಕರಣ-ಮೀಮಾಂಸಾದಿಶಾಸ್ತ್ರಗಳನ್ನು ಅವರಲ್ಲಿಯೇ ಅಭ್ಯಸಿಸಿ, ಅನುಲೋಮ ಪ್ರತಿಲೋಮ ಶಾಂತಿಪುರಸ್ಸರವಾಗಿ ಸರ್ವಮೂಲ ಟೀಕಾ ಗ್ರಂಥಗಳ ಹಾಗೂ ತಂತ್ರಸಾರೋಕ್ತ ಸರ್ವಮಂತ್ರಗಳ ಉಪದೇಶ ಪಡೆದು, ಶಾಸ್ತ್ರಗಳಲ್ಲಿ ತಲಸ್ಪರ್ಶಿ ಪಾಂಡಿತ್ಯವನ್ನು ಹೊಂದಿ, ಆಚಾರ್ಯರಿಂದ ಉಪದಿಷ್ಟವಾದ ಸನಾತನಧರ್ಮಸತ್ಸಂಪ್ರದಾಯಪಾಠಪ್ರವಚನಗಳನ್ನು ತಪ್ಪದೇ ಕೊನೆಯವರೆಗೂ ಅನುಷ್ಠಿಸಿ, ಶಿಷ್ಯತ್ವವನ್ನು ಬಯಸಿಬಂದ ಯೋಗ್ಯ ಅಧಿಕಾರಿಗಳಿಗೆ ಪ್ರಮಾಣಪದ್ಧತಿಯನ್ನು ಆರಂಭಿಸಿ ಭಾಷ್ಯ ತತ್ತ್ವಪ್ರಕಾಶಿಕಾ ಅನುವ್ಯಾಖ್ಯಾನ ಶ್ರೀಮನ್ನ್ಯಾಯಸುಧಾ ತಾತ್ಪರ್ಯ ಚಂದ್ರಿಕಾ ತರ್ಕತಾಂಡವಾದಿ ಪ್ರೌಢಪ್ರಬಂಧಗಳನ್ನು ಪಾಠ ಹೇಳಿ, ತಮ್ಮ ವಾಕ್ಯಾರ್ಥ ಕೌಶಲ್ಯ ಶಾಸ್ತ್ರವೈದುಷ್ಯ ಪ್ರವಚನ ಪಟುತ್ವ ಸದಾಚಾರ ಸತ್ಸಂಪ್ರದಾಯ ಸಂರಕ್ಷಣೆಗಳಿಂದ ಜಗತ್ತಿನಲ್ಲಿ ಮಾನ್ಯರಾಗಿ ಧನ ಧಾನ್ಯ ಸಂಪತ್ತು ಸ್ವಪ್ರತಿಷ್ಠೆಗಳಿಗಾಗಿ ಯಾರನ್ನೂ ಯಾಚಿಸದೇ, ಸಾರ್ಥಕ ಜೀವನವನ್ನು ನಡೆಸಿ, ತಮ್ಮಲ್ಲಿಯ ಸದ್ಗುಣಗಳಿಂದ ಶ್ರೀಮದುತ್ತರಾದಿಮಠಾಧೀಶರಾದ ಪರಮ ಪೂಜ್ಯ ಶ್ರೀ 1008 ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರಿಂದ ಧ್ಯಾನಪ್ರಮೋದ ಪ್ರಶಸ್ತಿಯಿಂದ ಗೌರವಿತರಾಗಿ ಪ್ರಸಿದ್ಧರಾಂಗ್ಮುಖರಾಗಿ ಭಗವನ್ಮುಖರಾಗಿ ಜೀವನವನ್ನು ನಡೆಸಿ, ಜ್ಞಾನವೃದ್ಧ ವಯೋವೃದ್ಧ ಜೀವನವನ್ನು ಪೂರೈಸಿ, ಇಹಲೋಕದಿಂದಗಲಿ ವೈಕುಠವಾಸಿಗಳಾದ ಪೂಜ್ಯ ಪಂಡಿತ ಪ್ರಕಾಂಡ **ಶ್ರೀ ಭೀಮಸೇನಾಚಾರ್ಯ ಗಂಗೂರ,** ಜಾಲೀಹಾಳ

ಹಾಗೂ

ಪೂಜ್ಯ ಪಂಡಿತ ಪ್ರಕಾಂಡ **ಶ್ರೀ ಶ್ರೀನಿವಾಸಾಚಾರ್ಯ ಗಂಗೂರ,** ಜಾಲೀಹಾಳ ಅವರುಗಳಿಗೆ ನಮ್ಮ ಪ್ರತಿಷ್ಠಾನದಿಂದ ಸಾಷ್ಟಾಂಗನಮಸ್ಕಾರಪುರಸ್ಸರವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

## ಶ್ರೀ ಬಾದರಾಯಣೋ ವಿಜಯತೆ



ದೇವತಾರ್ಚನನಿರತರಾದ, ಪಂಡಿತ ಪ್ರಕಾಂಡ

**ಶ್ರೀ ಪೂಜ್ಯ ಭೀಮಸೇನಾಚಾರ್ಯ ಗಂಗೂರ, ಜಾಲೀಹಾಳ**

## ಶ್ರೀ ಬಾದರಾಯಣೋ ವಿಜಯತೆ



ರಾಮೇಶ್ವರದಲ್ಲಿ ಶ್ರೀಬ್ರಹ್ಮಸೂತ್ರಭಾಷ್ಯ - ತತ್ವಪ್ರಕಾಶಿತಾ
ಮಂಗಳ ಮಹೋತ್ಸವದಲ್ಲಿ ಆಶೀರ್ವಚನಗೈಯ್ಯುತ್ತಿರುವ
ಪಂಡಿತ ಪ್ರಕಾಂಡ
**ಶ್ರೀ ಶ್ರೀನಿವಾಸಾಚಾರ್ಯ ಗಂಗೂರ, ಜಾಲೀಹಾಳ**

# ಪ್ರಕಾಶಕರ ನುಡಿ

## {ವಿಸ್ತೃತ ಚತುರ್ಥ ಆವೃತ್ತಿ}

ಶ್ರೀಮತ್ಪರಮ ಪೂಜ್ಯ ಆಚಾರ್ಯ ಸ್ಮೃತಿಗ್ರಂಥಮಾಲೆಯಲ್ಲಿ ಶ್ರೀವೇಂಕಟೇಶ ಮಾಹಾತ್ಮೆಯು (ಬ್ರಹ್ಮಾಂಡ, ಗಾರುಡ, ಹರಿವಂಶ, ಆದಿತ್ಯ, ಭವಿಷ್ಯೋತ್ತರ ಮತ್ತು ಸ್ಕಾಂದ) ಪುರಾಣಗಳಲ್ಲಿ ವರ್ಣಿಸಿದಂತೆ ಪ್ರಾಕೃತ ಭಾಷಾನುವಾದ ಸಹಿತವಾಗಿ ನಮ್ಮ ಪ್ರಕಾಶನಮಾಲೆಯ ಐವತ್ತನೆಯ ಸಂಪುಟವಾಗಿ ಸಜ್ಜನರ ಸಮೂಹದಲ್ಲಿ ಪ್ರಕಟಗೊಳ್ಳುತ್ತಿರುವದು ನಮಗೆ ಅತ್ಯಂತ ಸಂತೋಷವಾಗುತ್ತಿದೆ.

1994ರಲ್ಲಿ ಆಚಾರ್ಯಸ್ಮೃತಿಗ್ರಂಥಮಾಲೆಯ ದ್ವಿತೀಯ ಪುಷ್ಪವಾಗಿ ಕೇವಲ ಆದಿತ್ಯ ಪುರಾಣಾಂತರ್ಗತವಾದ ವೇಂಕಟೇಶ ಮಾಹಾತ್ಮೆಯು ಪ್ರಾಕೃತಭಾಷಾನುವಾದದೊಂದಿಗೆ ಪ್ರಕಾಶಿತವಾಗಿತ್ತು. ವೇಂಕಟೇಶ್ವರನ ಭಕ್ತರಾದ ಸಜ್ಜನರ ಅಭಿಲಾಷೆಯಂತೆ ಅದು 2006ರಲ್ಲಿ ಪುನರ್ಮುದ್ರಣಗೊಂಡಿತು. ಪುನಃ ಅದೇ ವರ್ಷದಲ್ಲಿ ಭವಿಷ್ಯೋತ್ತರ ಪುರಾಣದ ವೇಂಕಟೇಶ ಮಾಹಾತ್ಮ್ಯವು ಭಾಷಾಭಾವಸಂಗ್ರಹದೊಂದಿಗೆ ಪ್ರಕಟವಾಯಿತು. ಈಗ ಅನೇಕ ಸಜ್ಜನರ ಆಗ್ರಹದ ಮೇರೆಗೆ ಇದುವರೆಗೂ ಕನ್ನಡ ಭಾವಾನುವಾದದೊಂದಿಗೆ ಪ್ರಕಾಶಿತವಾಗದಿರುವ ಬ್ರಹ್ಮಾಂಡ, ಗರುಡ, ಹರಿವಂಶ, ಸ್ಕಾಂದ ಪುರಾಣಗಳ ಭಾವಾನುವಾದದೊಂದಿಗೆ ಪ್ರಕಾಶಿತವಾಗುತ್ತಿರುವದು. ಪುರಾಣಗಳನ್ನು ಅರ್ಥೈಸುವಾಗ 'ಪುರಾಣರಾಮಾಯಣ ಭಾರತಾನಾಂ ಚಕಾರ ತಾತ್ಪರ್ಯ ವಿನಿರ್ಣಯಂ ಚ' ಎಂಬ ಅಭಿಯುಕ್ತಿಯಂತೆ ಇಲ್ಲಿ ಅನುವಾದಿಸಲಾದ ವಿವಿಧ ಪುರಾಣಗಳಲ್ಲಿಯ ಆಂತರಿಕ ವ್ಯತ್ಯಾಸ ಹಾಗೂ ಅವುಗಳ ಪರಿಹಾರ ಕ್ರಮವನ್ನು ಮಹಾಭಾರತ ತಾತ್ಪರ್ಯನಿರ್ಣಯಕ್ಕನುಸಾರವಾಗಿ ಅರ್ಥೈಸಬೇಕಾಗಿರುವದು. ಇಂತಹ ವಿಮರ್ಶೆಗಳನ್ನು ಅನುವಾದದೊಂದಿಗೆ ಇದೇ ಗ್ರಂಥದ ಅಡಿಟಿಪ್ಪಣೆಗಳಲ್ಲಿ ಸೇರಿಸಲಾಗಿತ್ತು. ಆದರೆ ಗ್ರಂಥಗೌರವ ಭಯದಿಂದ ಅವುಗಳನ್ನು ಮೊಟಕುಗೊಳಿಸಲಾಗಿದ್ದು ಪ್ರತ್ಯೇಕವಾಗಿ ಪ್ರಕಟಿಸಲಾಗುವದು.

ಯಾವದೇ ಸಿದ್ಧಾಂತ ಗ್ರಂಥಗಳನ್ನು ಕ್ರಯಕ್ಕೆ ಮಾರಕೂಡದೆಂಬ ನಮ್ಮ ಪರಮಗುರುಗಳಾದ ಶ್ರೀ1008 ಶ್ರೀ ಸತ್ಯಧ್ಯಾನ ತೀರ್ಥಶ್ರೀಪಾದಂಗಳವರ ಹಾಗೂ ನಮ್ಮ ಗುರುಗಳಾದ ಪರಮಪೂಜ್ಯ ಆಚಾರ್ಯರ ಆದೇಶ ಹಾಗೂ ಪರಮಾನುಗ್ರಹಗಳಿಗನುಗುಣವಾಗಿ ನಮ್ಮ ಪ್ರಕಾಶನ ಪ್ರಕಟಿತವಾಗುತ್ತಿರುವವು. ಅದು ದಿವ್ಯ ಗುರುಗಳ ಪರಮಾನುಗ್ರಹ ಮತ್ತು ನಮ್ಮ ಸೌಭಾಗ್ಯವೆಂದೇ ಭಾವಿಸುತ್ತೇವೆ.

ಇಂತಹ ಸನಾತನ ದೃಷ್ಟಿಯಿಂದ ಪ್ರಕಟಗೊಳ್ಳುತ್ತಿರುವ ಗ್ರಂಥಪ್ರಕಾಶನಕಾರ್ಯಕ್ಕೆ ಹಿಂದಿನ ಅನೇಕ ವರ್ಷಗಳಿಂದ ಹೈದರಾಬಾದಿನ ಶ್ರೀಕಾಮಗಾರಿ ಸುಬ್ಬರಾವ್ ಮತ್ತು ಕಾಮಗಾರಿ ಸುಧಾಬಾಯಿಯವರು ಸೇವೆಯನ್ನು ಸಲ್ಲಿಸುತ್ತಾ ಬಂದಿರುವರು. ಈ ಗ್ರಂಥಪ್ರಕಾಶನಕ್ಕೂ ಸಹ

ಅವರು ತಮ್ಮಿಂದ ಸಹಿತರಾಗಿ (ಶ್ರೀಕಾಮಗಾರಿ ಸುಬ್ಬರಾವ್ ಮತ್ತು ಕಾಮಗಾರಿ ಸುಧಾಬಾಯಿ, ಹೈದರಾಬಾದ್), ಶ್ರೀಕಾಮಗಾರೀ ರಾಮಚಂದ್ರರಾವ್ ಮತ್ತು ಶ್ರೀಮತಿ ಲಕ್ಷ್ಮೀದೇವಿ, ಕರ್ನೂಲ್, ಶ್ರೀ ಕೃಷ್ಣಾಚಾರ್ಯ ಕಟ್ಟಿ ಶ್ರೀಮತಿ ಸುಂದರಾಬಾಯಿ ಹೊಸಪೇಟೆ, ಶ್ರೀಸಾರಂಗ ರಾಜಾರಾವ್ ಮತ್ತು ಶ್ರೀಮತಿ ಪರಿಮಳಾಬಾಯಿ, ಹೈದರಾಬಾದ್, ಶ್ರೀ ಸಿ.ಗೋಪೀನಾಥರಾವ್ ಮತ್ತು ಶ್ರೀಮತಿ ಲಲಿತಾ ಹುಬ್ಬಳ್ಳಿ ಇವರುಗಳ ಐಹಿಕ-ಆಮುಷ್ಮಿಕ ಅಭ್ಯುದಯಕ್ಕಾಗಿ ಸೇವೆಯನ್ನು ಸಲ್ಲಿಸಿರುವರು.

ಅದರಂತೆ ಅತ್ಯಂತ ವಿಶ್ವಸ್ಥರೂ ಮೊದಲಿನಿಂದಲೂ ನಮ್ಮ ಗ್ರಂಥಪ್ರಕಾಶನಕ್ಕೆ ಸೇವೆ ಸಲ್ಲಿಸುತ್ತಾ ಬಂದಿರುವವರೂ ಆದ ಶ್ರೀ ಕೆ.ಸತ್ಯಜ್ಞಾನಾಚಾರ್ ಮತ್ತು ಶ್ರೀಮತಿ ಸುಮಾ, ಹೈದರಾಬಾದ್ ಇವರು ತಮ್ಮ ಷಷ್ಟ್ಯಬ್ದಿಪೂರ್ತಿಸಮಾರಂಭದ ನಿಮಿತ್ತವಾಗಿ ಶ್ರೀವೇಂಕಟೇಶ್ವರನ ಪರಮಾನುಗ್ರಹಕ್ಕಾಗಿ ವಿಶಿಷ್ಟರೀತಿಯಿಂದ ಧನಸೇವೆಯನ್ನು ಸಲ್ಲಿಸಿರುತ್ತಾರೆ.

ಇವರಲ್ಲದೇ ಶ್ರೀಮತಿ/ಶ್ರೀ ವಿಜಯಕುಮಾರ್ ಸರಾಫ್, ಹೊಸಪೇಟೆ, ಶ್ರೀ ವ್ಯಾಸನಕೆರೆ ಮಾರುತಿರಾವ್, ಬೆಂಗಳೂರು, ಶ್ರೀರಂಗರಾವ್ ದೇಸಾಯಿ, ಕಮಾಲಪುರ, ಶ್ರೀ ಡಿ. ಶ್ರೀಧರಮೂರ್ತಿ ಕೊಪ್ಪಳ, ಶ್ರೀಪವನ ಭೀಮಸೇನಾಚಾರ್ಯ ಹೊನ್ನೂರು, ಹೊಸಪೇಟೆ, ಶ್ರೀಮತಿ ವಾಸುಕಿ ಮತ್ತು ಶ್ರೀ ಡಿ.ಪ್ರಸನ್ನ ಬೆಂಗಳೂರು, ಶ್ರೀಜಗನ್ನಾಥಾಚಾರ್ಯ ಹುನುಗುಂದ, ವ್ಯವಸ್ಥಾಪಕರು ರಾಯರ ಮಠ, ಕೊಪ್ಪಳ ಇವರೂ ಸಹ ಗ್ರಂಥಪ್ರಕಾಶನಕ್ಕಾಗಿ ಸೇವೆಯನ್ನು ಸಲ್ಲಿಸಿರುವರು.

ಇವರೆಲ್ಲರಿಗೂ ವೇಂಕಟಾದ್ರಿನಿಲಯನಾದ ಶ್ರೀಲಕ್ಷ್ಮೀವೇಂಕಟೇಶ್ವರನು ಹಾಗೂ ನಮ್ಮ ಪರಮ ಪೂಜ್ಯ ಆಚಾರ್ಯರ ಆರಾಧ್ಯದೈವನಾದ ಶ್ರೀಬಾದರಾಯಣನು ಸರ್ವವಿಧ ಸೌಭಾಗ್ಯಗಳನ್ನಿತ್ತು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಇದರಂತೆ ನಮ್ಮ ಪ್ರಕಾಶನಗಳು ಹೊರಬರುವಂತೆ ಹರಿಗುರುಗಳ ಅನುಗ್ರಹವನ್ನು ಪ್ರಾರ್ಥಿಸುತ್ತೇವೆ.

ಇತಿ ಶಂ

ಪ್ರಕಾಶಕರು

ಶ್ರೀಪಾದರಾಜರ ಆರಾಧನೆ — **ಪರಮಪೂಜ್ಯ ಆಚಾರ್ಯ ಸೇವಾ ಪ್ರತಿಷ್ಠಾನ**

ದಿನಾಂಕ: 19.06.2016 — ಜಾಲಿಹಾಳ

# ಪ್ರಕಾಶಕರ ನುಡಿ

## {ಪ್ರಥಮ ಮುದ್ರಣ}

**ಆಚಾರ್ಯ ಸ್ಮೃತಿ ಗ್ರಂಥಮಾಲಾ:** ಶ್ರೀಮತ್ಪರಮ ಪೂಜ್ಯ ಆಚಾರ್ಯರ (ಗಂಗೂರ ರಾಮಾಚಾರ್ಯರು, ಜಾಲೀಹಾಳ) ಭಕ್ತರು-ಶಿಷ್ಯರು ಹಾಗೂ ವಿಶ್ವಸ್ಥರು ಸೇರಿ, ಪೂಜ್ಯ ಆಚಾರ್ಯರ ಅನುಗ್ರಹವನ್ನು ಸಂಪಾದಿಸಿ, ತನ್ಮೂಲಕ ಪರಮಾತ್ಮನ ಪ್ರಸಾದವನ್ನು ಪಡೆಯಲು, 'ಪರಮಪೂಜ್ಯ ಆಚಾರ್ಯ ಸೇವಾ ಪ್ರತಿಷ್ಠಾನ' ವೆಂಬ ಹೆಸರಿನಲ್ಲಿ ಆಚಾರ್ಯರಿಗೆ ಪ್ರಿಯಕರವಾದ ಸೇವೆಯನ್ನು ಮಾಡಲು ನಿಶ್ಚಯಿಸಿರುವರು. ಇದರ ಅಂಗವಾಗಿ ಅಪೂರ್ವ ಗ್ರಂಥ ಪ್ರಕಾಶನವು ಒಂದು ಮುಖ್ಯಕಾರ್ಯವಾಗಿರುವದು. ನಮ್ಮಿಂದ ಯಾವ ವಿಧದ ಧನ-ಕನಕಾದಿಗಳನ್ನು ಬಯಸದ ವಿರಕ್ತಶಿಖಾಮಣಿಗಳೂ, ತಪಸ್ವಿಪ್ರವರರೂ ಆದ ಆಚಾರ್ಯರಿಗೆ ಗ್ರಂಥಪ್ರಕಾಶನ, ಪಾಠ-ಪ್ರವಚನಗಳಿಂದಲೇ ಹೆಚ್ಚು ಸಂತೋಷವೆಂಬುದು ಅವರ ಅನುಯಾಯಿಗಳೆಲ್ಲರಿಗೂ ಗೊತ್ತು. ಈ ದಿಸೆಯಲ್ಲಿ ಪ್ರಥಮ ಪುಷ್ಪವಾಗಿ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ 'ಸನ್ಯಾಯ ರತ್ನಾವಲೀ' ಗ್ರಂಥವು ಸಂಪಾದಿತವಾಗಿ ಪ್ರಥಮಭಾಗರೂಪದಲ್ಲಿ ಪ್ರಕಾಶಿತವಾಗಿರುವದು.

ಈಗ, ಕಾಮಿತಾರ್ಥಪ್ರದವಾದ 'ಶ್ರೀ ವೇಂಕಟೇಶಮಹಾತ್ಮೆ'ಯನ್ನು ಶ್ರೀಮತ್ಪರಮಪೂಜ್ಯ ಆಚಾರ್ಯರ ಸೇವಾ ರೂಪವಾಗಿ, ಭಗವದ್ಭಕ್ತರಲ್ಲಿ ದ್ವಿತೀಯ ಪುಷ್ಪವಾಗಿ ಪ್ರಕಟಿಸುತ್ತಿದ್ದೇವೆ. ಇದರಿಂದ ಸುಪ್ರಸನ್ನರಾದ ಪರಮಪೂಜ್ಯ ಆಚಾರ್ಯರು, ಶ್ರೀನಿವಾಸನ ಕೃಪಾದೃಷ್ಟಿಯು ನಮ್ಮ ಮೇಲೆ ಬೀಳುವಂತೆ ಪರಮಾನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಬಾಲ್ಯದಿಂದಲೂ ವೈರಾಗ್ಯಪಥವನ್ನು ಅನುಸರಿಸಿದ ಪರಮಪೂಜ್ಯ ಆಚಾರ್ಯರು, ಶ್ರೀನಿವಾಸನ ಪರಮೋಪಾಸಕರಾಗಿದ್ದರು. ತಿರುಪತಿಯಲ್ಲಿ ಶ್ರೀಶ್ರೀನಿವಾಸನ ಸೇವೆಯಿಂದಲೇ ಅವರು, ಪ್ರಾತಃಸ್ಮರಣೀಯ ಸುನಾಮಧೇಯರಾದ ಶ್ರೀ 1008 ಶ್ರೀಶ್ರೀ ಸತ್ಯಧ್ಯಾನತೀರ್ಥ ಗುರುಸಾರ್ವಭೌಮ ರಂತಹ ಪೂಜ್ಯಚರಣರನ್ನು ತಮ್ಮ ಗುರುಗಳನ್ನಾಗಿ ಹೊಂದಿ, ನ್ಯಾಯ, ವೇದಾಂತ, ವ್ಯಾಕರಣ, ಮೀಮಾಂಸಾದಿ ಸಕಲ ಶಾಸ್ತ್ರದ ಪಾರವಾರಪಾರೀಣರಾದರು. ನಯ, ವಿನಯ, ವೈದುಷ್ಯ-ವೈರಾಗ್ಯಾದಿ ಗುಣಾಕರರಾಗಿ, ಗಾರ್ಹಸ್ಥ್ಯಜೀವನದಲ್ಲಿದ್ದರೂ ಸರ್ವಸಂಗಪರಿತ್ಯಾಗಮಾಡಿ, ದಿವ್ಯವಿಜ್ಞಾನದ ಪಲ್ಲಕ್ಕಿಯನ್ನು ಹೊತ್ತು ಜಗದ ತುಂಬೆಲ್ಲ ಶ್ರೀವೇದವ್ಯಾಸದೇವರ ಭವ್ಯ ಮೆರವಣಿಗೆಯನ್ನು ಮಾಡಿದ ಮಹಾ ಜ್ಞಾನಿಗಳಿವರು. ಆಚಾರ್ಯರು ತಮ್ಮ 25ರ ಹರೆಯ ವಯಸ್ಸಿನಲ್ಲಿಯೇ ಮನೆಮಾರುಗಳನ್ನು ತೊರೆದು, ಅನೇಕ ಮಹಾತ್ಮರು ತಪಸ್ಸನ್ನು ಮಾಡಿ ಭಗವಂತನ ಕೃಪೆಯನ್ನು ಪಡೆದ ಸಿದ್ಧಿಕ್ಷೇತ್ರವಾದ ಕೃಷ್ಣಾತೀರದ ಬೀರಕಬ್ಬಿಯ (ವೀರಕಪಿ) ಪ್ರಾಣದೇವರ ಸನ್ನಿಧಿಯಲ್ಲಿ ನಿಂತುಕೊಂಡು, ನದಿಯ ಜಲದ ಮಧ್ಯದಲ್ಲಿ ಕುಳಿತು ತಪವನ್ನು ಗೈಯುತ್ತಿದ್ದರು. ಬಿಸಿ ಬಿಸಿ ಉಗ್ರ ಬಿಸಿಲಿನಲ್ಲಿ ಎಂತಹವನಿಗೂ ಸಹಿಸಲಾಧ್ಯವಾದ ಆತಪನ ತಾಪವನ್ನು ಲೆಕ್ಕಿಸದೇ, ತಮ್ಮ ಮನೋ ಇಂದ್ರಿಯಗಳನ್ನು ನಿಗ್ರಹಿಸಿ, ಸ್ಥಿರಾಸನದಲ್ಲಿ ಕುಳಿತು,

ಪ್ರಾಣಾಯಾಮಾದಿಗಳಿಂದ ಶ್ವಾಸವನ್ನು ನಿರೋಧಮಾಡಿ, ಹೃದಯದಲ್ಲಿ ಭಗವಂತನ ದಿವ್ಯ ರೂಪವನ್ನು ಧ್ಯಾನಮಾಡುತ್ತಿದ್ದರು. ಆನಂದಪೂರ್ಣನಾದ ಮುಕುಂದನ ಸುಂದರ ರೂಪವನ್ನು ನೆನೆಯ ತೊಡಗಿದಾಗ, ಹೊರಗಿನ ಪ್ರಪಂಚದ ಅರಿವನ್ನೇ ಕಳೆದುಕೊಳ್ಳುತ್ತಿದ್ದ ಆಚಾರ್ಯರ ಮನಸ್ಸು ಪರಮಾತ್ಮನ ಚರಣಕಮಲಗಳಲ್ಲಿ ಲೀನವಾಗುತ್ತಿತ್ತು. ಹೀಗೆ ಬಹುದಿನಗಳ ಆಯಾಸ ಸಾಧ್ಯವಾದ, ಅನನ್ಯಸಾಧ್ಯವಾದ ತಪಸ್ಸಿನಿಂದ ಶ್ರೀಪ್ರಾಣದೇವರ ಅನುಗ್ರಹ ವಿಶೇಷದಿಂದ ಅಪರೋಕ್ಷೀಕೃತಶ್ರೀಶರಾದರು.

ನಿತ್ಯ ಪಾಠ–ಪ್ರವಚನತಪೋನುಷ್ಠಾನಶಿಷ್ಯನಿರ್ಮಾಣ–ಭಕ್ತಾನುಗ್ರಹಪರಾಯಣರಾದ ಆಚಾರ್ಯರು ಹೆಚ್ಚಾಗಿ ಶ್ರೀನಿವಾಸನ ದರ್ಶನಕ್ಕಾಗಿ ವೇಂಕಟಗಿರಿಗೆ ಮೇಲಿಂದ ಮೇಲೆ ಬರುತ್ತಿದ್ದರು; ಸಿದ್ಧಿ ಸಾಕ್ಷಾತ್ಕಾರಗಳನ್ನು ಪಡೆದು, ಹಿಂತಿರುಗುತ್ತಿದ್ದರು. ಇಂದಿನ ಕಲಿಯುಗದಲ್ಲಿಯೂ ಸಿದ್ಧಿ ಸಾಕ್ಷಾತ್ಕಾರಗಳನ್ನು ಪಡೆದವರಲ್ಲಿ ಶ್ರೀನಿವಾಸನು ಎಂತಹ ಅನುಗ್ರಹವನ್ನು ಮಾಡವವನೆಂಬುದಕ್ಕೆ ಶ್ರೀಮತ್ಪರಮಪೂಜ್ಯ ಆಚಾರ್ಯರು ಪ್ರತ್ಯಕ್ಷ ನಿದರ್ಶನರಾಗಿದ್ದರು.

95ರ ವೃದ್ಧಾಪ್ಯದಲ್ಲಿ ಆಚಾರ್ಯರು ಶ್ರೀಶ್ರೀನಿವಾಸನ ದರ್ಶನಾಭಿಲಾಷಿಗಳಾದರು. ತಮ್ಮ ದರ್ಶನಕ್ಕೆಂದು ಬಂದ, ಅನೇಕ ಭಕ್ತ–ಶಿಷ್ಯರೆದುರು 'ನಾವು ವೆಂಕಟೇಶ್ವರನ ದರ್ಶನಕ್ಕಾಗಿ ತಿರುಪತಿಗೆ ಹೋಗುತ್ತೇವೆ' ಎಂದು ಹೇಳುತ್ತಿದ್ದರು. ವರ್ಣಾಶ್ರಮಬಹಿರ್ಭೂತರಾದವರನೇಕರ ಆಕ್ರಮಣ ದಿಂದಾಗಿ, ಸ್ವಾಮಿಯ ಸನ್ನಿಧಾನದಲ್ಲಿ ಶುಚಿಯನ್ನು ಉಳಿಸಿಕೊಂಡು ಬರುವದು ಆಯಾಸ ಸಾಧ್ಯವಾದ್ದರಿಂದ ಅಲ್ಲಿಗೆ ಹೋಗುವದು ಬೇಡವೆಂಬುದು ಅವರ ಸೇವಾತತ್ಪರರಾದ ಹಿರಿಯ ಮಕ್ಕಳ ವಾದವಾಗಿತ್ತು. ಆದರೆ ಆಚಾರ್ಯರು ಮಾತ್ರ ಹೊರಡುವುದನ್ನು ನಿಶ್ಚಯಿಸಿಯೇ ಬಿಟ್ಟರು.

ಇದೇ ಸಂದರ್ಭದಲ್ಲಿ ಶ್ರೀಮುಖ ಸಂವತ್ಸರ ಭಾದ್ರಪದ ಶುದ್ಧ ಚತುರ್ಥಿಯಂದು ಆಚಾರ್ಯರ ಭಕ್ತರೋರ್ವರು (ಹೊಸಪೇಟೆಯ ಪ್ರಸಿದ್ಧ ವಕೀಲರೂ, ಸದಾಚಾರ ಸಂಪನ್ನರೂ ದೈವಭಕ್ತರೂ ಆದ ಶ್ರೀಕಣವಿಹಳ್ಳಿ ನಾರಾಯಣರಾಯರ ಸುಪುತ್ರರಾದ ಡಾ॥ ಭೀಮಸೇನ ರಾಯರು) ತಿರುಪತಿಗೆ ಬ್ರಹ್ಮೋತ್ಸವಕ್ಕೆ ಹೊರಡುವಾಗ, ಮಂತ್ರಾಕ್ಷತೆಗಳನ್ನು ಪಡೆಯಲು ಬಂದಿದ್ದರು. ಆಗ ಆಚಾರ್ಯರು ಅವರಿಗೆ ಫಲಮಂತ್ರಾಕ್ಷತೆಗಳನ್ನು ಕೊಡುವಾಗ 'ನಾವೂ ತಿರುಪತಿಗೆ ಬರುತ್ತೇವೆ. ಕರೆದುಕೊಂಡು ಹೋಗಿರಿ' ಎಂದು ಹೇಳಿದರು. ಅದಕ್ಕೆ ಆ ಗೃಹಸ್ಥರು ಭಕ್ತ್ಯಾದರಗಳಿಂದ ಒಪ್ಪಿಕೊಂಡು 'ಭಾದ್ರಪದ ಶುದ್ಧದಲ್ಲಿ ತಮ್ಮನ್ನು ತಿರುಪತಿಗೆ ಕರೆದುಕೊಂಡು ಹೋಗಲು ತಮ್ಮ ಮಕ್ಕಳು ಎಲ್ಲ ವ್ಯವಸ್ಥೆ ಮಾಡಿದ್ದಾರೆ. ನಾನೂ, ತಮ್ಮ ಸಂಗಡ ಅನುಗ್ರಹ ಪಡೆಯಲು ಬರುತ್ತೇನೆ. ಅನುಗ್ರಹಿಸಬೇಕೆ'ಂದು ನಮಸ್ಕರಿಸಿ ಹೋದರು. ಭಾದ್ರಪದ ಶುದ್ಧ ದಶಮಿಯ ದಿವಸ, ಆಚಾರ್ಯರು ತಮ್ಮ ಮಕ್ಕಳನ್ನು ಕರೆದು 'ನಾವು ತಿರುಪತಿಗೆ ಹೋಗಿ, ಶ್ರೀನಿವಾಸನ ದಿವ್ಯವಾದ ದರ್ಶನವನ್ನು ಪಡೆದು ಬಂದಿದ್ದೇವೆ. ಇದೇ ನಮ್ಮ ಕೊನೆಯ ದರ್ಶನ. ನಮ್ಮನ್ನು ಅಲ್ಲಿಗೆ ಕರೆದೊಯ್ಯಲು ನೀವು ಯಾವ ವ್ಯವಸ್ಥೆಯನ್ನು ಮಾಡುವ ಅವಶ್ಯಕತೆಯಿಲ್ಲ'ವೆಂದು ಸ್ಪಷ್ಟವಾಗಿ ಹೇಳಿದರು. ಇದನ್ನು ಕೇಳಿ ಮನೆಯಲ್ಲಿ ಎಲ್ಲರಿಗೂ ವಿಚಿತ್ರವೆನಿಸಿತು.

ಅನಂತರ ದ್ವಾದಶಿಯ ದಿವಸ ಬ್ರಹ್ಮೋತ್ಸವವನ್ನು ಮುಗಿಸಿಕೊಂಡು, ಪೂಜ್ಯ ಆಚಾರ್ಯರ ದರ್ಶನಕ್ಕೆಂದು ಬಂದ ಅದೇ ಭಕ್ತರು 'ನಾನು ಆಚಾರ್ಯರನ್ನು ತಿರುಪತಿಯಲ್ಲಿ ಶ್ರೀಶ್ರೀನಿವಾಸನ ಸನ್ನಿಧಾನದಲ್ಲಿ ನೋಡಿದೆನು. ಪರಮ ಸಂತೋಷವಾಯಿತು. ನಾನು ಅವರಿಗೆ ನಮಸ್ಕರಿಸಿ, ನನ್ನ ತಂದೆಯವರಿಗೆ ತೋರಿಸಬೇಕೆಂದು ಕರೆತರುವಷ್ಟರಲ್ಲಿ ಅವರು ಅಲ್ಲಿ ನನಗೆ ಕಾಣಿಸಲಿಲ್ಲ' ಎಂದು ಬಹು ಆಶ್ಚರ್ಯ ಹಾಗೂ ಸಂತೋಷದಿಂದ ಹೇಳಿದರು. ಅದರಂತೆ, ಅದೇ ಸಂದರ್ಭದಲ್ಲಿ ತಿರುಪತಿಯಲ್ಲಿ ಆಚಾರ್ಯರೊಬ್ಬರನ್ನೇ ಗರ್ಭಗುಡಿಯಲ್ಲಿ ಕಂಡ ಪರಿಚಿತರನೇಕರು ಪರಮಪೂಜ್ಯ ಆಚಾರ್ಯರನ್ನು ಗರ್ಭಗುಡಿಯಲ್ಲಿ ಶ್ರೀನಿವಾಸನ ಸನ್ನಿಧಿಯಲ್ಲಿ ಕಂಡುದದರ ಬಗ್ಗೆ ಕುತೂಹಲ-ಆಶ್ಚರ್ಯಗಳಿಂದ ಪತ್ರಗಳನ್ನು ಬರೆದರು.

ಇದರಿಂದ ಶ್ರೀನಿವಾಸನು ಈ ಹಿಂದೆ ತನ್ನ ಭಕ್ತರಾದ ಅನೇಕ ಮಹಾನುಭಾವರಿಗೆ ದರ್ಶನವಿತ್ತು ಅನುಗ್ರಹಿಸಿದಂತೆ, ಶ್ರೀಮತ್ಪರಮ ಪೂಜ್ಯ ಅಚಾರ್ಯರಿಗೆ ಯೋಗಶಕ್ತಿಯನ್ನು ದಯಪಾಲಿಸಿ ಅವರು ಮುನಿರಾಬಾದಿನಲ್ಲಿದ್ದರೂ, ಒಂದಂಶದಿಂದ ಅವರನ್ನು ತಿರುಪತಿಗೆ ಕರೆತಂದು ಬ್ರಹ್ಮೋತ್ಸವಾದಿ ತನ್ನ ವೈಭವಗಳನ್ನು ತೋರಿಸಿ ಪರಮಾನುಗ್ರಹಿಸಿದ ವೃತ್ತಾಂತವು 'ಕಲೌ ವೇಂಕಟನಾಯಕಃ', 'ನ ತಾದೃಶೀ ಪ್ರೀತಿಃ' ಇತ್ಯಾದಿ ಪುರಾಣ-ವೇದವಾಕ್ಯಗಳ ಪ್ರಾಮಾಣ್ಯವನ್ನು ಸ್ಥಿರೀಕರಿಸುವದು. ಭಗವಂತನ ಜ್ಞಾನದಿಂದ ಜಗತ್ತಿನಲ್ಲಿ ಅಸಾಧ್ಯವಾದದ್ದು ಯಾವುದೂ ಇಲ್ಲ.

ಇದೇ ವಿಷಯವನ್ನು ಶ್ರೀಆದಿತ್ಯಪುರಾಣಾಂತರ್ಗತ ವೆಂಕಟೇಶ ಮಹಾತ್ಮೆಯು ವಾಯುದೇವರ ಶಿಷ್ಯ ಹಾಗೂ ಭಕ್ತನಾದ ದೇವಶರ್ಮ ದೃಷ್ಟಾಂತದಿಂದ, ಶ್ರುತಿ, ಸ್ಮೃತಿ ಪುರಾಣಪ್ರಸಿದ್ಧವಾದ ಶ್ರೀನಿವಾಸನ ಕಥಾಶ್ರವಣದಿಂದ, ತಿರುಪತಿಯ ಯಾತ್ರೆಮಾಡುವುದರಿಂದ ಸಕಲಾಭೀಷ್ಟ ಸಿದ್ಧಿಯಾಗುವುದನ್ನು ಸ್ಪಷ್ಟಪಡಿಸುವುದು. ಅಂದಿನಿಂದ ಇಂದಿನವರೆಗೂ, ಇನ್ನೂ ಮುಂದೆಯೂ ಇಷ್ಟಪ್ರದವಾದ ಈ ವೆಂಕಟೇಶಮಹಾತ್ಮೆಯನ್ನು ಅರ್ಥಾನುಸಂಧಾನಪೂರ್ವಕವಾಗಿ ಪಠಣ-ಪಾಠನ-ಪಾರಾಯಣಾದಿಗಳಿಂದ ಸಕಲಸದ್ಭಕ್ತರು, ಇಹ-ಪರಗಳಲ್ಲಿ ಜ್ಞಾನಭಕ್ತಿವೈರಾಗ್ಯಾದಿ ಸಕಲ ಸಂಪತ್ತುಗಳನ್ನು ಹೊಂದಲು ಅನುಕೂಲವಾಗಿಲಿ ಎಂಬ ಉದ್ದೇಶದಿಂದ ಕರ್ನಾಟಕ ಭಾಷಾನುವಾದದೊಂದಿಗೆ ಪ್ರಕಟಿಸಲಾಗಿದೆ.................. .

ಇತಿ ಶಂ

ಪ್ರಕಾಶಕರು
**ಪರಮಪೂಜ್ಯ ಆಚಾರ್ಯ ಸೇವಾ ಪ್ರತಿಷ್ಠಾನ**
ಜಾಲಿಹಾಳ

ಕಾರ್ತಿಕ ವದ್ಯ ದಶಮಿ
ದಿನಾಂಕ: 28.11.1994

# ಮುನ್ನುಡಿ

(ಪಂಡಿತ ಪೂಜ್ಯ ಶ್ರೀಮಧ್ವಾಚಾರ್ಯ ಗಂಗೂರ, ಇವರಿಂದ)

ಆಚಾರ್ಯಃ ಪವನೋಽಸ್ಮಾಕಂ ಆಚಾರ್ಯಾಣೀ ತು ಭಾರತೀ ।
ದೇವೋ ನಾರಾಯಣಃ ಶ್ರೀಶಃ ದೇವೀ ಮಂಗಲದೇವತಾ ॥

ಅಭ್ರಮಂ ಭಂಗರಹಿತಂ ಅಜಡಂ ವಿಮಲಂ ಸದಾ ।
ಆನಂದತೀರ್ಥಮತುಲಂ ಭಜೇ ತಾಪತ್ರಯಾಪಹಮ್ ॥

## ಮುಕ್ತಿಸಾಧನಪಥದಲ್ಲಿ ಪುರಾಣಗಳ ಸ್ಥಾನ

ಪರಮಾತ್ಮನಿಂದ ಸೃಷ್ಟವಾದ ಈ ಪ್ರಪಂಚದಲ್ಲಿ ಅನಂತಕೋಟಿ ಸಂಖ್ಯೆಯ ಚೇತನರು ಅನಾದಿ ಕಾಲದಿಂದಲೂ ಅವಿದ್ಯಾಕಾಮಕರ್ಮಗಳಿಂದ ಬದ್ಧರಾಗಿ, ಜನನ ಮರಣ ಪ್ರವಾಹ ರೂಪವಾದ ಸಂಸಾರದಲ್ಲಿ ಸಿಲುಕಿಕೊಂಡು, ಗತಿಕಾಣದೇ ತೊಳಲಾಡುತ್ತಿರುವರು. ಇದು ಸಕಲ ಸಕಲ ಜೀವರಾಶಿಗಳಿಂದ ಅನುಭೂತವಾದ ವಿಷಯವಾಗಿದೆ.

'ಅದುಃಖಮಿತರತ್ ಸರ್ವಂ ಜೀವಾ ಏವ ತು ದುಃಖಿನಃ ।' (ಶ್ರುತಿ)

ಇಂತಹ ಅಪಾರವಾದ ಸಂಸಾರವನ್ನು ದಾಟಿಕೊಳ್ಳಲು ಸಜ್ಜನರು ಸರ್ವದಾ ಪ್ರಯತ್ನಶೀಲ-ರಾಗಿರುತ್ತಾರೆ. ಅಧಿಕಾರಿಗಳಾದ ಚೇತನರು ಪರಾಪರತತ್ವವಿವೇಕ ಮತ್ತು ಧರ್ಮಾಧರ್ಮ-ಗಳ ಸ್ವರೂಪಗಳನ್ನು ಗುರೂಪದೇಶದಿಂದ ತಿಳಿದು ಕೊಂಡು, ಉಪದಿಷ್ಟವಾದ ಆ ತತ್ತ್ವಾರ್ಥಗಳನ್ನು ಮನನಿಸಿ ಧ್ಯಾನಿಸಿ, ಭಗವಂತನಲ್ಲಿಯ ಭಕ್ತಿಯನ್ನು ಸಂಪಾದಿಸಿ, ಭಗವಂತನ ಅನುಗ್ರಹದಿಂದ ಅಪರೋಕ್ಷವನ್ನು ಹೊಂದಿ, ಮೋಕ್ಷವನ್ನು ಪಡೆಯಬೇಕು.

'ಆನಂದದಶ್ಚ ಮುಕ್ತಾನಾಂ ಸ ಏವೈಕೋ ಜನಾರ್ದನಃ' ।

ಎಂಬುದಾಗಿ ಪರಮಾತ್ಮನ ಹೊರತಾಗಿ ಈ ಸಂಸಾರದುಃಖಶಮನಕ್ಕೆ ಯಾವ ಅನ್ಯರೂ ಸಮರ್ಥರಲ್ಲ. ಇದುವೇ ಶಾಸ್ತ್ರಸಾರ.

'ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ ।
ಅಜಮನಿದ್ರಮಸ್ವಪ್ನಂ ಯಚ್ಛೈತಂ ಬುಧ್ಯತೇ ತದಾ ॥

'ಕರ್ಮಣಾ ಬಧ್ಯತೇ ಜಂತುಃ ವಿದ್ಯಯಾ ಚ ವಿಮುಚ್ಯತೇ' – ಶ್ರುತಿ

ಅತೀಂದ್ರಿಯನಾದ, ಪರಾತ್ಪರನಾದ ಪರಮಾತ್ಮನನ್ನು ಹೊಂದುವದೇ ಪರಮ ಮುಖ್ಯವಾದ ಶಾಶ್ವತ ಸುಖರೂಪವಾದ ಮೋಕ್ಷವು. ಇದಕ್ಕೆ ಪರಮಾತ್ಮನ ತತ್ವಜ್ಞಾನವೇ ಮುಖ್ಯಸಾಧನ. ಸತ್ಕರ್ಮಾನುಷ್ಠಾನವು (ಧರ್ಮಾಚರಣೆಯು) ಪರಂಪರೆಯಾಗಿ ಮೋಕ್ಷಸಾಧನವು.

'ಕರ್ಮಣಾ ಜ್ಞಾನಮಾತನೋತಿ, ಜ್ಞಾನೇನ ಅಮೃತೀಭವತಿ' ಎಂಬುದಾಗಿ.

ಈ ಜ್ಞಾನವನ್ನು ನಮಗೆ ಲೌಕಿಕವಾದ ಯಾವ ಸಾಧನಗಳೂ ತಿಳಿಯಪಡಿಸಲಾರವು. ಆದುದರಿಂದ ಸ್ವತಃಪ್ರಮಾಣವೆನಿಸಿದ ಅಪೌರುಷೇಯವೂ ಅನಾದಿನಿತ್ಯವೂ ಆದ ಋಗ್ಯಜುಸ್ಸಾಮಾಥರ್ವಗಳೆಂಬ ನಾಲ್ಕು ವೇದಗಳು, ಮಹಾಭಾರತ, ಮೂಲರಾಮಾಯಣ, ಪಂಚ-ರಾತ್ರ, ಪುರಾಣಗಳು ಮತ್ತು ಇದರ ಅನುಸಾರಿಯಾದವುಗಳು – ಇವು ಸದಾಗಮಗಳು. ಈ ಸದಾಗಮಗಳೇ ಪರಾಪರ ತತ್ತ್ವಜ್ಞಾನಜನಕಗಳು.

'ಋಗಾದ್ಯಾ ಭಾರತಂ ಚೈವ ಪಂಚರಾತ್ರಮಥಾಖಿಲಮ್ ।
ಮೂಲರಾಮಾಯಣಂ ಚೈವ ಪುರಾಣಂ ಚೈತದಾತ್ಮಕಮ್ ॥

ಯೇ ಚಾನುಯಾಯಿನಸ್ತೇಷಾಂ ಸರ್ವೇ ತೇ ಚ ಸದಾಗಮಾಃ ॥
ದುರಾಗಮಾಸ್ತದನ್ಯೇಯೇ ತೈರ್ನಜ್ಞೇಯೋ ಜನಾರ್ದನಃ ।

ಜ್ಞೇಯ ಏತೈಸ್ಸದಾಯುಕ್ತೈಃ ಭಕ್ತಿಮದ್ಭಿಃ ಸುನಿಶ್ಚಿತೈಃ ॥'

ಸದಾಗಮಗಳೇ ಅತೀಂದ್ರಿಯಗಳಾದ ಧರ್ಮಾಧರ್ಮಗಳು, ಪರಾಪರವಸ್ತುವಿವೇಕ ಇವೇ ಮೊದಲಾದವುಗಳನ್ನು ಬೋಧಿಸುವ ಪರಮಸಾಧನಗಳಾಗಿವೆ. ಪುರಾಣಗಳು ಇಂಥ ಸದಾಗಮಗಳ ಸ್ಥಾನದಲ್ಲಿದ್ದು ಪರಮಾತ್ಮನ ಮಹಿಮಾಪ್ರತಿಪಾದಕಗಳಾಗಿ ಸಂಸಾರತಾರಕ-ವಾದ ಸುಜ್ಞಾನಪ್ರದವಾಗಿವೆ.

**ವೇದಗಳು ಹಾಗೂ ವೇದವ್ಯಾಸದೇವರಿಂದ ರಚಿತವಾದ ಪುರಾಣಗಳು–**

ವೇದಗಳು ಅಖಿಲ ಧರ್ಮಮೂಲ. ಆದ್ದರಿಂದ ಪ್ರಥಮಸ್ಥಾನವು. ವೇದಗಳು ಅಜ್ಞರಿಂದ ತಿಳಿಯಲು ಕಷ್ಟಸಾಧ್ಯ. ಇಂಥ ವೇದಗಳ ಉಪಬ್ರಂಹಣ ಕಾರ್ಯವನ್ನು ಪುರಾಣಗಳ ಸಹಾಯದಿದಲೇ ಮಾಡಬೇಕು ಎಂಬುದನ್ನು ಕೆಳಗಿನ ಬ್ರಹ್ಮಾಂಡ ಪುರಾಣದ ವಾಕ್ಯವು ತಿಳಿಸುವದು.

'ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್' ।  (ಬ್ರಹ್ಮಾಂಡ ಪುರಾಣ)

'ವಿಸ್ತಾರಾಯ ತು ವೇದಾನಾಂ ಸ್ವಯಂ ನಾರಾಯಣಃ ಪ್ರಭುಃ ।
ವ್ಯಾಸರೂಪೇಣ ಕೃತವಾನ್ ಪುರಾಣಾನಿ ಮಹೀತಲೇ ॥'  ( ಬ್ರಹ್ಮಾಂಡ ಪುರಾಣ)

ವೇದಗಳ (ಅರ್ಥ)ವಿಸ್ತಾರವನ್ನು ಸಾಕ್ಷಾತ್ ಶ್ರೀಮನ್ನಾರಾಯಣನ ಅವತಾರರೂಪಿಗಳಾದ ವೇದವ್ಯಾಸದೇವರು ಭೂಮಿಯಲ್ಲಿ ಅವತರಿಸಿ, ಪುರಾಣಗಳ ರಚನೆ ಮಾಡಿ ಮುಮುಕ್ಷುಗಳಿಗೆ ತಿಳಿಸಿಕೊಟ್ಟಿದ್ದಾರೆ ಎಂದು ಬ್ರಹ್ಮಾಂಡಪುರಾಣದ ವಾಕ್ಯವಿದೆ.

ಅಪೌರುಷೇಯವಾದ ವೇದವು ಪ್ರಮಾಣವಾಗಲಿ, ಆದರೆ ಪುರಾಣಾದಿಗಳಲ್ಲಿ ಆದರವು ಯಾಕೆ ಎಂಬುದಾಗಿ ಪ್ರಶ್ನಿಸಿಕೊಂಡು, ಅದಕ್ಕೆ ಕಾರಣವನ್ನು 'ವೇದಾನುಸಾರಿತ್ವಾತ್, ವೇದ-ಪರಿಗೃಹೀತತ್ವಾಚ್ಚ' ಎಂದು ಶಾಸ್ತ್ರಕಾರರು ವಿವರಿಸಿದ್ದಾರೆ.

## ಪುರಾಣಗಳ ಸ್ವರೂಪವಿಷಯದಲ್ಲಿ ವೇದಶಾಸ್ತ್ರ ಸಮ್ಮತಿ

ಪುರಾಣಗಳ ಸ್ವರೂಪವನ್ನು ಪ್ರತಿಪಾದಿಸುವ ಬೃಹದಾರಣ್ಯಕ ಹಾಗೂ ಪಾದ್ಮ-ಪುರಾಣಗಳ ವಾಕ್ಯಗಳು ಬಹು ಸ್ವಾರಸ್ಯಕರವಾಗಿವೆ. ಪರಮಾತ್ಮನಿಂದ ನಿಃಶ್ವಸಿತವಾದ ಅನಾದಿನಿತ್ಯವಾದ ವೇದವು ಎಲ್ಲ ವಾಙ್ಮಯಗಳಿಗೂ ಮೂಲಭೂತವೆಂದು ಪ್ರಸಿದ್ಧವಾಗಿದೆ. ಭಗವಂತನೇ ಚತುರ್ಮುಖಬ್ರಹ್ಮನನ್ನು ಸೃಷ್ಟಿಸಿ, ಅವನಿಗೆ ವೇದವನ್ನು ಉಪದೇಶಿಸಿದನು. ಜಗತ್ತಿನ ರೀತಿಗಳನ್ನು ತಿಳಿಸುವ, ಅನಾದಿನಿತ್ಯವಾದ ವೇದಸ್ವರೂಪವಾದ ದಿವ್ಯವಾಣಿಯು ಜಗತ್ತಿನ ಸೃಷ್ಟಿಯ ಆದಿಯಲ್ಲಿ ಅಭಿವ್ಯಕ್ತವಾಯಿತು.

'ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣಿ ವ್ಯಾಖ್ಯಾನಾನ್ಯನು-
ವ್ಯಾಖ್ಯಾನಾನಿ ಅಸ್ಯೈವ ನಿಃಶ್ವಸಿತಾನಿ' ॥ (ಇತಿ ಬೃಹದಾರಣ್ಯಕ ಶ್ರುತಿಃ)।

ವೇದವು ಧರ್ಮಪ್ರತಿಪಾದಕವಾದ ಅಪೌರುಷೇಯ ವಾಕ್ಯವು. 'ಧಾರಯತಿ ಇತಿ ಧರ್ಮಃ' ಎಂಬ ಶಬ್ದವ್ಯುತ್ಪತ್ತಿಯಿಂದ ಧರ್ಮಶಬ್ದವು ಪರಮಾತ್ಮನನ್ನು ಹಾಗೂ ಪರಮಾತ್ಮಸಂಬಂಧಿ-ಯಾದವುಗಳನ್ನೂ ಬೋಧಿಸುವದು. ಪರಮಾತ್ಮನು ಸರ್ವವೇದದಿಂದ ಪ್ರತಿಪಾದ್ಯನಾಗಿದ್ದಾನೆ. ಇದುವೇ ವೇದದ ಮುಖ್ಯ ಅರ್ಥವು. ಆದರೆ ಅದೇ ವೇದವೇ ಅಮುಖ್ಯಾರ್ಥದಲ್ಲಿ ಪರಮಾತ್ಮನಿಂದ ಸೃಷ್ಟವಾದ ಯಾಗಾದಿಕರ್ಮಗಳು, ದೇವತೆಗಳು ಹಾಗೂ ಜಗತ್ತು ಇವುಗಳನ್ನು ಪ್ರತಿಪಾದನ ಮಾಡುವದು. ಆದ್ದರಿಂದ ಅಪೌರುಷೇಯವಾದ ವೇದವು ಮಂತ್ರ ಮತ್ತು ಬ್ರಾಹ್ಮಣಗಳೆಂದು ಎರಡು ವಿಧವಾಗಿದೆ. ಅವುಗಳಲ್ಲಿ ಮೊದಲನೆಯದಾದ ಮಂತ್ರವು ಅನುಷ್ಠಾನ ಸಾಧನಗಳಾದ ದ್ರವ್ಯ ಮತ್ತು ದೇವತೆಗಳನ್ನು ತಿಳಿಸುವದು. ಋಗ್-ಯಜುಸ್-ಸಾಮ ಭೇದದಿಂದ ಮೂರು ವಿಧವಾಗಿದೆ. ಅಥರ್ವಣ ವೇದವೂ ಇದರಲ್ಲಿಯೇ ಸೇರಿರುತ್ತದೆ. ಎರಡನೆಯದಾದ ಬ್ರಾಹ್ಮಣವು ಇತಿಹಾಸ, ಪುರಾಣ, ವಿದ್ಯಾ, ಉಪನಿಷತ್ತು, ಶ್ಲೋಕ, ಸೂತ್ರ, ವ್ಯಾಖ್ಯಾನ, ಅನುವ್ಯಾಖ್ಯಾನಗಳೆಂದು ಎಂಟು ವಿಧವಾಗಿದೆ. ಬ್ರಾಹ್ಮಣಾಂತರ್ಗತವಾದ ಈ ಪುರಾಣವೆಂಬುದು ಜಗತ್ತಿನ ಪೂರ್ವಾವಸ್ಥೆಯನ್ನು ಪ್ರತಿಪಾದಿಸುವ, ವೇದಾರ್ಥವನ್ನು ನಿರೂಪಿಸುವ, ಶ್ರೀವೇದವ್ಯಾಸರಿಂದ ರಚಿತವಾದ ಪಂಚ ಅಥವಾ ದಶಲಕ್ಷಣವುಳ್ಳ ಶಾಸ್ತ್ರ.

'ಯಸ್ಮಾತ್ಪುರಾ ಹ್ಯನಕ್ತೀದಂ ಪುರಾಣಂ ತೇನ ತತ್ಸ್ಮೃತಮ್' ।

ಎಂಬ ಪುರಾಣಶಬ್ದನಿರುಕ್ತಿಯು ಬ್ರಹ್ಮಾಂಡಪುರಾಣದ ಪ್ರಕ್ರಿಯಾಪಾದದಲ್ಲಿದೆ. ಋಗಾದಿವೇದಗಳಂತೆ ಪುರಾಣವೂ ವೇದಾತ್ಮಕವಾಗಿರುವದು ಎಂಬುದು ಅಥರ್ವಣ ಮತ್ತು ಛಾಂದೋಗ್ಯವಾಕ್ಯಗಳಿಂದಲೂ ತಿಳಿಯುವದು.

'ಋಚಃ ಸಾಮಾನಿ ಛಂದಾಂಸಿ ಪುರಾಣಂ ಯಜುಷಾ ಸಹ ।
ಉಚ್ಛಿಷ್ಟಾಜ್ಜಜ್ಞಿರೇ ಸರ್ವೇ ದಿವಿ ದೇವಾದಿಮಿಶ್ರಿತಾಃ ॥' ಇತ್ಯಾಥರ್ವಣೋಕ್ತಿಃ ॥

'ಸ ಹೋವಾಚ ಋಗ್ವೇದಂ ಭಗವೋಧ್ಯೇಮಿ ಯುಜುರ್ವೇದಂ ಸಾಮವೇದಂ

ಆಥರ್ವಣಂ ಚತುರ್ಥಮಿತಿಹಾಸಂ ಪುರಾಣಂ ಪಂಚಮಂ ವೇದಾನಾಂ ವೇದಮಿತಿ'
– ಇತಿ ಛಾಂದೋಗ್ಯೋಕ್ತಿಃ ॥

ಆದಿಯಲ್ಲಿ ಏಕರೂಪದಿಂದಿದ್ದ ಪುರಾಣವನ್ನು ಭೂಲೋಕದಲ್ಲಿ ಹದಿನೆಂಟು ಮಹಾಪುರಾಣಗಳನ್ನಾಗಿಯೂ, ಹದಿನೆಂಟು ಉಪಪುರಾಣಗಳನ್ನಾಗಿಯೂ ಶ್ರೀಮನ್ನಾರಾಯಣಾವತಾರಿಯಾದ ಶ್ರೀವೇದವ್ಯಾಸ ದೇವರು ರಚಿಸಿ ಲೋಕವನ್ನು ಉದ್ಧಾರಮಾಡಿರುವರು. ಇವಲ್ಲದೇ ಹದಿನೆಂಟು ಗಣೇಶಾದಿ ಉಪೋಪಪುರಾಣಗಳೂ ಇವೆ. ಒಟ್ಟು ಐವತ್ನಾಲ್ಕು ಪುರಾಣಗಳಿವೆಯೆಂದು ತಿಳಿದು ಬರುವದು.

'ಪುರಾಣಮೇಕಮೇವಾಸೀತ್ ಸರ್ವಕಲ್ಪೇಷು ಮಾನವ ।
ಚತುರ್ವರ್ಗಸ್ಯ ಬೀಜಂ ತು ಶತಕೋಟಿಪ್ರವಿಸ್ತರಮ್ ॥

ಪ್ರವೃತ್ತಿಃ ಸರ್ವಶಾಸ್ತ್ರಾಣಾಂ ಪುರಾಣಮಭವತತ್ತಃ ।
ಕಾಲೇನಾಗ್ರಹಣಂ ದೃಷ್ಟ್ವಾ ಪುರಾಣಸ್ಯ ಮಹಾಮತಿಃ ॥

ಹರಿರ್ವ್ಯಾಸಸ್ವರೂಪೇಣ ಜಾಯತೇ ಚ ಯುಗೇ ಯುಗೇ ।
ಚತುರ್ಲಕ್ಷಪ್ರಮಾಣೇನ ದ್ವಾಪರೇ ದ್ವಾಪರೇ ಸದಾ ॥

ತದಷ್ಟಾದಶಧಾ ಕೃತ್ವಾ ಭೂಲೋಕೇ ನಿರ್ದಿಶತ್ಯಪಿ ।
ಅದ್ಯಾಪಿ ದೇವಲೋಕೇ ತು ಶತಕೋಟಿಪ್ರವಿಸ್ತರಮ್ ॥

ಆಸ್ತ್ಯೇವ ತಸ್ಯ ಸಾರಸ್ತು ಚತುರ್ಲಕ್ಷೇಣ ವರ್ಣ್ಯತೇ ॥' ಇತಿ ಬೃಹನ್ನಾರದೀಯೇ॥

ವ್ಯಾಸರೂಪಿಯಾದ ಪರಮಾತ್ಮನು ಚತುರ್ಲಕ್ಷಪ್ರಮಾಣದಿಂದ (ನಾಲ್ಕುಲಕ್ಷಶ್ಲೋಕಗಳು) ದ್ವಾಪರಾಂತ್ಯದಲ್ಲಿ ಅಷ್ಟಾದಶಪುರಾಣಗಳನ್ನು ನಿರ್ಮಾಣ ಮಾಡುತ್ತಾನೆ. ಈ ಪುರಾಣಗಳ ಸಮೂಹವು ಅದ್ಯಾಪಿ ದೇವಲೋಕದಲ್ಲಿ ಶತಕೋಟಿ (ನೂರುಕೋಟಿ ಸಂಖ್ಯಾಕವಾದ ಶ್ಲೋಕಗಳು) ವಿಸ್ತಾರದಿಂದ ಶೋಭಾಯಮಾನವಾಗಿದೆ. ಅದರ ಸಾರವೇ ಭೂಲೋಕದಲ್ಲಿ ನಾಲ್ಕುಲಕ್ಷ ಪ್ರಮಾಣದಿಂದ ಮೋಕ್ಷಾದಿಪುರುಷಾರ್ಥಗಳಿಗೆ ಕಾರಣವಾದ ಜ್ಞಾನವನ್ನು ನೀಡುವ ಮಹಾನಿಧಿಯಾಗಿ ಪ್ರಚಲಿತವಾದ ಪುರಾಣಗಳು.

'ವಿಸ್ತಾರಾಯ ಚ ಲೋಕಾನಾಂ ಸ್ವಯಂ ನಾರಾಯಣಃ ಪ್ರಭುಃ ।
ವ್ಯಾಸರೂಪೇಣ ಕೃತವಾನ್ ಪುರಾಣಾನಿ ಮಹೀತಲೇ' –ಇತಿ ಪಾದ್ಮೇ ॥

'ಆಖ್ಯಾನೈಶ್ಚಾಪ್ಯುಪಾಖ್ಯಾನೈಃ ಗಾಥಾಭಿಃ ಕಲ್ಪಶುದ್ಧಿಭಿಃ ।
ಪುರಾಣಸಂಹಿತಾಃ ಚಕ್ರೇ ಪುರಾಣಾರ್ಥವಿಶಾರದಃ' –ಬ್ರಹ್ಮಾಂಡಪುರಾಣೇ ॥

ಪುರಾಣಗಳು ನಮ್ಮ ಪ್ರಾಚೀನ ಸಂಸ್ಕೃತಿಯ ಅಮೂಲ್ಯ ನಿಧಿಯಾಗಿದೆ. ಈ ಪುರಾಣಗಳಲ್ಲಿ

ನಿರೂಪಿತವಾದ ಬಹಳ ಪ್ರಾಚೀನಕಾಲದವೆಂದೆನಿಸುವ ಆಖ್ಯಾನ–ಉಪಾಖ್ಯಾನಗಳು ಇಂದಿಗೂ ಸಹ ನಿತ್ಯಜೀವನದಲ್ಲಿ ಅರ್ಥಪೂರ್ಣಗಳೆನಿಸುವವು. ನಾಲ್ಕು ವೇದಗಳು, ಆರು ವೇದಾಂಗಗಳು, ಮೀಮಾಂಸಾ, ನ್ಯಾಯಶಾಸ್ತ್ರ, ಪುರಾಣ, ಧರ್ಮಶಾಸ್ತ್ರ ಎಂಬ ಹದಿನಾಲ್ಕು ವಿದ್ಯೆಗಳಲ್ಲಿ ಪುರಾಣಗಳು ಸಾಧನಜೀವಿಗಳ ಹೃದಯದಲ್ಲಿ ಹೆಚ್ಚಿನದಾದ ಪ್ರಭಾವವನ್ನು ಬೀರಬಲ್ಲವು. ಆದ್ದರಿಂದಲೇ ಪಂಡಿತಪಾಮರರಲ್ಲಿ ಸದಾ ಪ್ರಚಲಿತವಾಗಿ, ಅಂತಃಕರಣಶುದ್ಧಿ ಹಾಗೂ ಪರಮಾತ್ಮಲ್ಲಿ ಭಕ್ತಿಯನ್ನು ಶೀಘ್ರವಾಗಿ ಹುಟ್ಟಿಸುವ ಸದಾಗಮವಾಗಿದೆ.

## ಪುರಾಣ ಲಕ್ಷಣಗಳು

ಪುರಾಣಗಳು ಐದು ಅಥವಾ ಹತ್ತು ಲಕ್ಷಣವುಳ್ಳವುಗಳು ಎಂದು ಪುರಾಣವಾಕ್ಯಗಳಿಂದ ತಿಳಿದು ಬರುತ್ತದೆ. ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನುಚರಿತ – ಇವು ಐದು ಲಕ್ಷಣಗಳು. ಪುರಾಣಗಳು ಜಗತ್ಸೃಷ್ಟಿಯನ್ನೂ, ಪ್ರಳಯವನ್ನೂ, ಬ್ರಹ್ಮನಿಂದ ಸೃಷ್ಟವಾದ ರಾಜವಂಶಗಳನ್ನೂ, ಮನ್ವಂತರಗಳನ್ನೂ, ಜಗತ್ತನ್ನೂ, ಅನಂತರ ಆ ರಾಜರ ವಂಶದಲ್ಲಿ ನಂತರದಲ್ಲಿ ಉತ್ಪನ್ನರಾದ ರಾಜರ ಚರಿತೆಯನ್ನೂ ಹೇಳುತ್ತದೆ.

ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।
ವಂಶಾನುಚರಿತಂ ಚೈವ ಪುರಾಣಂ ಪಂಚಲಕ್ಷಣಮ್ ॥ ಬ್ರಹ್ಮಾಂಡಪುರಾಣ ॥

ಪುರಾಣದ ದಶಲಕ್ಷಣಗಳು ಈ ರೀತಿಯದಾಗಿವೆ – ಸರ್ಗ, ವಿಸರ್ಗ, ಸ್ಥಾನ, ಪೋಷಣ, ಊತ, ಮನ್ವಂತರ, ಈಶಾನುಕಥಾ, ನಿರೋಧ, ಮುಕ್ತಿ ಮತ್ತು ಆಶ್ರಯ. ಇದರ ತಾತ್ಪರ್ಯವು ಹೀಗಿದೆ – ಪುರಾಣಗಳಲ್ಲಿ ನಿರೂಪಿತವಾಗಿರುವ ಶ್ರೀಹರಿ ಹಾಗೂ ಶ್ರೀಹರಿಯ ಭಕ್ತರುಗಳ ಕಥಾಪ್ರಸಕ್ತಿಗಳಲ್ಲಿ ದಶವಿಧ ಲಕ್ಷಣಗಳಿಂದ ಪೂರ್ಣವಾಗಿರುವ ವಿಶೇಷವಿಷಯಗಳು ಪ್ರತಿಪಾದಿಸಲ್ಪಟ್ಟಿರುವವು ಎಂಬುದಾಗಿ. ಪುರಾಣಲಕ್ಷಣದ ಬಗೆಗಿನ ಹೆಚ್ಚಿನ ವಿವರಗಳನ್ನು ದೃಷ್ಟಾಂತ–ಪೂರ್ವಕವಾಗಿ ವಿವಿಧ ಪುರಾಣಗಳಿಂದ ತಿಳಿಯಬಹುದು.

## ಪುರಾಣಗಳ ವಿಭಾಗಗಳು ಹಾಗೂ ಅವುಗಳ ಪರಸ್ಪರ ವಿರೋಧಪರಿಹಾರ

ಮಹಾಪುರಾಣಗಳು ಸಂಖ್ಯೆಯಲ್ಲಿ ಹದಿನೆಂಟು. ಶ್ರೀಮದ್ಭಾಗವತ, ನಾರದೀಯ ಪುರಾಣ ಮತ್ತು ವಿಷ್ಣುಪುರಾಣಗಳಲ್ಲಿ ಹದಿನೆಂಟು ಪುರಾಣಗಳಲ್ಲಿಯ ಶ್ಲೋಕಗಳ ಸಂಖ್ಯೆಯನ್ನು ಹೇಳಲಾಗಿದೆ. ಮಹಾಪುರಾಣಗಳ ಹೆಸರುಗಳು ಕೆಳಗಿನಂತಿವೆ –

ಬ್ರಹ್ಮಪುರಾಣ, ಪದ್ಮಪುರಾಣ, ವಿಷ್ಣುಪುರಾಣ, ಶಿವಪುರಾಣ, ಭಾಗವತಪುರಾಣ, ನಾರದ–ಪುರಾಣ, ಮಾರ್ಕಂಡೇಯಪುರಾಣ, ಅಗ್ನಿಪುರಾಣ, ಭವಿಷ್ಯಪುರಾಣ, ಬ್ರಹ್ಮವೈವರ್ತಪುರಾಣ, ಲಿಂಗಪುರಾಣ, ವರಾಹಪುರಾಣ, ಸ್ಕಾಂದಪುರಾಣ, ವಾಮನಪುರಾಣ, ಕೂರ್ಮಪುರಾಣ, ಮತ್ಸ್ಯಪುರಾಣ, ಗರುಡಪುರಾಣ, ಮತ್ತು ಬ್ರಹ್ಮಾಂಡಪುರಾಣ,

ಇಂಥ ಪುರಾಣಗಳು ಸಾತ್ವಿಕ, ರಾಜಸ ಮತ್ತು ತಾಮಸಗಳೆಂದು ಮೂರು ವಿಧವಾಗಿವೆ. ಈ ಹದಿನೆಂಟು ಪುರಾಣಗಳಲ್ಲಿ – ಮಾತ್ಸ್ಯ, ಕೌರ್ಮ, ಲೈಂಗ್ಯ, ಶೈವ, ಸ್ಕಾಂದ, ಆಗ್ನೇಯ ಇವು ಆರು ತಾಮಸಪುರಾಣಗಳು. ಬ್ರಹ್ಮಾಂಡ, ಬ್ರಹ್ಮವೈವರ್ತ, ಮಾರ್ಕಂಡೇಯ, ಭವಿಷ್ಯ, ವಾಮನ, ಬ್ರಾಹ್ಮ ಇವು ಆರು ರಾಜಸಪುರಾಣಗಳು. ವೈಷ್ಣವ, ನಾರದೀಯ, ಭಾಗವತ, ಗರುಡ, ಪಾದ್ಮ, ವರಾಹ ಇವು ಆರು ಸಾತ್ವಿಕಪುರಾಣಗಳು.

ಎಲ್ಲ ಸಾತ್ವಿಕಪುರಾಣಗಳೂ ಮೋಕ್ಷಸಾಧನಗಳಾದುದರಿಂದ ಸರ್ವಜನಾದರಣೀಯವಾಗಿವೆ. ಆದರೆ ಇವುಗಳಲ್ಲಿ ಭಾಗವತವು ಶ್ರೇಷ್ಠವಾದುದು. ಶ್ರೀವಿಷ್ಣುಪುರಾಣವು ಶ್ರೇಷ್ಠತಮವಾಗಿದೆ.

'ಸಾತ್ವಿಕಾನಿ ಪುರಾಣಾನಿ ಶ್ರೇಯಾಂಸಿ ನಿಖಿಲಾನ್ಯಪಿ ।
ತತ್ರ ಭಾಗವತಂ ಶ್ರೇಷ್ಠಂ ತತೋ ವೈಷ್ಣವಮುತ್ತಮಮ್ ॥

ಪುರಾಣಮೇತತ್ಸದೃಶಂ ನಹ್ಯನ್ಯದುಪಪದ್ಯತೇ ।
ಆದೌ ಮಧ್ಯೇ ತಥಾಂತೇ ಚ ಗೀಯತೇತ್ರ ಹರಿರ್ಮುಹುಃ ॥' ಇತಿ ॥

ಮತ್ಸ್ಯಪುರಾಣಾನುಸಾರವಾಗಿ ಪುರಾಣಗಳು ಸಾತ್ವಿಕ–ರಾಜಸ–ತಾಮಸ–ಸಂಕೀರ್ಣ ಈ ಪ್ರಕಾರಕವಾಗಿ ಚತುರ್ವಿಧವಾಗಿವೆಯೆಂದು ಹೇಳಲ್ಪಟ್ಟಿದೆ–

'ಸಾತ್ವಿಕೇಷು ಪುರಾಣೇಷು ಮಾಹಾತ್ಮ್ಯಧಿಕಂ ಹರೇಃ ।
ರಾಜಸೇಷು ಚ ಮಾಹಾತ್ಮ್ಯಮಧಿಕಂ ಬ್ರಹ್ಮಣೋ ವಿದುಃ ॥

ತದ್ವದಗ್ನೇಶ್ಚ ಮಾಹಾತ್ಮ್ಯಂ ತಾಮಸೇಷು ಶಿವಸ್ಯ ಚ ।
ಸಂಕೀರ್ಣೇಷು ಸರಸ್ವತ್ಯಾಃ ಪಿತೄಣಾಂ ಚ ನಿಗದ್ಯತೇ ॥' ಇತಿ ಮಾತ್ಸ್ಯ 53–67,68

ಎಲ್ಲ ಪುರಾಣಗಳ ಅಧ್ಯಯನವನ್ನು ಮಾಡುವವರಿಗೆ ತೋರುವ ಸಮಸ್ಯೆಯೆಂದರೆ ಪುರಾಣಗಳಲ್ಲಿಯ ಪರಸ್ಪರ ವಿರೋಧಗಳು ಅಥವಾ ವ್ಯತ್ಯಾಸಗಳು. ರಾಜಸ ಮತ್ತು ತಾಮಸ ಪುರಾಣಗಳಲ್ಲಿ ಇಂಥ ವಿರೋಧಾಭಾಸಗಳು ಅಲ್ಲಲ್ಲಿ ಕಾಣಿಸುವವು. ಒಂದು ಪುರಾಣದಲ್ಲಿ ನಿರೂಪಿಸಿದ ಕಥೆ ಮತ್ತು ಘಟನೆಗಿಂತ ವಿರುದ್ಧವಾಗಿ ಅಥವಾ ವ್ಯತ್ಯಸ್ತವಾಗಿ ಮತ್ತೊಂದು ಪುರಾಣವು ನಿರೂಪಿಸುವದು. ಹೀಗಿರುವಾಗ ಪುರಾಣಗಳು ಪ್ರಮಾಣಗಳೆಂದು ನಂಬುವದು ಹೇಗೆ ಎಂಬ ಪ್ರಶ್ನೆ ಸಹಜವಾಗಿ ಉದ್ಭವಿಸುವದು. ಈ ಸಂದೇಹವನ್ನು ಗಮನದಲ್ಲಿ ಇಟ್ಟುಕೊಂಡು ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ಸಮಗ್ರವಾದ ಪುರಾಣ–ವಾಙ್ಮಯದಲ್ಲಿ ಕಂಡು ಬರುವ ವಿರೋಧಗಳ ಪರಿಹಾರದದ ಬಗೆಗೆ, ಸ್ಕಾಂದಪುರಾಣದ ಪ್ರಮಾಣವನ್ನು ಉದಾಹರಿಸಿ, ಸಮಾಧಾನವನ್ನು ತಿಳಿಸಿರುವರು.

ಬೇರೆ–ಬೇರೆ ಕಲ್ಪಗಳಲ್ಲಿ ಅಲ್ಪ–ಸ್ವಲ್ಪ ವ್ಯತ್ಯಾಸದಿಂದ ಸೃಷ್ಟಿಯು ನಡೆಯುವದು ಎಂದು

ಸ್ಕಾಂದಪುರಾಣವು 'ಸೃಷ್ಟಿಭೇದಾತ್ ವಿರೂಪಂ ಚ' ಎಂಬ ವಾಕ್ಯದಿಂದ ತಿಳಿಸುವದು. ಆದ್ದರಿಂದ, ಆ ವ್ಯತ್ಯಾಸಕ್ಕೆ ಅನುಗುಣವಾಗಿ ವಿವಿಧಪುರಾಣಗಳಲ್ಲಿಯೂ ಸಹ ಒಂದೇ ಕಥೆ ಅಥವಾ ಘಟನೆಯು ವ್ಯತ್ಯಸ್ಥವಾಗಿ ನಿರೂಪಿತವಾಗಿರುವದು ಎಂದು ನಿರ್ಣಯಿಸಿದೆ. ಇಂಥ ಕಥಾವೈಪರೀತ್ಯಗಳ ಸಂಖ್ಯೆಯು ಎಷ್ಟು ಎಂಬುದನ್ನೂ ಸ್ಕಾಂದಪುರಾಣವು ತಿಳಿಸುತ್ತದೆ. ಹೀಗೆ ಕಲ್ಪ-ಕಲ್ಪಗಳಲ್ಲಿ ಸೃಷ್ಟಿಯಲ್ಲಿ ಆಗುವ ವೈಚಿತ್ರ್ಯವನ್ನು ಅವಲಂಬಿಸಿ, 'ತಥಾ ಪಂಚೋತ್ತರಂ ಶತಮ್' ಒಂದುನೂರಾ ಐದು (105) ಸಂದರ್ಭಗಳಲ್ಲಿ ಅಷ್ಟೇ ಪರಸ್ಪರ ವ್ಯತ್ಯಸ್ತವಾಗಿ ಪುರಾಣಗಳಲ್ಲಿ ಕಥೆಗಳು ಮತ್ತು ಘಟನೆಗಳು ನಿರೂಪಿತವಾಗಿವೆ ಎಂದು ಸ್ಕಾಂದಪುರಾಣವು ಸಂಖ್ಯಾನಿರ್ದೇಶಪೂರ್ವಕವಾಗಿ ತಿಳಿಸುವದು.

ಇದನ್ನು ನಾವು ಭಾಗವತ ಪಂಚಮಸ್ಕಂದದಲ್ಲಿಯ

'ವಿಷ್ಣೋರ್ವಿಕ್ರಮತೋ ವಾಮಪಾದಾಂಗುಷ್ಠನಖನಿರ್ಭಿನ್ನ..... ......'

ಇತ್ಯಾದಿವಾಕ್ಯದಲ್ಲಿ ನೋಡಬಹುದು. ತ್ರಿವಿಕ್ರಮಾವತಾರದಲ್ಲಿ ಪರಮಾತ್ಮನು ತನ್ನ ಎಡಗಾಲನ್ನು ಮೇಲಿನ ಲೋಕಗಳಲ್ಲಿ ಇಟ್ಟಿರುವನು ಎಂದು ಭಾಗವತವು ತಿಳಿಸುವದು. ಇತರ ಪುರಾಣಗಳಲ್ಲಿ ತನ್ನ ಬಲಗಾಲನ್ನು ಮೇಲಕ್ಕೆ ಇಟ್ಟಿರುವನು ಎಂದಿದೆ. ಈ ವಿರೋಧವನ್ನು ಕಲ್ಪಭೇದವನ್ನಿಟ್ಟುಕೊಂಡು ಪರಿಹರಿಸಬೇಕೆಂದು ಶ್ರೀಮದಾಚಾರ್ಯರು ಭಾಗವತತಾತ್ಪರ್ಯದಲ್ಲಿ ಉಪದೇಶಿಸಿರುವರು –

'ವಾರಾಹೇ ವಾಮಪಾದಂ ತು ತದನ್ಯೇಷು ಚ ದಕ್ಷಿಣಮ್ ।
ಪಾದಂ ಕಲ್ಪೇಷು ಭಗವಾನ್ ಉಜ್ಜಹಾರ ತ್ರಿವಿಕ್ರಮಃ ॥ '

ಆದರೆ, ಇಂಥ ಕಲ್ಪಭೇದದ ವ್ಯತ್ಯಾಸವನ್ನಿಟ್ಟುಕೊಂಡು ವಿರೋಧಪರಿಹಾರವನ್ನು ಎಲ್ಲ ಸ್ಥಳಗಳಲ್ಲಿ ಮಾಡಬಹುದೇ ಹೇಗೆ? ಎಂಬುದನ್ನು ಶ್ರೀಮದಾಚಾರ್ಯರು ವಾರಾಹಪುರಾಣದ ಕೆಳಗಿನ ವಚನದ ಮೂಲಕವಾಗಿ ನಿರ್ಣಯಿಸಿರುವರು –

'ಋತೇ ತು ಪಾಂಡವಾನಾಂ ಕಾರ್ಷ್ಣ್ಯಂ ರಾಮಾಯಣಂ ತಥಾ ।
ವಿಷ್ಣೋರ್ಬ್ರಹ್ಮಾದಿನಾಂ ಚೈವ ಕ್ರಮಾದ್ ವ್ಯತ್ಯಸ್ತಶಕ್ತಿತಾಮ್ ॥
ಏತದಾಪಾದಕಂ ಚಾನ್ಯದ್ ಋತೇ ಕಲ್ಪಾದಿಭೇದತಃ ।
ಕಥಾಭೇದಸ್ತು ವಿಜ್ಞೇಯಃ ....... ' ।

ಪಾಂಡವರ ಕಥೆ, ಕೃಷ್ಣಕಥೆ, ರಾಮಾಯಣ ಇವುಗಳಲ್ಲಿ ಕಲ್ಪಾದಿಗಳ ಭೇದದಿಂದ ವಿರೋಧ-ಪರಿಹಾರವನ್ನು ಮಾಡಬಾರದು. ಅದರಂತೆ, ಶ್ರೀವಿಷ್ಣು ಮತ್ತು ಬ್ರಹ್ಮಾದಿಗಳ ಸಾಮರ್ಥ್ಯದಲ್ಲಿ ತಾರತಮ್ಯಾನುಗುಣವಾಗಿ ಇರುವ ಭೇದವನ್ನು ವ್ಯತ್ಯಸ್ತವಾಗಿ ತೋರಿಸುವ ಕಥಾಭಾಗ-ಗಳನ್ನು ಕಲ್ಪಭೇದದಿಂದ ಕೂಡಿಸಬಾರದು- ಎಂಬುದು ಆಚಾರ್ಯರ ಅಬಿಪ್ರಾಯವಾಗಿದೆ. ಮತ್ತು ಅದೇ ರೀತಿಯಾಗಿ, ಪಾಂಡವಕಥಾ ಮುಂತಾದವುಗಳಲ್ಲಿ ಬೇರೆ ಬೇರೆ ಪುರಾಣಗಳಲ್ಲಿ ವಿರುದ್ಧವಾಗಿ

ಹೇಳಿರುವದು ಅಯೋಗ್ಯರಿಗೆ ನಿಜವಾದ ತಾತ್ಪರ್ಯ ತಿಳಿಯದೇ ಅನ್ಯಥಾಜ್ಞಾನ ಬರಲೆಂದೇ ಎಂಬುದಾಗಿಯೂ ಅಭಿಪ್ರಾಯವು. 'ಮೋಹಾಯ್ಯೆತೇಷು ಭಿನ್ನತಾ' ಎಂಬ ವರಾಹಪುರಾಣದ ವಚನವು ಇದನ್ನು ತಿಳಿಯಪಡಿಸುವದು. ಸ್ಕಾಂದಪುರಾಣವು ಇನ್ನೂ ಸ್ಪಷ್ಟವಾಗಿ

'ವೈರೂಪ್ಯಮನ್ಯದ್ ವಿಜ್ಞೇಯಂ ತಾತ್ಪರ್ಯಾನ್ಮೋಹನಾಯ ವಾ'

ಎಂದು ತಿಳಿಸುವದು.

ಆದ್ದರಿಂದ ಪುರಾಣಗಳಲ್ಲಿ ಪರಸ್ಪರವಾಗಿ ವಿರೋಧಗಳು ಕಾಣಿಸುವದರಿಂದ ಅವು ಅಪ್ರಮಾಣ ಎಂದು ನಿರ್ಧರಿಸಬಾರದು. ಕಲ್ಪಭೇದದ ವೈಚಿತ್ರ್ಯದಿಂದ ಕೆಲವು ವಿರೋಧಗಳನ್ನು ಪರಿಹರಿಸಬಹುದಾದರೆ, ಮತ್ತೆ ಕೆಲವು ಅಯೋಗ್ಯರ ಮೋಹಕ್ಕಾಗಿಯೇ ಉದ್ದೇಶಪೂರ್ವಕವಾಗಿಯೇ ತೋರಿಸಲ್ಪಟ್ಟಿರುವವು ಎಂದು ನಿರ್ಣಯಿಸಬೇಕು. ಅವುಗಳು ವಿರೋಧಾಭಾಸಗಳೇ ಹೊರತು ನಿಜವಾದ ವಿರೋಧಗಳಲ್ಲ ಎಂಬ ವಿಷಯವನ್ನು ಸ್ಪಷ್ಟವಾಗಿ ತಿಳಿಯಬೇಕು.

**ಪುರಾಣಗಳ ಆಪ್ತತ್ವವಿಷಯದಲ್ಲಿ ಯುಕ್ತಿ**

ಪರಮಾತ್ಮ ಹಾಗೂ ಮುಖ್ಯಪ್ರಾಣರಲ್ಲಿ ಆಪ್ತತಮತ್ವವು ಉಂಟು, ಹಾಗೂ ಇತರರಲ್ಲಿ ಅದನ್ನು ವಿಸ್ತರಿಸಲಾಗುವದಿಲ್ಲ. ಇತರ ದೇವತೆಗಳು ಹಾಗೂ ಮುನಿಗಳು ಪರಮಾತ್ಮನ ಭಕ್ತರಾಗಿರುವದರಿಂದ ಆಪ್ತರು ಮಾತ್ರ – ಎಂಬ ಅಪೂರ್ವ ಪ್ರಮೇಯವನ್ನು ವಿಷ್ಣುಸಂಹಿತಾವಾಕ್ಯವು ಪ್ರತಿಪಾದಿಸುವದು

'ಬ್ರಹ್ಮಾವಿಷ್ಣೂ ಹಿ ಸರ್ವಸ್ಯ ಲೋಕೇಷ್ವಾಪ್ತತಮೌ ಮತೌ ।
ಆಪ್ತಾಸ್ತದಿತರೇ ಜ್ಞೇಯಾ ದೇವಾ ಮುನಯ ಏವ ಚ' ಇತಿ ॥

ಇಲ್ಲಿ ಹೇಳಲ್ಪಟ್ಟ ಬ್ರಹ್ಮದೇವರೇ ವಾಯುದೇವರು.

ಉದಾಹರಣೆಗಾಗಿ ಕೆಳಗಿನ ಕೆಲವು ಸಂಗತಿ-ಪ್ರಸಂಗಗಳನ್ನು ತಿಳಿಯೋಣ.

(1) ಬುದ್ಧರೂಪದಲ್ಲಿ ಪರಮಾತ್ಮನಿಗೆ ವಿಪ್ರಲಂಭಕತ್ವವನ್ನು ಶಂಕಿಸಬಾರದು. ಅಲ್ಲಿ ಶ್ರೋತೃ-ಗಳಾದ ಅಸುರರು ಅಯೋಗ್ಯರಾದುದರಿಂದ ಅವರಿಗೆ ಅನ್ಯಥಾಮತಿಯು (ಅನ್ಯಥಾ-ಜ್ಞಾನವು) ಹುಟ್ಟಿದೆಯೇ ಹೊರತು ಪರಮಾತ್ಮನ ಅನ್ಯಥಾವಚನದ ನಿಮಿತ್ತವಾಗಿ ಅಲ್ಲ. ಇತರರುಗಳಿಗೆ ರಾಗಾದಿರೂಪ ದೋಷಗಳಿರುವದರಿಂದ ಅನ್ಯಥಾಮತಿಯು ಉಂಟಾಯಿತು. ಪರಮಾತ್ಮನಿಗಾದರೋ ಸರ್ವದೋಷಾತಿದೂರನಾದುದರಿಂದ ವಕ್ತೃದೋಷಕೃತವಾದ ಮೋಹವು ಇರುವದಿಲ್ಲ. ಆ ಪರಮಾತ್ಮನೇ ಬೌದ್ಧಾವತಾರದಲ್ಲಿ ತನ್ನಿಂದ ಕೃತವಾದ ಸೂತ್ರಗಳನ್ನು ಪ್ರಶಾಂತಸಂಹಿತಾದಲ್ಲಿ ದೇವತೆಗಳಿಗೆ ಅತ್ಯಂತ ತತ್ವವಿಷಯಗಳನ್ನಾಗಿ ಉಪದೇಶಿಸಿದನು.

'ನನು ಬುದ್ಧರೂಪೇ ವಿಪ್ರಲಂಭಾದಿಕತ್ವಂ ವಿಷ್ಣೋಃ ಶಂಕ್ಯಮ್ । ತತ್ರ ಶ್ರೋತೄಣಾಂ ಅಸುರಾಣಾಂ ಅಯೋಗ್ಯತ್ವಾತ್ ಅನ್ಯಥಾಮತಿಃ ಜಾತಾ, ನ ಅನ್ಯಥಾವಚನನಿಮಿತ್ತಾ

। ಇತರೇಷಾಂ ರಾಗಾದಿಮತ್ವಾತ್ ಅನ್ಯಥಾಮತಿಃ ಯುಕ್ತಾ । ವಿಷ್ಣೋಸ್ತು ತದಭಾವ–ಶ್ರುತೇಃ ನ ವಕ್ತೃದೋಷೋ ಮೋಹಃ । ಸ ಏವ ತಾನಿ ಸೂತ್ರಾಣಿ ತತ್ವವಿಷಯಾಣಿ ಪ್ರಶಾಂತಸಂಹಿತಾಯಾಂ ಅಂಜಸಾ ದೇವೇಭ್ಯೋ ವ್ಯಾಚಖ್ಯೌ ।' (ತತ್ವಪ್ರದೀಪ)

(2) ಅದೇ ರೀತಿಯಾಗಿ ಪುರಾಣಗಳಲ್ಲಿಯೂ ಅನ್ಯಥಾ ಉಕ್ತಿಯು ಇರುವದಿಲ್ಲ. ಯಾಕೆಂದರೆ ಸೂತ್ರಕರ್ತೃರಾದ ಭಗವಾನ್ ವೇದವ್ಯಾಸರೇ ಪುರಾಣಕರ್ತೃರೂ ಆಗಿರುವದರಿಂದ, ಅಂಥ ವೇದವ್ಯಾಸರ ವಾಕ್ಯಗಳಲ್ಲಿ ಎಲ್ಲಿಯೂ ಅಪ್ರಾಮಾಣ್ಯವನ್ನು ಶಂಕಿಸಬಾರದು. ಇದಕ್ಕೆ ಕಾರಣವೆಂದರೆ, ವೇದವ್ಯಾಸರಿಂದ ಕೃತವಾದ ಬ್ರಹ್ಮಮೀಮಾಂಸಾ ಶಾಸ್ತ್ರದಲ್ಲಿಯೂ, ಮಹಾಭಾರತಾದಿಗಳಲ್ಲಿಯೂ ಹಾಗೂ ಇತರ ಪುರಾಣಗಳಲ್ಲಿಯೂ ಆಪ್ತಿಸಾಮ್ಯವಿದೆ.

'ನ ಚ ಪುರಾಣೇಷು ಅನ್ಯಥೋಕ್ತಿಃ । ಯತಃ ಸೂತ್ರಕರ್ತಾ ಭಗನಾವ್ ವ್ಯಾಸಃ ಏವ ಪುರಾಣಾದಿಕರ್ತಾಽಪಿ । ನ ಚ ತದ್ವಾಕ್ಯಂ ಕ್ವಚಿದಪ್ರಮಾಣಂ ಆಶಂಕ್ಯಮ್ । ಆಪ್ತಿಸಾಮ್ಯಾತ್ । ಸರ್ವತ್ರ ಭಗವತ್ಪ್ರಮಾಣಾ ಭಗವದ್ವಚನಪ್ರಮಾಣ್ಯಾ ಇತಿ ಮೂಲಶ್ರುತಿಃ' । (ತತ್ವಪ್ರದೀಪ)

(3) ಆದ್ದರಿಂದ ಪುರಾಣಗಳಲ್ಲಿ ಪೂರ್ವಪಕ್ಷಸಿದ್ದಾಂತವಿಭಾಗದ ಅಪರಿಜ್ಞಾನದಿಂದಲೇ ಅವುಗಳು ಮೋಹಕಾರಕಗಳೆಂದು ಅಜ್ಞರು ತಿಳಿಯುವರು. ಈ ಪೂರ್ವಪಕ್ಷ–ಸಿದ್ಧಾಂತಗಳ ಸರಿಯಾದ ಜ್ಞಾನವು ಭಾಷಾರೀತಿಯ ವಿಶೇಷಜ್ಞಾನದಿಂದ ಆಗುವದು.

'ಪೂರ್ವಪಕ್ಷಸಿದ್ಧಾಂತಾವಿಭಾಗಾಪರಿಜ್ಞಾನಕೃತಶ್ಚ ತತ್ರ ಮೋಹಃಸ್ಯಾತ್ । ತಚ್ಚ ಭಾಷಾರೀತಿವಿಶೇಷಜ್ಞಾನಾತ್ ಭವತಿ' । (ತತ್ವಪ್ರದೀಪ)

ಇದನ್ನು ಕೆಳಗಿನ ಬ್ರಾಹ್ಮಪುರಾಣದ ವಾಕ್ಯವು ಸ್ಪಷ್ಟವಾಗಿ ಉಪದೇಶಿಸುವದು –

'ಭಾಷಾತ್ರಯಂ ನ ಜಾನಾತಿ ರೀತೀನಾಂ ಜ್ಞಾನಮೇವ ಚ ।
ಪುರಾಣಾರ್ಥಂ ವದನ್ ಯಾತಿ ನರಕಂ ನಾತ್ರ ಸಂಶಯಃ' ಇತಿ ।

(4) ಇದೇ ರೀತಿಯಾಗಿ ವ್ಯಾಸಕೃತ ಪುರಾಣಗಳಲ್ಲಿಯೂ ಕೂಡ ಸ್ವತಃ ಪರಸ್ಪರವಾದ ವಿರೋಧಗಳಿಲ್ಲ. ಶೈವಾದಿಪುರಾಣಗಳಲ್ಲಿ ದರ್ಶನಭಾಷಾ ಪ್ರಾಚುರ್ಯವು ಇರುವದರಿಂದ ವೇದಾನನು–ಸಾರಿತ್ವವು ಇದ್ದಂತೆ ಭಾಸವಾಗುವದು. ಆದರೇ ಅವು ವೇದಾನುಸಾರಿಯಾಗಿಯೇ ಇರುವವು. ಅವುಗಳಲ್ಲಿಯೂ ಕೂಡ ವಿಷ್ಣುಸರ್ವೋತ್ತಮತ್ವವೇ ಪ್ರತಿಪಾದಿತವಾಗಿರುವದು ಎಂಬುದೇ ಸಿದ್ಧಾಂತಸಾರವು.

'ನ ಪುರಾಣಾನಾಂ ಸ್ವತೋಽನ್ಯೋನ್ಯಂ ವಾ ವಿರೋಧಃ । ಶೈವಾದಿಪುರಾಣೇಷು ದರ್ಶನಭಾಷಾಪ್ರಾಚುರ್ಯಾತ್ ವೇದಾನನುಸಾರಿತ್ವಮಿವ ಪ್ರತೀಯತೇ; ನ ತು ತದಸ್ತಿ । ತತ್ರಾಪಿ ವಿಷ್ಣೋಃ ಸರ್ವೋತ್ತಮತ್ವಮೇವ ಸಿದ್ಧಾಂತಸಾರಃ । ತತ್ರ ತತ್ರ ತದುಕ್ತೇಃ' ।

ಅಲ್ಲಲ್ಲಿ ಈ ಮಾತು ಸ್ಪಷ್ಟವಾಗುವದು.

'ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ ।
ಆದಾವಂತೇ ಚ ಮಧ್ಯೇ ಚ ವಿಷ್ಣುಸ್ಸರ್ವತ್ರ ಗೀಯತೇ' ಇತಿ ಹರಿವಂಶೇಷು॥

(5) ಪೂರ್ವಪಕ್ಷದ ಆಧಿಕ್ಯವು ಈ ಪುರಾಣಗಳಲ್ಲಿ ದುರ್ಜನರ ಮೋಹಾರ್ಥವಾಗಿ ಎಂಬುದೇ ದರ್ಶನದ ರಹಸ್ಯವಾಗಿದೆ.

'ಪೂರ್ವಪಕ್ಷಾಧಿಕ್ಯಂ ದುರ್ಜನಮೋಹನಾರ್ಥಂ ಇತಿ ದರ್ಶನರಹಸ್ಯಮ್ ।(ತತ್ವಪ್ರದೀಪ)

ಆದ್ದರಿಂದ ಪುರಾಣ ವಿಷಯಕವಾದ ತತ್ವಾರ್ಥರಹಸ್ಯವನ್ನು ಸ್ಪಷ್ಟವಾಗಿ ನಮಗೆ ಉಪದೇಶಿಸಿದ ವಾಯ್ವವತಾರಭೂತರಾದ ಶ್ರೀಮದಾಚಾರ್ಯರು ಆಪ್ತತಮರು. ಶ್ರೀವೇದವ್ಯಾಸದೇವರ ಸರಿಯಾದ ಉಪದೇಶದ ಅರ್ಥಗಳನ್ನು ನಮಗೆ ಮಾಡಿ ಕೊಡುವ ಪರಮೋಪಕಾರಿಗಳು. ಅವರಿಂದ ನಿರ್ಮಿತವಾದ ಭಾಗವತತಾತ್ಪರ್ಯ ಮತ್ತು ಮಹಾಭಾರತತಾತ್ಪರ್ಯನಿರ್ಣಯ ಗ್ರಂಥಗಳು ಪುರಾಣಗಳಲ್ಲಿಯ ವಿರೋಧಾಭಾಸಗಳ ಸಂಶಯಗಳನ್ನು ದೂರಮಾಡಿ ತತ್ವನಿಶ್ಚಯ ಮಾಡಿಕೊಡುವದರಲ್ಲಿ ಅತಿ ಸಮರ್ಥವಾದವುಗಳು.

## ಪುರಾಣಗಳಲ್ಲಿ ದಾರ್ಶನಿಕ ದೃಷ್ಟಿಕೋಣ

ಪುರಾಣಗಳ ಮೂಲ ಉದ್ದೇಶವು ಪರಮಾತ್ಮನ ಮಹಿಮೆಯ ಪರಿಚಯವನ್ನು ಮಾಡಿಕೊಡುವದರೊಂದಿಗೆ ಆರ್ಷಧರ್ಮ ಮತ್ತು ತತ್ವದರ್ಶನಗಳನ್ನು ಸುಗಮ ಹಾಗೂ ಸುಗ್ರಾಹ್ಯವನ್ನಾಗಿ ಮಾಡುವದೂ ಇದೆ. ವಾಯುಪುರಾಣದಲ್ಲಿ ಈ ರೀತಿಯಾಗಿ ಹೇಳಲ್ಪಟ್ಟಿರುವದು – ಯಾವ ವ್ಯಕ್ತಿಯು ವೇದ, ವೇದಾಂಗ ಮತ್ತು ಉಪನಿಷತ್ತುಗಳ ಜ್ಞಾನವನ್ನು ಮಾಡಿಕೊಂಡವನಿದ್ದರೂ, ಪುರಾಣಗಳ ಜ್ಞಾನವನ್ನು ಮಾಡಿಕೊಂಡಿರದಿದ್ದರೆ ಅವನು ವಿದ್ವಾಂಸನೆಂದು ಎನಿಸಲಾರನು.

## ವೇದಗಳ ಪ್ರತಿಷ್ಠಾ ಪುರಾಣಗಳಿಂದಲೇ ಆಗುವದು.

'ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।
ಬಿಭೇತ್ಯಲ್ಪಶ್ರುತಾದ್ ವೇದೋ ಮಾಮಯಂ ಪ್ರಹರಿಷ್ಯತಿ' ಇತಿ ॥

ಆದುದರಿಂದ ವೇದದಿಂದ ಮುಖ್ಯಪ್ರತಿಪಾದ್ಯನಾದ ಪರಮಾತ್ಮನೇ ಸಕಲ ಪುರಾಣಗಳಿಂದ ಮುಖ್ಯಪ್ರತಿಪಾದ್ಯನಾಗಿದ್ದಾನೆ ಎಂದು ದೃಢವಾಗಿ ತಿಳಿಯಬೇಕು. ಸಾತ್ವಿಕಪುರಾಣಗಳಲ್ಲಿ ವಿಷ್ಣುಪಾರಮ್ಯದ ಪ್ರತಿಪಾದನವು ಸ್ಪಷ್ಟವಾಗಿ ತೋರುವದಂತೂ ಸರಿ. ಇತರ ಪುರಾಣಗಳ-ಲ್ಲಿಯೂ (ರಾಜಸ, ತಾಮಸವೆಂದು ಪ್ರಸಿದ್ಧವಾದ ಪುರಾಣಗಳಲ್ಲಿ) ತೋರುವ ವಿಷ್ಣುಸರ್ವೋತ್ತಮತ್ವ ಜಗತ್ಸತ್ಯತ್ವಾದಿ ಪ್ರತಿಪಾದಕವಾದ ವಾಕ್ಯಗಳನ್ನು, ಸಿದ್ಧಾಂತ-ಪ್ರಮೇಯಗಳ ಪ್ರತಿಪಾದನೆ ಮಾಡುವಾಗ

ಶ್ರೀಮದಾಚಾರ್ಯರು ವಿಪುಲವಾಗಿ ಪ್ರಮಾಣತಯಾ ಉದಾಹರಿಸಿದುದನ್ನು ಸರ್ವಮೂಲ ಗ್ರಂಥಗಳಲ್ಲಿ ನಾವು ಕಾಣಬಹುದು.

ಭವಿಷ್ಯೋತ್ತರ ಪುರಾಣದ (ವೇಂಕಟೇಶಮಾಹಾತ್ಮ್ಯೆಯ) 2 ನೆಯ ಅಧ್ಯಾಯದಲ್ಲಿ ಭೃಗುಋಷಿಯ ಕಥೆಯನ್ನು ನಿರೂಪಣೆ ಮಾಡುವ ಸಂದರ್ಭದಲ್ಲಿ – ದೇವಾಧಿದೇವತೆಗಳು ಋಷಿಗಳು ಹಾಗೂ ಇತರ ಎಲ್ಲ ಸಾಧನಜೀವಿಗಳು ಮಾಡುವ ಸತ್ಕರ್ಮಾನುಷ್ಠಾನವನ್ನು ಸರ್ವೋತ್ತಮನಾದ ದೇವನಿಗೇ ಸಮರ್ಪಣ ಮಾಡಬೇಕು. ಅವನು ವಿಷ್ಣುವೇ – ಎಂದು ಭೂಲೋಕಸಂಚಾರಮಾಡಿ ತಾನು ನಿರ್ಣಯಿಸಿದ ವಿಚಾರವನ್ನು, ಭೂಲೋಕದಲ್ಲಿ ಋಷಿಗಳಿಗೆ ಹೇಳುವಾಗ, ಕೆಳಗಿನ ಸಾರಭೂತವಾದ ವಾಕ್ಯವನ್ನು ಪುರಾಣದಲ್ಲಿ ಕಾಣುತ್ತೇವೆ –

'ಹರಿಃ ಸರ್ವೋತ್ತಮಃ ಸಾಕ್ಷಾತ್ ರಮಾ ದೇವೀ ತತಃ ಪರಮ್ ।
ವಿಧಿವಾಯೂ ತದಂತೇ ಚ ತದಂತೇ ಶರ್ವಪೂರ್ವಕಾಃ ॥

'ಏವಂ ತರತಮಾ ಜ್ಞೇಯಾಃ ಸುರ–ದೈತ್ಯ–ನರೇಷು ಚ ।
ಇತ್ಯೇವಂ ಚೋದಿತಾ ವಿಪ್ರಾಃ ಭೃಗುಣಾ ತತ್ವವೇದಿನಾ ॥'

ವೇಂ.ಮಾ – ಅಧ್ಯಾಯ 2, ಶ್ಲೋಕ 32–33

ಈ ಶ್ಲೋಕಗಳು ಹರಿಸರ್ವೋತ್ತಮತ್ವ, ವಾಯುಜೀವೋತ್ತಮತ್ವ, ಭೇದಸತ್ಯತ್ವ ಪ್ರಮೇಯ–ವನ್ನು ಬಹಳ ಸುಂದರವಾಗಿ ನಿರೂಪಿಸುವವು.

ಇದೇ ರೀತಿಯಾಗಿ, ಪರಿವಾರತಯಾ ಸಕಲ ದೇವತೆಗಳನ್ನು ಪೂಜಿಸಿಯೇ (ಅವರನ್ನು ದ್ವೇಷಿಸದೇ) ಪರಮಾತ್ಮನ ಅನುಗ್ರಹವನ್ನು ಪಡೆಯಬೇಕೆಂಬ ಮಾತು ಸಾಧಕ–ರಿಗೆ ದಾರಿದೀಪದಂತಿದೆ. ಪುರಾಣಾದಿಗಳಲ್ಲಿ ಕೇಳಿ ಬರುವ ಅನೇಕದೇವತೆಗಳ ಕಥಾನಕ–ಗಳನ್ನು, ಅಧಿಕಾರಿಭೇದದಿಂದ ಅಭೀಷ್ಟಸಾಧನೆಗಾಗಿ ಮಾಡುವ ಕಾಮ್ಯಕರ್ಮಾನುಷ್ಠಾನಾ–ದಿಗಳನ್ನು ಅರ್ಥಮಾಡಿಕೊಳ್ಳುವದರಲ್ಲಿ, ಗೊಂದಲಗಳನ್ನು ನಿವಾರಣೆ ಮಾಡಿಕೊಳ್ಳುವಲ್ಲಿ ಉಪಕಾರಕವಾಗಿರುವದು.

'ಪರಾತ್ ಪರತರಂ ಯಾಂತಿ ನಾರಾಯಣಪರಾಃ ಜನಾಃ ।
ನ ತೇ ತತ್ರ ಗಮಿಷ್ಯಂತಿ ಯೇ ದ್ವಿಷಂತಿ ಮಹೇಶ್ವರಮ್' ॥ ಕೂರ್ಮಪುರಾಣ

ಯಾವ ಭಕ್ತರು ನಾರಾಯಣನಲ್ಲಿ ಮನಸ್ಸನ್ನಿಟ್ಟುವರೋ, ಅವನನ್ನು ಅನನ್ಯವಾಗಿ ಆರಾಧಿಸು–ವರೋ, ಅವರು ಅವನ ಆವಾಸಸ್ಥಾನವಾದ ವೈಕುಂಠವನ್ನು ಹೊಂದುವರು. ಆದರೆ ಯಾರು ರುದ್ರನನ್ನು ದ್ವೇಷಿಸುವರೋ, ಅವರಿಗೆ ಅಲ್ಲಿ ಸ್ಥಳವಿರುವದಿಲ್ಲ. ಎಂಥ ಸ್ವಾರಸ್ಯಕರವಾದ ವಿಚಾರವು ಇಲ್ಲಿ ಉಪದಿಷ್ಟವಾಗಿದೆ. 'ಪರರಿವಾರತಯಾ ಗ್ರಾಹ್ಯಾ' ಎಂಬ ಆಚಾರ್ಯರ ಉಪದೇಶವು ಇಲ್ಲಿ ಸ್ಮಾರಿತವಾಗಿದೆ.

## ಪುರಾಣಗಳಲ್ಲಿ ಪರಮಾತ್ಮನ ಮಹಿಮಾ ಪ್ರತಿಪಾದನೆಯ ಉದ್ದೇಶ

'ಭಕ್ತಿಸ್ತ್ವೇಕಾ ವಿಮುಕ್ತಯೇ' ಎಂಬ ವಚನದಂತೆ, ಮೋಕ್ಷವನ್ನು ಪಡೆಯಲು ಇಚ್ಛಿಸುವ ಪ್ರತಿಯೊಬ್ಬ ಜೀವನೂ ಪರಮಾತ್ಮನಲ್ಲಿ ಅನನ್ಯವಾದ ಭಕ್ತಿಯನ್ನು ಹೊಂದಲೇ ಬೇಕು. ಅಪರೋಕ್ಷಜ್ಞಾನದ ಪೂರ್ವದಲ್ಲಿ ಸುಜೀವಿಗಳಲ್ಲಿ ಸ್ವಾಭಾವಿಕವಾಗಿ ಇರುವ ಅವಿಪಕ್ವ ಭಕ್ತಿಯು, ಶ್ರವಣ-ಮನನನಿದಿಧ್ಯಾಸನಗಳಿಂದ ಪಕ್ವವಾಗಿ, ಪರಮಾತ್ಮನ ಅಪರೋಕ್ಷಕ್ಕೆ ಕಾರಣವಾಗಿ, ಸ್ವರೂಪಾನಂದಾವಿರ್ಭಾವರೂಪವಾದ ಮೋಕ್ಷಕ್ಕೆ ಕಾರಣವಾಗುವದು. ಇಥ ಭಕ್ತಿಯನ್ನೇ 'ಸ್ವಾತ್ಮಾತ್ಮೀಯವಸ್ತುಭ್ಯೋ ಅನೇಕಗುಣಾಧಿಕ.... ....' ಇತ್ಯಾದಿಯಾಗಿ ಶಾಸ್ತ್ರವು ತಿಳಿಸುವದು. ಇಂಥ ಭಕ್ತಿಯೂ ಕೂಡ ಪರಮಾತ್ಮನ ಮಾಹಾತ್ಮ್ಯಜ್ಞಾನರೂಪವೇ ಆಗಿರುವದು. ವಿಷ್ಣುಭಕ್ತಿರಹಿತ-ವಾದ ಶಾಸ್ತ್ರಜ್ಞಾನವು ಅಪರೋಕ್ಷಜ್ಞಾನಕ್ಕೆ ಕಾರಣವಾಗುವದಿಲ್ಲ.

ಹಾಗಾದರೆ ಪರಮಾತ್ಮನಲ್ಲಿ ಇಂಥ ಭಕ್ತಿಯನ್ನು ಜೀವನು ಬೆಳೆಸಿಕೊಳ್ಳುವದು ಹೇಗೆ ಎಂಬ ಪ್ರಶ್ನೆಗೆ ಭಾಗವತವೇ ಒಂದು ಉತ್ತರ. ಗೋಪಿಕಾಸ್ತ್ರೀಯರು ವಾಸ್ತವದಲ್ಲಿ ಅಪರೋಕ್ಷ ಜ್ಞಾನಿಗಳಾದ ಅಪ್ಸರಾಸ್ತ್ರೀಯರ ಅವತಾರಭೂತರು. ಅವರು ಶ್ರೀಕೃಷ್ಣನ ಅಂಗಸಂಗವನ್ನು ಹೊಂದುವ ಪರಮಾಭಿಲಾಷೆಯನ್ನು ಬಿನ್ನವಿಸಿಕೊಂಡಾಗ, ಶ್ರೀಕೃಷ್ಣಪರಮಾತ್ಮನು ಉಪದೇಶಿಸಿದ ವಾಕ್ಯವು-

'ಶ್ರವಣಾದ್ ದರ್ಶನಾದ್ ಧ್ಯಾನಾತ್ ಮಯಿ ಭಾವೋಽನುಕೀರ್ತನಾತ್ ।
ನ ತಥಾ ಸನ್ನಿಕರ್ಷೇಣ ಪ್ರತಿಯಾ ಚ ತತೋ ಗೃಹಾನ್ ॥ (ಭಾಗವತ )

ನನ್ನ ಕಥಾಶ್ರವಣ, ದರ್ಶನ, ರೂಪಚಿಂತನ ಮತ್ತು ನಾಮಸಂಕೀರ್ತನ ಇವುಗಳಿಂದ ನನ್ನಲ್ಲಿ ಭಕ್ತಿಯು ವೃದ್ಧಿಯಾಗುವಂತೆ, ನನ್ನ ಅಂಗಸಂಗದಿಂದ ಭಕ್ತಿಯು ವೃದ್ಧಿಯಾಗುವದಿಲ್ಲ ಎಂಬುದಾಗಿ. ಭಗವಂತನ ಲೀಲೆ (ಸೃಷ್ಟ್ಯಾದಿವ್ಯಾಪಾರಗಳು) ಮತ್ತು ಅವತಾರಾದಿಗಳಲ್ಲಿ ತೋರಿಸಿದ ಮಹಿಮಾತಿಶಯಗಳನ್ನು ನಿರೂಪಿಸುವ ಪುರಾಣಗಳು, ಶ್ರವಣವನ್ನು ಮಾಡುವ ಜೀವನಿಗೆ ಭಗವಂತನಲ್ಲಿ ಶ್ರದ್ಧಾ-ಭಕ್ತಿ-ಜ್ಞಾನಗಳು ಅಭಿವೃದ್ಧಿಯಾಗುವಂತೆ ಮಾಡುವದರಲ್ಲಿ ಅತ್ಯಾವಶ್ಯಕಗಳಾಗಿವೆ. ಇದನ್ನೇ ಭಾಗವತದಲ್ಲಿ-

'ದಾನ-ವ್ರತ-ತಪೋ-ಹೋಮ-ಜಪ-ಸ್ವಾಧ್ಯಾಯ-ಸಂಯಮೈಃ ।
ಶ್ರೇಯೋವಿಧಿಭಿರನ್ಯೈಶ್ಚ ಕೃಷ್ಣೇ ಭಕ್ತಿರ್ಹಿ ಸಾಧ್ಯತೇ ॥' (ಭಾಗವತ 10-45-24)

ದಾನ, ವ್ರತ, ತಪಸ್ಸು, ಹೋಮ, ಜಪ, ಸ್ವಾಧ್ಯಾಯ, ಮನೋನಿಗ್ರಹ ಮೊದಲಾದವುಗಳಿಂದ, ಹಾಗೂ ಅಂತಹ ಇತರ ಶ್ರೇಯಸ್ಕರ ಕಾರ್ಯಗಳಿಂದಲೂ ಭಗವಂತನಾದ ಕೃಷ್ಣನಲ್ಲಿ ಭಕ್ತಿಯು ಹುಟ್ಟುವದು ಎಂಬುದಾಗಿ ಉಪದೇಶಿಸಿದೆ.

ವೇದಶಾಸ್ತ್ರಾದಿಗಳಲ್ಲಿ ಅಧಿಕಾರಿಗಳಾಗಿದ್ದವರಿಗೂ, ಹಾಗೂ ಅದರಲ್ಲಿ ಅನಧಿಕಾರಿಗಳಾಗಿದ್ದವರಿಗೂ ಪುರಾಣವು ಅವರವರ ಯೋಗ್ಯತಾನುಸಾರವಾಗಿ ಭಗವದ್ಭಕ್ತಿಜನಕ ಹಾಗೂ ಅಭಿವೃದ್ಧಿದಾಯಕವಾಗಿ,

ಅಪರೋಕ್ಷದ ಮಾರ್ಗಕ್ಕೆ ಸಾಧನವಾಗಿರುವದು. ಮುಕ್ತರೂ ಕೂಡ ಪರಮಾತ್ಮನ ಕಥಾಲಾಪದಿಂದ ಸಂತೋಷವನ್ನು ಹೊಂದುವರೆಂದು ಪ್ರಮಾಣಗಳು ತಿಳಿಸುವವು. ಎಂದಮೇಲೆ, ಅಮುಕ್ತರ ಪಾಡೇನು? ಸಕಲಜೀವಿಗಳೂ ಅತ್ಯವಶ್ಯಕವಾಗಿ ಪರಮಾತ್ಮನ ಮಹಿಮಾಪ್ರತಿಪಾದಕಗಳಾದ ಪುರಾಣಗಳನ್ನು ಅರಿತು ಮನನ ಮಾಡ-ಬೇಕೆಂಬುದು ಶಾಸ್ತ್ರಸಾರವಾಗಿದೆ. ಪುರಾಣಗಳಲ್ಲಿ ಕಥಾ ಹಾಗೂ ಪ್ರಮೇಯಗಳು ತತ್ವ ಹಾಗೂ ಆಚಾರಗಳು ಸರ್ವತ್ರ ಯಥಾಯೋಗ್ಯವಾಗಿ ಹೇಳಲ್ಪಟ್ಟಿರುವದರಿಂದ, ಬೋಧಪ್ರದಗಳೂ ಹಾಗೂ ಮೋದಪ್ರದಗಳೂ ಆಗಿವೆ. ದೇವರು-ದಾನವರು-ಮಾನವರು-ಭಕ್ತರು-ಭಗವಂತ ಇವರೆಲ್ಲರುಗಳ ಚಾರಿತ್ರಿಕ ಚಿತ್ರಣದೊಂದಿಗೆ ಪುರಾಣಗಳು ವರ್ಣಾಶ್ರಮಧರ್ಮ-ಸತ್ವಶುದ್ಧಿ-ದಾನವ್ರತಗಳು-ಕರ್ತವ್ಯಾಕರ್ತವ್ಯಗಳು ಇವುಗಳನ್ನೂ ವಿವರಿಸಿ, ವಿಷ್ಣುಭಕ್ತಿಯು ಹೆಚ್ಚಳವಾಗುವಂತೆ ಮಾಡುವವು.

ಇದನ್ನೇ ಶ್ರೀಮದಾಚಾರ್ಯರು ಸದಾಚಾರಸ್ಮೃತಿಯಲ್ಲಿ

'ವೇದಶಾಸ್ತ್ರವಿನೋದೇನ ಪ್ರೀಣಯನ್ ಪುರುಷೋತ್ತಮಮ್ ।
ಅಹಃಶೇಷಂ ನಯೇತ್ ಸಂಧ್ಯಂ ಉಪಾಸೀತಾಥ ಪೂರ್ವವತ್' ॥

ಎಂಬುದಾಗಿ ಪುರಾಣಶ್ರವಣ-ಕಥನಗಳು ನಮ್ಮ ದೈನಂದಿನ ಸಾಧನವ್ಯಾಪಾರದ ಅಂಗ-ಗಳೆಂದು ಉಪದೇಶಿಸಿದ್ದಾರೆ.

## ಅಷ್ಟಾದಶಪುರಾಣಗಳಲ್ಲಿ ಶ್ರೀವೆಂಕಟೇಶ ಮಾಹಾತ್ಮ್ಯ ಹಾಗೂ ವೇಂಕಟಾಚಲಕ್ಷೇತ್ರ ಮಾಹಾತ್ಮ್ಯ

ವೇದಪುರಾಣಗಳಲ್ಲಿ ಶ್ರೀವೆಂಕಟೇಶದೇವರ ಹಾಗೂ ಶ್ರೀವೇಂಕಟಾಚಲಕ್ಷೇತ್ರದ ಮಹಿಮೆಯು ಮುಖ್ಯವಾಗಿ 12 ವೈದಿಕಪುರಾಣಗಳು ಹಾಗೂ ಇನ್ನೂ ಅನೇಕಗ್ರಂಥಗಳಲ್ಲಿ ವಿವೃತವಾಗಿದೆ. ಶ್ರೀವೇಂಕಟೇಶನೇ ಶ್ರೀಮನ್ನಾರಾಯಣನು. ಇತರ ಪುರಾಣಗಳಲ್ಲಿಯೂ ಕೂಡ ಅಲ್ಲಲ್ಲಿ ಶ್ರೀವೇಂಕಟೇಶ ದೇವರ ಸ್ತುತಿಯು ಉಲ್ಲಿಖಿತವಾಗಿರುವದು. ಇವುಗಳಲ್ಲಿ ಆದಿತ್ಯಪುರಾಣ ಮತ್ತು ಭವಿಷ್ಯೋತ್ತರಪುರಾಣಗಳು ಅತಿಮಹತ್ವವಾದವುಗಳು. ಈ ಪುರಾಣಗಳ ಪಾರಾಯಣಾದಿ ಗಳಿಂದ ಐಹಿಕ-ಪಾರತ್ರಿಕ ಅಭೀಷ್ಟಗಳನ್ನು ಹೊಂದುವ ಪರಂಪರೆಯನ್ನು ಮಹನೀಯರಲ್ಲಿ ನಾವು ಕಾಣುವೆವು. ಇವುಗಳಲ್ಲಿಯ ಕೆಲವೇ ವಾಕ್ಯಗಳನ್ನು ವೇಂಕಟೇಶಮಾಹಾತ್ಮ್ಯೆಯ ದಿಗ್ದರ್ಶನಕ್ಕಾಗಿ ಈ ಕೆಳಗೆ ಉದಾಹರಿಸಲಾಗಿದೆ.

(1) ಭೂಮಿಯಲ್ಲಿ ನಾವು ಶರಣನ್ನು ಹೊಂದಲು ಶ್ರೀವೇಂಕಟೇಶನಿಗಿಂತ ಮಿಗಿಲಾದ ದೈವವಿಲ್ಲ, ಭೂಮಿಯಲ್ಲಿ ವೇಂಕಟೇಶನಿಗೆ ಸಮನಾದ ದೇವರಿಲ್ಲ. 'ವೇಂ ಕಟತೀತಿ ವೇಂಕಟಃ' ಪಾಪವನ್ನು ನಾಶಮಾಡಿ ನಮ್ಮನ್ನು ಉದ್ಧರಿಸುವ, ಐಹಿಕ-ಆಮುಷ್ಮಿಕ ಸಮೃದ್ಧಿಯನ್ನು ದಯಪಾಲಿಸುವ, ಪರಮಪುರುಷಾರ್ಥಪ್ರದನಾದ ಪರದೈವವೇ ಅನ್ವರ್ಥಕ ನಾಮವನ್ನು

ಹೊಂದಿದ ಶ್ರೀವೇಂಕಟೇಶನು.

'ಶ್ರೀ ವೆಂಕಟೇಶಾತ್ ಪರೋ ದೈವೋ ನಾಸ್ತ್ಯನ್ಯಃ ಶರಣಂ ಭುವಿ ।
ವೆಂಕಟೇಶಸಮೋ ದೇವೋ ನಾಸ್ತಿ ನಾಸ್ತಿ ಮಹೀತಲೇ'- ವರಾಹಪುರಾಣ

(2) ಶ್ರೀವೇಂಕಟೇಶದೇವರ ಸ್ವರೂಪವನ್ನು ಬ್ರಹ್ಮಂಡಪುರಾಣವು ಸ್ಪಷ್ಟವಾಗಿ ತಿಳಿಸುವದು -

'ವೇಂಕಟೇಶೋ ವಾಸುದೇವೋ ಪ್ರದ್ಯುಮ್ನೋ ಅಮಿತವಿಕ್ರಮಃ ।
ಸಂಕರ್ಷಣೋ ಅನಿರುದ್ಧಶ್ಚ ಶೇಷಾದ್ರೀಪತಿರೇವ ಚ ॥

ಜನಾರ್ದನಃ ಪದ್ಮನಾಭೋ ವೇಂಕಟಾಚಲವಾಸನಃ ।
ಸೃಷ್ಟಿಕರ್ತಾ ಜಗನ್ನಾಥೋ ಮಾಧವೋ ಭಕ್ತವತ್ಸಲಃ ॥

ಗೋವಿಂದೋ ಗೋಪತೀ ಕೃಷ್ಣಃ ಕೇಶವೋ ಗರುಡಧ್ವಜಃ ।
ವರಾಹೋ ವಾಮನಶ್ಚೈವ ನಾರಾಯಣ ಅಧೋಕ್ಷಜಃ ॥

ಶ್ರೀಧರಃ ಪುಂಡರೀಕಾಕ್ಷಃ ಸರ್ವದೇವಸ್ತುತೋ ಹರಿಃ ।
ಶ್ರೀನೃಸಿಂಹೋ ಮಹಾಸಿಂಹಃ ಸೂತ್ರಾಕಾರಃ ಪುರಾತನಃ ॥

ರಮಾನಾಥೋ ಮಹೀಭರ್ತಾ ಭೂಧರಃ ಪುರುಷೋತ್ತಮಃ ।
ಚೋಲಪುತ್ರಪ್ರಿಯಃ ಶಾಂತೋ ಬ್ರಹ್ಮಾದೀನಾಂ ವರಪ್ರದಃ ॥

ಶ್ರೀನಿಧಿಃ ಸರ್ವಭೂತಾನಾಂ ಭಯಕೃತ್ ಭಯನಾಶನಃ ।
ಶ್ರೀರಾಮೋ ರಾಮಭದ್ರಶ್ಚ ಭವಬಂಧೈಕಮೋಚನಃ ॥

ಭೂತಾವಾಸೋ ಗಿರಿವಾಸಃ ಶ್ರೀನಿವಾಸಃ ಶ್ರಿಯಃ ಪತಿಃ ।
ಅಚ್ಯುತಾನಂತಗೋವಿಂದೋ ವಿಷ್ಣುರ್ವೇಂಕಟನಾಯಕಃ ॥

ಬ್ರಹ್ಮಂಡಪುರಾಣದ ಈ ಶ್ಲೋಕಗಳು ವೇಂಕಟೇಶಸ್ತೋತ್ರವೆಂದು ಪ್ರಸಿದ್ಧವಾದ ಭಾಗದಿಂದ ಆಯ್ದುಕೊಂಡ ಶ್ಲೋಕಗಳು. ವೇಂಕಟೇಶದೇವರ ಪರಮಾತ್ಮನ ಅವತಾರ ಮತ್ತು ಅವುಗಳ ಮಹಿಮಾತಿಶಯ, ಅದಲ್ಲದೇ ಜಗದ್ಸೃಷ್ಟಿಕರ್ತನಾದ, ಜಗದ್ವ್ಯಾಪ್ತನಾದ, ಜಗನ್ನಿಯಾಮಕ-ನಾದ ಶ್ರೀಮನ್ನಾರಾಯಣನ ಅವತಾರಗಳಲ್ಲಿಯ ಪರಸ್ಪರ ಅಭೇದವನ್ನು ಅತಿ ಸ್ಪಷ್ಟವಾಗಿ ಉಪದೇಶಿಸುವದು.

(3) ಕಲಿಯುಗದಲ್ಲಿ ಭಕ್ತರಿಗೆ ಸರ್ವಾಭೀಷ್ಟಗಳನ್ನು ದಯಪಾಲಿಸಿ ಅವರನ್ನು ಸಂತೋಷಗೊಳಿಸುವ ಶ್ರೀವೆಂಕಟೇಶನು ತಿರುಪತಿ ತಿಮ್ಮಪ್ಪನೆಂದು ಪುರಾಣಪ್ರಖ್ಯಾನಾಗಿರುವನು.

'ಕೃತೇ ತು ನಾರಸಿಂಹೋಭೂತ್ ತ್ರೇತಾಯಾಂ ರಘುನಂದನಃ ।
ದ್ವಾಪರೇ ವಾಸುದೇವಶ್ಚ ಕಲೌ ವೇಂಕಟನಾಯಕಃ' ॥ (ಬ್ರಹ್ಮಾಂಡಪುರಾಣ)

(4) ವೆಂಕಟೇಶ ಮಾಹಾತ್ಮೆಯು (ವೇಂಕಟಾಚಲಮಾಹಾತ್ಮೆಸಹಿತವಾಗಿ) ವರಾಹಪುರಾಣ–ದಲ್ಲಿ ಉಕ್ತವಾಗಿರುವದು. ವರಾಹ ಪುರಾಣದ ಅನುಸಾರವಾಗಿ – ಆದಿವರಾಹ ದೇವರು ಸ್ವಾಮಿಪುಷ್ಕರಣೀ ಕ್ಷೇತ್ರದ ಪಶ್ಚಿಮತಟದಲ್ಲಿ ಆವಿರ್ಭವಿಸಿದರು. ಶ್ರೀಮನ್ನಾರಾಯಣನು ವೆಂಕಟೇಶ್ವನ ರೂಪದಲ್ಲಿ ಸ್ವಾಮಿಪುಷ್ಕರಣಿಯ ದಕ್ಷಿಣತಟದಲ್ಲಿ ನೆಲಸಲು ಅವತರಿಸಿದನು ಎಂಬುದಾಗಿ.

'ವೆಂಕಟೇಶಾತ್ ಪರೋ ದೈವೋ ನಾಸ್ತ್ಯನ್ಯಃ ಶರಣಂ ಭುವಿ ।
ವೇಂಕಟೇಶಸಮೋ ದೇವೋ ನಾಸ್ತಿ ನಾಸ್ತಿ ಮಹೀತಲೇ ॥' ವರಾಹ, 1– 61

ಈ ಲೋಕದಲ್ಲಿ ಮೊರೆ ಹೋಗಲು ವೇಂಕಟೇಶನಿಗಿಂತ ಬೇರೆ ದೈವವು ಇಲ್ಲ. ಈ ಮಹೀತಲದಲ್ಲಿ ವೇಂಕಟೇಶನಿಗೆ ಸಮನಾದ ಮತ್ತೊಬ್ಬ ದೇವರು ಇಲ್ಲವೇ ಇಲ್ಲ.

(5) ವೇಂಕಟಾದ್ರಿಸಮಂ ಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ ।
ವೇಂಕಟೇಶ ಸಮೋ ದೇವೋ ನ ಭೂತೋ ನ ಭವಿಷ್ಯತಿ ॥ –ಆದಿತ್ಯಪುರಾಣ

ಅಷ್ಟಾದಶ ಮಹಾಪುರಾಣ ಮತ್ತು ಉಪಪುರಾಣಗಳಲ್ಲಿ ಎಲ್ಲದರಲ್ಲಿಯೂ ಸಾಮಾನ್ಯವಾಗಿ ಶ್ರೀಶ್ರೀನಿವಾಸನ ಮಹಿಮೆಯು ಪ್ರತಿಪಾದಿಸಲ್ಪಟ್ಟಿದ್ದರೂ 12 ಪುರಾಣಗಳಲ್ಲಿ ವಿಶೇಷತಃ ಪ್ರತಿಪಾದಿಸಲ್ಪಟ್ಟಿರುವದು. ಅದರಲ್ಲಿಯೂ ಆದಿತ್ಯಪುರಾಣಾಂತರ್ಗತವಾದ ಶ್ರೀವೆಂಕಟೇಶ–ಮಾಹಾತ್ಮೆಯು ಸಮಸ್ತ ಪುರಾಣಗಳ ಸಾರಭೂತವಾಗಿರುವದು. ಸಮಸ್ತವೇದ–ಇತಿಹಾಸ–ಭಾರತ–ಮೂಲರಾಮಾಯಣ, ಸೂತ್ರಪ್ರಸ್ಥಾನ, ಗೀತಾಪ್ರಸ್ಥಾನ ಮತ್ತು ಉಪನಿಷತ್ಪ್ರಸ್ಥಾನ–ಗಳ ಅರ್ಥವು ಇದರಲ್ಲಿ ಅಡಕವಾಗಿದೆ. ಹರಿಸರ್ವೋತ್ತಮ ಪ್ರತಿಪಾದಕವಾಗಿ ಭಕ್ತರಿಗೆ ಸಕಲಾಭೀಷ್ಟಪ್ರದವಾಗಿದೆ. ಬೇರೆ ಸ್ಥಳಗಳಲ್ಲಿ ಎಲ್ಲಿಯೂ ಹೇಳದಿದ್ದ ವಿಶೇಷ ಮಾಹಾತ್ಮ್ಯದ ಪ್ರತಿಪಾದಕವಾಗಿದೆ. ಶ್ರೀವೇಂಕಟೇಶ ದೇವರಿಗೂ, ವಾಯ್ವಾದಿ ಸಮಸ್ತದೇವತೆಗಳಿಗೂ ಹಾಗೂ ಋಷಿಗಳಿಗೂ ಪ್ರಿಯವಾದ ಸ್ತುತಿಯಾಗಿದೆ. ಸಮಸ್ತವಾದ ಪಾಪ ಮತ್ತು ಅನಿಷ್ಟಗಳನ್ನೂ ಪರಿಹಾರಮಾಡಿ ಸಮಸ್ತವಾದ ಅಭಿವೃದ್ಧಿಗೆ ಕಾರಣವಾಗಿದೆ. ಆದ್ದರಿಂದ ಇಂಥ ಆದಿತ್ಯಪುರಾಣಾಂತರ್ಗತ ವೇಂಕಟೇಶ ಮಾಹಾತ್ಮೆಯನ್ನು ಅರ್ಥಾನುಸಂಧಾನಮಾಡಿಕೊಂಡು ಪಾರಾಯಣಾದಿಗಳನ್ನು ಮಾಡಿದರೆ ಐಹಿಕಾಮುಷ್ಮಿಕ ನಿಖಿಲಪುರುಷಾರ್ಥಗಳೂ ಲಭಿಸುವವು.

(6) ಸ್ಕಾಂದಪುರಾಣದಲ್ಲಿ ವೈಷ್ಣವಖಂಡದಲ್ಲಿ ವೇಂಕಟೇಶ್ವರದೇವರ ಹಾಗೂ ವೇಂಕಟಾಚಲ–ಕ್ಷೇತ್ರದ ಮಾಹಾತ್ಮ್ಯೆಯು (ಭೂವರಾಹಖಂಡ) ಶೀರ್ಷಿಕೆಯಲ್ಲಿ ವರ್ಣಿಸಲ್ಪಟ್ಟಿದೆ. ಪುರಾಣದಲ್ಲಿಯ ಪದ್ಮನಾಭಾಖ್ಯ ಋಷಿಯಿಂದ ಮಾಡಿದ ಶ್ರೀನಿವಾಸದೇವರ ಸ್ತೋತ್ರದ ಅಂಶಗಳು ಕೆಳಗಿನಂತಿವೆ –

'ನಾರಾಯಣಾದ್ರಿನಾವಾಸಾಯ ಶ್ರೀನಿವಾಸಾಯ ತೇ ನಮಃ ।
ಶೇಷಾಚಲನಿವಾಸಾಯ ಶ್ರೀನಿವಾಸಾಯ ತೇ ನಮಃ ॥

ಶಿವಬ್ರಹ್ಮಾದಿವಂದ್ಯಾಯ ಶ್ರೀನಿವಾಸಾಯ ತೇ ನಮಃ ।
ಪ್ರಣತಾರ್ತಿವಿನಾಶಾಯ ಶ್ರೀನಿವಾಸಾಯ ತೇ ನಮಃ ॥

ದುಷ್ಟರಾಕ್ಷಸಸಂಹರ್ತ್ರೇ ಶ್ರೀನಿವಾಸಾಯ ತೇ ನಮಃ ।
ಭಕ್ತಾನಾಂ ಪಾಪಸಂಹರ್ತ್ರೇ ಶ್ರೀನಿವಾಸಾಯ ತೇ ನಮಃ ॥' (ಸ್ಕಾಂದಪುರಾಣ)

ಸೂತಮಹರ್ಷಿಗಳು ವೇಂಕಟೇಶದೇವರ ಮಹಿಮೆಯನ್ನು ಹೀಗೆ ಉಪದೇಶಿಸಿದ್ದಾರೆ- 'ಯಾವ ಮನುಷ್ಯನಾದರೂ ಒಂದು ಕ್ಷಣಪರ್ಯಂತವಾದ ಅಲ್ಪಕಾಲದಲ್ಲಿಯಾದರೂ ಶ್ರೀನಿವಾಸದೇವರ ದರ್ಶನನ್ನು ಮಾಡಿಕೊಂಡರೆ ಮೋಕ್ಷಾದಿಪುರುಷಾರ್ಥವನ್ನು ಹೊಂದುವ ಭಾಗ್ಯವನ್ನು ಪಡೆಯುವನು'

(7) ಭವಿಷ್ಯೋತ್ತರಪುರಾಣದಲ್ಲಿಯ ಶ್ರೀಶ್ರೀನಿವಾಸಕಲ್ಯಾಣಕಥಾಭಾಗವು ಪರಮ ಮಂಗಲಕರವಾಗಿದೆ. ಶ್ರೀನಿವಾಸದೇವರ ಮಹಿಮೆಯನ್ನು ವರ್ಣಿಸಿ, ದೇವರ ಸರ್ವೋತ್ತಮತ್ವವನ್ನು ತಿಳಿಸಿ, ಮಂಗಲಕರವಾದ ಫಲವನ್ನು ನೀಡಿ, ಈ ಪುರಾಣವೂ ಕೂಡ ಸಕಲ ಪುರಾಣಗಳ ಹಾಗೂ ಶಾಸ್ತ್ರದ ಸಾರವೆಂದೆನಿಸಿದೆ.

'ಕಲ್ಯಾಣಾದ್ಭುತಗಾತ್ರಾಯ ಕಾಮಿತಾರ್ಥಪ್ರದಾಯಿನೇ ।
ಶ್ರೀಮದ್ವೇಂಕಟನಾಥಾಯ ಶ್ರೀನಿವಾಸಾಯ ತೇ ನಮಃ ॥

ಬ್ರಹ್ಮರುದ್ರಾದಿವಂದ್ಯಂ ತ್ವಾಂ ಭಜೇ ವೇಂಕಟನಾಯಕಮ್ ।
ನಿವಾರಯಾಶ್ವಾನಿಷ್ಟಾನಿ ಸಾಧಯೇಷ್ಟಾನಿ ಮಾಧವ' ॥

ಸಾಕ್ಷಾತ್ ಭೂವೈಕುಂಠವೆಂದು ಪ್ರಸಿದ್ಧವಾದ ಶ್ರೀವೇಂಕಟಾಚಲಕ್ಕೆ ಅಧಿಪತಿಯಾದ ಶ್ರೀನಿವಾಸನ ಮಹಿಮೆಯು ಇಷ್ಟೇ ಎಂದು ಹೇಳಲು ಯಾರಿಗೂ ಸಾಧ್ಯವಿಲ್ಲ.

'ಭಕ್ತೌಘಾನುಗ್ರಹಾರ್ಥಾಯ ತ್ಯಕ್ತ್ವಾ ವೈಕುಂಠಮುತ್ತಮಮ್ ।
ಧರಣ್ಯಾಮವತೀರ್ಣೋಸಿ ........

ಭಕ್ತರಿಗೆ ಅನುಗ್ರಹಿಸುವದಕ್ಕಾಗಿ ವೈಕುಂಠದಿಂದ ಬಂದು ಭೂಮಿಯಲ್ಲಿ ಅವತರಿಸಿರುವನು.

ಹೀಗೆ ಪರಮಪವಿತ್ರವೂ ಭಕ್ತರಿಗೆ ಸಕಲಾಭೀಷ್ಟಪ್ರದವೂ ಆದ ಈ ಶ್ರೀವೇಂಕಟಾಚಲ ಮಾಹಾತ್ಮ್ಯೆಯನ್ನು ಕೇಳಿ, ಶ್ರೀನಿವಾಸನದೇವರ ದರ್ಶನ ಮಾಡಿ, ಸಾರ್ಥವಾಗಿ ಪಾರಾಯಣಾದಿಗಳನ್ನು ಮಾಡುವವರಿಗೆ ಶ್ರೀನಿವಾಸದೇವರು ಸಕಲಪಾಪ ಪರಿಹಾರ ಮತ್ತು ಸಕಲಾಭೀಷ್ಟ ಸಿದ್ಧಿಯನ್ನು ಕೊಟ್ಟು, ತನ್ನ ಪರಮಾನುಗ್ರಹಕ್ಕೆ ಪಾತ್ರರನ್ನಾಗಿ ಮಾಡುವನು. ಶ್ರೀವೇಂಕಟೇಶನ ಮಹಿಮೆಯು ಆದಿತ್ಯ, ವರಾಹ, ಸ್ಕಂದ, ಪದ್ಮ, ಮೊದಲಾದ 14 ಪುರಾಣಗಳಲ್ಲಿ ವರ್ಣಿಸಲಾಗಿದೆ. ಭವಿಷ್ಯೋತ್ತರಪುರಾಣದಲ್ಲಿ ಹೇಳಿದ ವೇಂಕಟೇಶ ಮಾಹಾತ್ಮ್ಯೆಯು ಪರಮ ಕಲ್ಯಾಣಕರವೆಂದು ಭಾವಿಸಲಾಗುತ್ತದೆ. ಆದಿತ್ಯಪುರಾಣೋಕ್ತ ವೇಂಕಟೇಶ ಮಾಹಾತ್ಮ್ಯೆಯು

ಮಂತ್ರತುಲ್ಯವೆಂದು ಅನೇಕ ಭಕ್ತರು ನಿತ್ಯವೂ ಪಾರಾಯಣ ಮಾಡುವ ಸಂಪ್ರದಾಯವಿದೆ. ಆದ್ದರಿಂದಲೇ ಪುರಾಣವು–

'ಶ್ರೀವೇಂಕಟೇಶಸ್ಯ ಮಾಹಾತ್ಮ್ಯಂ ವರ್ಣಿತುಂ ಕೇನ ಶಕ್ಯತೇ ।

ಎಂದು ಹೇಳುವದು.

'ಸ್ತೋತ್ರೇಣೈವ ಹಿ ಸಂತುಷ್ಟೋ ವೇಂಕಟೇಶ ರಮಾಪತಿಃ ।
ಯಾನ್ ಯಾನ್ ಕಾಮಾನ್ ಕಾಮಯಂತೇ ತಾಂಸ್ತಾನ್ ಮುಕ್ತಿಂ ದದಾತಿ ಚ'

ಎಂಬುದಾಗಿ ಪರಮಪುರುಷಾರ್ಥ ಮುಕ್ತಿಪ್ರದವಾಗಿರುವದು.

**ತಿರುಮಲ(ವೇಂಕಟಾಚಲ)ಕ್ಷೇತ್ರದಲ್ಲಿಯ ಶ್ರೀವೇಂಕಟೇಶದೇವರು –**

ಭಕ್ತರ ಸಕಲ ಪಾಪಗಳನ್ನು ಪರಿಹರಿಸಿ ಪರಮ ಪುರುಷಾರ್ಥವನ್ನು ಕರುಣಿಸಲು ಸ್ವೇಚ್ಛೆಯಿಂದ ವೈಕುಂಠವನ್ನು ತ್ಯಜಿಸಿ ಶ್ರೀಹರಿಯು ಬಂದು ನಿಂತ ಪರಮ ಪವಿತ್ರ ಕ್ಷೇತ್ರವೇ ವೇಂಕಟಾಚಲವು. ವೈಕುಂಠಾಚಲವೆಂದು ಪ್ರಸಿದ್ಧವಾದ ಈ ಪರ್ವತವು ಯುಗಯುಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಪ್ರಸಿದ್ಧವಾಗಿದೆ. ಕೃತಯುಗದಲ್ಲಿ ವೃಷಭಾಚಲ, ತ್ರೇತಾಯುಗದಲ್ಲಿ ಅಂಜನಾಚಲ, ದ್ವಾಪರದಲ್ಲಿ ಶೇಷಾಚಲ ಮತ್ತು ಕಲಿಯುಗದಲ್ಲಿ ವೇಂಕಟಾಚಲವೆಂಬ ನಾಮಗಳಿಂದ ಪ್ರಸಿದ್ಧವಾಗಿದೆ. ಬ್ರಹ್ಮಾಂಡಪುರಾಣ, ಭವಿಷ್ಯೋತ್ತರ ಪುರಾಣ ಮತ್ತು ಇತರ ಪುರಾಣಗಳಲ್ಲಿ ಸುವಿಸ್ತೃತವಾದ ಆಖ್ಯಾಯಿಕೆಗಳನ್ನು ಈ ಪರ್ವತದ ನಾಮದ ವಿಷಯವಾಗಿ ಕಾಣುವೆವು. ಒಟ್ಟಾರೆ, ಅತಿ ಪವಿತ್ರವಾದ, ಪಾಪಪರಿಹಾರಕವಾದ, ಪುಣ್ಯಕರವಾದ ಕ್ಷೇತ್ರವೆಂಬುದು ಪುರಾಣಪ್ರಸಿದ್ಧವು.

ಶ್ರೀವೇಂಕಟಾಚಲ ಕ್ಷೇತ್ರದಲ್ಲಿ ಸಾಕ್ಷಾತ್ ವೈಕುಂಠದಲ್ಲಿರುವ ಪರಮಾತ್ಮನೇ ಸಚ್ಚಿದಾನಂದಮಯ ರೂಪನಾಗಿ ನೆಲಿಸಿರುವನೆಂದು ಪುರಾಣವಚನಗಳ ಮತ್ತು ಸಾಂಪ್ರದಾಯಿಕ ನಂಬಿಕೆಗಳಿಂದ ತಿಳಿದುಬರುವದು. ಭವಿಷ್ಯೋತ್ತರ ಪುರಾಣದಲ್ಲಿ ಗೋಚರವಾಗುವ

'..... ....... ...... ......ಶಿಲಾವದ್ ದೃಶ್ಯತೇ ಹರಿಃ'

ಎಂಬ ವಚನವು ಈಗಿನ ಕಾಲದಲ್ಲಿ ವೇಂಕಟಾಚಲದಲ್ಲಿ ಗೋಚರವಾಗುವ ಶ್ರೀವೇಂಕಟೇಶ್ವರನ ವಿಗ್ರಹವು ಸಾಕ್ಷಾತ್ ಸಚ್ಚಿದಾನಂದಾತ್ಮಕವಿಗ್ರಹವೆಂಬುದನ್ನು ಸ್ಪಷ್ಟಪಡಿಸುವದು.

'ಪೂಜಿತಂ ಶಂಖರಾಜೇನ ಸಚ್ಚಿದಾನಂದ ವಿಗ್ರಹಮ್ ।

ಅರ್ಚಾವತಾರ ರೂಪೋಽಹಂ ಸಚ್ಚಿದಾನಂದವಿಗ್ರಹಃ ।
ತಾಮೇವ ಪ್ರತಿಮಾಂ ಕೇಚಿಜ್ಞಾನಂತಿ ನೃಪಪುಂಗವ ॥'

'ಪ್ರತಿಮಾಂ ಚ ಶಿಲಾರೂಪಾಂ ತಾಂ ಪಶ್ಯಂತಿ ಕುಯೋಗಿನಃ ॥ (ವರಾಹ 3,46–50)

ತಿರುಪತಿಯಲ್ಲಿಯ ಶ್ರೀನಿವಾಸನು ಸಾಕ್ಷಾತ್ ಸಚ್ಚಿದಾನಂದಾತ್ಮಕ ವಿಗ್ರಹನಾಗಿದ್ದರೂ ಸಹ ಈ ಕಲಿಯುಗದ ಧರ್ಮಗಳಿಗನುಸಾರವಾಗಿ ತಾನು ಪ್ರತ್ಯಕ್ಷವಾಗಿ ಮಾತನಾಡದಿರುವದು, ವಿಶಿಷ್ಟ ಅಧಿಕಾರಿಗಳಿಗೆ ಸಚ್ಚಿದಾನಂದ ರೂಪನಾಗಿಯೇ ಗೋಚರಿಸುವದು, ಅವರವರ ಭಕ್ತಿಗೆ ವಶನಾಗಿ ಕಲ್ಪ ಮುಗಿಯುವವರೆಗೂ ಸರ್ವ ಭಕ್ತರಿಗೆ ಪ್ರತ್ಯಕ್ಷ ಗೋಚರನಾಗಿಯೇ ಇರುತ್ತೇನೆಂದು ದೇವತೆಗಳಿಗೆ ಭಗವಂತನು ವರವನ್ನು ಕೊಟ್ಟಿರುವನು. ಇದಕ್ಕೆ ವ್ಯತಿರಿಕ್ತವಾಗಿ ಶ್ರೀನಿವಾಸನದು ಸಚ್ಚಿದಾನಂದ ವಿಗ್ರಹ ವಲ್ಲವೆಂಬುದಾಗಿ ಕುದೃಷ್ಟಿಗಳು ಭಾವಿಸುವರೆಂದು ಕೆಳಗಿನ ಪ್ರಮಾಣ ವಚನಗಳು ಸ್ಪಷ್ಟವಾಗಿ ಸಾರುತ್ತವೆ. ಇವೇ ವಚನಗಳಿಗನುಸಾರವಾಗಿ ಶ್ರೀಪಾದರಾಜರ, ಶ್ರೀಚಂದ್ರಿಕಾಚಾರ್ಯರ, ಶ್ರೀ ವಾದಿರಾಜತೀರ್ಥರ, ಶ್ರೀ ಸತ್ಯಧ್ಯಾನ ತೀರ್ಥರಂತಹ ಮಹಾನುಭಾವರ ನಡುವಳಿಕೆಗಳಿಂದ ತಿಳಿದುಬರುತ್ತದೆ.

**ವರಾಹ ಪುರಾಣ**

'ತತಃ ಪರಮಿಯಾನ್ ಭೇದೋ ಮೌನಂ ತತ್ರೈವ ತು ಸ್ಥಿತಿಃ ।
ಅರ್ಚಾವತಾರವದ್ಭೂಯಾನ್ ನರಾಣಾಂ ಮಾಂಸಚಕ್ಷುಷಾಮ್ ॥

ವೈಕುಂಠಾದಾಗತಂ ದಿವ್ಯಂ ವಿಮಾನಂ ತು ತಿರೋಹಿತಮ್ ।
ವಿಮಾನಮಾತ್ರಂ ತು ಕಲೌ ಕಾರಯಿಷ್ಯಂತಿ ಮಾನವಾಃ ॥

ಪುಣ್ಯಶೀಲಾ ಮಹಾತ್ಮಾನಃ ಕದಾಚಿತ್ ಕ್ಷತ್ರಸಮ್ಮತಾಃ ।
ಅರ್ಚಾವತಾರ ಇತ್ಯೇವ ವದಿಷ್ಯಂತಿ ಚ ಮೋಹಿತಾಃ ॥

ತಥೈವಾವಮತಿಂ ಕೇಚಿತ್ ಕರಿಷ್ಯಂತಿ ಕಲೌ ಯುಗೇ ।
ಸಾಕ್ಷಾತ್ ಪಶ್ಯನ್ ಹಿ ತತ್ಸರ್ವಂ ಅಪಶ್ಯನ್ನಿವ ತಿಷ್ಠತಿ ॥

ಸಾಕ್ಷಾದ್ಭಾಷಣಮೇಕಂ ತು ನಾಸ್ತಿ ತತ್ರ ತಪೋಧನಾಃ ।
ಪರಂ ತು ಸರ್ವಮಸ್ತ್ಯೇವ ನಿಗ್ರಹಾನುಗ್ರಹಾವಪಿ ॥'

3. **ಬ್ರಹ್ಮಾಂಡ ಪುರಾಣ**

3.1 ಶೇಷಕೃತ ಪ್ರಾರ್ಥನಾ–

ಭವತಾ ರಮಯಾ ಸಾರ್ಧಂ ಮಮ ಸಾನುಷು ರಮ್ಯತಾಮ್ । (2.5)

ಭಗವಂತನ ವರದಾನ–

ಅಹಂ ಹಿ ಸರ್ವಜಂತೂನಾಂ ದೃಷ್ಟಿಗೋಚರತಾಂ ಗತಃ ।
ವಸಿಷ್ಯಾಮಿ ಶ್ರಿಯಾ ಸಾರ್ಧಂ ದದದಿಷ್ಟಾನಿ ದೇಹಿನಾಮ್ ॥ (2.9)

3.2. ದೇವತೆಗಳನ್ನು ಕುರಿತು ಭಗವಂತನ ನುಡಿ

'ತತಸ್ತದ್ಭಕ್ತಿವಶಗಃ ಸರ್ವಪ್ರತ್ಯಕ್ಷಗೋಚರಃ ।
ಆಕಲ್ಪಂ ನಿವಸಿಷ್ಯಾಮಿ ವರಾಭಯದಹಸ್ತದಃ ॥ (11.93)

3.3. ನಾರಾಯಣವಿಪ್ರಪ್ರಾರ್ಥನಾ

ತೇಷಾಮನುಗ್ರಹಾರ್ಥಾಯ ಸರ್ವಪ್ರತ್ಯಕ್ಷಗೋಚರಃ ।
ಸರ್ವಾಭೀಷ್ಟಂ ದದನ್ನಿತ್ಯಂ ಸ್ವಾಮಿಪುಷ್ಕರಿಣೀತಟೇ ॥

ಅನಂತವಿಹಗೇಶಾನಸೇನಾಪತಿಮುಖ್ಯೈಃ ಸದಾ ।
ಸೇವ್ಯಮಾನಃ ಶ್ರಿಯಾ ಸಾರ್ಧಂ ವಿಹರನ್ ವಸ ಮಾಧವ ॥ (3.48–49)

ಭಗವಂತನ ಅನುಗ್ರಹ

'ತಥಾ ಭವತು ವಿಪ್ರೇಂದ್ರ ವಚನಂ ತವ ಸುವ್ರತ ॥

ದಿವ್ಯೇ ವಿಮಾನೇ ಸರ್ವೇಷಾಂ ವಿಲೋಚನಪಥಂ ಗತಃ ।
ಶ್ರೀಭೂಮಿನೀಲಾಸಹಿತಃ ಶಂಖಚಕ್ರಗದಾಧರಃ ॥

ಕೋಟಿಕಂದರ್ಪಲಾವಣ್ಯೋ ನೀಲಜೀಮೂತಸನ್ನಿಭಃ ।
ದಯಾಪರವಶೋ ನಿತ್ಯಂ ವಸತಿ ಪ್ರೀತಮಾನಸಃ ॥ (3.50–58)

3.4. ಚೋಲರಾಜಕೃತಪ್ರಾರ್ಥನಾ

'ಯತ್ತದ್ರೂಪಂ ದುರ್ಲಭಂ ಯೋಗಿವರ್ಯೈ
ರಮ್ಯಂ ಭೂಯಾದೀದೃಶಂ ಸರ್ವದೃಶ್ಯಮ್ ॥26॥

ಅತ್ರೈವ ತ್ವಂ ಸರ್ವದಾ ವಾಸಮೀಯಾಃ
ಸರ್ವೇಷಾಂ ವೈ ಮಾನವಾನಾಂ ಹಿತಾಯ' ।
'ಓಮಿ'ತ್ಯುಕ್ತ್ವಾಽಥಾಪರಂ ಪ್ರಾಹ ವಾಕ್ಯಂ
'ಮದ್ಭಕ್ತಸ್ತ್ವಂ ನಾಸ್ತಿ ತುಲ್ಯಸ್ತ್ವಯಾಽನ್ಯಃ ॥27॥

4. ಮಾರ್ಕಾಂಡೇಯ ಪುರಾಣ

'ಕೃಪಾನಿಧೇ ನಮಸ್ತುಭ್ಯಂ ವರದಾಯ ನಮೋ ನಮಃ ।
ವಿಜ್ಞಾಪ್ಯಂ ಕಿಂಚಿದಸ್ತೀಹ ಶೃಣುಷ್ವ ಕರುಣಾಕರ ।

ಅನುಗೃಹ್ಣನ್ ಅಶೇಷಾಂಸ್ತ್ವಂ ದದದಿಷ್ಟಾನಿ ಸರ್ವಶಃ ।
ಮಾನವಾನಾಮಪಿ ಸಹನ್ನಪರಾಧಾನಶೇಷತಃ ।

ದಯಾಲುತ್ವಂ ಪ್ರಕಟಯನ್ನಿಹ ತ್ವಂ ತಿಷ್ಠ ಕೇಶವ ।

ದೃಗ್ಗೋಚರಂ ತ್ವಾಮಾಲೋಕ್ಯ ವೇಂಕಟಾದ್ರಿಶಿರೋಮಣೇ ।
ಕಲೌ ಯುಗೇ ಮನುಷ್ಯಾಶ್ಚ ಭೂಯಾಸುರ್ವೀತಕಲ್ಮಷಾಃ' (2.87–90)

ಏವಂ ಸರ್ವೋಪಕಾರಾರ್ಥಮತ್ರ ಸ್ವಾಮಿಸರಸ್ತಟೇ ।
ರಮಾಸಮೇತಸ್ಸಂವಿಷ್ಟಸ್ತೈತನ್ನಃ ಪ್ರಾರ್ಥಿತಂ ಹರೇ । (ಅಲ್ಲಿಯೇ )

ಇತಿ ಸಂಪ್ರಾರ್ಥಿತಃ ಸರ್ವೈಸ್ತತ್ರೈವಾಸ್ತೇ ಕೃಪಾನಿಧಿಃ ॥

ವೇಂಕಟಾಚಲವು ಪರಮಾತ್ಮನ ನಿತ್ಯಸನ್ನಿಧಾನಯುಕ್ತವಾದ ಗಿರಿಯಾಗಿರುವದೆಂಬುದು ಶ್ರೀಮದ್ವಾದಿರಾಜರಂತಹ ಮಹಜ್ಜನರ ಪ್ರತ್ಯಕ್ಷದಿಂದಲೂ ಸಿದ್ಧವಾಗಿರುವದು. ಶ್ರೀಮದ್ವಾದಿರಾಜರು ವೇಂಕಟಗಿರಿಯ ಬಳಿ ಬಂದಾಗ ಈ ಗಿರಿಯು ಅವರಿಗೆ ಶಿಲಾಸೋಪಾನಗಳಲ್ಲಿ ಸನ್ನಿಹಿತನಾದ ಭಗವಂತನೇ ಕಂಡಿರುವದರಿಂದ ಅವರು ಈ ಪರ್ವತವನ್ನು ಪಾದಗಳಿಂದ ತುಳಿದು ಏರದೇ ಕೇವಲ ತಮ್ಮ ಮೊಣಕಾಲುಗಳಿಂದ ಈ ಪರ್ವತವನ್ನು ಏರಿರುವರು. ಮೇಲೆ ಶ್ರೀನಿವಾಸನ ದರ್ಶನವನ್ನು ಪಡೆದು ಅವನಿಗೆ ಸಾಲಗ್ರಾಮ ಶಿಲೆಯ ಮಾಲೆಯನ್ನರ್ಪಿಸಿರುವರು.

ಶಿಲಾಸೋಪಾನರೂಪೇಣ ದೇವಮಾವೀಕ್ಷ್ಯ ಭಕ್ತಿಮಾನ್ ।
ಜಾನುಭ್ಯಾಮೇವ ಶೈಲೇಂದ್ರಮಾರುರೋಹ ಮಹಾಬಲಃ ॥

ಶ್ರೀನಿವಾಸಂ ನಿರೀಕ್ಷ್ಯಾಥ ಸಾಲಿಗ್ರಾಮಸ್ಯ ಮಾಲಿಕಾಮ್ ।
ಅರ್ಪಯಾಮಾಸ ಸಾ ಮಾಲಾ ತತ್ಕಂಠೇಽದ್ಯಾಪಿ ರಾಜತೇ ॥
[ವಾದಿರಾಜಗುರುವರ ಚರಿತಾಮೃತ ಬಿಂ.2 ಶ್ಲೋ.23–24]

'ಸ್ವರ್ಣಾಚಲ ಮಹಾಪುಣ್ಯ ಸರ್ವದೇವನಿಷೇವಿತ ।
ಬ್ರಹ್ಮಾದಯೋಽಪಿ ಯಂ ದೇವಂ ಸೇವಂತೇ ಶ್ರದ್ಧಯಾ ಸಹ ।

ತಂ ಭವಂತಮಹಂ ಪದ್ಭ್ಯಾಮಾಕ್ರಮೇಯಂ ನಗೋತ್ತಮ ।
ಕ್ಷಮಸ್ವ ತದಘಂ ಮೇಽದ್ಯ ದಯಯಾ ಪಾಪಚೇತಸಃ ।

ತ್ವನ್ಮೂರ್ಧನಿ ಕೃತಾವಾಸಂ ಮಾಧವಂ ದರ್ಶಯಸ್ವ ಮೇ ।' [ಸ್ಕಾಂ.12.4]

ಎಂಬುದಾಗಿ ಗಿರಿಯನ್ನು ಸಂಪ್ರಾರ್ಥಿಸಿ, ಗೋವಿಂದನಾಮವನ್ನುಚ್ಚರಿಸುತ್ತಾ ಅನಂತರದಲ್ಲಿ ಪರ್ವತಾರೋಹಣವನ್ನು ಮಾಡಿದಲ್ಲಿ ಪಾದಾಹತಿದೋಷವು ಬರುವದಿಲ್ಲವೆಂದು ಸ್ಕಾಂದಪುರಾಣವು ತಿಳಿಸುತ್ತದೆ.

ಇವುಗಳಲ್ಲದೇ ಇನ್ನೂ ಅನೇಕ ಪ್ರಮಾಣ ವಚನಗಳಿಗೆ ವಿರುದ್ಧವಾಗಿ ಸ್ವಕಪೋಲಕಲ್ಪಿತವಾದ ಭಾವನೆಯನ್ನು ಭಕ್ತರುಗಳು ವೇಂಕಟೇಶ ದೇವರ ವಿಷಯದಲ್ಲಿ ಸರ್ವಥಾ ಮಾಡಬಾರದು ತಿರುಪತಿಯಲ್ಲಿ ತೋರುವ ವಿಗ್ರಹವು ಸಾಕ್ಷಾತ್ ಸಚ್ಚಿದಾನಂದಾತ್ಮಕ ವಿಗ್ರಹವೇ ಆಗಿದೆ. ಕಲಿಯುಗದಲ್ಲಿ

ನಮ್ಮ ಯೋಗ್ಯತಾನುಗುಣವಾಗಿ ಶಿಲೆಯಂತೆ ತೋರುವದು. ಜ್ಞಾನತಪೋಮಹಿಮರಾದ ಶ್ರೀಚಂದ್ರಿಕಾಚಾರ್ಯರು ಶ್ರೀವಾದಿರಾಜ ಪೂಜ್ಯಚರಣರಂತಹ ಮಹನೀಯರಿಗೆ ಸಮಸ್ತ ಪರ್ವತದಲ್ಲಿ ಶಾಲಿಗ್ರಾಮ ಶಿಲೆಗಳು, ಚಕ್ರಾಂಕಿತಗಳು ತೋರಿದವು. ದೇವತೆಗಳೇ ಸರ್ವತ್ರ ಪರಮಾತ್ಮನ ಅನುಚರರಾಗಿ ತೋರಿದರು.

## ಪ್ರಕೃತ ಗ್ರಂಥ-

'ಶ್ರೀವೇಂಕಟೇಶಮಾಹಾತ್ಮ್ಯಂ' ಎಂಬ ಶೀರ್ಷಿಕೆಯ ಅಡಿಯಲ್ಲಿ ಪ್ರಥಮಭಾಗವಾಗಿ ಹೊರ ಬರುತ್ತಿರುವ ಪ್ರಸ್ತುತ ಗ್ರಂಥವು, ಬ್ರಹ್ಮಾಂಡ-ಹರಿವಂಶ-ಗರುಡ-ಆದಿತ್ಯ-ಭವಿಷ್ಯೋತ್ತರ-ಸ್ಕಾಂದ ಪುರಾಣಗಳಲ್ಲಿ ಪ್ರಸ್ತುತವಾದ ಶ್ರೀವೇಂಕಟೇಶಮಾಹಾತ್ಮ್ಯದ ಆಯ್ದ ಭಾಗಗಳ ಕನ್ನಡ ಅನುವಾದ ಸಹಿತವಾಗಿ ಪ್ರಕಟಣಗೊಳ್ಳುತ್ತಿದೆ. ಸ್ಕಾಂದಪುರಾಣದ ಬಹುಭಾಗವು ವೇಂಕಟಾಚಲಕ್ಷೇತ್ರದ ಮಹಿಮೆಯನ್ನು ವಿಶದವಾಗಿ ಒಳಗೊಂಡಿದೆ. ಉಳಿದ ಪುರಾಣಗಳ ಬಹುತೇಕಭಾಗವು ವೇಂಕಟೇಶದೇವರ ಮಾಹಾತ್ಮ್ಯೆಯನ್ನೂ ಮತ್ತು ಅಲ್ಲಲ್ಲಿ ಪ್ರಸಕ್ತವಾದ ಕ್ಷೇತ್ರಮಾಹಾತ್ಮ್ಯೆಯನ್ನೂ ನಿರೂಪಿಸುವದು. ಕನ್ನಡ ಅನುವಾದವನ್ನು ಆಯಾ ಪುಟದಲ್ಲಿಯ ಶ್ಲೋಕಗಳ ಮೂಲಭಾಗದ ಕೆಳಗೇ ಕೊಟ್ಟಿರುವದರಿಮದ ಅರ್ಥಾನುಸಂಧಾನ ಪೂರ್ವಕವಾಗಿ ಪಾರಾಯಣ ಮಾಡುವವರಿಗೆ ಅತೀವ ಉಪಯುಕ್ತವಾಗುವದು. ಮೂಲಸಂಸ್ಕೃತದ ಭಾವವನ್ನು ಕನ್ನಡದಲ್ಲಿ ಅತೀ ಸುಂದರವಾಗಿ ಸಮರ್ಥವಾಗಿ ಅನುವಾದಿಸಿದ್ದಾರೆ. ಕನ್ನಡಾನುವಾದದಲ್ಲಿಯೂ ಸಹ ಸರಳ ಸಂಸ್ಕೃತ ಶಾಸ್ತ್ರೀಯ ಶೈಲಿಯನ್ನು ನಾವು ನೋಡಬಹುದು. ಇದು ಅನುವಾದಕರ ಭಾಷೆಯ ಮೇಲಿನ ಪ್ರಭುತ್ವ ಮತ್ತು ಶಾಸ್ತ್ರೀಯ ವಿಚಾರಗಳ ಅಚ್ಚುಕಟ್ಟನ್ನು ತಿಳಿಸುವದು. ಅಡಿಟಿಪ್ಪಣಿಗಳನ್ನು ಅವಶ್ಯವಿದ್ದಲ್ಲಿ ಕೊಟ್ಟು, ಪ್ರಸ್ತುತವಾದ ಸಂಶಯ-ವಿರೋಧಗಳ ಪರಿಹಾರವನ್ನು ಮಾಡಿದ್ದಾರೆ. ಸುಮಾರು 860 ಪುಟಗಳ ಈ ಬೃಹದ್ ಗ್ರಂಥವನ್ನು ಒದಲು ಅನುಕೂಲವಾಗುವಂತೆ, ವಿಸ್ತೃತವಾದ ಪರಿವಿಡಿಯನ್ನು ಕೊಟ್ಟಿರುವದು ಬಹಳ ಉಪಯುಕ್ತವಾಗಿದೆ.

ಅನೇಕ ಪುರಾಣಗಳ ವಿಷಯಗಳನ್ನೊಳಗೊಂಡ ಈ ಬೃಹತ್ ಅನುವಾದ ಕಾರ್ಯ-ವನ್ನು ಅತ್ಯಂತ ದಕ್ಷವಾಗಿ ಮಾಡಿರುವವರು -ತಮ್ಮ ಅನೇಕ ಸ್ವತಂತ್ರ ಮತ್ತು ಅನುವಾದಿತ ಕೃತಿಗಳಿಂದ ಚಿರಪರಿಚಿತರಾದ ನಮ್ಮ ಅನುಜ ಪಂಡಿತ ಗಂಗೂರು ಹನುಮೇಶಚಾರ್ಯರು. ಅನೇಕ ಪುರಾಣಗಳ ಅವಲೋಕನ-ಪರಾಮರ್ಶಗಳನ್ನು ನಿತ್ಯ ಪಾಠಪ್ರವಚನಗಳಲ್ಲಿ ಮಾಡುತ್ತಿರುವ ಅನುವಾದಕರು ನಿಷ್ಕೃಷ್ಟ ಹಾಗೂ ನೇರವಾದ ಅನುವಾದವನ್ನು ಶ್ರೀವೇಂಕಟೇಶದೇವರ ಭಕ್ತರುಗಳಿಗೆ, ವಾಚಕವೃಂದಕ್ಕೆ ಒದಗಿಸಿದ್ದಾರೆ. ಇದು ಅತ್ಯಂತ ಸ್ತುತ್ಯವಾದ ಕಾರ್ಯವಾಗಿದೆ,

ಭವಿಷ್ಯೋತ್ತರ ಮತ್ತು ಆದಿತ್ಯ ಪುರಾಣಗಳಲ್ಲಿ ಅಂತರ್ಗತವಾದ ವೇಂಕಟೇಶ-ಮಾಹಾತ್ಮ್ಯೆಗಳ ಅನುವಾದಗಳನ್ನು ಈ ಪೂರ್ವದಲ್ಲಿಯೇ ವಾಚಕರಿಗೆ ಒದಗಿಸಿದ ಪಂ.ಹನುಮೇಶಾಚಾರ್ಯರು, ಈಗ 18 ಪುರಾಣಗಳಲ್ಲಿ ಅಂತರ್ಗತವಾದ ಶ್ರೀವೇಂಕಟೇಶ-ಮಾಹಾತ್ಮ್ಯೆಯ ಭಾಗಗಳನ್ನು

ಅನುವಾದದೊಂದಿಗೆ ಪ್ರಕಟಿಸುವ ಮಹತ್ಕಾರ್ಯವನ್ನು ಕೈಗೊಂಡಿರುವದು ನಮಗೆ ಅತ್ಯಂತ ಹೆಮ್ಮೆಯ ಮತ್ತು ಸಂತೋಷದ ವಿಷಯವಾಗಿದೆ. ವಾಚಕರು ಇದರ ಉಪಯೋಗವನ್ನು ಹೊಂದುವದಾಗಿ ಆಶಿಸಿದ್ದೇವೆ.

**ಉಪಸಂಹಾರ**

ಬ್ರಹ್ಮಾಂಡದಲ್ಲಿಯೇ ವೇಂಕಟಾಚಲಕ್ಕೆ ಸಮನಾದ ಕ್ಷೇತ್ರವಿಲ್ಲ, ವೇಂಕಟೇಶನಿಗೆ ಸಮನಾದ ದೇವರಿಲ್ಲ. ಸರ್ವಾಭೀಷ್ಟಪ್ರದವಾದ ವೇಂಕಟೇಶಮಾಹಾತ್ಮ್ಯೆಯನ್ನು ಪಠಿಸಿ, ಅವನನನ್ನು ಸ್ತುತಿಸಿ, ಅವನ ಅನುಗ್ರಹವನ್ನು ಸಂಪಾದಿಸುವದಕ್ಕೆ ಈ ಹೊತ್ತಿಗೆಯು ಉಪಕಾರಕವಾಗಿದೆ. ಆದಿತ್ಯಪುರಾಣದಲ್ಲಿಯ ಕೆಳಗಿನ ವಾಕ್ಯವು ವೇಂಕಟೇಶದೇವರ ಮಾಹಾತ್ಮ್ಯೆ ಮತ್ತು ವೇಕಟಾಚಲ ಕ್ಷೇತ್ರದ ಮಹಿಮೆಗಳನ್ನು ಸುಂದರವಾಗಿ ತಿಳಿಸುವದು.

ಸೂತರು ಶೌನಕಾದಿ ಋಷಿಗಳನ್ನು ಕುರಿತು ಉಪದೇಶಿಸಿದ ವಾಕ್ಯವಿದು –

'ಯೂಯಂ ಗತ್ವಾ ವೇಂಕಟೇಶಂ ರಮೇಶಂ
ನತ್ವಾ ಸ್ತುತ್ವಾ ವೇದವೇದ್ಯಂ ಸುಭಕ್ತ್ಯಾ ।
ಭಕ್ತೇಭ್ಯೋಭೀಷ್ಟಾರ್ಥವರ್ಷಪ್ರಬುದ್ಧಂ
ಸಂಪ್ರಣೀದ್ಧಂ ಯೇನ ವೋಭೀಷ್ಟಸಿದ್ಧಿಃ ।।

"ಹೇ ಶೌನಕಾದಿಗಳೇ! ನೀವು ವೇಕಟಾಚಲಕ್ಕೆ ಹೋಗಿ, ವೇದವೇದ್ಯನಾದ ವೇಂಕಟೇಶನನ್ನು ನಮಿಸಿ, ಸ್ತೋತ್ರಮಾಡಿ, ಭಕ್ತಾಭೀಷ್ಟಪ್ರದನಾದ ದೇವನನ್ನು ಸಂತುಷ್ಟಗೊಳಿಸಿರಿ. ಅದರಿಂದ ನೀವೂ ಸರ್ವಾಭೀಷ್ಟಗಳನ್ನು ಹೊಂದುವಿರಿ."

ಶ್ರೀ ವೇಂಕಟೇಶದೇವರ ಕಥಾಮೃತವು ಸಮಸ್ತ ಪಾಪಗಳ ಸಮೂಹವನ್ನು ನಾಶಮಾಡುವಂತಹದೂ, ಸಮಸ್ತ ಪುಣ್ಯಗಳ ಸಮೂಹದ ಸಮೃದ್ಧಿಯನ್ನು ಉಂಟು–ಮಾಡುವಂತಹದೂ ಆಗಿದೆ. ಆದ್ದರಿಂದ ಇದರ ಪಠಣ–ಶ್ರವಣ ಮಾಡುವ ಸಜ್ಜನರಿಗೆ ಪರಮಾತ್ಮನಲ್ಲಿ ಸದ್ಭಕ್ತಿಯನ್ನು ಅಭಿವೃಧಿ ಮಾಡಿ ಇಹ–ಪರ ಶೇಯಸ್ಸಿಗೆ ಕಾರಣವಾಗುವರಲ್ಲಿ ಸಂದೇಹವಿಲ್ಲ. ಇದು ಎಲ್ಲ ಪುರಾಣಗಳಲ್ಲಿ ಪ್ರತಿಪಾದಿತವಾದ ವೇಂಕಟೇಶಮಾಹಾತ್ಮ್ಯೆಯ ಫಲಶ್ರುತಿ–ಸಾರವಾಗಿದೆ.

ಈ ದಿಶೆಯಲ್ಲಿ ಪ್ರಕೃತಗ್ರಂಥವು ಪರಮೋಪಕಾರಕವಾಗಿದೆ. ಆಸ್ತಿಕವಾಚಕರು ಇದರ ಸದುಪಯೋಗವನ್ನು ಪಡೆಯಬೇಕೆಂದು ಆಶಿಸುತ್ತೇವೆ.

ಇಂಥ ಪರಮೋಪಕಾರಕವಾದ ಪುಣ್ಯಕಾರಕವಾದ ಅನುವಾದಕಾರ್ಯವನ್ನು ಮಾಡಿದ ಪಂಡಿತ ಹನುಮೇಶಾಚಾರ್ಯರಿಗೆ, ಶ್ರೀವೇಂಕಟೇಶದೇವರ ಸನ್ನಿಧಾನವಾದ ತಿರುಪತಿಕ್ಷೇತ್ರದಲ್ಲಿಯೇ ವೆಂಕಟೇಶದೇವರ ಪರಮಾನುಗ್ರಹದಿಂದ ತಮ್ಮ ಯೋಗಶರೀರದ ದರ್ಶನವನ್ನು ಶಿಷ್ಯರುಗಳಿಗೆ ಭಕ್ತರುಗಳಿಗೆ ಮಾಡಿಸಿದ ಪರಮಪೂಜ್ಯ ತಪಸ್ವಿಪ್ರವರ ವಿದ್ವತ್ತಲ್ಲಜ ಆಚಾರ್ಯವರ್ಯರು (ನಮ್ಮ

ಸ್ವರೂಪೋದ್ಧಾರಕರೂ ಪಿತೃಚರಣರೂ ಆದ ಪರಮ ಪೂಜ್ಯ ಗಂಗೂರು ರಾಮಾರ್ಯವರ್ಯರು, ಜಾಲಿಹಾಳ) ಇತೋಪ್ಯತಿಶಯವಾದ ಜ್ಞಾನ-ಭಕ್ತಿ-ಸಕಲ ಸನ್ಮಂಗಳ-ಗಳನ್ನೂ ತಮ್ಮ ಉಪಾಸ್ಯ ಶ್ರೀವೇದವ್ಯಾಸದೇವರ ಅನುಗ್ರಹದಿಂದ ದಯಪಾಲಿಸಲಿ ಎಂದು ಆಶಾಸಿಸುತ್ತೇನೆ.

ಇತಿ ಶಂ

ಶ್ರಾವಣ ವ. 8, ಕೃಷ್ಣಜನ್ಮಾಷ್ಟಮೀ
25-8-2016,

**ಶ್ರೀಮಧ್ವಾಚಾರ್ಯ ಗಂಗೂರ**
ಬೆಂಗಳೂರು-4

# ವಿಷಯಾನುಕ್ರಮಣಿಕಾ



# ಶ್ರೀವೇಂಕಟೇಶಮಾಹಾತ್ಮ್ಯಂ

## 01. ಬ್ರಹ್ಮಾಂಡಪುರಾಣ

## ಹನ್ನೊಂದನೆಯ ಅಧ್ಯಾಯವು ..... 115



## 02. ಗರುಡಪುರಾಣ



## 03. ಹರಿವಂಶ



## 04.ಆದಿತ್ಯಪುರಾಣ

## 05. .ಭವಿಷ್ಯೋತ್ತರಪುರಾಣ

* * *

## 06 .ಸ್ಕಾಂದಪುರಾಣ

* * *

## 06 .ಸ್ಕಾಂದಪುರಾಣ

* * *

॥ ಶ್ರೀ ಬಾದರಾಯಣೋ ವಿಜಯತೇ ॥

ಶ್ರೀ ಬ್ರಹ್ಮಾಂಡಪುರಾಣಾಂತರ್ಗತಂ

# ಶ್ರೀವೆಂಕಟೇಶಮಾಹಾತ್ಮ್ಯಂ

ಕನ್ನಡ ಸರಳಾನುವಾದ ಸಹಿತ

* * *

॥ ಶ್ರೀ ಬಾದರಾಯಣೋ ವಿಜಯತೇ ॥

ಶ್ರೀ ಬ್ರಹ್ಮಾಂಡಪುರಾಣಾಂತರ್ಗತಂ

# ಶ್ರೀವೇಂಕಟೇಶಮಾಹಾತ್ಮ್ಯಂ

ಕನ್ನಡ ಸರಳಾನುವಾದ ಸಹಿತ

# ಅಧ್ಯಾಯಾನುಕ್ರಮಣಿಕಾ



* *

॥ಶ್ರೀ ಬಾದರಾಯಣೋ ವಿಜಯತೇ ತರಾಮ್ ॥

ಶ್ರೀಮದ್ಬ್ರಹ್ಮಾಂಡಪುರಾಣಾಂತರ್ಗತಮ್

# ಶ್ರೀಮದ್ವೇಂಕಟೇಶಮಾಹಾತ್ಮ್ಯಮ್

## ಅಥ ಪ್ರಥಮೋಽಧ್ಯಾಯಃ

ಶ್ರೀಗುರುಭ್ಯೋ ನಮಃ ॥ ಹರಿಃ ಓಂ

**ಶ್ರಿಯಃ ಕಾಂತಾಯ ಕಲ್ಯಾಣನಿಧಯೇ ನಿಧಯೇಽರ್ಥಿನಾಮ್ ।**
**ಶ್ರೀವೇಂಕಟನಿವಾಸಾಯ ಶ್ರೀನಿವಾಸಾಯ ಮಂಗಲಮ್ ॥*॥**

**ಶ್ರೀವೇಂಕಟಾಚಲಾಧೀಶಂ ಶ್ರಿಯಾಧ್ಯಾಸಿತವಕ್ಷಸಮ್ ।**
**ಶ್ರಿತಚೇತನಮಂದಾರಂ ಶ್ರೀನಿವಾಸಮಹಂ ಭಜೇ ॥*॥**

**ಋಷಯ ಊಚುಃ-**

**ಕಥಿತಾನಿ ಮಹಾಭಾಗ ಪುಣ್ಯಕ್ಷೇತ್ರಾಣ್ಯನೇಕಶಃ ।**
**ಪ್ರಶಸ್ತಾನಿ ಚ ತೀರ್ಥಾನಿ ತಾನಿ ತಾನಿ ಮಹೀತಲೇ ॥1॥**

ಶ್ರೀ ಬಹ್ಮಾಂಡಪುರಾಣಾಂತರ್ಗತವಾದ

# ಶ್ರೀವೇಂಕಟೇಶಮಾಹಾತ್ಮೆ

ಕನ್ನಡದಲ್ಲಿ ಸರಳಾನುವಾದ

## ಮೊದಲನೆಯ ಅಧ್ಯಾಯ

ಶ್ರೀ ಗುರುಭ್ಯೋ ನಮಃ

ಶ್ರೀ ಲಕ್ಷ್ಮೀರಮಣ, ಅನಂತಕಲ್ಯಾಣಗುಣಾಕರ, ಅರ್ಥಿಜನ ಇಷ್ಟಾರ್ಥ ನಿಧಿಯಾದ ಶ್ರೀವೇಂಕಟಾಚಲವಾಸಿಯಾದ ಶ್ರೀನಿವಾಸದೇವರಿಗೆ ಮಂಗಳವು.

ಶ್ರೀವೇಂಕಟಾಚಲಪತಿಯಾದ, ಲಕ್ಷ್ಮೀದೇವಿಯಿಂದ ಶೋಭಿತವಾದ ವಕ್ಷಸ್ಥಳವುಳ್ಳ, ಆಶ್ರಿತಜನ ಮಂದಾರನಾದ ಶ್ರೀಶ್ರೀನಿವಾಸದೇವರನ್ನು ನಾನು ಸ್ತುತಿಸುತ್ತೇನೆ.

*ಸೂತರನ್ನು ಕುರಿತು ಶೌನಕಾದಿಗಳ ಪ್ರಾರ್ಥನಾ*

ಋಷಿಗಳು ಸೂತರನ್ನು ಕುರಿತು ಹೇಳುತ್ತಾರೆ- 'ಹೇ ಶ್ರೇಷ್ಠರಾದ ಸೂತಾಚಾರ್ಯರೇ!

ತೇಭ್ಯೋಽಧಿಕತಮಂ ಕ್ಷೇತ್ರಂ ತೀರ್ಥಂ ಪಾಪವಿನಾಶನಮ್ ।
ಯಚ್ಚಾಸ್ತಿ ತಾದೃಶಂ ತೀರ್ಥಂ ತನ್ನೋ ಬ್ರೂಹಿ ಸುನಿಶ್ಚಿತಮ್ ॥2।

ಯಸ್ಮಿನ್ ವಸತಿ ಸರ್ವಾತ್ಮಾ ಮಾಧವೋ ಭಕ್ತವತ್ಸಲಃ ।
ವಿಹರನ್ಮುದಿತೋ ನಿತ್ಯಂ ಶ್ರಿಯಾ ಭೂಮ್ಯಾ ಚ ನೀಲಯಾ ॥3॥

ಯಸ್ಮಿಂಶ್ಚ ವಸತಿಂ ಪ್ರಾಪ್ತೋ ದುಸ್ತರಂ ಭವಸಾಗರಮ್ ।
ಸುಖೇನ ಜಂತುಸ್ತರತಿ ಪ್ರಾಪ್ತವಿತ್ತಃ ಶುಚಂ ಯಥಾ ॥4॥

ತಸ್ಯ ಕ್ಷೇತ್ರಸ್ಯ ಮಾಹಾತ್ಮ್ಯಂ ವಿಸ್ತರಾದ್ವಕ್ತುಮರ್ಹಸಿ ।
ನ ಚ ತೇಽವಿದಿತಂ ಕಿಂಚಿತ್ಪಶ್ಯಾಮೋ ಭುವನತ್ರಯೇ ॥5॥

ಸೂತ ಉವಾಚ–

'ಸ್ಮಾರಿತೋಽಸ್ಮಿ ಮಹಾಭಾಗಾಃ ಸಾಂಪ್ರತಂ ವಚನೇನ ವಃ ।
ಕಥಯಿಷ್ಯಾಮಿ ಮುನಯಃ ಶೃಣುತೈಕಾಗ್ರಮಾನಸಾಃ ॥6॥

ಅಮುಮೇವಾಧಿಕೃತ್ಯಾರ್ಥಂ ಪುರಾ ನಾರಾಯಣಾತ್ಮಕಮ್ ।
ಅಪೃಚ್ಛಂ ಮುನಿಶಾರ್ದೂಲಂ ವ್ಯಾಸಂ ಸತ್ಯವತೀಸುತಮ್ ॥7॥

ನಿಮ್ಮಿಂದ ಭೂಮಿಯಲ್ಲಿರುವ ಅನೇಕವಾದ ಪುಣ್ಯಕ್ಷೇತ್ರಗಳು, ಸಾಧನೆಗೆ ಪ್ರಶಸ್ತವಾದ ತೀರ್ಥಗಳು ನಮಗೋಸ್ಕರವಾಗಿ ಹೇಳಲ್ಪಟ್ಟಿರುವವು. (1) ಆದರೆ ಎಲ್ಲ ತೀರ್ಥಕ್ಷೇತ್ರಗಳಿಗಿಂತಲೂ ಪ್ರಶಸ್ತವಾದ, ಪಾಪಪರಿಹಾರಕವಾದ ಯಾವ ತೀರ್ಥವಿರುವದೋ ಅದನ್ನು ನಿಶ್ಚಿತವಾಗಿ ನಮಗೆ ತಿಳಿಸಿರಿ. (2) ಯಾವ ಕ್ಷೇತ್ರದಲ್ಲಿ ಲಕ್ಷ್ಮೀಪತಿಯಾದ ನಾರಾಯಣನು ಶ್ರೀಭೂದುರ್ಗಾದಿ ಮಹಿಷಿಯರಿಂದ ಸಮೇತನಾಗಿ ಆನಂದದಿಂದ ಯಾವಾಗಲೂ ವಿಹಾರಮಾಡುವನೋ, ಯಾವ ಕ್ಷೇತ್ರದ ವಾಸಮಾತ್ರದಿಂದ ಮನುಷ್ಯನು ಧನವನ್ನು ಹೊಂದಿದ ವ್ಯಕ್ತಿಯು ದಾರಿದ್ರ್ಯಶೋಕವನ್ನು ಕಳೆದುಕೊಳ್ಳುವಂತೆ, ದಾಟಲಶಕ್ಯವಾದ ಸಂಸಾರ ಸಾಗರವನ್ನೂ ಸಹ ಅನಾಯಾಸವಾಗಿ ದಾಟುವನೋ ಅಂತಹ ಶ್ರೇಷ್ಠವಾದ ಕ್ಷೇತ್ರದ ಮಾಹಾತ್ಮ್ಯವನ್ನು ನಮಗೆ ವಿಸ್ತಾರವಾಗಿ ವಿವರಿಸಿರಿ. ಹೇ ಸೂತಾಚಾರ್ಯರೇ! ನಿಮಗೆ ತಿಳಿಯದಿರುವ ಯಾವ ವೃತ್ತಾಂತವೂ ಸಹ ಈ ಜಗತ್ತಿನಲ್ಲಿರುವದಿಲ್ಲ' ಎಂದು ನುಡಿದರು. (3–5)

*ಸೂತರ ಉತ್ತರ – ಪೂರ್ವವೃತ್ತಾಂತಸ್ಮರಣ*

ಸೂತರು ಹೇಳುತ್ತಾರೆ– 'ಕಥಾರಸಪಾನಕುಶಲರಾದ ಹೇ ಋಷಿಗಳೇ! ನಿಮ್ಮ ಈ ಮಾತಿನಿಂದ ಹಿಂದಿನ ವೃತ್ತಾಂತವೊಂದು ನೆನಪಿಸಲ್ಪಟ್ಟಿರುವದು. ಅದನ್ನು ನಾನು ನಿಮಗೆ ತಿಳಿಸುತ್ತೇನೆ.

ಅಥ ಪೃಷ್ಟೋ ಮಯಾ ಪ್ರಾಹ ವ್ಯಾಸಃ ಸತ್ಯವತೀಸುತಃ' ।

ಶ್ರೀವೇದವ್ಯಾಸ ಉವಾಚ–

ಶೃಣು ಸೂತ ಪುರಾವೃತ್ತಮಾಖ್ಯಾನಂ ಕಥಯಾಮಿ ತೇ ॥8॥

ಕದಾಚಿತ್ಪರ್ಯಟನ್ ಭೂಮಿಂ ನಾರದೋ ಮುನಿಸತ್ತಮಃ ।
ಆಜಗಾಮಾಶ್ರಮಂ ಪುಣ್ಯಂ ಭೃಗೋರ್ಮುದಿತಮಾನಸಃ ॥9॥

ಶರದಾಭ್ರನಿಭಃ ಶ್ರೀಮಾನ್ ವೀಣಾಂ ಚ ಮಹತೀಂ ದಧತ್ ।
ಉದತಿಷ್ಠದ್ಭೃಗುಃ ಶಿಷ್ಯೈರ್ದೃಷ್ಟ್ವಾ ದೇವರ್ಷಿಮಾಗತಮ್ ॥10॥

ಭೃಗುರುವಾಚ –

'ಜಗತ್ಪರ್ಯಟಿತಂ ಸರ್ವಂ ಭಗವನ್ನಾರದ ತ್ವಯಾ ।
ತೇನ ಜಾನಾಸಿ ಜಗತಾಂ ವೃತ್ತಾಂತಮಖಿಲಂ ಮುನೇ ॥11॥

ಕ್ಷೇತ್ರಾಣಾಮಧಿಕಂ ಕ್ಷೇತ್ರಂ ತೀರ್ಥಾನಾಂ ತೀರ್ಥಮುತ್ತಮಮ್ ।

ಏಕಾಗ್ರಚಿತ್ತರಾಗಿ ಕೇಳಿರಿ. (6) ಈ ತೀರ್ಥಕ್ಷೇತ್ರಮಾಹಾತ್ಮ್ಯವಿಷಯಕವಾಗಿಯೇ ಹಿಂದೆ, ನಾರಾಯಣನ ಸ್ವರೂಪರೇ ಆದ ಸತ್ಯವತೀಕುವರರೆಂದು ಜಗತ್ತಿನಲ್ಲಿ ಪ್ರಸಿದ್ಧರಾದ ಮುನಿಪುಂಗವರಾದ ಶ್ರೀವೇದವ್ಯಾಸ ದೇವರನ್ನು ನಾನು ಪ್ರಶ್ನಿಸಿದ್ದೆನು. (7) ನನ್ನಿಂದ ಪ್ರಶ್ನಿತರಾದ ವ್ಯಾಸರು ನನ್ನನ್ನನುಗ್ರಹಿಸುವದಕ್ಕೋಸ್ಕರ ಹೀಗೆ ನುಡಿದರು.

*ವೇದವ್ಯಾಸರಿಂದ ಭೃಗು ನಾರದ ಸಂವಾದ ನಿರೂಪಣ*

ವೇದವ್ಯಾಸರು ಹೇಳಿದರು– 'ಹೇ ಸೂತನೇ! ಹಿಂದೆ ನಡೆದ ವೃತ್ತಾಂತವನ್ನು ನಿನಗೆ ಹೇಳುವೆನು. ನೀನು ಅದನ್ನು ಕೇಳು. ಒಂದು ಬಾರಿ ಶರತ್ಕಾಲದ ಮೋಡದಂತೆ ಬೆಳ್ಳಗಿನ ಮೈಕಾಂತಿಯಿಂದ ಕೂಡಿದ, ತಮ್ಮ ಶ್ರೇಷ್ಠವಾದ 'ಮಹತೀ' ಎಂಬ ವೀಣೆಯನ್ನು ಕೈಯಲ್ಲಿ ಹಿಡಿದು ಜಗತ್ತನ್ನು ಪರ್ಯಟನ ಮಾಡುತ್ತಿರುವ ಮುನಿಶ್ರೇಷ್ಠರಾದ ನಾರದರು, ಪ್ರಹೃಷ್ಟಮನಸ್ಕರಾಗಿ ಪುಣ್ಯಕರವಾದ ಭೃಗುಮಹರ್ಷಿಗಳ ಆಶ್ರಮಕ್ಕೆ ಬಂದರು. ತಮ್ಮ ಆಶ್ರಮಕ್ಕೆ ಬಂದಿರುವ ನಾರದರನ್ನು ನೋಡಿ ಭೃಗುಋಷಿಗಳು ಅತ್ಯಂತಆದರದಿಂದ, ಶಿಷ್ಯಸಮೇತರಾಗಿ, ಎದ್ದು ಅವರನ್ನು ಉಪಚರಿಸಿದನು. (8–10)

*ಭೃಗುಕೃತಪ್ರಶ್ನೆ*

ಅನಂತರ ಸುಖಾಸೀನರಾದ ನಾರದರನ್ನು ಕುರಿತು– 'ಹೇ ನಾರದರೇ! ನೀವು ಜಗತ್ತಿನ

ಯದ್ಯಸ್ತಿ ಭುವಿ ವಿಪ್ರೇಂದ್ರ ತನ್ಮೇ ಬ್ರೂಹಿ ತಪೋನಿಧೇ ॥13॥

ಆಸ್ತೇ ವಿಷ್ಣುರಚಿಂತ್ಯಾತ್ಮಾ ವಿಹರನ್ ರಮಯಾ ಸಹ ।
ಯತ್ರ ಸಾಕ್ಷಾತ್ಕೃತೋ ದೇವೋ ವರದಃ ಸರ್ವದೇಹಿನಾಮ್ ॥14॥

ತಪಾಂಸಿ ಯತ್ರ ಸಿಧ್ಯಂತಿ ನ ಚಿರೇಣ ತಪಸ್ವಿನಾಮ್ ।
ಯಸ್ಮಿಂಶ್ಚ ನಿವಸನ್ ಜಂತುರಂಜಸಾ ಮೋಕ್ಷಮಾಪ್ನುಯಾತ್ ॥15॥

ಏತದಾಚಕ್ಷ್ವ ಭಗವನ್ ವಿಸ್ತರೇಣ ತಪೋನಿಧೇ ।
ಜ್ಞಾತುಮರ್ಥಮಿಮಂ ಬ್ರಹ್ಮನ್ನ ತ್ವದನ್ಯೋಽಸ್ತಿ ಭೂತಲೇ ॥16॥

ನಾರದ ಉವಾಚ–

'ಶೃಣುಷ್ವೈಕಮನಾ ಬ್ರಹ್ಮನ್ ಮತ್ತಃ ಕಥಯತೋ ಮುನೇ ।
ಕ್ಷೇತ್ರಾಣಾಂಕ್ಷೇತ್ರಮುತ್ಕೃಷ್ಟಂತೀರ್ಥಾನಾಂತೀರ್ಥಮುತ್ತಮಮ್ ॥17॥

ಶ್ರೀವೇಂಕಟಗಿರಿರ್ನಾಮ ಕ್ಷೇತ್ರಂ ಪುಣ್ಯಂ ಮಹೀತಲೇ ।
ಸರ್ವಪಾಪಪ್ರಶಮನಂ ಸರ್ವಪುಣ್ಯವಿವರ್ಧನಮ್ ॥18॥

ತುಂಬ ಸಂಚಾರವನ್ನು ಮಾಡಿರುವಿರಿ. ಆದ್ದರಿಂದ ನೀವು ಈ ಭೂಮಿಯಲ್ಲಿರುವ ಎಲ್ಲ ವೃತ್ತಾಂತಗಳನ್ನು ಸಹ ತಿಳಿದಿದ್ದೀರಿ. (11) ಕ್ಷೇತ್ರಗಳಲ್ಲಿ ಉತ್ತಮವಾದ ಕ್ಷೇತ್ರವು ಯಾವದು? ಜಗತ್ತಿನಲ್ಲಿಯ ತೀರ್ಥಗಳಲ್ಲಿ ಶ್ರೇಷ್ಠವಾದ ತೀರ್ಥವಾವದೆಂಬುದನ್ನು ತಿಳಿಸಿರಿ. (12) ಹೇ ತಪಸ್ವಿಗಳಾದ ನಾರದರೇ! ಅಚಿಂತ್ಯಸ್ವರೂಪನಾದ, ಸರ್ವ ದೇಹಾಂತರ್ಯಾಮಿಯಾದ ಶ್ರೀವಿಷ್ಣುವು ರಮಾದೇವಿಯಿಂದ ಸಮೇತನಾಗಿ ವಿಹಾರವನ್ನು ಮಾಡುತ್ತಾ, ಭಕ್ತಜನರಿಗೆ ತನ್ನ ದರ್ಶನವನ್ನು ಕೊಡುತ್ತಾ ಯಾವ ಕ್ಷೇತ್ರದಲ್ಲಿ ಇರುವನೋ, ಯಾವ ಕ್ಷೇತ್ರದಲ್ಲಿ ತಪಸ್ವಿಗಳು ಮಾಡುವ ತಪಸ್ಸುಗಳು ಶೀಘ್ರದಲ್ಲಿ ಸಿದ್ಧಿಸುವವೋ ಯಾವ ಕ್ಷೇತ್ರದಲ್ಲಿ ವಾಸಮಾಡುವ ಜೀವಿಯು ಶೀಘ್ರದಲ್ಲಿ ಸಂಸಾರದಿಂದ ಮುಕ್ತನಾಗುವನೋ ಅಂತಹ ಶ್ರೇಷ್ಠವಾದ ಕ್ಷೇತ್ರವು ಯಾವದಿರುವದು ಎಂಬುದನ್ನು ನನಗೆ ವಿಸ್ತಾರವಾಗಿ ತಿಳಿಸಿರಿ. ನಿಮ್ಮ ಹೊರತಾಗಿ ಈ ವಿಷಯಗಳನ್ನು ತಿಳಿಸಿಕೊಡುವವರು ಈ ಭೂಮಿಯಲ್ಲಿ ಯಾರೂ ಇರುವದಿಲ್ಲ' ಎಂದು ನಾರದರನ್ನು ಕುರಿತು ನುಡಿದರು.(13–16)

*ನಾರದಕೃತ ವೇಂಕಟೇಶ ಮಾಹಾತ್ಮ್ಯವರ್ಣನ*

ಆಗ ನಾರದರು 'ಹೇ ಭೃಗು ಮಹರ್ಷಿಗಳೇ! ತೀರ್ಥಗಳಲ್ಲಿ ಉತ್ತಮವಾದ ತೀರ್ಥವು ಯಾವದೆಂಬುದನ್ನೂ ಮತ್ತು ಕ್ಷೇತ್ರಗಳಲ್ಲಿ ಶ್ರೇಷ್ಠವಾದ ಕ್ಷೇತ್ರವಾವುದೆಂಬುದನ್ನು ನಾನು ನಿಮಗೆ ತಿಳಿಸುವೆನು. ಏಕಾಗ್ರಚಿತ್ತದಿಂದ ಅದನ್ನು ಕೇಳಿರಿ. (17)

ವಕ್ತುಂ ನ ತಸ್ಯ ಮಾಹಾತ್ಮ್ಯಂ ಬ್ರಹ್ಮಣಾಽಪಿ[1] ಸುರೈರಪಿ ।
ಶಕ್ಯತೇ ವಾ ತಥಾ ಸ್ಮರ್ತುಂ ಮನಸಾಽಪಿ ಮಹಾಮುನೇ ॥19॥

ಆರಾಧ್ಯಃ ಸರ್ವದೇವಾನಾಂ ಮಾಧವೋ ಭಕ್ತವತ್ಸಲಃ ।
ವಿಹಾಯ ಸ್ವಂ ಪರಂ ಧಾಮ ರಮತೇ ರಮಯಾ ಸಹ ॥20॥

ಅಂಜನಾದ್ರಿ[2]ರ್ವೃಷಾದ್ರಿಶ್ಚ[3] ಶೇಷಾದ್ರಿರ್ಗರುಡಾಚಲಃ ।
ತೀರ್ಥಾದ್ರಿಃ[4] ಶ್ರೀನಿವಾಸಾದ್ರಿ[5]ಶ್ಚಿಂತಾಮಣಿಗಿರಿ[6]ಸ್ತಥಾ ॥21॥

ವೃಷಭಾದ್ರಿರ್ವರಾಹಾದ್ರಿ[7]ರ್ಜ್ಞಾನಾದ್ರಿಃ[8] ಕನಕಾಚಲಃ[9] ।

ಭೂಮಿಯಲ್ಲಿ ಸರ್ವಪಾಪಗಳನ್ನು ಕಳೆದು ಸರ್ವವಿಧವಾದ ಪುಣ್ಯಗಳನ್ನು ಒದಗಿಸಿ ಕೊಡುವ ಶ್ರೀವೇಂಕಟಾಚಲವೆಂಬ ಅತ್ಯಂತ ಶ್ರೇಷ್ಠವಾದ ಕ್ಷೇತ್ರವಿರುವದು. (ಅದು ಎಲ್ಲ ಕ್ಷೇತ್ರಗಳಿಗಿಂತಲೂ ಉತ್ತಮವಾಗಿರುವದು)(18) ಶ್ರೀವೇಂಕಟಗಿರಿಯ ಮಾಹಾತ್ಮ್ಯವನ್ನು ಹೇಳಲು ಅಥವಾ ತಿಳಿಯಲು, ಮನಸ್ಸಿನಿಂದ ಸ್ಮರಿಸಲು ಬ್ರಹ್ಮ (ಬೃಹಸ್ಪತ್ಯಾಚಾರ್ಯ) ನಿಂದಲೇ ಆಗಲೀ, ದೇವತೆಗಳಿಂದಲೇ ಆಗಲೀ ಶಕ್ಯವಿಲ್ಲ. ಸರ್ವದೇವತೆಗಳಿಂದ ಆರಾಧ್ಯನಾದ ಭಕ್ತವತ್ಸಲನಾದ ಲಕ್ಷ್ಮೀಪತಿಯಾದ ನಾರಾಯಣನು ಶ್ರೇಷ್ಠವಾದ ವೈಕುಂಠವನ್ನು ಬಿಟ್ಟು ಈ ವೇಂಕಟಗಿರಿಯಲ್ಲಿ ಲಕ್ಷ್ಮೀದೇವಿಯೊಂದಿಗೆ ವಿಹರಿಸುತ್ತಿರುವನು. (ಎಂದರೆ ಆ ಕ್ಷೇತ್ರದ ಮಾಹಾತ್ಮ್ಯವಾದರೂ ಎಷ್ಟಿರಬಹುದು?). (20)

*ವೇಂಕಟಗಿರಿಯ ನಾಮಗಳು*

ಈ ಪರ್ವತಕ್ಕೆ ಯುಗಭೇದ ನಿಮಿತ್ತಭೇದಗಳಿಂದ ಅನೇಕ ಹೆಸರು ಗಳಿರುವವು. ಈ ಪರ್ವತದಲ್ಲಿ ಅಂಜನೆಯು ತಪಸ್ಸನ್ನಾಚರಿಸಿ ಆಂಜನೇಯನೆಂಬ ಮಗನನ್ನು ಪಡೆದಿದ್ದರಿಂದ ಅಂಜನಾದ್ರಿಯೆಂದೂ, ಧರ್ಮರಾಜನಾದ ಯಮನು ಧರ್ಮಾಭಿವೃದ್ಧ್ಯರ್ಥವಾಗಿ ಈ ಪರ್ವತದಲ್ಲಿ ತಪಸ್ಸನ್ನಾಚರಿಸಿ ವರವನ್ನು ಪಡೆದಿದ್ದರಿಂದ ವೃಷಾದ್ರಿಯೆಂದೂ, ಭಗವತ್ಸೇವಾರ್ಥವಾಗಿ ಶೇಷದೇವರು ಪರ್ವತವನ್ನಾವರಿಸಿ ಇರುವದರಿಂದ ಶೇಷಾಚಲವೆಂದೂ, ಭಗವತ್ಕ್ರೀಡಾರ್ಥ ವಾಗಿ ವೈಕುಂಠದಿಂದ

---

1. 1.19. **ಬ್ರಹ್ಮಣಾಽಪಿ** = ಬ್ರಹ್ಮಾ ಬೃಹಸ್ಪತಿಃ । `ಬೃಹಸ್ಪತಿಃ ಪುರೋಧಾ ಚ ಬ್ರಹ್ಮಾ ಚ ಬ್ರಹ್ಮಣಸ್ಪತಿಃ' ಎಂಬ ತೃತೀಯತಾತ್ಪರ್ಯ ನಿರ್ಣಯೋಕ್ತ್ಯನುಸಾರವಾಗಿ ಇಲ್ಲಿ ಬ್ರಹ್ಮನೆಂದರೆ ಚತುರ್ಮುಖನೆಂದಲ್ಲ; ಚತುರ್ಮುಖ ಬ್ರಹ್ಮನಿಗೆ ಈಶಾನುಗ್ರಹವಿಶೇಷಬಲದಿಂದ ಈ ಜಗತ್ತಿನಲ್ಲಿ ತಿಳಿಯದಿರುವದು ಯಾವದೂ ಇರುವದಿಲ್ಲವಾದ್ದರಿಂದ ಬ್ರಹ್ಮನೆಂದರೆ ಬೃಹಸ್ಪತಿ ಯೆಂದರ್ಥವನ್ನು ಮಾಡಬೇಕು. ಅಥವಾ, ನ ಹಿ ನಿಂದಾನ್ಯಾಯದಿಂದ ಇಲ್ಲಿ ಬ್ರಹ್ಮಣಾಪಿ ಎಂಬ ಉಕ್ತಿಯಿರುವದೆಂದು ತಿಳಿಯಬೇಕು.

2. `ಅಂಜನಾ ಚ ತಪಃ ಕೃತ್ವಾ ಹನೂಮಂತಮಜೀಜನತ್ । ಯಸ್ಮಾತ್ ಪುತ್ರಮಸೂತಾಸೌ ಜಗುಸ್ತಸ್ಮಾದಿಮಂ

**ಆನಂದಾದ್ರಿಶ್ಚ ನೀಲಾದ್ರಿಃ[10] ಸುಮೇರುಶಿಖರಾಚಲಃ ॥**
**ವೈಕುಂಠಾದ್ರಿಃ[11] ಪುಷ್ಕರಾದ್ರಿ[12]ರಿತಿ ನಾಮಾನಿ ವಿಂಶತಿಃ ॥22॥**

**ಬ್ರಾಹ್ಮಣಃ ಕ್ಷತ್ರಿಯೊ ವೈಶ್ಯಃ ಶೂದ್ರಶ್ಚೇತರಜಾತಯಃ ।**
**ತನ್ನಾಮಾನಿ ಪಠೇಯುರ್ಯೇ ಮುಚ್ಯಂತೇತೇಽಘಬಂಧನಾತ್ ॥23॥**

**ವೇಂಕಟಾದ್ರಿಸಮಂ ಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ ।**
**ವೇಂಕಟೇಶಸಮೋ ದೇವೋ ನ ಭೂತೋ ನ ಭವಿಷ್ಯತಿ ॥24॥**

ವರಾಹನ ಆಜ್ಞಾನುಸಾರವಾಗಿ ಗರುಡನು ಇದನ್ನು ಭೂಮಿಗೆ ತಂದಿರುವದರಿಂದ ಗರುಡಾಚಲವೆಂದೂ, ಸರ್ವತೀರ್ಥಗಳಿಂದ ಆವೃತವಾಗಿರುವದರಿಂದ ತೀರ್ಥಾಚಲವೆಂದೂ, ದೇವತೆಗಳನ್ನು ಅನುಗ್ರಹಿಸಲು ಲಕ್ಷ್ಮೀಪತಿಯಾದ ನಾರಾಯಣನು ಇಲ್ಲಿ ನೆಲೆನಿಂತಿರುವದರಿಂದ ಶ್ರೀನಿವಾಸಾದ್ರಿಯೆಂದೂ, ಮನಸ್ಸಿನಲ್ಲಿ ಬಯಸಿದ್ದೆಲ್ಲವನ್ನೂ ಒದಗಿಸಿಕೊಡುವದರಿಂದ ಚಿಂತಾಮಣಿಗಿರಿ, ವೃಷಭಾಸುರನನ್ನು ಅನುಗ್ರಹಿಸಿದ್ದರಿಂದ ವೃಷಭಾಚಲವೆಂದೂ, ವರಾಹನ ಕ್ಷೇತ್ರವಾಗಿರುವದರಿಂದ ವರಾಹಗಿರಿ ಎಂದೂ, ಜ್ಞಾನಪ್ರದಾಯಕವಾದ್ದರಿಂದ ಜ್ಞಾನಾಚಲವೆಂದೂ, ಸುವರ್ಣಮಯವಾದ್ದರಿಂದ ಕನಕಾಚಲವೆಂದೂ, ವೈಕುಂಠದಿಂದ ಭಗವತ್ಕ್ರೀಡಾರ್ಥವಾಗಿ ಬಂದಿರುವದಿಂದ ಈ ಪರ್ವತವನ್ನು ದೇವತೆಗಳು ಆನಂದ ಪರ್ವತವೆಂದೂ, ನೀಲನೆಂಬ ಕಪಿಯು ಭಗವತ್ಸೇವಾರ್ಥವಾಗಿ ಈ ಪರ್ವತದಲ್ಲಿ ವಾಸವಾಗಿರುವದರಿಂದ ನೀಲಾದ್ರಿಯೆಂದೂ, ಮೇರುಪುತ್ರನಾಗಿರುವದರಿಂದ ಸುಮೇರುಶಿಖರಾಚಲ ವೆಂದೂ, ವೈಕುಂಠದಿಂದ ಬಂದಿರುವದರಿಂದ ವೈಕುಂಠಗಿರಿಯೆಂದೂ, ಇಲ್ಲಿಯ ಪುಷ್ಕರಿಣಿಗಳಲ್ಲಿ ವಿಪುಲವಾದ ಕಮಲಗಳಿರುವದರಿಂದ ಪುಷ್ಕರಾದ್ರಿಯೆಂದೂ ನಾನಾ ಕಾರಣಗಳಿಂದಾಗಿ ನಾನಾ ಹೆಸರುಗಳು ಈ ಪರ್ವತಕ್ಕಿರುವವು. (22) ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೇ ಆಗಿರಲಿ ಅಥವಾ ಬೇರೆ ಜಾತಿಯವರೇ ಆಗಲಿ ಈ ಪರ್ವತದ ನಾಮಗಳನ್ನು ಪಠಿಸಿದರೆ ಸಾಕು ತಮ್ಮ ಎಲ್ಲ ಪಾಪಗಳಿಂದ ಮೋಚನೆಯನ್ನು

ಗಿರಿಮ್ | **ಅಂಜನಾದ್ರಿಂ**......' 3. 'ಗಿರಾವಸ್ಮಿನ್ ತಪಸ್ತೇಪೇ ಧರ್ಮೋ*ಪಿ ಸ್ವಾಭಿವೃದ್ಧಯೇ | ತಸ್ಮಾದಾಹು-**ರ್ವೃಷಾದ್ರಿಂ** ತಂ....', 4. `ಸರ್ವತೀರ್ಥಮಯತ್ವಾಚ್ಚ **ತೀರ್ಥಾದ್ರಿಂ** ಪ್ರಾಹುರುತ್ತಮಾಃ', 5. `ಯತಃ ಕದಾಚಿದ್ದೇವಾನಾಂ ಶ್ರೀನಿವಾಸ ಇಹಾಬಭೌ | **ಶ್ರೀನಿವಾಸಗಿರಿಂ** ಪ್ರಾಹುಸ್ತಸ್ಮಾದೇನಂ ದಿವೌಕಸಃ || 6. ಚಿಂತಿತಸ್ಯ ಚ ಸಿದ್ಧ್ಯಾ ತು **ಚಿಂತಾಮಣಿಮಿಮಂ** ವಿದುಃ' 7.'... **ವರಾಹಾದ್ರಿ**ರ್ವರಾಹಕ್ಷೇತ್ರಲಕ್ಷ್ಮತಃ | 8`ಕೇಚಿತ್ ಜ್ಞಾನಪ್ರದತ್ವಾಚ್ಚ **ಜ್ಞಾನಾದ್ರಿರಿತಿ** ತಂ ವಿದುಃ' 9. ಶಾತಕುಂಭಸ್ವರೂಪತ್ವಾತ್ **ಕನಕಾದ್ರಿಂ** ಚ ತಂ ವಿದುಃ' 10. ನೀಲಸ್ಯ ವಾನರೇಂದ್ರಸ್ಯ ಯಸ್ಮಾನ್ನಿತ್ಯಮವಸ್ಥಿತಿಃ | **ತಸ್ಮಾನ್ನೀಲಗಿರಿಂ** ನಾಮ್ನಾ ವದಂತ್ಯೇನಂ ಮಹರ್ಷಯಃ ||' 11. ಪುಷ್ಕರಾಣಾಂ ಚ ಬಾಹುಲ್ಯಾದ್ಗಿರಾವಸ್ಮಿನ್ ಸರಸ್ಸು ವೈ | **ಪುಷ್ಕರಾದ್ರಿಂ** ಪ್ರಶಂಸಂತಿ ಮುನಯಸ್ತತ್ತ್ವದರ್ಶಿನಃ ||' 12. `ವೈಕುಂಠಾದಾಗತತ್ವೇನ **ವೈಕುಂಠಾದ್ರಿ**ರಿತಿ ಸ್ಮೃತಃ |'

ತಸ್ಮಿನ್ ಬಹೂನಿ ತೀರ್ಥಾನಿ ಸುರಸಿದ್ಧನಿಷೇವಿತೇ ।
ರಮ್ಯಾಣಿ ಸಂತಿ ಶತಶಃ ಸರ್ವಾಘೌಘಹರಾಣ್ಯಪಿ ॥25॥

ಸರ್ವತೀರ್ಥಾತಿಶಯೀನಿ ಸರ್ವಾಶ್ಚರ್ಯಕರಾಣಿ ಚ ।
ಸರ್ವಸಿದ್ಧ್ಯನುಕಾರೀಣಿ ಸರ್ವಮಂಗಲದಾನ್ಯಪಿ ॥26॥

ಸ್ವಾಮಿಪುಷ್ಕರಿಣೀ ನಾಮ ಸರಸೀ ರಾಜತೇ ಶುಭಾ ।
ಯಸ್ಯಾಸ್ತೀರೇಽರವಿಂದಾಕ್ಷೋ ವಸತಿ ಪ್ರೀತಮಾನಸಃ ॥27॥

ಭೃಗುರುವಾಚ–

'ತಸ್ಮಿನ್ ಗಿರೌ ಶ್ರಿಯಾ ಸಾರ್ಧಂ ಹಿತ್ವಾ ವೈಕುಂಠಮುತ್ತಮಮ್ ।
ಕಿಮರ್ಥಂ ವಸತಿ ಬ್ರಹ್ಮನ್ ಸಾಕ್ಷಾನ್ನಾರಾಯಣಃ ಸ್ವಯಮ್' ॥28॥

ಶ್ರೀನಾರದ ಉವಾಚ–

'ಕಥಯಿಷ್ಯಾಮಿ ತೇ ಸರ್ವಂ ವೈಕುಂಠೋ ಯೇನ ಹೇತುನಾ ।
ತಸ್ಮಿನ್ ಗಿರಿವರೇ ರಮ್ಯೇ ಚಿರಮಾಸ್ತೇ ಶ್ರಿಯಾ ಸಹ ॥30॥

ಪಡೆಯುತ್ತಾರೆ. ಇಂತಹ ವೇಂಕಟಾಚಲಕ್ಕೆ ಸಮಾನವಾದ ಕ್ಷೇತ್ರವು ಬ್ರಹ್ಮಾಂಡದಲ್ಲಿ ಮತ್ತೊಂದು ಇರುವದಿಲ್ಲ. ವೇಂಕಟೇಶನಿಗೆ ಸಮಾನನಾದ ದೇವತೆಯೂ ಸಹ ಮತ್ತೊಬ್ಬನಿರುವದಿಲ್ಲ. (24) ಇಂತಹ ವೇಂಕಟಾದ್ರಿಯಲ್ಲಿ ದೇವತೆಗಳು ಸಿದ್ಧರು, ಋಷಿಮುನಿಗಳಿಂದ ಸೇವಿತವಾದ, ಸರ್ವಪಾಪ ಹಾರಕಗಳಾದ, ಅತ್ಯಂತ ಸುಂದರವಾದ, ಪುಣ್ಯಕರ ಜಲದಿಂದ ತುಂಬಿರುವ ನೂರಾರು ತೀರ್ಥಗಳು ಇರುವವು. (25) ಈ ಎಲ್ಲ ತೀರ್ಥಗಳಿಗಿಂತಲೂ ಶ್ರೇಷ್ಠವಾದ, ತನ್ನ ಪಾವಕಶಕ್ತಿಯಿಂದ ಎಲ್ಲರ ಆಶ್ಚರ್ಯಕ್ಕೆ ಕಾರಣವಾದ, ಎಲ್ಲ ವಿಧವಾದ ಜಪತಪಸ್ಸಿದ್ಧಿಗೆ ಕಾರಣವಾದ, ಅತ್ಯಂತ ಮಂಗಲ ದಾಯಕವಾದ ಸ್ವಾಮಿಪುಷ್ಕರಿಣಿಯೆಂಬ ತೀರ್ಥವು (ಸರೋವರವು) ಈ ಪರ್ವತದಲ್ಲಿ ವಿರಾಜಮಾನ ವಾಗಿರುವದು. ಇದರ ತೀರದಲ್ಲಿಯೇ ಸ್ವಾಮಿಯಾದ ಕಮಲನಯನನಾದ ಪರಮಾತ್ಮನು ಅತ್ಯಂತ ಸಂತೋಷದಿಂದ ಭಕ್ತಾನುಗ್ರಾಹಕನಾಗಿ ವಾಸವಾಗಿರುವನು (ಎಂದರೆ ಇದರ ಮಾಹಾತ್ಮ್ಯವನ್ನು ಹೇಳುವದೇನು)' ಎಂದು ನಾರದರು ನುಡಿದರು. (27) ಆಗ ಭೃಗುಮಹರ್ಷಿಗಳು 'ಹೇನಾರದರೇ! ಪರಮಾತ್ಮನೇ ಆದ ನಾರಾಯಣನು ಅಪ್ರಾಕೃತಧಾಮವಾದ ವೈಕುಂಠವನ್ನು ತೊರೆದು ಈ ವೇಂಕಟಾಚಲದಲ್ಲಿ ತಾನೇ ಬಂದು ಇರಲು ಕಾರಣವೇನು? ನನಗೆ ತಿಳಿಸಿರಿ' ಎಂದು ಕೇಳಿಕೊಂಡರು. ಆಗ ನಾರದರು ಉತ್ತರಿಸಿದರು–

*ಕ್ಷೀರಾಬ್ಧಿಶಾಯಿ ಭಗವಂತನ ವರ್ಣನೆ*

ನಾರಾಯಣಮಹಂ ದ್ರಷ್ಟುಂ ಕದಾಚಿತ್ಕ್ಷೀರಸಾಗರಮ್
ಗತವಾಂಸ್ತತ್ರ ಚಾದ್ರಾಕ್ಷಂ ಶ್ವೇತದ್ವೀಪಂ ಮಹೋಚ್ಛ್ರಿತಮ್ ॥31॥

ತತ್ರ ಕಲ್ಪದ್ರುಮವನೇ ಶಾತಕುಂಭಮಯಂ ಗೃಹಮ್ ।
ನಾನಾರತ್ನಸಮಾಕೀರ್ಣಮನೇಕಸ್ತಂಭಶೋಭಿತಮ್ ॥32॥

ಸಹಸ್ರಾರ್ಕಪ್ರತೀಕಾಶಂ ದೀಪ್ಯಮಾನಮಿವ ಶ್ರಿಯಾ ।
ದುಷ್ಪ್ರಾಪಮಮರೇಂದ್ರೈಶ್ಚ ಸುಪ್ರಾಪಂ ಕೃತಭಕ್ತಿಭಿಃ ॥33॥

ತತ್ರಾಪಶ್ಯಂ ಸಭಾಂ ದಿವ್ಯಾಂ ದೇವದೇವಸ್ಯ ಶಾಂರ್ಙ್ಗಿಣಃ ।
ಅನಂತವಿಹಗಾಧೀಶಸೇನಾನ್ಯಾದ್ಯೈರಧಿಷ್ಠಿತಮ್ ॥34॥

ತತ್ರಾಪಶ್ಯಂ ಹೃಷೀಕೇಶಂ ಸರ್ವಲೋಕೈಕಕಾರಣಮ್ ।
ಸರ್ವಾಶ್ಚರ್ಯಮಯಂ ದೇವಂ ಶಯಾನಂ ಶೇಷತಲ್ಪಕೇ ॥35॥

ದ್ವಿಲಕ್ಷಯೋಜನೋಪೇತವಿಗ್ರಹಂ ಕಾಮರೂಪಿಣಮ್ ।
ರಜತಾಚಲಸಂಲೀನನೀಲಜೀಮೂತಸನ್ನಿಭಮ್ ॥36॥

ಶ್ರೀಮನ್ನಾರಾಯಣನು ಯಾವ ಕಾರಣದಿಂದ ವೈಕುಂಠವನ್ನು ಬಿಟ್ಟು ರಮ್ಯವಾದ ಈ ಶಿಖರಶ್ರೇಷ್ಠದಲ್ಲಿ ಲಕ್ಷ್ಮೀಸಹಿತನಾಗಿ ಬಹುಕಾಲ ಏಕೆ ವಾಸಮಾಡಿದನೆಂಬುದನ್ನು ನಿಮಗೆ ಹೇಳುತ್ತೇನೆ. (30)

ಒಂದು ಬಾರಿ ನಾರಾಯಣನ ದರ್ಶನಕ್ಕಾಗಿ ನಾನು ಕ್ಷೀರಸಮುದ್ರಕ್ಕೆ ಹೋಗಿದ್ದೆನು. ಅಲ್ಲಿ ಅತ್ಯಂತ ಪ್ರಕಾಶಮಾನವಾದ, ಶ್ವೇತದ್ವೀಪವನ್ನು ನೋಡಿದೆನು. (31) ಶ್ವೇತದ್ವೀಪದ ಕಲ್ಪದ್ರುಮವನದಲ್ಲಿ ಸುವರ್ಣನಿರ್ಮಿತವಾದ ಬಹುವಿಧವಾದ ವಜ್ರ–ವೈಡೂರ್ಯ ರತ್ನಗಳಿಂದ ನಿರ್ಮಿತವಾದ, ಅನೇಕಸ್ತಂಭಗಳಿಂದ ಶೋಭಿತವಾದ, (32) ಸಹಸ್ರಾರು ದೇದೀಪ್ಯ ಮಾನವಾದ ಸೂರ್ಯರ ಪ್ರಕಾಶಕ್ಕಿಂತಲೂ ಅಧಿಕಕಾಂತಿಯಿಂದ ಶೋಭಿತವೂ, ಅಮರೇಂದ್ರ (ದೇವತಾಶ್ರೇಷ್ಠ)ರಿಂದಲೂ ದುಷ್ಪ್ರಾಪ್ಯವಾದ ಆದರೆ ಭಕ್ತಿಯುಕ್ತರಾದ ವ್ಯಕ್ತಿಗಳಿಂದ ಹೊಂದಲು ಸುಲಭವಾದ (33) ದಿವ್ಯವಾದ ದೇವದೇವೋತ್ತಮನಾದ ಶಾಂರ್ಗಪಾಣಿಯ ದಿವ್ಯವಾದ ಸಭಾಮಂದಿರವನ್ನು ನೋಡಿದೆನು. ಶೇಷ, ಗರುಡ, ರುದ್ರ, ಷಣ್ಮುಖ ಮುಂತಾದ ಭಗವತ್ಸೇವಾತತ್ಪರರಾದ ದೇವತೆಗಳಿಂದ ಈ ಸಭೆಯು ಅಧಿಷ್ಠಿತವಾಗಿತ್ತು. (34)

*ಪರಮಾತ್ಮನ ಸೌಂದರ್ಯ*

ಸಮಸ್ತ ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ ಮತ್ತು

ಪುಂಡರೀಕವಿಶಾಲಾಕ್ಷಂ ಪುರಾಣಪುರುಷಂ ಶುಭಮ್ ।
ತಥಾ ಸರ್ವಾವಿನೀತಾನಾಂ ಶಾಸಿತಾರಂ ಸುರೋತ್ತಮಮ್ ॥37॥

ಸಂವಾಹ್ಯಮಾನಚರಣಂ ಶ್ರಿಯಾ ಭೂಮ್ಯಾ ಚ ಸಾದರಮ್ ।
ಶ್ರೀವತ್ಸಾಂಕಮುದಾರಾಂಗಂ ಶತಪತ್ರನಿಭಾನನಮ್ ॥38॥

ಯುಗಪನ್ನಿರ್ಗತಾದಿತ್ಯಸಹಸ್ರಸದೃಶದ್ಯುತಿಮ್ ।
ಶಂಖಚಕ್ರಧರಂ ದೇವಂ ಜ್ವಲಚ್ಚಂಚಲಕುಂಡಲಮ್ ॥39॥

ವೈಜಯಂತ್ಯಾ ಚ ವಿಪುಲೇ ವಿಭೂಷಿತಮುರಃಸ್ಥಲೇ ।
ಸೌದಾಮಿನೀಶತಾಧಿಕ್ಯಜ್ವಲತ್ಪೀತಾಂಬರೋಜ್ಜ್ವಲಮ್ ॥40॥

ಲಾವಣ್ಯಾಮೃತಸಂದೋಹಂ ಭವಸಂತಾಪನಾಶಕಮ್ ।
ಯುಗಾಂತಾರ್ಕಸಹಸ್ರಾಭಮುಕುಟೋಜ್ಜ್ವಲಮ್ ॥41॥

ಕರ್ಣಭೂಷೋಜ್ಜ್ವಲಂ ದೀಪ್ತಂ ಕಂಠಿಕೊದ್ಯೋತಿಕೌಸ್ತುಭಮ್ ।
ಅರ್ಕಾಭಮಣಿರತ್ನಾದ್ಯೈರ್ಜ್ವಲಚ್ಚಂಚಲಕುಂಡಲಮ್ ॥42॥

ಮೋಕ್ಷಗಳಿಗೆ ಮುಖ್ಯಕಾರಣನಾದ ಹೃಷೀಕೇಶನನ್ನು ಅಲ್ಲಿ ನೋಡಿದೆನು. ಸರ್ವಾಶ್ಚರ್ಯಮಯನಾದ ದೇವದೇವೋತ್ತಮನು ಶೇಷನ ಹಾಸಿಗೆಯಲ್ಲಿ ಪವಡಿಸಿದ್ದನು. (35) ಕಾಮರೂಪಿಯಾದ (ಇಚ್ಛಾಮಾತ್ರ ಪರಿಗೃಹೀತವಾದ) ಎರಡು ಲಕ್ಷ ಯೋಜನೋಪೇತವಾದ ವಿಗ್ರಹವು (ಶರೀರವು) ಅವನದಾಗಿತ್ತು. ರಜತಾಚಲದಲ್ಲಿ ಹರಡಿಕೊಂಡಿರುವ ನೀಲ ಮೇಘದಂತೆ ಕಾಂತಿಯುಳ್ಳದ್ದು ಅವನ ಶರೀರ. (36) ಕಮಲದಂತೆ ಆಯತವಾದ ನೇತ್ರಗಳನ್ನು ಹೊಂದಿದ, ಪುಣ್ಯಕರನಾದ. ಅತ್ಯಂತ ಪ್ರಾಚೀನನಾದ, ಪುರಾಣಪ್ರತಿಪಾದ್ಯನಾದ, ಅವಿನೀತರಾದ ದುಷ್ಟ ಜನರಿಗೆ ಶಾಸಕನೂ, ದೇವೋತ್ತಮನೂ, (37) ಶ್ರೀಭೂದೇವಿಯರಿಂದ ಆದರ ಪುರಸ್ಸರವಾಗಿ ಪಾದಸಂವಹನಾದಿ ಸೇವೆಗಳಿಂದ ಸೇವಿತನೂ, ಶ್ರೀವತ್ಸಾಂಕ ಶೋಭಿತಾಂಗನೂ, ಕಮಲದಂತೆ ಕಾಂತಿಯುಕ್ತವಾದ ಮುಖವನ್ನು ಹೊಂದಿದವನೂ (38) ಏಕಕಾಲಕ್ಕೆ ಹೊರಬರುತ್ತಿರುವ ಸಹಸ್ರಾರು ಸೂರ್ಯರ ಪ್ರಕಾಶವನ್ನು ಮೀರಿಸುವ ಪ್ರಕಾಶವುಳ್ಳವನೂ, ಶಂಖ-ಚಕ್ರಗಳನ್ನು ಧಾರಣಮಾಡಿದವನೂ, ಝುಗಮಗಿಸಿ ಮಿನುಗುತ್ತಿರುವ ಮಕರ ಕುಂಡಲಗಳಿಂದ ಯುಕ್ತವಾಗಿರುವನೂ, (39) ವಿಸ್ತಾರವಾದ ಉರಃಸ್ಥಲವನ್ನು ಸ್ಪರ್ಶಿಸುವ ವೈಜಯಂತಿ ಮಾಲೆಯನ್ನು ಧರಿಸಿದವನೂ, ನೂರಾರು ಮಿಂಚಿನ ಕಾಂತಿಯನ್ನು ಮೀರಿಸುವ ಕಾಂತಿಯನ್ನು ಹೊಂದಿದ ಪೀತಾಂಬರವನ್ನು ಧರಿಸಿದವನೂ ಆದ, (40) ಲಾವಣ್ಯವೆಂಬ ಅಮೃತದ ಘನದಂತಿರುವ, ದರ್ಶನಮಾತ್ರದಿಂದ ಸಂಸಾರದ

ಪ್ರತ್ಯುಜ್ಜ್ವಲಿತಹಾರಂ ಚ ವನಮಾಲಾ[13]ವಿಭೂಷಿತಮ್ ।
ಸ್ಫುರತಾ ಬ್ರಹ್ಮಸೂತ್ರೇಣ ಪ್ರೋದ್ಭಾಸಿತಭುಜಾಂತರಮ್ ॥43॥

ಅನೇಕಸೂರ್ಯಸಂಕಾಶಕೇಯೂರಮಣಿಕಾಂತಿಕಮ್ ।
ಮಣಿಕಾಂಚನಮುಕ್ತಾಢ್ಯೈಃ ಕಟಕೈರುಪಶೋಭಿತಮ್ ॥44॥

ಅಂಗುಲ್ಯಾಭರಣೈಃ ಸರ್ವೈರ್ನವರತ್ನೈರಲಂಕೃತಮ್ ।
ಕರ್ಪೂರಗಂಧಿತಾಸ್ಯಾಬ್ಜಂ ಸುರಕ್ತಾಧರಪಲ್ಲವಮ್ ॥45॥

ತಡಿಚ್ಛತಸಹಸ್ರಾಭಪೀತನಿರ್ಮಲವಾಸಸಮ್ ।
ನೂಪುರೈಃ ಕಟಿಸೂತ್ರೇಣ ತಡಿನ್ಮಾಲಾಂಬುದೋಪಮಮ್ ॥46॥

ಬಾಲಸೂರ್ಯಸಹಸ್ರಾಭನಾಭಿಪಂಕಜಮದ್ಭುತಮ್ ।
ಮಾರ್ಕಂಡೇಯಭರದ್ವಾಜಪುಂಡರೀಕಶುಕಾದಿಭಿಃ ॥47॥

ಯಾಜ್ಞವಲ್ಕ್ಯಾಂಬರೀಷಾದ್ಯೈರನ್ಯೈಶ್ಚ ಮುನಿಪುಂಗವೈಃ ।
ಚತುರ್ಭುಜೈಃ ಸ್ವಸದೃಶೈಃ ಶಂಖಚಕ್ರಗದಾಧರೈಃ ॥48॥

ಖೇದವನ್ನು ಹರಣ ಮಾಡುವ, ಪ್ರಳಯಕಾಲದಲ್ಲಿರುವ ಸೂರ್ಯನಿಗಿಂತಲೂ ಮಿಗಿಲಾದ ತೇಜಸ್ಸಿನಿಂದ ಕೂಡಿದ ಮುಕುಟವನ್ನು ಧಾರಣಮಾಡಿದ (41) ಉಜ್ಜ್ವಲವಾದ ಕರ್ಣಾಭರಣಗಳನ್ನು ಧರಿಸಿದ, ಕಂಠವನ್ನಾಶ್ರಯಿಸಿ ಹೊಳೆಯುತ್ತಿರುವ ಪ್ರಕಾಶಮಾನವಾದ ಕೌಸ್ತುಭಮಣಿಯಿಂದ ಶೋಭಾಯ ಮಾನನಾದ, ಸೂರ್ಯನಂತೆ ತೇಜಸ್ಸಿನಿಂದ ಕೂಡಿದ ಮಣಿಗಳು, ರತ್ನಗಳು, ಇವುಗಳಿಂದ ಉಪೇತವಾಗಿ ಹೊಳೆಯುತ್ತಿರುವ ಮತ್ತು ಮೆಲ್ಲನೆ ಚಲಿಸುವ ಕರ್ಣಕುಂಡಲಗಳಿಂದ ಉಪೇತನಾದ, (42) ಅಗ್ನಿಯಂತೆ ಹೊಳೆಯುವ ಹಾರವನ್ನು ಧರಿಸಿದ, ವನಮಾಲೆಯಿಂದ ಅಲಂಕೃತನಾದ, ಹೊಳೆಯುವ ಯಜ್ಞೋಪವೀತದಿಂದಲಂಕೃತವಾದ ಬಾಹುಗಳ ಮಧ್ಯಭಾಗವುಳ್ಳ, (43) ಅನೇಕ ಸೂರ್ಯರ ಕಾಂತಿಯನ್ನು ಹೋಲುವ ಮಣಿಗಳಿಂದ ಕೂಡಿದ ಕೇಯೂರಗಳನ್ನು ಧರಿಸಿದ, ನಾನಾವಿಧವಾದ ಮಣಿಗಳು, ಸುಂದರವಾದ ಮುತ್ತುಗಳು, ಇವುಗಳಿಂದ ಅತ್ಯಂತ ಸುಂದರವಾಗಿ ಅಲಂಕರಿಸಲ್ಪಟ್ಟ ಬಂಗಾರದ ಕಡಗವನ್ನು ಧಾರಣಮಾಡಿದ, (44) ನವರತ್ನಗಳಿಂದ ಮಾಡಲ್ಪಟ್ಟ ಆಭರಣಗಳಿಂದ, ಉಂಗುರಗಳಿಂದ ಅಲಂಕೃತನಾದ, ಕರ್ಪೂರದಂತೆ ಸುಂದರವಾದ ಮತ್ತು ಸುಗಂಧಿತವಾದ ಮುಖ ಕಮಲವನ್ನು ಹೊಂದಿದ, ಅತ್ಯಂತ ಕೆಂಪಾದ ಚಿಗುರಿನಂತಿರುವ

13. **ವನಮಾಲಾ-** ಆಜಾನುಲಂಬಿನೀ ಮಾಲಾ ಸರ್ವರ್ತುಕುಸುಮೋಜ್ಜ್ವಲಾ । ಮಧ್ಯೇ ಸ್ಥೂಲಕದಂಬಾಢ್ಯಾ ವನಮಾಲೇತಿ ಕೀರ್ತಿತಾ -

ಪ್ರಹ್ಲಾದಪ್ರಮುಖೈರ್ಭಕ್ತೈಃ ಸ್ತೂಯಮಾನಮನೇಕಶಃ ।
ಸನಂದಸನಕಾದ್ಯೈಶ್ಚ ಯೋಗಿಮುಖ್ಯೈರಭಿಷ್ಟುತಮ್ ॥49॥

ಭುಕ್ತಿಮುಕ್ತಿಪ್ರದಂ ನೃಣಾಂ ಸರ್ವಾಭೀಷ್ಟಪ್ರದಾಯಿನಮ್ ।
ಸೇವಿತಂ ವಿಧಿರುದ್ರಾದ್ಯೈರ್ದಿಕ್ಪಾಲೈಶ್ಚ ಭಯಾನ್ವಿತೈಃ ॥50॥

ಪ್ರಣಮ್ಯ ಶಿರಸಾ ದೇವಂ ಸ್ತುತ್ವಾ ಸ್ತುತಿಭಿರೀಶ್ವರಮ್ ।
ಭಕ್ತ್ಯಾ ಚಾವನತೊ ಭೂತ್ವಾ ಕೃತಾಂಜಲಿರಹಂ ಸ್ಥಿತಃ ॥51॥

ಸ್ವಾಗತಂ ಚೈವ ಪೃಷ್ಟ್ವಾ ಮಾಂ ಬಹು ಮೇನೇ ಗದಾಧರಃ ।
ದೇವದೇವೋಽಥ ಮಾಂ ವೀಕ್ಷ್ಯ ಪೌತ್ರಸ್ನೇಹಾತಿಶಕ್ತಿತಃ ॥52॥

ವೀಕ್ಷಣೈಃ ಹ್ಲಾದಯನ್ನಿತ್ಯಂ ಬಭಾಷೇ ಮಧುಸೂದನಃ ।

ಶ್ರೀಭಗವಾನುವಾಚ–

ತುಟಿ ಗಳಿಂದ ಸುಂದರನಾಗಿ ಕಾಣುವ, (45) ಸಾವಿರಾರು ಮಿಂಚಿನ ಕಾಂತಿ ಯನ್ನು ಧಿಕ್ಕರಿಸುವ ಶುಭ್ರವಾದ ಪೀತಾಂಬರವನ್ನು ಧರಿಸಿರುವ, ಗೆಜ್ಜೆ, ಉಡುದಾರ ಇವುಗಳಿಂದ ಅಲಂಕೃತನಾಗಿ ಮಿಂಚಿನಿಂದ ಸುತ್ತುವರೆಯಲ್ಪಟ್ಟ ಕೃಷ್ಣಮೇಘದ ಕಾಂತಿಯನ್ನು ಹೋಲುತ್ತಿರುವ, (46) ಉದಯಿಸುವ ಸೂರ್ಯನ ಸಮನಾದ ಕೆಂಪುವರ್ಣದಿಂದ ಕೂಡಿದ ನಾಭಿಪ್ರದೇಶವನ್ನು ಹೊಂದಿದ, ಮಾರ್ಕಾಂಡೇಯ, ಭರದ್ವಾಜ, ಪುಂಡರೀಕ,ಶುಕಾಚಾರ್ಯರು, (47) ಯಾಜ್ಞ್ಯವಲ್ಕ್ಯ ಅಂಬರೀಷರೇ ಮೊದಲಾದ ಮುನಿಶ್ರೇಷ್ಠರಿಂದ, ತನ್ನಂತೆಯೇ ಚತುರ್ಭುಜರಾಗಿ ಶಂಖ, ಚಕ್ರ ಗದಾ, ಪದ್ಮಗಳನ್ನು ಧಾರಣ ಮಾಡಿದ ಮುಕ್ತರಿಂದಲೂ ಸ್ತೂಯಮಾನನಾದ, ಪ್ರಹ್ಲಾದನೇ ಮೊದಲಾದ ಅಸಂಖ್ಯಾತಭಕ್ತರಿಂದಲೂ, ಸನಕಾದಿ ಯೋಗಿಶ್ರೇಷ್ಠರಿಂದಲೂ ಬಹುಪ್ರಕಾರ ಗಳಿಂದ ಅಭಿಷ್ಟುತನಾದ, ತನ್ನನ್ನು ಸೇವಿಸುವ ಜನರಿಗೆ ಭುಕ್ತಿ–ಮುಕ್ತಿ ಪ್ರದಾಯಕನಾದ, ಮನುಷ್ಯರಿಗೆ ಸರ್ವಾಭೀಷ್ಟಗಳನ್ನು ತಂದುಕೊಡುವ, ಬ್ರಹ್ಮರುದ್ರಾದಿ ದೇವತೆಗಳಿಂದ ಭಕ್ತಿಯಿಂದ ಸೇವೆಯನ್ನು ಮಾಡಿಸಿ ಕೊಳ್ಳಲ್ಪಟ್ಟ ಭಗವಂತನನ್ನು ನಾನು ನೋಡಿದೆನು. (48–50)

ಇಂತಹ ದೇವದೇವೋತ್ತಮನಾದ ನಾರಾಯಣನನ್ನು ಸ್ತುತಿಗಳಿಂದ ಸ್ತೋತ್ರ ಮಾಡಿ, ಭಕ್ತಿಯಿಂದ ತಲೆಬಾಗಿದವನಾಗಿ, ಶಿರಸ್ಸಿನಿಂದ ನಮಸ್ಕಾರವನ್ನು ಮಾಡಿ ಕೃತಾಂಜಲಿಪುಟನಾಗಿ ನಾನು ನಿಂತುಕೊಂಡೆನು. (51) ತಲೆಬಾಗಿದ ನನ್ನನ್ನು ಆದರಾಂತಃಕರಣಪೂರಿತ ವಚನಗಳಿಂದ ಅನುಗ್ರಹಿಸಿ ಪೌತ್ರಸ್ನೇಹದಿಂದ ಅತಿ ಶೀತಲವಾದ ವೀಕ್ಷಣಗಳಿಂದ ನನ್ನನ್ನು ಕೃಪಾದೃಷ್ಟಿಯಿಂದ ಆಹ್ಲಾದವನ್ನುಂಟು ಮಾಡುತ್ತಾ ಮಧುಸೂದನನು ಮಾತನಾಡಿದನು. (52–53)

'ನಾರದ ಶ್ರೂಯತಾಂ ವತ್ಸ ತ್ವಯಾ ದೃಷ್ಟಂ ಜಗತ್ತ್ರಯಮ್ ॥53॥

ಬ್ರಹ್ಮಾಂಡೇ ಕುತ್ರ ವಾ ವಾಸೋ ಮಮ ದೇಶೇ ಭವೇದಿಹ ।
ವಿಹಾರಯೋಗ್ಯಶ್ಚ ತಥಾ ವಿಶ್ರಾಮಸ್ಥಾನಮುತ್ತಮಮ್ ॥54॥

ಕಥಯ ತ್ವಂ ಮಹಾಭಾಗ ಯದ್ಯಸ್ತಿ ಭುವಿ ತಾದೃಶಮ್ ।

ಶ್ರೀ ನಾರದ ಉವಾಚ –

'ನ ತ್ವಯಾಽವಿದಿತಂ ಕಿಂಚಿತ್ತ್ರಿಷು ಲೋಕೇಷು ವಿದ್ಯತೇ ॥55॥

ತಥಾಽಪ್ಯಯಂ ತವ ಪ್ರಶ್ನೋ ಮಯಿ ಸ್ನೇಹವಶಾತ್ಪ್ರಭೋ ।
ತ್ವದ್ವಿಹಾರೋಚಿತಂ ಸ್ಥಾನಂ ರಮಣೀಯಂ ವಿಲೋಕ್ಯತೇ ॥56॥

ಆಶ್ಚರ್ಯಪ್ರಭವಂ ಸ್ಥಾನಂ ತತ್ಸಮಂ ನಾಸ್ತಿ ಭೂತಲೇ ।
ತವ ಪಾದಪ್ರಭೂತಾಯಾ ಗಂಗಾಯಾಶ್ಚೈವ ದಕ್ಷಿಣೇ ॥57॥

ದಿಗ್ಭಾಗೇ ದಂಡಕಾರಣ್ಯೇ ದ್ವಿಶತೈರ್ಯೋಜನೈರ್ಮಿತೇ ।
ದಕ್ಷಿಣಾಂಬುನಿಧೇಶ್ಚಾಪಿ ದಕ್ಷಿಣೇತರಭಾಗಕೇ ॥58॥

ಪೂರ್ವಾಬ್ಧೇಃ ಪಶ್ಚಿಮೇ ಭಾಗೇ ಪಂಚಭಿರ್ಯೋಜನೈರ್ಮಿತೇ ।
ರಮಣೀಯಮಿದಂ ಸ್ಥಾನಂ ಕ್ರೀಡಾಯೋಗ್ಯಂ ವಿಭೋ ತವ ॥59॥

'ಹೇ ನಾರದನೇ! ವತ್ಸನೇ! ಕೇಳು (ಶ್ರೂಯತಾಂ). ನಿನ್ನಿಂದ ಜಗತ್ತ್ರಯವು ನೋಡಲ್ಪಟ್ಟಿರುವದು. ಬ್ರಹ್ಮಾಂಡದಲ್ಲಿ ವಾಸಮಾಡಲು ಯೋಗ್ಯವಾದ ಸ್ಥಾನವು ಎಲ್ಲಿರುವದು? ಅದರಂತೆ ವಿಹಾರಯೋಗ್ಯವಾದ ಸ್ಥಾನ ಮತ್ತು ಉತ್ತಮ ವಿಶ್ರಾಮಸ್ಥಾನವಿದ್ದರೆ ನನಗೆ ತಿಳಿಸು' ಎಂದನು.

*ನಾರದಕೃತಭಗವತ್ಕ್ರೀಡಾರ್ಹದೇಶವರ್ಣನ*

ಆಗ ನಾರದರು 'ಸ್ವಾಮಿ! ಮೂರು ಲೋಕಗಳಲ್ಲಿ ನಿಮಗೆ ತಿಳಿಯದಿರುವದು ಯಾವದೂ ಇಲ್ಲ. (55) ಆದರೂ ಸಹ ನನ್ನಲ್ಲಿಯ ಸ್ನೇಹದಿಂದ ನನ್ನನ್ನು ಅನುಗ್ರಹಿಸುವದಕ್ಕಾಗಿ ಈ ಪ್ರಶ್ನೆಯನ್ನು ಮಾಡಿರುವಿರಿ. ನಿಮಗೆ ವಿಹಾರಕ್ಕೆ ಉಚಿತವಾದ ರಮಣೀಯ ಸ್ಥಾನವು ನಮ್ಮ ಭೂಲೋಕದಲ್ಲಿ ಕಾಣಿಸುತ್ತಿದೆ. ಆಶ್ಚರ್ಯವನ್ನುಂಟುಮಾಡುವ ಈ ಸ್ಥಾನವು ಭೂಲೋಕ ದಲ್ಲಿಯೇ ಇದ್ದರೂ ಸಹ ಅದಕ್ಕೆ ಸಮಾನವಾದದ್ದು ಬೇರೊಂದಿಲ್ಲ. ತಮ್ಮ ಪಾದೋದ್ಭವಳಾದ ಗಂಗೆಯ ದಕ್ಷಿಣ ದಿಗ್ಭಾಗದಲ್ಲಿ ದಂಡಕಾರಣ್ಯದ ಎರಡು ನೂರು ಯೋಜನೆಗಳ ದೂರದಲ್ಲಿ ದಕ್ಷಿಣ ಸಮುದ್ರದ ಉತ್ತರ ಭಾಗದಲ್ಲಿ, ಪೂರ್ವಸಮುದ್ರದ ಪಶ್ಚಿಮಭಾಗದಲ್ಲಿ ಐದು ಯೋಜನ ಗಳಿಂದ ಪರಿಮಿತವಾದ

ತತ್ರತ್ಯಾಶ್ಚ ಜನಾಃ ಸರ್ವೇ ತಪಃಸ್ವಾಧ್ಯಾಯವರ್ಜಿತಾಃ ।
ಆಧಿವ್ಯಾಧಿಹತಾಶ್ಚೈವ ಪಶ್ಯಂತಿ ಚರಣಂ ನ ಚ ॥60॥
ಅನುಗ್ರಹಾಯ ವೈ ತೇಷಾಂ ಸ್ಥಾತವ್ಯಂ ಭವತಾ ಹರೇ' ।

ಶ್ರೀಭಗವಾನುವಾಚ –

'ಚೋಲರಾಜಸುತಃ ಕಶ್ಚಿತ್ಕಲೌ ಖಲು ಭವಿಷ್ಯತಿ ॥61॥
ಚಕ್ರವರ್ತೀತಿ ಮದ್ಭಕ್ತಸ್ತತ್ರ ಮಾಮರ್ಚಯಿಷ್ಯತಿ ।
ಅನುಗ್ರಹಾಯ ತಸ್ಯಾಪಿ ತತ್ರ ಸ್ಥಾಸ್ಯಾಮ್ಯಹಂ ಮುನೇ' ॥62॥

ಇತಿ ಶ್ರೀಮದ್ಬ್ರಹ್ಮಾಂಡಪುರಾಣೇ ತೀರ್ಥಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಭಗವನ್ನಾರದಸಂವಾದೇ ಶ್ರೀವೇಂಕಟಾಚಲಮಹಿಮಾನುವರ್ಣನಂ ನಾಮ ಪ್ರಥಮೋಧ್ಯಾಯಃ

* * *

ರಮಣೀಯವಾದ ಈ ಸ್ಥಾನವು ತಮಗೆ ಕ್ರೀಡಾಯೋಗ್ಯವಾಗಿದೆ. (57–59) ಇಲ್ಲಿಯ ಸಮಸ್ತ ಜನರು ಪ್ರಾಯಶಃ ತಪಃಸ್ವಾಧ್ಯಾಯವರ್ಜತರಾಗಿರುವರು. ಆಧಿವ್ಯಾಧಿಗಳಿಂದ ಹತಪ್ರಾಯ ರಾಗಿರುವರು. ನಿಮ್ಮ ಚರಣವನ್ನೆಂದಿಗೂ ನೋಡದಿರುವರು. ಅಂತಹ ಮಂದಭಾಗ್ಯರ ಅನುಗ್ರಹಾರ್ಥವಾಗಿ, ಹೇ ಪರಮಾತ್ಮನೇ! ಅವಶ್ಯವಾಗಿ ತಾವು ಅಲ್ಲಿ ಬಂದು ವಾಸಮಾಡಬೇಕು' ಎಂದು ಪ್ರಾರ್ಥಿಸಿದರು.

ಇದಕ್ಕೆ ಭಗವಂತನು ಹೇಳುತ್ತಾನೆ– 'ಚೋಲರಾಜನ ಮಗನಾದ ಚಕ್ರವರ್ತಿಯೆಂಬ ರಾಜನು ಕಲಿಕಾಲದಲ್ಲಿ ಉತ್ಪನ್ನನಾಗುತ್ತಾನೆ. ಅವನು ನನ್ನ ಭಕ್ತನಾಗಿದ್ದು ನನ್ನನ್ನು ಯಾವಾಗಲೂ ಪೂಜಿಸುತ್ತಿರುತ್ತಾನೆ. ಅವನ ಅನುಗ್ರಹಕ್ಕಾಗಿಯೂ ಸಹ ನಾನು ನೀನು ಹೇಳುವ ಸ್ಥಾನದಲ್ಲಿಯೇ ಬಂದು ವಾಸಮಾಡುತ್ತೇನೆ' ಎಂದು ಅನುಗ್ರಹಿಸಿದನು.(61–62)

ಇಲ್ಲಿಗೆ ಬ್ರಹ್ಮಾಂಡ ಪುರಾಣದ ತೀರ್ಥ ಖಂಡದಲ್ಲಿಯ ಶ್ರೀವೇಂಕಟಾಚಲ ಮಾಹಾತ್ಮ್ಯದಲ್ಲಿ ಭೃಗುನಾರದ ಸಂವಾದದಲ್ಲಿ ವೇಂಕಟಾಚಲಮಹಿಮಾನುವರ್ಣನವೆಂಬ ಮೊದಲನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

ಬ್ರಹ್ಮಾಂಡಪುರಾಣಾಂತರ್ಗತವೇಂಕಟೇಶಮಾಹಾತ್ಮ್ಯೇ

## ಅಥ ದ್ವಿತೀಯೋಽಧ್ಯಾಯಃ

**ಅಥಾಹ ಭಗವಾನ್ ಶೇಷಮಾಹೂಯ ಪುರತಃ ಸ್ಥಿತಮ್ ।**
**ಮೇಘಗಂಭೀರಯಾ ವಾಚಾ ಹರ್ಷೋತ್ಫುಲ್ಲವಿಲೋಚನಃ ॥1॥**

**ಶ್ರೀಭಗವಾನುವಾಚ–**

**'ಅನಂತ ಮತ್ಪ್ರಿಯತಮೋ ಲೋಕೇ ನ ತ್ವದನ್ಯೋಽಸ್ತಿ ಕಶ್ಚನ ।**
**ತಸ್ಮಾನ್ಮಮ ಪ್ರಿಯಂ ಕಿಂಚಿತ್ಕರ್ತವ್ಯಂ ಭವತಾಽನಘ ॥2॥**

**ಶ್ರುತಂ ಹಿ ಭವತಾ ಸರ್ವಂ ನಾರದೋದೀರಿತಂ ವಚಃ ।**
**ಕ್ರೀಡಾಸಮುಚಿತೇ ದೇಶೇ ವಸ್ತವ್ಯಮಿತಿ ಮೇ ಮತಿಃ ॥3॥**

**ತತ್ರ ಭೂತ್ವಾ ಗಿರಿವರೋ ಭವಾನ್ ವಸತು ಭೂತಲೇ ।**
**ತ್ವತ್ಫಣಾಮಂಡಲಭುವಿ ಸ್ಥಾತವ್ಯಂ ರಮಯಾ ಸಹ' ॥4॥**

**ಶೇಷ ಉವಾಚ–**

**'ಅನಂತೋಽಹಂ ಮಹಾದೇವ ಸ್ಥಾಸ್ಯಾಮಿ ಗಿರಿರೂಪಧೃಕ್ ।**
**ಭವತಾ ರಮಯಾ ಸಾರ್ಧಂ ಮಮ ಸಾನುಷು ರಮ್ಯತಾಮ್ ॥5॥**

## ಎರಡನೆಯ ಅಧ್ಯಾಯ

*ಭಗವಂತನ ವಿಹಾರ ಭೂಮಿಯಾಗಿ ಶೇಷದೇವರು*

ಅನಂತರದಲ್ಲಿ ಭಗವಂತನು ಸಂತೋಷದಿಂದ ಅರಳಿದ ಕಣ್ಣುಗಳುಳ್ಳವನಾಗಿ ತನ್ನ ಮುಂಭಾಗದಲ್ಲಿರುವ ಶೇಷದೇವರನ್ನು ಕುರಿತು ಮೇಘಗಂಭೀರವಾದ ಧ್ವನಿಯಿಂದ ಮಾತನಾಡುತ್ತಾ (1)'ಹೇ ಶೇಷನೇ! ಈ ಲೋಕದಲ್ಲಿ ನಿನಗಿಂತಲೂ ಹೆಚ್ಚಿನ ಪ್ರಿಯರಾದವರು ನನಗೆ ಯಾರೂ ಇಲ್ಲ. ಅದ್ದರಿಂದ ನನಗೆ ಪ್ರಿಯಕರವಾದ ಒಂದು ಕಾರ್ಯವನ್ನು ನೀನು ಅವಶ್ಯವಾಗಿ ಮಾಡಬೇಕು. (2) ಇದುವರೆಗೂ ನಾರದರು ಹೇಳಿದ್ದೆಲ್ಲವನ್ನೂ ನೀನು ಕೇಳಿಸಿಕೊಂಡಿರುವಿ. ನನ್ನ ಕ್ರೀಡಾರ್ಥವಾಗಿ ಯೋಗ್ಯವಾದ ದೇಶದಲ್ಲಿ ವಾಸಮಾಡಬೇಕೆಂದು ನಾನು ನಿಶ್ಚಯಿಸಿದ್ದೇನೆ. (3) ಭೂತಲದಲ್ಲಿಯ ಆ ಪ್ರದೇಶಕ್ಕೆ ನೀನು ಹೋಗಿ ಅಲ್ಲಿ ವಾಸಮಾಡು. ಗಿರಿರೂಪನಾಗಿ ವಾಸಮಾಡಿರುವ ನಿನ್ನ

ಗಂಗಾದ್ಯಾಃ ಸರಿತಃ ಪುಣ್ಯಾಸ್ತೀರ್ಥಾನಿ ಚ ಸರಾಂಸಿ ಚ ।
ವಸಂತು ಸರ್ವದಾ ತತ್ರ ಮಮೋಪರಿ ತವಾಜ್ಞಯಾ ॥6॥

ಮಮೋಪರಿ ಪ್ರಭೂತಾನಾಂ ಜಂಗಮಸ್ಥಾವರಾತ್ಮಕಮ್ ।
ಯದ್ಯದಿಷ್ಟಂ ಹಿ ತತ್ಸರ್ವಂ ತವಾನುಗ್ರಹಹೇತುನಾ ॥7॥

ಅಸ್ತ್ವಿತಿ ಪ್ರಾರ್ಥಯಾಮಾಸ ಶೇಷಃ ಸರ್ವಹಿತಾಯ ವೈ ।

ಶ್ರೀಭಗವಾನುವಾಚ–

'ಸಿದ್ಧ್ಯತೇ ತ್ವಂ ಫಣೀಂದ್ರಾದ್ಯ ಭವತಾ ಯೋ ವರೋ ವೃತಃ ॥8॥

ತಪಾಂಸಿ ತತ್ರ ಸಿದ್ಧ್ಯಂತು ನಿರ್ವಿಘ್ನಾನಿ ತಪಸ್ವಿನಾಮ್ ।
ಅಹಂ ಹಿ ಸರ್ವಜಂತೂನಾಂ ದೃಷ್ಟಿಗೋಚರತಾಂ ಗತಃ ॥9॥

ಹೆಡೆಗಳಿಂದ ವ್ಯಾಪ್ತವಾದ ಪ್ರದೇಶದಲ್ಲಿ ರಮಾದೇವಿಯಿಂದ ಸಹಿತನಾಗಿ ನಾನು ವಾಸಮಾಡುತ್ತೇನೆ.' ಎಂದು ನುಡಿದನು. (4)

*ಪ್ರತ್ಯಕ್ಷವಾಗಿ ದೃಗ್ಗೋಚರನಾಗಿರಲು ಶೇಷನ ಪ್ರಾರ್ಥನೆ*

ಇದನ್ನು ಕೇಳಿದ ಶೇಷನು – 'ಹೇ ಸ್ವಾಮಿಯೇ! ನಾನು ಬೃಹದಾಕಾರವಾದ ಗಿರಿರೂಪವನ್ನು ಧಾರಣಮಾಡಿ ಭೂಲೋಕದಲ್ಲಿ ನಿಲ್ಲುತ್ತೇನೆ. ರಮಾದೇವಿಯಿಂದ ಸಹಿತನಾದ ನೀನು ನನ್ನ ಪರ್ವತದ ಕೋಡುಗಲ್ಲಿನಲ್ಲಿ ಕ್ರೀಡಿಸುವವನಾಗು. (5) ನಿನ್ನಿಂದ ಅನುಗ್ರಹವನ್ನು ಪಡೆಯುವದಕ್ಕಾಗಿ ನಿನ್ನ ಆಜ್ಞೆಯಂತೆ ಗಂಗಾದಿ ಸಮಸ್ತ ಪುಣ್ಯನದಿಗಳು, ಪವಿತ್ರವಾದ ತೀರ್ಥಗಳು, ಶ್ರೇಷ್ಠವಾದ ಸರೋವರಗಳು, ಯಾವಾಗಲೂ ನನ್ನ ಮೇಲ್ಭಾಗದಲ್ಲಿ ವಾಸವಾಗಿರಲಿ. (6) ಗಿರಿರೂಪನಾದ ನನ್ನ ಮೇಲೆ ಉತ್ಪನ್ನವಾದ ಜಂಗಮ–ಸ್ಥಾವರ ಸ್ವರೂಪರಾದವರಿಗೆ ಯಾವದು ಇಷ್ಟವಾಗಿದೆಯೋ ಅದೆಲ್ಲವೂ ಸಹ ನಿನ್ನ ಅನುಗ್ರಹದಿಂದ ಸಿದ್ಧವಾಗಲಿ' ಎಂದು ಸರ್ವಜನರ ಹಿತದಗೋಸ್ಕರವಾಗಿ ಶೇಷದೇವರು ಪ್ರಾರ್ಥಿಸಿದರು. (7)

*ಶೇಷದೇವರಿಗೆ ವರದಾನ*

ಅದಕ್ಕೆ ಭಗವಂತನು 'ಹೇ ಫಣಿರಾಜನೇ! ನೀನು ಇವತ್ತು ಯಾವ ವರವನ್ನು ಯಾಚನ ಮಾಡಿರುವೆಯೋ ಅದೆಲ್ಲವೂ ಹಾಗೆಯೇ ಸಿದ್ಧವಾಗಲಿ. (7–8) ತಪಸ್ವಿಗಳಿಗೆ ನಿರ್ವಿಘ್ನವಾಗಿ ತಪಸ್ಸಿದ್ಧಿಯಾಗಲಿ. ನಾನೂ ಸಹ ಎಲ್ಲ ಜಂತುಗಳಿಗೆ ಕಾಣಿಸುವವನಾಗಿ, ಲಕ್ಷ್ಮೀಸಹಿತನಾಗಿ ಆ ಪರ್ವತದಲ್ಲಿ ವಾಸಮಾಡಿ, ಜೀವರಾಶಿಗಳಿಗೆ ಅಭೀಷ್ಟಗಳನ್ನು ಪೂರೈಸುತ್ತೇನೆ' ಎಂದು ಅನುಗ್ರಹಿಸಿದನು. (8–9)

ವಸಿಷ್ಯಾಮಿ ಶ್ರಿಯಾ ಸಾರ್ಧಂ ದದದಿಷ್ಟಾನಿ ದೇಹಿನಾಮ್' ।
ಇತ್ಯುಕ್ತ್ವಾಽಥ ಶ್ರಿಯಂ ಪ್ರಾಹ ಭಗವಾನ್ ಪಾರ್ಶ್ವವರ್ತಿನೀಮ್ ॥10॥
ಭೂಮಿಂ ನೀಲಾಂ ತಥಾ ದೇವೀಂ ಪ್ರಸನ್ನವದನಾಂಬುಜಾಮ್ ।

ಶ್ರೀಭಗವಾನುವಾಚ–

'ಸಖೀಭಿಃ ಸಹಿತಾ ಯೂಯಂ ಸಮಾಗಚ್ಛತ ತತ್ರ ವೈ ॥11॥
ವಿಹಾರಯೋಗ್ಯೋ ದೇಶೋಽಯಂ ನಿರ್ದಿಷ್ಟೋ ಮುನಿನಾಽಮುನಾ ।
ಇತ್ಯುಕ್ತ್ವಾ ಭಗವಾನ್ ಪ್ರಾಹ ಸೇನಾಪತಿಮರಿಂದಮಮ್ ॥12॥
'ತ್ವದೀಯಾನುಚರೈಃ ಸಾರ್ಧಂ ಸರ್ವೈಃ ಪಾರಿಷದೈರ್ಯುತಃ ।
ಬ್ರಹ್ಮಾದ್ಯೈಸ್ತ್ರಿದಶೈಃ ಸಾರ್ಧಂ ಯಕ್ಷರಕ್ಷೋಗಣಾನ್ವಿತೈಃ ॥13॥
ಸಿದ್ಧವಿದ್ಯಾಧರೈಶ್ಚಾಪಿ ಕಿನ್ನರೈಶ್ಚ ಮಹೋರಗೈಃ ।
ಋಷಿಸಂಘೈರ್ಯುತಃ ಶೀಘ್ರಂ ಯಾಹಿ ಶೇಷಾಚಲಂ ಪ್ರತಿ ॥14॥
ವಸ್ತವ್ಯಂ ತತ್ರ ಹಿ ಮಯಾ ರಮಯಾ ಸಹಿತೇನ ವೈ ।
ಅನುಗ್ರಹಾಯ ಸಾಧೂನಾಂ ನಿತ್ಯಂ ಚ ಪ್ರಯತಾತ್ಮನಾಮ್ ॥15॥

*ಕ್ರೀಡಾಚಲಗಮನಾರ್ಥವಾಗಿ ಆಜ್ಞೆ*

ಈ ರೀತಿಯಾಗಿ ಮಾತನಾಡಿದ ಭಗವಂತನು ತನ್ನ ಪಕ್ಕದಲ್ಲಿಯೇ ಇರತಕ್ಕ ಪ್ರಸನ್ನ ಮುಖಿಯರಾದ ಶ್ರೀದೇವಿ–ಭೂದೇವಿ ಮತ್ತು ನೀಲಾದೇವಿಯರನ್ನು ಕುರಿತು – 'ಸಖಿಯರಿಂದ ಸಹಿತರಾದ ನೀವುಗಳು ನಾರದ ಮುನಿಯಿಂದ ನಮ್ಮ ವಿಹಾರಯೋಗ್ಯವೆಂದು ನಿರ್ದಿಷ್ಟವಾದ ಭೂಪ್ರದೇಶಕ್ಕೆ ಪ್ರಯಾಣವನ್ನು ಬೆಳೆಸಿರಿ' ಎಂದು ಆಜ್ಞೆಮಾಡಿದನು. (10–11) ಅನಂತರ ಭಗವಂತನು ಶತ್ರುನಾಶಕನಾದ ಸೇನಾಪತಿಯನ್ನು ಕುರಿತು 'ನಿನ್ನ ಅನುಚರರು, ಸೇವಕರು ಇವರಿಂದ ಸಹಿತನಾಗಿ, ಬ್ರಹ್ಮಾದಿದೇವತೆಗಳಿಂದ ಕೂಡಿಕೊಂಡು, ಯಕ್ಷ–ರಾಕ್ಷಸಗಣಗಳಿಂದ ಸಹಿತನಾಗಿ, ಸಿದ್ಧರು, ವಿದ್ಯಾಧರರು, ಕಿನ್ನರರು, ಮಹಾಸರ್ಪಗಳು ಮತ್ತು ಋಷಿಗಳ ಸಮೂಹಗಳಿಂದ ಕೂಡಿಕೊಂಡು ಶೀಘ್ರದಲ್ಲಿ ಶೇಷಾಚಲವನ್ನು ಕುರಿತು ಪ್ರಯಾಣಮಾಡುವವನಾಗು. (12–14) ನಿತ್ಯದಲ್ಲಿಯೂ ನನ್ನ ದರ್ಶನಕ್ಕಾಗಿ ಪ್ರಯತ್ನ ಪಡುತ್ತಿರುವ ಸಾಧುಗಳ ಅನುಗ್ರಹಾರ್ಥವಾಗಿ ಆ ಪ್ರದೇಶದಲ್ಲಿ ನಾನು ರಮಾದೇವಿಯಿಂದ ಸಹಿತನಾಗಿ ವಾಸಮಾಡುತ್ತೇನೆ. ನನ್ನೊಡನೆ ನೀನೂ ಸಹ ಅಲ್ಲಿ ವಾಸಮಾಡತಕ್ಕದ್ದು' ಎಂದು ಹೇಳಿ (15) ಭಗವಂತನು ಶ್ರೀದೇವಿ, ಭೂದೇವಿ ಮತ್ತು ನೀಲಾದೇವಿಯರಿಂದ ಸಹಿತನಾಗಿ ಗರುಡಾರೂಢನಾಗಿ ಶೇಷಾಚಲವನ್ನು ಕುರಿತು ಪ್ರಯಾಣ

ಇತ್ಯುಕ್ತ್ವಾ ಭಗವಾನ್ ದೇವಃ ಶ್ರಿಯಾ ಭೂಮ್ಯಾ ಚ ನೀಲಯಾ ।
ವಿನತಾಸುತಮಾರೂಢೋ ಯಯಾವಹಿಮಹೀಧರಮ್ ॥16॥

ಭೃಗುರುವಾಚ–

'ಶೇಷಃ ಕಥಂ ಗಿರಿವರೋ ಬಭೂವ ಸ ಮಹಾವಪುಃ ।
ಕುತ್ರ ಪುಚ್ಛಪ್ರದೇಶೋಽಸ್ಯ ಶಿರಃಪಕ್ಷಭುವೌ ತಥಾ' ॥17॥

ನಾರದ ಉವಾಚ–

ತಸ್ಯ ದಕ್ಷಿಣಕೈಲಾಸನಾಮಕಂ ಸ್ಥಾನಮುತ್ತಮಮ್ ।
ಕಾಲಹಸ್ತೀತಿ ವಿಖ್ಯಾತಂ ಶಿರೋದೇಶಃ ಪ್ರಕೀರ್ತಿತಃ ॥18॥

ಶಿವಸ್ಯ ಶಿವದಃ ಪುಣ್ಯಃ ಶಿರೋದೇಶೋ[14] ವಿಲೋಕ್ಯತೇ ।
ಪುಚ್ಛಸ್ತೂತ್ತರತಃ ಪ್ರೋಕ್ತೋ ಮಹತೋಽಸ್ಯ ಮಹೀಭೃತಃ ॥19॥

ಪ್ರಸಿದ್ಧಃ ಪುಚ್ಛದೇಶೋಽಯಂ ಶ್ರೀಶೈಲ ಇತಿ ವಿಶ್ರುತಃ ।

ಮಾಡುವವನಾದನು. (16) ಆಗ ಭೃಗುಋಷಿಗಳು ನಾರದರನ್ನು ಕುರಿತು – 'ಹೇ ನಾರದರೇ! ಶೇಷದೇವರು ಇಂತಹ ವಿಸ್ತೃತವಾದ ಪರ್ವತದೇಹವನ್ನು ಹೇಗೆ ಹೊಂದಿದರು. ಅದರಲ್ಲಿ ಪುಚ್ಛ ಪ್ರದೇಶವಾವುದು? ಶಿರಃಪ್ರದೇಶವಾವುದು? ಪಾರ್ಶ್ವಭೂಮಿ ಗಳಾವವು? ಇತ್ಯಾದಿಗಳನ್ನು ತಿಳಿಸಿ ಕೊಡಿರಿ' ಎಂದು ಪ್ರಾರ್ಥಿಸಿದರು. (17)

*ಪರ್ವತದ ಶಿರೋಭಾಗಾದಿ ವರ್ಣನೆ*

ಅದಕ್ಕುತ್ತರವಾಗಿ ನಾರದರು ಶೇಷಾಚಲವನ್ನು ವರ್ಣಿಸುತ್ತಾ 'ದಕ್ಷಿಣ ಕೈಲಾಸವೆಂದು ಪ್ರಸಿದ್ಧವಾದ ಉತ್ತಮವಾದ ಕಾಲಹಸ್ತಿಯೆಂದು ವಿಖ್ಯಾತವಾದ ಪ್ರದೇಶಕ್ಕೆ ಮಸ್ತಕಭಾಗವೆಂದು ಹೇಳುತ್ತಾರೆ. (18) ಶಿವನಿಗೂ ಸಹ ಸುಖಪ್ರದವಾದ, ಪುಣ್ಯಕರವಾದ ಕಾಲಹಸ್ತಿಯು ಪರ್ವತದ ಶಿರೋದೇಶ ವೆಂದು ಪ್ರಸಿದ್ಧವಾಗಿರುವದು. ಈ ಮಹಾಪರ್ವತದ ಉತ್ತರಭಾಗವು ಶ್ರೀಶೈಲವೆಂದು ವಿಶ್ರುತವಾಗಿ

---

14. (2.19) ಭವಿಷ್ಯೋತ್ತರ ಪುರಾಣವು 'ವೇಂಕಟಗಿರಿಯು ವದನ ಭಾಗ ವೆಂದೂ, ಅಹೋಬಿಲವು ಮಧ್ಯವೆಂದೂ ಮತ್ತು ಶ್ರೀಶೈಲವು ಪುಚ್ಛವೆಂದೂ ವರ್ಣಿಸುವದು.

ವದನಂ ವೇಂಕಟಗಿರಿರ್ನೃಸಿಂಹಾದ್ರಿಶ್ಚ ಮಧ್ಯಮಃ ।
ಶ್ರೀಶೈಲಃ ಪುಚ್ಛಭಾಗಸ್ತು ... .... ... . (ಭ.ಪು.. 2.)

ಇಲ್ಲಿ ಭವಿಷ್ಯೋತ್ತರಪುರಾಣವು ಪರ್ವತದ ಶಿರಃಪುಚ್ಛಾದಿಭಾಗಗಳಿಗಿರುವ ನಾಮವನ್ನು ವರ್ಣಿಸುವದು. ಬ್ರಹ್ಮಾಂಡಪುರಾಣವು ಆ ಪರ್ವತದ ಶಿರಃಪುಚ್ಛಾದಿಗಳ ಸ್ಥಳವಿಶೇಷವನ್ನು ವರ್ಣಿಸುವದೆಂದು ತಿಳಿಯಬೇಕು.

ಶ್ರೀಶೈಲಸ್ಯ ಪ್ರದೇಶೇऽಸ್ಮಿನ್ನೀಲಕಂಠಾಶ್ರಮೇ ಶುಭೇ ॥20॥

ವ್ಯಾಘ್ರಪಾದಾಭಿಧಃ ಕಶ್ಚಿತ್ ತಪಸ್ವೀ ನಿಯತೇಂದ್ರಿಯಃ ।
ಚಿರಕಾಲಂ ತಪಸ್ತಪ್ತ್ವಾ ನೀಲಕಂಠಮುಮಾಪತಿಮ್ ॥21॥

ತೋಷಯಾಮಾಸ ನಿಯಮೈಃ ಸಮಗ್ರೈಸ್ತಂ ತಪೋನಿಧಿಃ ।
ಅಥ ಕೇನಾಪಿ ಕಾಲೇನ ನೀಲಕಂಠೋ ಮಹಾದ್ಯುತಿಃ ॥22॥

ಪರಿತುಷ್ಟಃ ಪ್ರಾದುರಭೂದ್ದಾಸ್ಯನ್ ವರಮಭೀಪ್ಸಿತಮ್ ।
ಆಲಿಂಗಿತೋ ಗಿರಿಜಯಾ ಗಾಢಮಾಶ್ರಿತಪಾರ್ಶ್ವಯಾ ॥23॥

ಕೈಲಾಸಗೌರಮಾರುಹ್ಯ ವೃಷಂ ಗಗನಚಾರಿಣಮ್ ।
ಪ್ರಮಥಾದ್ಯೈಃ ಪರಿವೃತೋ ಗಣೈಃ ಸಂಪ್ರೀತಮಾನಸೈಃ ॥24॥

ಕಂದರ್ಪವಿಲಸತ್ಸಿದ್ಧಸಿಂಧುವೀಚಿಭಿರಾಕುಲೈಃ ।
ಸಿದ್ಧಗಂಧರ್ವಯಕ್ಷಾದ್ಯೈಃ ಪನ್ನಗೈಃ ಪರಿವಾರಿತಃ ॥25॥

ಶೇಷದೇವರ ಪುಚ್ಛವೆಂದು ಕರೆಯಲ್ಪಡುವದು.(19)

*ಶ್ರೀಶೈಲ-ವ್ಯಾಘ್ರಪಾದವೃತ್ತಾಂತ*

ಪುಚ್ಛಪ್ರದೇಶವಾದ ಶ್ರೀಶೈಲದಲ್ಲಿ ಶುಭಕರವಾದ ನೀಲಕಂಠಾಶ್ರಮದಲ್ಲಿ ವ್ಯಾಘ್ರಪಾದನೆಂಬ ಇಂದ್ರಿಯ ನಿಗ್ರಹಾದಿ ಗುಣಗಳಿಂದ ಯುಕ್ತನಾದ ತಪಸ್ವಿಯು ಬಹುಕಾಲ ಪರ್ಯಂತರವಾಗಿ ತಪಸ್ಸನ್ನು ಮಾಡಿದನು. (20) ತಪೋನಿಧಿಯಾದ ಅವನು ಉಮಾಪತಿಯಾದ ನೀಲಕಂಠನನ್ನು ಸಮಗ್ರವಾದ ಕಠೋರ ನಿಯಮಗಳಿಂದ ಸಂತೋಷಪಡಿಸಿದನು. ಕೆಲ ಸಮಯದ ಅನಂತರದಲ್ಲಿ ಮಹಾಕಾಂತಿಯುಕ್ತನಾದ ನೀಲಕಂಠನು ಆ ವ್ಯಾಘ್ರಪಾದನಿಗೆ ಅಭೀಪ್ಸಿತವಾದ ವರವನ್ನು ಪ್ರದಾನ ಮಾಡುವದಕ್ಕಾಗಿ ಅವನ ತಪಸ್ಸಿನಿಂದ ಪರಿತುಷ್ಟನಾಗಿ ಪ್ರಾದುರ್ಭೂತನಾದನು.(22–23)

*ರುದ್ರದೇವರ ವರ್ಣನ*

ಗಿರಿಜೆಯಿಂದ ಆಲಿಂಗಿತನಾದ, ಕೈಲಾಸದಂತೆ ಶುಭ್ರವಾದ, ಆಕಾಶದಲ್ಲಿ ಸಂಚರಿಸುವ ತನ್ನ ವಾಹನವಾದ ನಂದಿಯನ್ನೇರಿಕೊಂಡು, ಪ್ರಮಥಗಣಗಳಿಂದ ಸುತ್ತುವರೆದು, ಕಂದರ್ಪನ ವಿಕಾರದಿಂದ ಸಂಶೋಭಿತರಾದ ಚಂಚಲತರಂಗರೂಪ ಸಿದ್ಧರು, ಗಂಧರ್ವರು, ಯಕ್ಷರು, ಪನ್ನಗರು– ಇವರುಗಳೆಂಬ ತರಂಗಗಳಿಂದ ಸುತ್ತುವರೆಯಲ್ಪಟ್ಟ, ಶ್ರೇಷ್ಠವಾದ ಭಕ್ತಾನುಕಂಪವನ್ನು ಅತ್ಯಂತವಾಗಿ ವ್ಯಕ್ತಪಡಿಸುತ್ತಿರುವ ಶಿವನನ್ನು ನೋಡಿ ಪರಮ ಭಕ್ತಿಯಿಂದ ಕೂಡಿದ ವ್ಯಾಘ್ರಪಾದನು ಶಿವನನ್ನು ನಮಸ್ಕರಿಸಿ ಪುನಃ ಪುನಃ ನಮಸ್ಕಾರ ಹಾಗು ಪುಷ್ಕಲವಾದ ಸ್ತೋತ್ರಗಳಿಂದ ಶಿವನನ್ನು

ಭಕ್ತಾನುಕಂಪಾಂ ಪರಮಾಂ ಭೃಶಮಾವೇದಯನ್ನಿವ ।
ವ್ಯಾಘ್ರಪಾದಃ ಪ್ರಣಮ್ಯೈನಂ ಭಕ್ತ್ಯಾ ಪರಮಯಾನ್ವಿತಃ ॥
ಸ್ತುತಿಭಿಃ ಪರಿತುಷ್ಟಾವ ಪುಷ್ಕಲಾಭಿಃ ಪುನಃ ಪುನಃ ॥26॥

ವ್ಯಾಘ್ರಪಾದ ಉವಾಚ –

ಭಗವನ್ ಕರುಣಾಸಾರ ಸರ್ವಲೋಕೈಕಕಾರಣ ।
ಪ್ರಸೀದ ತ್ವಂ ಪ್ರಸನ್ನಾಕ್ಷ ವಿಶ್ವಾಕಾರ ವೃಷಧ್ವಜ ॥27॥

ರಥ್ಯಾ ವೇದಾಸ್ತ್ರಿಪುರದಹನೇ[15] ವೇದವಕ್ತಾ ಚ ವೇಧಾಃ
ಸೂತೋ ಯಸ್ಯ ಸ್ವಯಮುಪಗತೌ ಪುಷ್ಪವಂತೌ ರಥಾಂಗೇ ।
ಚಾಪೋ ಮೇರುಸ್ತ್ರಿದಶವಸತಿರ್ವಾಸುಕಿಶ್ಚಾಪಮೌರ್ವೀ
ಬಾಣೋ ವಿಷ್ಣುಸ್ತ್ರಿದಶವಪುಷೇ ಕುರ್ಮಹೇ ತೇ ನಮಸ್ಯಾಮ್ ॥28॥

ಸಂತೋಷಗೊಳಿಸಿದನು. (24–26)

*ರುದ್ರದೇವರ ಸ್ತುತಿ*

'ಲಕ್ಷ್ಮೀ ಬ್ರಹ್ಮರ ಅನಂತರದಲ್ಲಿ ಜಗತ್ಕಾರಣರಾದ ಹೇ ರುದ್ರದೇವರೆ! ವೃಷಭಧ್ವಜರಾದ ಅಹಂಕಾರತತ್ತ್ವದಿಂದ ಸರ್ವತ್ರದಲ್ಲಿ ವ್ಯಾಪ್ತರಾದ ಪ್ರಸನ್ನಾಕ್ಷರಾದ ತಾವು ನನ್ನ ಮೇಲೆ ಪ್ರಸನ್ನರಾಗಿರಿ. (27) ಹಿಂದೆ ಯಾರು ತ್ರಿಪುರದಹನ ಸಂದರ್ಭದಲ್ಲಿ ವೇದಗಳನ್ನು ತನ್ನ ರಥದ ಕುದುರೆಗಳನ್ನಾಗಿಸಿಕೊಂಡಿದ್ದನೋ, ವೇದಗಳನ್ನು ಜಗತ್ತಿನಲ್ಲಿ ಅಭಿವ್ಯಕ್ತಿಗೊಳಿಸುವ ಚತುರ್ಮುಖ ಬ್ರಹ್ಮದೇವರು ಯಾರ ರಥದ ಸಾರಥಿಯಾಗಿದ್ದರೋ, ಪ್ರಕಾಶಮಯವಾದ ಕಿರಣಗಳಿಂದ ಕೂಡಿದ ಸೂರ್ಯ-ಚಂದ್ರರು ಯಾವ ರಥದ ಚಕ್ರರಾದರೋ, ಯಾರಿಗೆ ಮೇರು ಪರ್ವತವು ಬಿಲ್ಲಾಗಿಯೂ ಮತ್ತು ಸರ್ಪಶ್ರೇಷ್ಠವಾದ ವಾಸುಕಿಯು ಬಿಲ್ಲಿನ ಹುರಿ (ಜ್ಯಾ) ಆಗಿದ್ದನೋ, ಸಾಕ್ಷಾತ್ ವಿಷ್ಣುವೇ ಬಾಣನಾಗಿ ತ್ರಿಪುರದಹನವನ್ನು ಮಾಡಿದನೋ ಅಂತಹ ದೇವತಾ ಸ್ವರೂಪಿಯಾದ ರುದ್ರದೇವರನ್ನು

15. ಹಿಂದೆ ತಾರಕಾಸುರನು ಹತನಾದಾಗ ಅವನ ಮಕ್ಕಳಾದ ವಿದ್ಯುನ್ಮಾಲ, ತಾರಾಕ್ಷ ಮತ್ತು ಮಾಲಾಕ್ಷ ಎಂಬ ಮಕ್ಕಳು ಮಯನನ್ನು ಮೊರೆಹೊಕ್ಕಾಗ ಮಯನು ಶಸ್ತ್ರಾಸ್ತ್ರಗಳಿಂದ ಪೂರ್ಣವಾದ ಅಭೇದ್ಯವಾದ ಕ್ರಮವಾಗಿ ಚಿನ್ನ, ಬೆಳ್ಳಿ ಮತ್ತು ಕಬ್ಬಿಣದ ಪಟ್ಟಣಗಳನ್ನು ನಿರ್ಮಿಸಿದನು. ಅವು ಆಕಾಶದಲ್ಲಿ ಸಂಚರಿಸುವವಾಗಿದ್ದವು. ಅವುಗಳಲ್ಲಿ ಈ ಮೂವರು ಅಸುರರು ಇದ್ದು ಅಭೇದ್ಯವಾದ ಪುರಗಳಲ್ಲಿ ಇದ್ದು ಲೋಕಗಳನ್ನು ಹಿಂಸಿದರು. ಇವರಿಂದ ಬಾಧಿತರಾದ ಸಜ್ಜನರು, ದೇವತೆಗಳು ರುದ್ರದೇವರನ್ನು ಮೊರೆಹೊಕ್ಕಾಗ ರುದ್ರದೇವರು ತಮ್ಮ ಬಾಣದಿಂದ ಮೂರುಪಟ್ಟಣಗಳನ್ನು ಸುಟ್ಟು ತ್ರಿಪುರಾರಿ ಎನಿಸಿದರು. ರುದ್ರದೇವರು ಬಾಣಗಳನ್ನು ಬಿಟ್ಟು ಅಸುರರನ್ನು ಸಂಹರಿಸಿದಾಗ ದೈತ್ಯರು ಪಟ್ಟಣಗಳಲ್ಲಿದ್ದ ಅಮೃತ ವಾಪಿಯಲ್ಲಿ ರಾಕ್ಷಸರನ್ನು ಎದ್ದಿ ಪುನಃ

ಸ್ತುತ್ವೇವಂ ಪರಯಾ ಭಕ್ತ್ಯಾ ಶಾಂತಂಧರ್ಮಪರಾಯಣಮ್ ।
ನೀಲಕಂಠಃ ಸಮಾಹೂಯ ಪ್ರಹಸನ್ನಿದಮಬ್ರವೀತ್ ॥29॥

ನೀಲಕಂಠ ಉವಾಚ–

'ತಪಸಾ ಪರಿತುಷ್ಟೋಽಸ್ಮಿ ಕೃತೇನಾನೇನ ಸುವ್ರತ ।
ವರಂ ವರಯ ಭದ್ರಂ ತೇ ವರದೋಽಹಮಿಹಾಗತಃ' ॥31॥

ವ್ಯಾಘ್ರಪಾದ ಉವಾಚ–

'ಆಶ್ರಮೇಽಸ್ಮಿನ್ ಮಹಾದೇವ ವಸ್ತವ್ಯಂ ಭವತಾ ಸದಾ ।
ಭವನ್ನಾಮ್ನಾ ಸರಶ್ಚೇದಂ ಪ್ರಸಿದ್ಧಿಮಧಿಗಚ್ಛತು ॥32॥

ನಾನು ನಮಸ್ಕರಿಸುತ್ತೇನೆ. (28)' ಎಂದು ಸ್ತೋತ್ರಮಾಡಿದನು.

*ರುದ್ರದೇವರಿಂದ ವರಪ್ರದಾನ*

ಹೀಗೆ ಶ್ರೇಷ್ಠವಾದ ಭಕ್ತಿಯಿಂದ ಕೂಡಿದ, ಶಮದಮಾದಿಗಳಿಂದ ಕೂಡಿದ, ಧರ್ಮನಿಷ್ಠನಾದ ವ್ಯಾಘ್ರಪಾದ ಋಷಿಯನ್ನು ಪ್ರೀತಿಯಿಂದ ಸಮೀಪಕ್ಕೆ ಕರೆದು ರುದ್ರದೇವರು 'ಹೇ ವ್ರತನಿಷ್ಠನಾದ ವ್ಯಾಘ್ರಪಾದನೇ! ನೀನು ಮಾಡಿದ ಈ ತಪಸ್ಸಿನಿಂದ ನಾನು ಸಂತುಷ್ಟನಾಗಿದ್ದೇನೆ. ನಿನಗೆ ವರವನ್ನು ಕೊಡುವದರಗೋಸ್ಕರವಾಗಿಯೇ ನಾನು ಇಲ್ಲಿಗೆ ಬಂದಿರುವೆನು. ನಿನಗೆ ಅಭೀಪ್ಸಿತವಾದ ವರವನ್ನು ಕೇಳಿಕೊ' ಎಂದು ನುಡಿದರು. (30–31)

ಆಗ ವ್ಯಾಘ್ರಪಾದನು 'ಹೇ ರುದ್ರದೇವರೆ! ಈ ಆಶ್ರಮದಲ್ಲಿ ತಾವು ಯಾವಾಗಲೂ

---

ಬದುಕಿಸಿದರು. ಆಗ ವಿಷ್ಣುವು ಆಕಳಾಗಿ ಬ್ರಹ್ಮದೇವರನ್ನು ಕರುವನ್ನಾಗಿಸಿಕೊಂಡು ಅಮೃತದ ಬಾವಿಯಲ್ಲಿದ್ದ ಸಂಜೀವಿನಿಯನ್ನು ಕುಡಿದು ಬರಿದುಗೊಳಿಸಿದನು. ರುದ್ರದೇವರಿಗೆ ಪಟ್ಟಣಗಳನ್ನು ನಾಶಮಾಡಲಶಕ್ಯವಾದಾಗ, ರುದ್ರದೇವರಿಗೆ ಕೀರ್ತಿಯನ್ನುಂಟು ಮಾಡಲು ಬಾಣದಲ್ಲಿ ಸಾಕ್ಷಾತ್ ವಿಷ್ಣುವೇ ಪ್ರವೇಶಿಸಿ, ತನ್ನ ವಿಭೂತಿ ರೂಪಗಳಿಂದ ಇತರ ಆಯುಧ ಮತ್ತು ಸಾಧನಗಳಲ್ಲಿ ಸನ್ನಿಹಿತನಾಗಿ ರುದ್ರದೇವರಿಗೆ ತ್ರಿಪುರಗಳನ್ನು ಸಂಹರಿಸಲು ಶಕ್ತಿದಾಯಕನಾದನು.

'ಅಥಾಸೌ ಶಕ್ತಿಭಿಃ ಸ್ವಾಭಿಃ ಶಂಭೋಃ ಪ್ರಾಧಾನಿಕಂ ವ್ಯಧಾತ್ ।
ಧರ್ಮಜ್ಞಾನವಿರಕ್ತ್ಯೃದ್ಧಿತಪೋವಿದ್ಯಾಕ್ರಿಯಾದಿಭಿಃ ॥
ಶರಂ ಧನುಷಿ ಸಂಧಾಯ ಮುಹೂರ್ತೇಽಭಿಜಿತೀಶ್ವರಃ ।
ಭಗವತ್ತೇಜಸಾ ಗುಪ್ತೋ ದದಾಹ ತ್ರಿಪುರಂ ನೃಪ ॥ (7.15.15-16)

ಎಂದು ಭಾಗವತವು ಸ್ಪಷ್ಟವಾಗಿ ವಿಷ್ಣುವು ರುದ್ರದೇವರಿಗೆ ಕೀರ್ತಿಯನ್ನುಂಟು ಮಾಡಲು ಪರಮಾತ್ಮನು ಅವನ ಬಾಣದಲ್ಲಿ ಪ್ರವೇಶಿಸಿ ದೈತ್ಯನನ್ನು ಸಂಹರಿಸಿದನು ಎಂಬುದಾಗಿ ತಿಳಿಸುವದು.

ಅತ್ರ ಸ್ನಾಸ್ಯತಿ ಯೋ ಮರ್ತ್ಯಸ್ತೀರೇಽಸ್ಮಿನ್ ಸಕೃದಾಪ್ಲುತಃ ।
ಸ ಸಿದ್ಧಿಂ ಯಾತು ಶುದ್ಧಾತ್ಮಾ ಪುಮರ್ಥಾನಾಮಭೀಪ್ಸಯಾ ॥33॥

ನೀಲಕಂಠ ಉವಾಚ–

'ತಥೈವಾಸ್ತ್ವಿ'ತಿ ತಂ ಚೋಕ್ತ್ವಾ ತತ್ರಾಸ್ತೇ ಚಂದ್ರಶೇಖರಃ ।
ಚಿರಂ ಗಿರಿಜಯಾ ಸಾರ್ಧಂ ವರದಃ ಸರ್ವದೇಹಿನಾಮ್ ॥34॥

ಅಥ ಪಕ್ಷಪ್ರದೇಶೋಽಸ್ಯ ಹ್ಯಹೋಬಿಲಮಿತಿ ಸ್ಮೃತಃ ।
ಪರಂ ಸ್ಥಾನಂ ನೃಸಿಂಹಸ್ಯ ಸರ್ವಸಿದ್ಧಿಪ್ರದಾಯಕಮ್ ॥35॥

ಹಿರಣ್ಯಕಶಿಪುಂ ಹಂತುಂ ಬ್ರಹ್ಮರುದ್ರಪುರಸ್ಕೃತಃ ।
ಪ್ರಹ್ಲಾದಾನುಗ್ರಹಾರ್ಥಾಯ ಹ್ಯವತೀರ್ಣೋಽತ್ರ ವರ್ತತೇ ॥36॥

ವಾಸವಾಗಿರಬೇಕು. ಈ ಸರೋವರವು ನಿಮ್ಮ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದಲಿ. (32) ಈ ಸರಸ್ಸಿನ ದಡದಲ್ಲಿ ವಾಸವಾಗಿ ಈ ಸರೋವರದಲ್ಲಿ ಸ್ನಾನವನ್ನು ಮಾಡುವ ಮನುಷ್ಯನು ತನ್ನ ಎಲ್ಲ ಪಾಪಗಳನ್ನು ಕಳೆದುಕೊಂಡು ತನಗೆ ಬೇಕಾದ ಪುರುಷಾರ್ಥಗಳನ್ನು ಹೊಂದುವಂತಾಗಲಿ' ಎಂದು ಬೇಡಿಕೊಂಡನು. (33) ಆಗ ಚಂದ್ರಲಲಾಮರಾದ ರುದ್ರದೇವರು 'ಹಾಗೆಯೇ ಆಗಲಿ' ಎಂದು ನುಡಿದು ಅಲ್ಲಿಯೇ ವ್ಯಾಘ್ರಪಾದನ ಆಶ್ರಮದಲ್ಲಿ ಪಾರ್ವತೀ ಸಮೇತರಾಗಿ ವಾಸವಾಗಿದ್ದು ಎಲ್ಲ ಜೀವರಾಶಿಗಳಿಗೆ ವರಪ್ರದರಾಗಿ ಅನುಗ್ರಹವನ್ನು ಮಾಡುವವರಾದರು. (34)

*ಪರ್ವತರೂಪಿಯಾದ ಶೇಷನ ಪಕ್ಷಪ್ರದೇಶದ ವರ್ಣನೆ*

ಈ ಪರ್ವತದ ಪಕ್ಷಪ್ರದೇಶವು ಅಹೋಬಿಲವೆಂಬುದಾಗಿ ಪ್ರಸಿದ್ಧವಾಗಿದ್ದು ನರಸಿಂಹದೇವರ ಅತ್ಯಂತ ಪ್ರಿಯಕರವಾದ ಸ್ಥಾನವಾಗಿ, ಎಲ್ಲರಿಗೂ ಎಲ್ಲವಿಧವಾದ ಸಿದ್ಧಿಯನ್ನು ದೊರಕಿಸಿ ಕೊಡುವದಾಗಿದೆ. (35) ಬ್ರಹ್ಮ ರುದ್ರರೇ ಮೊದಲಾದ ದೇವತೆಗಳಿಂದ ಪೂಜಿತನಾದ ನಾರಾಯಣನು ಪ್ರಹ್ಲಾದನಿಗೆ ಅನುಗ್ರಹವನ್ನು ಮಾಡುವದರಗೋಸ್ಕರವಾಗಿ, ಹಿರಣ್ಯಕಶಿಪುವನ್ನು ಸಂಹರಿಸುವದಕ್ಕಾಗಿ ಅವತಾರವನ್ನು ಮಾಡಿ ಈ ಅಹೋಬಿಲದಲ್ಲಿ ವಾಸವಾಗಿರುವನು. (36) ಆದ್ದರಿಂದ ಇದಕ್ಕೆ ಸಮಾನವಾದ ಕ್ಷೇತ್ರವು ಮೂರುಲೋಕಗಳಲ್ಲಿಯೂ ಸಹ ಇರುವದಿಲ್ಲ. ಜೀವಿಯು ಇಲ್ಲಿ ಬಂದು ಅಹೋಬಿಲ ನರಸಿಂಹನ ದರ್ಶನಮಾತ್ರದಿಂದ ಸಂಸಾರ ವಿಷಸಾಗರದಿಂದ ಮುಕ್ತನಾಗಿ ಅಮೃತತ್ವವನ್ನೇ ಹೊಂದುವನು. ಈ ಕ್ಷೇತ್ರದಲ್ಲಿ ಒಂದು ದಿನವಾದರೂ ಯಾರು ಇರುವರೋ ಅಂತಹ ಮನುಷ್ಯರು ತನ್ನ ಎಲ್ಲ ಪಾಪಗಳನ್ನು ಕಳೆದುಕೊಂಡು ವಿಷ್ಣುಲೋಕದಲ್ಲಿ ವಿರಾಜಮಾನನಾಗುವನು. (37–38)

*ಶೇಷದೇವರ ಫಣಿಪ್ರದೇಶವರ್ಣನ*

ನ ತತ್ಸಮಂ ಭುವಿ ಸ್ಥಾನಮಸ್ತಿ ಲೋಕತ್ರಯೇऽಪಿ ವಾ ।
ಅಮೃತತ್ವಮವಾಪ್ನೋತಿ ಜಂತುರ್ದರ್ಶನಮಾತ್ರತಃ ॥37॥

ತಸ್ಮಿನ್ನೇಕದಿನಂ ವಾऽಪಿ ಯೋ ವಾ ಸಮಧಿಗಚ್ಛತಿ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕೇ ಮಹೀಯತೇ ॥38॥

ಫಣಾಮಣಿಪ್ರದೇಶೋऽಯಂ ವೇಂಕಟಾದ್ರಿರಿತಿ ಸ್ಮೃತಃ।
ಶೇಷಾದ್ರಿರ್ವೃಷಭಾದ್ರಿಶ್ಚ ನಾರಾಯಣಗಿರಿಸ್ತಥಾ ॥39॥

ನ ಚಾಸ್ಯ ಮಹಿಮಾ ಶಕ್ಯೋ ವಕ್ತುಂ ವರ್ಷಶತೈರಪಿ ।
ಬ್ರಹ್ಮರುದ್ರಪುರೋಗೈಶ್ಚ ಸನಕಾದ್ಯೈಶ್ಚ ಯೋಗಿಭಿಃ ॥40॥

ಅಗಸ್ತ್ಯಾದ್ಯಾ ಮುನಿವರಾಸ್ತಪಸಃ ಸಿದ್ಧ್ಯಪೇಕ್ಷಯಾ ।
ತಪಾಂಸಿ ಸುಚಿರಂ ತೇಪುಸ್ತನ್ನಿರ್ಝರಸಮಾಪ್ಲುತಾಃ ॥41॥

ವಿಷ್ಣೋರಪರದೇಹತ್ವಾದಾಕ್ರಾಮನ್ನ[16] ಪದೈರ್ಗಿರಿಮ್[17] ।
ನಾರಾಯಣಾಂಶಸಂಭೂತಃ ಶೇಷೋऽಹಿರ್ಗಿರಿರೂಪಧೃಕ್ ॥42॥

ತಸ್ಯೋಪರಿ ಪ್ರಭೂತಾ ಯೇ ತೃಣಗುಲ್ಮಲತಾದಯಃ ।
ತೇ ಹಿ ಸ್ಥಾವರರೂಪೇಣ ವಸಂತೋ ಯೋಗಿಪೂರುಷಾಃ ॥43॥

ಈ ಶೇಷದೇವರ ಹೆಡೆಯ ಸ್ಥಾನದಲ್ಲಿ ನಾರಾಯಣಗಿರಿ, ವೃಷಭಾಚಲ, ಶೇಷಾಚಲ ಎಂದು ಪ್ರಸಿದ್ಧವಾದ ವೇಂಕಟಾಚಲವು ಇರುವದು. (39) ಈ ವೇಂಕಟಾಚಲದ ಮಹಿಮೆಯನ್ನು ನೂರಾರು ವರ್ಷಗಳಲ್ಲಿಯೂ ವರ್ಣಿಸಲು ಸಾಧ್ಯವಿಲ್ಲ. ಬ್ರಹ್ಮರುದ್ರಾದಿ ದೇವತೆಗಳೂ, ಸನಕಾದಿ ಯೋಗಿಗಳೂ, ಅಗಸ್ತ್ಯಾದಿ ಮುನಿಸತ್ತಮರೂ ಸಹ ತಮ್ಮ ತಪಸ್ಸಿನ ಸಿದ್ಧಿಯ ಗೋಸ್ಕರವಾಗಿ ಬಹುಕಾಲ ಆ ಗಿರಿಯ ನೀರಿನ ಝುರಿಗಳಲ್ಲಿ ಸ್ನಾನವನ್ನು ಮಾಡಿ ಭಗವಂತನನ್ನುದ್ದೇಶಿಸಿ ತಪಸ್ಸನ್ನು ಮಾಡಿರುವರು. (40–41) ನಾರಾಯಣನ ಸನ್ನಿಧಾನದಿಂದ ಯುಕ್ತವಾದ ಶೇಷದೇವರೇ ಗಿರಿರೂಪವನ್ನು ಧಾರಣಮಾಡಿರುವರು. ಈ ಪರ್ವತವು ಪರಮಾತ್ಮನ ಶರೀರದಂತೆ ಅತ್ಯಂತ ಪವಿತ್ರವಾಗಿರುವದರಿಂದ ಪಾದಗಳಿಂದ ತುಳಿದು ಈ ಪರ್ವತವನ್ನು ಏರಬಾರದು. (42) ಆ ಪರ್ವತದ ಮೇಲೆ ಭಗವಂತನ ಸೇವಾರ್ಥವಾಗಿ ಆಗಮಿಸಿದ ಯೋಗಿಪುರುಷರು, ಸ್ಥಾವರ (ಮರಗಳು), ಹುಲ್ಲು, ಗುಲ್ಮ (ಪೊದೆ), ಬಳ್ಳಿಗಳ ರೂಪದಿಂದ ವಾಸವಾಗಿರುವರು. ಬ್ರಹ್ಮ ರುದ್ರಾದಿ ದೇವತೆಗ:ಳು, ಅಮಿತ ತೇಜಸ್ವಿಗಳಾದ ಯೋಗಿಗಳು, ಯಕ್ಷರು, ಗಂಧರ್ವರು, ಸಿದ್ಧರು, ಕಿನ್ನರರು, ಚಾರಣರು, ವಿದ್ಯಾಧರರು– ಇವರುಗಳ ಸಮೂಹಗಳು, ಸರ್ಪಗಳ ಗಣಗಳು,

ಬ್ರಹ್ಮರುದ್ರಾದಿದೇವೇಭ್ಯೋ ಯೋಗಿನೋಽಮಿತತೇಜಸಃ ।
ಸರ್ವದಾ ಯಕ್ಷಗಂಧರ್ವಸಿದ್ಧಕಿನ್ನರಚಾರಣೈಃ ॥44॥

ವಿದ್ಯಾಧರಗಣೈಶ್ಚಾಪಿ ಮಹೋರಗಗಣೈಸ್ತಥಾ ।
ಋಷಿಭಿರ್ದೇವವೃಂದೈಶ್ಚ ಸೇವಾವಸರಕಾಂಕ್ಷಿಭಿಃ ॥45॥

ಸೇವ್ಯತೇಽಹರ್ನಿಶಂ ಪ್ರೀತ್ಯಾ ಮಹಾಗಿರಿವರೋ ಹ್ಯಯಮ್ ॥46॥

ಇತಿ ಶ್ರೀಮದ್ಬ್ರಹ್ಮಾಂಡಪುರಾಣೇ ತೀರ್ಥಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಭಗವನ್ನಾರದಸಂವಾದೇ ವೇಂಕಟಾಚಲವಿಸ್ತಾರವರ್ಣನಂ ನಾಮ ದ್ವಿತೀಯೋಽಧ್ಯಾಯಃ

* * *

ದೇವತೆಗಳ ಸಮೂಹ, ಋಷಿಗಳ ಸಮೂಹ ಇವರೆಲ್ಲರೂ ಸಹ ಈ ಪರ್ವತವನ್ನು ಅತ್ಯಂತ ಭಕ್ತಿಯಿಂದ ಯಾವಾಗಲೂ ಹಗಲು ರಾತ್ರಿಗಳಲ್ಲಿ ಸೇವಿಸುತ್ತಿರುವರು. ಅಂತಹ ಶ್ರೇಷ್ಠಪರ್ವತವು ಈ ವೇಂಕಟಾಚಲವು.(43–46)

ಇಲ್ಲಿಗೆ ಬ್ರಹ್ಮಾಂಡ ಪುರಾಣದ ತೀರ್ಥ ಖಂಡದಲ್ಲಿಯ ಶ್ರೀವೇಂಕಟಾಚಲ ಮಾಹಾತ್ಮ್ಯದಲ್ಲಿ ವೇಂಕಟಾಚಲವಿಸ್ತಾರವರ್ಣನವೆಂಬ ಎರಡನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

16. ವೇಂಕಟಾಚಲವು ಪರಮಾತ್ಮನ ನಿತ್ಯಸನ್ನಿಧಾನಯುಕ್ತವಾದ ಗಿರಿಯಾಗಿರುವದೆಂಬುದು ಶ್ರೀಮದ್ವಾದಿರಾಜರಂತಹ ಮಹಜ್ಜನರ ಪ್ರತ್ಯಕ್ಷದಿಂದಲೂ ಸಿದ್ಧವಾಗಿರುವದು. ಶ್ರೀಮದ್ವಾದಿರಾಜರು ವೇಂಕಟಗಿರಿಯ ಬಳಿ ಬಂದಾಗ ಈ ಗಿರಿಯು ಅವರಿಗೆ ಶಿಲಾಸೋಪಾನಗಳಲ್ಲಿ ಸನ್ನಿಹಿತನಾದ ಭಗವಂತನೇ ಕಂಡಿರುವದರಿಂದ ಅವರು ಈ ಪರ್ವತವನ್ನು ಪಾದಗಳಿಂದ ತುಳಿದು ಏರದೇ ಕೇವಲ ತಮ್ಮ ಮೊಣಕಾಲುಗಳಿಂದ ಈ ಪರ್ವತವನ್ನು ಏರಿರುವರು. ಮೇಲೆ ಶ್ರೀನಿವಾಸನ ದರ್ಶನವನ್ನು ಪಡೆದು ಅವನಿಗೆ ಸಾಲಗ್ರಾಮ ಶಿಲೆಯ ಮಾಲೆಯನ್ನರ್ಪಿಸಿರುವರು. ಶಿಲಾಸೋಪಾನರೂಪೇಣ ದೇವಮಾವೀಕ್ಷ್ಯ ಭಕ್ತಿಮಾನ್ । ಜಾನುಭ್ಯಾಮೇವ ಶೈಲೇಂದ್ರಮಾರುರೋಹ ಮಹಾಬಲಃ ॥ ಶ್ರೀನಿವಾಸಂ ನಿರೀಕ್ಷ್ಯಾಥ ಸಾಲಿಗ್ರಾಮಸ್ಯ ಮಾಲಿಕಾಮ್ । ಅರ್ಪಯಾಮಾಸ ಸಾ ಮಾಲಾ ತತ್ಕಂಠೇಽದ್ಯಾಪಿ ರಾಜತೇ ॥ [ವಾದಿರಾಜಗುರುವರ ಚರಿತಾಮೃತ ಬಿಂ.2 ಶ್ಲೋ.23-24]

17. 'ಸ್ವರ್ಣಾಚಲ ಮಹಾಪುಣ್ಯ ಸರ್ವದೇವನಿಷೇವಿತ । ಬ್ರಹ್ಮಾದಯೋಽಪಿ ಯಂ ದೇವಂ ಸೇವಂತೇ ಶ್ರದ್ಧಯಾ ಸಹ । ತಂ ಭವಂತಮಹಂ ಪದ್ಭ್ಯಾಮಾಕ್ರಮೇಯಂ ನಗೋತ್ತಮ । ಕ್ಷಮಸ್ವ ತದಘಂ ಮೇಽದ್ಯ ದಯಯಾ ಪಾಪಚೇತಸಃ । ತ್ವನ್ಮೂರ್ಧನಿ ಕೃತಾವಾಸಂ ಮಾಧವಂ ದರ್ಶಯಸ್ವ ಮೇ ।' [ಸ್ಕಾಂ.12.4]
ಎಂಬುದಾಗಿ ಗಿರಿಯನ್ನು ಸಂಪ್ರಾರ್ಥಿಸಿ, ಗೋವಿಂದನಾಮವನ್ನುಚ್ಚರಿಸುತ್ತಾ ಅನಂತರದಲ್ಲಿ ಪರ್ವತಾರೋಹಣವನ್ನು ಮಾಡಿದಲ್ಲಿ ಪಾದಾಹತಿದೋಷವು ಬರುವದಿಲ್ಲವೆಂದು ಸ್ಕಾಂದಪುರಾಣವು ತಿಳಿಸುತ್ತದೆ.

## ಅಥ ತೃತೀಯೋಽಧ್ಯಾಯಃ

ಭೃಗುರುವಾಚ–

ಶ್ರೀವೇಂಕಟಗಿರಿಂ ಪ್ರಾಪ್ಯ ಭಗವಾನ್ ಪುರುಷೋತ್ತಮಃ ।
ಆವಾಸಮಕರೋತ್ ತತ್ರ ತತಃ ಕಿಮಕರೋತ್ಸ್ವಯಮ್ ॥1॥

ಉದಂತಮಿಮಮಾಚಕ್ಷ್ವ ವಿಸ್ತರೇಣೈವ ನಾರದ ।
ನ ತ್ವದನ್ಯೋಽಸ್ತಿ ವಿಪ್ರೇಂದ್ರ ರಹಸ್ಯಾನಾಂ ಹಿ ವೇದಿತಾ ॥2॥

ಶ್ರೀನಾರದ ಉವಾಚ –

ಇದಂ ರಹಸ್ಯಂ ವಕ್ಷ್ಯೇಽದ್ಯ ವಿಸ್ತರೇಣೈವ ತೇ ಭೃಗೋ ।
ನ ತ್ವದನ್ಯೋಽಸ್ತಿ ವಿಪ್ರೇಂದ್ರ ಕಥಾಯಾಃ ಶ್ರವಣೇ ರತಃ ॥3॥

ಯದೈವ ರಮಯಾ ಸಾರ್ಧಮನಾದಿಃ ಪುರುಷೋತ್ತಮಃ ।
ಅವತೀರ್ಣೋ ಗಿರಿವರಂ ನಾನಾಧಾತುವಿಭೂಷಿತಮ್ ॥4॥

## ಮೂರನೆಯ ಅಧ್ಯಾಯ

*ವೇಂಕಟಾಚಲ ಮಹಾತ್ಮೆಯನ್ನು ತಿಳಿಯಲು ಭೃಗುಮಹರ್ಷಿಯ ಪ್ರಾರ್ಥನೆ*

ಭೃಗುಮಹರ್ಷಿಗಳು ನಾರದರನ್ನು 'ಹೇ ವಿಪ್ರಶ್ರೇಷ್ಠರಾದ ನಾರದರೇ! ವೈಕುಂಠಾಧಿಪತಿಯಾದ ಭಗವಂತನಾದ ಶ್ರೀನಿವಾಸನು ವೇಂಕಟಾಚಲ ವನ್ನು ಹೊಂದಿದ ಅನಂತರದಲ್ಲಿ ಅಲ್ಲಿ ವಾಸವಾಗಿದ್ದು ಯಾವ ಯಾವ ಕಾರ್ಯಗಳನ್ನು ಮಾಡಿದನು? ಎಂಬ ವೃತ್ತಾಂತವನ್ನು ನನಗೆ ವಿಸ್ತಾರವಾಗಿ ತಿಳಿಸಿರಿ. ಏಕೆಂದರೆ ನೀವೇ ಈ ಎಲ್ಲ ವೃತ್ತಾಂತಗಳನ್ನು ತಿಳಿದಿರುವಿರಿ' ಎಂದು ಸಂಪ್ರಾರ್ಥಿಸಿದನು. (1–2) ಆಗ ನಾರದರು 'ಹೇ ಭೃಗುಮಹರ್ಷಿಯೇ! ಇಂದು ನಾನು ನೀನು ಕೇಳಿದ ಶ್ರೀನಿವಾಸನ ವೃತ್ತಾಂತ ರೂಪವಾದ ರಹಸ್ಯವನ್ನು ವಿಸ್ತಾರವಾಗಿ ತಿಳಿಸುವೆನು. ಬ್ರಾಹ್ಮಶ್ರೇಷ್ಠನೇ! ಕಥಾಶ್ರವಣದಲ್ಲಿ ಆಸಕ್ತರಾದ ವ್ಯಕ್ತಿಗಳಾರೂ ಸಹ ನಿನಗೆ ಸಮಾನ ಶ್ರೋತೃಗಳಾಗಿರುವದಿಲ್ಲ. ಆದ್ದರಿಂದ ಯೋಗ್ಯಶ್ರೋತೃವಾದ ನಿನಗೆ ಶ್ರೀನಿವಾಸನ ಮಹಿಮೆಗಳನ್ನು ಹೇಳುವೆನು. ಕೇಳು. (3)

*ವೇಂಕಟಾಚಲವರ್ಣನೆ*

ಗಿರಿನಿರ್ಝರಸಂಯುಕ್ತಂ ನದೀಪ್ರಸ್ರವಣೈರ್ಯುತಮ್ ।
ವಿವಿಧೈರ್ವೃಕ್ಷಷಂಡೈಶ್ಚ ಪುಷ್ಪಿತೈರುಪಶೋಭಿತಮ್ ॥5॥

ಮಾಲತೀಕುಂದಕುಟಜೈಃ ಸಿಂಧುವಾರೈಃ ಕುರಂಟಕೈಃ ।
ಕದಂಬಾರ್ಜುನವಂಶೈಶ್ಚ ಚಂದನೈಃ ಪನಸೈಸ್ತಥಾ ॥6॥

ಅಶೋಕಬಕುಲೈರ್ಗುಂಜೈಸ್ತಮಾಲೈಃ ಸಮಲಂಕೃತಮ್ ।
ನಾನಾವಿಹಗಸಂಘುಷ್ಟಂ ಮಯೂರಾರಾವನಾದಿತಮ್ ॥7॥

ತುಷ್ಟಪುಷ್ಟಮೃಗಾಕೀರ್ಣಂ ಸಿಂಹಶಾರ್ದೂಲಶೋಭಿತಮ್ ।
ವಿಗಲನ್ಮದಧಾರೈಶ್ಚ ಗಜಸಂಘೈಃ ಸುಶೋಭಿತಮ್ ॥8॥

ಗೋಲಾಂಗೂಲಗಣೈಶ್ಚಾಪಿ ವಾನರೈರ್ಮದಗರ್ಜಿತೈಃ ।
ಕ್ರೀಡಾವಿಲಾಸನಿರತೈರ್ಮೃಗಪಕ್ಷಿಭಿರಾವೃತಮ್ ॥9॥

ನಾನಾರತ್ನಸಮಾಕೀರ್ಣಂ ಸಾನುಭಿರ್ಭೂಷಿತಂ ಗಿರಿಮ್ ।
ಬ್ರಹ್ಮಣಾ ಚ ಸಮಾದಿಷ್ಟೋ ನಾರಾಯಣದಿದೃಕ್ಷಯಾ ॥10॥

ನಾರಾಯಣಾಖ್ಯೋ ವಿಪ್ರೇಂದ್ರೋ ಗಿರಾವಾವಸ್ಮಿನ್ ಶುಭೋತ್ತರೇ ।

ರಮಾರಮಣನಾದ, ಉತ್ಪತ್ತಿರಹಿತನಾದ, ಕ್ಷರಾಕ್ಷರ ಜೀವರಾಶಿ ಗಳಿಂದ ಭಿನ್ನನಾಗಿದ್ದು ಶ್ರೇಷ್ಠನಾದ, ಜೀವರ ಹೃದಯಗುಹಾನಿವಾಸಿಯಾದ ಪರಮಾತ್ಮನು ಲಕ್ಷ್ಮೀದೇವಿಯಿಂದ ಸಹಿತನಾಗಿ ನಾನಾ ಧಾತುಗಳಿಂದ ಅಲಂಕೃತವಾದ, (4) ಸುಂದರವಾದ ನೀರಿನ ಝರಿಗಳಿಂದ ಸಮಾಯುಕ್ತವಾದ, ನದಿಗಳಿಗೆ ಆಧಾರವಾದ, ನಾನಾವಿಧವಾದ ಪಕ್ಷಿಸಮೂಹಗಳಿಂದ ಉಪೇತವಾದ, ಸುವಾಸನೆಯಿಂದ ಕೂಡಿದ ಮಲ್ಲಿಗೆ, ಕುಂದ (ಜಾಜಿ ಮಲ್ಲಿಗೆ), ಕುಟಜ (ಬೆಟ್ಟದ ಮಲ್ಲಿಗೆ), ಸಿಂಧುವಾರ (ಲೆಕ್ಕಿ), ಕರಂಟಕ ಇವೇ ಮೊದಲಾದ ಹೂವುಗಳಿಂದ ಕಂಗೊಳಿಸುತ್ತಿದ್ದ, ಬಹುವಿಧವಾದ ಪವಿತ್ರವಾದ ಕದಂಬ, ಅರ್ಜುನ, ಶ್ರೀಗಂಧ, ಹಲಸು, ಅಶೋಕ, ಬಕುಲ, ಗುಂಜ, ತಮಾಲ ಮೊದಲಾದ ವೃಕ್ಷಗಳಿಂದ ಆವೃತವಾದ, ಬಹುವಿಧವಾದ ನವಿಲು ಮೊದಲಾದ ಪಕ್ಷಿಗಳ ಕಲರವದಿಂದ ಶೋಭಿತವಾದ, ಸಿಂಹ, ಹುಲಿ, ಮದೋದಕವನ್ನು ಸ್ರವಿಸುವ ಆನೆಗಳು, ಮದಧ್ವನಿಯನ್ನು ಮಾಡುತ್ತಿದ್ದ ಕಾಡುವಾನರಗಳು, ಇನ್ನು ಅನೇಕವಾದ ಕ್ರೀಡಾವಿಲಾಸ ಗಳಿಂದೊಡಗೂಡಿದ ಮೃಗಪಕ್ಷಿಗಳಿಂದ ಉಪಶೋಭಿತವಾದ, ಬಹುಪ್ರಕಾರದ ರತ್ನಗಳಿಂದ ಅಲಂಕೃತವಾದ ಕೋಡುಗಲ್ಲುಗಳನ್ನು ಹೊಂದಿದ್ದ ಶೇಷಾಚಲವನ್ನು ಕುರಿತು ಬಂದನೋ ಆಗ ನಾರಾಯಣನೆಂಬ ಬ್ರಾಹ್ಮಣನು ಅಲ್ಲಿ ಶೇಷಾಚಲದಲ್ಲಿ ತಪಸ್ಸನ್ನು ಆಚರಿಸುತ್ತಿದ್ದನು. (5,10)

ಸ್ವಾಮಿಪುಷ್ಕರಿಣೀತೀರೇ ಸುರಸಿದ್ಧನಿಷೇವಿತೇ ॥11॥

ಇಂದ್ರಿಯಾಣಿ ನಿಯಮ್ಯಾಂತರಾಸ್ಥಿತೋ ಯೋಗಭಾವನಾಮ್ ।
ನಾರಾಯಣಂ ತ್ರಿಜಗತಾಮಧೀಶಂ ಭಕ್ತವತ್ಸಲಮ್ ॥12॥

ಶ್ರೀಭೂಮಿನೀಲಾಸಹಿತಂ ಧ್ಯಾಯನ್ ಹೃದಿ ಶುಭಾಸ್ಪದಮ್ ।
ನಾಸಾಗ್ರನ್ಯಸ್ತನಯನೋ ವಿಶುದ್ಧಾತ್ಮಾ ಚಿರಂ ದ್ವಿಜಃ ॥13॥

ತಪಶ್ಚಚಾರ ಧರ್ಮಾತ್ಮಾ ದುಶ್ಚರಂ ದುಷ್ಟಮಾನಸೈಃ ।
ಶುದ್ಧಾತ್ಮನಿ ವಿಪ್ರೇಂದ್ರೇ ತಪಸ್ಯತಿ ಚಿರಂ ತದಾ ॥14॥

ಫಲಂತಿ ವಿವಿಧಾ ವೃಕ್ಷಾಸ್ತತ್ರತ್ಯಾಃ ಸಮಯಂ ವಿನಾ ।
ಸತ್ತ್ವೇಷು ಬಲವತ್ಸತ್ತ್ವಂ ಬಬಾಧೇ ನೈವ ದುರ್ಬಲಮ್ ॥15॥

ತಪಸ್ಯತಿ ದ್ವಿಜೇ ಶಾಂತೇ ಶಾಂತಂ ಸರ್ವಮಭೂದ್ವನಮ್ ।
ಅಥಾಸ್ಮಿನ್ನಂತರೇ ತಸ್ಯ ತಪಸಾ ಪರಿತೋಷಿತಃ ॥16॥

*ನಾರಾಯಣವಿಪ್ರವೃತ್ತಾಂತ*

ಈ ನಾರಾಯಣನೆಂಬ ಬ್ರಾಹ್ಮಣನು ಪರಮಾತ್ಮನನನ್ನು ಪ್ರತ್ಯಕ್ಷೀ ಕರಿಸಿಕೊಳ್ಳಲು ಬಯಸಿ, ಬ್ರಹ್ಮದೇವರ ಆಜ್ಞೆಯಂತೆ ವೇಂಕಟಗಿರಿಯ ಉತ್ತರ ಭಾಗದಲ್ಲಿಯ, ದೇವತೆಗಳಿಂದಲೂ ಸಹ ಸೇವನೀಯವಾದ ಸ್ವಾಮಿಪುಷ್ಕರಿಣೀ ಸರೋವರದ ದಂಡೆಯಲ್ಲಿ ಕುಳಿತು (11) ತನ್ನ ಇಂದ್ರಿಯಗಳನ್ನು ಬಾಹ್ಯವಿಷಯಗಳಿಂದ ಸೆಳೆದು, ಹೃದಯಗುಹಾ ನಿವಾಸಿಯಾದ ಪರಮಾತ್ಮನನ್ನು ಯೋಗಭಾವನೆಯಿಂದ ಧ್ಯಾನಿಸುತ್ತಾ, ಭಕ್ತವತ್ಸಲನೂ, ಚರಾಚರವಾದ ಜಗತ್ತಿನ ಅಧಿಪತಿಯಾದ ಭೂಮ್ಯಂತರಿಕ್ಷ ಪಾತಾಲ ರೂಪವಾದ ಮೂರುವಿಧವಾದ ಲೋಕಗಳಿಗೂ, ಭೂತ-ವರ್ತಮಾನ-ಭವಿಷ್ಯತ್ ಜಗತ್ತಿನ ಅಧಿಪತಿಯಾದ, ಲಕ್ಷ್ಮೀ, ಭೂದೇವಿ ಮತ್ತು ದುರ್ಗಾದೇವಿಯರಿಂದ ಸಹಿತನಾದ, ಮಂಗಳಕರನಾದ ನಾರಾಯಣನನ್ನು ಯಾವಾಗಲೂ ತನ್ನ ಮನಸ್ಸಿನಲ್ಲಿ ನೆಲೆಗೊಳಿಸಿ, ಅವನನ್ನೇ ಧ್ಯಾನಿಸುತ್ತಾ, ಇನ್ನೊಬ್ಬರಿಂದ ಮಾಡಲಶಕ್ಯವಾದ ತಪಸ್ಸನ್ನು ಮಾಡಿದನು. (12-13)

ಹೀಗೆ ಶುದ್ಧಾಂತಃಕರಣನಾದ ಬ್ರಾಹ್ಮಣನು ಸಾತ್ತ್ವಿಕವಾದ ತಪವನ್ನು ಆಚರಿಸುತ್ತಿರಲು ಅವನ ತಪಸ್ಸಿನ ಪುಣ್ಯದ ಪ್ರಭಾವದಿಂದ ಆ ವನದಲ್ಲಿರುವ ವೃಕ್ಷಗಳು ಎಲ್ಲ ಕಾಲಗಳಲ್ಲಿಯೂ ಫಲವನ್ನು ಕೊಡುತ್ತಿದ್ದವು. ಪ್ರಾಣಿಗಳಲ್ಲಿ ಬಲಿಷ್ಠ ಪ್ರಾಣಿಗಳು (ಸಿಂಹ, ವ್ಯಾಘ್ರ ಮೊದಲಾದ ಪ್ರಾಣಿಗಳು) ದುರ್ಬಲ ವಾದ ಜಿಂಕೆ, ಆಕಳು ಮೊದಲಾದ ಸ್ವಭಾವವಿರೋಧಿಗಳಾದ ಪ್ರಾಣಿಗಳನ್ನು

ವಾಸುದೇವಃ ಪ್ರಾದುರಭೂದ್ವರದಃ ಸರ್ವದೇಹಿನಾಮ್ ।
ವಿನತಾಸುತಮಾರೂಢಃ ಸುಮೇರುಶಿಖರೋಪಮಮ್ ॥17॥

ದಯಿತಾಮಂಕಮಾರೋಪ್ಯ ಜ್ವಲತ್ಕಾಂಚನಮಾಲಿನೀಮ್ ।
ಯುಗಪತ್ ಸ್ಫುರಿತಾನೇಕತಡಿತ್ಸದೃಶವರ್ಚಸಮ್ ॥18॥

ಸಹಧರ್ಮಚರೀಂ ವಿಷ್ಣೋರವತಾರಾನುಕಾರಿಣೀಮ್ ।
ಭಕ್ತಾನುಕಂಪಾಭರಿತೈರಪಾಂಗೈಃ ಶೀತಲೈಃ ಸದಾ ॥19॥

ಆಹ್ಲಾದಯಂತೀಮಸಕೃಜ್ಜಗತ್ಸ್ಥಾವರಜಂಗಮಮ್ ।
ಪದ್ಮಪ್ರಿಯಾಂ ಪದ್ಮಹಸ್ತಾಂ ಪದ್ಮಾಲಯನಿವಾಸಿನೀಮ್ ॥20॥

ಉನ್ನಿದ್ರಪದ್ಮನಯನಾಂ ಪದ್ಮನಾಭಮನಃಪ್ರಿಯಾಮ್ ।
ನೀಲಜೀಮೂತಸಂಕಾಶಸ್ಫುರತ್ಪೀತಾಂಬರೋಜ್ಜ್ವಲಃ ॥21॥

ಕೊಲ್ಲುತ್ತಿರಲಿಲ್ಲ. ಸಮಗ್ರ ಲೋಕವೆಲ್ಲವೂ ಆ ಬ್ರಾಹ್ಮಣನು ತಪಸ್ಸನ್ನು ಆಚರಿಸುತ್ತಿದ್ದಾಗ ಶಾಂತವಾಗಿದ್ದಿತು. (16)

*ತಪಸ್ತುಷ್ಟನಾದ ಭಗವಂತನ ಆವಿರ್ಭಾವ-ವರ್ಣನ*

ಹೀಗಿರಲು ಒಂದು ಶುಭ ದಿನದಲ್ಲಿ ನಾರಾಯಣ ಬ್ರಾಹ್ಮಣನ ತಪಸ್ಸಿನಿಂದ ಪರಿತುಷ್ಟನಾದ, ಸರ್ವದೇಹಿಗಳಲ್ಲಿ ವಾಸವಾಗಿರುವ, ಸಮಗ್ರ ಜೀವರ ಅಭೀಷ್ಟಗಳನ್ನು ಪೋರೈಸುವ ವಾಸುದೇವನು ಪ್ರತ್ಯಕ್ಷನಾದನು. ಅವನು ಸ್ವರ್ಣವರ್ಣೋಪೇತವಾದ ಮೇರುಶಿಖರದಂತೆ ಕಂಗೊಳಿಸುತ್ತಿದ್ದ ವಿನತೆಯ ಮಗನಾದ ಗರುಡನನ್ನು ಏರಿಕೊಂಡು ಬಂದಿದ್ದನು. (17)

ಪ್ರಕಾಶಮಾನವಾದ ಬಂಗಾರದ ಹಾರಗಳನ್ನು ಧರಿಸಿದ್ದ, ಒಮ್ಮೆಲೇ ಮಿಂಚಿದ ಸಾವಿರಾರು ಮಿಂಚುಗಳಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ, ವಿಷ್ಣುವಿನ (ತನ್ನ) ಅವತಾರಗಳಲ್ಲಿ ವಿಷ್ಣುವನ್ನೇ (ತನ್ನನ್ನೇ) ಅನುಕರಿಸುವ, ಸಹಧರ್ಮಿಣಿಯಾದ, ಭಕ್ತರ ಮೇಲೆ ಅನುಗ್ರಹ-ಕರುಣೆಯನ್ನು ಬೀರುವ ತಂಪಾದ ಅಪಾಂಗ (ಕುಡಿನೋಟ)ದಿಂದ ಸ್ಥಾವರ -ಜಂಗಮ ಜಗತ್ತನ್ನು ಸಂತೋಷಗೊಳಿಸುತ್ತಿದ್ದ, (18-19) ಪದ್ಮಗಳಿಗೆ ಪ್ರಿಯಳಾದ, ಕಮಲ ಸದೃಶವಾದ ವರದ ಹಸ್ತಗಳನ್ನು ಹೊಂದಿದ, ಕಮಲಗಳನ್ನೇ ತನ್ನ ಮನೆಯನ್ನಾಗಿಸಿಕೊಂಡು ವಾಸವಾಗಿರುವ, (20) ತಂದ್ರಾ, ನಿದ್ರೆ, ಭಯ ಮೊದಲಾದ ದೋಷಗಳಿಂದ ವಿದೂರಳಾದ, ಅಪರಿಮಿತ ಸಂತೋಷದಿಂದ ವಿಕಸಿತವಾದ ಕಮಲಸದೃಶ ನಯನಗಳನ್ನು ಹೊಂದಿದ್ದ, ತನ್ನ ಮನಃಪ್ರಿಯೆಯಾದ, ಪತ್ನಿಯಾದ ಲಕ್ಷ್ಮೀದೇವಿಯನ್ನು ತನ್ನ ತೊಡೆಯಲ್ಲಿರಿಸಿಕೊಂಡು ಪರಮಾತ್ಮನು ಅಲ್ಲಿ

ತುಲಸೀದಾಮಹೃದ್ಯೇನ ಸ್ಫುರಚ್ಛ್ರೀವತ್ಸಲಕ್ಷ್ಮಣಾ ।
ಕೌಸ್ತುಭದ್ಯುತಿದೀಪ್ತೇನ ವಪುಷಾ ಸುವಿರಾಜಿತಃ ॥22॥

ನಿಬದ್ಧೋದರಬಂಧೇನ ತನುಮಧ್ಯೇನ ಶೋಭಿತಃ ।
ವಿಧಾತೃಗೃಹಜಾಲೀಕಮುಕುಲೋದ್ಭವಹೇತುನಾ ॥23॥

ನಾಭಿಹ್ರದೇನ ನಿಮ್ನೇನ ಗಂಭೀರಾವರ್ತಶೋಭಿನಾ ।
ರಂಭೇಭಹಸ್ತಶೋಭಾಭ್ಯಾಮೂರುಭ್ಯಾಮುಪಶೋಭಿತಃ ॥24॥

ಜಂಘಾಭ್ಯಾಂ ಚಾರುತೂಣೀರಸದೃಶೀಭ್ಯಾಂ ವಿರಾಜಿತಃ ।
ಪ್ರಸನ್ನವದನಾಂಭೋಜಃ ಪದ್ಮಪತ್ರಶುಭೇಕ್ಷಣಃ ॥25॥

ಜ್ಯೋತಿರ್ಮಯೇನ ವಪುಷಾ ದೀಪ್ಯಮಾನೋಽಗ್ರತಃ ಸ್ಥಿತಃ ।
ಅಥ ನಾರಾಯಣಂ ವಿಪ್ರೋ ಹರ್ಷಪರ್ಯಾಕುಲೇಕ್ಷಣಃ ॥26॥

ಆವಿರ್ಭಾವವನ್ನು ಹೊಂದಿದನು. ಅವನು ವರ್ಷಾಕಾಲದ ಮೇಘದಂತೆ ಕೃಷ್ಣವರ್ಣದ ಕಾಂತಿಯಿಂದ ಕೂಡಿದ, ಹೊಳೆಯುವ ಪೀತಾಂಬರವನ್ನು ಧಾರಣಮಾಡಿದ್ದ ಶರೀರದ ಕಾಂತಿಯಿಂದ ವಿರಾಜಮಾನನಾಗಿದ್ದನು. (21) ಮನೋಹರವಾದ ತುಲಸೀ ಹಾರ, ಶ್ರೀವತ್ಸ ಚಿಹ್ನೆ, ಕಂಠದಲ್ಲಿರುವ ಕೌಸ್ತುಭ ಮಣಿಯ ಕಾಂತಿಯಿಂದ ಪ್ರಕಾಶಿತವಾದ ದೇಹಸಿರಿಯಿಂದ ಪರಮಾತ್ಮನು ಪ್ರಕಾಶಿಸುತ್ತಿದ್ದನು. (22) ಉದರ ಬಂಧದಿಂದ (ಉಡುದಾರ) ದಿಂದ ಉಪೇತವಾದ, ಸೂಕ್ಷ್ಮವೂ, ಮೃದುವೂ ಆದ ಉದರದಿಂದ ಪರಮಾತ್ಮನು ಕಂಗೊಳಿಸುತ್ತಿದ್ದನು. ಚತುರ್ಮುಖ ಬ್ರಹ್ಮದೇವರ ಶರೀರವಾದ ಬ್ರಹ್ಮಾಂಡದ ಉದ್ಭವಕ್ಕೆ ಕಾರಣವಾದ ಕಮಲದ ಹುಟ್ಟಿಗೆ ಕಾರಣವಾದ, (23) ಅತ್ಯಂತ ಸುಂದರವಾದ, ಗಂಭೀರವಾದ, ಸುರುಳಿ ಸುರುಳಿಯಾದ ನಾಭಿಪ್ರದೇಶದಿಂದ ಕೂಡಿದ್ದನು. ಬಾಳೆಯ ದಿಂಡಿನಂತೆ ಪುಷ್ಟವಾದ, ಆನೆಯ ಸೊಂಡೆಯಂತೆ ಕ್ರಮವೃತ್ತವಾದ ಸುಂದರವಾದ ತೊಡೆಗಳನ್ನು ಹೊಂದಿ ಶೋಭಿಸುತ್ತಿದ್ದನು. (24) ಸುಂದರವಾದ ತೋಣಿರದಂತಿರುವ ಜಂಘೆಗಳನ್ನು (ಮೊಳಕಾಲು) ಗಳನ್ನು ಹೊಂದಿದ ಪರಮಾತ್ಮನು ಅತ್ಯಂತ ಸುಂದರವಾಗಿ ಹೊಳೆಯುತ್ತಿದ್ದನು. ಕಮಲದ ಎಲೆಯಂತೆ ಸುಂದರವಾದ ಕಣ್ಣುಗಳಿಂದ ಕೂಡಿದ್ದು ಸದಾ ಪ್ರಸನ್ನವಾದ ಮುಖವನ್ನು ಹೊಂದಿದ್ದನು. ತೋಜೋಮಯವಾದ, ಅಪ್ರಾಕೃತವಾದ ದೇಹದಿಂದ ಹೊಳೆಯುತ್ತಿದ್ದ ಪರಮಾತ್ಮನು ವೇಂಕಟಗಿರಿಯಲ್ಲಿ ನಾರಾಯಣ ವಿಪ್ರನ ಎದುರು ಪ್ರತ್ಯಕ್ಷವಾಗಿ ನಿಂತನು. (25–26)

ಅನಂತರದಲ್ಲಿ ನಾರಾಯಣ ಬ್ರಾಹ್ಮಣನು ಎದುರು ನಿಂತಿದ್ದ ವರದನಾದ ಪರಮಾತ್ಮನನ್ನು

ಸರ್ವದಾನಂದಸಂದೋಹನಯನಾಶ್ರುಸಮಾಪ್ಲುತಃ ।
ಆನಂದಾಮೃತಸಾರಾಬ್ಧೌ ಮಗ್ನಃ ಕಿಂಚಿನ್ನ ಬುಧ್ಯತೇ ॥27॥

ಪ್ರದಕ್ಷಿಣಂ ತದಾ ಕೃತ್ವಾ ಭಗವಂತಂ ದಯಾನಿಧಿಮ್ ।
ಭಕ್ತ್ಯಾ ಪರಮಯಾವಿಷ್ಟೋ ವಿವೇದಾನಂತರಂ ನ ಸಃ ॥28॥

ಕಿಂ ಕರ್ತವ್ಯಮಜಾನಾನೋ ಮುಹೂರ್ತಂ ಸ್ಥಾವತಿಷ್ಠತೇ ।
ಅಥೈನಂ ಪರಿತುಷ್ಟಾವ ವಾಗ್ಭಿರಗ್ರ್ಯಾಭಿರಾಕುಲಃ ॥29॥

ವಿಪ್ರ ಉವಾಚ–

'ದೇವದೇವ ಜಗನ್ನಾಥ ಪ್ರಸೀದ ಪುರುಷೋತ್ತಮ ।
ಪರಿಪಾಲಯ ಮಾಂ ಭಕ್ತಂ ಶರಣಾಗತವತ್ಸಲ ॥30॥

ಕಾಲಾಭ ಕರುಣಾಸಾರ ಕರೀಂದ್ರವರದ ಪ್ರಭೋ ॥
ಅವಲೋಕಯ ಮಾಂ ನಾಥ ಶೀತಲೈರ್ನಯನಾಂಚಲೈಃ ॥31॥

ತ್ವಮೇವ ಧಾತಾ ಸರ್ವಸ್ಯ ಜಗತೋಽಸ್ಯ ಜಗನ್ಮಯಃ ।

ನೋಡಿ ಅತ್ಯಂತ ಸಂತೋಷವನ್ನು ಹೊಂದಿ, ಸಂತೋಷದಿಂದ ಅರಳಿದ ಕಣ್ಣುಗಳನ್ನು ಹೊಂದಿ, ಆನಂದ ಬಾಷ್ಪಗಳನ್ನು ಸುರಿಸುತ್ತಾ, ಆನಂದವೆಂಬ ಸಮುದ್ರದಲ್ಲಿ ಮುಳುಗಿದವನಾಗಿ, ಬಾಹ್ಯಪ್ರಪಂಚದ ಯಾವ ವಿಷಯಗಳನ್ನೂ ತಿಳಿಯದಾದನು. (28) ಅನಂತರ ದಯಾನಿಧಿಯಾದ ಷಡ್ಗುಣ್ಯೈಶ್ವರ್ಯ ಸಂಪನ್ನನಾದ ಪರಮಾತ್ಮನನ್ನು ಅತ್ಯಂತ ಭಕ್ತಿಯಿಂದ ಪ್ರದಕ್ಷಿಣೆ ಮಾಡಿ, ಕಿಂಕರ್ತವ್ಯ ಮೂಢನಾಗಿ, (ಏನು ಮಾಡಬೇಕೆಂದು ತಿಳಿಯದೆ) ಒಂದು ಮುಹೂರ್ತ ಕಾಲ (ಎರಡು ಗಳಿಗೆ–48 ನಿಮಿಷ) ಹಾಗೆಯೇ ಪರಮಾತ್ಮನನ್ನು ನೋಡುತ್ತಾ ನಿಂತು, ಅನಂತರ ಉತ್ತಮವಾದ ವಾಕ್ಯಗಳಿಂದ ರಮಾರಮಣ ನಾದ ಪರಮಾತ್ಮನನ್ನು ಸ್ತೋತ್ರಮಾಡಿದನು. (29)

*ನಾರಾಯಣ ವಿಪ್ರಕೃತ ಭಗವತ್ಸ್ತುತಿಃ*

'ಹೇ ದೇವದೇವನಾದ ಜಗನ್ನಾಥನೇ! ಪುರುಷೋತ್ತಮನೇ! ನನ್ನ ಮೇಲೆ ಪ್ರಸನ್ನನಾಗು. ಶರಣಾಗತವತ್ಸಲನಾದ ಭಗವಂತನೇ! ನಿನ್ನ ಭಕ್ತನಾದ ನನ್ನನ್ನು ಪಾಲಿಸು. (30) ಕೃಷ್ಣವರ್ಣೋಪೇತನಾದ, ಕಾಲಸ್ವರೂಪಿಯಾದ, ಕರುಣಾಸಾಗರನಾದ, ಗಜೇಂದ್ರವರದನಾದ ಜಗತ್ಪ್ರಭುವಾದ, ಸಕಲ ನಿಯಾಮಕನಾದ ಹೇ ಒಡೆಯನೇ! ನನ್ನನ್ನು ನಿನ್ನ ಕರುಣಾರ್ದ್ರವಾದ ಕಣ್ಣಿನ ಕೊನೆಯಿಂದ (ಕುಡಿನೋಟ–ಅಪಾಂಗ) ದಿಂದ ನಮ್ಮನ್ನು ನೋಡುವವನಾಗು. (31) ಈ ಜಗತ್ತಿಗೆ ನೀನೇ ಉತ್ಪಾದಕನಾಗಿದ್ದು, ನಿನ್ನಿಂದ ಉತ್ಪನ್ನವಾದ ಜಗತ್ತನ್ನು ನೀನೇ ಪ್ರವೇಶಿಸಿ,

ರಕ್ಷಿತಾ ಚ ತ್ವಮೇವಾಸ್ಯ ಸಂಹರ್ತಾ ಚ ಸುರೇಶ್ವರ ॥32॥

ಪ್ರಕೃತಿಃ ಪುರುಷಶ್ಚೈವ ಸರ್ಗಕಾಲೇ ಸುಸಂಗತೌ ।
ತವೇಕ್ಷಣವಶೇನೈವ ಸೃಜತೋ ಜಗದವ್ಯಯಮ್ ॥33॥

ನ ತ್ವತ್ಸಮೋಽಸ್ತಿ ಲೋಕೇಽಸ್ಮಿನ್ನಾಥ ಲೋಕತ್ರಯೇಽಪಿ ವಾ ।
ಕುತಸ್ತ್ವದಧಿಕಸ್ತಸ್ಮಾನ್ನಿಃಸಮೋಽಭ್ಯಧಿಕೋ ಭವಾನ್ ॥34॥

ವೇತ್ತಾ ತ್ವಮಸಿ ವೇದ್ಯಂ ಚ ವೇದನೋಪಾಯ ಏವ ಚ ।
ವೇದನಂ ಚ ಫಲಂ ತಸ್ಯ ತ್ವದೃತೇ ನಾಸ್ತಿ ಕಿಂಚನ ॥35॥

ವೇತ್ತಾ ತ್ವಮಸಿ ಲೋಕಸ್ಯ ಸರ್ವಸ್ಯ ಜಗತಃ ಪತೇ ।
ಮಾತಾ ಸ್ವಯಂ ವಿಶಾಲಾಕ್ಷೀ ಲಕ್ಷ್ಮೀರೇವಾನಪಾಯಿನೀ ॥36॥

ವಿಧಾತೃಪ್ರಮುಖಾ ದೇವಾಃ ಸನಕಾದ್ಯಾಶ್ಚಯೋಗಿನಃ ।
ಮಹತಾ ತಪಸಾ ವಾಽಪಿ ನ ತ್ವಾಂ ಜಾನಂತಿ ತತ್ತ್ವತಃ ॥37॥

ಜಗನ್ಮಯನೆನಿಸಿರುವಿ. ದೇವತೆಗಳಿಗೂ ಸ್ವಾಮಿಯಾದ ಪರಮಾತ್ಮನೇ! ಈ ಜಗತ್ತಿನ ರಕ್ಷಕನೂ ಮತ್ತು ಸಂಹಾರಕನೂ ನೀನೇ ಆಗಿರುವಿ. (32) ಸೃಷ್ಟಿಯ ಆದಿಭಾಗದಲ್ಲಿ ಜಗತ್ತಿಗೆ ಕಾರಣಗಳೆನಿಸಿದ ಪ್ರಕೃತಿ (ಅವ್ಯಕ್ತತತ್ತ್ವ) ಮತ್ತು ಪುರುಷ (ಮಹತ್ತತ್ತ್ವ)ಗಳು ನಿನ್ನ ದರ್ಶನ ಮಾತ್ರದಿಂದಲೇ ಪ್ರಚೋದಿತವಾಗಿ ಸೃಷ್ಟಿಯನ್ನು ಮಾಡುವವು. ಹೀಗೆ ಅವ್ಯಯ ಸ್ವರೂಪಿಯಾದ ನೀನು ಕ್ಷಣಮಾತ್ರದಲ್ಲಿ ಸತ್ಯವಾದ ಜಗತ್ತಿನ ಸೃಷ್ಟಿಯನ್ನು ಮಾಡುವೆ. (33) ಹೇ ಸ್ವಾಮಿಯಾದ ಶ್ರೀನಿವಾಸನೇ! ಮೂರು ಲೋಕಗಳಲ್ಲಿ ನಿನಗೆ ಸಮಾನರಾದ ವ್ಯಕ್ತಿಗಳಾರೂ ಇರುವದಿಲ್ಲ. ಅಂದಮೇಲೆ ನಿನಗಿಂತ ಅಧಿಕರಾದ ವ್ಯಕ್ತಿಗಳೆಲ್ಲಿಂದ ಬರುವರು? ಆದ್ದರಿಂದ ನೀನು ಸರ್ವಾಭ್ಯಧಿಕನೂ ನಿಸ್ಸಮನೂ ಆಗಿರುವಿ.(34) ಸರ್ವಜ್ಞನಾದ ನೀನು ಮುಕ್ತಿಯನ್ನು ಬಯಸುವ ಎಲ್ಲರಿಂದಲೂ ಅವಶ್ಯಜ್ಞೇಯನಾಗಿರುವಿ ನಿನ್ನನ್ನು ತಿಳಿಯಲು ಅವಶ್ಯವಾದ ಉಪಾಯವೂ ಸಹ ನೀನೇ ಆಗಿರುವಿ. ವೇದನಕ್ರಿಯಾಜನ್ಯವಾದ ಫಲ (ಜ್ಞಾನ) ಇವುಗಳೆಲ್ಲವೂ ಸಹ ನೀನೇ ಆಗಿರುವಿ. ವಿರುದ್ಧಧರ್ಮಾಧಿಕರಣನಾದ ನಿನ್ನಂತಿರುವ ಮತ್ತೊಂದು ಪದಾರ್ಥವಾವದೂ ಸಹ ಈ ಬ್ರಹ್ಮಾಂಡದಲ್ಲಿ ಇರುವದಿಲ್ಲ. (35) ಎಲ್ಲ ಲೋಕವನ್ನೂ ತಿಳಿದಿರುವ ಜಗತ್ಪತಿಯು ನೀನಾಗಿರುವಿ. ಸಂತೋಷದಿಂದ ವಿಕಸಿತವಾದ ವಿಶಾಲವಾದ ನೇತ್ರಗಳನ್ನು ಹೊಂದಿರುವ ಜಗತ್ತಿಗೆ ತಾಯಿಯಾದ ಲಕ್ಷ್ಮೀದೇವಿಯು ನಿನ್ನನ್ನು ಬಿಟ್ಟೊಂದು ಕ್ಷಣವೂ ಸಹ ಇರದೇ ಯಾವಾಗಲೂ ನಿನ್ನನ್ನೇ ಆಶ್ರಯಿಸಿರುವಳು. (36) ಬ್ರಹ್ಮದೇವರೇ ಮೊದಲಾದ ದೇವತೆಗಳಾಗಲೀ ಅಥವಾ ಸನಕಾದಿ ಯೋಗಿಗಳೇ ಆಗಲಿ ಮಹತ್ತರ ತಪಸ್ಸನ್ನಾಚರಿಸಿದರೂ

ನ ವೇದಾಧ್ಯಯನೇನ ತ್ವಂ ನ ಯಜ್ಞೈರ್ನ ಯಮೈರಪಿ ।
ನ ದಾನೈಶ್ಚ ತಪೋಯೋಗೈರ್ವಿನಾ ಭಕ್ತ್ಯಾ ನ ದೃಶ್ಯಸೇ ॥38॥

ಮದ್ಭಾಗ್ಯೋಪಚಯೇನ ತ್ವಂ ದೃಗ್ಗೋಚರಮುಪಾಗತಃ ।
ನಿಜರೂಪಂ ಚ ದೇವೇಶ ಪ್ರದರ್ಶಯ ದಯಾನಿಧೇ ॥39॥

ಧನ್ಯೋಽಸ್ಮ್ಯನುಗೃಹೀತೋಽಸ್ಮಿ ದರ್ಶನೇನ ತವ ಪ್ರಭೋ ।
ಚಕ್ಷುಷೋಃ ಸಫಲಂ ಜನ್ಮ ಜಾತಮದ್ಯ ಸುರೇಶ್ವರ ॥40॥

ನ ತ್ವಾಂ ಪಶ್ಯತಿ ಯೋ ಮರ್ತ್ಯೋ ವ್ಯರ್ಥಜನ್ಮಾ ಸ ಮೇ ಮತಃ।
ದರ್ಶನೇನೈವ ಮಚ್ಚಿತ್ತಮಾಪ್ನೋಽತ್ಯನ್ತತುಲ್ಯತಾಮ್' ॥41॥

ಏವಂ ಸ್ತುವತಿ ವಿಪ್ರೇಂದ್ರೇ ಭಗವಾನ್ ಪ್ರೀತಮಾನಸಃ ।
ತಮುವಾಚ ಪ್ರಸನ್ನಾಕ್ಷೋ ಮೇಘಗಂಭೀರಯಾ ಗಿರಾ ॥42॥

ಶ್ರೀಭಗವಾನುವಾಚ–

'ತಪಶ್ಚರಸಿ ವಿಪ್ರೇಂದ್ರ ಕಸ್ತ್ವಮತ್ರ ಜಿತೇಂದ್ರಿಯಃ ।

ಸಹ ನಿನ್ನನ್ನು ಸಂಪೂರ್ಣವಾಗಿ ತಿಳಿಯಲು ಅಶಕ್ಯರಾಗಿರುವರು. (37) ನಿನ್ನಲ್ಲಿ ಭಕ್ತಿಯನ್ನು ಮಾಡದ ಕೇವಲ ವೇದಾಧ್ಯಯನದಿಂದ, ದಾನದಿಂದ, ಯಜ್ಞಾನುಷ್ಠಾನದಿಂದಾಗಲೀ ಯಮ–ನಿಯಮಗಳಿಂದಲೇ ಆಗಲೀ, ಕಠೋರವಾದ ತಪಸ್ಸುಗಳಿಂದಲೇ ಆಗಲೀ ನೀನು ದರ್ಶನವನ್ನು ಕೊಡುವದಿಲ್ಲ. ಕೇವಲ ಭಕ್ತಿಯಿಂದ ಮಾತ್ರ ನೀನು ಪ್ರಸನ್ನನಾಗಿ ಅನುಗ್ರಹವನ್ನು ಮಾಡಿ, ನಿನ್ನ ಸ್ವರೂಪದರ್ಶನವನ್ನು ಭಕ್ತರಿಗೆ ಉಂಟುಮಾಡುವಿ. (38) ನನ್ನ ಸುಕೃತದ ಫಲವಾಗಿ ನೀನಿಂದು ನನ್ನ ಮುಂದೆ ಪ್ರತ್ಯಕ್ಷನಾಗಿರುವೆ. ಹೇ ದಯಾನಿಧಿಯಾದ ಪರಮಾತ್ಮನೇ! ನಿನ್ನ ಮುಕ್ತಿದಾಯಕವಾದ ನಿಜಸ್ವರೂಪವನ್ನು ನನಗೆ ತೋರಿಸು.(39) ನಿನ್ನ ಶ್ರೇಷ್ಠವಾದ ಸ್ವರೂಪದರ್ಶನದಿಂದಲೇ ನಾನು ಧನ್ಯನಾಗುವೆನು. ನಿನ್ನಿಂದ ಅನುಗೃಹೀತನಾದೆನು. ನಿನ್ನ ಈ ರೂಪದರ್ಶನದಿಂದ ನನ್ನ ಕಣ್ಣುಗಳು ಸಫಲವಾದವು. ನನ್ನ ಜನ್ಮವು ಸಾರ್ಥಕವಾಯಿತು. (41) ಯಾವ ಮನುಷ್ಯನು ನಿನ್ನ ದರ್ಶನವನ್ನು ಹೊಂದುವದಿಲ್ಲವೋ ಅವನ ಜನ್ಮವು ವ್ಯರ್ಥವೇ ಸರಿ. ನಿನ್ನ ದರ್ಶನ ಮಾತ್ರದಿಂದಲೇ ನನ್ನ ಮನಸ್ಸು ಅತ್ಯಂತ ಹೃಷ್ಟವಾಗಿದೆ. ನಾನೇನು ಮಾಡುತ್ತಿರುವೆನೆಂಬುದನ್ನು ತಿಳಿಯದವನಾಗಿದ್ದೇನೆ.

*ಭಗವಂತನಿಂದ ವರವನ್ನು ಪಡೆಯಲು ಆಜ್ಞೆ*

ಹೀಗೆ ಶ್ರೇಷ್ಠನಾದ ನಾರಾಯಣ ಬ್ರಾಹ್ಮಣನು ಸ್ತೋತ್ರಮಾಡುತ್ತಿರಲು ಸುಪ್ರೀತನಾದ, ಪ್ರಸನ್ನ ನಯನನಾದ ಭಗವಂತನು ಮೋಡದಂತೆ ಗಂಭೀರವಾದ ಧ್ವನಿಯಿಂದ (42) 'ಹೇ ಬ್ರಾಹ್ಮಣನೇ!

**ಕಿಮರ್ಥಂ ಚ ವದಾದ್ಯ ತ್ವಂ ದಾಸ್ಯಾಮ್ಯಹಮಭೀಪ್ಸಿತಮ್ ॥43॥**

**ನಾರಾಯಣ ಉವಾಚ–**

**'ವರದೋ ಯದಿ ದೇವೇಶ ಶ್ರೀನಿಧೇ ಕರುಣಾನಿಧೇ ।**
**ವೃಣೋಮಿ ವರಮಿಷ್ಟಂ ಮೇ ಶೃಣುಷ್ವ ಪ್ರೀತಮಾನಸಃ ॥44॥**

**ಅಹಂ ನಾರಾಯಣೋ ನಾಮ ಭವದ್ದರ್ಶನಕಾಂಕ್ಷಯಾ ।**
**ಭುವಂ ಸರ್ವಾಂ ಪರಿಕ್ರಮ್ಯ ನಾಪಶ್ಯಂ ತ್ವಾಮಹಂ ಪ್ರಭೋ ॥45॥**

**ಬ್ರಹ್ಮಾಣಂ ತಪಸಾಽಽರಾಧ್ಯ ತನ್ನಿರ್ದಿಷ್ಟೋಽಹಮಾಗತಃ ।**
**ಸ್ವಾಮಿಪುಷ್ಕರಿಣೀತೀರೇ ತಪಸಾರಾಧಿತೋ ಭವಾನ್ ॥46॥**

**ತಪಶ್ಚರನ್ವಸಾಮ್ಯದ್ಯ ಚಿರೇಣ ನಿಯತೇಂದ್ರಿಯಃ ।**
**ಏವಂ ಕಿಲ ತಪಶ್ಚರ್ತುಮಶಕ್ಯಂ ಭುವಿ ಮಾನವೈಃ ॥47॥**

**ತೇಷಾಮನುಗ್ರಹಾರ್ಥಾಯ ಸರ್ವಪ್ರತ್ಯಕ್ಷಗೋಚರಃ ।**

ನೀನಾರು? ಜೀತೇಂದ್ರಿಯನಾಗಿದ್ದು ಯಾವದರಗೋಸ್ಕರವಾಗಿ ತಪಸ್ಸನ್ನಾಚರಿಸಿರುವೆ? ಅದನ್ನು ಹೇಳು. ಇಂದು ನಾನು ನಿನ್ನ ಅಭೀಪ್ಸಿತ ಗಳೆಲ್ಲವನ್ನೂ ಕೊಡುವೆನು. ಕೇಳಿಕೋ' ಎಂದು ನುಡಿದನು. (43)

*ಸರ್ವಜನದೃಗ್ಗೋಚರತ್ವವರಯಾಚನೆ*

ಆಗ ನಾರಾಯಣ ಬ್ರಾಹ್ಮಣನು – 'ಹೇ ಭಗವತನೇ! ಲಕ್ಷ್ಮೀಪತಿಯೇ! ವರದಾತಾರರೆನಿಸಿದ ಬ್ರಹ್ಮಾದಿದೇವತೆಗಳಿಗೂ ಸಹ ವರದನಾದ ದೇವೇಶನೇ! ನೀನಿಂದು ವರವನ್ನು ಕೊಡಲು ಬಂದಿರುವನಾದಲ್ಲಿ ನನಗೆ ಅಭಿಮತವಾದ ವರವನ್ನು ಕೇಳುವೆನು. ದಯವಿಟ್ಟು ನನ್ನ ಮೇಲೆ ಅನುಗ್ರಹವನ್ನು ಮಾಡುವವನಾಗಿ ಕೇಳಿಸಿಕೊ. (44) ನಾನು ನಾರಾಯಣನೆಂಬ ಬ್ರಾಹ್ಮಣನು. ನಿನ್ನ ದರ್ಶನವನ್ನು ಹೊಂದಲು ಇಡೀ ಭೂಮಂಡಲವನ್ನು ತಿರುಗಿದೆನು. ಆದರೆ ಎಲ್ಲಿಯೂ ಸಹ ನಿನ್ನ ಪ್ರತ್ಯಕ್ಷದರ್ಶನವನ್ನು ಪಡೆಯಲು ಸಮರ್ಥನಾಗಲಿಲ್ಲ. (45) ಆಗ ನಾನು ಚತುರ್ಮುಖ ಬ್ರಹ್ಮದೇವರನ್ನು ತಪಸ್ಸಿನಿಂದ ಆರಾಧಿಸಿ, ಪ್ರಸನ್ನೀಕರಿಸಿಕೊಂಡು, ಅವರ ನಿರ್ದೇಶದಂತೆ ಈ ಕ್ಷೇತ್ರಕ್ಕೆ ಬಂದೆನು. ಇಲ್ಲಿಯ ಸ್ವಾಮಿಪುಷ್ಕರಿಣೀತೀರದಲ್ಲಿ ತಪಸ್ಸನ್ನು ಆಚರಿಸಿ, ನಿನ್ನನ್ನು ಆರಾಧಿಸಿದೆನು. ಬಹುಕಾಲಪರ್ಯಂತರವಾಗಿ ಇಂದ್ರಿಯನಿಗ್ರಹಾದಿಗಳಿಂದ ನಿನ್ನನ್ನೇ ತಪಸ್ಸಿನಿಂದ ಆರಾಧಿಸುವವನಾಗಿ ಇಲ್ಲಿಯೇ ವಾಸವಾಗಿರುವೆನು. ಆದರೆ ಭೂಮಿಯಲ್ಲಿರುವ ಎಲ್ಲ ಮನುಜರಿಗೂ ಸಹ ಈ ಕ್ಷೇತ್ರಕ್ಕೆ ಬಂದು ತಪಸ್ಸನ್ನಾಚರಿಸಿ ಸಿದ್ಧಿಯನ್ನು ಹೊಂದುವದು ಸುಲಭ ಸಾಧ್ಯವಲ್ಲವಲ್ಲವೇ?

ಸರ್ವಾಭೀಷ್ಟಂ ದದನ್ನಿತ್ಯಂ ಸ್ವಾಮಿಪುಷ್ಕರಿಣೀತಟೇ ॥48॥

ಅನಂತವಿಹಗೇಶಾನಸೇನಾಪತಿಮುಖ್ಯೈಃ ಸದಾ ।
ಸೇವ್ಯಮಾನಃ ಶ್ರಿಯಾ ಸಾರ್ಧಂ ವಿಹರನ್ ವಸ ಮಾಧವ ॥49॥

ಗಿರಿಶ್ಚಾಯಂ ಹಿ ಮನ್ನಾಮ್ನಾ ಪ್ರಸಿದ್ಧಿಮಧಿಗಚ್ಛತು' ।

ಶ್ರೀಭಗವಾನುವಾಚ –

'ತಥಾ ಭವತು ವಿಪ್ರೇಂದ್ರ ವಚನಂ ತವ ಸುವ್ರತ ॥50॥

ಬ್ರಾಹ್ಮಣೋ ಯದಿ ವಾ ವೈಶ್ಯಃ ಕ್ಷತ್ರಿಯಃ ಶೂದ್ರ ಏವ ವಾ ।
ಸಪಾಪೋ ಯದಿ ವಾಽಪಾಪಃ ಸ್ವಾಮಿಪುಷ್ಕಾರಿಣೀಜಲೇ ॥51॥

ಸ್ನಾತ್ವಾ ತತ್ರ ವಸಂತಂ ಮಾಂ ಯೇ ನಮಸ್ಯಂತಿ ಮಾನವಾಃ ।
ದದಾಮ್ಯಾಕಲ್ಪಮೇವಾಹಂ ತೇಷಾಂ ವಾಸಂ ತ್ರಿವಿಷ್ಟಪೇ ॥52॥

ಯಃ ಕರೋತ್ಯಾಪ್ಲವಂ ಸ್ವಾಮಿಸರಸೀಜಲಮಧ್ಯತಃ ।

(46–47) ಆದ್ದರಿಂದ ಹೇ ಸ್ವಾಮಿಯೇ! ಭೂಮಿಯಲ್ಲಿರುವ ಸಜ್ಜನರ ಅನುಗ್ರಹಾರ್ಥವಾಗಿ ನೀನು ಇಲ್ಲಿ ಎಲ್ಲರಿಗೂ ಪ್ರತ್ಯಕ್ಷವಾಗಿ ಕಾಣಿಸುವವನಾಗು. ನಿನ್ನನ್ನು ಪ್ರಾರ್ಥಿಸುವ ಜನರ ಎಲ್ಲ ಅಭೀಷ್ಟಗಳನ್ನು ಕೊಡುವವನಾಗಿ ನೀನು ಇಲ್ಲಿಯೇ ಸ್ವಾಮಿಪುಷ್ಕರಣೀ ದಂಡೆಯಲ್ಲಿ ವಾಸವನ್ನು ಮಾಡು. (48) ಹೇಲಕ್ಷ್ಮೀಪತಿಯಾದ ಮಾಧವನೇ! ಶೇಷ, ಗರುಡ, ವಿಷ್ವಕ್ಸೇನರೇ ಮೊದಲಾದ ದೇವತೆಗಳಿಂದ ಸೇವೆಯನ್ನು ಹೊಂದಿ, ಲಕ್ಷ್ಮೀದೇವಿಯೊಂದಿಗೆ ವಿಹಾರವನ್ನು ಮಾಡುವವನಾಗಿ ಈ ಪರ್ವತದಲ್ಲಿಯೇ ವಾಸವನ್ನು ಮಾಡು. ಇನ್ನು ಮುಂದೆ ಈ ಪರ್ವತವು ನನ್ನ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದಲಿ' ಎಂದು ಪ್ರಾರ್ಥಿಸಿದನು.

*ಭಗವಂತನ ಅಂಗೀಕಾರ*

ಆಗ ಭಗವಂತನಾದ ನಾರಾಯಣನು – 'ಹೇ ವಿಪ್ರಶ್ರೇಷ್ಠನೇ! ಉತ್ತಮವಾದ ವ್ರತಗಳನ್ನು ಆಚರಿಸಿರುವವನೇ! ನೀನು ಕೇಳಿದಂತೆಯೇ ಆಗಲಿ. ನಿನ್ನ ಮಾತಿನಂತೆ ನಾನು ನಡೆಯುತ್ತೇನೆ (ನಿನ್ನ ಮಾತನ್ನು ಸತ್ಯವಾಗಿಸುತ್ತೇನೆ). (50) ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೇ ಆಗಲೀ, ಪಾಪಿಷ್ಠನಾಗಲಿ ಅಥವಾ ಪುಣ್ಯವಂತನಾಗಲಿ – ಹೀಗೆ ಯಾರೇ ಆಗಲೀ ಸ್ವಾಮಿಪುಷ್ಕರಿಣಿ ಸರಸ್ಸಿನಲ್ಲಿ ಸ್ನಾನವನ್ನು ಮಾಡಿ, ಅದರ ದಡದಲ್ಲಿರುವ ನನ್ನನ್ನು ನಮಸ್ಕರಿಸುವರೋ ಅಂತಹ ಮನುಷ್ಯರಿಗೆ ಈ ಕಲ್ಪಪರ್ಯಂತರವಾಗಿ ಸ್ವರ್ಗವಾಸವನ್ನು ಕೊಡುತ್ತೇನೆ. (51–52) ಯಾರು ಸ್ವಾಮಿಪುಷ್ಕರಿಣಿಯ ನೀರಿನಲ್ಲಿ ಮುಳುಗಿ ಸ್ನಾನವನ್ನು ಮಾಡುವರೋ ಅವರು ಸರ್ವಪಾಪಗಳನ್ನು

ಸೋಽತೀತ್ಯ ನಿರುಯಂ ಸರ್ವಂ ಬ್ರಹ್ಮಭೂಯಾಯ ಕಲ್ಪ್ಯತೇ ॥53॥

ಭುಕ್ತಿಮುಕ್ತಿಪ್ರದಂ ನೃಣಾಂ ಸರ್ವಸಿದ್ಧಿಪ್ರದಾಯಕಮ್ ।
ಇದಂ ಸ್ಥಾನಂ ಸರಶ್ಚೇದಂ ನಾತ್ರ ಕಾರ್ಯಾ ವಿಚಾರಣಾ ॥54॥

ಅದ್ಯ ಪ್ರಭೃತಿ ಚೈವಾಯಂ ಗಿರಿಸ್ತ್ವನ್ನಾಮತಃ ಸದಾ ।
ನಾರಾಯಣಾಚಲ ಇತಿ ಪ್ರಸಿದ್ಧೋ ಭವತು ದ್ವಿಜ ॥55॥

ಇತಿ ತಸ್ಮೈ ವರಂ ದತ್ವಾ ಸ್ವಸಾಯುಜ್ಯಂ ದದೌ ಹರಿಃ ।
ಸ್ವಾಮಿಪುಷ್ಕರಿಣೀತೀರೇ ಸ್ವಸಂಕಲ್ಪಾಗತೇ ತತಃ ॥56॥

ದಿವ್ಯೇ ವಿಮಾನೇ ಸರ್ವೇಷಾಂ ವಿಲೋಚನಪಥಂ ಗತಃ ।
ಶ್ರೀಭೂಮಿನೀಲಾಸಹಿತಃ ಶಂಖಚಕ್ರಗದಾಧರಃ ॥57॥

ಕೋಟಿಕಂದರ್ಪಲಾವಣ್ಯೋ ನೀಲಜೀಮೂತಸನ್ನಿಭಃ ।
ದಯಾಪರವಶೋ ನಿತ್ಯಂ ವಸತಿ ಪ್ರೀತಮಾನಸಃ ॥58॥

ಇತಿ ಶ್ರೀಬ್ರಹ್ಮಾಂಡಪುರಾಣೇ ತೀರ್ಥಖಂಡೇ ಭೃಗುನಾರದಸಂವಾದೇ ಶ್ರೀವೇಂಕಟಾಚಲಮಾಹಾತ್ಮ್ಯೇ ಭಗವದಾವಿರ್ಭಾವವರ್ಣನಂ ನಾಮ ತೃತೀಯೋಽಧ್ಯಾಯಃ॥

* * *

ಕಳೆದುಕೊಂಡು ಬ್ರಹ್ಮಲೋಕವನ್ನೇ ಹೊಂದುತ್ತಾನೆ. (53) ಈ ಸ್ವಾಮಿಪುಷ್ಕರಿಣೀ ಸರಸ್ಸು, ಈ ಕ್ಷೇತ್ರ ಇದು ಸರ್ವಸಿದ್ಧಿ ಪ್ರದಾಯಕವಾಗಿದೆ. ಭುಕ್ತಿಮುಕ್ತಿಪ್ರದಾಯಕವಾಗಿದೆ. (ಇಹಲೋಕದಲ್ಲಿಯ ಅಭ್ಯುದಯ ಮತ್ತು ಪರಲೋಕದಲ್ಲಿ ಉತ್ತಮ ಗತಿ ಎರಡಕ್ಕೂ ಸಹ ಕಾರಣವಾಗಿದೆ.) (54) ಇಂದಿನಿಂದ ಈ ಪರ್ವತವು ನಿನ್ನ ಹೆಸರಿನಿಂದ ನಾರಾಯಣಾಚಲ ವೆಂಬುದಾಗಿ ಭೂಮಂಡಲದಲ್ಲಿ ಪ್ರಸಿದ್ಧಿಯನ್ನು ಪಡೆಯಲಿ. (55)' ಎಂದು ಅನುಗ್ರಹಿಸಿದನು. ಹೀಗೆ ವರದಾನವನ್ನು ಮಾಡಿದ ಭಗವಂತನು ನಾರಾಯಣ ವಿಪ್ರನಿಗೆ ತನ್ನ ಸಾಯುಜ್ಯವನ್ನನುಗ್ರಹಿಸಿ ಸ್ವಾಮಿಪುಷ್ಕರಿಣಿಯ ದಡದಲ್ಲಿ ತನ್ನ ಸಂಕಲ್ಪಮಾತ್ರದಿಂದ ಆಗಮಿಸಿದ ವಿಮಾನದಲ್ಲಿ ಶಂಖಚಕ್ರಗದಾಪಾಣಿಯಾಗಿ ಶ್ರೀಭೂನೀಲಾದೇವಿಯರಿಂದ ಸಮೇತನಾಗಿ ಎಲ್ಲರ ಪ್ರತ್ಯಕ್ಷಕ್ಕೂ ಗೋಚರನಾಗಿ, ಸಾವಿರಾರು ಮನ್ಮಥರ ಲಾವಣ್ಯವನ್ನು ಮೀರಿಸುವ ಲಾವಣ್ಯವನ್ನು ಹೊಂದಿದವನಾಗಿ, ಸುಂದರವಾದ ನೀಲಮೇಘದ ದೇಹಕಾಂತಿಯಿಂದೊಗೂಡಿ ಭಕ್ತವಾತ್ಸಲ್ಯದಿಂದ ಅವರಿಗೆ ವರಗಳನ್ನು ಅನುಗ್ರಹಿಸಲು ಅತ್ಯಂತ ಪ್ರಸನ್ನ ಮನಸ್ಕನಾಗಿ ನಿತ್ಯದಲ್ಲಿಯೂ ಪರಮಾತ್ಮನು ವಾಸವಾಗಿರುವನು.

ಇಲ್ಲಿಗೆ ಭಗವದಾವಿರ್ಭಾವವರ್ಣನವೆಂಬ ಮೂರನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

ಬ್ರಹ್ಮಾಂಡಪುರಾಣಾಂತರ್ಗತೇ ವೇಂಕಟೇಶಮಾಹಾತ್ಮ್ಯೇ

## ಅಥ ಚತುರ್ಥೋಽಧ್ಯಾಯಃ

ಭೃಗುರುವಾಚ–

ತತ್ರ ವಾಸಮುಪೇತ್ಯಾಥ ದೇವಃ ಕಿಮಕರೋತ್ತತಃ ।
ವಿಸ್ತರೇಣ ಸಮಾಖ್ಯಾಹಿ ಪೃಚ್ಛತೋ ಮಮ ಸರ್ವಶಃ ॥1॥

ನಾರದ ಉವಾಚ–

ತತಃ ಕದಾಚಿನ್ಮೃಗಯಾವಿಹಾರಾಕಾಂಕ್ಷಿಮಾನಸಃ ।
ಸೇನಾಪತಿಮುವಾಚೇದಂ ಪ್ರಹಸನ್ನಿವ ಮಾಧವಃ ॥2॥

ಶ್ರೀಭಗವಾನುವಾಚ –

'ಸೇನೇಶ ವಿಪಿನೋದ್ದೇಶೇ ವಿಹರ್ತುಂ ಮತಿರಸ್ತಿ ಮೇ ।
ಸಿಂಹವ್ಯಾಲಸಮಾಕೀರ್ಣೇ ಮತ್ತದ್ವಿಪನಿಷೇವಿತೇ ॥3॥

## ನಾಲ್ಕನೆಯ ಅಧ್ಯಾಯವು

ಭಗವಂತನ ಆವಿರ್ಭಾವವೃತ್ತಾಂತವನ್ನು ಕೇಳಿದ ಭೃಗುಮಹರ್ಷಿಗಳು ನಾರದರನ್ನು ಕುರಿತು – 'ಹೇ ನಾರದರೇ! ವೇಂಕಟಗಿರಿಯಲ್ಲಿ ವಾಸವನ್ನು ಮಾಡಿದ ದೇವನಾದ ಶ್ರೀನಿವಾಸನು ಮುಂದೆ ಏನು ಮಾಡಿದನು? ಎಂಬುದನ್ನು ನನಗೆ ನೀವು ವಿಸ್ತಾರವಾಗಿ ತಿಳಿಸಿ ಕೊಡಿರಿ' ಎಂದು ವಿನಂತಿಸಿದಾಗ ನಾರದರು ಮುಂದಿನ ವೃತ್ತಾಂತವನ್ನು ವಿವರಿಸುತ್ತಾರೆ.(1)

*ಮೃಗಯಾರ್ಥವಾಗಿ ಭಗವಂತನ ವನಗಮನ*

ಒಂದು ಬಾರಿ ಬೇಟೆಯನ್ನಾಡಲು ಬಯಸಿದ ಲಕ್ಷ್ಮೀಪತಿಯಾದ ಮಾಧವನು ಸೇನಾಪತಿಯಾದ ವಿಷ್ವಕ್ಸೇನನನ್ನು ಕರೆದು ಹೀಗೆ ನುಡಿದನು. 'ಹೇ ಸೇನಾಪತಿಯಾದ ವಿಷ್ವಕ್ಸೇನನೇ! ಸಿಂಹ ವ್ಯಾಘ್ರಾದಿ ಕ್ರೂರಮೃಗ ಗಳಿಂದಲೂ ಮತ್ತು ಮದಿಸಿದ ಆನೆಗಳಂತಹ ಬೃಹತ್ ಪ್ರಾಣಿಗಳಿಂದ ಶೋಭಿತವಾದ ಈ ಅರಣ್ಯಪ್ರದೇಶದಲ್ಲಿ ವಿಹರಿಸಬೇಕೆಂದು ಬಯಸಿರುವೆನು (ವಿಹರಿಸಬೇಕೆಂಬ ಬುದ್ಧಿಯು ಇರುವದು). ಅದರಗೋಸ್ಕರವಾಗಿ ರಥ, ಕುದುರೆ, ಆನೆ, ಪತ್ತಿಗಳೆಂಬ ಚತುರಂಗ ಯುಕ್ತವಾದ ನಿನ್ನ ಸೈನ್ಯವು ಸಿದ್ಧವಾಗಲಿ. ಯುದ್ಧದಲ್ಲಿ ಸೋಲನ್ನು ಕಾಣದ ನಿನ್ನ ಸೈನ್ಯವು

ಸಜ್ಜೀಭವತು ಸೈನ್ಯಾನಿ ನಿದೇಶಾದ್ಭವತೋಽಧುನಾ ।
ಚತುರಂಗಸಮೇತಾನಿ ಸಮರೇಷ್ವಜಿತಾನಿ ವೈ' ॥4॥

ಇತ್ಯುಕ್ತ್ವಾ ಭಗವಾನ್ ತೂರ್ಣಂ ನಿರ್ಯಯೌ ಮೃಗಯಾಮತಿಃ ।
ಸೇನಾಪತಿಮುಖಾಶ್ಚಾಪಿ ತಮೇವಾನುಯಯುಸ್ತದಾ ॥5॥

ಅಥೋತ್ತರಗಿರೌ ರಮ್ಯೇ ವಿಚಚಾರ ಸ ದೈತ್ಯಹಾ ।
ಸಿಂಹವ್ಯಾಲಗಣಾನ್ವಿಧ್ಯಂಚ್ಛರೈರಾಶೀವಿಷೋಪಮೈಃ ॥6॥

ತತ್ರತ್ಯಾಃ ಶಬರಾಧೀಶಾಃ ಸೋಪಹಾರಾಃ ಸಮಾಗತಾಃ ।
ಪ್ರಣಮ್ಯ ದೇವದೇವೇಶಮತಿಷ್ಠನ್ನಮ್ರಮೌಲಯಃ ॥7॥

ನಿರ್ದಶ್ಯಮಾನಮಾರ್ಗಸ್ತು ತೈಸ್ತೈಃ ಶಬರಪಾಲಕೈಃ।
ವಿಚಚಾರ ಬಹೂನ್ ದೇಶಾನ್ ಮೃಗಯಾಕೃಷ್ಟಮಾನಸಃ ॥8॥

ತಸ್ಮಿನ್ಕಾಲೇ ಶಿವೇ ಭಕ್ತೋ ವೃಷಭಾಖ್ಯೋ ಮಹಾಸುರಃ ।
ಶ್ರೀಶೈಲಾದ್ದಕ್ಷಿಣೇ ದೇಶೇ ವಿಚಚಾರ ಮಹಾಮನಾಃ ॥9॥

ವಿಹಾರಾರ್ಥವಾಗಿ ತೆರಳಲು ನಿನ್ನಿಂದ ಆದೇಶಿಸಲ್ಪಡಲಿ. (3–4)'

ಹೀಗೆ ನುಡಿದ ಭಗವಂತನು ಶೀಘ್ರದಲ್ಲಿಯೇ ಬೇಟೆಗಾಗಿ ಹೊರಟನು. ಸೇನಾಪತಿಯಾದ ವಿಷ್ವಕ್ಸೇನನೇ ಮೊದಲಾದವರು ಅವನನ್ನೇ ಹಿಂಬಾಲಿಸಿ ಹೊರಟರು. (5) ಸುಂದರವಾದ ಗಿರಿಯ ಉತ್ತರಭೂಪ್ರದೇಶದಲ್ಲಿ ಸಿಂಹ ವ್ಯಾಘ್ರ ಇವೇ ಮೊದಲಾದ ಕ್ರೂರಮೃಗಗಳನ್ನು ವಿಷಮಯವಾದ ತೀಕ್ಷ್ಣವಾದ ಸರ್ಪದಂತಿರುವ ಬಾಣಗಳಿಂದ ಹೊಡೆದು ಕೊಲ್ಲುತ್ತಾ ದೈತ್ಯಾರಿಯಾದ ಪರಮಾತ್ಮನು ಸಂಚರಿಸಿದನು.(6) ಅಲ್ಲಿನ ಶಬರ (ಅರಣ್ಯವಾಸಿಗಳಾದ ಬೇಡರು)ರ ನಾಯಕರು ಕೈಯಲ್ಲಿ ಕಾಣಿಕೆಗಳನ್ನು ಹಿಡಿದುಕೊಂಡು ಬಂದು ಪರಮಾತ್ಮನಾದ ದೇವದೇವೇಶನಾದ ನಾರಾಯಣನಿಗೆ ನಮಸ್ಕಾರವನ್ನು ಮಾಡಿ ಭಕ್ತಿಯಿಂದ ತಲೆಬಾಗಿ ನಿಂತುಕೊಂಡರು. (7) ಅವರಿಂದ ಮಾರ್ಗದರ್ಶನವನ್ನು ಪಡೆಯುತ್ತಾ ಕ್ರೂರಮೃಗಗಳನ್ನು ಹುಡುಕುತ್ತಾ ಆ ಶಬರರೊಂದಿಗೆ ಬಹಳಷ್ಟು ದೇಶಗಳನ್ನು ಬೇಟೆಯಾಡು ವದಗೋಸ್ಕರವಾಗಿ ಸಂಚರಿಸಿದನು. (8)

*ವೃಷಭಾಸುರವೃತ್ತಾಂತ*

ಅದೇ ಕಾಲದಲ್ಲಿ ಶಿವನ ಭಕ್ತನಾದ ವೃಷಭನೆಂಬ ದಾನವನು ಶ್ರೀಶೈಲದ ದಕ್ಷಿಣಭಾಗದಲ್ಲಿ ಅಲ್ಲಲ್ಲಿ ಸಂಚಾರಮಾಡಿದನು. (9) ಅನಂತರದಲ್ಲಿ ಶ್ರೇಷ್ಠವಾದ, ಪ್ರಾದುರ್ಭೂತವಾದ ಈ ನಾರಾಯಣಾಚಲವನ್ನು (ವೇಂಕಟಾಚಲವನ್ನು) ನೋಡಿ ಅತ್ಯಂತ ಆಶ್ಚರ್ಯವನ್ನು ಹೊಂದಿ

ತತೋ ಗಿರಿವರಂ ದೃಷ್ಟ್ವಾ ಪ್ರಾದುರ್ಭೂತಂ ಸುವಿಸ್ತೃತಮ್ ।
ವಿಸ್ಮಯಾವಿಷ್ಟಚೇತಾಸ್ತು ಚಿಂತಯಾಮಾಸ ಕಾರಣಮ್ ॥10॥

ಅಹೋ ಕೋಽಪ್ಯಸ್ಯ ಮಾಯಾವೀ ತತ್ರಾದ್ರೇರುಪರಿ ಧ್ರುವಮ್ ।
ತಮನ್ವೇಷ್ಟುಂ ಯತಿಷ್ಯೇಽಹಂ ಮಾಯಿನಂ ಗತಭೀರಹಮ್ ॥11॥

ಅನ್ವಿಷ್ಯ ಸಹಸಾನೇನ ಯೋತ್ಸ್ಯಾಮಿ ಗತಭೀರಹಮ್ ।
ಇತಿ ಸಂಚಿಂತ್ಯ ತತ್ರಾಯಂ ಮೃಗಯನ್ನಪಕಾರಿಣಮ್ ॥12॥

ಬಲಗರ್ವಸಮಾವಿಷ್ಟಸ್ತತ್ರ ತತ್ರ ಚಚಾರ ಚ ।
ಅಥಾಪಶ್ಯತ ದೇವೇಶಂ ವಿಹರನ್ತಮಭೀತವತ್ ॥13॥

ಶಾರ್ಙ್ಗಪಾಣಿಂ ಹಯಾರೂಢಂ ಶಬರಾಕೃತಿಧಾರಿಣಮ್ ।
ತಂ ದೃಷ್ಟ್ವಾ ದೈತ್ಯರಾಟ್ ಕ್ರುದ್ಧಃ ಸೋಽಯಮೇವೇತಿ ನಿಶ್ಚಿತಃ ॥14॥

ಅಭ್ಯಧಾವತ ತಂ ತೂರ್ಣಂ 'ತಿಷ್ಠ ತಿಷ್ಠೇ'ತಿ ಚಾಬ್ರವೀತ್ ।
ತತಃ ಸಮಭವದ್ಯುದ್ಧಂ ಘೋರರೂಪಂ ಭಯಾನಕಮ್ ॥15॥

ಅದಕ್ಕೆ ಕಾರಣವನ್ನು ಚಿಂತಿಸಿದನು. (10) 'ಅಹೋ! ಆಶ್ಚರ್ಯವು. ಈ ಪರ್ವತದ ಮೇಲೆ ಯಾವನೋ ಒಬ್ಬ ಮಾಯಾವಿಯು ಇದ್ದೇ ಇರುವನು. ಇದು ನಿಶ್ಚಯವು. ಯಾರ ಹೆದರಿಕೆಯೂ ಇಲ್ಲದ ನಾನು ಆ ಮಾಯಾವಿಯನ್ನು ಹುಡುಕಲು ಪ್ರಯತ್ನವನ್ನು ಮಾಡುವೆನು. ಅವನನ್ನು ಹುಡುಕಿ ಅವನು ಸಿಕ್ಕೊಡನೆ ಅವನೊಂದಿಗೆ ಧೈರ್ಯವಾಗಿ ಯುದ್ಧವನ್ನು ಮಾಡುವೆನು' (11) ಹೀಗೆ ಚಿಂತಿಸಿದ ಮಹಾಸುರನಾದ ವೃಷಭನು ತನಗೆ ಅಪಕಾರವನ್ನು ಮಾಡುಬಹುದೆಂಬ ಸಂಶಯವನ್ನು ಹೊಂದಿ ಆ ಮಾಯಾವಿಯನ್ನು ಹುಡುಕುತ್ತಾ ತಾನು ಬಲಿಷ್ಠನೆಂಬ ಅತ್ಯಂತ ಗರ್ವವನ್ನು ಹೊಂದಿ ಆ ಪರ್ವತದಲ್ಲಿ ಅಲ್ಲಲ್ಲಿ ಸಂಚಾರಮಾಡಿದನು. (12–13) ಹೀಗೆ ಸಂಚರಿಸುತ್ತಿದ್ದ ವೃಷಭಾಸುರನು ಪರ್ವತದಲ್ಲಿ ವಿಹಾರವನ್ನು ಮಾಡಿತ್ತಿದ್ದ, ಶಬರವೇಷದಿಂದಿದ್ದು ಕುದುರೆಯನ್ನು ಏರಿದ್ದ ಶಾಂರ್ಙ್ಗಪಾಣಿಯಾದ ಭಗವಂತನನ್ನು ನೋಡಿದನು. ಭಗವಂತನನ್ನು ನೋಡಿದ ದೈತ್ಯೇಂದ್ರನಾದ ವೃಷಭನು ಅತ್ಯಂತ ಕ್ರುದ್ಧನಾಗಿ 'ನಿಲ್ಲು ನಿಲ್ಲು' ಎಂಬುದಾಗಿ ಕೂಗುತ್ತಾ ಪರಮಾತ್ಮನೆಡೆಗೆ ಧಾವಿಸಿ ಬಂದನು. (14–15)

*ವೃಷಭ ಮತ್ತು ಪರಮಾತ್ಮರ ನಡುವಿನ ಯುದ್ಧ*

ಅನಂತರ ಶ್ರೀನಿವಾಸ ಮತ್ತು ವೃಷಭಾಸುರರ ನಡುವೆ ಘೋರವಾದ ಭಯಂಕರವಾದ ಯುದ್ಧವು ನಡೆಯಿತು. (15) ವೃಷಭಾಸುರನು ಶ್ರೀನಿವಾಸನೊಡೆಗಿದ್ದ ಶಬರ ರಾಜನನನ್ನು ಶಪಥಪೂರ್ವಕವಾಗಿ

ಶಬರಾಧಿಪತಿಂ ದೈತ್ಯಃ ಸಮಾಹೂಯಾಶಪತ್ತದಾ ।
ತತಃ ಸ ಶಬರಃ ಕೃದ್ಧಃ ಸರ್ವಸನ್ನಾಹಸಂಯುತಃ ॥16॥

ಶ್ವಗಣೈಃ ಸ್ವಗಣೈಶ್ಚೈವ ಬಾಣೈಶ್ಚ ನಿಶಿತೈಸ್ತಥಾ ।
ಪ್ರಾಸೈಃ ಖಡ್ಗೈರ್ಗದಾಭಿಶ್ಚ ಶಕ್ತಿಶೂಲಪರಶ್ವಧೈಃ ॥17॥

ಕುಂತೈರ್ಮುಸಲಸಂಘೈಶ್ಚ ವೃಕ್ಷೈಃ ಪಾಷಾಣರಾಶಿಭಿಃ ।
ಅಯುಧ್ಯತ ತದಾ ತೇನ ಘೋರಂ ಯುದ್ಧಮಭೂದ್ವನೇ ॥18॥

ತತಸ್ತಾಂಚ್ಛಬರಾನ್ಸರ್ವಾನ್ವಿನಿರ್ಜಿತ್ಯಾಗ್ರತಃ ಪರಮ್ ।
ಆಯಾಂತಮಸುರಂ ದೃಷ್ಟ್ವಾ ವಿಷ್ವಕ್ಸೇನಂ ದಿದೇಶ ಸಃ ॥19॥

ಸೋಽಪಿ ಗಂಧರ್ವಸಂಘೈಶ್ಚ ಸಹಿತಃ ಪ್ರತ್ಯಯುಧ್ಯತ ।
ತತಃ ಸುತುಮುಲಂ ಯುದ್ಧಂ ಬಭೂವ ಭಯದಾಯಕಮ್ ॥20॥

ಅಸ್ತ್ರೈಶ್ಶಸ್ತ್ರೈರ್ಜಘಾನಾಶು ವಿಷ್ವಕ್ಸೇನಃ ಪ್ರತಾಪವಾನ್ ।
ದೈತ್ಯಸ್ತಂ ದುರ್ಜಯಂ ಜ್ಞಾತ್ವಾ ಮಾಯಾವೀ ಚ ಮದೋದ್ಧತಃ ॥21॥

ತತಃ ಸ್ವಮಾಯಾಮಾಸ್ಥಾಯ ದೈತ್ಯಃ ಪರಪುರಂಜಯಃ ।

ಯುದ್ಧಕ್ಕೆ ಆಹ್ವಾನಿಸಿದನು. ರೊಚ್ಚಿಗೆದ್ದ ಶಬರಾಧಿಪತಿಯು ಎಲ್ಲ ಸಿದ್ಧತೆಗಳಿಂದ ಸಮೇತನಾಗಿ ತನ್ನ ನಾಯಿಗಳ ಸಮೂಹ, ತನ್ನ ಸೇವಕರು, ನಿಶಿತವಾದ ಬಾಣಗಳು, ಪ್ರಾಸಾಯುಧ, ಖಡ್ಗಾಯುಧ, ಶಕ್ತ್ಯಾಯುಧ, ಶೂಲಾಯುಧ, ಪರಶು ಇವೇ ಮೊದಲಾದ ಆಯುಧಗಳನ್ನು, ಗುದ್ದಲಿ, ಒನಕೆ ಮೊದಲಾದ ಪರಿಕರಗಳನ್ನು, ಹಾಗೆಯೇ ಗಿಡ-ಮರಗಳು, ಕಲ್ಲುಗಳು- ಇವೇ ಮೊದಲಾದವುಗಳನ್ನು ಹಿಡಿದಿದ್ದ ಶಬರರೊಂದಿಗೆ ಕೂಡಿಕೊಂಡು ಶಬರರಾಜನು ಯುದ್ಧಕ್ಕೆ ಬಂದನು. ಶಬರ ರಾಜ ಮತ್ತು ವೃಷಭರ ನಡುವೆ ಸುಘೋರವಾದ, ಭಯಂಕರವಾದ ಯುದ್ಧವು ಜರುಗಿತು. ವೃಷಭಾಸುರನು ಈ ಎಲ್ಲ ಶಬರರನ್ನು ಗೆದ್ದು ಮುಂದೆ ಬಂದನು. ಹೀಗೆ ಎಲ್ಲ ಶಬರರನ್ನು ಗೆದ್ದು, ಮುಂದಡಿಯಿಡುತ್ತಿರುವ ಅಸುರರನ್ನು ನೋಡಿ ವಿಷ್ವಕ್ಸೇನನಿಗೆ ಅವನನ್ನು ನಿಗ್ರಹಿಸಲು ಆಜ್ಞಾಪಿಸಿದನು. (16-19) ಪರಾಕ್ರಮಿಯಾದ ವಿಷ್ವಕ್ಸೇನನು ಗಂಧರ್ವಗಳ ಸಮೂಹದಿಂದ ಕೂಡಿಕೊಂಡು ವೃಷಭನೊಂದಿಗೆ ಯುದ್ಧವನ್ನು ಮಾಡಿ ಮಹಾ ಮಹಾ ಅಸ್ತ್ರ ಶಸ್ತ್ರಗಳಿಂದ ದೈತ್ಯನನ್ನು ಘಾಸಿಗೊಳಿಸಿದನು. ಅವರಿಬ್ಬರ ನಡುವೆ ಘೋರವಾದ ಯುದ್ಧವು ನಡೆಯಿತು. ನೇರವಾದ ಯುದ್ಧದಿಂದ ವಿಷ್ವಕ್ಸೇನನ್ನು ಜಯಿಸುವದು ಅಶಕ್ಯವೆಂದು ತಿಳಿದ ಮದೋದ್ಧತನಾದ, ಮಾಯಾ ಯುದ್ಧಕುಶಲನಾದ, ದೇವತೆಗಳ ಪಟ್ಟಣಗಳನ್ನು ನಾಶಮಾಡುವ ದರಲ್ಲಿ ಕುಶಲನಾದ

ಅಸೃಜದ್ರಾಕ್ಷಸಾನ್ ಘೋರಾಂಚ್ಛತಶೋಽಥ ಸಹಸ್ರಶಃ ॥22॥

ಅಸ್ತ್ರಾಣ್ಯಪಿ ಚ ದಿವ್ಯಾನಿ ಶಸ್ತ್ರಾಣಿ ವಿವಿಧಾನಿ ಚ ।
ಪ್ರಾಯುಂಕ್ತ ದೈತ್ಯರಾಟ್ ಕ್ರುದ್ಧೋ ನಾರಾಯಣಜಿಘಾಂಸಯಾ ॥23॥

ಯದನೇನ ಪ್ರಯುಕ್ತಂ ವೈ ಶಸ್ತ್ರಮಸ್ತ್ರಮಥಾಪಿ ವಾ ।
ಭಸ್ಮೀಕೃತಂ ಚ ತತ್ಸರ್ವಂ ಹರಿಣಾ ನಿಜಮಾಯಯಾ ॥24॥

ತತಸ್ತಮಸುರೋ ಮತ್ವಾ ದುರ್ಜಯಂ ಹರಿಮಾಹವೇ ।
ಮಾಯಾಂ ಪ್ರಯುಜ್ಯ ಮಾಯಾವೀ ಸ್ವಯಮಂತರ್ದಧೇತತಃ ॥25॥

ತಾಂ ಮಾಯಾಮಾಯತೀಂ ದೃಷ್ಟ್ವಾ ತತಃ ಸರ್ವೇಶ್ವರೋ ಹರಿಃ ।
ಪ್ರೇಷಯಾಮಾಸ ನಾಶಾಯ ತತಶ್ಚಕ್ರಂ ಜನಾರ್ದನಃ ॥26॥

ನಾಶಕಂ ಸರ್ವದುಷ್ಟಾನಾಂ ಸರ್ವದೇವನಮಸ್ಕೃತಮ್ ।
ಚಕ್ರರಾಜಾತ್ತತೋ ಜ್ವಾಲಾಃ ಪ್ರಾದುರ್ಭೂತಾಃ ಸಹಸ್ರಶಃ ॥27॥

ತಾಭಿಸ್ತತ್ಸೈನ್ಯಮತ್ಯುಗ್ರಂ ಜ್ವಲಿತಂ ಕಾನನಂ ಯಥಾ ।
ಜ್ವಲತ್ಕಂಚುಕಿನೋ ವೀರಾ ದಗ್ಧಶ್ಮಶ್ರುಶಿರೋರುಹಾಃ ॥28॥

ವೃಷಭನು ನಾನಾವಿಧವಾದ ಸಾವಿರಾರು ಆಸುರೀ ಮಾಯೆಗಳನ್ನು ಸೃಷ್ಟಿಸಿದನು. (21–22) ಅಷ್ಟಲ್ಲದೇ ಕ್ರುದ್ಧನಾದ ವೃಷಭನು ನಾರಾಯಣನನ್ನು ಕೊಲ್ಲುವದರಗೋಸ್ಕರವಾಗಿ ನಾನಾವಿಧವಾದ ದಿವ್ಯವಾದ ಅಸ್ತ್ರಗಳನ್ನು ಮತ್ತು ಶ್ರೇಷ್ಠವಾದ ಶಸ್ತ್ರಗಳನ್ನು ಪ್ರಯೋಗಿಸಿದನು. (23) ಅಸುರನು ಪ್ರಯೋಗಿಸಿದ ಎಲ್ಲ ಶಸ್ತ್ರ-ಅಸ್ತ್ರಗಳನ್ನು ಭಗವಂತನು ತನ್ನ ಇಚ್ಛಾಮಾತ್ರದಿಂದಲೇ ಭಸ್ಮಗೊಳಿಸಿದನು. (24) ಇದನ್ನು ಕಂಡ ವೃಷಭನು ಪರಮಾತ್ಮನನ್ನು ಯುದ್ಧದಲ್ಲಿ ಗೆಲ್ಲುವದು ಅಸಾಧ್ಯವೆಂದರಿತು ಘೋರವಾದ ಆಸುರೀ ಮಾಯೆಯನ್ನು ಸೃಷ್ಟಿಸಿ ತಾನು ಅದೃಶ್ಯನಾದನು. (24–25)

*ವೃಷಭಾಸುರಕೃತಮಾಯಾನಾಶನಾರ್ಥವಾಗಿ ಚಕ್ರಪ್ರೇಷಣ*

ತನ್ನ ಮುಂದೆ ಬರುತ್ತಿರುವ ಆಸುರೀ ಮಾಯೆಯನ್ನು ಭಗವಂತನಾದ, ಸರ್ವೇಶ್ವರನಾದ ನಾರಾಯಣನು ನೋಡಿ ಆ ಮಾಯೆಯ ನಾಶಾರ್ಥ ವಾಗಿ, ದುಷ್ಟಜನರ ನಾಶಕರವಾದ, ಸರ್ವ ದೇವತೆಗಳಿಂದ ನಮಸ್ಕೃತವಾದ ತನ್ನ ಚಕ್ರವನ್ನು ಪ್ರಯೋಗಮಾಡಿದನು. (26–27) ಸುದರ್ಶನ ಚಕ್ರದಿಂದ ಸಾವಿರಾರು ಜ್ವಾಲೆಗಳು ಪ್ರಾದುರ್ಭವಿಸಿ ರಾಕ್ಷಸನನ್ನು ಅವನ ಮಾಯೆಯನ್ನು, ಕಾಡ್ಗಿಚ್ಚು ವನವನ್ನು ದಹಿಸುವಂತೆ, ಸುಡತೊಡಗಿತು. ರಾಕ್ಷಸರ ಶಿರಸ್ಸುಗಳು, ಗಡ್ಡಮೀಸೆಗಳು, ವಸ್ತ್ರಗಳು, ನಾನಾವಿಧವಾದ ವಿಚಿತ್ರವಾದ ಆಯುಧಗಳು, ಇವೆಲ್ಲವೂ ಸಹ ಚಕ್ರದ ಜ್ವಾಲೆಯಿಂದ

ಆಯುಧಾನಿ ವಿಚಿತ್ರಾಣಿ ದಗ್ಧಾನ್ಯಾಸನ್ ಹವಿರ್ಭುಜಾ ।
ತೇನ ಚಕ್ರಪ್ರಭಾವೇಣ ಹ್ಯಾಸುರಂ ಬಲಮದ್ಭುತಮ್ ॥29॥

ನ ಕಿಚಿದ್ದೃಶ್ಯತೇ ತತ್ರ ಪರ್ವತೇ ಪರಮಾದ್ಭುತೇ ।
ತತಃ ಸಮೀಕ್ಷ್ಯ ದೈತ್ಯೋ ವೈ ಮಾಯಾಂ ಸ್ವೀಯಾಂ ವಿನಾಶಿತಾಮ್ ॥30॥

ಚಿಂತಯಾಮಾಸ ಚ ಮುನೇ ವಿಸ್ಮಯಾಕುಲಮಾನಸಃ ।
ನಿಹನಿಷ್ಯತಿ ಮಾಂ ಚಾಪಿ ಚಕ್ರಂ ನೂನಂ ತದೀರಿತಮ್ ॥31॥

ಸಮಯೋ ಮರಣಸ್ಯಾಪಿ ಸಂವೃತ್ತೋ ನೈವ ಸಂಶಯಃ ।
ಅಮಾನುಷಮಿಮಂ ಮನ್ಯೇ ಪರಬ್ರಹ್ಮಸ್ವರೂಪಿಣಮ್ ॥32॥

ಸ್ರಷ್ಟಾರಂ ಸರ್ವಲೋಕಾನಾಂ ಸರ್ವದೇವನಮಸ್ಕೃತಮ್ ।
ಅನೇನ ನಿಹತೋ ನೂನಂ ವಿಮುಕ್ತಃ ಸರ್ವಕಿಲ್ಬಿಷಾತ್ ॥33॥

ಸಂಸಾರಾರ್ಣವಮುತ್ತೀರ್ಯ ಗಮಿಷ್ಯೇ ಮುಕ್ತಿಸಂಪದಮ್ ।
ಇತಿ ಸಂಚಿಂತಯನ್ ದೇವಂ ವಧಾತ್ ಸಂಹೃಷ್ಟಮಾನಸಃ ॥34॥

ಪ್ರಾರ್ಥಯಾಮಾಸ ಚಾಭೀಷ್ಟಂ ಕಿಂಚಿದ್ಧೃದಯಸಂಶ್ರಿತಮ್ ।

ಸುಟ್ಟುಹೋದವು. ಆ ಚಕ್ರದ ಪ್ರಭಾವದಿಂದ ಅದ್ಭುತವಾದ ಪರ್ವತದಲ್ಲಿ ರಾಕ್ಷಸನ ಬಲವು ಕಿಂಚಿತ್ತೂ ಸಹ ಕಾಣಲಿಲ್ಲ. (ರಾಕ್ಷಸನ ಬಲವೆಲ್ಲವೂ ನಾಶವಾಯಿತು) (28–30) ಅನಂತರ ತನ್ನ ಮಾಯೆಯೆಲ್ಲವೂ ಸಹ ಹರಿಯ ಚಕ್ರದ ಪ್ರಭಾವದಿಂದ ನಾಶವಾದದ್ದನ್ನು ನೋಡಿದ ರಾಕ್ಷಸನು ಅತ್ಯಂತ ಆಶ್ಚರ್ಯವನ್ನು ಹೀಗೆ ವಿಚಾರಮಾಡಿದನು. 'ಪರಮಾತ್ಮನಿಂದ ಬಿಡಲ್ಪಟ್ಟ ಈ ಚಕ್ರವು ನನ್ನನ್ನು ನಿಶ್ಚಯವಾಗಿಯೂ ಸಹ ಸುಟ್ಟುಹಾಕುವದು. ನನ್ನ ಮರಣಕಾಲವು ಸಮೀಪಿಸಿರುವದು. ಈ ಚಕ್ರಧರನಾದ ಶ್ರೀನಿವಾಸನು ಮನುಷ್ಯನಲ್ಲ. ಇವನು ಸಾಕ್ಷಾತ್ ಪರಬ್ರಹ್ಮನೇ ಆಗಿರುವನು. ಸಕಲ ಲೋಕಗಳಿಗೆ ಉತ್ಪಾದಕನೂ, ಮತ್ತು ಸಕಲ ದೇವತೆಗಳಿಂದ ವಂದ್ಯನೂ ಸಹ ಇವನೇ. ಇವನಿಂದ ಮರಣವನ್ನು ಹೊಂದಿದಲ್ಲಿ ನಾನು ನಿಶ್ಚಯವಾಗಿಯೂ ಸಂಸಾರ ಸಾಗರವನ್ನು ದಾಟಿ ಮುಕ್ತಿಯನ್ನೇ ಹೊಂದುವೆನು' (31–34)

*ವೃಷಭಕೃತ ಭಗವತ್ಪ್ರಾರ್ಥನಾ*

ಹೀಗೆಂದು ವಿಚಾರಮಾಡಿದ ರಾಕ್ಷಸನಾದ ವೃಷಭನು ಪರಮಾತ್ಮನ ಕೈಯಿಂದ ಮರಣವನ್ನು ಹೊಂದುವೆನೆಂದು ಅತ್ಯಂತ ಸಂತೋಷವನ್ನು ಹೊಂದಿ, ತನ್ನ ಮನಸ್ಸಿನ ಬಯಕೆಯನ್ನು

ವೃಷಭ ಉವಾಚ–

'ದೇವದೇವ ಜಗನ್ನಾಥ ಸರ್ವಲೋಕೈಕಕಾರಣಮ್ ।
ಶರಣಂ ತ್ವಾಮನುಪ್ರಾಪ್ತಃ ಪ್ರಣತಾರ್ತಿಹರ ಪ್ರಭೋ ॥35॥

ಯಯಾ ತತಮಿದಂ ಸರ್ವಂ ಜಗತ್ಸ್ಥಾವರಜಂಗಮಮ್ ।
ತ್ವಯಾ ವಿಹೀನಂ ನೋ ಕಿಂಚಿತ್ತ್ರಿಷು ಲೋಕೇಷು ವಿದ್ಯತೇ ॥36॥

ಬ್ರಹ್ಮಾದ್ಯಾಃ ಸಕಲಾ ದೇವಾಸ್ತ್ವನ್ನಿದೇಶಕರಾ ಮತಾಃ ।
ನಿದೇಶಾದ್ವಾತಿ ತೇ ವಾತಃ ಸೂರ್ಯಶ್ಚೋದೇತಿ ಚಾನ್ವಹಮ್ ॥37॥

ವಹ್ನಿರ್ಜ್ವಲತಿ ತೇ ಭೀತಃ ಶಕ್ರಃ ಶಾಸತಿ ಶಾಸನಾತ್ ।
ಯಮೋ ಧಾವತಿ ಭೀತಸ್ತ ಇತಿ ವೇದಾನುಶಾಸನಮ್ ॥38॥

ತ್ರಾಹಿ ತ್ರಾಹಿ ಮಹಾದೇವ ನ ಜಾನೇ ಶರಣಂ ಪರಮ್ ।
ಯೋಗಿನೋ ಯಂ ವಿಚಿನ್ವಂತಿ ನಿಯತಾಸ್ತ್ವಾಂ ವಿಮುಕ್ತಯೇ ॥39॥

ಸ ತ್ವಮದ್ಯ ಮಹಾಬಾಹೋ ದೃಗ್ಗೋಚರಗತೋಽಸಿ ಮೇ ।
ಕ್ಷಮಸ್ವ ಮತ್ಕೃತಂ ಸರ್ವಮಪಕಾರಂ ಸುದುಃಸಹಮ್ ॥40॥

ಪೋರೈಸಲು ಪರಮಾತ್ಮನನ್ನು ಹೀಗೆ ಪ್ರಾರ್ಥಿಸಿದನು. 'ದೇವಾಧಿನಾಥನಾದ ಪರಮಾತ್ಮನೇ! ಸರ್ವಲೋಕಕಾರಣನೇ! ನಮಿಸಿದ ಜನರ ದುಃಖವನ್ನು ಹರಣಮಾಡುವ ಸ್ವಾಮಿಯೇ! ನಾನು ನಿನ್ನನ್ನು ಶರಣು ಹೊಂದಿರುವೆನು. (35) ಯಾರಿಂದ ಇಡೀ ಸ್ಥಾವರ ಜಂಗಮಾವಾದ ಜಗತ್ತು ವ್ಯಾಪ್ತವಾಗಿದೆಯೋ ಅಂತಹ ನಿನ್ನಿಂದ ರಹಿತವಾದ ಯಾವದೂ ಸಹ ಈ ಮೂರು ಲೋಕಗಳಲ್ಲಿ ಇರುವದಿಲ್ಲ. (36) ಬ್ರಹ್ಮಾದಿ ದೇವತೆಗಳೂ ಸಹ ನಿನ್ನ ಆದೇಶವನ್ನು ಅನುಸರಿಸಿರುವರು. ನಿನ್ನ ಆಜ್ಞೆಯಿಂದಲೇ ಗಾಳಿಯು ಸಂಚರಿಸುವದು. ಸೂರ್ಯನು ಉದಯಿಸುವನು. ನಿನ್ನ ಪರಾಕ್ರಮದಿಂದ ಭೀತನಾದ ಬೆಂಕಿಯು ಜ್ವಲಿಸುವದು. ಇಂದ್ರನು ನಿನ್ನ ಶಾಸನಕ್ಕೊಳಪಟ್ಟು ಲೋಕಗಳನ್ನು ಶಾಸಿಸುವನು. ಯಮನು ನಿನ್ನಿಂದ ಭೀತನಾಗಿ ಓಡುವನು ಎಂದು ವೇದಗಳು ಘೋಷಿಸುವವು. (37–38) ಹೇ ಮಹಾದೇವನಾದ ಪರಮಾತ್ಮನೇ! ನೀನು ನನ್ನನ್ನು ಕಾಪಾಡು. ಕಾಪಾಡು. ನಿನ್ನನ್ನು ಬಿಟ್ಟು ಬೇರೆ ರಕ್ಷಕರನ್ನು ನಾನು ಕಾಣೆನು. (ತಿಳಿಯೆನು). ಯೋಗಿಗಳೂ ಸಹ ಮುಕ್ತಿಯನ್ನು ಹೊಂದುವವದರಗೋಸ್ಕರವಾಗಿ ಯಾರ ವ್ರತದಲ್ಲಿ ನಿಯತರಾಗಿ ಯಾರನ್ನು ಹುಡುಕುತ್ತಾರೆಯೋ ಅಂತಹ ನೀನು ಇಂದು ನನ್ನ ಕಣ್ಣುಗಳಿಗೆ ಗೋಚರವಾಗಿರುವೆ. ಹೇ ಪರಾಕ್ರಮಶಾಲಿಯಾದ ಪರಮಾತ್ಮನೇ! ನಾನು ಮಾಡಿದ, ಸಹನ ಮಾಡಲಶಕ್ಯವಾದ ಸರ್ವ

ಕೃತಾಗಸಾಂ ತ್ವಾದೃಶೇಷು ಪ್ರಣಾಮಃ ಖಲು ನಿಷ್ಕೃತಿಃ ।
ಜೀವಿತಂ ತು ನ ಯಾಚೇಽಹಂ ಕ್ಷುದ್ರಂ ಪಾಪಸ್ಯ ಕಾರಣಮ್ ॥41॥

ಅತೋ ಯಾಸ್ಯಾಮಿ ನಿಹತಶ್ಚಕ್ರೇಣ ಪರಮಾಂ ಗತಿಮ್ ।
ತಸ್ಮಾತ್ ಕ್ಷಮಸ್ವ ಭಗವಂಚ್ಛ್ರೀನಿಧೇ ಕರುಣಾನಿಧೇ ॥42॥

ತ್ರಾತಾರಂ ನೈವ ಪಶ್ಯಾಮಿ ತ್ವಾಂ ವಿನಾ ಮಧುಸೂದನ ।
ಅದ್ಯ ಪ್ರಭೃತಿ ಚಾಯಂ ವೈ ಗಿರಿರುಚ್ಛ್ರಿತಶೇಖರಃ ॥43॥

ಮದಾಖ್ಯಯಾ ಪ್ರಥಾಂ ಯಾತು ವೃಷಭಾಚಲ ಇತ್ಯಪಿ' ।
ಇತ್ಯೇವಂ ಶೋಕಸಂತಪ್ತಮಶ್ರುಪೂರ್ಣಾಕುಲೇಕ್ಷಣಮ್ ॥44॥
ವೃಷಭಂ ತಮುವಾಚೇದಂ ಪ್ರಹಸನ್ ಗರುಡಧ್ವಜಃ ॥45॥

ಶ್ರೀಭಗವಾನುವಾಚ–

'ವೃಷಭಾಸುರ ಮದ್ಭಕ್ತ್ಯಾ ವಿಮುಕ್ತಿಂ ಯಾಸ್ಯಸಿ ಧ್ರುವಮ್ ।
ಗಿರಿಶ್ಚಾಯಂ ಭವನ್ನಾಮ್ನಾ ಪ್ರಸಿದ್ಧಿಮಧಿಗಚ್ಛತು ॥46॥

ಅಪರಾಧಗಳನ್ನು ನೀನು ಕ್ಷಮಿಸು. (39–41) ನಿನ್ನಂತಹ ಸರ್ವೋತ್ತಮ ವ್ಯಕ್ತಿಗಳಲ್ಲಿ ಅಪರಾಧವನ್ನು ಮಾಡಿದ ವ್ಯಕ್ತಿಗಳಿಗೆ ನಮಸ್ಕಾರವಲ್ಲವೇ ಪ್ರಾಯಶ್ಚಿತ್ತವು. (41) ಸ್ವಾಮಿಯೇ! ಕ್ಷುದ್ರವಾದ ಪಾಪಕ್ಕೆ ಕಾರಣವಾದ ಜೀವಿತವನ್ನು ನಾನು ನಿನ್ನಿಂದ ಬಯಸುವದಿಲ್ಲ. ನಿನ್ನ ಚಕ್ರದಿಂದ ಸಂಹೃತನಾಗಿ ನಾನು ಉತ್ತಮ ಗತಿಯನ್ನು ಹೊಂದುವೆನು. ಹೇ ಭಗವಂತನಾದ ಶ್ರೀಪತಿಯೇ! ನನ್ನ ದೌಷ್ಟ್ಯವನ್ನು ಕ್ಷಮಿಸು. ನಿನ್ನನ್ನು ಬಿಟ್ಟು ಬೇರೆ ರಕ್ಷಕರನ್ನು ನಾನು ಮೂರು ಲೋಕಗಳಲ್ಲಿಯೂ ಸಹ ಅರಿಯೆನು. ಹೇ ಮಧುಸೂದನನೇ! ಇಂದಿನಿಂದ ಉನ್ನತವಾದ ಈ ಪರ್ವತವು ನನ್ನ ಹೆಸರಿನಿಂದ ವೃಷಭಾಚಲವೆಂದು ಪ್ರಸಿದ್ಧಿಯನ್ನು ಹೊಂದಲಿ' ಎಂದು ನುಡಿದನು. (42–43)

ಹೀಗೆ ಭಗವಂತನಲ್ಲಿ ಅಪರಾಧವನ್ನೆಸಗಿದ ಶೋಕದಿಂದ ತಪ್ತನಾಗಿ ಕಣ್ಣೀರುಗಳನ್ನು ಸುರಿಸುತ್ತಿದ್ದ ವೃಷಭಾಸುರನನ್ನು ನೋಡಿ ಗರುಡಧ್ವಜನಾದ ಪರಮಾತ್ಮನು ನಗುತ್ತಾ ಹೀಗೆ ನುಡಿದನು. (44) 'ಹೇ ವೃಷಭಾಸುರನೇ! ನನ್ನಲ್ಲಿ ಮಾಡಿದ ಭಕ್ತಿಯಿಂದ ನೀನು ನಿಶ್ಚಯವಾಗಿಯೂ ಸಹ ಮುಕ್ತಿಯನ್ನೇ ಹೊಂದುವಿ. ಈ ಪರ್ವತವೂ ಸಹ ನಿನ್ನ ಹೆಸರಿನಿಂದಲೇ ಪ್ರಸಿದ್ಧಿಯನ್ನು ಹೊಂದುವದು. (45)

*ವೃಷಭಾಸುರವಧ*

ಹೀಗೆ ಗೋವಿಂದನು ನುಡಿಯುತ್ತಿರಲು ರಾಕ್ಷಸನಾದ ವೃಷಭನು ಅತ್ಯಂತ ಸಂತುಷ್ಟನಾಗಿ

ಇತ್ಯುಕ್ತವತಿ ಗೋವಿಂದೇ ದೈತ್ಯೇಂದ್ರಃ ಪ್ರೀತಮಾನಸಃ ।
ಚಿಂತಯಾಮಾಸ ನಿಧನಮನುಗ್ರಹಮಥೋ ಮುನೇ ॥47॥

ತತಃ ಸುದರ್ಶನಶ್ಚಾಪಿ ಜ್ವಾಲಾಜಟಿಲವಿಗ್ರಹಃ ।
ಜಹಾರ ಸುರಶತ್ರೋರ್ಹಿ ಕಂಠನಾಲಾಚ್ಛಿರೋಂಬುಜಮ್ ॥48॥

ತತೋ ನಿಪಾತಿತೇ ಭೂಮಾವಸುರೇ ಯುದ್ಧದುರ್ಮದೇ ।
ವವೃಷುಃ ಪುಷ್ಪವರ್ಷಾಣಿ ದೇವಾಃ ಸಂಪ್ರೀತಮಾನಸಾಃ ॥49॥

ದೇವದುಂದುಭಯೋ ನೇದುರ್ನನೃತುಶ್ಚಾಪ್ಸರೋಗಣಾಃ ।
ದಿಶಃ ಪ್ರಸೇದುರ್ವಿಮಲಾ ವಾತಾಶ್ಚೈವ ಸುಖಂ ವವುಃ ॥50॥

ಗೋವಿಂದೋಽಪಿ ದಯಾಸಾರೋ ವರಂ ದತ್ತ್ವಾಽಸುರಾಯ ವೈ।
ಪುನರಭ್ಯೇತ್ಯ ಶೇಷಾದ್ರೌ ಯಥಾಸ್ಥಾನಂ ಸ್ಥಿತೋ ಮುನೇ ॥51॥

ಭೃಗುರುವಾಚ –

'ಭೂಯಃ ಕಥಯ ದೇವಸ್ಯ ಚರಿತಾನಿ ಮಹಾತ್ಮನಃ ।
ಶೃಣ್ವತೋ ನಾಸ್ತಿ ಮೇ ತೃಪ್ತಿರದ್ಭುತಾನಿ ಮಹಾಮುನೇ' ॥52॥

ಭಗವಂತನಿಂದ ಉಂಟಾದ ಮರಣವನ್ನೂ ಸಹ ಅನುಗ್ರಹವೆಂದು ತಿಳಿದನು. (47) ಅನಂತರ ಜ್ವಾಲೆಗಳ ಮೂರ್ತಿಯಂತೆ ಇರುವ ಸುದರ್ಶನ ಚಕ್ರವು ದೇವಶತ್ರುವಾದ ವೃಷಭನ ಶಿರಸ್ಸನ್ನು ಅವನ ಕುತ್ತಿಗೆಯಿಂದ ಬೇರ್ಪಡಿಸಿ ಹಾಕಿತು. (48) ಹೀಗೆ ಯುದ್ಧದುರ್ಮದನಾದ ಅಸುರನಾದ ವೃಷಭನು ಭೂಮಿಯಲ್ಲಿ ಮೃತನಾಗಿ ಬೀಳುತ್ತಿರಲು ದೇವತೆಗಳು ಅತ್ಯಂತ ಸಂತುಷ್ಟರಾಗಿ ಪುಷ್ಪವೃಷ್ಟಿಯನ್ನು ಮಾಡಿದರು. ದೇವದುಂದುಭಿಗಳು ಮೊಳಗಿದವು. ಅಪ್ಸರೆಯರು ಅತ್ಯಂತ ಸಂತೋಷದಿಂದ ನರ್ತನವನ್ನು ಮಾಡಿದರು. ಆಕಾಶವೆಲ್ಲವು ನಿರಭ್ರವಾಗಿ ಪ್ರಸನ್ನವಾಗಿದ್ದವು. ಮಂದವಾಯುವು ಎಲ್ಲೆಡೆಯೂ ಸಹ ಸುಖವನ್ನು ಉಂಟುಮಾಡಿತು. (49–50) ದಯಾಸಾಗರನಾದ ಗೋವಿಂದನು ಅಸುರನಿಗೆ ವರವನ್ನು ಕೊಟ್ಟು ಮತ್ತೆ ಶೇಷಾದ್ರಿಯ ಸ್ವಾಮಿಪುಷ್ಕರಿಣಿಯ ದಡದಲ್ಲಿ ಪೂರ್ವದಂತೆ ಸ್ಥಿತನಾದನು. (51)

ಶೇಷಾದ್ರಿಗೆ ವೃಷಭಾಚಲವೆಂಬ ಹೆಸರು ಬರಲು ಕಾರಣವನ್ನು ತಿಳಿದ ಭೃಗುಮಹರ್ಷಿಗಳು ನಾರದರನ್ನು ಕುರಿತು 'ಮಹಾಮುನಿಗಳೇ! ಪರಮಾತ್ಮನ ಮಾಹಾತ್ಮೆಗಳನ್ನು ನನಗೆ ಮತ್ತಷ್ಟು ವಿಸ್ತಾರವಾಗಿ ತಿಳಿಸಿರಿ. ಅದ್ಭುತವಾದ ಪರಮಾತ್ಮನ ಚರಿತ್ರೆಗಳನ್ನು ಕೇಳುತ್ತಿರುವ ನನಗೆ ಇನ್ನೂ ತೃಪ್ತಿಯುಂಟಾಗಿರುವದಿಲ್ಲ' ಎಂದು ನುಡಿದರು. (52)

ಶ್ರೀನಾರದ ಉವಾಚ –

ಶೃಣುಷ್ವೈಕಮನಾ ಬ್ರಹ್ಮನ್ಮತ್ತಃ ಕಥಯತೋ ಮುನೇ ।
ಮಾಹಾತ್ಮ್ಯಂ ದೇವದೇವಸ್ಯ ಚಿತ್ರಂ ಹಿ ಮುನಿಕೀರ್ತಿತಮ್ ॥53॥

ತ್ರೇತಾಯುಗೇಽಸುರಃ ಕಶ್ಚಿತ್ಕೇಸರೀತ್ಯೇವ ವಿಶ್ರುತಃ ।
ಪುತ್ರಾರ್ಥೀ ದೇವಮುದ್ದಿಶ್ಯ ತಪಸ್ತೇಪೇ ಮಹಾಮನಾಃ ॥54॥

ನಿಯತಾತ್ಮಾ ಶುಚಿರ್ನಿತ್ಯಂ ನಿರಾಹಾರೋ ಜಿತೇಂದ್ರಿಯಃ ।
ಪಂಚಾಕ್ಷರೇಣ ಜಪ್ಯೇನ ತೋಷಯಾಮಾಸ ಶಂಕರಮ್ ॥55॥

ಪ್ರೀತಃ ಪ್ರಾದುರಭೂದಗ್ರೇ ಶಂಕರೋ ಲೋಕಶಂಕರಃ ।
ಭಕ್ತ್ಯಾ ತಮಾನತಂ ಭೂಮಾವುವಾಚ ಚ ಹಸನ್ನಿವ ॥56॥

ಶಂಕರ ಉವಾಚ –

'ಪರಿತುಷ್ಟೋಽಸ್ಮಿ ಭದ್ರಂ ತೇ ತಪಸಾಽನೇನ ಸುವ್ರತ ।
ವರಂ ವೃಣೀಷ್ವ ದಾಸ್ಯಾಮಿ ಮನಸಾ ಯದಿಹೇಚ್ಛಸಿ' ॥57॥

ನಾರದರು ಹೇಳುತ್ತಾರೆ– 'ಹೇ ಭೃಗುಮಹರ್ಷಿಗಳೇ! ನನ್ನಿಂದ ಹೇಳಲ್ಪಡುವ ಭಗವಂತನ ಮಾಹಾತ್ಮೆಗಳನ್ನು ಏಕಾಗ್ರಚಿತ್ತದಿಂದ ಕೇಳುವವರಾಗಿರಿ. ಮುನಿಗಳಿಂದ ಕೀರ್ತಿತವಾದ ದೇವದೇವನಾದ ಭಗವಂತನ ಮಾಹಾತ್ಮೆಯು ಅತ್ಯಂತ ಆಶ್ಚರ್ಯಕರವಾಗಿರುವದು. (53)

*ಅಂಜನೆಯ ಜನ್ಮವೃತ್ತಾಂತ*

ತ್ರೇತಾಯುಗದಲ್ಲಿ ಕೇಸರಿ ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದ ರಾಕ್ಷಸನಿದ್ದನು. ಮಕ್ಕಳಿಲ್ಲದ ಅವನು ಪುತ್ರಸಂತತಿಯನ್ನು ಬಯಸಿ ರುದ್ರದೇವರನ್ನು ಉದ್ದೇಶಿಸಿ ಏಕಾಗ್ರ್ಯಚಿತ್ತದಿಂದ ತೀವ್ರವಾದ ತಪಸ್ಸನ್ನು ಆಚರಿಸಿದನು. (54) ಮನಸ್ಸನ್ನು ನಿಯಂತ್ರಿಸಿ, ಶುಚಿಯಾಗಿದ್ದುಕೊಂಡು, ನಿರಾಹಾರನಾಗಿ, ಇಂದ್ರಿಯಗಳನ್ನು ನಿಯಂತ್ರಣದಲ್ಲಿ ಇಟ್ಟುಕೊಂಡು ದಿವ್ಯವಾದ ಪಂಚಾಕ್ಷರಮಂತ್ರದ ಜಪದಿಂದ ರುದ್ರದೇವರನ್ನು ಸಂತೋಷಗೊಳಿಸಿದನು. (55)

ಕೇಸರಿಯ ತಪಸ್ಸಿನಿಂದ ಪ್ರಸನ್ನನಾದ ಲೋಕಹಿತಕರರಾದ ಶಂಕರನು ಕೇಸರಿಯ ಮುಂದೆ ಪ್ರತ್ಯಕ್ಷನಾದನು. ಕೇಸರಿಯು ರುದ್ರದೇವರನ್ನು ನೋಡಿ ನಮಸ್ಕರಿಸಿದನು. ಭೂಮಿಯಲ್ಲಿ ಅಷ್ಟಾಂಗನಮಸ್ಕಾರವನ್ನು ಮಾಡಿದ ಕೇಸರಿಯನ್ನು ನೋಡಿದ ರುದ್ರದೇವರು ನಗುವವನಂತೆ ಮಂದಹಾಸವನ್ನು ಬೀರುತ್ತಾ ಹೀಗೆ ನುಡಿದನು. (56) 'ಹೇ ಅಸುರನೆ! ನಿನ್ನ ತಪಸ್ಸಿನಿಂದ

ಕೇಸರ್ಯುವಾಚ–

'ದೇವದೇವ ಮಹಾಪ್ರಾಜ್ಞ ಪರಿತುಷ್ಟೋಽಸಿ ಚೇನ್ಮಮ ।
ವರದೋ ಭವ ಮೇಽಭೀಷ್ಟಂ ವರಯಾಮಿ ಸುನಿಶ್ಚಿತಮ್ ॥57॥

ಪುತ್ರಮಿಚ್ಛಾಮಿ ಬಲಿನಂ ಸಮರೇಷ್ವನಿವರ್ತಿನಮ್ ।
ಮಹಾಧೈರ್ಯಂ ಮಹಾಪ್ರಾಜ್ಞಂ ತ್ವತ್ತಃ ಸಂತುಷ್ಟಮಾನಸಾ' ॥58॥

ಶಂಕರ ಉವಾಚ–

'ನ ಪುತ್ರಂ ದಾತುಮಿಚ್ಛಾಮಿ ಪರಿತುಷ್ಟೋಽಪ್ಯಹಂ ತವ ।
ಯಸ್ಮಾಚ್ಚ ವಿಧಿನಾ ಪೂರ್ವಂ ವಿಹಿತಾ ಪುತ್ರಹೀನತಾ ॥59॥

ತಥಾಪಿ ದಾಸ್ಯೇ ಕನ್ಯಾಂ ವೈ ರೂಪಯೌವನಶಾಲಿನೀಮ್ ।
ತಸ್ಯಾಮುತ್ಪತ್ಸ್ಯತೇ ಪುತ್ರಸ್ತ್ವದಭೀಷ್ಟೋಽಚಿರಾದ್ಧ್ರುವಮ್ ॥60॥

ಇತಿ ಸಂದಿಶ್ಯ ಭರ್ಗೋಽಪಿ ತತ್ರೈವಾಂತರಧೀಯತ ।
ಅಸುರೇಂದ್ರೋಽಪಿ ಲಬ್ಧ್ವಾಽಯಂ ವರಮಿಷ್ಟಂ ಮುದಂ ಯಯೌ ॥61॥

ನಾನು ಪರಿತುಷ್ಟನಾಗಿದ್ದೇನೆ. ನಿನಗೆ ಮಂಗಳವಾಗಲಿ. ಉತ್ತಮ ವ್ರತಗಳನ್ನಾಚರಿಸುವ ಕೇಸರಿಯೆ! ನೀನು ಯಾವದನ್ನು ಬಯಸಿರುವೆಯೋ ಆ ಬಯಕೆಗಳನ್ನು ಕೇಳು. ಅವುಗಳನ್ನು ನಾನು ಈಡೇರಿಸುವೆನು. (56) ಇದನ್ನು ಕೇಳಿದ ಕೇಸರಿಯು 'ಹೇ ದೇವತೆಗಳಿಗೂ ವರದಾಯಕನಾದ ಶಿವನೇ! ಮಹಾಜ್ಞಾನಿಯೇ! ನನ್ನ ತಪಸ್ಸಿನಿಂದ ನೀನು ಪರಿತುಷ್ಟನಾದಲ್ಲಿ, ನನಗೆ ವರಗಳನ್ನು ಕೊಡುವೆಯಾದಲ್ಲಿ ನನ್ನ ಅಭೀಷ್ಟವನ್ನು ಕೇಳುವೆನು. ಅನುಗ್ರಹಿಸು. ಪ್ರಸನ್ನನಾದ ನಿನ್ನ ಅನುಗ್ರಹದಿಂದ ನನಗೆ ಯುದ್ಧದಲ್ಲಿ ಅನಿವರ್ತಿಯಾದ, ಅತ್ಯಂತ ಬಲಿಷ್ಠನಾದ, ಧೈರ್ಯಶಾಲಿಯಾದ ಮಗನು ಜನಿಸಲಿ. ಅಂತಹ ಲೋಕ ವಿಲಕ್ಷಣವಾದ ಪರಾಕ್ರಮಿಯಾದ ಮಗನನ್ನು ನಿನ್ನಿಂದ ನಾನು ಬಯಸುವೆನು' ಎಂದು ನುಡಿದನು. (58)

ಆಗ ರುದ್ರದೇವರು 'ಹೇ ದಾನವನೇ! ನಿನ್ನ ತಪಸ್ಸಿನಿಂದ ಪರಿತುಷ್ಟ ನಾಗಿದ್ದರೂ ಸಹ ನಾನು ನಿನಗೆ ಮಗನನ್ನು ಕೊಡಲು ಬಯಸುವದಿಲ್ಲ. ಏಕೆಂದರೆ ನಿನಗೆ ಮಕ್ಕಳಗದೆಂದು ವಿಧಿಯಿಂದಲೇ ಸಂಕಲ್ಪಿತವಾಗಿರುವದು. (59) ಆದರೂ ಸಹ ಅತ್ಯಂತ ಸುಂದರಿಯಾದ, ರೂಪ ಯೌವನಗಳಿಂದ ಉಪೇತಳಾದ ಕನ್ಯೆ (ಪುತ್ರಿ)ಯೊಬ್ಬಳನ್ನು ನಾನು ನಿನಗೆ ಅನುಗ್ರಹಿಸುವೆನು. ಅವಳಲ್ಲಿ ನೀನು ಕೇಳಿದ ಎಲ್ಲ ಗುಣಗಳನ್ನು ಹೊಂದಿದ, ಶೀಘ್ರದಲ್ಲಿ ನಿನ್ನ ಅಭೀಷ್ಟಗಳನ್ನು ಪೂರೈಸುವ ಮಗನು ಹುಟ್ಟಬರುವನು.' (60) ಹೀಗೆ ವರವನ್ನನುಗ್ರಹಿಸಿದ ರುದ್ರದೇವರು ಅಲ್ಲಿಂದ ಅಂತರ್ಧಾನನಾದನು.

ತತಸ್ತಸ್ಯಾಭವತ್ಕನ್ಯಾ ಲೋಕವಿಸ್ಮಯಕಾರಿಣೀ ।
ಚಕಾರ ನಾಮ ತಸ್ಯಾ ವೈ ಹ್ಯಂಜನೇತಿ ಸದೈತ್ಯರಾಟ್ ॥62॥

ಕ್ರಮೇಣ ವವೃಧೇ ಸೇಯಮಂಜನಾ ಮಂಜುಭಾಷಿಣೀ ।
ಕಲೇವ ಶಶಿನಃ ಪಕ್ಷೇ ಸಿತೇ ನಯನನಂದಿನೀ ॥63॥

ಪಿತುಸ್ತಸ್ಯಾಂ ಚ ವವೃಧೇ ಪ್ರಮೋದಸ್ತು ದಿನೇದಿನೇ ।
ಪುತ್ರಪ್ರೀತಿರಭೂತ್ತಸ್ಯ ತಸ್ಯಾಮಿತಿ ಚ ನಃ ಶ್ರುತಮ್ ॥64॥

ಪ್ರಕಾಂತಕಂದುಕಕ್ರೀಡಾಮಾಲಿಭಿಃ ಸಹಕನ್ಯಕಾಮ್ ।
ವೀಕ್ಷ್ಯ ವೀಕ್ಷ್ಯ ಯಯೌ ತೃಪ್ತಿಂ ಪ್ರಹರ್ಷೋತ್ಫುಲ್ಲಲೋಚನಃ ॥65॥

ತತಃ ಕಪಿವರಃ ಕಶ್ಚಿತ್ಕೇಸರೀತಿ ಭುವಿ ಶ್ರುತಃ ।
ಅಭಿಗಮ್ಯ ಯಯಾಚೇ ತಾಂ ಕನ್ಯಾಂ ಯೌವನಶಾಲಿನೀಮ್ ॥66॥

ತಸ್ಮೈ ತಾಮಂಜನಾಂ ಪ್ರಾದಾದ್ ದೈತ್ಯಃ ಸಂಪ್ರೀತಮಾನಸಃ ।
ಸ ಚಿಕ್ರೀಡ ಕಪಿಶ್ರೇಷ್ಠಯಂ ಕನ್ಯಯಾ ಕಾಮರೂಪಯಾ ॥67॥

ದಾನವೇಂದ್ರನೂ ಸಹ ತನ್ನ ಇಷ್ಟವಾದ ವರವನ್ನು ಪಡೆದು ಸಂತುಷ್ಟನಾದನು. (61)

ಕೆಲವು ದಿನಗಳ ಅನಂತರದಲ್ಲಿ ಕೇಸರಿಗೆ ಲೋಕವಿಸ್ಮಯಕರಳಾದ ಒಬ್ಬ ಕನ್ಯೆಯು ಜನಿಸಿದಳು. ದೈತ್ಯನಾದ ಕೇಸರಿಯು ಅವಳಿಗೆ ಅಂಜನಾ ಎಂಬುದಾಗಿ ನಾಮಕರಣವನ್ನು ಮಾಡಿದನು. (62) ಸುಂದರವಾದ ಮುಖ, ಮಧುರವಾದ ಧ್ವನಿಗಳನ್ನು ಹೊಂದಿದ ಅಂಜನೆಯು, ಶುಕ್ಲ ಪಕ್ಷದ ಚಂದ್ರನಂತೆ, ಎಲ್ಲರ ಕಣ್ಣುಗಳಿಗೆ ರಂಜಕಳಾಗಿ ಬೆಳೆದಳು. ಅಂಜನೆಯು ಬೆಳೆದಂತೆ ತಂದೆಯಾದ ಕೇಸರಿಯ ಸಂತೋಷವು ದಿನೇ ದಿನೇ ಹೆಚ್ಚುತ್ತಾ ಹೋಯಿತು. ಅವನು ಅಂಜನೆಯಲ್ಲಿ ಮಗನಂತೆ ಪ್ರೀತಿಯನ್ನು ಮಾಡಿದನು ಎಂದು ನಮ್ಮಿಂದ ಕೇಳಲ್ಪಟ್ಟಿರುವದು. ಬಾಲಿಕೆಯರಿಂದ ಸಹಿತಳಾದ ಅಂಜನೆಯು ಕಂದುಕ ಕ್ರೀಡೆ (ಚಂಡಿನಾಟ) ಯನ್ನು ಆಡುತ್ತಿದ್ದರೆ ಅದನ್ನು ನೋಡಿ ಕೇಸರಿಯು ಅತ್ಯಂತ ಸಂತೋಷವನ್ನು ಅನುಭವಿಸುತ್ತಿದ್ದನು. (63–65)

ಅನಂತರ ಕೇಸರಿಯೆಂದು ಭೂಮಿಯಲ್ಲಿ ಪ್ರಸಿದ್ಧನಾಗಿದ್ದ ವಾನರಶ್ರೇಷ್ಠನು ಕೇಸರಿಯ ಬಳಿ ಬಂದು ಯೌವನಾಢ್ಯಳಾಗಿದ್ದ ಸುಂದರಿಯಾದ ಅಂಜನೆಯನ್ನು ವಿವಾಹ ಮಾಡಿ ಕೊಡುವಂತೆ ಬೇಡಿದನು. ಇದರಿಂದ ಸುಪ್ರೀತನಾದ ಕೇಸರಿ ದಾನವನು ಆ ಕೇಸರಿ ವಾನರಿಗೆ ತನ್ನ ಮಗಳಾದ ಅಂಜನೆಯನ್ನು ವಿವಾಹಮಾಡಿಕೊಟ್ಟನು. ಆ ಕಪಿಶ್ರೇಷ್ಠನಾದ ಕೇಸರಿಯೂ ಸಹ ಅನುರೂಪಳಾಗಿದ್ದ ಸುಂದರಿಯಾದ ಅಂಜನಾದೇವಿಯೊಂದಿಗೆ ಬಹುಕಾಲ ಆನಂದದಿಂದ ವಿಹಾರಮಾಡಿದನು.

ಇತಿ ಶ್ರೀಬ್ರಹ್ಮಾಂಡಪುರಾಣೇ ತೀರ್ಥಖಂಡೇ ಭೃಗುನಾರದಸಂವಾದೇ ಶ್ರೀವೇಂಕಟಾಚಲಮಾಹಾತ್ಮ್ಯೇ
ವೃಷಭಾಚಲೋತ್ಪತ್ತಿವರ್ಣನಂ ನಾಮ ಚತುರ್ಥೋಽಧ್ಯಾಯಃ ॥ 4 ॥

* * *

(66–67)

ಇಲ್ಲಿಗೆ ಬ್ರಹ್ಮಾಂಡ ಪುರಾಣದಲ್ಲಿಯ ತೀರ್ಥಖಂಡದ ಭೃಗುನಾರದ ಸಂವಾದದಲ್ಲಿಯ
ಶ್ರೀವೆಂಕಟಾಚಲಮಾಹಾತ್ಮೆಯಲ್ಲಿ ವೃಷಭಾಚಲೋತ್ಪತ್ತಿವರ್ಣನವೆಂಬ ನಾಲ್ಕನೆಯ ಅಧ್ಯಾಯವು
ಪರಿಸಮಾಪ್ತವಾಯಿತು

* * *

## ಅಥ ಪಂಚಮೋಽಧ್ಯಾಯಃ

ನಾರದ ಉವಾಚ–

**ವಿಹರಂತೀ ಚಿರಂ ತೇನ ಕಪಿನಾ ಸಾಧು ಕನ್ಯಕಾ ।**
**ನ ಲೇಭೇ ಸದೃಶಂ ಪುತ್ರಂ ಚಿಂತಾಶೋಕಪರಾಯಣಾ ॥1 ॥**

**ಅಹೋ ಮಮ ಪಿತಾ ಮಾಂ ವೈ ಪುತ್ರಸ್ನೇಹಸಮಾಕುಲಃ ।**
**ಪೋಷಯಾಮಾಸ ತಸ್ಯಾಹಮಾನೃಣ್ಯಂ ಕೇನ ಚಾಪ್ನುಯಾಮ್ ॥2॥**

**ತಸ್ಯಾ ಮೇ ಮಂದಭಾಗ್ಯಾಯಾಃ ಸಂತತಿಶ್ಚ ವಿನಾ ಕೃತಾ ।**
**ನಾರೀಣಾಂ ಪುತ್ರಹೀನಾನಾಂ ನ ಸುಖಂ ಪಾರಲೌಕಿಕಮ್ ॥3॥**

**ಪುತ್ರೇಣ ಮೇ ವಿಹೀನಾಯಾಃ ಕುತ್ರ ವಿಶ್ರಮ್ಯತೇ ಕುಲಮ್ ।**
**ಧನ್ಯಾಃ ಖಲು ಸ್ತ್ರಿಯಸ್ತಾ ವೈ ಯಾಃ ಪಶ್ಯಂತಿ ಶುಚಿಸ್ಮಿತಮ್ ॥4॥**

## ಐದನೆಯ ಅಧ್ಯಾಯವು

ಬಹುಕಾಲ ಕೇಸರಿ ಕಪಿಯೊಡನೆ ವಿಹಾರವನ್ನು ಮಾಡುತ್ತಿದ್ದ ಅಂಜನೆಯು ತನಗೆ ಅನುರೂಪನಾದ ಮಗನನ್ನು ಪಡೆಯಲಿಲ್ಲ. ಇದರಿಂದ ಅವಳು ಅತ್ಯಂತ ಶೋಕವನ್ನು ಹೊಂದಿ ಚಿಂತೆಯನ್ನು ಮಾಡಿದಳು. (1)

*ಅಂಜನೆಯ ಅನಪತ್ಯತ್ವಚಿಂತಾ*

'ಅಹೋ! ನನ್ನ ತಂದೆಯಾದರೂ ನನ್ನಲ್ಲಿ ಮಗನಲ್ಲಿ ಮಾಡತಕ್ಕ ಪ್ರೀತಿ– ಅಭಿಮಾನಗಳನ್ನು ಮಾಡಿ ಬೆಳೆಸಿರುವನು. ಉತ್ತಮನಾದ ಮಗನನ್ನು ಪಡೆಯದೇ ಅವನ ಋಣವನ್ನು ಹೇಗೆ ತೀರಿಸಿಯೇನು? ಆದರೆ ದುರದೃಷ್ಟ ಶಾಲಿನಿಯಾದ ನನಗೆ ಮಗನೂ ಸಹ ಹುಟ್ಟಲಿಲ್ಲ. ಮಕ್ಕಳನ್ನು ಪಡೆಯದ ಸ್ತ್ರೀಯರಿಗೆ ಪರಲೋಕದಲ್ಲಿ ಸುಖವೂ ಇರುವದಿಲ್ಲ. (ಇಹಲೋಕದಲ್ಲಿ ಸುಖ– ಪರಲೋಕದಲ್ಲಿ ಗತಿ ಎರಡೂ ಇರುವದಿಲ್ಲ) ಪುತ್ರರಹಿತಳಾದ ನನ್ನಿಂದಾಗಿ ನನ್ನ ಕುಲವು ಹೇಗೆ ಬೆಳೆಯುವದು! ಎಲ್ಲಿ ಅದು ನಿಂತುಹೋಗುವದೋ? ಯಾರು ತಮ್ಮ ಮಡಿಲಿನಲ್ಲಿ ಮಲಗಿರುವ ಮಕ್ಕಳ ನಗುಮುಖವನ್ನು ನೋಡುವರೋ ಅಂತಹ ಸ್ತ್ರೀಯರೇ ಲೋಕದಲ್ಲಿ ಧನ್ಯರೆನಿಸುವರು.'

ಮುಖಮಂಕೇ ಶಯಾನಾನಾಂ ಪುತ್ರಾಣಾಂ ಪುತ್ರವತ್ಸಲಾಃ ।
ಇತಿ ಸಂಚಿತ್ಯ ಬಹುಧಾ ಪುತ್ರಾರ್ಥಂ ಸಾಶ್ರುಲೋಚನಾ ॥5॥

ದ್ವಿಜಾನಭ್ಯರ್ಚ್ಯ ವಿಧಿವದಾಶಿಷೋ ವಾಚಯಂತ್ಯಹೋ ।
ದದಾವಭೀಪ್ಸಿತಂ ತೇಭ್ಯಃ ಸರ್ವದೈವ ಯಶಸ್ವಿನೀ ॥6॥

ನಿಮಿತ್ತಜ್ಞಾಂಶ್ಚ ಪೃಚ್ಛಂತೀ ತಾನುವಾಚ ತದಾಂಜನಾ ।
ವ್ರತೇಷು ಚಾಪ್ಯನೇಕೇಷು ನಿಯತಾ ಚಾವಸತ್ತ್ವಯಮ್ ॥7॥

ಆಸ್ತೀರ್ಯ ಮುಸಲಾಂಶ್ಚಾಪಿ ಗೋಷ್ಠೇಷು ನಿಯತೇಂದ್ರಿಯಾ ।
ಉಪವಾಸಪರಾ ಭೂತ್ವಾ ತುಷ್ಟಾವ ಜಗದೀಶ್ವರಮ್ ॥8॥

ಏವಂ ವಿಧಾನ್ಯನೇಕಾನಿ ಕೃತ್ವಾ ನಿಯತಮಾನಸಾ ।
ಚರಂತೀ ನೈವ ಲೇಭೇ ಸಾ ಪುತ್ರಜನ್ಮಕೃತಂ ಸುಖಮ್ ॥9॥

ಕಸ್ಯಚಿತ್ ತ್ವಥ ಕಾಲಸ್ಯ ದಯಯಾ ಧರ್ಮದೇವತಾ ।
ಬಿಭ್ರತೀ ಪುಲ್ಕಸೀರೂಪಂ ಧೃತ್ವಾ ವೇತ್ರಂ ಚ ಪುತ್ರಿಕಾಮ್ ॥10॥

ಹೀಗೆ ವಿಚಾರಮಾಡುತ್ತಾ ಚಿಂತಾಪರಳಾದ ಅಶ್ರುಲೋಚನೆಯಾದ ಅಂಜನೆಯು ಮಕ್ಕಳಾಗುವದರಗೋಸ್ಕರವಾಗಿ ಬಹಳಷ್ಟು ಪ್ರಯತ್ನಗಳನ್ನು ಮಾಡಿದಳು.(2–5)

ಕೀರ್ತಿಮಂತಳಾದ ಅಂಜನೆಯು ಮಕ್ಕಳಾಗುವದಕ್ಕಾಗಿ ಬ್ರಾಹ್ಮಣರನ್ನು ಪೂಜಿಸಿ, ಅವರ ಅಪೇಕ್ಷೆಗಳನ್ನು ಪೂರೈಸಿ, ಅವರಿಂದ ವಿಧ್ಯುಕ್ತವಾದ ಆಶೀರ್ವಾದಗಳನ್ನು ಪಡೆದಳು. ದೈವಜ್ಞರನ್ನು ಪ್ರಶ್ನಿಸಿ ಮಕ್ಕಳಾಗುವದ-ಕ್ಕಾಗಿರುವ ಅನೇಕ ವ್ರತಗಳನ್ನು ತಿಳಿದುಕೊಂಡು ಆ ವ್ರತಗಳನ್ನು ಆಚರಿಸಿದಳು. ಗೋಷ್ಠಗಳಲ್ಲಿ ಒನಕೆಗಳನ್ನು ಹಾಸಿ ಅವುಗಳ ಮೇಲೆ ಕುಳಿತು ಉಪವಾಸವನ್ನಾಚರಿಸುವವಳಾಗಿ ಜಗದೀಶ್ವರನಾದ ನಾರಾಯಣನನ್ನು ಆರಾಧಿಸಿದಳು (6–8)

ಹೀಗೆ ಅನೇಕ ವಿಧವಾದ ವ್ರತಗಳನ್ನು ದೃಢಮನಸ್ಸಿನಿಂದ ಆಚರಿಸಿದರೂ ಸಹ ಮಕ್ಕಳನ್ನು ಪಡೆಯಲಿಲ್ಲ. ಹೀಗೆಯೇ ಕೆಲ ಕಾಲಾನಂತರದಲ್ಲಿ ಅಂಜನೆಯ ಮೇಲಿನ ದಯೆಯಿಂದ ಧರ್ಮದೇವತೆಯು ಕೊರವಂಜಿ (ಪುಲ್ಕಸೆಯ) ರೂಪವನ್ನು ಧರಿಸಿ, ದಂಡ ಮತ್ತು ಸಣ್ಣ ಶಿಶುವನ್ನು ಎತ್ತಿಕೊಂಡು 'ಯಾರು ಏನು ಕೇಳುವಿರೋ ಕೇಳಿರಿ. ಅದನ್ನು ತಿಳಿಸುವೆನು' ಎಂದು ನುಡಿಯುತ್ತಾ, ಜನರ ಹಸ್ತಗಳನ್ನು ನೋಡುತ್ತಾ ಅವರ ಲಕ್ಷಣಗಳನ್ನು ಹೇಳುತ್ತಾ ಅಂಜನೆಯ ಸಮೀಪಕ್ಕೆ ಬಂದಳು. (9–10)

## ಅಥ ಪಂಚಮೋಽಧ್ಯಾಯಃ

ನಾರದ ಉವಾಚ–

ವಿಹರಂತೀ ಚಿರಂ ತೇನ ಕಪಿನಾ ಸಾಧು ಕನ್ಯಾಕಾ ।
ನ ಲೇಭೇ ಸದೃಶಂ ಪುತ್ರಂ ಚಿಂತಾಶೋಕಪರಯಣಾ ॥1 ॥

ಅಹೋ ಮಮ ಪಿತಾ ಮಾಂ ವೈ ಪುತ್ರಸ್ನೇಹಸಮಾಕುಲಃ ।
ಪೋಷಯಾಮಾಸ ತಸ್ಯಾಹಮಾನೃಣ್ಯಂ ಕೇನ ಚಾಪ್ನುಯಾಮ್ ॥2॥

ತಸ್ಯಾ ಮೇ ಮಂದಭಾಗ್ಯಾಯಾಃ ಸಂತತಿಶ್ಚ ವಿನಾ ಕೃತಾ ।
ನಾರೀಣಾಂ ಪುತ್ರಹೀನಾನಾಂ ನ ಸುಖಂ ಪಾರಲೌಕಿಕಮ್ ॥3॥

ಪುತ್ರೇಣ ಮೇ ವಿಹೀನಾಯಾಃ ಕುತ್ರ ವಿಶ್ರಮ್ಯತೇ ಕುಲಮ್ ।
ಧನ್ಯಾಃ ಖಲು ಸ್ತ್ರಿಯಸ್ತಾ ವೈ ಯಾಃ ಪಶ್ಯಂತಿ ಶುಚಿಸ್ಮಿತಮ್ ॥4॥

## ಐದನೆಯ ಅಧ್ಯಾಯವು

ಬಹುಕಾಲ ಕೇಸರಿ ಕಪಿಯೊಡನೆ ವಿಹಾರವನ್ನು ಮಾಡುತ್ತಿದ್ದ ಅಂಜನೆಯು ತನಗೆ ಅನುರೂಪನಾದ ಮಗನನ್ನು ಪಡೆಯಲಿಲ್ಲ. ಇದರಿಂದ ಅವಳು ಅತ್ಯಂತ ಶೋಕವನ್ನು ಹೊಂದಿ ಚಿಂತೆಯನ್ನು ಮಾಡಿದಳು. (1)

*ಅಂಜನೆಯ ಅನಪತ್ಯತ್ವಚಿಂತಾ*

'ಅಹೋ! ನನ್ನ ತಂದೆಯಾದರೂ ನನ್ನಲ್ಲಿ ಮಗನಲ್ಲಿ ಮಾಡತಕ್ಕ ಪ್ರೀತಿ- ಅಭಿಮಾನಗಳನ್ನು ಮಾಡಿ ಬೆಳೆಸಿರುವನು. ಉತ್ತಮನಾದ ಮಗನನ್ನು ಪಡೆಯದೇ ಅವನ ಋಣವನ್ನು ಹೇಗೆ ತೀರಿಸಿಯೇನು? ಆದರೆ ದುರದೃಷ್ಟ ಶಾಲಿನಿಯಾದ ನನಗೆ ಮಗನೂ ಸಹ ಹುಟ್ಟಲಿಲ್ಲ. ಮಕ್ಕಳನ್ನು ಪಡೆಯದ ಸ್ತ್ರೀಯರಿಗೆ ಪರಲೋಕದಲ್ಲಿ ಸುಖವೂ ಇರುವದಿಲ್ಲ. (ಇಹಲೋಕದಲ್ಲಿ ಸುಖ- ಪರಲೋಕದಲ್ಲಿ ಗತಿ ಎರಡೂ ಇರುವದಿಲ್ಲ) ಪುತ್ರರಹಿತಳಾದ ನನ್ನಿಂದಾಗಿ ನನ್ನ ಕುಲವು ಹೇಗೆ ಬೆಳೆಯುವದು! ಎಲ್ಲಿ ಅದು ನಿಂತುಹೋಗುವದೋ? ಯಾರು ತಮ್ಮ ಮಡಿಲಿನಲ್ಲಿ ಮಲಗಿರುವ ಮಕ್ಕಳ ನಗುಮುಖವನ್ನು ನೋಡುವರೋ ಅಂತಹ ಸ್ತ್ರೀಯರೇ ಲೋಕದಲ್ಲಿ ಧನ್ಯರೆನಿಸುವರು.'

ಮುಖಮಂಕೇ ಶಯಾನಾನಾಂ ಪುತ್ರಾಣಾಂ ಪುತ್ರವತ್ಸಲಾಃ ।
ಇತಿ ಸಂಚಿತ್ಯ ಬಹುಧಾ ಪುತ್ರಾರ್ಥಂ ಸಾಶ್ರುಲೋಚನಾ ॥5॥

ದ್ವಿಜಾನಭ್ಯರ್ಚ್ಯ ವಿಧಿವದಾಶಿಷೋ ವಾಚಯಂತ್ಯಹೋ ।
ದದಾವಭೀಪ್ಸಿತಂ ತೇಭ್ಯಃ ಸರ್ವದೈವ ಯಶಸ್ವಿನೀ ॥6॥

ನಿಮಿತ್ತಜ್ಞಾಂಶ್ಚ ಪೃಚ್ಛಂತೀ ತಾನುವಾಚ ತದಾಂಜನಾ ।
ವ್ರತೇಷು ಚಾಪ್ಯನೇಕೇಷು ನಿಯತಾ ಚಾವಸತ್ಸ್ವಯಮ್ ॥7॥

ಆಸ್ತೀರ್ಯ ಮುಸಲಾಂಶ್ಚಾಪಿ ಗೋಷ್ಠೇಷು ನಿಯತೇಂದ್ರಿಯಾ ।
ಉಪವಾಸಪರಾ ಭೂತ್ವಾ ತುಷ್ಟಾವ ಜಗದೀಶ್ವರಮ್ ॥8॥

ಏವಂ ವಿಧಾನ್ಯನೇಕಾನಿ ಕೃತ್ವಾ ನಿಯತಮಾನಸಾ ।
ಚರಂತೀ ನೈವ ಲೇಭೇ ಸಾ ಪುತ್ರಜನ್ಮಕೃತಂ ಸುಖಮ್ ॥9॥

ಕಸ್ಯಚಿತ್ ತ್ವಥ ಕಾಲಸ್ಯ ದಯಯಾ ಧರ್ಮದೇವತಾ ।
ಬಿಭ್ರತೀ ಪುಲ್ಕಸೀರೂಪಂ ಧೃತ್ವಾ ವೇತ್ರಂ ಚ ಪುತ್ರಿಕಾಮ್ ॥10॥

ಹೀಗೆ ವಿಚಾರಮಾಡುತ್ತಾ ಚಿಂತಾಪರಳಾದ ಅಶ್ರುಲೋಚನೆಯಾದ ಅಂಜನೆಯು ಮಕ್ಕಳಾಗುವದರಗೋಸ್ಕರವಾಗಿ ಬಹಳಷ್ಟು ಪ್ರಯತ್ನಗಳನ್ನು ಮಾಡಿದಳು.(2–5)

ಕೀರ್ತಿಮಂತಳಾದ ಅಂಜನೆಯು ಮಕ್ಕಳಾಗುವದಕ್ಕಾಗಿ ಬ್ರಾಹ್ಮಣರನ್ನು ಪೂಜಿಸಿ, ಅವರ ಅಪೇಕ್ಷೆಗಳನ್ನು ಪೂರೈಸಿ, ಅವರಿಂದ ವಿಧ್ಯುಕ್ತವಾದ ಆಶೀರ್ವಾದಗಳನ್ನು ಪಡೆದಳು. ದೈವಜ್ಞರನ್ನು ಪ್ರಶ್ನಿಸಿ ಮಕ್ಕಳಾಗುವದ-ಕ್ಕಾಗಿರುವ ಅನೇಕ ವ್ರತಗಳನ್ನು ತಿಳಿದುಕೊಂಡು ಆ ವ್ರತಗಳನ್ನು ಆಚರಿಸಿದಳು. ಗೋಷ್ಠಗಳಲ್ಲಿ ಒನಕೆಗಳನ್ನು ಹಾಸಿ ಅವುಗಳ ಮೇಲೆ ಕುಳಿತು ಉಪವಾಸವನ್ನಾಚರಿಸುವವಳಾಗಿ ಜಗದೀಶ್ವರನಾದ ನಾರಾಯಣನನ್ನು ಆರಾಧಿಸಿದಳು (6–8)

ಹೀಗೆ ಅನೇಕ ವಿಧವಾದ ವ್ರತಗಳನ್ನು ದೃಢಮನಸ್ಸಿನಿಂದ ಆಚರಿಸಿದರೂ ಸಹ ಮಕ್ಕಳನ್ನು ಪಡೆಯಲಿಲ್ಲ. ಹೀಗೆಯೇ ಕೆಲ ಕಾಲಾನಂತರದಲ್ಲಿ ಅಂಜನೆಯ ಮೇಲಿನ ದಯೆಯಿಂದ ಧರ್ಮದೇವತೆಯು ಕೊರವಂಜಿ (ಪುಲ್ಕಸೆಯ) ರೂಪವನ್ನು ಧರಿಸಿ, ದಂಡ ಮತ್ತು ಸಣ್ಣ ಶಿಶುವನ್ನು ಎತ್ತಿಕೊಂಡು 'ಯಾರು ಏನು ಕೇಳುವಿರೋ ಕೇಳಿರಿ. ಅದನ್ನು ತಿಳಿಸುವೆನು' ಎಂದು ನುಡಿಯುತ್ತಾ, ಜನರ ಹಸ್ತಗಳನ್ನು ನೋಡುತ್ತಾ ಅವರ ಲಕ್ಷಣಗಳನ್ನು ಹೇಳುತ್ತಾ ಅಂಜನೆಯ ಸಮೀಪಕ್ಕೆ ಬಂದಳು. (9–10)

ಪೃಚ್ಛಧ್ವಂ ಚೇತ್ಯನುಪದಂ ಭಾಷಮಾಣಾ ಗತಶ್ರಮಾ ।
ಪಶ್ಯಂತೀ ಬಾಲಿಶಾನ್ ಪಾಣೌ ವದಂತೀ ಲಕ್ಷಣಾನ್ಯಥ ॥11॥

ಅಂಜನಾಯಾಃ ಸಮೀಪಂ ವೈ ಪ್ರಯಾತಾ ಧರ್ಮದೇವತಾ ।
ಅಂಜನಾ ತಾಂ ಸಮಾಹೂಯ ವಿನಿವೇಶ್ಯ ವರಾಸನೇ ॥12॥

ಶೂರ್ಪೇ ಸ್ವರ್ಣಮಯೇ ಮುಕ್ತಾತಂಡುಲಾನ್ ಪ್ರಣಿಧಾಯ ವೈ।
ತರ್ಪಯಿತ್ವಾ ನಿಮಿತ್ತಜ್ಞಾಂ ಪರ್ಯಪೃಚ್ಛದನಾಕುಲಾ ॥13॥

ಅಂಜನೋವಾಚ–

'ನಿಮಿತ್ತಜ್ಞೇ ಕಥಂ ಬ್ರೂಹಿ ಮಮ ಪುತ್ರೋಽಸ್ತಿ ವಾ ನವಾ ।
ಸತ್ಯೇನ ವದ ಧರ್ಮಜ್ಞೇ ಪೃಚ್ಛಂತ್ಯಾ ಮಮ ಸರ್ವಶಃ ॥14॥

ಯದ್ಯಹಂ ಪ್ರಾಪ್ನುಯಾಂ ಪುತ್ರಮಿಷ್ಟಂ ಬಲಿನಮಂಜಸಾ ।
ದಾಸ್ಯಾಮಿ ತವ ತತ್ಸರ್ವಂ ಯದ್ಯದಿಚ್ಛಸಿ ಚೇತಸಾ' ॥15॥

ಪುಲ್ಕಸ್ಯುವಾಚ–

*ಧರ್ಮದೇವ್ಯುಪದಿಷ್ಟಪುತ್ರೋತ್ಪತ್ತ್ಯುಪಾಯ*

ಅಂಜನಾದೇವಿಯು ಅವಳನ್ನು ಕರೆದು ಶ್ರೇಷ್ಠವಾದ ಆಸನದಲ್ಲಿ ಕುಳ್ಳಿರಿಸಿ ಬಂಗಾರದ ಮೊರದಲ್ಲಿ ಮುತ್ತುಗಳನ್ನು ಅಕ್ಕಿಯಂತೆ ತುಂಬಿ ಧರ್ಮದೇವತೆಗೆ ಕೊಟ್ಟು ಅವಳನ್ನು ಸಂತೋಷಪಡಿಸಿ, ನಿಮಿತ್ತಜ್ಞಳಾದ ಅವಳನ್ನು ಕುರಿತು – 'ಹೇ ಕೊರವಂಜಿಯೇ! ನನಗೆ ಮಕ್ಕಳಾಗುವವವೋ ಅಥವಾ ಇಲ್ಲವೋ ಎಂಬುದನ್ನು ಸತ್ಯವಾಗಿ ನನಗೆ ತಿಳಿಸು. (ನಿನ್ನ ಮಾತಿನಂತೆ) ನಾನೇನಾದರೂ ಬಲಿಷ್ಠನಾದ ಉತ್ತಮನಾದ ಮಗನನ್ನು ಹೊಂದಿದಲ್ಲಿ ನೀನು ಏನು ಕೇಳುವೆಯೋ ಅದೆಲ್ಲವನ್ನೂ ಕೊಡುವೆನು' ಎಂದು ನುಡಿದಳು. (11–15)

ಇದನ್ನು ಕೇಳಿದ ಪುಲ್ಕಸಿಯು[18] – 'ಹೇ ಅಂಜನೆಯೇ! ನೀನು ಬಯಸಿದಂತಹ ಮಗನು ನಿನಗೆ ಹುಟ್ಟುವನು. ಇದರಲ್ಲಿ ಯಾವ ಸಂದೇಹವೂ ಸಹ ಇರುವದಿಲ್ಲ. ಆದ್ದರಿಂದ ಸುಮಂಗಳೇಯೇ! ಪುತ್ರನಿಗೋಸ್ಕರವಾಗಿ ಶೋಕಿಸಬೇಡ. ಇದು ಸತ್ಯವು. ನಾನು ಧರ್ಮದ ಹೆಸರಿನಲ್ಲಿ ಪ್ರತಿಜ್ಞೆಯನ್ನು ಮಾಡಿ ಹೇಳುವೆನು. ಶ್ರೀವೇಂಕಟಾಚಲದಲ್ಲಿ ಏಳು ಸಾವಿರ ವರ್ಷಗಳಷ್ಟು ತಪಸ್ಸನ್ನು ಮಾಡು.

18. ಸ್ಕಾಂದ (ಅ.40.24)ಮತ್ತು ಭವಿಷ್ಯೋತ್ತರ ಪುರಾಣ (ಅ.1.65) ಗಳಲ್ಲಿ ಅಂಜನೆಗೆ ಮತಂಗ ಮಹರ್ಷಿಗಳು ವೇಂಕಟಾಚಲಕ್ಕೆ ತೆರಳಿ ತಪಸ್ಸನ್ನಾಚರಿಸಲು ತಿಳಿಸಿರುವದು ಕಂಡುವರುವದು. ಇಲ್ಲಿ ಪುಲ್ಕಸಿಯು ತಿಳಿಸಿರುವಂತೆ

'ಅಭೀಷ್ಟಸ್ತವ ಪುತ್ರೋ ವೈ ಭವಿಷ್ಯತಿ ನ ಸಂಶಯಃ ।
ಮಾ ಶೋಕಂ ಕುರು ಕಲ್ಯಾಣಿ ಧರ್ಮೇಣ ಮಮ ತೇ ಶಪೇ ॥16॥

ಶ್ರೀವೇಂಕಟಗಿರೌ ಸಪ್ತಸಾಹಸ್ರಂ ವತ್ಸರಾನ್ ಪುನಃ ।
ತಪಃ ಕುರು ತತಃ ಪುತ್ರಮವಾಪ್ಸ್ಯಸಿ ಸುಶೋಭನಮ್' ॥17॥

ಇತ್ಯುಕ್ತ್ವಾ ಸಾ ನಿಮಿತ್ತಜ್ಞಾ ಯಥಾಗತಮಥೋ ಯಯೌ ।
ಅಂಜನಾ ಚಿಂತಯಂತೀ ತದ್ವಾಕ್ಯಂ ತಸ್ಯಾ ಮನೋರಮಮ್ ॥18॥

ಪ್ರಚಕ್ರಮೇ ತಪಶ್ಚರ್ತುಂ ಶ್ರೀವೇಂಕಟಗಿರೇಸ್ತಟೇ ।
ಆಕಾಶಗಂಗಾನಿಕಟೇ ಸಿದ್ಧಸಂಘನಿಷೇವಿತೇ ॥19॥

ವಾಯ್ವಾಹಾರಾ ಚ ವಾಯುಂ ವೈ ಸಮುದ್ದಿಶ್ಯ ಸುದಾರುಣಮ್ ।
ತಪಶ್ಚಚಾರ ದಾಂತೇಯಂ ಪ್ರೀಣಯಂತೀ ವ್ರತೈರಿಮಮ್ ॥20॥

(ದ್ವಾದಶಾಬ್ದ ವ್ರತವನ್ನು ಮಾಡು) ಅದರಿಂದ ನಿನಗೆ ಅತ್ಯಂತ ಶ್ರೇಷ್ಠನಾದ ಮಗನು ಹುಟ್ಟುವನು' ಎಂದು ನುಡಿದು ಹೇಗೆ ಬಂದಿದ್ದಳೋ ಹಾಗೆ ಹೊರಟು ಹೋದಳು.

*ಅಂಜನೆಯ ವೇಂಕಟಾಚಲಗಮನ-ತಪಃಕರಣ*

ಅಂಜನಾದೇವಿಯು ಆ ಪುಲಿಂದೆಯ ಮಾತನ್ನೇ ಚಿಂತಿಸುತ್ತಾ ತನ್ನ ಇಚ್ಛೆಯನ್ನು ಪೂರೈಸಿಕೊಳ್ಳುವದಕ್ಕಾಗಿ ವೇಂಕಟಾಚಲಕ್ಕೆ ಬಂದಳು. (16–18) ಅಲ್ಲಿ ಸಿದ್ಧಿಯನ್ನು ಪಡೆದ ಋಷಿ, ಮುನಿಗಳಿಂದ ಸೇವಿತವಾದ ಆಕಾಶಗಂಗೆಯ ಸಮೀಪದಲ್ಲಿಯೇ ತಪಸ್ಸನ್ನಾಚರಿಸಿದಳು. ನಿತ್ಯದಲ್ಲಿಯೂ ವಾಯ್ವಾಹಾರಳಾಗಿ (ಕೇವಲ ವಾಯುವನ್ನೇ ಸೇವಿಸುತ್ತಾ – ಉಪವಾಸದಿಂದಿರುತ್ತಾ) ವಾಯುದೇವರನ್ನುದ್ದೇಶಿಸಿ ತೀವ್ರವಾದ ತಪಸ್ಸನ್ನು ಮಾಡಿದಳು. ಇಂದ್ರಿಯ ನಿಗ್ರಹ ಮೊದಲಾದ ವ್ರತಗಳಿಂದ ವಾಯು ದೇವರನ್ನು ಸಂತೋಷಗೊಳಿಸಿದಳು. (19–20) ಅಂಜನಾ ದೇವಿಯ

---

ಕಂಡುಬರುವದರಿಂದ ವಿರೋಧವನ್ನು ಶಂಕಿಸಬಾರದು. `ಕ್ವಚಿನ್ಮೋಹಾಯಾ-ಸುರಾಣಾಂ ವ್ಯತ್ಯಾಸಃ.....' ಎಂಬ ತಾತ್ಪರ್ಯ ನಿರ್ಣಯಾನುಸಾರವಾಗಿ ಇಲ್ಲಿ ಅಸಜ್ಜನರ ಮೋಹನಾರ್ಥವಾಗಿ ಪುಂವ್ಯತ್ಯಾಸವನ್ನನುಸರಿಸಿ ವಿಭಿನ್ನೋಕ್ತಿಯಿರುವದೆಂದು ತಿಳಿಯಬೇಕು. ಪೂರ್ವದಲ್ಲಿ ಮತಂಗಮುನಿಗಳು ಅಂಜನೆಗೆ ವೇಂಕಟಾಚಲದಲ್ಲಿ ತಪಸ್ಸನ್ನಾಚರಿಸಿ ಪುತ್ರನನ್ನು ಹೊಂದಲು ತಿಳಿಸಿದ ಅನಂತರದಲ್ಲಿ ತನ್ನ ಪುತ್ರೋತ್ಪತ್ತಿಯನ್ನೇ ಚಿಂತಿಸುತ್ತಿದ್ದ ಅಂಜನೆಗೆ ಯಾದೃಚ್ಛಿಕವಾಗಿ ಬಂದ ಧರ್ಮದೇವತೆಯೂ ಸಹ ಮತಂಗ ಮುನಿಗಳಂತೆಯೇ ವೇಂಕಟಾಚಲಕ್ಕೆ ತೆರಳಿ ತಪಸ್ಸನ್ನಾಚರಿಸಲು ತಿಳಿಸಿ, ಅವರ ಮಾತಿನಲ್ಲಿ ದೃಢತರ ವಿಶ್ವಾಸವುಂಟಾಗಿ ವೇಂಕಟಾಚಲಕ್ಕೆ ಹೋಗುವ ವಿಷಯದಲ್ಲಿ ಶೀಘ್ರಪ್ರವೃತ್ತಿಯುಂಟಾಗಲು ಕಾರಣಳಾಗಿರುವಳು.

ತತಃ ಪ್ರೀತಮನಾ ವಾಯುಃ ಫಲಮೇಕಂ ದಿನೇ ದಿನೇ ।
ಭಕ್ಷಣಾರ್ಥಂ ದದೌ ತಸ್ಯೈ ದೃಗ್ಗೋಚರಮುಪಾಗತಃ ॥21 ॥

ಅತೀತೇ ಸಪ್ತಸಾಹಸ್ರೇ ವತ್ಸರಾಣಾಮನಂತರಮ್ ।
ಪಾರ್ವತೀಸಹಿತಃ ಶಂಭು[19]ಸ್ತದಾಶ್ರಮಮುಪಾಗಮತ್ ॥22॥

ವಿಜಹಾರ ಚ ತತ್ರಾಯಂ ತತ್ರ ತತ್ರ ವನಾಂತರೇ ।
ತಸ್ಮಿನ್ನವಸರೇ ತತ್ರ ವಿಲಾಸಾರ್ಥಮುಪಾಗತಮ್ ॥23॥

ಚಿಕ್ರೀಡ ವಾನರದ್ವಂದ್ವಂ ತದದ್ಭುತಮಿವಾಭವತ್ ।
ಪಾರ್ವತ್ಯೈ ದರ್ಶಯಾಮಾಸ ಪಶ್ಯಪಶ್ಯೇತಿ ಧೂರ್ಜಟಿಃ ॥24॥

ಸಾ ಚ ದೃಷ್ಟ್ವಾ ಕಪಿದ್ವಂದ್ವಂ ಕ್ರೀಡಿತಂ ವ್ರೀಡಿತಾ ಶನೈಃ ।
ಅಥ ತಸ್ಯಾಃ ಮನಶ್ಚಾಸೀದಾವಾಂ ಕಪಿತನೂಧರೌ ॥25॥

ತಪಸ್ಸಿನಿಂದ ಸಂತುಷ್ಟರಾದ ವಾಯುದೇವರು ಪ್ರತಿದಿನವೂ ಪ್ರತ್ಯಕ್ಷವಾಗಿ ಬಂದು ಅವಳಿಗೆ ಹಣ್ಣೊಂದನ್ನು ತಿನ್ನುವದಕ್ಕಾಗಿ ಕೊಡುತ್ತಿದ್ದರು. (21)

ಹೀಗೆ ಏಳು ಸಾವಿರ ವರ್ಷಗಳು ಮುಗಿಯುತ್ತಿರಲು ಪಾರ್ವತಿಯಿಂದ ಸಹಿತನಾದ ಶಂಭುವು ಆ ಅಂಜನೆಯ ಆಶ್ರಮದ ಬಳಿಯೇ ಬಂದು ಆ ವನಪ್ರದೇಶದಲ್ಲಿ ವಿಹಾರವನ್ನು ಮಾಡಿದರು. (22) ಅದೇ ಸಂದರ್ಭದಲ್ಲಿ ಎರಡು ವಾನರಗಳು ಕ್ರೀಡಾರ್ಥವಾಗಿ ಕಾನನಕ್ಕೆ ಬಂದು ಯಥೇಚ್ಛವಾಗಿ ವಿಹಾರವನ್ನು ಮಾಡಿದವು. ಧೂರ್ಜಟಿಯಾದ ಶಿವನು ಇದನ್ನು ಅದ್ಭುತವೆಂಬಂತೆ ಪಾರ್ವತಿಗೆ '(ಆ ಕಪಿಗಳ ವಿಹಾರವನ್ನು) ನೋಡು ನೋಡು' ಎಂದು ತೋರಿಸಿದನು. (23–24) ಕಪಿಗಳ ವಿಹಾರವನ್ನು ನೋಡಿ ಪಾರ್ವತಿಯು ಸ್ವಲ್ಪ ನಾಚಿಕೆಯನ್ನು ಹೊಂದಿದಳು. ಅವಳು ಮನಸ್ಸಿನಲ್ಲಿ

---

19. ಇಲ್ಲಿಯ ಪಾರ್ವತೀ-ಶಂಭುಶಬ್ದಗಳು `ಸ್ವಯಂಭೂಃ ಶಂಭುರಾದಿತ್ಯಃ...' ಇವೇ ಮೊದಲಾದ ವಿದ್ವದ್ರೂಢಿಗನುಗುಣವಾಗಿ, ಮತ್ತು ಅವಯವ ವ್ಯುತ್ಪತ್ತಿಯಿಂದಲೂ ಲಕ್ಷ್ಮೀನರಸಿಂಹ ಪರವಾಗಿರುವವೆಂದು ತಿಳಿಯಬೇಕು. ಹನುಮದವತಾರಕ್ಕೆ ಕಾರಣವಾಗಿರುವದು ಲಕ್ಷ್ಮೀನಾರಾಯಣರೇ ಹೊರತು ಇತರ ದೇವತೆಗಳಲ್ಲ. ಬ್ರಹ್ಮದೇವರ ಸಮಕಕ್ಷಾಪನ್ನರಾದ ವಾಯುದೇವರಿಂದ ಅಹಂಕಾರ ತತ್ತ್ವಾಭಿಮಾನಿಗಳಾದ ರುದ್ರದೇವರು ಜನಿಸುವರೆಂಬುದು ಷಟ್ಪ್ರಶ್ನೋಪನಿಷತ್ತೇ ಮೊದಲಾದ ಉಪನಿಷತ್ತುಗಳಲ್ಲಿ ಪ್ರಸಿದ್ಧವಾಗಿರುವದರಿಂದ ಇಲ್ಲಿ ಶಂಭು-ಪಾರ್ವತಿ ಶಬ್ದಗಳಿಗೆ ಶಿವ-ಪಾರ್ವತಿ ಯರೆಂಬ ದೃಷ್ಟಾರ್ಥವನ್ನು ಸ್ವೀಕರಿಸಿದಲ್ಲಿ ಬಹುಪ್ರಮಾಣ ವಿರೋಧ ವುಂಟಾಗುವದರಿಂದ ವಿದ್ವದ್ರೂಢಿಯಿಂದ ಲಕ್ಷ್ಮೀನಾರಾಯಣಪರವಾದ ಅರ್ಥವನ್ನು ಸ್ವೀಕರಿಸಬೇಕೆಂಬುದು ಇಲ್ಲಿಯ ವ್ಯಾಖ್ಯಾನಕಾರರ ಅಭಿಪ್ರಾಯ ವಾಗಿರುವದು. ದುಷ್ಟಜನ ವಿಮೋಹಾರ್ಥವಾಗಿ ಉಭಯತ್ರ ಪ್ರಸಿದ್ಧ ಶಬ್ದಗಳನ್ನು ಪ್ರಯೋಗಿಸಿ, ಅಸಜ್ಜನರನ್ನು ತತ್ತ್ವದಿಂದ ವಿಮುಖರನ್ನಾಗಿಸುವರೆಂದು ತಿಳಿಯುವದು ಸೂಕ್ತವೆನಿಸುವದು.

ವಿಹರಿಷ್ಯಾವ ಇತಿ ಹಿ ಲೋಕಸ್ಯ ರುಚಿರೀದೃಶೀ ।
ತತಃ ಕಪಿಯುಗಂ ಭೂತ್ವಾ ಪಾರ್ವತೀಪರಮೇಶ್ವರೌ ॥26॥

ಚಿಕ್ರೀಡತುರ್ವನಾಂತೇಽಸ್ಮಿನ್ನುಭೌ ಮುದಿತಮಾನಸೌ ।
ತಯೋರ್ವೀರ್ಯಂ[20] ತದಾ ವಾಯುರಥ ಪತ್ರಪುಟಾಂತರೇ ॥27॥

ಆಹೃತ್ಯ ಪ್ರದದೌ ತಸ್ಯಾ ಅಂಜನಾಯಾಃ ಕರಾಂತರೇ ।
ಮನ್ವಾನಾ ಭಕ್ಷ್ಯಮಿತ್ಯೇವ ತದ್ಭಕ್ಷಿತವತೀ ಹ್ಯಸೌ ॥28॥

ದಧೌ ದೋಹದಚಿಹ್ನಾನಿ ಕ್ರಮೇಣ ನಿಯತೇಂದ್ರಿಯಾ ।
ಅಂಜನಾ ಕಂಜನಯನಾ ಪ್ರಫುಲ್ಲನಲಿನಾನನಾ ॥29॥

ಚಿಂತಯಂತೀ ಕಿಮೇತನ್ಮೇ ನಿರ್ದೋಷಾಯಾಃ ಸಮಾಗತಮ್।

'ನಾವೂ ಸಹ ಹೀಗೆಯೆ ಕಪಿಯ ರೂಪವನ್ನು ಹೊಂದಿ ಲೋಕರೀತಿಯಂತೆ ವಿಹಾರವನ್ನು ಮಾಡೋಣ' ಎಂದು ಬಯಸಿದಳು. ಅನಂತರ ಪಾರ್ವತೀಪರಮೇಶ್ವರರಿಬ್ಬರೂ ಸಹ ವನದಲ್ಲಿ ಕಪಿರೂಪವನ್ನು ಧಾರಣಮಾಡಿ ಯಥೇಚ್ಛವಾಗಿ ವಿಹರಿಸಿದರು. ಕಪಿರೂಪರಾಗಿದ್ದ ಪಾರ್ವತೀಪರಮೇಶ್ವರರ ವೀರ್ಯವನ್ನು ವಾಯು ದೇವರು ಒಂದು ಎಲೆಯಲ್ಲಿ ಸಂಗ್ರಹಿಸಿ (25–27). ಅದನ್ನು ಅಂಜನೆಯ ಕೈಯಲ್ಲಿ ಕೊಟ್ಟನು. ಹಸಿದಿದ್ದ ಅಂಜನೆಯು ಅದನ್ನು ಫಲವೆಂಬುದಾಗಿ ತಿಳಿದು ಅದನ್ನು ತಿಂದಳು. (28)

*ಅಂಜನೆಯ ಗರ್ಭೋತ್ಪತ್ತಿ*

ಅನಂತರ ಕಮಲನಯನೆಯಾದ ಅಂಜನೆಯು ಕೆಲವೇ ದಿನಗಳಲ್ಲಿ ಗರ್ಭಿಣಿಯ ಚಿಹ್ನೆಗಳನ್ನು ಧರಿಸಿದಳು. ಇದರಿಂದ ಗಾಬರಿಗೊಳಗಾದ ಪತಿವ್ರತೆಯಾದ ಅಂಜನೆಯು 'ನಿರ್ದುಷ್ಟಳಾದ

20. ಇಲ್ಲಿ ವೀರ್ಯಶಬ್ದಕ್ಕೆ ನೃಸಿಂಹತೇಜೋಪಬೃಂಹಿತವಾದ ಇಚ್ಛಾವಿಶೇಷ ವೆಂದರ್ಥವನ್ನು ಮಾಡಬೇಕು. ವಾಯುದೇವರಿಗೆ ಈಶೇಚ್ಛಾಮಾತ್ರದಿಂದಲೇ ಜನನವೆಂಬುದು ಬಳಿತ್ಥಾದಿ ಸೂಕ್ತಗಳಲ್ಲಿ 'ದೇವಸ್ಯ ಭರ್ಗೋ ಸಹಸೋ ಯತೋಽಜನಿ' ಇವೇ ಮೊದಲಾದ ಮಂತ್ರಗಳಿಂದ ಪ್ರಸಿದ್ಧವಾಗಿರುವದು. ವೀರ್ಯವನ್ನು ಬಾಯಿಯಿಂದ ಭಕ್ಷಣಮಾಡುವದೂ ಸಹ ನರಕಪ್ರದ ವಾಗಿರುವದು. ಅಂತಹ ವೀರ್ಯವನ್ನು ಅಂಜನೆಯು ಭಕ್ಷಣೆಮಾಡುವದೂ ಸಹ ಉಪಪನ್ನವಾಗುವದಿಲ್ಲ. ಆದ್ದರಿಂದ 'ಪತ್ರಪುಟಾಂತರೇ ಆಹೃತ್ಯ..... ' ಎಂಬುವದಕ್ಕೆ ತನ್ನ-ಭಗವಂತನ ಅನುಗ್ರಹ ವಿಶೇಷವನ್ನು ವಾಯುದೇವರು ಫಲ-ಪತ್ರಾದಿಗಳ ಮೂಲಕವಾಗಿ ಅಂಜನೆಯ ಕೈಯಲ್ಲಿ ಹಾಕಿದರು ಎಂದು ಅರ್ಥೈಸಬೇಕು. 'ದಶಪ್ರಮತಿಂ ಜನಯಂತ ಯೋಷಣಃ' ಎಂಬ ಶ್ರುತಿಗನುಸಾರವಾಗಿ ದ್ವಾದಶಾಬ್ದಾದಿ ವ್ರತಗಳ ಅನುಷ್ಠಾನದಿಂದ ಅತ್ಯಂತ ಶುದ್ಧಳಾಗಿದ್ದ ಶ್ರೀಭೂದುರ್ಗಾದಿ ಸನ್ನಿಧಾನೋಪೇತವಾದ ಅಂಜನೆಯ ಗರ್ಭದಲ್ಲಿ ವಾಯುದೇವರು ಮಗನಾಗಿ ಜನಿಸಲು ಪ್ರವೇಶಿಸಿದರು ಎಂದು ಅರ್ಥ.

ಅಥವಾ ವಿಧಿವೈರೂಪ್ಯಮಹೋ ಮೇ ಮಂದಭಾಗ್ಯತಾ ॥30॥

ಕೇನ ದೋಷೇಣ ಚಾಹಂ ವಾ ಈದೃಶಂ ರೂಪಮಾಗತಾ ।
ಚಿಂತಯಂತೀ ಚಿರಂ ಸಾ ವ್ರೀಡಿತಾ ದುಃಖಿತಾ ಸ್ಥಿತಾ ॥31॥

'ಮಾ ವಿಷಾದಂ ಗಮಃ ಪುತ್ರಿ ಭವಿತವ್ಯಮಿದಂ ತವ ।
ದುಷ್ಟಾತ್ಮಾ ರಾವಣೋ ನಾಮ ರಾಕ್ಷಸೋ ಲೋಕಕಂಟಕಃ ॥32॥

ಸ ತು ದೇವಸ್ತ್ರಿಯಃ ಸರ್ವಾ ಬಂದೀಗ್ರಾಮಂ ಗ್ರಹೀಷ್ಯತಿ ।
ತ್ರಿಲೋಕೀಮಪಿ ಯಸ್ಮಾದ್ವೈ ರಾವಯಿಷ್ಯತಿ ಕರ್ಮಣಾ ॥33॥

ತಸ್ಮಾದ್ರಾವಣ ಇತ್ಯೇವ ಪ್ರಸಿದ್ಧಿಮಧಿಯಾಸ್ಯತಿ ॥34॥

ತತಸ್ತನ್ನಿಗ್ರಹಾರ್ಥಾಯ ಹರಿಃ ಪ್ರತ್ಯರ್ಥಿತಃ ಸುರೈಃ ।
ಆಗಮಿಷ್ಯತಿ ಭೂಲೋಕೇ ರಘೂಣಾಮನ್ವಯೇ ಶುಭೇ ॥35॥

ತತಸ್ತಸ್ಯ ಸಹಾಯಾರ್ಥಮಸಹ್ಯಬಲವಿಕ್ರಮಃ ।
ಶೌರ್ಯಧೈರ್ಯಗುಣೋಪೇತೋ ಬಲೀಯಾನ್ ವಿಜಿತೇಂದ್ರಿಯಃ ॥36॥

ನನಗೆ ಇಂತಹ ಗರ್ಭವು ಹೇಗೆ ಒದಗಿತು? ಇದೇನು ನನ್ನ ದುರದೃಷ್ಟವೋ ಅಥವಾ ವಿಧಿಯ ಆಟವೋ? ಯಾವ ದೋಷದಿಂದಾಗಿ ನನಗೆ ಈ ಗತಿಯು ಒದಗಿರುವದು' ಎಂದು ಬಹುವಾಗಿ ಚಿಂತಿಸಿ ದುಃಖವನ್ನು ಲಜ್ಜೆಯನ್ನು ಅನುಭವಿಸಿದಳು. (29–31)

*ಅಶರೀರವಾಣಿ*

ಆಗ ಚಿಂತಿತಳಾದ ಅಂಜನೆಯನ್ನು ಕುರಿತು ಅಶರೀರ ವಾಣಿಯೊಂದು 'ಹೇ ಅಂಜನೆಯೇ! ನೀನು ದುಃಖವನ್ನು ಹೊಂದಬೇಡ. ಮಗಳೇ! ನೀನು ನಿರ್ದುಷ್ಟಳಾಗಿರುವಿ. ನಿನ್ನ ಭವಿಷ್ಯವನ್ನು ಹೇಳುವೆನು. ಕೇಳು. ದುಷ್ಟನಾದ ರಾವಣನೆಂಬ ಹೆಸರಿನಿಂದ ಪ್ರಸಿದ್ಧನಾದ ರಾಕ್ಷಸನು ಮುಂದೆ ಹುಟ್ಟಿ ದೇವಸ್ತ್ರೀಯರನ್ನೆಲ್ಲರನ್ನೂ ತನ್ನ ಸೇವಕರನ್ನಾಗಿಸಿಕೊಳ್ಳುವನು. ಮೂರು ಲೋಕಗಳನ್ನೂ ಸಹ ತನ್ನ ದುಷ್ಟಕರ್ಮಗಳಿಂದ ಹಿಂಸಿಸುವದರಿಂದ ಅವನು 'ರಾವಣ' ಎಂಬ ಹೆಸರನ್ನು ಪಡೆಯುವನು. (32–34) ರಾವಣನ ದೌರ್ಜನ್ಯದಿಂದ ಬಾಧಿತರಾದ ದೇವತೆಗಳಿಂದ ರಾವಣನ ನಿಗ್ರಹಾರ್ಥವಾಗಿ ಸಂಪ್ರಾರ್ಥಿತನಾದ ಹರಿಯು ರಘುವಿನ ಕುಲದಲ್ಲಿ ಅವತರಿಸುವನು. ಹರಿಯ ಸೇವಾರ್ಥವಾಗಿ ಅತ್ಯಂತ ಬಲವಿಕ್ರಮಗಳನ್ನು ಹೊಂದಿದ, ಶೌರ್ಯಧೈರ್ಯಾದಿಗುಣೋಪೇತನಾದ ಬಲವಂತನಾದ, ಸಾಮಾನ್ಯರು ತಿಳಿಯಲಶಕ್ಯವಾದ ಗುಣಗಳಿಂದ ಕೂಡಿದ ಶ್ರೇಷ್ಠನಾದ ಮಗನು ನಿನಗೆ ಜನಿಸುವನು.' ಎಂದು ಅಶರೀರವಾಣಿಯು ನುಡಿಯಿತು. (35–36)

ಅಪ್ರಮೇಯಗುಣೋಪೇತಃ ಪುತ್ರಸ್ತವ ಭವಿಷ್ಯತಿ ।
ಇಮಮಾಕಾಶಗಾಂ ವಾಚಂ ಶ್ರುತ್ವಾ ಸಂಪ್ರೀತಮಾನಸಾ ॥37॥

ಪಿತ್ರೇ ನ್ಯವೇದಯತ್ಸರ್ವಂ ಚರಿತಂ ಚ ನಭಸ್ವತಃ ।
ತಚ್ಛ್ರುತ್ವಾ ಚ ಪಿತಾ ತಸ್ಯಾಃ ಪ್ರಯಯೌ ಪರಮಾಂ ಮುದಮ್ ॥38॥

ಸುತೋತ್ಪತ್ತಿಮಥಾಕಾಂಕ್ಷಂಸ್ತಸ್ಯಾ ನಿಭೃತಮುನ್ಮನಾಃ ।
ಅಪಾಂಡರೀಕೃತಾ ತಸ್ಯಾ ರರಾಜ ತನುವಲ್ಲರೀ ॥39॥

ಕಲಂಕಹೀನಾ ಚಂದ್ರಸ್ಯ ಲೇಖೇವಾಸಿತಪಕ್ಷಕೇ ।
ವಿನೀಲಚೂಚುಕಂ ರೇಜೇ ಕುಚಮಂಡಲಮುನ್ನತಮ್ ॥40॥

ಪದ್ಮಕೋಶಸ್ಯ ಸಂಲೀನಭ್ರಮರಸ್ಯ ಶ್ರಿಯಂ ದಧತ್ ।
ನ ಶಶಾಕ ಭುವಂ ಗಂತುಂ ಗರ್ಭಸ್ಯಾತಿಭರಾತ್ ತತಃ ।
ಇತ್ಥಂ ಪ್ರವವೃಧೇ ತಸ್ಯಾಃ ಗರ್ಭಃ ಪ್ರೀತಿವಿವರ್ಧನಃ ॥41॥

ತತೋ ವೈ ದಶಮೇ ಮಾಸಿ ಸಂಪ್ರಾಪ್ತೇ ನಲಿನೇಕ್ಷಣಾ ।
ಆಸೂತ ಪುತ್ರಂ ಬಲಿನಮುದಯತ್ಯಹಿಮತ್ವಿಷಿ ॥42॥

ಆಕಾಶದಲ್ಲಿಯ ಈ ಮಾತನ್ನು ಕೇಳಿದ ಅಂಜನೆಯು ಅತ್ಯಂತ ಸಂತೋಷವನ್ನು ಹೊಂದಿ ಈ ಎಲ್ಲ ವೃತ್ತಾಂತವನ್ನು ತನ್ನ ತಂದೆಗೆ ತಿಳಿಸಿದಳು. ಅದನ್ನು ಕೇಳಿದ ಕೇಸರಿ ಅಸುರನೂ ಸಹ ಅತ್ಯಂತ ಸಂತೋಷವನ್ನು ಹೊಂದಿದನು. (37–38)

*ಗರ್ಭಿಣೀಚಿಹ್ನಗಳು*

ಉತ್ತಮವಾದ ಮಗನನ್ನು ಪಡೆಯ ಬಯಸಿದ ಅಂಜನೆಯ ಶರೀರವೂ ಸಹ ಆಕೆಯ ಮನಸ್ಸಿನಂತೆಯೇ ವಿಕಾಸವನ್ನು ಹೊಂದಿತು. ಶರೀರದಲ್ಲಿ ಸ್ಥೌಲ್ಯವುಂಟಾಯಿತು. ಲಘುವಾದ ಆಕೆಯ ಶರೀರವು ಅಪಾಂಡುರ ವಾಯಿತು. ಕಲಂಕರಹಿತನಾದ ಕೃಷ್ಣಪಕ್ಷದ ಚಂದ್ರನ ಲೇಖೆಯಂತೆ ಅವಳ ಶರೀರವು ಶೋಭಿಸಿತು. ಉನ್ನತವಾದ ಕುಚಮಂಡಲಗಳ ಮುಂಭಾಗವು ವಿಲೀನವಾಯಿತು. ಭ್ರಮರಗಳಿಗಾಸ್ಪದವಾದ ಕಮಲದ ಮೊಗ್ಗಿನ ಕಾಂತಿಯನ್ನು ಅಂಜನೆಯ ಶರೀರವು ಪಡೆಯಿತು. ಗರ್ಭದ ಭಾರದಿಂದಾಗಿ ಭೂಮಿಯಲ್ಲಿ ಸರಳಾವಾಗಿ ಓಡಾಡುವದು ದುಃಶಕ್ಯವಾಯಿತು. ತಾಯಿಯ ಪ್ರೀತಿಯನ್ನು ಹೆಚ್ಚಿಸುವ ಗರ್ಭವು ಹೀಗೆ ವೃದ್ಧಿಯನ್ನು ಹೊಂದಿತು.(39–41)

*ಅಂಜನೇಯೋತ್ಪತ್ತಿ*

ಅನಂತರ ಹತ್ತನೆಯ ತಿಂಗಳು ಒದಗಿದಾಗ ಕಮಲನೇತ್ರೆಯಾದ ಅಂಜನೆಯು ಶ್ರಾವಣಮಾಸದ

ಶ್ರಾವಣೇ ಮಾಸಿ ನಕ್ಷತ್ರೇ ಶ್ರವಣೇ ಹರಿವಾಸರೇ ।
ಕುಂಡಲೋದ್ಭಾಸಿಗಂಡಾಂತಮುಪವೀತಿನಮುಜ್ಜ್ವಲಮ್ ॥43॥

ಕೌಪೀನೋದ್ಭಾಸಿತಂ ಚೈವ ದೀಪ್ಯಮಾನಮಿವ ಶ್ರಿಯಾ ।
ಬಿಭ್ರಾಣಂ ವಾನರಾಣಾಂ ವೈ ರೂಪಮತ್ಯದ್ಭುತಂ ಮಹತ್ ॥44॥

ರಕ್ತಾಸ್ಯಪುಚ್ಛಮೂಲಂ ತು ಸುವರ್ಣಸದೃಶದ್ಯುತಿಮ್ ।
ಅತೋಽಯಂ ಜಾತಮಾತ್ರೋಽಪಿ ನಿತರಾಂ ತು ಬುಭುಕ್ಷಿತಃ ॥45॥

ಉದಯಾಚಲಸಂರೂಢಂ ದದರ್ಶ ರವಿಮಂಡಲಮ್ ।
ನಿತಾಂತರಕ್ತವರ್ಣೇನ ಫಲಬುದ್ಧಿರಭೂತ್ತದಾ ॥46॥

ಫಲಮಿತ್ಯೇವ ಮನ್ವಾನೋ ರವಿಂ ಭಕ್ಷಿತುಮುದ್ಯತಃ ।
ಗ್ರಹಿಷ್ಯಾಮೀತಿ ನಿಶ್ಚಿತ್ಯ ಶ್ರೀವೇಂಕಟಗಿರೇಸ್ತಟಾತ್ ॥47॥

ಉದತಿಷ್ಠನ್ಮಹಾವೇಗಾದುದಯಾಚಲಶೇಖರಮ್ ।
ಗ್ರಹೀತುಮುದ್ಯತೇ ತಸ್ಮಿನ್ಬಿಂಬಂ ಸೂರ್ಯಸ್ಯ ವೈ ಬಲಾತ್ ॥48॥

ಶ್ರವಣಾನಕ್ಷತ್ರದ ದಿನದಂದು ಹರಿವಾಸರ (ಏಕಾದಶಿ)ದ ದಿನದಂದು ಸೂರ್ಯನು ಉದಯಿಸುತ್ತಿರಲು ಶ್ರೇಷ್ಠವಾದ ಕರ್ಣ-ಕುಂಡಲಗಳಿಂದ ಹೊಳುಯುತ್ತಿರುವ, ಯಜ್ಞೋಪವೀತ (ಜನಿವಾರವನ್ನು) ವನ್ನು ಧರಿಸಿದ್ದ, ಕೌಪೀನವನ್ನು (ಲಂಗೋಟಿಯನ್ನು) ತೊಟ್ಟಿದ್ದ, ಕಾಂತಿಯಿಂದ ಹೊಳೆಯುತ್ತಿರುವ ವಾನರ ರೂಪವನ್ನು ಧಾರಣ ಮಾಡಿದ ಮಹತ್ತತ್ತ್ವಾಭಿಮಾನಿಯಾದ ಚತುರ್ಮುಖ ಬ್ರಹ್ಮದೇವರಿಗೆ ಸಮಾನವಾದ ಪುತ್ರರತ್ನವನ್ನು ಪ್ರಸವಿಸಿದಳು. ಜನಿಸಿದ ಪುತ್ರನ ಮುಖ ಮತ್ತು ಪುಚ್ಛಮೂಲ (ಬಾಲದ ತುದಿ) ಇವುಗಳು ಕೆಂಪಗಿದ್ದವು. ಬಂಗಾರ ವರ್ಣದ ಕಾಂತಿಯನ್ನು ಹೊಂದಿದ್ದ ಆ ವಾನರ ಕುಮಾರನು ಹುಟ್ಟಿನಿಂದಲೆ ಬಹಳಷ್ಟು ಹಸಿವೆಯಿಂದ ಕೂಡಿದ್ದನು. (42-45)

*ಆಕಾಶಕ್ಕೆ ಹಾರಿದ ಆಂಜನೇಯ*

ವಾಯುಕುಮಾರನು ಹುಟ್ಟಿದೊಡನೆಯೆ ಉದಯಗಿರಿಯನ್ನು ಏರಿದ್ದ (ಉದಯಿಸುತ್ತಿದ್ದ) ಸೂರ್ಯನ ಮಂಡಲವನ್ನು ನೋಡಿದನು. ಅತ್ಯಂತ ಕೆಂಪು ಬಣ್ಣದಿಂದ ಕೂಡಿದ್ದ ಸೂರ್ಯನನ್ನು ನೋಡಿ ಇದು ಹಣ್ಣು ಎಂಬ ಬುದ್ಧಿಯು ಹುಟ್ಟಿತು. (46) ಸೂರ್ಯನನ್ನು ಹಣ್ಣೆಂದು ತಿಳಿದು ತಿನ್ನಲುದ್ಯುಕ್ತನಾಗಿ ಅವನನ್ನು ಹಿಡಿಯುವೆನೆಂದು ನಿಶ್ಚಯಿಸಿ ಸೂರ್ಯ ಮಂಡಲವನ್ನು ಹಿಡಿಯುವದಕ್ಕೋಸ್ಕರ ವೇಂಕಟಾಚಲದಿಂದ (48) ಉದಯಪರ್ವತಕ್ಕೆ ಹಾರಿದನು. ಸೂರ್ಯಮಂಡಲವನ್ನು ಹಿಡಿಯ ಹೊರಟ ವಾಯುದೇವರ ಈ ಬಲದಿಂದ ಎಲ್ಲೆಡೆಯೂ ಸಹ

ಹಾಹಾಕೃತಮಭೂತ್ಸರ್ವಂ ಜಗತ್ಸ್ಥಾವರಜಂಗಮಮ್ ।
ತತಶ್ಚತುರ್ಮುಖೋ ಬ್ರಹ್ಮಾ ಸ್ವಯಮಾಗತ್ಯ ವೇಗತಃ ॥49॥

ಬ್ರಾಹ್ಮಮಸ್ತ್ರಂ ಯುಯೋಜಾಸ್ಮೈ ಕುಪಿತಸ್ತಜ್ಜಿಘಾಂಸಯಾ ।
ತದಸ್ತ್ರಮಾಗತಂ ದೃಷ್ಟ್ವಾ ಬಾಲಃ ಕ್ರೀಡನ್ನಿವ ಕ್ಷಣಾತ್ ॥50॥

ನಿರಸ್ಯ ಪುಚ್ಛಪ್ರಾಂತೇನ ಬಭೂವ ವಿಗತಜ್ವರಃ ।
ಪ್ರತ್ಯಾಖ್ಯಾತಂ ತತೋ ದೃಷ್ಟ್ವಾ ತದಸ್ತ್ರಂ ಬ್ರಹ್ಮಣೇರಿತಮ್ ॥51॥

ವಿಸಿಷ್ಮಿಷೇ ಸುರಾಣಾಂ ವೈ ಗಣಃ ಕಿಮಿದಮಿತ್ಯಪಿ ।
ಕಥಮಾಕಾಶಯಾನಂ ವೈ ಕಥಂ ಸೂರ್ಯಾಭಿಧಾವನಮ್ ॥52॥

ಪ್ರತ್ಯಾಖ್ಯಾನಂ ಕಥಂ ಚಾಸೀದಿತ್ಯೂಚುರ್ವಿಸ್ಮಿತಾಸ್ತದಾ ।
ಸಸುರಾಸುರಗನ್ಧರ್ವಂ ಸಯಕ್ಷೋರಗರಕ್ಷಸಮ್ ॥53॥

ಭುವನಂ ವಿಸ್ಮಯಂ ಪ್ರಾಪ ಕರ್ಮ ದೃಷ್ಟ್ವಾಽದ್ಭುತಂ ಕಪೇಃ ।
ಹನುಮಾನಪಿ ತಂ ದೃಷ್ಟ್ವಾ ಸೂರ್ಯಂ ನಿರ್ವಿಣ್ಣಮಾನಸಃ ॥54॥

ಭೂಮೌ ಪಪಾತ ತೇಜಸ್ವೀ ಬ್ರಾಹ್ಮೇಣಾಸ್ತ್ರೇಣ ತಾಡಿತಃ[21] ।

ಹಾಹಾಕಾರವುಂಟಾಯಿತು.

*ಬ್ರಹ್ಮಾಸ್ತ್ರಪ್ರಯೋಗ*

ಅನಂತರ ಚತುರ್ಮುಖ ಬ್ರಹ್ಮದೇವರು ವೇಗವಾಗಿ ಧಾವಿಸಿ ಬಂದು (48) ಕಪಿಯ ಚೇಷ್ಟೆಯಿಂದ ಕುಪಿತರಾಗಿ ಕಪಿಯನ್ನು ಕೊಲ್ಲಲು ಬ್ರಹ್ಮಾಸ್ತ್ರವನ್ನು ಪ್ರಯೋಗಮಾಡಿದರು. ಬ್ರಹ್ಮಾಸ್ತ್ರ ಬರುವದನ್ನು ನೋಡಿದ ಶಿಶುವು ಬಾಲಕನು ಆಟವನ್ನು ಆಡುವಂತೆ ಕ್ಷಣಮಾತ್ರದಲ್ಲಿಯೇ ತನ್ನ ಬಾಲದಿಂದ ದೂರ ತಳ್ಳಿ ಯಾವ ತೊಂದರೆಯನ್ನೂ ಸಹ ಹೊಂದಲಿಲ್ಲ. (48–51)

ಹೀಗೆ ಬ್ರಹ್ಮಾಸ್ತ್ರವೇ ತಿರುಗಿಬಂದದ್ದನ್ನು ಕಂಡ ದೇವತೆಗಳ ಸಮೂಹವು 'ಇದೇನು ಆಶ್ಚರ್ಯವು' ಎಂದು ಆಶ್ಚರ್ಯವನ್ನು ವ್ಯಕ್ತಪಡಿಸಿದರು. 'ಆಕಾಶದಲ್ಲಿ ಹಾರುವದೆಂದರೇನು? ಸೂರ್ಯನನ್ನು ಹಿಡಿಯಲು ಅವನನ್ನು ಹಿಂಬಾಲಿಸುವದೆಂದರೇನು? ಇದು ಆಶ್ಚರ್ಯವು, ಆಶ್ಚರ್ಯವು' ಎಂದು ಅತ್ಯಂತ ಆಶ್ಚರ್ಯಚಕಿತರಾಗಿ ನುಡಿದರು. ಕಪಿಯ ಅದ್ಭುತವಾದ ಈ ಕಾರ್ಯವನ್ನು ನೋಡಿದ

21. ವಾಯುದೇವರು ಬ್ರಹ್ಮದೇವರಿಗೆ ಗೌರವವನ್ನು ತೋರಿಸುವದಕ್ಕಾಗಿ ಅವರು ಬ್ರಹ್ಮಾಸ್ತ್ರದಿಂದ ತೊಂದರೆಗೊಳಗಾಗದಿದ್ದರೂ ಸಹ ತೊಂದರೆ ಹೊಂದಿದವರಂತೆ ನಟಿಸಿದರೆಂದು ತಿಳಿಯಬೇಕು. ಇಲ್ಲದಿದ್ದರೆ ಪೂರ್ವಾಪರ ವಿರೋಧವುಂಟಾಗುವದು.

ಅಥಾಂಜನಾ ಸಮಾಗತ್ಯ ಶೋಕಪರ್ಯಾಕುಲಾ ಸ್ವಯಮ್ ॥55॥
ಅಶ್ರುಪೂರ್ಣಾಕ್ಷಿಪಕ್ಷ್ಮಾಗ್ರಾ ಬಭಾಷೇ ಸುರಸತ್ತಮಾನ್ ।

ಅಂಜನೋವಾಚ –

'ಭವಂತೋ ನಿರ್ಘೃಣಾ ದೇವಾ ಜಾತಮಾತ್ರೇ ಶಿಶೌ ಕಥಮ್ ॥56॥
ಬ್ರಾಹ್ಮಮಸ್ತ್ರಂ ಪ್ರಯುಜ್ಯಾಶು ಕೃತಾರ್ಥಾ ಇವ ಸಂಪ್ರತಿ ।
ಈದೃಶಾ ಭವತಾಂ ಪುತ್ರಾ ನ ಸಂತಿ ಕಿಮು ದೇವತಾಃ ॥57॥
ಪ್ರಾರಬ್ಧಮೀದೃಶಂ ಕರ್ಮ ಕಥಂ ಘೋರತರಂ ಮಹತ್' ।
ವದಂತೀಂ ಪರುಷಂ ವಾಕ್ಯಮಂಜನಾಮಿತ್ಥಮಂಜಸಾ ॥58॥
ಸಾಂತ್ವಯಂತಃ ಸುರಾಃ ಸರ್ವೇ ವೀರ್ಯಜಾತಮುಮಾಪತೇಃ ।
ದೇವಕಾರ್ಯಂ ಚ ಸಂವೀಕ್ಷ್ಯ ವಾಚಮೂಚುರಿಮಾಂ ತದಾ ॥59॥

ದೇವತೆಗಳು, ಅಸುರರು, ಗಂಧರ್ವರು, ಯಕ್ಷರು, ರಾಕ್ಷಸರು, ಸರ್ಪಗಳು ಇವುಗಳಿಂದ ಕೂಡಿದ ಜಗತ್ತೆಲ್ಲವೂ ಅತ್ಯಂತ ಆಶ್ಚರ್ಯವನ್ನು ಹೊಂದಿತು. (52–54)

ತೇಜಸ್ವಿಯಾದ ಹನುಮಂತನು ಸೂರ್ಯನನ್ನು ನೋಡಿ ಅವನನ್ನು ಹಿಂಬಾಲಿಸಿ ಹೋಗುತ್ತಿರುವಾಗ ಬ್ರಹ್ಮನಿಂದ ಬಿಟ್ಟಿದ್ದ ಬ್ರಹ್ಮಾಸ್ತ್ರದ ಹೊಡೆತದಿಂದ ನಿರ್ವಿಣ್ಣನಾದವನಂತೆ ಭೂಮಿಯಲ್ಲಿ ಬಿದ್ದನು.

*ಅಂಜನೆಯ ವಿಲಾಪ*

ಅನಂತರದಲ್ಲಿ ಅಂಜನಾದೇವಿಯು ಹನುಮಂತನು ಬಿದ್ದಿರುವ ಸ್ಥಳಕ್ಕೆ ಬಂದು ಅವನನ್ನು ನೋಡಿ ಅತ್ಯಂತ ಶೋಕವನ್ನು ಹೊಂದಿ ಕಣ್ಣೀರಿನಿಂದ ತೊಯ್ಯಲ್ಪಟ್ಟ ರೆಪ್ಪೆಗಳನ್ನು ಹೊಂದಿದವಳಾಗಿ (ಕಣ್ಣೀರು ಸುರಿಸುತ್ತಾ) ದೇವತೆಗಳನ್ನು ಕುರಿತು ಹೀಗೆ ನುಡಿದಳು. ಅಂಜನೆಯು 'ಹೇ ದೇವತೆಗಳೇ! ನೀವು ಅತ್ಯಂತ ಕಠಿನ ಹೃದಯ ದವರಾಗಿದ್ದೀರಿ. (ದಯೆಯಿಲ್ಲದವರಾಗಿದ್ದೀರಿ) ಅದೇ ತಾನೆ ಹುಟ್ಟಿದ ಶಿಶುವಿನ ಮೇಲೆ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ, ಅವನನ್ನು ಕೆಡುಹಿ, ಈಗ ಕೃತಕೃತ್ಯರಾದವರಂತೆ ಸಂಭ್ರಮಿಸುತ್ತಿರುವಿರಿ. ಹೇ ದೇವತೆಗಳೇ! ನಿಮಗೆ ಇಂತಹ ಮಕ್ಕಳಿಲ್ಲವಲ್ಲವೇ? (ನಿಮಗೆ ಇಂತಹ ಮಕ್ಕಳು ಇರುವದಿಲ್ಲವೇ? ಪ್ರಾರಬ್ಧಕರ್ಮವೇ ಇಷ್ಟು ಘೋರವಾಗಿರುವದು. (ಏನು ಮಾಡಲಾದೀತು)?' ಎಂದು ನುಡಿದಳು. (56–57)

*ದೇವತೆಗಳಿಂದ ಅಂಜನೆಯ ಸಾಂತ್ವನ – ವರಪ್ರದಾನ*

ದೇವಾ ಊಚುಃ-

'ಅಂಜನೇ ಮಾ ವಿಷೀದ ತ್ವಂ ತವ ಪುತ್ರಸ್ಯ ಧೀಮತಃ ।
ದಾಸ್ಯಾಮೋ ದುರ್ಲಭಾನಸ್ಯ ವರಾನ್ವಯಮಮಾನುಷಾನ್ ॥60॥

ಸಸುರಾಸುರಗಂಧರ್ವೈರ್ಯಕ್ಷರಕ್ಷೋಗಣೈಸ್ತಥಾ ।
ಪಿಶಾಚೈರ್ಗುಹ್ಯಕೈಃ ಸೋಽಯಮವಧ್ಯೋ ಭವತು ಧ್ರುವಮ್ ॥61॥

ತಥಾ ಚ ಶಸ್ತ್ರಸಂಘೈಶ್ಚ ಬಾಣೈಶ್ಚ ವಿವಿಧೈರಪಿ ।
ಅವಧ್ಯತ್ವಮವಾಪ್ನೋತಿ ಶಾಸನಾನ್ನಸ್ತವಾತ್ಮಜಃ ॥62॥

ಬಲೇನ ಪ್ರಜ್ಞಯಾ ಚಾಪಿ ಯಾತು ಸರ್ವಾತಿಶಾಯಿತಾಮ್ ।
ಶತ್ರೂಣಾಮಪಿ ದುರ್ಧರ್ಷಃ ಪುತ್ರಸ್ತವ ಭವಿಷ್ಯತಿ' ॥63॥

ಇತಿ ದತ್ವಾ ವರಂ ದೇವಗಣೇಷು ವಿರತೇಷ್ವಥ ।
ಚತುರ್ಮುಖಃ ಸಮಾಹೂಯ ಚಾಂಜನಾಮಿದಮಬ್ರವೀತ್ ॥64॥

ಹೀಗೆ ನಿಷ್ಠುರವಾದ ಮಾತುಗಳನ್ನು ನುಡಿಯುತ್ತಿದ್ದ ಅಂಜನಾದೇವಿಯನ್ನು ದೇವತೆಗಳು ಸಾಂತ್ವನಗೊಳಿಸಿದರು. ಉಮಾಪತಿಯಾದ ರುದ್ರನ ನಿಯಾಮಕನಾದ ಲಕ್ಷ್ಮೀನೃಸಿಂಹನ ಇಚ್ಛಾ-ವೀರ್ಯಜಾತನಾದ ಈ ಶಿಶುವನ್ನು ಮತ್ತು ಮುಂದಾಗತಕ್ಕ ದೇವಕಾರ್ಯವನ್ನು ನೋಡಿ ಅಂಜನೆಯನ್ನು ಸಮಾಧಾನಗೊಳಿಸುತ್ತಾ ಹೀಗೆ ಮಾತುಗಳನ್ನಾಡಿದರು. (58–59) 'ಹೇ ಅಂಜನೆಯೇ! ನಿನ್ನ ಮಗನು ಭೂಮಿಯ ಮೇಲಿರುವನೆಂದು ದುಃಖಿಸಬೇಡ. ಬುದ್ಧಿವಂತನಾದ ನಿನ್ನ ಮಗನಿಗೆ ನಾವು ಅಮಾನುಷವಾದ ಇತರರಿಂದ ಹೊಂದಲು ಅಶಕ್ಯವಾದ ವರಗಳನ್ನು ಅವನಿಗೆ ಕೊಡುವೆವು. ದೇವತೆಗಳು, ದಾನವರು, ಗಂಧರ್ವರು, ಯಕ್ಷರು, ರಾಕ್ಷಸರು, ಪಿಶಾಚಿಗಳು, ಗುಹ್ಯಕರು – ಇವರೇ ಮೊದಲಾದವರ ಸಮೂಹದಿಂದಲೂ ಸಹ ಅವನು ಅವಧ್ಯನಾಗಿರುವನು. ನಮ್ಮ ಆಜ್ಞೆಯಂತೆ ನಿನ್ನ ಮಗನು ಶಸ್ತ್ರಾಸ್ತ್ರಗಳ ಸಮೂಹ, ಬಾಣಗಳು– ಇವುಗಳಿಂದ ಎಂದೆಂದಿಗೂ ತೊಂದರೆಯನ್ನು ಅನುಭವಿಸುವದಿಲ್ಲ. ಬಲ ಹಾಗೂ ಜ್ಞಾನಗಳಲ್ಲಿ ನಿನ್ನ ಮಗನು ಎಲ್ಲರಿಗಿಂತಲೂ ಸಹ ಉತ್ಕೃಷ್ಟ ನಾಗುವನು. ಶತ್ರುಗಳಿಗೂ ಸಹ ನಿನ್ನ ಮಗನು ಭಯಂಕರನಾಗಿ ಇರುವನು ಮತ್ತು ಜಯಿಸಲಸಾಧ್ಯ ವಾಗಿರುವನು.' (60–63)

*ಅಂಜನಾಚಲ*

ಹೀಗೆ ದೇವತೆಗಳು ವರವನ್ನು ಕೊಟ್ಟು ಮೌನವಾಗುತ್ತಿರಲು ಚತುರ್ಮುಖ ಬ್ರಹ್ಮದೇವರು ಅಂಜನಾದೇವಿಯನ್ನು ಕರೆದು ಹೀಗೆ ಹೇಳಿದರು. (64) ಬ್ರಹ್ಮದೇವರು ನುಡಿದರು – 'ಹೇ

ಬ್ರಹ್ಮೋವಾಚ-

'ಅಂಜನೇ ತ್ವಂ ಹಿ ಶೇಷಾದ್ರೌ ತಪಸ್ತಪ್ತ್ವಾ ಸುದಾರುಣಮ್ ।
ಪುತ್ರಂ ಸೂತವತೀ ಯಸ್ಮಾಲ್ಲೋಕತ್ರಯಹಿತಾಯ ವೈ ॥65॥

ಪ್ರಸಿದ್ಧಿಂ ಯಾತು ಶೈಲೋಽಯಮಂಜನೇ ನಾಮತಸ್ತವ ।
ಅಂಜನಾಚಲ ಇತ್ಯೇವ ನಾತ್ರ ಕಾರ್ಯಾ ವಿಚಾರಣಾ' ॥66॥

ಇತಿ ತಸ್ಯೈ ವರಂ ದತ್ವಾ ದೇವ್ವಾ ಬ್ರಹ್ಮಪುರೋಗಮಾಃ ।
ಸ್ವಂ ಸ್ವಂ ಸ್ಥಾನಂ ಸಮುದ್ದಿಶ್ಯ ಯಥಾಗತಮಥೋ ಯಯುಃ ॥67॥

ಅಂಜನಾ ಪುತ್ರಮಾದಾಯ ಶ್ರೀವೇಂಕಟಗಿರೇಸ್ತಟಮ್ ।
ಪುನರಾಗಮ್ಯ ಸಾಮೋದಮಲಂಚಕ್ರೇ ನಿಜಾಶ್ರಮಮ್ ॥68॥

ಇತಿ ಶ್ರೀಬ್ರಹ್ಮಾಂಡಪುರಾಣೇ ಭೃಗುನಾರದಸಂವಾದೇ ತೀರ್ಥಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ
**ಅಂಜನಾಚಲಭಿಧಾನಹೇತುವರ್ಣನಂ** ನಾಮ ಪಂಚಮೋಽಧ್ಯಾಯಃ ॥

* * *

ಅಂಜನೆಯೇ ! ನೀನು ಶೇಷಾಚಲದಲ್ಲಿ ತಪಸ್ಸನ್ನಾಚರಿಸಿ ಲೋಕತ್ರಯದ ಹಿತದ ಗೋಸ್ಕರವಾಗಿ ಪುತ್ರನನ್ನು ಪಡೆದಿರುವೆಯಾದ್ದರಿಂದ ಈ ಪರ್ವತವು ನಿನ್ನ ಹೆಸರಿನಿಂದಲೇ ಪ್ರಸಿದ್ಧಿಯನ್ನು ಪಡೆಯಲಿ. ಇನ್ನು ಮುಂದೆ ಈ ಪರ್ವತವು ಅಂಜನಾಚಲವೆಂದೇ ಖ್ಯಾತಿಯನ್ನು ಹೊಂದುವದು. ಇದರಲ್ಲಿ ಯಾವದೇ ಸಂಶಯವೂ ಸಹ ಬೇಡ.' ಎಂದು ವರವನ್ನು ನೀಡಿದರು. ಅನಂತರ ಬ್ರಹ್ಮದೇವರೇ ಮೊದಲಾದ ದೇವತೆಗಳು ತಮ್ಮ ತಮ್ಮ ಲೋಕಗಳಿಗೆ ತೆರಳಿದರು. (65-67)

ಅಂಜನಾದೇವಿಯು ತನ್ನ ಪುತ್ರನೊಂದಿಗೆ ವೇಂಕಟಗಿರಿಗೆ ಮರಳಿ ಬಂದು ಅತ್ಯಂತ ಸಂತೋಷದಿಂದ ತನ್ನ ಆಶ್ರಮವನ್ನಲಂಕರಿಸಿದಳು (ಆಶ್ರಮದಲ್ಲಿ ವಾಸವಾಗಿದ್ದಳು ) (68)

ಇಲ್ಲಿಗೆ ಬ್ರಹ್ಮಾಂಡಪುರಾಣದ ಭೃಗುನಾರದಸಂವಾದದಲ್ಲಿಯ ತೀರ್ಥಖಂಡದ ವೇಂಕಟೇಶ
ಮಾಹಾತ್ಮೆಯಲ್ಲಿ **ಅಂಜನಾಚಲಾಭಿಧಾನಹೇತುವರ್ಣನವೆಂಬ** ಐದನೆಯ ಅಧ್ಯಾಯವು
ಸಮಾಪ್ತವಾಯಿತು.

* * *

ಬ್ರಹ್ಮಾಂಡಪುರಾಣಾಂತರ್ಗತ ವೇಂಕಟೇಶಮಾಹಾತ್ಮ್ಯೇ

## ಅಥ ಷಷ್ಠೋಽಧ್ಯಾಯಃ

ಭೃಗುರುವಾಚ–

ಅಯಂ ಶಿಲೋಚ್ಚಯಃ ಕೇನ ವೇಂಕಟಾಚಲ ಇತ್ಯಪಿ ।
ಮುನೀಂದ್ರ ಭುವಿ ವಿಖ್ಯಾತಸ್ತದ್ವದಸ್ವ ಸಹೇತುಕಮ್ ॥1॥

ಶ್ರೀನಾರದ ಉವಾಚ–

ಅತ್ರಾಪಿ ಕಾರಣಂ ವಕ್ಷ್ಯೇ ಶೈಲೋಽಯಂ ಯೇನ ಹೇತುನಾ ।
ಶ್ರೀವೇಂಕಟಾದ್ರಿರಿತಿ ಖ್ಯಾತಃ ಶೃಣುಷ್ವೈಕಮನಾ ಮುನೇ ॥2॥

ಶ್ರೀಗಿರೇಃ ಪಶ್ಚಿಮೇ ಭಾಗೇ ಪುರಂ ನಂದನಸಂಜ್ಞಕಮ್ ।
ಹಸ್ತ್ಯಶ್ವರಥಸಂಬಾಧಂ ಬಭೂವ ಭುವಿ ವಿಶ್ರುತಮ್ ॥3॥

ಪುರಂದರಾಭಿಧಃ ಕಶ್ಚಿತ್ಸೋಮಯಾಜೀ ದ್ವಿಜೋತ್ತಮಃ ।
ಉವಾಸ ತಸ್ಮಿನ್ನಗರೇ ಯಾಜಕೋ ವೇದಪಾರಗಃ ॥4॥

## ಆರನೆಯ ಅಧ್ಯಾಯವು

*ವೇಂಕಟಾಚಲಾಭಿಧಾನೋಪೋದ್ಘಾತ*

ಭೃಗುಮಹರ್ಷಿಗಳು ನಾರದರನ್ನು ಕುರಿತು – 'ಮುನಿಶ್ರೇಷ್ಠರೇ! ಈ ಪರ್ವತವು ಭೂಮಿಯಲ್ಲಿ ವೇಂಕಟಾಚಲವೆಂದು ಪ್ರಸಿದ್ಧವಾಗಿರುವದು. ಅದಕ್ಕೆ ಏನು ಕಾರಣವೆಂಬುದನ್ನು ವಿಸ್ತಾರವಾಗಿ ತಿಳಿಸಿರಿ' ಎಂದು ನುಡುದನು. (1) ಆಗ ನಾರದರು – ವೃಷಭಾಚಲಕ್ಕೆ ವೇಂಕಟಾಚಲವೆಂಬ ಹೆಸರು ಬರಲು ಏನು ಕಾರಣವಿರುವದೋ ಅದನ್ನು ನಾನು ನಿಮಗೆ ವಿಸ್ತಾರವಾಗಿ ತಿಳಿಸುವೆನು. ಸಾವಧಾನವಾಗಿ ಕೇಳಿರಿ (2)

*ಮಾಧವನ ವೃತ್ತಾಂತ*

ಶ್ರೀಗಿರಿಯೆಂದು ಪ್ರಸಿದ್ಧವಾದ ವೇಂಕಟಾಚಲದಿಂದ ಪಶ್ಚಿಮ ದಿಕ್ಕಿನಲ್ಲಿ ಕುದುರೆ, ಆನೆ, ರಥ ಮೊದಲಾದ ಸಂಪತ್ತಿನಿಂದ ಕೂಡಿದ್ದ ನಂದನವೆಂಬ ನಗರವು ಭೂಮಿಯಲ್ಲಿ ಪ್ರಸಿದ್ಧವಾಗಿತ್ತು. (3) ಪುರಂದರನೆಂಬ ಸೋಮಯಾಜಿಯಾದ ವೇದವೇದಾಂತ ಪಾರಂಗತನಾದ ಯಾಜ್ಞಿಕ

ತಸ್ಯ ಜಜ್ಞೇऽತಿಮತಿಮಾನ್ ಪುತ್ರೋ ಮಾಧವಸಂಜ್ಞಕಃ ।
ಕಾಲಕ್ರಮೇಣ ವವೃಧೇ ವೇದಾಧ್ಯಯನತತ್ಪರಃ ॥5॥

ಯೋ ಗುಣೈಃ ಪಿತರಂ ಸರ್ವೈರತ್ಯಕ್ರಾಮದಿವಾಂಜಸಾ ।
ಕ್ರಮೇಣ ಮಾಂಸಲೌ ಬಾಹೂ ಬಭಾರ ದ್ವಿಜಪುತ್ರಕಃ ॥6॥

ಯೌವನೇ ಸಮನುಪ್ರಾಪ್ತೇ ವಕ್ಷಸ್ಯತಿವಿಶಾಲತಾಮ್ ।
ತಸ್ಯಾಸೀಚ್ಚಂದ್ರಲೇಖಾಖ್ಯಾ ಪತ್ನೀ ಕಮಲಲೋಚನಾ ॥7॥

ಸರ್ವಲಕ್ಷಣಸಂಪನ್ನಾ ದಿವ್ಯನಾರೀವ ಭಾಮಿನೀ ।
ಸ ತಸ್ಯಾಮನುರಕ್ತೋऽಭೂದ್ಭೃಶಂ ದ್ವಿಜಕುಮಾರಕಃ ॥8॥

ತನ್ವ್ಯಾ ಹೃತೋ ಯೌವನೇನ ರೂಪೇಣಾಪ್ರತಿಮೇನ ಚ ।
ವಿಹರನ್ ಮುದಿತೋ ನಿತ್ಯಮಾಸ್ತೇ ಸ್ಮ ಸಹ ಭಾರ್ಯಯಾ ॥9॥

ವಿಹಾರಯೋಗ್ಯೇ ದೇಶೇ ಚ ವನೋದ್ದೇಶೇ ಮನೋಹರೇ ।
ಅಥಾಸ್ಮಿನ್ನಂತರೇ ಕಾಲೇ ವಸಂತಃ ಪ್ರಾದುರಾಸ ಹ ॥10॥

ಬ್ರಾಹ್ಮಣನು ಆ ನಗರದಲ್ಲಿ ವಾಸವಾಗಿದ್ದನು. (4)

ಅವನಿಗೆ ಅತ್ಯಂತ ಬುದ್ಧಿವಂತನಾದ ಮಾಧವನೆಂಬ ಹೆಸರಿನ ಮಗನು ಜನಿಸಿದನು. ಮಾಧವನು ಕಾಲಕ್ರಮದಲ್ಲಿ ವೇದಾಧ್ಯಯನ ತತ್ಪರನಾಗಿ ಬೆಳೆದನು. ತಂದೆಯ ಉತ್ತಮ ಗುಣಗಳೇ ಅವನನ್ನು ವ್ಯಾಪಿಸಿದ್ದವು. (5) ಕ್ರಮವಾಗಿ ಯೌವನವನ್ನು ಹೊಂದಿದ ಮಾಧವನು ಬಾಹುಗಳು ಮಾಂಸಲ ವಾದವು. ವಕ್ಷಃಸ್ಥಲವು ವಿಶಾಲವಾಯಿತು. ಹೀಗೆ ಯೌವನಾಢ್ಯನಾದ ಮಾಧವನಿಗೆ ಕಮಲದಂತೆ ವಿಶಾಲ ನೇತ್ರಗಳನ್ನು ಹೊಂದಿದ್ದ, ಸರ್ವಲಕ್ಷಣ ಸಂಪನ್ನಳಾದ, ದೇವಸ್ತ್ರೀಯಂತೆ ಸುಂದರಳಾದ ಚಂದ್ರಲೇಖೆಯೆಂಬುವವಳು ಪತ್ನಿಯಾದಳು. (6–7) ಮಾಧವನು ತನಗೆ ಅನುರೂಪಳಾದ ಚಂದ್ರಲೇಖೆಯಲ್ಲಿ ಅತ್ಯಂತ ಆಸಕ್ತನಾಗಿದ್ದನು. ಸುಂದರ ಶರೀರದ ಕಾಂತಿಯಿಂದ, ಅಪ್ರತಿಮವಾದ ರೂಪದಿಂದ ಮತ್ತು ಯೌವನದಿಂದ ಯುಕ್ತಳಾದ ಚಂದ್ರಲೇಖೆಯೊಂದಿಗೆ ಕ್ರೀಡಾಯೋಗ್ಯವಾದ ಸ್ಥಳಗಳಲ್ಲಿ, ಸುಂದರವಾದ ವನಪ್ರದೇಶಗಳಲ್ಲಿ ವಿಹರಿಸುತ್ತಾ ನಿತ್ಯದಲ್ಲಿಯೂ ಅತ್ಯಂತ ಸಂತೋಷವನ್ನು ಹೊಂದುತ್ತಿದ್ದನು.(9)

*ವಸಂತಾಗಮನ– ಚಂಡಾಲಕನ್ಯಾದರ್ಶನ*

ಕೆಲ ಕಾಲಾನಂತರದಲ್ಲಿ ಬ್ರಾಹ್ಮಣ ಕುಮಾರನಾದ ಮಾಧವನಿಗೆ ಕ್ರೀಡಾವಿಶೇಷಗಳನ್ನು ತಿಳಿಸಿಕೊಡಲೋ ಎಂಬಂತೆ ಸುಂದರವಾದ ವನಪ್ರದೇಶದಲ್ಲಿ ವಸಂತನು ಪ್ರಾದುರ್ಭವಿಸಿದನು

ಉಪದೇಷ್ಟುಮಿವ ಕ್ರೀಡಾವಿಶೇಷಾಂಸ್ತು ದ್ವಿಜನ್ಮನಃ ।
ಪುಂಸ್ಕೋಕಿಲಾಶ್ಚುಕೂಜುರ್ವೈ ಚೂತವೃಕ್ಷಸಮಾಶ್ರಿತಾಃ ॥11॥

ವಿಯೋಗಿಮಾನಸೇಷ್ವಂತರ್ಜನಯಂತಃ ಪರಾಂ ರುಜಮ್ ।
ಅಶೋಕಕುಸುಮಂ ಲೋಕಾನ್ ಮದನಸ್ಯ ದಿಧಕ್ಷತಃ ॥12॥

ಪ್ರತಪ್ತಮಿವ ನಾರಾಚಂ ವ್ಯರೋಚತ ಮನೋಹರಮ್ ।
ಪ್ರಸೂನಾಪಚಯಂ ಕರ್ತುಂ ನಿರ್ಗತಶ್ಚಂದ್ರಲೇಖಯಾ ॥13॥

ವಿಲಾಸವಿಪಿನೋದ್ದೇಶೇ ಸರ್ವಪುಷ್ಪಮನೋರಮೇ ।
ಆರಾಮೇ ವಿಹರಂಸ್ತಸ್ಮಿನ್ ತತ್ರ ತತ್ರ ಸ ಭಾರ್ಯಯಾ ॥14॥

ಸರಸೀಂ ಸತ್ತ್ವಸಂಪನ್ನಾಂ ದದರ್ಶ ವಿಮಲೋದಕಾಮ್ ।
ಪದ್ಮಖಂಡೈಶ್ಚ ಸಂಪೂರ್ಣಾಮಿಂದೀವರವನಾಕುಲಾಮ್ ॥15॥

ಸುಗಂಧಿಭಿಃ ಪ್ರಸೂನೈಶ್ಚ ಪೂರಿತಂ ತಟಭೂರುಹಾಮ್ ।
ತಸ್ಯಾ ಚ ಸಂಚರಂಸ್ತೀರೇ ಸ್ನಿಗ್ಧಚ್ಛಾಯಾಸಮಾವೃತೇ ॥16॥

(ವಸಂತ ಋತುವು ಬಂದಿತು). ಗಂಡುಕೋಗಿಲೆಗಳು ಮಾವಿನ ಮರಗಳ ಮೇಲೆ ಕುಳಿತು ಮನೋಹರವಾಗಿ ಕೂಗುತ್ತಿದ್ದವು.(10–12) ವಿಯೋಗಿಗಳ ಮನಸ್ಸಿನಲ್ಲಿ ವಿರಹ ಜ್ವರವನ್ನು ಹುಟ್ಟಿಸುವಂತೆ, ಸುಡುತ್ತಿರುವ ಮದನನ ಬಾಣದಂತೆ ಅಶೋಕ ಮರವು ಸುಂದರವಾದ ಹೂವುಗಳನ್ನು ಬಿಟ್ಟಿತು. ಇಂತಹ ರಮಣೀಯವಾದ ವನಪ್ರದೇಶದಲ್ಲಿ ಮಾಧವನು ಚಂದ್ರಲೇಖೆಯೊಡನೆ ಹೂವುಗಳನ್ನು ತರುವದಕ್ಕಾಗಿ ಬಂದನು. (13)

ಅರಳಿದ ಹೂವುಗಳಿಂದ ಕೂಡಿದ, ವಿಲಾಸಾರ್ಥವಾಗಿಯೇ (ವಿಹಾರಾರ್ಥವಾಗಿಯೇ) ಸಿದ್ಧಪಡಿಸಿದಂತಿದ್ದ ಕಾಡಿನ ಭೂಭಾಗವು ಅತ್ಯಂತ ಮನೋಹರ ವಾಗಿತ್ತು. ಆ ವನಪ್ರದೇಶದಲ್ಲಿ ಚಂದ್ರಲೇಖೆಯೊಂದಿಗೆ ವಿಹರಿಸುತ್ತಿದ್ದ ಮಾಧವನು ನಾನಾ ಜಲಚರ ಪ್ರಾಣಿಗಳಿಂದ ಕೂಡಿದ್ದ, ತಿಳಿನೀರಿನಿಂದ ಉಪೇತವಾದ, ಕಮಲಗಳ ಸಮೂಹದಿಂದ ಅಲಂಕೃತ ವಾದ, ಇಂದೀವರ (ನೈದಿಲೆ)ಗಳಿಂದ ದಟ್ಟೈಸಿದ್ದ, ಸುಂದರವಾದ ಸರೋವರವನ್ನು ನೋಡಿದನು. ಮರಗಿಡಗಳ ದಟ್ಟವಾದ ನೆರಳಿನಿಂದ ಕೂಡಿದ, ಸುವಾಸನೆಯನ್ನು ಬೀರುವ ಪುಷ್ಪಗಳಿಂದ ಅಲಂಕೃತವಾಗಿದ್ದ ಸರೋವರದ ದಂಡೆಯ ಮೇಲೆ ಮಡದಿಯೊಂದಿಗೆ ಸಂಚರಿಸುತ್ತಿದ್ದ ಮಾಧವನು ಸುಂದರವಾದ ಚಂಡಾಲ ಕನ್ಯೆಯನ್ನು ನೋಡಿದನು.

*ಚಂಡಾಲಕನ್ಯೆಯ ವರ್ಣನೆ*

ಚಂಡಾಲಕನ್ಯಕಾಂ ತನ್ವೀಂ ದದರ್ಶ ಸುಮನೋಹರಾಮ್ ।
ಇಂದೀವರದಲಶ್ಯಾಮಾಂ ಪ್ರಫುಲ್ಲಕಮಲೇಕ್ಷಣಾಮ್ ॥17॥

ಪೀನೋನ್ನತಕುಚಾಂ ತನ್ವೀಂ ಪೂರ್ಣಚಂದ್ರನಿಭಾನನಾಮ್ ।
ಮೂರ್ತಾಮಿವಾಜ್ಞಾಂ ಮಾರಸ್ಯ ಸುಸ್ನಿಗ್ಧಕುಟಿಲಾಲಕಾಮ್ ॥18॥

ತನುಮಧ್ಯಾಂ ವರಾರೋಹಾಂ ಮಾಲಿನೀಂ ನಾಮ ನಾಮತಃ ।
ತಾಂ ದೃಷ್ಟ್ವಾ ವಿಸ್ಮಯಾವಿಷ್ಟಶ್ಚಿಂತಯಾಮಾಸ ವೈ ದ್ವಿಜಃ ॥19॥

ಜಾತೇರನನುರೂಪಾಂ ತಾಂ ಮತ್ವಾ ದ್ವಿಜಕುಮಾರಕಃ ।
ಅತ್ಯದ್ಭುತಮಿದಂ ರೂಪಂ ವಿಧಿನಾ ಕೇನ ನಿರ್ಮಿತಮ್ ॥20॥

ಮನ್ಯೇ ದ್ರಷ್ಟುಮಶಕ್ಯಂ ವೈ ವಿಧೇರ್ವಾ ರೂಪಮೀದೃಶಮ್ ।
ಅಂಧಃ ಖಲು ಜಗತ್ಸ್ರಷ್ಟಾ ವಿಧಾತಾ ರೂಪಮೀದೃಶಮ್ ॥21॥

ಯತಶ್ಚಕಾರ ವೈ ವ್ಯರ್ಥಮಭೋಗ್ಯಮಪಿ ಮಾದೃಶಮ್ ।
ಅಥವಾ ಕಿಮು ರತ್ನಸ್ಯ ವ್ಯರ್ಥಯಾ ಜಾತಿಚಿಂತಯಾ ॥22॥

ಆ ಚಂಡಾಲ ಕನ್ಯೆಯು ಅತ್ಯಂತ ಸುಂದರಳಾಗಿದ್ದಳು. ಪ್ರಫುಲ್ಲವಾದ ಕಮಲದಂತೆ ಅರಳಿದ ಕಣ್ಣುಗಳನ್ನು ಹೊಂದಿದ್ದಳು. (14–17) ಕನ್ನೈದಿಲೆಯಂತೆ ಶ್ಯಾಮ (ಕೃಷ್ಣವರ್ಣ)ದಿಂದ ಕೂಡಿದ್ದಳು. ಚಂದ್ರನಿಗೆ ಸಮಾನವಾದ ಕಾಂತಿಯಿಂದ ಕಂಗೊಳಿಸುವ ಮುಖ, ಉನ್ನತವಾದ ಮತ್ತು ಪುಷ್ಟವಾದ ಸ್ತನದ್ವಯಗಳು, ಕೃಶವಾದ ಉದರ, ಸುಂದರವಾದ ಭುಜಗಳು, ಚಂಚಲವಾದ, ದಟ್ಟವಾದ, ಕಪ್ಪು ಬಣ್ಣದ ಗುಂಗುರು ಕೂದಲುಗಳು ಇವುಗಳಿಂದ ಶೋಭಿತಳಾಗಿದ್ದ ಮಾಲಿನೀ ಎಂಬ ಆ ಚಂಡಾಲಕನ್ಯೆಯು ಜಗತ್ತನ್ನು ಮೋಹಗೊಳಿಸುವ ಕಾಮನ ಆಜ್ಞೆಯೇ ಮೂರ್ತಿಯಾಗಿ ಬಂದು ಸ್ತ್ರೀರೂಪದಿಂದಿರುವದೇನು ಎನ್ನುವಂತಿದ್ದಳು.

*ಮಾಧವನ ಮೋಹ–ವಿಚಾರ*

ಇಂತಹ ಅತ್ಯಂತ ಸುಂದರಳಾದ ಚಂಡಾಲ ಕನ್ಯೆಯನ್ನು ವನಪ್ರದೇಶದಲ್ಲಿ ಮಾಧವನು ನೋಡಿದನು. ಅವಳನ್ನು ನೋಡಿದ ಮಾತ್ರದಿಂದಲೇ ಆಶ್ಚರ್ಯವನ್ನು ಹೊಂದಿ, ಚಂಡಾಲ ಜಾತಿಗೆ ಅನನುರೂಪಳಾದ ಆ ಸ್ತ್ರೀಯನ್ನು ನೋಡಿ ಮಾಧವನು ಹೀಗೆ ಚಿಂತಿಸಿದನು. (18–20) ಅತ್ಯದ್ಭುತರೂಪಲಾವಣ್ಯಗಳಿಂದ ಕೂಡಿದ ಈ ಕನ್ಯೆಯನ್ನು ವಿಧಿಯು ಹೇಗೆ ನಿರ್ಮಾಣಮಾಡಿರುವನೋ? (ಯಾವದರಿಂದ ನಿರ್ಮಿಸಿರುವನು? ವಿಧಿಯಿಂದ ಸೃಷ್ಟವಾದ ಇಂತಹ ರೂಪರಾಶಿಯನ್ನು ನೋಡುವದು ಅತ್ಯಂತ ದುರ್ಲಭವೇ ಆಗಿರುವದು. ಸೃಷ್ಟಿಕರ್ತೃವಾದ

ಕೇನೇದಮದ್ಭುತಂ ರೂಪಂ ಲಭ್ಯತೇ ಸುಕೃತಂ ವಿನಾ ।
ಅಥೈನಾಮುಪಸರ್ಪಾಮಿ ಸೋऽಹಂ ಸ್ಪೃಶ್ಯೇತರಾಮಪಿ ॥23॥

ಚಂಡಾಲವಾಟಿಕಾದೃಷ್ಟಂ ಕಿಂ ರತ್ನಂ ದೂಷ್ಯತೇऽಥ ವಾ ।
ಇತಿ ಸಂಚಿಂತ್ಯ ವೈ ತಸ್ಯಾಃ ಸಮೀಪಮುಪಜಗ್ಮಿವಾನ್ ॥24॥

ಅನುರಾಗವತೀ ಚಾಸ್ಮಿನ್ವಿಪ್ರೇ ಚಾಂಡಾಲಕನ್ಯಕಾ ।
ತಯೋರ್ವಿದ್ಧಮಭೂಚ್ಚೇತಃ ಶಿತೈರ್ಮದನಸಾಯಕೈಃ ॥25॥

ಪ್ರಾಪಯಿತ್ವಾ ಗೃಹಂ ಭಾರ್ಯಾಂ ಚಂದ್ರರೇಖಾಂ ದ್ವಿಜೋತ್ತಮಃ ।
ಶನೈಃ ಶನೈಃ ಸಮೀಪಂ ವೈ ತಸ್ಯಾಃ ಸ್ವಯಮುಪಾಗಮತ್ ॥26॥

ಅಥೈನಾಂ ವರಯಾಮಾಸ ಹೃಷ್ಟೋ ದ್ವಿಜಕುಮಾರಕಃ ।
ಅವಿಚಾರ್ಯ ಮಹತ್ಪಾಪಂ ತತ್ಸಂಗಮಸಮುದ್ಭವಮ್ ॥27॥

'ಮಾ ಭೈಷೀಸ್ತ್ವಂ ವರಾರೋಹೇ ದ್ವಿಜೋऽಯಮಿತಿ ಭಾಮಿನಿ ।
ಸ್ತ್ರೀರತ್ನಂ ದುಷ್ಕುಲಾಚ್ಚಾಪಿ ಗ್ರಾಹ್ಯಮಿತ್ಯನುಶಾಸನಮ್ ॥28॥

ಬ್ರಹ್ಮನು ಚಂಡಾಲ ಜಾತಿಯಲ್ಲಿ ಇಂತಹ ರೂಪವತಿಯನ್ನು ಸೃಷ್ಟಿಸಿರುವದರಿಂದ ಅವನು ಅಂಧನೇ ಆಗಿರುವನು. ಏಕೆಂದರೆ ಉತ್ತಮವಾದ ವಸ್ತುವನ್ನು ವನಪ್ರದೇಶದಲ್ಲಿ ಚಂಡಾಲ ಕುಲದಲ್ಲಿ ಸೃಷ್ಟಿಸಿ ಅವಳ ಭೋಗವು ತನಗೂ ಮತ್ತು ಇತರರಿಗೂ ದೊರೆಯದಂತೆ ಮಾಡಿರುವನು. (21–22) ಅಥವಾ ಕನ್ಯಾರತ್ನವಾದ ಇವಳ ಜಾತಿಯನ್ನು ವಿಚಾರ ಮಾಡುವದರಿಂದ ಯಾವ ಪ್ರಯೋಜನವೂ ಇಲ್ಲ. ರತ್ನಗಳಿಗೆ ಅವುಗಳ ತಂದೆ, ತಾಯಿ, ಜಾತಿ, ಕುಲ ಇವುಗಳ ಚಿಂತನೆಯನ್ನು ಮಾಡುವದಿಲ್ಲವಷ್ಟೆ. (22) ಅದ್ಭುತ ರೂಪವತಿಯಾದ ಇಂತಹ ಸ್ತ್ರೀಯನ್ನು ಪುಣ್ಯವಂತನಲ್ಲದಿದ್ದಲ್ಲಿ ಹೇಗೆ ತಾನೆ ಹೊಂದಲು ಸಾಧ್ಯ. ಆದ್ದರಿಂದ ಸುಂದರಿಯಾದ ಕನ್ಯಾರತ್ನವಾದ ಇವಳ ಬಳಿ ನಾನು ತೆರಳುವೆನು. (24) ಇವಳನ್ನು ನಾನು ಇತರರಿಂದ ಅಸ್ಪೃಶ್ಯಳಾಗಿದ್ದರೂ ಪರಸ್ತ್ರೀಯಾದರೂ ಸಹ ಮುಟ್ಟುವೆನು. ಚಂಡಾಲರ ಸಹವಾಸದಲ್ಲಿರುವದರ ಮಾತ್ರದಿಂದ ಈಕೆಯು ಅಸ್ಪೃಶ್ಯಳೆನಿಸಳು. ಲವಣ ಸಮುದ್ರದಲ್ಲಿ ಜನಿಸಿವೆಯೆಂಬ ಕಾರಣದಿಂದ ಯಾರಾದರೂ ರತ್ನವನ್ನು ಅಸ್ಪೃಶ್ಯವೆಂದು ದೂಷಿಸುತ್ತಾರೆಯೇ? ಈ ಸ್ತ್ರೀಯೂ ಸಹ ರತ್ನದಂತೆ ಉತ್ತಮಳಾಗಿರುವದರಿಂದ ಅವಳನ್ನು ನಾನು ಗ್ರಹಿಸುತ್ತೇನೆ' ಎಂದು ವಿಚಾರಮಾಡಿ ಅವಳ ಸಮೀಪಕ್ಕೆ ಹೋದನು. (24)

ಆ ಚಂಡಾಲಕನ್ಯೆಯೂ ಸಹ ಸುಂದರಾಂಗನಾದ ಮಾಧವನಲ್ಲಿ ಅನುರಾಗವನ್ನು ಹೊಂದಿದಳು. ಅವರಿಬ್ಬರ ಮನಸ್ಸು ಕಾಮನ ತೀಕ್ಷ್ಣವಾದ ಬಾಣಗಳಿಂದ ಆಕ್ರಮಿತವಾಯಿತು.(25) ತನ್ನ ಹೆಂಡತಿಯಾದ ಚಂದ್ರರೇಖೇಯನ್ನು ಮನೆಗೆ ಕಳುಹಿಸಿ ಮೆಲ್ಲಗೆ ಆ ಮಾಲಿನಿಯ ಬಳಿ ತಾನೇ

ಅತೋಽಹಂ ಭವತೀಂ ಯಾಚೇ ವಾಚಾ ಮಧುರಪೂರಯಾ ।
ಮಮ ಚಾನುಮತಿಂ ದಾತುಂ ತ್ವಯಾ ರಂತುಮಿಹಾರ್ಹಸಿ ॥29॥

ಇತ್ಯುಕ್ತ್ವಾ ಪಾಣಿಮಸ್ಯಾ ವೈ ಸ್ವಿನ್ನಂ ಜಗ್ರಾಹ ಪಾಣಿನಾ ।
ಸಂಗತಃ ಸೋಽಥ ಮಾಲಿನ್ಯಾ ತಯಾ ದ್ವಿಜಕುಮಾರಕಃ ॥30॥

ತದೀಯಮೇವ ಮಾಂಸಾದಿಮಾಹಾರಂ ರೋಚಯನ್ ಸದಾ ।
ಸುರಾಮಪಿ ಪಿಬನ್ನಿತ್ಯಂ ಚಿಕ್ರೀಡ ಚಿರಮುನ್ಮನಾಃ ॥31॥

ಚಿರಕಾಲೇ ವ್ಯತೀತೇ ತು ದರಿದ್ರಶ್ಚಾಭವದ್ದ್ವಿಜಃ ।
ವಿಧಾಯ ಚೌರ್ಯಹತ್ಯಾದಿಪಾಪಾನಿ ಧನಮಾರ್ಜಯನ್ ॥32॥

ತಚ್ಚ ತಸ್ಯೈ ದದದ್ವಿತ್ತಂ ಕಂಚಿತ್ಕಾಲಂ ನಿನಾಯ ಸಃ ।
ತತಸ್ತತ್ರಾಪ್ಯಶಕ್ತೋಽಯಂ ತದೀಯೈಶ್ಚ ನಿರಾಕೃತಃ ॥33॥

ಚಚಾರ ಭುವನೇ ಭ್ರಾಂತೋ ನ ವಾಸಂ ಪ್ರಾಪ್ಯ ಕುತ್ರಚಿತ್ ।

ಬಂದನು. ಚಂಡಾಲ ಸ್ತ್ರೀಯ ಸಂಗದಿಂದ ಉಂಟಾಗುವ ಮಹತ್ಪಾಪವನ್ನು ಸ್ತ್ರೀಸಮ್ಮೋಹಿತನಾದ ಮಾಧವನು ಗಣನೆಗೆ ತೆಗೆದುಕೊಳ್ಳದೇ ಆ ಸ್ತ್ರೀಯ ಸಂಬಂಧವನ್ನು ಬಯಸಿದನು.(26) ಅವಳ ಬಳಿ ಬಂದು ಮಾಧವನು 'ಹೇ ಸುಂದರಿಯೇ! ನಾನು ಬ್ರಾಹ್ಮಣನೆಂದು ನೀನು ಹೆದರದಿರು. ನಾನು ನಿನ್ನನ್ನು ಗ್ರಹಿಸಿರುವೆನು. 'ದುಷ್ಟಕುಲದಲ್ಲಿದ್ದರೂ ಸಹ ಸ್ತ್ರೀರತ್ನವು ಗ್ರಾಹ್ಯವು' ಎಂಬುದಾಗಿ ನಿಯಮವಿರುವದು.(28) ಆದ್ದರಿಂದ ನಿನ್ನಲ್ಲಿ ಅನುರಕ್ತನಾದ ನಾನು ವಿನಯಪೂರ್ವಕವಾದ ಮಧುರವಾದ ಶಬ್ದಗಳಲ್ಲಿ ನಿನ್ನನ್ನು ಬೇಡಿಕೊಳ್ಳುವೆನು 'ನಿನ್ನೊಡನೆ ಕ್ರೀಡಿಸುವ ಅವಕಾಶವನ್ನು ಕೊಡು' ಎಂದು ನುಡಿದನು. (29)

ಹೀಗೆ ನುಡಿದ ಮಾಧವನು ಬೆವರಿನಿಂದಾವೃತವಾದ ಚಂಡಾಲ ಸ್ತ್ರೀಯ ಕೈಯನ್ನು ತನ್ನ ಕೈಯಿಂದ ಗ್ರಹಣಮಾಡಿದನು. (30) ಅನಂತರ ಆ ಮಾಲಿನಿಯಿಂದ ಸಂಗತನಾಗಿ ಬ್ರಾಹ್ಮಣಕುಮಾರನಾದ ಮಾಧವನು ನಾನಾ ರೀತಿಯಾದ ವಿಹಾರಗಳನ್ನು ಮಾಡಿದನು. ಅವಳ ಮಾಂಸಾಹಾರಾದಿ ಅಯೋಗ್ಯವಾದ ರೀತಿಗಳನ್ನು ಅನುಸರಿಸಿದನು. ಮದ್ಯಪಾನವನ್ನು ಮಾಡುತ್ತಾ ಬಹುಕಾಲ ಅವಳೊಂದಿಗೆ ವಿಹಾರವನ್ನು, ನಾನಾ ಭೋಗಗಳನ್ನು ಭೋಗ ಮಾಡಿದನು. (31) ಚಂಡಾಲಳೊಂದಿಗೆ ವಿಹಾರವನ್ನು ಮಾಡುತ್ತಾ ಬಹುಕಾಲ ಜರುಗಿ ಹೋಗುತ್ತಿರಲಾಗಿ ಬ್ರಾಹ್ಮಣನು ತನ್ನ ಸಂಪತ್ತುಗಳನ್ನು ವ್ಯಯಿಸಿ ಬಡವನಾದನು. ಧನಾರ್ಜನೆಗಾಗಿ ಕಳ್ಳತನ, ಸುಲಿಗೆ ಮೊದಲಾದ ಪಾಪಕೃತ್ಯಗಳನ್ನು ಅಪರಾಧ ಕೃತ್ಯಗಳನ್ನು ಆಚರಿಸಿ ಅದರಿಂದ ದೊರಕಿದ ಹಣವನ್ನು ಒಯ್ದು ಮಾಲಿನಿಗೆ ಕೊಡುತ್ತಿದ್ದನು. ಹೀಗೆ ಕೆಲದಿನಗಳನ್ನು ಕಳೆದ ಬ್ರಾಹ್ಮಣನಾದ ಮಾಧವನು

ಆಜಗಾಮ ಚರನ್ ಸೋಽಯಂ ಸಮೀಪಂ ಶೇಷಭೂಭೃತಃ ॥34॥
ಆರುರೋಹ ಗಿರಿಂ ಚಾಪಿ ಕಥಂಚಿದ್ದೀನಚೇತಸಾ ।
ತಸ್ಮಿನ್ನೇವ ಕ್ಷಣೇ ತಸ್ಯ ಶರೀರಮಭಿತಸ್ತದಾ ॥35॥
ಆಪಾದಚೂಡಂ ಜಜ್ವಾಲ ತದದ್ಭುತಮಿವಾಭವತ್ ।
ತತ್ತಸ್ಯ ಪಾಪಜಾತಂ ಚ ಭಸ್ಮೀಭೂಯ ಕ್ಷಣಾಂತರಾತ್ ॥36॥
ಕೃತ್ವಾ ಚಟಚಟಾರಾವಂ ಪತಿತಂ ಧರಣೀತಲೇ ।
ಜಾಜ್ವಲ್ಯಮಾನೋ ವಿಪ್ರೋಽಪಿ ಬ್ರಹ್ಮತೇಜೋಭಿರಂಜಸಾ ॥37॥
ರರಾಜ ವಿಗತೈನಸ್ಕಃ ಶರದೀವ ದಿವಾಕರಃ ।
ತಂ ದೃಷ್ಟ್ವಾ ವಿಸ್ಮಿತಾಃ ಸರ್ವೇ ಮುನಯಸ್ತತ್ರ ಸಂಗತಾಃ ॥38॥
ಪಪ್ರಚ್ಛುಸ್ತಂ ಮಹಾಭಾಗಾ ದ್ವಿಜಪುತ್ರಂ ಮಹರ್ಷಯಃ ।
ಕಿಮಿದಂ ವದ ವಿಪ್ರೇಂದ್ರ ನಃ ಪರೋ ವಿಸ್ಮಯೋ ಮಹಾನ್ ॥39॥
ಆಚಕ್ಷ್ವಾಸ್ಮಾಕಮಾಮೂಲಾದ್ವೃತ್ತಾಂತಮಿಹ ಸರ್ವತಃ ।
ಇತಿ ತೇಷಾಂ ವಚಃ ಶ್ರುತ್ವಾ ಮಾಧವೋ ವಿಸ್ಮಿತೋ ದ್ವಿಜಃ ॥40॥
ಆದಿತಃ ಪ್ರಭೃತಿ ಪ್ರಾಹ ವೃತ್ತಾಂತಂ ನಿಜಮಂಜಸಾ ।

ಚೌರ್ಯಾದಿಗಳಿಂದಲೂ ಸಹ ಧನವನ್ನು ಸಂಪಾದಿಸಲು ಅಶಕ್ತನಾದ ಆ ಚಂಡಾಲ ಸ್ತ್ರೀಯೇ ಮೊದಲಾದ ಅವನ ಆತ್ಯಂತಿಕರೇ ಅವನನ್ನು ಮನೆಯಿಂದ ಹೊರಗೆ ಹಾಕಿದರು.(32–33)

ನಿರಾಶ್ರಿತನಾದ ಮಾಧವನು ಭ್ರಮಿಷ್ಟನಂತೆ ಅಲ್ಲಲ್ಲಿ ತಿರುಗುವವನಾಗಿ ಯಾದೃಚ್ಛಿಕವಾಗಿ ಶೇಷಾಚಲದ ಬಳಿ ಸಂಚರಿಸುತ್ತಾ ಬಂದನು. ಖಿನ್ನಮನಸ್ಕನಾಗಿಯೇ ಶ್ರೇಷ್ಠವಾದ ಶೇಷಾಚಲ ಪರ್ವತವನ್ನು ಏರಿದನು.(34–35) ಪರ್ವತವನ್ನು ಮುಟ್ಟಿದ ಕ್ಷಣಮಾತ್ರದಲ್ಲಿಯೇ ಅವನಶರೀರದ ಸುತ್ತಲೂ ಬೆಂಕಿಯು ಕಾಣಿಸಿಕೊಂಡು ಅವನ ಪಾದವನ್ನಾರಂಭ ಮಾಡಿಕೊಂಡು ತಲೆಯ ವರೆಗೂ ಇರುವ ಎಲ್ಲ ಪಾಪಗಳನ್ನು ಚಟಚಟ ಶಬ್ದವನ್ನು ಮಾಡುತ್ತಾ ಸುಟ್ಟು ಬೂದಿಯಾಗಿ ಹೋಯಿತು. ಇದು ಅತ್ಯಂತ ಆಶ್ಚರ್ಯಕರವು. ಬ್ರಾಹ್ಮಣನು ತನ್ನೆಲ್ಲ ಪಾಪಗಳನ್ನು ಕಳೆದುಕೊಂಡು ಬ್ರಹ್ಮ ವರ್ಚಸ್ಸಿನಿಂದ ಹೊಳೆಯುವವನಾಗಿ ಶರತ್ಕಾಲದ ಸೂರ್ಯನಂತೆ ಕಂಗೊಳಿಸಿದನು.

ಇದನ್ನು ಕಂಡ ಅಲ್ಲಿರುವ ತಪಸ್ವಿಗಳೆಲ್ಲರೂ ಅತ್ಯಂತ ಆಶ್ಚರ್ಯವನ್ನು ಹೊಂದಿ ಪೂಜ್ಯರಾದ ಮಹರ್ಷಿಗಳು ಮಾಧವನ ಬಳಿಬಂದು 'ಹೇ ಬ್ರಾಹ್ಮಣನೇ! ಇದೇನಿದು? ಆಶ್ಚರ್ಯಕರವಾಗಿದೆಯಲ್ಲ?

ತಚ್ಛ್ರುತ್ವಾ ಮುನಯಃ ಸರ್ವೇ ವಿಸ್ಮಯಂ ಪರಮಂ ಗತಾಃ ॥41॥
ಊಚುರ್ವಚನಮಕ್ಲಿಷ್ಟಂ ವೃಷಶೈಲಾಶ್ರಿತಂ ಮಹತ್ ।

ಋಷಯ ಊಚುಃ–

ಅನೇನ ಪಾಪಜಾಲಂ ವೈ ಯಸ್ಮಾದ್ದಗ್ಧಂ ದ್ವಿಜನ್ಮನಃ ॥42॥
ವೇಂಕಟಾಚಲ ಇತ್ಯಸ್ಯ ಪ್ರಸಿದ್ಧಿರ್ಭುವಿ ವರ್ತತಾಮ್ ।
ಸರ್ವಪಾಪಾನಿ ವೇಂ ಪ್ರಾಹುಃ ಕಟಸ್ತದ್ದಾಹ ಉಚ್ಯತೇ ॥43॥
ಸರ್ವಪಾಪದಹೋ ಯಸ್ಮಾದ್ವೇಂಕಟಾಚಲ ಇತ್ಯಭೂತ್ ।
ಇತ್ಯುಕ್ತ್ವಾ ಮುನಯಃ ಸರ್ವೇ ಯಥಾಗತಮಥೋ ಯಯುಃ ॥44॥
ದ್ವಿಜೋಽಪಿ ಶಾಂತಚಿತ್ತೋಽಸ್ಮಿನ್ನಚಲೇ ಸಂಯತೇಂದ್ರಿಯಃ ।
ದುಶ್ಚರಂ ವೈ ತಪಃ ಕೃತ್ವಾ ತೇನ ಕೈವಲ್ಯಮಾಪ್ತವಾನ್ ॥45॥

ಇತಿ ಶ್ರೀಬ್ರಹ್ಮಾಂಡಪುರಾಣೇ ವೇಂಕಟಾಚಲನಾಮಧೇಯಹೇತುವರ್ಣನಂ ನಾಮ ಷಷ್ಠೋಽಧ್ಯಾಯಃ ॥

* * *

(ಬೆಂಕಿಯು ಚಟ ಚಟ ಶಬ್ದದಿಂದ ನಿನ್ನ ಸುತ್ತಲೂ ಸುಟ್ಟರೂ ಸಹ ನಿನ್ನನ್ನು ಸುಡದಿರುವದು ಅತ್ಯಂತ ಆಶ್ಚರ್ಯಕರವಾಗಿದೆ). ನಿನ್ನ ವೃತ್ತಾಂತವನ್ನು ಆಮೂಲಾಗ್ರವಾಗಿ ನಮಗೆ ತಿಳಿಸು' ಎಂದು ನುಡಿದರು. (39–40) ಆಗ ಮಾಧವನು ಮೊದಲಿನಿಂದ ಆರಂಭಿಸಿ ತನ್ನ ವೃತ್ತಾಂತವೆಲ್ಲವನ್ನೂ ತಿಳಿಸಿದನು. ಇದರಿಂದ ಆಶ್ಚರ್ಯಚಕಿತರಾದ ಶೇಷಾಚಲನಿವಾಸಿಗಳು ಶೇಷಾಚಲದ ಸ್ಪರ್ಶಮಾತ್ರದಿಂದ ಪೂತನಾದ ಮಾಧವನನ್ನು ಕಂಡು 'ಯಾವ ಪರ್ವತ ಸ್ಪರ್ಶಮಾತ್ರ ದಿಂದ ಬ್ರಾಹ್ಮಣಕುಮಾರನ ಪಾಪಗಳೆಲ್ಲವೂ ಸಹ ಸುಟ್ಟು ನಾಶವಾದವೋ ಅಂತಹ ಈ ಪರ್ವತಕ್ಕೆ ಭೂಮಿಯಲ್ಲಿ ಇಂದಿನಿಂದ 'ವೇಂಕಟಾಚಲವೆಂಬ ಹೆಸರು ಬರಲಿ. (41–42) ಜಗತ್ತಿನಲ್ಲಿರುವ ಎಲ್ಲ ಪಾಪಗಳಿಗೆ ವೇಂ ಎಂದು ಹೆಸರು. ಕಟ ವೆಂದರೆ ದಹನ ವೆಂದರ್ಥ. ಸರ್ವಪಾಪಗಳನ್ನೂ ಸಹ ನಿಃಶೇಷವಾಗಿ ಈ ಪರ್ವತವು ದಹನಮಾಡುವದರಿಂದ ಈ ಪರ್ವತಕ್ಕೆ ವೇಂಕಟಾಚಲ ವೆಂಬ ಹೆಸರು ಯುಕ್ತವಾಗುವದು' ಎಂದು ನುಡಿದು ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. (44) ಬ್ರಾಹ್ಮಣನಾದ ಮಾಧವನೂ ಸಹ ತನ್ನ ಕೃತ್ಯಗಳಿಗೆ ಪಶ್ಚಾತ್ತಾಪವನ್ನು ಹೊಂದಿ ಶಾಂತಮನಸ್ಕನಾಗಿ ಈ ಪರ್ವತದಲ್ಲಿಯೇ ವಾಸವಾಗಿದ್ದು ಇಂದ್ರಿಯಗಳನ್ನು ನಿಗ್ರಹಿಸಿ ದುಶ್ಚರವಾದ ತಪಸ್ಸನ್ನಾಚರಿಸಿ ತಪಃಪ್ರಭಾವದಿಂದ ಮುಕ್ತಿಯನ್ನೇ ಹೊಂದಿದನು. (45)

ಇಲ್ಲಿಗೆ ಆರನೆಯ ಅಧ್ಯಾಯವು ಸಮಾಪ್ತವಾಯಿತು.

* * *

ಬ್ರಹ್ಮಾಂಡಪುರಾಣಾಂತರ್ಗತ ವೇಂಕಟೇಶಮಾಹಾತ್ಮ್ಯೇ

## ಅಥ ಸಪ್ತಮೋऽಧ್ಯಾಯಃ

ಭೃಗುರುವಾಚ–

'ಚೋಲರಾಜಸುತಃ ಕಶ್ಚಿತ್ಕಾಲೇ ಖಲು ಭವಿಷ್ಯತಿ ।
ಚಕ್ರವರ್ತೀ ಸ ಶೇಷಾದ್ರೌ ವೈಕುಂಠಂ ಹ್ಯರ್ಚಯಿಷ್ಯತಿ ॥1॥

ಇತ್ಯೇವಂ ಕಥಿತಂ ಪೂರ್ವಂ ತ್ವಯಾ ಮೇ ಮುನಿಸತ್ತಮ ।
ತನ್ಮಮಾಚಕ್ಷ್ವ ವಿಪ್ರೇಂದ್ರ ವಿಸ್ತರೇಣೈವ ನಾರದ ॥2॥

ಚೋಲರಾಜಸುತಃ ಕೋऽಯಂ ಕುತ್ರ ದೇಶೇ ವಸಿಷ್ಯತಿ ।
ಕಥಂ ವಾ ಶೇಷಶೈಲೇಂದ್ರಮರ್ಚಯಿಷ್ಯತಿ ಭಕ್ತಿತಃ ॥3॥

ತಸ್ಯ ಯಾ ಕೀದೃಶೀ ಭಕ್ತಿರ್ಭವಿಷ್ಯತಿ ರಮಾಪತೌ ।
ನ ತ್ವದನ್ಯೋऽಸ್ತಿ ಭೂಲೋಕೇ ವೇದಿತಾ ಭಾವಿನಾಂ ಕ್ವಚಿತ್' ॥4॥

## ಏಳನೆಯ ಅಧ್ಯಾಯವು

*ಭೃಗುಕೃತ ಪ್ರಾರ್ಥನಾ*

ಭೃಗುಮಹರ್ಷಿಗಳು ನಾರದರನ್ನು ಕುರಿತು 'ಹೇ ಮುನಿಸತ್ತಮರಾದ ನಾರದರೇ! ಪೂರ್ವದಲ್ಲಿ ತಾವು ಮುಂದೆ ಕಲಿಯುಗದಲ್ಲಿ ಚೋಲರಾಜನ ಮಗನು ಚಕ್ರವರ್ತಿಯಾಗಿ ಪ್ರಸಿದ್ಧನಾಗಿ ಶೇಷಾಚಲದಲ್ಲಿರುವ ವೈಕುಂಠಾಧಿಪತಿಯಾದ ನಾರಾಯಣನನ್ನು ಶ್ರೀನಿವಾಸನನ್ನು ಅರ್ಚಿಸುವನು ಎಂದು ತಿಳಿಸಿದಿರಿ. ಹೇ ಬ್ರಾಹ್ಮಣಶ್ರೇಷ್ಠರೇ! ಯಾರು ಈ ಚೋಲರಾಜನ ಮಗನು? ಯಾವ ದೇಶದಲ್ಲಿ ಇವನು ಜನಿಸುವನು? ಅವನು ಯಾವ ರೀತಿಯಾಗಿ ಭಗವಂತನಾದ ಶೇಷಾಚಲಾಧಿಪತಿಯಾದ ಶ್ರೀನಿವಾಸನನ್ನು ಭಕ್ತಿಯಿಂದ ಆರಾಧಿಸುವನು? ಲಕ್ಷ್ಮೀಪತಿಯಲ್ಲಿ ಅವನು ಯಾವ ರೀತಿಯಾಗಿ ಭಕ್ತಿಯನ್ನು ಮಾಡುವನು? ಇವೆಲ್ಲವನ್ನು ನನಗೆ ವಿಸ್ತಾರವಾಗಿ ತಿಳಿಸಿರಿ. ಭೂಲೋಕದಲ್ಲಿ ಮುಂದಾಗುವ ವೃತ್ತಾಂತಗಳನ್ನು ತಿಳಿದಿರುವವರು ನಿಮ್ಮನ್ನು ಬಿಟ್ಟರೆ ಬೇರಾರೂ ಇರುವದಿಲ್ಲ. ನನ್ನ ಮೇಲೆ ಅನುಗ್ರಹ ಮಾಡುವವರಾಗಿ ಈ ಕಥೆಯನ್ನು ತಿಳಿಸಿರಿ' ಎಂದು ನುಡಿದರು. (1–4)

ಮಯ್ಯನುಗ್ರಹಬುದ್ಧ್ಯಾ ತ್ವಂ ಕಥಯಸ್ವ ಕಥಾಮಿಮಾಮ್ ॥4॥

ಶ್ರೀನಾರದ ಉವಾಚ–

ಕಲೌ ಚೋಲನೃಪಃ ಕಶ್ಚಿದ್ಬಭೂವ ಭುವಿ ವಿಶ್ರುತಃ ।
ಧಾರ್ಮಿಕೋ ನೀತಿಶಾಸ್ತ್ರಜ್ಞಃ ಶಶಾಸ ಪೃಥಿವೀಮಿಮಾಮ್ ॥5॥

ಸ ಕದಾಚಿದ್ವನೇ ರಂತುಮಾಖೇಟೇನ ಮಹೀಪತಿಃ ।
ಕಿಂಕರಾನ್ ವನಪಾಲಾಂಶ್ಚ ವ್ಯಾದಿದೇಶ ಮಹಾಮನಾಃ ॥6॥

ಸ್ವಯಂ ವಿನಿರ್ಯಯೌ ತೂರ್ಣಂ ಹಯಮಾರುಹ್ಯ ರಂಹಸಾ ।
ಶೇಷಾಚಲನೋದ್ದೇಶೇ ವಿಚಚಾರ ಮೃಗಾಂತಕಃ ॥7॥

ಅಶ್ವಾನಾಂ ಚ ಗಜಾನಾಂ ಚ ಶ್ರುತ್ವಾ ಘೋರಂ ಮಹಾರವಮ್।
ಗುಹಾಭ್ಯಃ ಪ್ರತಿನಿರ್ಯಾತಾಃ ಸಿಂಹವ್ಯಾಘ್ರಮುಖಾ ಮೃಗಾಃ ॥8॥

ಇತಃ ಸಿಂಹಾಃ ಇತೋ ವ್ಯಾಘ್ರಾ ಇತಶ್ಚ ವನವಾರಣಾಃ ।
ಇತಿ ನಿರ್ದಿಶ್ಯಮಾನಾನ್ ವೈ ಜಘಾನ ಮೃಗಯೂಥಪಾನ್ ॥9॥

ಸಂಘಶಶ್ಚ ವರಾಹಾಣಾಂ ಯೂಥಾನಿ ನಿಶಿತೈಃ ಶರೈಃ ।

*ಚೋಲರಾಜ ವೃತ್ತಾಂತ*

ಭೃಗುಮಹರ್ಷಿಗಳ ಪ್ರಾರ್ಥನೆಗನುಸಾರವಾಗಿ ಚೋಳರಾಜನ ವೃತ್ತಾಂತ ವನ್ನು ನಾರದರು ನಿರೂಪಿಸುತ್ತಾರೆ. ಕಲಿಯುಗದಲ್ಲಿ ಚೋಲರಾಜನೆಂದು ಪ್ರಸಿದ್ಧನಾದ ಚಕ್ರವರ್ತಿಯಿದ್ದನು. ಅವನು ಧಾರ್ಮಿಕನಾಗಿದ್ದು ನೀತಿಶಾಸ್ತ್ರಗಳನ್ನು ತಿಳಿದವನಾಗಿದ್ದು ಈ ಭೂಮಿಯನ್ನು ಆಳುತ್ತಿದ್ದನು. (5) ಅವನು ಒಂದು ಬಾರಿ ಬೇಟೆಯನ್ನು ಆಡುವದರಗೋಸ್ಕರವಾಗಿ ತನ್ನ ಸೇವಕರಿಗೆ, ವನಪ್ರದೇಶದ ರಕ್ಷಕರಿಗೆ ಆದೇಶಿಸಿ, ಸ್ವಯಂ ತಾನು ಕುದುರೆಯನ್ನೇರಿ, ಸೈನ್ಯಸಮೇತನಾಗಿ ಬೇಟೆಗೆ ತೆರಳಿದನು. ಶೇಷಾಚಲದ ಅರಣ್ಯ ಪ್ರದೇಶದಲ್ಲಿಯೇ ಕಾಡುಮೃಗಗಳನ್ನು ಕೊಲ್ಲುವವನಾಗಿ ಸಂಚರಿಸಿದನು. (6–7) ಕುದುರೆ, ಆನೆಗಳ ಹೇಷಾರವ, ಘೀಳಿಡುವ ಶಬ್ದ ಸೈನಿಕರ ಗದ್ದಲ ಇವುಗಳ ಶಬ್ದದಿಂದ ಬೆಚ್ಚಿದ ಸಿಂಹ ಹುಲಿ ಮೊದಲಾದ ಮೃಗಗಳು ಹೊರಗೆ ಬರುತ್ತಿದ್ದವು. 'ಇಲ್ಲಿ ಸಿಂಹ; ಇಲ್ಲಿ ಹುಲಿ; ಇಲ್ಲಿ ಕಾಡಾನೆ ಗಳಿರುವವು' ಎಂದು ನಿರ್ದೇಶನ ಮಾಡುತ್ತಿದ್ದ ಸೈನಿಕರು, ವನಪಾಲಕರ ಮಾತಿನಂತೆ ರಾಜನು ಆ ಎಲ್ಲ ಮೃಗಗಳನ್ನು ಕಾಡು ಹಂದಿಗಳ ಸಾಲುಗಳನ್ನು, ಚೂಪಾದ ಅಲಗುಳ್ಳ ಬಾಣಗಳಿಂದ, ಖಡ್ಗಮೃಗಗಳನ್ನು ಖಡ್ಗದಿಂದಲೂ ಬೇಟೆಯಾಡಿದನು. (8–10)

ಖಡ್ಗಾನ್ ಖಡ್ಗೇನ ನೃಪತಿರ್ವ್ಯಾಧ ವಿಪಿನಾಂತರೇ ॥10॥

ಮೃಗಯಾಕೃಷ್ಟಚಿತ್ತೋಽಯಂ ವಿಚರನ್ ಕಾನನೇ ಮುಹುಃ ।
ಸ ಲೇಭೇ ವಿಶ್ರಮಂ ರಾಜಾ ಯಥೇಂದ್ರಿಯವಶಂ ಗತಃ ॥11॥

ತತಸ್ತೇನ ನರೇಂದ್ರೇಣ ಕಮ್ಯಾ ಕಾಂಚನರೂಪಿಣೀ ।
ನಲಿನೋತ್ಫುಲ್ಲನಯನಾ ಚಂದ್ರಬಿಂಬನಿಭಾನನಾ ॥12॥

ವಿಶ್ವವಿಸ್ಮಯಲಾವಣ್ಯಾ ಶ್ಯಾಮಾ ಪೀನಪಯೋಧರಾ ॥13॥

ರಾಜಹಂಸೀ ಚರಂತೀವ ದೃಷ್ಟಾ ಯೌವನಶಾಲಿನೀ ।
ತತಃ ಪ್ರಸೂನಾಪಚಯಂ ಕುರ್ವಂತೀ ಸಮನೋರಮಮ್ ॥14॥

ಜಹಾರ ಚೇತಸ್ತಸ್ಯೇಯಂ ನದೀವ ಪುಲಿನಂ ಜಲೈಃ ।
ಪ್ರಸೂನಾನ್ಯಪಚಿನ್ವಂತ್ಯಾಃ ಸನ್ನಮಧ್ಯವಲಿತ್ರಯಮ್ ॥15॥

ಉನ್ನಮತ್ಕುಚಮಾಲೋಕ್ಯ ವಪುಸ್ತಸ್ಯಾ ಭೃಶೋತ್ಸುಕಃ ।
ನ ಶಶಾಕ ವನೋದ್ದೇಶಾತ್ ಪದಾತ್ ಪದಮಪಿ ಸ್ವಯಮ್ ॥16॥

*ನಾಗಕನ್ಯಾದರ್ಶನ*

ಕಾಡಿನ ಮಧ್ಯಭಾಗ ದಲ್ಲಿ ಬೇಟೆಯನ್ನಾಡುತ್ತಾ ಸಂಚರಿಸುತ್ತಿರುವಾಗ ದಣಿವಾರಿಸಿ ಕೊಳ್ಳುತ್ತಿರುವಾಗ ಅತ್ಯಂತ ಸುಂದರಿಯಾದ ಕನ್ಯೆಯೋರ್ವಳನ್ನು ನೋಡಿದನು. ಕಮಲದಂತೆ ಕಣ್ಣುಗಳನ್ನು ಹೊಂದಿದ್ದ, ಚಂದ್ರನ ಬೆಳದಿಂಗಳಿನಂತೆ ಕಾಂತಿಯುಕ್ತಳಾದ, ಎಲ್ಲರಿಗೂ ಆಶ್ಚರ್ಯ ಕರವಾದ ಲಾವಣ್ಯೋಪೇತಳಾಗಿದ್ದ, ಶ್ಯಾಮವರ್ಣದವಳಾಗಿದ್ದ, ಉನ್ನತವಾದ ಸ್ತನಯುಗ್ಮಗಳಿಂದ ಕೂಡಿದ್ದ, ಯೌವನಾಢ್ಯಳಾಗಿದ್ದ, ರಾಜಹಂಸಿಯಂತೆ ನಡಿಗೆಯುಳ್ಳ, ಹೂವುಗಳನ್ನು ಬಿಡಿಸುತ್ತಿದ್ದ ಸುಂದರಳಾದ ಕನ್ಯೆಯನ್ನು ನೋಡಿದ ರಾಜನ ಮನಸ್ಸು ನದಿಯು ತನ್ನ ನೀರಿನಿಂದ ತೆಗ್ಗಾದ ತೀರ ಪ್ರದೇಶವನ್ನು ಅಪಹರಿಸುವಂತೆ ಆ ಕನ್ಯೆಯಿಂದ ಅಪಹೃತವಾಯಿತು. (11–15)

*ಪರಸ್ಪರಾನುರಾಗ*

ಹೂವುಗಳನ್ನು ಅಪಹರಿಸುತ್ತಿರುವ ಉನ್ನತ ಕುಚಗಳನ್ನು, ಸೂಕ್ಷ್ಮವಾದ ಉದರಭಾಗ, ಬಳುಕುವ ನಡುವನ್ನು ಹೊಂದಿದ ಸುಮನೋಹರವಾದ ಅವಳ ಶರೀರವನ್ನು ನೋಡಿದ ರಾಜನು ಒಂದು ಹೆಜ್ಜೆಯನ್ನೂ ಸಹ ಮುಂದಿಡಲು ಸಮರ್ಥನಾಗಲಿಲ್ಲ. (16) ಬೇಟೆಗಾರನ ಬಾಣದ ಆಘಾತವನ್ನು ಪಡೆದ ಜಿಂಕೆಯಂತೆ ಮರ್ಮ ಸ್ಥಾನಗಳನ್ನು ಭೇದಿಸುವಂತಿದ್ದ ಮದನನ ಕಾಮಬಾಣಗಳಿಂದ ವಿದ್ಧನಾದ ರಾಜನು ಕಾಮನಿಂದ ಗೆಲ್ಲಲ್ಪಟ್ಟು ಅವನಿಗೆ ವಶನಾದನು. (17)

ಚಲಿತುಂ ನೃಪತಿಸ್ತತ್ರ ವ್ಯಾಧವಿದ್ಧೋ ಮೃಗೋ ಯಥಾ ।
ನಿರ್ಜಿತಃ ಸ್ಮರಬಾಣೇನ ಸೋಽಯಂ ಮರ್ಮಸುಭೇದಿನಾ ॥17॥

ವಿಸೃಜ್ಯ ಸರ್ವಸೈನ್ಯಾನಿ ತತ್ಸಮೀಪಂ ಯಯೌ ನೃಪಃ ।
ತತಃ ಸಾ ಚ ವರಾರೋಹಾ ವಿಲೋಕ್ಯ ನೃಪತಿಂ ತದಾ ॥18॥

ಮನೋಜ್ಞವೇಷಂ ಸಂಪ್ರಾಪ್ತಂ ನ್ಯಸ್ತಚಾಪಮಿವ ಸ್ಮರಮ್ ।
ವಿದ್ಧಾ ಮನ್ಮಥಬಾಣೇನ ಬಭೂವಾಯತಲೋಚನಾ ॥19॥

ಅಪನೇತುಂ ನ ಪುಷ್ಪಾಣಿ ಶಕ್ತಾ ತದ್ಗತಮಾನಸಾ ।
ಮುಹುರ್ವಿಲೋಕಯಂತ್ಯೇನಂ ರಾಜಾನಂ ಸಾ ಮನಸ್ವಿನೀ ॥20॥

ಕರೇಣ ಪುಷ್ಪಾಪಚಯಂ ದೃಗ್ಭ್ಯಾಂ ರಾಜಾವಲೋಕನಮ್ ।
ಕುರ್ವಂತೀ ತನ್ಮನಾಸ್ತನ್ವೀ ತಥಾ ಚ ಸ್ಮರವಿಭ್ರಮಾನ್ ॥21॥

ದರ್ಶಯಂತೀ ತಯಾ ತನ್ವೀ ನಾತಿಕ್ರಾಂತಾ ಚ ದೃಕ್ಪಥಮ್ ।
ತತೋ ರಾಜಾ ಸಮಾಗಮ್ಯ ಪೃಷ್ಟವಾನ್ ಮಂಜುಭಾಷಿಣೀಮ್ ॥22॥

ಕಾಮವಶನಾದ ರಾಜನು ತನ್ನ ಸೈನ್ಯವನ್ನು ಬಿಟ್ಟು ಆವಳ ಬಳಿಗೆ ಹೋದನು.

ಆ ಕನ್ಯೆಯೂ ಸಹ ಸಮೀಪಕ್ಕೆ ಬಂದ, ಕೈಯಲ್ಲಿ ಬಾಣವನ್ನು ಹಿಡಿದಿರುವ ಮನ್ಮಥನಂತೆ ಇರುವ ರಾಜನ ಸುಂದರ ರೂಪವನ್ನು ನೋಡಿ ಆಕೃಷ್ಟಳಾಗಿ ಕಾಮಬಾಣಗಳಿಂದ ತಾಡಿತಳಾದಳು. (ಕಾಮವಶಳಾದಳು). ವಿಶಾಲ ನೇತ್ರೆಯಾದ ಆ ಸ್ತ್ರೀಯು ರಾಜನನ್ನು ನೋಡಿ, ಅವನಲ್ಲಿಯೇ ಮನಸ್ಸಿಟ್ಟ ಪರವಶಳಾಗಿ, ರಾಜನನ್ನು ಮೇಲಿಂದ ಮೇಲೆ ನೋಡುತ್ತಾ, ಹುವುಗಳನ್ನು ಬಿಡಿಸಲಾಗಲಿಲ್ಲ. ಕೈಯಿಂದ ಪುಷ್ಪಾಪಚಯನ, ಕಣ್ಣಿನಿಂದ ರಾಜನನ್ನು ನೋಡುವದನ್ನು ಮಾಡುತ್ತಿದ್ದ ಕೃಶಾಂಗಿಯಾದ ಆ ಕನ್ಯೆಯು ಮನ್ಮಥನ ಚೇಷ್ಟೆಗೊಳಗಾಗಿ ರಾಜನಿಂದ ತನ್ನ ನೋಟವನ್ನು ಸರಿಸಲು ಸಮರ್ಥಳಾಗಲಿಲ್ಲ. (18–21)

*ರಾಜನಿಂದ ಅನುರಾಗ ನಿವೇದನ*

ಅನಂತರದಲ್ಲಿ ರಾಜನು ಮಧುರ ಸ್ವರದಿಂದ ಕೂಡಿದ್ದ ಸುಂದರಿಯಾದ ಆ ಕನ್ಯೆಯನ್ನು ನೋಡಿ ಆಕೆಯ ದೇಶ, ಕುಲ, ವೃತ್ತಾಂತ, ಸ್ವಭಾವಗಳನ್ನು ತಿಳಿಯುವದಕ್ಕಾಗಿ ಅವಳ ಬಳಿ ಬಂದನು. (22–23) 'ಂದರಿಯಾದ ಆ ಸ್ತ್ರೀಯನ್ನು ಕುರಿತು 'ಹೇ ಮಂಗಳಾಂಗಿಯೇ! ನೀನಾರು? ನೀನು ಈ ಭಯಂಕರ ವನಪ್ರದೇಶದಲ್ಲಿ ಯಾವದೇ ಹೆದರಿಕೆಯಿಲ್ಲದೇ ಹೇಗೆ ಸಂಚರಿಸುತ್ತಿರುವಿ? ನಿನ್ನ ತಂದೆ–ತಾಯಿಗಳಾರು? ನೀನು ಎಲ್ಲಿ ವಾಸವಾಗಿರುವಿ? ನಿನ್ನ

ಕುಲಂ ವೃತ್ತಂ ಚ ಶೀಲಂ ಚ ತಸ್ಯಾಂ ಸ್ವಯಮನಿಂದಿತಮ್ ।

ರಾಜೋವಾಚ–

'ಕಾ ತ್ವಂ ಚರಸಿ ಕಲ್ಯಾಣಿ ವನೇ ವಿಗತಭೀಃ ಕಥಮ್ ॥23॥

ಪಿತಾ ಕೋ ಜನನೀ ಕಾ ವಾ ಕುತ್ರ ವಾ ವಸತಿಸ್ತವ ।
ಪರಿಗ್ರಹೋಽಪಿ ಕಸ್ಯ ತ್ವಂ ನವಾ ಪರಿಗ್ರಹಸ್ತವ ॥24॥

ಪಾಣಿಗ್ರಹಣಕಾಲೋಽಯಂ ವರ್ತತೇ ತವ ಶೋಭನೇ ।
ನ ಚೇತ್ ಪರಿಗ್ರಹೋಽನ್ಯಸ್ಯ ವರಾಂಗಿ ವರಯೇ ತದಾ ।
ಸ್ವಾಯತ್ತೀಕರ್ತುಮಾತ್ಮಾನಂ ಜೀವಿತಂ ಚ ತ್ವಮರ್ಹಸಿ' ॥25॥

ಕನ್ಯೋವಾಚ–

'ಧನಂಜಯಾಭಿಧಾನಸ್ಯ ಸರ್ಪರಾಜಸ್ಯ ಧೀಮತಃ ।
ಪುತ್ರೀ ವಸಾಮಿ ಪಾತಾಲೇ ಲಾಲಿತಾ ಪಿತುರಂತಿಕೇ ॥26॥

ಭೋಗಾನಮಾನುಷಾಂಶ್ಚಾಪಿ ಭುಂಜಾನಾ ತತ್ಪ್ರಸಾದತಃ ।
ಕ್ರೀಡಂತೀ ಚ ವಯಸ್ಯಾಭಿಃ ಪಾತಾಲೇ ನ್ಯವಸಂ ಚಿರಮ್ ॥27॥

ಪಾಣಿಗ್ರಹಣಕಾಲೇ ವೈ ಸಂಪ್ರಾಪ್ತೇಽಪಿ ಪಿತಾ ಮಮ ।
ಚಿಂತಯಾಮಾಸ ಕೋ ವಾಽಸ್ಯಾ ಭವಿತಾ ಸದೃಶೋ ವರಃ ॥28॥

ವಿವಾಹವನ್ನು ಯಾರೊಂದಿಗೆ ಮಾಡಲಾಗಿದೆ? ಅಥವಾ ನೀನು ಅವಿವಾಹಿತಳಾಗಿರುವೆಯಾ? ನಿನ್ನ ವಯಸ್ಸು ವಿವಾಹ ಯೋಗ್ಯವಾಗಿದೆ. ನಿನ್ನ ಪರಿಣಯವು ಇನ್ನೂ ಆಗಿಲ್ಲದಿದ್ದಲ್ಲಿ, ಹೇ ವರಾಂಗಿಯೇ! ನಾನು ನಿನ್ನನ್ನು ವಿವಾಹ ಮಾಡಿಕೊಳ್ಳುವೆನು. ನೀನು ನನ್ನನ್ನು ನಿನ್ನವನನ್ನಾಗಿಸಿಕೊಂಡು ನನ್ನನ್ನು ಬದುಕಿಸು' ಎಂದು ನುಡಿದನು. (23–25) ಇದನ್ನು ಕೇಳಿದ ಕನ್ಯೆಯು 'ನಾನು ಸರ್ಪರಾಜನಾದ ಧನಂಜಯನ ಮಗಳಾಗಿರುವೆನು. ಪಾತಾಲದಲ್ಲಿ ವಾಸವಾಗಿರುವನು. ತಂದೆಯ ಬಳಿಯೇ ಇರುವವಳಾಗಿ ಮನುಷ್ಯರಿಂದ ಭೋಗಮಾಡಲು ಅಶಕ್ಯವಾದ ಭೋಗಗಳನ್ನು ಅವನ ಅನುಗ್ರಹದಿಂದ ಭೋಗಮಾಡುತ್ತ, ಸಖಿಯರಿಂದ ಕೂಡಿ ಆಟವನ್ನಾಡುತ್ತಾ ಪಾತಾಲದಲ್ಲಿಯೇ ವಾಸವಾಗಿರುವೆನು. (26–27) ನಾನು ವಿವಾಹ ವಯಸ್ಕಳಾಗಿರುವೆನು. ನನ್ನ ತಂದೆಯೂ ಸಹ 'ಯಾರು ಇವಳ ಕೈಹಿಡಿಯಲು ಯೋಗ್ಯನಾಗಿರುವನು ಎಂದು ವಿಚಾರಿಸುತ್ತಿರುವನು. ನಾನು ನಿನ್ನ ಮನೋಗತವನ್ನು ತಿಳಿದಿರುವೆನು. (28) ಆದರೆ ತಂದೆಯ ಅಪ್ಪಣೆಯಾಗದೆ ನಿನ್ನನ್ನು ನಾನು ಮದುವೆಯಾಗಲು ಬಯಸುವದಿಲ್ಲ. ತಂದೆ–

ಪಿತ್ರಾ ನಾನುಮತಾ ಚಾಹಮಭಿಲಾಷಂ ತವ ಪ್ರಭೋ ।
ಬಂಧುಭಿಶ್ಚ ತತೋऽಭೀಷ್ಟೈರನುಮಂತುಮಿಹೋತ್ಸಹೇ ॥29॥

ಪಿತರಂ ಮಮ ಪೃಚ್ಛಸ್ವ ಗತ್ವಾ ಪಾತಾಲಮಂಜಸಾ ।
ದಾಸ್ಯತ್ಯನುಮತಿಂ ನೂನಂ ಗುಣತಃ ಶೀಲತಸ್ತವ ॥30॥

ವಿನಯಂ ರಕ್ಷ ಕಲ್ಯಾಣ ಕಥಂಚಿದಪಿ ಚಾನಘ ।
ಚಂದ್ರೋದಯವಿವೃದ್ಧೋऽಬ್ಧಿಃ ಕಿಂ ವೇಲಾಮಧಿಲಂಘತೇ ॥31॥

ರಾಜೋವಾಚ-

'ನಾಯಂ ವ್ಯತಿಕ್ರಮಃ ಸುಭ್ರೂರ್ನಾಧರ್ಮಶ್ಚಾತ್ರ ವಿದ್ಯತೇ ।
ಗಾಂಧರ್ವೋऽಯಂ ವಿವಾಹೋऽಪಿ ಮುನಿಭಿಃ ಪರಿಕೀರ್ತಿತಃ ॥32॥

ಪರಸ್ಪರಾನುರಾಗೇಣಾ ಸಂಗತಾ ರಾಜಕನ್ಯಕಾಃ ।
ಶ್ರೂಯಂತೇ ಬಹವಶ್ಚಾಪಿ ನ ವಿಹಾತುಮಿಹಾರ್ಹಸಿ ॥33॥

ಅಯಂ ವಿವಾಹೋ ಧರ್ಮ್ಯಶ್ಚ ಸ್ವರ್ಗ್ಯಶ್ಚ ನಲಿನೇಕ್ಷಣೇ ।
ಅಸ್ಮಿನ್ನರ್ಥೇ ವಿಶಾಲಾಕ್ಷಿ ಪ್ರತ್ಯವಾಯೋ ನ ವಿದ್ಯತೇ ॥34॥

ತಂದೆಗಳಿಂದ, ಬಂಧು ಬಳಗದವರಿಂದ ಕೂಡಿಕೊಂಡು ವಿವಾಹ ಮಹೋತ್ಸವವನ್ನಾಚರಿಸಿ ಕೊಂಡು ನಿನ್ನನ್ನು ಪರಿಣಯಿಸಲು ನಾನು ಬಯಸುವೆನು. (29) ಹೇ ರಾಜನೇ! ನೀನು ಈಗಲೇ ಪಾತಾಲ ಲೋಕಕ್ಕೆ ಹೋಗಿ ಅಲ್ಲಿ ನನ್ನ ತಂದೆಯನ್ನು ಕೇಳು. ಗುಣಗಳಿಂದ ಮತ್ತು ಸ್ವಭಾವದಿಂದ ಶ್ರೇಷ್ಠನಾದ ನಿನಗೆ ಅವನು ಕನ್ಯಾದಾನವನ್ನು ಮಾಡುವನು. ಆದರೂ ಸಹ ವಿನಯವನ್ನು ಹೊಂದಿ ಸರ್ಪರಾಜನ ಬಳಿ ವ್ಯವಹರಿಸು. ಚಂದ್ರೋದಯ ಸಮಯದಲ್ಲಿ ವೃದ್ಧಿಯನ್ನು ಹೊಂದಿದ ಸಮುದ್ರವು ದಂಡೆಯನ್ನು ಮೀರುವದುಂಟೆ?' ಎಂದು ನುಡಿದಳು.

*ಚೋಲರಾಜ-ನಾಗಕನ್ಯೆಯರ ಗಾಂಧರ್ವವಿವಾಹ*

ಇದನ್ನು ಕೇಳಿದ ರಾಜನು 'ಹೇ ಸುಂದರ ಹುಬ್ಬುಗಳನ್ನು ಹೊಂದಿರುವವಳೇ! ನಿನ್ನ ತಂದೆಯ ಅನುಮತಿಯಿಲ್ಲದೇನೆ ನನ್ನನ್ನು ಪರಿಣಯಿಸುವದು ಅಧರ್ಮವೂ ಅಲ್ಲ, ಅನೀತಿಯೂ ಸಹ ಅಲ್ಲ. ಇದನ್ನು ಗಾಂಧರ್ವ ವಿವಾಹವೆಂದು ಮುನಿಗಳೂ ಸಹ ಅಂಗೀಕರಿಸಿ ರುವರು. (32) ಎಲ್ಲಿ ಪರಸ್ಪರಾನುರಾಗದಿಂದ ರಾಜ ಕುಮಾರಿಯರು ತಮಗಿಷ್ಟರಾದ ಪುರುಷರನ್ನು ಗ್ರಹಿಸುವರೋ ಅದು ಗಾಂಧರ್ವವೆಂಬ ವಿವಾಹ ಪದ್ಧತಿಯು. ಅನೇಕ ರಾಜಕುಮಾರಿಯರೂ ಸಹ ಇದೇ ವಿವಾಹ ಪದ್ಧತಿಯಂತೆ ತಮ್ಮಲ್ಲಿ ಅನುರಕ್ತರಾದ ಪುರುಷರೊಂದಿಗೆ ವಿವಾಹವನ್ನು

ಅತಸ್ತ್ವಯ್ಯನುರಕ್ತಾಂ ಮಾಂ ಕೃತಾರ್ಥಯಿತುಮರ್ಹಸಿ ।
ಜೀವಿತಂ ವಾ ಸುಖಂ ವಾಽಪಿ ತ್ವಾಂ ವಿಹಾಯ ನ ರೋಜತೇ' ॥35॥

ಇತಿ ಬ್ರುವತಿ ಭೂಪಾಲೇ ಕನ್ಯಾ ಕಾಮವಶಂವದಾ ।
ಲಜ್ಜಾವನತಮುಖೀ ಭೂಮಿಂ ಲಿಖಂತೀ ನಖರೇಣ ಸಾ ॥36॥

ವಲ್ಗುಕಾಮೇವ ಸಂರಬ್ಧಾ ಸಂಹೃತಾ ಲಜ್ಜಯಾ ಮುಹುಃ ।
ಅಂಗೀಚಕಾರ ಚೋದ್ವಾಹಂ ರಾಜ್ಞಾ ನಾಗಸ್ಯ ಕನ್ಯಕಾ ॥37॥

ಜೋಪಮಾಸ್ಥಾಯ ವಿಪುಲಂ ಮುಹೂರ್ತಂ ಸ್ಮಾವತಿಷ್ಠತೇ ।
ಅಥಾನಯಾ ಸಮಾಗತ್ಯ ಲತಾಮಂಡಪಸಂಶ್ರಿತಃ ॥38॥

ಅನ್ವಭೂತ್ ಸುರತಂ ತಸ್ಯಾ ಭೂಯೋ ರಾಗವಿವರ್ಧನಮ್ ।
ಯಾಮಾವಶೇಷೇಽಥ ದಿನೇ ಗಂತುಕಾಮಾ ಕೃತತ್ವರಾ ॥39॥

ಆಮಂತ್ರಯಾಮಾಸ ನೃಪಂ ಕಥಂಚಿದ್ವಿರಹಾಕುಲಾ ।
ನೃಪಶ್ಚ ದುಃಖಿತೋಽತ್ಯರ್ಥಮಾಶ್ಲಿಷ್ಯಾಶ್ಲಿಷ್ಯ ಭಾಮಿನೀಮ್ ॥40॥

ಮಾಡಿಕೊಂಡಿರುವರು. (33) ಆದ್ದರಿಂದ ನಿನ್ನಲ್ಲಿ ಅನುರಕ್ತ ನಾದ ನನ್ನನ್ನೂ ಗಾಂಧರ್ವವಿಧಿಯಿಂದ ವಿವಾಹವನ್ನು ಮಾಡಿಕೊಳ್ಳುವದು ಧರ್ಮಸಮ್ಮತವಾಗಿದ್ದು ಸ್ವರ್ಗಾದಿ ಫಲದಾಯಕವಾಗಿರುವದು. ಹೇ ವಿಶಾಲಾಕ್ಷಿಯೇ! ನಿನ್ನಲ್ಲಿ ಅನುರಕ್ತನಾದ ನನ್ನೊಡನೆ ನಿನ್ನ ತಂದೆಯ ಅನುಮತಿಯಿಲ್ಲದೇ ವಿವಾಹವನ್ನು ಮಾಡಿಕೊಳ್ಳು-ವದರಿಂದ ಯಾವದೇ ದೋಷವು ನಿನಗಿರುವದಿಲ್ಲ. ಆದ್ದರಿಂದ ನಿನ್ನಲ್ಲಿ ಅನುರಕ್ತನಾದ ನನ್ನನ್ನು ಬಿಡಬೇಡ. ನೀನು ನನ್ನನ್ನು ಸ್ವೀಕರಿಸಿ ಕೃತಕೃತ್ಯನನ್ನಾಗಿಸು. ಜೀವಿತವನ್ನೇ ಆಗಲಿ ಅಥವಾ ಸುಖವನ್ನೇ ಆಗಲಿ ನೀನಿಲ್ಲದೇ ನನಗವು ರುಚಿಸುವದಿಲ್ಲ' ಎಂದು ನುಡಿದನು. (34–35) ಹೀಗೆ ರಾಜನು ನುಡಿಯುತ್ತಿರಲು ಕಾಮವಶಳಾದ ಕನ್ಯೆಯು ನಾಚಿಕೆಯಿಂದ ತಲೆಯನ್ನು ತಗ್ಗಿಸಿ ತನ್ನ ಉಗುರಿನ ಕೊನೆಯಿಂದ ಭೂಮಿಯನ್ನು ಬರೆಯುತ್ತಾ ಅತ್ಯಂತ ಮಂದವಾಗಿ ಏನೋ ಹೇಳುವವಳಂತೆ ನುಡಿದು ಆದರೆ ಮತ್ತೆ ನಾಚಿಕೆಯಿಂದ ಮೌನವಾಗಿಯೇ ಗಾಂಧರ್ವ ವಿವಾಹಕ್ಕೆ ಸಮ್ಮತಿಯನ್ನಿತ್ತಳು. (36–37)

ನಾಗ ಕನ್ಯೆಯು ರಾಜನೊಂದಿಗೆ ಒಂದು ಮುಹೂರ್ತಕಾಲ ಇದ್ದು ಅನಂತರದಲ್ಲಿ ಅವನೊಂದಿಗೆ ಲತಾಮಂಡಪವನ್ನು ಹೊಂದಿ ಅವರಿಬ್ಬರೂ ಅನುರಾಗವರ್ಧಕವಾದ ರತಿಕ್ರೀಡೆಯಲ್ಲಿ ಆಸಕ್ತರಾದರು. ದಿನದ ಕೊನೆಯ ಯಾಮವು ಪ್ರಾಪ್ತವಾದಾಗ ತನ್ನ ಲೋಕಕ್ಕೆ ತೆರಳಲು ಬಯಸಿದ ನಾಗಕನ್ನಿಕೆಯು ಅವಸರಿಸಿ, ರಾಜನ ವಿರಹದುಃಖವನ್ನು ಹೊಂದಿ ಅವನನ್ನು ತನ್ನ ಪಾತಾಲ ಲೋಕಕ್ಕೆ

ಕಥಂಚಿದನುಮಂತುಂ ವೈ ಶಶಾಕ ಗಮನಂ ತದಾ ।
ನೃಪೇಣಾನುಮತಾ ಸಾऽಥ ಸಂಗಮಶ್ರಮವಿಹ್ವಲಾ ॥41॥

ನಿಮೀಲಿತಾರ್ಧನಯನಾ ನಿರ್ಗತಾ ವರವರ್ಣಿನೀ ।
ತತಃ ಪಾತಾಲಮಾವಿಶ್ಯ ಗತ್ವಾ ಚ ಪಿತುರಂತಿಕಮ್ ॥42॥

ಚೋಲರಾಜಸ್ಯ ಚರಿತಂ ಕಥಯಾಮಾಸ ಸರ್ವತಃ ।
ನಾಗರಾಜೋऽಪಿ ತಾಂ ಶ್ರುತ್ವಾ ಕಥಿತಾಂ ಕನ್ಯಯಾ ಕಥಾಮ್ ॥43॥

ಪ್ರಹರ್ಷಮತುಲಂ ಲೇಭೇ ಸದೃಶೋಯಮಿತಿ ಬ್ರುವನ್ ।
ನಿರ್ಗತ್ಯ ನೃಪತಿಶ್ಚಾಪಿ ಲತಾಮಂಡಪಸಂಶ್ರಯಾತ್ ॥44॥

ಭಾವಯನ್ ವಿಭ್ರಾಮಾಂಸ್ತಸ್ಯಾ ಜಗಾಮ ಮೃಗಯಂಶ್ಚಮೂಮ್ ।
ಪಶ್ಚಿಮಾಚಲಶೃಂಗಾಗ್ರೇ ಲಂಬಮಾನೇ ದಿವಾಕರೇ ॥45॥

ಪ್ರವಾಲರಕ್ತೋ ಮುಕ್ತಾಭೀ ರಂಜಿತೋ ವಾರಿಧಿರ್ಯಥಾ ।
ಜಗಾಹೇ ಜಗದಂಡಾಂತಸ್ತಿಮಿರಂ ಚ ಶನೈಃ ಶನೈಃ ॥46॥

ಆಮಂತ್ರಿಸಿದಳು. ರಾಜನೂ ಸಹ ಅವಳನ್ನು ಆಲಿಂಗಿಸಿಕೊಂಡು ಅತ್ಯಂತ ದುಃಖದಿಂದ ಅವಳಿಗೆ ಪಾತಾಳಕ್ಕೆ ಹೋಗಲು ಸಮ್ಮತಿಸಿದನು. ರಾಜನಿಂದ ಅನುಮತಳಾದ ನಾಗಕನ್ನಿಕೆಯು ವಿಹಾರ ಶ್ರಮದಿಂದ ಶ್ರಾಂತಳಾಗಿ ಅರೆತೆರೆದ ಕಣ್ಣುಗಳನ್ನು ಹೊಂದಿದವಳಾಗಿ ಅಲ್ಲಿಂದ ನಿರ್ಗಮಿಸಿದಳು. (39–41) ಪಾತಾಳಕ್ಕೆ ಹೋದ ನಾಗಕನ್ಯೆಯು ತನ್ನ ತಂದೆಯಾದ ಧನಂಜಯನ ಬಳಿಗೆ ಹೋಗಿ ಚೋಳರಾಜನೊಂದಿಗೆ ನಡೆದ ಗಾಂಧರ್ವವಿವಾಹ ವೃತ್ತಾಂತವನ್ನು ಸಾದ್ಯಂತವಾಗಿ ತಿಳಿಸಿದಳು. ಸರ್ಪರಾಜನಾದ ಧನಂಜಯನು ಇದರಿಂದ ಬಹಳಷ್ಟು ಸಂತೋಷವನ್ನು ಹೊಂದಿ 'ನಿನಗೆ ಅನುರೂಪನಾದ ಪತಿಯು ದೊರಕಿರುವನೆಂದು ನುಡಿದನು. (42–43) ಅನಂತರ ಅಲ್ಲಿಂದ ಹೊರಬಂದು ಧನಂಜಯನು ಭೂಮಿಗೆ ಹೋಗಿ ಆ ಕನ್ಯೆಯು ರಾಜನೊಂದಿಗಿದ್ದ ಲತಾಮಂಡಪಕ್ಕೆ ಹೋದನು. ಆದರೆ ಅಲ್ಲಿ ರಾಜನು ಕಾಣಲಿಲ್ಲ. ಹಾಗೆಯೇ ಅವನ ಸೈನ್ಯವನ್ನು ಹುಡಿಕಿದನು. ಅದೂ ಸಹ ಅಲ್ಲಿರಲಿಲ್ಲ. ಇದನ್ನು ನೋಡಿದ ಧನಂಜಯನು ಇದೆಲ್ಲವೂ ಸಹ ತನ್ನ ಮಗಳ ಭ್ರಮೆಯೆಂದೆಣಿಸಿದನು. ಅದೇ ಹೊತ್ತಿಗೆ ಸೂರ್ಯನು ಪಶ್ಚಿಮದೆಡೆಗೆ ವಾಲುತ್ತಿದ್ದನು. (44–45) ಹವಳದಂತೆ ಕೆಂಪಾದ ಸೂರ್ಯನು ಮುತ್ತಿನಂತಿರುವ ನೀರನ್ನು ಹೊಂದಿ ಬಹುವಾಗಿ ಶೋಭಿಸಿದನು. ಅನಂತರ ಸೂರ್ಯನು ಅಸ್ತಂಗತನಾಗಿ, ಐಹಿಕ ವಿಷಯಗಳಲ್ಲಿ ಆಸಕ್ತನಾದವನ ಮನಸ್ಸು ಅವಿದ್ಯೆಯಿಂದ ಆವೃತವಾಗುವಂತೆ, ಮೆಲ್ಲನೆ ಕತ್ತಲೆಯು ಇಡೀ ಜಗತ್ತನ್ನು ವ್ಯಾಪಿಸಿತು. ಅಗ ಧನಂಜಯನು ತನ್ನ ಸೈನ್ಯದೊಂದಿಗೆ ಪಾತಾಲಕ್ಕೆ ಹಿಂದಿರುಗಿದನು.(46–47)

ಹೃದಯಂ ವಿಷಯಾಸಕ್ತಮವಿದ್ಯಾತಿಮಿರಂ ತಥಾ ।
ಸ ಚ ಸೈನ್ಯಾನ್ವಿತಸ್ತಾವತ್ ಪ್ರಯಯೌ ನಿಜಮಂದಿರಮ್ ॥47॥

ಸ್ಮಾರಂಸ್ಮಾರಂ ವಿಶಾಲಾಕ್ಷೀ ಸುರತಶ್ರಮವಿಹ್ವಲಾಮ್ ।
ಆಪನ್ನಸತ್ತ್ವಾ ದದೃಶೇ ನಾಗರಾಜಸ್ಯ ಕನ್ಯಕಾಃ ।
ಸರ್ವಲಕ್ಷಣಸಂಪನ್ನಾ ಪಿತುರ್ವಿದಧತೀ ಮುದಮ್ ॥48॥

ತಾಮಥಾಲೋಕ್ಯ ದೈವಜ್ಞಾ ಇದಮೂಚುರ್ವಚಸ್ತದಾ ।
'ಅಸ್ಯಾಮುತ್ಪತ್ಸ್ಯತೇ ಪುತ್ರಶ್ಚಕ್ರವರ್ತೀ ಮಹಾದ್ಯುತಿಃ ॥49॥

ಪೃಥಿವೀಂ ಸಾಗರೋಪೇತಾಂ ಸಶೈಲವನಕಾನನಾಮ್ ।
ಪಾಲಯಿಷ್ಯತಿ ಧರ್ಮೇಣ ಮಹೇಂದ್ರಸದೃಶಃ ಪ್ರಭುಃ' ॥50॥

ಅಥ ಸಾ ದಶಮೇ ಮಾಸಿ ಪುತ್ರಂ ಪ್ರಾಸೂತ ಸುಂದರಮ್ ।
ಸರ್ವಲಕ್ಷಣಸಂಪನ್ನಂ ಸಾರ್ವಭೌಮಪದೋಚಿತಮ್ ॥51॥

ಇತಿ ಶ್ರೀಬ್ರಹ್ಮಾಂಡಪುರಾಣೇ ಭೃಗುನಾರದಸಂವಾದೇ ತೀರ್ಥಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಚೋಲರಾಜಸುತೋತ್ಪತ್ತಿವರ್ಣನಂ ನಾಮ ಸಪ್ತಮೋಽಧ್ಯಾಯಃ ॥

* * *

*ಸಾರ್ವಭೌಮಲಕ್ಷಣೋಪೇತ ಸುತೋತ್ಪತ್ತಿ*

ಪಾತಾಲ ಲೋಕದಲ್ಲಿ ಸುರತ ಶ್ರಮದಿಂದ ವಿಹ್ವಲಳಾದ, ವಿಶಾಲಾಕ್ಷಿಯಾದ, ಗರ್ಭಿಣಿಯಾದ ನಾಗಕನ್ಯೆಯನ್ನು ಪಾತಾಲದಲ್ಲಿಯ ನಾಗಸ್ತ್ರೀಯರು ನೋಡಿದರು. ಇದನ್ನು ರಾಜನಿಗೆ ತಿಳಿಸಿದರು. ನಾಗಕುವರಿಯು ಎಲ್ಲ ಉತ್ತಮ ಲಕ್ಷಣಗಳಿಂದ ಕೂಡಿದ್ದು ತಂದೆಗೆ ಅತ್ಯಂತ ಸುಖವನ್ನುಂಟು ಮಾಡುತ್ತಿದ್ದಳು. (48–49) ಆಕೆಯನ್ನು ನೋಡಿದ ಜ್ಯೋತಿಷ್ಕರು "ಈಕೆಯಲ್ಲಿ ಮುಂದೆ ಒಬ್ಬ ಮಗನು ಜನಿಸುವನು. ಅವನು ಮಹಾತೇಜಸ್ವಿಯಾಗಿದ್ದು ಚಕ್ರವರ್ತಿಯೆಂದೆನಿಸಿ ಸಾಗರಗಳಿಂದ ಸಮೇತವಾದ, ಗಿರಿ,ಪರ್ವತ, ವನಪ್ರದೇಶಗಳಿಂದ ಸಹಿತವಾದ ಸಮಗ್ರಭೂಮಂಡಲವನ್ನು ಇಂದ್ರನಂತೆ ಪಾಲಿಸುವನು.' ಎಂದು ನುಡಿದರು. (49–50)ಆನಂತರ ಹತ್ತನೆಯ ತಿಂಗಳಿನಲ್ಲಿ ನಾಗಕನ್ಯೆಯು ಒಂದು ಸುಂದರ ಸಾರ್ವಭೌಮನಾಗಲು ಹೊಂದಿರಬೇಕಾದ ಎಲ್ಲ ಲಕ್ಷಣಗಳನ್ನು ಹೊಂದಿದ್ದ ಗಂಡು ಶಿಶುವನ್ನು ಪ್ರಸವಿಸಿದಳು.

ಇಲ್ಲಿಗೆ ಬ್ರಹ್ಮಾಂಡಪುರಾಣದ ಭೃಗುನಾರದಸಂವಾದದಲ್ಲಿಯ ತೀರ್ಥಖಂಡದ ವೇಂಕಟೇಶ ಮಾಹಾತ್ಮ್ಯೆಯಲ್ಲಿ ಚೋಲರಾಜಸುತೋತ್ಪತ್ತಿವರ್ಣನವೆಂಬ ಏಳನೆಯ ಅಧ್ಯಾಯವು ಸಮಾಪ್ತವಾಯಿತು.

ಬ್ರಹ್ಮಾಂಡಪುರಾಣಾಂತರ್ಗತ ವೇಂಕಟೇಶಮಾಹಾತ್ಮ್ಯೇ

## ಅಥ ಅಷ್ಟಮೋಽಧ್ಯಾಯಃ

ನಾರದ ಉವಾಚ–

**ಪುತ್ರಸ್ಯ ಮುಖಲಾವಣ್ಯೇ ಪುತ್ರಿಕಾಯಾ ಧನಂಜಯಃ ।**
**ತೃಪ್ತಿಂ ನ ವಿಂದತಿ ಸ್ಮಾಯಂ ಪ್ರೀತ್ಯುತ್ಫುಲ್ಲೇನ ಚಕ್ಷುಷಾ ॥1॥**

**ವವೃಧೇ ನಾಗರಾಜಸ್ಯ ಪರಿತೋಷೇಣ ವೈ ಶಿಶುಃ ।**
**ಚಂದ್ರಮಾ ಇವ ಕೃಷ್ಣಾನ್ಯಪಕ್ಷೇ ಸತಿ ದಿನೇ ದಿನೇ ॥2॥**

**ಕಸ್ಯಚಿತ್ತ್ವಥ ಕಾಲಸ್ಯ ಪೋಷಿತೋ ಮಾತುರಂತಿಕೇ ।**
**ಪ್ರಪ್ರಚ್ಛ ಮಾತರಂ ಬಾಲಃ ಪಿತರಂ ದರ್ಶಯೇತಿ ಹ ॥3॥**

**ತಚ್ಛ್ರುತ್ವಾ ಪೂರ್ವವೃತ್ತಾಂತಂ ಸಾ ಮಾತಾಽಸ್ಮೈ ನ್ಯವೇದಯತ್ ।**
**ತದಾಕರ್ಣ್ಯ ಚ ಬಾಲೋಽಯಂ ಪುನಃ ಪಪ್ರಚ್ಛ ಮಾತರಮ್ ॥4॥**

## ಎಂಟನೆಯ ಅಧ್ಯಾಯ

*ಪಾತಾಲಲೋಕದಿಂದ ತಂದೆಯೆಡೆಗೆ ಚಕ್ರವರ್ತಿಯ ಗಮನ*

ಸರ್ಪರಾಜನಾದ ಧನಂಜಯನು ತನ್ನ ಮಗಳ ಮಗನ ಮುಖವನ್ನು ಪ್ರೀತಿಯಿಂದ ಕೂಡಿದ ಚಕ್ಷುಸ್ಸಿನಿಂದ ನೋಡುತ್ತಾ ಅತ್ಯಂತ ಸಂತೋಷವನ್ನು ಅನುಭವಿಸುತ್ತಿದ್ದನೇ ಹೊರತು ಎಂದಿಗೂ ಕೂಸನ್ನು ನೋಡುವದರಿಂದ ತೃಪ್ತಿ (ಅಲಂ ಬುದ್ಧಿ–ಇನ್ನು ಸಾಕು ಎಂಬ ಬುದ್ಧಿಯನ್ನು)ಯನ್ನು ಹೊಂದಲಿಲ್ಲ. ಆ ಶಿಶುವೂ ಸಹ ನಾಗರಾಜನ ಸಂತೋಷದೊಂದಿಗೆ ವೃದ್ಧಿಯನ್ನು ಹೊಂದಿತು ಶುಕ್ಲಪಕ್ಷದ ಚಂದ್ರನಂತೆ. (1–2) ಹೀಗೆ ಅನೇಕ ದಿನಗಳ ಕಾಲ ತಾಯಿಯ ಬಳಿಯಿದ್ದು ಪೋಷಣೆಯನ್ನು ಹೊಂದಿದ ಬಾಲಕನು ತನ್ನ ತಾಯಿಗೆ ತಂದೆಯನ್ನು ತೋರಿಸುವಂತೆ ಕೇಳಿದನು. (3) ಆಗ ನಾಗಕನ್ಯೆಯು ತನ್ನ ಮತ್ತು ಚೋಲರಾಜನ ಪೂರ್ವವೃತ್ತಾಂತವೆಲ್ಲವನ್ನೂ ಮಗನಿಗೆ ತಿಳಿಸಿದಳು. ಇದನ್ನಾಲಿಸಿದ ಬಾಲಕನು ತಾಯಿಯನ್ನು ಕುರಿತು 'ನನಗೆ ಭೂಮಿಯಲ್ಲಿ ವಾಸಮಾಡಿರುವ ನನ್ನ ತಂದೆಯನ್ನು ನೋಡಲೇ ಬೇಕೆಂಬ ತೀವ್ರವಾದ ಅಪೇಕ್ಷೆಯು ಮನಸ್ಸಿನಲ್ಲಿರುವದು. ಆದ್ದರಿಂದ ಶೀಘ್ರವಾಗಿ ಭೂಮಂಡಲಕ್ಕೆ ಹೋಗುವ ಮಾರ್ಗವನ್ನು ನನಗೆ

ಪಿತರಂ ವೀಕ್ಷಿತುಂ ಶೀಘ್ರಂ ಕ್ಷೋಣೀತಲನಿವಾಸಿನಮ್ ।
ವರ್ತತೇ ಹ್ಯಭಿಲಾಷೋ ಮೇ ಮಹಾನ್ಮನಸಿ ಸಂಪ್ರತಿ ॥5॥

ಭೂಲೋಕಗಮನೇ ಯೋಗ್ಯಂ ಮಾರ್ಗಮಾವೇದಯಸ್ವ ಮೇ।
ಯೇನಾಹಂ ಪಿತುರುತ್ಸಂಗಂ ಗಮಿಷ್ಯಾಮಿ ಮುದಾನ್ವಿತಃ ॥6॥

ಇತಿ ತಸ್ಯ ವಚಃ ಶ್ರುತ್ವಾ ಪ್ರಹೃಷ್ಟಾ ನಾಗಕನ್ಯಕಾ ।
ಭೂಲೋಕಗಮನೇ ಯೋಗ್ಯಂ ಬಿಲಂ ಚಾದರ್ಶಯತ್ತದಾ ॥7॥

ಸೋಽಪಿ ತೇನೈವ ಮಾರ್ಗೇಣ ಪ್ರಾಪ್ಯಾಶು ಧರಣೀತಲಮ್ ।
ಚೋಲರಾಜಮುಪಾಗಮ್ಯ ವವಂದೇ ಪಾದಯೋಸ್ತದಾ ॥8॥

ಪಪ್ರಚ್ಛ ಪ್ರಣತಂ ಭೂಮೌ ಕಸ್ತ್ವಮಿತ್ಯವನೀಪತಿಃ ।
ಪೃಷ್ಟಃ ಪ್ರಾಹ ಸ ಬಾಲೋಽಯಂ ವೃತ್ತಾಂತಮಖಿಲಂ ಮುನೇ ॥9॥

ವೃತ್ತಾಂತಮಖಿಲಂ ರಾಜಾ ಶ್ರುತ್ವಾ ತು ತದುದೀರಿತಮ್ ।
ಗ್ರಹಣೇ ಬಾಲಕಸ್ಯಾಸ್ಯ ಸಂಶಯಂ ಪರಮಂ ಯಯೌ ॥10॥

ಸಂಶಯಾವಿಷ್ಟಚಿತ್ತೋಽಯಂ ಗೋಪಮಾಸ್ಥಾಯ ಭೂಪತಿಃ ।
ಮುಹೂರ್ತಮಿವ ಭೂಯೋಽಪಿ ತಮವಲೋಕ್ಯಂ ಸ್ಥಿತಃ ॥11॥

ತಿಳಿಸು. ಯಾವ ಮಾರ್ಗದಲ್ಲಿ ಕ್ರಮಿಸಿ ಹೋದಲ್ಲಿ ನನ್ನ ತಂದೆಯ ತೊಡೆಯನ್ನು ಸೇರಿ ಸಂತೋಷವನ್ನನು ಭವಿಸುವೆನೋ ಆ ಉತ್ತಮ ಮಾರ್ಗವನ್ನು ತಿಳಿಸು' ಎಂದು ಕೇಳಿಕೊಂಡನು. (4-6) ಇದನ್ನು ಕೇಳಿದ ನಾಗಕನ್ಯೆಯು ಅತ್ಯಂತ ಹೃಷ್ಟಳಾಗಿ ಭೂಮಿಗೆ ತೆರಳಲು ಯೋಗವಾದ ಬಿಲವೊಂದನ್ನು ತೋರಿಸಿದಳು. ಅವನೂ ಸಹ ಅದೇ ಮಾರ್ಗದಿಂದ ಭೂಮಿಗೆ ಬಂದು ಚೋಲರಾಜನ ಬಳಿ ಬಂದು ಅವನ ಪಾದಗಳಿಗೆ ನಮಸ್ಕಾರವನ್ನು ಮಾಡಿದನು. (7-8)

*ಬಾಲಕನನ್ನು ಸ್ವೀಕರಿಸಲು ಚೋಲರಾಜನ ಸಂದೇಹ*

ಆಗ ಸಂತುಷ್ಟನಾದ ಚೋಲರಾಜನು 'ನೀನು ಯಾರು? ಎಂದು ಪ್ರಶ್ನೆಯನ್ನು ಮಾಡಿದನು. ಆಗ ಬಾಲಕನು ತನ್ನ ತಾಯಿಯು ತಿಳಿಸಿದ್ದ ವೃತ್ತಾಂತವೆಲ್ಲವನ್ನೂ ತಿಳಿಸಿ ನಾನು ನಿನ್ನ ಮಗನೆಂದು ಹೇಳಿದನು. (9) ಆದರೆ ರಾಜನು ಬಾಲಕನು ಹೇಳಿದ ವೃತ್ತಾಂತವೆಲ್ಲವನ್ನೂ ಕೇಳಿ ಇವನ ಬಗ್ಗೆ ಸಂಶಯವನ್ನು ಹೊಂದಿ ಅವನನ್ನು ಸ್ವೀಕರಿಸುವ ವಿಷಯದಲ್ಲಿ ನಿಶ್ಚಯವಾದ ಬುದ್ಧಿಯನ್ನು ಹೊಂದದೇ ಅನುಮಾನಿಸಿದನು. (10) ಆದರೆ ತನ್ನ ಮನಸ್ಸಿನಲ್ಲಿರುವ ಸಂಶಯವನ್ನು

ತತಶ್ಚಾಕಾಶಗಾ ವಾಣೀ ನೃಪಂ ಸಂಶಯಿತಂ ಮುಹುಃ ।
ಆಶ್ವಾಸಯಂತೀ ವಚನೈರುಚ್ಚಚಾರ ನ ವೀಕ್ಷಿತಾ ॥12॥

'ಮಾ ವಿಚಾರಯ ರಾಜೇಂದ್ರ ಪುತ್ರೋಽಯಂ ತೇ ನ ಸಂಶಯಃ ।
ಚಕ್ರವರ್ತೀ ಮಹಾರಾಜೋ ಭವಿಷ್ಯತ್ಯಸಮೋ ಭುವಿ ॥13॥

ಅತೀವವಿಷ್ಣುಭಕ್ತಶ್ಚ ಭವಿಷ್ಯತಿ ಮಹಾಮತಿಃ ।
ಶೇಷಾದ್ರೌ ಚ ಸ್ವಯಂ ವ್ಯಕ್ತಂ ವಿಷ್ಣುಮಭ್ಯರ್ಚಯಿಷ್ಯತಿ ॥14॥

ಪ್ರೀತಶ್ಚಾಪಿ ಮಹಾದೇವೋ ಹ್ಯರ್ಚಾಭಾವಮತಿಕ್ರಮನ್ ।
ಸಲ್ಲಾಪಂ ತೇನ ಸುಚಿರಂ ಕರಿಷ್ಯತಿ ದಿನೇ ದಿನೇ ॥15॥

ಅಭಿಷೇಚಯ ರಾಜೇಂದ್ರ ಪುತ್ರಂ ರಾಜ್ಯೇಽವಿಚಾರತಃ ।
ಇತಿ ರಾಜಾ ಸಮಾಕರ್ಣ್ಯ ನಾನೃತಂ ಸುರಭಾಷಿತಮ್ ॥16॥

ಶ್ರದ್ದಧೇ ಪುತ್ರಮಿತ್ಯೇನಂ ಜಯಂತಂ ವಾಸವೋ ಯಥಾ ।
ತತೋ ರಾಜಾ ಸಮಾಗಮ್ಯ ಸಂವೃತ್ತೋ ಯತ್ರ ಸಂಗಮಃ ॥17॥

ಹೊರಗೆಡಹದೇ ಮುಚ್ಚಿಟ್ಟು ಆ ಬಾಲಕನನ್ನು ಸ್ವೀಕರಿಸದೇ ಅವನನ್ನು ಒಂದು ಮುಹೂರ್ತಕಾಲ ನೋಡುತ್ತಾ ನಿಂತುಬಿಟ್ಟನು. (11) ಹೀಗೆ ಸಂಶಯಗ್ರಸ್ತನಾದ ರಾಜನನ್ನು ಆಶ್ವಸನೆಗೊಳಿಸಲು ಅಶರೀರವಾಣಿಯೊಂದ ಆಕಾಶದಿಂದ ಹೀಗೆ ಕೇಳಿಸಿತು. (12)

*ಅಶರೀರವಾಣಿ*

'ಹೇ ರಾಜನೇ! ನೀನು ವಿಚಾರಮಾಡಬೇಡ. ಈ ಬಾಲಕನು ನಿನ್ನ ಮಗನೇ ಆಗಿರುವನು. ಇದರಲ್ಲಿ ಯಾವ ಸಂದೇಹವೂ ಸಹ ಬೇಡ. ಇವನು ಮುಂದೆ ಭೂಮಿಯಲ್ಲಿ ಚಕ್ರವರ್ತಿಯಾಗುವನು. (13) ಇವನು ಅತ್ಯಂತ ವಿಷ್ಣುಭಕ್ತನಾಗಿದ್ದು ಶೇಷಾಚಲದಲ್ಲಿರುವ ಸ್ವಯಂವ್ಯಕ್ತನಾದ ಶ್ರೀನಿವಾಸನನ್ನು ನಿತ್ಯದಲ್ಲಿಯೂ ಸಹ ಅರ್ಚಿಸುವನು. ಆ ಶ್ರೀನಿವಾಸನೂ ಸಹ ಇವನ ಪೂಜೆಯಿಂದ ಸಂಪ್ರೀತನಾಗಿ ಬಹುಕಾಲ ಪರ್ಯಂತರವಾಗಿ ಇವನೊಂದಿಗೆ ತಾನು ಪ್ರತ್ಯಕ್ಷವಾಗಿ ಬಂದು ನಿಂತು ತನ್ನ ಮೂರ್ತಿಯಂತಿರುವ ಸ್ವರೂಪವನ್ನು ಬಿಟ್ಟು ಇವನೊಂದಿಗೆ ದಿನವೂ ಮಾತನಾಡುವನು. ಆದ್ದರಿಂದ, ಹೇ ರಾಜನೇ! ಇವನನ್ನು ನಿನ್ನ ಪಟ್ಟದಲ್ಲಿ ಕುಳ್ಳರಿಸಿ ಅಭಿಷೇಕವನ್ನು ಮಾಡು. ಇದರಲ್ಲಿ ಯಾವದೇ ವಿಚಾರವು ಬೇಡ' ಹೀಗೆ ಆಕಾಶವಾಣಿಯನ್ನು ಕೇಳಿದ ರಾಜನು (13–16) ಆಕಾಶದಲ್ಲಿಯ ದೇವತೆಗಳ ಮಾತು ಎಂದಿಗೂ ಸುಳ್ಳಾಗವುದಿಲ್ಲವೆಂದು ವಿಶ್ವಾಸವನ್ನು ಮಾಡಿ ಇಂದ್ರನು ಜಯಂತನನ್ನು ಸ್ವೀಕರಿಸಿದಂತೆ ಆ ಬಾಲಕನನ್ನು ಸ್ವೀಕರಿಸಿದನು.

ತತ್ರಾಭ್ಯಷೇಚಯಚ್ಛೈನಮಾಧಿರಾಜ್ಯೇ ಸಮಾಗತಃ ।
ತತಃ ಸ ಚಕ್ರವರ್ತೀತಿ ಪ್ರಥಿತೋ ಭುವಿ ಪಾರ್ಥಿವಃ ॥18॥

ಶಶಾಸ ಪೃಥಿವೀಂ ಕೃತ್ಸ್ನಾಂ ಸಮುದ್ರವಸನಾನ್ವಿತಾಮ್ ।
ತತಃ ಕದಾಚಿದ್ಗೋಪಾಲಸ್ತದಾಜ್ಞಾಪರಿಪಾಲಕಃ ॥19॥

ಸಮಾಗಮ್ಯ ಮಹೀಪಾಲಮಿದಂ ವಚನಮಬ್ರುವನ್ ।

ಗೋಪಾಲಾ ಊಚುಃ-

'ಶೇಷಾಚಲೇ ವಯಂ ರಾಜನ್ ವಿಹರಾಮೋ ಗವಾಂ ವ್ರಜಾತ್ ॥20॥

ಕ್ಷೀರಂ ನಿದೇಶಾದ್ದೇವಸ್ಯ ಭಾಂಡೇಷು ನಿಹಿತಂ ತದಾ ।
ತದಾನಯನಕಾಲೇ ವೈ ದೃಶ್ಯತೇ ಮಹದದ್ಭುತಮ್ ॥21॥

ವಿವೃದ್ಧಂ ತತ್ರ ವಲ್ಮೀಕಮೇಕಂ ವಸತಿ ಭೂಧರೇ ।
ಆಗಚ್ಛಾಮೋ ಹಿ ಮಾರ್ಗೇಣ ವಯಂ ತೇನ ಮಹೀಮಪೇ ॥22॥

ಆದಾಯ ಭಾಂಡಂ ಕ್ಷೀರಾಣಾಂ ಸರ್ವಂ ತತ್ರ ಹಿ ಭಜ್ಯತೇ ।
ಸಾವಧಾನಾ ಅಪಿ ವಯಂ ನ ಪಶ್ಯಾಮೋಽತ್ರ ಕಾರಣಮ್ ॥23॥

### *ಚಕ್ರವರ್ತಿಯ ಪಟ್ಟಾಭಿಷೇಕ*

ಅನಂತರ ರಾಜನು ತನಗೆ ನಾಗಕನ್ಯೆಯೊಂದಿಗೆ ಎಲ್ಲಿ ಸಮಾಗಮ ವಾಗಿದ್ದಿತೋ ಅಲ್ಲಿಗೆ ತನ್ನ ಮಗನನ್ನು ಕರೆದುಕೊಂಡು ಬಂದು ಅಲ್ಲಿಯೇ ಅವನಿಗೆ ಪಟ್ಟಾಭಿಷೇಕ ಮಾಡಿದನು. ಅನಂತರ ಅವನು ಚಕ್ರವರ್ತಿಯೆಂದು ಭೂಮಿಯಲ್ಲಿ ಪ್ರಸಿದ್ಧನಾಗಿ ಅತ್ಯಂತ ಧರ್ಮದಿಂದ ಸಮಗ್ರವಾದ ಭೂಮಂಡಲವನ್ನಾಳಿದನು. (17–18)

### *ಗೋಪಾಲಕರಿಂದ ನಿವೇದಿತ ವಲ್ಮೀಕ ವೃತ್ತಾಂತ*

ಹೀಗೆ ಕಾಲವು ಜರುಗುತ್ತಿರಲು ಒಂದು ಬಾರಿ ಅವನ ಅಧೀನದಲ್ಲಿದ್ದ ಗೋಪಾಲಕನೋರ್ವನು ಬಂದು ರಾಜನಿಗೆ 'ಹೇ ರಾಜನೇ! ನಾವು ಶೇಷಾಚಲದಲ್ಲಿ ಗೋವುಗಳನ್ನು ಮೇಯಿಸಿ ಸಂಚರಿಸುವ ಗೋಪಾಲಕರಾಗಿದ್ದೇವೆ. ನಿನ್ನ ಆಜ್ಞೆಯಂತೆ ಗೋವುಗಳ ಹಾಲನ್ನು ಹಿಂಡಿ ಪಾತ್ರೆಗಳಲ್ಲಿ ತರುವಾಗ ಒಂದು ಆಶ್ಚರ್ಯವು ದಿನವೂ ಸಂಭವಿಸುತ್ತಿರುವದು. ನಾವು ಬರುವ ದಾರಿಯಲ್ಲಿಯೇ ಪರ್ವತದಲ್ಲಿ ಹುತ್ತವೊಂದು ಬೆಳೆದಿರುವದು. (19–21) ಹೇ ರಾಜನೇ! ನಾವು ಹಾಲಿನಿಂದ ತುಂಬಿದ ಪಾತ್ರೆಗಳನ್ನು ಆ ಮರ್ಗದಿಂದಲೇ ತರುತ್ತಿರುವಾಗ ಯಾವ ಕಾರಣವೂ ಸಹ ಇಲ್ಲದೇ ಹಾಲಿನ

ವಿಚಾರಯ ಮಹೀಪಾಲ ಕಿಮೇತದಿತಿ ಸಂಪ್ರತಿ ।
ರಾಜಾ ದೈವಿಕಮೇವೇತಿ ಸ ನಿಶ್ಚಿತ್ಯ ಸುವಿಸ್ಮಿತಃ ॥25॥

ಸಾಯಂ ಧ್ಯಾಯನ್ ಹೃಷೀಕೇಶಂ ತದ್ಗತೇನಾನ್ತರಾತ್ಮನಾ ।
ಶುಚಿರ್ಭೂತಶ್ಚ ಸುಷ್ವಾಪ ಯತವಾಕ್ಕಾಯಮಾನಸಃ ॥26॥

ದದರ್ಶ ಸ್ವಪ್ನಮೇಕಂ ಚ ನೃಪಸ್ತಸ್ಮಿನ್ನಿಶಾಂತರೇ ।
ಪ್ರಾತರುತ್ಥಾಯ ವಿಧಿವತ್ಸಂಧ್ಯಾಮನ್ವಾಸ್ಯ ಭೂಪತಿಃ ॥27॥

ಆಹೂಯ ಮಂತ್ರಿಪ್ರವರಾನಿದಂ ವಚನಮಬ್ರವೀತ್ ।

ರಾಜೋವಾಚ–

ಮಂತ್ರಿಣಃ ಶೃಣುತಾಸ್ಯಾಂ ವೈ ನಿಶಾಯಾಂ ಸ್ವಪ್ನಮದ್ಭುತಮ್ ॥28॥

ಅದೃಷ್ಟಪೂರ್ವಂ ಚಾನ್ಯೇನ ಗುಹ್ಯಾದ್ಗುಹ್ಯತರಂ ಮಹತ್ ।
ಕಾಲಮೇಘನಿಭಃ ಕಶ್ಚಿದತಿಸುಂದರಮೂರ್ತಿಮಾನ್ ॥29॥

ಪಾತ್ರೆಯು ತನ್ನಷ್ಟಕ್ಕೆ ತಾನೆ ಒಡೆದು ಹೋಗುತ್ತದೆ. ನಾವು ಎಷ್ಟು ಸಾವಧಾನವಾಗಿ ಬಂದರೂ, ಲಕ್ಷ್ಯವನ್ನು ವಹಿಸಿದರೂ ಸಹ ಹಾಲಿನ ಪಾತ್ರೆಯನ್ನು ಒಡೆಯದಂತೆ ತಡೆಯಲು ಆಗುತ್ತಿಲ್ಲ. ಆದರೆ ಇದಕ್ಕೆ ಕಾರಣವೇನೆಂದು ನಮಗೆ ತಿಳಿಯುತ್ತಿಲ್ಲ. ಆದ್ದರಿಂದ ಹೇ ರಾಜನೇ! ಇದಕ್ಕೆ ಕಾರಣವೇನೆಂದು ನೀನೇ ವಿಚಾರಿಸು' ಎಂದು ನುಡಿದನು. (22–25) ರಾಜನು ಇದೆಲ್ಲವೂ ಸಹ ದೈವ ವ್ಯಾಪಾರವೆಂದು ನಿಶ್ಚಯಿಸಿ ಭಗವಂತನನ್ನೇ ಧ್ಯಾನಮಾಡುತ್ತಾ ಇಂದ್ರಿಯಗಳಿಗೆ ಅಧಿಪತಿಯಾದ ಹೃಷೀಕೇಶನಲ್ಲಿಯೇ ಮನಸ್ಸನ್ನಿಟ್ಟು ಶುಚಿಯಾಗಿದ್ದು ರಾತ್ರಿಯಾಗುತ್ತಿರಲು ಭಗವಂತನನ್ನೇ ನಮಿಸಿ ಧ್ಯಾನಿಸುತ್ತಾ ಮಲಗಿದನು.

*ರಾಜದೃಷ್ಟಸ್ವಪ್ನ*

ಆ ರಾತ್ರಿಯಲ್ಲಿಯೇ ನಿದ್ರೆಯಲ್ಲಿ ರಾಜನು ಸ್ವಪ್ನವನ್ನನುಭವಿಸಿದನು. ಬೆಳಗ್ಗೆ ಎದ್ದೊಡನೆಯೆ ರಾಜನು ವಿಧಿಗನುಸಾರವಾಗಿ ಸಂಧ್ಯಾದಿ ಕರ್ಮಗಳನ್ನು ಆಚರಿಸಿ ತನ್ನ ಮಂತ್ರಿಗಳನ್ನು ಕರೆದು ಹೀಗೆ ನುಡಿದನು.(28) 'ಹೇ ಮಂತ್ರಿಗಳೇ! ನನ್ನ ಮಾತುಗಳನ್ನು ವಿಶ್ವಾಸವಿಟ್ಟು ಕೇಳಿರಿ. ಇಂದಿನ ರಾತ್ರಿಯಲ್ಲಿಯೇ ನಾನು ಸ್ವಪ್ನವೊಂದನ್ನು ನೋಡಿದೆನು. ಅದ್ಭುತವಾದ ಈ ಸ್ವಪ್ನವು ಯಾರಿಂದಲೂ ಸಹ ನೋಡಲು ಸಾಧ್ಯವಿಲ್ಲ ಮತ್ತು ಅತ್ಯಂತ ಗೋಪ್ಯವಾಗಿರುವದು. ನಾನು ಕನಸಿನಲ್ಲಿ ಕಪ್ಪಾದ ಮೇಘದ ಮೈಕಾಂತಿಯಿಂದ ಕಂಗೊಳಿಸುತ್ತಿದ್ದ ಪುರುಷನೊಬ್ಬನನ್ನು ನೋಡಿದೆನು.

ಅದ್ಭುತಃ ಪುರುಷೋ ದೃಷ್ಟಃ ಪುಂಡರೀಕಾಯತೇಕ್ಷಣಃ ।
ಅಪೃಚ್ಛಂ ಪುರುಷಂ ಚಾಹಂ 'ಕುತ್ರತ್ಯಃ ಕೋ ಭವಾನ್' ಇತಿ ॥30॥

ಕಿಮರ್ಥಂ ಚಾಗತೋಽಸ್ಯದ್ಯ ತವ ಕಿಂ ಕರವಾಣ್ಯಹಮ್ ।
ಇತಿ ಪೃಷ್ಟೋ ಮಯಾ ಪ್ರಾಹ ದೇವೇನ ಗಿರಿವಾಸಿನಾ ॥31॥

ಪ್ರೇಷಿತೋಽಹಂ ನರವ್ಯಾಘ್ರ ಶ್ರೀನಿವಾಸೇನ ಧೀಮತಾ ।
ಅಹಂ ವಸಾಮಿ ಶೇಷಾದ್ರೇಃ ಸದಾ ತಸ್ಯಾಂತಿಕೇ ಮುದಾ ॥32॥

ಶ್ರೀವೇಂಕಟಗಿರೀಶಸ್ಯ ಪ್ರಭಾವಂ ತು ಮಹಾದ್ಭುತಮ್ ।
ನಿವೇದಯೇತಿ ದೇವೇನ ಪ್ರೇಷಿತೋಽಸ್ಮಿ ತವಾಂತಿಕಮ್ ॥33॥

ಶಿಲೋಚ್ಚಯೇಽತ್ರ ವೈ ಶಂಖಚಕ್ರಾವನತಹಸ್ತಕಃ ।
ಶ್ರೀಭೂಮಿಸಹಿತೋ ನಿತ್ಯಂ ವಿಹರನ್ ರಾಜತೇ ತರಾಮ್ ॥34॥

ಅದ್ರೇರ್ದಕ್ಷಿಣತಸ್ತಸ್ಯ ರಾಜಧಾನೀ ವಿರಾಜತೇ ।
ಗಜವಾಜಿರಥೋಪೇತಾ ಸರ್ವಾದ್ಭುತಮಯೀ ಸದಾ ॥35॥

ಅವನು ಅತ್ಯಂತ ಸುಂದರನಾಗಿದ್ದು ಪುಂಡರೀಕದಂತೆ ಸುಂದರ ನೇತ್ರಗಳನ್ನು ಹೊಂದಿದ್ದನು. ನಾನು ಆ ಪುರುಷನ ಬಳಿ ತೆರಳಿ 'ನೀನು ಯಾರು? ನೀನೆಲ್ಲಿಯವನು? ನೀನು ಇಲ್ಲಿಗೇಕೆ ಬಂದಿರುವೆ? ನಾನು ನಿನಗೆ ಏನು ಮಾಡಲಿ? ಎಂಬುದಾಗಿ ಪ್ರಶ್ನಿಸಿದೆನು. ನನ್ನಿಂದ ಹೀಗೆ ಪ್ರಶ್ನಿಸಲ್ಪಟ್ಟ ಆ ಪುರುಷನು (29–30) 'ಹೇ ರಾಜನೇ! ನಾನು ಶೇಷಾಚಲ ನಿವಾಸಿಯಾದ ಶ್ರೀನಿವಾಸನಿಂದ ಕಳುಹಿಸಲ್ಪಟ್ಟಿದ್ದೇನೆ. ನಾನು ಯಾವಾಗಲೂ ಆ ಪರಮಾತ್ಮನಾದ ಶ್ರೀನಿವಾಸನ ಬಳಿಯೇ ಸಂತೋಷ ದಿಂದ ವಾಸವಾಗಿರುವೆನು. (31–32) ಶ್ರೀವೇಂಕಟಗಿರಿಗೆ ಅಧಿಪತಿಯಾದ ಪರಮಾತ್ಮನಾದ ಶ್ರೀನಿವಾಸನ ಮಾಹಾತ್ಮೆಯನ್ನು ನಿನಗೆ ತಿಳಿಸಲು ಪರಮಾತ್ಮನಿಂದ ಆಜ್ಞಪ್ತನಾಗಿ ನಿನ್ನ ಬಳಿಗೆ ಬಂದಿರುವೆನು. ಈ ಪರ್ವತದಲ್ಲಿ ಶಂಖ ಚಕ್ರ ಗಳನ್ನು ಕೈಯ್ಯಲ್ಲಿ ಹಿಡಿದ, ಶ್ರೀಭೂಮಿಸಹಿತನಾದ ಶ್ರೀನಿವಾಸನು ನಿತ್ಯದಲ್ಲಿಯೂ ಲಕ್ಷ್ಮೀ ಮತ್ತು ಭೂದೇವಿಯರಿಂದ ಕೂಡಿಕೊಂಡು ವಿಹಾರವನ್ನು ಮಾಡುತ್ತಾ ವಿರಾಜಮಾನನಾಗಿರುವನು. (33–34) ಗಿರಿಯ ದಕ್ಷಿಣದಲ್ಲಿ ಜಗತ್ಪತಿಯಾದ ಪರಮಾತ್ಮನ, ಆನೆ, ಕುದುರೆ, ರಥಗಳಿಂದ ಕೂಡಿದ, ಯಾವಾಗಲೂ ಲೋಕವಿಲಕ್ಷಣವಾದ ರಾಜಧಾನಿಯು ವಿರಾಜಮಾನವಾಗಿರುದು. ಆ ಪರ್ವತದಲ್ಲಿ ಮೂವತ್ತುಮೂರು ಕೋಟಿ ದೇವತೆಗಳೂ ಸಹ ವಾಸವಾಗಿರುವರು. ಎಲ್ಲ ಮಹರ್ಷಿಗಳು, ಸಿದ್ಧಪುರುಷರು, ಯೋಗಿ ಜನರು ಈ ಪರ್ವತದಲ್ಲಿ ವಾಸವಾಗಿದ್ದಾರೆ. (35–36) ಬ್ರಹ್ಮಾಂಡದಲ್ಲಿರುವ ಎಲ್ಲ ತೀರ್ಥಗಳೂ ಸಹ ಈ ಪರ್ವತಶ್ರೇಷ್ಠದಲ್ಲಿರುವವು. ಅಣಿಮಾ, ಲಘಿಮಾ, ಗರಿಮಾ,

ತಸ್ಮಿನ್ ಗಿರೌ ತ್ರಯಸ್ತ್ರಿಂಶತ್ಕೋಟಿಸಂಖ್ಯಾಶ್ಚ ದೇವತಾಃ ।
ಸರ್ವೇ ಮಹರ್ಷಯಶ್ಚಾಪಿ ಸಿದ್ಧಾ ಯೋಗಿವರಾಸ್ತಥಾ ॥36॥

ವಸಂತಿ ಸರ್ವತೀರ್ಥಾನಿ ತಸ್ಮಿನ್ ಗಿರಿವರೇ ಶುಭೇ ।
ಅಣಿಮಾ ಮಹಿಮಾ ಚೈವ ಗರಿಮಾ ಲಘಿಮಾ ತಥಾ ॥37॥

ಪ್ರಾಪ್ತಿಃ ಪ್ರಾಕಾಮ್ಯಮೀಶತ್ವಂ ವಶಿತ್ವಂ ಚಾಷ್ಟಭೂತಯಃ ।
ತಸ್ಯಾದ್ರೇಃ ಪೂರ್ವಭಾಗೇ ವೈ ಚರಂತಿ ವಿಪುಲಂ ತಪಃ ॥38॥

ಪೂರ್ವಸ್ಯಾಂ ದಿಶಿ ತಸ್ಯಾದ್ರೇಃ ಕಾಲಹಸ್ತೀತಿ ವಿಶ್ರುತಮ್ ।
ಪುರೇ ತಸ್ಮಿನ್ ಮಹಾದೇವೋ ವಸತಿ ಸ್ವಯಮಾದರಾತ್ ॥39॥

ಕಾಲಹಸ್ತ್ಯುತ್ತರೇ ಭಾಗೇ ಸುವರ್ಣಮುಖರೀ ನದೀ ।
ಸರ್ವಪಾಪಪ್ರಶಮನೀ ದೃಶ್ಯತೇ ಮುನಿಸೇವಿತಾ ॥40॥

ಶುಕಾದಯೋ ಮುನಿವರಾಸ್ತಸ್ಯಾಸ್ತೀರೇ ಯತೇಂದ್ರಿಯಾಃ ।
ಶೇಷಶೈಲೇಶಮುದ್ದಿಶ್ಯ ತಪಸ್ತಪ್ಯಂತಿ ದಾರುಣಮ್ ॥41॥

ತಸ್ಯಾದ್ರೇಃ ಪರಿತಃ ಸಪ್ತಯೋಜನಾಂತಃ ಸ್ಥಿತಾ ಜನಾಃ ।
ಸರ್ವಪಾಪವಿನಿರ್ಮುಕ್ತಾ ವಿಷ್ಣುಲೋಕಂ ಪ್ರಯಾಂತಿ ವೈ ॥42॥

ಮಹಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ ಮತ್ತು ವಶಿತ್ವವೆಂಬ ಅಷ್ಟಸಿದ್ಧಿಗಳೂ ಸಹ ಮೂರ್ತಿಮಂತರಾಗಿ ಈ ಪರ್ವತದ ಪೂರ್ವಭಾಗದಲ್ಲಿ ಬಂದು ಬಹುವಾಗಿ ತಪಸ್ಸನ್ನಾಚರಿಸಿ ಸಿದ್ಧಿಯನ್ನು ಹೊಂದುವರೆಂದಮೇಲೆ ಹೇಳುವದೇನಿದೆ? (37–38) ವೇಂಕಟಾಚಲದ ಪೂರ್ವದಿಕ್ಕಿನಲ್ಲಿ ಕಾಲಹಸ್ತಿಯೆಂಬ ನಗರವಿದ್ದು ಅಲ್ಲಿ ರುದ್ರದೇವರೇ ಇಷ್ಟಪಟ್ಟು ವಾಸವಾಗಿ ಇರುವರು. ಕಾಲಹಸ್ತಿಯ ಉತ್ತರ ದಿಗ್ಭಾಗದಲ್ಲಿ ಸರ್ವರ ಸರ್ವವಿಧ ಪಾಪಗಳನ್ನು ನಾಶಮಾಡುವ, ಮುನಿಗಳಿಂದ ಸೇವಿತವಾದ ಸುವರ್ಣಮುಖರೀ ಎಂಬ ನದಿಯು ಕಾಣಸಿಗುವದು. (39–40) ಶುಕಾಚಾರ್ಯರೇ ಮೊದಲಾದ ಋಷಿಶ್ರೇಷ್ಠರೂ ಸಹ ಸುವರ್ಣಮುಖರಿ ನದಿಯ ದಡದಲ್ಲಿ ಇಂದ್ರಿಯಗಳನ್ನು ನಿಗ್ರಹಿಸಿ ಶೇಷಾಚಲಾಧಿ ಪತಿಯಾದ ಶ್ರೀನಿವಾಸನನ್ನುದ್ದೇಶಿಸಿ ದಾರುಣವಾದ ತಪಸ್ಸನ್ನಾಚರಿಸುತ್ತಿರುವರು. (41)

ಆ ಪರ್ವತದ ಸುತ್ತಲಿರುವ ಏಳು ಯೋಜನಗಳಷ್ಟು ದೂರದ ಭೂಪ್ರದೇಶದಲ್ಲಿ ವಾಸಮಾಡುವ ಜನರೂ ಸಹ ಅಷ್ಟಾಕ್ಷರ ಮಂತ್ರದ ಜಪದಿಂದ ತಮ್ಮ ಎಲ್ಲ ಪಾಪಗಳನ್ನು ಕಳೆದುಕೊಂಡು ವಿಷ್ಣುಲೋಕವನ್ನು ಹೊಂದುವರು ಎಂದ ಮೇಲೆ ಹೇಳುವದೇನಿದೆ? (42)

ಅಷ್ಟಾರ್ಣಂ ಮನುರಾಜಂ ತಂ ಜಪ್ತ್ವಾ ತು ಕಿಮುತ ಪ್ರಭೋ ।
ತಂ ದ್ರಷ್ಟುಂ ದೇವದೇವೇಶಂ ದ್ರಷ್ಟುಂ ಸದ್ಮ ಚ ಶೋಭನಮ್ ॥43॥

ಏಹಿ ಶೇಷಾಚಲಂ ಶೀಘ್ರಮಿತ್ಥಮಾಹೂತವಾನ್ ಸ ಮಾಮ್ ।
ಅಥ ತೇನೈವ ಪುಂಸಾऽಹಂ ಶೇಷಾಚಲಮುಪಾಗಮಮ್ ॥44॥

ವ್ಯೋಮಾಂತರ್ವಿತತೋದಾರಶೃಂಗಾಂತಸ್ತಂಭಿತದ್ರುಮಮ್ ।
ತತ್ರ ಗತ್ವಾ ಸ ಪುರುಷೋ ಜ್ವಲತ್ಕಾಂಚನಶೋಭಿತಮ್ ॥45॥

ದಿವ್ಯಂ ಪ್ರಶಂಸಯಾಮಾಸ ವಿಮಾನಂ ರತ್ನಶೋಭಿತಮ್ ।
ಸ್ವಯಮಂತರ್ದಧೇ ಸೋऽಯಂ ಪಶ್ಯತೋ ಮಮ ಪೂರುಷಃ ॥46॥

ಅಂತರ್ದಧೇ ವಿಮಾನಂ ಚ ತಸ್ಮಿನ್ನೇವ ಕ್ಷಣಾಂತರೇ ।
ಇತಿ ಸ್ವಪ್ನೋ ಮಯಾ ದೃಷ್ಟೋ ಹ್ಯದ್ಭುತೋ ರೋಮಹರ್ಷಣಃ ॥47॥

ಅದೃಷ್ಟಪೂರ್ವಶ್ಚಾನ್ಯೇನ ಕಿಮೇತದಿತಿ ಚಿಂತ್ಯತಾಮ್' ।

ಮಂತ್ರಿಣ ಊಚುಃ –

ಹೇ ರಾಜನೇ! ನೀನೂ ಸಹ ಪರಮಾತ್ಮನನ್ನು ನೋಡಲು ಮತ್ತು ಪರಮಾತ್ಮನ ಆವಾಸಸ್ಥಾನವಾದ ಶೇಷಾಚಲವನ್ನು ನೋಡುವದಕ್ಕಾಗಿ ಶೀಘ್ರದಲ್ಲಿ ಬರುವವನಾಗು' ಎಂದು ನನ್ನನ್ನು ಕರೆದನು. ಅನಂತರ ಆ ದೇವಪುರುಷನಿಂದ ಸಹಿತನಾಗಿ ನಾನು ಆಕಾಶದಲ್ಲಿ ವ್ಯಾಪ್ತವಾಗಿದ್ದ ಕೋಡುಗಲ್ಲುಗಳಿಂದ ಮತ್ತು ಎತ್ತರವಾದ ಗಿಡಗಳಿಂದ ಅಲಂಕೃತವಾದ ಶೇಷಾಚಲಕ್ಕೆ ಹೋದೆನು. ಅಲ್ಲಿ ನನ್ನನ್ನು ಕರೆದುಕೊಂಡುಬಂದ ಪುರುಷನು ಪುಟಕ್ಕಿಟ್ಟ ಚಿನ್ನದಂತೆ ಹೊಳೆಯುತ್ತಿರುವ, ರತ್ನಗಳಿಂದಲಂಕೃತವಾದ, ಅಮಾನುಷವಾದ (ದಿವ್ಯವಾದ) ವಿಮಾನವೊಂದನ್ನು (ಗೋಪುರವನ್ನು) ಪ್ರಶಂಸಿಸಿ, ಅದನ್ನು ನನಗೆ ತೋರಿಸಿದನು. ಅನಂತರ ಆ ಪುರುಷನು ನಾನು ನೋಡುತ್ತಿರುವಂತೆಯೇ ಅದೃಶ್ಯನಾದನು. ಅನಂತರದ ಕ್ಷಣದಲ್ಲಿಯೇ ಆ ವಿಮಾನವೂ ಸಹ ಅದೃಶ್ಯವಾಯಿತು. ಹೇ ಮಂತ್ರಿಗಳೇ! ನಾನು ಈ ರೀತಿಯಾಗಿ ರೋಮಾಂಚನವನ್ನುಂಟುಮಾಡುವಂತಹ ಅದ್ಭುತವಾದ ಬೇರೆಯವರಿಂದ ಅದೃಷ್ಟಪೂರ್ವವಾದ ಸ್ವಪ್ನವನ್ನು ಕಂಡಿರುವೆನು. (43–47) ಆದರೆ ಇದರ ಅಂತರಾರ್ಥವೇನು ಎಂಬುದನ್ನು ತಿಳಿಯದವನಾಗಿದ್ದೇನೆ. ಅದನ್ನು ನನಗೆ ತಿಳಿಸಿರಿ.' ಎಂಬುದಾಗಿ ರಾಜನು ತನ್ನ ಸ್ವಪ್ನವೃತ್ತಾಂತವನ್ನು ನಿವೇದಿಸಿದನು.

*ಚಕ್ರವರ್ತಿಯ ಬಳಿ ಶಬರಾಗಮನ*

ಇದನ್ನು ಕೇಳಿದ ಮಂತ್ರಿಗಳು 'ನಿನ್ನಲ್ಲಿ ಕರುಣೆಯನ್ನು ಹೊಂದಿದ ದೈವದಿಂದಲೇ ಇಂತಹ

'ದೈವೇನ ತ್ವಯಿ ಕಾರುಣ್ಯಾದ್ದರ್ಶಿತಂ ರಾಜಸತ್ತಮ ॥48॥

ಸ ವಲ್ಮೀಕಸ್ಥಾನ ಏವ ದೇವಸ್ತಿಷ್ಠತ್ಯಸಂಶಯಮ್ ।
ಕ್ಷೀರಭಾಂಡಂ ಚ ಗೋಪಾಲಾ ಭಗ್ನಮಾವೇದಯಂಸ್ತವ ॥49॥

ಗೋಪಾಲೈರ್ಯತ್ಸಮಾದಿಷ್ಟಂ ವಲ್ಮೀಕಸ್ಥಾನಮುತ್ತಮಮ್ ।
ತತ್ರ ಕ್ಷೀರಾಭಿಷೇಕೇಣ ದೇವೋ ವ್ಯಕ್ತಿಂ ಗಮಿಷ್ಯತಿ' ॥50॥

ಇತಿ ಸಂಚಿಂತ್ಯಮಾನೇ ವೈ ಶಬರಃ ಕಶ್ಚಿದಾಯಯೌ ।
ಕಾಲಮೇಘನಿಭೋ ಧನ್ವೀ ಖಡ್ಗತೋಣೀರಭೂಷಿತಃ ॥51॥

ಬರ್ಹಿಪಿಚ್ಛಾನ್ವಿತಶಿರಾಃ ಲತಾಪಲ್ಲವಭೂಷಿತಃ ।
ತೂರ್ಣಮಾಗತ್ಯ ರಾಜಾನಂ ಪ್ರಣಮ್ಯ ಶಿರಸಾ ತತಃ ॥52॥

ವ್ಯಜಿಜ್ಞಯಚ್ಚ ರಾಜಾನಂ ಪ್ರಯತಃ ಪ್ರಾಂಜಲಿಃ ಸ್ಥಿತಃ ।
'ಸ್ವಾಮಿನ್ ವಸಾಮಿ ಶೇಷಾದ್ರೌ ಪ್ರಿಯಂಗುಕೃಷಿಮಾಚರನ್ ॥53॥

ತೇನ ಜೀವಾಮಿ ಸತತಂ ಸಪುತ್ರಃ ಸಹಬಾಂಧವಃ ।
ಕಶ್ಚಿಚ್ಛ್ವೇತವರಾಹೋ ವೈ ತತ್ರಾಗತ್ಯ ದಿನೇದಿನೇ ॥54॥

ಅದ್ಭುತವಾದ ಸ್ವಪ್ನವು ನಿನಗೆ ಕಂಡಿರುವದು. (48) ಶೇಷಾಚಲದಲ್ಲಿರುವ ಹುತ್ತದಲ್ಲಿಯೇ ಭಗವಂತನು ವಾಸವಾಗಿರುವನು. ಇದರಲ್ಲಿ ಯಾವ ಸಂಶಯವೂ ಇರುವದಿಲ್ಲ. ಗೋಪಾಲಕರು ಯಾವ ಪ್ರದೇಶದಲ್ಲಿ ತಮ್ಮ ಹಾಲಿನ ಪಾತ್ರೆಗಳು ಒಡೆದು ಹೋಗುವವೆಂದು ನಿವೇದಿಸಿರುವರೋ ಅದೇ ಭಗವಂತನ ಸ್ಥಾನವಾಗಿರುವದು. ಅಲ್ಲಿಗೆ ಹೋಗಿ ಕ್ಷೀರಾಭಿಷೇಕವನ್ನು ಮಾಡಿದಲ್ಲಿ ಭಗವಂತನು ಪ್ರತ್ಯಕ್ಷನಾಗುವನು' ಎಂದು ನುಡಿದರು. (49–50)

ರಾಜನು ಮಂತ್ರಿಗಳ ಮಾತನ್ನಾಲಿಸಿ ವಿಚಾರವನ್ನು ಮಾಡುತ್ತಿದುವ ಸಂದರ್ಭದಲ್ಲಿ ಕಪ್ಪು ಬಣ್ಣದಿಂದ ಕೂಡಿದ್ದ, ಬಿಲ್ಲು, ಬತ್ತಳಿಕೆ, ಖಡ್ಗಗಳನ್ನು ಧಾರಣಮಾಡಿದ್ದ ಶಬರ ಪುರುಷನು ಬಂದನು. ತಲೆಯಲ್ಲಿ ನವಿಲಿನ ಗರಿಯನ್ನು ಧರಿಸಿ, ಬಳ್ಳಿಗಳ ಚಿಗುರುಗಳಿಂದ ಅಲಂಕಾರವನ್ನು ಮಾಡಿಕೊಂಡಿದ್ದ ಆ ಶಬರನು (ಬೇಡನು– ವನದಲ್ಲಿ ವಾಸ ಮಾಡುವ 'ವನು) ಶೀಘ್ರದಲ್ಲಿಯೇ ರಾಜನ ಬಳಿಬಂದು ಅವನಿಗೆ ಗೌರವದಿಂದ ನಮಸ್ಕರಿಸಿ 'ರಾಜನೇ! ನಾನು ಶೇಷಾಚಲದಲ್ಲಿ ಪ್ರಿಯಂಗು (ನವಣೆಯ) ಕೃಷಿಯನ್ನು ಮಾಡಿಕೊಂಡಿದ್ದೇನೆ. ನವಣೆಯ ಬೆಳೆಯಿಂದಲೇ ನಾನು ನನ್ನ ಬಾಂಧವರಿಂದ ಸಮೇತನಾಗಿ ಬದುಕಿರುತ್ತೇವೆ. (51–53) ಆದರೆ ಯಾವದೋ ಬಿಳಿಯ ಹಂದಿಯೊಂದು ದಿನವೂ ಬಂದು ನಮ್ಮ ಪ್ರತಿರೋಧದ ನಡುವೆಯೂ ನಮ್ಮ ಸಮಗ್ರ ಬೆಳೆಯನ್ನು

ಪ್ರಿಯಂಗು ಭಕ್ಷಯತ್ಯೇವ ನಿಃಶೇಷಂ ಮಿಷತಾಂ ಚ ನಃ ।
ತದರ್ಥಂ ರಕ್ಷಣೇ ತಸ್ಯ ನಿಯುಜ್ಯ ಮನು ಪುತ್ರಕಮ್ ॥55॥

ಪ್ರಿಯಂ ಪ್ರಿಯಂಗುಂ ದೇವಾಯ ನಿವೇದಯಿತುಮುದ್ಯತಾಃ ।
ಮಧ್ವರ್ಥಮಗಮಂ ಸೋಽಹಂ ಸುದೂರಂ ಯತ್ರ ಪರ್ವತೇ ॥56॥

ತಸ್ಮಿನ್ನವಸರೇ ಪುತ್ರಃ ಪ್ರಿಯಂಗುಂ ಲೋಲುಪಃ ಕರೇ ।
ಸಮ್ಮರ್ದ್ಯ ಭಕ್ಷಯಿತ್ವಾಽಽಸ್ತೇ ತದಪಶ್ಯಂ ಸಮಾಗತಃ ॥57॥

ದೇವಾನಿವೇದಿತೇ ಪ್ರೀತಿರ್ಮಮ ನಾಸೀತ್ಕದಾಚನ ।
ತತಃ ಕ್ರುದ್ಧೋ ರುದಂತಂ ತಂ ಪುತ್ರಂ ಹಂತುಂ ಸಮುದ್ಯತಃ ॥58॥

ತದಾ ಹ್ಯಾಕಶಗಾ ವಾಣೀ ಮಾಮವೋಚತ್ ಸುದಾರುಣಮ್ ।
ಮಾ ವಧೀಃ ಪುತ್ರಮೇನಂ ವೈ ಪ್ರಿಯಂಗುಮನಿವೇದಿತಮ್ ॥59॥

ದೇವಃ ಸ್ವೀಕೃತವಾನೇವ ತ್ವದ್ವೃತ್ತೇನೈವ ತೋಷಿತಃ ।
ಚಕ್ರವರ್ತಿಸಮೀಪಂ ಚ ಗತ್ವಾ ಸ್ವಪ್ನಂ ಚ ದರ್ಶಿತಮ್ ॥60॥

ತಿಂದು ಹೋಗಿತ್ತಿರುವದು. ಇದರಿಂದ ನಾವು ವಿಚಾರವನ್ನು ಮಾಡಿ ದೇವನಿಗೆ ಪ್ರಿಯವಾದ ನವಣೆಯನ್ನು ದೇವನಿಗೆ ನಿವೇದಿಸಲು ಬಯಸಿ, ನನ್ನ ಮಗನನನ್ನು ಬೆಳೆಯ ರಕ್ಷಣೆಗಾಗಿ ನಿಯೋಜಿಸಿ, ನವಣೆಯೊಂದಿಗೆ ಜೇನುತುಪ್ಪವನ್ನು ನಿವೇದಿಸ ಬಯಸಿ ಜೇನನ್ನು ಹುಡುಕಿ ತರಲು ಪರ್ವತದಲ್ಲಿ ಬಹುದೂರಕ್ಕೆ ಹೋದೆನು. (54–56)

ಇದೇ ಸಂದರ್ಭದಲ್ಲಿಯೇ ನನ್ನ ಮಗನು ನವಣೆಯನ್ನು ನೋಡಿ ಅದರಿಂದ ಆಕರ್ಷಿತನಾಗಿ ಅದನ್ನು ಕೈಯಲ್ಲಿ ತಿಕ್ಕಿ ತಿಂದನು. ಆಗ ಅಲ್ಲಿಗೆ ಬಂದಿದ್ದ ನಾನು ಅದನ್ನು ನೋಡಿದೆನು. ದೇವರಿಗೆ ನಿವೇದಿತವಾಗದ ವಸ್ತುವಿನಲ್ಲಿ ನನಗೆ ಒಂದಿಷ್ಟೂ ಆಸಕ್ತಿಯಿದ್ದಿಲ್ಲ. ದೇವರಿಗೆ ನಿವೇದಿಸದ ನವಣೆಯನ್ನು ಭಕ್ಷಿಸಿರುವ ನನ್ನ ಮಗನಲ್ಲಿ ನನಗೆ ಅತ್ಯಂತ ರೋಷವುಂಟಾಯಿತು. ಕ್ರುದ್ಧನಾದ ನಾನು ಅಳುತ್ತಿರುವ ನನ್ನ ಮಗನನ್ನು ಲೆಕ್ಕಿಸದೇ ಅವನನ್ನು ಕೊಲ್ಲಲು ಉದ್ಯುಕ್ತನಾದೆ. (57–58) ಆಗ ಅಶರೀರವಾಣಿಯೊಂದು 'ಹೇ ಶಬರನೇ! ನಿನ್ನ ಮಗನನ್ನು ಕೊಲ್ಲಬೇಡ. ನಿನ್ನಿಂದ ಅನಿವೇದಿತವಾಗಿದ್ದರೂ ಸಹ ನೀನು ಬೆಳೆದಿರುವ ನವಣೆಯನ್ನು ದೇವರು ಸ್ವೀಕರಿಸಿಯೇ ಇದ್ದಾನೆ. ನಿನ್ನ ಈ ಭಕ್ತಿ–ದೀಕ್ಷೆಗಳಿಂದ ಅವನು ಅತ್ಯಂತ ಸಂತೋಷವನ್ನು ಸಹ ಹೊಂದಿರುವನು. ಹಿಂದೆಯೇ ಚಕ್ರವರ್ತಿಗೂ ಸಹ ಸ್ವಪ್ನವನ್ನು ತೋರಿಸಿರುವೆನು. ನೀನು ಅವನ ಬಳಿಹೋಗಿ ಅವನನ್ನು ಕುರಿತು ಶೇಷಾಚಲಕ್ಕೆ ಬಾ ಎಂದು ತಿಳಿಸು. ನಿನ್ನ ಮೇಲೆ ನಂಬಿಕೆ ಬರುವದಕ್ಕಾಗಿಯೇ

**ಅಭಿಜ್ಞಾನತಯಾ ಚೋಕ್ತ್ವಾ ತಮಾಗಚ್ಛೇತಿ ವೈ ವದ ।**
**ಇತಿ ತೇನ ಸಮಾಖ್ಯಾತಂ ವಾಚಾ ವ್ಯೋಮಗಯಾ ತದಾ ॥61॥**

**ವಚಃ ಶ್ರುತ್ವಾ ವಿಚಾರ್ಯಾಥ ಕಿಮೇತದಿತಿ ಮಂತ್ರಿಭಿಃ ।**
**ರಾಜಾಽಥ ಗೋಪವಾಕ್ಯಂ ಚ ಸ್ವಪ್ನಂ ಶರಬಭಾಷಿತಮ್ ॥62॥**

**ಏಕೀಕೃತ್ಯ ಸಹಾನೇನ ನಿರ್ಯಯೌ ಶಬರೇಣ ಸಹ ।**
**ಆದಿಶ್ಯ ಮಂತ್ರಿಣಶ್ಚೈವ ಗೋಸಹಸ್ರಭವಂ ಭುವಿ ॥63॥**

**ಕ್ಷೀರಮಾನಯತೇತ್ಯೇಚ್ಛೇಷಾಚಲತಟಂ ಯಯೌ ॥64॥**

ಇತಿ ಶ್ರೀಬ್ರಹ್ಮಾಂಡಪುರಾಣೇ ಭೃಗುನಾರದಸಂವಾದೇ ತೀರ್ಥಖಂಡೇ
ಶ್ರೀವೇಂಕಟಾಚಲಮಾಹಾತ್ಮ್ಯೇ ಚೋಲರಾಜಸ್ವಪ್ನವೃತ್ತಾಂತವರ್ಣನಮ್
ನಾಮ ಅಷ್ಟಮೋಽಧ್ಯಾಯಃ ॥

* * *

ಸ್ವಪ್ನವನ್ನು ಅವನಿಗೆ ತೋರಿಸಿರುವದು. ಅವನಿಗೆ ಅದನ್ನು ತಿಳಿಸಿ ಅವನನ್ನು ಕರೆದುಕೊಂಡು ಬಾ' ಎಂದು ನುಡಿಯಿತು. ಅಶರೀರವಾಣಿಯ ಮಾತಿನಂತೆ ನಾನಿಲ್ಲಿಗೆ ಬಂದಿರುವೆನು' ಎಂದು ನುಡಿದನು. (59–61) ಆಗ ರಾಜನು ಮಂತ್ರಿಗಳೊಂದಿಗೆ ವಿಚಾರಿಸಿ, ಗೋಪಾಲಕರ ಮತ್ತು ಶಬರನ ಮಾತುಗಳನ್ನು ಹೊಂದಿಸಿ ನೋಡಿ ಮಂತ್ರಿಗಳನ್ನು ಇದೇನೆಂದು ವಿಚಾರಿಸಿ, ಮಂತ್ರಿಗಳಿಗೆ ಒಂದು ಸಾವಿರ ಗೋವುಗಳ ಹಾಲನ್ನು ಶೇಷಾಚಲಕ್ಕೆ ತರಲಾಜ್ಞಾಪಿಸಿದ ಅನಂತರದಲ್ಲಿ ಶಬರನೊಂದಿಗೆ ಶೇಷಾಚಲಕ್ಕೆ ಹೊರಟನು. (62–64)

ಇಲ್ಲಿಗೆ ಬ್ರಹ್ಮಾಂಡಪುರಾಣದ ಭೃಗುನಾರದಸಂವಾದದಲ್ಲಿಯ ತೀರ್ಥಖಂಡದ ವೇಂಕಟೇಶ
ಮಾಹಾತ್ಮೆಯಲ್ಲಿ **ಚೋಲರಾಜಸ್ವಪ್ನವೃತ್ತಾಂತವರ್ಣನವೆಂಬ** ಎಂಟನೆಯ ಅಧ್ಯಾಯವು
ಸಮಾಪ್ತವಾಯಿತು.

* * *

ಬ್ರಹ್ಮಾಂಡಪುರಾಣಾಂತರ್ಗತ ವೇಂಕಟೇಶಮಾಹಾತ್ಮ್ಯೇ

## ಅಥ ನವಮೋऽಧ್ಯಾಯಃ

ನಾರದ ಉವಾಚ-

ನಿರ್ಗತ್ಯ ರಾಜಾ ಶಬರೇಣ ಸಾರ್ಧಂ
ಪ್ರಿಯಂ ಪ್ರಿಯಂಗುಂ ಪ್ರತಿ ಭಕ್ಷಯಂತಮ್ ।
ಶ್ವೇತಂ ವರಾಹಂ ಶಬರೋಪದಿಷ್ಟಂ
ದಿವ್ಯಂ ವಿಮಾನಂ ಚ ದಿದೃಕ್ಷುರತ್ರ ॥1॥

ವಿಲೋಕಯತ್ ಶ್ವೇತವರಾಹಮೇಕಂ
ಪ್ರಿಯಂಗುಸಸ್ಯಂ ಕಿಲ ಭಕ್ಷಯಂತಮ್ ।
ಗರ್ಜಂತಮಾಯಾಂತಮಿತಸ್ತತೋऽಪಿ
ಘೋಣಾರವಂ ಭೀಮಪರಾಕ್ರಮಂ ಚ ॥2॥

## ಒಂಭತ್ತನೆಯ ಅಧ್ಯಾಯ

*ಶಬರನಿಂದೊಡಗೂಡಿ ಚಕ್ರವರ್ತಿಯ ಶೇಷಾಚಲಗಮನ -ವರಾಹ ದರ್ಶನ*

ಅನಂತರದಲ್ಲಿ ರಾಜನು ಶಬರನು ತಿಳಿಸಿದ ನವಣೆಯನ್ನು ಭಕ್ಷಿಸುವ ಶ್ವೇತವರಾಹವನ್ನು ಮತ್ತು ಕನಸಿನಲ್ಲಿ ಕಂಡಿದ್ದ ದಿವ್ಯವಿಮಾನವನ್ನು ನೋಡುವದಕ್ಕಾಗಿ ಶಬರನೊಂದಿಗೆ ಶೇಷಾಚಲಕ್ಕೆ ಬಂದನು. ಅಲ್ಲಿ ಪ್ರಿಯಂಗು (ನವಣೆ) ಬೆಳೆಯನ್ನು ತಿನ್ನುತ್ತಿರುವ, ಮೂಗಿನ ಹೋಳ್ಳೆಗಳಿಂದ ಹೊರಬರುತ್ತಿರುವ ಗಾಳಿಯಿಂದ ವಿಚಿತ್ರವಾಗಿ ಗರ್ಜನವಮಾಡುತ್ತಿರುವ, ಭಯಂಕರ ಪರಾಕ್ರಮಿಯಾಗಿದ್ದ ಶ್ವೇತವರಾಹವನ್ನು ನೋಡಿದನು. (1-2) ಅಲ್ಲಿಯೇ ಸಮೀಪದಲ್ಲಿ ನಾನಾ ರತ್ನಗಳಿಂದ ಉಪಶೋಭಿತವಾಗಿದ್ದ ದಿವ್ಯವಾದ ಗೋಪುರವೊಂದನ್ನು ನೋಡಿದನು. ಅದೃಷ್ಟಪೂರ್ವವಾದ ಆ ವಿಮಾನವು ಸ್ವಪ್ನದಲ್ಲಿ ಕಂಡ ವಿಮಾನವನ್ನೇ ಹೋಲುತ್ತಿದ್ದು ಅನೇಕ ಸಾವಿರಾರು ಸೂರ್ಯರ ಪ್ರಕಾಶಕ್ಕೆ ಸಮನಾಗಿ ಹೊಳೆಯುತ್ತಿತ್ತು. (3) ವರಾಹವು ವ್ಯಾಧ ಮತ್ತು ಚೋಲರಾಜಸುತನು ನೋಡುತ್ತಿರುವಂತೆಯೇ ಯಥೇಚ್ಛವಾಗಿ ನವಣೆಯನ್ನು ಭಕ್ಷಿಸಿ ಅಲ್ಲಿಯೇ ಸಮೀಪದಲ್ಲಿದ್ದ ಹುತ್ತನ್ನು ಪ್ರವೇಶಿಸಿತು. (4) ಇದನ್ನು ಕಂಡ ರಾಜನು ಅತ್ಯಾಶ್ಚರ್ಯವನ್ನು

ದಿವ್ಯಂ ವಿಮಾನಂ ಚ ದದರ್ಶ ತತ್ರ
ನೃಪಸ್ತದಾ ರತ್ನವಿಭೂಷಿತಂ ತತ್ ।
ಅನೇಕಸಾಹಸ್ರರವಿಪ್ರಕಾಶಂ
ಸ್ವಪ್ನೇಽದ್ಭುತಂ ದೃಷ್ಟಮದೃಶ್ಟಪೂರ್ವಮ್ ॥3॥

ತತೋ ವರಾಹಃ ಸಹಸಾ ಪ್ರಿಯಂಗುಂ
ವ್ಯಾಧಸ್ಯ ದೃಷ್ಟಾಂತಮಥೋಪಭುಜ್ಯ ।
ದೃಗ್ಗೋಚರಂ ತಸ್ಯ ಸಮೀಪಜಾತಂ
ವಲ್ಮೀಕಮೇವ ಪ್ರವಿವೇಶ ಭೂಯಃ ॥4॥

ಸ ಶಾಬರಸ್ತಸ್ಯ ಚ ತೇನ ಹೇತುಂ
ತತ್ತ್ವೇನ ಪೃಷ್ಟಃ ಸ ಜಗಾದ ತಸ್ಮೈ ।
'ಅಯಂ ವರಾಹೋ ನ ವರಾಹಮಾತ್ರಂ ।
ದೇವಃ ಸ್ವಯಂ ಯೋ ಧರಣೀಂ ಬಭಾರ ॥6॥

ಇದಂ ವಿಮಾನಂ ಚ ತದೀಯಮೇವ
ದಿವ್ಯಂ ತ್ವಯಾ ದೃಷ್ಟಮದೃಷ್ಟಪೂರ್ವಮ್ ।
ವಾಸೋಽಸ್ಯ ವಲ್ಮೀಕಮಿದಂ ಮಹಾತ್ಮನ್
ಮಹತ್ತರಂ ನೂನಮಿತಸ್ತು ಹೇತೋಃ ॥7॥

ವಲ್ಮೀಕತೋಽಸ್ಮಾಚ್ಚ ವಿನಿರ್ಗತೋಽಸೌ
ಭೂಯೋಽಪಿ ತತ್ರೈವ ವಿಲೀನ ಆಸ್ತೇ ।

ಹೊಂದಿ ಇದೇನೆಂದು ಶಬರನನ್ನು ಪ್ರಶ್ನಿಸಿದನು. ಆಗ ಶಬರನು ಈ ವರಾಹವು ಸಾಮಾನ್ಯವಾದದ್ದಲ್ಲ. ಯಾವ ಪರಮಾತ್ಮನು ವರಾಹ ರೂಪಿಯಾಗಿ ಭೂಮಿಯನ್ನು ಉದ್ಧರಿಸಿದನೋ ಆ ನಾರಾಯಣನೇ ಇವನು. (5) ದಿವ್ಯವಾದ ಹಿಂದೆಂದೂ ನೋಡದ ಸ್ವಪ್ನದಲ್ಲಿ ನೋಡಿದ್ದ ಈ ವಿಮಾನವೂ ಸಹ ಅವನದೇ ಆಗಿರುವದು. (6–7) ಆ ಪರಮಾತ್ಮನು ಈ ವಲ್ಮೀಕ (ಹುತ್ತ)ದಲ್ಲಿಯೇ ವಾಸವಾಗಿರುವನು. ಹೇ ರಾಜನೇ! ವರಾಹನು ಈ ಹುತ್ತಿನಿಂದಲೇ ಹೊರಬರುವನು ಮತ್ತು ಈ ವಲ್ಮೀಕವನ್ನು ಸೇರಿ ಇಲ್ಲಿಯೇ ವಾಸವಾಗಿರುವನು. ಆದ್ದರಿಂದ ಚೂಪಾದ ಗುದ್ದಲಿಗಳಿಂದ ಈ ಹುತ್ತನ್ನು ಒಡೆದು ಅದರ ಒಳಗಿರುವದನ್ನು ನೋಡಬೇಕು. ನನಗೆ ದೇವಾಧಿದೇವನಾದ ಭಗವಂತನು ಇಲ್ಲಿಯೇ ಇರುವನೆಂದಿನಿಸುವದು' ಎಂದು ನುಡಿದನು.

ಅತೋಽತ್ರ ರಾಜನ್ನಿಶಿತೈಃ ಖನಿತ್ರೈ-
ರ್ವಲ್ಮೀಕಮೇತತ್ಪ್ರವಿದಾರ್ಯ ಸದ್ಯಃ ॥8॥

ವಿಲೋಕ್ಯತಾಂ ನೂನಮಿಹೈವ ದೇವೋ।
ವಸಿಷ್ಯತೀತಿ ಪ್ರತಿಭಾತಿ ಮೇಽದ್ಯ ।
ಶ್ರುತ್ವಾ ಚ ತಚ್ಛಾಬರವಾಕ್ಯಮೇಷ
ವಲ್ಮೀಕಮೇತನ್ನ ಬಿಭೇದ ಭೀತಃ ॥9॥

ಅಥಾಭ್ಯಷಿಂಚತ್ಸ ತಮೇವ ಭಕ್ತ್ಯಾ।
ಗೋಪಾಹೃತೈಃ ಕ್ಷೀರಘಟೈರನೇಕೈಃ ।
ಸ ತತ್ರ ವಾಚಾಂ ಮನಸಾಮಭೂಮಿಂ
ದದರ್ಶ ರತ್ನೋಜ್ಜ್ವಲಮದ್ಭುತಂ ಚ ॥9॥

ದಿವ್ಯಂ ವಿಮಾನೋತ್ತಮಮಾಶು ದೃಷ್ಟ್ವಾ
ಹೃಷ್ಟಶ್ಚ ಮೂರ್ಧ್ನಾ ಪ್ರಣನಾಮ ಭೂಯಃ ॥10॥

ತನ್ಮಧ್ಯೇಽಸೌ ನೀಲಜೀಮೂತಕಲ್ಪಂ
ಪದ್ಮಾವಾಸಂ ಸಂಶ್ರಿತತ್ರಾಣಹೇತುಮ್ ।
ಶ್ರೀವತ್ಸಾಂಕಂ ಪುಂಡರೀಕಾಯತಾಕ್ಷಂ
ಶಂಖಂ ಚಕ್ರಂ ಧಾರಯಂತಂ ಕರಾಭ್ಯಾಮ್ ॥11॥

*ಕ್ಷೀರಾಭಿಷಿಕ್ತ ವಲ್ಮೀಕದಿಂದ ಭಗವದಾವಿರ್ಭಾವಃ*

ಬೇಡನ ಈ ಮಾತನ್ನು ಕೇಳಿದ ರಾಜನು ಪರಮಾತ್ಮನ ಆವಾಸವಾದ ಹುತ್ತನ್ನು ಗುದ್ದಲಿಗಳಿಂದ ಒಡೆಯಲು ಹೆದರಿ (8-9) ರಾಜನು ಭಕ್ತಿಯಿಂದ ಭಗವಂತನನ್ನು ಧ್ಯಾನಿಸುತ್ತಾ ಗೋಪಾಲಕರಿಂದ ತರಲ್ಪಟ್ಟ ಅನೇಕ ಕೊಡಗಳಷ್ಟು ಹಾಲಿನಿಂದ ಹುತ್ತಿನ ಮೇಲೆ ಭಕ್ತಿಯಿಂದ ಅಭಿಷೇಕವನ್ನು ಮಾಡಿದನು. (10) ಆ ಹುತ್ತಿನ ಮಧ್ಯದಲ್ಲಿ ವಾಕ್ಕ ಮನಸ್ಸು ಇವುಗಳಿಗೆ ಅಗೋಚರವಾದ ಸಾಕಲ್ಯೇನ ಅಜ್ಞೇಯವಾದ ರತ್ನಗಳಿಂದಲಂಕೃತವಾಗಿ ಹೊಳೆಯುತ್ತಿದ್ದ, ದಿವ್ಯವಾದ ಶ್ರೇಷ್ಠವಾದ ವಿಮಾನವನ್ನು ಹುತ್ತಿನ ಮಧ್ಯಭಾಗದಲ್ಲಿ ನೋಡಿ ಅತ್ಯಂತ ಸಂತೋಷದಿಂದ ಮೇಲಿಂದ ಮೇಲೆ ಆ ವಿಮಾನಕ್ಕೆ ನಮಸ್ಕರಿಸಿದನು. (11) ಇಂತಹ ದಿವ್ಯವಾದ ವಿಮಾನದ ಮಧ್ಯಭಾಗದಲ್ಲಿ ಕೃಷ್ಣ ಮೇಘದಂತೆ ಭಕ್ತಾಭೀಷ್ಟಪ್ರವರ್ಷಕನಾದ, ಲಕ್ಷ್ಮೀದೇವಿಗೆ ಆಧಾರನಾದ, ಶರಣಾಗತ ರಕ್ಷಕನಾದ, ಶ್ರೀವತ್ಸ ಚಿಹ್ನೆಯಿಂದ ಕೂಡಿದ, ಕಮಲದಂತೆ ವಿಶಾಲವಾದ ನೇತ್ರಗಳನ್ನು ಹೊಂದಿದ,

ದಾತಾರಂ ತಂ ಪಾಣಿನಾ ವೈ ವರಾಣಾ-
ಮನ್ಯೇನಾಂಕಂ ಬಿಭ್ರತಂ ಭ್ರಾಜಮಾನಮ್ ।
ಪೀತಂ ವಸ್ತ್ರಂ ಬಿಭ್ರತಂ ರಾಜಮಾನಂ
ಕೋಟೀರಾಂತಪ್ರೋತರತ್ನೋಪಶೋಭಮ್ ॥12॥

ಶಾಂತಾಕಾರಂ ಶಾಶ್ವತಂ ಶ್ರೀನಿವಾಸಂ
ಸೇವ್ಯಂ ದೇವೈರ್ವಾಸುದೇವಂ ದದರ್ಶ ॥13॥

ಸ ರಾಜಪುತ್ರೋ ದೃಷ್ಟ್ವಾಥ ದೇವೇಶಂ ಭಕ್ತವತ್ಸಲಮ್ ।
ಪ್ರಾದುರ್ಭೂತಂ ಪ್ರಣಮ್ಯೈನಂ ತುಷ್ಟಾವ ಸ್ತುತಿಭಿಃ ಸ್ವಯಮ್ ॥14॥

ರಾಜಪುತ್ರ ಉವಾಚ-

'ಬ್ರಹ್ಮಾ ರುದ್ರೋ ವಾಸವೋ ಯೇ ಚ ಸಾಧ್ಯಾ
ವಿಶ್ವೇದೇವಾ ಮರುತಃ ಸಪ್ತ ಪೂರ್ವೇ ।
ಏತೇ ಚಾನ್ಯೇ ದೇವಮುಖ್ಯಾ ನಿಯೋಗಂ
ಪಶ್ಯಂತಸ್ತೇ ವಿಷ್ಟಪಾನ್ಯವರ್ತಯಂತೇ ॥15॥

ನಾಕಾರಂ ವಾ ರೂಪಮತ್ಯದ್ಭುತಂ ತೇ
ಪಶ್ಯಂತ್ಯೇತೇ ಯೋಗಿಮುಖ್ಯಾಃ ಪುರಾಣಾಃ ।

ಶಂಖ ಚಕ್ರಗಳನ್ನು ಕೈಯಲ್ಲಿ ಧಾರಣಮಾಡಿದ, ಒಂದು ಕೈಯಿಂದ ಭಕ್ತರ ಅಭೀಷ್ಟಗಳನ್ನು ಕೊಡುತ್ತಿರುವ ಮತ್ತೊಂದು ಕೈಯಿಂದ ಯಾವದೋ ಚಿಹ್ನೆಯನ್ನು ತೋರಿಸುತ್ತಿರುವ, ಅಂಚಿನಲ್ಲಿರುವ ರತ್ನಗಳ ಕಾಂತಿಯಿಂದ ಹೊಳೆಯುತ್ತಿರುವ ಸುಂದರವಾದ ಪೀತಾಂಬರವನ್ನು ಧಾರಣಮಾಡಿದ, ಶಾಂತಾಕಾರನಾದ (ಪ್ರಸನ್ನನಾದ), ಶಶ್ವದೇಕಪ್ರಕಾರನಾದ, ಲಕ್ಷ್ಮೀಸಹಾಯನಾದ, ದೇವಾಧಿ ದೇವನಾದ ವಾಸುದೇವನಾದ ಶ್ರೀನಿವಾಸನನ್ನು ಚೋಳರಾಜನು ನೋಡಿದನು. ರಾಜಪುತ್ರನು ದೇವದೇವನಾದ ಭಕ್ತವತ್ಸಲನಾದ ತನ್ನ ಎದುರಿಗೆ ಪ್ರತ್ಯಕ್ಷನಾದ ಭಗವಂತ ನನ್ನು ಉತ್ತಮವಾದ ಸ್ತುತಿಗಳಿಂದ ಸ್ತೋತ್ರಮಾಡಿದನು. (13–14)

*ಚಕ್ರವರ್ತಿಕೃತಶ್ರೀನಿವಾಸಸ್ತುತಿ*

ರಾಜನು 'ಚತುರ್ಮುಖ ಬ್ರಹ್ಮ ದೇವರು, ರುದ್ರದೇವರು, ಇಂದ್ರದೇವರು, ಸಾಧ್ಯ ದೇವತೆಗಳು, ವಿಶ್ವೇದೇವತೆಗಳು, ಮರುದ್ದೇವತೆಗಳು, ಸಪ್ತರ್ಷಿಗಳು– ಇವರೆಲ್ಲರೂ ಸಹ ಯಾವ ಪರಮಾತ್ಮನ ಆಜ್ಞೆಯಂತೆ ಸ್ವರ್ಗವನ್ನು ಹೊಂದಿ ವಾಸವಾಗಿರುವರೋ, ಯಾವ ಪರಮಾತ್ಮನ ದರ್ಶನವನ್ನು

ಇತ್ಥಂಭೂತೇ ಮಾದೃಶಾನುಗ್ರಹಾರ್ಥಂ
ಪ್ರತ್ಯಕ್ಷಂ ತೇ ರೂಪಮೇತದ್ಬಭೂವ ॥16॥

ಹೋತವ್ಯಂ ತ್ವಂ ಪಾವಕಾಂತಸ್ತು ಹೋತ್ರಂ
ಹೋತಾ ಚ ತ್ವಂ ಪಾವಕೋಽಪಿ ತ್ವಮೇವ ।
ಉದ್ದೇಶಸ್ತ್ವಂ ಸಿದ್ಧಿರಸ್ಯ ತ್ವಮೇವ
ತ್ವತ್ತಃ ಕಿಂಚಿನ್ನಾನ್ಯದತ್ರಾಸ್ತಿ ದೇವ ॥17॥

ಸದೈವೈಕಸ್ತ್ವಂ ಪರಂ ಬ್ರಹ್ಮ ಪೂರ್ವಂ
ಯಸ್ಮಾನ್ನಾನ್ಯಂ ಪ್ರಾಹುರೇತತ್ಪ್ರಪಂಚಮ್ ।
ಯತ್ಸಂಕಲ್ಪಾತ್ ಪ್ರಾಕೃತಃ ಸರ್ವ ಆದೌ
ಯಚ್ಚಾಂತಃಸ್ಥಂ ಶಾಸಿ ಸರ್ವಾತ್ಮನೇಮಮ್ ॥18॥

ನ ಬ್ರಹ್ಮಾಸೀತ್ ಪೂರ್ವಮೀಶೋ ನ ಚಾಸೀ-
ನ್ನೇಮಾ ವ್ಯಾಪ್ತೇ ರೋದಸೀ ವಾಽಪ್ಯಭೂತಾಮ್ ।
ಏಕಸ್ತ್ವಂ ವೈ ಜಾಗರೂಕಸ್ತು ಶೋಷೇ
ಶೇಷೇ ತಲ್ಪೇ ಚಾರು ಸೃಷ್ಟ್ವಾ ತದಾಪಃ ॥19॥

ಪಡೆದು ಸ್ವರ್ಗಾದಿಲೋಕಾಧಿವಾಸಿಗಳಾಗಿ ಇರುವರೋ ಅಂತಹ ಹೇ ಪರಮಾತ್ಮನೇ! ನಿನಗೆ ಪ್ರಾಕೃತವಾದ ಆಕಾರವಿರುವದಿಲ್ಲ. ನಿನ್ನ ರೂಪವೂ ಸಹ ನೋಡಲಶಕ್ಯವಾಗಿ ಅತ್ಯದ್ಭುತವಾಗಿರುವದು. ನಿನ್ನ ಕೃಪೆಯಿಂದಲೇ ಋಷಿಮುನಿಗಳು ನಿನ್ನನ್ನು ನೋಡುವರು. ಇಂತಹ ಯೋಗಿಗಳ ಮನಸ್ಸಿನಿಂದ ಧ್ಯೇಯನಾದ, ಅವ್ಯಕ್ತನಾದ ಅಪ್ರಾಕೃತನಾದ ನೀನು ಇಂದು ನನ್ನಂತಹವರ ಅನುಗ್ರಹದ ಗೋಸ್ಕರವಾಗಿ ನಿನ್ನ ಈ ದಿವ್ಯರೂಪವು ಪ್ರತ್ಯಕ್ಷವಾಗಿರುವದು. ನೀನು ಎಲ್ಲ ರೂಪಗಳಿಂದ ಜಗತ್ತನ್ನು ವ್ಯಾಪಿಸಿರುವಿ. (15–16) ಅಗ್ನಿಯಲ್ಲಿ ಅಂತರ್ಗತನಾಗಿದ್ದು ಯಜ್ಞದಲ್ಲಿಯ ಹವಿಸ್ಸನ್ನು ಭಕ್ಷಿಸುವವನು ನೀನೆ. ಹೋತೃ, ಹೋತ್ರ ಮತ್ತು ಅಗ್ನಿಯೂ ಸಹ ನೀನೇ ಆಗಿರುವಿ. ಉದ್ದೇಶ ಮತ್ತು ಸಿದ್ಧಿಗಳೂ ಸಹ ನಿನ್ನಿಂದಲೇ ನಿಯಂತ್ರಿಸಲ್ಪಟ್ಟಿರುವವು. ನಿನ್ನನ್ನು ಬಿಟ್ಟು ಈ ಜಗತ್ತಿನಲ್ಲಿ ಬೇರೇನೂ ಇರುವದಿಲ್ಲ. (17) ಯಾವಾಗಲೂ ಏಕಪ್ರಕಾರನಾಗಿ ಇರುವ ನೀನು ಗುಣಗಳಿಂದ ಪೂರ್ಣನಾದ ಪರಬ್ರಹ್ಮನೆನಿಸಿರುವಿ. ನಿನಗಿಂತ ಪೂರ್ವದಲ್ಲಿ ಈ ಪ್ರಪಂಚವು ಇದ್ದಿಲ್ಲ. ನಿನ್ನ ಸಂಕಲ್ಪದಿಂದಲೇ ಪ್ರಕೃತಿಯನ್ನು ಸೃಷ್ಟಿಸಿ ಅನಂತರ ಅದರಿಂದ ಪ್ರಾಕೃತವಾದ ಪ್ರಪಂಚವನ್ನು ಸೃಷ್ಟಿಸಿ ಅದರ ಸ್ಥಿತಿಯ ಗೋಸ್ಕರವಾಗಿ ಅದನ್ನು ಪ್ರವೇಶಿಸಿ ಎಲ್ಲೆಡೆ ವ್ಯಾಪಿಸಿ ಈ ಪ್ರಪಂಚವನ್ನು ಶಾಸಿಸುತ್ತಿರುವಿ.(18) ಸೃಷ್ಟಿಗಿಂತಲೂ ಪೂರ್ವದಲ್ಲಿ ಚತುರ್ಮುಖ ಬ್ರಹ್ಮದೇವರು, ರುದ್ರದೇವರು,

ನೋ ಲೋಕಾಸ್ತ್ವಾಂ ವೇದ ವೇತ್ಥ ತ್ವಮೇನಂ
ನಾದಿರ್ಮಧ್ಯಂ ವಿದ್ಯತೇ ತೇಽಥವಾಂತಃ ।
ಸತ್ಯಂ ರೂಪಂ ತೇ ಶ್ರುತಿಃ ಕೀರ್ತಯಂತೀ
ಜ್ಞಾನಾಕಾರಂ ಯತ್ತದೇತನ್ನಮಾಮಿ ॥20॥

ಕಾಲೋಽಸಿ ತ್ವಂ ಲೋಕಸಂಹಾರಹೇತುಃ
ಸ್ರಷ್ಟಾ ಚಾದೌ ರಕ್ಷಕಶ್ಚ ತ್ವಮೇವ ।
ಸಂಹಾರ್ಯಸ್ತ್ವಂ ಸೃಜ್ಯದಸ್ತು ತ್ವಮೇವ
ಪ್ರಾಯೋ ರಕ್ಷ್ಯಂ ತ್ವಂ ಹಿ ಕರ್ತಾ ಚ ಕರ್ಮ ॥21॥

ತ್ವಂ ಯಜ್ಞೋ ದೀಕ್ಷಿತಸ್ತ್ವಂ ಚ ಸ್ವಾಹಾಽಸೌ ತ್ವಂ ಹುತಾಶನಃ ।
ತ್ವಯಾ ವ್ಯಾಪ್ತಮಿಮಂ ಲೋಕಮನುವ್ಯಾಪ್ತಾ ರಮಾ ತವ ॥22॥

ಅಥವಾ ಎಲ್ಲೆಡೆ ವ್ಯಾಪ್ತವಾಗಿ ಎಲ್ಲರಿಗೂ ಆಧಾರವೆನಿಸಿದ ಭೂಮ್ಯಾಕಾಶಗಳೇ ಆಗಲೀ ಯಾವದೂ ಇರಲಿಲ್ಲ. ಆಗ ನೀನೊಬ್ಬನೇ ಇರುವವನಾಗಿದ್ದಿ. ಅನಂತರ ನೀರನ್ನು ಸೃಷ್ಟಿಸಿ, ನೀರಿನ ಮಧ್ಯಭಾಗದಲ್ಲಿ ಶೇಷವನ್ನೇ ಹಾಸಿಗೆಯನ್ನು ಮಾಡಿಕೊಂಡು ಯಾವಾಗಲೂ ಎಚ್ಚರವಾಗಿದ್ದರೂ ಸಹ ಆ ಶೇಷನ ಮೇಲೆ ಮಲಗಿದವನಂತೆ ಇರುತ್ತಿ.(19) ಲೌಕಿಕವಾದ ಯುಕ್ತಿಗಳು ಮತ್ತು ಪ್ರಯತ್ನಗಳು ನಿನ್ನನ್ನು ತಿಳಿದಿರುವದಿಲ್ಲ ಮತ್ತು ತಿಳಿಸಿ ಕೊಡುವದಿಲ್ಲ. ನಿನಗೆ ಹುಟ್ಟು, ನಾಶ, ಬೆಳವಣಿಗೆ ಇವಾವವೂ ಇರುವದಿಲ್ಲ. ಯಾವ ನಿನ್ನ ರೂಪವನ್ನು ಸತ್ಯವೆಂಬುದಾಗೀಯೂ ಮತ್ತು ಜ್ಞಾನಾನಂದ ಸ್ವರೂಪಿಯೆಂಬುದಾಗಿಯೂ ಶ್ರುತಿಯು ಕೊಂಡಾಡುವದೋ ಅಂತಹ ನಿನ್ನನ್ನು ನಾನು ನಮಸ್ಕರಿಸುತ್ತೇನೆ. (20) ಎಲ್ಲ ಪ್ರಾಣಿಗಳ ಆಯುಷ್ಯವನ್ನು ಹರಣಮಾಡುವ ಕಾಲನೆಂಬ ಮೃತ್ಯುವು ನೀನೇ ಆಗಿರುವಿ. ಸೃಷ್ಟಿಯ ಆದಿಭಾಗದಲ್ಲಿ ನಿನ್ನಿಂದಲೇ ಜಗತ್ತು ಸೃಷ್ಟವಾಗಿರುವದು. ಸೃಷ್ಟವಾದ ಜಗತ್ತಿನ ರಕ್ಷಣೇಯನ್ನು ಮಾಡುವವನೂ ಸಹ ನೀನೆ. ನೀನೇ ಜಗತ್ತನ್ನು ವ್ಯಾಪಿಸಿ ಸೃಜ್ಯವಾದ ಪ್ರಪಂಚದಲ್ಲಿ ಸ್ಥಿತನಾಗಿರುವಿ. ಹೀಗೆ ಬಾಧ್ಯ-ಬಾಧಕ, ಸೃಜ್ಯ-ಸಂಹಾರಕರಲ್ಲಿ ತತ್ತಚ್ಛಕ್ತಿ ಪ್ರದನಾಗಿರುವದರಿಂದ ಜನರು ಸೃಜ್ಯ, ಬಾಧ್ಯನೆಂಬುದಾಗಿ ಹೇಳುತ್ತಾರೆ. ಎಲ್ಲರ ರಕ್ಷಣೆಯನ್ನು ಮಾಡುವ ನೀನೂ ಸಹ ಮನುಷ್ಯರ ಮನಸ್ಸುಗಳಲ್ಲಿ ರಕ್ಷ್ಯನಾಗಿರುವಿ. (ಮುಚ್ಚಿಟ್ಟು ರಕ್ಷಿಸಲು ಯೋಗ್ಯನಾಗಿರುವಿ). ನೀನು ಪ್ರಪಂಚದ ಕರ್ತೃವು. ಇಚ್ಛಾಮಾತ್ರದಿಂದ ಗ್ರಹಣ ಮಾಡುವ ಅವತಾರಗಳಿಗೆ ಕರ್ಮ (ಮೂಲ ಧಾತು-ವಿಷಯ) ನೀನೇ ಆಗಿರುವಿ. (21) ನೀನೇ ಯಜ್ಞಶಬ್ದವಚ್ಯನು. ಹಾಗೆ ಪ್ರಪಂಚವನ್ನು ರಕ್ಷಿಸುವ ಹೊಣೆಯನ್ನು ಹೊತ್ತ ದೀಕ್ಷಿತನೂ ಸಹ ನೀನೆ. ಸ್ವಾಹಾ, ಅಗ್ನಿ ಇವುಗಳೂ ಸಹ ನಿನ್ನಿಂದಲೇ ವ್ಯಾಪ್ತವಾಗಿವೆ. ಅಷ್ಟೇಕೆ ಇಡೀ ಪ್ರಪಂಚವೆಲ್ಲವೂ

ಸೋऽಹಂ ತ್ವಾಂ ಶರಣಂ ಪ್ರಾಪ್ತಃ ಪದ್ಮಾಸಖಮಜಂ ವಿಭುಮ್ ।
ಶೇಷಿಣಂ ಸರ್ವಜಗತಾಂ ಪ್ರಣತಾರ್ತಿಹರಂ ಶುಭಮ್ ॥23॥

ಸ್ತುತ್ವೇತಿ ಭೂಯಃ ಪ್ರಣತಃ ಪೃಥಿವ್ಯಾಂ
ತುಷ್ಟಾವ ಭೂಯಃ ಪ್ರಣನಾಮ ಭೂಯಃ ।
ಅಥಾಸ್ಯ ಭಕ್ತಿಂ ಸ ವಿಲೋಕ್ಯ ದೇವೋ
ನೃಪಾತ್ಮಜಂ ಪ್ರೀತಮನಾ ಜಗಾದ ॥24॥

ಗುಹಾಸು ಬದ್ಧೈಃ ಪ್ರತಿಶಬ್ದಜಾತೈ-
ಮುಹುಸ್ತಿರಸ್ಕೃತ್ಯ ಪಯೋಧಿಘೋಷಮ್ ।

ಶ್ರೀಭಗವಾನುವಾಚ-

'ಪ್ರೀತೋಽಸ್ಮಿ ರಾಜೇಂದ್ರ ಪರಂ ತವಾಹಂ
ಭಕ್ತ್ಯಾಽನಯಾ ಚಾನ್ಯಸುದುರ್ಲಭಂ ಚ ॥25॥

ವರಂ ವೃಣೀಷ್ವಾದ್ಯ ಯದಿಚ್ಛಸಿ ತ್ವಂ
ದಾಸ್ಯಾಮಿ ಸರ್ವಂ ತವ ಮಾ ವಿಷಾದಃ' ।

ಸಹ ನಿನ್ನಿಂದಲೇ ವ್ಯಾಪ್ತವಾಗಿರುವದು. ಅಂತಹ ನಿನ್ನನ್ನು ಜಗನ್ಮಾತೆಯೆನಿಸಿದ ಸಮನೆಯೆನಿಸಿದ ಲಕ್ಷ್ಮೀದೇವಿಯು ನಿನ್ನನ್ನನುಸರಿಸಿಕೊಂಡಿದ್ದು ನಿನ್ನನ್ನು ಅನುವ್ಯಾಪಿಸಿದ್ದಳೆ. ಇಂತಹ ವ್ಯಾಪ್ತನಾದ, ಕಮಲಾಸಖನಾದ, ಜಗತ್ತಿನ ದುಃಖನಾಶಕನಾದ, ಪುಣ್ಯಕರನಾದ, ಎಲ್ಲ ಜಗತ್ತಿಗೆ ಸ್ಥಿತಿದಾಯಕನಾಗಿದ್ದು ಜಗತ್ತಿನ ಉಳಿವಿಗೆ ಕಾರಣನಾದ ನಿನ್ನನ್ನು ಶರಣು ಹೊಂದಿರುವೆನು. ನನ್ನನ್ನು ರಕ್ಷಿಸು' ಎಂದು ಶೇಷಾಚಲದ ಸ್ವಾಮಿಯಾದ ಶ್ರೀನಿವಾಸನನ್ನು ಪ್ರಾರ್ಥಿಸಿದನು. (22-23) ಹೀಗೆ ಪರಮಾತ್ಮನನ್ನು ಚೋಲರಾಜಸುತನು ನಮಸ್ಕರಿಸಿ ಸ್ತೋತ್ರಮಾಡಿ ಮತ್ತೆ ಮತ್ತೆ ಅವನನ್ನು ನಮಸ್ಕರಿಸಿದನು. ಹಾಗೆಯೇ ಮೇಲಿಂದ ಮೇಲೆ ಅವನನ್ನು ಸ್ತುತಿಸಿದನು. ಚಕ್ರವರ್ತಿಯ ಈ ಭಕ್ತಿಯನ್ನು ನೋಡಿ ಪ್ರೀತನಾದ ಪರಮಾತ್ಮನು ರಾಜಕುಮಾರನನ್ನು ಕುರಿತು ತನ್ನ ಗುಹಾನಿಬದ್ಧವಾಗಿ ಪ್ರತಿಧ್ವನಿಗೈಯುತ್ತಿರುವ ಮೇಘಗಳ ಧ್ವನಿಯನ್ನು ತಿರಸ್ಕರಿಸುವಂತಿರುವ ಗಂಭೀರವಾದ ಧ್ವನಿಯಿಂದ (24-25) 'ಹೇ ರಾಜನೇ ! ನಿನ್ನ ಈ ಶ್ರೇಷ್ಠವಾದ ಅನನ್ಯವಾದ ಭಕ್ತಿಯಿಂದ ನಾನು ಸಂತುಷ್ಟನಾಗಿರುವೆನು. ನಿನಗೇನು ಬೇಕೋ ಕೇಳಿಕೊ. ಬೇರೆಯವರು ಕೊಡಲಸಾಧ್ಯವಾದ ವರಗಳನ್ನು ನಾನು ನಿನಗೆ ಕೊಡುವೆನು. ನಿನಗೆ ಯಾವ ದುಃಖವೂ ಸಹ ಇರುವದಿಲ್ಲ. ವರವನ್ನು ಕೇಳಿಕೊ'(26) ಎಂದು ಆಜ್ಞಾಪಿಸಿದನು.

ರಾಜಪುತ್ರ ಉವಾಚ-

'ಯತ್ತದ್ರೂಪಂ ದುರ್ಲಭಂ ಯೋಗಿವರ್ಯೈ
ರಮ್ಯಂ ಭೂಯಾದೀದೃಶಂ ಸರ್ವದೃಶ್ಯಮ್ ॥26॥

ಅತ್ರೈವ ತ್ವಂ ಸರ್ವದಾ ವಾಸಮೀಯಾಃ
ಸರ್ವೇಷಾಂ ವೈ ಮಾನವಾನಾಂ ಹಿತಾಯ' ।
'ಓಮಿ'ತ್ಯುಕ್ತ್ವಾಽಥಾಪರಂ ಪ್ರಾಹ ವಾಕ್ಯಂ
'ಮದ್ಭಕ್ತಸ್ತ್ವಂ ನಾಸ್ತಿ ತುಲ್ಯಸ್ತ್ವಯಾಽನ್ಯಃ ॥27॥

ಸಂತುಷ್ಟೋಽಹಂ ಮತ್ಸಖಿತ್ವಂ ಪ್ರದಾಸ್ಯೇ
ವೇತ್ಥ ತ್ವಂ ಮಾಂ ಸುಹೃದಂ ಭಕ್ತವಶ್ಯಮ್' ।
ಇತ್ಯೂಚಿವಾನ್ ಮಾಧವೋ ರಾಜಪುತ್ರಂ
ಭೂಯಃ ಪ್ರಾಹ ಸ್ಮೇರವಕ್ತ್ರಾರವಿಂದಃ ॥28॥

'ಸೇವಾಂ ರಾಜನ್ನನ್ವಹಂ ಮೇ ತ್ರಿಸಂಧ್ಯಂ
ಕರ್ತುಂ ಭೂಯಂ ಶಾಸನಾನ್ಮೇಽರ್ಹಸಿ ತ್ವಮ್' ।

*ಚಕ್ರವರ್ತಿಕೃತ ಸರ್ವಜನದೃಗ್ಗೋಚರತ್ವ ಪ್ರಾರ್ಥನಾ*

ಇದನ್ನು ಕೇಳಿದ ಚಕ್ರವರ್ತಿಯು 'ಯೋಗಿಗಳಿಂದಲೂ ನೋಡಲಶಕ್ಯವಾದ ಸುಂದರವಾದ, ಸಂಸಾರಸಂತಾರಕವಾದ ನಿನ್ನ ಈ ರೂಪವು ಎಲ್ಲರಿಂದಲೂ ನೋಡಲ್ಪಡಲಿ. ಆದ್ದರಿಂದ ಸಜ್ಜನರ ಅನುಗ್ರಹಾರ್ಥವಾಗಿ ನೀನು ಇಲ್ಲಿಯೇ ವಾಸವಾಗಿದ್ದು ಎಲ್ಲ ಮನುಷ್ಯರಿಗೂ ಹಿತವನ್ನುಂಟುಮಾಡು' ಎಂದು ಪ್ರಾರ್ಥಿಸಿದನು.

*ಶ್ರೀನಿವಾಸಕೃತವರದಾನ*

ಇದಕ್ಕೆ ಸಮ್ಮತಿಸಿದ ಶ್ರೀನಿವಾಸನು 'ಹಾಗೆಯೇ ಆಗಲಿ' ಎಂದು ಹೇಳಿ 'ನನ್ನ ಭಕ್ತನಾಗಿರುವ ನಿನಗೆ ಸಮಾನನಾದವರು ಯಾರೂ ಇರುವದಿಲ್ಲ. ನಿನ್ನ ಭಕ್ತಿಯಿಂದ ಸಂತುಷ್ಟನಾದ ನಾನು ನಿನ್ನನ್ನು ನನ್ನ ಸ್ನೇಹಿತನನ್ನಾಗಿ ಸ್ವೀಕರಿಸಿರುವೆನು. ನೀನು ನನ್ನನ್ನು ಭಕ್ತವಶ್ಯನಾದ ನಿನ್ನ ಸಖನೆಂದು ತಿಳಿ' ಎಂದು ನುಡಿದನು. (26-27) ಅನಂತರ ಮತ್ತೆ ರಾಜಪುತ್ರನನ್ನು ಕುರಿತು 'ಹೇ ರಾಜನೇ! ನನ್ನ ಆಜ್ಞೆಯಂತೆ ನನ್ನ ಸೇವೆಯನ್ನು ಮೂರು ಹೊತ್ತು ನೀನು ಮಾಡುವವನಾಗು' ಎಂದು ನುಡಿದನು. ಇದನ್ನು ಕೇಳಿದ ಚಕ್ರವರ್ತಿಯು ಅತ್ಯಂತ ಸಂತೋಷದಿಂದ ಪರಮಾತ್ಮನ ಸೇವೆಯನ್ನು ಮಾಡಿದನು. ಆ ಪರಮಾತ್ಮನ ಪಾದಸೇವೆಯನ್ನೆಂದಿಗೂ ತೊರೆಯಲಿಲ್ಲ. ಪರಮಾತ್ಮನ

ಏತಚ್ಛ್ರುತ್ವಾ ರಾಜಪುತ್ರಃ ಸ ಧೀಮಾನ್
ಸೇವಾಂ ನಿತ್ಯಂ ನೋ ಜಹೌ ಪ್ರೀತಚಿತ್ತಃ ॥29॥
ಸೇವಾಂ ಕುರ್ವನ್ ವೇಂಕಟೇಶಸ್ಯ ರಾಜಾ
ತಸ್ಮಿನ್ ವಾಸಂ ಪತ್ತನೇ ಸ್ಮ ಪ್ರಯಾತಿ ॥29॥

ಸೇವಾಕಾಲೇಷು ತಸ್ಯಾಯಂ ರಾಜ್ಞೋ ವೈ ಭಕ್ತವತ್ಸಲಃ ।
ಅರ್ಚಾಭಾವಮತಿಕ್ರಮ್ಯ ಹಿತಾರ್ಥಾನಪ್ಯುಪಾದಿಶತ ॥30॥

ಸ ಕದಾಚಿದ್ಧ್ವಜಾರೋಹಮಹೋತ್ಸವಮತಂದ್ರಿತಃ ।
ಅಕಾರಯಚ್ಚ ಧರ್ಮೇಣ ಕನ್ಯಾಂ ಯಾತಿ ದಿವಾಕರೇ ॥31॥

ಧ್ವಜಂ ನಿರ್ಮಾಯ ವಿಧಿವದ್ಗರುಡಾಧಿಷ್ಠಿತಂ ಶುಭಮ್ ।
ಆರೋಪಯತ್ ಸಮಭ್ಯರ್ಚ್ಯ ಧ್ವಜಸ್ತಂಭಮನುತ್ತಮಮ್ ॥32॥

ಬ್ರಹ್ಮಾಣಮೀಶಂ ಸಗಣಂ ಶತಕ್ರತುಂ
ಯೇ ಚೈವಾನ್ಯೇ ಸಂತಿ ದಿಕ್ಪಾಲಮುಖ್ಯಾಃ ।

ಸೇವೆಯನ್ನು ಮಾಡುತ್ತಲೇ ಅವನು ಅಲ್ಲಿಯ ಪಟ್ಟಣದಲ್ಲಿ ವಾಸವಾಗಿದ್ದನು. (28-29) ಸೇವೆಯ ಸಮಯದಲ್ಲಿ ಶ್ರೀನಿವಾಸನು ಭಕ್ತವಾತ್ಸಲ್ಯವನ್ನು ತೋರಿಸಲೋಸುಗ ತನ್ನ ಮೂರ್ತಿಯಂತಿರುವ (ಅರ್ಚಾಭಾವ) ವಿಗ್ರಹ ಸ್ವರೂಪ ವನ್ನು ಬಿಟ್ಟು ಚೋಲರಾಜನಿಗೆ ಹಿತವಾಗುವಂತಹ ಉಪದೇಶಗಳನ್ನು ಮಾಡುತ್ತಿದ್ದನು.(30)

*ಬ್ರಹ್ಮೋತ್ಸವ*

ಶ್ರೀನಿವಾಸನ ಸೇವೆಯನ್ನು ಮಾಡುತ್ತಿದ್ದ ಚೋಲರಾಜನು ಸೂರ್ಯನು ಕನ್ಯಾರಾಶಿಯನ್ನು ಪ್ರವೇಶಿಸುತ್ತಿದ್ದಂತೆ ಪರಮಾತ್ಮನ ಉತ್ಸವವನ್ನು ಮಾಡಬಯಸಿ ಅತ್ಯಂತ ಶ್ರದ್ಧೆಯಿಂದ ಧ್ವಜಾರೋಹಣೋತ್ಸವವನ್ನು ಮಾಡಿದನು. (31) ಶಾಸ್ತ್ರೋಕ್ತವಿಧಿಗನುಸಾರವಾಗಿ ಗರುಡನಿಂದ ಅಧಿಷ್ಠಿತವಾದ ಉತ್ತಮವಾದ ಧ್ವಜವನ್ನು ನಿರ್ಮಾಣ ಮಾಡಿ ಅದನ್ನು ಮತ್ತು ಧ್ವಜಸ್ತಂಭವನ್ನು ಪೂಜಿಸಿ ಧ್ವಜವನ್ನು ಮೇಲೆಕ್ಕೇರಿಸಿದನು. (32)

ಚತುರ್ಮುಖ ಬ್ರಹ್ಮದೇವರು, ರುದ್ರದೇವರು, ದೇವತೆಗಳಿಂದ ಸಹಿತ ನಾದ ಇಂದ್ರದೇವರು, ಅಷ್ಟದಿಕ್ಪಾಲಕರು, ಇತರ ದೇವತೆಗಳು, – ಹೀಗೆ ಸಮಗ್ರವಾದ ದೇವತೆಗಳನ್ನು ಮಂತ್ರಕೋವಿದರಾದ ಬ್ರಾಹ್ಮಣರು ಪರಮಾತ್ಮನ ಉತ್ಸವವನ್ನು ನಡೆಸುವದಕ್ಕಾಗಿ ಆಹ್ವಾನಿಸಿದರು. (33)

ಚತುರ್ಮುಖ ಬ್ರಹ್ಮದೇವರು ಹಂಸವನ್ನೇರಿಕೊಂಡು, ಕೈಗಳನ್ನು ಜೋಡಿಸಿ, ಮುನಿಗಳಿಂದ

ತಾನಂಜಸಾ ಮಂತ್ರವರ್ಯೈರ್ದ್ವಿಜಾಶ್ಚ
ಸೇವಾರ್ಥಂ ವೈ ಸ್ವೈರಮಾಹೂತವಂತಃ ॥33॥

ತತೋ ಹಂಸಂ ಸಮಾರುಹ್ಯ ಪ್ರಾಂಜಲಿಃ ಕಮಲಾಸನಃ ।
ಆಗತೋ ಮುನಿಭಿಃ ಸಾರ್ಧಂ ಕಾಂಕ್ಷನ್ ಸೇವಾಂ ರಮಾಪತೇಃ॥ ।34॥

ಶಂಕರೋऽಪಿ ವೃಷಾರೂಢಃ ಸೇವಾಯೈ ಗಿರಿಜಾನ್ವಿತಃ ।
ಪ್ರಮಥಾದ್ಯೈಃ ಪಾರಿಷದೈರನ್ವಿತಃ ಪ್ರಯಯೌ ಮುದಾ ॥35॥

ಇಂದ್ರೋऽಪಿ ಸಾಂದ್ರಸಿಂದೂರಪ್ರಸ್ಫುರತ್ಕುಂಭಮಂಡಲಮ್ ।
ಆರುಹ್ಯೈರಾವತಂ ನಾಗಂ ದ್ರಷ್ಟುಂ ಯತ್ರೋತ್ಸವಂ ಯಯೌ ॥36॥

ಅನ್ಯೇ ಚಾಪಿ ದಿಶಾಂಪಾಲಾಃ ಸ್ವಂ ಸ್ವಂ ವಾಹನಮಾಸ್ಥಿತಾಃ ।
ಶೇಷಾಚಲತಟೀದೇಶಮಗನ್ನಾದೃತೋತ್ಸವಾಃ ॥37॥

ನಾರದೋऽಪಿ ಹರಿನಾಮಸಹಸ್ರಂ
ಕಲಯನ್ ವಿಮೃಶನ್ ಮಹತೀಂ ಚ ಮುಹುಃ ।
ಆಯಯೌ ಹೃದಿ ಚ ಭಾಸ್ವರಭೂತಂ
ಕಲಯನ್ ವಿಮೃಣನ್ ನಿಗಮಾದಿಮಪಿ ॥38॥

ಸಹಿತನಾಗಿ, ಪರಮಾತ್ಮನ ಸೇವೆಯನ್ನು ಬಯಸಿ, ಶೇಷಾಚಲಕ್ಕೆ ಧಾವಿಸಿ ಬಂದನು. (34) ಪಾರ್ವತಿ ಸಹಿತರಾದ ರುದ್ರ ದೇವರೂ ಸಹ ವಾಹನವಾದ ನಂದಿಯನ್ನೇರಿಕೊಂಡು ಪಾರ್ಷದರು ಮತ್ತು ಪ್ರಮಥಗಣಗಳಿಂದ ಸಹಿತರಾಗಿ ಸಂತೋಷದಿಂದ ಪರಮಾತ್ಮನ ಸೇವೆಗೆಂದು ಪರ್ವತಕ್ಕೆ ಬಂದರು. (35) ಇಂದ್ರದೇವರೂ ಸಹ ಸಿಂಧೂರದಂತೆ ಹೊಳೆಯುತ್ತಿರುವ ಕುಂಭಸ್ಥಳದಿಂದು– ಪೇತವಾದ ಐರಾವತ ಗಜವನ್ನೇರಿಕೊಂಡು ಪರಮಾತ್ಮನ ಉತ್ಸವವನ್ನು ನೋಡಲು ಬಂದನು. (36) ಭಗವಂತನ ಉತ್ಸವದ ದರ್ಶನವನ್ನು ಪಡೆಯಬಯಸಿದ ಅಷ್ಟ ದಿಕ್ಪಾಲಕರು ಮತ್ತು ಇತರ ದೇವತೆಗಳು ತಮ್ಮ ತಮ್ಮ ವಾಹನಗಳನ್ನೇರಿಕೊಂಡು ಉತ್ಸವನಡೆಯುತ್ತಿದ್ದ ಶೇಷಾಚಲವನ್ನು ಕುರಿತು ಬಂದರು.(37) ಪರಮಾತ್ಮನನ್ನು ಯಾವಾಗಲೂ ಮನಸ್ಸಿನಲ್ಲಿಟ್ಟುಕೊಂಡು ಅವನನ್ನೇ ಧ್ಯಾನಿಸುತ್ತಿದ್ದ ನಾರದರೂ ಸಹ ಭಗವಂತನ ನಾಮಸಹಸ್ರವನ್ನು ಬಾಯಿಯಿಂದ ಉಚ್ಚರಿಸುತ್ತಾ ಕೈಗಳಿಂದ ಅದಕ್ಕನುಗುಣವಾಗಿ ವೀಣೆಯನ್ನು ನುಡಿಸುತ್ತಾ ಪರಮಾತ್ಮನ ಕ್ಷೇತ್ರಕ್ಕೆ ಬಂದರು. (38) ಹಾಗೆಯೇ ಭೂಮಿಯಲ್ಲಿ ಅನೇಕ ರಾಜರುಗಳು, ಸರ್ವ ಪ್ರಾಣಿಗಳು, ಮನುಷ್ಯರು ಪರಮಾತ್ಮನ ಉತ್ಸವನ್ನು ನೋಡುವದರಗೋಸ್ಕರವಾಗಿ ಆ ಪರಮಾತ್ಮನನ್ನು ಸ್ತುತಿಸಿ ಬೇಡಿಕೊಳ್ಳುತ್ತಾ

ಅಥಾಯಯುರ್ದ್ರಷ್ಟುಕಾಮಾ ಮಹಾಂತಂ
ಕ್ಷೋಣೀಪಾಲಾಃ ಪ್ರಾಣಿನಃ ಸರ್ವ ಏವ ।
ಪುತ್ರಂ ನೇತ್ರಂ ಪ್ರಾರ್ಥಯಾನಾಶ್ಚ ಭೂಯೋ
ನಾನಾದಿಗ್ಭ್ಯೋ ನಮ್ರಶೀರ್ಷಾಸ್ತದಾನೀಮ್ ॥39॥

ತಸ್ಯ ಚೋತ್ಸರ್ವಯಾತ್ರಾಯಾಂ ಶೇಷಾಚಲಪತೇಸ್ತದಾ ।
ವೇಂಕಟೇಶಂ ಪ್ರಾರ್ಥಯಂತೋ ನಾನಾದಿಗ್ಭ್ಯಃ ಸಮಾಗತಾಃ ॥40॥

ಕಿಂಕರಾಶ್ಚೈವ ಗಾಯಂತಿ ಕೀರ್ತಿಂ ತಸ್ಯ ಮಹಾತ್ಮನಃ ।
ಇತ್ಥಂ ಪ್ರವವೃಧೇ ತಸ್ಯ ದಿವ್ಯಃ ಶೌರೇರ್ಮಹೋತ್ಸವಃ ॥41॥

ಅದೃಷ್ಟಪೂರ್ವಃ ಸರ್ವೇಷಾಂ ವಿಸ್ಮಯಂ ವ್ಯತನೋದ್ಭೃಶಮ್ ।
ಪಂಗವೋ ಜಂಘನಾ ಆಸನ್ ಕಾಣಾ ವೈ ದೂರದರ್ಶನಾಃ ॥42॥

ಬಭೂರ್ವಾಗ್ಮಿನೋ ಮೂಕಾ ಜನಾಸ್ತಸ್ಮಿನ್ ಮಹೋತ್ಸವೇ ।
ತದಾಪ್ರಭೃತಿ ಯಸ್ಮಿನ್ವೈ ವರ್ಷೇ ವರ್ಷೇ ಮಹೋತ್ಸವೇ ॥43॥

ನಮಸ್ಯತಿ ಹರಿಂ ದೃಷ್ಟ್ವಾ ತತ್ರ ಸ ವೃದ್ಧಿಂ ಯಾಸ್ಯತಿ ಧ್ರುವಮ್।
ತಸ್ಯ ಚೋತ್ಸವಯಾತ್ರಾಯಾಂ ಶೇಷಾಚಲಪತೇಸ್ತದಾ ॥44॥

ನಾನಾ ದಿಕ್ಕುಗಳಿಂದ ಧಾವಿಸಿ ಬಂದರು. (39–40) ಭಗವಂತನ ಭಕ್ತರು ಅವನ ಶ್ರೇಷ್ಠವಾದ ಕೀರ್ತಿಯನ್ನು ಉತ್ಸವ ಸಮಯದಲ್ಲಿ ಗಾನಮಾಡುತ್ತಿದ್ದರು. ಅವನನ್ನು ಕೊಂಡಾಡುತ್ತಿದ್ದರು. ಹೀಗೆ ಲೋಕದಲ್ಲಿ ಸ್ವಾಮಿಯಾದ ಶ್ರೀನಿವಾಸನ ದಿವ್ಯವಾದ ಉತ್ಸವವು ಬಹು ವೈಭವದಿಂದ ಜರುಗುತ್ತಿದ್ದಿತು. ಅದೃಷ್ಟ ಪೂರ್ವವಾದ ಪರಮಾತ್ಮನ ಈ ಉತ್ಸವವು ಎಲ್ಲರಿಗೂ ಸಂತೋಷವನ್ನು ಮತ್ತು ಆಶ್ಚರ್ಯವನ್ನು ಉಂಟುಮಾಡಿತು. ಈ ಉತ್ಸವಕ್ಕೆ ಬಂದಿದ್ದ ಕುಂಟರು ಕಾಲುಗಳನ್ನು ಪಡೆದರು. ಕುರುಡರು ಕಣ್ಣುಗಳನ್ನು ಪಡೆದು ಅತ್ಯಂತ ದೂರದ ವಸ್ತುಗಳನ್ನು ಸಹ ಅನಾಯಾಸವಾಗಿ ನೋಡುವಂತಾದರು. ಮೂಕರು ವಾಗ್ಮಿಗಳಾದರು. (41–43) ಅಂದಿನಿಂದ ಯಾರು ಯಾರು ಪ್ರತಿವರ್ಷ ಕನ್ಯಾಮಾಸದಲ್ಲಿ ಜರುಗುವ ಪರಮಾತ್ಮನ ಉತ್ಸವಕ್ಕೆ ಬಂದು ಪರಮಾತ್ಮನಿಗೆ ಭಕ್ತಿಯಿಂದ ನಮಿಸುವರೋ ಅವರು ಅಭ್ಯುದಯವನ್ನು ನಿಶ್ಚಯವಾಗಿಯೂ ಹೊಂದುವರು. (44) ಆ ವೇಂಕಟಾಧೀಶನ ಯಾತ್ರೆಯ ಸಂದರ್ಭದಲ್ಲಿ ಇಂದ್ರದೇವರ ಆಜ್ಞೆಯಂತೆ ಮೇಘಗಳೇ ಮಾರ್ಗದಲ್ಲಿಯ ಧೂಳೀ ಕಣಗಳನ್ನು ಸ್ವಚ್ಛಗೊಳಿಸಿದವು.

ಪಯೋದಾ ವಿರಜೀಚಕ್ರುಃ ಪ್ರತೋಲೀರ್ವಾಸವಾಜ್ಞಯಾ ।
ಸೇವಾರ್ಥಂ ಕಲ್ಪಯಾಮಾಸ ರಥಂ ರತ್ನಪರಿಷ್ಕೃತಮ್ ॥45॥

ತಸ್ಮಿನ್ ರಥವರೇ ರಮ್ಯೇ ದೀವ್ಯತಿ ಸ್ಮಾಷ್ಟಮೇ ದಿನೇ ।
ಅಥಾಷ್ಟಸು ವ್ಯತೀತೇಷು ದಿವಸೇಷು ಮಹೋತ್ಸವೇ ॥46॥

ಶ್ರವಣೇ ವಿಷ್ಣುನಕ್ಷತ್ರೇ ಮುಹೂರ್ತೇ ತು ಶುಭೇ ತದಾ ।
ಚಕ್ರಂ ಭಗವತಾಜ್ಞಪ್ತಂ ಸ್ವಾಮಿಪುಷ್ಕರಿಣೀಜಲೇ ॥47॥

ಚಕಾರಾವಭೃಥಸ್ನಾನಂ ಮಖೇಽಸ್ಮಿಂಶ್ಚ ಸಮಾಪಿತೇ ।
ಅಥಾಸ್ಯಾಂ ವಿಧಿವದ್ರಾತ್ರೌ ಧ್ವಜಸ್ಯಾಪ್ಯವರೋಹಣಮ್ ॥48॥

ಚಕ್ರುರ್ವಿಪ್ರವರಾಸ್ತತ್ರ ಮಹಾನೈವೇದ್ಯಮೇವ ಚ ।
ಅಥಾನ್ಯಸ್ಮಿನ್ದಿನೇ ದೇವಮಾನರ್ಚುರ್ವಿಧಿವತ್ತದಾ ॥49॥

ಪ್ರಸೂನೈರ್ವಿವಿಧೈಶ್ಚಾಪಿ ಸುಗಂಧೈಃ ಸುಮನೋಹರೈಃ ।
ಹರಿರ್ವಿಸರ್ಜಯಾಮಾಸ ದೇವಾನ್ ಸೇವಾರ್ಥಮಾಗತಾನ್ ॥50॥

*ರಥೋತ್ಸವ–ಅವಭೃತ ಸ್ನಾನ*

ಪರಮಾತ್ಮನ ಸೇವಾರ್ಥವಾಗಿ ರತ್ನಾಲಂಕೃತವಾದ ದಿವ್ಯವಾದ ರಥವೊಂದನ್ನು ಇಂದ್ರದೇವರು ಸಮರ್ಪಿಸಿದರು. ಆ ರಥದಲ್ಲಿ ಪರಮಾತ್ಮನು ತನ್ನ ಉತ್ಸವದ ಎಂಟನೆಯ ದಿನದಂದು ಕುಳಿತು ಎಲ್ಲ ದಿಕ್ಕುಗಳನ್ನು ಬೆಳಗುವನು. (45–46) ಹೀಗೆ ಮಹೋತ್ಸವದ ಎಂಟು ದಿನಗಳು ಮುಗಿಯುತ್ತಿರಲು ಪುಣ್ಯಕರವಾದ ವಿಷ್ಣುನಕ್ಷತ್ರವೆನಿಸಿದ ಶ್ರವಣಾ ನಕ್ಷತ್ರದಲ್ಲಿ ಭಗವಂತನ ಆಜ್ಞೆಯಂತೆ ಸ್ವಾಮಿಪುಷ್ಕರಿಣಿಯ ದಿವ್ಯವಾದ ಜಲದಲ್ಲಿ ಚಕ್ರಕ್ಕೆ ಅವಭೃತ ಸ್ನಾನವು ಮಾಡಿಸಲ್ಪಟ್ಟಿತು. ಹೀಗೆ ಬ್ರಹ್ಮೋತ್ಸವ ವೆಂಬ ಯಜ್ಞವು ಸಮಾಪಿತವಾಗುತ್ತಿರಲು ವಿಧಿಯಂತೆ ಅಂದಿನ ರಾತ್ರಿ ಯಲ್ಲಿ ದೇವನಿಗೂ ಧ್ವಜಕ್ಕು ಸಹ ನಮಸ್ಕರಿಸಿ ಮಹಾನೈವೇದ್ಯ ವನ್ನರ್ಪಿಸಿ ಧ್ವಜಾವರೋಹಣವನ್ನು ಬ್ರಾಹ್ಮಣರು ಮಾಡಿದರು. (47–49) ನಂತರ ಮುಂದಿನ ದಿನದಲ್ಲಿ ನಾನಾವಿಧವಾದ ಉಪಚಾರಗಳಿಂದ ಪರಮಾತ್ಮನನ್ನು ಅರ್ಚಿಸಿ ಮಹಾನೈವೇದ್ಯವನ್ನು ಸಮರ್ಪಿಸಿ ಸುಗಂಧಮಯವಾದ ಹೂವುಗಳಿಂದ ಭಗವಂತನನ್ನು ಪ್ರಸನ್ನಗೊಳಿಸುವರು. ಅನಂತರ ಹರಿಯು ತನ್ನ ಉತ್ಸವಕ್ಕಾಗಿ ಆಗಮಿಸಿದ್ದ ತನಗೆ ನಮಸ್ಕರಿಸುತ್ತಿರುವ ಬ್ರಹ್ಮ–ರುದ್ರೇಂದ್ರಾದಿ ದೇವತೆಗಳನ್ನು ವಿಸರ್ಜಿಸಿ ಅವರ ಅವರ ಸ್ಥಾನಗಳಿಗೆ ತೆರಳಲಪ್ಪಣೆಯಿತ್ತನು. (50–51) ಹೀಗೆ ಚಕ್ರವರ್ತಿರಾಜನು ವೇಂಕಟಾಚಲ ಸ್ವಾಮಿಯಾದ ಭಗವಂತನ ದಿವ್ಯವಾದ ಉತ್ಸವವನ್ನು ಮುಗಿಸಿ ಸಂತೋಷವನ್ನು ಹೊಂದಿ

ಬ್ರಹ್ಮರುದ್ರಪುರೋಗಾಂಶ್ಚ ಪ್ರಣಮ್ರಶಿರಸಸ್ತಥಾ ॥51॥

ಇತ್ಥಂ ಸ ರಾಜಾ ವೃಷಶೈಲಭರ್ತು-
ರ್ಮಹೋತ್ಸವಂ ದಿವ್ಯಮಿಮಂ ಸಮಾಪ್ಯ ।
ಹೃಷ್ಟಃ ಕೃತಾರ್ಥಂ ಬಹು ಮನ್ಯಮಾನೋ
ಹ್ಯಾತ್ಮಾನಮಾವಾಸಮಿಯಾಯ ಭೂಯಃ ॥52॥

ಇತಿ ಶ್ರೀಬ್ರಹ್ಮಾಂಡಪುರಾಣೇ ಭೃಗುನಾರದಸಂವಾದೇ ತೀರ್ಥಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಶ್ರೀಶ್ರೀನಿವಾಸಾವಿರ್ಭಾವಾದಿವರ್ಣನಂ ನಾಮ ನವಮೋಽಧ್ಯಾಯಃ ॥

* * *

ತಾನು ಕೃತಾರ್ಥನಾದೆನೆಂದು ತಿಳಿಯುತ್ತಾ ತನ್ನ ವಾಸಸ್ಥಾನವನ್ನು ಕುರಿತು ಹೋದನು. (52)

ಇಲ್ಲಿಗೆ ಬ್ರಹ್ಮಾಂಡಪುರಾಣದ ಭೃಗುನಾರದಸಂವಾದದಲ್ಲಿಯ ತೀರ್ಥಖಂಡದ ವೇಂಕಟೇಶ ಮಾಹಾತ್ಮೆಯಲ್ಲಿ ಶ್ರೀನಿವಾಸಾವಿರ್ಭಾವಾದಿವರ್ಣನವೆಂಬ ಒಂಭತ್ತನೆಯ ಅಧ್ಯಾಯವು ಸಮಾಪ್ತವಾಯಿತು.

* * *

## ಅಥ ದಶಮೋಽಧ್ಯಾಯಃ

ನಾರದ ಉವಾಚ–

ಉತ್ಸವಾಂತೇ ದ್ವಿಜಃ ಕಶ್ಚಿದಾಜಗಾಮ ತದಂತಿಕಮ್ ।
ಭಾರ್ಯಯಾ ಸಹಿತಶ್ಚೈವ ತದೈವಾಚಿರಸೂತಯಾ ॥1॥

ದ್ವಿಜಂ ಸಮಾಗತಂ ರಾಜಾ ಪಾದ್ಯಾರ್ಘ್ಯಾಸನವಂದನೈಃ ।
ಅಭಿಪೂಜ್ಯ ಯಥಾನ್ಯಾಯಂ ದೃಷ್ಟ್ವಾ ಕುಶಲಮಬ್ರವೀತ್ ॥2॥

ರಾಜೋವಾಚ–

ಕಸ್ತೇ ದೇಶೋ ದ್ವಿಜಶ್ರೇಷ್ಠ ಕಿಮರ್ಥಮಿತ ಆಗತಃ ।
ವದಸ್ವ ಕಿಮಹಂ ವಾ ತೇ ಕರವಾಣಿ ನಿದೇಶಕೃತ್ ॥3॥

ವಿಪ್ರ ಉವಾಚ–

'ದಕ್ಷಿಣಾಂಭೋನಿಧೇಸ್ತೀರೇ ಶ್ರುತಾ ಚಂದ್ರಪುರೀ ಶುಭಾ ।
ತಸ್ಯಾಂ ವಸತಿ ಧರ್ಮಜ್ಞಃ ಕೂರ್ಮೋ ನಾಮ ದ್ವಿಜೋತ್ತಮಃ ॥4॥

## ಹತ್ತನೆಯ ಅಧ್ಯಾಯವು

*ರಾಜನ ಬಳಿ ಕೃಷ್ಣಶರ್ಮನ ಆಗಮನ*

ಹೀಗೆ ವೈಭವೋಪೇತವಾದ ಪರಮಾತ್ಮನ ಉತ್ಸವವು ಮುಗಿಯುತ್ತಿರಲು ಚೋಲರಾಜನ ಬಳಿ ಒಬ್ಬ ಬ್ರಾಹ್ಮಣನು ತನ್ನ ಪುತ್ರನನ್ನು ಪ್ರಸವಿಸಿ ಕೆಲವೆ ದಿನಗಳನ್ನು ಕಳೆದಿದ್ದ ಹೆಂಡತಿಯೊಡನೆ ಬಂದನು. ಬ್ರಾಹ್ಮಣನು ಬಂದಿರುವದನ್ನು ನೋಡಿದ ರಾಜನು ಅವನನ್ನು ಸ್ವಾಗತಿಸಿ ಅರ್ಘ್ಯ–ಪಾದ್ಯಾದಿ ಉಪಚಾರಗಳಿಂದ ಯಥಾಯೋಗ್ಯವಾಗಿ ಪೂಜಿಸಿ ಅವನ ಕುಶಲವನ್ನು ವಿಚಾರಿಸಿದನು. (1–2) ಅನಂತರ ರಾಜನು 'ಹೇ ಬ್ರಾಹ್ಮಣಶ್ರೇಷ್ಠನೇ! ನೀನಾರು? ಯಾವ ಪ್ರದೇಶದಿಂದ ನೀನಿಲ್ಲಿಗೆ ಬಂದಿರುವಿ? ಏತಕ್ಕಾಗಿ ಬಂದಿರುವಿ? ನಾನು ನಿನಗೇನು ಸೇವೆಯನ್ನು ಮಾಡಲಿ? ಎಂದು ಪ್ರಶ್ನಿಸಿದನು. (3)

ಇದಕ್ಕುತ್ತರವಾಗಿ ಬ್ರಾಹ್ಮಣನು 'ದಕ್ಷಿಣ ಸಮುದ್ರದ ತೀರದಲ್ಲಿ ಚಂದ್ರಪುರಿ ಯೆಂಬ ಶುಭ

ತಸ್ಯಾಹಂ ವೈ ಸುತೋ ರಾಜನ್ ಕೃಷ್ಣಶರ್ಮೇತಿ ವಿಶ್ರುತಃ ।
ಭಾರ್ಯಾ ಸುಧರ್ಮಿಣೀ ನಾಮ್ನಾ ಮಮೇಯಂ ಪುತ್ರಿಣೀ ಶುಭಾ ॥5॥

ಕಾಶೀಕ್ಷೇತ್ರಮಹಂ ದ್ರಷ್ಟುಂ ಪ್ರಯಾಸ್ಯೇ ಮುಕ್ತಿಸಾಧನಮ್ ।
ಅಸ್ಯಾಃ ಶಿಶುಸ್ತ್ರಿಮಾಸೋಽಯಂ ದುರ್ಬಲಾ ಚೈವ ಭಾಮಿನೀ ॥6॥

ಪ್ರವಾಸಾಯೋಗ್ಯತಾಮಸ್ಯಾ ದುರ್ಬಲಾಯಾಶ್ಚ ಮಂತ್ರಯನ್ ।
ತ್ವತ್ಸಕಾಶಮಹಂ ರಾಜನ್ ಸಂಪ್ರಾಪ್ತಸ್ತ್ವಂ ಹಿ ರಕ್ಷಿತಾ ॥7॥

ವಿಲೋಕ್ಯ ಕಾಶೀಮಾಯಾಸ್ಯೇ ಸೇಯಂ ತಾವನ್ಮನಸ್ವಿನೀ ।
ಸಮೀಪೇ ತವ ರಾಜೇಂದ್ರ ವಾಸಂ ಯಾತ್ವಿತಿ ಮೇ ಮತಿಃ' ॥8॥

ಓಮಿತ್ಯುಕ್ತೋಽಥ ಭೂಪೇನ ತ್ಯಕ್ತ್ವಾ ಭಾರ್ಯಾಂ ಸುತಾನ್ವಿತಾಮ್।
ಆಮಂತ್ರ್ಯ ಚ ಮಹೀಪಾಲಂ ಯಯೌ ಕಾಶೀಂ ಪ್ರತಿ ದ್ವಿಜಃ ॥9॥

ಪಟ್ಟಣವು ಪ್ರಸಿದ್ಧವಾಗಿರುವದು. ಅದರಲ್ಲಿ ಧರ್ಮವನ್ನು ಉತ್ತಮವಾಗಿ ತಿಳಿದು ಆಚರಿಸುತ್ತಿರುವ ಕೂರ್ಮನೆಂಬ ದ್ವಿಜಶ್ರೇಷ್ಠನು ವಾಸವಾಗಿರುವನು. (4) ನಾನು ಅವನ ಮಗನಾಗಿದ್ದು ಕೃಷ್ಣಶರ್ಮನೆಂದು ಪ್ರಸಿದ್ಧನಾಗಿರುವೆನು. ಮಗನಿಂದ ಸಮೇತಳಾದ ಈ ಸ್ತ್ರೀಯು ನನ್ನ ಹೆಂಡತಿಯಾಗಿದ್ದು ಸುಧರ್ಮಿಣೀ ಎಂದು ಇವಳ ಹೇಸರು. (5) ಮುಕ್ತಿ ಸಾಧನ ವಾದ ಕಾಶಿಕ್ಷೇತ್ರದ ಯಾತ್ರೆಯನ್ನು ಮಾಡಬೇಕೆಂದು ಬಯಸಿ ನಾನು ಪ್ರಯಾಣವನ್ನು ಬೆಳೆಸಿರುವೆನು. ನನ್ನ ಈ ಶಿಶುವು ಮೂರು ತಿಂಗಳದ್ದಾಗಿರುವದು ಮತ್ತು ಪ್ರಸವದಿಂದಾಗಿ ನನ್ನ ಹೆಂಡತಿಯು ದುರ್ಬಲಳಾಗಿರುವಳು. ಸಣ್ಣ ಶಿಶು ಮತ್ತು ದೌರ್ಬಲ್ಯದಿಂದಾಗಿ ಪ್ರವಾಸವನ್ನು ಮಾಡಲು ಅಶಕ್ತಳಾದ ನನ್ನ ಮಡದಿಯನ್ನು ನೋಡಿ, ವಿಚಾರವನ್ನು ಮಾಡಿ, ನಿನ್ನ ಬಳಿ ಬಂದಿರುವೆನು. ಹೇ ರಾಜನೇ! ನೀನೇ ಈ ಶಿಶು ಮಡದಿಯರಿಗೆ ರಕ್ಷಕನಾಗಿರುವಿ. ಮನಃಪೂರ್ತಿಯಾಗಿ ಕಾಶಿ ಕ್ಷೇತ್ರದ ದರ್ಶನವನ್ನು ಮಾಡಿಕೊಂಡು ಬರುವೆ. ಅಲ್ಲಿಯವರೆಗೂ ನನ್ನ ಹೆಂಡತಿ ಮಗುವನ್ನು ನಿನ್ನ ಬಳಿ ಬಿಟ್ಟು ಹೋಗುವೆನು. ಅವರು ಇಲ್ಲಿಯೇ ವಾಸವಾಗಿರಲಿ ಎಂದು ನನ್ನಿಚ್ಛೆಯಿರುವದು' ಎಂದನು. (5–8)

*ಮಡದಿ ಮಗನನ್ನು ರಾಜನ ಬಳಿ ಬಿಟ್ಟು ಕಾಶೀಕ್ಷೇತ್ರಗಮನ*

ರಾಜನು ಬ್ರಾಹ್ಮಣನ ಮಾತಿಗೆ ಸಮ್ಮತಿಸಿದಾಗ ಕೃಷ್ಣಶರ್ಮನು ತನ್ನ ಪತ್ನೀಪುತ್ರರನ್ನು ರಾಜನ ಬಳಿ ಕರೆತಂದು ರಾಜನಿಗೆ ಅವರನ್ನು ಒಪ್ಪಿಸಿ, ಕಾಶೀಪಟ್ಟಣವನ್ನು ಕುರಿತು ಹೊರಟನು. (9) ರಾಜನು ಆ ತಾಯಿ ಮಗುವಿನ ವಾಸಕ್ಕಾಗಿ ಪ್ರತ್ಯೇಕವಾದ ಮನೆಯೊಂದನ್ನು ಕೊಡಿಸಿ ಅದರಲ್ಲಿ

ರಾಜಾ ಚ ತಸ್ಯಾ ವಾಸಾರ್ಥಂ ಗೃಹಮೇಕಂ ಪ್ರಕಲ್ಪ್ಯ ಸಃ ।
ಧಾನ್ಯಂ ಷಣ್ಮಾಸಪರ್ಯಾಪ್ತಂ ದಾಪಯಾಮಾಸ ಚ ಸ್ವಯಮ್ ॥10॥

ನ ನಿರ್ಗಚ್ಛ ಗೃಹಾಚ್ಚೇತಿ ಶಶಾಸ ದ್ವಿಜಭಾಮಿನೀಮ್ ।
ಸ್ವವ್ಯಾಪಾರೇ ಸ್ಥಿತೋ ರಾಜಾ ನೈವ ಸಸ್ಮಾರ ತಾಂ ತತಃ ॥11॥

ಕೃಷ್ಣಶರ್ಮಾ ತತೋ ವಿಪ್ರೋ ಪ್ರಸ್ಥಾನಮುತ್ತಮಮ್ ।
ಪುನರಾಗತ್ಯ ಭೂಪಾಲಮಿದಂ ವಚನಮಬ್ರವೀತ್ ॥12॥

ಕೃಷ್ಣಶರ್ಮೋವಾಚ–

'ಆಗತಃ ಕೃಷ್ಣಶರ್ಮಾಹಂ ಗಂಗಾಂ ದೃಷ್ಟ್ವಾ ಸುಶೋಭನಾಮ್।
ನ್ಯಸ್ತಾ ತವಾಂತಿಕೇ ಭಾರ್ಯಾ ದೀಯತಾಂ ವಿರಹಾತುರಾ' ॥13॥

ಇತ್ಯುಕ್ತೋ ಭೂಪತಿಸ್ತೇನ ಚಿಂತಯಾಮಾಸ ದುಃಖಿತಃ ।
'ಅಹೋ ಮಯಾ ಪ್ರಮತ್ತೇನ ವಿಷಯಾಸಕ್ತಚೇತಸಾ ॥14॥

ನ ಚಿಂತಿತಾ ಮಹಾಭಾಗಾ ಭಾಮಿನೀ ತು ದ್ವಿಜನ್ಮನಃ ।
ಧಾನ್ಯಂ ಷಣ್ಮಾಸಪರ್ಯಂತಂ ದತ್ತಮಸ್ಯೈ ಪುರಾ ಮಯಾ ॥15॥

ಆರುತಿಂಗಳಿಗಾಗುವಷ್ಟು ಧಾನ್ಯಗಳನ್ನು ತಾನೇ ತಂದಿರಿಸಿ ಬ್ರಾಹ್ಮಣ ಸ್ತ್ರೀಗೆ ಮನೆಯಿಂದ ಹೊರಬರಬೇಡವೆಂದು ತಿಳಿಸಿದನು. ಅನಂತರ ತನ್ನ ರಾಜ್ಯಭಾರವೇ ಮೊದಲಾದ ವ್ಯಾಪಾರಗಳಲ್ಲಿ ಮುಳುಗಿದ ರಾಜನು ಅವಳನ್ನು ಮರೆತುಬಿಟ್ಟನು. (10–11)

*ಕಾಶೀಕ್ಷೇತ್ರದಿಂದ ಆಗಮಿಸಿದ ಕೃಷ್ಣಶರ್ಮನಿಂದ ಭಾರ್ಯಾಪುತ್ರರ ಯಾಚನ*

ಹೀಗೆ ಕೆಲ ದಿನಗಳ ಅನಂತರದಲ್ಲಿ ಕೃಷ್ಣಶರ್ಮ ಬ್ರಾಹ್ಮಣನು ಕಾಶಿಯಿಂದ ಹಿಂದಿರುಗಿ ರಾಜನ ಬಳಿ ಬಂದು 'ಹೇ ರಾಜನೇ ನಾನು ಕೃಷ್ಣಶರ್ಮನು. ಪುಣ್ಯಕರವಾದ ಗಂಗೆಯನ್ನು ಕಂಡು ಬಂದಿರುವೆನು. ನನ್ನ ಹೆಂಡತಿ ಮಗುವನ್ನು ನಿನ್ನ ಬಳಿ ಇಟ್ಟಿರುವೆನು. ನನ್ನ ವಿರಹದಿಂದ ದುಃಖಿತಳಾದ ನನ್ನ ಹೆಂಡತಿಮತ್ತು ಮಗುವನ್ನು ನನಗೆ ಹಿಂದಿರುಗಿಸು' ಎಂದು ನುಡಿದನು.(13)

*ವಿಪ್ರಭಾರ್ಯಾಪುತ್ರರ ಮರಣ*

ಹೀಗೆ ಬ್ರಾಹ್ಮಣನಿಂದ ಹೇಳಿಸಿಕೊಳ್ಳಲ್ಪಟ್ಟ ರಾಜನು ಅತ್ಯಂತ ದುಃಖದಿಂದ ವಿಚಾರಮಾಡಿದನು. 'ವಿಷಯಗಳಲ್ಲಿ ಆಸಕ್ತನಾದ ಮನಸ್ಸಿನವನಾದ ನಾನು ಈ ಬ್ರಾಹ್ಮಣನ ಪತ್ನಿಯನ್ನು ನೆನಪಿಸಿಕೊಳ್ಳಲೇ ಇಲ್ಲ. ಆರು ತಿಂಗಳಿಗೆ ಮಾತ್ರ ಸಾಕಾಗುವಷ್ಟು ಧಾನ್ಯರಾಶಿಯನ್ನು ಹಿಂದೆ ಆಕೆಗೆ ಕೊಟ್ಟಿದ್ದೆನು.

ಸ ಕಾಲಸ್ತು ವ್ಯತೀತೋऽದ್ಯ ಕಿಂ ಕರೋತು ದ್ವಿಜನ್ಮಜಾ ।
ಗೃಹಾನ್ನಿರ್ಗಮನಂ ಚಾಸ್ಯಾಃ ಪ್ರತಿಷಿದ್ಧಂ ಮಯಾ ತದಾ ॥16॥

ಇತ್ಥಂ ಸಂಚಿಂತ್ಯ ರಾಜಾಸೌ ಘೋಷಯಾಮಾಸ ಪೂರುಷಮ್ ।
ದ್ರಷ್ಟುಂ ಸ್ವನಿರ್ಮಿತೇ ಗೇಹೇ ಸಪುತ್ರಾಂ ದ್ವಿಜಭಾಮಿನೀಮ್ ॥17॥

ಸ ವಿಲೋಕ್ಯಾಗತಸ್ತೂರ್ಣಂ ರಾಜಾನಂ ತಂ ವ್ಯಜಿಜ್ಞಪತ್ ।
ಶಿಶುನಾ ಸಹ ಭಾರ್ಯಾಸ್ಯ ಕಾಲಧರ್ಮಮುಪಾಗತಾ ॥18॥

ಶರೀರೇ ಚಾನಯೋಃ ಶುಷ್ಕೇ ವರ್ತೇತೇ ಚಿರಕಾಲತಃ ।
ಇತಿ ತಸ್ಯ ವಚಃ ಶ್ರುತ್ವಾ ಸ ರಾಜಾ ಭೃಶದುಃಖಿತಃ ॥19॥

ದ್ವಿಜಮಾಹೂಯ ಸಂಭ್ರಾಂತಮಿದಂ ವಚನಮಬ್ರವೀತ್ ॥20॥

ರಾಜೋವಾಚ–

'ತವ ಭಾರ್ಯಾ ದ್ವಿಜಶ್ರೇಷ್ಠ ಮಾಮನುಜ್ಞಾಪ್ಯ ಭಾಮಿನೀ ।
ದೇವದೇವಸ್ಯ ಸೇವಾರ್ಥಮಿದಾನೀಮೇವ ನಿರ್ಗತಾ ॥21॥

'ಶ್ವ ಆನೇಷ್ಯಾಮಿ ಭದ್ರಂ ತೇ ಗತಾ ಸೇವಾರ್ಥಮಂಜಸಾ ॥21॥

ಆ ಕಾಲವು ತಿರುಗಿ ಎಷ್ಟೋ ದಿನಗಳಾದವು. ಆಕೆ ಮುಂದೇನು ಮಾಡಬೇಕು? (ಮಾಡಿರುವಳು) ನಾನೇ ಅವಳನ್ನು ಹೊರಗೆ ಬಾರದಂತೆ ನಿರ್ಬಂಧಿಸಿದ್ದೆನು.' (14–16) ಹೀಗೆ ಅತ್ಯಂತ ದುಃಖದಿಂದ ವಿಚಾರಮಾಡಿ ಬ್ರಾಹ್ಮಣನ ಹೆಂಡತಿ–ಶಿಶುವಿಗೋಸ್ಕರವಾಗಿ ತನ್ನಿಂದ ಕೊಡಲ್ಪಟ್ಟಿದ್ದ ಮನೆಗೆ ಒಬ್ಬ ರಾಜ ಪುರುಷನನ್ನು ಕಳುಹಿಸಿ ಅವರನ್ನು ನೋಡಿಕೊಂಡು ಬರುವಂತೆ ಆಜ್ಞಾಪಿಸಿದನು. ರಾಜಾಜ್ಞೆಯಂತೆ ಬ್ರಾಹ್ಮಣ ಸ್ತ್ರೀ ಮತ್ತು ಶಿಶುವನ್ನು ನೋಡಿ ಬಂದು ರಾಜನಿಗೆ 'ಮಗುವಿನಿಂದ ಸಹಿತಳಾದ ಬ್ರಾಹ್ಮಣನ ಹೆಂಡತಿಯು ಮರಣವನ್ನು ಹೊಂದಿರುವರು. ಅವರ ಮೃತ'ಶರೀರಗಳೂ ಸಹ ಬಹಳಷ್ಟು ದಿನಗಳ ಹಿಂದೆಯೇ ಒಣಗಿ ಹೋಗಿರುವವು' ಎಂದು ನುಡಿದನು.

*ವಿಪ್ರಪತ್ನಿಯನ್ನು ಬದುಕಿಸಲು ರಾಜನ ವೇಂಕಟಾಚಲಾಗಮನ*

ಇದನ್ನು ಕೇಳಿದ ರಾಜನು ಅತ್ಯಂತ ದುಃಖವನ್ನು ಹೊಂದಿ ಬ್ರಾಹ್ಮಣನನ್ನು ಕರೆದು ದುಃಖ ಮತ್ತು ಭಯದಿಂದ ಹೀಗೆ ನುಡಿದನು. (17–20) 'ಹೇ ಬ್ರಾಹ್ಮಣನೆ! ನಿನ್ನ ಮಡದಿಯು ಅವಳ ಮಗುವಿನಿಂದ ಸಹಿತಳಾಗಿ ಶೇಷಾಚಲಾಧೀಶನಾದ ಪರಮಾತ್ಮನ ಸೇವೆಗೆಂದು ನನ್ನ ಅಪ್ಪಣೆಯನ್ನು ಪಡೆದು ಇದೇ ತಾನೆ ತೆರಳಿರುವಳು. ಅವಳನ್ನು ನಾನು ನಾಳೆ ಕರೆಸಿ ನಿನಗೊಪ್ಪಿಸುವೆನು. ಹೇ

ದಿನಮೇಕಂ ಚ ವಿಶ್ರಮ್ಯ ತತೋ ಯಾಸ್ಯಸಿ ಭಾರ್ಯಯಾ ।
ಇತ್ಯುಕ್ತ್ವಾಥ ದ್ವಿಜಶ್ರೇಷ್ಠಂ ನೃಪಃ ಶಂಕಿತಮಾನಸಃ ॥22॥

ಗೃಹಾನ್ನಿರ್ಗತ್ಯ ಶೇಷಾದ್ರಿಮಾರುರೋಹ ಕ್ಷಣಾಂತರಾತ್ ।
ದೇವಸ್ಯಾವಸರಂ ವೀಕ್ಷ್ಯ ಪ್ರಾಂಜಲಿಃ ಪ್ರಯತಃ ಸ್ಥಿತಃ ॥23॥

ಸ ಮುಹೂರ್ತಂ ವಿನಿಃಶ್ವಸ್ಯ ಸಖೇದಂ ಚ ವ್ಯಜಿಜ್ಞಪತ್ ।
ಸ್ವಾಮಿನ್ವಿಜ್ಞಾಪನಾಮದ್ಯ ಶೃಣುಷ್ವೈಕಮನಾ ಮಮ ॥24॥

ಸೋಽಹಂ ಹಿ ಭವತಾ ರಕ್ಷ್ಯಃ ಶರಣಂ ಗತ ಇತ್ಯಪಿ ।
ಅಪ್ರಬುದ್ಧೇನ ಮತ್ತೇನ ಮಯಾ ವೈ ದುಷ್ಕೃತಂ ಕೃತಮ್ ॥25॥

ನ್ಯಾಸೀಕೃತಂ ಮಹಾಭಾಗಾಂ ದ್ವಿಜವರ್ಯೇಣ ಧೀಮತಾ ।
ನ ವ್ಯಚಾರಯಮಾಸಕ್ತೋ ವಿಷಯೇಷು ಯಶಸ್ವಿನೀಮ್ ॥26॥

ಇದಾನೀಮಾಗತೇ ವಿಪ್ರೇ ಪೂರ್ವವೃತ್ತಮನುಸ್ಮರನ್ ।
ಕಿಮೇತದಿತಿ ಭೀತೋಽಹಂ ತದುದಂತಂ ವಿಚಾರಯನ್ ॥27॥

ವಿಪ್ರನೇ! ನಿನಗೆ ಕಲ್ಯಾಣವಾಗಲಿ. ನೀನು ಇಂದು ಇಲ್ಲಿಯೇ ವಿಶ್ರಾಂತಿಯನ್ನು ಹೊಂದಿ ನಾಳೆ ನಿನ್ನ ಮಡದಿಯೊಡನೆ ಪ್ರಯಾಣವನ್ನು ಬೆಳೆಸು' ಎಂದು ಕೇಳಿಕೊಂಡನು. (21-22)

*ಭಗವಂತನಲ್ಲಿ ನಡೆದ ವೃತ್ತಾಂತವನ್ನು ನಿವೇದಿಸಿದುದು*

ಅನಂತರ ಬಹು ವಿಚಾರವನ್ನು ಮಾಡಿದ ರಾಜನು (ಬ್ರಾಹ್ಮಣ ಪತ್ನಿಯು ಪುನಃ ಬದುಕಬೇಕೆಂಬ) ತನ್ನ ಮನೋರಥವು ಹೇಗೆ ಇಡೇರೀತು? ಎಂಬ ಸಂಶಯವನ್ನು ಹೊಂದಿ ಮನೆಯಿಂದ ಹೊರಟು ಶೇಷಗಿರಿಯನ್ನು ಏರಿ ಶ್ರೀನಿವಾಸನಿದ್ದೆಡೆಗೆ ಬಂದನು. ಸರ್ವಾಂಗಗಳಿಂದ ಪರಮಾತ್ಮನಿಗೆ ನಮಸ್ಕಾರವನ್ನು ಮಾಡಿ, ಇಂದ್ರಿಯನಿಗ್ರಹವನ್ನು ಹೊಂದಿ, ಪರಮಾತ್ಮನೆದುರು ಒಂದು ಮುಹೂರ್ತ ಬಗ್ಗಿ ನಿಂತನು. ಪರಮಾತ್ಮನ ಪ್ರಸನ್ನತೆಯನ್ನು ನೋಡಿಕೊಂಡು ದುಃಖದಿಂದ ಪೂರ್ಣನಾಗಿ ನಿಟ್ಟುಸಿರನ್ನು ಬಿಟ್ಟು ಭಗವಂತನಾದ ಶ್ರೀನಿವಾಸನನ್ನು ಕುರಿತು ಹೀಗೆ ಬೇಡಿಕೊಂಡನು. 'ಹೇ ಭಗವಂತನೇ! ನಾನು ಹೇಳುವದನ್ನು ದಯವಿಟ್ಟು ಕರುಣೆಯಿಂದ ಆಲಿಸು. ನಾನು ನಿನ್ನಿಂದಲೇ ರಕ್ಷ್ಯನಾಗಿದ್ದೇನೆ. ನಿನ್ನನ್ನೇ ಶರಣು ಹೊಂದಿದ್ದೇನೆ. ಅಪ್ರಬುದ್ಧನೂ, ಉನ್ಮತ್ತನೂ ಆದ ನನ್ನಿಂದ ದುಷ್ಕಾರ್ಯವೊಂದು ಮಾಡಲ್ಪಟ್ಟಿರುವದು. ಹೇ ಸ್ವಾಮಿಯೇ! ಒಬ್ಬ ಬ್ರಾಹ್ಮಣ ಶ್ರೇಷ್ಠನು ತನ್ನ ಮಡದಿ ಪುತ್ರರನ್ನು ನನ್ನ ಬಳಿ ಸಂರಕ್ಷಣೆಗಾಗಿ ಒಪ್ಪಿಸಿ ಬಿಟ್ಟುಹೋಗಿದ್ದನು. ಆದರೆ ವಿಷಯಾಸಕ್ತನಾದ ನಾನು ಅವಳ ವಿಷಯವನ್ನೇ ಮರೆತು ಅವಳನ್ನು ನೋಡಿಕೊಳ್ಳಲಿಲ್ಲ. ಈಗ ಆ ಕೃಷ್ಣಶರ್ಮ

ಶ್ರುತ್ವಾ ಮೃತಾಂ ನಿರಾಹಾರಾಂ ಸಪುತ್ರಾಂ ಶುಷ್ಕದೇಹಿನೀಮ್ ।
ಪರಂ ನಿರ್ವಿಣ್ಣಚಿತ್ತೋಽಹಮವದಂ ದ್ವಿಜಮಗ್ರತಃ ॥28॥

ಗತಾ ಸಾ ದೇವಸೇವಾರ್ಥಂ ಶ್ವ ಆನೇಷ್ಯಾಮಿ ತಾಂ ಪ್ರಿಯಾಮ್।
ಸಪುತ್ರಾಂ ತವ ಭಾರ್ಯಾಂ ವೈ ಮಾ ಭೈಷೀರ್ದ್ವಿಜಸತ್ತಮ ॥29॥

ಭವಿಷ್ಯತಿ ಕಥಂ ಚೇತಿ ಭೃಶಂ ಚಿಂತಾಮುಪಾಗತಃ ।
ತ್ವಾಮೇವ ಶರಣಂ ದೇವ ಪ್ರಣತಾರ್ತಿಹರಂ ಗತಃ ॥30॥

ಯಥಾ ಪಾಪಂ ನ ವಿಂದೇಯಂ ಚರಿತಾರ್ಥೋ ಯಥಾ ದ್ವಿಜಃ ।
ದೇವದೇವ ತಥಾ ಕರ್ತುಂ ಶಕ್ತೋ ನಾನ್ಯಸ್ತ್ವಯಾ ವಿನಾ ॥31॥

ತ್ರಾಹಿ ಮಾಂ ಶರಣಂ ಪ್ರಾಪ್ತಮಿತಸ್ತ್ವಂ ದುಃಖಸಾಗರಾತ್ ।
ಗತಿಸ್ತ್ವಮೇವ ಚಾಸ್ಮಾಕಂ ನಾನ್ಯೋಽಸ್ತಿ ಜಗತೀಪತೇ' ॥32॥

ಇತಿ ಪ್ರಣಮ್ಯ ದೇವೇಶಂ ಸ್ಥಿರಸ್ತೂಷ್ಣೀಂ ನೃಪೋತ್ತಮಃ ।

ಬ್ರಾಹ್ಮಣನು ಇಲ್ಲಿಗೆ ತಿರುಗಿ ಬಂದು ತನ್ನ ಪೂರ್ವ ವೃತ್ತಾಂತವನ್ನು ಹೇಳಿ ಪುತ್ರಪತ್ನಿಯರನ್ನು ತಿರುಗಿ ಒಪ್ಪಿಸೆಂದು ಕೇಳಿದಾಗಲೇ ನನಗೆ ಅವರ ವಿಷಯವು ಜ್ಞಾಪಕಕ್ಕೆ ಬಂದು ಅವರನ್ನು ನೋಡಿ ಕರೆದು ತರಲು ಭೃತ್ಯರನ್ನು ಕಳುಹಿಸಿದೆನು. ಭೃತ್ಯರಿಂದ, ದ್ವಿಜಭಾರ್ಯೆಯು ತನ್ನ ಮಗನ ಸಮೇತಳಾಗಿ ಆಹಾರ ವಿಲ್ಲದೇ ಮರಣವನ್ನು ಹೊಂದಿದಳೆಂಬ ವೃತ್ತಾಂತವನ್ನು ಕೇಳಿ ಅತ್ಯಂತ ದುಃಖವನ್ನು ಹೊಂದಿದೆನು. (28) ಅನಂತರ ಬ್ರಾಹ್ಮಣನಿಗೆ ನಿಜವನ್ನು ತಿಳಿಸದೆ 'ಅವಳು ಶ್ರೀನಿವಾಸನ ಸೇವಾರ್ಥವಾಗಿ ಹೋಗಿರುವಳು. ಅವಳನ್ನು ಮಗನಿಂದ ಕೂಡಿದವಳನ್ನಾಗಿ ನಾಳೆ ಕರೆತರುವೆನೆಂದು ತಿಳಿಸಿದೆನು. (29) ಆದರೆ ಇದು ಹೇಗೆ ಸಾಧ್ಯವಾದೀತೆಂದು ಅತ್ಯಂತ ಚಿಂತಿತನಾಗಿ ಇರುವೆನು. ಅದರಗೋಸ್ಕರವಾಗಿ ಅಘಟ್ಯಘಟನಾಕುಶಲನಾದ, ನಮಜ್ಜನರ ಪಾಪಗಳನ್ನು ಕಳೆದು ಸರ್ವಾಭೀಷ್ಟಗಳನ್ನೊದಗಿಸುವ ನಿನ್ನನ್ನೇ ಶರಣು ಹೊಂದಿರುವೆನು. (30) ಹೇ ದೇವದೇವನೇ! ನಾನು ಹೇಗೆ ಪಾಪಗ:ಳನ್ನು ಹೊಂದುವದಿಲ್ಲವೋ ಮತ್ತು ಬ್ರಾಹ್ಮಣನು ಹೇಗೆ ತನ್ನ ಪತ್ನಿಪುತ್ರರನ್ನು ಹೊಂದಲು ಸಾಧ್ಯವಾಗುವದೋ ಹಾಗೆ ಮಾಡಲು ನೀನೇ ಸಮರ್ಥ ನಾಗಿರುವಿ. ನಿನ್ನನ್ನು ಬಿಟ್ಟು ಈ ಕಾರ್ಯವನ್ನು ಮಾಡಲು ಯಾರೂ ಸಮರ್ಥರಲ್ಲ. (31) ನಿನ್ನನ್ನೇ ಶರಣು ಹೊಂದಿರುವ ನನ್ನನ್ನು ಈ ದುಃಖಸಾಗರದಿಂದ ಪಾರುಮಾಡು. ನನ್ನನ್ನು ಕಾಪಾಡು. ಹೇ ವಿಶ್ವ ನಿಯಾಮಕನೇ! ಸಂಸಾರ ಸಾಗರ ಪತಿತರಾದ ನಮಗೆ ನೀನಲ್ಲದೇ ಬೇರೆ ಯಾರೂ ಗತಿಯಾಗಿರುವದಿಲ್ಲ.' (32) ಹೀಗೆಂದು ಪರಮಾತ್ಮನಾದ ಶ್ರೀನಿವಾಸನನ್ನು ಬೇಡಿಕೊಂಡು,

ಸಾಂತ್ವಯನ್ಮಧುರೈರ್ವಾಕ್ಯೈರುವಾಚ ಮಧುಸೂದನಃ ॥33॥

ಶ್ರೀಭಗವಾನುವಾಚ–

'ಮಾ ತೇ ವ್ಯಥಾ ಭೂದ್ರಾಜರ್ಷೇ ಮಾ ಭೈಷೀಸ್ತ್ವಂ ಕದಾಚನ।
ತವೋಪಾಯಮಹಂ ವಕ್ಷ್ಯೇ ದ್ವಿಜಭಾರ್ಯಾಪ್ರಜೀವನೇ ॥34॥

ವಿಪ್ರಃ ಕಾಶೀಂ ಪ್ರಯಾಸ್ಯನ್ಮಾಂ ದೃಷ್ಟ್ವಾಽನುಜ್ಞಾಪ್ಯ ವೈ ಗತಃ ।
ಸುಧರ್ಮಿಣೀ ಚ ಮದ್ಭಕ್ತಾ ಸಾಧ್ವೀ ಮದ್ಗತಮಾನಸಾ ॥35॥

ತತಸ್ತದೀಯಾ ಪ್ರಾಣಾ ವೈ ಯಮಾಯ ಕಿಲ ನಾರ್ಪಿತಃ ।
ಶರೀರೇ ಮಮ ರಾಜೇಂದ್ರ ಸ್ಥಾಪಿತಾಸ್ತು ಪ್ರಿಯಾಸವಃ' ॥36॥

ಇತ್ಯುಕ್ತ್ವಾಶ್ವಾಸ್ಯ ಭೂಪಾಲಂ ವಿಷ್ವಕ್ಸೇನಮಭಾಷತ ।
ಪ್ರಾಂಜಲಿಂ ವಿನಯಾನಮ್ರಂ ವೇತ್ರಪಾಣಿಂ ಪುರಃಸ್ಥಿತಮ್ ॥37॥

ಬಹಳ ಹೊತ್ತು ಏನೂ ಮಾತನಾಡದೇ ಅವನ ಎದುರಿಗೆ ಸ್ಥಿರವಾಗಿ ನಿಂತುಕೊಂಡನು.

*ಶ್ರೀನಿವಾಸಕೃತಸಾಂತ್ವನ*

ಚೋಲ ಚಕ್ರವರ್ತಿಯನ್ನು ಶ್ರೀನಿವಾಸನು ಮಧುರವಾದ ಮಾತುಗಳನ್ನು ನುಡಿಯುತ್ತಾ ಅವನನ್ನು ಸಾಂತ್ವನಗೊಳಿಸುತ್ತಾ ಹೀಗೆ ನುಡಿದನು. (33) ಭಗವಂತನು 'ಹೇ ನೀನು ದುಃಖಿಸಬೇಡ. ವಿಪ್ರಪತ್ನಿಯು ಶ್ರೀನಿವಾಸನ ಬಳಿ ಇರುವಳೆಂಬ ನಿನ್ನ ಮಾತು ಸುಳ್ಳಾಗುವದಿಲ್ಲ. ಯಾವದೇ ಕಾರಣಕ್ಕೂ ಸಹ ನೀನು ಹೆದರಬೇಡ. ಬ್ರಾಹ್ಮಣನ ಮಡದಿ ಮತ್ತು ಬದುಕುವ ಉಪಾಯವನ್ನು ನಿನಗೆ ಹೇಳುವೆನು. ಕೇಳು. (34) ಕಾಶಿಯನ್ನು ಕುರಿತು ಹೋಗುವಾಗ ವಿಪ್ರನು ಇಲ್ಲಿಗೂ ಬಂದು ತನ್ನ ಪ್ರಯಾಣ ವೃತ್ತಾಂತವನ್ನು ತಿಳಿಸಿ ನನ್ನ ಅನುಗ್ರಹವನ್ನು ತೆಗೆದುಕೊಂಡು ಕಾಶಿಗೆ ತೆರಳಿರುವನು. ಅವನ ಮಡದಿಯಾದ ಸುಧರ್ಮಿಣಿಯು ಪತಿವ್ರತೆಯೂ ನನ್ನ ಭಕ್ತಳೂ ಆಗಿರುವಳು. ಅವಳ ಮನಸ್ಸು ಯಾವಾಗಲೂ ನನ್ನಲ್ಲಿಯೇ ಅರ್ಪಿತವಾಗಿರುವದು. ಆದ್ದರಿಂದ ಅವಳು ಉಪವಾಸದಿಂದ ಮರಣ ಹೊಂದಿದರೂ ಸಹ ಅವಳ ಪ್ರಾಣಗಳು ಯಮನಿಗೆ ಕೊಡಲ್ಪಡಲಿಲ್ಲ. ನನ್ನ ಶರೀರದಲ್ಲಿಯೇ ಅವುಗಳನ್ನು ಧಾರಣಮಾಡಿರುವೆನು' (35–36) ಎಂದು ರಾಜನನ್ನು ಆಶ್ವಾಸನೆಗಳಿಂದ ಸಂತೋಷಪಡಿಸಿದನು.

*ಅಸ್ಥಿಕೂಟಸರಸ್ಸಿನ ಜಲವನ್ನು ತರಲು ವಿಷ್ವಕ್ಸೇನನಿಗೆ ಆಜ್ಞೆ*

ಅನಂತರ ವಿನಯದಿಂದ ಬಾಗಿದ್ದ, ಕೈಮುಗಿದುಕೊಂಡಿದ್ದ, ದಂಡಧಾರಿಯಾಗಿದ್ದ ವಿಷ್ವಕ್ಸೇನನನ್ನು

'ವಿಷ್ವಕ್ಸೇನ ಮಹಾಭಾಗ ಮದೀಯಾಜ್ಞಾಮಿಮಾಂ ಶೃಣು ।
ಇತ ಈಶಾನದಿಗ್ಭಾಗೇ ತ್ವಸ್ಥಿಕೂಟಾಭಿಧಂ ಶುಭಮ್ ॥38॥

ತೀರ್ಥಮಸ್ತಿ ತತಸ್ತೋಯಂ ಸಮಾಹೃತ್ಯ ಸುಪಾವನಮ್ ।
ಸುಧರ್ಮಿಣ್ಯಾಃ ಸುತಸ್ಯಾಪಿ ಶರೀರಮಭಿಷೇಚಯ ॥39॥

ಸಪುತ್ರಾ ಸಾ ಪ್ರಸುಪ್ತೇವ ತತ ಉತ್ಥಾಸ್ಯತಿ ಧ್ರುವಮ್ ।
ವಿಷ್ವಕ್ಸೇನಸ್ತಥೇತ್ಯುಕ್ತ್ವಾ ತೋಯಮಾಹೃತ್ಯ ತೀರ್ಥತಃ ॥40॥

ಸುಧರ್ಮಿಣ್ಯಾಃ ಶರೀರಂ ತದಭ್ಯಷಿಂಚತ್ಸುತಸ್ಯ ಚ ।
ಉತ್ಥಿತಾ ಸಸುತಾ ಸಾಧ್ವೀ ದ್ವಿಜಭಾರ್ಯಾ ಸುಧರ್ಮಿಣೀ' ॥41॥

ಅಥ ರಾಜಾನಮಾಹೂಯ ಪ್ರೋವಾಚ ಮಧುಸೂದನಃ ।
ದೃಷ್ಟೋ ಗಿರಿವರಸ್ಯಾಯಂ ಮಹಿಮಾ ಭವತಾನಘ ॥42॥

ಪ್ರಭಾವಮಚಲಸ್ಯಾಸ್ಯ ಸನಕಾದ್ಯಾಶ್ಚ ಯೋಗಿನಃ ।
ಬ್ರಹ್ಮಾದ್ಯಾಃ ಸಕಲಾಃ ದೇವಾ ನ ಜಾನಂತಿ ಯಥಾ ಮಮ ॥43॥

ಕರೆದು (37–38) 'ಹೇ ಮಹಾಭಾಗನಾದ ವಿಷ್ವಕ್ಸೇನನೇ! ನನ್ನ ಆಜ್ಞೆಯನ್ನು ಕೇಳು. ಇಲ್ಲಿಂದ ಈಶಾನ್ಯದಿಕ್ಕಿನಲ್ಲಿ ಅಸ್ಥಿಕೂಟವೆಂಬ ತೀರ್ಥವಿರುವದು. ಆ ತೀರ್ಥದಿಂದ ಪಾವನವಾದ ನೀರನ್ನು ತಂದು ಸುಧರ್ಮಿಣೀ ಮತ್ತು ಅವಳ ಮಗನ ಮೇಲೆ ಸಿಂಪಡಿಸು. ಮಗನಿಂದ ಸಹಿತಳಾದ ಅವಳು ನಿದ್ದೆಯಿಂದ ಎದ್ದವಳಂತೆ ಎದ್ದೇಳುವಳು. ಇದರಲ್ಲಿ ಯಾವ ಸಂಶಯವೂ ಬೇಡ' ಎಂದು ನುಡಿದನು. ವಿಷ್ವಕ್ಸೇನನು ಸಹ 'ಹಾಗೆಯೇ ಆಗಲಿ' ಎಂದು ನುಡಿದ ಅಸ್ಥಿಕೂಟ ತೀರ್ಥಕ್ಕೆ ತೆರಳಿ ಅಲ್ಲಿಯ ನೀರನ್ನು ತಂದು ಸುಧರ್ಮಿಣೀ ಮತ್ತು ಅವಳ ಮಗನ ಮೇಲೆ ಸಿಂಪಡಿಸಿದನು.

*ಜಲಸೇಚನದಿಂದ ದ್ವಿಜಪತ್ನೀಪುತ್ರರ ಪುನರುಜ್ಜೀವನ*

ತತ್ಕ್ಷಣದಲ್ಲಿಯೇ ಬ್ರಾಹ್ಮಣನ ಪತ್ನಿಯಾದ ಸುಧರ್ಮಿಣೀ ಮತ್ತು ಅವಳ ಮಗ– ಇಬ್ಬರೂ ಸಹ ನಿದ್ದೆಯಿಂದೆದ್ದವರಂತೆ ಎದ್ದು ಕುಃಳಿತರು. (39–41) ಅನಂತರ ಶ್ರೀನಿವಾಸನು ರಾಜನನ್ನು ಕರೆದು 'ನಿನ್ನಿಂದ ಈ ನನ್ನ ಪರ್ವತದ ಮಹಿಮೆಯು ನೋಡಲ್ಪಟ್ಟಿರುವದು. ಈ ವೇಂಕಟಾಚಲದ ಮಹಿಮೆಯನ್ನು ಯಾರೂ ಸಹ ಸಂಪೂರ್ಣವಾಗಿ ತಿಳಿದಿರುವದಿಲ್ಲ. ಹೇಗೆ ನಾನು ಬ್ರಹ್ಮಾದಿ ದೇವತೆಗಳಿಂದಲೂ ಸಾಕಲ್ಯೇನ ಜ್ಞೇಯನಾಗಿಲ್ಲವೋ ಹಾಗೆ ನನ್ನ ಆವಾಸಕ್ಷೇತ್ರದ ಮಹಿಮೆಯೂ ಸಹ ಸಾಕಲ್ಯೇನ ಅಜ್ಞೇಯವೇ ಆಗಿರುವದು. ಯಾವ ಯಾವ ಮನುಷ್ಯರು ಏನನ್ನು ತಮ್ಮ

ಯದ್ಯದಿಚ್ಛತಿ ವೈ ಜಂತುರ್ಮನಾಭೀಪ್ಸಿತಂ ನೃಪ ।
ತಥಾ ಸಿದ್ಧ್ಯತಿ ತತ್ಸರ್ವಂ ಗಿರೇರಸ್ಯ ಪ್ರಭಾವತಃ ॥44॥

ಅಥ ವಿಪ್ರಂ ಸಮಾಹೂಯ ಭಾರ್ಯಾಂ ಚಾಸ್ಯ ಸುಧರ್ಮಿಣೀಮ್ ।
ದ್ವಿಜಭಾರ್ಯಾಮಥಾಪೃಚ್ಛದ್ವದ ತೇ ಕಿಮಭೀಪ್ಸಿತಮ್ ॥45॥

ಸಾ ತಥೋಕ್ತಾ ತು ದೇವೇನ ವರಯಾಮಾಸ ಮಾಧವಮ್ ।
ತ್ವದ್ಭಕ್ತಿಶ್ಚ ದೃಢಾ ಚಾಸ್ತು ಮಮ ದೇವೇಶ ನಿತ್ಯಶಃ ॥46॥

ಏವಂ ಸಂಪ್ರಾರ್ಥಿತೋ ದೇವೋ ದದೌ ತಸ್ಯಾ ಅಭೀಪ್ಸಿತಮ್ ।
ತತೋ ವಿಧಿಶಿವಾದ್ಯಾಶ್ಚ ಸನಕಾದ್ಯಾಶ್ಚ ಯೋಗಿನಃ ॥47॥

ವೃಷಾದ್ರಿಮಗಮನ್ಸರ್ವೇ ದ್ರಷ್ಟುಕಾಮಾಸ್ತದದ್ಭುತಮ್ ।
ಕೃಷ್ಣಶರ್ಮಾ ಚ ಸಂತುಷ್ಟೋ ವಿಸ್ಮಿತಶ್ಚ ಮಹಾಮುನೇ ॥48॥

ಪ್ರಣಮ್ಯ ಸ್ತೋತ್ರಯಾಮಾಸ ದೇವದೇವಂ ರಮಾಪತಿಮ್ ।
ದೇವದೇವೋ ನೃಪಂ ಪ್ರಾಹ ನ ಚಾಸ್ಯ ಸದೃಶೋ ಭುವಿ ॥49॥

ಮನಸ್ಸಿನಲ್ಲಿಟ್ಟುಕೊಂಡು ಈ ಪರ್ವತಕ್ಕೆ ಬರುವರೋ ಅವರು ತಮ್ಮೆಲ್ಲ ಮನೋಭೀಷ್ಟಗಳನ್ನು ಈ ಗಿರಿಯ ಪ್ರಭಾವದಿಂದ, ನನ್ನ ದರ್ಶನ ಮಾತ್ರದಿಂದ ಹೊಂದುವರು'ಎಂದು ನುಡಿದನು.

*ಬ್ರಾಹ್ಮಣ-ಪತ್ನಿಗೆ ಭಗವಂತನ ಅನುಗ್ರಹ*

ಅನಂತರ ಬ್ರಾಹ್ಮಣಶ್ರೇಷ್ಠನನ್ನು ಮತ್ತು ಅವನ ಸಹಧರ್ಮಿಣಿಯಾದ ಸುಧರ್ಮೆಯನ್ನು ಕರೆದು ಅವಳನ್ನು 'ನಿನ್ನ ಬಯಕೆಯೇನು? ಕೇಳು. ಪೂರೈಸುವೆನು.' ಎಂದು ನುಡಿದನು.(42–45) ಪರಮಾತ್ಮನಿಂದ ಹೀಗೆ ಹೇಳಿಸಿಕೊಂಡ ಸುಧರ್ಮಿಣಿಯು 'ದೇವೇಶನೇ! ನನಗೆ ನಿನ್ನಲ್ಲಿ ದೃಢವಾದ ಭಕ್ತಿಯು ನಿತ್ಯದಲ್ಲಿಯೂ ಇರಲಿ' ಎಂದು ಲಕ್ಷ್ಮೀಪತಿಯಾದ ಶ್ರೀನಿವಾಸನನ್ನು ಬೇಡಿಕೊಂಡಳು. (46) ಅವಳಿಂದ ಪ್ರಾರ್ಥಿತನಾದ ಶ್ರೀನಿವಾಸನು ಅವಳಿಗೆ ಹಾಗೆಯೇ ವರವನ್ನು ದಯಪಾಲಿಸಿದನು.

ಅನಂತರ ಬ್ರಹ್ಮರುದ್ರಾದಿ ದೇವತೆಗಳು ಮತ್ತು ಸನಕಾದಿ ಯೋಗಿಗಳು ವೃಷಭಾಚಲಕ್ಕೆ ಈ ಅದ್ಭುತವನ್ನು ನೋಡಲು ಬಂದರು. ಕೃಷ್ಣಶರ್ಮನೂ ಸಹ ಅತ್ಯಂತ ಸಂತುಷ್ಟನಾಗಿ ಆಶ್ಚರ್ಯಹೊಂದಿ ದೇವದೇವನಾದ ರಮಾಪತಿಯನ್ನು ನಮಸ್ಕರಿಸಿ ಅವನನ್ನು ಬಹುವಾಗಿ ಸ್ತುತಿಸಿದನು. (47,48)

*ಕೃಷ್ಣಶರ್ಮನಿಗೆ ಶ್ರೀನಿವಾಸನ ಅನುಗ್ರಹ*

ವಿಪ್ರಸ್ಯ ಮಯಿ ಭಕ್ತಸ್ಯ ತಥೈವ ನಿಯತಾತ್ಮನಃ ।
ಅಸೌ ಜನ್ಮಾಂತರೇ ರಾಜನ್ ತ್ರಯ್ಯಂತಾರ್ಥಪ್ರವರ್ತಕಃ ॥50॥

ಭವಿಷ್ಯತಿ ತದಂತೇ ಚ ಮತ್ಸಾಯುಜ್ಯಮವಾಪ್ಸ್ಯತಿ ।
ರಾಜಾ ಚ ವಿಪ್ರಮಾಹೂಯ ಸಭಾರ್ಯಂಪುರುಷರ್ಷಭಮ್ ॥51॥

ಸ್ವವಾಸಂ ಪ್ರೇಷಯಾಮಾಸ ಪ್ರಹೃಷ್ಟೇನಾಂತರಾತ್ಮನಾ ॥52॥

ತದನು ಚ ನೃಪತಿರ್ವೃಷಾಚಲಂ ತಂ
ಸ್ವಯಮಧಿಗಮ್ಯ ದಿನೇದಿನೇ ಮಹಾತ್ಮಾ ।
ವಿರಚಿತದೃಢಭಕ್ತಿರಸ್ಯ ಕುರ್ವನ್
ವಿವಿಧಮನೋರಥಕಿಂಕರತ್ವಮಾಸೀತ್ ॥53॥

ಕಥಿತಂ ಭಾವಿವೃತ್ತಾಂತಂ ದೇವದೇವಸ್ಯ ಶಾರ್ಙ್ಗಿಣಃ ।

ಅನಂತರ ಶೇಷಾಚಲಾಧೀಶನು ರಾಜನನ್ನು ಕುರಿತು 'ಹೇ ರಾಜನೇ! ಈ ಶೇಷಾಚಲಕ್ಕೆ ಸದೃಶವಾದ ಕ್ಷೇತ್ರವು ಭೂಮಿಯಲ್ಲಿ ಮತ್ತೊಂದಿರುವದಿಲ್ಲ. ಬ್ರಾಹ್ಮಣನಾದ ನನ್ನ ಭಕ್ತನಾದ, ಇಂದ್ರಿಯ ನಿಗ್ರಹವನ್ನು ಹೊಂದಿರುವ ಈ ಬ್ರಾಹ್ಮಣನು ಮುಂದಿನ ಜನ್ಮದಲ್ಲಿ ವೇದಾರ್ಥಗಳನ್ನು ಭೂಮಿಗೆ ಉಪದೇಶಿಸಿ ಕೊನೆಗೆ ನನ್ನ ಸಾಯುಜ್ಯವನ್ನು ಹೊಂದುವನು' ಎಂದು ನುಡಿದು ಅನುಗ್ರಹಿಸಿದನು.

ರಾಜನು ಅತ್ಯಂತ ಸಂತುಷ್ಟನಾಗಿ ಪೂರ್ಣಮನಸ್ಸಿನಿಂದ ಬ್ರಾಹ್ಮಣನನ್ನು ಕರೆದು ಅವನ ಹೆಂಡತಿಯನ್ನು ಅವನಿಗೆ ಒಪ್ಪಿಸಿ, ಅವನನ್ನು ಪೂಜಿಸಿ, ಅವನನ್ನು ಅವನ ದೇಶಕ್ಕೆ ಕಳುಹಿಸಿದನು.

*ಭಗವಂತನಲ್ಲಿಯ ರಾಜನ ಭಕ್ತಿ*

ಅನಂತರ ರಾಜನು ವೃಷಭಾಚಲಕ್ಕೆ ತಾನೇ ಬಂದು ಪರಮಾತ್ಮನನ್ನು ಅರ್ಚಿಸಿದನು. ಮಹಾತ್ಮನಾದ ರಾಜನು ದಿನದಿನವೂ ಸಹ ಶೇಷಾಚಲಕ್ಕೆ ಬಂದು ಅತ್ಯಂತ ದೃಢಭಕ್ತಿಯಿಂದ ಪರಮಾತ್ಮನನ್ನು ಆರಾಧಿಸಿ ಮನಸ್ಸಿನ ಬಯಕೆಗಳನ್ನು ತನ್ನ ಕಿಂಕರರನ್ನಾಗಿಸಿದನು. (ಮನೋರಥಗಳೆಲ್ಲವೂ ಪೂರ್ಣವಾದವು) (53)

ಹೇ ಭೃಗುಮಹರ್ಷಿಯೇ! ನಿನಗೆ ದೇವಾಧಿದೇವನಾದ ಶಾರ್ಙ್ಗಪಾಣಿಯಾದ ಶ್ರೀನಿವಾಸನ ಭಾವಿ (ಮುಂದುಂಟಾಗುವ) ವೃತ್ತಾಂತವನ್ನು ನಿನಗೆ ತಿಳಿಸಿರುವನು. ಮುಂದೆ ಕಲಿಯುಗದಲ್ಲಿ ಈ ಸ್ವಾಮಿಯು ತನ್ನ ಭಕ್ತರಿಗೆ ಅಭೀಷ್ಟಗಳನ್ನು ಅನುಗ್ರಹಿಸುತ್ತಾ, ರಮಾದೇವಿಯಿಂದ ಕೂಡಿಕೊಂಡು ವಿಹಾರವನ್ನು ಮಾಡುತ್ತಾ, ದೇವತೆಗಳಿಂದ, ಸಿದ್ಧಜನರಿಂದ ಸಂಸೇವಿತನಾಗಿ ಅತ್ಯಂತ ಸಂತುಷ್ಟನಾಗಿ

ಅರ್ಚಿತಶ್ಚ ಕಲೌ ಭಕ್ತೈರದ್ಭುತಾನಿ ಪ್ರದರ್ಶಯನ್ ॥54॥

ವಿಹರನ್ ರಮಯಾ ಚೈವ ಸಾಕಂ ತತ್ರ ಮಹೀಧರೇ ।
ವಸಿಷ್ಯತಿ ಚ ಹೃಷ್ಟಾತ್ಮಾ ಸುರಸಿದ್ಧನಿಷೇವಿತಃ ॥55॥

ಇತ್ಯೇವಂ ಭೃಗವೇ ತಸ್ಮೈ ಕಥಯಾಮಾಸ ನಾರದಃ ।
ವೇಂಕಟಾಚಲಮಾಹಾತ್ಮ್ಯಂ ಪರಂ ವ್ಯಾಸೇನ ಕೀರ್ತಿತಮ್॥56॥

ಇತಿ ಶ್ರೀಬ್ರಹ್ಮಾಂಡಪುರಾಣೇ ಭೃಗುನಾರದಸಂವಾದೇ ತೀರ್ಥಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಅಸ್ಥಿಕೂಟತೀರ್ಥಮಾಹಾತ್ಮ್ಯವರ್ಣನಂ ನಾಮ ದಶಮೋಽಧ್ಯಾಯಃ ॥

* * *

ವಾಸಮಾಡುವನು. (54–55) ಹೀಗೆ ನಾರದರು ವೇದವ್ಯಾಸದೇವರಿಂದ ಉಪದಿಷ್ಟವಾದ ವೇಂಕಟಾಚಲದ ಮಾಹಾತ್ಮೆಯನ್ನು ಭೃಗುಮಹರ್ಷಿಗಳಿಗೆ ಉಪದೇಶಿಸಿದರು.

ಇಲ್ಲಿಗೆ ಬ್ರಹ್ಮಾಂಡಪುರಾಣದ ಭೃಗುನಾರದಸಂವಾದದಲ್ಲಿಯ ತೀರ್ಥಖಂಡದ ವೇಂಕಟೇಶ ಮಾಹಾತ್ಮೆಯಲ್ಲಿ ಅಸ್ಥಿಕೂಟತೀರ್ಥಮಾಹಾತ್ಮ್ಯ ವರ್ಣನವೆಂಬ ಹತ್ತನೆಯ ಅಧ್ಯಾಯವು ಸಮಾಪ್ತವಾಯಿತು.

* * *

ಬ್ರಹ್ಮಾಂಡಪುರಾಣಾಂತರ್ಗತ ವೇಂಕಟೇಶಮಾಹಾತ್ಮ್ಯೇ

## ಅಥ ಏಕಾದಶೋಽಧ್ಯಾಯಃ

ಭೃಗುರುವಾಚ-

'ನಮೋ ನಮಸ್ತೇ ಸರ್ವಜ್ಞ ಕರುಣಾನಿಧೇ ।
ವೇಂಕಟಾಚಲಮಾಹಾತ್ಮ್ಯಂ ಭೂತಂ ಭಾವಿ ಚ ಮೇ ಶ್ರುತಮ್ ॥1॥

ಕೇನಾಕಾರೇಣ ಭಗವಾನಾಕಲ್ಪಂ ನಿವಸಿಷ್ಯತಿ ।
ಕಿಂ ಕರಿಷ್ಯತಿ ವಾ ದೇವಃ ಶ್ರೀಮಾನ್ವೇಂಕಟನಾಯಕಃ ॥2॥

ಏತತ್ಸರ್ವಂ ಸಂಗ್ರಹೇಣ ಬ್ರೂಹಿ ಮೇ ಮುನಿಸತ್ತಮ ।
ಯಸ್ಯ ಶ್ರವಣಮಾತ್ರೇಣ ಶ್ರೋತವ್ಯಂ ನಾವಶಿಷ್ಯತೇ' ॥3॥

ನಾರದ ಉವಾಚ-

ಶ್ರೂಯತಾಮಿದಮಾಖ್ಯಾಸ್ಯೇ ಚರಿತಂ ವೇಂಕಟೇಶಿತುಃ ।
ಸಂಭಾಷಿತಮಗಸ್ತ್ಯೇನ ಭುವಿವೃತ್ತೇ ಪ್ರಸಂಗತಃ ॥4॥

## ಹನ್ನೊಂದನೆಯ ಅಧ್ಯಾಯವು

ಭೃಗುಮಹರ್ಷಿಗಳು ನಾರದರನ್ನು ಕುರಿತು ಹೇ ನಾರದರೇ! ಸರ್ವಜ್ಞರೇ! ನಿಮಗೆ ನಮಸ್ಕಾರಗಳು. ಕರುಣಾನಿಧಿಗಳೇ! ನೀವು ಭೂತ ಮತ್ತು ಭಾವಿಯಾದ ವೇಂಕಟಾಚಲ ಮಾಹಾತ್ಮೆಯನ್ನು ನನಗೆ ತಿಳಿಸಿರುವಿರಿ. ಯಾವ ಕಾರಣದಿಂದ ಈ ಕಲ್ಪವು ಪೂರ್ತಿಯಾಗುವವರೆಗೆ ಶ್ರೀನಿವಾಸನು ಪ್ರತ್ಯಕ್ಷವಾಗಿ ಈ ಪರ್ವತದಲ್ಲಿರುವನು? ಇಲ್ಲಿದ್ದು ಯಾವ ವ್ಯಾಪಾರಗಳನ್ನು ಮಾಡುವನು? ಇದೆಲ್ಲವನ್ನು ಸಂಗ್ರಹಿಸಿ ನನಗೆ ತಿಳಿಸಿರಿ. ಹೇ ಮುನಿಸತ್ತಮರೇ! ಯಾವ ಮಾಹಾತ್ಮೆಯನ್ನು ಶ್ರವಣಮಾಡಿದಲ್ಲಿ ಶ್ರೋತವ್ಯ ವಾದ ಯಾವ ವಿಷಯವೂ ಇರುವದಿಲ್ಲವೋ ಅಂತಹ ವೇಂಕಟ ನಾಯಕನ ಚರಿತ್ರೆಯನ್ನು ನನಗೆ ತಿಳಿಸಿರಿ' ಎಂದು ಪ್ರಾರ್ಥಿಸಿದರು.(3)

ನಾರದರು ಭೃಗು ಮಹರ್ಷಿಗಳನ್ನು ಕುರಿತು 'ವೇಂಕಟಾಧಿಪತಿಯ ಚರಿತ್ರೆಯನ್ನು ನಿಮಗೆ ಹೇಳುವೆನು. ಇದನ್ನು ಹಿಂದೆ ಅಗಸ್ತ್ಯಮುನಿಗಳು ನನಗೆ ಮುಂದಿನ ವೃತ್ತಾಂತಗಳನ್ನು ಹೇಳುವ ಪ್ರಸಂಗದಲ್ಲಿ ತಿಳಿಸಿದ್ದರು. ಅದನ್ನು ನಿಮಗೆ ಹೇಳುವೆನು. ಕೇಳಿರಿ' ಎಂದು ನುಡಿದು ವೇಂಕಟೇಶನ

ಚಕ್ರವರ್ತೀ ಚ ಭೂಪಾಲಃ ಶಾಸಿಷ್ಯತಿ ವಸುಂಧರಾಮ್ ।
ಭವಿಷ್ಯತಿ ತದಾ ದೈತ್ಯಃ ಸಿಂಹಾದೋ ನಾಮ ವೀರ್ಯವಾನ್ ॥5॥

ಸ ದುರಾತ್ಮಾ ತಪಸ್ತೇಪೇ ನಿಧ್ಯಾಯನ್ ಪರಮೇಷ್ಠಿನಮ್ ।
ಉತ್ತರೇ ಪಾಪನಾಶಸ್ಯ ಸಾರ್ಧಯೋಜನದೂರತಃ ॥6॥

ಸರಸ್ಯಘವಿನಾಶಾಖ್ಯೇ ಕುರ್ವಂಸ್ತ್ರಿಷವಣಾಪ್ಲವಮ್ ।
ಪ್ರಜಾಪತೇ ತ್ವದನ್ಯೋ ನ ವಿಶ್ವೋಪರಿ ಬಭೂವ ಹ[22] ॥7॥

ವಯಂಶ್ರೇಯಸ್ವಿನಃಸ್ಯಾಮ ಸೋಽಸ್ತು ಯೋನೋಮನೋರಥಃ ।
ಇತಿ ಮಂತ್ರಂ ಜಪನ್ನಿತ್ಯಂ ಆರರಾಧ ಚತುರ್ಮುಖಮ್ ॥8॥

ವರ್ಷೇ ಪೂರ್ಣೇ ಸ ಭಗವಾನ್ ಹಂಸಾರೂಢಃ ಸರೋಜಭೂಃ ।
ಆವಿರ್ಬಭೂವ ಪುರತಃ ಸಿಂಹಾದಸ್ಯ ತಪಸ್ವಿನಃ ॥9॥

ಬ್ರಹ್ಮೋವಾಚ –

ಮಹಿಮೆಯನ್ನು ಹೇಳಲುಪಕ್ರಮಿಸಿದರು.

*ಅಗಸ್ತ್ಯವರ್ಣಿತ ಸಿಂಹಾದ ವೃತ್ತಾಂತ*

ಮುಂದೆ ಚಕ್ರವರ್ತಿಯು ರಾಜನಾಗಿ ಭೂಮಿಯನ್ನು ಆಳುವನು. ಆಗ ಪರಾಕ್ರಮಿಯಾದ ಸಿಂಹಾದನೆಂಬ ರಾಕ್ಷಸನು ಭೂಮಿಯುಲ್ಲಿ ಜನಿಸುವನು. ದುಷ್ಟನಾದ ಅವನು ಶ್ರೀವೇಂಕಟಗಿರಿಯಲ್ಲಿರುವ ಪಾಪನಾಶನ ತೀರ್ಥದಿಂದ ಉತ್ತರಕ್ಕೆ ಒಂದೂವರೆ ಯೋಜನ ದೂರದಲ್ಲಿರುವ ಅಘನಾಶನ (ಪಾಪವಿನಾಶನ) ತೀರ್ಥದಲ್ಲಿ ನಿತ್ಯದಲ್ಲಿಯೂ ಮೂರು ಬಾರಿ ಅವಗಾಹನ ಸ್ನಾನವನ್ನು ಮಾಡಿ ಚತುರ್ಮುಖ ಬ್ರಹ್ಮದೇವರನ್ನು ಯಾವಾಗಲೂ ಧ್ಯಾನಿಸುತ್ತಾ 'ಪ್ರಜಾಪತೇ ತ್ವದನ್ಯೋ ನ ವಿಶ್ವೋಪರಿ ಬಭೂವ ಹ । ವಯಂ ಶ್ರೇಯಸ್ವಿನಃ ಸ್ಯಾಮ ಸೋಽಸ್ತು ಯೋ ನೋ ಮನೋರಥಃ' (ಹೇ ಪ್ರಜಾಪತಿಯಾದ ಚತುರ್ಮುಖ ಬ್ರಹ್ಮದೇವರೇ! ನಿಮ್ಮಿಂದ ಭಿನ್ನರಾದ ಯಾರೂ ಸಹ ಈ ಪ್ರಪಂಚದಲ್ಲಿ ಶ್ರೇಷ್ಠರೆನಿಸುವದಿಲ್ಲ. ನಿಮ್ಮಿಂದಲೇ ನಾವು ಐಹಿಕ–ಆಮುಷ್ಮಿಕ ಮನೋರಥಗಳನ್ನು ಪಡೆಯುವೆವು. ನಿಮ್ಮ ಅನುಗ್ರಹವೇ ನಮಗೆ ಮನೋಭೀಷ್ಟವಾಗಲಿ ಎಂಬರ್ಥದ) ಎಂಬ ಮಂತ್ರವನ್ನು ನಿತ್ಯದಲ್ಲಿಯೂ ಜಪಿಸುತ್ತಾ ಚತುರ್ಮುಖ ಬ್ರಹ್ಮದೇವರನ್ನು ಏಕಾಗ್ರಮನಸ್ಸಿನಿಂದ ತಪಸ್ಸನ್ನು ಮಾಡಿದನು. ಹೀಗೆ ಒಂದು ವರ್ಷ ಭಕ್ತಿಯಿಂದ ಬ್ರಹ್ಮದೇವರನ್ನು

22. 'ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿ ತಾ ಬಭೂವ । ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋ ರಯೀಣಾಮ್' (ಋ. 10-121-10.)

'ಉತ್ತಿಷ್ಠೋತ್ತಿಷ್ಠ ಭದ್ರಂ ತೇ ಸಿಂಹಾದ ಕುಶಲೀ ಭವ ।
ತಪಸಾ ತವ ತುಷ್ಟೋಽಸ್ಮಿ ವರಂ ವರಯ ಸುವ್ರತ' ॥10॥

ಸಿಂಹಾದ ಉವಾಚ–

'ನಮೋ ನಮಸ್ತೇ ವಿಶ್ವೇಶ ಸರ್ವಕಾರಣ ಕಾರಣ ।
ಯದಿ ಪ್ರೀತೋಽಸಿ ಭಗವನ್ ದೇಹಿ ಮೇ ವರಮುತ್ತಮಮ್ ॥11॥

ದೇವದಾನವಗಂಧರ್ವಯಕ್ಷರಾಕ್ಷಸಪನ್ನಗಾಃ ।
ವಶೇ ತು ಮಮ ವರ್ತಂತಾಂ ತೇಭ್ಯೋ ನ ಚ ಭಯಂ ಮಮ ॥12॥

ಸಿಂಹಾದವಚನಂ ಶ್ರುತ್ವಾ ತಥಾಸ್ತ್ವಿತಿ ವಿರಂಚಿನಃ ।
ಆಭಾಷ್ಯಾಂತರ್ದಧೇ ಸಾಕಂ ಯೋಗೀಶೈರಸ್ಯ ಪಶ್ಯತಃ ॥13॥

ತದಾಪ್ರಭೃತಿ ದುಷ್ಟಾತ್ಮಾ ಬಬಾಧೇ ದೇವತಾಗಣಾನ್ ।
ಕ್ಷತ್ರಿಯೈಃ ಸಹ ದೇವಾಂಶ್ಚೈರ್ಮುನೀನನ್ಯಾಂಶ್ಚ ಮಾನವಾನ್ ॥14॥

ಆರಾಧಿಸಿದಾಗ ಸಂತುಷ್ಟರಾದ ಕಮಲ ಸಂಭವನಾದ ಚತುರ್ಮುಖ ಬ್ರಹ್ಮದೇವರು ತಪಸ್ಸನ್ನು ಮಾಡುತ್ತಿದ್ದ ಸಿಂಹಾದನೆದುರು ಹಂಸಾರೂಢರಾಗಿ ಪ್ರತ್ಯಕ್ಷರಾದರು. (9)

*ಬ್ರಹ್ಮದೇವರಿಂದ ವರಪ್ರದಾನ*

ಚತುರ್ಮುಖ ಬ್ರಹ್ಮದೇವರು ಸಿಂಹಾದನನ್ನು ಕುರಿತು "ಹೇ ಸಿಂಹಾದನೇ! ಎದ್ದೇಳು. ನಿನಗೆ ಮಂಗಳವಾಗಲಿ. ನೀನು ಕುಶಲವನ್ನು ಹೊಂದುವ-ವನಾಗು. ನಿನ್ನ ತಪಸ್ಸಿನಿಂದ ನಾನು ಸಂತುಷ್ಟನಾಗಿರುವೆನು. ನಿನಗೇನು ಬೇಕು ಕೇಳು. ಕೊಡುವೆನು' ಎಂದು ನುಡಿದರು. (10) ಆಗ ಸಿಂಹಾದನು ಭಕ್ತಿಯಿಂದ ಚತುರ್ಮುಖನನ್ನು ಕುರಿತು 'ಹೇ ಭಗವಂತನೇ! ಸರ್ವಕಾರಣ ಗಳಿಗೂ ಕಾರಣನಾದ, ಸೃಷ್ಟಿಕರ್ತೃವಾದ, ಜಗತ್ತಿಗೆ ಅಧಿಪತಿಯಾದ ಭಗವಂತನೇ! ನಿನಗೆ ನಮಸ್ಕಾರಗಳು. ನೀನು ನನ್ನ ತಪಸ್ಸಿನಿಂದ ಪ್ರಸನ್ನನಾಗಿದ್ದಲ್ಲಿ ನನಗೊಂದು ವರವನ್ನು ದಯಮಾಡು. ದೇವತೆಗಳು, ದಾನವರು, ಗಂಧರ್ವರು, ಯಕ್ಷರು, ರಾಕ್ಷಸರು, ಸರ್ಪಗಳು ಇವರೆಲ್ಲರೂ ಸಹ ನನ್ನ ವಶದಲ್ಲಿರಲಿ. ಅವರಿಂದ ನನಗೆ ಯಾವದೇ ವಿಧವಾದ ಭಯವು ಉಂಟಾಗದಿರಲಿ' ಎಂದು ಬೇಡಿಕೊಂಡನು. (12) ಚತುರ್ಮುಖ ಬ್ರಹ್ಮದೇವರು ಇದಕ್ಕೊಪ್ಪಿ 'ತಥಾಸ್ತು-ಹಾಗೆಯೇ ಆಗಲಿ' ಎಂದು ಹೇಳಿ ಯೋಗಿಶ್ರೇಷ್ಠರಿಂದ ಸಹಿತನಾಗಿ ಅಂತರ್ಧಾನರಾದರು.

*ಸಿಂಹಾದ ಕೃತ ಹಿಂಸಾ*

ಬ್ರಹ್ಮದೇವರಿಂದ ವರವನ್ನು ಪಡೆದ ದಿನದಿಂದ ದುಷ್ಟಪ್ರವೃತ್ತಿಯವನಾದ ಸಿಂಹಾದನು ದೇವತೆಗಳ

ಏವಂ ತೇನಾರ್ದಿತಾ ದೇವಾ ಮುನಯಶ್ಚ ತಪೋಧನಾಃ ।
ಶರಣ್ಯಂ ಶರಣಂ ಜಗ್ಮುರ್ವೇಂಕಟೇಶಂ ಯಥಾ ನಿಧಿಮ್ ॥15॥

ದೇವಾ ಊಚುಃ–

'ದೈತ್ಯಾರೇ ದೇವದೇವೇಶ ಶರಣಾಗತವತ್ಸಲ ।
ತ್ರಾಹಿ ನಃ ಪುಂಡರೀಕಾಕ್ಷ ಸಿಂಹಾದಾದಸುರಾಧಮಾತ್ ॥16॥

ತ್ರಿಲೋಕೀ ಬಾಧತೇ ನಿತ್ಯಮನುಭುಂಕ್ತೇ ಚ ರೂಪಿಣೀಮ್ ।
ಸಿಂಹಾದಃ ಕ್ರೂರಚಾರಿತ್ರಃ ಪಾಪಃ ಪ್ರಾಪ್ತವರೋ ವಿಧೇಃ' ॥17॥

ಇತಿ ತೇಷಾಂ ವಚಃ ಶ್ರುತ್ವಾ ಭಗವಾನ್ ಭೂತಭಾವನಃ ।
ಮೇಘಧ್ವನಿಗಭೀರೇಣ ವಚಸಾಽನ್ವಗ್ರಹೀತ್ಸುರಾನ್ ॥18॥

ಶ್ರೀಭಗವಾನುವಾಚ–

'ಅಭಯಂ ಬ್ರಹ್ಮಣಾ ದತ್ತಂ ದೇವೇಭ್ಯಃ ಸುರಸತ್ತಮಾಃ ।

ಸಮೂಹಗಳನ್ನು, ಭೂಮಿಯಲ್ಲಿರುವ ದೇವಾಂಶ ಯುಕ್ತರಾದ ಕ್ಷತ್ರಿಯರನ್ನು, ಮತ್ತು ಇತರ ಋಷಿ–ಮುನಿಗಳನ್ನು ಹಾಗು ಮಾನವರನ್ನು ಅತಿಯಾಗಿ ಬಾಧಿಸಿದನು. (14) ಹೀಗೆ ಸಿಂಹಾದನಿಂದ ಬಾಧಿತರಾದ ದೇವತೆಗಳು ಮತ್ತು ತಪೋಧನರಾದ ಮಹರ್ಷಿಗಳು ವೇಂಕಟಾಚಲಕ್ಕೆ ಹೋಗಿ ವೇಂಕಟಾಧೀಶನಾದ ಶ್ರೀನಿವಾಸನನ್ನು ಅನನ್ಯ ಗತಿಕರಾಗಿ ಶರಣು ಹೊಂದಿದರು. (15)

*ದೇವಕೃತ ಶ್ರೀನಿವಾಸ ಪ್ರಾರ್ಥನಾ*

ದೇವತೆಗಳು ಮತ್ತು ಋಷಿಗಳು ಪರಮಾತ್ಮನನ್ನು ಕುರಿತು 'ದೇವದೇವರಿಗೂ ಅಧಿಪತಿಯಾದ ಶರಣಾಗತವತ್ಸಲನಾದ, ದೈತ್ಯಶತ್ರುವಾದ ಪರಮಾತ್ಮನೇ! ಕಮಲನಯನನೇ! ನಮ್ಮನ್ನು ದೈತ್ಯಾಧಮನಾದ ಸಿಂಹಾದನಿಂದ ನಮ್ಮನ್ನು ಕಾಪಾಡು. ಮೂರು ಲೋಕವೂ ಸಹ ಅವನಿಂದ ಬಾಧಿತವಾಗಿರುವದು. ಯಾವ ಸುಂದರಿಯಿರುವಳೋ ಅವಳನ್ನು ಅಪಹರಿಸಿ ಅವಳನ್ನನು ಭವಿಸುವದು ಇವೇ ಮೊದಲಾದ ಕ್ರೂರಕರ್ಮಗಳನ್ನು ಆ ಸಿಂಹಾದನು ಮಾಡುತ್ತಿರುವನು. ಪಾಪಿಷ್ಟನಾದ ಸಿಂಹಾದನು ಚತುರ್ಮುಖ ನಿಂದ ವರವನ್ನು ಹೊಂದಿ ಅತ್ಯಂತ ಪಾಪಕೃತ್ಯಗಳಲ್ಲಿಯೇ ಆಸಕ್ತನಾಗಿರುವನು. ಅವನಿಂದ ನಮ್ಮನ್ನು ರಕ್ಷಿಸು' ಎಂದು ನುಡಿದರು. (16–17)

ದೇವಮುನಿಗಳ ಸಜ್ಜನರ ಪ್ರಾರ್ಥನೆಯನ್ನಾಲಿಸಿದ ಭಗವಂತನು ಮೇಘಗಂಭೀರವಾದ ಧ್ವನಿಯಿಂದ ಮಾತನಾಡುತ್ತ ದೇವತೆಗಳನ್ನು ಅನುಗ್ರಹಿಸಿದನು. (18)

ನ ದಾನವಾಶ್ಚ ತಂ ಘ್ನಂತಿ ನಾಸುರಾ ನ ಚ ಪನ್ನಗಾಃ ॥19॥

ನೈವ ಶಕ್ತಿರ್ಮನುಷ್ಯಾಣಾಂ ಸಂಹಾರೇಽಸ್ಯ ದುರಾತ್ಮನಃ ।
ಸಹಾಯಾತಸ್ಯ ಬಹವಃ ಸಂತಿ ದೈತ್ಯಾಂಶಸಂಭವಾಃ ॥20॥

ಖರಃ ಕಡಾರಃ ಪಿಂಗಾಕ್ಷಃ ಕನಕಃ ಕದ್ರುಕಃ ಕಪಿಃ ।
ಏತೇ ಹಿ ರಂಡಾಕುಲಜಾಃ ಷಡ್ಬಾಣಸ್ಯಾತ್ರ ಸಂತಿ ಹಿ ॥21॥

ಪ್ರಹ್ಲಾದಾಯ ವರೋ ದತ್ತಃ ಪುರಾ ಪ್ರೀತಿಜುಷಾ ಮಯಾ ।
ತದ್ವಂಶ್ಯಾ ನೈವ ಹಂತವ್ಯಾಃ ಸತ್ಯಪಿ ತ್ರಿಜಗತ್ಕ್ಷಯೇ ॥22॥

ತತ್ರೋಪಾಯಂ ಪ್ರವಕ್ಷ್ಯಾಮಿ ಸಿಂಹಾದಕ್ಷಪಣಾಯ ವಃ ।
ಚಕ್ರವರ್ತೀ ವಸತ್ಯತ್ರ ಕಾಲಹಸ್ತಿಸಮೀಪತಃ ॥23॥

ಸುವರ್ಣಮುಖರೀತೀರೇ ಪಶ್ಚಿಮೇ ಪುಣ್ಯಧಾಮನಿ ।
ಸಮಾಪ್ಯಾಯಯತ ಸ್ವಾಂಶೈರ್ಮದ್ಭಕ್ತಂ ಚಕ್ರವರ್ತಿನಮ್ ॥24॥

ಸಿಂಹಾದಂ ಸುಮಹಾಬಾಹುಂ ಮಹಾಬಲಪರಾಕ್ರಮಮ್ ।
ಸ ಸಂಹರಿಷ್ಯತಿ ಬಲೀ ರಾಕ್ಷಸಾನಿವ ರಾಘವಃ ॥25॥

*ಚಕ್ರವರ್ತಿಯ ಬಳಿ ಹೋಗಲು ದೇವತೆಗಳಿಗೆ ಸೂಚನೆ*

ಸಕಲ ಪ್ರಾಣಿಗಳ ಹಿತಕಾರಕನಾದ ಭಗವಂತನು 'ಹೇ ದೇವತೆಗಳೇ! ಸಿಂಹಾದನಿಗೆ ಬ್ರಹ್ಮದೇವರಿಂದಲೇ ದೇವದಾನವರಾಕ್ಷಸಯಕ್ಷ ಗಂಧರ್ವಾದಿ ಗಳಿಂದ ಭಯವಿರದೆಂದು ವರವುಕೊಡಲ್ಪಟ್ಟಿದೆ. ಆದ್ದರಿಂದ ದೇವತೆ'ಗಳಾಗಲಿ, ದೈತ್ಯರಾಗಲಿ, ಅಸುರರಾಗಲಿ, ದಾನವರಾಗಲಿ, ಸರ್ಪಗಳೇ ಆಗಲಿ ಸಿಂಹಾದನನ್ನು ಕೊಲ್ಲಲು ಸಾಧ್ಯವಿಲ್ಲ. ಇನ್ನು ಅಲ್ಪಶಕ್ತರಾದ ಮನುಷ್ಯರಿಗೆ ದುರಾತ್ಮನಾದ ಸಿಂಹಾದನನ್ನು ಕೊಲ್ಲಲು ಬಲವಿಲ್ಲ. ಇವನಿಗೆ ಸಹಾಯಕರಾಗಿ ನಾನಾ ವಿಧವಾದ ಅಸುರರಲ್ಲದೇ. ಬಾಣಾಸುರನ ಖರ, ಕಡಾರ, ಪಿಂಗಾಕ್ಷ, ಕನಕ, ಕದ್ರುಕ, ಕಪಿ ಎಂಬ ಆರು ಜನ ರಾಕ್ಷಸರು ರಂಡಾಕುಲೋದ್ಭೂತರಾಗಿ ಜನಿಸಿರುವರು. ಹಿಂದೆ ನನ್ನ ಪ್ರೀತಿಪಾತ್ರನಾದ ಪ್ರಹ್ಲಾದನಿಗೆ 'ನಿನ್ನ ವಂಶದವರು ಮೂರು ಲೋಕಗಳ ಕ್ಷಯಕ್ಕೆ ಕಾರಣರಾದರೂ ಸಹ ಅವರನ್ನು ನಾನು ಕೊಲ್ಲುವದಿಲ್ಲ ವೆಂಬುದಾಗಿ ನಾನು ವರವನ್ನು ಕೊಟ್ಟಿರುವೆನು. ಆದ್ದರಿಂದ ನಾನು ಸಾಕ್ಷಾತ್ತಾಗಿ ಆ ರಾಕ್ಷಸರನ್ನು ಕೊ;ಲ್ಲುವದಿಲ್ಲ. ಆದರೂ ಸಹ ಸಿಂಹಾದನ ನಾಶಕ್ಕಾಗಿ ಉಪಾಯವೊಂದನ್ನು ನಿಮಗೆ ಹೇಳುವೆನು ಕೇಳಿರಿ. ಕಾಲಹಸ್ತಿಯ ಸಮೀಪದಲ್ಲಿರುವ ಸುವರ್ಣಮುಖರೀ ನದಿಯ ದಡದಲ್ಲಿ ಪಶ್ಚಿಮ ದಿಕ್ಕಿನಲ್ಲಿರುವ ಶ್ರೇಷ್ಠವಾದ ಕ್ಷೇತ್ರದಲ್ಲಿ

ಸ್ವಸ್ಥಾ ಭವತ ದೇವೇಶಾಃ ಸರ್ವ ಭದ್ರಂ ಭವಿಷ್ಯತಿ' ।
ಇತ್ಯುಕ್ತ್ವಾ ಭಗವಾನ್ವಿಷ್ಣುಃ ಸರ್ವಭೂತಾತ್ಮಭಾವನಃ ॥26॥

ವಿಸರ್ಜಯಾಮಾಸ ಸುರಾನ್ ವಿಮಾನಂ ಚಾವಿಶತ್ಪ್ರಭುಃ ।
ತತೋ ದೇವಾಃ ಸಗಂಧರ್ವಾಃ ಸಿದ್ಧಾಶ್ಚ ಪರಮರ್ಷಯಃ ॥27॥

ಅನುಗ್ರಹೀತುಕಾಮಾಸ್ತಮಾಜಗ್ಮುಶ್ಚಕ್ರವರ್ತಿನಮ್ ।
ಬ್ರಾಹ್ಮಣಾಕಾರಮಾಲಂಬ್ಯ ದೇವಗಂಧರ್ವತಾಪಸಾಃ ॥28॥

ಶುಭಾಶಿಷಂ ಪ್ರಯುಂಜಾನಾ ರಾಜಾನಮುಪತಸ್ಥಿರೇ ।
ಆಗತಾಂಸ್ತಾನ್ಮಹಾಭಾಗಃ ಪೂಜಯಿತ್ವಾ ಯಥಾವಿಧಿ ॥29॥

ಪಪ್ರಚ್ಛ ಕುಶಲಂ ಸರ್ವಾನಭಿವಾದನಪೂರ್ವಕಮ್ ।
ಪೂಜಿತಾಸ್ತೇನ ಭೂಪೇನ ದೇವಾ ಬ್ರಾಹ್ಮಣವಿಗ್ರಹಾಃ ॥30॥

ಅಬ್ರುವನ್ನೇಕಕಂಠಾಸ್ತೇ ರಾಜಾನಂ ಪ್ರಶ್ರಯಾನತಮ್ ।

**ಬ್ರಾಹ್ಮಣಾ ಊಚುಃ–**

ಚೋಲರಾಜಸುತನಾದ ಚಕ್ರವರ್ತಿಯು ವಾಸವಾಗಿರುವನು. ನೀವು ನಿಮ್ಮ ಅಂಶಗಳಿಂದ ನನ್ನ ಭಕ್ತನಾದ ಚಕ್ರವರ್ತಿಯನ್ನು ಸೇರಿಕೊಳ್ಳಿರಿ. ಬಲಿಷ್ಠನಾದ ಚಕ್ರವರ್ತಿಯು, ರಾಘವನು ರಾಕ್ಷಸರನ್ನು ಕೊಂದಂತೆ, ಮಹಾಬಲಪರಾಕ್ರಮೋಪೇತನಾದ, ಮಹಾಬಾಹುವಾದ ಸಿಂಹಾದನನ್ನು ಕೊಲ್ಲುವನು. ಆದ್ದರಿಂದ ಹೇ ದೇವತೆಗಳೇ! ನೀವು ನಿರುದ್ವಿಗ್ನ ಮನಸ್ಕರಾಗಿರಿ. ಎಲ್ಲ ಮಂಗಳವಾಗುತ್ತದೆ' ಎಂಬುದಾಗಿ ನುಡಿದು, ದೇವತೆಗಳನ್ನು ಅವರವರ ಲೋಕಗಳಿಗೆ ಕಳುಹಿಸಿದನು. ತನ್ನ ವಾಸಸ್ಥಾನವಾದ ವಿಮಾನವನ್ನು ಪ್ರವೇಶಿಸಿದನು.(26)

*ಬ್ರಹ್ಮಣವೇಷಧರಿಸಿ ರಾಜನ ಬಳಿ ದೇವತೆಗಳ ಗಮನ*

ಅನಂತರ ದೇವತೆಗಳೆಲ್ಲರೂ ಭಗವಂತನ ಆಜ್ಞೆಯಂತೆ ಸಿದ್ಧರು, ಮಹರ್ಷಿಗಳು, ಗಂಧರ್ವರು ಇವರಿಂದ ಸಹಿತರಾಗಿ ಚಕ್ರವರ್ತಿಯನ್ನು ಅನುಗ್ರಹಿಸಲು ಅವನ ದೇಶಕ್ಕೆ ಹೊರಟರು. ಬ್ರಾಹ್ಮಣ ವೇಷವನ್ನು ಧರಿಸಿ ದೇವಮುನಿಗಂಧರ್ವಾದಿಗಳು ರಾಜನಿಗೆ ವೇದೋಕ್ತ ಆಶೀರ್ವಾದ ಮಂತ್ರಗಳಿಂದ ಅವನನ್ನು ಹರಿಸಿ ಅವನ ಬಳಿಯೇ ನಿಂತರು. ಬಂದಿರುವ ಬ್ರಾಹ್ಮಣರನ್ನು ಧರ್ಮಿಷ್ಠನಾದ ರಾಜನು ವಿಧಿಗನುಸಾರವಾಗಿ ಪೂಜಿಸಿ, ಅವರೆಲ್ಲರಿಗೂ ನಮಸ್ಕಾರವನ್ನು ಮಾಡಿ, ಅವರ ಕ್ಷೇಮಸಮಾಚಾರವನ್ನು ವಿಚಾರಿಸಿದನು. ರಾಜನಿಂದ ಸೇವೆಯನ್ನು ಸ್ವೀಕರಿಸಿದ ಬ್ರಾಹ್ಮಣ ವೇಷಧಾರಿಗಳಾದ ದೇವತೆಗಳು ಏಕಕಂಠದಿಂದ ಹೀಗೆ ನುಡಿದರು.

'ರಾಜನ್ ಕುಶಲಮಸ್ಮಾಕಂ ತ್ವಯಿ ಶಾಸತಿ ಮೇದಿನೀಮ್ ||31||

ನ ಹಿ ಸೂರ್ಯೇ ಪ್ರತಪತಿ ಲೋಕೇ ಸಂಪದ್ಯತೇ ತಮಃ ।
ಸಿಂಹಾದೋ ನಾಮ ದೈತ್ಯೇಂದ್ರೋ ಬಾಧತೇ ಬ್ರಾಹ್ಮಣಾನಿಹ ||32||

ನ ಯಜ್ಞಾಃ ಸಂಪ್ರವರ್ತಂತೇ ನ ಹೋಮಾ ನ ಚ ಸತ್ಕ್ರಿಯಾಃ ।
ಉತ್ತರೇ ಪಾಪನಾಶಸ್ಯ ಸಾರ್ಧಯೋಜನದೂರತಃ ||33||

ಸ ವಸತ್ಯಸದಾಚಾರಃ ಖಲೋ ಬ್ರಾಹ್ಮಣಹಿಂಸಕಃ ।
ತಂ ಸಂಹರ ದುರಾತ್ಮಾನಂ ಸರ್ವಲೋಕೈಕಕಂಟಕಮ್ ||34||

ಕೃತಸ್ತೇಽನುಗ್ರಹೋಽಸ್ಮಾಭಿಃ ಸರ್ವದೇವಾತ್ಮಭಿರ್ನೃಪ ।

ಚಕ್ರವರ್ತ್ಯುವಾಚ–

'ಅನುಗ್ರಹೇಣ ಯುಷ್ಮಾಕಂ ಸಂಹರಾಮಿ ನ ಸಂಶಯಃ ||35||

ಸಿಂಹಾದಃ ಕೀದೃಶಸ್ತಸ್ಯ ಬ್ರೂತ ಕಿಂ ವಾ ಬಲಂಬುಧಾಃ ।

ಬ್ರಾಹ್ಮಣಾ ಊಚುಃ –

*ಸಿಂಹಾದವಧಾರ್ಥವಾಗಿ ದೇವಕೃತ ಚೋದನಾ*

'ಹೇ ರಾಜನೇ! ನಾವೆಲ್ಲರೂ ಕುಶಲಿಗಳಾಗಿರುವೆವು. ನೀನು ಭೂಮಿಯನ್ನು ಶಾಸನ ಮಾಡುವಾಗ ನಮಗೇತರ ಭಯ? ಸೂರ್ಯನು ಬೆಳಗುತ್ತಿರುವಾಗ ಕತ್ತಲೆಗೆ ಆಸ್ಪದವೆಲ್ಲಿರುವದು? ಆದರೂ ಸಹ ಸಿಂಹಾದನೆಂಬ ದೈತ್ಯಾಧಮನು ಬ್ರಾಹ್ಮಣರನ್ನು ಬಹುವಾಗಿ ಬಾಧಿಸುತ್ತಿರುವನು. ಯಜ್ಞಗಳಾಗಲಿ, ಹೋಮಗಳಾಗಲಿ ಅಥವಾ ಉತ್ತಮವಾದ ಕಾರ್ಯಗಳಾವವೂ ಸಹ ನಡೆಯುವಂತಿಲ್ಲ. ಪಾಪನಾಶನ ತೀರ್ಥದಿಂದ ಒಂದೂವರೆ ಯೋಜನದಷ್ಟು ದೂರದಲ್ಲಿ ಅವನು ವಾಸವಾಗಿರುವನು. ಅವನು ದುರಾಚಾರಿಯೂ, ಬ್ರಾಹ್ಮಣ ಹಿಂಸಕನೂ ಆಗಿರುವನು. ಲೋಕಕಂಟಕನಾದ ಅವನನ್ನು ನೀನು ಸಂಹರಿಸು. ದೇವಾಂಶ ಯುಕ್ತರಾದ ನಮ್ಮಿಂದ ನಿನಗೆ ಅನುಗ್ರಹವು ಮಾಡಲ್ಪಟ್ಟಿರುವದು. ನೀನೀಗಲೇ ಆ ಸಿಂಹಾದನನ್ನು ಸಂಹರಿಸು' ಎಂದು ನುಡಿದರು.

*ಚೋಲರಾಜಾಂಗೀಕೃತ ಸಿಂಹಾದ ವಧ*

ಇದನ್ನು ಕೇಳಿದ ಚಕ್ರವರ್ತಿಯು 'ನಿಮ್ಮ ಅನುಗ್ರಹದಿಂದ ಸಿಂಹಾದನನ್ನು ನಾನು ಸಂಹರಿಸುವೆನು. ಇದರಲ್ಲಿ ಯಾವ ಸಂದೇಹವೂ ಸಹ ಇರುವದಿಲ್ಲ. ಹೇ ಪಂಡಿತರೇ! ಸಿಂಹಾದನು ಯಾರು? ಅವನು ಹೇಗಿರುವನು? ಅವನ ಬಲವೆಂತಹುದು? ಎಂಬುದನ್ನು ನನಗೆ ತಿಳಿಸಿರಿ'

'ವಿರಿಂಚಿನಾ ದತ್ತವರಃ ಸಿಂಹಾದಃ ಕ್ರೂರವಿಕ್ರಮಃ ॥36॥

ಅವಧ್ಯಃ ಸರ್ವದೇವಾನಾಂ ದೇವಸ್ಯ ಚ ರಥಾಂಗಿನಃ ।
ತ್ವಮೇವ ತಸ್ಯ ರಾಜೇಂದ್ರ ಸಂಹರ್ತಾ ನ ಚ ಸಂಶಯಃ ॥37॥

ದೇವಾಃ ಕುರ್ವಂತು ಸರ್ವೇಽಪಿ ಸಂನಿಧಾನಂತ್ವಯಿ ಪ್ರಭೋ' ।
ಇತ್ಯುಕ್ತ್ವಾ ಬ್ರಾಹ್ಮಣಾ ಸರ್ವೇ ಸಂಪ್ರಯುಜ್ಯ ಜಯಾಶಿಷಃ ॥38॥

ಅಂತರ್ಧಾನಂ ಗತಾಸ್ತತ್ರ ತದದ್ಭುತಮಿವಾಭವತ್ ।
ಅಥ ರಾಜಾ ಮಹಾತೇಜಾಶ್ಚಕ್ರವರ್ತೀ ಸ ಧಾರ್ಮಿಕಃ ॥39॥

ಮಂತ್ರಿಭಿರ್ಮಂತ್ರಯಾಮಾಸ ವಧೋಪಾಯಂ ದುರಾತ್ಮನಃ ।
ನಿಶ್ಚಿತ್ಯ ಕೃತ್ಯವಿತ್ ಕೃತ್ಯಂ ಮಂತ್ರಭಿಃ ಸಹ ಮಂತ್ರವಿತ್ ॥40॥

ಜಗಾಮ ವೇಂಕಟೇಶಸ್ಯ ಸನ್ನಿಧಿಂ ಪರಮಂ ಮುದಾ ।
ಸ್ವರ್ಣಪತ್ರೈಃ ಸ್ವರ್ಣಪುಷ್ಪೈಸ್ತುಲಸೀದಲಸಂಯುತೈಃ ॥41॥

ಅರ್ಚಯಿತ್ವಾ ಯಥಾಪೂರ್ವಂ ವೇಂಕಟೇಶಂ ನೃಪೋಽವದತ್ ।

ಎಂದು ನುಡಿದನು. ಆಗ ಬ್ರಾಹ್ಮಣರು 'ಚತುರ್ಮುಖ ಬ್ರಹ್ಮದೇವರಿಂದ ವರವನ್ನು ಪಡೆದ ಸಿಂಹಾದನು ಅತ್ಯಂತ ಕ್ರೂರಿಯೂ, ಪರಾಕ್ರಮಿಯೂ ಆಗಿರುವನು. ಅವನು ಎಲ್ಲ ದೇವತೆಗಳಿಂದಲೂ ಸಹ ಅವಧ್ಯನಾಗಿರುವನು. ದೇವದೇವನಾದ, ಚಕ್ರಧರನಾದ ಭಗವಂತನ ಅನುಗ್ರಹ ವಿಶೇಷದಿಂದ ನೀನೇ ಆ ಸಿಂಹಾದನನ್ನು ಕೊಲ್ಲುವವನು. ಇದರಲ್ಲಿ ಯಾವ ಸಂಶಯವೂ ಇರುವದಿಲ್ಲ. ಹೇ ರಾಜನೇ! ದೇವತೆಗಳೆಲ್ಲರೂ ನಿನ್ನಲ್ಲಿ ಸನ್ನಿಹಿತರಾಗಿ ನಿಂತು ನಿನಗೆ ಶಕ್ತಿದಾಯಕರಾಗಿ ಅನುಗ್ರಹಿಸುವರು' ಎಂದು ನುಡಿದು ಬ್ರಾಹ್ಮಣ ವೇಷಧಾರಿಗಳಾದ ದೇವತೆಗಳು ಮತ್ತೊಮ್ಮೆ ಜಯದ ಗೋಸ್ಕರವಾಗಿ ಆಶೀರ್ವಾದವನ್ನು ಮಾಡಿ ಅದೃಶ್ಯರಾದರು. ಇದನ್ನು ಅದ್ಭುತವೆಂಬುದಾಗಿ ಅಲ್ಲಿರುವವರೆಲ್ಲರೂ ಸಹ ನೋಡಿದರು.

*ಭಗವದನುಗ್ರಹಾರ್ಥವಾಗಿ ಚೋಲರಾಜಕೃತ ಶೇಷಾಚಲಗಮನ*

ಪರಮ ಧಾರ್ಮಿಕನಾದ, ಮಹಾತೇಜಸ್ವಿಯಾದ, ರಾಜಾಧಿರಾಜನಾದ ಚಕ್ರವರ್ತಿಯು ಬ್ರಾಹ್ಮಣರ ಮಾತುಗಳನ್ನು ಕೇಳಿ ಮಂತ್ರಿಗಳೊಂದಿಗೆ ಚರ್ಚಿಸಿ ಸಿಂಹಾದನನ್ನು ಕೊಲ್ಲುವ ಉಪಾಯವನ್ನು, ತಾನು ಮಾಡಬೇಕಾದ ಕಾರ್ಯವನ್ನು ನಿಶ್ಚಯಿಸಿ, ಮಂತ್ರಿಗಳಿಂದ ಸಹಿತನಾಗಿ ಶೇಷಾಚಲಕ್ಕೆ ಹೋದನು. ಅಲ್ಲಿ ಅತ್ಯಂತಭಕ್ತಿಯಿಂದ ತುಲಸೀದಳದಿಂದ ಯುತವಾದ ಬಂಗಾರದ ಪತ್ರ–

'ಬ್ರಾಹ್ಮಣಪ್ರವರಾಃ ಸ್ವಾಮಿನ್ ಸಿಂಹಾದೇನ ನಿಪೀಡಿತಾಃ ॥ 42 ॥॥
ತತ್ಸಂಹಾರನಿಯೋಗಂ ಮೇ ಪ್ರದದುಃ ಕಿಂ ಕರೋಮ್ಯಹಮ್' ।

ಶ್ರೀಭಗವಾನುವಾಚ–

'ಶಂಖಚಕ್ರೇ ಪ್ರದಾಸ್ಯಾಮಿ ಭಾವಿಸಾಯುಜ್ಯಸೂಚಕೇ ॥43॥

ತಥಾ ಕೌಮೋದಕೀ ಶಾರ್ಙ್ಗಂ ನಂದಕಂ ಚ ಮಹಾಮತೇ ।
ಪಂಚಾಯುಧಧರೋ ಭೂತ್ವಾ ದುರಾತ್ಮಾನಂ ಸುರದ್ರುಹಮ್ ॥44॥

ಸಬಂಧುವರ್ಗಂ ಸಾಮಾತ್ಯಂ ಜಹಿ ಸಂಗ್ರಾಮಮಂಡಲೇ ।
ಇತ್ಯುಕ್ತ್ವಾ ಪ್ರದದೌ ತಸ್ಮೈ ಶುಚಯೇ ಚಕ್ರವರ್ತಿನೇ ॥45॥

ಶಂಖಚಕ್ರಗದಾಶಾರ್ಙ್ಗಖಡ್ಗಾನಿ ಮಧುಸೂದನಃ ।
ತತಃ ಸ ರಾಜತನಯಃ ಪುನಶ್ಚ ಸ್ವಪುರಂ ಗತಃ ॥46॥

ಸೇನಾಂ ಸಂಯೋಜಯಾಮಾಸ ದೇವತೇಜಸ್ಸಮೇಧಿತಾಮ್ ।
ಸರ್ವದೈವತತೇಜೋಭಿರುಪಬೃಂಹಿತವಿಗ್ರಹಃ ॥47॥

ಪುಷ್ಪಗಳಿಂದ ವೇಂಕಟೇಶನನ್ನು ಭಕ್ತಿಯಿಂದ ಸಂಪ್ರದಾಯಾನುಸಾರವಾಗಿ ಪೂಜಿಸಿ ಅನಂತರ ವೇಂಕಟೇಶ್ವರನನ್ನು ಕುರಿತು 'ಹೇ ಸ್ವಾಮಿಯೇ! ಸಿಂಹಾದನೆಂಬ ರಾಕ್ಷಸನಿಂದ ಪೀಡಿತರಾದ ಶ್ರೇಷ್ಠರಾದ ಬ್ರಾಹ್ಮಣರು ನನ್ನ ಬಳಿ ಬಂದು ಸಿಂಹಾದನನ್ನು ಕೊಲ್ಲಲು ಆಜ್ಞಾಪಿಸಿರುವರು. ಹೇ ಸ್ವಾಮಿನ್! ನಾನು ಏನು ಮಾಡಬೇಕು? ತಿಳಿಸು' ಎಂದು ಬೇಡಿಕೊಂಡನು.

*ಭಗವಂತನಿಂದ ಚೋಲರಾಜನಿಗೆ ಪಂಚಾಯುಧಪ್ರದಾನ*

ಇದನ್ನು ಕೇಳಿದ ಶ್ರೀನಿವಾಸನು 'ಹೇ ರಾಜನೇ! ಮುಂದೆ ನಿನಗೊದಗುವ ಸಾಯುಜ್ಯರೂಪ ಮುಕ್ತಿಯನ್ನು ಸೂಚಿಸುವ ಶಂಖ, ಚಕ್ರಗಳನ್ನು ನಿನಗೆ ಕೊಡುವೆನು. ಹಾಗೆಯೇ ಕೌಮೋದಕೀಗದಾ, ಶಾರ್ಙ್ಗಧನುಸ್ಸು ಮತ್ತು ನಂದಕವೆಂಬ ಖಡ್ಗಗಳನ್ನು ನಾನು ನಿನಗೆ ಕೊಡುವೆನು. ಹೇ ಬುದ್ಧಿವಂತನಾದ ಚಕ್ರವರ್ತಿಯೇ! ನೀನು ಪಂಚಾಯುಧಧರನಾಗಿ ದೇವತೆಗಳ ಶತ್ರುವಾದ, ದುಷ್ಟನಾದ ಸಿಂಹಾದನನ್ನು, ಅವನ ಬಂಧುವರ್ಗವನ್ನು, ಮತ್ತು ಅವನ ಮಂತ್ರಿಗಳನ್ನು– ಹೀಗೆ ಅವನ ಪರಿವಾರವೆಲ್ಲವನ್ನೂ ನೀನು ಯುದ್ಧಭೂಮಿಯಲ್ಲಿ ಕೊಲ್ಲು.' ಎಂದು ನುಡಿದು ಪರಮಾತ್ಮನು ಶುದ್ಧನಾಗಿದ್ದ ಚಕ್ರವರ್ತಿಗೆ ತನ್ನ ಶಂಖ, ಚಕ್ರ, ಗದಾ, ಖಡ್ಗ ಮತ್ತು ಬಿಲ್ಲುಗಳನ್ನು ಕೊಟ್ಟನು. ಅನಂತರ ರಾಜಕುಮಾರನಾದ ಚಕ್ರವರ್ತಿಯು ಮತ್ತೆ ತನ್ನ ಪುರಕ್ಕೆ ಹಿಂದಿರುಗಿದನು. (46)

ಕೈರಾತಂ ವಪುರಾಸ್ಥಾಯ ಪ್ರತಸ್ಥೇ ಸಹಸೈನಿಕಃ ।
ಕಿರಾತವಪುಷಃ ಸರ್ವೇ ಸಹಿತಾ ವಿಶ್ವಕದ್ರುಭಿಃ ॥48॥

ಸಮೇತಂ ಮೃಗಯಾಸಕ್ತಂ ಚಕ್ರವರ್ತಿನಮನ್ವಯುಃ ।
ಘ್ನಂತೋ ವ್ಯಾಘ್ರಾನ್ವೃಕಾನ್ಸಿಂಹಾಂಸ್ತರಕ್ಷೂನ್ ಶಲ್ಯಕಾನ್ಕಿಟೀನ್ ॥49॥

ಪ್ರತೀರಂ ಪಾಪನಾಶಸ್ಯ ಪ್ರಾಪೂ ರಾಜೇಂದ್ರಸದ್ಭಟಾಃ ।
ಚೋಲರಾಜಕುಮಾರಸ್ಯ ವಾಹಿನೀ ಬಲಗರ್ವಿತಾ ॥50॥

ಮಂದಂ ಮಂದಂ ಪ್ರತೀಯಾಯ ಘೋರಂ ಸಿಂಹಾದಕಾನನಮ್ ।
ವನದುರ್ಗಾದ್ವಿನಿಷ್ಕ್ರಮ್ಯ ಸಿಂಹಾದೋ ದೈತ್ಯಭೂಪತಿಃ ॥51॥

ಅವೈಕ್ಷತ ಕಿರಾತಾಂಸ್ತಾನ್ನಿರ್ವಿಷಾದಃ ಸ್ಮಿತಾನನಃ ।
ನ ದೇವಾ ನ ಚ ದೈತೇಯಾ ನ ಗಂಧರ್ವಾ ನ ದಾನವಾಃ ॥52॥

*ಕಿರಾತವೇಷದಿಂದ ಸಿಂಹಾದನ ಬಳಿ ರಾಜನ ಗಮನ*

ಅವನು ಸಿಂಹಾದನನ್ನು ಕೊಲ್ಲುವದರಗೋಸ್ಕರವಾಗಿ ದೇವತಾತೇಜಸ್ಸಿನಿಂದ ಬಲಿಷ್ಠವಾದ ಸೇನೆಯನ್ನು ಸನ್ನದ್ಧಗೊಳಿಸಿದನು. ತಾನು ಸಹ ದೇವತೆಗಳ ತೇಜಸ್ಸಿನಿಂದ ಯುಕ್ತನಾಗಿ, ಕಿರಾತವೇಷವನ್ನು ಧಾರಣಮಾಡಿ ಸೈನಿಕರಿಂದ ಸಮೇತನಾಗಿ ಸಿಂಹಾದನನ್ನು ಸಂಹರಿಸಲು ಹೊರಟನು. ಸೈನಿಕರೂ ಸಹ ಕಿರಾತವೇಷದಿಂದಲೇ ರಾಜನನ್ನನುಸರಿಸಿದರು. ಬೇಟೆಯಲ್ಲಿ ಆಸಕ್ತನಾಗಿದ್ದ ರಾಜನೊಡನೆ ಕೂಡಿಕೊಂಡು ಹುಲಿ, ಸಿಂಹ, ತೋಳ, ವರಾಹ, ಶಲ್ಯಕ, ಚಿರತೆ ಮೊದಲಾದ ಕ್ರೂರಮೃಗಗಳನ್ನು ಕೊಲ್ಲುತ್ತಾ ಪಾಪಾನಾಶನ ತೀರ್ಥದ ತೀರಕ್ಕೆ ರಾಜನ ಸೈನಿಕರು ಬಂದರು. ಬಲಗರ್ವಿತವಾದ ಚೋಲರಾಜನ ಸೈನಿಕರು ಮೆಲ್ಲಮೆಲ್ಲನೆ ಅಲ್ಲಿಂದ ಮುಂದೆ ನಡೆದು ಸಿಂಹಾದನ ವನವನ್ನು ಪ್ರವೇಶಮಾಡಿದರು. (50)

*ಸಿಂಹಾದನ ಸೈನ್ಯ*

ವನದುರ್ಗದಿಂದ ಹೊರಬಂದ ದೈತ್ಯಾಧಿಪತಿಯಾದ ಸಿಂಹಾದನು ಕಿರಾತವೇಷದಲ್ಲಿರುವ ರಾಜನ ಸೈನಿಕರನ್ನು ನೋಡಿದನು. ಇದರಿಂದ ಅವನು ಹೆದರಲಿಲ್ಲ. ಮಂದಹಾಸದಿಂದ ಯುಕ್ತನಾಗಿಯೇ 'ದೇವತೆಗಳು, ದೈತ್ಯರು, ಗಂಧರ್ವರು, ದಾನವರು, ಚಕ್ರವರ್ತಿಗಳ ಸೈನ್ಯ– ಇವುಗಳಾವವೂ ನನಗೆ ಏನನ್ನೂ ಸಹ ಉಂಟುಮಾಡುವದಿಲ್ಲವೆಂದ ಮೇಲೆ ನನಗೆ ಭಯವೇತಕೆ? ಎಂದು ವಿಚಾರಮಾಡಿ ಸ್ವಭಾವತಃ ಧೀರನಾದ ಸಿಂಹಾದನು ತನ್ನ ಸೈನಿಕರೊಂದಿಗೆ ಕೂಡಿಕೊಂಡು ಕಿರಾತರನ್ನೆದುರಿಸಲು ಬಂದನು.

ನ ಚಕ್ರವರ್ತಿನಃ ಸೈನ್ಯಂ ಕಿಮರ್ಥಂ ನೋ ಭಯಾಢ್ಯತಾ ।
ಇತಿ ನಿಶ್ಚಿತ್ಯ ಧೀರಾತ್ಮಾ ನಿರ್ಗತಃ ಸೈನಿಕೈಃ ಸಹ ॥53॥

ಸಿಂಹಾದಃ ಸಿಂಹಮಾರುಹ್ಯ ಪ್ರತೀಯಾಯ ಪ್ರಭೋರ್ಬಲಮ್।
ಕೋಟ್ಯಾ ಶತಸಹಸ್ರೇಣ ವರಸೈನ್ಯೇನ ನಿರ್ಯಯೌ ॥54॥

ಸರ್ವತಃ ಸಹಿತಃ ಸೈನ್ಯೈಃ ಕಡಾರಃ ಷಷ್ಟಿಕೋಟಿಭಿಃ ।
ಪಿಂಗಾಕ್ಷಃ ಸಪ್ತಕೋಟೀಭಿಃ ಕನಕೋ ದಶಕೋಟಿಭಿಃ ॥55॥

ಕದ್ರುಕೋಽನ್ಯೋಽರ್ಬುದಾನೀಕಃ ಕಪಿಃ ಪದ್ಮಾಸುರಾವೃತಃ ।
ಅನ್ಯೇ ಚ ದೈತ್ಯಪತಯಃ ಸ್ವಸ್ವಸೈನ್ಯುಸಮಾವೃತಾಃ ॥56॥

ಆಗತಾಃ ಸರ್ವ ಏವೈತೇ ಮಿಲಿತ್ವಾಕ್ಷೋಹಿಣೀಶತಮ್ ।
ತ್ರಿದಶಾಕ್ಶೌಹಿಣೀನಾಥಶ್ಚಕ್ರವರ್ತೀ ಮಹಾಬಲಃ ॥57॥

ಸಿಂಹಾದೇನ ಸಮಂ ಯುದ್ಧಂ ಚಕಾರ ಭಗವತ್ಪ್ರಿಯಃ ।
ಸೇನಯೋರುಭಯೋಶ್ಚಾಥ ಸಿಂಹಾದ ಹರಿಭಕ್ತಯೋಃ ॥58॥

ಸಮರಃ ಸುಮಹಾನಾಸೀತ್ ಗಂಗಾಯಮುನಯೋರ್ಯಥಾ ।

ಸಿಂಹಾದನು ಒಂದು ಸಾವಿರ ಕೋಟಿ ಸೈನಿಕರಿಂದ ಸಮೇತನಾಗಿ ಚಕ್ರವರ್ತಿಯನ್ನೆದುರಿಸಲು ಬಂದುನಿಂತನು. ಅವನ ಆಪ್ತನಾಗಿದ್ದ ಕಡಾರನು ಅರವತ್ತುಕೋಟಿ ಸೈನಿಕರಿಂದಲೂ, ಪಿಂಗಾಕ್ಷನು ಏಳುಕೋಟಿ ಸೈನಿಕರಿಂದ, ಕನಕನು ಹತ್ತು ಕೋಟಿ ಸೈನಿಕರಿಂದ, ಕದ್ರುಕನು ಅರ್ಬುದ ಸಂಖ್ಯೆಯ ಸೈನಿಕರಿಂದ, ಮತ್ತು ಕಪಿಯೆಂಬ ರಾಕ್ಷಸನು ಪದ್ಮಸಂಖ್ಯೆಯ ಸೈನಿಕರಿಂದ, ಮತ್ತು ಇತರ ದೈತ್ಯರೂ ಸಹ ತಮ್ಮ ತಮ್ಮ ಸೈನ್ಯಗಳಿಂದ ಸಮೇತರಾಗಿ ಒಟ್ಟಾಗಿ ಒಂದು ನೂರು ಅಕ್ಷೌಹಿಣೀ ಸೈನ್ಯದಿಂದು ಕೂಡಿಕೊಂಡು ಮೂವತ್ತು ಅಕ್ಷೌಹಿಣೀ ಸೈನ್ಯದಿಂದ ಸಹಿತನಾದ ಚಕ್ರವರ್ತಿಯನ್ನೆದುರಿಸಲು ಬಂದರು. (54–57)

*ಸಿಂಹಾದ- ಚಕ್ರವರ್ತಿಗಳ ಯುದ್ಧ*

ಮಹಾಬಲಿಷ್ಠನಾದ ಚಕ್ರವರ್ತಿಯು ಸಿಂಹಾದನನೊಂದಿಗೆ ಯುದ್ಧವನ್ನು ಮಾಡಲು ಸನ್ನದ್ಧನಾಗಿ ಬಂದನು. ಹರಿಭಕ್ತನಾದ ಚಕ್ರವರ್ತಿ ಮತ್ತು ದೈತ್ಯನಾದ ಸಿಂಹಾದ ಇವರ ಸೈನ್ಯಗಳ ನಡುವೆ ಘೋರವಾದ ಯುದ್ಧವು ಜರುಗಿತು. ಗಂಗಾಯಮುನಾನದಿಗಳ ಸಂಗಮದಂತೆ ಆ ಸೈನ್ಯಗಳ ಮಿಶ್ರಣವು ಕಾಣುತ್ತಿತ್ತು. (59) ಇಂತಹ ರಣೋತ್ಸಾಹ ಘೋಷಗಳಿಂದ ಕೂಡಿದ್ದ ಯುದ್ಧವನ್ನು

ವಿಮಾನರತ್ನಾನ್ಯಾರುಹ್ಯ ಪ್ರವೀರವರಣೋತ್ಸುಕಮ್ ||59||

ಆಗತಂ ದೇವಗಾಣಿಕ್ಯಂ ಮಧ್ಯೇ ಗಗನಮಂಡಲಮ್ ।
ಆಗತಾ ದೇವತಾಃ ಸರ್ವಾಃ ಪರಮೇಷ್ಠಿಪುರೋಗಮಾಃ ||60||

ದ್ರಷ್ಟುಕಾಮಾ ಮಹಾಯುದ್ಧಂ ದೈತ್ಯರಾಜಾಧಿರಾಜಯೋಃ ।
ತತೋ ಯುದ್ಧಂ ಸಮಭವತ್ ಸಿಂಹಾದನೃಪಸೇನಯೋಃ ||61||

ವರಾರ್ಥೇ ಕಲಹಂ ಚಕ್ರುರ್ದೇವ್ಯಶ್ಚಾಪ್ಸರಸೋ ಮಿಥಃ ।
ಸೇನಾಸು ಕ್ಷೀಯಮಾಣಾಸು ಚಕ್ರವರ್ತಿರ್ಧೃತಾಗ್ರಹಃ ||62||

ಶಾಂರ್ಗಂ ಧನುರುಪಾದಾಯ ಸಂದಧೇ ನಿಶಿತಾಂಶ್ಶರಾನ್ ।
ಬಾಣೇನೈಕೇನ ರಾಜೇಂದ್ರೋ ಜಘಾನ ದಶವಿಂಶತಿಮ್ ||63||

ಶತಂ ಸಹಸ್ರಮಯುತಂ ನಿಯುತಂ ಪ್ರಯುತಂ ತಥಾ ।
ತಸ್ಯ ವಿಕ್ರಮಮಾಲೋಕ್ಯ ಸಿಹಾದಃ ಸಿಂಹವಾಹನಃ ||64||

ಗದಯಾ ರಾಜರಾಜಾಶ್ವಂ ನಿಜಘಾನಾತಿರಂಹಸಾ ।
ನಿಹತೇ ತುರಗೇ ರಾಜಾ ಗಜಮೈವರಾವತೋಪಮಮ್ ||65||

ನೋಡಲು ಆಕಾಶದಲ್ಲಿ ಅಪ್ಸರೆಯರ ಸಮೂಹ, ಬ್ರಹ್ಮದೇವರೇ ಮೊದಲಾದ ದೇವತೆಗಳು ವಿಮಾನವನ್ನೇರಿ ಆಕಾಶದ ಮಧ್ಯದಲ್ಲಿ ನೆರೆದರು. ಸಿಂಹಾದ ಮತ್ತು ಚಕ್ರವರ್ತಿಯ ಸೈನ್ಯಗಳ ನಡುವೆ ಅತ್ಯಂತ ತರುಸಿನ ಯುದ್ಧವು ಜರುಗಿತು. ಈ ಯುದ್ಧವನ್ನು ನೋಡಲು ದೇವಸ್ತ್ರೀಯರು ಅಪ್ಸರೆಯರು ಇವರ ಮಧ್ಯದಲ್ಲಿ ಕಲಹವೇರ್ಪಟ್ಟಿತು. (60–62) ಇಂತಹ ಘೋರವಾದ ಯುದ್ಧದಲ್ಲಿ ತನ್ನ ಸೈನ್ಯವು ನಾಶವಾಗುವದನ್ನು ಕಂಡ ಚೋಲರಾಜ ಕುಮಾರನಾದ ಚಕ್ರವರ್ತಿಯು ಪರಮಾತ್ಮನಿಂದ ಕೊಡಲ್ಪಟ್ಟ ಶಾಂಙ್ಗಧನುಸ್ಸಿಗೆ ನಿಶಿತವಾದ ಬಾಣಗಳನ್ನು ಹೂಡಿ ಒಂದೊಂದು ಬಾಣದಿಂದ ಹತ್ತು, ಇಪ್ಪತ್ತು, ನೂರು, ಸಾವಿರ, ಹತ್ತುಸಾವಿರ, ನಿಯುತ, (ಹತ್ತು ಲಕ್ಷ ) ಪ್ರಯುತ (ಹತ್ತು ಕೋಟಿ) ಸಂಖ್ಯಾಕರಾದ ರಾಕ್ಷಸರನ್ನು ಕೊಂದನು. (64) ಅವನ ಪರಾಕ್ರಮವನ್ನು ನೋಡಿದ ಸಿಂಹವಾಹನನಾದ ಸಿಂಹಾದನು ತನ್ನ ಗದೆಯಿಂದ ರಾಜರಾಜನಾದ ಚಕ್ರವರ್ತಿಯು ಕುಳಿತಿದ್ದ ಕುದುರೆಯನ್ನು ಬಲವಾಗಿ ಹೊಡೆದನು. ಹೊಡೆತದಿಂದ ಕುದುರೆಯು ಕೆಳಕ್ಕೆ ಬೀಳುತ್ತಿರಲು ರಾಜನು ಐರಾವತ ದಂತಿರುವ ಗಜಶ್ರೇಷ್ಠವನ್ನೇರಿ ಇಂದ್ರನಂತೆ ಕಾಣುತ್ತಾ ಕೌಮುದುಕೀ ಗದೆಯನ್ನು ಕೈಯಲ್ಲಿ ಹಿಡಿದನು. ರಾಜನ ಕೈಯಿಂದ ಬಿಡಲ್ಪಟ್ಟ ಗದೆಯು ಸಿಂಹಾದನ ವಾಹನವಾದ ಸಿಂಹವನ್ನು ಕೊಂದು, ಅವನ ಅರವತ್ತು ಅಕ್ಷೌಹಿಣೀ ಸೈನ್ಯವನ್ನು ಸಂಹರಿಸಿ, ಪುನಃ ಬಂದು

ಆರುಹ್ಯ ಮಘವೇವಾನ್ಯೋ ಗದಾಂ ಕೌಮೋದಕೀಂ ದಧೌ ।
ಸಾ ವಿಸೃಷ್ಟಾ ನೃಪೇಂದ್ರೇಣ ಹತ್ವಾ ಸಿಂಹಾದವಾಹನಮ್ ॥68॥

ಮಮರ್ದಾಕ್ಷೌಹಿಣೀಷಷ್ಟಿಂ ಪುನಾ ರಾಜಾನಮಾಶ್ರಿತಾ ।
ಮಾಯಾಮಾಸ್ಥಾಯ ಸಿಂಹಾದಃ ಪ್ರಭೂತಾಂ ಚ ಕ್ಷಣಾಂತರೇ ॥67॥

ಪುನರುಜ್ಜೀವಯಾಮಾಸ ಸೇನಾಂ ಕೌಮೋದಕೀಹತಾಮ್ ।
ಸೈನಿಕೋಜ್ಜೀವನಂ ದೃಷ್ಟ್ವಾ ಸಿಂಹಾದಸ್ಯ ಮಹೌಜಸಃ ॥68॥

ವಿಸ್ಮಿತಾಃ ಸಸ್ಮಿತಾಶ್ಚಾಸನ್ ದಿವಿ ದೇವಾಶ್ಚ ತಾಪಸಾಃ ।
ಅರ್ಧಚಂದ್ರೇಣ ಬಾಣೇನ ಶಾಂರ್ಗಮಾದಾಯ ವೀರ್ಯವಾನ್ ॥69॥

ಶತವಾರಂ ಚ ಚಿಚ್ಛೇದ ಸಿಂಹಾದಸ್ಯ ಶಿರಂ ನೃಪಃ ।
ಕೃತ್ತಂ ಕೃತ್ತಂ ಪುನಃ ಕೃತ್ತಂ ಪುನರ್ಜಾತಂ ಪುನಃ ಪುನಃ ॥70॥

ವೀಕ್ಷ್ಯಮಾಣಾಃ ಶಿರೋ ದೇವಾಃ ವಿಶಾದಂ ಪ್ರತಿಪೇದಿರೇ ।
ಅಸ್ತ್ರಂ ಸಂಧಾಯ ಗಾಂಧರ್ವಂ ಶಾಂರ್ಗೇ ಶ್ರೀಪತಿವಲ್ಲಭಃ ॥71॥

ರಾಜನ ಕೈಯನ್ನು ಸೇರಿತು. (65–67) ಸಿಂಹಾದನು ಆಸುರೀ ಮಾಯೆಯನ್ನಾಶ್ರಯಿಸಿ ರಾಜನ ಕೌಮೋದಕೀ ಗದೆಯಿಂದ ಮೃತರಾಗಿದ್ದ ಅರವತ್ತು ಅಕ್ಷೌಹಿಣೀ ಸೈನ್ಯವನ್ನು ಮತ್ತೆ ಬದುಕಿಸಿದನು. ಸಿಂಹಾದನ ಸೈನ್ಯಪುನರುಜ್ಜೀವನ ರೂಪವಾದ ಅದ್ಭುತ ಕಾರ್ಯವನ್ನು ನೋಡಿದ ಆಕಾಶದಲ್ಲಿರುವ ದೇವತೆಗಳು, ತಪಸ್ವಿಗಳು, ಮಹರ್ಷಿಗಳು ಇವರೆಲ್ಲರೂ ಆಶ್ಚರ್ಯವನ್ನು ಮತ್ತು ನಗುವನ್ನು ಹೊಂದಿದರು. (67–69)

*ಗಾಂಧರ್ವಾಸ್ತ್ರ ಪ್ರಯೋಗ*

ಅನಂತರ ರಾಜನಾದ ಚಕ್ರವರ್ತಿಯು ಅರ್ಧಚಂದ್ರಾಕಾರದ ಬಾಣವನ್ನು ಶಾರ್ಙ್ಗಧನುಸ್ಸಿಗೆ ಹೂಡಿ ಸಿಂಹಾದನ ತಲೆಯನ್ನು ಒಂದು ನೂರು ಬಾರಿ ಕತ್ತರಿಸಿದನು. ರಾಜನು ಕತ್ತರಿಸಿದಂತೆಲ್ಲ ಅವನ ಶಿರಸ್ಸು ಮತ್ತೆ ಮತ್ತೆ ಬೆಳೆಯುತ್ತಿತ್ತು. ಇದನ್ನು ನೋಡಿದ ದೇವತೆಗಳು ವಿಷಾದವನ್ನು ಮತ್ತು ನಿರಾಶೆಯನ್ನು ಅನುಭವಿಸುತ್ತಿದ್ದರು. ಅನಂತರ ಪರಮಾತ್ಮನು ಶಾರ್ಙ್ಗ ಧನಸ್ಸಿಗೆ ಗಾಂಧರ್ವಾಸ್ತ್ರವನ್ನು ಹೂಡಿ ದೈತ್ಯಸೇನೆಯ ಮೇಲೆ ಪ್ರಯೋಗಿಸಿದನು, ಹಿಂದೆ ರಾಮನು ಜನಸ್ಥಾನದ ದೈತ್ಯರ ಮೇಲೆ ಪ್ರಯೋಗಿಸಿದಂತೆ. ಅಸ್ತ್ರದ ಪ್ರಭಾವದಿಂದ ದೈತ್ಯರು ತಮ್ಮವರನ್ನೇ ಹೊಡೆಯುತ್ತಾ, ತಿನ್ನುತ್ತಾ, ಹಿಂಸಿಸುತ್ತಾ, ಭೂತಪಿಶಾಚಗಳಿಂದ ಹಿಡಿಯಲ್ಪಟ್ಟವರಂತೆ ಒಬ್ಬರನ್ನೊಬ್ಬರು

ಪ್ರಾಯುಂಕ್ತ ವೈರಿಸೇನಾಯಾಂ ರಾಮೋ ಮೂಲಬಲೇ ಯಥಾ ।
ಖಾದಂತಃ ಪ್ರಹರಂತಶ್ಚ ದೈತೇಯಾಸ್ತೇ ಪರಸ್ಪರಮ್ ॥72॥

ಉನ್ಮತ್ತ ಇವ ಭೂತೇನ ಗ್ರಸ್ತಾ ಇವ ಚ ಬಭ್ರಮುಃ ।
ವಿರಿಂಚೇನಾಭ್ಯನುಜ್ಞಾತೋ ವಾಯುರ್ಬ್ರಾಹ್ಮಣರೂಪಧೃಕ್ ॥73॥

ಜಜಾಪ ನೃಪತೇಃ ಕರ್ಣೇ ಸೌದರ್ಶನಷಡಕ್ಷರಮ್ ।
ಗೋಬ್ರಾಹ್ಮಣಹಿತಾರ್ಥಾಯ ಚಕ್ರೇಣ ನೃಪನಂದನ ॥74॥

ಹರ ದೈತ್ಯಶಿರಃ ಶೀಘ್ರಮಿತ್ಯುಕ್ತ್ವಾಂತರ್ದಧೇ ಚ ಸಃ ।
ಬ್ರಾಹ್ಮಣಸ್ಯ ವಚಃ ಶ್ರುತ್ವಾ ಚಕ್ರವರ್ತೀ ಮಹಾಮನಾಃ ॥75॥

ಸುದರ್ಶನಂ ಸಹಸ್ರಾರಮಾದಧೇ ಭಗವಾನಿವ ।
ಚಕ್ರಪಾಣಿಂ ನೃಪಂ ವೀಕ್ಷ್ಯ ಮತ್ವಾ ಚಕ್ರಧರಂ ಹರಿಮ್ ॥76॥

ಭಯವಿಭ್ರಾಂತಚಿತ್ತಸ್ಯ ಸಿಂಹಾದಸ್ಯ ಶಿರಸ್ತದಾ ।
ಸುದರ್ಶನೇನ ಚಿಚ್ಛೇದ ಚಕ್ರವರ್ತ್ಯಪುನರ್ಭವಮ್ ॥77॥

ಅನ್ಯೇ ತು ತಸ್ಯಾನುಚರಾಃ ದೈತ್ಯವೀರಾಃ ಸಸೈನಿಕಾಃ ।

ಕೊಲ್ಲುತ್ತಾ ಯುದ್ಧಭೂಮಿಯಲ್ಲಿ ತಿರುಗತೊಡಗಿದರು. (70–73)

*ರಾಜನ ಕಿವಿಯಲ್ಲಿ ಸುದರ್ಶನಮಂತ್ರೋಪದೇಶ*

ಇದೇ ಸಮಯದಲ್ಲಿ ಬ್ರಹ್ಮದೇವರ ಆಜ್ಞೆಯಂತೆ ವಾಯುದೇವರು ಬ್ರಾಹ್ಮಣರೂಪವನ್ನು ಧರಿಸಿ ರಾಜನ ಕಿವಿಯಲ್ಲಿ ಸುದರ್ಶನ ಷಡಕ್ಷರ ಮಂತ್ರವನ್ನು ಜಪಿಸಿದರು. 'ಗೋಬ್ರಾಹ್ಮಣರ ಹಿತದ ಗೋಸ್ಕರವಾಗಿ ಹೇ ರಾಜಕುಮಾರನೇ! ನೀನು ಸುದರ್ಶನ ಚಕ್ರದಿಂದ ದೈತ್ಯಾಧಮನಾದ ಸಿಂಹಾದನ ತಲೆಯನ್ನು ಶೀಘ್ರದಲ್ಲಿ ಕತ್ತರಿಸು' ಎಂದು ನುಡಿದು ವಾಯುದೇವರು ಅದೃಶ್ಯರಾದರು. (74–75) ಬ್ರಾಹ್ಮಣನ ಮಾತನ್ನು ಕೇಳಿ ಮನಸ್ವಿಯಾದ ಚಕ್ರವರ್ತಿಯು ಸಹಸ್ರ ನೇಮಿಗಳಿಂದುಪೇತವಾದ ಸುದರ್ಶನ ಚಕ್ರವನ್ನು ವಿಷ್ಣುವಿನಂತೆ ತನ್ನ ಕೈಯಲ್ಲಿ ಹಿಡಿದನು.

*ವಿಷ್ಣುಪ್ರದತ್ತ ಚಕ್ರಾಯುಧದಿಂದ ಸಿಂಹಾದನ ವಧ*

ಚಕ್ರವನ್ನು ಕೈಯ್ಯಲ್ಲಿ ಹಿಡಿದಿದ್ದ ಚಕ್ರವರ್ತಿಯನ್ನು ಸಿಂಹಾದನು ಹರಿಯೆಂದು ತಿಳಿದು ಅತ್ಯಂತ ಭಯವನ್ನು ಹೊಂದಿದನು. ಭಯವಿಭ್ರಾಂತನಾಗಿದ್ದ ಸಿಂಹಾದನ ಶಿರಸ್ಸನ್ನು ಚಕ್ರವರ್ತಿಯು ಯುದ್ಧದಲ್ಲಿ ವಿಫಲವಾಗದ ಸುದರ್ಶನ ಚಕ್ರದಿಂದ ಸಂಹರಿಸಿದನು. ಇನ್ನುಳಿದ ಅವನ ಅನುಚರರು,

ಗಾಂಧರ್ವಮೋಹಿತಾಸ್ತಸ್ಥುಸ್ತತ್ರೈವ ರಣಮಂಡಲೇ ॥78॥

ತಸ್ಯೋಪರಿ ನರೇಂದ್ರಸ್ಯ ಪುಷ್ಪವರ್ಷಾಣಿ ಜಜ್ಞಿರೇ ।
ಅಥ ಚಾಮರವಾದ್ಯಾನಿ ವಾದ್ಯಂತೇ ಸ್ಮ ಸಮಂತತಃ ॥79॥

ಅಶರೀರಗಿರಂ ಶ್ರುತ್ವಾ ಚೋಲರಾಜಸ್ಯ ನಂದನಃ ।
ಅಸ್ತ್ರಸ್ಯ ಮೋಹನಸ್ಯಾಸ್ಯ ನ ಚಕ್ರೇ ಪ್ರತಿಸಂಹೃತಿಮ್ ॥80॥

ನಾರದ ಉವಾಚ–

ಏವಮುಕ್ತಮಗಸ್ತ್ಯೇನ ಯಥೋಕ್ತಂ ಭವತೋ ಮಯಾ ।
ಅನ್ಯಚ್ಚ ಕಿಂಚಿದ್ವಕ್ತವ್ಯಮುಚ್ಯತೇ ಚರಿತಂ ಮಯಾ ॥81॥

ಕಲೌ ಯುಗೇ ನರಾಃ ಸರ್ವೇ ತತ್ರಾಯೋಧನಮಂಡಲೇ ।
ಶ್ರೋಷ್ಯಂತಿ ದೈತ್ಯವೀರಾಣಾಂ ರಾತ್ರೌ ಕೋಲಾಹಲೈಃ ಸದಾ ॥82॥

ಕ್ಷೇತ್ರಪಾಲಾಜ್ಞಯಾ ಸರ್ವೇ ಸಿಂಹಾದಾಸುರಸೈನಿಕಾಃ ।
ನಯನಾಗೋಚರಾ ನೃಣಾಂ ಭ್ರಮಿಷ್ಯಂತಿ ತತಸ್ತತಃ ॥83॥

ದೈತ್ಯವೀರರು, ಸೈನಿಕರು ಗಾಂಧಾರ್ವಾಸ್ತ್ರದಿಂದ ಸಮ್ಮೋಹಿತರಾಗಿ ಆ ಯುದ್ಧಭೂಮಿಯಲ್ಲಿಯೇ ಬದಾಡತೊಡಗಿದರು.(78)

ದೇವತೆಗಳು ಚಕ್ರವರ್ತಿಯ ಮೇಲೆ ಪುಷ್ಪವರ್ಷವನ್ನು ಗೈದರು. ದೇವದುಂದುಭಿಗಳು ಎಲ್ಲೆಡೆ ಮೊಳಗಿದವು. ಆಕಾಶದಲ್ಲಿಯ ಅಶರೀರವಾಣಿಯನ್ನು ಕೇಳಿ ಅದರಂತೆ ದೈತ್ಯರ ಮೇಲೆ ಪ್ರಯೋಗಿಸಿದ್ದ ಗಂಧರ್ವಾಸ್ತ್ರವನ್ನು ಉಪಸಂಹರಿಸಲಿಲ್ಲ.(79–80)

ನಾರದರು ಹೇಳುತ್ತಾರೆ– 'ಹೀಗೆ ನಾನು ಅಗಸ್ತ್ಯರಿಂದ ಹೇಗೆ ಹೇಳಿಸಿಕೊಳ್ಳಲ್ಪಟ್ಟೆನೋ ಹಾಗೆಯೇ ನಿನಗದನ್ನು ಹೇಳಿರುವೆನು. ಭಗವಂತನ ಇನ್ನೊಂದಿಷ್ಟು ಚರಿತ್ರೆಯು ನಿನಗೆ ಹೇಳಬೇಕಾಗಿರುವದು. (81) ಕಲಿಯುಗದಲ್ಲಿ ಮನುಷ್ಯರು ಕಲಿಯುಗದಲ್ಲಿ ಆ ಯುದ್ಧಭೂಮಿಯಲ್ಲಿ ದೈತ್ಯವೀರರ ಕೋಲಾಹಲ ಧ್ವನಿಯನ್ನು ಕೇಳುವರು. ಕ್ಷೇತ್ರಪಾಲನ ಅನುಜ್ಞೆಯಂತೆ ಸಿಂಹಾದನ ಅಸುರ ಸೈನಿಕರು ಅದೃಶ್ಯರಾಗಿ ಅಲ್ಲಲ್ಲಿ ಅಲ್ಲಲ್ಲಿ ಸಂಚರಿಸುವರು.(83)

*ಚೋಲರಾಜನಿಂದ ಆಯುಧಗಳ ಪುನಃಸಮರ್ಪಣ*

ಅನಂತರ ಸಿಂಹಾದನನ್ನು ಸಂಹರಿಸಿದ ಚೋಲರಾಜನ ಮಗನು ವೇಂಕಟೇಶನ ಬಳಿ ತೆರಳಿ ಎಲ್ಲ ವೃತ್ತಾಂತವನ್ನು ಅವನಿಗೆ ನಿವೇದಿಸಿದನು. ಪರಮಾತ್ಮನು ಅನುಗ್ರಹಿಸಿದ್ದ ಶಂಖ,

ತತಃ ಸಿಂಹಾದಸಂಹಾರೀ ಚಕ್ರವರ್ತೀ ಮಹೀಪತಿಃ ।
ವ್ಯಜಿಜ್ಞಪಚ್ಚ ವೃತ್ತಾಂತಂ ವೇಂಕಟೇಶಾಯ ಸರ್ವತಃ ॥84॥

ಶಂಖಚಕ್ರಗದಾಶಾರ್ಙ್ಗನಂದಕಾನ್ ನೃಪನಂದನಃ ।
ಅರ್ಪಯಾಮಾಸ ಹರಯೇ ವೇಂಕಟಾದ್ರಿನಿವಾಸಿನೇ ॥85॥

ರಾಜಾನಂ ಚ ತಥಾ ಪಂಚಾಯುಧಾನ್ಯಪಿ ಚ ಮಾಧವಃ ।
ಉವಾಚ ಮೇಘನಿರ್ಘೋಷಗಂಭೀರಿಮಭೃತಾ ಗಿರಾ ॥86॥

ರಾಜನ್ ಯದೇಚ್ಛಸಿ ಜಯಮಜಯ್ಯೇ ಸಾಂಪರಾಯಕೇ ।
ತದೇಮಾನ್ಯಾಯುಧಾನ್ಯುಚ್ಚೈಃ ಸಾಹಾಯ್ಯಂ ಕುರ್ವತಾಂ ತವ ॥87॥

ಹೇ ಶಂಖ ಚಕ್ರ ಶಾಂರ್ಗಾಸೇ ಕೌಮೋದಕಿ ಮಹಾಗದೇ ।
ರಾಜ್ಞೋಽಸ್ಯ ಕಾಮದಾಃ ಕಾಲೇ ಸ್ವಸ್ವತೀರ್ಥೇಷು ತಿಷ್ಠತ ॥88॥

ಸ್ನಾತಾನಾಂ ಸ್ವಸ್ವತೀರ್ಥೇಷು ಮಮ ಸಾಯುಜ್ಯಭೋಗದಾಃ ।
ವಿಹರಧ್ವಂ ಯಥಾಕಾಮಂ ಮಯಿ ಧ್ಯಾನಪರಾಯಣಾಃ ॥89॥

ದತ್ತೈರ್ಯುಷ್ಮಾಭಿರೇತಸ್ಯ ಸಾಯುಜ್ಯಂ ಯದಿಹಾದಿಶಮ್ ।

ಚಕ್ರ, ಗದಾ, ಶಾರ್ಙ್ಗ ಮತ್ತು ನಂದಕವೆಂಬ ಆಯುಧಗಳನ್ನು ಪರಮಾತ್ಮನಿಗೆ ಹಿಂದಿರುಗಿಸಿದನು.(85)

*ಭಗವದಾಜ್ಞಪ್ತ ಪಂಚಾಯುಧಕೃತ್ಯ*

ಅನಂತರ ಶ್ರೀನಿವಾಸನು ರಾಜನಾದ ಚಕ್ರವರ್ತಿ ಮತ್ತು ಪಂಚಾಯುಧ ಗಳನ್ನು ಕುರಿತು ಗುಡುಗಿನಂತೆ ಗಂಭೀರವಾದ ಧ್ವನಿಯಿಂದ ಹೀಗೆ ನುಡಿದನು.(86) 'ಹೇ ರಾಜನೇ! ಯಾವಾಗ ನೀನು ಜಯಿಸಲಶಕ್ಯವಾದ ಯುದ್ಧದಲ್ಲಿ ಜಯವನ್ನು ಬಯಸುವೆಯೋ ಆವಾಗ ಈ ಆಯುಧಗಳು ನಿನಗೆ ಬಹು ಸಹಾಯವನ್ನು ಮಾಡಿ ನಿನಗೆ ಜಯವನ್ನುಂಟುಮಾಡುವವು. (87) ಹೇ ಶಂಖ, ಹೇ ಚಕ್ರ, ಹೇ ಕೌಮೋದಕೀ ಗದೆಯೇ, ನಂದಕ ಖಡ್ಗವೇ! ನೀವೆಲ್ಲರೂ ಈ ಪರ್ವತದಲ್ಲಿ ನಿಮ್ಮ ನಿಮ್ಮ ತೀರ್ಥಗಳಲ್ಲಿ ಇರುವವರಾಗಿ ರಾಜನಿಗೆ ಕಾಲ ಕಾಲಕ್ಕೆ ಅಭೀಷ್ಟಗಳನ್ನು ಒದಗಿಸುವವರಾಗಿ ವಾಸಮಾಡಿರಿ. (88) ನನ್ನನ್ನು ಧ್ಯಾನಿಸುತ್ತಾ ನಿಮ್ಮ ನಿಮ್ಮ ತೀರ್ಥಗಳಲ್ಲಿ ಸ್ನಾನವನ್ನು ಮಾಡುವ ಜನರಿಗೆ ಸರ್ವಾಭೀಷ್ಟಗಳನ್ನು ಪೋರೈಸಿರಿ. ನಿಮ್ಮ ತೀರ್ಥಗಳು ಮನುಷ್ಯರಿಗೆ ನನ್ನ ಸಾಯುಜ್ಯಭೋಗವನ್ನೊದಗಿಸಿ ಕೊಡುವವು. (89) ನೀವು ಸಹ ನನ್ನಲ್ಲಿ ಆಸಕ್ತವಾದ ಮನಸ್ಸನ್ನು ಹೊಂದಿ ನನ್ನನ್ನೇ ಧ್ಯಾನಮಾಡುತ್ತಾ ಈ ಪರ್ವತದಲ್ಲಿ ಯಥೇಚ್ಛವಾಗಿ ವಿಹರಿಸಿರಿ.

ತನ್ನ ವ್ಯಾಹನ್ಯತಾಂ ಸದ್ಯಃ ಪುನರಾಗಮನೇನ ವಃ ॥90॥

ಮಾನಸಾ ಮೇ ಸ್ತ ಸದ್ಯೋಽಹಂ ಪ್ರತ್ಯಕ್ಷವಿಗತಾಯುಧಃ ।
ಕಂಚಿತ್ಕಾಲಂ ವಸಿಷ್ಯಾಮಿ ತತಃ ಕೇನಾಪಿ ಹೇತುನಾ ॥91॥

ಕಲೌ ಕಶ್ಚಿನ್ಮಹಾಭಾಗಃ ಶಂಖಚಕ್ರೇ ತು ಕೃತ್ರಿಮೇ ।
ಕಾರಯಿತ್ವಾ ಸ್ಥಾಪಯತಿ ವಿಮಾನದೀಂಶ್ಚ ಮೇ ಪುನಃ ॥92॥

ತತಸ್ತದ್ಭಕ್ತಿವಶಗಃ ಸರ್ವಪ್ರತ್ಯಕ್ಷಗೋಚರಃ ।
ಆಕಲ್ಪಂ ನಿವಸಿಷ್ಯಾಮಿ ವರಾಭಯದಹಸ್ತದಃ ॥93॥

ಊರ್ಧ್ವಾಭ್ಯಾಮಪಿ ಚಾನ್ಯಾಭ್ಯಾಂ ಹಸ್ತಾಭ್ಯಾಮತಿಸುಂದರೇ ।
ದಧಾನಃ ಶಂಖಚಕ್ರೇ ಚ ಕಲ್ಪಿತೇ ಲೋಕತುಷ್ಟಯೇ ॥94॥

ದತ್ತಂ ಹಿ ಮಮ ಸಾಯುಜ್ಯಂ ಮಯಾ ತೇ ರಾಜನಂದನ ।
ಗಚ್ಛ ಪ್ರಶಾಧಿ ರಾಜ್ಯಂ ಚ ಮಾಂ ಸೇವಸ್ವ ದಿವಾನಿಶಮ್ ॥95॥

ನಾನು ನಿಮಗೆ ಈ ಚಕ್ರವರ್ತಿಯೊಡನೆ ಇರುವಂತೆ ತಿಳಿಸಿರುವೆನೋ ಅದನ್ನು ಮೀರದಿರಿ.(90) (ನನ್ನ ಬಳಿ ತಿರುಗಿ ಬರುವದರ ಮೂಲಕ ಚಕ್ರವರ್ತಿಗೆ ನಾನು ಕೊಟ್ಟಿರುವ ಮಾತನ್ನು ಮುರಿಯದಿರಿ) ನೀವು ಮಾನಸಿಕವಾಗಿ ನನ್ನೊಡನೆ ಇದ್ದರೂ ಸಹ ಕೆಲ ಕಾಲ ನಾನು ಆಯುಧರಹಿತನಾಗಿ, ಪ್ರತ್ಯಕ್ಷನಾಗಿ, ಈ ಪರ್ವತದಲ್ಲಿ ವಾಸಮಾಡುವೆನು. (91) ಮುಂದೆ ಕಲಿಯುಗದಲ್ಲಿ ಯಾವದೋ ಕಾರಣದಿಂದ ಮಹಾತ್ಮನಾದ ವ್ಯಕ್ತಿಯೋರ್ವನು ನನಗೆ ಕೃತ್ರಿಮವಾದ ಶಂಖ ಚಕ್ರಗಳನ್ನು ಮತ್ತು ವಿಮಾನವನ್ನು ಮತ್ತೆ ಮಾಡಿಸುವನು. ಅವನ ಭಕ್ತಿಗೆ ವಶನಾಗಿ ಎಲ್ಲರಿಗೂ ದರ್ಶನವನ್ನು ಕೊಡುತ್ತಾ ಪ್ರತ್ಯಕ್ಷವಾಗಿ ಈ ಗಿರಿಯಲ್ಲಿ ವರ ಮತ್ತು ಅಭಯ ಹಸ್ತಗಳನ್ನು ಧರಿಸಿ, ಸರ್ವಾಭೀಷ್ಟದಾಯಕನಾಗಿ ಈ ಕಲ್ಪಪೂರ್ತಿ ಯಾಗುವವರೆಗೂ ವಾಸಮಾಡುವೆನು. ನನ್ನ ಮೇಲಿನೆರಡು ಕೈಗಳಿಂದ ಜನರ ಸಂತೋಷಾರ್ಥವಾಗಿ ಅತ್ಯಂತ ಸುಂದರವಾದ ಕೃತ್ರಿಮವಾದ ಶಂಖ ಚಕ್ರಗಳನ್ನು ಧಾರಣಮಾಡುವೆನು. ಹೇ ಚೋಲರಾಜನೇ ! ನನ್ನ ಸಾಯುಜ್ಯವು ನಿನಗೆ ಕೊಡಲ್ಪಟ್ಟಿರುವದಷ್ಟೇ! ನೀನು ನಿನ್ನ ರಾಜ್ಯಕ್ಕೆ ತೆರಳಿ ನಿನ್ನ ಪ್ರಜೆಗಳನ್ನು ರಕ್ಷಿಸು. ಹಗಲು ರಾತ್ರಿ ನನ್ನನ್ನು ಸೇವಿಸು' ಎಂದು ನುಡಿದನು.(92-95) ಹೀಗೆ ಪರಮಾತ್ಮನಿಂದ ಆಜ್ಞಪ್ತರಾದ ಪಂಚಾಯುಧಗಳು ಶಂಖತೀರ್ಥ, ಚಕ್ರತೀರ್ಥ, ಗದಾತೀರ್ಥ, ಖಡ್ಗತೀರ್ಥ ಮತ್ತು ಶಾರ್ಙ್ಗತೀರ್ಥಗಳೆಂದು ತಮ್ಮ ತಮ್ಮ ಹೆಸರುಗಳಿಂದ ಪುಣ್ಯತೀರ್ಥಗಳಾಗಿ ವೇಂಕಟಾಚಲದಲ್ಲಿ ವಾಸವಾಗಿರುವರು. (96) ಚೋಲರಾಜನ ಮಗನೂ ಸಹ ದೇವತೆಗಳು

ಇತ್ಯಾಜ್ಞಪ್ತಾ ಭಗವತಾ ಶಂಖಚಕ್ರಗದಾದಯಃ ।
ಶಾಂರ್ಗಂ ಚ ಸ್ವಸ್ವತೀರ್ಥಾನಿ ಪುಣ್ಯಾನಿ ಪ್ರತಿಪೇದಿರೇ ॥96॥

ಪುತ್ರೋಽಪಿ ಚೋಲರಾಜಸ್ಯ ದೇವತಾಶಾಸ್ಯವೈಭವಃ ।
ಜಗಾಮ ನಗರೀಂ ಸ್ವೀಯಾಂ ಮಘವೇವಾಮರಾವತೀಮ್ ॥97॥

ಇತ್ಥಂ ನಾರದವಾಕ್ಯಾನಿ ಶ್ರುತ್ವಾ ಭೃಗುರುದಾರಧೀಃ ।
ವೇಂಕಟೇಶೇ ಪರಾಂ ಪ್ರೀತಿಮವಿಂದತ ಮಹಾಮನಾಃ ॥98॥

ಭೃಗುರಪಿ ವೃಷಭಾಚಲಪ್ರಭಾವಂ
ಮುನಿವರಸಂಕಥಿತಂ ನಿಶಮ್ಯ ಭೂಯಃ ।
ತದನು ಸ ಚ ವಿಲೋಕಿತುಂ ರಮೇಶಂ
ಸ್ಥಿರಮತಿನಾ ಮನಸಾ ಯಯೌ ಗಿರೀಂದ್ರಮ್ ॥99॥

ಇತಿ ಶ್ರೀಬ್ರಹ್ಮಾಂಡಪುರಾಣೇ ತೀರ್ಥಖಂಡೇ ಭೃಗುನಾರದಸಂವಾದೇ ಶ್ರೀವೇಂಕಟಾಚಲಮಾಹಾತ್ಮ್ಯೇ ಚಕ್ರವರ್ತಿಪರಾಕ್ರಮವರ್ಣನಂ ನಾಮೈಕಾದಶೋಽಧ್ಯಾಯಃ ಸಮಾಪ್ತಃ ॥

ಶ್ರೀಕೃಷ್ಣಾರ್ಪಣಮಸ್ತು

* * *

ಸಹ ಕೊಂಡಾಡುವಂತಹ ವೈಭವವನ್ನು ಹೊಂದಿ, ಇಂದ್ರನು ಅಮರಾವತಿಯನ್ನು ಪ್ರವೇಶಿಸಿದಂತೆ ರಾಜಕುಮಾರನೂ ವೈಭವದಿಂದ ತನ್ನ ನಗರವನ್ನು ಪ್ರವೇಶಮಾಡಿ ವೈಭವೋಪೇತನಾಗಿ ರಾಜ್ಯಭಾರವನ್ನು ಮಾಡಿದನು.(97) ಹೀಗೆ ನಾರದರ ಮಾತನ್ನು ಕೇಳಿದ ಮಹಾಜ್ಞಾನಿಗಳೂ ಮತ್ತು ಉದಾರ ಮನಸ್ಕರೂ ಆದ ಭೃಗುಮಹರ್ಷಿಗಳು ಭಗವಂತನಾದ ವೇಂಕಟೇಶನಲ್ಲಿ ಅವಿರತ ಭಕ್ತಿಯನ್ನು ಹೊಂದಿದನು. ಆ ಭೃಗುವಾದರೋ ಮುನಿಶ್ರೇಷ್ಠರಾದ ನಾರದರಿಂದ ಹೇಳಲ್ಪಟ್ಟ ವೃಷಭಾಚಲದ ಪ್ರಭಾವವನ್ನು ಕೇಳಿ ವೇಂಕಟಾಧಿ ಪತಿಯಾದ ಶ್ರೀನಿವಾಸನನ್ನು ಸಂದರ್ಶಿಸುವದಕ್ಕಾಗಿ ಅವನಲ್ಲಿಯೇ ದೃಢವಾದ ಮನಸ್ಸಿಟ್ಟು ಶೇಷಾಚಲವನ್ನು ಕುರಿತು ಹೊರಟನು. (98–99)

ಇಲ್ಲಿಗೆ ಬ್ರಹ್ಮಾಂಡಪುರಾಣದ ಭೃಗುನಾರದಸಂವಾದದಲ್ಲಿಯ ತೀರ್ಥಖಂಡದ ವೇಂಕಟೇಶ ಮಾಹಾತ್ಮೆಯಲ್ಲಿ ಚಕ್ರವರ್ತಿ ಪ್ರತಾಪ ವರ್ಣನವೆಂಬ ಹನ್ನೊಂದನೆಯ ಅಧ್ಯಾಯವು ಸಮಾಪ್ತವಾಯಿತು.

* * *

## ವಿಷಯಾನುಕ್ರಮಣಿಕಾ

॥ ಶ್ರೀ ಬಾದರಾಯಣೋ ವಿಜಯತೇ ತರಾಮ್ ॥

ಅಥ ಶ್ರೀಮದ್ ಗರುಡಪುರಾಣಾಂತರ್ಗತಂ

# ಶ್ರೀಮದ್ವೇಂಕಟೇಶಮಾಹಾತ್ಮ್ಯಮ್

## ಅಥ ಪ್ರಥಮೋಽಧ್ಯಾಯಃ

ಶ್ರೀಗುರುಭ್ಯೋ ನಮಃ ॥ ಹರಿಃ ಓಂ

**ಶ್ರಿಯಃ ಕಾಂತಾಯ ಕಲ್ಯಾಣನಿಧಯೇ ನಿಧಯೇಽರ್ಥಿನಾಮ್ ।**
**ಶ್ರೀವೇಂಕಟನಿವಾಸಾಯ ಶ್ರೀನಿವಾಸಾಯ ಮಂಗಲಮ್ ॥*॥**

**ಶ್ರೀವೇಂಕಟಾಚಲಾಧೀಶಂ ಶ್ರಿಯಾಧ್ಯಾಸಿತವಕ್ಷಸಮ್ ।**
**ಶ್ರಿತಚೇತನಮಂದಾರಂ ಶ್ರೀನಿವಾಸಮಹಂ ಭಜೇ ॥*॥**

ಶ್ರೀಗರುಡ ಉವಾಚ –

**'ಅರುಂಧತೀ ಸಮಸ್ತಾನಾಮಂಗನಾನಾಂ ಪತಿವ್ರತಾ ।**
**ಪತಿಂ ಸ್ವಂ ಪರಿಪಪ್ರಚ್ಛ ಲೋಕಾನಾಂ ಹಿತಕಾಮ್ಯಯಾ' ॥1॥**

ಶ್ರೀಗರುಡಪುರಾಣಾಂತರ್ಗತವಾದ

### ಶ್ರೀವೇಂಕಟೇಶಮಾಹಾತ್ಮೆ

ಕನ್ನಡದಲ್ಲಿ ಸರಳಾನುವಾದ

## ಮೊದಲನೆಯ ಅಧ್ಯಾಯ

**ಮಂಗಳಾಚರಣ**

ಶ್ರೀ ಗುರುಭ್ಯೋ ನಮಃ

ಶ್ರೀ ಲಕ್ಷ್ಮೀರಮಣ, ಅನಂತಕಲ್ಯಾಣಗುಣಾಕರ, ಅರ್ಥಿಜನ ಇಷ್ಟಾರ್ಥ ನಿಧಿಯಾದ ಶ್ರೀವೇಂಕಟಾಚಲ ನಿವಾಸಿಯಾದ ಶ್ರೀನಿವಾಸ ದೇವರಿಗೆ ಮಂಗಳವು.

ಶ್ರೀವೇಂಕಟಾಚಲಪತಿಯಾದ ಲಕ್ಷ್ಮೀದೇವಿಯಿಂದ ಶೋಭಿತವಾದ ವಕ್ಷಸ್ಥಳವುಳ್ಳ, ಆಶ್ರಿತಜನಮಂದಾರನಾದ ಶ್ರೀನಿವಾಸದೇವರನ್ನು ನಾನು ಸ್ತುತಿಸುತ್ತೇನೆ.

ಗರುಡನು ವೇಂಕಟೇಶಮಾಹಾತ್ಮೆಯನ್ನು ನಿರೂಪಿಸಲು ಬಯಸಿ ಅರುಂಧತಿವಸಿಷ್ಠರ

ಅರುಂಧತ್ಯುವಾಚ–

'ಬ್ರಹ್ಮಾತ್ಮಜ ನಮಸ್ತುಭ್ಯಮಿದಂ ವಿಜ್ಞಾಪನಂ ಶೃಣು ।
ಪತಿಶುಶ್ರೂಷಣಾದನ್ಯಃ ಸ್ತ್ರೀಣಾಂ ಧರ್ಮೋ ನ ವಿದ್ಯತೇ ॥2॥

ನ ಯಾಗಯೋಗೌ ನ ತಪೋ ನ ತೀರ್ಥಂ ನ ಸುರಾರ್ಚನಮ್।
ಸರ್ವಧರ್ಮಾಧಿಕಂ ಸ್ತ್ರೀಣಾಂ ಪತ್ಯುರೇವ ಪ್ರಹರ್ಷಣಮ್ ॥3॥

ಇತಿ ಶ್ರುತಂ ಮಯಾ ತ್ವತ್ತ ಋಷಿಭ್ಯೋಽನ್ಯೇಭ್ಯ ಏವ ಚ ।
ತಥಾಪಿ ಜಾಯತೇ ಪ್ರೀತಿರ್ಮಮ ಕಾಚಿದ್ಗರೀಯಸೀ ॥4॥

ವಿಷ್ಣುಕ್ಷೇತ್ರೇ ಕ್ವಚಿತ್ಪುಣ್ಯೇ ತೀರ್ಥೇ ಸರ್ವಾತಿಶಾಯಿನಿ ।
ಕಂಚಿತ್ಕಾಲಂ ತಪಃ ಕೃತ್ವಾ ವಿಷ್ಣುಮುದ್ದಿಶ್ಯ ಯತ್ನತಃ ॥5॥

ವಿಷ್ಣೋರ್ಮುಖೇನ ಸದ್ಧರ್ಮಂ ವಾಚಯಿತ್ವಾ ಜಗತ್ಕೃತೇ ।
ಸರ್ವಧರ್ಮೋತ್ತಮಂ ನೄಣಾಂ ದರ್ಶಯಾಮೀತಿ ಮೇ ಮತಿಃ ॥6॥

ಅನುಜ್ಞಯಾ ಸ್ತ್ರಿಯೋ ಭರ್ತುರ್ಧರ್ಮಾಚರಣಮುತ್ತಮಮ್ ।

ಸಂವಾದವನ್ನೇ ಅನುವಾದಿಸುತ್ತಾ ಋಷಿಗಳನ್ನು ಕುರಿತು 'ಸಮಸ್ತ ಸ್ತ್ರೀಯರಲ್ಲಿ ಶ್ರೇಷ್ಠಳಾದ ಪತಿವ್ರತೆಯಾದ ಅರುಂಧತಿಯು ಲೋಕಗಳಿಗೆ ಹಿತವನ್ನು ಬಯಸಿ ತನ್ನ ಪತಿಯಾದ ವಸಿಷ್ಠರನ್ನು ಕುರಿತು ಹೀಗೇ ಪ್ರಶ್ನಿಸಿದಳು. (1)

### ವಸಿಷ್ಠರನ್ನು ಕುರಿತು ಅರುಂಧತಿಯ ಪ್ರಾರ್ಥನೆ

'ಬ್ರಹ್ಮದೇವರ ಮಾನಸಪುತ್ರರಾದ ವಸಿಷ್ಠರೇ ! ನಿಮಗೆ ನಮಸ್ಕಾರಗಳು. ನನ್ನ ವಿಜ್ಞಾಪನೆಯನ್ನಾಲಿಸಿರಿ. ಪತಿಶುಶ್ರೂಷಣೆಯನ್ನು ಹೊರತು ಪಡಿಸಿ ಯಾವ ಪ್ರತ್ಯೇಕ ಧರ್ಮಗಳೂ ಸಹ ಸ್ತ್ರೀಯರಿಗೆ ಇರುವದಿಲ್ಲ.(2) ಯಾಗ, ಯೋಗ, ತಪಸ್ಸು, ತೀರ್ಥಕ್ಷೇತ್ರದರ್ಶನ, ದೇವತೆಗಳ ಆರಾಧನೆ – ಇವುಗಳಾವವೂ ಸಹ ಸುಮಂಗಲಾ ಸ್ತ್ರೀಯರು ಮಾಡುವ ಪತಿಸೇವೆಗೆ ಸಮವಾದುದಲ್ಲ. ಆದ್ದರಿಂದ ಎಲ್ಲ ಧರ್ಮಗಳಿಗಿಂತಲೂ ಶ್ರೇಷ್ಠವಾದದ್ದು ಪತಿಯನ್ನು ಸಂತೋಷಗೊಳಿಸುವದೇ ಆಗಿರುವದು. (3) ಹೀಗೆ ಈ ಎಲ್ಲ ಧರ್ಮಗಳನ್ನು ನಿಮ್ಮ ಮುಖದಿಂದ ಮತ್ತು ಇತರರ ಋಷಿ–ಮುನಿಗಳಿಂದ ಕೇಳಿದ್ದೇನೆ. ಆದರೂ ಸಹ ನನಗೆ ಒಂದು ಬಯಕೆ ಯಿರುವದು.(5) ಅತ್ಯಂತ ಪುಣ್ಯಕರವಾದ ವಿಷ್ಣುವಿನ ಕ್ಷೇತ್ರದಲ್ಲಿದ್ದು ವಿಷ್ಣುವನ್ನು ಕುರಿತು ಕೆಲ ಕಾಲತಪಸ್ಸನ್ನಾಚರಿಸಿ ಅವನನ್ನು ಪ್ರಸನ್ನೀಕರಿಸಿ, ಅವನ ಬಾಯಿಯಿಂದ ಸರ್ವೋತ್ಕೃಷ್ಟವಾದ ಧರ್ಮಗಳನ್ನು ಕೇಳಬಯಸಿರುವೆನು. ಯಾವಾಗಲೂ ಪತಿಯ ಆಜ್ಞೆಯಿಂದ ಆಚರಿಸಿದ ಧರ್ಮವು ಮಾತ್ರ

ವಿಷ್ಣುಕ್ಷೇತ್ರಂ ತಾದೃಶಂ ಮೇ ವದ ತೀರ್ಥೋತ್ತಮಂ ತಥಾ' ॥7॥

ಗರುಡ ಉವಾಚ –

ಅರುಂಧತ್ಯಾ ಪೃಷ್ಟ ಇತ್ಥಂ ವಸಿಷ್ಠೋ ವಾಕ್ಯಮಬ್ರವೀತ್ ।
'ಸಮ್ಯಕ್ಪೃಷ್ಟಮಿದಂ ದೇವಿ ಸರ್ವಲೋಕಹಿತೇಚ್ಛಯಾ ॥8॥

ತಥಾ ವದಾಮಿ ಶೃಣು ಮೇ ಯಥಾ ಹೃತ್ಸಂಪ್ರಹೃಷ್ಯತಿ ।
ಶ್ರೋತರ್ಯಪ್ರತಿಪತ್ತೌ ತು ವಕ್ತುರ್ವಾಕ್ಯಂ ತಥಾ ಭವೇತ್ ॥9॥

ಯಥಾಂಧೇ ಭರ್ತರಿ ಸ್ತ್ರೀಣಾಂ ಸೌಂದರ್ಯಂ ಸಕಲಂ ವೃಥಾ ।
ಸಾವಧಾನಮನಾ ಭೂತ್ವಾ ಶೃಣು ತಸ್ಮಾದ್ವಚೋ ಮಮ ॥10॥

ಸುವರ್ಣಮುಖರೀತೀರೇ ಕಶ್ಚಿದಸ್ತಿ ಮಹೀಧರಃ ।
ವೇಂಕಟಾಚಲನಾಮಾಸೌ ಸರ್ವಭೂಭೃತ್ಕುಲೋತ್ತಮಃ ॥11॥

ಅತಿಪ್ರೀತಿರ್ಮಹಾವಿಷ್ಣೋಸ್ತತ್ರ ವೇಂಕಟಭೂಧರೇ ।
ಶ್ವೇತದ್ವೀಪಾಚ್ಚ ವೈಕುಂಠಾದ್ಭಾನುಮಂಡಲಮಧ್ಯತಃ ॥12॥

ಸ್ತ್ರೀಯರಿಗೆ ಫಲಪ್ರದವಾಗಿರುವದರಿಂದ ನನಗೆ ಅಪ್ಪಣೆಯನ್ನು ಕೊಡಿರಿ.(5–6) ಪರಮಾತ್ಮನ ಅನುಗ್ರಹವನ್ನು ಶೀಘ್ರದಲ್ಲಿ ದೊರಕಿಸಿಕೊಡುವ ಶ್ರೇಷ್ಠವಾದ ಕ್ಷೇತ್ರವನ್ನು ಮತ್ತು ಮನಶ್ಶುದ್ಧಿಕರವಾದ ತೀರ್ಥವನ್ನು ಸಹ ನನಗೆ ತಿಳಿಸಿರಿ' ಎಂದು ಪ್ರಾರ್ಥಿಸಿದಳು.(7)

ಹೀಗೆ ಅರುಂಧತಿಯಿಂದ ಸಂಪೃಷ್ಟರಾದ ವಸಿಷ್ಠ ಮಹರ್ಷಿಗಳು 'ನಿನ್ನ ಈ ಪ್ರಶ್ನೆಯು ಅತ್ಯಂತ ಯೋಗ್ಯವಾಗಿದ್ದು ಲೋಕಹಿತದಾಯಕವಾಗಿರುವದು.(8) ನಾನು ಹೇಳುವದನ್ನು ಲಕ್ಷ್ಯವಿಟ್ಟು ಕೇಳು. ನಿನಗೆ ಸಂತೋಷವಾಗುವ ರೀತಿಯಲ್ಲಿ ವಿಷ್ಣುಕ್ಷೇತ್ರ– ತೀರ್ಥಮಾಹಾತ್ಮ್ಯವನ್ನು ನಿನಗೆ ಹೇಳುವೆನು. ಕೇಳು. (9) ಹೇಗೆ ಅಂಧನ ಪತ್ನಿಯ ಅಲಂಕಾರವು ತನ್ನ ಪತಿಗೆ ಆನಂದದಾಯಕ ವಲ್ಲದ್ದರಿಂದ ವ್ಯರ್ಥವೆನುಸುವದೋ ಹಾಗೆ ತಿಳಿಯಬಯಸಿ ಪ್ರಶ್ನಿಸಿದ ವ್ಯಕ್ತಿಗೆ ತಿಳಿಯುವಂತೆ ಉತ್ತರಿಸದೇ ಹೋದಲ್ಲಿ ಆ ಉತ್ತರವು ವ್ಯರ್ಥವೆನಿಸುವದು. ಆದ್ದರಿಂದ ನಿನಗೆ ತಿಳಿಯುವಂತೆ ನಾನು ಹೇಳುವೆನು. ಸಮಾಧಾನಮನಸ್ಕಳಾಗಿ ಕೇಳು. (10)

ಸುವರ್ಣಮುಖರೀನದಿಯ ದಡದಲ್ಲಿ ವೇಂಕಟಾಚಲವೆಂಬ ಪರ್ವತಶ್ರೇಷ್ಠವಿರುವದು. ಅದು ಭಗವಂತನಿಗೆ ಅತ್ಯಂತ ಪ್ರಿಯವಾಗಿದ್ದು ಶ್ವೇತದ್ವೀಪ ಲೋಕದಿಂದ ಆಕಾಶಮಾರ್ಗವಾಗಿ ಶ್ರೀನಿವಾಸನ ವಿಹಾರಾರ್ಥವಾಗಿ ಗರುಡನಿಂದ ತರಲ್ಪಟ್ಟಿರುವದು.(11–12) ಯಾವ ಪರ್ವತವನ್ನು ಕೀರ್ತನ

ಯನ್ನಾಮ ಕೀರ್ತಯಿತ್ವಾಪಿ ಸರ್ವಪಾಪಕ್ಷಯೋ ಭವೇತ್ ।
ಸಮಸ್ತಶ್ರೇಯಸಾಂ ಸಿದ್ಧಿಸ್ತಾದೃಶೋ ವೇಂಕಟಾಚಲಃ ॥13॥

ಯಸ್ಮೈ ವೇಂಕಟಶೈಲಾಯ ನಮಸ್ಕೃತ್ಯಾಪಿ ದೂರತಃ ॥
ಸರ್ವಪಾಪೈಃ ಪ್ರಮುಚ್ಯೇತ ತತ್ಪುಣ್ಯಂ ಕ್ಷೇತ್ರಮುತ್ತಮಮ್ ॥14॥

ತತ್ರ ಸ್ವಾಮಿಸರೋ ನಾಮ ತೀರ್ಥಮೇಕಂ ವಿರಾಜತೇ ।
ತತ್ಪಶ್ಚಿಮೇ ಭೂಮಿಕೋಲಸ್ತಟೇ ರಾಜತಿ ದೇವರಾಟ್ ॥15॥

ಶ್ರೀಮದ್ವರಾಹದೇವಸ್ಯ ವೇಂಕಟಾಚಲವಾಸಿನಃ ।
ನ ಮಯಾ ಶಕ್ಯತೇ ವಕ್ತುಂ ಮಹಿಮಾ ಬಹು ಹಾಯನೈಃ ॥16॥

ದಕ್ಷಿಣೇ ಸ್ವಾಮಿತೀರ್ಥಸ್ಯ ತೀರೇ ನೀರಜಲೋಚನಃ ।
ಶ್ರೀವೇಂಕಟೇಶೋ ಭಕ್ತಾನಾಂ ವರದಃ ಶ್ರೀನಿಕೇತನಃ ॥17॥

ನಿವಸತ್ಯಚ್ಯುತೋ ನಿತ್ಯಂ ಸುಲಭಃ ಸರ್ವದೇಹಿನಾಮ್ ।
ತಸ್ಯ ಸೇವಾಮಪೇಕ್ಷಂತೇ ಬ್ರಹ್ಮರುದ್ರಾದಿದೇವತಾಃ ॥18॥

ತಸ್ಯ ವೇಂಕಟಶೈಲಸ್ಯ ಸಂತಿ ನಾಮಾನ್ಯನೇಕಶಃ ।
ಕೀರ್ತನಾತ್ಪಾಪಹಾರೀಣಿ ಶ್ರೇಯೋದಾನಿ ಶೃಣುಷ್ವ ಮೇ ॥19॥

ಮಾಡಿದರೂ ಸಹ ಎಲ್ಲ ಪಾಪಗಳು ನಾಶವನ್ನು ಹೊಂದಿ ಸಮಸ್ತ ಪುಣ್ಯಗಳು, ಸಿದ್ಧಿಗಳು ಲಭಿಸುವದೋ ಅಂತಹ ಕ್ಷೇತ್ರವೇ ವೇಂಕಟಾಚಲವಾಗಿರುವದು.(13–14) ಅಲ್ಲಿ ಸ್ವಾಮಿಪುಷ್ಕರಿಣಿಯೆಂಬ ತೀರ್ಥವೊಂದಿದ್ದು ಅದರ ದಡದಲ್ಲಿಯೇ ದೇವಾಧಿದೇವನಾದ ಭೂವರಾಹ ಸ್ವಾಮಿಯು ವಾಸವಾಗಿರುವನು. (15) ವೇಂಕಟಾಚಲದಲ್ಲಿರುವ ವರಾಹದೇವರ ಮಹಿಮೆಯನ್ನು ಬಹುವರ್ಷಗಳಷ್ಟು ಕಾಲ ವರ್ಣಿಸಿದರೂ ಸಹ ಮುಗಿಯದು. ಅಷ್ಟು ವಿಸ್ತಾರವಾದ ಅವನ ಮಹಿಮೆಯನ್ನು ವರ್ಣಿಸಲು ನಾನು ಸಮರ್ಥನಲ್ಲ.(16)

ಸ್ವಾಮಿತೀರ್ಥದ ದಕ್ಷಿಣಭಾಗದಲ್ಲಿ ಕಮಲನೇತ್ರನಾದ ಲಕ್ಷ್ಮೀನಿವಾಸನಾದ ಭಕ್ತಾಭೀಷ್ಟ ದಾಯಕನಾದ ಶ್ರೀನಿವಾಸನು ಯಾವಾಗಲು ತನ್ನ ಭಕ್ತರಿಗೆ ವರವನ್ನು ಕೊಡುತ್ತಾ ವಾಸವಾಗಿರುವನು. ಅವನು ಭಕ್ತರಿಗೆ ಸುಲಭನೂ ಅನಾಯಾಸವಾಗಿ ಪ್ರಸನ್ನನಾಗುವವನೂ ಆಗಿದ್ದು ಬ್ರಹ್ಮಾದಿದೇವತೆಗಳೂ ಸಹ ಅವನ ಸೇವೆಯನ್ನು ಮಾಡಬಯಸುವರಾಗಿರುವರು.(17–18) ಅಂತಹ ಭಕ್ತಮಂದಾರನಾದ ಶ್ರೀನಿವಾಸನು ವೇಂಕಟಾಚಲ ಪರ್ವತದಲ್ಲಿ ವಾಸವಾಗಿದ್ದು ಅಂಜನಾದ್ರಿ, ಶೇಷಾದ್ರಿ, ವೃಷಾಚಲ, ವೃಷಭ ಪರ್ವತ, ಸಿಂಹಾದ್ರಿ, ನಾರಾಯಣಾದ್ರಿ, ಶ್ರೀಶೈಲ, ನೃಸಿಂಹಪರ್ವತ ಇವೇ ಮೊದಲಾದ

ಅಂಜನಾದ್ರಿಃ ಶೇಷಗಿರಿರ್ವೃಷಾದ್ರಿರ್ವೃಷಭಾಚಲಃ ।
ನಾರಾಯಣಾದ್ರಿಃ ಸಿಂಹಾದ್ರಿಃ ಶ್ರೀಶೈಲಃ ಸಿಂಹಭೂಧರಃ ॥20॥

ಏವಮಾದೀನಿ ನಾಮಾನಿ ಯಃ ಕೀರ್ತಯತಿ ಮಾನವಃ ।
ಪ್ರಾತಃ ಕಾಲೇ ಪ್ರತಿದಿನಂ ತಸ್ಯ ಪುಣ್ಯಮನಂತಕಮ್ ॥21॥

ತಸ್ಮಿಂಚ್ಛ್ರೀವೇಂಕಟಾಧೀಶೇ ಭಕ್ತಿಮಂತಃ ಕಲೌ ಯುಗೇ ।
ಮನೋರಥಾನ್ ಪ್ರಾಪ್ನುವಂತಿ ಮನುಷ್ಯಾ ಭಾಗ್ಯಶಾಲಿನಃ ॥22॥

ಉತ್ತರೇ ಸ್ವಾಮಿತೀರ್ಥಸ್ಯ ವಿಯದ್ಗಂಗಾ ವಿರಾಜತೇ ।
ತಸ್ಯಾ ಮಾಹಾತ್ಮ್ಯಮತುಲಂ ಪ್ರವದಂತಿ ಮನೀಷಿಣಃ ॥23॥

ತತಃ ಪಾಪವಿನಾಶಾಖ್ಯ ಉತ್ತರೇ ತೀರ್ಥನಾಯಕಃ ।
ಸ್ನಾನೇನ ತತ್ರ ನಶ್ಯಂತಿ ಪಾಪಾನಿ ವಿವಿಧಾನ್ಯಪಿ ॥24॥

ತತ ಉತ್ತರ ಐಶಾನೇ ಭಾಗೇ ಗಿರಿವನಾಂತರೇ ।
ತುಂಬುತೀರ್ಥಮಿತಿ ಖ್ಯಾತಃ ಕಶ್ಚಿದಸ್ತಿ ವರಾನನೇ ॥25॥

ಹೆಸರುಗಳಿದ್ದು ಅವುಗಳ ಉಚ್ಚಾರಮಾತ್ರದಿಂದಲೇ ಸಮಸ್ತಾಭೀಷ್ಟದಾಯಕವಾಗಿವೆ. ಶ್ರೀವೇಂಕಟಾ-ಚಲದ ಪುರಾಣೋಕ್ತನಾಮಗಳನ್ನು ಯಾರು ಪ್ರಾತಃಕಾಲದಲ್ಲಿ ಪ್ರತಿದಿನವೂ ಉಚ್ಚರಿಸುವರೋ ಅವರು ಅನಂತಪುಣ್ಯವನ್ನು ಪಡೆಯುವರು. (19-21) ಆ ಶ್ರೀವೇಂಕಟಾಚಲದಲ್ಲಿ ವಾಸವಾಗಿರುವ ಶ್ರೀನಿವಾಸನಲ್ಲಿ ಭಕ್ತಿಯುಳ್ಳ ಮನುಷ್ಯರು ಆ ಪರಮಾತ್ಮನಿಂದ ಮನೋಭೀಷ್ಟೆಗಳನ್ನು ಪೂರೈಸಿಕೊಂಡು ಭಾಗ್ಯಶಾಲಿಗಳೆನಿಸಿರುವರು.(22)

### ತುಂಬುರುತೀರ್ಥದ ಮಾಹಾತ್ಮ್ಯ

ಸ್ವಾಮಿಪುಷ್ಕರಿಣಿಯ ಉತ್ತರ ಭಾಗದಲ್ಲಿ ವಿಯದ್ಗಂಗೆಯೆಂದು ಪ್ರಸಿದ್ಧವಾದ ತೀರ್ಥವಿದ್ದು ಅದರ ವಿಶಿಷ್ಟವಾದ ಮಾಹಾತ್ಮ್ಯವನ್ನು ಋಷಿಮುನಿಗಳು- ಜ್ಞಾನಿಗಳೂ ಸಹ ಕೊಂಡಾಡುವರು. (23) ಅದರ ಉತ್ತರಭಾಗದಲ್ಲಿ ಪಾಪವಿನಾಶನವೆಂಬ ತೀರ್ಥವಿದ್ದು ಅಲ್ಲಿಯ ಸ್ನಾನಮಾತ್ರದಿಂದ ನಾನಾವಿಧವಾದ ಪಾಪಗಳೆಲ್ಲವೂ ಸಹ ನಾಶವನ್ನು ಹೊಂದುತ್ತವೆ. ಆ ತೀರ್ಥದ ಈಶಾನ್ಯದಿಗ್ಭಾಗದಲ್ಲಿ ಗಿರಿಯ ತಳಭಾಗದಲ್ಲಿ ತುಂಬುತೀರ್ಥ (ತುಂಬುರುತೀರ್ಥ) ವೆಂಬ ತೀರ್ಥಶ್ರೇಷ್ಠವಿರುವದು. (25) ನಾನಾ ವೃಕ್ಷಗಳಿಂದ ಸುತ್ತುವರೆಯಲ್ಪಟ್ಟಿದ್ದು ಸಿಂಹ-ಹುಲಿ ಮೊದಲಾದ ಪ್ರಾಣಿಗಳಿಂದ ಕೂಡಿದೆ. ಕಿಂಚಿದುನ್ನತಸ್ಥಾನದಿಂದ ಕೆಳಗಿಳಿಯುವ ಈ ತೀರ್ಥದಲ್ಲಿ ದೇವತೆಗಳು, ಗಂಧರ್ವರು,

ಅನೇಕವೃಕ್ಷವಿತತಿಸಿಂಹಶಾರ್ದೂಲಸಂಯುತಃ ।
ನಿಮ್ನೋನ್ನತಸ್ಥಲೇ ತತ್ರ ಪ್ರಕೃಷ್ಟಸ್ತೀರ್ಥನಾಯಕಃ ॥26॥

ದೇವಗಂಧರ್ವಮುನಯಸ್ತುಂಬುತೀರ್ಥೇ ಕೃತಪ್ಲವಾಃ ।
ಕೃತಾರ್ಥಾ ಅಭವನ್ಪೂರ್ವಮಿತಿ ಮೇ ಬ್ರಹ್ಮಣಃ ಶ್ರುತಮ್ ॥27॥

ಸ್ವಾಮಿಪುಷ್ಕರಿಣೀಂ ಗತ್ವಾ ಸ್ನಾತ್ವಾ ತತ್ರ ಯಥಾವಿಧಿ ।
ಆದಿಪೋತ್ರಿಣಮಾಲೋಕ್ಯ ವೇಂಕಟೇಶೇ ಕೃತಾನತಿಃ ॥28॥

ಆಕಾಶಗಂಗಾತೀರ್ಥೇ ಚ ಪಾಪನಾಶೇ ಕೃತಾಪ್ಲವಾ ।
ತತ್ರ ಗತ್ವಾ ತುಂಬುತೀರ್ಥೇ ಸ್ನಾತ್ವಾ ನಿರ್ಮಲಮಾನಸಾ ॥29॥

ಪ್ರಾಙ್ಮುಖೀ ತ್ವಂ ಸ್ಥಿತಾ ಭೂತ್ವಾ ತಪಃ ಕುರ್ವಿತ್ಯಚೋದಯತ್ ।
ವಸಿಷ್ಠೇನಾಭ್ಯನುಜ್ಞಾತಾ ಅರುಂಧತೀ ತಂ ಪ್ರಣಮ್ಯ ಚ ॥30॥

ಆಗತ್ಯ ವೇಂಕಟಾಧಸ್ತಾತ್ ಕಪಿಲಾಖ್ಯೇ ಸರೋವರೇ ।
ಕೃತ್ವಾ ಸ್ನಾನಂ ತದಾರುಹ್ಯ ವೇಂಕಟಾದ್ರಿತಟೇ ಶುಭೇ ॥31॥

ಕೃತಸ್ನಾನಾ ಸ್ವಾಮಿತೀರ್ಥೇ ಭೂವರಾಹಂ ಪ್ರಣಮ್ಯ ಚ ।

ಋಷಿ–ಮುನಿಗಳು ಇವರುಗಳು ಸ್ನಾನವನ್ನು ಮಾಡಿ ಕೃತಕೃತ್ಯರಾದರೆಂಬುದಾಗಿ ಬ್ರಹ್ಮದೇವರಿಂದ ನಾನು ಕೇಳಿ ತಿಳಿದಿದ್ದೇನೆ. (26–27)

### ತುಂಬುರು ತೀರ್ಥದಲ್ಲಿ ತಪಸ್ಸನ್ನಾಚರಿಸಲು ಅರುಂಧತಿಗೆ ಸೂಚನೆ

ಆದ್ದರಿಂದ ಹೇ ಅರುಂಧತಿಯೇ! ಸ್ವಾಮಿಪುಷ್ಕರಿಣೀ ತೀರ್ಥಕ್ಕೆ ಹೋಗಿ ಅಲ್ಲಿ ವಿಧಿಗನುಸಾರವಾಗಿ ಸ್ನಾನವನ್ನು ಮಾಡಿ, ವರಾಹದೇವರ ದರ್ಶನವನ್ನು ಮಾಡಿಕೊಂಡು, ವೇಂಕಟಾಚಲಪತಿಯಾದ ಶ್ರೀನಿವಾಸನಿಗೆ ನಮಸ್ಕರಿಸಿ ಆಕಾಶಗಂಗಾ– ಪಾಪವಿನಾಶನ ತೀರ್ಥಗಳಲ್ಲಿ ಸ್ನಾನವನ್ನು ಮಾಡಿ, ಅಲ್ಲಿಂದ ತುಂಬುತೀರ್ಥಕ್ಕೆ ತೆರಳಿ ಅಲ್ಲಿ ನಿರ್ಮಲ ಮನಸ್ಸಿನಿಂದ ಪೂರ್ವಾಭಿಮುಖಳಾಗಿ ತಪಸ್ಸನ್ನಾಚರಿಸು' ಎಂದು ನುಡಿದರು.(28–30)

### ತಪಸ್ಸಿಗಾಗಿ ತುಂಬುರುತೀರ್ಥಗಮನ

ಅರುಂಧತಿಯು ವಸಿಷ್ಠರಿಗೆ ನಮಸ್ಕರಿಸಿ ಅವರ ಮಾತಿನಂತೆ ವೇಂಕಟಾಚಲದ ಕೆಳಭಾಗದಲ್ಲಿರುವ ಕಪಿಲತೀರ್ಥದಲ್ಲಿ ಸ್ನಾನವನ್ನು ಮಾಡಿ, ಪರ್ವತವನ್ನೇರಿ, ಮೇಲಿರುವ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡಿ, ವರಾಹ ದೇವರಿಗೆ ನಮಿಸಿ ಹಾಗೆಯೇ ಅವನ ಸನ್ನಿಧಾನದಲ್ಲಿಯೇ

ಶ್ರೀನಿವಾಸಂ ವೇಂಕಟೇಶಂ ನಮಸ್ಕೃತ್ಯಾಸ್ಯ ಸನ್ನಿಧೌ ॥32॥

ಪ್ರಾರ್ಥಯಾಮಾಸ 'ಭಗವನ್ ಪರಿಪಾಲಯ ಮಾಂ ಹರೇ ।
ತಪಃ ಕರೋಮ್ಯಹಂ ತುಂಬುತೀರ್ಥಂ ಗತ್ವಾ ಕೃಪಾನಿಧೇ ॥33॥

ತತ್ರ ತ್ವಂ ರಮಯಾ ಸಾರ್ಧಂ ಸನ್ನಿಧೇಹ್ಯಚರೇಣ ಮೇ ।
ಇತಿ ವಿಜ್ಞಾಪ್ಯ ಗಗನಗಂಗಾಂ ಪಾಪವಿನಾಶಿನೀಮ್ ॥34॥

ಗತ್ವಾ ತತ್ರ ನಿಮಜ್ಯಾಶು ತುಂಬುತೀರ್ಥಮುಪಾಗಮತ್ ।
ಸ್ಮರಂತೀ ಭರ್ತೃವಚನಂ ತತ್ರ ಸ್ನಾತ್ವಾ ವಿಧಾನತಃ ॥35॥

ಪತಿಪ್ರೋಕ್ತಂ ವಿಷ್ಣುಮಂತ್ರಂ ಜಪಂತೀ ತಪಸಿ ಸ್ಥಿತಾ ।
ವಯಸ್ಯಾ ಸುಮತಿರ್ನಾಮ ಶುಶ್ರೂಷಾಮಕರೋತ್ತದಾ ॥36॥

ದ್ವಾದಶಾಬ್ದಂ ತಪಶ್ಚಕ್ರೇ ನಿರಾಹಾರಾ ಯತವ್ರತಾ ।
ದೇವಗಂಧರ್ವಮುನಯಸ್ತಾಂ ದೃಷ್ಟ್ವಾ ತಪಸಿ ಸ್ಥಿತಾಮ್ ॥37॥

ಆಶ್ಚರ್ಯಮಾಶ್ಚರ್ಯಮಿತಿ ಬ್ರುವಾಣಾ ಮುದಮಾಯಯುಃ ।
ತಸ್ಯಾಸ್ತಪಸ್ಸುಪ್ರಸನ್ನಃ ಪ್ರಾದುರಾಸೀತ್ಪರಃ ಪುಮಾನ್ ॥38॥

ಇರುವ ಶ್ರೀನಿವಾಸನನ್ನು ಸಹ ನಮಿಸಿ(32) 'ಹೇ ಭಗವಂತನೇ! ನಾನು ತುಂಬುತೀರ್ಥಕ್ಕೆ ಹೋಗಿ ಅಲ್ಲಿ ನಿನ್ನನ್ನುದ್ದೇಶಿಸಿ ತಪಸ್ಸನ್ನಾಚರಿಸುವೆನು. ಕರುಣಾಶಾಲಿಯೇ! ಅಲ್ಲಿ ನೀನು ಲಕ್ಷ್ಮೀಸಹಿತನಾಗಿ ಸನ್ನಿಹಿತನಾಗಿ ನನ್ನನ್ನನುಗ್ರಹಿಸು' ಎಂದು ಪ್ರಾರ್ಥಿಸಿಕೊಂಡಳು. ಹೀಗೆ ನುಡಿದು ಅರುಂಧತಿಯು ಆಕಾಶಗಂಗಾ ಮತ್ತು ಪಾಪನಾಶನ ತೀರ್ಥಗಳಲ್ಲಿ ಸ್ನಾನವನ್ನು ಮಾಡಿ (34) ಅನಂತರ ತುಂಬುರು ತೀರ್ಥಕ್ಕೆ ಬಂದಳು. ಅಲ್ಲಿ ವಸಿಷ್ಠರ ಮಾತುಗಳನ್ನು ಸ್ಮರಿಸುತ್ತಾ ನಿಯಮಾನುಸಾರವಾಗಿ ಸ್ನಾನವನ್ನು ಮಾಡಿ ವಸಿಷ್ಠರಿಂದ ಹೇಳಲ್ಪಟ್ಟ ವಿಷ್ಣುಮಂತ್ರವನ್ನು ಜಪಿಸುತ್ತಾ ಅವಳು ತಪಸ್ಸನ್ನಾಚರಿಸಿದಳು. ಸುಮತಿಯೆಂಬ ಅವಳ ಸಖಿಯು ತಪೋನಿರತಳಾಗಿದ್ದ ಅರುಂಧತಿಯ ಸೇವೆಯನ್ನು ಮಾಡಿದಳು. (35–36) ಹೀಗೆ ಹನ್ನೆರೆಡು ವರ್ಷ ಅರುಂಧತಿಯು ಆಹಾರವನ್ನು ಸ್ವೀಕರಿಸದೇ ಇಂದ್ರಿಯ ನಿಗ್ರಹವನ್ನಿಟ್ಟುಕೊಂಡು ತಪಸ್ಸನ್ನಾಚರಿಸಿದಳು. ದೇವತೆಗಳು, ಗಂಧರ್ವರು, ಋಷಿ– ಮುನಿಗಳು ಇವರೆಲ್ಲರು ಅರುಂಧತಿಯ ತಪಸ್ಸನ್ನು ನೋಡಿ ಆಶ್ಚರ್ಯ ಆಶ್ಚರ್ಯವೆಂದು ಉದ್ಗಾರವನ್ನು ಮಾಡಿದರು. (38)

### ಭಗವದಾವಿರ್ಭಾವ

ಅನಂತರ ಅರುಂಧತಿಯ ತಪಸ್ಸಿಗೆ ಸಂತುಷ್ಟನಾಗಿ, ಫಾಲ್ಗುನ ಮಾಸದ ಶುಕ್ಲ ಪಕ್ಷದ

'ಫಾಲ್ಗುನೇ ಮಾಸಿ ಪೌರ್ಣಮ್ಯಾಂ ಮೀನೇ ಭಾಸ್ವತಿ ಭಾಸ್ವತಿ ।
ತದಾ ಬ್ರಹ್ಮಾದಯೋ ದೇವಾ ಋಷಯೋ ವ್ಯಾಸಪೂರ್ವಕಾಃ ॥39॥

ಸನಂದಸನಕಾದ್ಯಾಶ್ಚ ಯೋಗಿನಃ ಸರ್ವ ಏವ ಹಿ ।
ಮುನಿಪತ್ನ್ಯೋ ದೇವಪತ್ನ್ಯಃ ಸಮೀಯುಃ ಸಂಘಶೋ ಮುನೇ ॥40॥

ಅರುಂಧತೀ ಮಹಾಭಾಗಾ ಲಕ್ಷ್ಮ್ಯಾಲಿಂಗಿತವಕ್ಷಸಮ್ ।
ದೃಷ್ಟ್ವಾ ಹರಿಂ ವೇಂಕಟೇಶಂ ಪ್ರಣನಾಮ ಮುದಾನ್ವಿತಾ ॥41॥

ತಾಂ ದೃಷ್ಟ್ವಾ ಪ್ರಣತಾಂ ವಿಷ್ಣುರಿದಮಾಹ ದಯಾನಿಧಿಃ ।
'ಉತ್ತಿಷ್ಠಾರುಂಧತೀ ದೇವಿ ತಪಸಾ ಕ್ಲೇಶವತ್ಯಸಿ ॥42॥

ತವೇಪ್ಸಿತಮಹಂ ದಾಸ್ಯೇ ವರಂ ವರಯ ಸುವ್ರತೇ' ।
ಸುಪ್ರೀತಂ ತಂ ವಿದಿತ್ವಾ ಸಾ ತುಷ್ಟಾವಾಂಜನಶೈಲಪಮ್ ॥43॥

ಅರುಂಧತ್ಯುವಾಚ–

'ನಮಸ್ತುಭ್ಯಂ ಮಹಾದೇವ ನಾರಾಯಣ ಕೃಪಾನಿಧೇ ।
ಪಾಹಿ ಮಾಂ ಫಣಿಶೈಲೇಶ ಭಕ್ತಬಂಧೋ ದಯಾನಿಧೇ ॥44॥

ಪೌರ್ಣಿಮೆಯಂದು ರವಿಯು ಮೀನರಾಶಿಯಲ್ಲಿದ್ದಾಗ, ಸರ್ವೋತ್ತಮನಾದ, ಜೀವಹೃದಯಗುಹಾ ನಿವಾಸಿಯಾದ, ಪರಮಾತ್ಮನು ಪ್ರತ್ಯಕ್ಷನಾದನು. ಪರಮಾತ್ಮನೊಂದಿಗೆ ಬ್ರಹ್ಮಾದಿ ದೇವತೆಗಳು, ವೇದವ್ಯಾಸರೇ ಮೊದಲಾದ ಋಷಿಗಳು, ಸನಕಾದಿ ಯೋಗಿಗಳು, ದೇವತೆಗಳ, ಋಷಿಗಳ ಮಡದಿಯರು – ಹೀಗೆ ಎಲ್ಲರೂ ಸಹ ಗುಂಪುಗುಂಪಾಗಿ ಅಲ್ಲಿಗೆ ಬಂದರು. (39–40)

ಅರುಂಧತಿಯು ತನ್ನೆದುರಿಗಿಂದ ಲಕ್ಷ್ಮೀದೇವಿಯಿಂದಾಲಿಂಗಿತನಾದ ವೇಂಕಟೇಶನನ್ನು ನೋಡಿ ಅತ್ಯಂತ ಸಂತೋಷದಿಂದ ಅವನಿಗೆ ನಮಸ್ಕರಿಸಿದಳು. ತನಗೆ ನಮಸ್ಕರಿಸಿದ ಅರುಂಧತಿಯನ್ನು ನೋಡಿ ಪರಮಾತ್ಮನು 'ಹೇ ಅರುಂಧತಿಯೇ! ಏಳು. ನಿನ್ನ ಕಠಿಣತರವಾದ ತಪಸ್ಸಿನಿಂದ ನಾನು ಸಂತುಷ್ಟನಾಗಿರುವೆನು. ನಿನಗೇನು ಬೇಕು ಕೇಳು. ನಾನು ಅದನ್ನು ಅನುಗ್ರಹಿಸುವೆನು' ಎಂದು ನುಡಿದನು. (41–42)

### ಅರುಂಧತೀಕೃತ ಭಗವತ್ ಸ್ತುತಿ

ತನ್ನಲ್ಲಿ ಪ್ರಸನ್ನಾನಾಗಿ ಅನುಗ್ರಹಿಸಲು ಪ್ರತ್ಯಕ್ಷನಾದ ಭಗವಂತನನ್ನು ನೋಡಿ ಅರುಂಧತಿಯು ಅತ್ಯಂತ ಸಂತೋಷವನ್ನು ಹೊಂದಿ ಶೇಷಾಚಲ ಪತಿಯಾದ ಶ್ರೀನಿವಾಸನನ್ನು ನೋಡಿ 'ಹೇ

ನ ಜಾನೇ ವೇಂಕಟಾಧೀಶ ಲಕ್ಷ್ಮೀನಾಯಕ ಕೇಶವ ।
ತ್ವಾಂ ವಿನಾ ಸರ್ವಲೋಕಾನಾಂ ದೃಷ್ಟಾದೃಷ್ಟಫಲಪ್ರದಮ್ ॥45॥

ಯಸ್ಯೋರಸ್ಯನಿಶಂ ವಿಭಾತಿ ಜಗತೀ ಸೌಭಾಗ್ಯಧಾತ್ರೀ ರಮಾ
ಧತ್ತೇ ಯಸ್ಯ ಪದಾವನೇಜನಜಲಂ ಮೂರ್ಧ್ನಾ ಪುರಾರಿಃ ಸದಾ।
ಶ್ರೀಮದ್ವೇಂಕಟಶೈಲನಿತ್ಯನಿಲಯಂ ದೇವೋತ್ತಮಂ ತ್ವಾಂ ವಿನಾ
ದೃಷ್ಟಾದೃಷ್ಟಫಲಪ್ರದಂ ಕಿಮಪರಂ ದೃಷ್ಟಂ ಕ್ಷಿತೌ ದೈವತಮ್ ॥46॥

ಇತಿ ಸ್ತುತ್ವಾ ಪುನಃ ಪ್ರಾಹ ಶೇಷಶೈಲಶಿಖಾಮಣಿಮ್ ।
ಯದಿ ಪ್ರೀತಿರ್ಮತ್ತಪಸಾ ತವ ಶೇಷಾದ್ರಿವೈಭವಮ್ ॥47॥

ತುಂಬುತೀರ್ಥಸ್ಯ ಮಾಹಾತ್ಮ್ಯಂ ವದ ಲೋಕೋಪಕಾರಕಮ್'।
ವಸಿಷ್ಠಪತ್ನ್ಯೇತಿ ಪೃಷ್ಟಃ ಪ್ರಾಹ ವೇಂಕಟವೈಭವಮ್ ॥48॥

ಶೃಣ್ವತ್ಸು ಸರ್ವಲೋಕೇಷು ಬ್ರಹ್ಮಾದಿಷು ಸುರೇಷು ಚ ।

ದೇವಾಧಿದೇವನಾದ ನಾರಾಯಣಾನೇ! ಕರುಣಾಸಾಗರನೇ ! ನಿನಗೆ ನಮಸ್ಕಾರಗಳು. ಶೇಷಾಚಲಾಧಿಪತಿಯಾದ ದಯಾನಿಧಿಯಾದ ಭಕ್ತಜನರ ಅನನ್ಯ ಬಂಧುವಾದ ಶ್ರೀನಿವಾಸನೇ ನಿನಗೆ ನಮಸ್ಕಾರಗಳು. ನನ್ನನ್ನು ರಕ್ಷಿಸು; ಉದ್ಧರಿಸು. (44) ಹೇ ಲಕ್ಷ್ಮೀಪತಿಯಾದ ನಾರಾಯಣನೇ! ವೇಂಕಟೇಶನೇ! ಬ್ರಹ್ಮಾದಿ ದೇವತಾವಂದ್ಯನಾದ ಕೇಶವನೇ! ನಿನ್ನನ್ನು ಬಿಟ್ಟು ಈ ಜಗತ್ತಿಗೆ ಐಹಿಕಾಮುಷ್ಮಿಕ ಫಲಗಳನ್ನು ಕೊಡುವವರು ಬೇರಾರೂ ಇರುವದಿಲ್ಲ. (45) ಯಾರ ವಕ್ಷಃಸ್ಥಲದಲ್ಲಿ ಸಂಪತ್ತಿಗೆ ಅಧಿಪತಿಯಾದ ಲಕ್ಷ್ಮೀದೇವಿಯು ನಿತ್ಯದಲ್ಲಿಯೂ ಆಶ್ರಯವನ್ನು ಪಡೆದಿರುವಳೋ, ಯಾರ ಪಾದೋದಕವನ್ನು ಆಶುತೋಷನೆನಿಸಿದ ರುದ್ರದೇವರು ತನ್ನ ಶಿರಸ್ಸಿನಲ್ಲಿ ಧರಿಸಿರುವನೋ, ಅಂತಹ ವೇಂಕಟಾಚಲದಲ್ಲಿ ನಿತ್ಯ ನಿವಾಸಿಯಾಗಿರುವ ನಿನ್ನನ್ನು ಬಿಟ್ಟು ದೃಷ್ಟಾದೃಷ್ಟ ಫಲದಾಯಕರಾದ ಬೇರಾವ ದೈವವೂ ಸಹ ಇರುವದಿಲ್ಲ.' (46) ಹೀಗೆ ಪರಮಾತ್ಮನನ್ನು ಸ್ತೋತ್ರಮಾಡಿ ಶೇಷಾಚಲಾಧಿಪತಿಯಾದ ಶ್ರೀನಿವಾಸನನ್ನು ಕುರಿತು – 'ಹೇ ಸ್ವಾಮಿಯೇ! ನನ್ನ ತಪಸ್ಸಿನಿಂದ ನೀನು ಪ್ರೀತನಾಗಿದ್ದಲ್ಲಿ ಸರ್ವಲೋಕೋಪಕಾರಕವಾದ ತುಂಬುತೀರ್ಥದ ಮಾಹಾತ್ಮ್ಯವನ್ನು ನೀನು ನನಗೆ ತಿಳಿಸು' ಎಂದು ಬೇಡಿಕೊಂಡಳು. (47–48)

### ವೇಂಕಟಾಚಲ – ತುಂಬುತೀರ್ಥಮಾಹಾತ್ಮ್ಯೆ

ಆಗ ಶ್ರೀನಿವಾಸನು ಬ್ರಹ್ಮಾದಿ ದೇವತೆಗಳೆಲ್ಲರೂ ಕೇಳುತ್ತಿರುವಂತೆಯೇ ಸರ್ವಲೋಕೋಪಕಾರಕವಾದ ತುಂಬುರುತೀರ್ಥದ ಮಾಹಾತ್ಮ್ಯವನ್ನು ಹೇಳಿದನು. 'ಹೇ ಅರುಂಧತಿಯೇ! ನನ್ನ

ಶ್ರೀನಿವಾಸ ಉವಾಚ–

ಶೃಣ್ವರುಂಧತಿ ಮದ್ವಾಕ್ಯಂ ಸರ್ವಲೋಕೋಪಕಾರಕಮ್ ॥49॥

ವೇಂಕಟಾದ್ರೌ ಸ್ವಾಮಿತೀರ್ಥೇ ವೇಂಕಟೇಶೇ ಚ ಯೇ ಮಯಿ ।
ಭಕ್ತಿಮಂತಃ ಪ್ರಜೈಶ್ವರ್ಯಾಯುಷ್ಮಂತಶ್ಚ ಭವಂತಿ ತೇ ॥50॥

ವೇಂಕಟಾದ್ರಿಸ್ವಾಮಿತೀರ್ಥಮನ್ನಾಮಾನಿ ಚ ಕುರ್ವತೇ ।
ಪುತ್ರಾಣಾಂ ತೇ ಪುನಃ ಸರ್ವಸಂಪದಾಮೇಕಭಾಜನಮ್ ॥51॥

ಶ್ರೀವೇಂಕಟೇಶೇತಿ ಸದಾ ವಾಚಿ ಪಂಚಾಕ್ಷರಂ ಯದಿ ।
ಬ್ರಹ್ಮಾದೀನಾಂ ಚ ಸರ್ವೇಷಾಂ ವನ್ಯಾ ಏವ ನ ಸಂಶಯಃ ॥52॥

ಯೇ ತುಂಬುತೀರ್ಥಾಭಿಷೇಕಮಾಚರಂತಿ ಯದಾ ತದಾ ।
ತೇ ನಿಷ್ಪಾಪಾ ಮತ್ಕೃಪಯಾ ಲಕ್ಷ್ಮ್ಯಾಃ ಪಾತ್ರಂ ನ ಸಂಶಯಃ ॥53॥

ಫಾಲ್ಗುನ್ಯಾಂ ಪೌರ್ಣಮಾಸ್ಯಾಂ ತು ಪ್ರತ್ಯಕ್ಷದಿವಸೇ ಮಮ ।
ಸ್ನಾಸ್ಯಂತಿ ಭಕ್ತಿಮಂತೋ ಯೇ ತೇಷಾಂ ಶೃಣು ಫಲೋನ್ನತಿಮ್ ॥54॥

ಯತ್ಸರ್ವತೀರ್ಥಸ್ನಾನೇನ ತತ್ಫಲಂ ಭವತಿ ಧ್ರುವಮ್ ।
ಫಲ್ಗುನೀತೀರ್ಥಮಿತ್ಯಸ್ಯ ನಾಮ ಲೋಕೇ ಭವಿಷ್ಯತಿ ॥55॥

ಸರ್ವಲೋಕಕಲ್ಯಾಣಕರವಾದ ನನ್ನ ಮಾತನ್ನು ಕೇಳು. (48–49) ಯಾರು ವೇಂಕಟಗಿರಿ, ಸ್ವಾಮಿಪುಷ್ಕರಿಣೀ ತೀರ್ಥ ಮತ್ತು ನನ್ನಲ್ಲಿ ಭಕ್ತಿಯನ್ನು ಮಾಡುವರೋ ಅವರೇ ಸಕಲವಿಧವಾದ ಪುತ್ರಪೌತ್ರಾದಿಸಂತತಿ, ಆರೋಗ್ಯ ಐಶ್ವರ್ಯಗಳನ್ನು ಪಡೆದು ದೀರ್ಘಾಯುಷಿಗಳಾಗುವರು. (50) ಯಾರು ನಿತ್ಯದಲ್ಲಿಯೂ ಸ್ವಾಮಿಸರಸ್ಸು, ವೇಂಕಟಾಚಲ ಮತ್ತು ನನ್ನ ಹೆಸರನ್ನು ತಮ್ಮ ಮಕ್ಕಳಿಗೆ ಇಡುವರೋ ಅಂತಹ ವ್ಯಕ್ತಿಗಳು ಸರ್ವವಿಧಸಂಪತ್ತುಗಳಿಗೆ ಆಶ್ರಯರಾಗುವರು. (51) ಯಾರ ಬಾಯಲ್ಲಿ ಶ್ರೀವೇಂಕಟೇಶ ಎಂಬ ಪಂಚಾಕ್ಷರಗಳು ಇರುವವೋ ಅವರು ಬ್ರಹ್ಮಾದಿ ಸಕಲ ದೇವತೆಗಳಿಂದಲೂ ಸಮ್ಮಾನವನ್ನು ಹೊಂದುವರು. (52) ಯಾರು ತುಂಬುತೀರ್ಥದ ಅಭಿಷೇಕವನ್ನು ಮಾಡುವರೋ ಅವರು ತಮ್ಮ ಪಾಪಗಳನ್ನು ಕಳೆದುಕೊಂಡು ನನ್ನ ಅನುಗ್ರಹದಿಂದ ಎಲ್ಲ ಸಂಪತ್ತುಗಳಿಗೆ ಆಶ್ರಯರೆನಿಸುವರು. (53) ನಾನು ಪ್ರತ್ಯಕ್ಷನಾದ ಫಾಲ್ಗುನ ಮಾಸದ ಹುಣ್ಣಿಮೆಯ ದಿನ ಯಾರು ಈ ತೀರ್ಥದಲ್ಲಿ ಸ್ನಾನವನ್ನು ಭಕ್ತಿಯಿಂದ ಮಾಡುವರೋ ಅವರ ಫಲವನ್ನು ಹೇಳುವೆನು. (54) ಭೂಮಿಯಲ್ಲಿಯ ಎಲ್ಲ ತೀರ್ಥಗಳಲ್ಲಿ ಸ್ನಾನವನ್ನು ಮಾಡಿದಲ್ಲಿ ಯಾವ ಫಲವು ಬರುವದೋ ಅದೆಲ್ಲ ಫಲವು ಅಂದು ಈ ತುಂಬುತೀರ್ಥದಲ್ಲಿ ಸ್ನಾನವನ್ನು ಮಾಡಿದಲ್ಲಿ

ಬ್ರಹ್ಮವಿಟ್ಕ್ಷತ್ರಶೂದ್ರಾಣಾಮಪಿ ಸ್ತ್ರೀಣಾಮರುಂಧತಿ ।
ಅತ್ರ ಸ್ನಾನೇನ ದುರಿತಂ ನಶ್ಯತಿ ಶ್ರೇಯ ಏತಿ ಚ ॥56॥

ಮನೋವಾಕ್ಕಾಯವಿಹಿತಂ ಪಾಪಂ ನಶ್ಯತಿ ಸರ್ವಥಾ ।
ಯತ್ಕಿಂಚಿದರ್ಥಮುದ್ದಿಶ್ಯ ಪುರುಷಾ ವಾ ಸ್ತ್ರಿಯೋಽಪಿ ವಾ ॥57॥

ಸ್ನಾಸ್ಯಂತ್ಯತ್ರಾಪ್ನುವಂತ್ಯೇವಂ ತಂ ತಮರ್ಥಂ ನ ಸಂಶಯಃ ।
ಪುತ್ರಾರ್ಥೀ ಪುತ್ರಮಾಪ್ನೋತಿ ಧನಾರ್ಥೀ ಲಭತೇ ಧನಮ್ ॥58॥

ಆರೋಗ್ಯಕಾಮಾ ಆರೋಗ್ಯಮಪತ್ಯಂ ಪುತ್ರಕಾಮವಾನ್ ।
ನಶ್ಯಂತ್ಯಾಪದ ಆಶ್ವಸ್ಯ ಸಿದ್ಧಯೋ ಹಸ್ತಸಂಕತಾಃ ॥59॥

ಅತ್ರ ಸ್ನಾತ್ವಾತು ದಾನಾನಿ ಕುರ್ವತಾಂ ಬಹುಲಂ ಫಲಮ್ ।
ಯೇ ಚಂದನಂ ಚ ತಾಂಬೂಲಂ ಪ್ರಯಚ್ಛಂತ್ಯಪಿ ಚೋದಕಮ್ ॥60॥

ತೇ ಮತ್ಪ್ರಿಯಾಸ್ತು ವಿಜ್ಞೇಯಾಃ ಸತ್ಯಂ ಸತ್ಯಂ ವದಾಮ್ಯಹಮ್।
ಅಯಂ ಸರ್ವೋತ್ತರೋ ಧರ್ಮ ಉಕ್ತಸ್ತವ ವರಾನನೇ ॥61 ॥

ಬರುವದು. ಇನ್ನು ಮುಂದೆ ಈ ತೀರ್ಥವು ಫಲ್ಗುನೀ ತೀರ್ಥವೆಂದೇ ಲೋಕದಲ್ಲಿ ಖ್ಯಾತವಾಗುವದು.(55) ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ಸ್ತ್ರೀಯರು ಇವರೆಲ್ಲರೂ ಸಹ ಈ ತೀರ್ಥದಲ್ಲಿ ಸ್ನಾನವನ್ನು ಮಾಡಿದಲ್ಲಿ ಅವರ ಎಲ್ಲ ದುರಿತಗಳು, ಮನಸ್ಸು, ದೇಹ, ವಾಗಿಂದ್ರಿಯ – ಇವುಗಳಿಂದುಂಟಾಗುವ ಎಲ್ಲ ಪಾಪಗಳು ನಾಶವನ್ನು ಹೊಂದುವವು. (56–57) ಸ್ತ್ರೀಯರೇ ಆಗಲೀ, ಪುರುಷರೇ ಆಗಲೀ, ಮನಸ್ಸಿನಲ್ಲಿ ಏನನ್ನಾದರೂ ಬಯಸಿ ತುಂಬುತೀರ್ಥದಲ್ಲಿ ಸ್ನಾನವನ್ನು ಮಾಡಿದಲ್ಲಿ ಅವರು ತಮ್ಮ ತಮ್ಮ ಬಯಕೆಗಳನ್ನು ಪೂರ್ಣಗೊಳಿಸಿ–ಕೊಳ್ಳುವರು. ಪುತ್ರರನ್ನು ಬಯಸುವವರು ಮಕ್ಕಳನ್ನು, ಧನಕಾಮರು ಧನಸಂಪತ್ತಿಯನ್ನು, ಆರೋಗ್ಯವನ್ನು ಬಯಸುವವರು ಆರೋಗ್ಯವನ್ನು, ಸಂತಾನವನ್ನು ಬಯಸುವವರು ಸಂತತಿಯನ್ನು ಪಡೆಯುವರು. ಅವರ ಎಲ್ಲ ಆಪತ್ತುಗಳೂ ಸಹ ತತ್ಕ್ಷಣದಲ್ಲಿ ನಾಶವಾಗುವವು. (58–59)

ಈ ತುಂಬುರು ತೀರ್ಥದಲ್ಲಿ ಸ್ನಾನವನ್ನು ಮಾಡಿ ದಾನಗಳನ್ನು ಮಾಡುವವರು ಬಹುಫಲವನ್ನು ಹೊಂದುತ್ತಾರೆ. ಯಾರು ಚಂದನವನ್ನು ಮತ್ತು ತಾಂಬೂಲವನ್ನು, ನೀರನ್ನು ದಾನಮಾಡುವರೋ ಅವರು ನನಗೆ ಅತ್ಯಂತ ಪ್ರಿಯರಾಗುವರು. ಇದು ಸತ್ಯವೂ ಸರ್ವೋತ್ತಮವಾದ ಧರ್ಮವೂ ಆಗಿರುವದು. (60–61) ನಿನಗೆ ಉತ್ತಮವಾದ ಧರ್ಮವನ್ನು ಹೇಳಿರುವೆನು. ಹೇ ಅರುಂಧತಿಯೇ! ನೀನು ಉತ್ತಮವಾದ ಮಕ್ಕಳನ್ನು ಪಡೆಯುವವಳಾಗಿ ಪತಿವ್ರತಾ ಸ್ತ್ರೀಯರಲ್ಲಿ ಶ್ರೇಷ್ಠಳೆನಿಸಿಕೊಳ್ಳುವಿ'

**ಪತಿವ್ರತಾನಾಂ ಮುಖ್ಯಾ ಚ ಭವ ತ್ವಂ ಚ ಸುಪುತ್ರಿಣೀ ।**
**ಇತಿ ಸರ್ವಂ ವರಂ ದತ್ತ್ವಾಂತರ್ದಧೇ ವೇಂಕಟೇಶ್ವರಃ ॥62॥**

**ಯ ಇದಂ ಪಠತಿ ಧ್ಯಾಯಂಚ್ಛೃಣುಯಾಚ್ಚ ಸಮಾಹಿತಃ ।**
**ಘೋಣತೀರ್ಥಸ್ನಾನಫಲಂ ಪ್ರಾಪ್ನೋತಿ ಹಿ ನ ಸಂಶಯಃ ॥63॥**

ಇತಿ ಶ್ರೀಗಾರುಡಪುರಾಣೇ ಶ್ರೀವೇಂಕಟಾಚಲಮಾಹಾತ್ಮ್ಯವರ್ಣನಂ ನಾಮ
ತ್ರಿಷಷ್ಟಿತಮೋಽಧ್ಯಾಯೋಽತ್ರ ಪ್ರಥಮಃ ॥1॥

* * *

ಎಂದು ಪರಮಾತ್ಮನು ನುಡಿದು ವೇಂಕಟೇಶ್ವರನು ಅದೃಶ್ಯನಾದನು. ಯಾರು ಇದನ್ನು ಪಠಣ ಮಾಡುವರೋ ಮತ್ತು ಧ್ಯಾನಿಸುವರೋ, ಯಾವಾಗಲೂ ಭಕ್ತಿಯಿಂದ ತುಂಬುರು ತೀರ್ಥದ ಮಾಹಾತ್ಮೆಯನ್ನು ಕೇಳುವರೋ ಅವರೆಲ್ಲರೂ ತುಂಬುರು ತೀರ್ಥದಲ್ಲಿ ಸ್ನಾನಮಾಡಿದ ಫಲವನ್ನು ಹೊಂದುವರು.

ಇಲ್ಲಿಗೆ ಗರುಡಪುರಾಣದಲ್ಲಿಯ **ವೇಂಕಟಾಚಲಮಾಹಾತ್ಮೆಯ** ವರ್ಣನವೆಂಬ ಅರವತ್ಮೂರನೆಯ
ಅಧ್ಯಾಯವು ಪ್ರಕೃತದಲ್ಲಿ ಪ್ರಥಮಾಧ್ಯಾಯವು ಪರಿಸಮಾಪ್ತವಾಯಿತು.

* * *

ಶ್ರೀ ಬಾದರಾಯಣೋ ವಿಜಯತೇ ತರಾಮ್ ॥

ಅಥ ಹರಿವಂಶಾಂತರ್ಗತಂ

# ಶ್ರೀಮದ್ವೇಂಕಟೇಶಮಾಹಾತ್ಮ್ಯಮ್

## ಅಥ ಪ್ರಥಮೋऽಧ್ಯಾಯಃ

ಶ್ರೀಗುರುಭ್ಯೋ ನಮಃ ॥ ಹರಿಃ ಓಂ

**ಶ್ರಿಯಃ ಕಾಂತಾಯ ಕಲ್ಯಾಣನಿಧಯೇ ನಿಧಯೇऽರ್ಥಿನಾಮ್ ।**
**ಶ್ರೀವೇಂಕಟನಿವಾಸಾಯ ಶ್ರೀನಿವಾಸಾಯ ಮಂಗಲಮ್ ॥*॥**

**ಶ್ರೀವೇಂಕಟಾಚಲಾಧೀಶಂ ಶ್ರಿಯಾಧ್ಯಾಸಿತವಕ್ಷಸಮ್ ।**
**ಶ್ರಿತಚೇತನಮಂದಾರಂ ಶ್ರೀನಿವಾಸಮಹಂ ಭಜೇ ॥*॥**

**ಯುಧಿಷ್ಠಿರ ಉವಾಚ–**

**'ದೇವವ್ರತ ಮಹಾಭಾಗ ಸುರಸಿಂಧುಸುತ ಪ್ರಭೋ ।**
**ಶ್ರೀನಿವಾಸಸ್ಯ ಮಾಹಾತ್ಮ್ಯಂ ವದ ನೋ ವದತಾಂ ವರ ॥ 1 ॥**

ಶ್ರೀಗರುಡಪುರಾಣಾಂತರ್ಗತವಾದ

## ಶ್ರೀವೇಂಕಟೇಶಮಾಹಾತ್ಮೆ

ಕನ್ನಡದಲ್ಲಿ ಸರಳಾನುವಾದ

## ಮೊದಲನೆಯ ಅಧ್ಯಾಯ

ಶ್ರೀ ಗುರುಭ್ಯೋ ನಮಃ

ಶ್ರೀ ಲಕ್ಷ್ಮೀರಮಣ, ಅನಂತಕಲ್ಯಾಣಗುಣಾಕರ, ಅರ್ಥಿಜನ ಇಷ್ಟಾರ್ಥ ನಿಧಿಯಾದ ಶ್ರೀವೇಂಕಟಾಚಲವಾಸಿಯಾದ ಶ್ರೀನಿವಾಸ ದೇವರಿಗೆ ಮಂಗಳವು.

ಶ್ರೀವೇಂಕಟಾಚಲಪತಿಯಾದ ಲಕ್ಷ್ಮೀದೇವಿಯಿಂದ ಶೋಭಿತವಾದ ವಕ್ಷಸ್ಥಳವುಳ್ಳ, ಆಶ್ರಿತಜನ ಮಂದಾರನಾದ ಶ್ರೀನಿವಾಸದೇವರನ್ನು ನಾನು ಸ್ತುತಿಸುತ್ತೇನೆ.

ಯುಧಿಷ್ಠರನು ಭೀಷ್ಮಾಚಾರ್ಯರನ್ನು ಕುರಿತು 'ಹೇ ಗಂಗಾದೇವಿಯ ಮಗನಾದ ಭೀಷ್ಮಾಚಾರ್ಯರೇ! ವಾಗ್ಮಿಗಳಲ್ಲಿ ಶ್ರೇಷ್ಠರಾದ ನೀವು ಶ್ರೀನಿವಾಸನ ಮಾಹತ್ಮ್ಯವನ್ನು ನಮಗೆ

ವೈಕುಂಠವಾಸೀ ದೇವೇಶೋ ವಿಷ್ಣುಃ ಸರ್ವಗತಃ ಪ್ರಭುಃ ।
ಕಥಂ ಪ್ರಾಪ್ತೋ ವೃಷಗಿರಿಂ ತನ್ಮೇ ತ್ವಂ ಕೃಪಯಾ ವದ' ॥2॥

ಶ್ರೀಭೀಷ್ಮ ಉವಾಚ–

'ಪುರಾ ವೈ ನಾರದಃ ಶ್ರೀಮಾನ್ಬ್ರಹ್ಮಪುತ್ರೋ ಮಹಾದ್ಯುತಿಃ ।
ಹರಿಂ ದ್ರಷ್ಟುಮನಾಸ್ತಾತ ವೈಕುಂಠಂ ಸಮುಪಾಗತಃ ॥3॥

ತತ್ರಾದೃಷ್ಟ್ವಾ ಹರಿಂ ಪಾರ್ಥ ಕ್ಷೀರೋದಧ್ಯುಪಕಂಠತಃ ।
ಆಯಾಂತಮೃಷಯೋ ದೃಷ್ಟ್ವಾ ಮುದಮಾಪುಶ್ಚನಾರದಮ್ ॥4॥

ಅಗಸ್ತ್ಯಪ್ರಮುಖಾಃ ಸರ್ವೇ ಪಾರಾಶರ್ಯಪದಾನುಗಾಃ ।
ಅನುಜ್ಞಾತೋ ಮುನಿಗಣೈಃ ಪಾರಾಶರ್ಯೋ ಮಹಾದ್ಯುತಿಃ ॥5॥

ವ್ಯಾಸೋ ವಚನಮಕ್ಲೀಬಂ ನಾರದಂ ಪ್ರತ್ಯುವಾಚ ಹ ।
'ಕೃತಕೃತ್ಯೋ ಮುನೇ ಬ್ರಹ್ಮಂಸ್ತ್ವಮೇಕೋ ಜಗತೀತಲೇ ॥6॥

ವಿಷ್ಣುಭಕ್ತೋಽಸಿ ನಾನ್ಯೋಽಸ್ತಿ ಸದಾಕೀರ್ತಯಸೇ ಯತಃ ।
ಅಹೋ ಖಲು ಮನುಷ್ಯಾಣಾಂ ಮೋಕ್ಷದೋ ವಿಷ್ಣುರವ್ಯಯಃ ॥7॥

ವಿಸ್ತಾರವಾಗಿ ತಿಳಿಸಿರಿ. ಸರ್ವಗತ ನಾದ ವೈಕುಂಠನಿವಾಸಿಯಾದ ವಿಷ್ಣುವು ಹೇಗೆ ವೇಂಕಟಾಚಲಕ್ಕೆ ಬಂದನು ಎಂಬುದನ್ನು ನನಗೆ ದಯವಿಟ್ಟು ತಿಳಿಸಿರಿ' ಎಂದು ಪ್ರಾರ್ಥಿಸಿದನು.(2)

ಭೀಷ್ಮರು ನುಡಿಯುತ್ತಾರೆ. 'ಹಿಂದೆ ಮಹಾ ತೇಜಸ್ವಿಗಳಾದ ಬ್ರಹ್ಮನ ಮಕ್ಕಳಾದ ನಾರದರು ಪರಮಾತ್ಮನನ್ನು ನೋಡಲು ವೈಕುಂಠಕ್ಕೆ ಹೋದನು. (3) ಆದರೆ ಅಲ್ಲಿ ಪರಮಾತ್ಮನನ್ನು ನೋಡಲಾರದೇ ಕ್ಷೀರಸಮುದ್ರದ ಬಳಿಗೆ ಬಂದನು. ಅಲ್ಲಿರುವ ಅಗಸ್ತ್ಯರೇ ಮೊದಲಾದ ವ್ಯಾಸಭಕ್ತರಾದ ಋಷಿಗಳು ಅಲ್ಲಿಗೆ ಬಂದ ನಾರದರನ್ನು ನೋಡಿ ಅತ್ಯಂತ ಸಂತೋಷವನ್ನು ಹೊಂದಿದರು. (5) ಅನಂತರ ಋಷಿಗಳಿಂದ ಸೂಚಿತರಾದ ವ್ಯಾಸರು ನಾರದರನ್ನು ಕುರಿತು 'ಹೇ ನಾರದರೇ! ಭೂಮಿಯಲ್ಲಿ ನೀನೊಬ್ಬನೆ ಕೃತಾರ್ಥನೆನಿಸಿರುವಿ. (6) ನೀನು ವಿಷ್ಣುಭಕ್ತನಾಗಿರುವಿ. ನಿನಗೆ ಸಮಾನರು ಯಾರೂ ಇಲ್ಲ. ಮನುಷ್ಯರಿಗೆ ಮೋಕ್ಷದಾಯಕನಾದ ಆ ಪರಮಾತ್ಮನನ್ನು ನೀನು ಯಾವಾಗಲೂ ಸೇವಿಸುತ್ತಿರುವಿಯಾದ್ದರಿಂದ ನೀನು ಕೃತಕೃತ್ಯನೆನಿಸಿರುವಿ. ಸಕಲ ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರದಾಯಕನಾದ ಒಬ್ಬನೇ ಆದ ಪರಮಾತ್ಮನಾದ ಜನಾರ್ದನನು ಯಾವಾಗಲೂ ನಿನ್ನಿಂದ ಆರಾಧಿತನಾಗಿರುವನು. ಆದ್ದರಿಂದ ನೀನು ಧನ್ಯನೆನಿಸಿರುವಿ. (7–8) ಸರ್ವಭೂತಗಳಿಗೆ ಮುಕ್ತಿದಾಯಕನಾದ, ಸಂಸಾರ ಸಾಗರಕ್ಕೆ ಸೇತುಪ್ರಾಯನಾದ ಜಗದ್ವ್ಯಾಪಿಯಾದ (9) ಸಂಸಾರ

ಸ ತ್ವಯಾ ಸೇವ್ಯತೇ ನಿತ್ಯಂ ಕೃತಕೃತ್ಯೋ ಭವಾನತಃ ।
ಸ್ರಷ್ಟಾ ಪಾಲಯಿತಾ ಹಂತಾ ಹ್ಯೇಕ ಏವ ಜನಾರ್ದನಃ ॥ 8 ॥

ಸ ತ್ವಯಾ ಪೂಜಿತೋ ನಿತ್ಯಂ ತಸ್ಮಾತ್ ಖಲು ಕೃತೀ ಭವಾನ್।
ಯೋಽನಂತಃ ಸರ್ವಭೂತಾನಾಂ ಸೇತುಭೂತೋ ಜಗನ್ಮಯಃ ॥9॥

ಸಂಸಾರಪಾಶವಿಚ್ಛೇದೀ ಸ ತ್ವಯಾ ಪೂಜಿತೋ ಹರಿಃ ।
ಏತೇ ವಯಂ ಮುನಿಶ್ರೇಷ್ಠ ದ್ರಷ್ಟುಕಾಮಾ ಜನಾರ್ದನಮ್ ॥10॥

ತನ್ನಿವೇಶಿತಚಿತ್ತಾ ಹಿ ಪ್ರಾಪ್ತಾ ಪರಮಧಾಮಕಮ್' ।
ಈದೃಶಂ ವಚನಂ ಶ್ರುತ್ವಾ ವ್ಯಾಸಸ್ಯ ಜಗತೀಪತೇ ॥11॥

ಪ್ರೋವಾಚ ನಾರದೋ ಧೀಮಾನ್ ಋಷೀನ್ವೇದವಿದಾಂ ವರಃ ।
'ಕೃತಕೃತ್ಯೋಽಸ್ಮಿ ಭದ್ರಂ ವೋ ಯೂಯಂ ಭೂತಹಿತೇ ರತಾಃ ॥12॥

ಶಾಸ್ತ್ರೈರ್ಧರ್ಮೈಃ ಸದಾ ಲೋಕಾನ್ ಭಕ್ತ್ಯಾ ರಕ್ಷಿತುಮಿಚ್ಛತ ।
ವೈಕುಂಠಲೋಕೇ ಸಂಭೂತಾ ವಾರ್ತಾ ಪರಮಪಾವನೀ ॥13॥

ಅಶ್ರಾವಿ ಸಾ ಮಯಾ ಸಂತೋ ವಕ್ಷ್ಯೇ ಶೃಣ್ವಂತು ತಾಂ ಕಥಾಮ್।
ಮಾಯಾವೀ ಪರಮಾನಂದಸ್ತ್ಯಕ್ತ್ವಾ ವೈಕುಂಠಮುತ್ತಮಮ್ ॥14॥

ಸ್ವಾಮಿಪುಷ್ಕರಣೀತೀರೇ ರಮಯಾ ಸಹ ಮೋದತೇ ।

ಪಾಶನಾಶಕನಾದ ಪರಮಾತ್ಮನನ್ನು ನೀನು ಯಾವಾಗಲೂ ಪೂಜಿಸುವಿಯಾದ್ದರಿಂದ ಧನ್ಯನಾಗಿರುವಿ. ನಾವೆಲ್ಲ ಋಷಿಗಳು ಹರಿಯನ್ನು ನೋಡಲು ಬಯಸಿ(10), ಅವನನ್ನೇ ಧ್ಯಾನಿಸುತ್ತಾ, ಅವನ ಮಂದಿರವಾದ ವೈಕುಂಠವನ್ನು ಕುರಿತು ಬಂದಿರುವೆವು' ಎಂದು ನುಡಿದರು. ವೇದವ್ಯಾಸರ ಈ ಮಾತನ್ನು ಕೇಳಿ(11) ನಾರದರು ಹೀಗೆ ಹೇಳಿದರು.– 'ಹೇ ಋಷಿಗಳೇ! ನಿಮಗೆ ಮಂಗಳವಾಗಲಿ. ಸರ್ವ ಪ್ರಾಣಿಗಳ ಹಿತದಲ್ಲಿಯೇ ಆಸಕ್ತರಾಗಿರುವಿರಿ. (12) ತತ್ತ್ವಬೋಧಕಗಳಾದ ಶಾಸ್ತ್ರಗಳಿಂದ, ಪುಣ್ಯಪ್ರದವಾದ ಧರ್ಮಗಳಿಂದ ಲೋಕಗಳನ್ನು ರಕ್ಷಿಸಲು ಬಯಸಿರುವಿರಿ. ವೈಕುಂಠಲೋಕದ ಮಂಗಳ ಕರವಾದ, ನನ್ನಿಂದ ಕೇಳಲ್ಪಟ್ಟ ಸಮಾಚಾರವನ್ನು ನಿಮಗೆ ಹೇಳುವೆನು. ಕೇಳಿರಿ. (13) 'ಲಕ್ಷ್ಮೀಪತಿಯಾದ ನಾರಾಯಣನು ಪರಮಾನಂದಕರವಾದ ವೈಕುಂಠ ಲೋಕವನ್ನು ಬಿಟ್ಟು ಸ್ವಾಮಿಪುಷ್ಕರಿಣಿಯ ತೀರದಲ್ಲಿ ಲಕ್ಷ್ಮೀದೇವಿಯಿಂದ ಕೂಡಿಕೊಂಡು ಸಂತೋಷದಿಂದ ವಿರಾಜಮಾನ ನಾಗಿರುವನು' ಎಂಬ ವೃತ್ತಾಂತವನ್ನು ಕೇಳಿ ಇಂದ್ರಾದಿ ದೇವತೆಗಳು ಪರಮಾತ್ಮನನ್ನು ಸೇವಿಸಲು ಅಲ್ಲಿಗೆ ತೆರಳಲುದ್ಯುಕ್ತರಾದರು.(14–15) ನಾನೂ ಸಹ ಅಲ್ಲಿಗೆ ಹೋಗಬಯಸುವೆನು. ಹೇ

ಇತ್ಯದ್ಭುತತಮಂ ವಾಕ್ಯಂ ಶ್ರುತ್ವಾ ಸೇಂದ್ರಾ ಮರುದ್ಗಣಾಃ ॥15॥

ತತ್ರ ಸೇವಿತುಮುದ್ಯುಕ್ತಾಸ್ತದಾಹಂ ಚ ಜಗದ್ಗುರುಮ್ ।
ಕಿಂ ಕರಿಷ್ಯಥ ವಿಪ್ರೇಂದ್ರಾ ಹ್ಯತ್ರ ದುರ್ಲಭದರ್ಶನಮ್ ॥16॥

ತಸ್ಮಾತ್ತತ್ರ ಗಮಿಷ್ಯಾಮ ಇತ್ಯುಕ್ತ್ವಾ ಖಂ ಸಮಾರುಹಮ್ ।
ಅಗಸ್ತ್ಯಪ್ರಮುಖಾಃ ಸರ್ವೇ ಋಷಯಶ್ಚ ತಪೋಧನಾಃ ॥17॥

ಜಗ್ಮುಸ್ತೇ ವ್ಯೋಮಮಾರ್ಗೇಣ ಯತ್ರ ಧರ್ಮಾಗಿರೌ ಹರಿಃ ।
ಸ್ವಾಮಿಪುಷ್ಕರಿಣೀತೀರಂ ಗತ್ವಾ ತಮೃಷಯಃ ಸುರಾಃ ॥18॥

ಸ್ನಾತ್ವಾ ಪೀತ್ವಾ ಶುಭಂ ತೋಯಂ ಹರಿಂ ದ್ರಷ್ಟುಂ ತದಾಽಚರನ್।
ಪಶ್ಚಿಮಂ ಭಾಗಮಾಸಾದ್ಯ ಮುನಯೋ ವಿಷ್ಣುತತ್ಪರಾಃ ॥19॥

ತತ್ರಾಪಶ್ಯನ್ಮಹದ್ಭೂತಂ ಮೇರುಮಂದರಸನ್ನಿಭಮ್ ।
ಸಹಸ್ರಾದಿತ್ಯಸಂಕಾಶಂ ವಿದ್ಯುಚ್ಚಂಚಲಲೋಚನಮ್ ॥20॥

ಸರ್ವಾಯುಧಧರಂ ದೇವಂ ದೃಷ್ಟ್ವಾ ವಿಸ್ಮಯಮಾಗತಾಃ ।
ದಕ್ಷಿಣಾಂ ದಿಶಮಾಜಗ್ಮುಃ ಸ್ವಾಮಿಪುಷ್ಕರಿಣೀತಟಾತ್ ॥21॥

ತತ್ರಾಸುರಾನ್ ದಾನವಾದೀನ್ ರಾಕ್ಷಸಾನ್ ಪಿಶಿತಾಶನಾನ್ ।
ನಮಸ್ಯತೋ ಧ್ಯಾಯತಶ್ಚ ಜಪತಶ್ಚಾಪಿ ತಾನ್ ಬಹೂನ್ ॥22॥

ಬ್ರಾಹ್ಮಣಶ್ರೇಷ್ಠರೇ! ನಿವೇನು ಮಾಡುವಿರಿ?' ಎಂದು ಪ್ರಶ್ನಿಸಿದಾಗ 'ಪರಮಾತ್ಮನ ದರ್ಶನಾರ್ಥವಾಗಿ ಹೋಗುವೆವು' ಎಂದು ನುಡಿದು ಆಕಾಶವನ್ನೇರಿದರು. ಅಗಸ್ತ್ಯರೇ ಮೊದಲಾದ ಋಷಿಗಳು, ದೇವತೆಗಳು ಇವರೆಲ್ಲರೂ ಸಹ ಭಗವಂತನಿರುವ ಧರ್ಮಗಿರಿಯೆನಿಸಿದ ವೇಂಕಟಾಚಲಕ್ಕಾಗಮಿಸಿ ಅಲ್ಲಿ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡಿ, ಸರ್ವಪಾಪಹರವಾದ ಆ ನೀರನ್ನು ಕುಡಿದು ಭಗವಂತನನ್ನು ನೋಡಲು ಹೋದರು. (16–19) ಸ್ವಾಮಿಪುಷ್ಕರಿಣಿಯ ಪಶ್ಚಿಮ ಭಾಗದಲ್ಲಿ ಮೇರು ಮಂದರ ಪರ್ವತಗಳಷ್ಟು ಭವ್ಯಾಕಾರನಾದ, ಸಾವಿರಾರು ಆದಿತ್ಯರ ಕಾಂತಿಗಿಂತ ಹೆಚ್ಚಿನ ಕಾಂತಿಸಂಪನ್ನನಾದ, ಮಿಂಚಿನಂತೆ ಹೊಳೆಯುವ ಚಂಚಲವಾದ ಕಣ್ಣುಗಳನ್ನು ಹೊಂದಿರುವ, ಶಂಖಚಕ್ರಾದಿಸಮಗ್ರ ಆಯುಧಗಳನ್ನು ಧರಿಸಿರುವ ಭಗವಂತನನ್ನು ನೋಡಿ ಅತ್ಯಂತ ಆಶ್ಚರ್ಯವನ್ನು ಹೊಂದಿದರು. (19–21) ಸ್ವಾಮಿಪುಷ್ಕರಿಣಿಯ ದಕ್ಷಿಣಭಾಗದಲ್ಲಿ ಪರಮಾತ್ಮನನ್ನು ಧ್ಯಾನಿಸುತ್ತಿದ್ದ, ಜಪಿಸುತ್ತಿದ್ದ ರಾಕ್ಷಸರು, ದಾನವರು, ಕುತ್ಸಿತವಾದ ಆಹಾರವನ್ನು ಸೇವಿಸುವ ಪಿಶಾಚಗಳು– ಇವುಗಳನ್ನು ನೋಡಿ ಅತ್ಯಂತ ಆಶ್ಚರ್ಯವನ್ನು ಹೊಂದಿದರು.(22–23) ಅನಂತರ ಪೂರ್ವದಿಕ್ಕಿನಲ್ಲಿ

ದೃಷ್ಟ್ವಾ ವಿಸ್ಮಯಮಾಪನ್ನಾಃ ಪೂರ್ವಾಂ ದಿಶಮುಪಾಯಯುಃ ।
ತತ್ರಾಸೀನಂ ದೇವಪತಿಂ ತ್ರಿದಶೈರುಪಸೇವಿತಮ್ ॥23 ॥

ಯಕ್ಷಕಿನ್ನರಗಧರ್ವಚಾರಣಾದ್ಯೈರಭಿಪೂಜಿತಮ್ ।
ಸಿದ್ಧೈಃ ಕಿಂಪುರುಷಾದ್ಯೈಶ್ಚ ಋಷಿಭಿಶ್ಚಾಪ್ಸರೋಗಣೈಃ ॥24॥

ಸ್ತೂಯಮಾನಂ ಹರಿಂ ಸಾಕ್ಷಾಚ್ಛ್ರೀನಿವಾಸಂ ಜಗತ್ಪತಿಮ್ ।
ಕದಾ ದ್ರಕ್ಷ್ಯಾಮಿ ತದ್ರೂಪಂ ಯೋಗಿನಾಮಪಿ ದುರ್ಲಭಮ್ ॥25॥

ಕದಾ ಮೇ ಜನ್ಮಸಾಫಲ್ಯಂ ಭವಿಷ್ಯತಿ ಸುರಾರ್ಚಿತ ।
ದೇಹಿ ಮೇ ದರ್ಶನಂ ದೇವ ಪ್ರಣತಾರ್ತಿಪ್ರಣಾಶನ ॥26॥

ತ್ವಂ ಗತಿಃ ಸರ್ವಭೂತಾನಾಂ ದೇವಾನಾಮಪಿ ಮೋಕ್ಷದಃ ।
ಪಾಹಿಪಾಹಿ ಜಗನ್ನಾಥ ಭೂಯೋಭೂಯೋ ನಮೋಽಸ್ತು ತೇ ॥27॥

ಇತಿ ಸ್ತುವಂತಂ ದೇವೇಶಂ ದೇವರಾಜಂ ಪುರಂದರಮ್ ।
ವೇಂಕಟಾದ್ರೇಃ ಪುರೋಭಾಗೇ ಸ್ವಾಮಿಪುಷ್ಕರಿಣೀತಟೇ ॥28॥

ದೇವತಾಭಿಃ ಸಮಾಸೀನಂ ಧ್ಯಾಯಂತಂ ಪುರುಷೋತ್ತಮಮ್ ।
ತಂ ದೃಷ್ಟ್ವಾ ವಿಸ್ಮಿತಾಃ ಸರ್ವೇ ಹ್ಯಗಸ್ತ್ಯಪ್ರಮುಖಾ ದ್ವಿಜಾಃ ॥29॥

ದೇವತೆಗಳಿಂದ, ಯಕ್ಷ, ಸಿದ್ಧ, ಕಿಂಪುರುಷ, ಕಿನ್ನರ, ಗಂಧರ್ವ, ಚಾರಣಪುರುಷರಿಂದ, ಋಷಿಗಳಿಂದ ಸೇವಿತನಾಗಿದ್ದ, ಪರಮಾತ್ಮನನ್ನು ಸ್ತೋತ್ರಮಾಡುತ್ತಿದ್ದ (24) 'ಯಾವಾಗ ಪರಮಾತ್ಮನ ಯೋಗಿದುರ್ಲಭವಾದ ರೂಪವನ್ನು ನೋಡೇನು? ಅವನ ದರ್ಶನದಿಂದ ನನ್ನ ಜನ್ಮವು ಎಂದು ಸಫಲವಾದೀತು?' ಎಂದು ಉತ್ಕಟಭಕ್ತಿಯಿಂದ ಚಿಂತಿಸುತ್ತಿದ್ದ, 'ಹೇ ದೇವಪೂಜಿತನಾದ ಪರಮಾತ್ಮನಾದ ಶ್ರೀನಿವಾಸನೇ! ನಮಿಸುವ ಜನರ ಸರ್ವ ದುಃಖನಿವಾರಕನೇ! ನೀನೇ ಎಲ್ಲ ಜೀವರಿಗೂ ಗತಿಯಾಗಿರುವಿ. ದೇವತೆಗಳಿಗೂ ಸಹ ಮೋಕ್ಷದಾಯಕನಾಗಿರುವಿ. ನಮ್ಮನ್ನು ನೀನು ನಿನ್ನ ಸ್ವರೂಪದರ್ಶನವನ್ನಿತ್ತು ಕಾಪಾಡು. ನಿನಗೆ ಪುನಃ ಪುನಃ ನಮಸ್ಕಾರಗಳು' (25–27) ಎಂದು ಪರಮಾತ್ಮನನ್ನು ಕೊಂಡಾಡುತ್ತಿದ್ದ ಇಂದ್ರದೇವರನ್ನು ನೋಡಿದರು. ದೇವತೆಗಳ ನಿಯಾಮಕನಾದ, ವೇಂಕಟಾದ್ರಿಯ ಮುಂಭಾಗದಲ್ಲಿ ಸ್ವಮಿಪುಷ್ಕರಣಿಯ ದಡದಲ್ಲಿ ದೇವತೆಗಳಿಂದ ಸಮೇತನಾಗಿ ಪುರುಷೋತ್ತಮನಾದ ಶ್ರೀನಿವಾಸನನ್ನು ಧ್ಯಾನಿಸುತ್ತಿದ್ದ ಇಂದ್ರದೇವರನ್ನು ನೋಡಿದ ಅಗಸ್ತ್ಯರೇ ಮೊದಲಾದ ಋಷಿಗಳು (28–29) ಪರಮಾತ್ಮನ ದರ್ಶನಾರ್ಥವಾಗಿ ಕಾವೇರಿ ನದಿಯ (ದಕ್ಷಿಣ) ದಿಕ್ಕನ್ನು ಕುರಿತು ಬಂದರು. ಅಲ್ಲಿ ಸಪ್ತದ್ವೀಪನಿವಾಸಿಗಳಾಗಿದ್ದ ಬ್ರಾಹ್ಮಣರನ್ನು,

ಕಾವೇರೀಂ ದಿಶಮಾಜಗ್ಮುರ್ದ್ರಷ್ಟುಕಾಮಾ ಜನಾರ್ದನಮ್ ।
ತತ್ರಾಪಶ್ಯನ್ ದ್ವಿಜವರಾನ್ ಸಪ್ತದ್ವೀಪನಿವಾಸಿನಃ ॥30॥

ರಾಜ್ಞೋ ಮುನಿಗಣಾಂಶ್ಚೈವ ಭೂಸುರಾನ್ ವೇದವಾದಿನಃ ।
ಭೂಲೋಕವಾಸಿನಶ್ಚೈವ ಮುನುಜಾನ್ಮನುಜೇಶ್ವರ ।
ಮುದಮಾಪುರ್ಮಹಾತ್ಮಾನೋ ಮುನಯಃ ಶುದ್ಧಬುದ್ಧಯಃ ॥31॥

ಸ್ತುವಂತಿ ನೃತ್ಯಂತಿ ನಮಂತಿ ಕೇಚಿದಾ-
ನಂದಜಾಶ್ರೂಣಿ ಸೃಜಂತಿ ಕೇಚಿತ್ ।
ಆಪ್ಲುತ್ಯ ಚಾಪ್ಲುತ್ಯ ನದಂತಿ ಕೇಚಿದ್
ಗಾಯಂತಿ ಗೀತಂ ಪರಿತೋ ಮಹಾಂತಃ ॥32॥

ರಾತ್ರ್ಯಾಂ ಶಶೀ ದೇಹಭೃತಾಂ ಚ ಚಕ್ಷು-
ರ್ದಿನಾರ್ತಿಹಾ ನೋ ದಿನಕೃದ್ದಿವಾ ಚ ॥33॥

ಏಕೋಽಪಿ ವಿಷ್ಣುರ್ಬಹುಧಾ ವಿಭಿನ್ನೋ
ಧಾತಾ ಜನಾನಾಂ ದಿವಿ ದೇವತಾನಾಮ್ ।
ಕೃಪಾನಿಧಿಸ್ತತ್ರ ಬಭೂವ ಲಕ್ಷ್ಯಃ
ಸರ್ವಸ್ಯ ಲೋಕಸ್ಯ ಹಿತಾಯ ನೂನಮ್ ॥34॥

ರಾಜರನ್ನು, ಮುನಿಗಳ ಸಮೂಹಗಳನ್ನು, ಬ್ರಹ್ಮವಾದಿಗಳನ್ನು, ಭೂಲೋಕವಾಸಿಗಳಾದ ಮನುಷ್ಯರನ್ನು ಸಹ ನೋಡಿ ಋಷಿಗಳು ಅತ್ಯಂತ ಸಂತೋಷವನ್ನು ಹೊಂದಿದರು. (30–31) ಕೆಲವರು ಕುಣಿದರೆ, ಕೆಲವರು ಪರಮಾತ್ಮನಿಗೆ ನಮಿಸುತ್ತಿದ್ದರು. ಭಗವದ್ದರ್ಶನದಿಂದ ಸಂತುಷ್ಟರಾಗಿ ಆನಂದ ಬಾಷ್ಪಗಳನ್ನು ಸುರಿಸುತ್ತಿದ್ದರು. ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡಿ ಕೆಲವರು ಪರಮಾತ್ಮನ ಸ್ತುತಿಪರವಾದ ಗೀತೆಗಳನ್ನು ಗಾನಮಾಡುತ್ತಿದ್ದರು. 'ರಾತ್ರಿಯಲ್ಲಿ ಚಂದ್ರನಲ್ಲಿದ್ದು ಆಹ್ಲಾದವನ್ನುಂಟುಮಾಡುವ ಪರಮಾತ್ಮನು ಹಗಲಿನಲ್ಲಿ ಚಕ್ಷುಃಸ್ಥಾನೀಯನಾಗಿ ಸೂರ್ಯನಲ್ಲಿದ್ದು ಸರ್ವರ ರೋಗಗಳನ್ನು ಕಳೆದು ಸರ್ವಪದಾರ್ಥಗಳನ್ನು ಬೆಳಗುವನು. ಹೀಗೆ ಒಬ್ಬನೇ ಆಗಿದ್ದರೂ ಸಹ ಕೃಪಾನಿಧಿಯಾದ ವಿಷ್ಣುವು ತನ್ನ ಅನಂತರೂಪಗಳಿಂದ ಪದಾರ್ಥಗಳನ್ನು ವ್ಯಾಪಿಸಿ ಅವುಗಳಿಗೆ ಶಕ್ತಿದಾಯಕನಾಗಿದ್ದು ದೇವತೆಗಳಿಗೂ ಸಹ ಧಾರಕನಾಗಿದ್ದು, ಸರ್ವಜಗತ್ತಿಗೆ ಹಿತದಾಯಕನಾಗಿದ್ದು ಸರ್ವರಿಂದಲೂ ಸಹ ಲಕ್ಷ್ಯ (ಸಂದರ್ಶ್ಯ) ನೆನಿಸಿರುವನು.' (32–34) ಹೀಗೆ ಪರಮಾತ್ಮನನ್ನು ಸ್ತುತಿಸುತ್ತಾ ಕೆಲವರು ವನದಲ್ಲಿಯ ಹೂವುಗಳಿಂದ ಭಗವಂತನನ್ನು

ವನ್ಯೈಃ ಪುಷ್ಪಫಲೈಃ ಕೇಚಿತ್ ಸ್ತೋತ್ರೈಶ್ಚ ವಿವಿಧೈರ್ಜಪೈಃ ।
ವೇದಪಾರಾಯಣೈಃ ಕೇಚಿತ್ ಪೂಜಯಂತಿ ಜನಾರ್ದನಮ್ ॥35॥

ಧೂಪದೀಪೈರ್ಗಂಧಮಾಲ್ಯೈರನ್ಯೈಃ ಸ್ನಾನಾದಿಕೀರ್ತನೈಃ ।
ದೀಪ್ತಹಾಟಕಕುಂಭೈಶ್ಚ ತೋರಣೈರ್ಧ್ವಜರಾಶಿಭಿಃ ॥36॥

ವಿಚಿತ್ರಕುಸುಮೈಃ ಕೇಚಿತ್ಪೂಜಯಂತಿ ಜನಾರ್ದನಮ್ ।
ತುಲಸೀಮಂಜರೀಭಿಶ್ಚ ಕರವೀರೈಶ್ಚ ಜಾತಿಭಿಃ ॥37॥

ಮಲ್ಲಿಕಾಕೇತಕೀಪುಷ್ಪೈಶ್ಚಂಪಕೈಃ ಪೂಜಯಂತಿ ತೇ ।
ಭೂಸುರಾ ಋಷಯಶ್ಚೈವ ಕಲಶೈಃ ಪರಿಪೂರಿತೈಃ ॥38॥

ಪುಣ್ಯೋದಕೈರ್ಮಂತ್ರಪೂತೈಃ ಕಮಂಡಲುಗತೈಃ ಶುಭೈಃ ।
ಪತ್ರಕುಂಭಾಹೃತೈಃ ಕೇಚಿತ್ಪೂಜಯಂತಿ ಜನಾರ್ದನಮ್ ॥39॥

ಪತ್ರಶಾಕೈರ್ಮೂಲಫಲನೈವೇದ್ಯಂ ಕಲ್ಪಯಂತಿ ಚ ।
ಶುದ್ಧೋದಕೈರ್ಮಂತ್ರಪುಷ್ಪೈರ್ಧ್ಯಾನೈಃ ಸ್ತೋತ್ರಜಪೈಃ ಪರೇ ॥40॥

ಏವಂ ತೇಷಾಂ ತು ಪೂಜಾಭಿಃ ಪೂಜಿತೋ ಮಧುಸೂದನಃ ।
ಆಸ್ತೇ ತತ್ರ ಜಗನ್ನಾಥಃ ಸ್ವಾಮಿಪುಷ್ಕರಿಣೀತಟೇ ॥41॥

ಅರ್ಚಿಸಿದರೆ ಮತ್ತೆ ಕೆಲವರು ವೇದಪಾರಾಯಣ, ಜಪಗಳಿಂದ ಅವನನ್ನು ಪೂಜಿಸುತ್ತಿದ್ದರು. ಮತ್ತೆ ಕೆಲವರು ಧೂಪ, ದೀಪಗಳಿಂದ, ಗಂಧಮಾಲೆಗಳಿಂದ, ಹೊಳೆಯುವ ಹೇಮದ ಕುಂಭಗಳಿಂದ ನೀರನ್ನು ತುಂಬಿ ತಂದು ಭಗವಂತನಿಗೆ ಅಭಿಷೇಕಮಾಡಿ ಅವನ ಗುಣಗಳನ್ನು ಕೀರ್ತನ ಮಾಡುವದು, ನಾನಾವಿಧವಾದ ತೋರಣ, ಧ್ವಜಗಳಿಂದ ಭಗವನ್ಮಂದಿರವನ್ನು ಅಲಂಕರಿಸಿ ಅವನನ್ನು ಧ್ಯಾನಿಸುವದರ ಮೂಲಕವಾಗಿ ಅವನನ್ನು ಅರ್ಚಿಸುತ್ತಿದ್ದರು. (36) ಮತ್ತೆ ಕೆಲವು ಜನರು ನಾನಾವಿಧವಾದ ಮಲ್ಲಿಗೆ, ಕರವೀರ, ಜಾಜಿ, ಕೇತಕಿ (ಕೇದಗಿ) ಸಂಪಿಗೆಯೇ ಮೊದಲಾದ ವಿಚಿತ್ರ ಕುಸುಮಗಳಿಂದ, ತುಲಸೀ ಹಾರಗಳಿಂದ, (37) ಕಲಶಪೂರ್ಣ ವಾದ ಪವಿತ್ರೋದಕಗಳಿಂದ, ಕಮಂಡಲುಗಳಲ್ಲಿ, ಎಲೆಯಿಂದ ಮಾಡಿದ ಪಾತ್ರೆಗಳಲ್ಲಿ (ದೊನ್ನೆಗಳಲ್ಲಿ) ತರಲ್ಪಟ್ಟ ಮಂತ್ರಪೂತವಾದ ನೀರಿನಿಂದ, ಎಲೆ, ಹಣ್ಣು, ತರಕಾರಿಗಳು, ಗಡ್ಡೆ-ಗೆಣಸುಗಳು, ಹಣ್ಣು-ಹಂಪಲಗಳ ನೈವೇದ್ಯವನ್ನು ಕಲ್ಪಿಸುವದರಿಂದ ಭಗವಂತನನ್ನು ಪೂಜಿಸುತ್ತಿದ್ದರು. (38-39) ಮತ್ತೆ ಕೆಲ ಯೋಗಿಗಳು ಶುದ್ಧೋದಕ, ಮಂತ್ರಪುಷ್ಪಗಳು, ಭಗವಂತನ ಧ್ಯಾನ-ಪೂಜೆ, ಸ್ತೋತ್ರ-ಜಪಗಳು ಇವೇ ಮೊದಲಾದವುಗಳಿಂದ ಶ್ರೀನಿವಾಸನನ್ನು ಪೂಜಿಸುತ್ತಿದ್ದರು. ಇವರಲ್ಲರ ಪೂಜೆಯನ್ನು ಸ್ವೀಕರಿಸುತ್ತಾ

ಹರೇ ಮುರಾರೇ ಪುರುಷೋತ್ತಮೇತಿ
ವದಂತಿ ಕೇಚಿತ್ ಪರಿರಂಭಯಂತಿ ।
ತೂಷ್ಣೀಂ ತು ತಿಷ್ಠಂತಿ ಹಸಂತಿ ಕೇಚಿದ್
ಧ್ಯಾಯಂತಿ ಕೇಚಿತ್ಕಲಶಂ ವಹಂತಿ ॥42॥

ಪುರ್ಣಂ ಮುರಾರೇರಭಿಷೇಕಹೇತೋಃ
ಪುಷ್ಪಾಣಿ ಸೌರಭ್ಯಯುತಾನಿ ಗಂಧೈಃ ।
ಕರ್ಪೂರಕಸ್ತೂರಿಸುಗಂಧವಾಸಿತಾ–
ನಾದಾಯ ಸರ್ವೇ ವೃಷಭಾದ್ರಿನಾಥಮ್ ॥43॥

ತೇ ಮಾರ್ಗಮಾಣಾ ವಿಚರಂತಿ ತತ್ರ
ದೇವಾ ಮನುಷ್ಯಾ ಅಪಿ ಯೋಗಿನಶ್ಚ ॥44॥

ಭೀಷ್ಮ ಉವಾಚ–

ಏವಂ ಕೃತ್ಯೇಷು ದೇವೇಷು ಋಷಿಗಂಧರ್ವಕೋಟಿಷು ।
ಪುಷ್ಪವೃಷ್ಟಿಃ ಪಪಾತಾಶು ಪರ್ವತೋಪರಿ ಸರ್ವತಃ ॥
ಭೇರಿಮೃದಂಗಪಟಹೈಃ ನಿಸ್ಸಾಣಾದ್ಯೈಶ್ಚ ಡಿಂಡಿಮೈಃ ॥45॥
ಶಂಖಕಾಹಲಸನ್ನಾದೈಃ ಸಂಕುಲಂ ಸಮಜಾಯತ ।

ಭಗವಂತನು ಸ್ವಾಮಿಪುಷ್ಕರಿಣಿಯ ದಡದಲ್ಲಿಯೇ ವಿಹರಿಸುತ್ತಿದ್ದನು. ಮತ್ತೆ ಕೆಲವು ಭಗವದ್ಭಕ್ತರು 'ಹರೇ, ಮುರಾರೇ, ಪುರುಷೋತ್ತಮನೇ! ಎಂಬುದಾಗಿ ಭಗವಂತನನ್ನು ಸ್ಮರಿಸುತ್ತಾ, ಕೆಲವರು ಭಗವಂತನನ್ನು ಮನಸ್ಸಿನಲ್ಲಿಯೇ ಮೌನವಾಗಿ ಧ್ಯಾನಿಸುತ್ತಾ, ಪೂರ್ಣಕಲಶವನ್ನು ಭಗವಂತನಿಗೋಸ್ಕರವಾಗಿ ತರುವವರಾಗಿ, ಸುಗಂಧಪುಷ್ಪಗಳನ್ನು ಭಗವಂತನಿಗಾಗಿ ತಂದು ಅರ್ಪಿಸುವದಕ್ಕಾಗಿ, ಗಂಧ, ಘಮಘಮಿಸುವ ಕಸ್ತೂರಿ, ಕರ್ಪೂರವೇ ಮೊದಲಾದ ಸುಗಂಧ ಪದಾರ್ಥಗಳನ್ನು ಕೈಯಲ್ಲಿ ಹಿಡಿದು ದೇವತೆಗಳು, ಮನುಷ್ಯರು, ಯೋಗಿಗಳೂ ಸಹ ಭಗವಂತನನ್ನು ಅನ್ವೇಷಿಸುತ್ತಿದ್ದರು. (43) ಹೀಗೆ ಅಲ್ಲಿ ಭಗವಂತನ ವ್ಯಾಪಾರವು ನಡೆಯುತ್ತಿರಲು ಪರ್ವತದ ಮೇಲೆ ಎಲ್ಲೆಡೆ ಪುಷ್ಪವೃಷ್ಟಿಯುಂಟಾಯಿತು. ಭೇರಿ, ಮೃದಂಗ, ಮದ್ದಳೆ, ಪಟಹ, ನಿಸ್ಸಾಣ, ಡಿಂಡಿಮ, ಶಂಖಗಳ ಧ್ವನಿಯಾಯಿತು. ಆಗ ಮೇರುಮಂದಾರ ಪರ್ವತದಂತೆ ಸುಂದರನಾದ, ಸ್ವರ್ಣವರ್ಣದ ಪೀತಾಂಬರ ಧಾರಿಯಾದ, ನಾನಾ ರತ್ನಗಳಿಂದುಪೇತವಾದ ದಿವ್ಯವಾದ ಆಭರಣಗಳಿಂದ ಅಲಂಕೃತನಾದ, ಕೋಟಿಸೂರ್ಯಸಮಪ್ರಭನಾದ, ಕೋಟಿಚಂದ್ರರನ್ನು ಮೀರಿಸುವ

ತಸ್ಮಿನ್ನವಸರೇ ವಿಷ್ಣುಃ ಪ್ರಾದುರಾಸೀತ್ ಸರಸ್ತಟೇ ॥46॥

ಮೇರುಮಂದರಸಂಕಾಶೈರ್ಜಾಂಬೂನದಪರಿಷ್ಕೃತೈಃ ।
ನಾನಾರತ್ನಾಂಚಿತೈರ್ದಿವ್ಯೈರ್ವಿಮಾನೈರುಪಶೋಭಿತಃ ॥47॥

ಕೋಟಿಸೂರ್ಯಪ್ರತೀಕಾಶಶ್ಚಂದ್ರಕೋಟಿಸುಶೀತಲಃ ।
ಸ್ವರ್ಲೋಕಾದ್ಭೂಮಿಪರ್ಯಂತಂ ಪ್ರಾದುರಾಸೀಚ್ಛ್ರಿಯಃ ಪತಿಃ ॥48॥

ಸ್ವಾಮಿಪುಷ್ಕೀರಣೀತೀರೇ ರವಿಮಂಡಲಸನ್ನಿಭೇ ।
ವಿಮಾನೇ ಸೇವಿತೋ ದೇವೈಃ ಶ್ರೀನಿವಾಸೋಽವಸತ್ಪ್ರಭುಃ ॥49॥

ಬ್ರಹ್ಮಾ ಶಿವಶ್ಚಂದ್ರದಿವಾಕರೌ ಚ
ಸೇಂದ್ರೋ ಯಮಾಗ್ನೀ ಧನರಾಟ್ ಚ ಪಾಶೀ ।
ರಕ್ಷೋಽನಿಲೋಽಸೌ ವಸವಶ್ಚ ದಸ್ರೌ
ವಿರಿಂಚಿಕೋಟ್ಯೋ ಗಣದೇವತಾಶ್ಚ ॥50॥

ಪಿತಾ ಪಿತೄಣಾಂ ಜನಕಃ ಸುರಾಣಾಂ
ಮಾತಾ ಶಿಶೂನಾಂ ಮಹತಾಂ ಮಹಾತ್ಮಾ ।
ಪತಿಃ ಪ್ರಿಯಾಣಾಂ ತರಣಿರ್ಜನಾನಾಂ
ನಿಧಿಃ ಕೃಶಾನಾಮಿವ ನಿರ್ಧನಾನಾಮ್ ॥51॥

ಆಹ್ಲಾದಕತ್ವಶಕ್ತಿ–ಶೀತಲತ್ವ, ಪ್ರಸನ್ನತಾದಿ ಗುಣಗಳಿಂದ ಉಪೇತನಾದ ಪರಮಾತ್ಮನು ಭೂಮ್ಯಂತರಿಕ್ಷಗಳನ್ನು ಜೋಡಿಸುವವನಂತೆ ಬೃಹದ್ರೂಪನಾಗಿ ಸೂರ್ಯಮಂಡಲದಂತೆ ತೇಜಸ್ವಿಯಾಗಿದ್ದ ಸ್ವಾಮಿಪುಷ್ಕರಿಣಿ ತಟದಲ್ಲಿ ಲಕ್ಷ್ಮೀಪತಿಯು ಪ್ರಾದುರ್ಭೂತನಾದನು. ಆ ಶ್ರೀನಿವಾಸನು ಅಲ್ಲಿಯೇ ಇದ್ದ ದೇವತೆಗಳಿಂದ ಸಂಸೇವಿತನಾಗಿ ವಿಮಾನದಲ್ಲಿ (ಗೋಪುರದಲ್ಲಿ) ವಾಸವನ್ನು ಮಾಡಿದನು. (49) ಬ್ರಹ್ಮ, ಶಿವ, ಚಂದ್ರ, ಸೂರ್ಯ, ಇಂದ್ರ, ಯಮ, ಅಗ್ನಿ, ಕುಬೇರ, ನಿಋತಿ, ವಾಯು, ಅಷ್ಟವಸುಗಳು, ಅಶ್ವಿನೀದೇವತೆಗಳು, ಗಣದೇವತೆಗಳು ಇವರೆಲ್ಲರಲ್ಲಿ ನಿಂತು ತತ್ತಚ್ಛಕ್ತಿಪ್ರದಾಯಕನಾದ, ಪಿತೃದೇವತೆಗಳಿಗೂ ಸಹ ಪಿತೃವಾದ, ದೇವತೆಗಳಿಗೂ ಜನಕನಾದ, ಭಕ್ತಜನರೆಂಬ ಶಿಶುಗಳಿಗೆ ತಾಯಿಯಂತೆ ಮಮತೆಯನ್ನು ಸೂಸುವವನಾದ, ಮಹಜ್ಜನರಿಗೂ ಸಹ ಮಹತ್ತ್ವದಾಯಕನಾಗಿ ಮಹಾತ್ಮನೆನಿಸಿದ, ತನ್ನ ಜನರಿಗೆ ಪತಿಯಾದ, ಜನರಿಗೆ ಸೂರ್ಯನಂತೆ ಉಪಕಾರಕನಾದ, ನಿರ್ಧನರಾದ, ಕೃಶರಾದ ವ್ಯಕ್ತಿಗಳಿಗೆ ನಿಧಿಯಾದ, ಜಗದೇಕಬಂಧುವಾದ, ಅತ್ಯಂತ ಪ್ರಸನ್ನ ಸ್ವರೂಪನಾದ ಶ್ರೀನಿವಾಸನು ಸ್ವಾಮಿಪುಷ್ಕರಿಣಿಯ ದಡದಲ್ಲಿ ಅತ್ಯಂತ ಪ್ರಸನ್ನವಾದ ರೂಪವನ್ನು

ಆವಿರ್ಬಭೂವಾತ್ರ ಮಹೋಜ್ಜ್ವಲಾಂಗಃ
ಪ್ರಿಯಾಯುತಃ ಶ್ರೀವೃಷಭಾದ್ರಿನಾಥಃ ।
ಪ್ರಸನ್ನಮೂರ್ತಿರ್ಜಗದೇಕಬಂಧುಃ
ಪ್ರಸನ್ನಧಾಮಾಽಥ ಜಗನ್ನಿವಾಸಃ ॥52॥

ತಸ್ಮಾತ್ಪೂಜಯಿತುಂ ರಾಜನ್ ಶ್ರೀನಿವಾಸಂ ಜಗದ್ಗುರುಮ್ ।
ಗಚ್ಛ ಸೌಮ್ಯ ಸದಾನಂದಂ ಭುಕ್ತಿಮುಕ್ತಿಫಲಪ್ರದಮ್ ॥53॥

ಮಹಾಪಾತಕಯುಕ್ತೋ ವಾ ಯುಕ್ತೋ ವಾ ಸರ್ವಪಾತಕೈಃ ।
ಯಸ್ಯ ಸ್ಮರಣಮಾತ್ರೇಣ ನರಃ ಪಾಪೈಃ ಪ್ರಮುಚ್ಯತೇ ॥54॥

ಶ್ರೀನಿವಾಸಸ್ಯ ಸೇವಾರ್ಥಂ ಯೋ ವಾ ಕೋ ವಾ ವ್ರಜೇದ್ಯದಿ ।
ತಸ್ಯೈವ ವಂಶಜಾಃ ಸರ್ವೇ ಮುಕ್ತಾ ಏವ ನ ಸಂಶಯಃ ॥55॥

ಯಾನಿ ಕ್ಷೇತ್ರಾಣಿ ಪುಣ್ಯಾನಿ ತೀರ್ಥಾನ್ಯಾಯತನಾನಿ ಚ ।
ತಾನಿ ಸರ್ವಾಣಿ ಸೇವಂತೇ ಶ್ರೀನಿವಾಸಂ ಜಗನ್ಮಯಮ್ ॥56॥

ಸ್ವೀಕರಿಸಿ ಲಕ್ಷ್ಮೀಸಮೇತನಾಗಿ ಆವಿರ್ಭವಿಸಿದನು. ಆದ್ದರಿಂದ ಹೇ ಯುಧಿಷ್ಠಿರನೇ! ಜಗದ್ಗುರುವಾದ ಶ್ರೀನಿವಾಸನನ್ನಾರಾಧಿಸಲು ಸದಾನಂದನೂ, ಭುಕ್ತಿ–ಮುಕ್ತಿಫಲದಾಯಕನೂ ಆಗಿರುವ ಅವನ ಸ್ಥಾನವಾದ ವೃಷಭಾಚಲಕ್ಕೆ ಹೋಗು. (53) ಮಹಾಪಾತಕಗಳಿಂದಲೇ ಆಗಲೀ, ಎಲ್ಲ ವಿಧವಾದ ಪಾತಕಗಳಿಂದಲೇ ಆಗಲಿ ಯುಕ್ತನಾದ ಯಾವ ವ್ಯಕ್ತಿಯು ಯಾರ ಸ್ಮರಣ ಮಾತ್ರದಿಂದ ತಮ್ಮೆಲ್ಲ ಪಾಪಗಳನ್ನು ಕಳೆದುಕೊಂಡು ಪುಣ್ಯವನ್ನು ಹೊಂದಿ ಅತ್ಯಂತ ಸಂತೋಷವನ್ನನು ಭವಿಸುವರೋ ಅಂತಹ ಶ್ರೀನಿವಾಸನ ಸೇವಾರ್ಥವಾಗಿ ಹೋಗಿರಿ. ಶ್ರೀನಿವಾಸನ ಸೇವಾರ್ಥವಾಗಿ ಯಾರೇ ಆಗಲಿ ಪ್ರವರ್ತಿಸಿದರೂ ಸಹ ಅವರು ಮಾತ್ರವಲ್ಲದೇ ಅವರ ವಂಶಜರೂ ಸಹ ಸರ್ವಪಾಪ ವಿನಿರ್ಮುಕ್ತರಾಗಿ ಮುಕ್ತಿಯನ್ನು ಹೊಂದುವರು. ಇದರಲ್ಲಿ ಯಾವ ಸಂದೇಹವೂ ಸಹ ಬೇಡ. (55) ಜಗತ್ತಿನಲ್ಲಿ ಯಾವ ಯಾವ ಕ್ಷೇತ್ರ–ತೀರ್ಥಗಳಿರುವವೋ (ಅವುಗಳ ಅಭಿಮಾನಿಗಳೂ ಸಹ) ಜಗತ್ಪತಿಯಾದ ಶ್ರೀನಿವಾಸನನ್ನು ಈ ವೇಂಕಟಗಿರಿಯಲ್ಲಿ ಪ್ರತ್ಯಕ್ಷವಾಗಿ ಸೇವಿಸುತ್ತಿರುವವು. ಯಾರು ಇಂತಹ ಮಂಗಲಕರವಾದ ಶ್ರೀನಿವಾಸನ ಪುಣ್ಯಕರವಾದ ಆಖ್ಯಾಯಿಕೆಯನ್ನು ಭಕ್ತಿಯಿಂದ ಶ್ರವಣಮಾಡುವರೋ ಅವರಿಗೆ ಮುಕ್ತಿಯೆಂಬುದು ಸಿದ್ಧವಾಗಿರುವದು.

ಇದಂ ಯೇ ಪುಣ್ಯಮಾಖ್ಯಾನಂ ಶೃಣ್ವಂತಿ ಶ್ರದ್ಧಯಾ ನರಾಃ ।
ತೇಷಾಂ ಮುಕ್ತಿಃ ಕರಸ್ಥೈವ ಗತಾನಾಂ ಕಿಮು ವೈಭವಮ್ ॥57॥

ಇತಿ ಶ್ರೀಹರಿವಂಶೇ ಶೇಷಧರ್ಮೇ ಶ್ರೀವೇಂಕಟಾಚಲಮಾಹಾತ್ಮ್ಯವರ್ಣನಂ
ನಾಮಾಷ್ಟಚತ್ವಾರಿಂಶೋಽಧ್ಯಾಯೋಽತ್ರ ಪ್ರಥಮಃ ॥1॥

* * *

ಇಂತಹ ಶ್ರೀನಿವಾಸನ ವೈಭವವನ್ನು ವರ್ಣಿಸುವದೆನಿತು?' ಎಂಬುದಾಗಿ ಭೀಷ್ಮರು ನುಡಿದರು.

ಇಲ್ಲಿಗೆ ಮಹಾಭಾರತದ ಖಿಲವಾದ ಹರಿವಂಶದಲ್ಲಿ ಶೇಷಧರ್ಮದಲ್ಲಿಯ ಶ್ರೀವೇಂಕಟಾಚಲ
ಮಾಹಾತ್ಮ್ಯವರ್ಣನವೆಂಬ ನಲವತ್ತೆಂಟನೆಯ ಅಧ್ಯಾಯವು ಪ್ರಸ್ತುತ ಒಂದನೆಯ ಅಧ್ಯಾಯವು
ಪರಿಸಮಾಪ್ತವಾಯಿತು

ಶ್ರೀಕೃಷ್ಣಾರ್ಪಣಮಸ್ತು

* * *

# ಅಧ್ಯಾಯಾನುಕ್ರಮಣಿಕಾ

॥ಶ್ರೀ ಬಾದರಾಯಣೋ ವಿಜಯತೇ ತರಾಮ್ ॥

ಶ್ರೀಮದಾದಿತ್ಯಪುರಾಣಾಂತರ್ಗತಂ

# ಶ್ರೀವೇಂಕಟೇಶಮಾಹಾತ್ಮ್ಯಮ್

## ಅಥ ಪ್ರಥಮೋಽಧ್ಯಾಯಃ

**ಶ್ರಿಯಃ ಕಾಂತಾಯ ಕಲ್ಯಾಣನಿಧಯೇ ನಿಧಯೇಽರ್ಥಿನಾಮ್ ।**
**ಶ್ರೀವೇಂಕಟನಿವಾಸಾಯ ಶ್ರೀನಿವಾಸಾಯ ಮಂಗಲಮ್ ॥*॥**

**ಶ್ರೀವೇಂಕಟಾಚಲಾಧೀಶಂ ಶ್ರಿಯಾಽಽಧ್ಯಾಸಿತವಕ್ಷಸಮ್ ।**
**ಶ್ರಿತಚೇತನಮಂದಾರಂ ಶ್ರೀನಿವಾಸಮಹಂ ಭಜೇ ॥*॥**

**ಶೌನಕಾದಯಃ ಊಚುಃ-**

**ಶ್ರೀವೇಂಕಟೇಶಮಾಹಾತ್ಮ್ಯಂ ಶ್ರೀನಿವಾಸಪ್ರಸಾದತಃ ।**
**ಶ್ರೀಪ್ರದಂ ಸರ್ವದಾ ಸೂತ ದಯಯಾ ಪ್ರೋಕ್ತವಾನಸಿ** ॥1॥

ಶ್ರೀಮದಾದಿತ್ಯಪುರಾಣಾಂತರ್ಗತ

## ಶ್ರೀವೇಂಕಟೇಶಮಾಹಾತ್ಮೆ

ಕನ್ನಡದಲ್ಲಿ ಸರಳಾನುವಾದ

## ಮೋದಲನೆಯ ಅಧ್ಯಾಯ

ಶ್ರೀ ಗುರುಭ್ಯೋ ನಮಃ

ಶ್ರೀ ಲಕ್ಷ್ಮೀರಮಣ, ಅನಂತಕಲ್ಯಾಣಗುಣಾಕರ, ಅರ್ಥಿಜನ ಇಷ್ಟಾರ್ಥ ನಿಧಿಯಾದ ಶ್ರೀವೇಂಕಟಾಚಲವಾಸಿಯಾದ ಶ್ರೀನಿವಾಸ ದೇವರಿಗೆ ಮಂಗಳವು.

ಶ್ರೀವೇಂಕಟಾಚಲಪತಿಯಾದ, ಲಕ್ಷ್ಮೀದೇವಿಯಿಂದ ಶೋಭಿತವಾದ ವಕ್ಷಃಸ್ಥಳವುಳ್ಳ, ಆಶ್ರಿತಜನ ಮಂದಾರನಾದ ಶ್ರೀನಿವಾಸದೇವರನ್ನು ನಾನು ಸ್ತುತಿಸುತ್ತೇನೆ.

ಶ್ರೀ ಶೌನಕಮುನಿಗಳು ಶ್ರೀವೇಂಕಟೇಶಮಾಹಾತ್ಮೆಯನ್ನು ಕುರಿತು ಸೂತಪುರಾಣಿಕರನ್ನು ಪ್ರಶ್ನಿಸುತ್ತಾರೆ- ಶ್ರೀನಿವಾಸದೇವರ ಅನುಗ್ರಹಕ್ಕಾಗಿ ನಮ್ಮಲ್ಲಿರುವ ದಯಾದೃಷ್ಟಿಯಿಂದ ಯಾವಾಗಲೂ

ಇತಃ ಪರಂ ಶ್ರೀನಿವಾಸಃ ಶ್ರೀಪತಿಃ ಸರ್ವಶೋ ಹಿ ನಃ ।
ಕಥಂ ಪ್ರೀತೋ ಭವೇತ್ಸದ್ಯೋ ಹ್ಯಭೀಷ್ಟಾನಿ ಪ್ರವರ್ಷಯನ್ ॥2॥

ತದ್ವದಸ್ವ ಕೃಪಾಪೂರ್ಣ ವೇಂಕಟೇಶಕಥಾಮೃತಮ್ ।
ಭಗವನ್ ಸರ್ವತತ್ತ್ವಜ್ಞ ದಯಾಪಾತ್ರಂ ವಯಂ ತವ ॥3॥

ಸೂತ ಉವಾಚ–

ಶೃಣುಧ್ವಂ ಮುನಯೋ ದಿವ್ಯಂ ಸಾವಧಾನತಯಾ ತ್ವಿದಮ್ ।
ಯಥಾ ಪೃಷ್ಟಂ ತಥೈವಾಹಂ ವಕ್ಷ್ಯಾಮಿ ವಚನಂ ಶುಭಮ್ ॥4॥

ವೇಂಕಟಾದ್ರಿಸಮಂ ಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ ।
ವೇಂಕಟೇಶಸಮೋ ದೇವೋ ನ ಭೂತೋ ನ ಭವಿಷ್ಯತಿ ॥5॥

ಅದ್ಭುತಂ ಚಾಸ್ಯ ಚರಿತಂ ವರ್ಣಿತುಂ ಕೇನ ಶಕ್ಯತೇ ।
ತಥಾಽಪಿ ತಾರಕಂ ಸರ್ವಪಾಪಘ್ನಂ ಪುಣ್ಯವರ್ಧನಮ್ ॥6॥

ಸುವಿಚಿತ್ರಮಪೂರ್ವಾರ್ಥಂ ದೇವರ್ಷ್ಯಾದಿಭಿರಾದೃತಮ್ ।
ಲೋಕೋತ್ತರಂ ಮಹಾಶ್ಚರ್ಯಂ ವಕ್ಷ್ಯೇಽಸರ್ವಾರ್ಥಸಿದ್ಧಿದಮ್ ॥7॥

ಸಂಪತ್ಪ್ರದವಾದ ಶ್ರೀವೇಂಕಟೇಶ ಮಾಹಾತ್ಮೆಯನ್ನು ಹೇಳಿರುವಿರಿ.(1) ಇನ್ನು ಮುಂದೆ ಶ್ರೀಪತಿಯಾದ ಶ್ರೀನಿವಾಸ ದೇವರು ಅತ್ಯಂತ ಪ್ರೀತನಾಗಿ ನಮ್ಮಗಳಿಗೆ ಸರ್ವವಿಧವಾದ ಅಭೀಷ್ಟಗಳನ್ನು ಯಾವ ಸಾಧನಗಳಿಂದ ಕೊಡುವನೋ ಅಂತಹ ಅತ್ಯಂತ ಶೀಘ್ರಫಲಪ್ರದವಾದ, ದುಃಖನಿವೃತ್ತಿಪೂರ್ವಕ ನಿರಂತರ ಆನಂದಾನುಭವರೂಪಮೋಕ್ಷಪ್ರದವಾದ ಶ್ರೀವೇಂಕಟೇಶಮಾಹಾತ್ಮೆಯನ್ನು ನಿಮ್ಮ ಅನುಗ್ರಹಕ್ಕೆ ಪಾತ್ರರಾದ ನಮ್ಮಗಳಿಗೆ ಸರ್ವತತ್ತ್ವರಹಸ್ಯಗಳನ್ನೂ ಬಲ್ಲ, ಪೂಜ್ಯರಾದ ಸೂತರೇ! ತಿಳಿಸಿ ಹೇಳಿರಿ. (2–3) ಈ ರೀತಿಯಾಗಿ ಬಹುವಿಧವಾಗಿ ಪ್ರಾರ್ಥಿತರಾದ ಸೂತಾಚಾರ್ಯರು ಹೀಗೆ ಹೇಳಿದರು– 'ಮುನಿಗಳೇ! ಸಮಾಧಾನಚಿತ್ತರಾಗಿ ಕೇಳಿರಿ. ನೀವು ಯಾವ ಪ್ರಶ್ನೆಯನ್ನು ಮಾಡಿದ್ದೀರೋ ಅದಕ್ಕೆ ಸಮರ್ಪಕವಾದ, ಉತ್ತಮವಾದ, ಜ್ಞಾನಪ್ರದವಾದ, ಶುಭಕರವಾದ, ಶ್ರೀವೇಂಕಟೇಶಮಾಹಾತ್ಮೆಯನ್ನು ಹೇಳುತ್ತೇನೆ. (4) ವೇಂಕಟಾಚಲಕ್ಕೆ ಸಮಾನವಾದ ಸ್ಥಾನವು ಬ್ರಹ್ಮಾಂಡದಲ್ಲಿ ಬೇರೊಂದಿಲ್ಲ. ವೇಂಕಟೇಶನಿಗೆ ಸಮಾನವಾದ ದೇವತೆ ಈಗಿರುವದಿಲ್ಲ, ಹಿಂದಿರಲಿಲ್ಲ ಅಷ್ಟೇ ಅಲ್ಲದೇ ಮುಂದೆ ಆಗುವದಿಲ್ಲ. (ಭೂತ–ಭವಿಷ್ಯದ್–ವರ್ತಮಾನ ಕಾಲಗಳಲ್ಲಿ ಇಲ್ಲ). ಈ ವೇಂಕಟೇಶನ ಚರಿತ್ರೆಯು ಅದ್ಭುತವಾಗಿದೆ. ಅದನ್ನು ವರ್ಣಿಸಲು ಯಾರಿಂದಲೂ ಸಾಧ್ಯವಿಲ್ಲ. ಸಂಸಾರ–ನರಕಾದಿಗಳಿಗೆ ತಾರಕವಾಗಿದೆ. ಪುಣ್ಯವರ್ಧಕವೂ ಹಾಗೂ ಸರ್ವಪಾಪ ಪರಿಹಾರಕವೂ

ಶೇಷಾಚಲೇ ಯನ್ಮಾಹಾತ್ಮ್ಯಂ ಅನ್ಯಕ್ಷೇತ್ರೇ ನ ತತ್ ಕ್ವಚಿತ್ ।
ತದ್ಗತಶ್ರೀನಿವಾಸಸ್ಯ ಮಹಿಮಾಽನನ್ಯಗಃ ಶುಭಃ ॥8॥

ವೇದೇಷು ಚ ಪುರಾಣೇಷು ವೇಂಕಟೇಶಕಥಾಮೃತಮ್ ।
ವರ್ಣಿತಂ ಚೇತಿಹಾಸೇಷು ಭಾರತಾದ್ಯಗಮೇಷು ಚ ॥9॥

ಮನೋಹರಂ ಚ ಸಂಶ್ರಾವ್ಯಂ ಇಹಾಮುತ್ರೇಷ್ಟದಾಯಕಮ್ ।
ಜ್ಞಾನಪ್ರದಂ ವಿಶೇಷೇಣ ಮಹದೈಶ್ವರ್ಯಕಾರಣಮ್ ॥10॥

ವೈರಾಗ್ಯಭಕ್ತಿಸತ್ತ್ವಾದಿಪ್ರದೇಂದ್ರಿಯವಶಪ್ರದಮ್ ।
ವೇಂಕಟಾದ್ರೌ ಶುಚಿಕ್ಷೇತ್ರೇಽಶುಚಿದೋಷೋ ನ ವಿದ್ಯತೇ ॥11॥

ತಸ್ಮಾದ್ವೇಂಕಟನಾಥಸ್ಯ ನೈವೇದ್ಯಂ ಗ್ರಾಹ್ಯಮುತ್ತಮಮ್ ।
ತೇನ ಕ್ಷೇಮಃ ಪ್ರಜಾನಾಂ ಹಿ ವಿಪರೀತೇ ವಿಪರ್ಯಯಃ ॥12॥

ಕರ್ತಾ ಹಿ ಸೃಷ್ಟಿಸ್ಥಿತಿಸಂಯಮಾದೇಃ
ಧರ್ತಾ ರಜಃಸತ್ತ್ವತಮಾಂಸ್ಯನರ್ಹಃ ।

ಆಗಿರುವದು.(6) ಈ ವೇಂಕಟೇಶ ಮಹಾತ್ಮೆಯು ಚಿತ್ರ-ವಿಚಿತ್ರವಾದ ಕಥೆಗಳಿಂದ ಕೂಡಿದೆ. ಅಪೂರ್ವಾರ್ಥ ಉಳ್ಳದ್ದಾಗಿದೆ. ಆದ್ದರಿಂದ ದೇವ ಋಷಿಗಳಿಂದ ಆದರಣೀಯವಾಗಿದೆ. ಪರಮಾತ್ಮನ ದಿವ್ಯಜ್ಞಾನದಿಂದ ಕೂಡಿದ ಈ ಮಾಹಾತ್ಮೆಯು ಶ್ರೇಷ್ಠಲೋಕ ಪ್ರದವಾಗಿದೆ. ಬ್ರಹ್ಮಾದಿಗಳಿಗೂ ಆಶ್ಚರ್ಯವನ್ನು ಉಂಟುಮಾಡುವ ಸರ್ವಾರ್ಥ ಸಿದ್ಧಿಪ್ರದವಾದ ಇದನ್ನು ನಾನು ನಿಮಗೆ ಹೇಳುತ್ತೇನೆ. (7) ಶೇಷಾಚಲದಲ್ಲಿರುವ ಮಹಿಮೆಯು ಅನ್ಯಕ್ಷೇತ್ರದಲ್ಲಿ ಇಲ್ಲವೇ ಇಲ್ಲ. ಶೇಷಾಚಲದಲ್ಲಿ ವಾಸವಾಗಿರುವ ಶ್ರೀನಿವಾಸದೇವರ ವ್ಯಕ್ತವಾದ ಶುಭ ಮಹಿಮೆಯು ಬೇರೆ ಯಾವ ಕ್ಷೇತ್ರದಲ್ಲಿಯೂ ಇರುವದಿಲ್ಲ. (8) ಶ್ರೀವೇಂಕಟೇಶನ ದಿವ್ಯಕಥಾಮೃತವು ವೇದಗಳಲ್ಲಿ, ಪುರಾಣಗಳಲ್ಲಿ, ಇತಿಹಾಸಗಳಲ್ಲಿ, ಮಹಾಭಾರತ, ಮೂಲರಾಮಾಯಣಗಳಲ್ಲಿ ವರ್ಣಿಸ-ಲ್ಪಟ್ಟಿರುವದು. (9) ಇಂತಹ ಕಥಾಮೃತವು ಮನೋಹರವಾಗಿದೆ, ಸುಶ್ರಾವ್ಯ ವಾಗಿದೆ. ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿ ಇಷ್ಟಪ್ರದ ವಾಗಿರುವದು. ವಿಶೇಷವಾಗಿ ವೇಂಕಟೇಶ್ವರನ ಅನುಗ್ರಹದಿಂದ ಜ್ಞಾನಪ್ರದ ವಾಗಿದೆ. ಮಹಾತ್ಮರಾದ ಬ್ರಹ್ಮಾದಿಗಳ ಐಶ್ವರ್ಯಕ್ಕೂ ಮತ್ತು ಭಕ್ತರ ಮಹದೈಶ್ವರ್ಯಕ್ಕೂ ಕಾರಣವಾಗಿದೆ (10) ವೈರಾಗ್ಯ-ಭಕ್ತಿರಸಾದಿ ಗಳಿಗೆ ಪ್ರಯೋಜಕವಾದ ಇಂದ್ರಿಯನಿಗ್ರಹವನ್ನು ಕೊಡುವ, ಪರಮಪವಿತ್ರವಾದ ಶ್ರೀವೇಂಕಟಾದ್ರಿಶುಚಿಕ್ಷೇತ್ರದಲ್ಲಿ ಅಶುಚಿಯೆಂಬ ದೋಷವು ಇರುವದಿಲ್ಲ. (11) ಆದ್ದರಿಂದ ಶ್ರೀಮದ್ವೇಂಕಟೇಶನ ನೈವೇದ್ಯವು ಗ್ರಾಹ್ಯವೇ ಆಗಿರುವದು. ಆ ಉತ್ತಮವಾದ ನೈವೇದ್ಯ ಸ್ವೀಕಾರದಿಂದ

ಅನಾದ್ಯನಂತೋ ವಚಸಾಽನಿರುಕ್ತಃ
ಸದಾಶ್ರಯೋ ದೇವವರೋ ವರೇಣ್ಯಃ ॥13॥

ನಿತ್ಯಂ ಬ್ರಹ್ಮಾ ಶಿವಃ ಶೇಷಗರುಡೇಂದ್ರಾದಯೋಽಮರಾಃ ।
ಪೂಜಯಂತಿ ಮಹಾಭಕ್ತ್ಯಾ ವೇಂಕಟೇಶಂ ಶ್ರಿಯಾ ಸಹ ॥14॥

ಚರಾಚರಗುರುರ್ದೇವಃ ಸರ್ವಸಾಕ್ಷೀ ಮಹೇಶ್ವರಃ ।
ಜಪ್ಯಸ್ತಪ್ಯೋಽರ್ಚನೀಯಶ್ಚ ಸ್ಮರ್ಯೋ ಧ್ಯೇಯೋಽಖಿಲೈರಪಿ ॥15॥

ತನ್ಮನಾಸ್ತದ್ಗತಪ್ರಾಣೋ ಭಕ್ತ್ಯಾ ತನ್ನಾಮ ಸಂಸ್ಮರೇತ್ ।
ಗೊದಾನಾನ್ಯಶ್ವಮೇಧಾದ್ಯಾಃ ಕನ್ಯಾದಾನಾನ್ಯಸಂಖ್ಯಯಾ ॥16॥

ಅಸಂಖ್ಯಮೇರುಸೌವರ್ಣದಾನಾನ್ಯನ್ಯಾನ್ಯನೇಕಶಃ ।
ತ್ವನ್ನಾಮಸ್ಮೃತ್ಯತುಲ್ಯಾನಿ ಮಹಾತ್ಮ್ಯಂ ಕಿಮುತಾದ್ಭುತಮ್ ॥17॥

ಜನರಿಗೆ ಕ್ಷೇಮವಾಗುವದು. ಸ್ವೀಕರಿಸದಿದ್ದರೆ ವಿಪರೀತ ಫಲವುಂಟಾವಾಗುವದು. 'ವೇಂಕಟಾಗೇ ಶುಚಿಕ್ಷೇತ್ರೇಽಶುಚಿದೋಷೋ ನ ವಿದ್ಯತೇ' ಎಂಬ ಪಾಠವೂ ಇಲ್ಲಿ ಕಂಡುಬರುವದು. (12) ಶ್ರೀವೇಂಕಟೇಶ್ವರನು ಜೀವ-ಜಡಾತ್ಮಕವಾದ ಚರಾಚರಪ್ರಪಂಚಕ್ಕೆ ಸೃಷ್ಟಿ-ಸ್ಥಿತಿ-ಸಂಹಾರ-ನಿಯಮನ-ಜ್ಞಾನ- ಅಜ್ಞಾನ-ಬಂಧ-ಮೋಕ್ಷಪ್ರದನಾಗಿದ್ದಾನೆ. ಸತ್ವರಜಸ್ತಮೋಗುಣಗಳ ಲವಲೇಶ ಆತನಲ್ಲಿ ಇಲ್ಲದ್ದಿರೂ ಅವುಗಳನ್ನು ಧಾರಣ ಮಾಡಿದ್ದಾನೆ. ಅನಾದಿಯೂ, ಅನಂತನೂ ಆದ ಶ್ರೀಹರಿಯು ಲೌಕಿಕ ಅಥವಾ ವೈದಿಕವಾಕ್ಯಗಳಿಂದ ಸಂಪೂರ್ಣವಾಗಿ ನಿರ್ವಚನ ಮಾಡಲು ಅಶಕ್ಯನಾಗಿದ್ದಾನೆ. ಇಂತಹ ಸ್ವಾಮಿಯು ಸರ್ವರಿಗೂ ಯಾವಾಗಲೂ ಆಶ್ರಯದಾತನಾಗಿದ್ದಾನೆ. ಬ್ರಹ್ಮಾದಿ ದೇವತೆಗಳಿಗೆ ವರಪ್ರದನಾಗಿದ್ದಾನೆ. ದೇವಶ್ರೇಷ್ಠನಾಗಿ ಸರ್ವರಿಂದಲೂ ಸಂಪ್ರಾರ್ಥ್ಯನಾಗಿರುತ್ತಾನೆ. (13) ನಿತ್ಯದಲ್ಲಿಯೂ ಚತುರ್ಮುಖ ಬ್ರಹ್ಮದೇವರು, ರುದ್ರದೇವರು ಮತ್ತು ಶೇಷಗರುಡೇಂದ್ರಾದಿ ಸಮಸ್ತ ದೇವತೆಗಳೂ ಮಹಾಲಕ್ಷ್ಮೀದೇವಿಯಿಂದ ಸಹಿತವಾದ ಶ್ರೀನಿವಾಸ ದೇವರನ್ನು ಅತ್ಯಂತ ಭಕ್ತಿಯಿಂದ ಪೂಜಿಸುತ್ತಾರೆ. (14) ಜೀವಜಡಾತ್ಮಕ ವಾದ ಪ್ರಪಂಚಕ್ಕೆ ಶ್ರೀನಿವಾಸನು ಗುರುವಾಗಿದ್ದಾನೆ. ಜಗತ್ತಿನ ಸಕಲವ್ಯಾಪಾರಗಳನ್ನೂ ಪ್ರತ್ಯಕ್ಷವಾಗಿ ನೋಡುತ್ತಿರುವನು. ದೇವಾದಿದೇವತೆಗಳಿಗೆ ನಿಯಾಮಕ ನಾಗಿರುವನು. ಸರ್ವರಿಂದಲೂ ಜಪ್ಯನೂ, ತಪ್ಯನೂ, ಅರ್ಚನೀಯನೂ, ಸ್ಮರ್ಯನೂ ಹಾಗೂ ಧ್ಯೇಯನೂ ಆಗಿರುತ್ತಾನೆ.(15) ಶ್ರೀನಿವಾಸನಲ್ಲಿಯೇ ಮನಸ್ಸುಳ್ಳವನಾಗಿ, ಶ್ರೀನಿವಾಸನಲ್ಲಿಯೇ ಸಮರ್ಪಿತವಾದ ಇಂದ್ರಿಯವುಳ್ಳವನಾಗಿ ಪರಮಭಕ್ತಿಯಿಂದ ಆತನ ನಾಮವನ್ನು ಸ್ಮರಿಸಬೇಕು. ಅಸಂಖ್ಯ ಕನ್ಯಾದಾನ, ಭೂದಾನ, ಗೋದಾನ, ಮೇರುಪರ್ವತಕ್ಕಿಂತ ಹೆಚ್ಚಾದ ಸುವರ್ಣದಾನ, ಜ್ಯೋತಿಷ್ಟೋಮಾದಿ ಅನೇಕ ಯಾಗಗಳೂ ಈ ಪರಮಾತ್ಮನ ನಾಮಸ್ಮರಣೆಗೆ ಸಮಾನವಾಗಲಾರವು.

ಇತಿ ಶೇಷೇಣ ಕಥಿತಂ ಕಪಿಲಾಯ ಮಹಾತ್ಮನೇ ।
ಕಪಿಲಾಖ್ಯಮಹಾಯೋಗಿಸಕಾಶಾತ್ತು ಮಯಾ ಶ್ರುತಮ್ ॥18॥

ತದುಕ್ತಂ ಭವತಾಮದ್ಯ ಸದ್ಯಃ ಪ್ರೀತಿಕರಂ ಹರೇಃ ।
ಅತೋ ವೋ ಮಂಗಲಾರ್ಥಂ ಚ ಶೃಣುಧ್ವಂ ಯನ್ಮಯೋಚ್ಯತೇ ॥19॥

ಶ್ರೀವೇಂಕಟೇಶಯಾತ್ರಾರ್ಥಂ ಗಚ್ಛಧ್ವಂ ಸುದೃಢವ್ರತಾಃ ।
ವಿಷ್ಣುಸಂದರ್ಶನಂ ಕೃತ್ವಾ ಭಕ್ತಿಮಂತೋ ಜಿತೇಂದ್ರಿಯಾಃ. ॥20॥

ಸ್ತೋತ್ರಂ ಕುರುಧ್ವಂ ಬಹಧಾ ಭಗವದ್ಗುಣವರ್ಣನೈಃ ।
ಸ್ವಗುಣೋತ್ಕರ್ಷವಿಜ್ಞಾನಾದ್ಯಥಾ ಪ್ರೀತಿರ್ನಿಜೇ ಹರೇಃ ॥21॥

ನ ತಾದೃಶೀ ಪ್ರೀತಿರಸ್ತಿ ಹ್ಯಜ್ಞಾನಾದನ್ಯಥಾ ಮತೌ ।
ಭಕ್ತ್ಯಾ ಸ್ತೋತ್ರೇಣ ಸಂತುಷ್ಟಃ ಸರ್ವೇಷ್ಟಾನಿ ಪ್ರವರ್ಷತಿ ॥22॥

ಭಕ್ತಿಸ್ತೋತ್ರಾದಿಹೀನೇಷು ದಯಾವಾನ್ ನ ಭವೇತ್ತಥಾ ।
ಅತ್ರ ವಃ ಕಥಯಾಮೀಷ್ಟಂ ಇತಿಹಾಸಂ ಪುರಾತನಮ್ ॥23॥

ಆದ್ದರಿಂದ ಶ್ರೀನಿವಾಸನ ಮಾಹಾತ್ಮೆಯು ಅದ್ಭುತವೆಂದು ಹೇಳುವದರಲ್ಲಿ ಯಾವ ಸಂದೇಹವೂ ಇರುವದಿಲ್ಲ.(16–17) ಇಂತಹ ಭಗವನ್ಮಾಹಾತ್ಮ್ಯವು ಶೇಷದೇವರಿಂದ ಕಪಿಲ ಮಹರ್ಷಿಗಳಿಗೆ ಉಪದೇಶಿಸಲ್ಪಟ್ಟಿತು. ಕಪಿಲ ಮುನಿಗಳಿಂದ ನನಗೆ ಶ್ರುತವಾಯಿತು (ನಾನು ಕೇಳಿದೆನು). ಮಂಗಳಕರವಾದ ಶ್ರೀಹರಿಪ್ರೀತಿಕರವಾದ ಆ ಮಾಹಾತ್ಮೆಯನ್ನೇ ಈಗ ನಾನು ನಿಮಗೆ ಹೇಳುತ್ತೇನೆ. ಆದ್ದರಿಂದ ನಿಮ್ಮ ಕಲ್ಯಾಣಕ್ಕಾಗಿ ನನ್ನಿಂದ ಹೇಳಲ್ಪಡುತ್ತಿರುವ ಈ ಮಹಾತ್ಮೆಯನ್ನು ತಾವುಗಳು ಕೇಳಿರಿ.(19) ದೃಢವಾದ ವ್ರತಾಚರಣೆಯುಳ್ಳವರಾಗಿ, ಭಕ್ತಿಯಿಂದ ಕೂಡಿಕೊಂಡು ಜಿತೇಂದ್ರಿಯರಾಗಿ ಶ್ರೀವೇಂಕಟೇಶನ ಯಾತ್ರಾರ್ಥವಾಗಿ ಹೋಗಿರಿ. ಅಲ್ಲಿ ಪರಮಾತ್ಮನ ದರ್ಶನವನ್ನು ಪಡೆದು ಭಗವದ್ಗುಣವರ್ಣನೆಗಳಿಂದ ಅನೇಕ ವಿಧವಾಗಿ ಆತನ ಸ್ತೋತ್ರವನ್ನು ಮಾಡಿರಿ. ಭಕ್ತಜನರಲ್ಲಿ ಪರಮಾತ್ಮನು ತನ್ನ ಗುಣಮಾಹಾತ್ಮೆ, ಸರ್ವೋತ್ತಮತ್ವಜ್ಞಾನದಿಂದ ಯಾವ ಪ್ರೀತಿಯನ್ನು ಮಾಡುವನೋ, ಅಂತಹ ಪ್ರೀತಿಯನ್ನು ತನ್ನ ಭಕ್ತರಾಗಿದ್ದರೂ ಸರ್ವೋತ್ತಮಜ್ಞಾನವಿಲ್ಲದವರಲ್ಲಿ ಅಥವಾ ಅನ್ಯಥಾ ಜ್ಞಾನವುಳ್ಳವರಲ್ಲಿ ಮಾಡುವದಿಲ್ಲ. ಭಕ್ತಿಯಿಂದ ಸಂತುಷ್ಟನಾದ ಶ್ರೀವೇಂಕಟೇಶನು ಸರ್ವಾಭೀಷ್ಟಗಳನ್ನು ಕೊಡುತ್ತಾನೆ. ಭಕ್ತಿ ಸ್ತೋತ್ರವಿಹೀನ ರಾದವರಲ್ಲಿ ಭಗವಂತನು ಕೃಪೆಮಾಡುವದಿಲ್ಲ. ಈ ವಿಷಯದಲ್ಲಿ ಪುರಾತನವಾದ ಇತಿಹಾಸವನ್ನು ಹೇಳುತ್ತೇನೆ. ಇಷ್ಟವಾದುದನ್ನು ಕೇಳಿರಿ. (18–23) ವಾಯುದೇವರ ಸ್ಮರಣ ಮಾತ್ರದಿಂದ ಭಗವಂತನ ಪಾದಾರವಿಂದಗಳಲ್ಲಿ ಭಕ್ತಿಯುಂಟಾಗುವದು. ಅಂತಹ ವಾಯುದೇವರ ಶಿಷ್ಯನು ದೇವಶರ್ಮ ಎಂಬುವವನಿದ್ದನು.

ಯಸ್ಯ ಸ್ಮರಣಮಾತ್ರೇಣ ಭಕ್ತಿರ್ವಿಷ್ಣುಪದಾಂಬುಜೇ ।
ವಾಯುಶಿಷ್ಯೋ ದೇವಶರ್ಮಾ ವಿಷ್ಣುಭಕ್ತೋ ಜಿತೇಂದ್ರಿಯಃ ॥24॥

ತಪಸ್ವೀ ಬಹುನಿಷ್ಠಾವಾನ್ ಸರ್ವದಾ ವಿಷ್ಣುಚಿಂತನೇ ।
ಮಮತಾಽಹಂಕಾರವರ್ಜ್ಯೋ ವಿಷಯೇಷು ವಿರಾಗವಾನ್ ॥25॥

ಷಟ್‌ಶತ್ರುವಿಜಯೀ ಶಾಂತಃ ಷಟ್ತರಂಗಸುಭಂಗಕೃತ್ ।
ಕುಟುಂಬೇ ನ ಮನಃಕಾರೀ ದಾರಿದ್ರ್ಯಾತ್ಪೀಡಿತೋಽಪಿ ಚ ॥26॥

ಭಾರ್ಯಯಾ ಪ್ರಾರ್ಥಿತೋ ನಿತ್ಯಂ ದಾರಿದ್ರ್ಯಾಪಗಮೇಚ್ಛಯಾ ।
'ಭೋ ನಾಥ ಹೇ ಪತೇ ಸ್ವಾಮಿನ್ ಪ್ರಸೀದ ಕರುಣಾಕರ ॥27॥

ಕ್ಷುಧಯಾ ಪೀಡಿತಾ ಬಾಲಾ ತವ ಪುತ್ರಾಶ್ಚ ಕೇವಲಮ್ ।
ನ ಶಕ್ತಾಽಹಮರಣ್ಯೇಷು ಕಂದಮೂಲಾರ್ಜನಾದಿಷು ॥28॥

ರಕ್ಷಕೋ ಮಮ ನಾನ್ಯೋಽಸ್ತಿ ಶಿಶೂನಾಂ ಪಾಲನೇಽಪಿ ಚ ।
ಕೃಪಾಂ ಕುರುಷ್ವ ಶಿಶುಷು ವಿಜ್ಞಾಪನಮಿದಂ ಶೃಣು ॥29॥

ಈತನು ಮಹಾವಿಷ್ಣುಭಕ್ತ. ಇಂದ್ರಿಯ ನಿಗ್ರಹವುಳ್ಳವ. ಅತ್ಯಂತ ತಪಸ್ವೀ. ಯಾವಾಗಲೂ ಪರಮಾತ್ಮನ ಚಿಂತೆಯಲ್ಲಿಯೇ ನಿಷ್ಠೆಯುಳ್ಳವನು. ನಾನು, ನನ್ನದು ಎಂಬ ಮಮತಾ–ಅಹಂಕಾರ ವರ್ಜ್ಯನು. ವಿಷಯಗಳಲ್ಲಿ ವೈರಾಗ್ಯಬುದ್ಧಿಯುಳ್ಳವನು. ಕಾಮ, ಕ್ರೋಧ, ಮದ, ಮತ್ಸರ, ಲೋಭ, ಮೋಹಾದಿ ಅರಿಷಡ್ವರ್ಗಗಳನ್ನು ಗೆದ್ದವನು. ಅತ್ಯಂತ ಶಾಂತನು, ಉತ್ಪತ್ತಿ (ಗರ್ಭವಾಸ)– ಜನನ – ಅಭಿವೃದ್ಧಿ– ಪರಿಣಾಮ–ವಾರ್ಧಕ್ಯ–ವಿನಾಶಗಳೆಂಬ ಷಟ್ ತರಂಗಗಳಿಗೆ ಭಂಗವನ್ನುಂಟು ಮಾಡುವ ಸಾಮರ್ಥ್ಯವುಳ್ಳವನು. ದಾರಿದ್ರ್ಯದಿಂದ ಪೀಡಿತನಾಗಿದ್ದರೂ ಸಹ ಕುಟುಂಬಭರಣದಲ್ಲಿ ಹೆಚ್ಚಿನ ಆಸಕ್ತಿಯನ್ನು ವಹಿಸಿದವನಲ್ಲ. (24–26) ದಾರಿದ್ರ್ಯಹರಣಕ್ಕಾಗಿ ತಮ್ಮ ಪತ್ನಿಯಿಂದ ಪ್ರತಿನಿತ್ಯದಲ್ಲಿಯೂ ಪ್ರಾರ್ಥಿತ ನಾಗಿದ್ದನು. ಒಂದು ಸಲ ಅವನ ಪತ್ನಿಯು ಹೀಗೆ ಹೇಳಿದಳು– 'ತಪೋ ಬಲದಿಂದ ಸರ್ವ ಸಮರ್ಥನಾದ ಹೇ ಸ್ವಾಮಿಯೇ! ಕರುಣಾಶಾಲಿಯೇ! ಪತಿಯೇ ! ನಮ್ಮ ಮೇಲೆ ಪ್ರಸನ್ನನಾಗು. ತಮ್ಮ ಮಕ್ಕಳೇ ಆದ ಈ ನನ್ನ ಬಾಲಕರು ಹಸಿವೆಯಿಂದ ಬಳಲುತ್ತಿದ್ದಾರೆ. ಅರಣ್ಯಕ್ಕೆ ಹೋಗಿ ಕಂದಮೂಲಾದಿಗಳನ್ನು ತರುವದರಲ್ಲಿ ನಾನು ಅಶಕ್ತಳಾಗಿದ್ದೇನೆ. ಶಿಶುಗಳ ಪಾಲನೆಯಲ್ಲಿ ನನಗೆ ತಮ್ಮಿಂದ ವ್ಯತಿರಿಕ್ತವಾದ ಬೇರೊಬ್ಬ ರಕ್ಷಕರು ಇಲ್ಲ. ಆದ್ದರಿಂದ ಶಿಶುಗಳಲ್ಲಿಯ ಕೃಪಾದೃಷ್ಟಿಯಿಂದ ನನ್ನ ವಿಜ್ಞಾಪನೆಗಳನ್ನು ಕೇಳಿರಿ– ನಮ್ಮ ಕುಲದೇವರೂ, ನಮಗೆ ಇಷ್ಟಪ್ರದರೂ, ಜಗತ್ತಿನ ರಕ್ಷಣೆಯಲ್ಲಿ ದೀಕ್ಷಾಬದ್ಧನಾಗಿ ಶರಣಾಗತರಕ್ಷಕನಾದ ಶ್ರೀನಿವಾಸನು

ಕುಲಸ್ವಾಮೀಷ್ಟದೇವೋ ನೋ ಜಗದ್ರಕ್ಷಣದೀಕ್ಷಿತಃ ।
ಶರಣಾಗತಸಂತ್ರಾಣಃ ಶ್ರೀನಿವಾಸಃ ಸತಾಂ ಗತಿಃ ॥30॥

ಪಾಲಕೋ ಹಿ ಬಹೂನಾಂ ಚ ಭಕ್ತಾನಾಂ ಭಕ್ತವತ್ಸಲಃ ।
ತಲ್ಲಕ್ಷ್ಮೀಪತಿಪಾದಾಬ್ಜಂ ಗತ್ವಾ ತತ್ಪ್ರಾರ್ಥನಾಂ ಕರು ॥31॥

ತೇನ ಪ್ರೀತೋ ಭವೇತ್ಸದ್ಯಃ ತತೋಽಸ್ಮಜ್ಜೀವನಂ ಭವೇತ್ ।
ಪ್ರಸೀದ ತ್ವಂ ದಯಾಸಿಂಧೋ ದಯಾಂ ಕುರು ದಯಾಂ ಕುರು' ॥32॥

ಇತಿ ದೈನ್ಯೇನ ಮಹತಾ ಪ್ರಾರ್ಥಿತೋಽಹರ್ನಿಶಂ ತಯಾ ।
ನ ಸ್ವೀಚಕಾರ ತದ್ವಾಕ್ಯಂ ತಪೋವಿಘ್ನಭಯಾತ್ತದಾ ॥33॥

ದಿಷ್ಟ್ಯಾ ಚಾದೃಷ್ಟಪಾಕೇನ ತದ್ಗುರುರ್ವಾಯುರಾಗಮತ್ ।
ಪತಿವ್ರತಾಯಾಂ ಶಿಶುಷು ಪ್ರಸನ್ನಃ ಕರುಣಾನಿಧಿಃ ॥34॥

ತಪೋಽವಸಾನೇ ಸಂಪ್ರಾಪ್ತಂ ಸ್ವಗುರುಂ ಜಗತಾಂ ಗುರುಮ್ ।
ದೃಷ್ಟ್ವಾ ಮುದಾ ದೇವಶರ್ಮಾ ಸಹಸೋತ್ಥಾಯ ಚಾದರಾತ್ ॥35॥

ಸಜ್ಜನರಿಗೆ ಆಶ್ರಯನು. (27–30) ಭಕ್ತವತ್ಸಲನಾದ ಮಹಾಸ್ವಾಮಿಯು ಬಹಳವಾಗಿ ಭಕ್ತರನ್ನು ರಕ್ಷಿಸುತ್ತಾನೆ. ಅಂತಹ ಶ್ರೀನಿವಾಸನ ಪಾದಾರವಿಂದಗಳನ್ನು ಹೊಂದಿ ಅವನನ್ನು ಪ್ರಾರ್ಥಿಸಿರಿ. .(31) ಇದರಿಂದ ಅತಿ ಶಿಘ್ರದಲ್ಲಿ ಸ್ವಾಮಿಯು ಸಂತುಷ್ಟನಾಗುವನು. ಸಂತುಷ್ಟನಾದ ಆ ಸ್ವಾಮಿಯ ಅನುಗ್ರಹದಿಂದ ನಮ್ಮ ಜೀವನವು ಸಾಗುವದು. ಆದುದರಿಂದ ದಯಾಸಾಗರರಾದ ಸ್ವಾಮಿಯೇ ! ನಮ್ಮಲ್ಲಿ ದಯೆಮಾಡಿರಿ, ಕೃಪೆಮಾಡಿರಿ. (32) ಈರೀತಿಯಾಗಿ ಬಹು ಪ್ರಯಾಸ (ದುಃಖ)ದಿಂದ ತನ್ನ ಪತ್ನಿಯಿಂದ ದೇವಶರ್ಮನು ಹಗಲು ರಾತ್ರಿ ಪ್ರಾರ್ಥಿಸಿಗೊಳ್ಳಲ್ಪಟ್ಟರೂ ಸಹ ತಪಸ್ಸಿಗೆ ವಿಘ್ನ ಉಂಟಾಗುವದೆಂಬ ಭಯದಿಂದ ಅವಳ ಪ್ರಾರ್ಥನೆಯನ್ನು ಸ್ವೀಕರಿಸಲಿಲ್ಲ. ಅದೇ ಸಂದರ್ಭದಲ್ಲಿ ದಾರಿದ್ರ್ಯಪರಿಹಾರಕಾಲವು ಪಕ್ವವಾದುದರಿಂದ, ದೈವಯೋಗದಿಂದ ದೇವಶರ್ಮನ ಗುರುಗಳಾದ ವಾಯುದೇವರು ಪತಿವ್ರತೆಯಾದ ತಮ್ಮ ಶಿಷ್ಯನ ಪತ್ನಿ ಹಾಗೂ ಮಕ್ಕಳಲ್ಲಿ ಪ್ರಸನ್ನರೂ, ದಯಾದೃಷ್ಟಿಯುಳ್ಳವರೂ ಆದವರಾಗಿ ಅಲ್ಲಿಗೆ ಆಗಮಿಸಿದರು. ತಪಸ್ಸಿನ ಅವಸಾನಕಾಲದಲ್ಲಿ ಅಲ್ಲಿಗೆ ಬಂದ ಜಗದ್ಗುರುಗಳಾದ ಹಾಗೂ ತನ್ನ ಗುರುಗಳಾದ ವಾಯುದೇವರನ್ನು ಕಂಡು ದೇವಶರ್ಮನು ಅತಿ ಸಂತೋಷದಿಂದ ತತ್‌ಕ್ಷಣವೇ ಎದ್ದು ನಿಂತು, ಸಾಷ್ಟಂಗಪ್ರಣಾಮವನ್ನು ಮಾಡಿ ಕೈಜೋಡಿಸಿಕೊಂಡು ನಿಂತುಕೊಂಡನು. ಅನಂತರ ವಾಯುದೇವರು ಹಿತಕರವಾದ ಈ ಮಧುರವಚನವನ್ನು ತಮ್ಮ ಶಿಷ್ಯನನ್ನು ಕುರಿತು ಹೇಳಿದರು. (33–36) 'ಶ್ರೀಮದ್ವೇಂಕಟೇಶ್ವರನ ಯತ್ರೆಗಾಗಿ ನೀನು ಇಲ್ಲಿಂದ ಅತಿಶೀಘ್ರವಾಗಿ ಹೊರಡು. ಆ ದೇವರ ಪ್ರಸಾದದಿಂದ ಈ

ಸಾಷ್ಟಾಂಗಂ ತಂ ಪ್ರಣಮ್ಯಾರ್ಚ್ಯ ಬದ್ಧಾಂಜಲಿಪುಟೋಽಭವತ್ ।
ತತೋ ವಾಯುಃ ಪ್ರಾಹ ಶಿಷ್ಯಂ ಮಧುರಂ ವಚನಂ ಹಿತಮ್ ॥36॥

'ಶ್ರೀಮದ್ವೇಂಕಟನಾಥಸ್ಯ ಯಾತ್ರಾರ್ಥಂ ಗಚ್ಛ ಮಾ ಚಿರಮ್ ।
ತೇನೇಹಾಮುತ್ರ ತೇಽಭೀಷ್ಟಸಿದ್ಧಿರ್ಭವತಿ ನಾನ್ಯಥಾ ॥37॥

ಲಕ್ಷ್ಮೀಪತೇರ್ದಯಾಸಿಂಧೋಃ ಬ್ರಹ್ಮಾದಿವರದಾಯಿನಃ ।
ಯಾತ್ರಾಯಾಂ ಮಾಽಸ್ತು ಸಂದೇಹಃ ಶೀಘ್ರಂ ಗಚ್ಛ ಸುಭಕ್ತಿಮನ್' ॥38॥

ಇತಿ ದೇವಾದ್ಯುತ್ತಮೇನ ಗುರುಣಾ ವಾಯುನೇರಿತಃ ।
ಮುಹುರ್ಮುಹುರ್ಬೋಧಿತೋಽಥ ವಿಷ್ಣುಯಾತ್ರಾಮಹಾದರಃ ॥39॥

ಗುರೂಕ್ತಮರ್ಥಂ ಜಗ್ರಾಹ ಗುರುವಾಕ್ಯೇ ಸದಾ ರತಃ ।
ಗುರೂಪದೇಶೋ ಬಲವಾನ್ ಗುರೋರಾಜ್ಞಾಂ ನ ಲಂಘಯೇತ್ ॥40॥

ಇತ್ಯರ್ಥಮನುಸಂಧಾಯ ಪ್ರತಸ್ಥೇ ಶೇಷಪರ್ವತಮ್ ।
ತತ್ರ ಶ್ರೀವೇಂಕಟೇಶಸ್ಯ ಸಂದರ್ಶನಮಹಾದರಃ ॥41॥

ಆನಂದಜ್ಞಾನದಂ ವಿಷ್ಣುಂ ಆನಂದಮಯನಾಮಕಮ್ ।
ಆನಂದೇನ ದದರ್ಶಾಯಂ ಆನಂದನಿಲಯಾಲಯೇ ॥42॥

ಲೋಕ, ಈ ಸಂಸಾರ ಹಾಗೂ ಪರಲೋಕ ಎರಡರಲ್ಲಿಯೂ ಅಭೀಷ್ಟಸಿದ್ಧಿಯಾಗುತ್ತದೆ. ಇದಕ್ಕೆ ವ್ಯತಿರಿಕ್ತವಾದರೆ ವಿಪರೀತವಾಗುವದು. ದಯಾಸಾಗರನೂ, ಬ್ರಹ್ಮಾದಿ ದೇವತೆಗಳಿಗೆ ವರದಾಯಕನೂ ಆದ ಲಕ್ಷ್ಮೀಪತಿಯ ಯಾತ್ರೆಯ ವಿಷಯದಲ್ಲಿ ಸಂದೇಹವೇ ಬೇಡ. ಭಕ್ತಿಯುತನಾಗಿ ಶಿಘ್ರವೇ ಹೊರಡು'. (37–38) ಈ ಪ್ರಕಾರಕವಾಗಿ ದೇವೋತ್ತಮರಾದ, ಗುರುಗಳಾದ ವಾಯುದೇವರಿಂದ ಆಜ್ಞಪ್ತನಾಗಿ, ಮೇಲಿಂದ ಮೇಲೆ ಬೋಧಿತನಾದವನಾಗಿ ಶ್ರೀವೇಂಕಟೇಶ್ವರನ ಯಾತ್ರೆಯ ವಿಷಯದಲ್ಲಿ ಮಹಾದರವುಳ್ಳವನಾದ, ದೇವಶರ್ಮನು ಗುರುಗಳಿಂದ ಉಕ್ತವಾದ ವಿಷಯವನ್ನು ಸ್ವೀಕಾರಮಾಡಿ, ಗುರುಗಳ ವಾಕ್ಯದಲ್ಲಿಯೇ ಯಾವಾಗಲೂ ಆಸಕ್ತಿಯುಳ್ಳ ವನಾದನು. ಗುರೂಪದೇಶವು ಅತ್ಯಂತ ಬಲಿಷ್ಠವಾದುದು. ಆದ್ದರಿಂದ ಗುರುಗಳ ಆಜ್ಞೆಯನ್ನು ಸರ್ವಥಾ ಮೀರಬಾರದು. ಈ ಪ್ರಕಾರಕವಾಗಿ ಅನುಸಂಧಾನ ಮಾಡಿಕೊಂಡು ಶೇಷಾಚಲವನ್ನು ಕುರಿತು ಪ್ರಯಾಣ ಮಾಡಿದನು. ಅಲ್ಲಿ ಶ್ರೀವೇಂಕಟೇಶ್ವರನ ದರ್ಶನದಲ್ಲಿ ಮಹಾ ಆದರವುಳ್ಳವನಾದನು. (39–41) ಅಪರಿಮಿತವಾದ ಆನಂದ ಹಾಗೂ ಜ್ಞಾನಗಳನ್ನು ಕರುಣಿಸುವ, ಆನಂದಮಯಶಬ್ದವಾಚ್ಯನಾದ, 'ಆನಂದ ನಿಲಯ' ವೆಂದು ಪ್ರಸಿದ್ಧವಾದ ವೇಂಕಟಗಿರಿಯಲ್ಲಿ ಅತ್ಯಾನಂದದಿಂದ ಶ್ರೀಭೂವಿರಾಜಿತನಾಗಿ ಕ್ರೀಡಾಸಕ್ತನಾದ

ವಿಹರಂತಂ ಶ್ರೀಧರಾಭ್ಯಾಂ ನಾನಾಲೀಲಾವಿಲಾಸಿನಮ್ ।
ಭಕ್ತದರ್ಶನಮಾತ್ರೇಣ ಪ್ರಸನ್ನಂ ಮಂದಹಾಸಿನಮ್ ॥
ಶ್ರೀವೇಂಕಟೇಶಂ ತಂ ನತ್ವಾ ಭಕ್ತ್ಯಾ ಚಕ್ರೇಽಥ ಸಂಸ್ತುತಿಮ್ ॥43॥

ದೇವಶರ್ಮೋವಾಚ–

ದಯಾನಿಧೇ ದಯಾನಿಧೇ ದಯಾನಿಧೇ ದಯಾನಿಧೇ ।
ನಮೋ ನಮೋ ನಮೋ ನಮೋ ನಮೋ ನಮೋ ನಮೋ ನಮಃ॥

ಶ್ರೀಪದ್ಮನಾಭ ಪದ್ಮೇಶ ಪದ್ಮಜೇಶೇಂದ್ರವಂದಿತ ।
ಪದ್ಮಮಾಲಿನ್ ಪದ್ಮನೇತ್ರ ಪದ್ಮಾಭಯದರಾರಿಭೃತ್ ॥45॥

ಪದ್ಮಪಾಣೇ ಪದ್ಮಪಾದ ಸರ್ವಹೃತ್ಪದ್ಮಸಂಸ್ಥಿತ ।
ತ್ವತ್ಪಾದಪದ್ಮಯುಗಲಂ ಪ್ರಣಮಾಮ್ಯತಿಸುಂದರಮ್ ॥46॥

ತ್ವತ್ಪಾದಪದ್ಮಮಾಹಾತ್ಮ್ಯಮಪ್ಯನಂತಂ ತ್ರಿವಿಕ್ರಮಮ್ ।
ಯತ್ಕನಿಷ್ಠಾಂಗುಲಿನಖಮಣ್ಯಗ್ರಗುಣಸಂಗತಾನ್ ॥47॥

ನಾನಾವಿಧವಾದ ಲೀಲಾ ವಿಲಾಸವುಳ್ಳ, ಭಕ್ತದರ್ಶನಮಾತ್ರದಿಂದ ಮಂದಹಾಸದಿಂದ ಕೂಡಿದ ಶ್ರೀಮದ್ವೇಂಕಟೇಶ್ವರನನ್ನು ಭಕ್ತಿಯಿಂದ ನಮಸ್ಕರಿಸಿ, ಈ ರೀತಿಯಾಗಿ ಸ್ತೋತ್ರಮಾಡಿದನು. (42–43) ದಯಾನಿಧಿಯಾದ ಹೇ ಶ್ರೀವೇಂಕಟೇಶನೇ ! ನಿನಗೆ ಪುನಃ ಪುನಃ ನಮಸ್ಕಾರವು. ನೀನು ಸಾಮಾನ್ಯನಲ್ಲ. ಲಕ್ಷ್ಮೀಬ್ರಹ್ಮರುದ್ರೇಂದ್ರಾದಿಸಕಲದೇವತೆಗಳಿಂದ ವಂದಿತನು. ಪದ್ಮಮಯವಾದ ವನಮಾಲಾವಿಭೂಷಿತನು. ಪದ್ಮದಂತೆ ನೇತ್ರಗಳುಳ್ಳವನು. ಪದ್ಮ, ಅಭಯಮುದ್ರೆ, ಶಂಖ, ಚಕ್ರಗಳನ್ನು ನಿನ್ನ ನಾಲ್ಕು ಕೈಗಳಲ್ಲಿಯೂ ಧರಿಸಿದವನು. ಕಮಲದಂತೆ ಕೈಗಳೂ ಹಾಗೂ ಪಾದಗಳುಳ್ಳ ನೀನು ಸರ್ವರ ಹೃದಯಕಮಲದಲ್ಲಿ ಸಂಸ್ಥಿತನಾಗಿರುವಿ. ಅಂತಹ ಸುಂದರವಾದ ಕೋಮಲವಾದ ನಿನ್ನ ಪಾದಾರವಿಂದಯುಗಲವನ್ನು ಭಕ್ತಿಪೂರ್ವಕವಾಗಿ ನಮಿಸುತ್ತೇನೆ. (44–46) ನಿನ್ನ ಪಾದಕಮಲಗಳ ಮಾಹಾತ್ಮೆಯು ಅನಂತವಾಗಿದೆ. ಅತ್ಯಂತವಿಸ್ತಾರ ಹಾಗೂ ವಿಕ್ರಮೋಪೇತವಾಗಿದೆ. ನಿನ್ನ ಪಾದದ ಕನಿಷ್ಠ ಅಂಗುಲಿಯ ಉಗುರೆಂಬ ಮಾಣಿಕ್ಯದ ಅಗ್ರಭಾಗದಲ್ಲಿರುವ ಗುಣಸಮೂಹಗಳನ್ನು ಅನಂತವಿಶೇಷ ಗಳಿಂದ ಕೂಡಿಕೊಂಡು ಅನಂತವಾದವುಗಳನ್ನು ನಿರಂತರದಲ್ಲಿಯೂ ನೋಡುತ್ತಿರುವ ಶ್ರೀಲಕ್ಷ್ಮೀದೇವಿಯು ಅನಂತವೇದಗಳಿಗೆ ಅಗೋಚರವಾದ ಭಗವದ್ಗುಣಗಳನ್ನು ಸ್ತುತಿಸಲು ಇಚ್ಛಿಸಿ, ಅತಿ ಸಂತೋಷದಿಂದ ನಿರಂತರವಾಗಿ ಎಣಿಸುತ್ತಲೇ ಅತಿಗಹನವಾದ ಆಶ್ಚರ್ಯಸಾಗರದಲ್ಲಿ ಮುಳುಗುವವಳಾದಳು. ಪುತ್ರವಾತ್ಸಲ್ಯದಿಂದ ಇತರರಿಗೆ ಅಸಾಧ್ಯವಾದ ಜ್ಞಾನೋಪದೇಶವನ್ನು ನಿನ್ನಿಂದಲೇ ಪಡೆದ ದೇವಶ್ರೇಷ್ಠನಾದ ಚತುರ್ಮುಖ

ಅನಂತಾನ್ ಸುವಿಶೇಷಾಂಶ್ಚ ಪಶ್ಯಂತೀ ಶ್ರೀರ್ನಿರಂತರಮ್ ।
ಸ್ತೋತುಕಾಮಾऽಕ್ಷೀಣದೀಕ್ಷಾ ಹರ್ಷಾದಾಶ್ಚರ್ಯಸಾಗರೇ ॥48॥

ಗಹನೇ ಗಾಹಮಾನಾऽಭೂತ್ ಅನಂತಶ್ರುತ್ಯಗೋಚರೇ ।
ತ್ವಯೋಪದಿಷ್ಟೋ ಯಃ ಪುತ್ರವಾತ್ಸಲ್ಯಾತ್ ಚತುರಾನನಃ ॥49॥

ತ್ವದ್ಗುಣಾನಾಂ ಚ ಗಣನಾತ್ ಆನಂದಮತುಲಂ ಭಜನ್ ।
ನಾದ್ಯಾಪಿ ವಿರರಾಮಾಸೌ ಗಣನಾದ್ದೇವರಾಡಪಿ ॥50॥

ಸಹಸ್ರವದನಃ ಶೇಷೋऽಶೇಷವೇದಾರ್ಥಕೋವಿದಃ ।
'ನಾಹಂ ಜಾನೇ' ಇತಿ ಬ್ರೂತೇ ಯನ್ನಖಾಗ್ರ್ಯವೈಭವಮ್ ॥51॥

ಅನಂತವೇದಾ ಭಾಷಂತೇ ಹ್ಯನ್ಯೋನ್ಯಂ ಪ್ರವಿಚಾರ್ಯ ಚ ॥52॥

ಏಕೈಕಮಸ್ಮಿನ್ನಧಿಕಾರೇ ನಿಯುಕ್ತಾಃ
ಏಕೈಕಶೋ ಬ್ರಹ್ಮಪೂರ್ವಾಶ್ಚ ವಿಷ್ಣೋಃ ।
ಸರ್ವೇ ದೇವಾಃ ಸ್ವಾಧಿಕಾರೇ ನಿಯುಕ್ತಾಃ
ಸತ್ಯಾದಿಲೋಕೇಷು ಯಥಾಕ್ರಮೇಣ ॥53॥

ಭುಂಜಂತಿ ಚೇಷ್ಟಾನಿ ಮಹಾದರೇಣ
ಭಜಂತಿ ಶೇಷಾಚಲಗಂ ರಮೇಶಮ್ ।

ಬ್ರಹ್ಮದೇವನು ನಿಮ್ಮ ಗುಣಗಳನ್ನು ಗಣನೆ ಮಾಡುವವನಾಗಿ ಅಸದೃಶವಾದ ಆನಂದವನ್ನು ಹೊಂದಿದನು. ಆದರೆ ಆ ಗುಣಗಳ ಎಣಿಕೆಯು ಇನ್ನೂ ಕೊನೆಗೊಂಡಿರುವದಿಲ್ಲ. ಅವನು ಇಂದಿಗೂ ಸಹ ಗುಣಗಳ ಗಣನೆಯಿಂದ ವಿರಾಮವನ್ನು ಹೊಂದಿರುವದಿಲ್ಲ. (49–50) ಸಮಗ್ರ ವೇದಾರ್ಥಕೋವಿದರಾದ, ಸಹಸ್ರವದನರಾದ ಶೇಷದೇವರು ನಿಮ್ಮ ನಖಾಗ್ರ್ಯದ ಶ್ರೇಷ್ಠವಾದ ಗುಣವೈಭವವನ್ನು ತಾವು ಅರಿತವರಲ್ಲವೆಂದು ಹೇಳುತ್ತಾರೆ. ಅದರಂತೆ ಅನಂತವಾದ ವೇದಗಳಿಗೆ ಅಭಿಮಾನಿದೇವತೆಗಳು ಪರಸ್ಪರ ವಿಚಾರಮಾಡಿ ತಾವು ಪರಮಾತ್ಮನ ನಖಾಗ್ರ್ಯದ ಅಸದೃಶ ವೈಭವವನ್ನು ಬಲ್ಲವರಲ್ಲವೆಂದು ಹೇಳುತ್ತಾರೆ. (51–52) ಪರಮಾತ್ಮನಿಂದ ನಿರ್ದಿಷ್ಟವಾದ ಒಂದೊಂದು ಅಧಿಕಾರದಲ್ಲಿ ಪ್ರತ್ಯೇಕವಾಗಿ ನಿಯುಕ್ತರಾದ ಚತುರ್ಮುಖ ಬ್ರಹ್ಮಾದಿ ಸಕಲ ದೇವತೆಗಳು ಸ್ವಾಧಿಕಾರದಲ್ಲಿ ವಿಷ್ಣುವಿನಿಂದ ಆಜ್ಞಪ್ತರಾಗಿ ನಿಯುಕ್ತರಾಗಿ ಯಥಾಕ್ರಮವಾಗಿ ಸತ್ಯಾದಿಲೋಕಗಳಲ್ಲಿ ವಾಸಮಾಡಿ ತಮಗೆ ಇಷ್ಟವಾದ ವಿಷಯಗಳನ್ನು ಭೋಗಮಾಡುತ್ತಿರುವರು. ಆದರೂ ಸಹ ಶೇಷಾಚಲ ವಾಸಿಯಾದ ಶ್ರೀಶ್ರೀನಿವಾಸನನ್ನು ಮಹಾ ಆದರ ಭಕ್ತಿಗಳಿಂದ ಭಜಿಸುತ್ತಿರುತ್ತಾರೆ. ವೇದಾಭಿಮಾನಿದೇವತೆಗಳಾದ ನಾವು ಅನಂತಸಂಖ್ಯಾಕರಾಗಿದ್ದರೂ ಸಹ

ವಯಂ ತ್ವನಂತಾ ಹರಿಣಾ ನಿಯುಕ್ತಾ
ವೇದಾಃ ಸ್ತುತೌ ಸ್ವಸ್ಯ ಗುಣಾನುಭಾವಮ್ ॥54॥

ಗುಣಾಸ್ತ್ವನಂತಾ ಪರಮಾತ್ಮನೋ ಯತ್-
ಪದೋ ನಖಾಗ್ರ್ಯಸ್ಥಗುಣೈಕದೇಶಮ್ ।
ಸ್ತುತೌ ಮಿಲಿತ್ವಾ ವಯಮಪ್ಯಶಕ್ತಾಃ
ವೇದಾಸ್ತ್ವನಂತಾ ಜನಿತಾಸ್ತದರ್ಥಮ್ ॥55॥

ಏವಂ ಸುನಿಶ್ಚಿತ್ಯ ಗುಣೈಕದೇಶ-
ಮಾಹಾತ್ಮ್ಯಮೇತೇ ತ್ವವಿಜಾನಮಾನಾಃ ।
ಅಪಕ್ರಾಂತಾಃ ಸ್ತೋತುಮಥೋ ಗುಣೈಕ-
ದೇಶೋಽಪ್ಯನಂತಾತ್ಮತಯಾಽಭಿವೃದ್ಧಃ ॥56॥

ತಂ ವೀಕ್ಷ್ಯ ತೇಽನ್ಯೋನ್ಯಮಥೋಚುರೇಕಂ
ಗುಣಂ ವದಾಮೋ ವಿಸೃಜಾಮ ಶೇಷಾನ್ ।
ಆರೇಭಿರೇ ಪೂರ್ವವದೇವ ತೇಽಪಿ
ಗುಣಾ ಹ್ಯನಂತಾಃ ಫಲದಾಸ್ತ್ವಾವೃತಾಶ್ಚ ॥57॥

ತನ್ನ ಗುಣಮಾಹಾತ್ಮೆಯನ್ನು ವರ್ಣಿಸುವ ವಿಷಯದಲ್ಲಿ ಪರಮಾತ್ಮನಿಂದಲೇ ನಿಯುಕ್ತರಾಗಿದ್ದೇವೆ. (53–54) ಪರಮಾತ್ಮನ ಗುಣಗಳು ಅನಂತವಾಗಿ ಇರುವದರಿಂದ ಅವನ ಗುಣಗಳನ್ನು ಸ್ತೋತ್ರಮಾಡುವ ನಾವೂ ಸಹ ಅನಂತರಾಗಿದ್ದೇವೆ. ನಾವು ಅನಂತರಾಗಿದ್ದರೂ ಸಹ ಈ ಪರಮಾತ್ಮನ ಅನಂತ ಗುಣಗಳನ್ನು ನಾವೆಲ್ಲರೂ ಮಿಲಿತರಾಗಿ ಹೇಳಿದರೂ ಸ್ತೋತ್ರಮಾಡುವದರಲ್ಲಿ ಅಶಕ್ತರಾಗಿದ್ದೇವೆ. ಈ ರೀತಿಯಾಗಿ ವಿಶ್ವರೂಪನಾದ ಪರಮಾತ್ಮನ ಏಕದೇಶಮಾಹಾತ್ಮೆಯನ್ನೂ ಸಹ ತಿಳಿಯದವರಾದ ದೇವತೆಗಳು ಏಕದೇಶವನ್ನೇ ಸ್ತೋತ್ರಮಾಡಲು ಉಪಕ್ರಮಿಸಿದರು. ಆದರೆ ಆ ಏಕದೇಶಗುಣವೂ ಸಹ ಅನಂತವಾಗಿಯೇ ಅಭಿವೃದ್ಧವಾಯಿತು. ಒಂದು ಗುಣದಲ್ಲಿಯೇ ಅಭಿವೃದ್ಧವಾದ ಅನಂತಗುಣಗಳನ್ನು ಕಂಡ ದೇವತೆಗಳು ಒಂದೇ ಗುಣವನ್ನು ನಾವು ಸ್ತೋತ್ರ ಮಾಡೋಣ. ಉಳಿದವುಗಳನ್ನು ನಾವು ಬಿಟ್ಟುಬಿಡೋಣ ಎಂದು ಸ್ತೋತ್ರವನ್ನು ಆರಂಭಿಸಿದರು. ಆದರೆ ಅನಂತವಾದ ಗುಣಗಳು ಅನಂತವಾದ ಫಲವನ್ನು ಕೊಡಲು ಸಮರ್ಥಗಳೂ ಹಾಗೂ ಅನಂತವಾದ ವ್ಯಾಪ್ತಿಯುಳ್ಳವುಗಳೂ ಆಗಿರುವವು. (57) ಸೂರ್ಯನ ಕಿರಣಗಳು ಸರ್ವತ್ರದಲ್ಲಿ ವ್ಯಾಪ್ತವಾಗಿ ಇರುವಂತೆ ಅದಕ್ಕೂ ಅಧಿಕವಾಗಿ ದಿಕ್ಕು ದಿಕ್ಕುಗಳಲ್ಲಿ ಬ್ರಹ್ಮಾಂಡ ವನ್ನಾರಂಭಿಸಿ ಪಾತಾಳಪರ್ಯಂತವಾಗಿ ವ್ಯಾಪ್ತವಾದ ಶುಭಕರವಾದ, ಪರಮಾತ್ಮನ ಪ್ರತ್ಯೇಕ-ಪ್ರತ್ಯೇಕವಾಗಿ

ಗುಣೈಃ ಸಮಂತಾತ್ ಶುಭದೈರನಂತೈಃ
ಪ್ರತ್ಯೇಕಶಃ ಕಿರಣಾನೀವ ಪೂಷ್ಣಃ ।
ವಿದಿಕ್ಷು ದಿಕ್ಷೂರ್ಧ್ವಮಧಶ್ಚ ದೇವಾಃ
ದೃಷ್ಟ್ವಾ ಗುಣಾನದ್ಭುತಾನಿತ್ಯವೋಚನ್ ॥58॥

ದ್ರಷ್ಟುಂ ಶ್ರೋತುಂ ಕೀರ್ತಿತುಂ ವಾಽಪಿ ಬೋದ್ಧುಂ
ಅಶಕ್ಯಂ ನಃ ಕಿಮುತ ಸ್ತೋತುಮೇತಾನ್ ।
ಅಸ್ಮಾನತೀತಾನ್ ವಯಮಲ್ಪಸಾರಾಃ
ಕಿಂ ವರ್ಣಯಾಮೋಽಲಮಲಂ ಪ್ರಶಂಸಯಾ ॥59॥

ಇತ್ಯುಕ್ತವಂತಃ ಸ್ವಮನೋಽನುಸಾರಾತ್
ಗುಣಾನೇತಾನ್ವರ್ಣಯಾಮಾಸುರಂಜಸಾ ।
ತಥಾಽಪಿ ತೇ ಪಾದನಖಾಗ್ರ್ಯಗೇಷು
ಗುಣೇಷ್ವನಂತೇಷು ವಿಭಾಜಿತಸ್ಯ ॥60॥

ಗುಣೈಕದೇಶಸ್ಯ ಗುಣೈಕದೇಶಃ
ಪ್ರವರ್ಣಿತೋಽಂಶಾ ಬಹವೋ ನ ವರ್ಣಿತಾಃ ।

ಅನಂತವಾಗಿರುವ ಗುಣಗಳನ್ನು ನೋಡಿ ದೇವತೆಗಳು 'ಪರಮಾತ್ಮನ ಗುಣಗಳು ಅದ್ಭುತವಾಗಿವೆ' ಎಂದು ಮಾತನಾಡಿದರು. (58) ಭಗವಂತನ ಗುಣಗಳನ್ನು ನೋಡಲು, ಕೇಳಲು, ಹೇಳಲು ಮತ್ತು ತಿಳಿಯಲು ನಮಗೆ ಅಶಕ್ಯವಾಗಿರುವ ಆ ಗುಣಗಳನ್ನು ನಾವು ಹೇಗೆ ಸ್ತೋತ್ರಮಾಡುವದು? ನಾವು ಅತ್ಯಲ್ಪಸಾಮರ್ಥ್ಯವುಳ್ಳವರು, ನಮ್ಮನ್ನು ಮೀರಿ ಇರುವ ಆ ಗುಣಗಳನ್ನು ನಾವು ವರ್ಣಿಸಲು ಸಾಧ್ಯವೇ ಇಲ್ಲ. ಆದರೂ ಅತ್ಯಲ್ಪವಾಗಿಯೇ ಸ್ತೋತ್ರಮಾಡುತ್ತೇವೆ (59) ಈ ರೀತಿಯಾಗಿ ಪರಸ್ಪರವಾಗಿ ಮಾತನಾಡಿಕೊಂಡ ರಮಾ ಬ್ರಹ್ಮ ಶೇಷ ಹಾಗೂ ವೇದಾಭಿಮಾನಿಗಳೇ ಮುಖ್ಯರಾಗಿ ಉಳ್ಳ ದೇವತೆಗಳು ತಮ್ಮ ಮನೋ ಬುದ್ಧಿಗಳಿಗನುಸಾರವಾಗಿ ಪರಮಾತ್ಮನ ಗುಣಗಳನ್ನು ಉತ್ತಮರೀತಿಯಾಗಿ ವರ್ಣಿಸಿದರು. ಆದರೆ ಪರಮಾತ್ಮನ ಪಾದದ ಉಗುರಿನ ಅಗ್ರಭಾಗದಲ್ಲಿಯ, ಅನಂತವಾಗಿ ವಿಭಾಗಮಾಡಲ್ಪಟ್ಟಿರುವ ಗುಣೈಕದೇಶವೂ ಸಹ ದೇವತೆಗಳಿಂದ ಸತತವಾಗಿ ಬಹುರೀತಿಯಾಗಿ ವರ್ಣನ ಮಾಡಲ್ಪಟ್ಟರೂ ಸಹ ಸಂಪೂರ್ಣವಾಗಿ ವರ್ಣಿತವಾಗಲಿಲ್ಲ (60–61) ಈ ರೀತಿಯಾಗಿ ದೇವತಾಶ್ರೇಷ್ಠರೇ ಪರಮಾತ್ಮನ ಗುಣಗಳ ವರ್ಣನೆಯಲ್ಲಿ ಅಶಕ್ತರೆಂದಮೇಲೆ ಇತರರು ಸರ್ವಥಾ ಸಮರ್ಥರಲ್ಲವೆಂಬುದು ಸ್ಪಷ್ಟವಾಗಿದೆ. ವಿಷ್ಣುವಿನ ಪಾದನಖಾಗ್ರದ ಮಾಹಾತ್ಮ್ಯೆಯೇ

ಏವಂ ರಮಾಜಾಹಿಪವೇದಮುಖ್ಯಾಃ
ಶಕ್ತಾ ನಾಸನ್ವರ್ಣನೇ ತ್ವದ್ಗುಣಾನಾಮ್ ॥61॥

ಯತ್ಸಮಸ್ತಗುಣಾನ್ ವಿಷ್ಣೋಃ ವರ್ಣನೇ ಶಕ್ತಿವರ್ಜಿತಾಃ ।
ಅನಂತವೇದಾಸ್ತದ್ಭೂಮನ್ ಗುಣಮಾಹಾತ್ಮ್ಯಮೀದೃಶಮ್ ॥62॥

॥ಇತಿ ಶ್ರೀಮದಾದಿತ್ಯಪುರಾಣೇ ಶ್ರೀವೇಂಕಟೇಶಮಾಹಾತ್ಮ್ಯೇ
ಶ್ರೀನಿವಾಸಪಾದನಖಾಗ್ರ್ಯಾದಿಮಹಿಮಾನುವರ್ಣನಂ ನಾಮ ಪ್ರಥಮೋಽಧ್ಯಾಯಃ ॥

* * *

ಅನಂತವಾದ ಮೇಲೆ ಪರಮಾತ್ಮನ ಸಮಸ್ತಗುಣಗಳನ್ನು ವರ್ಣಿಸುವ ವಿಷಯದಲ್ಲಿ ಸಮಸ್ತವೇದಗಳು, ವೇದಾಭಿಮಾನಿ ದೇವತೆಗಳು ಹಾಗೂ ದೇವತಾಶ್ರೇಷ್ಠರು ಅಶಕ್ತರೆಂದಮೇಲೆ ಅಪರಿಮಿತವಾದ ಪರಮಾತ್ಮನ ಗುಣಮಾಹಾತ್ಮೆಯ ಮಿತಿಯನ್ನು ಇಷ್ಟೇ ಎಂದು ಹೇಳಲು ಸಾಧ್ಯವೇ ಇಲ್ಲ.(62)

ಇಲ್ಲಿಗೆ ಶ್ರೀ ಆದಿತ್ಯಪುರಾಣದಲ್ಲಿ ಅಂತರ್ಗತವಾದ ಶ್ರಿಶ್ರೀವೇಂಕಟೇಶಮಾಹಾತ್ಮೆಯಲ್ಲಿ ಶ್ರೀಶ್ರೀನಿವಾಸನ ಪಾದನಖಾಗ್ರಾದಿಮಹಿಮಾನುವರ್ಣನರೂಪವಾದ ಮೊದಲನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

ಶ್ರೀಮದಾದಿತ್ಯಪುರಾಣಾಂತರ್ಗತ ವೇಂಕಟೇಶಮಾಹಾತ್ಮ್ಯೇ

## ಅಥ ದ್ವಿತೀಯೋಽಧ್ಯಾಯಃ

ದೇವಶರ್ಮೋವಾಚ –

ಇತೋಽಪ್ಯಥ ತ್ವತ್ಪಾದಾಬ್ಜಗತಸೌಂದರ್ಯಮದ್ಭುತಮ್ ।
ಸ್ವಾಮಿಂಸ್ತ್ವಯಾ ಪ್ರೇರಿತಶ್ಚೇತ್ ಯಥಾಮತ್ಯನುವಾದಯೇ ॥1॥

ವಕ್ಷಃಸ್ಥಾಽಪಿ ರಮಾದೇವೀ ತವ ಪಾದಾಂಬುಜೇ ಸ್ಥಿತಮ್ ।
ಸೌಂದರ್ಯಮದ್ಭುತಂ ದೃಷ್ಟ್ವಾ ಸುಂದರೀ ಮೋಹಿತಾಽಭವತ್ ॥2॥

ವಿಸ್ಮಿತಾ ದ್ರಷ್ಟುಕಾಮಾ ಹಿ ಸ್ವಸ್ಯ ನೇತ್ರದ್ವಯಂ ಯತಃ ।
ಅಶಕ್ಯಂ ದರ್ಶನಂ ಮತ್ವಾ ತ್ರಿರೂಪಾ ಚಾಭವತ್ತದಾ ॥3॥

ಹರ್ಷಾತ್ ಶ್ರೀರೂಪಿಣೀ ವಾಮೇ ಭೂರೂಪಾ ದಕ್ಷಿಣೇ ಸ್ಥಿತಾ ।
ದುರ್ಗಾರೂಪಾಗ್ರ್ಯಭಾಗಸ್ಥಾ ತ್ರಿರೂಪಾ ನೇತ್ರಷಟ್ಕತಃ ॥4॥

ಪಶ್ಯಂತ್ಯನನ್ಯಮನಸಾ ಸೌಂದರ್ಯಾಖ್ಯರಸಾಯನಮ್ ।
ಪಿಬಂತ್ಯಪ್ಯನ್ವಹಂ ನಾಪಿ ನಿವೃತ್ತಾ ತೃಷ್ಣಯಾಽಧುನಾ ॥5॥

ಶ್ರೀಮದಾದಿತ್ಯಪುರಾಣಾಂತರ್ಗತ
ವೇಂಕಟೇಶಮಾಹಾತ್ಮೆಯಲ್ಲಿ

## ಎರಡನೆಯ ಅಧ್ಯಾಯವು

ಪಾದಗುಣ ಮಹಾತ್ಮೆಗಿಂತಲೂ ನಿನ್ನ ಪಾದಕಮಲಗಳಲ್ಲಿರತಕ್ಕ ಸೌಂದರ್ಯವು ಅತಿಶಯವಾದದು, ಆಶ್ಚರ್ಯಕರವಾದದು. ಸ್ವಾಮಿ! ನಿನ್ನಿಂದ ಪ್ರೇರಿತನಾದರೆ ಮಾತ್ರ ನನ್ನ ಬುದ್ಧ್ಯನುಸಾರವಾಗಿ ಇದರ ಲೇಶವನ್ನು ವರ್ಣನೆ ಮಾಡುತ್ತೇನೆ (1) ಸ್ವತಃ ಸುಂದರಿಯಾದ ರಮಾದೇವಿಯು ನಿನ್ನ ವಕ್ಷಸ್ಥಲದಲ್ಲಿ ವಾಸವಾಗಿದ್ದರೂ ಸಹ ನಿನ್ನ ಪಾದಾರವಿಂದಗಳಲ್ಲಿ ಅದ್ಭುತವಾದ ಸೌಂದರ್ಯವನ್ನು ನೋಡಿ ಮೋಹಿತಳಾದಳು.(2) ವಿಸ್ಮಿತಳಾದ ರಮಾದೇವಿಯು, ಸೌಂದರ್ಯವನ್ನು ನೋಡಲು ತನ್ನ ಎರಡೇ ಕಣ್ಣುಗಳು ಸಾಲವೆಂದು ಬೇರೆ ಮೂರು ರೂಪಗಳನ್ನು ಧರಿಸಿದಳು. ಪರಮ ಸಂತೋಷದಿಂದ ಲಕ್ಷ್ಮಿದೇವಿಯು ಪರಮಾತ್ಮನ ವಾಮಭಾಗದಲ್ಲಿ ಶ್ರೀರೂಪಿಯಾಗಿ, ಬಲಭಾಗದಲ್ಲಿ ಭೂರೂಪಿಯಾಗಿ, ಮುಂಭಾಗದಲ್ಲಿ ದುರ್ಗಾರೂಪಳಾಗಿ, ಮೂರು ರೂಪಗಳ ಆರು ಕಣ್ಣುಗಳಿಂದ

ಶ್ರೀಸುಂದರ ಶ್ರೀನಿವಾಸ ನಾಭಿಸ್ಥಶ್ಚತುರಾನನಃ ।
ತವ ಪಾದಾಂಬುಜೇ ರಮ್ಯೇ ಸೌಂದರ್ಯೇ ಲಗ್ನಮಾನಸಃ ॥6॥

ಅಷ್ಟನೇತ್ರ್ಯಾ ದಿವಾರಾತ್ರಂ ಪಶ್ಯನ್ ಸೌಂದರ್ಯಮದ್ಭುತಮ್ ।
ನಾಲಂ ನೇತ್ರಾಷ್ಟಕಮಿತಿ ಬಹುರೂಪೀ ತದಾऽಭವತ್ ॥7॥

ಕಂಠೇ ಚ ಕೌಸ್ತುಭೇ ನಾಭೌ ವೈಕುಂಠಾದಿತ್ರಿಧಾಮಸು ।
ಸತ್ಯಲೋಕೇ ಚ ಮೇರ್ವಾದೌ ಸರ್ವತ್ರ ಚತುರಾನನಃ ॥8॥

ತತಃ ಪಾದಾಬ್ಜಸೌಂದರ್ಯರಸಂ ಚಾಮೃತನೈಚ್ಯದಮ್ ।
ಪ್ರೀತ್ಯಾ ಪಾತುಮಹೋರಾತ್ರಂ ಆಸ್ವಾದ್ಯ ಸುಖಭೋಗಿನಃ ॥9॥

ತೃಷ್ಣಾ ಶಾಂತಾऽಧುನಾ ನಾಪಿ ಪಾದಸೌಂದರ್ಯಮೀದೃಶಮ್ ।
ಶಯ್ಯಾಸನಾತಪತ್ರಾದಿರೂಪೀ ತ್ವತ್ಪಾದಸೇವಕಃ ॥10॥

ಶೇಷೋ ಬಹುಸಹಸ್ರಾಕ್ಷಃ ಸದಾऽಂತಃಸ್ಥೋऽಪ್ಯಚಿಂತಯತ್ ।
ಅಸ್ಮತ್ಸ್ವಾಮ್ಯಂಘ್ರಿಸೌಂದರ್ಯಂ ವಿಚಿತ್ರಂ ಸುಮನೋಹರಮ್ ॥11॥

ಪರಮಾತ್ಮನನ್ನು ಅನನ್ಯಮನಸ್ಕಳಾಗಿ ನೋಡುತ್ತಾಳೆ. ಆದರೆ ಆತನ ಸೌಂದರ್ಯವೆಂಬ ರಸಾಯನವನ್ನು ಸತತವಾಗಿ ಪಾನಮಾಡುತ್ತಿದ್ದರೂ ಆಕೆಯ ತೃಷೆಯು ಮಾತ್ರ ಇನ್ನೂ ನಿವೃತ್ತಿಯನ್ನು ಹೊಂದಿರುವುದಿಲ್ಲ. (4–5) ಸುಂದರನಾದ ಶ್ರೀನಿವಾಸನೇ! ನಿನ್ನ ನಾಭಿಕಮಲದಲ್ಲಿದ್ದ ಚತುರ್ಮುಖ ಬ್ರಹ್ಮದೇವರು ನಿನ್ನ ಪಾದಾರವಿಂದದಲ್ಲಿರತಕ್ಕ ಮನೋಹರವಾದ ಸೌಂದರ್ಯದಲ್ಲಿಯೇ ಆಸಕ್ತಿವುಳ್ಳವನಾಗಿರುವನು. (6) ತನ್ನ ಎಂಟು ಕಣ್ಣುಗಳಿಂದ ಹಗಲು–ರಾತ್ರಿಯನ್ನದೇ ಸತತವಾಗಿ ಅದ್ಭುತವಾದ ಸೌಂದರ್ಯವನ್ನು ನೋಡುತ್ತಲೇ ಇದ್ದರೂ ಸಹ ಎಂಟೇ ಕಣ್ಣುಗಳು ಸಾಲವೆಂದು ಬಗೆದು ಬಹುರೂಪಗಳುಳ್ಳವನಾದನು. (7) ಪರಮಾತ್ಮನ ಕಂಠದಲ್ಲಿ ಕೌಸ್ತುಭರೂಪ, ನಾಭಿಯಲ್ಲಿ ವೈಕುಂಠ, ಶ್ವೇತದ್ವೀಪ, ಅನಂತಾಸನ, ಸತ್ಯಲೋಕ, ಮೇರುಪರ್ವತ ಮೊದಲಾದ ಸರ್ವಸ್ಥಳಗಳಲ್ಲಿ ತನ್ನ ರೂಪಗಳುಳ್ಳವನಾದನು. (8) ಅಮೃತಮಾಧುರ್ಯವನ್ನು ಧಿಕ್ಕರಿಸುವ ಶ್ರೀನಿವಾಸನ ಪಾದಕಮಲ ಸೌಂದರ್ಯವನ್ನು ಪ್ರೀತಿಯಿಂದ ಹಗಲಿರುಳೂ ಪಾನಮಾಡಿ, ಕೇವಲ ಸುಖಭೋಗಿಯಾದ ಚತುರ್ಮುಖನಿಗೆ ಪಾದಸೌಂದರ್ಯ ವನ್ನು ಎಷ್ಟು ಆಸ್ವಾದನೆ ಮಾಡಿದರೂ ಬಯಕೆಯು ಇದುವರೆಗೂ ನಿವೃತ್ತವಾಗಿಲ್ಲ. ಶ್ರೀನಿವಾಸನ ಪಾದಸೌಂದರ್ಯವು ಈ ರೀತಿಯಾಗಿ ಅತ್ಯಂತ ಮಹಿಮೋಪೇತವಾಗಿರುವುದು. (10) ನಿನ್ನ ಪಾದಸೇವಕನಾದ ಶೇಷದೇವನು ಶಯ್ಯಾ, ಆಸನ, ಛತ್ರ ಹಾಗೂ ಪಾದುಕಾ ರೂಪಗಳುಳ್ಳವನು. ಹೀಗೆ ಒಂದೊಂದು ರೂಪದಲ್ಲಿಯೂ

ಅದೃಷ್ಟಶ್ರುತಪೂರ್ವಂ ಚ ಮಹಾಗೋಪ್ಯಂ ವಿಲಕ್ಷಣಮ್ ।
ಸುಲಕ್ಷಣಂ ಚ ಸಂದೃಶ್ಯಂ ಜಗನ್ಮೋಹನಮೋಹಕಮ್ ॥12॥

ಬಹೂನಿ ಮಮ ನೇತ್ರಾಣಿ ಸಮೀಪೇ ಸರ್ವದಾ ಹರೇಃ ।
ವಾಸಶ್ಚೇಶಪ್ರಸಾದೇನ ತ್ವೇವಂ ಭಾಗ್ಯಮಭೂನ್ಮಮ ॥13॥

ಇತಿ ಸಂಭ್ರಮಸಂಯುಕ್ತಃ ಸರ್ವದಾಽತಿಪ್ರಿಯೋ ಹರೇಃ ।
ನೇತ್ರೈರ್ಬಹುಸಹಸ್ರೈಶ್ಚ ಲಕ್ಷ್ಮೀಪತಿಪದಾಂಬುಜೇ ॥14॥

ಅಸಮಂ ಚಿತ್ರಸೌಂದರ್ಯಂ ದೃಷ್ಟ್ವಾ ದೃಷ್ಟ್ವಾ ಪುನಃ ಪುನಃ ।
ಮಹಾನಂದಾಂಬುಧೌ ಮಗ್ನಃ ಏವಂ ಮೇನೇ ಫಣೀ ತದಾ ॥15॥

ವಸಾಮ್ಯಹಂ ಸದೈವಾತ್ರ ಪಾದಮೂಲೇ ಚ ಮತ್ಪತೇಃ ।
ವೈಕುಂಠಂ ವಾ ನ ಗಚ್ಛಾಮಿ ತ್ಯಕ್ತ್ವಾ ವಿಷ್ಣುಪದಾಂಬುಜಮ್ ॥16॥

ಯಸ್ಮಾನ್ನಂದೋ ಭವೇನ್ನಿತ್ಯಂ ಪಾದಸೌಂದರ್ಯದರ್ಶನಾತ್ ।
ವೈಕುಂಠೇ ಈದೃಶಾನಂದಃ ಕೈವಲ್ಯೇಽಪಿ ನ ವಿದ್ಯತೇ ॥17॥

ಎರಡು ಸಾವಿರ ನೇತ್ರಗಳುಳ್ಳ ಶೇಷದೇವನು ಬಹು ಸಹಸ್ರಾಕ್ಷನಾಗಿ ಸರ್ವದಾ ಪರಮಾತ್ಮನ ಸಮೀಪದಲ್ಲಿಯೇ ಇದ್ದವನಾದರೂ ಸಹ ಈ ರೀತಿಯಾಗಿ ಆಲೋಚಿಸಿದನು. 'ನಮ್ಮ ಸ್ವಾಮಿಯ ಪಾದಸೌಂದರ್ಯವು ವಿಚಿತ್ರವಾಗಿದೆ, ಮನೋಹರವಾಗಿದೆ. ಇದನ್ನು ಎಂದೂ ಯಾರೂ ಪೂರ್ವದಲ್ಲಿ ಕೇಳಿರುವುದಿಲ್ಲ. ನೋಡಿರುವುದಿಲ್ಲ. ಅತಿಗಹನವಾಗಿದೆ. ವಿಶಿಷ್ಟ ಲಕ್ಷಣವುಳ್ಳದ್ದಾಗಿ ಜಗದ್ವಿಲಕ್ಷಣವಾಗಿದೆ. ಅತ್ಯಂತ ಸಲಕ್ಷಣವಾಗಿದೆ. ಜಗನ್ಮೋಹಕಳಾದ ಲಕ್ಷ್ಮೀದೇವಿಗೂ ಮೋಹಕರವಾಗಿದೆ. ಭಕ್ತರಿಂದ ಉತ್ತವಾಗಿ ದೃಶ್ಯವಾಗಿದೆ. (11–12) ಪರಮಾತ್ಮನ ಅನುಗ್ರಹದಿಂದ ನನಗೆ ಬಹು ನೇತ್ರಗಳಿವೆ. ಆತನ ಸಮೀಪದಲ್ಲಿಯೇ ನನ್ನ ವಾಸವು. ಶ್ರೀನಿವಾಸನ ಪಾದಸೌಂದರ್ಯ ದರ್ಶನಭಾಗ್ಯವು ಈ ರೀತಿಯಾಗಿ ಲಭಿಸಿರುವುದು ನನ್ನ ಭಾಗ್ಯವೇ ಸರಿ (13) ಹೀಗೆ ಶ್ರೀಹರಿಗೆ ಸರ್ವದಾ ಅತಿ ಪ್ರೀಯನಾದ ಶೇಷದೇವರು ಸಂಭ್ರಮಯುಕ್ತನಾಗಿ, ಬಹುಸಹಸ್ರ ನಯನಗಳಿಂದ ಲಕ್ಷ್ಮೀಪತಿಯ ಪಾದಕಮಲಗಳಲ್ಲಿ ಅಸದೃಶವಾದ ಚಿತ್ರ–ವಿಚಿತ್ರ ಸೌಂದಯವನ್ನು ಪುನಃ ಪುನಃ ನೋಡಿ ಮಹಾನಂದ ಸಾಗರದಲ್ಲಿ ಮಗ್ನನಾಗಿ ಈ ರೀತಿಯಾಗಿ ನಿಶ್ಚಯಿಸಿದನು. (14–15) ನಾನು ಯಾವಾಗಲೂ ನನ್ನ ಸ್ವಾಮಿಯ ಪಾದಮೂಲದಲ್ಲಯೇ ವಾಸ ಮಾಡುತ್ತೇನೆ. ಪರಮಾತ್ಮನ ಪಾದಾಂಬುಜವನ್ನು ಬಿಟ್ಟು ನಾನು ವೈಕುಂಠ ಲೋಕಕ್ಕೂ ಹೋಗಲಾರೆ. (16) ಪರಮಾತ್ಮನ ಪಾದಸೌಂದರ್ಯ ದರ್ಶನದಿಂದ ಲಭಿಸುವ ಆನಂದವು ವೈಕುಂಠದಲ್ಲಿಯೂ ಸಹ ಲಭಿಸದು

ಪಾತಾಲಮಾತ್ರಂ ಗಂತವ್ಯಂ ಪಾದಮೂಲಂ ಯತೋ ಹರೇಃ ।
ನ ಸ್ಥಾಸ್ಯಾಮಿ ಕ್ಷಣಮಪಿ ಯತ್ಸೌಂದರ್ಯಾಮೃತಂ ವಿನಾ ॥18॥

ಇತಿ ನಿಶ್ಚಿತ್ಯ ನಾಗೇಂದ್ರಃ ಪಾದಸೌಂದರ್ಯಮೋಹಿತಃ ।
ಯತ್ರ ಯತ್ರೇಂದಿರೇಶಸ್ಯ ಪಾದಮೂಲಂ ಪ್ರವರ್ತತೇ ॥19॥

ತತ್ರ ತತ್ರ ಸದಾ ಪಾದಸೌಂದರ್ಯಾಮೃತಪಾಯ್ಯಭೂತ್ ।
ಅಥಾಚಿಂತಯದೇವಂ ಹಿ ಶಂಕರೋ ಲೋಕಶಂಕರಃ ॥20।

ಶೇಷಸ್ಯ ಕಿಮಹೋ ಭಾಗ್ಯಂ ಶೇಷಾಗೇಶಪ್ರಸಾದಜಮ್ ।
ಬಹುನೇತ್ರಾಣಿ ತ್ವತ್ಪಾದಸೌಂದರ್ಯಾಮೃತಸೇವನಮ್ ।21।

ಏತದ್ದ್ವಯಂ ದುರ್ಲಭಂ ಮೇ ತ್ರಿನೇತ್ರತ್ವಾದಹೋ ಬತ ।
ಭಾವಿಜನ್ಮನಿ ಶೇಷತ್ವಪ್ರಾಪ್ತ್ಯರ್ಥಂ ವಾ ಮಹತ್ತಪಃ ॥22॥

ಕರೋಮೀತ್ಯತಿವೈರಾಗ್ಯಾತ್ ಶಂಭುಃ ಕೈಲಾಸಗೋಽಭವತ್ ।
ಶ್ರೀವೇಂಕಟೇಶೇಂದಿರೇಶ ಜಿಷ್ಣುಸ್ತವ ಮುಖಾಂಬುಜಾತ್ ॥23॥

(17). ಅಂದರೆ ಪಾತಾಳಲೋಕಕ್ಕೆ ಮಾತ್ರ ಹೋಗಬೇಕಾಗಿದೆ. ಪಾದಮೂಲದರ್ಶನವನ್ನು ಅಲ್ಲಿಯೂ ಇದ್ದೇ ಇರುವದು. ಪರಮಾತ್ಮನ ಪಾದಸೌಂದರ್ಯದರ್ಶನವನ್ನು ಬಿಟ್ಟು ನಾನು ಒಂದು ಕ್ಷಣವೂ ಇರಲಾರೆ' (18) ಈ ರೀತಿಯಾಗಿ ನಿಶ್ಚಯಿಸಿ ಪಾದಸೌಂದರ್ಯ ಮೋಹಿತನಾದ ಶೇಷದೇವರು, ಪರಮಾತ್ಮನ ಪಾದಮೂಲವಿದ್ದಲ್ಲಿ ಯಾವಾಗಲೂ ಪಾದಸೌಂದರ್ಯಾಮೃತವನ್ನು ಪಾನಮಾಡುವವ ನಾಗಿರುತ್ತಾನೆ. ಪರಮಾತ್ಮನ ಪಾದಸೌಂದರ್ಯಮೋಹಿತರಾದ, ಪರಮಾತ್ಮನ ಪಾದಸೌಂದರ್ಯ ಮೋಹಿತರಾದ, ಕೈಲಾಸವಾಸಿಯಾಗಿ ಜಗತ್ತಿಗೆ ಸುಖಪ್ರದರಾದ ರುದ್ರದೇವರು, ಈ ರೀತಿಯಾಗಿ ವಿಚಾರ ಮಾಡಿದರು. 'ಶೇಷದೇವರಿಗೆ ಶೇಷಾಚಲವಾಸಿಯಾದ ಶ್ರೀನಿವಾಸನ ಪಾದ ಸೌಂದರ್ಯಾಮೃತಸೇವನೆ ಮತ್ತು ಅದಕ್ಕೆ ಅನುಕೂಲವಾಗಲು ಅನೇಕ ನೇತ್ರಗಳಿವೆ (21) ಆದರೆ ನಾನು ಮೂರೇ ಕಣ್ಣುಗಳುಳ್ಳವನಾದ್ದರಿಂದ ಇವೆರೆಡೂ ನನಗೆ ದುರ್ಲಭವೇ ಆಗಿವೆ. ಮುಂದಿನ ಜನ್ಮದಲ್ಲಿ ಶೇಷ ಪದವಿಯು ನನಗೆ ಲಭಿಸುವದಕ್ಕಾಗಿ ಕಠಿಣವಾದ ತಪಸ್ಸನ್ನು ಮಾಡುತ್ತೇನೆ' (22) ಎಂದು ವಿಚಾರಿಸಿ, ಅತಿ ವೈರಾಗ್ಯದಿಂದ ರುದ್ರದೇವರು ಕೈಲಾಸಪರ್ವತವನ್ನು ಕುರಿತು ಹೋಗುವವರಾದರು. ಈ ರೀತಿಯಾಗಿ ಇಂದಿರಾಪತಿಯಾದ ಶ್ರೀ ವೆಂಕಟೇಶನೆ! ನಿನ್ನ ಮುಖಕಮಲದಿಂದ ಉತ್ಪನ್ನರಾದ, ಜಯಶೀಲರಾದ ಇಂದ್ರದೇವರು ಸಹಸ್ರ ನಯನರಾಗಿದ್ದರೂ ಸಹ, ನಿನ್ನ ಪಾದಕಮಲ ಗಳಲ್ಲಿಯ ಅಸದೃಶವಾದ ಆಶ್ಚರ್ಯಕರವಾದ ಸೌಂದರ್ಯವನ್ನು

ಜಾತಃ ಸಹಸ್ರನಯನೋಽಪ್ಯೇವಂ ತವ ಪದಾಂಬುಜೇ ।
ಅದೃಶ್ಯಾಶ್ಚರ್ಯಸೌಂದರ್ಯಂ ಸಂಪಶ್ಯನ್ನಪ್ಯಹರ್ನಿಶಮ್ ॥24॥

ಇತ್ಯಚಿಂತಯದತ್ಯಂತಂ ಪಾದಸೌಂದರ್ಯಮೋಹಿತಃ ।
ಅಮೃತಸ್ಯ ಪುರಾ ಪಾನೇ ಮೇ ನಾಭೂದೀದೃಶಂ ಸುಖಮ್ ॥25॥

ಸೌಂದರ್ಯಮತಿಸಾಮೀಪ್ಯದೋಷಾತ್ ಸಮ್ಯಙ್ ನ ದೃಶ್ಯತೇ ।
ಇತೋಽಪ್ಯತಿಶಯಾನಂದಃ ಕಿಂಚಿದ್ವ್ಯವಹಿತೇ ಭವೇತ್ ॥26॥

ಅತಃ ಸ್ವರ್ಗಸ್ಥೋಽನಿಮಿಷಸ್ತಾವನ್ನೇತ್ರೈರಹರ್ನಿಶಮ್ ।
ವಿಕ್ಷ್ಯೇ ಯಾವದಲಂ ಬುದ್ಧಿಃ ತತೋ ಮತ್ಸ್ಥಾನಮಾವ್ರಜೇ ॥27॥

ಇತಿ ಸ್ವರ್ಗಗತಸ್ಯಾಪಿ ಯಾವನ್ನೇತ್ರೈಃ ಶ್ರಿಯಃ ಪತೇಃ ।
ತ್ವತ್ತೇಜಃಪುಂಜಪಾದಾಬ್ಜಸೌಂದರ್ಯಾಮೃತಪಾಯಿನಃ ॥28॥

ತೃಷ್ಣಾ ಶಾಂತಾಽಧುನಾ ನಾಪಿ ತಸ್ಮಾತ್ ಸ್ವರ್ಗೇ ಸ್ಥಿರಾ ಸ್ಥಿತಿಃ ।
ಶ್ರೀಶ ತೇ ಪಾದಸೌಂದರ್ಯಲೇಖಾನಾಂ ಮಹತಾಮಪಿ ॥29॥

ಯದೇವಂ ದುರ್ಲಭಮಭೂತ್ ಇತರೇಷಾಂ ತು ಕಾ ಕಥಾ ।
ವಿಷ್ಣೋ ತೇ ಪಾದರೇಖಾಣಾಂ ಮಾಹಾತ್ಮ್ಯಂ ಲೋಕಪಾವನಮ್ ॥30॥

ಹಗಲೂ ರಾತ್ರಿ ನೋಡುತ್ತಿದ್ದರೂ ಸಹ ಪಾದಸೌಂದರ್ಯ ಮೋಹಿತರಾಗಿ 'ಪೂರ್ವದಲ್ಲಿ ಅಮೃತಪಾನ ಮಾಡುವಾಗಲೂ ಸಹ ಈ ರೀತಿಯಾದ ಸುಖವಾಗಲಿಲ್ಲ' ಎಂದು ಆಲೋಚಿಸಿದರು. (23–25) 'ಅತಿ ಸಮೀಪದಿಂದ ಸೌಂದರ್ಯವನ್ನು ನೋಡಿದರೆ ಅತಿಸಾಮೀಪ್ಯ ದೋಷದಿಂದ ಚೆನ್ನಾಗಿ ಕಾಣಿಸುವುದಿಲ್ಲ. ಆದ್ದರಿಂದ ಸ್ವಲ್ಪ ದೂರದಲ್ಲಿದ್ದು ನೋಡಿದರೆ ಇದಕ್ಕಿಂತಲೂ ಹೆಚ್ಚಿನ ಆನಂದವಾಗುವದು. ಆದ್ದರಿಂದ ಸ್ವರ್ಗದಲ್ಲಿದ್ದುಕೊಂಡು ಕಣ್ಣನ್ನು ಮುಚ್ಚದೇ ಹಗಲಿರುಳು ತೃಪ್ತಿಯಾಗುವವರೆಗೂ ಪಾದಸೌಂದಯವನ್ನು ನೋಡುತ್ತೇನೆ. ಆದ್ದರಿಂದ ನನ್ನ ಸ್ಥಾನವಾದ ಸ್ವರ್ಗಲೋಕವನ್ನು ಕುರಿತು ಹೋಗುವೆನು'. (27) ಹೀಗೆ ವಿಚಾರಮಾಡಿ ಸ್ವರ್ಗದಲ್ಲಿದ್ದುಕೊಂಡು ಸತತವಾಗಿ ನೇತ್ರಗಳಿಂದ ಪರಮಾತ್ಮನ ತೇಜಃಪುಂಜವಾದ ಪಾದಾರವಿಂದಗಳಲ್ಲಿಯ ಸೌಂದರ್ಯಾಮೃತವನ್ನು ಪಾನಮಾಡುತ್ತಿರುವ ಇಂದ್ರದೇವರಿಗೆ ಸೌಂದರ್ಯಪಾನರೂಪ ತೃಷೆಯು ಇಂದಿಗೂ ನಿವೃತ್ತವಾಗದೇ ಸ್ವರ್ಗದಲ್ಲಿಯೇ ಸ್ಥಿರವಾದ ವಾಸವುಳ್ಳವರಾದರು. (29) ಹೇ ಶ್ರೀನಿವಾಸನೇ ! ನಿನ್ನ ಪಾದಸೌಂದರ್ಯವು ಶ್ರೇಷ್ಠರಾದ ದೇವಾಧಿದೇವತೆಗಳಿಗೂ ದುರ್ಲಭ ಎಂದಮೇಲೆ ಇತರರ ಪಾಡೇನು? ಹೇ ಶ್ರೀನಿವಾಸನೇ! ಲೋಕಪಾವನನಾದ ನಿನ್ನ ಪಾದರೇಖೆಗಳ

ವಿಜ್ಞಾಪನಂ ಕರಿಷ್ಯಾಮಿ ಹ್ಯಪರಾಧಂ ಕ್ಷಮಸ್ವ ಮೇ ।
ಪಾದಮಾಹಾತ್ಮ್ಯಶ್ರೋತೃಣಾಂ ಭಕ್ತಾನಾಂ ಭಕ್ತವತ್ಸಲ ॥31॥

ಮಹಾಜ್ಞಾನತಮೋ ಭಿತ್ವಾ ಕೃತ್ವಾ ಜ್ಞಾನಪ್ರಕಾಶನಮ್ ।
ತ್ವನ್ಮಾರ್ಗದರ್ಶನಾರ್ಥಾಯ ಚಕ್ರರೇಖಾಂ ಪದೇऽಧರಃ ॥32॥

ಪಾದಮಾಹಾತ್ಮ್ಯಮಂತೃಣಾಂ ಸಾಂಗವೇದಚತುಷ್ಟಯಮ್ ।
ಇತಿಹಾಸಪುರಾಣಾನಿ ಮಂತ್ರೋಪನಿಷದಾತ್ಮಕಾಃ ॥33॥

ಸರ್ವವಿದ್ಯಾ ದದಾಮೀತಿ ದರರೇಖಾಂ ಪದೇऽಧರಃ ।
ಪಾದಮಾಹಾತ್ಮ್ಯಧ್ಯಾತೃಣಾಂ ಉಪದ್ರವಕರಾನ್ ಖಲಾನ್ ॥34॥

ದೈತ್ಯರಕ್ಷಃಪಿಶಾಚಾದೀನ್ ಕೂಷ್ಮಾಂಡಬ್ರಹ್ಮರಾಕ್ಷಸಾನ್ ।
ಸಂಚೂರ್ಣಯಾಮೀತಿ ಹರೇ ಗದಾರೇಖಾಂ ಪದೇऽಧರಃ ॥35॥

ಪಾದಮಾಹಾತ್ಮ್ಯವಕ್ತೃಣಾಮುತ್ತಮೇ ಮಂದಿರೇ ಸದಾ ।
ಪದ್ಮಯಾ ಭಾರ್ಯಯಾ ಸಾಕಂ ಪದ್ಮಜೇನ ಸುತೇನ ಚ ॥36॥

ಮಹಾತ್ಮ್ಯವನ್ನು ತಿಳಿಯಪಡಿಸುತ್ತೇನೆ. ಇದರಲ್ಲಿ ಆಗಬಹುದಾದ ನನ್ನ ಅಪರಾಧವನ್ನು ಕ್ಷಮಿಸು. ಭಕ್ತವತ್ಸಲನಾದ ಹೇ ಸ್ವಾಮಿಯೇ! ಪಾದಮಾಹಾತ್ಮ್ಯವನ್ನು ಶ್ರವಣಮಾಡುವ ಭಕ್ತರುಗಳ ಮಹತ್ತರವಾದ ಅಜ್ಞಾನವೆಂಬ ಅಂಧಕಾರವನ್ನು ಭೇದನಮಾಡಿ ಜ್ಞಾನವೆಂಬ ಪ್ರಕಾಶವನ್ನು ದಯಪಾಲಿಸಿ, ನಿನ್ನನ್ನು ಹೊಂದುವ ಮಾರ್ಗವನ್ನು ತೋರಿಸುವುದಕ್ಕಾಗಿ ಪಾದದಲ್ಲಿ ಚಕ್ರರೇಖೆಯನ್ನು ಧಾರಣ ಮಾಡಿರುವಿ (32). ಪಾದ ಮಾಹಾತ್ಮೆಯನ್ನು ತಿಳಿದು ಮನನ ಮಾಡುವ ಭಕ್ತರಿಗೆ ಅಂಗಸಹಿತವಾದ ಚತುರ್ವೇದ-ಇತಿಹಾಸ-ಪುರಾಣ-ಮಂತ್ರ-ಉಪನಿಷದ್ರೂಪವಾದ ಸಮಸ್ತವಿದ್ಯೆಯನ್ನೂ ಅನುಗ್ರಹಿಸುತ್ತೇನೆಂದು ತಿಳಿಸುವುದಕ್ಕಾಗಿ ಪಾದದಲ್ಲಿ ಶಂಖರೇಖೆಯನ್ನು ಧಾರಣ ಮಾಡಿರುವಿ. (34) ಶ್ರವಣಮನನಾಂತರದಲ್ಲಿ ಪಾದಮಹಾತ್ಮ್ಯೆಯನ್ನು ಧ್ಯಾನ ಮಾಡುವ ಭಕ್ತರಿಗೆ ತೊಂದರೆಯನ್ನುಂಟು ಮಾಡುವ ಮೂರ್ಖರಾದ, ದುಷ್ಟರಾದ ದೈತ್ಯ-ರಕ್ಷ-ಪಿಶಾಚ ಕೂಷ್ಮಾಂಡ-ಬ್ರಹ್ಮರಾಕ್ಷರನ್ನು ಚೆನ್ನಾಗಿ ಪುಡಿ ಪುಡಿ ಮಾಡುತ್ತೇನೆಂದು ತಿಳಿಸಲು ಪಾದದಲ್ಲಿ ಗದಾ ರೇಖೆಯನ್ನು ಧಾರಣ ಮಾಡಿರುವಿ. (35) ನಿನ್ನ ಪಾದಮಹಾತ್ಮೆಯನ್ನು ಪ್ರವಚನ ಮಾಡುವವರ-ಹೇಳುವವರ ಉತ್ತಮವಾದ ಮಂದಿರದಲ್ಲಿ ಭಾರ್ಯೆಯಾದ ಲಕ್ಷ್ಮಿದೇವಿ, ಪದ್ಮಸಂಭವನಾದ ಸುತನಾದ ಬ್ರಹ್ಮದೇವರು ಇವರೇ ಮುಂತಾದ ನಿನ್ನ ಕುಟುಂಬ ಸಹಿತನಾಗಿ ಪದ್ಮನಾಭನಾದ ನಾನು ವಾಸ ಮಾಡುತ್ತೇನೆ ಎಂದು ಸೂಚಿಸುವುದಕ್ಕಾಗಿಯೇ ನೀನು ಪಾದಕಮಲದಲ್ಲಿ ಪದ್ಮರೇಖೆಯನ್ನು

ಕುಟುಂಬೀ ಪದ್ಮನಾಭೋಽಹಂ ವಸಾಮೀತ್ಯೇವ ಸೂಚಯನ್ ।
ಪದ್ಮರೇಖಾಂ ಪಾದಪದ್ಮೇ ಪದ್ಮೇಶ ತ್ವಂ ಧರನ್ನಸಿ ॥37॥

ವಿರಜಾ ಮಾನಸಸರೋ ಧನುಷ್ಕೋಟೀ ಮಹಾಘಹೃತ್ ।
ಗಂಗಾದಿಸರ್ವತೀರ್ಥಾನಿ ತ್ವತ್ಪಾದಾಬ್ಜೇ ವಸಂತಿ ಹಿ ॥38॥

ಸಹಸ್ರಪತ್ರಪೂರ್ವಾಣಿ ಜಾಯಂತೇ ತೇಷು ನಿತ್ಯಶಃ ।
ಇತಿ ಸೂಚಯಿತುಂ ಪಾದೇ ಪದ್ಮರೇಖಾಂ ಧರನ್ನಸಿ ॥39॥

ಪದ್ಮಾ ಹೃತ್ಪದ್ಮಸಂಸ್ಥಾಽಪಿ ಪಾದಪದ್ಮಸ್ಯ ಮೂಲಗಾ ।
ಪಶ್ಯಂತೀ ನೇತ್ರಪದ್ಮಾಭ್ಯಾಂ ತ್ವತ್ಸೌಂದರ್ಯಮಲೌಕಿಕಮ್ ॥40॥

ಧ್ಯಾಯಂತೀ ಚ ಸ್ವಹೃತ್ಪದ್ಮೇ ತ್ವನ್ಮಾಹಾತ್ಮ್ಯಂ ಶ್ರುತೀರಿತಮ್ ।
ಭಜಂತೀ ಕರಪದ್ಮಾಭ್ಯಾಂ ಸ್ವಾಂಕೇಽರ್ಚನಕರೀ ಸದಾ ॥41॥

ಇತಿ ಸೂಚಯಿತುಂ ಪಾದೇ ಪದ್ಮರೇಖಾಂ ಧರನ್ನಸಿ ।
ಪಾದಪಂಕಜಮಾಹಾತ್ಮ್ಯಂ ಲಿಖಿತ್ವೈವ ಸ್ವಹಸ್ತತಃ ॥42॥

ಧಾರಣ ಮಾಡಿರುವಿ. (36–37) ಮಹಾಪಾಪ ಪರಿಹಾರಕಗಳಾದ ತೀರ್ಥಸಮೂಹ, ವಿರಜಾನದೀ, ಮಾನಸ ಸರೋವರ, ಧನುಷ್ಕೋಟೀ, ಗಂಗಾದಿ ಸಕಲತೀರ್ಥಗಳೂ ನಿನ್ನ ಪಾದಕಮಲ ಗಳಲ್ಲಿ ವಾಸವಾಗಿರುತ್ತವೆಯೆಂಬುದು ಶ್ರುತಿ ಸ್ಮೃತಿ ಪ್ರಸಿದ್ಧವು. (38) ನಿತ್ಯದಲ್ಲಿಯೂ ಕೆಂದಾವರೆಯೇ ಮೊದಲಾದ ಶ್ರೇಷ್ಠಪುಷ್ಪಗಳು ಈ ತೀರ್ಥಗಳಲ್ಲಿ ಉದ್ಭವವಾಗುತ್ತವೆಯೆಂಬುದರ ದ್ಯೋತಕವಾಗಿ ಪದ್ಮರೇಖೆಯನ್ನು ನೀನು ಪಾದದಲ್ಲಿ ಧರಿಸಿರುವಿ. (39) ಲಕ್ಷ್ಮೀದೇವಿಯು ಹೃದಯಕಮಲದಲ್ಲಿ ವಾಸವಾಗಿದ್ದರೂ ಸಹ ನಿನ್ನ ಪಾದಪದ್ಮಗಳ ಹತ್ತಿರ ಹೋಗಿ ತನ್ನ ನೇತ್ರಗಳಿಂದ ಅಲೌಕಿಕವಾದ ಅಪ್ರಾಕೃತವಾದ ಪಾದಸೌಂದರ್ಯವನ್ನು ನೋಡುತ್ತಿರುತ್ತಾಳೆ. ಶ್ರುತಿಪ್ರತಿಪಾದ್ಯವಾದ ನಿನ್ನ ಪಾದಮಾಹಾತ್ಮ್ಯವನ್ನು ತನ್ನ ಹೃದಯಕಮಲದಲ್ಲಿ ಧ್ಯಾನಮಾಡುತ್ತಿರುತ್ತಾಳೆ. ತನ್ನ ಕರಕಮಲ ಗಳಿಂದ ನಿನ್ನ ಸಮೀಪದಲ್ಲಿದ್ದುಕೊಂಡು ಯಾವಾಗಲೂ ಭಜಿಸುತ್ತಿರುತ್ತಾಳೆ. ತನ್ನ ಕರಕಮಲಗಳಿಂದ ನಿನ್ನ ಸಮೀಪದಲ್ಲಿ ಇದ್ದುಕೊಂಡು ಯಾವಾಗಲೂ ಭಜಿಸುತ್ತಿರುತ್ತಾಳೆ. ನಿನ್ನ ಪಾದಸೇವಕಳಾಗಿ ಸೇವಿಸುತ್ತಿರುತ್ತಾಳೆ. ಹೀಗೆ ಪದ್ಮಸಂಭವಳಾದ ಲಕ್ಷ್ಮೀದೇವಿಯು ಪಾದದರ್ಶನ–ಧ್ಯಾನ–ಸೇವೆಗಳನ್ನು ಮಾಡುವಳೆಂಬುದನ್ನು ಸೂಚಿಸು ವುದಕ್ಕಾಗಿಯೇ ನೀನು ಪಾದದಲ್ಲಿ ಪದ್ಮರೇಖೆಯನ್ನು ಧಾರಣ ಮಾಡಿರುವಿ. (41) ಇಂತಹ ಅಪೂರ್ವವಾದ ನಿನ್ನ ಪಾದಪಂಕಜ ಮಹಾತ್ಮೆಯನ್ನು ತಮ್ಮ ಹಸ್ತದಿಂದ ಲೇಖನ ಮಾಡಿ ನಿನ್ನ ಭಕ್ತಾಗ್ರೇಸರರಿಗೆ ದಾನಮಾಡುವ ಸಜ್ಜನರಿಗೆ ಮಹಾ ಪಾಪಗಳೆಂಬ ಪರ್ವತವನ್ನೇ ಭೇದನ ಮಾಡುತ್ತೇನೆ ಎಂದು ತಿಳಿಸುವುದಕ್ಕಾಗಿ ಪಾದದಲ್ಲಿ ವಜ್ರರೇಖೆಯನ್ನು

ದಾತೄಣಾಂ ವೈಷ್ಣವಾಗ್ರೇಭ್ಯೋ ಮಹಾಘೌಘಾದ್ರಿಭೇದನಮ್ ।
ಕರೋಮೀತಿ ಜ್ಞಾಪನಾಯ ವಜ್ರರೇಖಾಂ ಪದೇಽಧರಃ ॥43॥

ಮಾಹಾತ್ಮ್ಯಸ್ಯಾರ್ಚಕಾನಾಂ ತು ಗಜಾನ್ ಕಾಮಾದಿಸಂಜ್ಞಿತಾನ್ ।
ಅದಮ್ಯಾನ್ ದಮಯಾಮೀತಿ ಹ್ಯಂಕುಶಾಖ್ಯಾಂ ಪದೇ ಧರಃ ॥44॥

ಶ್ರುತ್ವಾಽಽದರೇಣ ಸಂತುಷ್ಟಾನ್ ಭಕ್ತಾನ್ ಧ್ವಜವದುಚ್ಛ್ರಿತಾನ್ ।
ಕರೋಮೀತಿ ಜ್ಞಾಪನಾಯ ಧ್ವಜರೇಖಾಂ ಪದೇಽಧರಃ ॥45॥

ಅಬಗ್ನೀರನಭೋಽಹಂಕೃನ್ಮಹತ್ತತ್ತ್ವಗುಣತ್ರಯೈಃ ।
ಕ್ರಮಾದ್ದಶಗುಣೈರಂಡಮಾವೃತಂ ಪರಮಾದ್ಭುತಮ್ ॥46॥

ಯನ್ನಖಾಗ್ರಾದ್ವಿನಿರ್ಭಿನ್ನಂ ತ್ವತ್ಪಾದಂ ಕೋಽನುವರ್ಣಯೇತ್ ।
ಶೇಷೋ ಮಹತ್ತಪಸ್ತಪ್ತ್ವಾ ತ್ವಾಮಾರಾಧ್ಯ ಜಗತ್ಪತಿಮ್ ॥47॥

ತ್ವತ್ಪ್ರಸಾದಾನ್ಮಹಾಭಾಗ್ಯಂ ಯದ್ಯಪ್ಯಾಪ ಸುದುರ್ಲಭಮ್ ।
ಶಯ್ಯಾಸನಂ ಪಾದುಕೇ ಚ ಹ್ಯಾತಪತ್ರಮಭೂತ್ತದಾ ॥48॥

ಧಾರಣ ಮಾಡಿರುವಿ. (43) ಮಹಾತ್ಮೆಯನ್ನು ಬರೆದು ಸೂಚಿಸುವವರಿಗೆ ಕಾಮ, ಕ್ರೋಧ, ಮದ, ಮತ್ಸರ, ಮೋಹ, ಲೋಭಗಳೆಂಬವುವನ್ನು ನಿಗ್ರಹಿಸಲು ಅಶಕ್ಯವಾದ ಮದೋನ್ಮತ್ತಗಜಗಳನ್ನು ಅಂಕುಶಗಳಿಂದ ದಮನ ಮಾಡುತ್ತೇನೆಂದು ತಿಳಿಸಲು ನೀನು ಪಾದಪದ್ಮಗಳಲ್ಲಿ 'ಅಂಕುಶ' ರೇಖೆಯನ್ನು ಧರಿಸಿರುವವನಾಗಿರುತ್ತೀ (44) ಆದುದರಿಂದ ಪಾದಮಾಹಾತ್ಮೆಯನ್ನು ಕೇಳಿ ಸಂತೃಪ್ತರಾದ ಭಕ್ತರನ್ನು ಜನಸ್ತೋಮದಲ್ಲಿ ಜಾತಿ, ಗೋತ್ರ, ಜ್ಞಾನ, ವೈರಾಗ್ಯ, ಧನ, ಧಾನ್ಯಾದಿಸಂಪತ್ತುಗಳಲ್ಲಿ ಧ್ವಜದಂತೆ, ಹರಿಪ್ರಸಾದ ವಿಷಯದಲ್ಲಿ ಅತ್ಯಂತ ಉತ್ಕೃಷ್ಟರನ್ನಾಗಿ ಮಾಡುತ್ತೇನೆಂದು ತಿಳಿಸುವುದಕ್ಕಾಗಿ ಪಾದದಲ್ಲಿ ಧ್ವಜರೇಖೆಯನ್ನು ಧಾರಣ ಮಾಡಿರುವಿ. (45) ಕ್ರಮವಾಗಿ ಹತ್ತು ಹತ್ತು ಪಟ್ಟು ಅಧಿಕವಾಗಿ ವಿಸ್ತೀರ್ಣವುಳ್ಳ, ನೀರು, ಅಗ್ನಿ, ವಾಯು, ಆಕಾಶ, ಅಹಂಕಾರ, ಮಹತ್ತತ್ತ್ವ, ಸತ್ವ, ರಜಸ್, ತಮೋ ಗುಣಗಳಿಂದ ಆವೃತವಾದ, ಐವತ್ತು ಕೋಟಿ ಯೋಜನ ವಿಸ್ತೀರ್ಣವಾದ ಪರಮಾದ್ಭುತವಾದ ಬ್ರಹ್ಮಾಂಡವು, ನಿನ್ನ ಪಾದ ನಖಾಗ್ರದಿಂದ ವಿನಿರ್ಭಿನ್ನವಾಗಿದೆಯೆಂದ ಮೇಲೆ, ನಿನ್ನ ಪಾದವನ್ನು ವರ್ಣಿಸಲು ಯಾರು ಸಮರ್ಥರು? ಜಗತ್ಪತಿಯಾದ ನಿನ್ನನ್ನು ಶೇಷದೇವರು ಬಹುಕಠಿಣವಾದ ಬಹಳ ವಿಧವಾದ ತಪಸ್ಸನ್ನಾಚರಿಸಿ, ನಿನ್ನ ಪ್ರಸಾದಮಾತ್ರದಿಂದ, ಇತರರಿಗೆ ದುರ್ಲಭವಾದ ಶಯ್ಯಾ, ಆಸನ, ಪಾದುಕಾ ಹಾಗೂ ಛತ್ರ ರೂಪವನ್ನು ಧರಿಸುವ ಭಾಗ್ಯವನ್ನು ಪಡೆದನು. (46–48) ಶೇಷ ದೇವರಿಗೆ ಮಾತ್ರ

ತತ್ಸುಖಂ ತು ರಮಾ ದೃಷ್ಟ್ವಾ ಮೇನೇ ಶೇಷೈಕಭಾಜನಮ್ ।
ಅಹಮೇವಾನುಭೋಕ್ಷ್ಯಾಮಿ ಮತ್ಪತೇರಂಗಸಂಗಜಮ್ ॥49॥

ಆತಪತ್ರೇಣ ಯತ್ಪ್ರಾಪ್ಯಂ ಪಾದುಕಾಭ್ಯಾಂ ಚ ಯತ್ಸುಖಮ್ ।
ಸರ್ವಂ ಭಾಗ್ಯಂ ಮಮೈವ ಸ್ಯಾದಿತಿ ವಕ್ಷಃಸ್ಥಿತಾಽಪಿ ಸಾ ॥50॥

ವೈಕುಂಠಾದಿಷು ಲೋಕೇಷು ಚತುರ್ದಶಸು ವೈ ತಥಾ ।
ಬ್ರಹ್ಮಾಂಡಾಂತರ್ಬಹಿಶ್ಚಾಪಿ ಸರ್ವಹೃತ್ಕಮಲೇಷ್ವಪಿ ॥51॥

ಸಂಸ್ಥಿತೋ ಭಗವಾನ್ ಯತ್ರ ವಸೇಽಹಂ ತತ್ರ ತತ್ರ ಹಿ ।
ಕ್ರೀಡಾವನಮಭೂನ್ಮಂದವಾಯುಗಂಧಾದಿರಂಜಿತಮ್ ॥52॥

ಮಲ್ಲಿಕಾಕೇತಕೀಜಾತಿಚಂಪಕಾಕುಸಮಾನ್ವಿತಮ್ ।
ಖರ್ಜೂರಪನಸದ್ರಾಕ್ಷಾಕದಲೀನಾರಿಕೇಲಕೈಃ ॥53॥

ಬದರೀಮಾತುಲಂಗೈಶ್ಚ ಕಪಿತ್ಥೈಶ್ಚೂತದಾಡಿಮೈಃ ।
ಜಂಬೂಜಂಬೀರಕ್ರಮುಖಪ್ರಮುಖೈಃ ಫಲದಾಯಕೈಃ ॥54॥

ಪಾರಿಜಾತೈಃ ಕಲ್ಪವೃಕ್ಷೈರತ್ಯಂತಫಲದಾಯಕೈಃ ।

ಲಭಿಸಿದ ಈ ಭಾಗ್ಯವನ್ನು ಕಂಡ ಲಕ್ಷ್ಮೀದೇವಿಯು, ಪತಿಯ ಅಂಗಾಂಗಗಳ ಸೇವೆಯಿಂದ ಲಭಿಸುವ ಸುಖವನ್ನು ತಾನೇ ಅನುಭವಿಸಬೇಕೆಂದು ವಿಚಾರ ಮಾಡಿದಳು. (49) ಶ್ರೀನಿವಾಸನ ಛತ್ರ-ಪಾದುಕಾದಿಗಳಿಂದ ಹೊಂದಲು ಶಕ್ಯವಾದ ಸರ್ವಸುಖ ಹಾಗೂ ಸರ್ವಭಾಗ್ಯವೂ ನನಗೇ ಇರಲಿ ಎಂದು ವಿಚಾರಿಸಿದ ರಮಾದೇವಿಯು, ತಾನು ವಕ್ಷಸ್ಥಳದಲ್ಲಿದ್ದರೂ ಸಹ ವೈಕುಂಠ, ಶ್ವೇತದ್ವೀಪ, ಅನಂತಾಸನ, ಭೂರ್ಭುವಾದಿಹದಿನಾಲ್ಕು ಲೋಕಗಳು, ಬ್ರಹ್ಮಾಂಡದ ಹೊರಗೂ, ಒಳಗೂ –ಹೀಗೆ ಶ್ರೀನಿವಾಸನು ಎಲ್ಲೆಲ್ಲಿ ವಾಸವಾಗಿರುವನೋ ಆ ಎಲ್ಲ ಸ್ಥಳಗಳಲ್ಲಿಯೂ ತಾನು ಹೊರಗೂ ಒಳಗೂ–ಹೀಗೆ ಶ್ರೀನಿವಾಸನು ಎಲ್ಲೆಲ್ಲಿ ವಾಸವಾಗಿರುವನೋ ಆ ಎಲ್ಲ ಸ್ಥಳಗಳಲ್ಲಿಯೂ ತಾನು ವಾಸಿಸಬೇಕೆಂದು ಸುಮಧುರ ಮಂದವಾಯು ಗಂಧಾದಿಗಳಿಂದ ರಂಜಿತವಾದ ದಿವ್ಯವಾದ ಕ್ರೀಡಾವನ ರೂಪವನ್ನು ಧರಿಸಿದಳು. (50–53) ಈ ಕ್ರೀಡಾವನವು ಮಲ್ಲಿಗೆ, ಕೇದಗಿ, ಜಾಜಿ, ಸಂಪಿಗೆ ಮುಂತಾದ ಸುಗಂಧ ಕುಸುಮಗಳಿಂದಲೂ, ಖರ್ಜೂರ, ಹಲಸು, ದ್ರಾಕ್ಷಾ, ಬಾಳೆ, ತೆಂಗು, ಮಾತುಲಿಂಗ, ಕಪಿತ್ಥ, ಮಾವು, ದಾಳಿಂಬೆ, ನೇರಳೆ, ಲಿಂಬೆ ಇವೇ ಮುಂತಾದ ಫಲವನ್ನು ಕೊಡುವ ವೃಕ್ಷಗಳಿಂದಲೂ, ಕಲ್ಪವೃಕ್ಷ, ಶ್ರೀಚಂದನ, ಮಧುರವಾದ ಕಬ್ಬು, ಮಂದಾರ ಸಂಕುಲ, ಮಧುಕ ಮುಂತಾದ ಮನೋಹರ ಗಿಡಗಳಿಂದಲೂ ಯುಕ್ತವಾಗಿದ್ದು, ಆ ಕ್ರೀಡಾವನದಲ್ಲಿ

ಶ್ರೀಚಂದನೇಕ್ಷುಮಂದಾರೈಃ ಸಂಕುಲಂ ಮಧುಕಾದಿಭಿಃ ॥55॥

ತಸ್ಮಿನ್ ಸರಃ ಸ್ವಚ್ಛನೀರಂ ಸ್ವರ್ಣಸೋಪಾನಮಂಡಿತಮ್ ।
ನವರತ್ನಾಭಕಮಲೈಃ ಸುವರ್ಣಾಭಕುಶೇಶಯೈಃ ॥56॥

ಪೀತವರ್ಣೈರುತ್ಪಲೈಶ್ಚ ರಕ್ತನೀಲೋತ್ಪಲಾಂಚಿತಮ್ ।
ಮೀನಕಚ್ಛಪಹಂಸಾಢ್ಯಂ ಮತ್ತಷಟ್ಪದನಾದಿತಮ್ ॥57॥

ತತ್ರ ರತ್ನಮಯಂ ಕ್ರೀಡಾಮಂಡಪಂ ಚಾಭವದ್ರಮಾ ।
ದಿವ್ಯರತ್ನಮಯಂ ತೇಜಃಪುಂಜಪೀಠಮಭೂನ್ಮುದಾ ॥58॥

ತತ್ರ ತ್ವಾಮರ್ಚಯಂತ್ಯಂಬಾ ಷೋಡಶೈರುಪಚಾರಕೈಃ ।
ಪಾಯಸಾನ್ನಂ ವ್ಯಂಜನಾದಿ ಪಂಚಭಕ್ಷಾಮೃತಾನಿ ಚ ॥59॥

ನೂತನಾನಿ ಪವಿತ್ರಾಣಿ ನಾನಾರುಚಿಕರಾಣಿ ಚ ।
ಆರ್ದ್ರಕಾದೀನಿ ಮೂಲಾನಿ ಸ್ವಾದೂದಂ ಸ್ವರ್ಣಪಾತ್ರಕೇ ॥60॥

ನಿತ್ಯತೃಪ್ತಾಯಾರ್ಪಯಂತೀ ಪೂರ್ಣಕಾಮಾಯ ಚಾದರಾತ್ ।
ಈರಾಂಕಸರ್ವಸಾರಾಯ ಸರ್ವಸಾರಾತ್ಮಿಕಾ ಸ್ವಯಮ್ ॥61॥

ಸ್ವಚ್ಛವಾದ ನೀರಿನಿಂದ ಕೂಡಿದ ಬಂಗಾರದ ಮೆಟ್ಟಿಲುಗಳಿಂದ ಕೂಡಿದ ಸರೋವರವಿರುವದು. ಸರೋವರದಲ್ಲಿ ನವರತ್ನದ ಕಾಂತಿಯಂತೆ ಕಾಂತಿಯುಳ್ಳ ಕಮಲಗಳು, ಬಂಗಾರ ದಂತಿರುವ ಕುಶೇಶಯ ಪುಷ್ಪಗಳು ಹಳದಿ-ರಕ್ತ-ನೀಲ ವರ್ಣದ ಕಮಲಗಳು, ಮತ್ಸ್ಯ, ಕೂರ್ಮ, ಹಂಸ, ಮದೋನ್ಮತ್ತವಾದ ಭ್ರಮರಗಳ ಧ್ವನಿ ಇವುಗಳಿಂದ ಅತ್ಯಂತ ಶೋಭಾಯ ಮಾನವಾಗಿರುವುದು. (53-57). ಆ ಸರೋವರದಲ್ಲಿ ರಮಾದೇವಿಯೇ ರತ್ನ ಖಚಿತ ಮಂಟಪವಾದಳು. ರತ್ನಮಯವಾದ ತೇಜಪುಃಂಜವಾದ ಪೀಠ ಸ್ವರೂಪಳೂ ಸಹ ರಮಾದೇವಿಯೇ ಆದಳು. (58)ಆ ಪೀಠದಲ್ಲಿ ಜಗನ್ಮಾತೆಯಾದ ಲಕ್ಷ್ಮೀದೇವಿಯು ನಿನ್ನನ್ನು ಷೋಡಶೋಪಚಾರಗಳಿಂದ ಪೂಜಿಸುತ್ತಿರುತ್ತಾಳೆ. ಪಾಯಸ, ಅನ್ನ, ವ್ಯಂಜನ,ಪಂಚಭಕ್ಷ್ಯ, ಪಂಚಾಮೃತ, ನವೀನವಾದ ಪವಿತ್ರವಾದ ನಾನಾ ರುಚಿಯನ್ನು ಕೊಡುವ ಹಸಿದಾದ ಕಂದ ಮೂಲ, ರುಚಿಕರವಾದ ನೀರು, ಇವುಗಳನ್ನು ಬಂಗಾರದ ಪಾತ್ರೆಯಲ್ಲಿ, ಪೂರ್ಣನಾದ ನಿತ್ಯತೃಪ್ತನಾದ, ಪೂರ್ಣ ಕಾಮನಾದ, ಸರ್ವಸಾರ ಭೂತನಾದ ಪರಮಾತ್ಮನಿಗೆ, ಒಳ್ಳೆಯ ಆದರದಿಂದ ಸ್ವತಃ ತೃಪ್ತಳೂ ಸರ್ವಸಾರ ಸ್ವರೂಪಳೂ ಆದ ರಮಾದೇವಿಯು ನಿತ್ಯದಲ್ಲಿಯೂ ಅರ್ಪಿಸುತ್ತಾಳೆ. (58-61) ಅನಂತರದಲ್ಲಿ ಲಕ್ಷ್ಮೀದೇವಿಯು ತನ್ನನ್ನೇ ಸುವರ್ಣಮಯ ಸರಪಳಿಗಳಿಂದ ತೂಗು ಬಿದ್ದಿರುವ, ಸುಂದರವಾದ, ವಿಶಾಲವಾದ,

ಅಥಾತ್ಮಾನಂ ಕಲ್ಪಯಂತೀ ಡೋಲಾಮಂಚಂ ಮನೋಹರಮ್ ।
ಸುವರ್ಣಶೃಂಖಲಾಲಂಬಂ ಸುವಿಶಾಲಂ ಸುಲಕ್ಷಣಮ್ ॥62॥

ಪ್ರವಾಲಪಾದಸಂಯುಕ್ತಂ ಸುವಜ್ರಫಲಕೈರ್ವೃತಮ್ ।
ಓತಪ್ರೋತೈಃ ಸ್ವರ್ಣಪಟ್ಟೈರ್ಮಾಣಿಕ್ಯಸ್ತಬಕಾವೃತಮ್ ॥63॥

ಜಾಂಬೂನದವಿತಾನಾಢ್ಯಂ ಮುಕ್ತಾಸ್ತಬಕರಂಜಿತಮ್ ।
ಭೂರೂಪಾಽಭೂತ್ಸ್ವಯಂ ಶಯ್ಯಾ ಶ್ರೀರೂಪಾ ಸೋಪಬರ್ಹಣಮ್ ॥64॥

ದುರ್ಗಾಽಭೂತ್ಪಾದಸೇವಾರ್ಥಂ ತಾಂಬೂಲಂ ಭೋಗಸಾಧನಮ್।
ಸುವರ್ಣದಂಡವ್ಯಜನೇ ವಿದ್ಯುದಾಭೇ ಸುಚಾಮರೇ ॥65॥

ವೈಡೂರ್ಯಸ್ತಬಕಚ್ಛತ್ರಂ ಪಾದುಕೇ ರತ್ನಪೀಠಕೇ ।
ಸರ್ವರಾಜೋಪಚಾರಾಣಿ ರಾಜಚಿಹ್ನಾನಿ ಯಾನಿ ಚ ॥66॥

ಸರ್ವಾಣ್ಯಭೂದ್ರಮಾದೇವೀ ದೇವಾಯಾನಂತತೇಜಸೇ ।
ಭೋಗ್ಯವಸ್ತುಸ್ವರೂಪೇಣ ತವ ಸೇವಾಭಿಲಾಷಿಣೀ ॥67॥

ಮಹಾನಂದಾಂಬುಧೌ ಮಗ್ನಾ ರಮತೇ ಸಾ ರಮಾ ತ್ವಯಾ ।
ರಮಸೇ ರಮಯೈವ ತ್ವಂ ವೈಕುಂಠಾದಿಷು ಧಾಮಸು ॥68॥

ಪ್ರತ್ಯೇಕಾವರಣಸ್ಥೈಶ್ಚ ಮೂರ್ತಿಭಿರ್ಬ್ರಹ್ಮಪೂರ್ವಕೈಃ ।
ತ್ರಿದಶೈರ್ದಶದಿಕ್ಪಾಲೈಃ ಸೇವಿತಃ ಪರಮಾಸನೇ ॥69॥

ಹವಳದ ಪಾದಗಳಿಂದ ಕೂಡಿದ, ವಜ್ರದ ಹಲಗೆಗಳು, ಬಂಗಾರದ ಪಟ್ಟಿಗಳಿಂದ ಮಾಣಿಕ್ಯದ ಗೊಂಚಲುಗಳಿಂದಲೂ ಮುತ್ತಿನ ಗೊಂಚಲುಗಳಿಂದಲೂ ಕೂಡಿ ಶೋಭಿಸುವ ಅಲಂಕೃತವಾದ ಡೋಲಾಮಂಚವನ್ನಾಗಿ ಕಲ್ಪಿಸುವವಳಾದಳು. ಶ್ರೀರೂಪಳು ತಲೆದಿಂಬಾದಳು. ಪಾದಸೇವಾರ್ಥವಾಗಿ ದುರ್ಗಾರೂಪಳಾದಳೂ. ಭೋಗ ಸಾಧನವಾದ ತಾಂಬೂಲ, ಸುವರ್ಣದಂಡದಿಂದ ಕೂಡಿದ ಬೀಸಣಿಕೆ, ವಿದ್ಯುತ್ತಿನಂತೆ ಹೊಳೆಯುವ ಚಾಮರಗಳು, ವೈಡೂರ್ಯದ ಗೊಂಚಲುಗಳುಳ್ಳ ಛತ್ರ, ರತ್ನಪೀಠವುಳ್ಳ ಪಾದುಕೆಗಳು, ಇವುಗಳಲ್ಲದೆ, ಸರ್ವರಾಜೋಪಚಾರಗಳು, ರಾಜಚಿಹ್ನೆ ಇವುಗಳೆಲ್ಲವೂ ರಮಾದೇವಿಯೇ ಆದಳು. ಅನಂತ ತೇಜಸ್ಸುಳ್ಳ ನಿನ್ನ ಕ್ರೀಡಾರ್ಥವಾಗಿ ಭೋಗ್ಯಸ್ವರೂಪದಿಂದ ನಿನ್ನ ಸೇವಾಭಿಲಾಷಿಯಾದ ರಮಾದೇವಿಯು, ಮಹಾನಂದಸಾಗರದಲ್ಲಿ ಮುಳುಗಿ, ನಿನ್ನಿಂದ ಕೂಡಿಕೊಂಡು ಕ್ರೀಡಿಸುತ್ತಾಳೆ. ನೀನು ಸಹ ರಮೆಯಿಂದ ಕೂಡಿಕೊಂಡು ವೈಕುಂಠಾದಿ ಸಕಲ ಲೋಕಗಳಲ್ಲಿ ಕ್ರೀಡಿಸುವವನಾಗಿರುತ್ತಿರುವಿ. ಉತ್ತಮವಾದ ಆಸನದಲ್ಲಿ, ಪ್ರತ್ಯೇಕವಾಗಿ

ಶ್ರೀನಿವಾಸ ರಮಾನಾಥ ತ್ವನ್ನಾಭ್ಯಬ್ಜೇ ಚತುರ್ಮುಖಮ್ ।
ಗಿರೀಶಮಂತಃಕರಣೇ ಹ್ಯಂಗೇಷ್ವಿಂದ್ರಾದಿದೇವತಾಃ ॥70॥

ಋಷ್ಯಾದೀಂಶ್ಚ ಯಥಾವತ್ತ್ವಂ ಸರ್ವಜೀವಾಂಶ್ಚತುರ್ವಿಧಾನ್ ।
ಸೃಷ್ಟ್ವಾ ತೇಷ್ವಂತರಾವಿಶ್ಯ ಬಹಿಃಸ್ಥಿತ್ವಾಸಿ ಪಾಲಕಃ ॥71॥

ಅತ್ಯಂತಭಿನ್ನಸ್ತೈಃ ಸರ್ವೈಃ ಪೃಥಗ್ಜೀವಜಡಾತ್ಮಕೈಃ ।
ಪಾರತಂತ್ರ್ಯಾದಿದೋಷೋಜ್ಝಃ ಸ್ವಾತಂತ್ರ್ಯಾದಿಗುಣೋರ್ಜಿತಃ ॥72॥

ನಿರಪೇಕ್ಷೋ ನಿತ್ಯತೃಪ್ತಃ ಪೂರ್ಣಕಾಮಸ್ತ್ವಮಾರ್ದ್ರಹೃತ್ ।
ಸತ್ಯಕೃತ್ಸತ್ಯಸಂಕಲ್ಪೋ ಮಾಬ್ರಹ್ಮೇಶೇಂದ್ರವಂದಿತಃ ॥73॥

ಸರ್ವೇಷಾಂ ಪ್ರೇರಕಸ್ತ್ವಂ ಹಿ ಮುಕ್ತಾಮುಕ್ತನಿಯಾಮಕಃ ।
ಅಘಟ್ಯಘಟನೇ ಶಕ್ತೋ ಹ್ಯಗುಣ್ಯಗುಣಮಂಡಿತಃ ॥74॥

ಅಚಿಂತ್ಯಾಶ್ಚರ್ಯಚರ್ಯಸ್ತ್ವಂ ಬ್ರಹ್ಮಾಂಡಾಂತರ್ಬಹಿಸ್ಥಿತಃ ।
ಅಣೋರಣೀಯಾನ್ಮಹತೋ ಮಹೀಯಾನ್ ಸರ್ವಗಃ ಸಮಃ ॥75॥

ಆವರಣಲದಲ್ಲಿರತಕ್ಕ ಮೂರ್ತಿಗಳಿಂದಲೂ, ಬ್ರಹ್ಮನೇ ಮೊದಲಾದವರಿಂದಲೂ, ಇಂದ್ರಾದಿದಶ ದಿಕ್ಪಾಲಕರುಗಳಿಂದಲೂ ಸೇವಿತನಾಗಿರುವಿ (69) ರಮಾನಾಥನಾದ ಶ್ರೀನಿವಾಸನೇ ! ನಿನ್ನ ಹೃದಯಕಮಲದಲ್ಲಿ ಚತುರ್ಮುಖನನ್ನು, ಅಂತಃಕರಣದಲ್ಲಿ ರುದ್ರದೇವರನ್ನು, ಮುಖ ಮುಂತಾದ ಅವಯುವಗಳಲ್ಲಿ ಇಂದ್ರಾದಿ ದೇವತೆಗಳನ್ನು, ಯಥಾಯೋಗ್ಯವಾಗಿ ಋಷ್ಯಾದಿಗಳನ್ನು, ಜರಾಯುಜ, ಸ್ವೇದಜ, ಉದ್ಬಜ, ಅಂಡಜ (ಗರ್ಭದಾನದಿಂದ ಹುಟ್ಟುವವು, ಬೆವರಿನಿಂದ ಹುಟ್ಟುವವು ಜೇನು, ಉದ್ಭಿಜ್ಜ–ಗಿಡಮರ, ಅಂಡಜ ಪಕ್ಷಿಗಳೆಂಬ) ಎಂಬ ಚತುರ್ವಿಧವಾದ ಜೀವರಾಶಿಗಳನ್ನು ಸೃಷ್ಟಿಸಿ, ಅವುಗಳ ಅಂತರ್ಭಾಗದಲ್ಲಿ ಹಾಗೂ ಬಹಿರ್ಭಾಗದಲ್ಲಿದ್ದುಕೊಂಡು, ಸಕಲ ಜೀವರಾಶಿಗಳಿಗೆ ಪಾಲಕನಾಗಿರುವಿ. (70–71) ಅತ್ಯಂತ ಭಿನ್ನವಾದ ಆ ಪ್ರತ್ಯೇಕವಾಗಿ ಜೀವಜಡಾತ್ಮಕವಾದ, ಸರ್ವ ಜಗತ್ತಿನ ದೆಶೆಯಿಂದ ಭಿನ್ನವಾಗಿ, ಪಾರತಂತ್ರ್ಯಾದಿ ದೋಷಗಳಿಂದ ದೂರನಾದ, ಸ್ವಾತಂತ್ರ್ಯಾದಿ ಗುಣಗಳಿಂದ ಪೂರ್ಣನಾದ, ಭಕ್ತರ ವಿಷಯದಲ್ಲಿ ಆರ್ದ್ರವಾದ (ಕರಗಿದ) ಹೃದಯವುಳ್ಳ ನೀನು ನಿತ್ಯ ತೃಪ್ತನು, ಪೂರ್ಣಕಾಮನೂ, ನಿರಪೇಕ್ಷನು; ಸತ್ಯವಾದ ಪ್ರಪಂಚದ ಸೃಷ್ಟಿಕರ್ತನು, ಸತ್ಯ ಸಂಕಲ್ಪನು; ರಮಾ, ಬ್ರಹ್ಮ, ಶೇಷ, ಗರುಡ –ಇವರೇ ಮುಂತಾದ ದೇವತಾಪ್ರಮುಖರಿಂದ ವಂದಿತನಾಗಿರುವಿ. (72–73) ಸರ್ವರಿಗೂ ನೀನೇ ಪ್ರೇರಕನು, ಅಘಟ್ಯಘಟನಾಶಕ್ತನು, ಅಗಣಿತಗುಣಮಂಡಿತನೂ, ಮುಕ್ತಾಮುಕ್ತ ನಿಯಾಮಕನೂ ಆಗಿರುವಿ. (74) ಅಚಿಂತ್ಯವಾದ, ಆಶ್ಚರ್ಯಕರವಾದ ವ್ಯಾಪಾರಗಳುಳ್ಳ ನೀನು ಬ್ರಹ್ಮಾಂಡದ ಅಂತಃರ್ಬಹಿರ್ಭಾಗದಲ್ಲಿ ಇದ್ದುಕೊಂಡು

ಸರ್ವಾಧಾರಃ ಸರ್ವಸಾಕ್ಷೀ ಸರ್ವಾಪೇಕ್ಷ್ಯೋऽತಿಸುಂದರಃ ।
ಸರ್ವೋತ್ತಮಶ್ಚ ಸರ್ವಜ್ಞಃ ಸರ್ವಸ್ವಾಮೀ ಚ ಸರ್ವದಃ ॥76॥

ಸರ್ವಶಕ್ತೋऽಜ್ಞೇಯಚರ್ಯೋ ವ್ಯಕ್ತೋऽವ್ಯಕ್ತಃ ಸನಾತನಃ ।
ಶೇಷೋऽಶೇಷಶ್ಚ ನಿರ್ಲಿಪ್ತೋ ಬ್ರಹ್ಮಣ್ಯಃ ಶಾಶ್ವತಃ ಶುಭಃ ॥77॥

ಚತುರ್ವರ್ಗೈಃ ಸದಾ ಹೀನಶ್ಚತುರ್ಧರ್ಮಪ್ರದರ್ಶಕಃ ।
ಚತುಃಪುಮರ್ಥದಾತಾ ಚ ಚತುರ್ಮೋಕ್ಷಪ್ರದಃ ಶ್ರುತಃ ॥78॥

ಅಧೋಕ್ಷಜೋऽಪ್ರಾಕೃತಸ್ತ್ವಂ ಅನಂತಮಹಿಮಾ ತವ ।
ಮೂಲರೂಪೀ ಹ್ಯನಂತಸ್ತ್ವಂ ಅವತಾರಾಸ್ತಥಾವಿಧಾಃ ॥79॥

ನಾಮಧೇಯಾನ್ಯನಂತಾನಿ ಜ್ಞಾನಾನಂದಾದಯೋ ಗುಣಾಃ ।
ಅನಂತವೇದವೇದ್ಯಸ್ತ್ವೈರವೇದ್ಯೋऽನಂತಸೌಖ್ಯದಃ ॥80॥

ಅಹೋ ಭಾಗ್ಯಮಹೋಭಾಗ್ಯಂ ರಮೇಶ ತ್ವತ್ಪದಾಂಬುಜೇ ।
ನಿವಿಷ್ಟಮನಸಾಂ ಸೌಖ್ಯಮಿಹಾಮುತ್ರಾಭಿವರ್ಧತೇ ॥81॥

ಅಣುವಿನಲ್ಲಿ ಅಣುವಾಗಿಯೂ, ಮಹತೋ ಮಹೀಯನಾಗಿಯೂ, ಎಲ್ಲ ಪ್ರದೇಶಗಳಲ್ಲಿಯೂ ಇದ್ದುಕೊಂಡು ಸಮಾಧಿಕರಹಿತನಾಗಿ ಸರ್ವಕ್ಕೂ ಆಧಾರಭೂತನಾಗಿ, ಸರ್ವ ವಸ್ತುಗಳನ್ನು ಪ್ರತ್ಯಕ್ಷ ನೋಡುವವನಾಗಿ ಸರ್ವರಿಂದಲೂ ಆದರದಿಂದ ಅಪೇಕ್ಷ್ಯನಾಗಿರುವಿ. ಅತಿ ಸುಂದರ, ಸರ್ವೋತ್ತಮ, ಸರ್ವಜ್ಞ ಯಾವಾಗಲೂ ಸರ್ವ ಸ್ವಾಮಿ, ಸರ್ವಶಕ್ತ, ತಿಳಿಯಲು ಅಸಾಧ್ಯವಾದ ವ್ಯಾಪಾರವುಳ್ಳವ, ವ್ಯಕ್ತಾವ್ಯಕ್ತ, ಸನಾತನ, ಶೇಷ ಅಶೇಷ, ನಿಲೀಪ್ತ, ಶಾಶ್ವತನು, ಮಂಗಲಕರನೂ ಆದ ನೀನು ಬ್ರಾಹ್ಮಣದಿಂದ ಅಪೇಕ್ಷಿತನಾಗಿರುವಿ. (75–77) ಚತುರ್ವಿಧ ನಾಶರಹಿತನಾದ ನೀನು ಚತುರ್ವಿಧವಾದ ವರ್ಣಾಶ್ರಮ ಧರ್ಮಪ್ರವರ್ತಕ ನಾಗಿರುವಿ. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥ ಹಾಗೂ ಸಾಯುಜ್ಯ, ಸಾರೂಪ್ಯ, ಸಾಮೀಪ್ಯ ಹಾಗೂ ಸಾಲೋಕ್ಯವೆಂಬ ಚತುರ್ವಿಧಮೋಕ್ಷಪ್ರದಾತನು ನೀನೇ ಎಂದು ಶ್ರುತನಾಗಿರುವಿ. (78) ಅಪ್ರಾಕೃತನು ಅಧೋಕ್ಷಜನು ಆದ ನೀನು ಮೂಲರೂಪದಲ್ಲಿ ಅನಂತನಾಗಿರುವಿ. ನಿನ್ನ ಅವತಾರಗಳೂ ಸಹ ಅದೇ ಶಕ್ತಿಯನ್ನು ಹೊಂದಿರುವವು. ನಿನ್ನ ಮಹಿಮೆಯು ಅನಂತವಾಗಿದೆ. (79) ನಿನ್ನ ಹೆಸರುಗಳು ಅನಂತವಾಗಿವೆ. ನಿನ್ನ ಜ್ಞಾನಾನಂದಾದಿ ಗುಣಗಳು ಸಹ ಅನಂತವಾಗಿವೆ. ಅನಂತ ವೇದಗಳಿಂದ ವೇದ್ಯನಾದ ನೀನು ಅನಂತ ಸೌಖ್ಯಪ್ರದನಾಗಿ ಸಕಲಗುಣಗಳ ದೆಶೆಯಿಂದ ಅವೇದ್ಯನಾಗಿರುವಿ. (80) ಹೇ ರಮೇಶನೇ ! ನಿನ್ನ ಪಾದಾರವಿಂದಗಳಲ್ಲಿ ಮನಸ್ಸನ್ನಿಟ್ಟವರಿಗೆ

ತವ ಪ್ರಸಾದಲೇಶಸ್ಯ ಲೇಶಲೇಶಾತಿಲೇಶತಃ ।
ಲವಮಾತ್ರಂ ಯೈಸ್ತು ಲಬ್ಧಂ ತೈರಲಭ್ಯಂ ನ ಕಿಂಚನ ॥82॥

ಚರಿತ್ರಾಣ್ಯತಿಚಿತ್ರಾಣಿ ಮಹಾಂತಿ ಸುಬಹೂನ್ಯಪಿ ।
ತವ ನಾನಾವತಾರೇಷು ದರ್ಶಯಸ್ಯನುವರ್ತಿನಾಮ್ ॥83॥

ಕೀಟೋಽಪಿ ತ್ವದ್ದಯಾಲೇಶಾತ್ ಸಾಮ್ರಾಜ್ಯಮನುಭುಕ್ತವಾನ್ ।
ತ್ವತ್ಪಾದಪದ್ಮಸಂಪರ್ಕಲೇಶಲೇಶಾತಿಲೇಶತಃ ॥84॥

ದೃಶದ್ದಿವ್ಯಾಂಗನಾಽಭೂದ್ಧಿ ಚೇತನಾನಾಂ ತು ಕಿಂ ಬ್ರುವೇ ।
ಅತ ಏವಾರ್ಜುನೇ ಸೂತೋ ಬಲೇಶ್ಚ ದ್ವಾರಪೋಽಪ್ಯಭೂಃ ॥85॥

ಇಂದ್ರೇ ತ್ವಂ ದಯಯಾ ಚೇಲಾಂ ಬಲಿಂ ಯಾಚಿತವಾನಸಿ ।
ಗಜೇಂದ್ರರಕ್ಷಣೇ ದೂತಾನ್ ದ್ವಾರಪಾನ್ಪ್ಯಾಪ್ಯನಾದಿಶನ್ ॥86॥

ಅನ್ವಧಾಯ ಸ್ವಯಂ ಶೀಘ್ರಂ ಕ್ಷುದ್ರನಕ್ರಮುಮುಕ್ಷಯಾ ।
ವೈಕುಂಠಂ ವಾ ಪರಿತ್ಯಕ್ಷ್ಯೇ ನ ಭಕ್ತಾಂಸ್ತ್ಯಕ್ತುಮುತ್ಸಹೇ ॥87॥

ಈ ಲೋಕ ಹಾಗೂ ಪರಲೋಕಗಳಲ್ಲಿ ಯಾವಾಗಲೂ ಸುಖವು ಅಭಿವೃದ್ಧಿವಾಗುತ್ತಿರುತ್ತದೆ. ಇದು ನಿಜವಾಗಿಯೂ ಆಶ್ಚರ್ಯಕರವು (81) ನಿನ್ನ ಪ್ರಸಾದಲೇಶದ ಲವಲೇಶಾದಿಲೇಶದ ಅತ್ಯಲ್ಪ ಅನುಗ್ರಹವನ್ನು ಯಾರು ಹೊಂದಿರುವರೋ ಅವರಿಂದ ಅಲಭ್ಯವಾದದು ಯಾವುದೂ ಇಲ್ಲ (82) ಅತಿ ಚಿತ್ರ ವಿಚಿತ್ರವಾದ ನಿನ್ನ ಚರಿತ್ರೆಗಳು ಬಹಳವಾಗಿವೆ ಮತ್ತು ಮಹತ್ತರವಾಗಿವೆ. ನಿನ್ನ ನಾನಾವತಾರಗಳಲ್ಲಿ ನಿನ್ನ ಅನುವರ್ತಿಗಳಿಗೆ ಅವುಗಳನ್ನು ತೋರಿಸಿರುವಿ (83) ನಿನ್ನ ಭಕ್ತವಾದ ಕೀಟವೂ ಸಹ ನಿನ್ನ ದಯಾಲೇಶದಿಂದ ಸಾಮ್ರಾಜ್ಯವನ್ನು ಅನುಭವಿಸಿತು. ನಿನ್ನ ಪಾದಪದ್ಮ ಸಂಪರ್ಕಲೇಶಮಾತ್ರದಿಂದ ಶಿಲೆಯೂ ಸಹ ದಿವ್ಯವಾದ ಸ್ತ್ರೀರೂಪವನ್ನು ಹೊಂದಿತು. ಜಡಗಳೂ ಸಹ ಇಂತಹ ವ್ಯಾಪಾರವುಳ್ಳವುಗಳಾದರೆ, ಚೇತನಗಳ ಬಗ್ಗೆ ಹೇಳುವುದೇನಿದೆ? ಆದುದರಿಂದಲೇ ಅರ್ಜುನನ ವಿಷಯದಲ್ಲಿ ನೀನು ಸಾರಥಿಯಾದೆ, ಬಲಿಯ ವಿಷಯದಲ್ಲಿ ದ್ವಾರಪಾಲಕನಾದೆ, ಇಂದ್ರನ ವಿಷಯದಲ್ಲಿ ದಯಾದೃಷ್ಟಿವುಳ್ಳವನಾದೆ, ನೀನು ಬಲಿಚಕ್ರವರ್ತಿಯನ್ನು ಕುರಿತು ಭೂಮಿಯನ್ನು ಯಾಚಿಸಿದೆ. ಗಜೇಂದ್ರನ ರಕ್ಷಣೆಯ ವಿಷಯದಲ್ಲಿ ದೂತರನ್ನು ದ್ವಾರಪಾಲಕರನ್ನೂ ಸಹ ಗಜೇಂದ್ರನನ್ನು ರಕ್ಷಿಸಲು ಕಳಿಸದೇ ಶೀಘ್ರವಾಗಿ ನೀನೇ ಅಲ್ಲಿಗೆ ಬಂದು, ಕ್ಷುದ್ರವಾದ ಮೊಸಳೆಯಿಂದ ಗಜೇಂದ್ರನನ್ನು ಮೋಚನಗೊಳಿಸಿರುವಿ. ಹೀಗೆ 'ವೈಕುಂಠವನ್ನಾದರೂ ಬಿಡಬಲ್ಲೆ; ನನ್ನ ಭಕ್ತರನ್ನು ಮಾತ್ರ ತ್ಯಜಿಸುವುದಿಲ್ಲ. ನನ್ನ ಭಕ್ತರು ನನಗೆ

ಮೇಽತಿಪ್ರಿಯಾ ಹಿ ಮದ್ಭಕ್ತಾ ಇತಿ ಸಂಕಲ್ಪವಾನಸಿ ।
ಕಾಮಧೇನುಃ ಕಲ್ಪವೃಕ್ಷಶ್ಚಿಂತಾಮಣಿರಿತಿ ತ್ರಯಮ್ ॥88॥

ವೇಂಕಟೇಶ ತ್ವಮೇವಾಸಿ ಶೇಷಾಗೇ ಸರ್ವದಾನತಃ ।
ದದಾತಿ ಕಾಮಾನನ್ನಾದೀನ್ ಮಣಿರ್ಧೇನುಶ್ಚ ಪಾದಪಃ ॥89॥

ನ ಚಾಪವರ್ಗಂ ಸ್ವರ್ಗಂ ವಾ ತೇಷಾಂ ಶಕ್ತಿಶ್ಚ ತಾದೃಶೀ ।
ಯದಿ ತ್ವಂ ಸುಪ್ರಸನ್ನೋಽಸಿ ಸರ್ವಾರ್ಥಾನ್ ಸಂಪ್ರದಾಸ್ಯಸಿ ॥90॥

ಜಾತ್ಯಂಧಾನಾಂ ಚ ಚಕ್ಷೂಂಷಿ ರಾತಿ ತ್ವನ್ಮೂರ್ತಿದರ್ಶನಮ್ ।
ಬಧಿರಾಣಾಂ ಚ ಶ್ರೋತ್ರಾಣಿ ತ್ವತ್ಕಥಾಶ್ರವಣಂ ಪರಮ್ ॥91॥

ಜಡಂ ಮೂಕಂ ಚ ವಾಚಾಲಂ ಕರೋಷ್ಯಧ್ಯಯನಾನ್ವಿತಮ್ ।
ಮಂದಬುದ್ಧಿಂ ಪ್ರಾಜ್ಞತಮಂ ಸಾಂಖ್ಯಯೋಗಸಮಾಧಿಗಮ್ ॥92॥

ಅಕರಸ್ಯ ಕರೌ ದತ್ವಾ ಕರೋಷಿ ತವ ಪೂಜಕಮ್ ।
ಅಪದಸ್ಯ ಪದೇ ದತ್ವಾ ತ್ವತ್ತೀರ್ಥಕ್ಷೇತ್ರಗಾಮಿನಮ್ ॥93॥

ಯದ್ಯದ್ದುಃಖಂ ಭವೇದ್ಭಕ್ತೇ ತತ್ತತ್ಸದ್ಯೋ ಹರಿಷ್ಯಸಿ ।
ಕುಬ್ಜತ್ವಂ ಕುಷ್ಠತಾಂ ನಾನಾರೋಗಾನಪ್ಯಭಿಚಾರಕಾನ್ ॥94॥

ಅತಿಪ್ರೀಯರು' ಹೀಗೆಂದು ನೀನು ಸಂಕಲ್ಪವನ್ನು ಮಾಡಿರುವಿ. (84–88) ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿಗಳೆಂಬ ಮೂರು ವಸ್ತುಗಳೂ ಸಹ ಶೇಷಪರ್ವತದಲ್ಲಿ ಸರ್ವವನ್ನು ಕೊಡುವವನಾದ್ದರಿಂದ ನೀನೇ ಆಗಿರುವಿ. ಚಿಂತಾಮಣಿ, ಕಾಮಧೇನು ಮತ್ತು ಕಲ್ಪವೃಕ್ಷಗಳು ಅನ್ನಾದಿ ಕಾಮನೆಗಳನ್ನು ಪೂರೈಸಬಲ್ಲವು. ಆದರೆ ಸ್ವರ್ಗವನ್ನೇ ಆಗಲಿ, ಮೋಕ್ಷವನ್ನೇ ಆಗಲಿ ಕೊಡಲಾರವು. ಅವುಗಳ ಶಕ್ತಿಯೇ ಇಷ್ಟಕ್ಕೆ ಸೀಮಿತವಾಗಿವೆ. ಆದರೆ ನೀನು ಪ್ರಸನ್ನನಾದರೆ ಸರ್ವಾರ್ಥಗಳನ್ನು ಕೊಡುವವನಾಗುತ್ತಿ. (89–90) ಹುಟ್ಟುಗುರುಡರಿಗೆ ಕಣ್ಣುಗಳನ್ನು ಕೊಟ್ಟು, ನಿನ್ನ ಮೂರ್ತಿ ದರ್ಶನ ಕೊಟ್ಟು ರಕ್ಷಿಸುತ್ತಿ. ಕಿವುಡರಿಗೆ ಕಿವಿಗಳನ್ನು ಕೊಟ್ಟು ಶ್ರೇಷ್ಠವಾದ ನಿನ್ನ ಕಥಾಶ್ರವಣ ಮಾಡಿಸುವಿ. (91) ಮೂಕನೂ, ಜಡನೂ ಆದವನಿಗೆ ವಾಚಾಳಿಯನ್ನಾಗಿ ಮಾಡಿ, ಅಧ್ಯಯನ್ನವನ್ನು ಮಾಡಿಸುವಿ. ಮಂದಬುದ್ಧಿಯನ್ನು ಸಾಂಖ್ಯಯೋಗಾದಿಶಾಸ್ತ್ರಗಳನ್ನು ಬಲ್ಲ ಪ್ರಾಜ್ಞತಮನನ್ನಾಗಿ ನೀನು ಮಾಡಬಹುದು. ಕರವಿಲ್ಲದವನಿಗೆ ಕೈಗಳನ್ನು ಕೊಟ್ಟ ನಿನ್ನ ಪೂಜಕನನ್ನಾಗಿಯೂ, ಪಾದಗಳಿಲ್ಲದವನಿಗೆ ಪಾದಗಳನ್ನು ಕೊಟ್ಟ ನಿನ್ನ ತೀರ್ಥಕ್ಷೇತ್ರಗಾಮಿ ಯನ್ನಾಗಿಯೂ ನೀನು ಮಾಡುವಿ (92–93) ಕುಬ್ಜತ್ವ ಕುಷ್ಠ ಅಪಸ್ಮಾರ ಇವೇ ಮುಂತಾದ

ಹೃತ್ವಾ ದದಾಸ್ಯಂಗದಾರ್ಢ್ಯಂ ಸೌಂದರ್ಯಂ ತ್ವದ್ದಯಾದ್ಭುತಾ ।
ಶ್ರೀನಿವಾಸ ಬಹೂಕ್ತ್ಯಾ ಕಿಂ ಭಕ್ತಸರ್ವಾರ್ತಿನಾಶನೇ ॥95॥

ಸರ್ವಾರ್ಥಪೂರಣೇ ಚಾಪಿ ತ್ವತ್ಸಮೋಽಂಡೇ ನ ಕುತ್ರಚಿತ್ ।
ಪ್ರಸನ್ನೋ ನೀಲಮೇಘಸ್ತ್ವಂ ಶ್ರೀಭೂವಿದ್ಯುತ್ಸಮನ್ವಿತಃ ॥96॥

ಹೃದ್ವ್ಯೋಮಗಸ್ತ್ರಿತಾಪಘ್ನೋ ಭಕ್ತಸರ್ವೇಷ್ಟವಾರ್ಷುಕಃ ।
ಅಭೀಷ್ಟಾಷ್ಟಮವಾರಾಶೌ ನಿಮಜ್ಯೋನ್ಮಜ್ಜಿತಂ ನಿಜಮ್ ॥97॥

ಆನಂದಾಷ್ಟಸಮುದ್ವೀಪೇ ಸಂಸ್ಥಾಪಯಸಿ ಚಾದರಾತ್ ।
ಸರ್ವಸೌಖ್ಯಮಿಹಾಮುತ್ರ ಸ್ವಮುಕ್ತ್ಯಾನಂದವರ್ಧನಃ ॥98॥

॥ಇತಿ ಶ್ರೀಮದಾದಿತ್ಯಪುರಾಣೇ ಶ್ರೀವೇಂಕಟೇಶಮಾಹಾತ್ಮ್ಯೇ ಭಗವದ್ಗುಣಕಥಾನುವರ್ಣನಂ ನಾಮ ದ್ವಿತೀಯೋಽಧ್ಯಾಯಃ ॥

* * *

ಗುಣಪಡಿಸಲು ಅಸಾಧ್ಯವಾದ ನಾನಾ ರೋಗಗಳನ್ನು ದೂರಮಾಡಿ, ಅಂಗಧಾರ್ಢ್ಯವನ್ನು ದಿವ್ಯ ಸೌಂದರ್ಯವನ್ನು ದಯೆಯಿಂದ ನೀನು ಕೊಡುವಿ. ಶ್ರೀನಿವಾಸನೇ! ಹೆಚ್ಚಿಗೆ ಏನು ಹೇಳುವುದು? ಭಕ್ತರ ಸರ್ವ ಕಷ್ಟಪರಿಹಾರದಲ್ಲಿ ಮತ್ತು ಸರ್ವಾಭೀಷ್ಟಗಳನ್ನು ಪೂರ್ತಿಗೊಳಿಸುವ ವಿಷಯದಲ್ಲಿ ಬ್ರಹ್ಮಾಂಡದಲ್ಲಿ ನಿನಗೆ ಸಮಾನರಾದವರು ಎಲ್ಲಿಯೂ ಯಾರೂ ಇರುವುದಿಲ್ಲ. ಪ್ರಸನ್ನನಾದ ನೀಲಮೇಘನಾದ ನೀನು, ಶ್ರೀದೇವಿ, ಭೂದೇವಿಯರೆಂಬ ಮಿಂಚಿನಿಂದ ಕೂಡಿದವನಾಗಿ, ಹೃದಯ ಎಂಬ ಆಕಾಶದಲ್ಲಿಯ ತಾಪತ್ರಯ ಗಳನ್ನು ಕಳೆಯುವವನಾಗಿ, ಭಕ್ತರ ಸರ್ವೇಷ್ಟಗಳನ್ನು ಮಳೆಗರೆಯುತ್ತಾ, ಅಭಿಷ್ಟಗಳೆಂಬ ಸಮುದ್ರದಲ್ಲಿ ಮುಳುಗಿಸುವವನಾಗುತ್ತಿ. ಆದರಿಂದ ಮೇಲೆ ಕರೆದುಕೊಂಡು ಬಂದು ಆನಂದವೆಂಬ ಎಂಟನೆಯ ಉತ್ತಮವಾದ ದ್ವೀಪದಲ್ಲಿ ಆದರದಿಂದ ನಿನ್ನ ಭಕ್ತರನ್ನು ಸಂಸ್ಥಾಪನೆ ಮಾಡಿ, ಅವರಿಗೆ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಸರ್ವ ಸೌಖ್ಯಗಳನ್ನಿತ್ತು, ಉತ್ತಮವಾದ ಮುಕ್ತಿಯುನ್ನು ಕೊಟ್ಟು, ಆನಂದವನ್ನು ಹೆಚ್ಚಿಸುವವನಾಗುತ್ತಿ. (94–98)

ಇಲ್ಲಿಗೆ ಶ್ರೀ ಆದಿತ್ಯಪುರಾಣದಲ್ಲಿ ಅಂತರ್ಗತವಾದ ಶ್ರಿಶ್ರೀವೇಂಕಟೇಶಮಾಹಾತ್ಮೆಯಲ್ಲಿ ಶ್ರೀಶ್ರೀನಿವಾಸನ ಭಗವದ್ಗುಣನಾಮಮಹಿಮಾನುವರ್ಣನರೂಪವಾದ ಎರಡನೇಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

ಶ್ರೀಮದಾದಿತ್ಯಪುರಾಣಾಂತರ್ಗತ ಶ್ರೀವೇಂಕಟೇಶಮಾಹಾತ್ಮ್ಯೇ

## ಅಥ ತೃತೀಯೋಽಧ್ಯಾಯಃ

**ದೇವಶರ್ಮೋವಾಚ –**

**ಅನಂತವೇದಸಂವೇದ್ಯ ಲಕ್ಷ್ಮೀನಾಥಾಂಡಕಾರಣ ।**
**ಜ್ಞಾನಾನಂದೈಶ್ವರ್ಯಪೂರ್ಣ ನಮಸ್ತೇ ಕರುಣಾಕರ ॥1 ॥**

**ನಕ್ಷತ್ರಾಣಿ ಚ ಗಣ್ಯಂತೇ ಪಾಂಸವಶ್ಚ ಕ್ಷಣಾದಯಃ ।**
**ತ್ವದ್ವೀರ್ಯಾಣಿ ನ ಗಣ್ಯಂತೇ ಬ್ರಹ್ಮಣಾ ರಮಯಾಽಪಿ ವಾ ॥2॥**

**ತಥಾಽಪಿ ತೇ ಭಕ್ತದಾಸದಾಸೋ ಯಥಾಮತಿ ।**
**ಸ್ತೌಮಿ ತ್ವಾಂ ವೇಂಕಟಾಧೀಶ ತ್ವದ್ಭಕ್ತಃ ಪ್ರೇರಿತಸ್ತ್ವಯಾ ॥3॥**

**ಶ್ರೀವೇಂಕಟೇಶ ಮತ್ಸ್ವಾಮಿನ್ ಜ್ಞಾನಾನಂದ ದಯಾನಿಧೇ ।**
**ಭಕ್ತವತ್ಸಲ ಭೋ ವಿಶ್ವಕುಟುಂಬಿನ್ನಧುನಾಽವ ಮಾಮ್ ॥4॥**

ಶ್ರೀಮದಾದಿತ್ಯಪುರಾಣಾಂತರ್ಗತವಾದ ವೇಂಕಟೇಶಮಹಾತ್ಮೆಯ

## ಮೂರನೆಯ ಅಧ್ಯಾಯ

ಅನಂತ ವೇದಗಳಿಂದ ಮುಖ್ಯವಾಗಿ ಪ್ರತಿಪಾದ್ಯನೂ, ಲಕ್ಷ್ಮೀರಮಣನು, ಅನಂತ ಕೋಟಿ ಬ್ರಹ್ಮಾಂಡಗಳಿಗೆ ಮುಖ್ಯ ಕಾರಣನೂ, ಜ್ಞಾನಾನಂದಾದಿ ಸರ್ವವಿಧಸಂಪತ್ತುಗಳನ್ನು ಭಕ್ತರಿಗೆ ದಯಪಾಲಿಸುವವನೂ ಹಾಗೂ ಸ್ವತಃ ಜ್ಞಾನಾನಂದಾದಿ ಐಶ್ವರ್ಯಗಳಿಂದ ಪರಿಪೂರ್ಣನೂ ಆದ ಹೇ ಕರುಣಾಕರನಾದ ವೆಂಕಟೇಶ್ವರನೇ! ನಿನಗೆ ನಮಸ್ಕಾರವು (1) ಆಕಾಶದಲ್ಲಿಯ ನಕ್ಷತ್ರಗಳನ್ನು ಎಣಿಸಬಹುದು, ಬ್ರಹ್ಮಾಂಡಲ್ಲಿಯ ಧೂಳೀ ಕಣಗಳನ್ನು ಪರಿಗಣಿಸಬಹುದು, ಕಾಲದಲ್ಲಿಯ ಕ್ಷಣಲವಾದಿಗಳನ್ನು ಲೆಕ್ಕ ಮಾಡಲೂಬಹುದು, ಆದರೆ ಚತುರ್ಮುಖ ಬ್ರಹ್ಮ, ರಮಾದೇವಿ ಯರಿಂದಲೂ ಸಹ ನಿನ್ನ ಅತುಲವಾದ ಪರಾಕ್ರಮದಿಂದ ಕೂಡಿದ ಗುಣಗಳನ್ನು ಮಾತ್ರ ಗಣನೆಮಾಡಲು ಸಾಧ್ಯವಿಲ್ಲ. (2) ಆದರೂ ಸಹ, ನಿನ್ನ ಭಕ್ತರ ದಾಸಾನುದಾಸನಾದ ಹಾಗೂ ನಿನ್ನ ಭಕ್ತನೂ ಆದ ನಾನು ನಿನ್ನಿಂದ ಪ್ರೇರೇಪಿಸಲ್ಪಟ್ಟರೆ ಮಾತ್ರ ಮಂದಬುದ್ಧಿಗನುಸಾರವಾಗಿ ಸ್ತೋತ್ರಮಾಡುತ್ತೇನೆ. (3) ಜ್ಞಾನಾನಂದದಯಾಪೂರ್ಣ, ವಿಶ್ವಕುಟುಂಬಿ, ಭಕ್ತವತ್ಸಲನಾದ, ನನ್ನ ಒಡೆಯನಾದ ಶ್ರೀವೆಂಕಟೇಶ್ವರನೇ! ಈಗ ನನ್ನನ್ನು ರಕ್ಷಿಸು. (4) ಸತ್ಯವಾದ ಜಗತ್ತಿಗೆ ನಿಯಾಮಕನೂ,

ಸತ್ಯೇಶಂ ಸತ್ಯಸಂಕಲ್ಪಂ ಸತ್ಯಂ ಸತ್ಯವ್ರತಂ ಹರಿಮ್ ।
ಸತ್ಯಚರ್ಯಂ ಸತ್ಯಯೋನಿಂ ಸತ್ಯಶೀರ್ಷಮಹಂ ಭಜೇ ॥5॥

ಶ್ರವಣಾತ್ ಸರ್ವಪಾಪಘ್ನಂ ಮನನಾತ್ ಪುಣ್ಯವರ್ಧನಮ್ ।
ಸ್ವಧ್ಯಾನಾತ್ ಸಿದ್ಧಿದಂ ವಿಷ್ಣುಂ ಪ್ರೇಕ್ಷಣಾನ್ಮೋಕ್ಷದಂ ಭಜೇ ॥6॥

ಶ್ರೀವೇಂಕಟೇಶಂ ಲಕ್ಷ್ಮೀಶಂ ಅನಿಷ್ಟಘ್ನಮಭೀಷ್ಟದಮ್ ।
ಚತುರ್ಮುಖೇರತನಯಂ ಶ್ರೀನಿವಾಸಂ ಭಜೇಽನಿಶಮ್ ॥7॥

ಯದಪಾಂಗಲವೇನೈವ ಬ್ರಹ್ಮಾದ್ಯಾಃ ಸ್ವಪದಂ ಯಯುಃ ।
ಮಹಾರಾಜಾಧಿರಾಜಾನಂ ಶ್ರೀನಿವಾಸಂ ಭಜೇಽನಿಶಮ್ ॥8॥

ಅನಂತವೇದಸಂವೇದ್ಯಂ ನಿರ್ದೋಷಂ ಗುಣಸಾಗರಮ್ ।
ಅತೀಂದ್ರಿಯಂ ನಿತ್ಯಮುಕ್ತಂ ಶ್ರೀನಿವಾಸಂ ಭಜೇಽನಿಶಮ್ ॥9॥

ಭಕ್ತರನ್ನು ರಕ್ಷಿಸುವ ವಿಷಯದಲ್ಲಿ ಸತ್ಯವಾದ ಸಂಕಲ್ಪ (ದೀಕ್ಷೆ) ವುಳ್ಳವನೂ, ಸಜ್ಜನರ ವಿಷಯದಲ್ಲಿ ತನ್ನ ಸಂಕಲ್ಪವೆಲ್ಲವನ್ನು ಬಿಟ್ಟು ಅವರನ್ನು ಕಾಪಾಡುವವನೂ, ಸತ್ಯನಾದವನೂ, ಭಕ್ತರ ಪಾಪಗಳನ್ನು ಹಾಗೂ ಪಾಪಿಗಳನ್ನು ಹರಣ ಮಾಡುವವನೂ, ಸತ್ಯವಾದ ಜಗದುತ್ಪತ್ತಿಸ್ಥಿತ್ಯಾದಿ ವ್ಯಾಪಾರಗಳುಳ್ಳವನೂ, ಸತ್ಯವಾದ ವೇದಗಳ ರಕ್ಷಕನೂ ಹಾಗೂ ಸತ್ಯನೆಂದು ವೇದಪ್ರತಿಪಾದ್ಯನೂ, ಶಿರಸ್ಸಿನಲ್ಲಿ ಸತ್ಯಲೋಕವುಳ್ಳವನೂ ಅಥವಾ ಸತ್ಯಗಳಾದ ಸಹಸ್ರಶೀರ್ಷಗಳುಳ್ಳವನೂ ಆದ ನಿನ್ನನ್ನು ಸ್ತೋತ್ರ ಮಾಡುತ್ತೇನೆ. (5) ಮಹಾತ್ಮೆಯನ್ನು ಶ್ರವಣ ಮಡುವವರ ಸರ್ವಪಾಪಗಳನ್ನು ಹರಣಮಾಡುವ, ಶ್ರವಣ ಮಾಡಿದ್ದನ್ನು ಮನನ ಮಾಡುವವರಿಗೆ ಪುಣ್ಯವನ್ನು ವೃದ್ಧಿಗೊಳಿಸುವ, ಶ್ರವಣ ಮನನಾಂತರದಲ್ಲಿ, ನಿರಂತರವಾಗಿ ನಿನ್ನನ್ನು ಧ್ಯಾನಿಸುವವರಿಗೆ ಸಿದ್ಧಿಯನ್ನು ಕೊಡುವ, ಅನಂತರದಲ್ಲಿ ಅಪರೋಕ್ಷಜ್ಞಾನದಿಂದ ಅವರಿಗೆ ಮೋಕ್ಷವನ್ನು ಕೊಡುವ ವಿಷ್ಣುವಿನ ಅವತಾರನಾದ ವೆಂಕಟೇಶನನ್ನು ಸ್ತೋತ್ರ ಮಡುತ್ತೇನೆ (6) ವೆಂಕಟಾಚಲಪತಿಯೂ ಲಕ್ಷ್ಮೀಪತಿಯೂ, ಅನಿಷ್ಟಹಾರಕ ಹಾಗೂ ಇಷ್ಟಪ್ರದನೂ ಚತುರ್ಮುಖ ಬ್ರಹ್ಮ-ವಾಯುದೇವರಂಹತ ಮಹಾತ್ಮರಾದ ಪುತ್ರರುಳ್ಳವನೂ ಆದ ಶ್ರೀನಿವಾಸನನ್ನು ಯಾವಾಗಲೂ ಸ್ತೋತ್ರ ಮಾಡುತ್ತೇನೆ. (7) ಯಾರ ಕುಡಿಗಣ್ಣಿನ (ಕಡೆಗಣ್ಣಿನ) ನೋಟ ಮಾತ್ರದಿಂದಲೇ ಬ್ರಹ್ಮಾದಿದೇವತೆಗಳು ತಮ್ಮ ತಮ್ಮ ಲೋಕಾಧಿಪತ್ಯವನ್ನು ಹೊಂದಿದರೋ, ಅಂತಹ ಮಹಾರಾಜಾಧಿರಾಜನಾದ ಶ್ರೀನಿವಾಸನನ್ನು ಸ್ತೋತ್ರ ಮಾಡುತ್ತೇನೆ. (8) ಅನಂತವೇದ ಪ್ರತಿಪಾದ್ಯ-ದೋಷದೂರ-ಗುಣಾಕರ-ನಿತ್ಯಮುಕ್ತ, ಚಕ್ಷುರಾದಿ ಇಂದ್ರಿಯಗಳಿಗೆ ಸಾಕಲ್ಯೇನ ಅಗೋಚರನಾದ, ಶ್ರೀನಿವಾಸನನ್ನು ಯಾವಾಗಲೂ ಸ್ತೋತ್ರ ಮಾಡುತ್ತೇನೆ. (9) ಸ್ಮರಣಮಾತ್ರದಿಂದ ಸರ್ವಪಾಪಗಳನ್ನು ಕಳೆಯುವ, ಸ್ತೋತ್ರದಿಂದ ಸರ್ವಾಭೀಷ್ಟಗಳನ್ನು ವರ್ಷಿಸುವ, ಅಪರೋಕ್ಷ

ಸ್ಮರಣಾತ್ ಸರ್ವಪಾಪಘ್ನಂ ಸ್ತವನಾದಿಷ್ಟವರ್ಷಿಣಮ್ ।
ದರ್ಶನಾನ್ಮುಕ್ತಿದಂ ಚೇಶಂ ಶ್ರೀನಿವಾಸಂ ಭಜೇಽನಿಶಮ್ ॥10॥

ಅಶೇಷಶಯನಂ ಶೇಷಶಯನಂ ಶೇಷಶಾಯಿನಮ್ ।
ಶೇಷಾದ್ರೀಶಮಶೇಷಂ ಚ ಶ್ರೀನಿವಾಸಂ ಭಜೇಽನಿಶಮ್ ॥11॥

ಭಕ್ತಾನುಗ್ರಾಹಕಂ ವಿಷ್ಣುಂ ಸುಶಾಂತಂ ಗರುಡಧ್ವಜಮ್ ।
ಪ್ರಸನ್ನವಕ್ತ್ರನಯನಂ ಶ್ರೀನಿವಾಸಂ ಭಜೇಽನಿಶಮ್ ॥12॥

ಭಕ್ತಭಕ್ತಿಸುಪಾಶೇನ ಬದ್ಧಸತ್ಪಾದಪಂಕಜಮ್ ।
ಸನಕಾದಿಧ್ಯಾನಗಮ್ಯಂ ಶ್ರೀನಿವಾಸಂ ಭಜೇಽನಿಶಮ್ ।13॥

ಗಂಗಾದಿತೀರ್ಥಜನಕಪಾದಪದ್ಮಂ ಸುತಾರಕಮ್ ।
ಶಂಖಚಕ್ರಾಭಯಕರಂ ಶ್ರೀನಿವಾಸಂ ಭಜೇಽನಿಶಮ್ ॥14॥

ಸುವರ್ಣಮುಖಿತೀರಸ್ಥಂ ಸುವರ್ಣೇಡ್ಯಂ ಸುವರ್ಣದಮ್ ।
ಸುವರ್ಣಾಭಂ ಸುವರ್ಣಾಂಗಂ ಶ್ರೀನಿವಾಸಂ ಭಜೇಽನಿಶಮ್ ॥15॥

ಜ್ಞಾನದಿಂದ ಮುಕ್ತಿಯನ್ನು ಕೊಡುವ, ಈಶನಾದ ಶ್ರೀನಿವಾಸನನ್ನು ಯಾವಾಗಲೂ ಸ್ತುತಿಸುತ್ತೇನೆ. (10) ಸಮಸ್ತರ ದೇಹದಲ್ಲಿಯೂ ಯಾವಾಗಲೂ ಇರುವ, ಪ್ರಳಯ ಕಾಲದಲ್ಲಿ ಶೇಷನಾಗಿ ಉಳಿದ, ಆಲದ ಎಲೆಯಲ್ಲಿ ಮಲಗಿದ, ಶೇಷದೇವರೇ ಶಯನವಾಗಿ ಉಳ್ಳ, ಶೇಷ ಪರ್ವತಕ್ಕೆ ಒಡೆಯನಾದ, ಸಮಸ್ತಜಗದ್ವ್ಯಾಪ್ತನೂ ಆದ ಶ್ರೀನಿವಾಸನನ್ನು ಯಾವಾಗಲೂ ಭಜಿಸುತ್ತೇನೆ. (11) ಯಾವಾಗಲೂ ತನ್ನ ಭಕ್ತರಾದ ಸಜ್ಜನರಿಗೆ ಸುಖವನ್ನೀಯುವ, ಸಜ್ಜನರಲ್ಲಿ ಪ್ರಸನ್ನವಾದ ಮುಖ ಹಾಗೂ ಕಣ್ಣುಗಳುಳ್ಳ, ಗರುಡಧ್ವಜನಾದ, ಭಕ್ತಾನುಗ್ರಾಹಕನಾದ ಶ್ರೀನಿವಾಸನನ್ನು ಸದಾ ಸ್ತುತಿಸುತ್ತೇನೆ (12)ಭಕ್ತರುಗಳ ಭಕ್ತಿಯೆಂಬ ಗಟ್ಟಿಯಾದ ಹಗ್ಗದಿಂದ ಕಟ್ಟಿ ಹಾಕಲ್ಪಟ್ಟ ನಿರ್ದುಷ್ಟವಾದ ಪಾದಕಮಲಗಳುಳ್ಳ, ಸನಕಾದಿಗಳ ಧ್ಯಾನದಿಂದ ಗಮ್ಯನಾದ, ಶ್ರೀನಿವಾಸನನ್ನು ಸದಾ ಸ್ತುತಿಸುತ್ತೇನೆ (13) ಗಂಗಾದಿಸರ್ವ ಪವಿತ್ರ ತೀರ್ಥಗಳಿಗೆ ಜನಕಸ್ಥಾನವಾದ ಪಾದಗಳುಳ್ಳ, ಸಂಸಾರವನ್ನು ಅನಾಯಾಸವಾಗಿ ದಾಟಿಸುವ ಶಂಖ-ಚಕ್ರ-ಅಭಯ ಹಾಗೂ ವರ ಮುದ್ರೆಗಳನ್ನು ಧರಿಸಿದ ಶ್ರೀನಿವಾಸನನ್ನು ಸ್ತೋತ್ರ ಮಾಡುತ್ತೇನೆ. (14) ಸುವರ್ಣಮುಖಿ ತೀರದಲ್ಲಿ ವಾಸಿಸುವ, ಶ್ರೇಷ್ಠವಾದ ವೇದಗಳಿಂದ ಸ್ತುತ್ಯನಾದ, ಭಕ್ತರಿಗೆ ವೇದಾರ್ಥಜ್ಞಾನ-ಭಕ್ತಿ-ಸುವರ್ಣಾದಿ ಐಶ್ವರ್ಯ ಪ್ರದನಾದ, ಸುವರ್ಣದಂತೆ ಕಾಂತಿಯುಳ್ಳ, ಸುವರ್ಣಮಯವಾದ ಕಿರೀಟ-ಕುಂಡಲಾದಿ ನಾನಾ ಆಭರಣಗಳಿಂದ ಶೋಭಿತವಾದ ಚಿಹ್ನೆಯುಳ್ಳ ಶ್ರೀನಿವಾಸನನ್ನು ಭಜಿಸುತ್ತೇನೆ (15) ಶ್ರೀವತ್ಸವನ್ನು

ಶ್ರೀವತ್ಸವಕ್ಷಸಂ ಶ್ರೀಶಂ ಶ್ರೀಲೋಲಂ ಶ್ರೀಕರಗ್ರಹಮ್ ।
ಶ್ರೀಮಂತಂ ಶ್ರೀನಿಧಿಂ ಶ್ರೀಡ್ಯಂ ಶ್ರೀನಿವಾಸಂ ಭಜೇಽನಿಶಮ್ ॥16॥

ವೈಕುಂಠವಾಸಂ ವೈಕುಂಠತ್ಯಾಗಂ ವೈಕುಂಠಸೋದರಮ್ ।
ವೈಕುಂಠದಂ ವಿಕುಂಠಾಜಂ ಶ್ರೀನಿವಾಸಂ ಭಜೇಽನಿಶಮ್ ॥17॥

ವೇದೋದ್ಧಾರಂ ಮತ್ಸ್ಯರೂಪಂ ಸ್ವಚ್ಛಾಕಾರಂ ಯದೃಚ್ಛಯಾ ।
ಸತ್ಯವ್ರತೋದ್ಧರಂ ಸತ್ಯಂ ಶ್ರೀನಿವಾಸಂ ಭಜೇಽನಿಶಮ್ ॥18॥

ಮಹಾಗಾಧಜಲಾಧಾರಂ ಕಚ್ಛಪಂ ಮಂದರೋದ್ಧರಮ್ ।
ಸುಂದರಾಂಗಂ ಚ ಗೋವಿಂದಂ ಶ್ರೀನಿವಾಸಂ ಭಜೇಽನಿಶಮ್ ॥19॥

ವರಂ ಶ್ವೇತವರಾಹಾಖ್ಯಂ ಸಂಹರಂ ಧರಣೀಧರಮ್ ।
ಸ್ವದಂಷ್ಟ್ರಾಭ್ಯಾಂ ಧರೋದ್ಧಾರಂ ಶ್ರೀನಿವಾಸಂ ಭಜೇಽನಿಶಮ್ ॥20॥

ಪ್ರಹ್ಲಾದಾಹ್ಲಾದಕಂ ಲಕ್ಷ್ಮೀನೃಸಿಂಹಂ ಭಕ್ತವತ್ಸಲಮ್ ।
ದೈತ್ಯಮತ್ತೇಭದಮನಂ ಶ್ರೀನಿವಾಸಂ ಭಜೇಽನಿಶಮ್ ॥21॥

ವಕ್ಷಃಸ್ಥಳದಲ್ಲಿ ಧರಿಸಿದ, ಶ್ರೀಪತಿಯಾದ, ಶ್ರೀಯೊಡನೆ ಲೋಲುಪನಾದ, ಶ್ರೀದೇವಿಯನ್ನು ಕೈಯಿಂದ ಪಿಡಿದ, ಸಕಲಸೌಭಾಗ್ಯಗಳುಳ್ಳ, ಸಕಲ ಸಂಪತ್ತುಗಳಿಗೆ ಆಕರನಾದ, ಶ್ರೀಭೂದುರ್ಗಾದಿಗಳಿಂದ ಸ್ತುತ್ಯನಾದ ಶ್ರೀನಿವಾಸನನ್ನು ಸದಾ ಭಜಿಸುತ್ತೇನೆ (16) ನಿತ್ಯದಲ್ಲಿ ವೈಕುಂಠವಾಸಿಯಾದ, ಆದರೆ ವೈಕುಂಠವನ್ನು ತ್ಯಜಿಸಿ ಒಂದು ರೂಪದಿಂದ ಸ್ವಾಮಿಪುಷ್ಕರಣೀತೀರದಲ್ಲಿ ಬಂದು ನೆಲೆಸಿದ, ವೈಕುಂಠನಾಮಕ ಸೋದರರುಳ್ಳ, ಭಕ್ತರಿಗೆ ವೈಕುಂಠಪ್ರದನಾದ, ವಿಕುಂಠಾದೇವಿಯ ಪುತ್ರನಾದ ಶ್ರೀನಿವಾಸನನ್ನು ಯಾವಾಗಲೂ ಸ್ತೋತ್ರಮಾಡುತ್ತೇನೆ (17) ಹಯಗ್ರೀವನಾಮಕ ದೈತ್ಯನಿಂದ ಅಪಹರಿಸಲ್ಪಟ್ಟ ವೇದಗಳನ್ನು ಉದ್ಧಾರ ಮಾಡಿದ ಮತ್ಸ್ಯರೂಪವುಳ್ಳವನು. ಸ್ವೇಚ್ಛೆಯಿಂದ ಧರಿಸಿದ ಈರೂಪವು ಅತ್ಯಂತ ಸ್ವಚ್ಛವಾದದ್ದು, ಸ್ವೇಚ್ಛೆಯಿಂದ ಸತ್ಯವ್ರತ ರಾಜನನ್ನು ಉದ್ಧರಿಸಿದ, ಸತ್ಯನಾಮಕನಾದ ಶ್ರೀನಿವಾಸನನ್ನು ಯಾವಾಗಲೂ ಭಜಿಸುತ್ತೇನೆ. (18) ಆಗಾಧವಾದ ಬ್ರಹ್ಮಾಂಡ ಜಲಾವರಣಕ್ಕೆ ಆಧಾರನಾಗಿ, ಸಮುದ್ರ ಮಥನ ಕಾಲದಲ್ಲಿ ಮಂದರ ಪರ್ವತವನ್ನು ಎತ್ತಿಹಿಡಿದ, ವೇದ ಪ್ರತಿಪಾದ್ಯವಾದ ಸುಂದರಾಂಗವಾದ ಕೂರ್ಮ ರೂಪಿ ಶ್ರೀನಿವಾಸನನ್ನು ಭಜಿಸುತ್ತೇನ (19) ಭೂಮಿಯನ್ನು ಅಪಹರಿಸಿದ ಹಿರಣ್ಯಾಕ್ಷನನ್ನು ಸಂಹರಿಸಿದ, ತನ್ನ ದಂಷ್ಟ್ರಗಳಿಂದ ಭೂಮಿಯನ್ನು ಮೇಲಕ್ಕೆತ್ತಿ ತಂದ, ಶ್ರೇಷ್ಠ ಶ್ವೇತವರಾಹವೆಂಬ ರೂಪವನ್ನು ಧರಿಸಿದ ಶ್ರೀನಿವಾಸನನ್ನು ಯಾವಾಗಲೂ ಸ್ತೋತ್ರ ಮಾಡುತ್ತೇನೆ. (20) ಮದೋನ್ಮತ್ತನಾದ ಹಿರಣ್ಯಕಶಿಪುವೆಂಬ ಗಜವನ್ನು ಸಂಹರಿಸಿದ,

ವಾಮನಂ ವಾಮನಂ ಪೂರ್ಣಕಾಮಂ ಭಾಮನಮಾಣವಮ್ ।
ಮಾಯಿನಂ ಬಲಿಸಮ್ಮೋಹಂ ಶ್ರೀನಿವಾಸಂ ಭಜೇಽನಿಶಮ್ ॥22॥

ಚಂದ್ರಾನನಂ ಕುಂದದಂತಂ ಕುರಾಜಘ್ನಂ ಕುಠಾರಿಣಮ್ ।
ಸುಕುಮಾರಂ ಭೃಗುಋಷೇಃ ಶ್ರೀನಿವಾಸಂ ಭಜೇಽನಿಶಮ್ ॥23॥

ಶ್ರೀರಾಮಂ ದಶದಿಗ್ವ್ಯಾಪ್ತಂ ದಶೇಂದ್ರಿಯನಿಯಾಮಕಮ್ ।
ದಶಾಸ್ಯಘ್ನಂ ದಾಶರಥಿಂ ಶ್ರೀನಿವಾಸಂ ಭಜೇಽನಿಶಮ್ ॥24॥

ಗೋವರ್ಧನೋದ್ಧರಂ ಬಾಲಂ ವಾಸುದೇವಂ ಯದೂತ್ತಮಮ್।
ದೇವಕೀತನಯಂ ಕೃಷ್ಣಂ ಶ್ರೀನಿವಾಸಂ ಭಜೇಽನಿಶಮ್ ॥25॥

ನಂದನಂದನಮಾನಂದಂ ಇಂದ್ರನೀಲಂ ನಿರಂಜನಮ್ ।
ಶ್ರೀಯಶೋದಾಯಶೋದಂ ಚ ಶ್ರೀನಿವಾಸಂ ಭಜೇಽನಿಶಮ್ ॥26॥

ಗೋವೃಂದಾವನಗಂ ವೃಂದಾವನಗಂ ಗೋಕುಲಾಧಿಪಮ್ ।
ಉರುಗಾಯಂ ಜಗನ್ಮೋಹಂ ಶ್ರೀನಿವಾಸಂ ಭಜೇಽನಿಶಮ್ ॥27॥

ಭಕ್ತವತ್ಸಲನಾದ, ಭಕ್ತನಾದ ಪ್ರಹ್ಲಾದನಿಗೆ ಸಂತಸವನ್ನುಂಟು ಮಾಡಿದ ಶ್ರೀಲಕ್ಷ್ಮೀನೃಸಿಂಹರೂಪಿಯಾದ ಶ್ರೀನಿವಾಸನನ್ನು ಯಾವಾಗಲೂ ಸ್ತುತಿಸುತ್ತೇನೆ. (21) ಬಹು ಸಣ್ಣದಾದ ಸುಂದರವಾದ ವಟುರೂಪಿಯಾದ, ಪರಿಪೂರ್ಣಕಾಮನಾದ, ಇಚ್ಛಾ-ಮಾಯಾರೂಪಿಯಾದ ಬಲಿಚಕ್ರವರ್ತಿಯನ್ನು ಮೋಹಗೊಳಿಸಿದ, ವಾಮನರೂಪಿಯಾದ ಶ್ರೀನಿವಾಸನನ್ನು ಯಾವಾಗಲೂ ಭಜಿಸುತ್ತೇನೆ (22) ಚಂದ್ರನಂತೆ ಸುಂದರವಾದ ಬಿಳಿ ಕಮಲದ ಮೊಗ್ಗಿನಂತೆ ದಂತವುಳ್ಳ, ಕುತ್ಸಿತರಾದ ರಾಜರನ್ನು ಸಂಹರಿಸಿದ, ಸುಂದರವಾದ ಪರಶುವನ್ನು ಧರಿಸಿದ, ಭೃಗು ಋಷಿಯ ಸುಕುಮಾರನಾದ ಪರಶುರಾಮ ರೂಪಿಯಾದ ಶ್ರೀನಿವಾಸನನ್ನು ಯಾವಾಗಲೂ ಸ್ತುತಿಸುತ್ತೇನೆ. (23) ದಶದಿಕ್ಕುಗಳಲ್ಲಿ ವ್ಯಾಪ್ತನಾದ, ದಶೇಂದ್ರಿಯಗಳಿಗೆ ನಿಯಾಮಕನಾದ, ದಶಮುಖವುಳ್ಳ ರಾವಣನನ್ನು ಸಂಹರಿಸಿದ, ದಶರಥ ಪುತ್ರನಾದ ಶ್ರೀರಾಮ ರೂಪಿಯಾದ ಶ್ರೀನಿವಾಸವನ್ನು ಯಾವಾಗಲೂ ಭಜಿಸುತ್ತೇನೆ (24) ಗೋವರ್ಧನ ಪರ್ವತವನ್ನು ಎತ್ತಿ ಹಿಡಿದ, ವಸುದೇವಪುತ್ರನಾದ, ಯದೂತ್ತಮನಾದ, ದೇವಕೀನಂದನನಾದ ಬಾಲರೂಪೀ ಶ್ರೀಕೃಷ್ಣನಾದ ಶ್ರೀನಿವಾಸ ದೇವರನ್ನು ಯಾವಾಗಲೂ ಸ್ತುತಿಸುತ್ತೇನೆ (25) ನಂದಗೋಪನ ನಂದನನಾದ, ಇಂದ್ರನೀಲ ಮಣಿಯಂತೆ ಕಾಂತಿಯುಳ್ಳ, ಯಶೋದಾದೇವಿಗೆ ಯಶಸ್ಸನ್ನು ದಯಪಾಲಿಸಿದ, ಕೃಷ್ಣರೂಪಿಯಾದ ಶ್ರೀನಿವಾಸನನ್ನು ಭಜಿಸುತ್ತೇನೆ. (26) ಗೋವುಗಳ ಸಮೂಹವನ್ನು ರಕ್ಷಿಸಿದ, ವೃಂದಾವನ ಕ್ಷೇತ್ರದಲ್ಲಿರುವ, ಗೋಕುಲಾಧಿಪತಿಯಾದ, ಬ್ರಹ್ಮಾದಿ ದೇವತೆಗಳಿಂದ ಜೇಗೀಯಮಾನನಾದ, ಜಗನ್ಮೋಹಕನಾದ ಶ್ರೀನಿವಾಸನನ್ನು

ಪಾರಿಜಾತಹರಂ ಪಾಪಹರಂ ಗೋಪೀಮನೋಹರಮ್ ।
ಗೋಪೀವಸ್ತ್ರಹರಂ ಗೋಪಂ ಶ್ರೀನಿವಾಸಂ ಭಜೇಽನಿಶಮ್ ॥28॥

ಕಂಸಾಂತಕಂ ಶಂಸನೀಯಂ ಸಂಶಾಂತಂ ಸಂಸೃತಿಚ್ಛಿದಮ್ ।
ಸಂಶಯಚ್ಛೇದಿಸಂವೇದ್ಯಂ ಶ್ರೀನಿವಾಸಂ ಭಜೇಽನಿಶಮ್ ॥29॥

ಕೃಷ್ಣಾಪತಿಂ ಕೃಷ್ಣಗುರುಂ ಕೃಷ್ಣಾಮಿತ್ರಮಭೀಷ್ಟದಮ್ ।
ಕೃಷ್ಣಾತ್ಮಕಂ ಕೃಷ್ಣಸಖಂ ಶ್ರೀನಿವಾಸಂ ಭಜೇಽನಿಶಮ್ ॥30॥

ಕೃಷ್ಣಾಹಿಮರ್ದನಂ ಗಪೈಃ ಕೃಷ್ಣೋಪವನಲೋಲುಪಮ್ ।
ಕೃಷ್ಣಾತಾತಂ ಮಹೋತ್ಕೃಷ್ಟಂ ಶ್ರೀನಿವಾಸಂ ಭಜೇಽನಿಶಮ್ ॥31॥

ಬುದ್ಧಂ ಸುಬೋಧಂ ದುರ್ಬೋಧಂ ಬೋಧಾತ್ಮಾನಂಬುಧಪ್ರಿಯಮ್।
ವಿಬುಧೇಶಂ ಬುಧೈರ್ಬೋಧ್ಯಂ ಶ್ರೀನಿವಾಸಂ ಭಜೇಽನಿಶಮ್ ॥32॥

ಕಲ್ಕಿನಂ ತುರಗರೂಢಂ ಕಲಿಕಲ್ಮಷನಾಶನಮ್ ।
ಕಲ್ಯಾಣದಂ ಕಲಿಘ್ನಂ ಚ ಶ್ರೀನಿವಾಸಂ ಭಜೇಽನಿಶಮ್ ॥33॥

ಯಾವಾಗಲೂ ಸ್ತೋತ್ರ ಮಡುತ್ತೇನೆ. ಪಾರಿಜಾತವೃಕ್ಷವನ್ನು ಹರಣಮಾಡಿದ, ಭಕ್ತರ ಪಾಪಹಾರಕನಾದ, ಗೋಪೀಮನೋಹರನಾದ, ಗೋಪಿಕಾಸ್ತ್ರೀಯರ ವಸ್ತ್ರಾಪಹಾರಿಯಾದ, ಗೋಪಾಲರೂಪಿಯಾದ ಶ್ರೀನಿವಾಸನನ್ನು ಯಾವಾಗಲೂ ಭಜಿಸುತ್ತೇನೆ (28) ಕಂಸನನ್ನು ಸಂಹರಿಸಿದ, ಬ್ರಹ್ಮಾದಿಗಳಿಂದ ಪ್ರಶಂಸನೀಯನಾದ, ಸುಖಪೂರ್ಣನಾದ, ಸಂಸಾರವನ್ನು ಕಳೆಯುವ, ಸಂಶಯಗಳನ್ನು ಛೇದನ ಮಾಡುವವನೂ, ಉತ್ತಮವಾದ ವೇದಪ್ರತಿಪಾದ್ಯನೂ, ಸತ್ಯಭಾಮೆಯ ಪತಿಯೂ, ಅರ್ಜುನ ಭೀಮರಿಗೆ ಗುರೂವು, ದ್ರೌಪದೀಸಖನೂ, ವಾಸಿಷ್ಠ ಕೃಷ್ಣಸ್ವರೂಪನು, ಅರ್ಜುನ ಸಖನೂ ಆದ ಕೃಷ್ಣರೂಪೀ ಶ್ರೀನಿವಾಸನನ್ನು ಸದಾ ಸ್ತುತಿಸುತ್ತೇನೆ. (29–30) ಕೃಷ್ಣವರ್ಣದ ಕಾಳಿಂಗಸರ್ಪವನ್ನು ಸಂಹರಿಸಿದ, ಗೋಪಾಲಕರಿಂದ ಕೂಡಿಕೊಂಡು ಯಮುನಾ ತೀರದ ಉಪವನದಲ್ಲಿ ಕ್ರೀಡಾಸಕ್ತನಾದ, ಕೃಷ್ಣವೇಣಿಯ ತಾತನಾದ, ಅತ್ಯಂತ ಉತ್ಕೃಷ್ಟನಾದ, ಸರ್ವೋತ್ತಮನಾದ ಶ್ರೀನಿವಾಸನನ್ನು ಸದಾ ಸ್ತುತಿಸುತ್ತೇನೆ (31) ಸಜ್ಜನರಿಗೆ ದಿವ್ಯ ಜ್ಞಾನವನ್ನು ಬೋಧಿಸಿದ, ದುರ್ಜನರಿಂದ ತಿಳಿಯಲು ಅಸಾಧ್ಯವಾದ ತತ್ವಜ್ಞಾನವುಳ್ಳ, ಜ್ಞಾನಸ್ವರೂಪಿಯಾದ, ಜ್ಞಾನಿಪ್ರಿಯನಾದ, ದೇವತೆಗಳಿಗೆ ನಿಯಾಮಕನಾದ, ಜ್ಞಾನಿಗಳಿಂದ ತಿಳಿಯಲ್ಪಡುವ ಬುದ್ಧರೂಪಿಯಾದ ಶ್ರೀನಿವಾಸನನ್ನು ಸದಾ ಸ್ತೋತ್ರ ಮಾಡುತ್ತೇನೆ. (32) ತುರಗಾರೂಢನಾದ, ಕಲಿಮಲವನ್ನು ಕಳೆಯುವ, ಕಲ್ಯಾಣವನ್ನೀಯುವ, ಕಲಿಯನ್ನು ಸಂಹರಿಸುವ

ಹರಿಂ ಹಂಸಂ ಕೃಷ್ಣಂ ನರಹರಿಮನಂತಂ ಮಧುರಿಪುಂ
ಹೃಷೀಕೇಶಂ ಯಜ್ಞಂ ಕಪಿಲಮೃಷಭಂ ವಾಜಿವದನಮ್ ।
ನರಂ ವ್ಯಾಸಂ ನಾರಾಯಣಮನಘಮಾತ್ಮಾನಮಮೃತಂ
ದತ್ತಂ ಧನ್ವಂತರಿಂ ಪುರುಷಮಿತರಾಸೂನುಮಜಿತಮ್ ॥34॥

ಅನಂತರೂಪಂ ಸ್ವಮನಂತಚರ್ಯಂ
ಅನಂತವೇದೈರನುವರ್ಣನೀಯಮ್ ।
ಅನಂತನಾಮಾನಮನಂತದೇವಂ
ಅನಂತಕಲ್ಯಾಣಗುಣಾಭಿರಾಮಮ್ ॥35॥

ಅನಂತಶಕ್ತೀಶಮನಂತವಿಕ್ರಮಂ
ಹ್ಯನಂತದೇಹೇ ಚ ಶಯಾನಮೀಶ್ವರಮ್ ।
ಅನಂತಸೌಭಾಗ್ಯಮನಂತನೇತ್ರಕಂ
ಅನಂತಪಾದಾದಿಮನಂತಸೌಖ್ಯದಮ್ ॥36॥

ಅಸುರಾಚಲೌಘಹರಚಕ್ರಧರಂ
ದುರಿತಾಚಲೌಘಹರವಜ್ರಧರಮ್ ।

ಕಲ್ಕಿಸ್ವರೂಪಿಯಾದ ಶ್ರೀನಿವಾಸನನ್ನು ಸದಾ ಭಜಿಸುತ್ತೇನೆ. (33) ಹರಿ, ಹಂಸ, ಕೃಷ್ಣ, ನರಹರಿ, ಅನಂತ, ಮಧುಸೂದನ, ಹೃಷಿಕೇಶ, ಯಜ್ಞ, ಕಪಿಲ, ವೃಷಭ, ಹಯಗ್ರೀವ, ನರ, ವ್ಯಾಸ ನಾರಾಯಣ, ಅನಘ ಆತ್ಮ, ಅಮೃತ, ದತ್ತ, ಧನ್ವಂತರೀ, ಪುರಷ, ಮಹಿದಾಸ, ಅಜಿತ, ರೂಪಗಳನ್ನು ಧರಿಸಿದ ಶ್ರೀನಿವಾಸನನ್ನು ಸದಾ ಭಜಿಸುತ್ತೇನೆ (34) ಅನಂತವಾದ ರೂಪಗಳುಳ್ಳ, ಸ್ವರೂಪ ಭೂತಗಳಾದ ಅನಂತ ವ್ಯಾಪಾರಗಳುಳ್ಳ, ಅನಂತವಾದ ವೇದಗಳಿಂದ ಅನುವರ್ಣನೀಯನಾದ, ಅನಂತನಾಮಗಳುಳ್ಳ, ಅನಂತಶಬ್ದವಾಚ್ಯನಾದ, ಅನಂತವೇದವೇದ್ಯನಾದ, ಅನಂತಕಲ್ಯಾಣಗುಣಗಳಿಂದ ಶೋಭಿಸುವ, ಅನಂತಶಕ್ತಿಗಳಿಗೆ ಒಡೆಯ ನಾದ, ಅಪರಿಮಿತ ಪರಾಕ್ರಮವುಳ್ಳ, ಅನಂತವಾದ ದೇಹಗಳಲ್ಲಿ ಮಲಗಿದ, ಈಶ್ವರನಾದ, ಅನಂತಸೌಭಾಗ್ಯವುಳ್ಳ, ಅನಂತಪಾದಾದ್ಯವಯವಗಳುಳ್ಳ, ಅನಂತಸೌಖ್ಯಸ್ವರೂಪಿಯಾದ, ಶ್ರೀನಿವಾಸನನ್ನು ಸ್ತುತಿಸುತ್ತೇನ. (35–36) ಅಸುರರೆಂಬ ಪರ್ವತಸಮೂಹವನ್ನು ಸಂಹರಿಸುವ ಚಕ್ರಾಯುಧ ಧಾರಿಯಾದ, ಪಾಪಗಳೆಂಬ ಪರ್ವತವೃಂದವನ್ನು ಹರಣಮಾಡುವ ವಜ್ರಾಯುಧವನ್ನು ಧರಿಸಿದ, ಕೃಪಾಪರ್ವತ ಸಮೂಹದಿಂದ ತುಂಬಿದ ಶ್ರೇಷ್ಠ ಮನಸ್ಸುಳ್ಳ, ಸುವರ್ಣ ಪರ್ವತಗಳಿಂದ ತುಂಬಿದ ಕಮಲದಂತಿರುವ ಕೈಗಳುಳ್ಳ ಶ್ರೀನಿವಾಸನನ್ನು ಸ್ತುತಿಸುತ್ತೇನೆ. (37) ಶ್ರೀ ವೆಂಕಟೇಶನೇ ! ಲಕ್ಷ್ಮೀಪತಿಯಾದ ನೀನು

ಕರುಣಾಚಲೌಘಭರಚಿತ್ತವರಂ
ಕನಕಾಚಲೌಘಧರಪದ್ಮಕರಮ್ ॥37॥

ಭುವನೇಷು ವೇಂಕಟೇಶ
ಬಹುಪುರುಷಾರ್ಥದಾನನಿಪುಣೋಽಸಿ ।
ನೋ ಚೇದ್ ವ್ಯಕ್ತತಯಾ ತ್ವಂ
ಬಹೂನ್ನತಸ್ಥಾನೇ ಕುತೋ ವಸಸಿ ॥38॥

ಗುಣೌಘೈರಪಾರಂ ಸ್ಫುರದ್ರತ್ನಹಾರಂ
ಸ್ಮರದ್ದೋಷಹಾರಂ ಸ್ವಭಕ್ತೇಷ್ಟಪೂರಮ್ ।
ಭಜೇ ವೇಂಕಟೇಶಂ ಫಣೀಶಾದ್ರಿವಾಸಂ
ಸದಾ ಮಂದಹಾಸಂ ಶ್ರಿಯಾ ಸದ್ವಿಲಾಸಮ್ ॥39॥

ವೇಂಕಟೇಶ ಚರಣೇ ತವ ವಂದೇ
ಸರ್ವತೀರ್ಥಶರಣೇ ಶರಣೇ ಮೇ ।
ಮಾವಿಧೀರಶಿವವೀಶಫಣೀಶೇಂ-
ದ್ರಾರ್ಕಸೋಮಹುತಭುಙ್ಮುಖ ವಂದೇ ॥40॥

ವೇಂಕಟೇಶ ಚರಣೇ ತವ ವಂದೇ
ಲೋಕಪಾವನಸುಕುಂಕುಮವರ್ಣೇ ।

ಅನೇಕ ವಿಧವಾದ ಪುರುಷಾರ್ಥಗಳನ್ನು ಕೊಡುವುದರಲ್ಲಿ ನಿಪುಣನಾಗಿರುವಿ. ನೀನು ಪುರಷಾರ್ಥಗಳನ್ನು ಕೊಡದಿದ್ದರೆ, ವೈಕುಂಠದಿಂದ ಬಂದು ವೆಂಕಟಾಚಲದಲ್ಲಿ ವ್ಯಕ್ತನಾಗಿ ಬಹು ಉನ್ನತಸ್ಥಾನದಲ್ಲಿ ಯಾಕೆ ವಾಸ ಮಾಡುತ್ತಿದ್ದೀ? ಗುಣಸಮೂಹಗಳಿಂದ ಅಪರಿಮಿತನು, ಹೊಳೆಯುತ್ತಿರುವ ರತ್ನಹಾರವುಳ್ಳವನು, ಸ್ಮರಿಸುವವರ ದೋಷಗಳನ್ನು ನಾಶ ಮಾಡುವ, ತನ್ನ ಭಕ್ತರ ಇಷ್ಟಾರ್ಥಗಳನ್ನು ಪೂರ್ತಿಮಾಡುವ, ಯಾವ ಶ್ರೀದೇವಿಯಿಂದ ಕೂಡಿಕೊಂಡು ನಿರ್ದುಷ್ಟವಾದ ವಿಲಾಸವುಳ್ಳ, ಶೇಷಾದ್ರಿ ವಾಸನಾದ ಶ್ರೀವೆಂಕಟೇಶನನ್ನು ಸ್ತೋತ್ರ ಮಾಡುತ್ತೇನೆ. (39) ಹೇ ವೆಂಕಟೇಶನೇ! ಸರ್ವ ತೀರ್ಥಗಳಿಗೆ ಆಶ್ರಯಿಭೂತನಾದ, ನನಗೆ ರಕ್ಷಕರಾದ ರಮಾ-ಬ್ರಹ್ಮ-ವಾಯು-ಶಿವ-ಗರುಡ-ಶೇಷ-ಇಂದ್ರ-ಸೂರ್ಯ-ಚಂದ್ರ-ಅಗ್ನಿ ಇವರೇ ಮುಂತಾದ ದೇವತೆಗಳಿಂದ ಸ್ತುತ್ಯಗಳಾದ ಮತ್ತು ನಮಸ್ಕರಿಸಲಿಕ್ಕೆ ಯೋಗ್ಯವಾದ ನಿನ್ನ ಪಾದಗಳನ್ನು ನಾನು ನಮಸ್ಕರಿಸುತ್ತೇನೆ. (40) ಶ್ರೀನಿವಾಸನೇ! ಲೋಕಗಳನ್ನು ಪವಿತ್ರಗೊಳಿಸುವ ಕುಂಕುಮ ವರ್ಣವುಳ್ಳ, ಸುರ, ಋಷಿ

ಶ್ರೀಪ್ರದೇ ಕಿಲ ಸುರರ್ಷಿನರಾಣಾಂ
ಶ್ರೀಋಗಾದಿನಿಗಮಾಗಮವೇದ್ಯೇ ॥41॥

ಭಜೇ ಭಜಕಸೌಖ್ಯದಂ ನಿಜಕಟಾಕ್ಷಸಂಪ್ರೇಕ್ಷಣಂ
ಪರಾತ್ಪರತರಂ ಧರಂ ದರಮರಿಂ ಗದಾಮಂಬುಜಮ್ ।
ಚತುರ್ಭುಜಮಧೋಕ್ಷಜಂ ಕಮಲಜೇಶಪೂರ್ವಾರ್ಚಿತಂ
ವರೋದ್ಧತಖಲಾನ್ಬಹೂನ್ ಬಹುಜವೇನ ಸಂಹಾರಿಣಮ್ ॥42॥

ಅಜ್ಞಾನಸಾಗರಸಮುತ್ತರಣೇ ಪ್ರಶಸ್ತಂ
ಸುಜ್ಞಾನಸೇತುರಚನೇ ನಿಪುಣಂ ಬುಧೇಡ್ಯಮ್ ।
ಲಕ್ಷ್ಮೀಪತಿಂ ಸುರವರಾರ್ಚಿತವೇಂಕಟೇಶಂ
ದಾರಿದ್ರ್ಯ ಪೂರ್ವದುರಿತೌಘನಿಶಾಚರಘ್ನಮ್ ॥43॥

ಲಕ್ಷ್ಮೀನಾಥಂ ಕಮಲನಯನಂ ಹಾರಕೇಯೂರಭೂಷಂ
ಅಂಡವ್ಯಾಪ್ತಂ ಬಹುಗುಣಭರಂ ದೋಷದೂರಂ ದಯಾಬ್ಧಿಮ್।
ಸ್ವಾನಾಂ ತಾಪತ್ರಯಹರಮಜಂ ನಿರ್ವಿಶೇಷಂ ವಿಶೇಷಂ
ಲೋಕಾತೀತಂ ಪುರುಷಮತುಲಂ ಭಾವಯಾಮೀಷ್ಟದೇವಮ್ ॥44॥

ಮನುಷ್ಯರುಗಳಿಗೆ ಸಂಪದಪ್ರದವಾದ, ಋಗಾದಿನಿಗಮಾಗಮವೇದ್ಯವಾದ ನಿನ್ನ ಪಾದಗಳನ್ನು ನಮಸ್ಕರಿಸುತ್ತೇನೆ (41) ಭಜಿಸುವವರಿಗೆ ಸೌಖ್ಯವನ್ನೀಯುವ, ಪ್ರಿಯರಾದ ಭಕ್ತರನ್ನು ತನ್ನ ಕಟಾಕ್ಷಗಳಿಂದ ಚೆನ್ನಾಗಿ ವೀಕ್ಷಿಸುವ, ಶ್ರೇಷ್ಠರಾದ ದೇವತೆಗಳಿಗಿಂತಲೂ ಅತ್ಯಂತ ಉತ್ತಮನಾದ ಶಂಖಚಕ್ರ ಗದಾಪದ್ಮ ಧಾರಿಯಾದ, ಚತುರ್ಭುಜನಾದ, ಬ್ರಹ್ಮರುದ್ರಾದಿದೇವತೆಗಳಿಂದ ಅರ್ಚಿತನಾದ, ವರಮದದಿಂದ ಉದ್ಧಟರಾದ, ಮೂರ್ಖರಾದ ಅನೇಕ ದೈತ್ಯರುಗಳನ್ನು ಬಹುವೇಗದಿಂದ ಸಂಹಾರ ಮಾಡಿದ, ಅಧೋಕ್ಷಜನಾದ ಶ್ರೀನಿವಾಸನನ್ನು ಭಜಿಸುತ್ತೇನೆ. (42) ಅಜ್ಞಾನವೆಂಬ ಸಮುದ್ರವನ್ನು ದಾಟಿಸುವದರಲ್ಲಿ ಶ್ರೇಷ್ಠನಾದ, ಸುಜ್ಞಾನವೆಂಬ ಸೇತುಬಂಧನದಲ್ಲಿ ನಿಪುಣನಾದ, ಪಂಡಿತರಿಂದ ಸ್ತುತ್ಯನಾದ, ಲಕ್ಷ್ಮೀಪತಿಯಾದ, ಸುರಶ್ರೇಷ್ಠರಿಂದ ಅರ್ಚಿತನಾದ, ದಾರಿದ್ರ್ಯವೇ ಮೊದಲಾದ ದುರಿತಗಳೆಂಬ ಕಳ್ಳರನ್ನು ನಾಶಮಾಡುವ ಶ್ರೀಶ್ರೀನಿವಾಸನನ್ನು ಸ್ತೋತ್ರಮಾಡುತ್ತೇನೆ (43) ಲಕ್ಷ್ಮೀರಮಣ, ಕಮಲನಯನ, ಹಾರಕೇಯೂರಾದಿಭೂಷಣಗಳಿಂದ ಭೂಷಿತ, ಬ್ರಹ್ಮಾಂಡದಲ್ಲಿ ವ್ಯಾಪ್ತ, ಬಹುಗುಣಗಳಿಂದ ಪೂರ್ಣ, ದೋಷದೂರ, ದಯಾಸಮುದ್ರ, ತನ್ನ ಭಕ್ತಜನರ ತಾಪತ್ರಯಗಳನ್ನು ಹರಣಮಾಡುವ, ಉತ್ಪತ್ತಿರಹಿತ, ಪ್ರಾಕೃತಗುಣಹೀನ, ಅಪ್ರಾಕೃತ ಗುಣಪೂರ್ಣ, ಲೋಕಾತೀತ ಹಾಗೂ ಸಮಾಧಿಕರಹಿತನಾದ, ಪುರುಷಶ್ರೇಷ್ಠನಾದ,

ಶ್ರೀಮದ್ವೇಂಕಟನಾಥಪಾದಜನಿತಾ ಗಂಗಾ ಜಗತ್ಪಾವನೀ
ಯಸ್ಯಾಪಾಂಗನಿರೀಕ್ಷಣಂ ವಿಧಿಭವೇಂದ್ರಾರ್ಕಾದಿಸರ್ವೇಷ್ಟದಮ್ ।
ಯನ್ನಾಮಸ್ಮರಣಂ ಮಹಾಘಹರಣಂ ಸ್ವರ್ಗಂ ಚ ಮೋಕ್ಷಪ್ರದಂ
ಯತ್ಪಾದಾಂಬುಜಯುಗ್ಮಸೇವನರತೋ ಬ್ರಹ್ಮಾದಿಭಿಃ ಪೂಜ್ಯತೇ ॥45

ದೃಷ್ಟಾದ್ಯಂತ್ಯಂತದೂರಂ ನಿಗಮನಿಚಯಸಂವೇದ್ಯಮಾಹಾತ್ಮ್ಯಪೂರ್ಣಂ
ಸರ್ವೇಷಾಮಾದಿಮಿತ್ರಂ ರವಿಶಶಿನಯನಂ ಪೂರ್ಣಕಾರುಣ್ಯದೇಹಮ್ ।
ನಿರ್ವಾಣಂ ನಿಷ್ಪ್ರಪಂಚಂ ನಿರವಧಿಕಸಮಾಮ್ನಾಯಸಂಘೈರಸಂಗೈಃ
ಗೀರ್ವಾಣಾದ್ಯೈರಜಸ್ರಂ ಸ್ತುತುನತಿನಿಯಮೈಕಾಂತಭಕ್ತ್ಯಾದಿಪೂಜ್ಯಮ್ ॥46॥

ಕಿಂಕರ ಶಂಕರ ಬಹುಕರುಣಾ ತವ
ಬಹುಚರಿತಂ ಚತುರ್ದಶಭುವನೇಷು ।
ಜ್ಞಾಪಯಸಿ ತವ ಭಕ್ತವರ್ಗೇಭ್ಯಃ
ಫಣಿಶುಕಪೈಲನಾರದಪ್ರಮುಖೈಃ ॥47॥

ಇಷ್ಟದೇವತೆಯಾದ ಶ್ರೀ ವೆಂಕಟೇಶನನ್ನು ಭಜಿಸುತ್ತೇನೆ (44) ಶ್ರೀ ವೆಂಕಟೇಶ್ವರನ ಪಾದದಿಂದ ಜನಿತಳಾದ ಗಂಗೆಯು ಜಗತ್ತನ್ನೇ ಪವಿತ್ರೀಕರಿಸುವುಳು. ಅವರ ಅಪಾಂಗವೀಕ್ಷಣವು ಬ್ರಹ್ಮ, ರುದ್ರ, ಇಂದ್ರ, ಸೂರ್ಯಾದಿ ದೇವತೆಗಳಿಗೆ ಸರ್ವಾರ್ಥ ಸಿದ್ಧಿಪ್ರದವಾಗಿರುವುದು, ಅವನ ನಾಮಸ್ಮರಣೆಯು ಮಹಾಪಾಪನಾಶಕವು ಮತ್ತು ಸ್ವರ್ಗ ಹಾಗೂ ಮೋಕ್ಷಪ್ರದವಾಗಿರುವುದು. ಆತನ ಪಾದಕಮಲಗಳ ಸೇವಾಸಕ್ತನಾದವರು ಬ್ರಹ್ಮಾದಿಗಳಿಂದಲೂ ಆದರಿಸಲ್ಪಡುತ್ತಾರೆ. (45) ನಮ್ಮ ಅಜ್ಞದೃಷ್ಟಿಗೆ ಅತ್ಯಂತ ದೂರ, ನಿಗಮಾಗಮಸಮೂಹಗಳಿಂದ ಚೆನ್ನಾಗಿ ವೇದ್ಯವಾದ ಮಹಾತ್ಮ್ಯಗಳಿಂದ ಪರಿಪೂರ್ಣನೂ, ಸರ್ವದೇವತೆಗಳಿಗೆ ಪ್ರಥಮ ಸ್ನೇಹಿತನೂ, ಸೂರ್ಯಚಂದ್ರರುಗಳಿಗೆ ಸದೃಶವಾದ ನಯನಗಳುಳ್ಳವನೂ, ಕರುಣೆಯಿಂದ ಪೂರ್ಣವಾದ ದೇಹವುಳ್ಳವನೂ, ಪ್ರಪಂಚದಿಂದ ದೂರನೂ, ಪ್ರಾಕೃತಶರೀರ ರಹಿತನೂ, ನಿರವಧಿಕವಾಗಿ ಶ್ರೇಷ್ಠವಾದ ವೇದಸಮೂಹಗಳಿಂದಲೂ, ಅಸಂಗಿಗಳಾದ ದೇವತಾಶ್ರೇಷ್ಠರುಗಳಿಂದಲೂ ಬಹುವಿಧವಾಗಿ ಸ್ತೋತ್ರ-ನಮಸ್ಕಾರಗಳ ಮೂಲಕವಾಗಿ ನಿಯತವಾಗಿ ಏಕಾಂತ ಭಕ್ತ್ಯಾದಿಗಳಿಂದ ಪೂಜ್ಯನಾದವನೂ ಆದ ಶ್ರೀನಿವಾಸನನ್ನು ಸ್ತೋತ್ರ ಮಾಡುತ್ತೇನೆ. (46) ಹೇ ಶ್ರೀನಿವಾಸನೇ! ಜಗತ್ತಿಗೆ ಸುಖವನ್ನುಂಟು ಮಾಡುವ ರುದ್ರಾದಿದೇವತೆಗಳನ್ನೇ ಕಿಂಕರರಾಗಿ ಉಳ್ಳವನು ನೀನು. ನಿನ್ನ ಬಹು ವಿಧವಾದ ಚರಿತ್ರೆಯನ್ನು ಹದಿನಾಲ್ಕು ಲೋಕಗಳಲ್ಲಿ ನಿನ್ನ ಭಕ್ತವರ್ಗಕ್ಕೆ ಶೇಷದೇವರು, ಶುಕಾಚಾರ್ಯರು, ಪೈಲ, ನಾರದ ಇವರೇ ಮುಂತಾದಭಕ್ತಸಮೂಹಗಳಿಂದ ತಿಳಿಸಿಕೊಡುತ್ತೀ.

ವೇಂಕಟೇಶಮನುಸೃತ್ಯ ಯ ಆಸ್ತೇ
ತಸ್ಯ ಭೂರಿ ಸುಭಗಂ ದಶದಿಕ್ಷು ।
ಐಹಿಕಂ ತ್ರಿದಿವಸೌಖ್ಯಮತುಲ್ಯಂ
ಮೋಕ್ಷಮಾಶು ಲಭತೇ ಗುಣಸಾಮ್ಯಮ್ ॥48॥

ಶ್ರೀನಿವಾಸಮಪಹಾತಿ ಮದಾಂಧಃ
ತಸ್ಯ ದುಃಖಮಸಮಂ ದಶದಿಕ್ಷು ।
ಐಹಿಕಂ ನರಕರೌರವಕುಂಭೀ–
ಪಾಕವಹ್ನಿಮಹದಂಧತಮಾಂಸಿ ॥49॥

ವಿಪದ್‌ಘ್ನಂ ಶುಭದೋಗ್ಧಾರಂ ಭಕ್ತಾನಾಂ ವಶವರ್ತಿನಮ್ ।
ಲೋಕಪೂಜ್ಯಂ ರಮಾರಾಮಂ ಭಜೇಽಹಂ ಪ್ರತಿಜನ್ಮಸು ॥50॥

ಭಕ್ತೌಘಾನುಗ್ರಹಾರ್ಥಾಯ ತ್ಯಕ್ತ್ವಾ ವೈಕುಂಠಮುತ್ತಮಮ್ ।
ಧರಣ್ಯಾಮವತೀರ್ಣೋಽಸಿ ವರೇಣ್ಯೋ ವರದೋಽರ್ಚಿತಃ ॥51॥

ಅತ್ಯಲ್ಪಮಾತ್ರಂ ಪರವಸ್ತು ಲೋಕೇ
ನೈವಾಪಹಾರ್ಯಂ ಕಿಲ ಸತ್ಯಸಂಧಃ ।

(47) ವೆಂಕಟೇಶ್ವರನ್ನು ಭಕ್ತ್ಯಾದಿಗಳಿಂದ ಅನುಸರಣೆ ಮಾಡಿದವನಿಗೆ ದಶದಿಕ್ಕುಗಳಲ್ಲಿ ಬಹಳವಾದ ಐಶ್ವರ್ಯವಿರುವದು. ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ಸೌಖ್ಯವನ್ನು ಹೊಂದಿ ಜ್ಞಾನಾನಂದಾದಿಗುಣ ಗಳಿಂದ ಸಾಮ್ಯವಾದ ಅಪ್ರಾಕೃತವಾದ ಮೋಕ್ಷವನ್ನು ಆತನು ಹೊಂದುತ್ತಾನೆ. (48) ಮದಾಂಧನಾದ ಯಾವನು ಶ್ರೀನಿವಾಸನನ್ನು ತಿರಸ್ಕರಿಸುತ್ತಾನೋ ಅವನಿಗೆ ದಶದಿಕ್ಕುಗಳಲ್ಲಿ ಅಸಮವಾದ ದುಃಖವು ಉಂಟಾಗುವುದು, ರೌರವ, ಕುಂಭೀಪಾಕ, ವಹ್ನೀ, ಮಹಾ ರೌರವ, ಅಂಧಂತಮಸ್ಸುಗಳನ್ನು ಹೊಂದುತ್ತಾನೆ. ಆಪತ್ಪರಿಹಾರಕನಾದ, ಶುಭವನ್ನು ಹರಿಸುವ ಭಕ್ತರ ವಶದಲ್ಲಿರುವ, ಲೋಕಮೂಜ್ಯನಾದ ರಮಾರಮಣನಾದ ಶ್ರೀನಿವಾಸನನ್ನು ಪ್ರತಿಜನ್ಮ ಜನ್ಮಗಳಲ್ಲಿಯೂ ಸ್ತೋತ್ರ ಮಾಡುತ್ತೇನೆ. (50) ಭಕ್ತಸಮೂಹಕ್ಕೆ ಅನುಗ್ರಹವನ್ನು ಮಾಡುವದಕ್ಕೆ ಉತ್ತಮವಾದ ವೈಕುಂಠವನ್ನು ತ್ಯಜಿಸಿ, ಭೂಮಿಯಲ್ಲಿ ಅವತಾರವನ್ನು ಮಾಡಿರುವಿ. ಬ್ರಹ್ಮಾದಿಗಳಿಂದ ಅರ್ಚಿತನಾದವನೂ, ಶ್ರೇಷ್ಠನಾದವನೂ, ಅಭೀಷ್ಟಪ್ರದನೂ ಆಗಿರುವಿ (51) ಜಗತ್ತಿನಲ್ಲಿ ಬೇರೆಯವರ ವಸ್ತುವನ್ನು ಅತಿ ಸ್ವಲ್ಪವೂ ಸಹ ಹರಣಮಾಡಬಾರದೆಂದು ಶಾಸ್ತ್ರನಿಯಮವಿದ್ದರೂ ಸಹ ಸತ್ಯವಾದ ಪ್ರತಿಜ್ಞೆಯುಳ್ಳ ನೀನು ಅನೇಕ ಜನರಿಂದ ಅನೇಕ ಜನ್ಮಗಳ ಪ್ರಯತ್ನದಿಂದ ಕಳೆಯಲು ಆಯಾಸಸಾಧ್ಯವಾದ ಪಾಪ ಸಂಚಯವನ್ನು ಸ್ಮೃತಿಮಾತ್ರದಿಂದ ಹರಣಮಾಡುತ್ತೀ. ನೀನು

ಜನ್ಯೈರನೇಕೈರ್ಬಹುಜನ್ಮಯತ್ನೈ –
ರಾಯಾಸಸಾಧ್ಯಂ ಬಹುಪಾಪಸಂಚಯಮ್ ॥52॥

ಹರಸ್ಯಶೇಷಂ ಸ್ಮೃತಿಮಾತ್ರತಸ್ತ್ವಂ
ಗೋಗೋಚರೋ ದೃಷ್ಟಿಪಥಾದ್ಯಗೋಚರಃ ।
ವಿಲಕ್ಷಣಂ ಸ್ಥಾವರಜಂಗಮಾತ್ಮಕಂ
ಪಶ್ಯೇ ಬಹೂಪಾಯವಿಶಾರದಂ ತ್ವಾಮ್ ॥53॥

ತವ ರೂಪಾಣ್ಯನಂತಾನಿ ಚರಿತ್ರಾಣಿ ತಥೈವ ಚ ।
ಸ್ಮರತಾಂ ಭಕ್ತಿಪೂರ್ವಂ ತು ಮಹಾವಿಭವದಾನಿ ಚ ॥54॥

ಇಹಾಮುತ್ರಾತುಲ್ಯಸೌಖ್ಯಪ್ರದಾನಿ ಮಹತಾಮಪಿ ।
ಅಲ್ಪಾನಾಂ ಕಿಮು ವಕ್ತವ್ಯಂ ಸ್ವರೂಪೋದ್ಧಾರಕಾಣಿ ಚ ॥55॥

ಪ್ರಪದ್ಯೇ ಪುಂಡರೀಕಾಕ್ಷಮೀಶಂ ಭಕ್ತಾನುಕಂಪಿನಮ್ ।
ಲೋಕೋತ್ತರಂ ಲೋಕನಾಥಂ ಪರಾತ್ಪರತರಂ ವಿಭುಮ್ ॥56॥

ಪುಣ್ಯಾತ್ ತ್ವದ್ದಯಯಾ ಲಬ್ಧಂ ವಿಶೇಷಾದಕುತೋ ಭಯಮ್ ।
ಭಗವಂತಂ ವಿಶ್ವವಂದ್ಯಂ ಭೂತಭವ್ಯಭವತ್ಪ್ರಭುಮ್ ॥57॥

ವೇದಗಳಿಗೆ ಮಾತ್ರ ಗೋಚರನು. ದೃಷ್ಟಿಮಾರ್ಗಕ್ಕೆ ಅಗೋಚರನು. ಸ್ಥಾವರ–ಜಂಗಮಾತ್ಮಕವಾದ ಜಗತ್ತಿಗೆ ವಿಲಕ್ಷಣನು. ಇಂತಹ ನಿನ್ನನ್ನು ಬಹು ಉಪಾಯಗಳನ್ನು ಬಲ್ಲವನೆಂದು ನಾನು ಭಾವಿಸುತ್ತೇನೆ. (52–53) ನಿನ್ನ ಅನಂತವಾದ ರೂಪಗಳಿರುವಂತೆ ಚರಿತ್ರೆಗಳೂ ಸಹ ಅನಂತವಾಗಿವೆ. ಭಕ್ತಿಪೂರ್ವಕವಾಗಿ ಸ್ಮರಿಸುವವರಿಗೆ ನಿನ್ನ ಚರಿತ್ರೆಗಳು ಮಹಾ ವೈಭವವನ್ನು ಕೊಡುತ್ತವೆ. (54) ಮಹಜ್ಜನರಿಗೂ ಸಹ ಸ್ವರೂಪೋದ್ಧಾರಕಗಳಾಗಿ ಇಹ–ಪರಲೋಕಗಳಲ್ಲಿ ಅತುಲವಾದ ಸೌಖ್ಯವನ್ನು ಕೊಡುವವು ಎಂದ ಮೇಲೆ ಅಲ್ಪರಾದವರ ವಿಷಯದಲ್ಲಿ ಹೇಳುವುದೇನಿದೆ? (55) ಭಕ್ತಾನುಕಂಪಿಯಾದ, ಲೋಕೋತ್ತರನಾದ, ಲೋಕನಾಥನಾದ, ಸರ್ವಶ್ರೇಷ್ಠರಿಗಿಂತಲೂ ಶ್ರೇಷ್ಠನಾದ, ವ್ಯಾಪ್ತನಾದ, ಕಮಲನಯನನಾದ ಶ್ರೀನಿವಾಸನನ್ನು ಶರಣುಹೊಂದುತ್ತೇನೆ. (56) ಪೂರ್ವಾರ್ಜಿತ ಪುಣ್ಯದಿಂದ ಪೂರ್ವಾನುಗ್ರಹ ವಿಶೇಷದಿಂದ, ನಿನ್ನ ಕೃಪಾದೃಷ್ಟಿಯಿಂದ ಲಬ್ಧವಾದ, ಭೂತ–ಭವಿಷ್ಯತ್– ವರ್ತಮಾನ ಕಾಲಗಳಿಗೆ ಪ್ರಭುವೂ, ಭಗವಂತನೂ, ವಿಶ್ವವಂದ್ಯನು, ಆದ ನಿನ್ನನ್ನು ಶರಣುಹೊಂದುತ್ತೇನೆ. ಇನ್ನು ಮುಂದೆ ನನಗೆ ಭಯವು ಇಲ್ಲವೇ ಇಲ್ಲ (ಭಯವು ಎಲ್ಲಿಂದ ಬರಬೇಕು?) (57) ಯಾವನಿಂದ ಭೂತಗಳು ಹುಟ್ಟುತ್ತವೆಯೋ, ಯಾವನಿಂದ ಈ ಸಮಸ್ತವಾದ

**ಯತೋ ಭೂತಾನಿ ಜಾಯಂತೇ ಯೇನ ಸರ್ವಮಿದಂ ತತಮ್।**
**ಯೇನ ಜಾತಾನಿ ಜೀವಂತಿ ಯಂ ಪ್ರಾಪ್ಸ್ಯಂತಿ ಮಹಾಲಯೇ ॥58॥**

**ದೀಪವಿದ್ಯುತ್ತಾರಕಾಗ್ನಿಚಂದ್ರಸೂರ್ಯಾತಿದೀಪ್ತಿಮಾನ್ ।**
**ಯೋಗಾಯೋಗ್ಯೈರ್ಯೋಗ್ಯಯೋಗ್ಯೈಃ ದೃಶ್ಯೋಽದೃಶ್ಯಃ ಶ್ರುತೋಽಶ್ರುತಃ ॥59॥**

॥ಇತಿ ಶ್ರೀಮದಾದಿತ್ಯಪುರಾಣೇ ಶ್ರೀವೇಂಕಟೇಶಮಾಹಾತ್ಮ್ಯೇ ನಾನಾವತಾರವರ್ಣನಂ ನಾಮ ತೃತೀಯೋಽಧ್ಯಾಯಃ ॥

* * *

ಜಗತ್ತು ವ್ಯಾಪ್ತವಾಗಿದೆಯೋ, ಯಾವನಿಂದ ಜನ್ಮವನ್ನು ತಳೆದ ಜೀವರಾಶಿಗಳು ಜೀವಿಸುತ್ತವೆಯೋ, ಯಾವನನ್ನು ಬ್ರಹ್ಮಾದಿ ದೇವತೆಗಳು ಮಹಾಶ್ರಯನನ್ನಾಗಿ ಹೊಂದುತ್ತಾರೊ ಅಂತಹ ಶ್ರೀನಿವಾಸನನ್ನು ಸ್ತೋತ್ರ ಮಡುತ್ತೇನೆ. (58) ದೀಪ, ವಿದ್ಯುತ್ತು (ಮಿಂಚು), ನಕ್ಷತ್ರ, ಅಗ್ನಿ, ಚಂದ್ರ, ಸೂರ್ಯ, ಇವರೇ ಮುಂತಾದ ದೇದಿಪ್ಯಮಾನರಾದವರನ್ನು ಮೀರಿಸುವ ಅತ್ಯಧಿಕ ಪ್ರಕಾಶವುಳ್ಳವನು ನೀನು ಶ್ರವಣ-ಮನನ-ನಿಧಿಧ್ಯಾಸನರೂಪ ಉಪಾಯಗಳಿಂದ ಯೋಗಿಗಳಿಂದ ಶ್ರುತನಾಗಿರುವಿ ಮತ್ತು ದೃಶ್ಯನೂ ಆಗಿರುವಿ; ಸಾಕಲ್ಯೇನ ಅಶ್ರುತನೂ ಹಾಗೂ ಅದೃಶ್ಯನೂ ಆಗಿರುವಿ.

ಇಲ್ಲಿಗೆ ಆದಿತ್ಯ ಪುರಾಣಾಂತರ್ಗತವಾದ ಶ್ರೀ ವೆಂಕಟೇಶ ಮಹಾತ್ಮ್ಯದಲ್ಲಿ ನಾನಾವತಾರ ವರ್ಣನೆಯೆಂಬ ಮೂರನೇ ಅಧ್ಯಾಯವು ಸಮಾಪ್ತವಾಯಿತು.

* * *

ಶ್ರೀಮದಾದಿತ್ಯಪುರಾಣಾಂತರ್ಗತಶ್ರೀ ವೇಂಕಟೇಶಮಾಹಾತ್ಮ್ಯೇ

## ಅಥ ಚತುರ್ಥೋऽಧ್ಯಾಯಃ

ದೇವಶರ್ಮೋವಾಚ –

ಶ್ರೀವೇಂಕಟೇಶ ಮತ್ಸ್ವಾಮಿನ್ ಪ್ರಣತಾರ್ತಿಪ್ರಣಾಶನ ।
ಜ್ಞಾನಾನಂದದಯಾಪೂರ್ಣ ವಿಜ್ಞಾಪನಮಿದಂ ಶೃಣು ॥1॥

ಯನ್ಮುಖಂ ಬ್ರಹ್ಮಜನಕಂ ಯದ್ಬಾಹೂ ಕ್ಷತ್ರಕಾರಣೇ ।
ಯದುರೂಭ್ಯಾಂ ವೈಶ್ಯಕುಲೋ ಪಾದಾಭ್ಯಾಂ ಸೇವಕೋऽಭವತ್॥2॥

ಶಿರಸೋ ದ್ಯೌರಭೂದ್ಯಸ್ಯ ಸಹಸ್ರಾಂಶುಶ್ಚ ನೇತ್ರಜಃ ।
ಮುಖಾತ್ಪುರಂದರೋऽಗ್ನಿಶ್ಚ ದಿಗ್ದೇವಾಃ ಶ್ರೋತ್ರತೋऽಭವನ್ ॥3॥

ಶೀತಾಂಶುರ್ಮನಸೋ ಜಾತಃ ಪ್ರಾಣಾದ್ವಾವಯುರಜಾಯತ ।
ಅಂತರಿಕ್ಷಂ ನಾಭಿತೋऽಭೂತ್ ಪದ್ಭ್ಯಾಂ ಭೂಮಿರಜಾಯತ॥4॥

ಯತ್ಕೋಮಲಾಂಗೈರಭವನ್ ಭುವನಾನಿ ಚತುರ್ದಶ ।
ಕೋಮಲೇ ನಾಭಿಕಮಲೇ ಬ್ರಹ್ಮಾಂಡಂ ಬ್ರಹ್ಮಣಾಶ್ರಿತಮ್ ॥5॥

ಶ್ರೀಮದಾದಿತ್ಯಪುರಾಣಾಂತರ್ಗತವಾದ ವೇಂಕಟೇಶಮಹಾತ್ಮೆಯ

## ನಾಲ್ಕನೆಯ ಅಧ್ಯಾಯ

ದೇವಶರ್ಮನು ಪ್ರಾರ್ಥಿಸುತ್ತಾನೆ:– ನಮಸ್ಕರಿಸುವವರ ಕಷ್ಟಗಳನ್ನು ಸಂಹರಿಸುವ, ಜ್ಞಾನಾನಂದ ದಯಾಪೂರ್ಣನಾದ ನನ್ನ ಸ್ವಾಮಿಯಾದ ಶ್ರೀ ವೆಂಕಟೇಶನೇ! ನನ್ನ ಈ ವಿಜ್ಞಾಪನೆಯನ್ನು ಕೇಳುವವನಾಗು. (1) ನಿನ್ನ ಮುಖವು ಬ್ರಾಹ್ಮಣರಿಗೆ ಜನಕವಾಗಿದೆ, ನಿನ್ನ ಬಾಹುಗಳು ಕ್ಷತ್ರಿಯಕುಲಕ್ಕೆ ಕಾರಣವಾಗಿದೆ. ನಿನ್ನ ತೊಡೆಗಳಿಂದ ವೈಶ್ಯ ಕುಲವು ಮತ್ತು ಪಾದಗಳಿಂದ ಸೇವಕ ಕುಲವು ಉತ್ಪನ್ನವಾಯಿತು (2) ಶಿರಸ್ಸಿನಿಂದ ಸ್ವರ್ಗಲೋಕವು, ನೇತ್ರಗಳಿಂದ ಸೂರ್ಯನು, ಮುಖದಿಂದ ದೇವೇಂದ್ರನು, ಅಗ್ನಿಯು ಹಾಗೂ ಶ್ರೋತ್ರೇಂದ್ರಿಯದಿಂದ ದಿಗ್ದೇವತೆಗಳು ಉತ್ಪನ್ನರಾದರು. (3)ಮನಸ್ಸಿನಿಂದ ಚಂದ್ರನು, ಪ್ರಾಣದಿಂದ ವಾಯುವು, ನಾಭಿಯಿಂದ ಅಂತರಿಕ್ಷವು, ಪಾದಗಳಿಂದ ಭೂಮಿಯು ಉತ್ಪನ್ನವಾಯಿತು. (4) ಕೋಮಲವಾದ ನಿನ್ನ ಅಂಗಗಳಿಂದ ಹದಿನಾಲ್ಕು ಲೋಕಗಳು ಉತ್ಪನ್ನವಾದವು. ಕೋಮಲವಾದ ನಾಭಿಕಮಲದಲ್ಲಿ ಚತುರ್ಮುಖ ಬ್ರಹ್ಮನಿಂದ

ಶ್ರಿಯಃ ಪತೇ ಕೋಽಪಿ ಜಯೇನ್ನ ಮಾಯಾಂ
ಯಯಾ ಜನೋ ಮುಹ್ಯತಿ ವೇದನಾರ್ಥಮ್ ।
ತಂ ನಿರ್ಜಿತಾತ್ಮಾನಮನಂತಮಾಯಿನಂ
ಮಾಯಾಪಹಂ ತ್ವಾಂ ಶರಣಂ ಪ್ರಪದ್ಯೇ ॥6॥

ನಮೋಽತರ್ಕ್ಯಾಯ ತರ್ಕ್ಯಾಯ ಸಗುಣಾಯಾಗುಣಾಯ ಚ ।
ನಮೋಽನಂತಾಯಾಂತಕಾಯ ವೇದ್ಯಾವೇದ್ಯಸ್ವರೂಪಿಣೇ ॥7॥

ಸಿದ್ಧಿಪ್ರದಸ್ತ್ವಂ ಕಿಲ ದೇವವರ್ಯ
ತ್ವತ್ಪ್ರೇರಿತೋಽಹಂ ತವ ಪಾದಮಾಪ್ತಃ ।
ತ್ವತ್ಪಾದಭಕ್ತೋ ಬಹಿರಂತರಾತ್ಮನ್
ಕಿಮಸ್ತಿ ವಿಜ್ಞಾಪ್ಯಮಶೇಷಸಾಕ್ಷಿಣಃ ॥8॥

ಸುಖಂ ನೃಪಾಲಾಃ ಸುರದೇವಮುಖ್ಯಾ
ಬ್ರಹ್ಮಾದಯಸ್ತೇ ಪದಪದ್ಮಸಂಶ್ರಿತಾಃ ।
ತ್ವತ್ಕಿಂಕರಾಸ್ತೇಽಪಿ ಪೃಥಗ್ವಿಭಾವಿತಾಃ
ಕುರುಷ್ವ ಶಂಭೋ ಋಷಿದೇವಮಿತ್ರ ॥9॥

ಅಧಿಷ್ಠಿತವಾದ ಬ್ರಹ್ಮಾಂಡವು ಆಯಿತು. (5) ಶ್ರೀಯಃಪತಿಯಾದ ಶ್ರೀನಿವಾಸನೇ! ಯಾವ ಮಾಯೆಯನ್ನು ತಿಳಿಯುವ ವಿಷಯದಲ್ಲಿ ಜನರು ಮೋಹವನ್ನು ಹೊಂದುತ್ತಾರೋ ಅಂತಹ ಮಾಯೆಯನ್ನು ಗೆಲ್ಲುವವರಾರು? ಅಂತಹ ಸಮಸ್ತ ಆತ್ಮರನ್ನು ಗೆದ್ದು ಅನಂತಮಾಯಾರೂಪಿಯಾದ, ಮಾಯೆಯನ್ನು ಅಪಹರಿಸುವ ನಿನ್ನನ್ನು ಶರಣು ಹೊಂದುತ್ತೇನೆ. (6) ಊಹಿಸಲು ಅಸಾಧ್ಯನೂ, ಸಜ್ಜನರಿಂದ ಯೋಗ್ಯತಾನುಸಾರವಾಗಿ ಊಹಿಸಲು ಶಕ್ಯನೂ, ಅಪ್ರಾಕೃತ ಗುಣಪೂರ್ಣನೂ, ಪ್ರಾಕೃತಗುಣಹೀನನೂ, ಸಾಕಲ್ಯೇನ ಅವೇದ್ಯನೂ, ಸ್ವರೂಪಯೋಗ್ಯತಾನುಸಾರವಾಗಿ ವೇದ್ಯಸ್ವರೂಪನೂ, ಅನಂತನೂ, ದುರ್ಜನರಿಗೆ ಅಂತಕನಾದ ನಿನ್ನನ್ನು ನಮಸ್ಕರಿಸುತ್ತೇನೆ (7) ದೇವತಾಶ್ರೇಷ್ಠನಾದ ನೀನು ಇಷ್ಟಾರ್ಥಸಿದ್ಧಿಯನ್ನು ಕೊಡುವವನು. ನಿನ್ನಿಂದಲೇ ಪ್ರೇರಿತನಾದ ನಾನು ನಿನ್ನ ಪಾದವನ್ನು ಹೊಂದಿದ್ದೇನೆ. ನಾನು ನಿನ್ನ ಪಾದಭಕ್ತ, ಸಮಸ್ತರ ಬಹಿರಂತರ್ಭಾಗದಲ್ಲಿ ಸ್ವಾಮಿಯಾಗಿ ಅಂತಃಸ್ಥಿತನಾದ, ಸರ್ವವನ್ನೂ ಸಾಕ್ಷಾತ್ಕರಿಸಿಕೊಂಡಿರುವ ನಿನಗೆ ವಿಜ್ಞಾಪಿಸಿ ಕೊಳ್ಳುವುದೇನಿದೆ? (8). ಹೇ ಶ್ರೀನಿವಾಸನೇ! ರಾಜರು, ದೇವಮುಖ್ಯರಾದ ಇಂದ್ರಾದಿದೇವತೆಗಳು, ಬ್ರಹ್ಮಾದಿದೇವತೆಗಳೂ ಕೂಡಾ ನಿನ್ನ ಪಾದಾಶ್ರಿತ ರಾಗಿ ಈಗಲೂ ಸಹ ಸುಖಕ್ಕಾಗಿ ನಿನ್ನನ್ನು ಆಶ್ರಿಯಿಸುತ್ತಾರೆ. ಋಷಿ ಗಳಿಗೂ ದೇವತೆಗಳಿಗೂ ಮಿತ್ರನಾದ ನೀನು ನನಗೆ ಸುಖವನ್ನು

ಉತ್ಪತ್ತ್ಯಧ್ವನ್ಯಶರಣ ಉರು ಕ್ಲೇಶದುರ್ಗಾಂತಕೋಽಗ್ರ್ಯ-
ವ್ಯಾಲಾಕೃಷ್ಟೇ ವಿಷಯಮೃಗತೃಷ್ಣಾತ್ಮಗೇಹೋರುಭಾರಃ ।
ದ್ವಂದ್ವಶ್ವಭ್ರೇ ಖಲಮೃಗಭಯೇ ಶೋಕದಾವೇಽಜ್ಞಸಾರ್ಥಃ
ಪಾದೌ ಶಸ್ತೌ ಶರಣದ ಕದಾ ಯಾಮಿ ಕಾಮೋಪಸೃಷ್ಟಃ ॥10॥

ಭವಾಬ್ಧಿತಾರಂ ಕಟಿವರ್ತಿಹಸ್ತಂ
ಸ್ವರ್ಣಾಂಬರಂ ರತ್ನಕಿರೀಟಕುಂಡಲಮ್ ।
ಆಲಂಬಿ ಸೂತ್ರೋತ್ತಮಮಾಲ್ಯಭೂಷಿತಂ
ನಮಾಮ್ಯಹಂ ವೇಂಕಟಶೈಲನಾಯಕಮ್ ॥11॥

ಜಾಂಬೂನದಾಭಂ ಗುಣಿಭಿರ್ವರೇಣ್ಯಂ
ವಕ್ಷಃಸ್ಥಲೇ ದಕ್ಷಕುಚೋರ್ಧ್ವಭಾಗೇ ।

ಕೊಡು. (9) ಹೇ ಸ್ವಾಮೀ! ಶ್ರೀ ವೇಂಕಟೇಶ್ವರನೇ! ಸಂಸಾರಾರಣ್ಯ ಪತಿತನಾದ ನನಗೆ ನಿನ್ನ ಪಾದಕಮಲಲಾಭವೇ ಅತ್ಯಂತ ಸುಖಕರವಾಗಿದೆ. ಆಧ್ಯಾತ್ಮಿಕ- ಆಧಿದೈವಿಕ ಮತ್ತು ಆಧಿಭೌತಿಕ ತಾಪತ್ರಯಗಳು ಮತ್ತು ದಾರಿದ್ರ್ಯವೇ ಮೊದಲಾದ ಉಲ್ಲಂಘಿಸಲು ಅಸಾಧ್ಯವಾದ, ದುರ್ಗಮವಾದ ಪರ್ವತಗಳಿಂದ ಕೂಡಿದ, ಅಪರೋಕ್ಷಜ್ಞಾನಪ್ರತಿಬಂಧಕಗಳಾಗಿ ಸ್ವರೂಪ ನಾಶಕಗಳಾದ ಕಾಮ, ಕ್ರೋಧ, ಮದ, ಮತ್ಸರ, ಲೋಭ ಮತ್ತು ಮೋಹಗಳೆಂಬ ಉಗ್ರವಾದ ಕ್ರೂರ ಘಟಸರ್ಪಗಳಿಂದ ಕೂಡಿದ, ನಿಂದಾ-ಸ್ತುತಿ, ಜಯ-ಅಪಜಯ, ಲಾಭ-ಅಲಾಭ, ಮಾನ-ಅಪಮಾನಗಳೆಂಬ ದ್ವಂದ್ವಗಳೆಂಬ ಅಳವಾದ ಕೊಳ್ಳಗಳಿಂದ ಯುಕ್ತವಾದ ಸಂಸಾರವೆಂಬ ಗೊಂಡಾರಣ್ಯದಲ್ಲಿ ಪತಿತನಾದ, ಸಂಸಾರತಾರಕಸನ್ಮಾರ್ಗವನ್ನು ಅರಿಯದವನಾಗಿ ಅಜ್ಞಾನಿಗಳೆಂಬ ಪಥಿಕರ ಸಂಘದಿಂದ ದಾರಿತಪ್ಪಿದವನಾಗಿ, ಭಾರ್ಯಾ, ಪುತ್ರ, ಕಲತ್ರರೆಂಬ ಭಾರಭರಿತನಾಗಿ, ಬಿಸಿಲುಗುದುರೆಯಂತಿರುವ ವಿಷಯ ಸುಖವನ್ನು ಹಿಂಬಾಲಿಸುತ್ತಿರುವ ನಾನು ಅನಂತವೇದಪ್ರತಿಪಾದ್ಯವಾದ, ಬಹುರಕ್ಷಕತ್ವಾದಿ ಗುಣಗಣಮಂಡಿತನಾಗಿರುವದರಿಂದ ರಕ್ಷಣೆಯಲ್ಲಿ ಪರಮಪ್ರಶಸ್ತವಾದ ನಿನ್ನ ಪಾದಾರವಿಂದಗಳನ್ನು ಎಂದು ಹೊಂದುವೆನೆಂಬ ಉತ್ಕಟವಾದ ಇಚ್ಛೆಯುಳ್ಳವನಾಗಿದ್ದೇನೆ. (10)ಸಮುದ್ರವನ್ನು ದಾಟಿಸುವ ನಿನ್ನ ಭಜಕರಿಗೆ ಸಂಸಾರವು ಆಗಾಧವಲ್ಲ, ಅಪರಿಮಿತವಲ್ಲ; ಟೊಂಕದಷ್ಟು ಆಳ ಮಾತ್ರ ಎಂದು ತಿಳಿಸುವುದಕ್ಕಾಗಿಯೇ ಏನೋ ಎಂಬಂತೆ ಟೊಂಕದ ಮೇಲೆ ಇಡಲ್ಪಟ್ಟ ಕೈಗಳುಳ್ಳ, ಸುವರ್ಣಮಯ ಪೀತಾಂಬರಧಾರಿಯಾದ, ರತ್ನಕೀರೀಟಕುಂಡಲಗಳಿಂದ ಅಲಂಕೃತನಾದ, ಜೋತಾಡುತ್ತಿರುವ ಯಜ್ಞೋಪವಿತ, ವನಮಾಲಾದಿಗಳಿಂದ ಭೂಷಿತನಾದ, ವೇಂಕಟಗಿರಿಗೆ ಒಡೆಯನಾದ ವೆಂಕಟೇಶ್ವರನನ್ನು ನಾನು ನಮಸ್ಕರಿಸುತ್ತೇನೆ. (11) ಸುವರ್ಣದಂತೆ ಕಾಂತಿಯುಳ್ಳ, ಗುಣಿಗಳಿಂದಲೂ ಅಪೇಕ್ಷಿತನಾದ, ವಕ್ಷಸ್ಥಳದಲ್ಲಿ ಬಲಕುಚದ ಊರ್ಧ್ವಭಾಗದಲ್ಲಿ ಶ್ರೀವತ್ಸಚಿಹ್ನೆಯಿಂದ ಅಂಕಿತವಾದ

ಶ್ರೀವತ್ಸಲಕ್ಷ್ಮ್ಯಂಕಿತದಿವ್ಯರೂಪಂ
ಶ್ರೀವೇಂಕಟಾಧೀಶಮಹಂ ಪ್ರಪದ್ಯೇ ॥12॥

ಸಂಸ್ಥಿತಂ ಸುವಿಮಾನಂತರ್ವಿರಿಂಚಾದ್ಯೈಶ್ಚ ಸೇವಿತಮ್ ।
ಚಾಮರೈರ್ವ್ಯಜನೈಶ್ಛತ್ರೈಃ ಶರದಿಂದುಮುಖಂ ಭಜೇ ॥13॥

ಭಕ್ತಾನುಕಂಪೀ ಗರುಡಧ್ವಜಸ್ತತ್-
ಸ್ಕಂಧಂ ಸಮಾರುಹ್ಯ ಕಿರೀಟಕುಂಡಲೀ ।
ಪೀತಾಂಬರಶ್ಚಾರುಸುಮಂದಹಾಸಃ
ಶ್ರೀಕೌಸ್ತುಭಶ್ಚಕ್ರವರಾಭಯಾಂಕಿತಃ ॥14॥

ಸಜಯೋ ವಿಜಯಶ್ಚೈವ ದೃಶ್ಯೋಽದೃಶ್ಯಃ ಶ್ರುತೋಽಶ್ರುತಃ ।
ಸಂಭಾಷಣೋಽಭಾಷಣಶ್ಚ ವಾಚ್ಯೋಽವಾಚ್ಯೋ ವೃಷೋಽವೃಷಃ ॥15॥

ತ್ವತ್ಪಾದಪದ್ಮಯುಗಲಂ ಶ್ರೇಯೋ ನಿಸ್ಸಕ್ತಮಾನಸಾಃ ।
ವಿಸೃಜ್ಯೋಭಯತಃ ಸಂಗಂ ಬ್ರಹ್ಮಾದ್ಯಾಃ ಸಮುಪಾಸತೇ ॥16॥

ದಿವ್ಯರೂಪವುಳ್ಳ ವೆಂಕಟಾಚಲಪತಿಯನ್ನು ಶರಣು ಹೊಂದುತ್ತೇನೆ. (12) ಉತ್ತಮವಾದ ರಮ್ಯವಾದ ವಿಮಾನದಲ್ಲಿ ಬ್ರಹ್ಮಾದಿದೇವತೆಗಳಿಂದ ಛತ್ರ ಚಾಮರ ವ್ಯಂಜನಗಳಿಂದ ಸೇವಿತನಾಗಿ ಸಂಸ್ಥಿತನಾಗಿರುವ, ಶರತ್ಕಾಲದಲ್ಲಿಯ ಚಂದ್ರನಂತೆ ಶೋಭಿಸುವ ಮುಖವುಳ್ಳ ಶ್ರೀನಿವಾಸನನ್ನು ಭಜಿಸುತ್ತೇನೆ. (13) ಭಕ್ತಾನುಕಂಪಿಯೂ, ಗರುಡಧ್ವಜನೂ ಆದ ನೀನು ಕೀರೀಟಕುಂಡಲಗಳನ್ನು ಧಾರಣಮಾಡಿ ಗರುಡನ ಹೆಗಲನ್ನು ಏರಿ ಪೀತಾಂಬರವನ್ನು ಧರಿಸಿ, ಮಂದಾಹಾಸ ಯುಕ್ತನಾಗಿ ಶ್ರೀವತ್ಸಚಿಹ್ನೆ, ಕೌಸ್ತುಭವುಳ್ಳವನಾಗಿ ಚಕ್ರ, ಶಂಖ, ವರ, ಅಭಯ ಮುದ್ರೆಯುಳ್ಳವನಾಗಿ ಸಕಲಲೋಕಗಳಲ್ಲಿ ಸಂಚರಿಸುತ್ತೀ (14) ಯಾವಾಗಲೂ ಜಯಶೀಲನಾದರೂ ಸಹ ಭಕ್ತರಿಂದ ಜಯಿಸಲ್ಪಡುವವನು, ಅದೃಶ್ಯನಾದರೂ ಸಹ ಭಕ್ತರಿಗೆ ದೃಶ್ಯನಾಗಿರುವವನು, ಅಶ್ರುತನಾದರೂ ಸಹ ಭಕ್ತರಿಂದ ವೇದಾದಿಗಳ ಮೂಲಕವಾಗಿ ಶ್ರುತನಾಗಿರುವನು. ಅಯೋಗ್ಯರಿಂದ ಅಭಾಷಣನಾಗಿದ್ದರೂ ಸಹ ಯೋಗ್ಯರಿಂದ ಸಂಭಾಷಣೆಯುಳ್ಳವನಾಗಿರುವನು. ಸಾಕಲ್ಯೇನ ಅವಾಚ್ಯನಾದರೂ ಸಹ ಯೋಗ್ಯರಿಂದ ಯಥಾಶಕ್ತಿ ವಾಚ್ಯನಾಗಿರುವನು. ವೈಷಮ್ಯ ನೈರ್ಘೃಣ್ಯಾದಿ ದೋಷಗಳಿಂದ ರಹಿತನಾಗಿದ್ದರೂ ಸಹ ಷಡ್ಗುಣಗಳಿಂದ ಪೂರ್ಣನಾಗಿರುವನು. ಬ್ರಹ್ಮ ವಾಯು, ಸರಸ್ವತಿ, ರುದ್ರಾದಿಸಮಸ್ತ ವಿರಕ್ತರಾದ ಮನುಷ್ಯೋತ್ತಮ ಪರ್ಯಂತರಾದ ಸಕಲರೂ ಸಹ ಸ್ತ್ರೀಪುತ್ರಾದಿಗಳಲ್ಲಿಯೂ ಮೋಕ್ಷಸುಖದಲ್ಲಿಯೂ ಸಹ, ಸಂಗವನ್ನು ಪರಿತ್ಯಾಗಮಾಡಿ, ಅತ್ಯಂತ ಶ್ರೇಯೋರೂಪನಾದ ನಿನ್ನ ಪಾದಸೇವನೆಯಲ್ಲಿ ಆಸಕ್ತರಾಗಿ, ನಿನ್ನ ಪಾದಪದ್ಮದ್ವಯವನ್ನು

ಮಾಹಾತ್ಮ್ಯಂ ಕೇನ ಸಂದೃಶ್ಯಂ ರಮಾಯಾ ರಮಣಸ್ಯ ತೇ ।
ಯತ್ಕಿಂಚಿದ್ದ್ರಷ್ಟುಮಿಚ್ಛಾಮಿ ಮಾಯಿನೋಽಮಾಯಿನಃ ಶುಭಮ್॥17॥

ಸರ್ವಪ್ರಾಣಿಹೃದಾವಾಸಂ ವಾಸುದೇವಂ ಜಗದ್ವಿಭುಮ್ ।
ಶರಣ್ಯಾಗ್ರ್ಯಂ ದೇವದೇವಂ ಪ್ರಧಾನಪುರುಷಂ ಭಜೇ ॥18॥

ನಮೋಽವ್ಯಕ್ತಾಯ ಸೂಕ್ಷ್ಮಾಯ ಪರಾತ್ಪರತರಾಯ ಚ ।
ಜಗತ್ಕಾರಣಕರ್ತ್ರೇ ಚ ಸಾಕ್ಷಿಣೇಽಕ್ಷಯಮೂರ್ತಯೇ ॥19॥

ನಮಸ್ತೇ ವಾಸುದೇವಾಯ ನಮಃ ಸಂಕರ್ಷಣಾಯ ಚ ।
ಪ್ರದ್ಯುಮ್ನಾಯಾನಿರುದ್ಧಾಯ ಯೋಗಿಹೃತ್ಪದ್ಮವಾಸಿನೇ ॥20॥

ಪಂಚಭೂತವಿಸೃಷ್ಟಾಯ ಪಂಚಮಾತ್ರಾತ್ಮಕಾಯ ಚ ।
ಜ್ಞಾನಕರ್ಮೇಂದ್ರಿಯೇಶಾಯ ಹೃಷೀಕೇಶಾಯ ತೇ ನಮಃ ॥21॥

ವಿಷ್ಣವೇ ವೈಷ್ಣವೇಶಾಯ ಜಿಷ್ಣವೇ ಜಯದಾಯಿನೇ ।
ಇಷ್ಟಪ್ರದಾಯ ಚೇಷ್ಟಾಯ ಕೃಷ್ಣಾಯೋತ್ಕೃಷ್ಟಕರ್ಮಿಣೇ ॥22॥

ಉಪಾಸಿಸುತ್ತಾರೆ. (16) ಹೇ ರಮಾರಮಣನಾದ ಶ್ರೀನಿವಾಸನೇ! ನಿನ್ನ ಮಹಾತ್ಮ್ಯೆಯ ಅಲ್ಪಭಾಗವನ್ನು ನೋಡಲು ಇಚ್ಛಿಸುತ್ತೇನೆ (17) ಸರ್ವಪ್ರಾಣಿಗಳ ಹೃದಯದಲ್ಲಿ ಆವಾಸ ಮಾಡಿಕೊಂಡಿರುವ, ಜಗದ್ಧಿತಕರನಾದ, ದೇವದೇವನಾದ, ಪ್ರಧಾನಪುರುಷ ನಾದ, ಪುರುಷೋತ್ತಮನಾದ ವಾಸುದೇವನನ್ನು ಸ್ತೋತ್ರ ಮಾಡುತ್ತೇನೆ. (18) ಇಂದ್ರಿಯಗಳಿಗೆ ಅವ್ಯಕ್ತನೂ, ಸೂಕ್ಷ್ಮನೂ, ಶ್ರೇಷ್ಠರಲ್ಲಿ ಶ್ರೇಷ್ಠನೂ, ಜಗತ್ತಿಗೆ ಸೃಷ್ಟಿಸ್ಥಿತಿಸಂಹಾರನಿಯಮನಜ್ಞಾನಾಜ್ಞಾನಬಂಧಮೋಕ್ಷ ಪ್ರದಾತನೂ ಸರ್ವಸಾಕ್ಷಿಸ್ವರೂಪನೂ ಚತುರ್ವಿಧ ನಾಶರಹಿತನೂ ಆದ ಶ್ರೀನಿವಾಸನಿಗೆ ನಮಸ್ಕಾರವು (19) ಮೋಕ್ಷಪ್ರದನಾದುದರಿಂದ ವಾಸುದೇವರೂಪಿಯಾಗಿ, ಭಕ್ತಾನಿಷ್ಟಪರಿಹಾರಕನೂ ಆದುದರಿಂದ ಸಂಕರ್ಷಣರೂಪಿಯಾಗಿ, ಪ್ರಕೃಷ್ಟಜ್ಞಾನದಾತಾರನಾರುವುದರಿಂದ ಪ್ರಕಾಶಸ್ವರೂಪನಾದ ಪ್ರದ್ಯುಮ್ನರೂಪಿಯಾಗಿ, ನಿರೋಧರಹಿತನಾಗಿ ಇರುವುದರಿಂದ ಅನಿರುದ್ಧ ಸ್ವರೂಪನಾಗಿ ಯೋಗಿಗಳ ಹೃದಯಕಮಲದಲ್ಲಿ ವಾಸಮಾಡಿರುವ ಶ್ರೀನಿವಾಸನಿಗೆ ನಮಸ್ಕಾರವು, (20 ) ಪೃಥ್ವಿ, ಜಲ, ತೇಜ, ವಾಯು ಹಾಗೂ ಆಕಾಶ ರೂಪ ಪಂಚಭೂತಗಳನ್ನು ಸೃಷ್ಟಿಸಿದ, ಪಂಚತನ್ಮಾತ್ರಾದೇವತೆಗಳಿಗೆ ಅಂತರ್ಯಾಮಿಯಾದ, ಪಂಚಜ್ಞಾನೇಂದ್ರಿಯ ಪಂಚ ಕರ್ಮೇಂದ್ರಿಯಗಳಿಗೆ ನಿಯಾಮಕನಾದ ಹೃಷಿಕೇಶನೆನಿಸಿದ ಶ್ರೀನಿವಾಸನಿಗೆ ನಮಸ್ಕಾರವು. (21) ಸರ್ವತ್ರದಲ್ಲಿಯೂ ವ್ಯಾಪ್ತನಾದ ವಿಷ್ಣುರೂಪವುಳ್ಳ, ವೈಷ್ಣವರಿಗೆ ನಿಯಾಮಕನಾದ, ಜಯಶಾಲಿಯಾದ, ಭಕ್ತರಿಗೆ ಜಯವನ್ನು

ಕ್ಷರಾಕ್ಷರೋತ್ತಮಾಯಾಥ ಸ್ವಕ್ಷರೇಶಾಕ್ಷರಾಯ ಚ ।
ಕುಕ್ಷಿಸ್ಥಪಕ್ಷಿಸಂಘಾಯ ಕ್ಷಯಾಕ್ಷಯಕರಾಯ ತೇ ॥23॥

ನಮೋ ಭವಾಯ ಭಾವಾಯ ಧೀರಾಯ ಪರಮೇಷ್ಠಿನೇ ।
ವೀರಾಯ ವೀರವಪುಷೇ ಋಷಯೇ ಪರಮಾತ್ಮನೇ ॥24॥

ನಮೋ ನಾರಾಯಣಾಯಾಥ ಸಾಧಾರಣಧರಾಯ ಚ ।
ನಮಃ ಸಮರ್ಹಣಾರ್ಹಾಯ ಧರಣೀಧರರೂಪಿಣೇ ॥25॥

ಅರ್ಚ್ಯಾರ್ಚ್ಯಾಯಾಚ್ಯುತಾಯಾಪಿ ವಂದ್ಯಾವಂದ್ಯಪದಾಯ ಚ ।
ಹಿರಣ್ಯಗರ್ಭಗರ್ಭಾಯ ನಮಃ ಶಿವಶಿವಾಯ ಚ ॥26॥

ಸ್ಕಂದಾಯ ಶಿಪಿವಿಷ್ಟಾಯ ಸಚ್ಚಿದಾನಂದರೂಪಿಣೇ ।
ಕರ್ಮಜ್ಞಾನನಿರೂಪ್ಯಾಯ ಶ್ರುತಿಸ್ಮೃತ್ಯಾಲಯಾಯ ತೇ ॥27॥

ಯಮಾಯ ನಿಯಮಾಯಾಥ ದಾನವ್ರತಕರಾಯ ಚ ।
ತಪಸ್ವಿನೇ ಚ ತಪ್ಯಾಯ ತಾಪತ್ರಯಹರಾಯ ಚ ॥28॥

ಕೊಡುವ, ಭಕ್ತರಿಗೆ ಇಷ್ಟನಾದ, ಇಷ್ಟಪ್ರದವಾದ ಜಗತ್ಸೃಷ್ಟ್ಯಾದಿ ಮತ್ತು ದೈತ್ಯಹನನಾದಿ ಉತ್ಕೃಷ್ಟಕರ್ಮವುಳ್ಳ, ಕೃಷ್ಣಸ್ವರೂಪಿ ಯಾದ, ಕ್ಷರಾಕ್ಷರಜೀವರಾಶಿಯಿಂದ ಉತ್ತಮವಾದ, ಉತ್ತಮವಾದ ಅಕ್ಷರವುಳ್ಳ ವೇದಾದಿಗಳಿಂದ ಪ್ರತಿಪಾದ್ಯನಾದ, ಅಕ್ಷರನಾದ, ಪ್ರಳಯ ಕಾಲದಲ್ಲಿ ಕುಕ್ಷಿಯಲ್ಲಿಟ್ಟುಕೊಂಡ ಜೀವಸಂಘವುಳ್ಳ, ಯಥಾಯೋಗ್ಯವಾಗಿ ಕ್ಷಯಾಕ್ಷಯಗಳಿಗೆ ಕಾರಣನಾದ, ಜನ್ಮಾದಿಗಳಿಂದ ರಹಿತನಾದ, ಭಕ್ತರಿಗೆ ಮೋಕ್ಷಪ್ರದವಾದ ಸರ್ವೋತ್ಕೃಷ್ಟಸ್ಥಾನವಾದ ವೈಕುಂಠದಲ್ಲಿ ವಾಸಿಸುವನಾದ, ವೀರ್ಯಾದಿಪ್ರದನಾದ, ಪ್ರಾರಬ್ಧಾಂತಗಾಮಿಯಾದ, ಸರ್ವಜ್ಞನಾದ, ವ್ಯಾಸಕಪಿಲಾದಿ ಋಷಿರೂಪಿ ಯಾದ, ರಾಮಕೃಷ್ಣಾದಿಅನಂತರೂಪಗಳಲ್ಲಿ ಅವತಾರವುಳ್ಳ ಶ್ರೀನಿವಾಸನಿಗೆ ನಮಸ್ಕಾರವು (22–24) ಗುಣಪರಿಪೂರ್ಣ ನಾದ, ಅತ್ಯದ್ಭುತವಾದ ಬ್ರಹಾಂಡವನ್ನು ಸರ್ವಸಾಮಾನ್ಯ ಪದಾರ್ಥದಂತೆ ಧರಿಸಿದ, ಪೂಜ್ಯರಿಂದಲೂ ಪೂಜ್ಯನಾದ, ಚ್ಯುತಿರಹಿತನಾದ, ವಂದ್ಯರಿಂದಲೂ ಅವಂದ್ಯರಿಂದಲೂ ವಂದ್ಯವಾದ ಪಾದಗಳುಳ್ಳ, ಹಿರಣ್ಯಗರ್ಭನೇ ಗರ್ಭದಲ್ಲಿವುಳ್ಳ, ಶಿವನಿಗೆ ಶಿವ (ಮಂಗಲ)ಪ್ರದನಾದ, ಅತ್ಯಂತ ಮಂಗಲರೂಪಿಯಾದ ಶ್ರೀನಿವಾಸನಿಗೆ ಮಂಗಲವು. (25) ಸೂಖರೂಪಿಯಾದ, ಗರುಡಾರೂಢನಾದ, ಸಚ್ಚಿದಾನಂದ ರೂಪಿಯಾದ, ಕರ್ಮಜ್ಞಾನಗಳಿಂದ ನಿರೂಪ್ಯನಾದ, ಶ್ರುತಿ ಸ್ಮೃತಿಗಳೇ ಅಜ್ಞಾರೂಪಗಳಾದ ಅಲಯಗಳಾದ ಶ್ರೀನಿವಾಸನಿಗೆ ನಮಸ್ಕಾರವು. (27) ಅಹಿಂಸಾ ಅಸ್ತೇಯ ಅಪರಿಗ್ರಹ, ಬ್ರಹ್ಮಚರ್ಯಾದಿಗಳನ್ನು ದಯಪಾಲಿಸುವ ಸರ್ವ ಜಗನ್ನಿಯಾಮಕನಾದ,

ಯಜ್ಞಾಯ ವಿಶ್ವಾಯ ಸುಮಂಗಲಾಯ
ಸುತೀರ್ಥಪಾದಾಯ ಸುತಾರಕಾಯ ।
ಪ್ರಪನ್ನಲೋಕಾನುಗುಣಾಯ ಶಂಭವೇ
ಶುದ್ಧಾಯ ಶಶ್ವದ್ಗುಣವರ್ಷ್ಮಣೇ ನಮಃ ॥29॥

ಕರ್ಮಿಣೇಽಕರ್ಮಲಿಪ್ತಾಯ ಜ್ಞಾನಾಯ ಜ್ಞಾನದಾಯಿನೇ ।
ನಿತ್ಯಮುಕ್ತಾಯ ಹರಯೇ ನಿತ್ಯಮುಕ್ತಿಪ್ರದಾಯಿನೇ ॥30॥

ಶುದ್ಧಂ ವಪುಃ ಪರಮಯೋಗಮತುಲ್ಯಸೌಖ್ಯಂ
ಭೂಮಿಂ ದ್ಯುಲೋಕಮುತ ತತ್ವಮತಿಂ ಸುಭಕ್ತಿಮ್ ।
ವೈರಾಗ್ಯಮನ್ಯಸುಗುಣಾನ್ ಭಜಕೇಷು ದಾನ-
ಶೀಲಂ ದಯೋದಯಮಹಂ ಶರಣಂ ಪ್ರಪದ್ಯೇ ॥31॥

ಸುಲಭಂ ದುರ್ಲಭಂ ವಂದೇ ಭಗವಂತಂ ಸನಾತನಮ್ ।
ಸದಸತ್ಕ್ಷೇತ್ರಗಂ ವಿಷ್ಣುಂ ಮೂರ್ತಾಮೂರ್ತಂ ಶುಭಾಶುಭಮ್ ॥32॥

ದಾನವ್ರತಗಳಿಂದ ಸುಖಪ್ರದನಾದ, ತಪಸ್ವಿಯಾದ, ಬ್ರಹ್ಮಾದಿಗಳಿಂದ ತಪನೀಯನಾದ, ತಾಪತ್ರಯಗಳನ್ನು ಪರಿಹರಿಸುವ ಶ್ರೀನಿವಾಸನಿಗೆ ನಮಸ್ಕಾರವು (28). ಯಜ್ಞರೂಪನಾದ, ವಿಶ್ವಂವಿಷ್ಣು-ರ್ವಷಟ್ಕಾರಾದಿ ಅನಂತರೂಪನಾದ, ಮಂಗಲರೂಪಿಯಾದ, ಸಕಲ ತೀರ್ಥಗಳು ತನ್ನ ಪಾದಗಳಲ್ಲಿವುಳ್ಳ, ಶರಣಾಗತರಾದ ಜನರಿಗೆ ಅನುಸಾರಿ ಯಾದ ಸುಖಪ್ರದನಾದ, ಜ್ಞಾನಾನಂದಾತ್ಮಕ ಗುಣಗಳೇ ನಿತ್ಯ ಶರೀರವಾಗಿವುಳ್ಳ, ನಿರ್ಮಲನಾದ ಶ್ರೀನಿವಾಸನಿಗೆ ನಮಸ್ಕಾರವು. (29) ಜಗದ್ವ್ಯಾಪಾರಾದಿ ಕರ್ಮಗಳನ್ನು ಮಾಡುವ, ದೈತ್ಯಹನನಾದಿ ಕರ್ಮದಿಂದ ಉಂಟಾದ ದೋಷಲೇಪವಿಲ್ಲದ, ಜ್ಞಾನರೂಪಿಯಾದ, ಜ್ಞಾನದಾಯಿಯಾದ, ನಿತ್ಯ ಮುಕ್ತಿಪ್ರದನಾದ, ಭಕ್ತರ ದೋಷಹಾರಕನಾದ ಶ್ರೀನಿವಾಸನಿಗೆ ನಮಸ್ಕಾರವು (30) ತನ್ನ ಪರಮಭಕ್ತರಿಗೆ ಶುದ್ಧ ದೇಹ, ಅನಂತರದಲ್ಲಿ ಅಣಿಮಾ ಮಹಿಮಾ ಗರಿಮಾ ಲಘಿಮಾ ಇವೇ ಮುಂತಾದ ಅಷ್ಟಾಂಗಯೋಗಗಳು, ಅಷ್ಟೈಶ್ವರ್ಯಸಿದ್ಧಿಗಳಿಂದತುಲವಾದ ಸೌಖ್ಯ, ಭೂಮಿಯಲ್ಲಿ ಸಾರ್ವಭೌಮ ಚಕ್ರವರ್ತಿಯ ಪದ, ಸ್ವರ್ಗ ಸುಖ, ಅದು ಕ್ಷೀಣವಾದ ಮೇಲೆ ಪುನಃ ಭೂಮಿಯ ಮೇಲೆ ಉತ್ಪತ್ತಿ, ಅನಂತರದಲ್ಲಿ ಶ್ರವಣಮನನಾದಿಧ್ಯಾನಯೋಗ-ತತ್ವಜ್ಞಾನ-ಪರಮಾತ್ಮನಲ್ಲಿ ಒಳ್ಳೆಯ ಭಕ್ತಿ-ವೈರಾಗ್ಯ ಇವೇ ಮುಂತಾದ ಇತರ ಸದ್ಗುಣಗಳನ್ನು ಭಕ್ತರಲ್ಲಿ ದಯಪಾಲಿಸುತ್ತಿರುವ, ಕೃಪೆಗೆ (ದಯಾಗುಣಕ್ಕೆ) ಉತ್ಪತ್ತಿ ಸ್ಥಾನವಾದ, ದಯಾಮೂರ್ತಿಯಾದ ಶ್ರೀನಿವಾಸನನ್ನು ನಾನು ಶರಣು ಹೊಂದುತ್ತೇನೆ. (31)ಭಕ್ತರಿಗೆ ಸುಲಭನೂ, ಅಭಕ್ತರಿಗೆ ದುರ್ಲಭನೂ, ಸನಾತನನೂ, ಷಡ್ಗುಣೈಶ್ವರ್ಯಸಂಪನ್ನನೂ, ಸಜ್ಜನ-

ಗೋವಿಂದಂ ಗೋಗಣಾತೀತಂ ಕಲ್ಮಷಘ್ನಮಕಲ್ಮಷಮ್ ।
ಪ್ರತಿಕಲ್ಪೇಽನಲ್ಪಕಲ್ಪತರುಂ ಸರ್ವಾರ್ಥಕಲ್ಪಕಮ್ ॥33॥

ದುಷ್ಟಭಾವಃ ಪ್ರಮತ್ತೋ ವಾ ನಾಮಾದ್ಯುಚ್ಚಾರಕೋ ಹಿ ಯಃ ।
ಬ್ರಹ್ಮಹತ್ಯಾದಿ ಪಾಪಾನಿ ದಹತ್ಯೇವ ನ ಚಾನ್ಯಥಾ ।34॥

ಅಜ್ಞಾನಾದಥವಾ ದಂಭಾತ್ ಪುಣ್ಯಶ್ಲೋಕಸ್ಯ ನಾಮ ತೇ ।
ಯೋ ವದೇತ್ ತಾನಿ ನಶ್ಯಂತಿ ತೂಲರಾಶಿರ್ಯಥಾಽನಲಾತ್ ॥35॥

ಕ್ಷುಧಿತೋ ದುಃಖಿತಃ ಶ್ರಾಂತಸ್ತ್ವನ್ನಾಮ ಯದಿ ಸಂಸ್ಮರೇತ್ ।
ತಸ್ಯ ದುಃಖಾನಿ ಸರ್ವಾಣಿ ನಶ್ಯಂತಿ ಕ್ಷಣಮಾತ್ರತಃ ॥36॥

ಸರ್ವಾಣ್ಯಶುಭಜಾತಾನಿ ದುರಿತೌಘಾನಿ ಯಾನಿ ಚ ।
ತಾನಿ ಸರ್ವಾಣಿ ಲಭತೇ ಮತ್ತ್ವಸ್ತ್ವಂ ವಿಸ್ಮೃತೋ ಯದಿ ॥37॥

ನ ತೀರ್ಥಯಾತ್ರಾ ನ ಚ ದಾನಯಜ್ಞೌ
ವ್ರತಂ ತಪೋ ನಾರ್ಚನಮನ್ಯದೈವಮ್ ।

ಅಸಜ್ಜನರ ಶರೀರದಲ್ಲಿ ಅಂತರ್ನಿಯಾಮಕನಾಗಿದ್ದವನೂ, ಸಜ್ಜನ-ಅಸಜ್ಜನರಗಳನ್ನು ಕುರಿತು ಅನುಕ್ರಮವಾಗಿ ಶುಭಾಶುಭಪ್ರದನೂ ಆದ, ವ್ಯಾಪ್ತನಾದ ಶ್ರೀನಿವಾಸನನ್ನು ನಮಸ್ಕರಿಸುತ್ತೇನೆ. (32) ವೇದಪ್ರತಿಪಾದ್ಯನು, ವೇದಗಳಿಂದ ಸಾಕಲ್ಯೇನ ಅವೇದ್ಯನೂ, ಕಲ್ಮಶವನ್ನು ನಾಶಮಾಡುವವನೂ, ಕಶ್ಮಲದೂರನೂ, ಪ್ರತಿಕಲ್ಪದಲ್ಲಿಯೂ ಕಲ್ಪವೃಕ್ಷಕ್ಕಿಂತಲೂ ಶ್ರೇಷ್ಠವಾದ ಕಲ್ಪವೃಕ್ಷರೂಪನು, ಸರ್ವಾರ್ಥಪೂರಕನು ಆದ ಶ್ರೀನಿವಾಸನನ್ನು ಶರಣು ಹೊಂದುತ್ತೇನೆ. (33) ಹೇ ಶ್ರೀನಿವಾಸನೇ! ದುಷ್ಟಸ್ವಭಾವದವನೇ ಆಗಲಿ, ಉನ್ಮತ್ತನೇ ಆಗಲಿ, ಯಾರು ನಿನ್ನ ನಾಮೋಚ್ಚಾರಣೆಯನ್ನು ಮಾಡುವರೋ ಅವರ ಬ್ರಹ್ಮ ಹತ್ಯಾದಿ ಸಕಲ ಪಾಪಗಳೂ ತಕ್ಷಣವೇ ನಶಿಸಿ ಹೋಗುತ್ತವೆ. ಇಲ್ಲವಾದರೆ ಅವನ ಪಾಪಗಳೆಲ್ಲವು ವಿಪರೀತವಾಗಿ ಬೆಳೆಯುತ್ತಿರುತ್ತವೆ. ಅಜ್ಞಾನದಿಂದ ಆಗಲಿ, ಅಥವಾ ಗರ್ವದಿಂದಲೇ ಆಗಲಿ, ಪುಣ್ಯಶ್ಲೋಕನಾದ ನಿನ್ನ ನಾಮವನ್ನು ಯಾವನು ಹೇಳುವವನೋ ಅವನ ಸಕಲ ಪಾಪಗಳು ಅಗ್ನಿಯಿಂದ ಅರಳೆಯು ಸುಡುವಂತೆ ನಶಿಸಿ ಹೋಗುತ್ತವೆ. (35) ಹೀಗೆ ದುಃಖಿತನು, ಕ್ಷುಧಿತನು, ಶ್ರಾಂತನು, ಯಾರೇ ಇರಲಿ ನಿನ್ನ ನಾಮವನ್ನು ಚೆನ್ನಾಗಿ ಸ್ಮರಿಸಿದರೆ, ಕ್ಷಣಮಾತ್ರದಲ್ಲಿ ಅವರ ದುಃಖಗಳು ನಾಶವನ್ನು ಹೊಂದುತ್ತವೆ. ಭಕ್ತಿಯಿಂದ ನಿನ್ನ ನಾಮವನ್ನು ಸ್ಮರಿಸಿದರೆ ಅಶುಭಕರ್ಮಗಳಿಂದ ಉತ್ಪನ್ನವಾದ ಸಮಸ್ತ ದುರಿತಸಮೂಹಗಳು, ದುಃಖಗಳು ಕ್ಷಣಮಾತ್ರದಲ್ಲಿ ನಾಶವನ್ನು ಹೊಂದುತ್ತವೆ. ನಿನ್ನ ನಾಮಸ್ಮರಣದಿಂದ ವಿಸ್ಮೃತನಾಗಿ

ಯಚ್ಛ್ರೀನಿವಾಸಸ್ಯ ಚ ನಾಮಕೀರ್ತನಂ
ತದೇವ ಸರ್ವಾರ್ಥಸುವೃಷ್ಟಿಕಾರಣಮ್ ॥38॥

ಯಾತ್ರಾ ಯಜ್ಞಾ ವ್ರತಾ ಧರ್ಮಾ ದಾನಾನ್ಯನ್ಯಾನ್ಯಸಂಖ್ಯಯಾ ।
ತವ ನಾಮಸ್ಮೃತೇರ್ಭಕ್ತ್ಯಾ ಕಲಾಂ ನಾರ್ಹಂತಿ ಷೋಡಶೀಮ್ ॥39॥

ಅಹೋ ಭಾಗ್ಯಮಹೋಭಾಗ್ಯಂ ವಿಷ್ಣುನಾಮಾನುವರ್ತಿನಾಮ್ ।
ತೇಷಾಂ ದೂರೋ ಯಾಮ್ಯಲೋಕಃ ಸ್ವರ್ಗೋ ಮೋಕ್ಷಶ್ಚ ತತ್ಫಲಮ್ ॥40॥

ಮಾಹಾತ್ಮ್ಯಂ ವಿಷ್ಣುನಾಮ್ನೋ ಹಿ ವರ್ಣಿತುಂ ಕೇನ ಶಕ್ಯತೇ ।
ಅಜಾಮಿಲೋ ಮೃತ್ಯುಪಾಶಾತ್ ಮುಕ್ತೋ ವೈಕುಂಠಗೋ ಯತಃ ॥41॥

ಅಯಮೇವ ಮಹಾಧರ್ಮೋ ನರಾಣಾಂ ತಾರಕಃ ಸ್ಮೃತಃ ।
ವಿಷ್ಣೌ ಸದಾ ಭಕ್ತಿಯೋಗಸ್ತನ್ನಾಮಗ್ರಹಣಾದಿಭಿಃ ॥42॥

ನೈಕೋಜಾಮಿಲ ಏವ ಪಾಪಜಲಧಿಂ ಸಂತೀರ್ಣವಾನ್ ನಾಮತಃ
ಪ್ರಹ್ಲಾದೋಽಪಿ ಗಜೇಂದ್ರಪೂರ್ವಬಹವೋ ದುಃಖಾಂಬುಧೇಸ್ತಾರಿತಾಃ।

ಉನ್ನತ್ತನಾದ ವ್ಯಕ್ತಿಯು ಅಶುಭಕರ್ಮಗಳಿಂದ ಉತ್ಪನ್ನವಾದ ಸಮಸ್ತದುರಿತ ಸಮೂಹಗಳನ್ನು ಹೊಂದುತ್ತಾನೆ. (36-37) ಶ್ರೀನಿವಾಸನ ನಾಮಸಂಕೀರ್ತನವೇ ಸರ್ವಾರ್ಥಸುವೃದ್ಧಿ ಕಾರಣವಾಗಿರುವುದು. ತೀರ್ಥಯಾತ್ರಾ, ದಾನ, ಯಜ್ಞ, ವ್ರತ, ತಪಸ್ಸು, ಅನ್ಯ ದೇವತಾರ್ಚನೆಯು ಇದು ಯಾವುದೂ ಶ್ರೀನಿವಾಸನ ನಾಮಸಂಕೀರ್ತನೆಗೆ ಸಮಾನ ವಾದುದಲ್ಲ. (38) ತೀರ್ಥಯಾತ್ರೆ, ಯಜ್ಞ, ವ್ರತ, ಧರ್ಮಾನುಷ್ಠಾನ, ಅಸಂಖ್ಯದಾನಪ್ರದಾನ ಇವುಗಳು ನಿನ್ನ ನಾಮಸ್ಮರಣದ ಏಕದೇಶವನ್ನು ಹೊಂದುವುದಿಲ್ಲ. (39) ಶ್ರೀನಿವಾಸನ ನಾಮಾನುಚಿಂತನವು ನಿಜವಾಗಿಯೂ ಭಾಗ್ಯಪ್ರದವು; ಇಂಥ ನಾಮವನ್ನು ಸ್ಮರಿಸುವವರಿಗೆ ಯಮಲೋಕವು ದೂರದಲ್ಲಿಯೇ ಉಳಿಯುವುದು. ನಾಮಸ್ಮರಣೆಗೆ ಸ್ವರ್ಗ ಮೋಕ್ಷಗಳೇ ನಿಜವಾದ ಫಲವು (40) ವಿಷ್ಣುನಾಮ ಮಹಾತ್ಮ್ಯವು ಯಾರಿಂದಲೂ ವರ್ಣಿಸಲು ಸಾಧ್ಯವಿಲ್ಲ. ನಾಮಸ್ಮರಣೆಯಿಂದ ಅಜಾಮಿಳನು ಮೃತ್ಯುಪಾಶದಿಂದ ಮುಕ್ತನಾಗಿ ವೈಕುಂಠವನ್ನು ಹೊಂದಿದನು. (41) ಮನುಷ್ಯರಿಗೆ ನಾಮಸ್ಮರಣೆಯೇ ಅತ್ಯಂತ ಶ್ರೇಷ್ಠ ಧರ್ಮವು; ಸಂಸಾರ ತಾರಕವು; ಎಂದು ಶ್ರುತಿ ಸ್ಮೃತಿಗಳಲ್ಲಿ ಉಕ್ತವಾಗಿದೆ. ವಿಷ್ಣುವಿನ ನಾಮಗ್ರಹಣಾದಿಗಳಿಂದ ವಿಷ್ಣುವಿನಲ್ಲಿ ಸದಾ ಭಕ್ತಿಯುಂಟಾಗುವುದು. ಅಜಾಮಿಳನು ಮಾತ್ರವಲ್ಲ, ಅನೇಕರು ಪರಮಾತ್ಮನ ನಾಮಸ್ಮರಣೆಯಿಂದ ಸಂಸಾರ ಸಾಗರವನ್ನು ದಾಟಿರುವರು. ಪ್ರಹ್ಲಾದ, ಗಜೇಂದ್ರ ಇವರೇ ಮೊದಲಾಗಿವುಳ್ಳ ಅನೇಕರು ನಾಮಸ್ಮರಣೆಯಿಂದ ದುಃಖವೆಂಬ

ಯನ್ನಾಮಸ್ಮರಣಾಮೃತಾಂಬುಧಿನಿಮಗ್ನೋऽದ್ಯಾಪಿ ಗೌರೀಪತಿಃ
ಯದ್ಧ್ಯಾನೇ ನಿರತಾಃ ಪ್ರಜಾಪತಿಮುಖಾಃ ಪ್ರಾಪ್ತಾ ಮಹಾವೈಭವಮ್ ॥43॥

ಯನ್ನಾಮ ತೇ ಸರ್ವಜಗದ್ದುರಂತ
ದುಷ್ಕರ್ಮಶೈಲಾಂಶ್ಚ ಬಹೂನ್ ಭಿನತ್ತಿ ।
ಸ ಸರ್ವಶಕ್ತೇ ಸ ಹಿ ವಿಶ್ವರೂಪ
ಪ್ರಸೀದ ಮಾಮನಿರುಕ್ತಾತ್ಮಶಕ್ತೇ ॥44॥

ಅನುಗ್ರಹಾರ್ಥಂ ಭಜತಾಂ ಪದಾಬ್ಜಂ
ಅನಾಮರೂಪಸ್ತ್ವಗುಣೋ ಹ್ಯಜನ್ಮಾ ।
ನಾಮಾನಿ ರೂಪಾಣಿ ಗುಣಾನ್ ಕ್ರಿಯಾಶ್ಚ
ಜನ್ಮಾನಿ ಗೃಹ್ಣಾಸಿ ಸ ಮಾಂ ಪ್ರಸೀದ ॥45॥

ಜನ್ಮಾದಿಭಿರ್ಜನೇ ಮೋಹಾನುಗ್ರಹಾವಧಿಕಾರತಃ ।
ಕರೋಷಿ ಸಾಂಪ್ರತಂ ಭೂಯೋऽನುಗ್ರಹಸ್ತು ಭವೇನ್ಮಯಿ ॥46॥

ದಯಾಪಾಂಗಲವೋ ಭೂಯಾದಿಹಾಮುತ್ರೇಷ್ಟವರ್ಷಿಣಃ ।
ಅನ್ಯಥಾ ನಾತ್ರ ಸಂದೇಹಃ ಇತಿ ಚಿತ್ತೇ ಸುನಿಶ್ಚಿತಮ್ ॥47॥

ಓಂ ನಮೋ ವೇಂಕಟೇಶಾಯ ಪುರುಷಾಯ ಮಹಾತ್ಮನೇ ।

ಸಮುದ್ರವನ್ನು ದಾಟಿರುವರು. ಪರಮಾತ್ಮನ ನಾಮಸ್ಮರಣೆ ಎಂಬ ಅಮೃತ ಸಮುದ್ರದಲ್ಲಿ ಗೌರೀಪತಿಯಾದ ರುದ್ರನು ಇಂದಿಗೂ ಮುಳುಗಿರುತ್ತಾನೆ. ಪರಮಾತ್ಮನ ಧ್ಯಾನದಲ್ಲಿ ನಿರತರಾದ ಬ್ರಹ್ಮರುದ್ರಾದಿ ಪ್ರಮುಖರು ಮಹಾವೈಭವವನ್ನು ಹೊಂದಿರುತ್ತಾರೆ. ಹೇ ಸ್ವಾಮಿಯೇ ! ನಿನ್ನ ನಾಮವು ಸಮಸ್ತಜನರಲ್ಲಿ ದುರಂತವಾದ ದುಷ್ಕರ್ಮವೆಂಬ ಅನೇಕಬಂಡೆಗಲ್ಲುಗಳನ್ನು ಸೀಳುತ್ತದೆ. ಅಂತಹ ಸರ್ವಶಕ್ತನೇ! ವಿಶ್ವರೂಪನೇ! ನಿರ್ವಚನಮಾಡಲು ಅಸಾಧ್ಯವಾದ ಆತ್ಮಶಕ್ತಿಯುಳ್ಳ ಭಗವಂತನೇ! ಪ್ರಸನ್ನನಾಗು. (45) ಅವರವರ ಅಧಿಕಾರಗಳಿಗೆ ಅನುಸಾರವಾಗಿ ನಿನ್ನ ಜನ್ಮಾದಿಗಳಿಂದ ಜನಸಮುದಾಯ ದಲ್ಲಿ ಕೆಲವರಿಗೆ ಅನುಗ್ರಹವನ್ನು, ಕೆಲವರಿಗೆ ನೋವನ್ನು ಉಂಟುಮಾಡುತ್ತಿ. ಆದರೆ ನನ್ನಲ್ಲಿ ಮಾತ್ರ ಬಹಳವಾದ ಅನುಗ್ರಹವನ್ನೇ ಮಾಡು (46) ಇಹಲೋಕ ಪರಲೋಕಗಳಲ್ಲಿ ಇಷ್ಟಸಿದ್ಧಿಯನ್ನು ಮಳೆಗರೆಯುವ ದಯಾಪೂರ್ಣ ವಾದ ನಿನ್ನ ಕುಡಿಗಣ್ಣಿನ ನೋಟವು ನನ್ನಲ್ಲಿ ಇರಲಿ. ನಿನ್ನ ಅನುಗ್ರಹವಿರದಿದ್ದರೆ ಯಾವ ಇಷ್ಟಸಿದ್ಧಿಯೂ ಆಗುವುದಿಲ್ಲ. (47) ಗುಣಪರಿಪೂರ್ಣನಾದ, ಮಹಾತ್ಮನಾದ, ಪುರುಷಶಬ್ದ ವಾಚ್ಯನಾದ, ಮಹಾನುಭಾವನಾದ,

ಮಹಾನುಭಾವಿನೇ ಮಹಾಮಾಯಿನೇ ಮೇಯಕರ್ಮಣೇ ॥48॥

ನಾಮ್ನೈವ ಭಾವ್ಯಂ ಖಲು ಸರ್ವರಕ್ಷಣಂ
ಮಾಯಾವಿನೋ ವಿಶ್ವಕುಟುಂಬಿನಸ್ತೇ ।
ಸ್ಥಲೇಷು ದುರ್ಗೇಷು ಜಲೇಷು ಖೇಷು
ಗರ್ಭೇಷ್ವರಣ್ಯೇಷು ಚ ಕೈತವೇಷು ॥49॥

ಮಹಾವಿಪತ್ಸು ತ್ವನ್ನಾಮಸ್ಮರಣೇ ತದ್ವಿನಾಶನಮ್ ।
ಬಹುಸಂಪತ್ಸು ತೇ ನಾಮವಿಸ್ಮ ತೌ ತದ್ವಿನಾಶನಮ್ ॥50॥

ತಸ್ಮಾತ್ತ್ವನ್ನಾಮಸಕ್ತೋऽಹಂ ಸರ್ವದಾ ತ್ವದನುಗ್ರಹಾತ್ ।
ತ್ವತ್ಪ್ರೇರಿತಸ್ತ್ವದದೀಯತ್ವಾತ್ ಮತ್ಪುಣ್ಯಂ ತ್ವದ್ದಯಾಬಲಾತ್ ॥51॥

ನ ಕದಾಚಿದ್ಭಯಂ ಮೇऽಸ್ತಿ ದಿವ್ಯನಾಮರತೋ ಯತಃ ।
ತಥಾऽಪಿ ತೇ ಕೃಪಾಪಾಂಗಲೇಶಲೇಶೋऽಸ್ತು ಮಯ್ಯಹೋ ॥52॥

ಶ್ರೀಶ ಚಿತ್ರಂ ಚರಿತ್ರಂ ತೇ ನ ಜಾನೇ ಬಹುದುಷ್ಕೃತಿಃ ।
ಸರ್ವಜ್ಞ ಮೇ ಕದಾ ಕಿಂ ವಾ ವದೇ ತ್ವಾಂ ಕೃಪಯಾऽವ ಮಾಮ್ ॥53॥

ಮಹಾಮಾಹಿಮನಾದ, ಅಪ್ರಮೇಯ ಕರ್ಮನಾದ ವೆಂಕಟೇಶ್ವರನಿಗೆ ನಮಸ್ಕಾರವು (48) ಮಾಯಾವಿಯೂ ವಿಶ್ವಕುಟುಂಬಿ ಯಾದ ನಿನ್ನ ನಾಮೋಚ್ಚಾರಣೆಯಿಂದಲೇ ಸರ್ವರಕ್ಷಣವು ಉಂಟಾಗುವುದು. ಭೂಮಿಯಲ್ಲಿ, ಬೆಟ್ಟದಲ್ಲಿ, ಜಲದಲ್ಲಿ, ಆಕಾಶದಲ್ಲಿ, ದಟ್ಟವಾದ ಅರಣ್ಯದ ಮಧ್ಯಪ್ರದೇಶದಲ್ಲಿ, ಗರ್ಭದಲ್ಲಿ ಮತ್ತು ಕೃತ್ರಿಮ ಪ್ರದೇಶಗಳಲ್ಲಿ, ಸರ್ವರನ್ನೂ ನಿನ್ನ ನಾಮವೇ ರಕ್ಷಿಸುವದು. ಮಹಾ ವಿಪತ್ತುಗಳಲ್ಲಿ ನಿನ್ನ ನಾಮಸ್ಮರಣೆಯು ವಿಪನ್ನಾಶಕವಾಗುವವು. ಬಹು ಸಂಪತ್ತು ಬರಲು ನಿನ್ನ ನಾಮಸ್ಮರಣೆಯು ಕಾರಣವಾಗಿರುವದು; ನಿನ್ನ ನಾಮವು ವಿಸ್ಮೃತವಾದಲ್ಲಿ ಸಮಸ್ತ ಸಂಪತ್ತು ನಾಶಹೊಂದುವದು. (50) ಹೇ ಸ್ವಾಮಿ ! ಆದ್ದರಿಂದ ಯಾವಾಗಲೂ ನಿನ್ನ ಅನುಗ್ರಹದಿಂದ ನಿನ್ನವನೇ ಆಗಿರುವುದರಿಂದ ನಿನ್ನಿಂದಲೇ ಪ್ರೇರಿತನಾಗಿ ನಿನ್ನ ದಯಾಬಲದಿಂದ ನಿನ್ನ ನಾಮದಲ್ಲಿ ಆಸಕ್ತನಾಗಿರುವುದು ಪೂರ್ವಾರ್ಜಿತ ಪುಣ್ಯವೇ ಸರಿ. (51) ನಾನು ನಿನ್ನ ದಿವ್ಯವಾದ ನಾಮಸ್ಮರಣೆಯಲ್ಲಿಯೇ ಆಸಕ್ತನಾಗಿರುವುದರಿಂದ ನನಗೆ ಯಾವ ಭಯವೂ ಇಲ್ಲ. ಆದರೂ ಸಹ, ಹೇ ಸ್ವಾಮಿ! ನಿನ್ನ ದಿವ್ಯವಾದ ಕೃಪಾಲೇಶದ ಲವಲೇಶವು ನನ್ನಲ್ಲಿ ಇರಲಿ. (52) ಹೇ ಲಕ್ಷ್ಮೀಪತಿಯೇ ! ನಿನ್ನ ಚರಿತ್ರೆಯು ಅತಿ ವಿಚಿತ್ರವಾದುದು. ಬಹು ದುಷ್ಕರ್ಮಗಳಿಂದ ಕೂಡಿದ ನಾನು ಅದನ್ನು ಅರಿಯಲಾರೆ. ಸರ್ವಜ್ಞನಾದ ಸ್ವಾಮಿಯೇ! ಯಾವಾಗ ಎಷ್ಟರಮಟ್ಟಿಗೆ

ನಾಮ್ನಾ ಮಹಾಘೌಘಹಾನಿಸ್ತೇನ ದೇಹಹೃದೋಃ ಶುಚಿಃ ।
ತಂ ದೃಷ್ಟ್ವಾ ಪ್ರೀಯಸೇ ವಿಷ್ಣೋ ತತಃ ಸತ್ಕರ್ಮಸಂಗ್ರಹಃ ॥54॥

ಕರ್ಮಣಾ ಜ್ಞಾನಸಿದ್ಧಿಶ್ಚ ತೇನ ಪ್ರೀತಿಸ್ತವಾದ್ಭುತಾ ।
ಅಪರೋಕ್ಷಮಗರ್ಭಶ್ಚ ಮುಕ್ತಿರಾನಂದವರ್ಧನಮ್ ॥55॥

ಗೋದಾನಕನ್ಯಾದಾನಾನಿ ಪೃಥಿವೀ ರೇಣುಸಂಖ್ಯಯಾ ।
ದುರ್ಭಿಕ್ಷೇ ಜಾಹ್ನವೀತೀರೇ ಪ್ರತ್ಯಹಂ ಕೋಟಿಭೋಜನಮ್॥

ತ್ವನ್ನಾಮಸ್ಮರಣೇ ತುಲ್ಯಂ ನಾಮಮಾಹಾತ್ಮ್ಯಮೀದೃಶಮ್ ।
ತಸ್ಮಾನ್ನಾಮಸ್ಮೃತಿಃ ಶುದ್ಧಾ ಸುಲಭಾ ಪುರುಷಾರ್ಥದಾ ॥57॥

ಲೋಕೋತ್ತರಸ್ತ್ವಯಂ ಮಾರ್ಗಃ ಪ್ರಜಾನಾಮಕುತೋ ಭಯಃ ।
ಯತ್ರ ಭಕ್ತಿವಶಾದ್ವಿಷ್ಣೋರ್ನಾಮಸ್ಮೃತಿಪರಾಯಣಾಃ ॥58॥

ನೀನು ಅದನ್ನು ತಿಳಿಸುತ್ತೀ? ನಿನ್ನನ್ನೇ ಶರಣವನ್ನು ಹೊಂದಿದ ನನ್ನನ್ನು ರಕ್ಷಿಸು. (53) ನಾಮದಿಂದ ಮಹಾಪಾಪಗಳ ಸಮುದಾಯವು ನಾಶವನ್ನು ಹೊಂದುತ್ತದೆ. ಆದ್ದರಿಂದ ದೇಹ ಮತ್ತು ಮನಸ್ಸುಗಳು ಪರಿಶುದ್ಧವಾಗುತ್ತವೆ. ಶುದ್ಧವಾದ ಮನಸ್ಸುಳ್ಳವನನ್ನು ನೋಡಿ ಸಂತೋಷಪಡುತ್ತೀ. ಆದ್ದರಿಂದ ಸತ್ಕರ್ಮಾನುಷ್ಠಾನವನ್ನು ಅನುಗ್ರಹಿಸುತ್ತೀ. (54) ಸತ್ಕರ್ಮದಿಂದ ಜ್ಞಾನವೃದ್ಧಿಯು; ಅದರಿಂದ ನಿನ್ನ ಅದ್ಭುತವಾದ ಪ್ರೀತಿಯು; ಅನಂತರದಲ್ಲಿ ಅಪರೋಕ್ಷಜ್ಞಾನವು; ಅನಂತರ ಗರ್ಭವಾಸಾದಿ ಸಮಸ್ತ ಕ್ಲೇಶನಾಶವು ಮತ್ತು ಮುಕ್ತಿಯು. ಮುಕ್ತಿಯಲ್ಲಿ ಆನಂದ ವೃದ್ಧಿಯು ಉಂಟಾಗುವುದು. (55) ಗೋದಾನ, ಕನ್ಯಾದಾನ, ಪೃಥ್ವೀ ರೇಣುಗಳಂತೆ ಅಸಂಖ್ಯವಾದ ಸುವರ್ಣದಾನ, ಅಶ್ವಮೇಧಾದಿಗಳು, ಕ್ಷಾಮಸಮಯದಲ್ಲಿ ಗಂಗಾತೀರದಲ್ಲಿ ಪ್ರತಿ ನಿತ್ಯದಲ್ಲಿ ಪರಿಶುದ್ಧರಾದ ಕೋಟಿ ಬ್ರಾಹ್ಮಣರ ಭೋಜನ, ಇವುಗಳ್ಯಾವವು ನಿನ್ನ ನಾಮಸ್ಮರಣೆಗೆ ಸಮಾನ ವಾಗಲಾರವು. ನಿನ್ನ ನಾಮಮಹಾತ್ಮ್ಯವು ಇಷ್ಟು ಅದ್ಭುತವಾಗಿದೆ. ಆದ್ದರಿಂದ ಪರಿಶುದ್ಧ ವಾದ ಸುಲಭವೂ ಆದ ನಾಮಸ್ಮರಣೆಯು ಸಮಸ್ತ ಪುರುಷಾರ್ಥ ಪ್ರದವಾಗಿರುವುದು. ನಾಮಸ್ಮರಣೆಯ ರೂಪವಾದ ಈ ಮಾರ್ಗವು ಮುಕ್ತಿಪ್ರದವಾಗಿದೆ. ನಾಮಸ್ಮರಣೆಯಲ್ಲಿ ಆಸಕ್ತರಾದ ಜನರಿಗೆ ನರಕಾದಿ ಭಯವಿಲ್ಲ. ಮುಕ್ತಿಯಲ್ಲಿಯೂ ಭಕ್ತಿ ಪಾರವಶ್ಯದಿಂದ ವಿಷ್ಣುವಿನ ನಾಮಸ್ಮರಣೆಯಲ್ಲಿ ಆಸಕ್ತರಾಗಿರುತ್ತಾರೆ.(58)ಯಾವಾತನಿಂದ ವಿಷ್ಣುವಿನ ಪಾದಾರವಿಂದಯುಗ್ಮದಲ್ಲಿ ಅನನ್ಯಭಕ್ತಿಯಿಂದ ಒಮ್ಮೆಯಾದರೂ ಚಿತ್ತವು ಸಮರ್ಪಿತವಾಗಿದೆಯೋ, ಅವನನ್ನು ಪಾಪಗಳ ಸಮೂಹಕ್ಕೆ ಆಶ್ರಯನಾಗಿದ್ದರೂ ಸಹ, ಯಮನಾಗಲಿ ಯಮಪಾಶದಿಂದ ಸಹಿತರಾದ ಯಮದೂತರಾಗಲಿ,

ಯೇನೈಕದಾ ವಿಷ್ಣುಪದಾಬ್ಜಯುಗ್ಮೇ
ಸಮರ್ಪಿತಂ ಚಿತ್ತಮನನ್ಯಬುದ್ಧ್ಯಾ ।
ಯಮೋಽಪಿ ತದ್ದೂತಗಣಾಃ ಸಪಾಶಾಃ
ಪಶ್ಯಂತ್ಯಘೌಘಾಶ್ರಯಮಪ್ಯಹೋ ನ ಹಿ ॥59॥

ಇತಿ ಶ್ರೀಮದಾದಿತ್ಯಪುರಾಣೇ ಶ್ರೀವೇಂಕಟೇಶಮಾಹಾತ್ಮ್ಯೇ ಭಗವದ್ಗುಣನಾಮಮಹಿಮಾನುವರ್ಣನಂ
ನಾಮ ಚತುರ್ಥೋಽಧ್ಯಾಯಃ

* * *

ನೋಡುವುದಿಲ್ಲ. ಯಮದೂತರೇ ನೋಡುವುದಿಲ್ಲವೆಂದ ಮೇಲೆ ಅವನಿಗೆ ನರಕ ಭಯದ ಪ್ರಸಕ್ತಿಯೇ ಇಲ್ಲ.

ಇಲ್ಲಿಗೆ ಶ್ರೀಮದಾದ್ಯಿತಪುರಾಣಾಂತರ್ಗತವಾದ ಶ್ರೀ ವೆಂಕಟೇಶ ಮಹಾತ್ಮ್ಯದಲ್ಲಿ
ಭಗವದ್ಗುಣನಾಮಹಿಮಾನುರ್ವನೆಯೆಂಬ ನಾಲ್ಕನೆ ಅಧ್ಯಾಯವು ಸಮಾಪ್ತವಾಯಿತು

* * *

ಶ್ರೀಮದಾದಿತ್ಯಪುರಾಣಾಂತರ್ಗತ ಶ್ರೀವೇಂಕಟೇಶಮಾಹಾತ್ಮ್ಯೇ

## ಅಥ ಪಂಚಮೋಽಧ್ಯಾಯಃ

ದೇವಶರ್ಮೋವಾಚ –

ಸರ್ವಲೋಕಜನನೀ ಕಮಲಾ ಯಾ
ದೇಶಕಾಲವಿತತಾ ರಮಣೀ ತೇ ।
ಸಾಽತಿಮೃದ್ವತಸಿಕಾಕುಸುಮಾಭೋ–
ತ್ಸಂಗಗಾಽಪಿ ತವ ಹೃತ್ಕಮಲಸ್ಥಾ ॥1॥

ಬ್ರಹ್ಮಶಂಕರಪದಾರ್ಪಣದಕ್ಷಾ
ಸರ್ವಲೋಕಶುಭದಾ ದ್ರವಚಿತ್ತಾ ।
ಯತ್ಕಟಾಕ್ಷಲವಮಾತ್ರಪದಸ್ಥಾಃ
ಪ್ರಾರ್ಥಯಂತ್ಯಜಶಿವೇಂದ್ರಮುಖಾ ಹಿ ॥2॥

ಭಾರತೀಪ್ರಮುಖಸುಂದರಯೋಷಿದ್–
ಗಣಮತೀತಬಹುಸುಂದರರೂಪಾಮ್ ।
ಆಲಿಲಿಂಗಸಿ ಚತುಷ್ಕರಪದ್ಮೈ –
ರ್ಮಂದಹಾಸವದನಾಂ ಸರಸಾರ್ಥಮ್ ॥3॥

ಶ್ರೀಮದಾದಿತ್ಯಪುರಾಣಾಂತರ್ಗತವಾದ ವೇಂಕಟೇಶಮಹಾತ್ಮೆಯ

## ಐದನೇ ಅಧ್ಯಾಯ

ಸಮಸ್ತಲೋಕಜನನಿಯಾದ, ಸರ್ವದೇಶಕಾಲಗಳಲ್ಲಿ, ವ್ಯಾಪ್ತಳಾದ, ಅತಿಮೃದುವಾದ ಅಗಸಿಯ ಕುಸುಮದಂತೆ ಸುಂದರವಾದ ಕಾಂತಿಯುಳ್ಳ ನಿನ್ನ ರಮಣಿಯಾದ ಲಕ್ಷ್ಮೀದೇವಿಯು, ನಿನ್ನ ಹೃದಯಕಮಲದಲ್ಲಿದ್ದರೂ ಉತ್ಸಂಗದಲ್ಲಿ ಇದ್ದವಳಾದರೂ ಸಹ ನಿನ್ನನ್ನು ಯಾವಾಗಲೂ ಭಜಿಸುತ್ತಾಳೆ (1) ಬ್ರಹ್ಮ, ರುದ್ರ ಮೊದಲಾದ ದೇವತೆಗಳಿಗೆ ಯೋಗ್ಯವಾದ ಲೋಕಾಧಿಪತ್ಯವನ್ನು ಕೊಡುವುದರಲ್ಲಿ ಸಮರ್ಥಳಾದ, ಸರ್ವಲೋಕಗಳಿಗೆ ಶುಭಪ್ರದಳಾದ, ದಯಾರ್ದ್ರಚಿತ್ತಳಾದ ಯಾವ ಲಕ್ಷ್ಮೀದೇವಿಯ ಅಲ್ಪಕಟಾಕ್ಷ ಮಾತ್ರದಿಂದ ಹೊಂದಲ್ಪಟ್ಟ ಸಮಸ್ತ ಪದಾರ್ಥಗಳುಳ್ಳ ಬ್ರಹ್ಮ, ರುದ್ರ, ಇಂದ್ರ ಮೊದಲಾದ ದೇವತೆಗಳು ಅವಳನ್ನು ಪ್ರಾರ್ಥಿಸುತ್ತಾರೆ. (2) ಸರಸ್ವತೀ, ಭಾರತೀ, ಪಾರ್ವತಿ, ಮೊದಲಾದ ಸುಂದರಸ್ತ್ರೀಯರ ಗುಂಪನ್ನು ಅತಿಕ್ರಮಿಸುವ ಬಹುಸುಂದರವಾದ

ನಿತ್ಯಮುಕ್ತಾ ದೋಷದೂರಾ ತ್ವದೂನಾಧಿಕಸದ್ಗುಣಾ ।
ತ್ವತ್ಪಾದಪೂಜನೇ ನಿತ್ಯಂ ಬದ್ಧಕಂಕಣಭೂಷಿತಾ ॥4॥

ಅಭೀಷ್ಟದಾನೇ ಭಕ್ತಾನಾಂ ಕಲ್ಪವೃಕ್ಷಾಯಿತಾ ರಮಾ ।
ಚಿಂತಾಮಣಿಕಾಮಧೇನುಕರುಣಾಸಾಗರಾಯಿತಾ ॥5॥

ಲಕ್ಷ್ಮೀಃ ಪುರಸ್ತಾತ್ಪಶ್ಚಾಚ್ಚ ದಕ್ಷಿಣೋತ್ತರತಶ್ಚ ಯಾ ।
ಊರ್ಧ್ವಾಧರಾದಿಭಾಗಸ್ಥಾ ಜಗತ್ಸೃಜತಿ ಪಾತಿ ಹಿ ॥6॥

ಗುಣೈಸ್ತುತಾ ಪ್ರಸವಿತೃವರಣೀಯಗುಣೋರ್ಜಿತಾ ।
ಪ್ರಕಾಶಮತಿಮೂರ್ತಿಶ್ಚ ಧ್ಯೇಯಾ ಬುದ್ಧಿಪ್ರಚೋದಿಕಾ ॥7॥

ದುರನ್ನಾದ್ದುರ್ಗ್ರಹತ್ವಾಚ್ಚ ಪಾತಕಾದುಪಪಾತಕಾತ್ ।
ಸ್ವಗಾಯಕತ್ರಾಣದಕ್ಷಾ ಗಾಯತ್ರೀತ್ಯುದಿತಾ ರಮಾ ॥8॥

ಸವಿತುರ್ಜ್ಯೋತಕತ್ವಾಚ್ಚ ಭಕ್ತೇಷ್ಟಪ್ರಸವೇ ರತಾ ।
ಚರಾಚರಪ್ರಸವಿತಾ ಸಾವಿತ್ರೀ ಕಮಲಾ ಸ್ಮೃತಾ ॥9॥

ರೂಪವುಳ್ಳ, ಮಂದಹಾಸ ವದನೆಯಾದ ಲಕ್ಷ್ಮೀದೇವಿಯನ್ನು ನಾಲ್ಕು ಕಮಲದಂತೆ ಇರುವ ಕೈಗಳಿಂದ ಸರಸಾರ್ಥವಾಗಿ ಆಲಿಂಗನಮಾಡುತ್ತಿರುತ್ತೀ (3) ನಿತ್ಯಮುಕ್ತಳೂ, ದೋಷದೂರಳು, ನಿನಗಿಂತಲೂ ನ್ಯೂನ ಹಾಗೂ ಬ್ರಹ್ಮಾದಿ ದೇವತೆಗಳಿಗಿಂತಲೂ ಅಧಿಕವಾದ ಸದ್ಗುಣ ಗಳಿಂದ ಪೂರ್ಣಳೂ, ನಿನ್ನ ಪಾದಪೂಜೆಯಲ್ಲಿ ನಿತ್ಯದಲ್ಲಿಯೂ ಬದ್ಧವಾದ ಕಂಕಣಗಳಿಂದ ಭೂಷಿತಳೂ ಆಗಿರುತ್ತಾಳೆ. (4) ಭಕ್ತರುಗಳಿಗೆ ಅಭೀಷ್ಟಪ್ರದಾನ ವಿಷಯದಲ್ಲಿ ಲಕ್ಷ್ಮೀದೇವಿಯು ಕಲ್ಪವೃಕ್ಷಕ್ಕೆ ಸಮಾನಳಾಗಿರುವಳು ಮತ್ತು ಚಿಂತಾಮಣಿ–ಕಾಮಧೇನುಗಳಂತೆ ಕರುಣಾ ಸಮುದ್ರದಂತಿರುವಳು. (5) ಮುಂದೆ ಹಿಂದೆ, ಎಡಕ್ಕೆ, ಬಲಕ್ಕೆ, ಮೇಲೆ, ಕೆಳಗೆ –ಹೀಗೆ ಎಲ್ಲ ಭಾಗಗಳಲ್ಲಿಯೂ ಇದ್ದ ಲಕ್ಷ್ಮಿಯು ಜಗತ್ತನ್ನು ಸೃಷ್ಟಿಸುತ್ತಾಳೆ ಮತ್ತು ರಕ್ಷಿಸುತ್ತಾಳೆ. ಜ್ಞಾನಾನಂದಾದಿ ಗುಣಗಳಿಂದ ಸ್ತುತ್ಯಳಾದವಳು, ಜಗತ್ತಿನ ಉತ್ಪಾದಕಳೂ, ಸರ್ವರಿಂದಲೂ ಅಪೇಕ್ಷ್ಯವಾದ ಗುಣಗಳಿಂದ ಪೂರ್ಣಳು (ಉತ್ಕೃಷ್ಟಳು), ಜ್ಯೋತಿ–ಜ್ಞಾನಗಳೇ ಶರೀರವಾಗಿವುಳ್ಳವಳು, ಧ್ಯೇಯಳು ಹಾಗೂ ಬುದ್ಧಿ ಪ್ರಚೋದಕಳಾಗಿರುವಳು (7) ದುರನ್ನದಿಂದ (ಶೂದ್ರಾನ್ನ,ದೇವರಿಗೆ ಅಸಮರ್ಪಿತವಾದ ಅನ್ನ, ವೈಶ್ವದೇವಾದಿಗಳಿಲ್ಲದ ಅನ್ನ ಇವು ದುರನ್ನಗಳು), ದುಷ್ಟ ದಾನಾದಿಗಳ ಸ್ವೀಕಾರದಿಂದ ಪಾತಕ ಉಪಪಾತಕಗಳಿಂದ ತನ್ನ ಗಾನಮಾಡುವವರ ರಕ್ಷಣೆಯಲ್ಲಿ ದಕ್ಷಳು ಆದ ರಮಾದೇವಿಯು, ಗಾಯತ್ರಿ ಎಂದು ಉದಿತಳಾಗಿರುವಳು. ಸೂರ್ಯನಿಗೆ ಪ್ರಕಾಶವನ್ನು ಕೊಡುವಳಾದ್ದರಿಂದ ಮತ್ತು ಭಕ್ತರ ಇಷ್ಟಾರ್ಥಪ್ರಸವಿಸುವುದರಲ್ಲಿ ಆಸಕ್ತಳಾದ, ಚರಾಚರ ಜಗತ್ತಿನ ಉತ್ಪಾದಕಳಾದ

ವಾಗೀಶತ್ವಾದ್ವಚೋದಾನಾತ್ ಕೀರ್ತಿತಾ ಚ ಸರಸ್ವತೀ ।
ಕಾಂತಿರತ್ಯಾದಿದಾನಾತ್ ಸಾ ಭಾರತೀತ್ಯಾದಿನಾಮಿಕಾ ॥10॥

ಗುಣಪೂರ್ಣತ್ವಯೋಗನ ಬ್ರಹ್ಮ ಬ್ರಹ್ಮವಶೇ ಸ್ಥಿತಾ ।
ಬ್ರಹಾಂಡಾಂತರ್ಬಹಿರ್ವ್ಯಾಪ್ತಾ ಸ್ಥೂಲಾ ಸೂಕ್ಷ್ಮಾ ಚ ಮಧ್ಯಮಾ॥

ಕರ್ಮಣಾಂ ಗುಣರೂಪಾಣಾಂ ಸರ್ವೇಷಾಂ ಚ ನಿಯಾಮಿಕಾ ।
ಯದ್ದಯಾಪಾಂಗಲೇಶೇನ ತ್ವೈಹಿಕೀಃ ಸರ್ವಸಂಪದಃ ॥12॥

ಸ್ವರ್ವಿರಕ್ತೀಶಸದ್ಭಕ್ತಿರ್ಜ್ಞಪ್ತಿರ್ಮುಕ್ತಿರ್ವ್ರಜಂತಿ ಹಿ ।
ಲೋಕಾತೀತಾ ಲೋಕಪೂಜ್ಯಾ ತವಾತ್ಯಂತಪ್ರಿಯಾ ಮತಾ ॥13॥

ಸರ್ವಶಕ್ತಾ ಸರ್ವಸುಖಾ ಸರ್ವಲಕ್ಷಣಸಂಯುತಾ ।
ಅನೇಕಗುಣಸಂಪೂರ್ಣಾ ಪೂರ್ಣಕಾಮಾ ಚ ಸರ್ವದಾ ॥14॥

ಅಪ್ರಮೇಯಪ್ರಮೇಯಾಪಿ ಸಮಸ್ತಪುರುಷಾರ್ಥದಾ ।
ಮಹದೈಶ್ವರ್ಯಸೌಭಾಗ್ಯಾ ತಥಾಽಪಿ ತ್ವಾಽನುವರ್ತಿನೀ ॥15॥

ಲಕ್ಷ್ಮೀದೇವಿಯು ಸಾವಿತ್ರೀರೂಪಳಾಗಿರುವಳು. (9) ವಾಗಾದಿ ದೇವತೆಗಳಿಗೆ ಒಡೆಯಳಾಗಿ ಇರುವುದರಿಂದ ಮತ್ತು ಉಪದೇಶಕಳಾಗಿ ಇರುವುದರಿಂದ ಸರಸ್ವತಿ ಎನಿಸಿಕೊಂಡಿರುತ್ತಾಳೆ. ಕಾಂತಿ, ರತಿ ಮುಂತಾದವುಗಳನ್ನು ಭಕ್ತರಿಗೆ ಕೊಡುವುದರಿಂದ ಭಾರತಿ ಮುಂತಾದ ನಾಮಗಳಿಂದ ವಾಚ್ಯಳಾಗಿರುವಳು. (10) ಗುಣಪೂರ್ಣತ್ವವೆಂಬ ಸಂಬಂಧವಿರುವುದರಿಂದ ಬ್ರಹ್ಮನ ವಶದಲ್ಲಿ ಇರುವ ಬ್ರಹ್ಮಾಂಡದ ಅಂತರ್ ಬಹಿರ್ಭಾಗದಲ್ಲಿ ವ್ಯಾಪ್ತಳಾದ, ಸ್ಥೂಲಳು, ಸೂಕ್ಷ್ಮಳು ಮತ್ತು ಮಧ್ಯಮಳೂ ಆದ ಲಕ್ಷ್ಮೀದೇವಿಯು ಬ್ರಹ್ಮನೆನಿಸುತ್ತಾಳೆ. ಕರ್ಮಗಳಿಗೆ ಸಮಸ್ತವಾದ ಗುಣರೂಪಗಳಿಗೆ ಗುಣಗಳಿಗೆ ನಿಯಾಮಕಳಾದ ಲಕ್ಷ್ಮೀದೇವಿಯ ಅಪಾಂಗ ಲವಲೇಶದಿಂದ ಐಹಿಕವಾದ ಸರ್ವ ಸಂಪದಗಳು ಲಭಿಸುತ್ತವೆ. (12) ಸ್ವರ್ಗದಲ್ಲಿ ವೈರಾಗ್ಯ, ಪರಮಾತ್ಮನಲ್ಲಿ ಸದ್ಭಕ್ತಿ, ಜ್ಞಪ್ತಿ ಮತ್ತು ಮುಕ್ತಿಗಳನ್ನು ಬ್ರಹ್ಮಾದಿ ದೇವತೆಗಳು ನಿನ್ನಿಂದ ಹೊಂದುತ್ತಾರೆ. ಲೋಕಾತೀತಳೂ ಲೋಕಪೂಜ್ಯಳೂ ಆದ ಲಕ್ಷ್ಮೀದೇವಿಯು (ನಿನಗೆ) ಅತ್ಯಂತ ಪ್ರಿಯಳೆಂದು ಸರ್ವಸಮ್ಮತಳಾಗಿದ್ದಾಳೆ (13) ಸರ್ವ ಶಕ್ತಳೂ, ಸರ್ವಸುಖಾತ್ಮಳೂ, ಸಮಸ್ತವಾದ ಉತ್ತಮ ಲಕ್ಷಣಗಳಿಂದ ಕೂಡಿದವಳೂ, ಅನೇಕ ಗುಣಗಳಿಂದ ಕೂಡಿದವಳೂ, ಯಾವಾಗಲೂ ಪೂರ್ಣಕಾಮಳೂ, ಅಪ್ರಮೇಯಳೂ, ಸಮಸ್ತ ಪುರುಷಾರ್ಥಪ್ರದಳೂ, ಅತಿ ಶ್ರೇಷ್ಠವಾದ ಐಶ್ವರ್ಯ ಸೌಭಾಗ್ಯವುಳ್ಳವಳೂ ಆದ ಲಕ್ಷ್ಮೀದೇವಿಯು ಇಷ್ಟೆಲ್ಲ ಸೌಭಾಗ್ಯಗಳಿದ್ದರೂ ಸಹ ನಿನ್ನ ಅನುವರ್ತಿಯಾಗಿರುವಳು. (15) ನಿನ್ನನ್ನು ಸ್ಮರಿಸುತ್ತಾಳೆ,

ಸ್ಮರತಿ ಧ್ಯಾಯತಿ ಸ್ತೌತಿ ನಮತ್ಯರ್ಚತಿ ಪಶ್ಯತಿ ।
ತಪತಿ ತ್ವಾಂ ಜಪತಿ ಚ ಸೇವತೇ ತ್ವಾಂ ಪ್ರತೀಕ್ಷತೇ ॥16॥

ನಿತ್ಯಾऽವಿಯೋಗಿನೀ ನಮ್ರಾ ಸಂಪ್ರಾರ್ಥಯತಿ ಸರ್ವದಾ ।
ಕಿಮುತಾನ್ಯೇऽಲ್ಪಜೀವಾಶ್ಚ ಮಾದೃಶಾ ವೃತ್ತಿವರ್ಜಿತಾಃ ॥17॥

ದರಿದ್ರಾ ಬಂಧುರಹಿತಾ ಅನಾಥಾ ಜೀವನಾರ್ಥಿನಃ ।
ತೇಷಾಂ ತ್ವತ್ಪ್ರಾರ್ಥನಾಕಾಂಕ್ಷಾ ನಾಶ್ಚರ್ಯಂ ಭುವನತ್ರಯೇ ॥18॥

ಶ್ರೀವೇಂಕಟೇಶ ಮತ್ಸ್ವಾಮಿನ್ ಜ್ಞಾನಾನಂದ ದಯಾನಿಧೇ ।
ಶರಣಾಗತಸಂತ್ರಾಣ ವರಣಾಭೀಷ್ಟವರ್ಷಣ ॥19॥

ಶ್ರೀಶ ತೇ ರೂಪಕರ್ಮಾಣಿ ಬ್ರಹ್ಮರುದ್ರಾಹಿಪಾದಿಭಿಃ ।
ಅಗಣ್ಯಾನಿ ಹ್ಯವೇದ್ಯಾನಿ ಹ್ಯಚಿಂತ್ಯಾತ್ಯದ್ಭುತಾನಿ ಚ ॥20॥

ಏವಂ ಪೂರ್ಣೇ ತ್ವನ್ಮಹಿಮ್ನಿ ನಾಹಂ ಶಕ್ತೋऽಸ್ಮಿ ವರ್ಣನೇ ।
ಕಶ್ಚಾಹಂ ಕಾ ಚ ಮೇ ಶಕ್ತಿಃ ಕಿಮಿತಿ ಸ್ತೌಮಿ ಮಂದಧೀಃ ॥21॥

ಧ್ಯಾನ ಮಾಡುತ್ತಾಳೆ, ಜಪಗೈಯುತ್ತಾಳೆ, ನಿನ್ನನ್ನು ಸೇವಿಸುತ್ತಾಳೆ ಮತ್ತು ಯಾವಾಗಲೂ ನಿನಗಾಗಿ ದಾರಿಕಾಯುತ್ತಿರುತ್ತಾಳೆ (16) ನಿನ್ನಿಂದ ನಿತ್ಯ ಅವಿಯೋಗಿನಿಯು, ನಮ್ರಳು ಆದ ಲಕ್ಷ್ಮೀದೇವಿಯು ಯಾವಾಗಲೂ ನಿನ್ನನ್ನು ಪ್ರಾರ್ಥಿಸುತ್ತಿರುತ್ತಾಳೆ ಎಂದ ಮೇಲೆ ಅಲ್ಪಜೀವರಾದ ಲಕ್ಷ್ಮೀದೇವಿಯಿಂದ ಭಿನ್ನರಾದ ವೃತ್ತಿವರ್ಜಿತರಾದ ನನ್ನಂತಹವರ ಪಾಡೇನು? ದರಿದ್ರರೂ, ಬಂಧುರಹಿತರು, ಅನಾಥರೂ ಜೀವನಾಪೇಕ್ಷೆಯುಳ್ಳವರು ಆದ ಜನರುಗಳಿಗೆ ನಿನ್ನ ಪ್ರಾರ್ಥನೆಯನ್ನು ಮಾಡಬೇಕೆಂಬ ಅಪೇಕ್ಷೆಯು ತ್ರಿಲೋಕದಲ್ಲಿಯೂ ಆಶ್ಚರ್ಯಕರವಲ್ಲ. (18) ಜ್ಞಾನಾನಂದ ದಯಾನಿಧಿಯಾದ ನನ್ನ ಸ್ವಾಮಿಯಾದ ಹೇ ವೆಂಕಟೇಶನೇ ! ಶರಣಾಗತ ಸಂತ್ರಾಣನಾದ ನೀನು ಕರುಣೆಯಿಂದ ಅಭೀಷ್ಟಗಳ ಮಳೆಯನ್ನೇ ವರ್ಷಿಸುತ್ತೀ (19)ಲಕ್ಷ್ಮೀಪತಿಯಾದ ನಾರಾಯಣನೇ ! ನಿನ್ನ ರೂಪ ಹಾಗೂ ಕರ್ಮಗಳು ಬ್ರಹ್ಮರುದ್ರ ಶೇಷಾದಿಗಳಿಂದಲೂ ಅಗಣ್ಯವಾಗಿವೆ. ಅಚಿಂತ್ಯ ಅತ್ಯದ್ಭುತಗಳಾಗಿವೆ ಮತ್ತು ಅವೇದ್ಯವಾಗಿವೆ. (20) ಈ ರೀತಿಯಾಗಿ ಪೂರ್ಣವಾದ ನಿನ್ನ ಮಹಿಮೆಗಳ ವರ್ಣನೆಯಲ್ಲಿ ನಾನು ಸಮರ್ಥನಲ್ಲ. ಮಂದಬುದ್ಧಿಯಾದ ನಾನು ಯಾರು? ನನ್ನ ಶಕ್ತಿಯು ಎಷ್ಟು? ನಾನು ಏನೆಂದು ಸ್ತೋತ್ರ ಮಾಡಲಿ? (21) ಆಲಸಿಯೂ, ಅಹಂಕಾರಿಯೂ, ಅಜ್ಞನೂ, ಮೂರ್ಖನೂ, ದುಷ್ಟನೂ, ಕಾರ್ಯಾಕಾರ್ಯ ಜ್ಞಾನರಹಿತನೂ, ಕಾಮಕ್ರೋಧಾಧಿಗಳಿಂದ ಪೂರಿತನೂ, ಜ್ಞಾನಭಕ್ತ್ಯಾದಿವಿಹೀನನೂ, ಮನೋನಿಗ್ರಹರಹಿತನೂ, ಸದಾ ವಿಷಯ ಲಂಪಟನೂ ಆಗಿರುವೆನು.

ಅಲಸೋಽಹಮಹಂಕಾರೀ ಚಾಜ್ಞೋ ಮೂರ್ಖಃ ಶಠಃ ಖಲಃ ।
ಜ್ಞಾನಭಕ್ತ್ಯಾದಿಹೀನಶ್ಚ ಕಾಮಕ್ರೋಧಾದಿಪೂರಿತಃ ॥22॥

ಮನೋಜಯಾದಿಹೀನಶ್ಚ ಸದಾ ವಿಷಯಲಂಪಟಃ ।
ಪಾಂಸೂನಾಂ ವೃಷ್ಟಿಬಿಂದೂನಾಂ ಮದ್ದೋಷಾಣಾಂ ಮಿತಿರ್ನಹಿ ॥23॥

ಗುಣಾಸ್ತ್ವಯಿ ಯಥಾ ಪೂರ್ಣಾ ದೋಷಾಃ ಪೂರ್ಣಾಸ್ತಥಾ ಮಯಿ ।
ಅಲಸತ್ವಾದಹಂಕಾರಾದಜ್ಞಾನಾಲ್ಲೋಭತೋ ಮಯಾ ॥24॥

ದಂಭಾತ್ಪ್ರಮಾದಾದ್ದಾಕ್ಷಿಣ್ಯಾತ್ಸ್ವಭಾವಾತ್ಸಂಗತಃ ಕೃತಾನ್ ।
ಅಪಾರಾನಪರಾಧಾನ್ಮೇ ಹ್ಯಗಣೇಯಾನ್ ಕ್ಷಮಸ್ವ ಮಾಮ್ ॥25॥

ಪಿತಾ ಮಾತಾ ಗುರುರ್ಭ್ರಾತಾ ಸಖಾ ಬಂಧುಸ್ತ್ವಮೇವ ಮೇ ।
ವಿದ್ಯಾ ಸತ್ಕರ್ಮ ವಿತ್ತಂ ಚ ಪುರಃ ಪೃಷ್ಠೇ ಚ ಪಾರ್ಶ್ವಯೋಃ ॥26॥

ಮೂರ್ಧ್ನಿ ಹೃತ್ಕಮಲೇ ಮೇಽಂತರ್ಬಹಿರ್ಜನ್ಮನಿ ಜನ್ಮನಿ ।
ಕುಲಸ್ವಾಮೀಷ್ಟದೇವೋ ನೋ ವೃತಃ ಪಿತೃಪಿತಾಮಹೈಃ ॥27॥

ಸರ್ವಂ ತ್ವಮೇವ ಲಕ್ಷ್ಮೀಶ ನ ಜಾನೇ ತ್ವಾಂ ವಿನಾ ಪರಮ್ ।
ದುಃಸ್ಮೃತಿಂ ಹರ ದೂರಾನ್ಮೇ ವಿಸ್ಮೃತಿಂ ತೇ ವಿಲೋಪಯ ॥28॥

ಧೂಳಿಯ ಕಣಗಳಂತೆ, ಮಳೆಯ ಹನಿಗಳಂತೆ ಆದ ನನ್ನ ದೋಷಗಳಿಗೆ ಮಿತಿಯೇ ಇಲ್ಲ (22-23) ಯಾವ ರೀತಿಯಾಗಿ ನಿನ್ನಲ್ಲಿ ಗುಣಗಳು ಪರಿಪೂರ್ಣವಾಗಿವೆಯೋ ಅದೇ ರೀತಿ ನನ್ನಲ್ಲಿ ದೋಷಗಳು ಪೂರ್ಣವಾಗಿವೆ. ಆಲಸ್ಯದಿಂದ ಅಹಂಕಾರದಿಂದ, ಅಜ್ಞಾನದಿಂದ ಲೋಭದಿಂದ ಗರ್ವದಿಂದ ಪ್ರಮಾದದಿಂದ ದಾಕ್ಷಿಣ್ಯದಿಂದ, ಸ್ವಭಾವದಿಂದ, ದುಷ್ಟ ಸಂಗದಿಂದ ನನ್ನಿಂದ ಮಾಡಲ್ಪಟ್ಟ ಅಗಣನೀಯವಾದ ಅಪಾರವಾದ ಅಪರಾಧಗಳನ್ನು ಕ್ಷಮಿಸು. (24-25) ಶ್ರೀನಿವಾಸನೇ ! ನನಗೆ ನೀನೇ ತಂದೆಯು ತಾಯಿಯು, ಗುರುವು, ಭ್ರಾತೃವು, ಮಿತ್ರನು, ಬಂಧುವು, ಸರ್ವವೂ ನೀನೇ. ವಿದ್ಯೋಪದೇಶಕ ಸತ್ಕರ್ಮಕಾರಕ ದ್ರವ್ಯದಾತನು ನೀನೇ. ಶಿರಸ್ಸಿನಲ್ಲಿ ಹೃದಯಕಮಲದಲ್ಲಿ ನನ್ನ ಒಳಗೂ ಹೊರಗೂ, ಜನ್ಮಜನ್ಮಾಂತರ ಗಳಲ್ಲಿಯೂ ಸಹ ನಮ್ಮ ಪಿತೃಪಿತಾಮಹ ಪ್ರಪಿತಾಮಹರುಗಳಿಂದ ನಮ್ಮ ಕುಲಸ್ವಾಮಿಯೆಂದು ಇಷ್ಟದೇವನೆಂದು ನೀನು ಸ್ವೀಕರಿಸಲ್ಪಟ್ಟಿರುವಿ. (26-27) ಹೇ ಸಕಲಕ್ಕೂ ಈಶನಾದ ವೆಂಕಟೇಶನೇ ! ನನಗೆ ಸರ್ವವೂ ನೀನೇ, ನಿನ್ನಿಂದ ಭಿನ್ನರಾದ ಅನ್ಯ ರಕ್ಷಕನನ್ನು ನಾನರಿಯೆ, ಹೇ ಸ್ವಾಮಿಯೇ ! ದುಷ್ಟವಿಷಯಗಳಲ್ಲಿಯ ನನ್ನ ಸ್ಮರಣವನ್ನು ದೂರದಿಂದಲೇ ದೂರಮಾಡು. ನಿನ್ನ ವಿಷಯದಲ್ಲಿ

ತ್ವತ್ಸ್ಮೃತಿಂ ಸಂಪ್ರದೇಹ್ಯದ್ಯ ತ್ವತ್ಸಮೋ ನಾಸ್ತಿ ಮೇ ಪ್ರಿಯಃ ।
ತ್ವನ್ಮನಾಸ್ತ್ವದ್ಗತಪ್ರಾಣಸ್ತ್ವತ್ಪಾದಾಂಬುಜಸಂಶ್ರಿತಃ ॥29॥

ತವ ಭಕ್ತೋಽಸ್ಮಿ ದಾಸೋಽಸ್ಮಿ ಶಿಷ್ಯಃ ಪುತ್ರೋಽಸ್ಮಿಕೇವಲಮ್ ।
ಭರ್ತಾ ತ್ವಮೇವ ವಿಶ್ವಸ್ಯ ಸ್ಮರಾಮಿ ತ್ವಾಮಹರ್ನಿಶಮ್ ॥30॥

ಶ್ರೀಹರಿರ್ಮಮಹೃತ್ಪದ್ಮಕರ್ಣಿಕಾಸ್ಥೋಽತಿ ಸುಂದರಃ ।
ಪದ್ಮಾಸನಸಮಾಸೀನ ಇಂದ್ರನೀಲಸಮದ್ಯುತಿಃ ॥31॥

ಕಂಜಕೋಮಲಪಾದಾಬ್ಜಃ ಕುಂಕುಮಾಧಿಕವರ್ಣವಾನ್ ।
ವಜ್ರಾಂಕುಶಧ್ವಜಾಬ್ಜಾಂಕಪಾದಾಬ್ಜನಖರಕ್ತವಾನ್ ॥32॥

ಕ್ವಣನ್ನೂಪುರಸನ್ನಾದವಲಯಾಢ್ಯಪದಾಂಬುಜಃ ।
ಅತಸೀಪುಷ್ಪಸಂಕಾಶತೇಜಃಪುಂಜೋರುರಂಜಿತಃ ॥33॥

ನಿತಂಬೇ ಪೀತವಸನಸ್ವರ್ಣಕಾಂತ್ಯಾಂಚಿತೋಽಚ್ಯುತಃ ।
ವಿರಿಂಚಾಧಾರಸೌವರ್ಣಗಂಭೀರಾಬ್ಜಾಭನಾಭಿಕಃ ॥34॥

ವಿಸ್ಮೃತಿಯನ್ನು ಶೀಘ್ರದಲ್ಲಿಯೇ ವಿಲೋಪಗೊಳಿಸು (28) ಹೇ ಲಕ್ಷ್ಮೀಶನೇ ! ನಿನ್ನ ಸ್ಮೃತಿಯನ್ನು ಈಗ ನನಗೆ ಕೊಡು. ನಿನಗೆ ಸಮಾನರಾದ ನನಗೆ ಪ್ರಿಯರು ಬೇರೆ ಯಾರೂ ಇಲ್ಲ. ನಿನ್ನಲ್ಲಿಯೇ ಮನಸ್ಸುಳ್ಳವನು; ನಿನ್ನಲ್ಲಿಯೇ ಪ್ರಾಣವುಳ್ಳವನು. ನಿನ್ನ ದಿವ್ಯವಾದ ಪಾದಗಳನ್ನೇ ಆಶ್ರಯಿಸಿದವನು. (29) ನಾನು ನಿನ್ನ ಭಕ್ತನಿದ್ದೇನೆ. ನಿನ್ನ ದಾಸನಾಗಿದ್ದೇನೆ. ಶಿಷ್ಯನಾಗಿದ್ದೇನೆ. ನಿನ್ನ ಪುತ್ರನೂ ಆಗಿದ್ದೇನೆ. ಜಗತ್ತಿನ ಭರಣಪೋಷಣಶೀಲನಾದ ನಿನ್ನನ್ನೇ ಹಗಲು ರಾತ್ರಿಯೆನ್ನದೇ ಸ್ಮರಣ ಮಾಡುತ್ತೇನೆ (30) ನನ್ನ ಹೃದಯ ಕಮಲವೆಂಬ ಮೊಗ್ಗೆಯಲ್ಲಿದ್ದ ಅತ್ಯಂತ ಸುಂದರನು, ಪದ್ಮಾಸನ ಸಮಾಸೀನನು. ಇಂದ್ರನೀಲಮಣಿಯಂತೆ ಉತ್ತಮವಾದ ಕಾಂತಿಯುಳ್ಳ ವನಾದ ಶ್ರೀಹರಿಯು ಕಮಲದಳದಂತಹ ಮನೋಹರವಾದ, ಮೃದುವಾದ ಪಾದಕಮಲವುಳ್ಳವನು. ಕುಂಕುಮಕ್ಕಿಂತಲೂ ಹೆಚ್ಚಾಗಿ ಶೋಭಿತವಾದ ರೂಪವುಳ್ಳವನು. ವಜ್ರ, ಅಂಕುಶ, ಧ್ವಜ ಮತ್ತು ಪದ್ಮ ಚಿಹ್ನೆಯುಳ್ಳ ಪಾದಪದ್ಮಗಳ ಉಗುರುಗಳಲ್ಲಿ ರಕ್ತವರ್ಣೋಪೇತ ನಾಗಿರುವನು (32) ಕಣಕಣಧ್ವನಿಯುಕ್ತವಾದ ಗೆಜ್ಜೆಗಳ ಉತ್ತಮವಾದ ನಾದಗೈಯುವ ಕಾಲಿನ ಸರಪಳಿ ಇವೇ ಮುಂತಾದ ಅಭರಣಗಳಿಂದ ಶೋಭಿತವಾದ ಉತ್ತಮವಾದ ಪಾಪದ್ಮಗಳುಳ್ಳವನು. ಅಗಸೀ ಪುಷ್ಪದಂತೆ ಉತ್ತಮವಾದ ಶೋಭಿಸುವ ತೇಜಸ್ಸಮೂಹದಿಂದ ರಾರಾಜಿಸುವವನು (33) ನಿತಂಬದಲ್ಲಿ ಹಳದೀವರ್ಣದಿಂದ ಶೋಭಿಸುವ ವಸ್ತ್ರ, ಸ್ವರ್ಣಕಾಂತಿಯಿಂದ ಮನೋಹರನಾದ,

ಬ್ರಹ್ಮಾಂಡಗೂಹಕಮೃದುಶ್ಲಕ್ಷ್ಣರೇಖಾತ್ರಯೋದರಃ ।
ಧರ್ಮಸ್ತನೋಽಧರ್ಮಪೃಷ್ಠಃ ಶ್ಲಕ್ಷ್ಣಸೂಕ್ಷ್ಮತನೂರುಹಃ ॥35॥

ಶ್ರೀವತ್ಸಾಂಕಃ ಕೌಸ್ತುಭಾದಿವೈಜಯಂತೀಹೃದಂಬುಜಃ ।
ಉನ್ನತಾಂಸೋ ಜಾನುಲಂಬಿಬಾಹ್ವಭೀತಿವರಪ್ರದಃ ॥36॥

ಕುಂಕುಮಾಂಕೇ ಕರತಲೇ ಶಂಖಚಕ್ರಸುಲಕ್ಷಣಃ ।
ಕಿಂಕಿಣೀ ಕಂಕಣಲಸದ್ವಲಯಾಂಗದಭೂಷಿತಃ ॥37॥

ಕಂಬುಗ್ರೀವಃ ಸುಬಿಂಬೋಷ್ಠಃ ಕುಂದಕುಡ್ಮಲದಂತವಾನ್ ।
ಆದರ್ಶವದ್ದೃಶ್ಯಸೂಕ್ಷ್ಮಗಂಡಯುಗ್ಮಸುಮಂಡಿತಃ ॥38॥

ಸುನಾಸೋಽನಿಮಿಷಃ ಸುಭ್ರೂಃ ಕರುಣಾಪೂರ್ಣಲೋಚನಃ ।
ಶರತ್ಪೂರ್ಣೇಂದುವದನೋ ನತನೀಲಸುಕುಂತಲಃ ॥39॥

ಚ್ಯುತಿರಹಿತನಾದ, ಬ್ರಹ್ಮನಿಗೆ ಆಧಾರರೂಪನಾದ, ಬಂಗಾರಮಯವಾದ ಗಂಭೀರವಾದ ಕಮಲದಂತೆ ಶೋಭಾಯಮಾನವಾದ ನಾಭಿಯುಳ್ಳವನು. ಬ್ರಹ್ಮಾಂಡವನ್ನೇ ಅಚ್ಛಾದಿಸುವ ಮೃದು ಹಾಗೂ ಮತ್ತಗೆಯೂ ಆದ ರೇಖಾತ್ರಯಗಳಿಂದ ಶೋಭಿಸುವ ಉದರ ಉಳ್ಳವನು. ಧರ್ಮೋತ್ಪಾದಕವಾದ ಸ್ತನಗಳುಳ್ಳವನು. ಅಧರ್ಮೋತ್ಪಾದಕವಾದ ಪೃಷ್ಠಗಳುಳ್ಳವನು. ಮೆತ್ತನೆಯೂ ,ಸೂಕ್ಷ್ಮವೂ ಆದ ದೇಹದಲ್ಲಿ ಉತ್ಪನ್ನವಾದ ರೋಮಗಳುಳ್ಳವನು. ಶ್ರೀವತ್ಸ ಚಿಹ್ನೆಯುಳ್ಳ, ಕೌಸ್ತುಭ ಮುಂತಾದ ರತ್ನಮಣಿಗಳಿಂದ ವಿರಚಿತವಾದ ವೈಜಯಂತೀ ಮಾಲೆಯಿಂದ ಅಲಂಕೃತವಾದ ಹೃತ್ಕಮಲವುಳ್ಳ, ಎತ್ತರವಾದ ಭುಜ ಶಿರಸ್ಸುಳ್ಳ, ಮೊಳಕಾಲಿನವರೆಗೆ ಉದ್ದವಾದ ಬಾಹುಗಳುಳ್ಳ, 'ಅಭಯ' ವರಪ್ರದನಾದ, ಕುಂಕುಮದಂತೆ ಶೋಭಿಸುವ ಕರಕಮಲದಲ್ಲಿ ಶಂಖಚಕ್ರಾದಿ ಚಿಹ್ನೆಯುಳ್ಳ, ಕಿಂಕಿಣೀನಿನಾದ ಯುಕ್ತವಾದ ಕಂಕಣದಿಂದ ಶೋಭಿಸುವ ಕಡಗ, ತೋಳುಸರಿಗೆ ಮುಂತಾದ ಆಭರಣಗಳಿಂದ ಭೂಷಿತನಾದ, ಶಂಖದಂತೆ ಕುತ್ತಿಗೆಯುಳ್ಳ, ತೊಂಡೆಯ ಹಣ್ಣಿನಂತೆ ಶೋಭಿಸುವ ತುಟಿಗಳುಳ್ಳ, ಕುಂದಕಮಲದ ಮೊಗ್ಗೆಯಂತೆ ದಂತಗಳುಳ್ಳ, ಕನ್ನಡಿಯಂತೆ ದೃಶ್ಯವೂ ಸೂಕ್ಷ್ಮವೂ ಆದ ಗಂಡಸ್ಥಲಯುಗ್ಮ (ಕಪೋಲದ್ವಯ) ದಿಂದ ಸುಮಂಡಿತನಾದ, (38) ಉತ್ತಮವಾದ ಮೂಗು, ತರೆದಿರುವ ಕಣ್ಣಿನ ರೆಪ್ಪೆಗಳು, ಮನೋಹರವಾದ ಹುಬ್ಬುಗಳು, ಕರುಣಾಪೂರ್ಣ ದೃಷ್ಟಿಯುಳ್ಳ ಕಣ್ಣುಗಳುಳ್ಳ, ಶರತ್ಕಾಲದ ಪೂರ್ಣ ಚಂದ್ರನಂತೆ ಶೋಭಿಸುವ ವದನ, ಸುತ್ಯವಾದ ನೀಲವರ್ಣದ ಕೂದಲು ಇವುಗಳುಳ್ಳ (39) ಅಸದೃಶವಾದ ತಿಲಕದಿಂದಕೂಡಿದ, ರತ್ನಖಚಿತವಾದ ಕರ್ಣಕುಂಡಲ ದಿಂದ ಮಂಡಿತನಾದ, ಹೊಳೆಯುವ ರತ್ನಕಿರೀಟದಿಂದ ಕೂಡಿದ–ಹೀಗೆ ಸಮಸ್ತ

ಅತುಲ್ಯತಿಲಕೋಪೇತೋ ರತ್ನಕುಂಡಲಮಂಡಿತಃ ।
ಸ್ಫುರದ್ರತ್ನಕಿರೀಟೀ ಚ ಸರ್ವಲಕ್ಷಣಸಂಯುತಃ ॥40॥

ಜಗದ್ವಿಲಕ್ಷಣಃ ಶ್ರೀಮಾನ್ ಮದ್ಬಿಂಬೋ ನಿತ್ಯಚಿತ್ಸುಖಃ ।
ಸೂರ್ಯಕೋಟಿಪ್ರತೀಕಾಶಶ್ಚಂದ್ರಕೋಟಿಸುಶೀತಲಃ ॥41॥

ಅನಂತವೇದೈರ್ಬ್ರಹ್ಮಾದ್ಯೈರವೇದ್ಯೋಽಪ್ರಾಕೃತೋ ಹರಿಃ ।
ಶ್ರೀಧರಾಭ್ಯಾಂ ಸಮಾಶ್ಲಿಷ್ಟೋ ಬ್ರಹ್ಮರುದ್ರೇಂದ್ರಸೇವಿತಃ ॥42॥

ಪೂರ್ಣಾನಂದಜ್ಞಾನದಯಾಮೂರ್ತಿಃ ಪರಮಮಂಗಲಃ ।
ಮಂಗಲಾಂಗೋ ಮಂಗಲಾಂಕೋ ಭಕ್ತಮಂಗಲದಾಯಕಃ ॥43॥

ಕರುಣಾಮೃತಪೂರ್ಣಾಭ್ಯಾಂ ಲೋಚನಾಭ್ಯಾಂ ಸಮೀಕ್ಷತೇ ।
ಕಾ ಚಿಂತಾ ಮ ಇಹಾಮುತ್ರ ಸರ್ವಾರಿಷ್ಟಂ ಹರತ್ಯಸೌ ॥44॥

ತ್ವತ್ಪಾದಾಂಬುಜವಿಶ್ವಾಸಃ ಸರ್ವಾಭೀಷ್ಟಂ ದದಾತಿ ಹಿ ।
ಇತಿ ಸ್ಮರನ್ನಹೋರಾತ್ರಂ ತ್ವಾಮಹಂ ಶರಣಂ ಗತಃ ॥45॥

ಉತ್ತಮೋತ್ತಮ ಲಕ್ಷಣಗಳಿಂದ ಯುಕ್ತನಾದ, (40) ಜಗದ್ವಿಲಕ್ಷಣನೂ, ನನ್ನ ಬಿಂಬಮೂರ್ತಿಯೂ, ನಿತ್ಯದಲ್ಲಿಯೂ ಜ್ಞಾನಾನಂದ ಸುಖಾತ್ಮಕನೂ, ಕೋಟಿಸೂರ್ಯರಂತೆ ಮಹಾ ಪ್ರಕಾಶಮಯನೂ, ಚಂದ್ರಕೋಟಿಯಂತೆ ಅತ್ಯಂತ ಪ್ರಶಾಂತನೂ, ಶೀತಲನೂ ಆದ, (42) ಅನಂತವೇದಗಳಿಂದಲೂ ಬ್ರಹ್ಮಾದಿದೇವತೆಗಳಿಂದಲೂ ಅವೇದ್ಯನಾದ, ಅಪ್ರಾಕೃತ ಸ್ವರೂಪನಾದ, ಶ್ರೀದೇವಿ ಭೂದೇವಿಯರಿಂದ ಸಮಾಶ್ಲಿಷ್ಟನಾದ, ಬ್ರಹ್ಮ ರುದ್ರೇಂದ್ರರಿಂದ ಸೇವಿತನಾದ, ಪಾಪಪರಿಹಾರಕನಾದ, ಪೂರ್ಣವಾದ ಆನಂದ ಜ್ಞಾನ ದಯಾ ಇವೇ ಮೊದಲಾದ ಕಲ್ಯಾಣಗುಣಗಳೇ ಮೂರ್ತಿಯಾಗಿವುಳ್ಳ, ಪರಮ ಮಂಗಲರೂಪಿಯಾದ, ಮಂಗಲ ಪ್ರದವಾದ ಅವಯುವಗಳುಳ್ಳ, ಮಂಗಲಮಯವಾ ಚಿಹ್ನೆಗಳಿಂದ ಅಲಂಕೃತನಾದ, ಭಕ್ತರಿಗೆ ಮಂಗಲದಾಯಕನಾದ. (43) ಶ್ರೀನಿವಾಸನು, ಕರುಣಾಮೃತಪೂರ್ಣನಾದ ಲೋಚನಗಳಿಂದ ನೋಡುತ್ತಿರುತ್ತಾನೆ. ಈ ಮಹಾನುಭಾವನು ನನ್ನ ಸರ್ವಾರಿಷ್ಟಗಳನ್ನು ಹರಣ ಮಾಡುತ್ತಾನೆ. ಆದ್ದರಿಂದ ಇಹಲೋಕ ಪರಲೋಕಗಳಲ್ಲಿ ಯಾವ ಚಿಂತೆಯೂ ನನಗಿರುವುದಿಲ್ಲ. (44) ಹೇ ಶ್ರೀನಿವಾಸನೇ! ನಿನ್ನ ಪಾದಾರವಿಂದಗಳಲ್ಲಿಯ ವಿಶ್ವಾಸವು ಸರ್ವಾಭೀಷ್ಟಗಳನ್ನು ಕೊಡುತ್ತದೆ. ಈ ರೀತಿಯಾಗಿ ಹಗಲು ರಾತ್ರಿಗಳೆನ್ನದೇ ನಿನ್ನನ್ನು ಸ್ಮರಣಮಾಡುತ್ತಾ ನಿನ್ನನ್ನು ಶರಣು ಹೊಂದಿದ್ದೇನೆ (45) ಹೇ ಸ್ವಾಮಿಯೇ! ನೀನು ಪೂರ್ಣಕಾಮನು, ಪರಿಪೂರ್ಣ ಐಶ್ವರ್ಯವುಳ್ಳವನಾಗಿರುವಿ. ಆದ್ದರಿಂದ ನಿನಗೆ ಯಾವ ಪ್ರಯೋಜನವಿಲ್ಲದಿದ್ದರೂ ಸಹ ನಿನ್ನ

ಭೋ ಸ್ವಾಮಿನ್ ಪೂರ್ಣಕಾಮಸ್ತ್ವಂ ಸಂಪೂರ್ಣೈಶ್ವರ್ಯವಾನಪಿ।
ಸ್ವಪ್ರಯೋಜನಹೀನೋಽಪಿ ಮಾಯಯಾ ಬಹುರೂಪವಾನ್॥46॥

ಲೋಕೋಪಕರಣಾಯೈವ ತ್ವಿತರಾಸಾಧ್ಯಕೃತ್ಯವಾನ್ ।
ಬಹ್ವದ್ರಿಧಾರಣಂ ಸೇತೋರನಾಯಾಸೇನ ಕಲ್ಪನಮ್ ॥47॥

ಬ್ರಹ್ಮಾಂಡಮದ್ಭುತಂ ಸ್ಥೂಲಂ ಕ್ಷಣೇನೋತ್ಪಾದಿತಂ ತ್ವಯಾ ।
ವಹಸಿ ತ್ವಮುಪಾಯೇನ ಬಹುಸೂಕ್ಷ್ಮಮೃದೂದರೇ ॥48॥

ಏವಂ ಮಹಾಭಾರವಹಸ್ಯ ವಿಶ್ವ-
ಕುಟುಂಬಿನಃ ಕರುಣಾಪೂರ್ಣಸಿಂಧೋಃ ।
ಮಮ ತ್ವದೀಯಸ್ಯ ಸುಸೂಕ್ಷ್ಮಲೇಶ-
ಲವಾತ್ಮಕಸ್ಯೋದ್ಧರಣಂ ಕಿಯತ್ ತೇ ॥49॥

ಶ್ರೀವೇಂಕಟೇಶ ಮತ್ಸ್ವಾಮಿನ್ ಜ್ಞಾನಾನಂದದಯಾನಿಧೇ ।
ದುಃಖಸಾಗರಮಗ್ನಂ ಮಾಂ ಸ್ವೀಯಂ ನೋದ್ಧರಸೇ ಕುತಃ ॥50॥

ಶ್ರೀನಿವಾಸ ಕೃಪಾಪೂರ್ಣ ಭಕ್ತಪೋಷಣದೀಕ್ಷಿತ ।
ಸಂಸಾರಾರಣ್ಯಪತಿತಂ ದಯಯಾ ನೇಕ್ಷಸೇ ಕುತಃ ॥51॥

ಸ್ವೇಚ್ಛೆಯಿಂದಲೇ ಬಹುರೂಪಗಳುಳ್ಳವನಾಗಿರುವಿ. (46) ಲೋಕದ ಉಪಕಾರಕ್ಕಾಗಿ, ಇತರರಿಂದ ಮಾಡಲು ಅಸಾಧ್ಯವಾದ ಕೃತ್ಯಗಳನ್ನು ಮಾಡಿರುವಿ. ಗೋವರ್ಧನ ಮುಂತಾದ ಅನೇಕ ಪರ್ವತಗಳನ್ನು ಎತ್ತಿಹಿಡಿದಿರುವಿ. ಅನಾಯಾಸವಾಗಿ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿರುವಿ (47) ಅದ್ಭುತವಾದ ಸ್ಥೂಲವಾದ ಬ್ರಹ್ಮಾಂಡವು ನಿನ್ನಿಂದ ಒಂದು ಕ್ಷಣದಲ್ಲಿ ಉತ್ಪಾದಿತವಾಗಿರುವದು, ಉದ್ಭವಿಸಿದ ಬ್ರಹ್ಮಾಂಡವನ್ನು ಉಪಾಯದಿಂದ ನಿನ್ನ ಅತಿ ಸೂಕ್ಷ್ಮವಾದ ಮತ್ತು ಮೃದುವಾದ ಉದರದಲ್ಲಿ ಧಾರಣ ಮಾಡಿರುವಿ.(48) ಈ ರೀತಿಯಾಗಿ ಮಹಾಭಾರವನ್ನು ಹೊತ್ತಿರುವ, ವಿಶ್ವಕುಟುಂಬಿಯಾದ, ಕರುಣಾ ಸಮುದ್ರನಾದ ನಿನಗೆ ನಿನ್ನವನೇ ಆದ, ಅತಿ ಸೂಕ್ಷ್ಮಲೇಶಲವಾತ್ಮಕವಾದ ನನ್ನ ಉದ್ಧರಣವು ಎಷ್ಟು ಭಾರದ್ದು? (ಮಹತ್ವದ್ದೇನಲ್ಲ) (49) ಹೇ ಜ್ಞಾನಾನಂದ ದಯಾನಿಧಿಯಾದ ನನ್ನ ಸ್ವಾಮಿಯಾದ ವೇಂಕಟೇಶನೇ ! ದುಃಖಸಾಗರದಲ್ಲಿ ಮಗ್ನನಾದ ಸ್ವೀಯನಾದ ನನ್ನನ್ನು ಏಕೆ ಉದ್ಧಾರ ಮಾಡುತ್ತಿಲ್ಲ? (50)ಭಕ್ತ ಪಾಲನೆಯಲ್ಲಿ ದೀಕ್ಷಿತನಾದ ಹೇ ಶ್ರೀನಿವಾಸನೇ ! ಕೃಪಾ ಪೂರ್ಣನಾದ ನೀನು ಸಂಸಾರವೆಂಬ ಅರಣ್ಯದಲ್ಲಿ ಪತಿತನಾದ ನನ್ನನ್ನು ದಯಾದೃಷ್ಟಿಯಿಂದ ಏಕೆ ನೋಡುತ್ತಿಲ್ಲ? (51) ಭಕ್ತಬಂಧುವೂ ದಯಾಸಿಂಧುವೂ ಆದ ಶ್ರೀನಿವಾಸನೇ ! ನಿನ್ನ

ಭಕ್ತಬಂಧೋ ದಯಾಸಿಂಧೋ ತ್ವತ್ಪಾದಾಬ್ಜೇ ನಮಾಮ್ಯಹಮ್ ।
ಸೂಕ್ತಾಸೂಕ್ತಮಿದಂ ಸರ್ವಮಪರಾಧಂ ಕ್ಷಮಸ್ವ ಮೇ ॥52॥

ವರಂ ವರದ ಮೇ ದೇಹಿ ಭಕ್ತಿಂ ತ್ವತ್ಪಾದಯೋಃ ಸ್ಮೃತಿಮ್ ।
ಸದಾ ನಾಮಾರ್ಥವಿಜ್ಞಾನಂ ದೇಹೀಹಾಮುತ್ರಸೌಖ್ಯದಮ್ ॥53॥

ಶ್ರೀಸ್ವಾಮಿತೀರ್ಥದುಗ್ಧಾಬ್ಧೌ ಶ್ವೇತದ್ವೀಪೇ ಸುಮಂಡಪೇ ।
ಶ್ರೀಭೂಭ್ಯಾಂ ವಿಹರನ್ವಿಷ್ಣೋ ಮುಕ್ತಿಂ ಭಕ್ತಾಯ ದೇಹಿ ಮೇ॥54॥

ಶ್ರೀಸೂತ ಉವಾಚ–

ಇತ್ಥಂ ಸ್ತುತ್ವಾ ವೇಂಕಟೇಶಂ ರಮೇಶಂ
ನತ್ವಾ ಸ್ತುತ್ವಾ ವೇದವೇದ್ಯಂ ಸುಭಕ್ತ್ಯಾ ।
ಭಕ್ತೇಭ್ಯೋಽಭೀಷ್ಟಾರ್ಥವರ್ಷಪ್ರಬದ್ಧಂ
ಸಾಷ್ಟಾಂಗಂ ತಂ ಪ್ರಣಮತ್ತ್ವೇಷ್ಟದೇವಮ್ ॥55॥

ಅಥ ಸ್ತೋತ್ರೇಣ ಸಂತುಷ್ಟಃ ಶ್ರೀನಿವಾಸಃ ಸತಾಂ ಗತಿಃ ।
ಮೇಘಗಂಭೀರಯಾ ವಾಚಾ ವರದಾನಮಥಾಬ್ರವೀತ್ ॥56॥

ಪಾದಾರವಿಂದಗಳನ್ನು ನಾನು ನಮಸ್ಕರಿಸುತ್ತೇನೆ. ಸೂಕ್ತಾಸೂಕ್ತವಾದ ಈ ಪ್ರಾರ್ಥನಾರೂಪವಾದ ನನ್ನ ಸರ್ವಾಪರಾಧವನ್ನು ನೀನು ಕ್ಷಮಿಸು. ವರಪ್ರದನಾದ ಹೇ ಸ್ವಾಮಿಯೇ ! ನನಗೆ ವರವನ್ನು ಕೊಟ್ಟು ನಿನ್ನ ಪಾದಾರಾವಿಂದಗಳಲ್ಲಿ ಭಕ್ತಿ, ನಿರಂತರ ನಿನ್ನ ಸ್ಮೃತಿಗಳನ್ನು ನನಗೆ ಕೊಡು. ನನ್ನ ಸ್ವಾಮಿಯೇ! ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ಸೌಖ್ಯ ಪ್ರದವಾದ ಶ್ರೇಷ್ಠವಾದ ಜ್ಞಾನವನ್ನು ಕೊಡು. ಶ್ರೀಸ್ವಾಮಿಪುಷ್ಕರಣಿಯೆಂಬ ಕ್ಷೀರಸಮುದ್ರದಲ್ಲಿ ಶ್ವೇತದ್ವೀಪದಂತಿರುವ ಉತ್ತಮವಾದ ಮಂಟಪದಲ್ಲಿ ಶ್ರೀ ಭೂದೇವಿಯಿಂದ ವಿಹಾರ ಮಾಡುತ್ತಿರುವ ಹೇ ವೆಂಕಟೇಶನೇ ! ಭಕ್ತನಾದ ನನಗೋಸ್ಕರವಾಗಿ ಮುಕ್ತಿಯನ್ನು ಕೊಡು. (54) ಸೂತರು ಹೇಳಿದರು–ಈ ರೀತಿಯಾಗಿ ರಮಾರಮಣನಾದ ವೆಂಕಟೇಶನನ್ನು ಸ್ತೋತ್ರಮಾಡಿ ಸದ್ಭಕ್ತನಾದ ದೇವಶರ್ಮನು ತೂಷ್ಣೀಭೂತನಾಗಿ, ತನ್ನ ಶ್ರೇಷ್ಠದೇವನಾದ, ಭಕ್ತರುಗಳಿಗೆ ಇಷ್ಟಾರ್ಥಗಳೆಂಬ ಮಳೆಯನ್ನು ಸುರಿಸುವುದರಲ್ಲಿ ಪ್ರಬುದ್ಧನಾದ, ಶ್ರೀವೆಂಕಟೇಶನನ್ನು ಕುರಿತು ಸಾಷ್ಟಾಂಗ ಪ್ರಣಾಮವನ್ನು ಮಾಡಿದನು. (55) ಅನಂತರದಲ್ಲಿ ಭಗವಂತನ ಈ ಸ್ತೋತ್ರದಿಂದ ಸಂತುಷ್ಟನಾದ, ಸಜ್ಜನರಿಗೆ ಗತಿಯಾದ ಶ್ರೀನಿವಾಸನು, ಮೋಡದ ಗರ್ಜನೆಯಂತೆ ಗಂಭೀರವಾದ ತನ್ನ ವಾಣಿಯಿಂದ ಈ ರೀತಿಯಾಗಿ ವರದಾನವನ್ನು ಹೇಳಿದನು (56) ಶ್ರೀ ಭಗವಂತನು ಹೇಳಿದನು– "ಹೇ ದ್ವಿಜಶ್ರೇಷ್ಠನೇ, ಈ ಉಪಾಸನಾರೂಪಕರ್ಮದಿಂದ ನಾನು ಪ್ರೀತನಾಗಿದ್ದೇನೆ. ಮಹದೈಶ್ವರ್ಯ, ಉತ್ತಮಸಿದ್ಧಿಗಳಿಗೆ ಕಾರಣೀಭೂತವಾದ ಉತ್ತಮವಾದ

ಶ್ರೀಭಗವಾನುವಾಚ–

ಪ್ರೀತೋಽಹಂ ತೇ ದ್ವಿಜಶ್ರೇಷ್ಠ ಮದುಪಾಸನಕರ್ಮಣಾ ।
ಮಹದೈಶ್ವರ್ಯಸಂಸಿದ್ಧಿಕಾರಣಂ ಸ್ತೋತ್ರಮುತ್ತಮಮ್ ॥57॥

ಕೃತವಾನಸಿ ತಸ್ಮಾತ್ತ್ವಂ ಮಾ ಭೈಷ್ಟಾತ್ರ ಪರತ್ರ ಹಿ ।
ಮತ್ಪ್ರಿಯಪ್ರಾಣಶಿಷ್ಯಸ್ಯ ಗುರುಪಾದಾವಲಂಬಿನಃ ॥58॥

ವಿಪನ್ನಾಶಃ ಸಂಪದಾಪ್ತಿರ್ಭೂಯಾತ್ತೇ ಮದನುಗ್ರಹಾತ್ ।
ಮಮ ಭಕ್ತಸ್ಯ ತೇ ಗೇಹೇ ಸ್ವರ್ಣವೃಷ್ಟಿರ್ದಿನೇ ದಿನೇ ॥59॥

ಅಯುತಾಯುಶ್ಚ ತೇ ದತ್ತಂ ಪುತ್ರಪೌತ್ರಾಸ್ತ್ವದಾಯುಷಃ ।
ಶತಪೂರುಷಪರ್ಯಂತಂ ಭುಕ್ತ್ವಾ ಭೋಗಾನನೇಕಶಃ ॥60॥

ತತೋ ಮತ್ಪದಮಾಪ್ನೋಷೀತ್ಯುಕ್ತ್ವಾ ತೂಷ್ಣೀಂ ಬಭೂವ ಹ ॥

ಶ್ರೀಸೂತ ಉವಾಚ–

ಭೋಃ ಶೌನಕಾದ್ಯಾ ಮುನಯೋ ನಿಸ್ಸಂಗಾಶ್ಚ ತಪಸ್ವಿನಃ ।
ಭಕ್ತವಶ್ಯೋ ವೇಂಕಟೇಶಃ ಪ್ರಸನ್ನೋ ಭವತಿ ಧ್ರುವಮ್ ॥62॥

ಯೂಯಂ ಗತ್ವಾ ವೇಂಕಟೇಶಂ ರಮೇಶಂ
ನತ್ವಾ ಸ್ತುತ್ವಾ ವೇದವೇದ್ಯಂ ಸುಭಕ್ತ್ಯಾ ।

ಸ್ತೋತ್ರವನ್ನು ನೀನು ಮಾಡಿರುವಿ. ಈ ಲೋಕದಲ್ಲಿಯೇ ಆಗಲಿ, ಪರಲೋಕದಲ್ಲಿಯೇ ಆಗಲಿ ನೀನು ಹೆದರಬೇಡ. ನನಗೆ ಅತ್ಯಂತ ಪ್ರೀತಿಪಾತ್ರನಾದ ಪ್ರಾಣದೇವರ ಪ್ರಿಯಶಿಷ್ಯನಾದ ಗುರುಪಾದಾವ ಲಂಬಿಯಾದ ನಿನಗೆ, ವಿಪತ್ತುಗಳ ನಾಶವೂ, ಸಂಪತ್ತುಗಳ ಪ್ರಾಪ್ತಿಯೂ, ನನ್ನ ಪರಮಾನುಗ್ರಹದಿಂದ ನಿನಗೆ ಶೀಘ್ರವಾಗಿ ಆಗುತ್ತದೆ. ನನ್ನ ಭಕ್ತನಾದ ನಿನ್ನ ಮನೆಯಲ್ಲಿ ದಿನ ದಿನದಲ್ಲಿಯೂ ಸುವರ್ಣ ವೃಷ್ಟಿಯಾಗುತ್ತದೆ, ನಿನಗೆ ಸುಖಭೋಗಕ್ಕಾಗಿ ಹತ್ತು ಸಹಸ್ರ ವರ್ಷ ಆಯುಷ್ಯವು ನನ್ನಿಂದ ದತ್ತವಾಗಿರುವುದು, ಅದರಂತೆ ನಿನ್ನ ಪುತ್ರಪೌತ್ರರೂ ಸಹ ಇಷ್ಟೇ ಆಯುಷ್ಯವುಳ್ಳ ವರಾಗುವರು. ನೂರು ಪುರುಷರ ಆಯುಷ್ಯ ಪರ್ಯಂತವಾಗಿ (ಅಂದರೆ ಹತ್ತು ಸಾವಿರ ವರ್ಷಗಳವರೆಗೆ) ಅನೇಕ ವಿಧವಾದ ಸುಖ ಭೋಗವನ್ನು ಮಾಡಿದ ಮೇಲೆ, ನನ್ನ ಸ್ಥಾನವಾದ ವೈಕುಂಠವನ್ನು ಹೊಂದುವವನಾಗುತ್ತೀ" ಎಂದು ಹೇಳಿ ಭಗವಂತನು ಅದೃಶ್ಯನಾದನು. (57–61) ಸೂತರು ಹೇಳಿದರು–ನಿಸ್ಸಂಗಿಗಳೂ ತಪಸ್ವಿಗಳೂ ಆದ ಶೌನಕಾದಿ ಮುನಿಗಳೇ ! ಭಗವಂತನು, ಭಕ್ತರಿಗೆ ಅತ್ಯಂತ ಶೀಘ್ರವಾಗಿ ಪ್ರಸನ್ನನಾಗುತ್ತಾನೆ (62) ನೀವೂ ಸಹ ವೆಂಕಟಾಚಲಕ್ಕೆ ಹೋಗಿ, ಅಲ್ಲಿ

ಭಕ್ತೇಭ್ಯೋಽಭೀಷ್ಟಾರ್ಥವರ್ಷಪ್ರವೃದ್ಧಂ
ಸಂಪ್ರೀಣಧ್ವಂ ತೇನ ವೋಽಭೀಷ್ಟಸಿದ್ಧಿಃ ॥63॥

ಶ್ರೀವೇಂಕಟೇಶಸ್ಯ ಕಥಾಮೃತಂ ತ್ವಿದಂ
ಮಾಹಾತ್ಮ್ಯಸಾರಂ ಸುತಪಸ್ವಿಗಮ್ಯಮ್ ।
ಶ್ರೀವೇಂಕಟೇಶಸ್ಯ ಮಹಾಪ್ರಿಯಪ್ರಿಯಂ
ಲೋಕೋತ್ತರಂ ದೇವಋಷಿಪ್ರಿಯಂ ಚ ॥64॥

ಸಮಸ್ತಪಾಪೌಘವಿನಾಶಕಾರಣಂ
ಸಮಸ್ತಪುಣ್ಯೌಘಸಮೃದ್ಧಿಕಾರಣಮ್ ।
ಶ್ರೀವೇಂಕಟೇಶಸ್ಯ ಪದಾರವಿಂದಯೋಃ
ಸದ್ಭಕ್ತಿವೃದ್ಧಾವಸಮಾನಕಾರಣಮ್ ॥65॥

ವಕ್ತುಃ ಶ್ರೋತುಃ ಪಾಠಕಸ್ಯ ಪಾರಾಯಣಪರಸ್ಯ ಚ ।
ಪರಾತ್ಪರೋ ವೇಂಕಟಟೇಶಃ ಪ್ರಸನ್ನೋ ಭವತಿ ಕ್ಷಣಾತ್ ॥66॥

ಸ್ತೋತ್ರೇಣೈವ ಹಿ ಸಂತುಷ್ಟೋ ವೇಂಕಟೇಶೋ ರಮಾಪತಿಃ ।
ಯಾನ್ಯಾನ್ಕಾಮಾನ್ಕಾಮಯಂತೇ ತಾಂಸ್ತಾನ್ಮುಕ್ತಿಂ ದದಾತಿ ಚ ॥67॥

ರಮಾ ರಮಣನಾದ ವೇದವೇದ್ಯನಾದ ಶ್ರೀನಿವಾಸನನ್ನು ಪ್ರೀತಿಗೊಳಿಸಿರಿ. ಅದರಿಂದ ನಿಮಗೆ ಅಭಿಷ್ಟ ಸಿದ್ಧಿಯಾಗುವುದು. (63) "ಶ್ರೀವೆಂಕಟೇಶ್ವರನ ಈ ಕಥಾಮೃತವು ಮಹಾತ್ಮೆಯ ಸಾರರೂಪವಾದದು. ಒಳ್ಳೆಯ ತಪಸ್ವಿಗಳಿಂದ ತಿಳಿಯಲಿಕ್ಕೆ ಶಕ್ಯವಾದದು. ದೇವತೆಗಳಿಗೂ ಜ್ಞಾನಿಗಳಿಗೂ ಪ್ರಿಯಕರವಾದ ಈ ಸ್ತೋತ್ರವು ಶ್ರೀವೆಂಕಟೇಶದೇವರಿಗೆ ಅತ್ಯಂತ ಪ್ರಿಯತಮವಾಗಿರುವದು. ಆದ್ದರಿಂದ ಲೋಕೋತ್ತರ (ಮುಕ್ತಿ ಮುಂತಾದ ಲೋಕ)ಗಳನ್ನು ಹೊಂದಿಸುವುದು"(64) ಈ ಸ್ತೋತ್ರವು ಸಮಸ್ತ ದುರಿತಗಳ ಸಮೂಹದ (ಪಾಪರಾಶಿಯ) ವಿನಾಶಕ್ಕೆ ಕಾರಣವಾಗಿರುವುದು. ಸಮಸ್ತ ಪುಣ್ಯರಾಶಿಯ ಸಮೃದ್ಧಿಗೆ ಕಾರಣವಾಗಿರುವುದು, ಶ್ರೀ ವೆಂಕಟೇಶನ ಪಾದಕಮಲಗಳಲ್ಲಿಯ ಭಕ್ತಿಯ ವೃದ್ಧಿಗೆ ಅಸದೃಶ ಕಾರಣವಾಗಿರುವುದು (65) ಈ ವೆಂಕಟೇಶ ಮಹಾತ್ಮೆಯನ್ನು ಹೇಳುವವನಿಗೆ, ಕೇಳುವವನಿಗೆ, ಪಠಣಮಾಡುವವನಿಗೆ, ಪಾರಾಯಣಮಾಡುವವರಿಗೆ ಪರಾತ್ಪರನಾದ ವೆಂಕಟೇಶನು ಒಂದು ಕ್ಷಣದಲ್ಲಿ ಪ್ರಸನ್ನನಾಗುತ್ತಾನೆ (66) ಈ ಸ್ತೋತ್ರದಿಂದ ಸಂತುಷ್ಟನಾದ, ರಮಾಪತಿಯಾದ ವೇಂಕಟೇಶನು, ಯಾರು ಯಾವ ಯಾವ ಕಾಮನೆಗಳನ್ನು ಬಯಸುತ್ತಾರೋ, ಅವರಿಗೆ ಆಯಾ ಕಾಮನೆಗಳನ್ನು ಪೂರ್ತಿಮಾಡುವುದರ ಜೊತೆಯಲ್ಲಿ ಮುಕ್ತಿಯನ್ನು ಸಹ

ಇತಿ ಶ್ರೀಮದಾದಿತ್ಯಪುರಾಣೇ ಶ್ರೀವೇಂಕಟೇಶಮಾಹಾತ್ಮ್ಯೇ ಶ್ರೀವೇಂಕಟೇಶಸ್ಯ ಸಕಲಾಭೀಷ್ಟವರಪ್ರದಾನ ಮಹಿಮಾನುವರ್ಣನಂ ನಾಮ ಪಂಚಮೋಽಧ್ಯಾಯಃ ಸಮಾಪ್ತಃ

ಶ್ರೀಕೃಷ್ಣಾರ್ಪಣಮಸ್ತು॥

* * *

ಶ್ರಿಯಃ ಕಾಂತಾಯಕಲ್ಯಾಣನಿಧಯೇ ನಿಧಯೇಽರ್ಥಿನಾಮ್ ।
ಶ್ರೀವೇಂಕಟನಿವಾಸಾಯ ಶ್ರೀನಿವಾಸಾಯ ಮಂಗಲಮ್ ॥

ಶ್ರೀವೇಂಕಟಾದ್ರಿನಿಲಯಃ ಕಮಲಾಕಾಮುಕಃ ಪುಮಾನ್ ।
ಅಭಂಗರವಿಭೂತಿರ್ನಸ್ತರಂಗಯತು ಮಂಗಲಮ್ ॥

* * *

ಕೊಡುತ್ತಾನೆ(67)

ಈ ರೀತಿಯಾಗಿ ಶ್ರೀಮದಾದಿತ್ಯ ಪುರಾಣಾಂತರ್ಗತವಾದ ಶ್ರೀ ವೆಂಕಟೇಶ ಮಹಾತ್ಮೆಯಲ್ಲಿ ಶ್ರೀ ವೆಂಕಟೇಶನ ಸಕಲಾಭಿಷ್ಟವರಪ್ರದಾನ ಮಹಿಮಾನುವರ್ಣನ ವೆಂಬ ಐದನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

|| ಶ್ರೀ ಬಾದರಾಯಣೋ ವಿಜಯತೇ ||

ಶ್ರೀ ಭವಿಷ್ಯೋತ್ತರ ಪುರಾಣಾಂತರ್ಗತಂ

# ಶ್ರೀವೇಂಕಟೇಶಮಾಹಾತ್ಮ್ಯಂ

ಕನ್ನಡ ಸರಳಾನುವಾದ ಸಹಿತ

# ಅಧ್ಯಾಯಾನುಕ್ರಮಣಿಕಾ

॥ ಶ್ರೀ ಬಾದರಾಯಣೋ ವಿಜಯತೇ ತರಾಮ್ ॥

॥ ಶ್ರೀಲಕ್ಷ್ಮೀವೇಂಕಟೇಶಃ ಪ್ರಸೀದತು ॥

ಶ್ರೀಭವಿಷ್ಯೋತ್ತರಪುರಾಣಾಂತರ್ಗತಂ

# ॥ ಶ್ರೀವೇಂಕಟೇಶಮಾಹಾತ್ಮ್ಯಮ್ ॥

## ಅಥ ಪ್ರಥಮೋಽಧ್ಯಾಯಃ

ಶ್ರೀಗುರುಭ್ಯೋ ನಮಃ । ಹರಿಃ ಓಂ

**ಶ್ರಿಯಃ ಕಾಂತಾಯ ಕಲ್ಯಾಣನಿಧಯೇ ನಿಧಯೇಽರ್ಥಿನಾಮ್ ।**
**ಶ್ರೀವೇಂಕಟನಿವಾಸಾಯ ಶ್ರೀನಿವಾಸಾಯ ಮಂಗಲಮ್ ॥ * ॥**

**ಶ್ರೀವೇಂಕಟಾಚಲಾಧೀಶಂ ಶ್ರಿಯಾಧ್ಯಾಸಿತವಕ್ಷಸಮ್ ।**
**ಶ್ರಿತಚೇತನಮಂದಾರಂ ಶ್ರೀನಿವಾಸಮಹಂ ಭಜೇ ॥ * ॥**

**ಬ್ರಹ್ಮರುದ್ರಾದಿವಂದ್ಯಂ ತ್ವಾಂ ಭಜೇ ವೇಂಕಟನಾಯಕಮ್ ।**
**ನಿವಾರಯಾಶ್ವನಿಷ್ಟಾನಿ ಸಾಧಯೇಷ್ಟಾನಿ ಮಾಧವ ॥*॥[1]**

॥ ಶ್ರೀ ಬಾದರಾಯಣೋ ವಿಜಯತೇ ತರಾಮ್ ॥

ಶ್ರೀ ಭವಿಷ್ಯೋತ್ತರ ಪುರಾಣಾಂತರ್ಗತ

## ಶ್ರೀವೆಂಕಟೇಶಮಹಾತ್ಮೆ

**ಮಂಗಲಾಚರಣ**

ಶ್ರೀ ಲಕ್ಷ್ಮೀರಮಣ, ಅನಂತಕಲ್ಯಾಣಗುಣಾಕರ, ಅರ್ಥಿಜನ ಇಷ್ಟಾರ್ಥ ನಿಧಿಯಾದ ಶ್ರೀವೇಂಕಟಾಚಲವಾಸಿಯಾದ ಶ್ರೀನಿವಾಸ ದೇವರಿಗೆ ಮಂಗಳವು.

ಶ್ರೀವೇಂಕಟಾಚಲಪತಿಯಾದ, ಲಕ್ಷ್ಮೀದೇವಿಯಿಂದ ಶೋಭಿತವಾದ ವಕ್ಷಃಸ್ಥಳವುಳ್ಳ, ಆಶ್ರಿತಜನಮಂದಾರನಾದ ಶ್ರೀನಿವಾಸದೇವರನ್ನು ನಾನು ಸ್ತುತಿಸುತ್ತೇನೆ.

ಶ್ರೀ ಬ್ರಹ್ಮರುದ್ರೇಂದ್ರಾದಿ ಸಕಲ ದೇವತಾವೃಂದದಿಂದ ವಂದ್ಯನಾದ, ಭಜಿಸುವವರ ಪಾಪಗಳನ್ನು ಪರಿಹಾರ ಮಾಡುವದರಲ್ಲಿ ಅಗ್ರಗಣ್ಯನಾದ, ಶ್ರೀವೇಂಕಟಾಚಲಾಧಿಪತಿಯಾದ ಶ್ರೀ ಶ್ರೀನಿವಾಸನೇ

---

1. ಮಾರ್ಕಾಂಡೇಯ ಪುರಾಣ. (4.6)

ಶೌನಕ ಉವಾಚ-

'ಸೂತ ಸೂತ ಮಹಾಭಾಗ ಸರ್ವಶಾಸ್ತ್ರವಿಶಾರದ ।
ತ್ವತ್ತೋಽಹಂ ಶ್ರೋತುಮಿಚ್ಛಾಮಿ ಮಾಹಾತ್ಮ್ಯಂ ಪುಣ್ಯವರ್ಧನಮ್ ॥*॥
ಕಥಿತಂ ರಂಗಮಾಹಾತ್ಮ್ಯಂ ತ್ವಯಾ ಹಸ್ತಿಗಿರೀಶಿತುಃ ।
ಜಗನ್ನಾಥಸ್ಯ ವೈ ವಿಷ್ಣೋರ್ಮಾಹಾತ್ಮ್ಯಮತುಲಂ ಮುನೇ ॥
ಇದಾನೀಂ ಶ್ರೋತುಮಿಚ್ಛಾಮಿ ಮಾಹಾತ್ಮ್ಯಂವೇಂಕಟೇಶಿತುಃ' ॥1॥

ಸೂತ ಉವಾಚ-

"ಸಾಧು ಪೃಷ್ಟಂ ತ್ವಯಾ ಬ್ರಹ್ಮಂಶ್ಚರಿತಂ ವೇಂಕಟೇಶಿತುಃ ।
ಯಥಾಶ್ರುತಂ ಮಯಾ ಪೂರ್ವಂ ವ್ಯಾಸೇನಾಮಿತತೇಜಸಾ ॥2॥
ತತ್ತಥಾಽಹಂ ಸಮಾಚಕ್ಷೇ ಸಾವಧಾನಮನಾಃ ಶೃಣು ।
ಪುರಾ ತು ಜನಕೋ ನಾಮ ರಾಜಾ ಪರಮಧಾರ್ಮಿಕಃ ॥3॥

! ನಿನ್ನನ್ನು ನಾವು ಯಾವಾಗಲೂ ಭಜಿಸುತ್ತೇವೆ. ಅತಿ ಶೀಘ್ರದಲ್ಲಿ ನಮ್ಮ ಸಕಲ ಅನಿಷ್ಟಗಳನ್ನು ನಿವಾರಿಸಿ, ಸಮಸ್ತ ಇಷ್ಟಾರ್ಥಗಳನ್ನು ಪೂರೈಸಿ ಅನುಗ್ರಹಿಸು" ಎಂಬ ಮಂಗಲಮಯ ಪದ್ಯದೊಂದಿಗೆ, ಶ್ರೀಶ್ರೀನಿವಾಸನಕಲ್ಯಾಣ ಕಥೆಯನ್ನೇ ಪ್ರಧಾನವಾಗಿ ತಿಳಿಸಹೊರಟ ಈ ಭವಿಷ್ಯೋತ್ತರ ಪುರಾಣದ ಶ್ರೀವೇಂಕಟೇಶಮಹಾತ್ಮೆಯು ಶ್ರೀ ಸೂತ–ಶೌನಕ ಸಂವಾದದೊಂದಿಗೆ ಪ್ರಾರಂಭಗೊಳ್ಳುತ್ತದೆ.

ಸೂತಪುರಾಣಿಕರನ್ನು ಭಗವತ್ಕಥಾಶ್ರವಣೋತ್ಸುಕರಾದ ಶೌನಕರು 'ಸರ್ವಶಾಸ್ತ್ರ ವಿಶಾರದರಾದ ಹೇ ಸೂತರೇ! ನಿಮ್ಮಿಂದಲೇ ಶ್ರೀರಂಗ, ಹಸ್ತಿಗಿರಿ, (ಕರಿಗಿರಿ) ವಡ್ಡೀಜಗನ್ನಾಥ ಕ್ಷೇತ್ರಗಳಲ್ಲಿಯ ಶ್ರೀವಿಷ್ಣುವಿನ ಅತ್ಯಂತ ಆಶ್ಚರ್ಯಕರವಾದ ಮಹಿಮೆಗಳನ್ನು ಶ್ರವಣಮಾಡಿರುವೆವು. ಸಮಸ್ತ ಪಾಪಪರಿಹಾರಕವಾಗಿ ಸಕಲಾಭೀಷ್ಟ ಪ್ರದಾಯಕವಾದ ಶ್ರೀವೇಂಕಟೇಶ್ವರನ ಮಹಾತ್ಮೆಯನ್ನು ಈಗ ನಿಮ್ಮಿಂದ ಕೇಳಬಯಸಿದ್ದೇವೆ ಎಂದು ಸಂಪ್ರಾರ್ಥಿಸಿದರು. (1)

ಶೌನಕರ ಪ್ರಶ್ನೆಯಿಂದ ಸಂತುಷ್ಟರಾದ ಸೂತರು 'ಹೇ ಬ್ರಾಹ್ಮಣಶ್ರೇಷ್ಠರಾದ ಶೌನಕರೇ! ಲೋಕಹಿತಾರ್ಥವಾಗಿ ನೀವು ಬಹು ಯೋಗ್ಯವಾದ ವಿಚಾರವನ್ನೇ ಕೇಳಿರುವಿರಿ. ಪೂರ್ವದಲ್ಲಿ ಸರ್ವಜ್ಞರಾದ ವೇದವ್ಯಾಸರಿಂದ ನಾನು ಕೇಳಿರುವದನ್ನೇ ನಿಮಗೆ ಯಥಾವತ್ತಾಗಿ ವಿವರಿಸುವೆನು' ಎಂದು ನುಡಿದು ಜನಕರಾಜನ ವೃತ್ತಾಂತವನ್ನು ಹೇಳುವ ಮೂಲಕವಾಗಿ ವೇಂಕಟೇಶ ಮಾಹಾತ್ಮೆಯನ್ನು ತಿಳಿಸುವರು. (2)

ಜನಕನೃಪವೃತ್ತಾಂತ

ಸತ್ಯವಾಕ್ ಸರ್ವಶಾಸ್ತ್ರೇಷು ಕೋವಿದಃ ಕೋಪವರ್ಜಿತಃ ।
ವಾಸುದೇವಪ್ರಸಾದಸ್ಯ ಮುಖ್ಯಪಾತ್ರಮಭೂನ್ನೃಪಃ ॥4॥

ನಿರ್ಮಮೋ ನಿತ್ಯತೃಪ್ತಶ್ಚ ನಿರಹಂಕೃತಿರಾತ್ಮದೃಕ್ ।
ತಸ್ಯ ಭ್ರಾತಾಽಭವತ್ಪೂರ್ವಂ ಕುಶಕೇತುರಿತಿ ಸ್ಮೃತಃ ॥5॥

ಕುಶಧ್ವಜಸ್ಯ ತನಯಾಸ್ತ್ರಯಸ್ತ್ರೈಲೋಕ್ಯಸುಂದರಾಃ[2] ।
ದುಹಿತೄಣಾಂ ತ್ರಯಂ[3] ತಸ್ಯ ಕುಶಕೇತೋರ್ಮಹಾತ್ಮನಃ ॥6॥

ಪೂರ್ವಕಾಲದಲ್ಲಿ, ಸತ್ಯಭಾಷೀ, ಧರ್ಮಿಷ್ಠ, ಸರ್ವಶಾಸ್ತ್ರವಿಶಾರದ, ಕಾಮ-ಕ್ರೋಧ-ಮದ-ಮತ್ಸರ-ಲೋಭ-ಮೋಹಗಳಿಂದ ವರ್ಜಿತ, ನಿತ್ಯತೃಪ್ತ, ಕರ್ತೃತ್ವ-ಸ್ವಾಮಿತ್ವಾಭಿಮಾನ ಶೂನ್ಯನಾದ, ಯದೃಚ್ಛಾಲಾಭಸಂತುಷ್ಟನಾದ ಹಾಗೂ ಆತ್ಮಜ್ಞಾನಿಯಾದ ಪರಮ ಧಾರ್ಮಿಕನಾದ, ಪರಮಾತ್ಮನ ಅನುಗ್ರಹಕ್ಕೆ ಮುಖ್ಯ ಪಾತ್ರನಾದ ಜನಕನೆಂಬ ಮಹಾರಾಜನು ಇದ್ದನು. (3-4) ಆ ಜನಕ ಚಕ್ರಾವರ್ತಿಗೆ ಕುಶಧ್ವಜನೆಂಬ ತಮ್ಮನಿದ್ದನು. ಭಗವದ್ಭಕ್ತನೂ, ಮಹಾತ್ಮನೂ ಆದ ಅವನಿಗೆ ತ್ರಿಲೋಕ ಸುಂದರರಾದ ವಿಚಿಕಿತ್ಸು, ವಿಕರ್ತನ ಮತ್ತು ಪ್ರತರ್ದನ[2] ಎಂಬ ಮೂರು ಜನ ಪುತ್ರರು ಮತ್ತು ಅಪ್ರತಿಮ ಸುಂದರಿಯರಾದ ಮೂರು ಜನ ಪುತ್ರಿ[3]ಯರಿದ್ದರು. (5-6)

---

2. ಅವರ ಹೆಸರುಗಳನ್ನು ವಾಮನ ಪುರಾಣವು ವಿಚಿಕಿತ್ಸು, ವಿಕರ್ತನ ಮತ್ತು ಪ್ರತರ್ದನ, ಎಂದು ತಿಳಿಸುತ್ತದೆ. 'ಮಮಾನುಜಸ್ಯ ಪುತ್ರಾಶ್ಚ ವಿಚಿಕಿತ್ಸುರ್ವಿಕರ್ತನಃ । ಪ್ರತರ್ದನಶ್ಚ ಇತಿ ತೇ ತ್ರಯಶ್ಚ ಶಿಶವಸ್ತಥಾ (ವಾಮನ.ಪು. 10.15)

3. ಇಲ್ಲಿ ಕುಶಧ್ವಜನಿಗೆ ಮೂರು ಜನ ಮಕ್ಕಳೆಂದು ವರ್ಣಿತವಾಗಿರುವದು. ಆದರೆ ವಾಮನ ಪುರಾಣದ ಮೊದಲನೆಯ ಅಧ್ಯಾಯದ 'ಮಮಾಪಿ ದುಹಿತಾ ಚೈಕಾ ಹ್ಯೂರ್ಮಿಲಾ ನಾಮ ನಾಮತಃ । ಕುಶಧ್ವಜಸ್ಯ ದುಹಿತೇ ಕನಿಷ್ಠಭ್ರಾತುರೇವ ಮೇ । ಮಾಂಡವೀ ಶ್ರುತಕೀರ್ತ್ಯಾಖ್ಯೇ ..... ..' ಎಂಬುವದರಿಂದ, ಮತ್ತು ರಾಮಾಯಣದ ಬಾಲಕಾಂಡದ ಅನುಸಾರವಾಗಿ 'ಅಸ್ಯ ಧರ್ಮಾತ್ಮನೋ ರಾಜನ್ ರೂಪೇಣಾಪ್ರತಿಮಂ ಭುವಿ । ಸುತಾದ್ವಯಂ ನರಶ್ರೇಷ್ಠ ಪತ್ನ್ಯರ್ಥಂ ವರಯಾಮಹೇ' ಎಂಬ ಶ್ಲೋಕದಿಂದ ಕುಶಧ್ವಜನಿಗೆ ಇಬ್ಬರು ಮಕ್ಕಳಿರುವರೆಂದು ಸ್ಪಷ್ಟವಾಗುವದರಿಂದ ವಿರೋಧವೆಂದು ತಿಳಿಯಬಾರದು. ಇಲ್ಲಿ ಹೀಗೆ ಸಮಾಧಾನವನ್ನು ತಿಳಿಯಬೇಕು. ಜನಕರಾಜನಿಗೆ ಊರ್ಮಿಳೆ ಎಂಬ ಔರಸ ಪುತ್ರಿಯೂ, ಸೀತೆಯೆಂಬ ಅಯೋನಿಜೆಯಾದ ಮಗಳೂ ಇದ್ದರು. ಕುಶಧ್ವಜನಿಗೆ ಮಾಂಡವಿ ಮತ್ತು ಶ್ರುತಕೀರ್ತಿಯೆಂಬಿಬ್ಬರು ಹೆಣ್ಣು ಮಕ್ಕಳು ಮತ್ತು ಮೂರು ಜನ ಗಂಡುಮಕ್ಕಳು. ಇವರಲ್ಲಿ ಸೀತೆಯು ಅಯೋನಿಜೆಯೂ ಮತ್ತು ಅಧಿಕ ಸರ್ವಗುಣೋಪೇತಳೂ ಸಹ ಆಗಿದ್ದರಿಂದ, ಊರ್ಮಿಳೆಯು ಹೆಚ್ಚಾಗಿ ಸಮಾನಗುಣಶೀಲವಯಸ್ಕರಾದ ಕುಶಧ್ವಜನ ಮಕ್ಕಳೊಂದಿಗೆ ಬೆಳೆದಿರುವದರಿಂದ ಅವಳೂ ಸಹ ಕುಶಧ್ವಜನ ಮಗಳಂತೆಯೇ ಆಗುವಳಾದ್ದರಿಂದ ಭವಿಷ್ಯೋತ್ತರ ಪುರಾಣವು ಕುಶಧ್ವಜನ ಮಗಳೆಂಬುದಾಗಿ ಸೇರಿಸಿ ತಿಳಿಸಿ, ಜನಕನಿಗೆ ಸೀತೆಯೊರ್ವಳೇ ಮಗಳೆಂದು ತಿಳಿಸಿರುವದು.

ಜನಕಸ್ಯಾಭವತ್ಪುತ್ರೀ ಜಾನಕೀ ನಾಮ ಸಾ ರಮಾ ।
ಭ್ರಾತ್ರಾ ಚ ಕಾರಯಾಮಾಸ ರಾಜ್ಯಂ ಜನಕ ಭೂಪತಿಃ ॥7॥

ಸ ಭ್ರಾತುರಾಜ್ಞಯಾ ರಾಜ್ಯಂ ಚಕಾರಾರ್ಯೇಷು ಭಕ್ತಿಮಾನ್ ।
ಕದಾಚಿಜ್ಜನಕೋ ರಾಜಾ ಮನಸೀತ್ಥಮಚಿಂತಯತ್ ॥8॥

"ಸುಖಮೇವ ಸದಾ[4] ಮೇ ಸ್ಯಾದ್ದುಃಖಂ ಮಾ ಭೂತ್ಕದಾಚನ ।
ದುಃಖಂ ನ ವೀಕ್ಷ್ಯೇ[5] ನೇತ್ರಾಭ್ಯಾಂ ಸುಖಂ ವೀಕ್ಷೇ ಸದಾತ್ಮನಃ ॥9॥

ಅಸಾಧುಸಮ್ಮತಂ ವಾಕ್ಯಂ ಶ್ರುತ್ವೇತ್ಥಮುದಿತಂ ಹರಿಃ ।
ದುಃಖಂ ಪ್ರದರ್ಶಯಾಮಾಸ ರಾಜ್ಯಮತ್ತಸ್ಯ ಭೂಪತೇಃ ॥10॥

ಕದಾಚಿದ್ದೈವಯೋಗೇನ ಕುಶಕೇತುರಗಾನ್ಮೃತಿಮ್[6] ।

ಜನಕಮಹಾರಾಜನಿಗೆ ಸಾಕ್ಷಾತ್ ಲಕ್ಷ್ಮೀದೇವಿಯೇ ಸಾಕುಪುತ್ರಿಯಾಗಿ ಅವಿರ್ಭವಿಸಿದಳು. ರಾಜ್ಯದಲ್ಲಿ ಆಸಕ್ತಿ ಇಲ್ಲದಿದ್ದರೂ ಪರಮಾತ್ಮನ ಸಂಕಲ್ಪ ಪರಿಪಾಲನೆಗಾಗಿ ಜನಕಮಹಾರಾಜನು ತನ್ನ ಸಹೋದರನಾದ ಕುಶಧ್ವಜನ ಸಹಾಯದಿಂದ ರಾಜ್ಯಭಾರವನ್ನು ನಿರ್ವಹಿಸುತ್ತಿದ್ದನು. ಕುಶಧ್ವಜನು ಹಿರಿಯರಲ್ಲಿ ಪರಮ ವಿಶ್ವಸ್ಥನಾಗಿ, ಸಹೋದರನಲ್ಲಿ ಭಕ್ತಿಯುಳ್ಳವನಾಗಿ ಅವನ ಅಪ್ಪಣೆಯಂತೆ ರಾಜ್ಯಭಾರವನ್ನು ನಿರ್ವಹಿಸುತ್ತಿದ್ದನು. (7–8)

ಹೀಗೆ ಪರಮಾತ್ಮನ ಅನುಗ್ರಹದಿಂದ ಸುಖಮಯ ಜೀವನವನ್ನು ಸಾಗಿಸುತ್ತಿರುವ ಜನಕಮಹಾರಾಜನಿಗೆ ದೈವಯೋಗದಿಂದ 'ಯಾವಾಗಲೂ ತನಗೆ ಸುಖವೇ ದೊರಯಬೇಕು. ದುಃಖವು ಸರ್ವಥಾ ಬರಬಾರದು' ಎಂಬ ವಿಚಾರವು ಹುಟ್ಟಿತು. (9)

### ಜನಕಾನುಭೂತದುಃಖವರ್ಣನ

ಭಗವಂತನ ಇಚ್ಛೆಯಿಂದಲೇ ಸುಖದುಃಖಗಳು ಜೀವರ ಯೋಗ್ಯತೆಗೆ ಅನುಸಾರವಾಗಿ ಲಭಿಸುವವೆಂಬ ಭಗವತ್ಸಂಕಲ್ಪವನ್ನು ಮರೆತು, ಅಸಾಧು ಸಮ್ಮತವಾದ ವಿಚಾರವು ಅವನಲ್ಲಿ ಒಡಮೂಡಿದ್ದರಿಂದ, ಭಗವದಿಚ್ಛೆಯಿಂದ ಅವನು ದುಃಖವನ್ನನುಭವಿಸುವ ಪ್ರಸಂಗವು ಬಂದೊದಗಿತು. (10) ಹೀಗಿರಲು ಒಂದು ಬಾರಿ ದೈವಯೋಗದಿಂದ ತಮ್ಮನಾದ ಕುಶಧ್ವಜನು ಮರಣವನ್ನು ಹೊಂದಿದನು. ಕುಶಕೇತುವಿನ ಹೆಂಡತಿಯು ಚಿಕ್ಕ ಚಿಕ್ಕ ಮಕ್ಕಳನ್ನು, ರಾಜ್ಯವನ್ನು

4. ಸದಾ= ಜಾಗ್ರತ್ಸ್ವಪ್ನಮನೋರಥೋನ್ಮಾದಜವಿಕಾರವಾತಗತಿಮಾಯಾ ಕ್ರೀಡಾ ಪರಿಹಾಸಾದ್ಯವಸ್ಥಾಸು (ವ್ಯಾ.)

5. ದುಃಖಂ ನ ವೀಕ್ಷ್ಯೇ ಎಂಬುವಲ್ಲಿಯ ದುಃಖಶಬ್ದಕ್ಕೆ ದುಃಖಕಾರಣವೆಂದು ಅರ್ಥೈಸಬೇಕು.

ಹತೇಽನುಜೇ ಚ ತದ್ಭಾರ್ಯಾ ತೇನ ಸಾಕಂ ಮಮಾರ ಚ ॥11॥

ರಾಜ್ಯಂ ಪುತ್ರಾಂಸ್ತತಸ್ತ್ಯಕ್ತ್ವಾ ತ್ವಗಾತ್ಪತಿಸಲೋಕತಾಮ್ ।
ತೌ ದಂಪತೀ ನೃಪೋ ದೃಷ್ಟ್ವಾ ತ್ಯಕ್ತಪುತ್ರೌ ಸುಖೋಚಿತೌ ॥12॥

ವಿಲಲಾಪ ಮಹಾರಾಜೋ ಭ್ರಾತರಂ ಭ್ರಾತೃವತ್ಸಲಃ ।
'ಹಾ ಭದ್ರೇ ಬಾಲಕಾಂಸ್ತ್ಯಕ್ತ್ವಾ ವೃದ್ಧಂ ಮಾಂ ಜಾನಕೀಂ ತಥಾ ॥13॥

ಕ್ವ ಗಚ್ಛಸಿ ವರಾರೋಹೇ ಪತಿಮಾಲಿಂಗ್ಯ ಮಂಗಲೇ ।
ಅಶೀತಿವರ್ಷಸಾಹಸ್ರಂ ಸಂಪ್ರಾಪ್ತಂ ಮಮ ಭಾಮಿನಿ ॥14॥

ಏತಾವತ್ಕಾಲಪರ್ಯಂತಂ ನ ದೃಷ್ಟೋ ದುಃಖಸಂಚಯಃ ।

ತೊರೆದು ಪತಿಯೊಂದಿಗೆ ಸಹಗಮನವನ್ನು ಮಾಡಿ ಪತಿಯ ಲೋಕವನ್ನೇ ಹೊಂದಿದಳು. (11–12) ಮೃತರಾದ ದಂಪತಿಯರನ್ನು ಮತ್ತು ಮಾತಾಪಿತೃಗಳ ಲಾಲನೆಯಿಂದ ವಂಚಿತರಾದ ಚಿಕ್ಕ ಚಿಕ್ಕ ಮಕ್ಕಳನ್ನು ನೋಡಿ ಅತ್ಯಂತ ದುಃಖಿತನಾದ ಜನಕ ಚಕ್ರವರ್ತಿಯು 'ಹೇ ಮಂಗಲೆಯೇ! ಬಾಲಕರಾದ ನಿನ್ನ ಮಕ್ಕಳನ್ನು, ವೃದ್ಧನಾದ ನನ್ನನ್ನು ಮತ್ತು ಲಕ್ಷ್ಮೀಸ್ವರೂಪಳಾದ ಜಾನಕಿಯನ್ನು ತೊರೆದು ಪತಿಯನ್ನಾಲಿಂಗಿಸಿಕೊಂಡು ಎಲ್ಲಿಗೆ ಹೊರಟಿರುವಿ?! ಎಂಬತ್ತು ಸಾವಿರ ವರ್ಷಗಳು ನನಗೀಗ ಜರುಗಿದರೂ ಸಹ ಇಲ್ಲಿಯವರೆಗೂ ಸ್ವಲ್ಪವೂ ದುಃಖವನ್ನು ಅನುಭವಿಸಿರಲಿಲ್ಲ. ಇಂದು ನಿಮ್ಮೀರ್ವರ ವಿಯೋಗದಿಂದ ದುಃಖವನ್ನು ನೋಡುವ ಪ್ರಸಂಗವು ಬಂದಿರುವದು' ಎಂದು ವಿಲಾಪವನ್ನು ಮಾಡಿದನು. (12–15) ಹೀಗೆ ಬಹುವಾಗಿ ದುಃಖಿಸಿದ ಜನಕ ಚಕ್ರವರ್ತಿಯು

6. ಸೀತಾವಿವಾಹ ಸಂದರ್ಭದಲ್ಲಿ ಕುಶಕೇತುವು ಬದುಕಿರುವದು ವಾಮನ ಪುರಾಣ ಮತ್ತು ರಾಮಾಯಣದ `ತಮಹಂ ದ್ರಷ್ಟುಮಿಚ್ಛಾಮಿ ಯಜ್ಞಗೋಪ್ತಾ ಸ ಮೇ ಮತಃ । ಪ್ರೀತಿಂ ಸೋಽಪಿ ಮಹಾತೇಜಾ ಇಮಾಂ ಭೋಕ್ತಾ ಮಯಾ ಸಹ' ಇವೇ ಮೊದಲಾದಪ್ರಮಾಣ ವಚನಗಳ ಅವಲೋಕನದಿಂದ ಸಿದ್ಧವಾಗುವದರಿಂದ ಇಲ್ಲಿ ವ್ಯಾಖ್ಯಾನಕಾರರು 'ದುಃಖಂ ಪ್ರದರ್ಶಯಾಮಾಸ' ಎಂಬುವದಕ್ಕೆ 'ಪ್ರತಿಬದ್ಧ ಪ್ರಾರಬ್ಧ ಶೇಷಾನುಗುಣಸಂಭೋಗಾವಸರೂಪಾಸಾಧು ವಚನ ಸಮಯಾನಂತರ ಏವ ದುಃಖಂ ದುಃಖಕಾರಣಂ ದರ್ಶಯಾಮಾಸ = ಸ್ವಪ್ನಮುತ್ಪಾದಯಾಮಾಸ' ಎಂಬುದಾಗಿ ಅರ್ಥೈಸಿ, ಪರಮಾತ್ಮನು ಜನಕರಾಜನ ಪ್ರತಿಬದ್ಧವಾದ ಪ್ರಾರಬ್ಧಭೋಗಶೇಷಗುಣ ಸಂಭೋಗದ ಗೋಸ್ಕರವಾಗಿ ದುಃಖವನ್ನುಂಟು ಮಾಡುವ ಸ್ವಪ್ನ, ಆಕಾಶಭಾಷಿತ, ಶಕುನಗಳ ಮೂಲಕವಾಗಿ ಜನಕರಾಜನಿಗೆ ದುಃಖವನ್ನು ತೋರಿಸಿದನು' ಎಂದು ವಿವರಿಸಿ ಚಾಕ್ಷುಷಾರ್ಥಕವಾದ 'ದೃಶಿರ್ ಪ್ರೇಕ್ಷಣೇ' ಎಂಬ ಧಾತುವಿಗೆ ಸ್ವಾಪ್ನಾರ್ಥಕತ್ವವೂ ಸಹ ಸಂಭವಿಸುವದೆಂದು 'ಭರ್ತುಃ ಪ್ರಿಯಂ ದ್ರೌಣರಿತಿ ಸ್ಮ ಪಶ್ಯನ್' ಎಂಬಲ್ಲಿಯ ತಾತ್ಪರ್ಯನಿರ್ಣಯೋಕ್ತಿ ಗನುಸಾರವಾಗಿ ವಿಸ್ತಾರವಾಗಿ ವಿವರಿಸಿ ಸಮರ್ಥಿಸಿರುವರು. ಇನ್ನು ಕಲ್ಪಭೇದವನ್ನಾಶ್ರಯಿಸಿ ಕಥಾವ್ಯತ್ಯಾಸವೂ ಸಹ ಇಲ್ಲಿ ಸಂಭಾವಿತ ವಾಗಿರುವದು.

ಅದ್ಯ ದೃಷ್ಟೋ ವರಾರೋಹೇ ತ್ವದ್ವಿಯೋಗೇನ ಕೇವಲಮ್' ॥15॥

ಇತಿ ಸಂಚಿಂತ್ಯ ಮನಸಿ ವಾರಂವಾರಂ ಮಹೀಪತಿಃ ।
ಚಕಾರ ಪ್ರೇತಕಾರ್ಯಾಣಿ ಪುತ್ರಾಣಾಂ ಚೈವ ಶೈಶವಾತ್ ॥16॥

ಮಾತೃಹೀನಾಂಸ್ತತೋ ಬಾಲಾನಾಲಿಂಗ್ಯಾಂಕೇ ನಿಧಾಯ ಚ ।
'ಭೋಃ ಪುತ್ರಾ ಬಾಲಭಾವೇ ತು ಮಾತೃಹೀನಾಶ್ಚಕರ್ಶಿತಾಃ ॥17॥

ಕಥಂ ಪಶ್ಯಾಮಿ ನೇತ್ರಾಭ್ಯಾಂ ಮಾತೃಹೀನಾಂಶ್ಚ ಬಾಲಕಾನ್' ।
ಇತಿ ಚಿಂತಾಪರಃ ಸೋಽಭೂತ್ತ್ಯಕ್ತರಾಜ್ಯೋಽತಿದುಃಖಿತಃ ॥18॥

ತ್ಯಕ್ತಾನ್ನಸ್ತ್ಯಕ್ತಭೋಗಶ್ಚ ತ್ಯಕ್ತನಿದ್ರೋಽತಿಕರ್ಶಿತಃ ।
ತಸ್ಯ ದುಃಖೋಪಶಾಂತ್ಯರ್ಥಂ ಶತಾನಂದಃ ಪುರೋಹಿತಃ ॥19॥

ಸಂಪ್ರಾಪ್ತೋ ದೈವಯೋಗೇನ ವಾಮದೇವಾನುಜೋ ಮುನಿಃ ।
ಪ್ರಾಪ್ತಂ ಪುರೋಹಿತಂ ದೃಷ್ಟ್ವಾ ರಾಜಾ ಪೂಜಾಮಕಲ್ಪಯತ್ ॥20॥

ತನ್ನ ತಮ್ಮನ ಮಕ್ಕಳಿನ್ನೂ ಶೈಶವಾವಸ್ಥೆಯಲ್ಲಿದ್ದುದರಿಂದ, ಕುಶಧ್ವಜನ ಉತ್ತರ ಕ್ರಿಯೆಗಳನ್ನು ತಾನೇ ನೆರವೇರಿಸಿದನು. (16)

### ಜನಕಕೃತಪ್ರಲಾಪ

ಮಾತಾಪಿತೃವಿಹೀನರಾದ ಬಾಲಕರನ್ನು ತೊಡೆಯ ಮೇಲೆ ಕೂಡಿಸಿಕೊಂಡ ಜನಕನು 'ಹೇ ಮಕ್ಕಳೇ! ಬಾಲ್ಯದಲ್ಲಿಯೇ ತಾಯಿಯನ್ನು ಕಳೆದುಕೊಂಡು ಬಹುವಾಗಿ ದುಃಖಿತರಾಗಿರುವಿರಿ. ಅನಾಥರಾದ ನಿಮ್ಮನ್ನು ನನ್ನ ಕಣ್ಣುಗಳಿಂದ ಹೇಗೆ ವೀಕ್ಷಿಸಲಿ? ಎಂದು ಬಹುವಾಗಿ ಚಿಂತಿಸಿದನು. ಅನಾಥಮಕ್ಕಳ ರಕ್ಷಣೆ, ರಾಜ್ಯಭಾರವೆಲ್ಲವನ್ನು ಜನಕಮಹಾರಾಜನೇ ನಿರ್ವಹಿಸಬೇಕಾಗಿ ಬಂದುದರಿಂದ ಜನಕ ಮಹಾರಾಜನು ಬಹುದುಃಖ ವನ್ನು ನೋಡುವಂತಾಯಿತು. ಇಲ್ಲಿಯವರೆಗೂ ಯಾವ ದುಃಖವನ್ನು ಕಂಡರಿಯದ ಜನಕ ಮಹಾರಾಜನು ಬಹುಚಿಂತಾ ಕ್ರಾಂತನಾಗಿ, ರಾಜ್ಯವ್ಯಾಪಾರಗಳನ್ನು ತ್ಯಾಗಮಾಡಿದನು. ಅನ್ನ–ಆಹಾರ–ವಿಹಾರ–ನಿದ್ರಾದಿ ಗಳನ್ನು ತ್ಯಾಗಮಾಡಿದನಾದ್ದರಿಂದ ಅತ್ಯಂತ ಕೃಶನಾದನು. (17–19)

### ಜನಕ ಕೃತ ಶತಾನಂದ ಪ್ರಾರ್ಥನಾ

ರಾಜ್ಯ ಅನ್ನ ನಿದ್ರೆಗಳನ್ನು ತೊರೆದು ದುಃಖಿತನಾಗಿ ದುಃಖಶಾಂತ್ಯರ್ಥವಾಗಿ ಆಲೋಚಿಸುತ್ತಿರಲು, ರಾಜನ ದುಃಖಶಮನಾರ್ಥವಾಗಿ ವಾಮದೇವ ಋಷಿಯ ತಮ್ಮಂದಿರಾದ ಶತಾನಂದ

ಸಂಪೂಜಿತೋ ಮುನಿವರೋ ನಿವಿಷ್ಟೋ ಮೃಗಚರ್ಮಣಿ ।
ತತಃ ಕಾಲೋಚಿತಾಂ ವಾರ್ತಾಂ ಕಥಯಾಮಾಸ ಗೌತಮಿಮ್ ॥21॥

ಜನಕ ಉವಾಚ–

"ಶತಾನಂದ ಮಹಾಪ್ರಾಜ್ಞ ಕಾ ಗತಿಃ ಸ್ಯಾದಿತೋ ಮಮ ।
ವೃದ್ಧತ್ವಾದಾತ್ಮನಶ್ಚೈವ ಪುತ್ರಾಣಾಂ ಚೈವ ಶೈಶವಾತ್ ॥22॥

ಕನ್ಯಕಾರತ್ನಬಾಹುಲ್ಯಾದ್ಧತಬಂಧೋರ್ಮಹಾಮುನೇ ।
ಬಹವಃ ಶತ್ರವಃ ಸಂತಿ ರಾವಣೇಂದ್ರಜಿದಾದಯಃ ॥23॥

ತೇಭ್ಯೋ ಯುದ್ಧಂ ಕಥಂ ದಾಸ್ಯೇ ಹ್ಯಸಹಾಯೋಽತಿಜೀರ್ಣವಾನ್।
ದಿವಾನಕ್ತಂ ಸಮಾಯಾತಿ ರಾವಣಃ ಕೇನ ಹೇತುನಾ ॥24॥

ನ ಜಾನೇ ಮುನಿವರ್ಯಾಹಂ ಪ್ರಜ್ಞಾಚಕ್ಷು[7]ರ್ನ ವಿದ್ಯತೇ ।
ನಿಮಿತ್ತಮೇಕಂ ಕಥಿತಂ ದ್ವಿತೀಯಂ ಪ್ರವದಾಮಿ ತೇ ॥25॥

ಸೀತಾಯಾಶ್ಚ ಸುರೂಪಾಯಾಃ ಸುರೂಪಃ ಪುರುಷಃ ಕಥಮ್ ।

ಪುರೋಹಿತರು ಅಲ್ಲಿಗೆ ಆಗಮಿಸಿದರು.

ದೈವಯೋಗದಿಂದ ತನ್ನಲ್ಲಿಗೆ ಪ್ರಾಪ್ತರಾದ, ಮಹಾಪ್ರಾಜ್ಞರಾದ ಶತಾನಂದ ಮುನಿಯನ್ನು ಜನಕಮಹಾರಾಜನು ಉಚಿತವಾಗಿ ಸಂಪೂಜಿಸಿ, ಕೃಷ್ಣಮೃಗ ಚರ್ಮದಲ್ಲಿ ಕುಳ್ಳರಿಸಿ, ಕಾಲೋಚಿತ ಸಂಭಾಷಣೆಯೊಂದಿಗೆ ತನ್ನ ಕಷ್ಟವನ್ನು ನಿವೇದಿಸತೊಡಗಿದನು. (21) 'ಹೇ ಮಹಾಪ್ರಾಜ್ಞರಾದ ಶತಾನಂದರೇ! ನನ್ನ ಮುಂದಿನ ಗತಿಯೇನೆಂದು ತಿಳಿಸಿರಿ. ನಾನು ಬಹುವೃದ್ಧ ನಾಗಿರುವೆನು. ನನ್ನ ಮಕ್ಕಳಿನ್ನೂ ಶಿಶುಗಳು. ಅವರ ಗತಿಯೇನು? (22) ನನ್ನ ಮಕ್ಕಳು ಚಿಕ್ಕವರು. ಮದುವೆಯಾಗ ಬೇಕಾದ ಕನ್ನಿಕೆಯರೂ ಇರುರು. ರಾವಣ ಇಂದ್ರಜಿತ ಮೊದಲಾದ ಪ್ರಬಲ ಶತ್ರುಗಳು ಮೇಲಿಂದ ಮೇಲೆ ಏನೋ ಒಂದು ನೆಪವಿಟ್ಟುಕೊಂಡು ಬರುತ್ತಿರುವರು. ಅಸಹಾಯಕನೂ, ವೃದ್ಧನೂ ಆದ ನಾನು ಅವರೊಡನೆ ಯುದ್ಧವನ್ನು ಹೇಗೆ ಮಾಡೇನು? (24) ಇದು ನನ್ನ ದುಃಖಕ್ಕೆ ಮೊದಲನೆಯ ನಿಮಿತ್ತ. ಇನ್ನು ಎರಡನೆಯದನ್ನು ಹೇಳುವೆನು. ಕೇಳಿರಿ. ಜಗದ್ವಿಲಕ್ಷಣ ಸೌಂದರ್ಯವತಿಯಾದ ಸೀತೆಗೆ ಅನುರೂಪನಾದ ವರನು ಹೇಗೆ ದೊರಕುವನು? ಅದನ್ನು ತಿಳಿಸಿರಿ. (25–26) ನನ್ನ ಮಕ್ಕಳೆಲ್ಲರೂ ಒಂದೇ ರಾಜನ ಸೊಸೆಯರಾಗಿರಬೇಕು. ಎಂದರೆ

7. 'ಸ್ಮೃತಿರತೀತವಿಷಯಾ ಮತಿರಾಗಾಮಿಗೋಚರಾ । ಬುದ್ಧಿಸ್ತಾತ್ಕಾಲಿಕೀ ಜ್ಞೇಯಾ ಪ್ರಜ್ಞಾ ತ್ರೈಕಾಲಿಕೀ ಮತಾ' ಇತ್ಯಭಿಧಾನಮ್ ॥

ಲಭ್ಯತೇ ವದ ವಿಪ್ರೇಂದ್ರ ತೃತೀಯಂ ಪ್ರವದಾಮಿ ತೇ ॥26॥

ದೀರ್ಘಾಯುಷಶ್ಚ ಮೇ ಪುತ್ರಾಃ ಪುತ್ರ್ಯಶ್ಚಾಪಿ ಸಭರ್ತೃಕಾಃ ।
ಏಕದೇಶಾಧಿಪಸ್ಯೈವ ಸ್ನುಷಾಸ್ತಾಶ್ಚ ಭವಂತು ಮೇ ॥27॥

ಜಾಮಾತರಶ್ಚ ಚತ್ವಾರ ಏಕರಾಜಸುತಾಸ್ತಥಾ ।
ವರ್ಧಿತಂ ಚೈವ ಮೇ ರಾಜ್ಯಂ ಸ್ವಯಮೇವ ಪುರೋಹಿತ ॥
ಕೇನೋಪಾಯೇನ ವೈ ಭೂಯಾತ್ತದೇತತ್ಕಾರಣಂ ವದ" ॥29॥

ಶತಾನಂದ ಉವಾಚ–

'ಅಸ್ತಿ ಕಶ್ಚಿದ್ವಿಶೇಷೋಽಸ್ಮಿನ್ ಭೂಲೋಕೇ ಭೂಮಿಪಾಲಕ ।
ದುಹಿತುಸ್ತವ ಕಲ್ಯಾಣಂ ಸುಖದಂ ಶತ್ರುನಾಶನಮ್ ॥30॥

ವೈಕುಂಠಗಿರಿಮಾಹಾತ್ಮ್ಯಂ ಸಭವಿಷ್ಯಂ ಸಹೋತ್ತರಮ್[8] ।
ಕಲೌ ತತ್ಕೀರ್ತನಂ ಪುಣ್ಯಂ ಸರ್ವದುಃಖಹರಂ ಶಿವಮ್ ॥31॥

ನನ್ನ ನಾಲ್ಕು ಜನ ಅಳಿಯಂದಿರು ಒಂದೇ ರಾಜನ ಮಕ್ಕಳಾಗಿರಬೇಕು. ಅವರೆಲ್ಲರೂ ದೀರ್ಘಾಯುಷ್ಯವನ್ನು ಹೊಂದಿ ತಮ್ಮ ಪತಿಯರೊಂದಿಗೆ ಅನ್ಯೋನ್ಯ ವಾಗಿರಬೇಕು. (27) ನನ್ನ ರಾಜ್ಯವೆಲ್ಲವೂ ಸಹ ಬಹುಪ್ರಯತ್ನವಿಲ್ಲದೆಯೇ ತನ್ನಷ್ಟಕ್ಕೆ ತಾನೆ ಅಭಿವೃದ್ಧಿಯನ್ನು ಹೊಂದಿ ಪ್ರಜೆಗಳೆಲ್ಲರೂ ಸಹ ಬಹು ಸಂತುಷ್ಟರಾಗಿರಬೇಕು. ಇದೆಲ್ಲವೂ ಹೇಗೆ ಸಂಭವಿಸುವದೋ ಆ ಉಪಾಯವನ್ನು (ಮನೋಭೀಷ್ಟಪೂರಣಕಾರಣವನ್ನು) ನನಗೆ ತಿಳಿಸಿರಿ' ಎಂದು ನುಡಿದನು.(28,29)

### ಶತಾನಂದ ವರ್ಣಿತ ವೇಂಕಟಾಚಲ ಪ್ರಭಾವಃ

ಇದಕ್ಕುತ್ತರವಾಗಿ ಶತಾನಂದರು 'ಹೇ ಜನಕಚಕ್ರವರ್ತಿಯೇ! ನಿನ್ನ ಮಕ್ಕಳಿಗೆ ಕಲ್ಯಾಣವನ್ನುಂಟು ಮಾಡಿ, ನಿನ್ನ ಶತ್ರುಗಳನ್ನು ನಿವಾರಿಸಿ, ನಿನಗೆ ಸುಖವನ್ನುಂಟುಮಾಡುವ ಉಪಾಯವೊಂದು ಭೂಮಿಯಲ್ಲಿರುವದು.(30) ಭವಿಷ್ಯೋತ್ತರ ಪುರಾಣಾಂತರ್ಗತವಾದ ವೈಕುಂಠಗಿರಿಯ ಮಾಹಾತ್ಮ್ಯವೆಂಬ ವಿಶೇಷವು ಭೂಮಿಯಲ್ಲಿರುವದು. ಕಲಿಯುಗದಲ್ಲಿ ವೈಕುಂಠಗಿರಿಯ

8. 'ಯದ್ ಭವಿಷ್ಯೋ ದೈವಪರಃ' ಎಂಬ ನಿರುಕ್ತಿಗನುಸಾರವಾಗಿ ಭವಿಷ್ಯವೆಂದರೆ ದೈವಿಕವಾದ ಶ್ರೀನಿವಾಸನ ಕಲ್ಯಾಣಾದಿಗಳು ಯಾವ ಗ್ರಂಥದಲ್ಲಿ ಪ್ರತಿಪಾದ್ಯವೋ ಅದು ಭವಿಷ್ಯವೆನಿಸುವದು. ಇನ್ನು ಉತ್ತರವೆಂದರೆ ಯಾವ ಆಖ್ಯಾನದಲ್ಲಿ ಯಾವ ಅಂಶದಲ್ಲಿ ವಿಷಯಕ್ಕೆ ಪ್ರಾಚುರ್ಯತೆಯಿಂದ ಪರತತ್ತ್ವಾಭಿವ್ಯಕ್ತಿಗೆ ಕಾರಣವಾಗಿರುವದೋ ಅದು ಉತ್ತರ. ಈ ಪುರಾಣದಲ್ಲಿ ಇವೆರಡೂ ಅಂಶಗಳೂ ಸಹ ಇರುವವು.

ಧನಕಾಮಸ್ಯ ಧನದಂ ಪುತ್ರಕಾಮಸ್ಯ ಪುತ್ರದಮ್ ।
ರೋಗಾರ್ತಸ್ಯ ಚ ರೋಗಘ್ನಂ ಜ್ಞಾನಿನಾಂ ಜ್ಞಾನಸಾಧನಮ್ ॥31॥

ಯಚ್ಛ್ರುತ್ವಾ ಸರ್ವಲೋಕೇಶೋ ಬ್ರಹ್ಮಾ ಬ್ರಹ್ಮಪದಂ ಗತಃ ।
ನೀಲಕಂಠಸ್ತು ಯಚ್ಛ್ರುತ್ವಾ ನಿರ್ವಿಷಃ ಸುಖಮಾಪ್ತವಾನ್ ॥32॥

ವಜ್ರೀ ನಾಕಪದಂ ಪ್ರಾಪ್ತೋ ಯತ್ಕಥಾಶ್ರವಣಾದರಾತ್ ।
ಪದಾನ್ಯಾಪುರ್ಲೋಕಪಾಲಾ ಯತ್ಕಥಾಶ್ರವಣೇನ ವೈ ॥33॥

ಕಿಮುಕ್ತೇನ ವಿಶೇಷೇಣ ತದನಂತಫಲಂ ಶೃಣು" ।
ಇತ್ಯುಕ್ತೋ ಮುನಿನಾ ತೇನ ಜನಕೋ ವಾಕ್ಯಮಬ್ರವೀತ್ ॥34॥

ಜನಕ ಉವಾಚ –

'ವದ ವೈಕುಂಠಮಾಹಾತ್ಮ್ಯಂ ಕಲೌ ತಚ್ಚರಿತಂ ಕಥಮ್' ।

ಶತಾನಂದ ಉವಾಚ–

'ಕೃತೇ ವೃಷಾದ್ರಿಂ ವಕ್ಷ್ಯಂತಿ ತ್ರೇತಾಯಾಮಂಜನಾಚಲಮ್ ॥35॥

ಮಾಹಾತ್ಮೆಯ ಶ್ರವಣ–ಕೀರ್ತನಾದಿಗಳು ಸರ್ವದುಃಖ ಹರಣವನ್ನುಂಟುಮಾಡಿ, ಸುಖವನ್ನು–ಪುಣ್ಯವನ್ನು ಉಂಟುಮಾಡುವದು. ಧನವನ್ನು ಬಯಸುವವರಿಗೆ ಧನವನ್ನು, ಪುತ್ರರನ್ನು ಬಯಸುವವರಿಗೆ ಪುತ್ರರನ್ನು, ರೋಗಬಾಧಿತರಾದ ವ್ಯಕ್ತಿಗಳಿಗೆ ರೋಗದಿಂದ ವಿಮುಕ್ತಿಯನ್ನು ಉಂಟುಮಾಡುವದಲ್ಲದೇ ಜ್ಞಾನಿಗಳಿಗೆ ಜ್ಞಾನಸಾಧನವಾಗಿರುವದು. (31) ಈ ಮಹಾತ್ಮೆಯನ್ನು ಕೇಳಿದ ಸರ್ವಲೋಕೇಶನಾದ ಚತುರ್ಮುಖಬ್ರಹ್ಮನು ಬ್ರಹ್ಮಪದವನ್ನೂ, ನೀಲಕಂಠನು ವಿಷರಾಹಿತ್ಯವನ್ನೂ ಮತ್ತು ಸುಖವನ್ನು, ಇಂದ್ರನು ಸ್ವರ್ಗಾಧಿಪತ್ಯವನ್ನು, ಲೋಕಪಾಲಕರು ತಮ್ಮ ತಮ್ಮಗಳಿಗೆ ಉಚಿತವಾದ ಅಧಿಕಾರಗಳನ್ನು ಹೊಂದಿದರು. ಹೆಚ್ಚು ಹೇಳುವದೇನು? ಈ ವೆಂಕಟಗಿರಿಮಹಾತ್ಮೆಯು, ಶ್ರವಣ–ಪಠಣ–ಪಾಠನ ಪಾರಾಯಣಮಾತ್ರದಿಂದ ಅನಂತ ಫಲಪ್ರದವಾಗಿದ್ದು, ಯಾರು ಏನನ್ನುಬಯಸುವರೋ ಅದೆಲ್ಲವನ್ನೂ ದೊರಕಿಸಿಕೊಡುತ್ತದೆ. ಎಂಬುದಾಗಿ ತಿಳಿ' ಎಂದು ನುಡಿದರು. (32–34) ಇದನ್ನು ಕೇಳಿದ ಜನಕರಾಜನು ಶತಾನಂದರನ್ನು 'ಆ ವೈಕುಂಠಗಿರಿಯ ಮಾಹಾತ್ಮೆಯನ್ನು ನನಗೆ ತಿಳಿಸಿರಿ' ಎಂದು ನುಡಿದನು.

### ವೇಂಕಟಾಚಲ ನಾಮಭೇದವರ್ಣನ

ಆಗ ಶತಾನಂದರು 'ಈ ಪರ್ವತವು ಕೃತಯುಗದಲ್ಲಿ 'ವೃಷಭಾದ್ರಿ' ಯೆಂದೂ, ತ್ರೇತಾಯುಗದಲ್ಲಿ 'ಅಂಜನಾದ್ರಿ'ಯೆಂದೂ, ದ್ವಾಪರಯುಗದಲ್ಲಿ 'ಶೇಷಪರ್ವತ'ವೆಂದೂ, ಕಲಿಯುಗದಲ್ಲಿ

ದ್ವಾಪರೇ ಶೇಷಶೈಲೇತಿ ಕಲೌ ಶ್ರೀವೇಂಕಟಾಚಲಮ್ ।
ನಾಮಾನಿ ಯುಗಭೇದೇನ ಶೈಲಸ್ಯಾಸ್ಯ ಭವಂತಿ ಹಿ ॥36॥

ಜನಕ ಉವಾಚ–

ಚತುರ್ಯುಗೇ ತ್ವಯಾ ಪ್ರೋಕ್ತಂ ನಾಮ ಯದ್ಯದ್ಗಿರೇರ್ಮುನೇ ।
ತಸ್ಯ ತಸ್ಯ ಚ ವೈ ಹೇತುಂ ವಿಸ್ತರಾದ್ವದ ಮೇ ಗುರೋ ॥37॥

ಕೃತೇ ವೃಷಾಚಲ ಇತಿ ಕಥಂ ನಾಮ ಭವಿಷ್ಯತಿ ।

ಶತಾನಂದ ಉವಾಚ–

ಪುರಾ ತು ವೃಷಭೋ ನಾಮ ರಾಕ್ಷಸೋ ರೂಕ್ಷಕರ್ಮಕೃತ್ ॥38॥

ಆಕ್ರಮ್ಯ ಶೇಷಶೈಲಂ ಚ ತಾಪಸಾನಪ್ಯಬಾಧತ ।
ತೇನ ಸಂಕ್ಲಿಷ್ಟತಪಸಸ್ತದರ್ಥಂ ಶರಣಂ ಗತಾಃ ॥39॥

ಶ್ರೀನಿವಾಸಂ ಹೃಷೀಕೇಶಂ ಭಕ್ತಾನಾಮಭಯಂಕರಮ್ ।
ತುಷ್ಟುವುರ್ಹೃಷ್ಟಮನಸಃ ಸ್ರಷ್ಟಾರಂ ಸರ್ವಚೇತಸಾಮ್ ॥40॥

'ವೇಂಕಟಾಚಲ'ವೆಂದೂ ಯುಗಾನುಸಾರವಾಗಿ ನಾಮಭೇದದಿಂದ ಜಗತ್ತಿನಲ್ಲಿ ಪ್ರಸಿದ್ಧಿಯನ್ನು ಪಡೆದಿರುವುದು' ಎಂದು ನುಡಿದರು. (35–36) ಇದನ್ನಾಲಿಸಿದ ಜನಕನು 'ಹೇ ಶತಾನಂದರೇ! ನಾಲ್ಕು ಯುಗಗಳಲ್ಲಿ ಆ ವೈಕುಂಠಗಿರಿಗಿರುವ ಯಾವ ಹೆಸರುಗಳನ್ನು ಹೇಳಿದಿರೋ ಆ ಹೆಸರುಗಳು ಬರಲು ಕಾರಣ ವೇನೆಂಬುದನ್ನು ನನಗೆ ವಿಸ್ತಾರವಾಗಿ ತಿಳಿಸಿರಿ. ಕೃತಯುಗದಲ್ಲಿ ಇದಕ್ಕೆ ವೃಷಾಚಲ (ವೃಷಭಾಚಲ) ಎಂಬ ಹೆಸರುಂಟಾಗಲು ಕಾರಣವೇನು ಎಂಬುದನ್ನು ತಿಳಿಸಿರಿ'. ಎಂದು ಪ್ರಾರ್ಥಿಸಿದನು. (37)

### ವೃಷಭಾಸುರವೃತ್ತಾಂತ

ಪೂರ್ವಕಾಲದಲ್ಲಿ ಅತ್ಯಂತ ಕ್ರೂರಿಯಾದ ವೃಷಭನೆಂಬ ರಾಕ್ಷಸನು ಕ್ರೂರಕರ್ಮಗಳನ್ನು ಮಾಡುತ್ತಾ, ಶೇಷಾಚಲವನ್ನು ಆಕ್ರಮಿಸಿಕೊಂಡು, ಪರಮಸಾತ್ವಿಕರಾದ ತಪಸ್ವಿಗಳನ್ನು ಬಹಳವಾಗಿ ಪೀಡಿಸುತ್ತಿದ್ದನು. ರಾಕ್ಷಸನ ತಪೋಬಾಧೆಯನ್ನು ತಾಳಲಾರದೇ ಋಷಿಗಳು ಸರ್ವಸೃಷ್ಟಿಕರ್ತನಾದ ಭಕ್ತರಿಗೆ ಅಭಯಂಕರನಾದ, ಇಂದ್ರಿಯ ನಿಯಾಮಕನಾದ ಶ್ರೀ ಶ್ರೀನಿವಾಸನನ್ನು ಸಂತುಷ್ಟ ಮನಸ್ಸಿನಿಂದ ಸತತವಾಗಿ ಸ್ತುತಿಸಿದರು.(38–39) ಮುನಿಗಳ ಸ್ತುತಿಯಿಂದ ಭಗವಂತನು ಪ್ರಸನ್ನನಾಗಿ ಅವರೆದುರು ಪ್ರತ್ಯಕ್ಷನಾದನು. ಭಗವಂತನನ್ನು ನಮಿಸಿದ ಋಷಿಗಳು ಅವನನ್ನು ಮತ್ತೆ ಬಹುವಾಗಿ

ಪ್ರಾದುರ್ಭಭೂವ ಭಗವಾನ್ ಮುನೀನಾಂ ಪುರತೋ ಹರಿಃ ।
ವ್ಯಜ್ಞಾಪಯನ್ ಮುನಿಶ್ರೇಷ್ಠಾ ಅಸಕೃತ್ಕೃತಸಂಸ್ತವಾಃ ॥ 41॥

ಮುನಯಃ ಊಚುಃ–

'ಭಗವನ್ನರವಿಂದಾಕ್ಷ ವೃಷಭೋ ನಾಮ ರಾಕ್ಷಸಃ ।
ಸಂಬಾಧತೇ ಸದಾಕ್ರೂರಸ್ತಪೋಭಂಗಕರಃ ಖಲಃ ॥42॥

ತಸ್ಮಾದ್ರಕ್ಷ ಕ್ಷರಾತೀತ ಭಯಾದ್ರಾಕ್ಷಸಕಲ್ಪಿತಾತ್' ।
'ಬಾಢ'ಮಿತ್ಯುಕ್ತವಾನ್ ಕೃಷ್ಣೋ ದುಷ್ಟಮಭ್ಯದ್ರವದ್ರುಷಾ ॥43॥

ಸ ರಾಕ್ಷಸೋ ಮಹಾವೀರ್ಯಸ್ತೀರ್ಥೇ ತುಂಬುರುಸಂಜ್ಞಕೇ ।
ಸ್ನಾತ್ವಾ ತ್ರಿಷವಣಂ ಪುಣ್ಯಾಂ ಶಾಲಗ್ರಾಮಶಿಲಾಂ ನೃಪ ॥44॥

ನಾರಸಿಂಹಾತ್ಮಿಕಾಂ ದಿವ್ಯಾಂ ಸಕರಾಲಾಮಧೋಮುಖಾಮ್ ।
ನಿತ್ಯಮಾರಾಧಯೇಯಾಹಮಿತಿ ನಿಶ್ಚಿತ್ಯ ಪೂಜಯನ್ ॥45॥

ಪೂಜಾಂತೇ ಸ್ವಶಿರಃ ಪುಷ್ಪಂ ಖಡ್ಗೇನಾಹೃತ್ಯ ಭೂಪತೇ ।
ಸಮರ್ಪಯಾಮಾಸ ತತಸ್ತಚ್ಛಿರಃ ಪುನರಾಗತಮ್ ॥46॥

ಏವಂ ಪಂಚಸಹಸ್ರಾಣಿ ವರ್ಷಾಣಿ ವಿಗತಾನಿ ಚ ।
ತಸ್ಮಿನ್ ಕಾಲೇಽರವಿಂದಾಕ್ಷಃ ಪ್ರತ್ಯಕ್ಷಃ ಸಮಜಾಯತ ॥47॥

ಸ್ತುತಿಸಿ ಹೀಗೆಂದು ವಿಜ್ಞಾಪಿಸಿದರು. (40–41) 'ಹೇ ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀನಿವಾಸನೇ! ಅರವಿಂದಾಕ್ಷನೇ! ವೃಷಭ ನೆಂಬ ರಾಕ್ಷಸನು ಯಾವಾಗಲೂ ಕ್ರೂರಕರ್ಮಗಳನ್ನಾಚರಿಸುತ್ತಾ, ನಮ್ಮ ತಪಸ್ಸಿಗೆ ಭಂಗವನ್ನುಂಟುಮಾಡುತ್ತಾ ನಮಗೆ ಅತ್ಯಂತ ಬಾಧೆಯನ್ನು ಉಂಟುಮಾಡುತ್ತಿರುವನು. ಆದ್ದರಿಂದ ಹೇ ಸ್ವಾಮಿಯೇ! ರಾಕ್ಷಸನಿಂದ ಉಂಟಾದ ಭಯದಿಂದ ನಮ್ಮನ್ನು ರಕ್ಷಿಸು' ಎಂದು ನುಡಿದರು. ಭಗವಂತನು 'ಹಾಗೆಯೇ ಆಗಲಿ' ಎಂದು ಮುನಿಗಳಿಗೆ ಅಭಯವನ್ನಿತ್ತು, ರೋಷಯುಕ್ತನಾಗಿ, ಆ ರಾಕ್ಷಸನ್ನು ನೋಡುವದಕ್ಕಾಗಿ ಅವನಿದ್ದೆಡೆಗೆ ಧಾವಿಸಿದನು. ಆ ರಾಕ್ಷಸನು ಪ್ರತಿನಿತ್ಯದಲ್ಲಿಯೂ ತುಂಬುರುತೀರ್ಥದಲ್ಲಿ ತ್ರಿಕಾಲಗಳಲ್ಲಿ ಸ್ನಾನವನ್ನು ಮಾಡಿ, ಭಯಂಕರವಾದ, ಅಧೋಮುಖವಾದ, ಕರಾಳವಾದ ನರಸಿಂಹ ಸಾಲಿಗ್ರಾಮವನ್ನು (44) ನಿಶ್ಚಂಚಲ ಮನಸ್ಸಿನಿಂದ ಅರ್ಚಿಸಿ, ಅರ್ಚನಾ ನಂತರದಲ್ಲಿ ತನ್ನ ಶಿರಸ್ಸೆಂಬ ಪುಷ್ಪವನ್ನು ಖಡ್ಗದಿಂದ ಕತ್ತರಿಸಿ, ನರಸಿಂಹದೇವರಿಗೆ ಸಮರ್ಪಿಸುತ್ತಿದ್ದನು. ಕೂಡಲೇ ಆ ಶಿರಸ್ಸು ಆತನ ಕುತ್ತಿಗೆಯಲ್ಲಿ ಪುನಃ ಪೂರ್ವದಂತೆ ಬಂದು ಕೂಡುತ್ತಿತ್ತು. (45–46) ಈ ರೀತಿಯಾಗಿ ಐದು ಸಹಸ್ರ ವರ್ಷಗಳ

ಶಿಲಾಂತರ್ಯಾಮಿ ಭಗವಾನ್ ಶ್ರೀನಿವಾಸಃ ಸತಾಂ ಗತಿಃ ।
ತಮಾಲೋಕ್ಯ ಹೃಷೀಕೇಶಂ ವೃಷಭೋ ದಂಡವದ್ಭುವಿ ॥48॥

ಪಪಾತ ರಾಜಶಾರ್ದೂಲ ಸ ವಿಸಂಜ್ಞಾಮುಪೇಯಿವಾನ್ ।
ಮುಹೂರ್ತಾಂತೇ ಸಮುತ್ಥಾಯ ಪ್ರತ್ಯಭಾಷತ ಕೇಶವಮ್ ॥49॥

ವೃಷಭ ಉವಾಚ–

'ಕೇಶವಾನಂತ ಗೋವಿಂದ ಶ್ರೀನಿವಾಸ ಸುರೋತ್ತಮ ।
ನ ಚ ಮೋಕ್ಷಂ ನ ಚ ಸ್ವರ್ಗಂ ಪಾರಮೇಷ್ಠ್ಯಪದಂ ಹರೇ ॥50॥

ನ ಯಾಚೇ ಜಗತಾಂ ನಾಥ ಯುದ್ಧಭಿಕ್ಷಾಂ ಚ ದೇಹಿ ಮೇ ।
ದಶಾವತಾರವಿಭವಃ ಶ್ರುತಸ್ತೇ ವಿಕ್ರಮೋ ಹರೇ ॥51॥

ಅದ್ಯ ತಂ ಸತ್ಯಮಾಧತ್ಸ್ವ ವಿಕ್ರಮಂ ಪುರುಷೋತ್ತಮ' ।
ದೇವಸ್ತದ್ಭಾರತೀಂ ಶ್ರುತ್ವಾ ಕಿಂಚಿದ್ಧಾಸ್ಯಮುಖೋ ಹರಿಃ ॥52॥

[ಉವಾಚ ವಚನಂ ತಂ ಹ ರಾಕ್ಷಸಂ ಯುದ್ಧದುರ್ಮದಮ್ ।
ಶ್ರುತ್ವಾ ತದುಕ್ತವಾನ್ ಕೃಷ್ಣಸ್ತಥಾಸ್ತ್ವಿತ್ಯರಿಮರ್ದನಃ ॥53॥]

ನಿರಂತರ ಘೋರತಪಸ್ಸಿನಿಂದ ಸಾಲಿಗ್ರಾಮದಲ್ಲಿ ಅಂತರ್ಯಾಮಿಯಾದ ಪುಂಡರೀಕಾಕ್ಷನು ಪ್ರತ್ಯಕ್ಷನಾದನು. (47) ಆತನನ್ನು ಕಂಡ ವೃಷಭಾಸುರನು ಸಾಷ್ಟಾಂಗ ದಂಡವತ್ಪ್ರಣಾಮವನ್ನು ಮಾಡುತ್ತಾ ಅತಿ ಸಂತೋಷದಿಂದ ಮೂರ್ಛೆಯನ್ನು ಹೊಂದಿದನು. ಘಟಿಕಾದ್ವಯಾನಂತರದಲ್ಲಿ ಎಚ್ಚರಗೊಂಡ ರಾಕ್ಷಸನು ಪರಮಾತ್ಮನನ್ನು ಈ ರೀತಿಯಾಗಿ ಬೇಡಿಕೊಂಡನು. (49)

### ವೃಷಭಕೃತವರಯಾಚನಾ

'ಹೇ ಬ್ರಹ್ಮರುದ್ರಾದಿ ದೇವತೆಗಳಿಗೆ ಸುಖದಾಯಕನೇ! ಗೋವಿಂದನೇ! ದೇಶತಃ ಕಾಲತಃ ಗುಣತಃ ಅನಂತನೇ! ದೇವಾಧಿದೇವನೇ! ಶ್ರೀನಿವಾಸನೇ! ನಿನ್ನಿಂದ ನಾನು ಮೋಕ್ಷವನ್ನಾಗಲೀ ಅಥವಾ ಸ್ವರ್ಗವನ್ನಾಗಲಿ, ಅಥವಾ ಚತುರ್ಮುಖ ಬ್ರಹ್ಮ ದೇವರ ಪದವನ್ನಾಗಲೀ ಅಪೇಕ್ಷಿಸುವದಿಲ್ಲ. ಆದರೆ ಹೇ ಶ್ರೀನಿವಾಸನೇ! ನನಗೆ ಯುದ್ಧಭಿಕ್ಷೆಯನ್ನು ಕೊಡು. ದಶಾವತಾರಗಳಲ್ಲಿ ನೀನೆಸಗಿರುವ ಐಶ್ವರ್ಯ ವಿಕ್ರಮಗಳನ್ನು ಬಹುವಾಗಿ ಕೇಳಿರುವೆನು. ಅದನ್ನಿಂದು ನನ್ನೆದುರು ಸತ್ಯವನ್ನಾಗಿಸಿ ತೋರಿಸು. (ದಶಾವತಾರಗಳಲ್ಲಿ ನೀನು ತೋರಿರುವ ವಿಕ್ರಮಗಳನ್ನು ನನ್ನೊಂದಿಗಿನ ಯುದ್ಧದಲ್ಲಿ ತೋರಿಸು) (50–52)'

ತಯೋರ್ಯುದ್ಧಮಭೂತ್ತತ್ರ ವೃಷಭಶ್ರೀನಿವಾಸಯೋಃ ।
ಯತ್ಕೃತಂ ಶ್ರೀನಿವಾಸೇನ ತತ್ಕೃತಂ ವೃಷಭೇಣ ಚ ॥54॥

ತದದ್ಭುತಮಭೂತ್ತತ್ರ ದೇವಾನಾಂ ಪಶ್ಯತಾಮಪಿ ।
ತದ್ಯುದ್ಧಕೌಶಲಂ ದೃಷ್ಟ್ವಾ ಭಗವಾನ್ ಪರ್ಯಪೂಜಯತ್ ॥55॥

'ಭೋ ರಾಕ್ಷಸಕುಲೋತ್ಪನ್ನ ಪಶ್ಯ ಮೇ ಪೌರುಷಂ ಬಲಂ' ।
ಇತ್ಯುಕ್ತ್ವಾ ದರ್ಶಯಾಮಾಸ ಗರುಡಂ ವಿಕೃತಾಕೃತಿಮ್ ॥56॥

ತತ್ರಸ್ಥಂ ವಾಸುದೇವಂ ಚ ವಿಶ್ವರೂಪಿಣಮವ್ಯಯಮ್ ।
ಸಹಸ್ರಭುಜಸಂಯುಕ್ತಂ ಸಹಸ್ರಾಯುಧಭೂಷಿತಮ್ ॥57॥

ತನ್ಮಾಯಾಂ ರಾಕ್ಷಸೋ ದೃಷ್ಟ್ವಾ ಸ್ವಯಂ ಚ ಗರುಡಂ ಹರಿಮ್ ।
ದರ್ಶಯನ್ವ್ಯಂಜಯಾಮಾಸ ಸ್ವಮಾಯಾಂ ಸುರಮೋಹಿನೀಮ್ ॥58॥

ನಕ್ತಂಚರಸ್ಯ ಚರಿತಮತಿಕ್ರಾಂತುಂ ಕ್ಷಮೋಽಪ್ಯಯಮ್ ।
ಪ್ರಶಂಸನ್ ರಾಕ್ಷಸಂ ವೀರಂ 'ಸಾಧು ಸಾಧ್ವಿ'ತ್ಯಭಾಷತ ॥59॥

### ವೃಷಭಶ್ರೀನಿವಾಸರ ಯುದ್ಧ

ವೃಷಭಾಸುರನ ಈ ಮಾತುಗಳನ್ನು ಕೇಳಿದ ಶ್ರೀನಿವಾಸನು ನಗುಮುಖ ದಿಂದಲೇ ಯುದ್ಧದುರ್ಮದನಾದ ರಾಕ್ಷಸನಿಗೆ 'ಹಾಗೆಯೇ ಆಗಲಿ' ಎಂದು ನುಡಿದನು.(53) ವೃಷಭಾಸುರನಿಗೂ ಶ್ರೀನಿವಾಸನಿಗೂ ಘೋರವಾದ ಯುದ್ಧವು ಆರಂಭಗೊಂಡು ಶ್ರೀನಿವಾಸನು ಮಾಡಿದ್ದೆಲ್ಲವನ್ನು ವೃಷಭಾಸುರನು ಮಾಡಿ ತೋರಿಸುತ್ತಿರಲು ಅದನ್ನು ವೀಕ್ಷಿಸುತ್ತಿರುವ ದೇವತೆಗಳಿಗೂ ಸಹ ಅತ್ಯಾಶ್ಚರ್ಯವಾಯಿತು. (54–55) ವೃಷಭನ ಯುದ್ಧಕೌಶಲವನ್ನು ನೋಡಿದ ಭಗವಂತನು ಅವನನ್ನು ಶ್ಲಾಘಿಸಿ 'ಹೇ ರಾಕ್ಷಸ ಕುಲೋತ್ಪನ್ನನೇ! ನನ್ನ ಶಕ್ತಿಯನ್ನು ನೋಡು' ಎಂದು ನುಡಿದು, ಭಗವಂತನಾದ ಶ್ರೀನಿವಾಸನು ವಿಸ್ತೃತವಾದ ಆಕಾರವುಳ್ಳ ಗರುಡಾರೂಢನಾಗಿ, ವಿಶ್ವರೂಪಿಯಾಗಿ, ಸಹಸ್ರ ಭುಜ ಸಂಯುಕ್ತನಾಗಿ, ಸಹಸ್ರತೋಳುಗಳಲ್ಲಿಯೂ ಸಹ ಸಹಸ್ರಾಯುಧಗಳನ್ನು ಧರಿಸಿದ ತನ್ನ ರೂಪಗಳನ್ನು ತೋರಿಸಿದನು. (56–57) ಇದನ್ನು ಕಂಡ ವೃಷಭನು ದೇವತೆಗಳನ್ನೂ ಸಹ ಮೋಹಗೊಳಿಸುವ ರೀತಿಯಲ್ಲಿ ತನ್ನ ಮಾಯೆಯಿಂದ ತನ್ನನ್ನೇ ಗರುಡನನ್ನಾಗಿಯೂ ಮತ್ತು ಗರುಡಾರೂಢನಾದ ಭಗವಂತನನ್ನಾಗಿಯೂ ತೋರಿಸಿಕೊಂಡು ತನ್ನ ಪರವ್ಯಾಮೋಹಕವಾದ ಮಾಯೆಯನ್ನು ಹರಡಿದನು. (58) ರಾಕ್ಷಸನ ಪರಾಕ್ರಮವನ್ನು ಕ್ಷಣಾರ್ಧದಲ್ಲಿ ತಿರಸ್ಕರಿಸಲು ಸಮರ್ಥನಾಗಿದ್ದರೂ ಸಹ ಶ್ರೀನಿವಾಸನು ರಾಕ್ಷಸನ

'ರೇ ರೇ ರಾಕ್ಷಸವರ್ಯಾದ್ಯ ಚಕ್ರೇಣ ಶತನೇಮಿನಾ ।
ಹರಿಷ್ಯೇ ತೇ ಶಿರಃ ಕಾಯಾದ್ಯಥಾ ಪಕ್ವಫಲಂ ದ್ರುಮಾತ್' ॥60॥

ಇತ್ಯುಕ್ತೋ ದೇವರಾಜೇನ ವೃಷಭೋ ದಂಡವದ್ಭುವಿ ।
ಪ್ರಣಿಪತ್ಯಾಹ ವಿಶ್ವೇಶಮಸ್ತುವದ್ರಾಕ್ಷಸೇಶ್ವರಃ ॥61॥

ವೃಷಭ ಉವಾಚ–

'ಚಕ್ರಪಾಣೇ ನಮಸ್ತುಭ್ಯಂ ಚಕ್ರಸ್ಯ ಚರಿತಂ ಶ್ರುತಮ್ ।
ಯಚ್ಚಕ್ರೇಣ ಪ್ರತಪ್ತಸ್ತು ಮುಕ್ತಿಮೇತಿ[9] ನ ಸಂಶಯಃ ॥62॥

ಯಚ್ಚಕ್ರೇಣ ಪುರಾ ರಾಜಾ ಕೀರ್ತಿಮಾನ್[10] ಕೀರ್ತಿಮಾಪ್ತವಾನ್।
ತ್ವಚ್ಚಕ್ರೇಣ ಹತಃ ಶೀಘ್ರಂ ಗಚ್ಛಾಮಿ ತವ ಮಂದಿರಮ್' ॥63॥

ಪರಾಕ್ರಮವನ್ನು ಮೆಚ್ಚಿಕೊಂಡು 'ಸಾಧು ಸಾಧು' ಎಂದು ನುಡಿದು ತನ್ನ ಸಾಮರ್ಥ್ಯದ ಅರುಹನ್ನು ಅರಿವನ್ನು ಅವನಿಗೆ ಮಾಡಿಕೊಡಲು 'ಪಕ್ವವಾದ ಫಲವನ್ನು ವೃಕ್ಷದಿಂದ ಉದುರಿಸುವಂತೆ ನಿನ್ನ ದೇಹದಿಂದ ಶಿರಸ್ಸನ್ನು ಈ ಸುದರ್ಶನಚಕ್ರದಿಂದ ಕ್ಷಣಾರ್ಧದಲ್ಲಿಭೇದಿಸುವೆ'ನೆಂದು ತಿಳಿಸಿದನು.

### ವೃಷಭಪ್ರಾರ್ಥನಾ

ದೇವದೇವನಾದ ನಾರಾಯಣನಿಂದ ಹೀಗೆ ಹೇಳಿಸಿಕೊಂಡ ವೃಷಭಾಸುರನು ವಿಶ್ವೇಶ್ವರನಾದ ಭಗವಂತನಿಗೆ ದಂಡವತ್ಪ್ರಣಾಮವನ್ನು ಮಾಡಿ, ಅವನನ್ನು ನಾನಾರೀತಿಯಾಗಿ ಸ್ತೋತ್ರಮಾಡಿದನು. (61) 'ಹೇ ಸ್ವಾಮಿ! ಚಕ್ರಪಾಣಿಯಾದ ನಿನಗೆ ಪುನಃ ಪುನಃ ನಮಸ್ಕರಿಸುತ್ತೇನೆ. ಚಕ್ರದ ಚರಿತ್ರೆಯನ್ನು ಈಗಾಗಲೇ ನಾನು ಕೇಳಿರುವೆನು. ನಿನ್ನ ಚಕ್ರದ ಪ್ರಭಾವದಿಂದ ಪೂರ್ವದಲ್ಲಿ 'ಕೀರ್ತಿಮಾನ್' ಎಂಬ ರಾಜನು ಬಹಳಷ್ಟು ಕೀರ್ತಿಯನ್ನು ಹೊಂದಿದನು. ಚಕ್ರದಿಂದ ಪ್ರತಪ್ತನಾದವನು ಮುಕ್ತಿಯನ್ನು ಹೊಂದುವನೆಂಬುವದರಲ್ಲಿ ಸಂಶಯವಿಲ್ಲ. ನಿನ್ನ ಚಕ್ರದಿಂದ ಹತನಾದ ನಾನು ನಿನ್ನ ಮಂದಿರವನ್ನು

---

9. 'ಯೋ ಹ ವೈ ಲೋಕೇ ಭೂಮ್ನೋ ಧರ್ಮಾನನುತಿಷ್ಠಮಾನೋ ವಿಷ್ಣುನಾ ಚಕ್ರಂ ಧತ್ತೇಽಗ್ನಿರ್ವೈ ಸಹಸ್ರಾರಃ ಸಹಸ್ರನೇಮಿಃ ನೇಮಿನಾ ತಪ್ತತನುಃ ಸಾಯುಜ್ಯಲೋಕತಾಮಾಪ್ನೋತಿ' ಇತಿ ಶ್ರುತಿಸಿದ್ಧಮ್॥

10. ಕೀರ್ತಿಮಂತನ ಚರಿತ್ರೆಯು ಸ್ಕಾಂದಪುರಾಣದ ವೈಶಾಖ ಮಾಸ ಮಾಹಾತ್ಮೆಯಲ್ಲಿ ಉಕ್ತವಾಗಿರುವದು. ಪೂರ್ವದಲ್ಲಿ ಕೀರ್ತಿಮಂತನೆಂಬ ಇಕ್ಷ್ವಾಕು ವಂಶದ ರಾಜನು ಕಾಶೀ ಪಟ್ಟಣವನ್ನು ಶಾಸಿಸುತ್ತಿದ್ದನು. ಒಂದು ಬಾರಿ ಬೇಟೆಗೆಂದು ಅರಣ್ಯಕ್ಕೆ ತೆರಳಿದ್ದಾಗ ವಸಿಷ್ಠಮುನಿಯ ಶಿಷ್ಯರು ವೈಶಾಖ ಮಾಸದ ಧರ್ಮಗಳನ್ನಾಚರಿಸುತ್ತಿರುವದನ್ನು ಕಂಡು ತಾನು ಸಹ ವಸಿಷ್ಠರ ಉಪದೇಶದಂತೆ

ಏವಮುಕ್ತ್ವಾ ಹರೇಃ ಪಾದೌ ಪಸ್ಪರ್ಶ ವೃಷಭಾಸುರಃ ।
ವರಂ ಯಯಾಚೇ ವೃಷಭಃ 'ಶೈಲೋ ಮದಭಿಧೋऽಸ್ತ್ವಿ'ತಿ ॥64॥
ಸಮಾಲಿಂಗ್ಯ 'ಭವೇದೇವ'ಮಿತ್ಯುಕ್ತ್ವಾ ಹರಿಣಾऽಥ ಸಃ ।
ವಿಸೃಷ್ಟಚಕ್ರಸಂಛಿನ್ನಸ್ತ್ಯಕ್ತವಾನ್ ಸ್ವಕಲೇವರಮ್ ॥65॥
ತಸ್ಮಾದ್ವೃಷಭಶೈಲೋऽಯಂ ಕೃತೇ ಖ್ಯಾತಿಮುಪೇಯಿವಾನ್ ।
ಜನಕ ಉವಾಚ–
'ಕಥಮಂಜನಶೈಲೇತಿ ತ್ರೇತಾಯಾಂ ನಾಮ ಮೇ ವದ' ॥66॥

ಹೊಂದುವೆನು' (62–63) ಹೀಗೆ ನುಡಿದ ವೃಷಭಾಸುರನು ಭಗವಂತನ ಪಾದಾರವಿಂದಗಳಿಗೆ ವಂದಿಸಿ, 'ಈ ಪರ್ವತವು ನನ್ನ ಹೆಸರಿನಿಂದ ಪ್ರಸಿದ್ಧವಾಗಲಿ' ಎಂದು ಪರಮಾತ್ಮನಲ್ಲಿ ವರವನ್ನು ಬೇಡಿದನು. (64) ಪಾದ ಪ್ರಣತನಾದ ವೃಷಭಾಸುರನನ್ನು ಆಲಿಂಗಿಸಿದ ಭಗವಂತನು 'ಹಾಗೇಯೇ ಆಗಲಿ' ಎಂದು ನುಡಿದನು.

ವೃಷಭಾಸುರವಧ

ವರವನ್ನು ಕರುಣಿಸಿದ ಪರಮಾತ್ಮನು ಚಕ್ರಾಯುಧವನ್ನು ಬಿಡಲಾಗಿ ಚಕ್ರದಿಂದ ಸಂಭಿನ್ನವಾದ ಕಂಠವುಳ್ಳ ವೃಷಭಾಸುರನು ತನ್ನ ಶರೀರವನ್ನು ತ್ಯಜಿಸಿದನು. ಈ ಕಾರಣದ ದೆಸೆಯಿಂದ ವೇಂಕಟಾದ್ರಿಯು ಕೃತಯುಗದಲ್ಲಿ ವೃಷಭಾಚಲವೆಂಬ ಖ್ಯಾತಿಯನ್ನು ಪಡೆದುಕೊಂಡಿತು. (65)

---

ಆ ಧರ್ಮಗಳನ್ನು ಆಚರಿಸಿ, ತನ್ನ ಪ್ರಜೆಗಳಿಗೂ ಸಹ ಆಚರಿಸಲು ಆಜ್ಞೆಯಿತ್ತನು. ಆ ಪುಣ್ಯದಿಂದ ಯಾರೂ ಸಹ ನರಕಕ್ಕೆ ಹೋಗದಿದ್ದಾಗ ಕ್ರುದ್ಧನಾದ ಯಮನು ಕೀರ್ತಿಮಂತನೊಂದಿಗೆ ಯುದ್ಧಕ್ಕೆ ಬಂದು ಅವನನ್ನು ಸಂಹರಿಸಲು ಬ್ರಹ್ಮಾಸ್ತ್ರ-ವಜ್ರಾಯುಧದಿಂದ ಅಧಿಷ್ಠಿತವಾದ ತನ್ನ ಕಾಲದಂಡವನ್ನು ಅವನ ಮೇಲೆ ಪ್ರಯೋಗಿಸಿದಾಗ ಕೀರ್ತಿಮಂತನನ್ನು ರಕ್ಷಿಸಲು ಭಕ್ತವಾತ್ಸಲ್ಯಯುಕ್ತನಾದ ಪರಮಾತ್ಮನು ತನ್ನ ಸುದರ್ಶನ ಚಕ್ರವನ್ನು ಪ್ರಯೋಗಿಸಿದನು. ಆಗ ಆ ಚಕ್ರವು ಯಮನನ್ನು ಅವನ ಆಯುಧವನ್ನು ಹಿಮ್ಮೆಟ್ಟಿಸಿ ರಾಜನನ್ನು ರಕ್ಷಿಸುವದಲ್ಲದೇ ಕೀರ್ತಿಮಂತನಿಗೆ ವೈಷ್ಣವವ್ರತ ದೀಕ್ಷಾಬದ್ಧನೆಂದೂ, ಕಾಲಾಂತಕವಿಜಯಿಯೆಂದೂ, ವೈಕುಂಠವಿಹಾರಿ ಯೆಂದೂ ಮತ್ತು ಬಹು ಭಗವದ್ಭಕ್ತನೆಂಬ ಬಹುಕೀರ್ತಿಯನ್ನು ಉಂಟುಮಾಡಿತು. 'ವಿಷ್ಣುಮುಕ್ತಂ ತದಾ ಚಕ್ರಂ ಶೀಘ್ರಮಾಗತ್ಯ ತದ್ರಣಮ್ । ಯಮದಂಡೇನ ಸಂಯುದ್ಧಾ ಬ್ರಹ್ಮಾಸ್ತ್ರಂ ವಿನಿವಾರ್ಯ ಚ ॥ (ಸ್ಕಾಂ.ಪು, ವೈಶಾಖ ಮಾಹಾ. ಅಧ್ಯಾಯ 8-10 ರ ಅಭಿಪ್ರಾಯ)

ಶತಾನಂದ ಉವಾಚ–

ಪುರಾ ಕೇಸರಿಣಃ ಪತ್ನೀ ಹ್ಯಂಜನಾ ಕಂಜಲೋಚನಾ ।
ಅನಪತ್ಯತ್ವದುಃಖೇನ ಮತಂಗಮುನಿಮಾಗಮತ್ ॥67॥

ಆನಮ್ಯ ಮುನಿಶಾರ್ದೂಲಮನಪತ್ಯಾತಿಕರ್ಶಿತಾ ।
ಉವಾಚ ವಚನಂ ನೇತ್ರನೀರಸಿಕ್ತಕಲೇವರಾ ॥68॥

ಅಂಜನೋವಾಚ–

'ಅಹೋ ತಾಪಸಶಾರ್ದೂಲಾಪುತ್ರಾಯಾ ಮಮ ಕಾ ಗತಿಃ' ।
ಏವಮುಕ್ತೋಽಂಜನಾದೇವ್ಯಾ ಮತಂಗೋ ವಾಕ್ಯಮಬ್ರವೀತ್ ॥69॥

ಮತಂಗ ಉವಾಚ–

'ಪಂಪಾಯಾಃ ಪೂರ್ವದಿಗ್ಭಾಗೇ ಪಂಚಾಶದ್ಯೋಜನಾಂತರೇ ।
ನಾರಸಿಂಹಾಶ್ರಮಂ ದೇವಿ ವರ್ತತೇ ವಸುಧಾತಲೇ ॥70॥

ತಸ್ಯ ದಕ್ಷಿಣದಿಗ್ಭಾಗೇ ನಾರಾಯಣಗಿರೇಸ್ತಟೇ ।
ಉತ್ತರೇ ಸ್ವಾಮಿತೀರ್ಥಸ್ಯ ವರ್ತತೇ ಕ್ರೋಶಮಾತ್ರಕೇ ॥71॥

ವಿಯದ್ಗಂಗೇತಿ ಪ್ರಖ್ಯಾತಾ ತತ್ರ ಗಚ್ಛ ಯಥಾಸುಖಮ್ ।

### ಅಂಜನಾವೃತ್ತಾಂತ

ವೃಷಭಾಚಲವೆಂಬ ನಾಮ ಬರಲು ಕಾರಣವನ್ನು ತಿಳಿದ ಜನಕ ಮಹಾರಾಜನು 'ತ್ರೇತಾಯುಗದಲ್ಲಿ ಅಂಜನಾಚಲವೆಂಬ ಹೆಸರು ಬರಲು ಕಾರಣವೇನು ಎಂಬುದನ್ನು ನನಗೆ ಹೇಳಿರಿ' ಎಂದು ನುಡಿದನು.(66)

ಪೂರ್ವದಲ್ಲಿ ಕಪಿಶ್ರೇಷ್ಠನಾದ ಕೇಸರಿಯ ಹೆಂಡತಿಯಾದ ಅಂಜನಾ ದೇವಿಯು ಮಕ್ಕಳಿಲ್ಲವೆಂಬ ದುಃಖದಿಂದ ನೀರು ತುಂಬಿದ ಕಣ್ಣುಗಳುಳ್ಳವಾಗಿ, ಮತಂಗಮುನಿಗಳ ಸಮೀಪಕ್ಕೆ ಬಂದು, ಅವರಿಗೆ ನಮಸ್ಕರಿಸಿ 'ಹೇ ತಪಸ್ವಿಶ್ರೇಷ್ಠರಾದ ಋಷಿಗಳೇ! ಪುತ್ರರಹಿತೆಯಾದ ನನಗೆ ಮುಂದೇನು ಗತಿ? ಎಂದು ನುಡಿದಳು. (67–69)

ಆಗ ಮತಂಗ ಮಹರ್ಷಿಗಳು 'ಪಂಪಾಸರೋವರದ ಪೂರ್ವದಿಕ್ಕಿನಲ್ಲಿ ಐವತ್ತು ಯೋಜನೆಗಳ ದೂರದಲ್ಲಿ ನರಸಿಂಹಾಶ್ರಮವಿರುವದು. ಅದರ ದಕ್ಷಿಣ ದಿಕ್ಕಿನಲ್ಲಿರುವ ನಾರಾಯಣಾದ್ರಿಯಲ್ಲಿ ಸ್ವಾಮಿಪುಷ್ಕರಣಿಯ ಉತ್ತರ ಭಾಗದಲ್ಲಿ ಎರಡುಕ್ರೋಶ ದೂರದಲ್ಲಿರುವ ಆಕಾಶಗಂಗೆಯಲ್ಲಿ

ತತ್ರ ಸ್ನಾತ್ವಾಽಥ ಕಲ್ಯಾಣಿ ದ್ವಾದಶಾಬ್ದಂ ತಪಶ್ಚರ ॥72॥

ತೇನ ಪುಣ್ಯೇನ ತೇ ಪುತ್ರೋ ಭವಿಷ್ಯತಿ ಗುಣಾಧಿಕಃ' ।
ಮತಂಗೇನೈವಮುಕ್ತಾ ಸಾ ನಾರಾಯಣಗಿರಿಂ ಯಯೌ ॥73॥

ಕೃತ್ವಾ ಸ್ವಾಮಿಸರಃಸ್ನಾನಮಶ್ವತ್ಥಸ್ಯ ಪ್ರದಕ್ಷಿಣಮ್ ।
ವರಾಹರೂಪಿಣಂ ನತ್ವಾ ಪೀತ್ವಾ ತತ್ಸಲಿಲಂ ಶುಭಮ್ ॥74॥

ಆಕಾಶಗಂಗಾಮಾಸಾದ್ಯ ತಪಃ ಕರ್ತುಂ ಪ್ರಚಕ್ರಮೇ ।
ಮುನೀಂಶ್ಚಾಮಂತ್ರ್ಯ ಭರ್ತಾರಂ ವ್ರತಾರ್ಥಂ ಭಕ್ಷ್ಯವರ್ಜಿತಾ ॥75॥

ಉಪವಾಸರತಾ ಬಾಲಾ ಬಾಹ್ಯಭೋಗವಿವರ್ಜಿತಾ ।
ಕಾಷ್ಠವತ್ಪರ್ಯವಸ್ಥಾಪ್ಯ ಶರೀರಂ ಸ್ವಾತ್ಮನಃ ಶುಚಿ ॥76॥

ಪೂರ್ಣೇ ಸಂವತ್ಸರೇ ಜಾತೇ[12] ವಾಯುದೇವೋ ಮಹಾಬಲಃ ।

ಸ್ನಾನಮಾಡಿ, 'ದ್ವಾದಶಾಬ್ದವ್ರತ'[11]ವನ್ನಾಚರಿಸು. ಆ ವ್ರತದ ಪುಣ್ಯಪ್ರಭಾವದಿಂದ ನಿನಗೆ ಸದ್ಗುಣಗಣಪೂರ್ಣನಾದ ಪುತ್ರನು ಜನಿಸುವನೆಂದು ನುಡಿದರು. (70–72) ಅದರಂತೆ, ಮತಂಗ ಮುನಿಗಳ ವಚನದಂತೆ, ಅಂಜನೆಯು ನಾರಾಯಣ ಪರ್ವತಕ್ಕೆ ಬಂದಳು. ಅಲ್ಲಿಯೇ ವಾಸಮಾಡಿ ಪ್ರತಿ ನಿತ್ಯದಲ್ಲಿಯೂ ಸ್ವಾಮಿಪುಷ್ಕರಣಿಯಲ್ಲಿ ಸ್ನಾನ, ಅಶ್ವತ್ಥವೃಕ್ಷಕ್ಕೆ ಪ್ರದಕ್ಷಿಣೆ, ನಮಸ್ಕಾರ, ವರಾಹರೂಪೀ ಪರಮಾತ್ಮನ ದರ್ಶನ-ನಮನ, ತೀರ್ಥೋದಕಪಾನವನ್ನು ಮಾಡಿ, ಆಕಾಶಗಂಗೆಗೆ ಬಂದು ತಪಸ್ಸನ್ನಾಚರಿಸಲು ಪ್ರಾರಂಭಿಸಿದಳು. (73–75) ಆಹಾರವನ್ನು ಪರಿತ್ಯಜಿಸಿ ತಪೋನುಷ್ಠಾನಗೈಯಲು ತನ್ನ ಪತಿ ಹಾಗೂ ಸನ್ನಿಹಿತ ಋಷಿಗಳ ಅಪ್ಪಣೆಯನ್ನು ಪಡೆದು, ಉಪವಾಸ ವ್ರತಳಾಗಿ, ಬಾಹ್ಯಭೋಗಗಳನ್ನು ಪರಿತ್ಯಾಗಮಾಡಿ, ಪರಿಶುದ್ಧಳಾಗಿ, ಉಗ್ರವಾದ

---

11. ಅಬ್ದವ್ರತವಿಧಾನವು ಧರ್ಮಸಂಗ್ರಹ ವೆಂಬ ಗ್ರಂಥದಲ್ಲಿ ಉಕ್ತವಾಗಿರುವದು. `ಸ್ವಾಮಿಪುಷ್ಕರಿಣಿಯ ಸ್ನಾನ, ಅಶ್ವತ್ಥವೃತ್ತದ ಪ್ರದಕ್ಷಿಣೆ, ವರಾಹ ದೇವರ ನಮನ, ಅವರ ತೀರ್ಥಪ್ರಾಶನ ಇವು ನಾಲ್ಕನ್ನು ಒಂದು ದಿನದಲ್ಲಿ ಮೂರು ಬಾರಿ ಆಚರಿಸಿದರೆ ಅದಕ್ಕೆ ಕೃಚ್ಛ್ರವೆಂದು ಹೆಸರು. 30 ಕೃಚ್ಛ್ರಗಳಿಗೆ ಅಬ್ದವೆಂದೂ ಮತ್ತು ಆ ಅಬ್ದವು ಹನ್ನೆರಡುಬಾರಿ ಆವೃತ್ತವಾದಲ್ಲಿ ದ್ವಾದಶಾಬ್ದವೆಂದು ಕರೆಯಲ್ಪಡುವವು. `ಸ್ವಾಮಿತೀರ್ಥಸರಃಸ್ನಾನಮಶ್ವತ್ಥಸ್ಯ ಪ್ರದಕ್ಷಿಣಮ್ । ವರಾಹದೇವನಮನಂ ತತ್ತೀರ್ಥಪ್ರಾಶನಂ ತಥಾ । ಚತುರ್ವಿಧಾನಾಮೇತೇಷಾಮಬ್ದಸಂಖ್ಯಾ ಪ್ರಕಲ್ಪಯೇತ್ । ತ್ರಿಕಾಲಕೃತಮೇಕಸ್ಮಿನ್ ದಿನೇ ಸ್ನಾನಾದಿಕಂ ಚ ಯತ್ । ತದುಚ್ಯತೇ ಕೃಚ್ಛ್ರ ಇತಿ ತ್ರಿಂಶತ್ಕೃಚ್ಛ್ರೈರಬ್ದಸಂಜ್ಞಿತಾಃ । ಅಬ್ದೋ ಹಿ ದ್ವಾದಶಾವೃತ್ತೋ ದ್ವಾದಶಾಬ್ದಂ ವ್ರತಂ ಭವೇತ್ ॥

12. ಹಾಗಾದಲ್ಲಿ ಬ್ರಹ್ಮಾಂಡಪುರಾಣದ 'ಅತೀತೇ ಸಪ್ತಸಾಹಸ್ರವತ್ಸರಾಣಾಮನಂತರಮ್' (ಅ.5 ಶ್ಲೋ.22)

ಫಲಮಾಹೃತ್ಯ ಭಕ್ಷಾರ್ಥಂ ಪ್ರತ್ಯಹಂ ಹ್ಯದದಾನ್ಮರುತ್ ॥77॥

ಅಥೈಕಸ್ಮಿನ್ ದಿನೇ ವಾಯುಃ ಫಲೇ ವೀರ್ಯಮಪೂರಯತ್ ।
ವೀರ್ಯಗರ್ಭಂ ಫಲಂ ತಸ್ಯಾಃ ಪ್ರಾಕ್ಷಿಪತ್ಕರಸಂಪುಟೇ ॥78॥

ಫಲಂ ಸಾ ಮನ್ಯಮಾನಾ ಹಿ ಕ್ಷುಧಾರ್ತಾ ತದಭಕ್ಷಯತ್ ।
ತತೋ ಗರ್ಭಂ ಸಮುದಭೂದಂಜನಾಯಾಶ್ಚ ಭೂಮಿಪ ॥78॥

ಮುನೀನಾಮಭವದ್ಧರ್ಷೋ ವಾಯುರ್ಗರ್ಭಸಮುದ್ಭವಃ ।
ಅಥ ಸಾ ದಶಮಾಸಾಂತೇ ಸುಷುವೇ ಪುತ್ರಮುತ್ತಮಮ್ ॥79॥

ತಪಸ್ಸನ್ನು ಪ್ರಾರಂಭಿಸಿದಳು. (75–76)

ಅಂಜನಾವ್ರತಾಚರಣ–ಗರ್ಭಧಾರಣ

ಒಂದು ವರ್ಷಕಾಲವು ಪೂರ್ತಿಯಾಗಲು ದೇವೋತ್ತಮನಾದ ವಾಯುದೇವನು ಪ್ರತಿನಿತ್ಯವೂ ಒಂದು ಹಣ್ಣನ್ನು ಗಾಳಿಯ ಮುಖಾಂತರವಾಗಿ ಭಕ್ಷಣ ಮಾಡಲು ಅನುಗ್ರಹಿಸುತ್ತಿದ್ದನು. (77) ಒಂದು ದಿನ ವಾಯುದೇವರು ಹಣ್ಣಿನಲ್ಲಿ ವೀರ್ಯವನ್ನು ತುಂಬಿಸಿ[13] ವೀರ್ಯಪೂರಿತವಾದ ಹಣ್ಣನ್ನು ಅಂಜನಾ ದೇವಿಯ ಕೈಯಲ್ಲಿ ಹಾಕಿದನು. (78) ಕ್ಷುಧಾರ್ತಳಾದ ಅಂಜನೆಯು ಅದನ್ನು ಹಣ್ಣೆಂದು ತಿಳಿದು ಭಕ್ಷಣೆಮಾಡಿದಳು. ಇದರಿಂದ ಅಂಜನೆಯಲ್ಲಿ ಗರ್ಭವು ಉದ್ಭೂತವಾಯಿತು. (ಗರ್ಭವತಿಯಾದಳು.) (78) ವಾಯುದೇವರೇ ಅಂಜನೆಯ ಗರ್ಭದಲ್ಲಿರುವನೆಂದು ತಿಳಿದ ಮುನಿಗಳಿಗೆ ಬಹಳಷ್ಟು ಸಂತೋಷವಾಯಿತು. ವಾಯುದೇವರ ಪರಮಾನುಗ್ರಹ ಮಾತ್ರದಿಂದ ಆ ಅಂಜನೆಯು ದಶಮಾಸಾಂತ್ಯದಲ್ಲಿ ಸದ್ಗುಣಗಣ ನಿಧಿಯಾದ, ಸರ್ವಜ್ಞತಮನಾದ ಪುತ್ರನನ್ನು

---

ಏಳುಸಾವಿರ ವರ್ಷಗಳ ಅನಂತರದಲ್ಲಿ ವಾಯುದೇವರು ಅನುಗ್ರಹಿಸಿದರು' ಎಂಬುವದರೊಂದಿಗೆ ವಿರೋಧ ವೆಂದು ತಿಳಿಯಬಾರದು. ಅಲ್ಲಿಯ ವತ್ಸರ ಶಬ್ದವು 'ಸಂವತ್ಸರೋ ವತ್ಸರೋಽಬ್ದೋ ಹಾಯನೋಽಸ್ತ್ರೀ ಶರತ್ ಸಮಾಃ' ಎಂಬ ಅಮರಕೋಶದಂತೆ ಅಬ್ದಪರವಾಗಿರುವದು. ದ್ವಾದಶಾಬ್ದ ವ್ರತವೊಂದರಲ್ಲಿ 4320 ಸ್ನಾನಾದಿಗಳು ಸಂಭವಿಸುವವು. 'ಸಮುದಾಯೇ ವೃತ್ತಾ ಶಬ್ದಾ ಅವಯವೇಷ್ವಪಿ ವರ್ತಂತೇ' ಎಂಬ ನ್ಯಾಯಾನುಸಾರವಾಗಿ 360 ಸ್ನಾನಾದಿ ಸಮುದಾಯ ವಾಚಕವಾದ ಅಬ್ದಶಬ್ದವು ಅದರ ಘಟಕಗಳಲ್ಲಿಯೂ ಸಹ ರೂಢವಾಗಿರುವದು. 7000 ಅಬ್ದಗಳ ಅನಂತರದಲ್ಲಿ ಎಂದರೆ 19 ತಿಂಗಳು 13 ದಿನಗಳ ಕಾಲ ಅಂಜನೆಯು ಈ ವ್ರತವನ್ನಾಚರಿಸಿದಳು ಎಂದರ್ಥ. ಯದ್ಯಪಿ ದ್ವಾದಶಾಬ್ದವ್ರತವು ಒಂದು ವರ್ಷಕಾಲ ಆಚರಿಸುವದಾಗಿದ್ದರೂ ಸಹ ವ್ರತಾಚರಣ ತತ್ಪರಳಾಗಿ, ವಿಶಿಷ್ಟ ಭಗವದನುಗ್ರಹದಗೋಸ್ಕರವಾಗಿ ಶುಭಸೂಚನೆಯಾಗುವವರೆಗೂ ವ್ರತವನ್ನು ಅಂಜನೆಯು ಆಚರಿಸಿದಳೆಂದು ಅರ್ಥೈಸಿದಲ್ಲಿ ಯಾವ ವಿರೋಧವು ಇರುವದಿಲ್ಲ.

12. ಇಲ್ಲಿ ವೀರ್ಯವೆಂದರೆ ನೃಸಿಂಹತೇಜೋಪಬೃಂಹಿತವಾದ ವಾಯ್ವನುಗ್ರವಿಶೇಷವೆಂದರ್ಥ.

ಹನೂಮಂತ[13]ಮಮುಂ ಪ್ರಾಹುಃ ಮುನಯೋ ವೀತಕಲ್ಮಷಾಃ ।
ಅಂಜನಾ ವ್ರತಮಾಸ್ಥಾಯ ಪುತ್ರಂ ಪ್ರಾಪ ಗಿರೀಶ್ವರೇ ॥80॥
ತಸ್ಮಾದಂಜನಶೈಲೋಽಯಂ ಲೋಕೇ ವಿಖ್ಯಾತಕೀರ್ತಿಮಾನ್' ।

ಜನಕ ಉವಾಚ–

'ಸಂತೋಷೋ ಹ್ಯಭವದ್ಬ್ರಹ್ಮನ್ ಶ್ರುತ್ವಾ ತನ್ನಾಮಕಾರಣಮ್ ॥81॥
ದ್ವಾಪರೇ ಶೇಷಶೈಲೇತಿ ಕಥಂ ಖ್ಯಾತಿರ್ಭವಿಷ್ಯತಿ' ।

ಶತಾನಂದ ಉವಾಚ–

ಪುರಾ ವೈಕುಂಠನಗರೇ ದ್ವಾರಿ ಶೇಷಂ ಸಮಾದಿಶತ್ ॥82।
ದೇವಾಧಿದೇವೋ ಭಗವಾನ್ ರೇಮೇ ಚ ರಮಯಾ ಸಹ ।
ತಸ್ಮಿನ್ ಕಾಲೇ ಮಹಾರಾಜ ಮಾರುತಃ ಪ್ರಾಣವಲ್ಲಭಃ ॥83।
ಏಕಸ್ಮಾತ್ಕಾರಣಾತ್ಪ್ರಾಪ್ತೋ ಭಗವದ್ದರ್ಶನಾಯ ಚ ।

ಪ್ರಸವಿಸಿದಳು. ಗರ್ಭವಾಸಾದಿಗಳಿಂದ ರಹಿತರಾದ ವಾಯುದೇವರೇ ಅಂಜನೆಯನ್ನು ಪರಮಾನುಗ್ರಹಿಸಿ ಅವತರಿಸಿರುವದರಿಂದ ವೀತಕಲ್ಮಷರಾದ ಮುನಿಗಳು ಬಲ–ಜ್ಞಾನಗಳಿಂದ ಪರಿಪೂರ್ಣವಾದ ಈ ಶಿಶುವನ್ನು ಹನುಮಂತನೆಂದು ಕರೆದರು. (79–80) ಅಂಜನಾ ದೇವಿಯು ವ್ರತಸ್ಥಳಾಗಿ ಈ ಪರ್ವತದಲ್ಲಿ ಪುತ್ರನನ್ನು ಪಡೆದಿರುವದರಿಂದ 'ಅಂಜನಾಚಲ'ವೆಂದು ಈ ಪರ್ವತವು ವಿಖ್ಯಾತ ವಾಯಿತು. (80)

ಇದನ್ನು ಕೇಳಿದ ಜನಕರಾಜನು 'ಅಂಜನಾಚಲವೆಂಬ ಹೆಸರು ತ್ರೇತಾಯುಗದಲ್ಲಿ ಹೇಗೆ ಬಂತೆಂಬ ವೃತ್ತಾಂತವನ್ನು ಕೇಳಿ ನನಗೆ ಬಹು ಸಂತೋಷವಾಯಿತು. ದ್ವಾಪರಯುಗದಲ್ಲಿ ಶೇಷಾಚಲವೆಂದು ಖ್ಯಾತವಾಗಲು ಕಾರಣವಾವುದು? ಎಂಬುದನ್ನು ವಿವರಿಸಿರಿ' ಎಂದು ನುಡಿದನು. (81–82)

### ದ್ವಾರಪಾಲಕರಾದ ಶೇಷದೇವರು

ಪೂರ್ವಕಾಲದಲ್ಲಿ ವೈಕುಂಠನಗರದಲ್ಲಿ ರಮಾದೇವಿಯೊಂದಿಗೆ ವಿಹಾರಮಾಡುವ ರಮಾರಮಣನಾದ ಭಗವಂತನು ದ್ವಾರಪಾಲನಾಗಿ ಶೇಷದೇವರನ್ನು ನಿಯಮಿಸಿ ರಮಾದೇವಿಯೊಡನೆ ಕ್ರೀಡಿಸಿದನು. (83) ಹೇ ಜನಕನೇ! ಅದೇ ಸಮಯದಲ್ಲಿಯೇ ಪ್ರಾಣಿಗಳಿಗೆ ಪ್ರಾಣದಾಯಕ ನಾದ ವಾಯುದೇವರು

---

13. 'ಹನುಶಬ್ದೋ ಜ್ಞಾನವಾಚೀ ಹನುಮಾನ್ ಮತಿಶಬ್ದಿತಃ' (ಬೃ.ಉ.ಭಾ.)

ದ್ವಾರೇ ತಂ ರೋಧಯಾಮಾಸ ರುಕ್ಮದಂಡೇನ ಸರ್ಪರಾಟ್ ||84||

'ಕಿಮರ್ಥಂ ರುಧ್ಯಸೇ ಮೂರ್ಖ ಕಾರ್ಯಸ್ಯ ಮಹತೀ ತ್ವರಾ' ।
ಇತ್ಯುಕ್ತೇ ವಾಯುನಾ ಶೇಷ ಉವಾಚ ವಚನಂ ಪುನಃ ||85||

ಶೇಷ ಉವಾಚ–

'ಅಹಮಾಜ್ಞಾಧರೋ ವಿಷ್ಣೋರ್ಮಾ ತ್ವಮಂತಃಪುರಂ ಗಮಃ'।
ಇತಿ ತಸ್ಯ ವಚಃ ಶ್ರುತ್ವಾ ಜಗತ್ಪ್ರಾಣೋಽಬ್ರವೀದಿದಮ್ ||86||

ವಾಯುರುವಾಚ–

'ಜಯಶ್ಚ ವಿಜಯಶ್ಚೈವ ಶಪ್ತೌ ತೌ ಮುನಿಭಿಃ ಪುರಾ ।
ಅಹಂಕಾರೇಣ ಸಹಿತೌ ಕುಂಭಕರ್ಣದಶಾನನೌ ||87||

ವಿಸ್ಮೃತಂ ಕಿಂ ತ್ವಯಾ ಮೂರ್ಖ ದ್ವಾರಪತ್ಯೇ ನಿಯೋಜಿತೌ' ।
ತದ್ವಾಕ್ಯೇನಾಹಿರಾಜೇಂದ್ರಃ ಪ್ರಜಜ್ವಾಲ ವಿಷೋಲ್ಬಣಃ ||88||

ಯಾವದೋ ಒಂದು ಕಾರ್ಯವನ್ನಿಟ್ಟುಕೊಂಡು ಭಗವಂತನ ದರ್ಶನಾರ್ಥವಾಗಿ ವೈಕುಂಠಕ್ಕೆ ಆಗಮಿಸಿದರು. ಆಗ ಶೇಷದೇವರು ತಮ್ಮ ಬಳಿಯಿದ್ದ ಬಂಗಾರದ ದಂಡದಿಂದ ವಾಯುದೇವರನ್ನು ತಡೆದರು. (83–84)

### ವಾಯು–ಶೇಷರ ವಿವಾದ

ಆಗ ವಾಯುದೇವರು 'ಹೇ ಕಾರ್ಯಾಕಾರ್ಯವಿವೇಕರಹಿತನಾದ ಶೇಷನೇ! ನಾನು ಮಹತ್ಕಾರ್ಯಾರ್ಥವಾಗಿ ಬಂದಿರುವೆನು. ನನ್ನನ್ನೇಕೆ ತಡೆಯುವಿ?' ಎಂದು ನುಡಿದರು. ಇದನ್ನು ಕೇಳಿದ ಶೇಷದೇವರು 'ನಾನು ವಿಷ್ಣುವಿನ ಆಜ್ಞಾಪಾಲಕನಾಗಿ ದ್ವಾರಪಾಲಕ ನಾಗಿರುವೆನು. ನೀನು ಒಳಗೆ ಪ್ರವೇಶಿಸುವಂತಿಲ್ಲ' ಎಂದು ನುಡಿದರು (86) ಅದನ್ನು ಕೇಳಿದ ವಾಯುದೇವರು 'ಜಯ ಮತ್ತು ವಿಜಯರೆಂಬೀರ್ವರು ಹಿಂದೆ ಮುನಿಗಳಿಂದ ಶಪ್ತರಾಗಿ ಕುಂಭಕರ್ಣ ಮತ್ತು ರಾವಣರೆಂಬ ರಾಕ್ಷಸರಾಗಿ ಭೂಮಿಯಲ್ಲಿ ಜನಿಸಿದರು. ಅವರು ದ್ವಾರಪಾಲಕರಾಗಿದ್ದರೆಂಬುದನ್ನು, ಹೇ ಶೇಷನೇ! ನೀನು ಮರೆತಿರುವಿಯೇನು?' (ಅವರೂ ಸಹ ನಿನ್ನಂತೆಯೇ ದ್ವಾರಪಾಲಕರಾಗಿದ್ದಾಗ ವಿಚಾರಹೀನರಾಗಿ ವರ್ತಿಸಿ, ಸನಕಾದಿಗಳಿಂದ ಶಾಪವನ್ನು ಹೊಂದಿ ಪದಭ್ರಷ್ಟರಾಗಿ ರಾಕ್ಷಸರಾದರೆಂಬುದನ್ನು ಮರೆತಿರುವಿಯೇನು? ನೀನೂ ಸಹ ಅವರಂತೆ ಅಗಬೇಡವೆಂದು ಭಾವ) ಎಂದು ನುಡಿದರು.(87)

ಇದನ್ನು ಕೇಳಿದ ಶೇಷದೇವರು ಅತ್ಯಂತ ಕೋಪಾವಿಷ್ಟರಾಗಿ ವಾಯು ದೇವರನ್ನು ತೆಗಳುತ್ತಾ

ಗರ್ಹಯನ್ ವಚನೈಸ್ತೀಕ್ಷ್ಣೈರ್ಮುಖ್ಯಪ್ರಾಣಮಹೀಶ್ವರಃ ।

ಶೇಷ ಉವಾಚ–

'ಕಿಂ ಗರಿಷ್ಠಂ ವಚಃ ಪ್ರೋಕ್ತಂ ಜೀವನೇಚ್ಛಾ ನ ವಿದ್ಯತೇ ॥89॥

ಯಥಾ ಭಾನುಗತಿಂ ಲೋಕೇ ನೈವ ಜಾನಂತಿ ಮೋಹಿತಾಃ ।
ತತ್ಕಥಂ ನರವದ್ವಾಯೋ ವೃಥಾ ಗರ್ವಂ ಪ್ರಭಾಷಸೇ ॥90॥

ಬಲೇ ಜ್ಞಾನೇ ವಿರಾಗೇ ವಾ ವಿಷ್ಣುಭಕ್ತೌ ನ ಮತ್ಸಮಃ ।
ಸದಾ ಮೇಽಂತಃಪುರೇ ವಾಸಃ ಪುತ್ರಾದಪ್ಯಧಿಕೋ ಹರೇಃ ॥91॥

ಲೋಕಾನಾಂ ತು ಹಿತಾರ್ಥಾಯ ಹಿತಾರ್ಥಂ ಜಗದೀಶಿತುಃ ।
ಸ್ಥಾಪಿತೋಽಸ್ಮಿ ದ್ವಾರಪತ್ಯೇ ಲಕ್ಷ್ಮ್ಯಾ ನಾರಾಯಣೇನ ಚ' ॥92॥

ವಾಯುರುವಾಚ–

'ಬಿಡಾಲೋಽಂತಸ್ಥಿತೋ ವಾಽಪಿ ಬಹಿಸ್ಥೇಭಸಮೋ ನಹಿ ।
ಶಯಾನಂ ರತ್ನಪರ್ಯಂಕೇ ರಾಜಾನಮಪಿ ಸೇವತೇ ॥93॥

'ಹೇ ವಾಯೋ! ಹೇಗೆ ನೀನು ಇಂತಹ ಮಾತುಗಳನ್ನಾಡುವಿ? ಬಹು ದೊಡ್ಡ ಮಾತುಗಳನ್ನಾಡುತ್ತಿರುವಿ. ನಿನಗೆ ಬದುಕಲಿಚ್ಛೆಯಿರುವದಿಲ್ಲವೇ? ಹೇಗೆ ಪ್ರಚುರಪ್ರಕಾಶನಾದ ಸೂರ್ಯನ ಗತಿಯನ್ನು ಪ್ರಕಾಶದಿಂದ ಮೋಹಿತರಾದ ಸಾಮಾನ್ಯ ಮನುಷ್ಯರು ತಿಳಿಯುವದಿಲ್ಲವೋ ಹಾಗೆಯೇ ನನ್ನ ಬಲ ಶಕ್ತ್ಯಾದಿಗಳೂ ಸಹ ಮೋಹಿತರಾದ ವ್ಯಕ್ತಿಗಳಿಗೆ ತಿಳಿಯುವದಿಲ್ಲ. ಸಾಮಾನ್ಯ ಮನುಷ್ಯರಂತೆ ನೀನೂ ಸಹ ಹೇಗೆ ಗರ್ವಾವಿಷ್ಟನಾಗಿ ಮಾತನಾಡುತ್ತಿರುವಿ? (88–90) ಬಲ ಜ್ಞಾನ, ವೈರಾಗ್ಯ ಇವುಗಳಲ್ಲಿಯೇ ಆಗಲೀ. ವಿಷ್ಣುಭಕ್ತಿಯಲ್ಲಿಯೇ ಆಗಲಿ ನನಗೆ ಸಮಾನರಾದ ವ್ಯಕ್ತಿಗಳಾರೂ ಇರುವದಿಲ್ಲ. (ಇದಕ್ಕೆ ನಿದರ್ಶನವಾಗಿ) ನಾನು ಯಾವಾಗಲೂ ಅಂತಃಪುರದಲ್ಲಿಯೇ ವಾಸವಾಗಿರುವೆನು. ಮಗನಿಗಿಂತಲೂ ನಾನು ಹೆಚ್ಚಿನಿಸಿರುವೆನು.(91) ಲೋಕಗಳ ಹಿತದ ಗೋಸ್ಕರವಾಗಿ ಮತ್ತು ಜಗದೊಡೆಯನಾದ ಭಗವಂತನ ಹಿತಕ್ಕಾಗಿ ನಾನು ಲಕ್ಷ್ಮೀನಾರಾಯಣರಿಂದ ದ್ವಾರಪಾಲಕನಾಗಿ ನಿಯೋಜಿಸಲ್ಪಟ್ಟಿರುವೆನು.' ಎಂದು ಹೇಳಿದನು.(92)

ಶೇಷದೇವರ ಮಾತನ್ನೊಪ್ಪದ ವಾಯುದೇವರು 'ಅಂತಃಪುರದಲ್ಲಿರುವ ಸಾಕುಬೆಕ್ಕು ಅಂತಃಪುರ ದಲ್ಲಿರುತ್ತದೆಯೆಂದ ಮಾತ್ರಕ್ಕೆ ಹೊರಗಿನ ಆನೆಗೆ ಸಮನಾಗುವದಿಲ್ಲ. ರತ್ನಪರ್ಯಂಕದಲ್ಲಿ ಮಲಗಿದ ರಾಜನನ್ನು ಸೇವೆ ಮಾಡಲು ನಿಯುಕ್ತನಾದ ಸೇವಕನೂ ಸಹ ರತ್ನಪರ್ಯಂಕವನ್ನೇರಿದಮಾತ್ರಕ್ಕೆ ಆವನು ರಾಜನ ಮಗನಿಗಿಂತಲೂ ಹೆಚ್ಚಾಗುವನೇ? ದೂತನಲ್ಲಿಯ ಆಧಿಕ್ಯವಾವುದು? ಶೇಷನೇ!

ದ್ವಾರೇ ತಂ ರೋಧಯಾಮಾಸ ರುಕ್ಮದಂಡೇನ ಸರ್ಪರಾಟ್ ॥84॥

'ಕಿಮರ್ಥಂ ರುಧ್ಯಸೇ ಮೂರ್ಖ ಕಾರ್ಯಸ್ಯ ಮಹತೀ ತ್ವರಾ' ।
ಇತ್ಯುಕ್ತೇ ವಾಯುನಾ ಶೇಷ ಉವಾಚ ವಚನಂ ಪುನಃ ॥85॥

ಶೇಷ ಉವಾಚ–

'ಅಹಮಾಜ್ಞಾಧರೋ ವಿಷ್ಣೋರ್ಮಾ ತ್ವಮಂತಃಪುರಂ ಗಮಃ'।
ಇತಿ ತಸ್ಯ ವಚಃ ಶ್ರುತ್ವಾ ಜಗತ್ಪ್ರಾಣೋಽಬ್ರವೀದಿದಮ್ ॥86॥

ವಾಯುರುವಾಚ–

'ಜಯಶ್ಚ ವಿಜಯಶ್ಚೈವ ಶಪ್ತೌ ತೌ ಮುನಿಭಿಃ ಪುರಾ ।
ಅಹಂಕಾರೇಣ ಸಹಿತೌ ಕುಂಭಕರ್ಣದಶಾನನೌ ॥87॥

ವಿಸ್ಮೃತಂ ಕಿಂ ತ್ವಯಾ ಮೂರ್ಖ ದ್ವಾರಪತ್ಯೇ ನಿಯೋಜಿತೌ' ।
ತದ್ವಾಕ್ಯೇನಾಹಿರಾಜೇಂದ್ರಃ ಪ್ರಜಜ್ವಾಲ ವಿಷೋಲ್ಬಣಃ ॥88॥

ಯಾವದೋ ಒಂದು ಕಾರ್ಯವನ್ನಿಟ್ಟುಕೊಂಡು ಭಗವಂತನ ದರ್ಶನಾರ್ಥವಾಗಿ ವೈಕುಂಠಕ್ಕೆ ಆಗಮಿಸಿದರು. ಆಗ ಶೇಷದೇವರು ತಮ್ಮ ಬಳಿಯಿದ್ದ ಬಂಗಾರದ ದಂಡದಿಂದ ವಾಯುದೇವರನ್ನು ತಡೆದರು. (83–84)

### ವಾಯು–ಶೇಷರ ವಿವಾದ

ಆಗ ವಾಯುದೇವರು 'ಹೇ ಕಾರ್ಯಾಕಾರ್ಯವಿವೇಕರಹಿತನಾದ ಶೇಷನೇ! ನಾನು ಮಹತ್ಕಾರ್ಯಾರ್ಥವಾಗಿ ಬಂದಿರುವೆನು. ನನ್ನನ್ನೇಕೆ ತಡೆಯುವಿ?' ಎಂದು ನುಡಿದರು. ಇದನ್ನು ಕೇಳಿದ ಶೇಷದೇವರು 'ನಾನು ವಿಷ್ಣುವಿನ ಆಜ್ಞಾಪಾಲಕನಾಗಿ ದ್ವಾರಪಾಲಕ ನಾಗಿರುವೆನು. ನೀನು ಒಳಗೆ ಪ್ರವೇಶಿಸುವಂತಿಲ್ಲ' ಎಂದು ನುಡಿದರು (86) ಅದನ್ನು ಕೇಳಿದ ವಾಯುದೇವರು 'ಜಯ ಮತ್ತು ವಿಜಯರೆಂಬೀರ್ವರು ಹಿಂದೆ ಮುನಿಗಳಿಂದ ಶಪ್ತರಾಗಿ ಕುಂಭಕರ್ಣ ಮತ್ತು ರಾವಣರೆಂಬ ರಾಕ್ಷಸರಾಗಿ ಭೂಮಿಯಲ್ಲಿ ಜನಿಸಿದರು. ಅವರು ದ್ವಾರಪಾಲಕರಾಗಿದ್ದರೆಂಬುದನ್ನು, ಹೇ ಶೇಷನೇ! ನೀನು ಮರೆತಿರುವಿಯೇನು?' (ಅವರೂ ಸಹ ನಿನ್ನಂತೆಯೇ ದ್ವಾರಪಾಲಕರಾಗಿದ್ದಾಗ ವಿಚಾರಹೀನರಾಗಿ ವರ್ತಿಸಿ, ಸನಕಾದಿಗಳಿಂದ ಶಾಪವನ್ನು ಹೊಂದಿ ಪದಭ್ರಷ್ಟರಾಗಿ ರಾಕ್ಷಸರಾದರೆಂಬುದನ್ನು ಮರೆತಿರುವಿಯೇನು? ನೀನೂ ಸಹ ಅವರಂತೆ ಆಗಬೇಡವೆಂದು ಭಾವ) ಎಂದು ನುಡಿದರು.(87)

ಇದನ್ನು ಕೇಳಿದ ಶೇಷದೇವರು ಅತ್ಯಂತ ಕೋಪಾವಿಷ್ಟರಾಗಿ ವಾಯು ದೇವರನ್ನು ತೆಗಳುತ್ತಾ

ಗರ್ಹಯನ್ ವಚನೈಸ್ತೀಕ್ಷ್ಣೈರ್ಮುಖ್ಯಪ್ರಾಣಮಹೀಶ್ವರಃ ।

ಶೇಷ ಉವಾಚ–

'ಕಿಂ ಗರಿಷ್ಠಂ ವಚಃ ಪ್ರೋಕ್ತಂ ಜೀವನೇಚ್ಛಾ ನ ವಿದ್ಯತೇ ॥89॥

ಯಥಾ ಭಾನುಗತಿಂ ಲೋಕೇ ನೈವ ಜಾನಂತಿ ಮೋಹಿತಾಃ ।
ತತ್ಕಥಂ ನರವದ್ವಾಯೋ ವೃಥಾ ಗರ್ವಂ ಪ್ರಭಾಷಸೇ ॥90॥

ಬಲೇ ಜ್ಞಾನೇ ವಿರಾಗೇ ವಾ ವಿಷ್ಣುಭಕ್ತೌ ನ ಮತ್ಸಮಃ ।
ಸದಾ ಮೇಽಂತಃಪುರೇ ವಾಸಃ ಪುತ್ರಾದಪ್ಯಧಿಕೋ ಹರೇಃ ॥91॥

ಲೋಕಾನಾಂ ತು ಹಿತಾರ್ಥಾಯ ಹಿತಾರ್ಥಂ ಜಗದೀಶಿತುಃ ।
ಸ್ಥಾಪಿತೋಽಸ್ಮಿ ದ್ವಾರಪತ್ಯೇ ಲಕ್ಷ್ಮ್ಯಾ ನಾರಾಯಣೇನ ಚ' ॥92॥

ವಾಯುರುವಾಚ–

'ಬಿಡಾಲೋಽಂತಸ್ಥಿತೋ ವಾಽಪಿ ಬಹಿಸ್ಥೇಭಸಮೋ ನಹಿ ।
ಶಯಾನಂ ರತ್ನಪರ್ಯಂಕೇ ರಾಜಾನಮಪಿ ಸೇವತೇ ॥93॥

'ಹೇ ವಾಯೋ! ಹೇಗೆ ನೀನು ಇಂತಹ ಮಾತುಗಳನ್ನಾಡುವಿ? ಬಹು ದೊಡ್ಡ ಮಾತುಗಳನ್ನಾಡುತ್ತಿರುವಿ. ನಿನಗೆ ಬದುಕಲಿಚ್ಛೆಯಿರುವದಿಲ್ಲವೇ? ಹೇಗೆ ಪ್ರಚುರಪ್ರಕಾಶನಾದ ಸೂರ್ಯನ ಗತಿಯನ್ನು ಪ್ರಕಾಶದಿಂದ ಮೋಹಿತರಾದ ಸಾಮಾನ್ಯ ಮನುಷ್ಯರು ತಿಳಿಯುವದಿಲ್ಲವೋ ಹಾಗೆಯೇ ನನ್ನ ಬಲ ಶಕ್ತ್ಯಾದಿಗಳೂ ಸಹ ಮೋಹಿತರಾದ ವ್ಯಕ್ತಿಗಳಿಗೆ ತಿಳಿಯುವದಿಲ್ಲ. ಸಾಮಾನ್ಯ ಮನುಷ್ಯರಂತೆ ನೀನೂ ಸಹ ಹೇಗೆ ಗರ್ವಾವಿಷ್ಟನಾಗಿ ಮಾತನಾಡುತ್ತಿರುವಿ? (88–90) ಬಲ ಜ್ಞಾನ, ವೈರಾಗ್ಯ ಇವುಗಳಲ್ಲಿಯೇ ಆಗಲೀ. ವಿಷ್ಣುಭಕ್ತಿಯಲ್ಲಿಯೇ ಆಗಲಿ ನನಗೆ ಸಮಾನರಾದ ವ್ಯಕ್ತಿಗಳಾರೂ ಇರುವದಿಲ್ಲ. (ಇದಕ್ಕೆ ನಿದರ್ಶನವಾಗಿ) ನಾನು ಯಾವಾಗಲೂ ಅಂತಃಪುರದಲ್ಲಿಯೇ ವಾಸವಾಗಿರುವೆನು. ಮಗನಿಗಿಂತಲೂ ನಾನು ಹೆಚ್ಚೆನಿಸಿರುವೆನು.(91) ಲೋಕಗಳ ಹಿತದ ಗೋಸ್ಕರವಾಗಿ ಮತ್ತು ಜಗದೊಡೆಯನಾದ ಭಗವಂತನ ಹಿತಕ್ಕಾಗಿ ನಾನು ಲಕ್ಷ್ಮೀನಾರಾಯಣರಿಂದ ದ್ವಾರಪಾಲಕನಾಗಿ ನಿಯೋಜಿಸಲ್ಪಟ್ಟಿರುವೆನು.' ಎಂದು ಹೇಳಿದನು.(92)

ಶೇಷದೇವರ ಮಾತನ್ನೊಪ್ಪದ ವಾಯುದೇವರು 'ಅಂತಃಪುರದಲ್ಲಿರುವ ಸಾಕುಬೆಕ್ಕು ಅಂತಃಪುರ ದಲ್ಲಿರುತ್ತದೆಯೆಂದ ಮಾತ್ರಕ್ಕೆ ಹೊರಗಿನ ಆನೆಗೆ ಸಮನಾಗುವದಿಲ್ಲ. ರತ್ನಪರ್ಯಂಕದಲ್ಲಿ ಮಲಗಿದ ರಾಜನನ್ನು ಸೇವೆ ಮಾಡಲು ನಿಯುಕ್ತನಾದ ಸೇವಕನೂ ಸಹ ರತ್ನಪರ್ಯಂಕವನ್ನೇರಿದಮಾತ್ರಕ್ಕೆ ಅವನು ರಾಜನ ಮಗನಿಗಿಂತಲೂ ಹೆಚ್ಚಾಗುವನೇ? ದೂತನಲ್ಲಿಯ ಆಧಿಕ್ಯವಾವುದು? ಶೇಷನೇ!

ಕಶ್ಚಿದ್ದೂತೋ ನಿಯುಕ್ತಸ್ತು ಪರ್ಯಂಕಾರೂಢವಾನ್ಸ್ವಯಮ್ ।
ಕಿಮಾಧಿಕ್ಯಂ ತಸ್ಯ ಶೇಷ ಪುತ್ರೇ ಕಾ ನ್ಯೂನತಾ ವದ' ॥94॥

ತಯೋರ್ವಿವಾದೋ ಹ್ಯಭವಚ್ಛೇಷವಾಯ್ವೋರ್ಮಹಾತ್ಮನೋಃ।
ಲಕ್ಷ್ಮ್ಯಾ ನಿಬೋಧಿತಃ ಶ್ರೀಮಾನುತ್ತಸ್ಥೌ ಗರುಡಧ್ವಜಃ ॥95॥

'ಕಿಮರ್ಥಂ ಕ್ರೋಶಸೇ ಶೇಷ ಪುಮಾನ್ ಕೋಽತ್ರಾಗತಃ ಪರಃ' ।
ಇತ್ಯುಕ್ತೋ ದೇವದೇವೇನ ಫಣಿರಾಜೋಽಭ್ಯಭಾಷತ ॥96॥

ಶೇಷ ಉವಾಚ–

'ಮಲಯಾಚಲವಾಸಸ್ತು ವಾಯುರತ್ಯಂತಗರ್ವಿತಃ ।
ಅಕಾಲೇಽಂತಃಪುರಂ ಶ್ರೀಘ್ರಂ ಪ್ರವೇಷ್ಟುಂ ಚ ಸಮುದ್ಯತಃ ॥97॥

ಅವಾಚ್ಯವಚನಂ ಚೋಕ್ತಮನೇನಾತ್ಯಂತಮಾನಿನಾ' ।
ಏತಸ್ಮಿನ್ನೇವ ಕಾಲೇ ತು ಸಾಷ್ಟಾಂಗಂ ಪ್ರಣಿಪತ್ಯ ತಮ್ ॥98॥

ವಾಯುಸ್ತುಷ್ಟಾವ ಪುರುಷಂ ಪುರಾಣಂ ವೇದಗೋಚರಮ್ ।
ವಾಯುಮಾಲೋಕ್ಯ ವಚನಂ ವಾರಿಜಾಕ್ಷೋಽಬ್ರವೀತ್ಸ್ತುತಮ್ ॥99।

ಪುತ್ರನಲ್ಲಿಯ ನ್ಯೂನತೆ ಯಾವುದು? ಎಂಬುದನ್ನು ಹೇಳು.' ಎಂದು ನುಡಿದರು. (93–94)

### ಶೇಷದೇವರ ಅಹಂಕಾರ

ಹೀಗೆ ಶೇಷವಾಯುದೇವರ ವಿವಾದವು ನಡೆಯುತ್ತಿರಲು ಲಕ್ಷ್ಮೀದೇವಿ ಯಿಂದ ನಿಬೋಧಿತನಾಗಿ ಹೊರಬಂದ ಗರುಡಧ್ವಜನಾದ ಲಕ್ಷ್ಮೀಪತಿಯು ಶೇಷದೇವರನ್ನು ಕುರಿತು 'ಹೇ ಶೇಷನೇ! ಏಕೆ ಆಕ್ರೋಶವನ್ನು ಮಾಡುತ್ತಿರುವಿ. ಇಲ್ಲಿ ಬಂದಿರುವ ಪುರುಷರಾರು?' ಎಂದು ನುಡಿದನು. (95–96) ಪರಮಾತ್ಮನಿಂದ ಹೀಗೆ ನುಡಿಯಲ್ಪಟ್ಟ ಶೇಷದೇವರು ಪರಮಾತ್ಮನನ್ನು ಕುರಿತು 'ಮಲಯಾಚಲ ನಿವಾಸಿಯಾದ ವಾಯುವು ಅಕಾಲದಲ್ಲಿ ಬಂದು ಅಂತಃಪುರವನ್ನು ಪ್ರವೇಶಿಸಲು ಪ್ರಯತ್ನಿಸಿದನು. ಅವನನ್ನು ನಾನು ನಿವಾರಿಸಿದಾಗ ಅತ್ಯಂತ ಗರ್ವಯುತನಾದ ವಾಯುವು ಅವಾಚ್ಯವಾದ ಮಾತುಗಳನ್ನಾಡಿದನು' ಎಂದು ನುಡಿದನು.(97–98)

ಅದೇ ಸಮಯದಲ್ಲಿ ವಾಯುದೇವರು ಪರಮಾತ್ಮನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ವೇದಪ್ರತಿಪಾದ್ಯನಾದ ಅನಾದಿಪುರುಷನಾದ ನಾರಾಯಣನನ್ನು ಸ್ತೋತ್ರಮಾಡಿದರು. ವಾಯುದೇವರನ್ನು ನೋಡಿದ ವಾರಿಜಾಕ್ಷನಾದ ಪರಮಾತ್ಮನು ವಾಯುದೇವರನ್ನು ಕುರಿತು

ಶ್ರೀಭಗವಾನುವಾಚ–

'ಕಿಮರ್ಥಂ ಕಲಹಃ ಪುತ್ರ ಶೇಷೇಣಾತ್ಯಂತಮಾನಿನಾ' ।
ಇತ್ಥಂ ಹರೇರ್ವಾಗಮೃತಂ ಪೀತ್ವಾ ಕರ್ಣಪುಟದ್ವಯಾತ್ ॥100॥
ತುಷ್ಟೋ ಬಭೂವ ನೃಪತೇ ವಾಯುರತ್ಯಂತಭಕ್ತಿಮಾನ್ ॥100॥

ಶೇಷ ಉವಾಚ–

'ಅಹಂ ಸಮರ್ಥೋ ಭಗವಾನ್ ಬಲೇ ಜ್ಞಾನೇ ಚ ತ್ವತ್ಪ್ರಿಯೇ ।
ಮತ್ಸಮೋ ನಾಸ್ತಿ ಭೂಲೋಕೇ ನಾಕೇ ವಾ ಬ್ರಹ್ಮಣೋ ಗೃಹೇ' ॥101॥
ಸರೀಸೃಪವಚಃ ಶ್ರುತ್ವಾ ಪ್ರಹಸನ್ ಫಣಿನಂ ಹರಿಃ ।
'ಸಾಧು ಸಾಧ್ವಿತಿ ಸಂಭಾವ್ಯ ಚೋವಾಚ ಫಣಿನಾಂ ಪತಿಮ್ ॥102॥

ಶ್ರೀಭಗವಾನುವಾಚ–

'ನ ವಾಙ್ಮಾತ್ರೇಣ ಪೌರುಷಂ ಕ್ರಿಯಾ ಕೇವಲಮುತ್ತರಮ್ ।
ಬಲಾಬಲೇ ಪರೀಕ್ಷಂತಾಂ ದೇವಾಶ್ಚೇಂದ್ರಪುರೋಗಮಾಃ ॥103॥

'ಅತ್ಯಂತ ಮಾನಿಯಾದ ಶೇಷದೇವರೊಂದಿಗೆ ಏಕೆ ಕಲಹವನ್ನು ಮಾಡಿತ್ತಿರುವಿ' ಎಂದು ಪ್ರಶ್ನಿಸಿದನು (99–100) ಪರಮಾತ್ಮನ ಇಂತಹ ವಾಕ್ಯಗಳೆಂಬ ಅಮೃತವನ್ನು ಕರ್ಣಗಳಿಂದಾಸ್ವಾದಿಸಿ ಭಕ್ತಿಯುಕ್ತನಾದ ವಾಯುವು ಅತ್ಯಂತ ಸಂತೋಷವನ್ನು ಹೊಂದಿದನು. (100)

ಶೇಷದೇವರು ಪರಮಾತ್ಮನನ್ನು ಕುರಿತು 'ಹೇ ಭಗವಂತನೇ! ಬಲ, ಜ್ಞಾನ, ಭಕ್ತಿ, ನಿನ್ನ ಅನುಗ್ರಹ ಇವುಗಳಲ್ಲಿ ನಾನು ಅತ್ಯಂತ ಅಧಿಕನಾಗಿರುವೆನು. ಈ ಭೂಲೋಕದಲ್ಲಿ, ಬ್ರಹ್ಮದೇವರ ಲೋಕವಾದ ಸತ್ಯಲೋಕದಲ್ಲಿ ಅಥವಾ ಸ್ವರ್ಗಲೋಕದಲ್ಲಿಯೇ ಆಗಲಿ ನನಗೆ ಸಮರಾದ ವ್ಯಕ್ತಿಗಳಾರೂ ಇರುವದಿಲ್ಲ' ಎಂದು ನುಡಿದಾಗ ಸರೀಸೃಪನಾದ ಶೇಷನ ಮಾತನ್ನು ಕೇಳಿ ನಸುನಕ್ಕ ಹರಿಯು, ಅವನನ್ನು 'ಸಾಧು ಸಾಧು' ಎಂಬುದಾಗಿ ಸಮ್ಮಾನಿಸಿ ಈ ಕೆಳಗಿನಂತೆ ನುಡಿದನು. (101–102)

### ವಾಯು–ಶೇಷರ ಬಲಾಬಲಪರೀಕ್ಷೆ

'ಕೇವಲ ಬಾಯಿಮಾತಿನಿಂದ ಶಕ್ತಿಯು ತಿಳಿಯುವದಿಲ್ಲ. ಕ್ರಿಯೆಯು ಉತ್ತಮವಾಗಿರುವದು. ನಿಮ್ಮೀರ್ವರ ಬಲಾಬಲಗಳನ್ನು ಇಂದ್ರಾದಿ ದೇವತೆಗಳು ಪರೀಕ್ಷಿಸಲಿ (103) ಇಲ್ಲಿಯೇ ಉತ್ತರ ದಿಕ್ಕಿನಲ್ಲಿರುವ ಮೇರುಪರ್ವತದ ಮಗನಾದ ಆನಂದಾದ್ರಿಯನ್ನು ನಿನ್ನ ಶರೀರದಿಂದ ಬಂಧಿಸಿ,

ಅತ್ರೈವೋತ್ತರದಿಗ್ಭಾಗೇ ಪರ್ವತಂ ಮೇರುನಂದನಮ್ ।
ಸ್ವಕಾಯರಜ್ಜುನಾ ಬಧ್ವಾ ಬಲಂ ತೇ ಯಾವದಸ್ತಿ ಹಿ ॥104॥

ತಾವತ್ತೈವ ಬಲೇನ ತ್ವಂ ಸಂಯುಕ್ತಃ ಸುಸ್ಥಿರಾತ್ಮನಾ ।
ತಿಷ್ಠ ಭದ್ರ ಮಹಾಭೋಗಿನ್ ವಿಷಪೂತ್ಕಾರಸಂಯುತಃ' ॥105॥

ಹೃಷೀಕೇಶವಚಃ ಶ್ರುತ್ವಾ ಹೃಷ್ಟಪುಷ್ಟಾಂಗವಿಗ್ರಹಃ ।
ಸ್ವಕಾಯರಜ್ಜುನಾ ಬಧ್ವಾ ಹ್ಯಾನಂದಾದ್ರಿಂ ಮಹೀಪತೇ ॥106॥

ಸ್ಥಿರೋ ಬಭೂವ ಚಾಮಂತ್ರ್ಯ ವಾಯುಂ ವೇಗವತಾಂವರಮ್।
ತಮಾಲೋಕ್ಯಾಗ್ನಿದಯಿತಃ ಪರ್ವತಂ ತಮುಪಾಗತಃ ॥107॥

ಆಜ್ಞಯಾ ವಾಸುದೇವಸ್ಯ ದೇವಾನಾಂ ಪಶ್ಯತಾಂ ಸತಾಮ್ ।
ಸ್ವಸ್ಮಿನ್ ಭಗವತಃ ಪ್ರೀತಿಂ ಮತ್ವಾತಿಶಯಿತಾಂ ಮರುತ್ ॥108।

ತತಃ ಪ್ರಕುರ್ವತೋ ವೇಗಂ ಮಾರುತಸ್ಯ ಮಹಾತ್ಮನಃ ।
ಕನಿಷ್ಠಾಂಗುಲಿಮಾತ್ರೇ ತು ಪ್ರದೇಶೇ ಶ್ಲಥಬಂಧನೇ ॥109॥

ಮಹಾವೇಗಸ್ಯ ಸಂಪರ್ಕಾತ್ಪರ್ವತೋ ಭೋಗಿಸಂಯುತಃ ।

ವಿಷಪೂತ್ಕಾರವನ್ನು ಮಾಡುತ್ತಾ, ನಿನ್ನ ಶರೀರದಲ್ಲಿರುವ ಇಷ್ಟೂ ಶಕ್ತಿಯಿಂದ ಗಟ್ಟಿಯಾಗಿ ಹಿಡಿದುಕೋ' ಎಂದು ನುಡಿದನು. (104–105) ಪರಮಾತ್ಮನ ಮಾತುಗಳನ್ನು ಕೇಳಿ ಶೇಷನು ಅತ್ಯಂತ ಸಂತೋಷದಿಂದ ಮೈಯುಬ್ಬಿಸಿ ತನ್ನ ಶರೀರದಿಂದ ಆನಂದಾದ್ರಿಯನ್ನು ಬಂಧಿಸಿ ವೇಗಿಗಳಲ್ಲಿ ಶ್ರೇಷ್ಠನಾದ ವಾಯುದೇವರನ್ನು ಬಲಪ್ರದರ್ಶನಾರ್ಥ ವಾಗಿ ಆಮಂತ್ರಿಸಿ ಪರ್ವತವನ್ನು ತನ್ನ ಸಂಪೂರ್ಣಶಕ್ತಿಯಿಂದ ಆವರಿಸಿದನು. (106) ಅಗ್ನಿಯ ಮಿತ್ರನಾದ ವಾಯುವು ಪರ್ವತನ್ನು ಗಟ್ಟಿಯಾಗಿ ಹಿಡಿದಿಟ್ಟಿರುವ ಶೇಷದೇವರನ್ನು ನೋಡಿ, ಭಗವಂತನ ಆಜ್ಞೆಯಂತೆ, ಮತ್ತು ನೋಡುತ್ತಿರುವ ಜನರಿಗೆ ಭಗವಂತನ ಅನುಗ್ರಹವು ತನ್ನಲ್ಲಿ ಯಾವಗಲೂ ಇರುವದೆಂಬುದನ್ನು ತಿಳಿದು ವೇಗವನ್ನು ಹೆಚ್ಚಿಸಿ ಕನಿಷ್ಠಾಂಗುಲಿ ಪರಿಮಿತದ ಸಡಿಲವಾದ ಸ್ಥಳದಲ್ಲಿ ಪ್ರವೇಶಿಸಿ, ಪರ್ವತವನ್ನು ಸ್ಪರ್ಶಿಸಿದನು. (107–109) ವಾಯುದೇವರ ಮಹಾವೇಗದ ಅತ್ಯಲ್ಪ ಸಂಪರ್ಕ ಮಾತ್ರದಿಂದಲೇ ಶೇಷದೇವರಿಂದ ಸಹಿತವಾದ ಪರ್ವತವು ದಕ್ಷಿಣ ದಿಕ್ಕಿನೆಡೆಗೆ ಒಂದೂವರೆ ಲಕ್ಷ ಯೋಜನಗಳಷ್ಟು ದೂರ ಹಾರಿಹೋಯಿತು.

### ದ್ವಾಪರದಲ್ಲಿ ಶೇಷಾಚಲ

ಸಹಸ್ರಮರ್ಧಲಕ್ಷಂ ಚ ದಕ್ಷಿಣಾಭಿಮುಖೋ ಯಯೌ ॥110॥
ಮೇರುಸ್ತುಷ್ಟಾವ ನೃಪತೇ ಬಲದೇವಂ ಮಹಾಬಲಮ್ ।

ಮೇರುರುವಾಚ–

'ತ್ರಾಯತಾಂ ತ್ರಾಯತಾಂ ಸ್ವಾಮಿನ್ಪುತ್ರಂ ಬಾಲಂ ಮಹಾಬಲ' ॥111॥

ಏವಮುಕ್ತೋ ಮೇರುಣಾಽಯಂ ತತ್ಪುತ್ರಂ ಪರ್ಯಪಾಲಯತ್ ।
ಸ್ವರ್ಣಮುಖ್ಯಾ ಮಹಾನದ್ಯಾಃ ಪ್ರತೀರೇ ಚ ತಥೋತ್ತರೇ ॥112॥

ಸ್ಥಾಪಯಾಮಾಸ ರಾಜೇಂದ್ರ ಗಿರಿರಾಜಂ ಸಪನ್ನಗಮ್ ।
ಶೇಷೋ ಗತಮದಃ ಪಶ್ಚಾತ್ತುಷ್ಟಾವ ಮರುತಾಂ ಪತಿಮ್ ॥113॥

'ಕ್ಷಮಸ್ವ ಮಮ ದೌರಾತ್ಮ್ಯಂ ಆಜ್ಞಾನೇನಾಗತಂ[14] ವಿಭೋ' ।
ನಿರ್ವೈರಸ್ತತ್ಪ್ರಸಾದಂ ಚ ಚಕಾರ ಮರುತಾಂ ಪತಿಃ ॥114॥

ರಾಜನ್ ಶೇಷನಿಮಿತ್ತೇನ ಶೇಷಾಚಲಮಿಮಂ ವಿದುಃ ।

ಜನಕ ಉವಾಚ–

ಇದನ್ನು ಕಂಡ ಆನಂದಾದ್ರಿಯ ತಂದೆಯಾದ ಮೇರುವು ಬಲದೇವ ನೆನಿಸಿದ ವಾಯುದೇವರನ್ನು 'ಹೇ ಸ್ವಾಮಿ ! ನನ್ನ ಬಾಲಕನಾದ ಮಗನನ್ನು ರಕ್ಷಿಸು' ಎಂದು ನುಡಿದನು. (110–111) ಹೀಗೆ ಮೇರುಪರ್ವತಿ'ದಿಂದ ಪ್ರಾರ್ಥಿತರಾದ ವಾಯುದೇವರು ಆ ಪರ್ವತವನ್ನು ರಕ್ಷಿಸಿ, ಸ್ವರ್ಣಮುಖಿ ನದಿಯ ಉತ್ತರ ತೀರದಲ್ಲಿ ಶೇಷದೇವರಿಂದ ಸಹಿತನಾದ ಪರ್ವತವನ್ನು ಸ್ಥಾಪಿಸಿದನು. (111–112) ಶೇಷನು ತನ್ನ ಮದವನ್ನು ಕಳೆದುಕೊಂಡು ಮರುತ್ಪತಿಯಾದ ವಾಯುದೇವರನ್ನು 'ಹೇ ಸ್ವಾಮಿನ್! ಅಜ್ಞಾನದಿಂದ ಬಂದಿರುವ ನನ್ನ ದುಷ್ಟತನವನ್ನು ಕ್ಷಮಿಸಿ ಅನುಗ್ರಹಿಸು' ಎಂದು ನುಡಿದನು.ವಾಯುದೇವರು ಅವನಲ್ಲಿ ಯಾವದೇ ವೈರವನ್ನು ಹೊಂದದೇ ಅವನಿಗೆ ಅನುಗ್ರಹವನ್ನು ಮಾಡಿದರು. ಹೇ ರಾಜನೇ! ಶೇಷದೇವರ ನಿಮಿತ್ತದಿಂದ ಈ ಪರ್ವತವು ಶೇಷಾಚಲವೆಂದು ದ್ವಾಪರ ಯುಗದಲ್ಲಿ ಖ್ಯಾತವಾಯಿತು. (113–115)

14. ಮಹಾಜ್ಞಾನಿಗಳೂ, ಇಪ್ಪತ್ತೆಂಟು ಲಕ್ಷಣಗಳಿಂದ ಯುಕ್ತರೂ ಮತ್ತು ಪರಮಾತ್ಮನ ಹಾಸಿಗೆ ಯಾಗಿ ಸೇವೆಯನ್ನು ಮಾಡುವ ಶೇಷದೇವರಿಗೆ ಸ್ವಾಭಾವಿಕವಾದ ಅಜ್ಞಾನಾದಿಗಳಿರದಿದ್ದರೂ ಸಹ ಪ್ರಾರಬ್ಧಕರ್ಮವಶದಿಂದ ಅಸುರಾವೇಶಾದಿಗಳಿಂದ ಇಂತಹ ಅಜ್ಞಾನವು ಅತ್ಯಲ್ಪವಾಗಿ ಬರುವದು. 'ಜ್ಞಾನರೂಪಾನಪಿ ಸುರಾನ್ ವಿನಾ ಪ್ರಾಣಂ ಕ್ವಚಿತ್ಪರೇ । ಆವಿಶಂತಿ ಹ್ಯತಸ್ತೇಷಾಮಜ್ಞಾನಾದಿ ನ ತು ಸ್ವತಃ' - ಭಾಗ.ತಾ. 11.5.

'ಕಲೌ ವೇಂಕಟಶೈಲೇತಿ ಕಥಂ ನಾಮ ಮಹಾಮುನೇ' ॥115॥

ಶತಾನಂದ ಉವಾಚ–

ಪುರಾ ಪುರಂದರೋ ನಾಮ ಸೋಮಯಾಜೀ ದೃಢವ್ರತಃ ।
ಕಾಲಹಸ್ತ್ಯಾಖ್ಯನಗರೇ ಸತ್ಯವಾಗ್ಬ್ರಾಹ್ಮಣೋಽಭವತ್ ॥116॥

ಅಪುತ್ರಸ್ಯಾಪಿ ವಿಪ್ರಸ್ಯ ನಾಭೂದ್ದುಃಖಂ ಸುತಾಪ್ತಯೇ ।
ದೈವೇನ ಪೂರ್ವಪುಣ್ಯೇನ ಪುತ್ರೋಽಭೂದ್ವೃದ್ಧಭೂಸುರೇ ॥117॥

ಚಕಾರ ನಾಮ ಲಿಖಿತಂ ಮಾಧವಂ ವಿಪ್ರಸಂಸದಿ ।
ಪಿತ್ರೋಪನೀತೋ ಬಾಲಸ್ತು ವವೃಧೇ ಚಂದ್ರವನ್ನೃಪ ॥118॥

ವೇದವೇದಾಂಗತತ್ತ್ವಜ್ಞಃ ಸರ್ವವಿದ್ಯಾವಿಶಾರದಃ ।
ತತಃ ಕಾಲಾಂತರೇ ಪುತ್ರಂ ಪ್ರಾಪ್ತದಾರಂ ಚಕಾರ ಹ ॥119॥

ಸ ಚಂದ್ರಲೇಖಯಾ ರೇಮೇ ಬಹುಕಾಲಂ ಚ ಮಾಧವಃ ।

ಜನಕ ರಾಜನು ಈ ವೃತ್ತಾಂತವನ್ನು ಕೇಳಿ 'ಕಲಿಯುಗದಲ್ಲಿ ಈ ಪರ್ವತಕ್ಕೆ ವೇಂಕಟಾಚಲವೆಂಬ ಹೆಸರು ಹೇಗೆ ಬಂದಿತು' ಎಂಬುದನ್ನು ತಿಳಿಸು' ಎಂದು ಶತಾನಂದರನ್ನು ಪ್ರಾರ್ಥಿಸಿದನು.(115)

ಮಾಧವನ ವೃತ್ತಾಂತ

ಹಿಂದೆ ಕಾಲಹಸ್ತಿ ಎಂಬ ಪುರದಲ್ಲಿ ಪುರಂದರನೆಂಬ ಅತ್ಯಂತ ದೃಢವ್ರತಿಯೂ, ಸೋಮಯಾಜಿಯೂ, ಸತ್ಯಭಾಷಿಯೂ ಆದ ಬ್ರಾಹ್ಮಣನಿದ್ದನು. (116) ಅವನಿಗೆ ಬಹುಕಾಲ ಮಕ್ಕಳಿಲ್ಲದಿದ್ದರೂ ಸಹ ಶಾಸ್ತ್ರಜ್ಞನಾದ್ದರಿಂದ ಅನಪತ್ಯತ್ವ ದುಃಖವುಂಟಾಗಲಿಲ್ಲ. ಪೂರ್ವಾರ್ಜಿತ ಪುಣ್ಯದಿಂದಲೂ ಮತ್ತು ಅದೃಷ್ಟದಿಂದ ವೃದ್ಧಾಪ್ಯ ಸಂದರ್ಭದಲ್ಲಿ ಆ ಬ್ರಾಹ್ಮಣನಿಗೆ ಮಗನೊಬ್ಬನು ಹುಟ್ಟಿದನು. (117–118) ಹುಟ್ಟಿದ ಮಗನಿಗೆ ಬ್ರಾಹ್ಮಣರ ಸಮ್ಮುಖದಲ್ಲಿ 'ಮಾಧವ' ಎಂಬ ನಾಮಕರಣವನ್ನು ಮಾಡಿದನು. ತಂದೆಯಿಂದ ಉಪನಯನ ಸಂಸ್ಕಾರವನ್ನು ಹೊಂದಿದ ಮಾಧವನು ಬಿದಿಗೆ ಚಂದ್ರನಂತೆ ವೃದ್ಧಿಯನ್ನು ಹೊಂದಿದನು. (119)

ವೇದವೇದಾಂಗತತ್ತ್ವಜ್ಞನಾದ, ಸರ್ವವಿದ್ಯಾವಿಶಾರದನಾದ ಮಾಧವನು ಪ್ರಾಪ್ತವಯಸ್ಕನಾದಾಗ

---

15. 1.ಬ್ರಹ್ಮಯಜ್ಞ-ಪಾಠ-ಪ್ರವಚನಗಳು, 2.ನೃಯಜ್ಞ-ಅತಿಥಿ ಸತ್ಕಾರ, 3.ದೈವಯಜ್ಞ-ಹೋಮ-ವೈಶ್ವದೇವಾದಿಗಳು, 4.ಪಿತೃಯಜ್ಞ-ತರ್ಪಣ ಮತ್ತು 5.ಭೂತಯಜ್ಞ-ಬಲಿಹರಣಾದಿಗಳು ಪಂಚಯಜ್ಞಗಳೆನಿಸಿಕೊಂಡು ನಿತ್ಯಕರ್ತವ್ಯಗಳಾಗಿರುವವು. 'ಬ್ರಹ್ಮಯಜ್ಞೋ ನೃಯಜ್ಞಶ್ಚ ದೈವಯಜ್ಞಶ್ಚ ಸತ್ತಮ । ಪಿತೃಯಜ್ಞೋ ಭೂತಯಜ್ಞಃ

ಪಂಚಯಜ್ಞಪರೋ[15] ನಿತ್ಯಂ ಪಂಚಾನನಸಮದ್ಯುತಿಃ ॥120॥

ತ್ರಿಸ್ಸಪ್ತವರ್ಷೋರ್ ರೇಮೇ ಸ ದ್ವಿತೀಯ ಇವ ಭಾಸ್ಕರಃ ।
ಸಾಕನ್ಯಾ ಪಾಂಡ್ಯದೇಶಿಯಾ ಪಾಂಡ್ಯಾನಾಂ ಚ ತಥಾಪ್ರಿಯಾ ॥121॥

ಪತ್ಯೌ ಸುಪ್ತೇ ಸ್ವಯಂ ಶಿಶ್ಯೇ ಪತ್ಯೌ ಭುಕ್ತೇ ತ್ವಭುಂಕ್ತ ಚ ।
ಕದಾಚಿತ್ ದ್ವಿಜಪುತ್ರಸ್ತು ದಿವಾಸಂಗಮತತ್ಪರಃ ॥122॥

ರಾಜಪುತ್ರೀಂ ಸಮಾಸಾದ್ಯ ರಾಜನ್ಯಾಮಾತುರೋಽಬ್ರವೀತ್ ।
'ಮಮೇಚ್ಛಾ ವರ್ತತೇ ಭದ್ರೇ ಸಂಗಮೇ ತವ ಭಾಮಿನಿ' ॥123।

ಪತಿವಾಕ್ಯಮುಪಾಕರ್ಣ್ಯ ಪತಿಂ ಪ್ರಾಹ ಪ್ರಜಾಪತೇ ।

ಚಂದ್ರಲೇಖೋವಾಚ–

'ಶರೀರಮಸ್ಥಿಮಾಂಸಾದ್ಯೈಃ ಪೂರಿತಂ ಪುರುಷರ್ಷಭ ॥124॥

ತಂದೆಯು ಅವನಿಗೆ ಚಂದ್ರಲೇಖೆಯೆಂಬ ಕನ್ಯೆಯೊಂದಿಗೆ ವಿವಾಹವನ್ನು ಮಾಡಿದನು. ವಿವಾಹ ಸಂಸ್ಕಾರವನ್ನು ಹೊಂದಿದ ಮಾಧವನು ನಿತ್ಯದಲ್ಲಿ ಪಂಚಯಜ್ಞಗಳನ್ನಾಚರಿಸುತ್ತಾ ಬೆಂಕಿಯಂತೆ ತೇಜಸ್ವಿಯಾಗಿ, ಮತ್ತೊಬ್ಬ ಸೂರ್ಯನಂತೆ ಇಪ್ಪತ್ತೊಂದು ವರ್ಷಗಳಷ್ಟು ಕಾಲ ಚಂದ್ರಲೇಖೆಯೊಡನೆ ಗೃಹಸ್ಥಾಶ್ರಮವನ್ನು ಆಚರಿಸಿ ದನು. (120–121) ಆ ಚಂದ್ರಲೇಖೆಯಾದರೋ ಪಾಂಡ್ಯದೇಶ ದವಳಾಗಿದ್ದು ಅತ್ಯಂತ ಪತಿವ್ರತೆಯಾಗಿದ್ದಳು. ಪತಿಯು ಮಲಗಿದ ಅನಂತರದಲ್ಲಿ ಮಲಗುವದು, ಅವನ ಭೋಜನಾನಂತರದಲ್ಲಿ ಭೋಜನ ವನ್ನು ಮಾಡುವದು ಇವೇ ಮೊದಲಾಗಿ ಪತಿಸೇವೆಯನ್ನು ಮಾಡುತ್ತಿದ್ದಳು. (122–123)

### ಮಾಧವನ ದಿವಾಸಂಗಮ ಕೋರಿಕೆ

ಒಂದು ದಿನ ಕಾಮಾತುರನಾದ ಬ್ರಾಹ್ಮಣಕುಮಾರನಾದ ಮಾಧವನು ತನ್ನ ಪ್ರಾರಬ್ಧಕರ್ಮಾನುಸಾರವಾಗಿ ದಿವಾಸಂಗಮವನ್ನು ಬಯಸಿ, ರಾಜಪುತ್ರಿಯಾದ ಚಂದ್ರಲೇಖೆಯನ್ನು ಹೊಂದಿ 'ಈಗ ನಿನ್ನೊಂದಿಗೆ ವಿಹಾರವನ್ನು ಮಾಡಲು ನನಗೆ ಇಚ್ಛೆಯುಂಟಾಗಿರುವದು' ಎಂದು ನುಡಿದನು. ಗಂಡನ ಮಾತನ್ನು ಕೇಳಿದ ಪತಿವ್ರತೆಯಾದ ಚಂದ್ರಲೇಖೆಯು ಮಾಧವನಿಗೆ (123–124) 'ಹೇ ಪುರುಷಶ್ರೇಷ್ಠನೇ! ಈ ಶರೀರವು ಎಲಬು–ಮಾಂಸ–ಮಜ್ಜಾ–ರಕ್ತ–ಚರ್ಮಗಳಿಂದ

---

ಪಂಚಯಜ್ಞಾಃ ಪ್ರಕೀರ್ತಿತಾಃ (ಪದ್ಮ ಪು.೮16) ಪಾಠೋ ಹೋಮಶ್ಚಾತಿಥೀನಾಂ ಸಪರ್ಯಾ ತರ್ಪಣಂ ಬಲಿಃ
। ಏತ್ಯೈಃ ಪಂಚಮಹಾಯಜ್ಞೈಃ ಬ್ರಹ್ಮಯಜ್ಞಾದಿನಾಮಕೈಃ (ಅಮರ)

ಶರೀರೇಣ ಶರೀರಸ್ಯ ಸಂಗಮಃ ಸಾಧ್ವಸಮ್ಮತಃ ।
ತತ್ರಾಪಿ ದಿವಸಕ್ರೀಡಾಮಯುಕ್ತಾಂ ಮುನಯೋ ವಿದುಃ ।125॥

ನಿಕೇತನೇ ಪಿತಾ ಮಾತಾ ಚಾಗ್ನಿಹೋತ್ರಂ ಚ ದೇವರಾಟ್ ।
ಪ್ರಭಾಕರಪ್ರಭಾಂ ಪಶ್ಯ ತ್ಯಜ ಕಾಮಂ ದ್ವಿಜಾತ್ಮಜ' ॥126॥

ವಧೂವಚನಮಾಕರ್ಣ್ಯ ಮಾಧವೋ ವಾಕ್ಯಮಬ್ರವೀತ್ ।

ಮಾಧವ ಉವಾಚ–

'ಭವ ಭಾಮಿನಿ ಮೇ ಸೌಖ್ಯಂ ಪೂರಯಾದ್ಯ ಮನೋರಥಮ್ ॥127।

ತವ ಸ್ಯಾತ್ಪುತ್ರಸೌಭಾಗ್ಯಂ ಪರಂ ಪತಿಸಲೋಕತಾ' ।
ಭರ್ತುರ್ವಚನಮಾಕರ್ಣ್ಯ ಭರ್ತಾರಂ ವಾಕ್ಯಮಬ್ರವೀತ್ ॥128॥

ಚಂದ್ರಲೇಖೋವಾಚ–

ಗಚ್ಛಾಮಿ ಜಲಹೇತೋಸ್ತು ಗಚ್ಛ ತ್ವಂ ಪುರತೋ ಮಮ' ।
ತದಾ ಜಗಾಮ ರಾಜೇಂದ್ರ ಕುಶಾರ್ಥಂ ತು ಸ್ವಭಾವತಃ ॥129॥

ಸಾ ಜಗಾಮಾಥ ಪಾನೀಯಪಾತ್ರಮಾದಾಯ ಭಾಮಿನೀ ।

ತುಂಬಿರುವದು. ಇಂತಹ ಶರೀರಗಳ ಅನುಚಿತ ಸಂಯೋಗವು ಸಾಧುಗಳಿಗೆ ಅಸಮ್ಮತವಾಗಿರುವದು. ಅದರಲ್ಲಿಯೂ ಹಗಲು ಹೊತ್ತಿನಲ್ಲಿ ರತಿಕ್ರೀಡೆಯು ಅತ್ಯಂತ ಹೇಯವೆಂದು ಋಷಿಗಳ ಮತವಾಗಿರುವದು. (124–125) ಮನೆಯಲ್ಲಿ ತಂದೆ, ತಾಯಿ, ಅಗ್ನಿಹೋತ್ರ, ದೇವತೆಗಳ ಸನ್ನಿಧಾನ, ಸೂರ್ಯ ಇವರೆಲ್ಲರೂ ಇರುವರು. ಇವರ ಸನ್ನಿಧಾನದಲ್ಲಿ ಸಂಗಮವು ಅಯುಕ್ತವಾದ್ದರಿಂದ ಕಾಮವನ್ನು ತ್ಯಜಿಸು' ಎಂದು ನುಡಿದಳು. (126) ಆಗ ಮಾಧವನು 'ಹೇ ಚಂದ್ರಲೇಖೆಯೇ! ನನ್ನ ಮನೋರಥವನ್ನು ಪೂರೈಸಿ ನನಗೆ ಸುಖವನ್ನುಂಟುಮಾಡು. ನಿನಗೂ ಸಹ ಪುತ್ರಸಂಪತ್ತಿಯು ದೊರೆಯುವದಲ್ಲದೇ ಪತಿಯ ಸಾಲೋಕ್ಯವೂ ದೊರೆಯುವದು' ಎಂದು ನುಡಿದನು. ಇದನ್ನು ಕೇಳಿದ ಚಂದ್ರಲೇಖೆಯು ಮಾಧವನನ್ನು ಕುರಿತು (127–128) 'ನಾನು ನೀರನ್ನು ತರುವದರಗೋಸ್ಕರವಾಗಿ ಹೋಗುವೆನು. ನೀನು ಸಹ ನನ್ನೊಡನೆ ಬರಬೇಕು' ಎಂದು ನುಡಿದಾಗ ಬ್ರಾಹ್ಮಣನು ಯಜ್ಞಾರ್ಥವಾಗಿ ಕುಶಾದಿಗಳನ್ನು ಸಂಗ್ರಹಿಸಲು ಮಡದಿಯೊಡನೆ ವನಕ್ಕೆ ಹೋದನು. (129)

### ವನಗಮನ–ಕುಂತಲಾದರ್ಶನ

ಚಂದ್ರಲೇಖೆಯು ಕುಡಿಯುವ ನೀರನ್ನು ತರುವದರಗೋಸ್ಕರವಾಗಿ ಪಾತ್ರೆಯನ್ನು ಹಿಡಿದು

ತಾಮನ್ವಗಾನ್ಮಾಧವೋऽಪಿ ವನಕೂಟಮಭಿದ್ರುತಃ ॥130॥

ತತ್ರಾಂತರೇ ವಿಪ್ರಪುತ್ರೋ ದದರ್ಶಾನ್ಯಸ್ತ್ರಿಯಂ ಪುನಃ ।
ವನಾಂತರೇ ವಸಂತೀಂ ಚ ವನಿತಾಂ ದ್ರುಮಮೂಲಗಾಮ್ ॥131॥

ವಿಚಿತ್ರರೂಪಲಾವಣ್ಯಾಂ ಪೂರ್ಣಚಂದ್ರನಿಭಾನನಾಮ್ ।
ಧವಲಾಂಬರಸಂಬದ್ಧಾಂ ಕಟಿಮೇಖಲಯಾऽನ್ವಿತಾಮ್ ॥132॥

ಸುನಾಸಾಂ ಸುಭಗಾಂ ಸುಭ್ರೂಂ ಸುಪೂರ್ಣಸುಪಯೋಧರಾಮ್।
ತಾಂ ದೃಷ್ಟ್ವಾ ಮೋಹಿತಃ ವಿಪ್ರಃಕುಂತಲಾಂನೀಲಕುಂತಲಾಮ್ ॥133॥

ಸ್ನಿಗ್ಧಕಂಚುಕಸಂಬದ್ಧಾಂ ಕೋಕಿಲಸ್ವರರಂಜಿತಾಮ್ ।
ಅಂಜನಾಲಿಪ್ತನಯನಾಂ ಮಂಜುಲಸ್ವರರಂಜಿತಾಮ್ ॥134॥

ಪಾದೇನ ವಿಲಿಖಂತೀಂ ಗಾಂ ಜಾನುಸ್ಥಿತಶಿರೋರುಹಾಮ್ ।
ದೃಷ್ಟ್ವಾ ಕ್ಲಿಷ್ಟಮನಾ ಭೂತ್ವಾ ಚಿಂತಯನ್‌ಬ್ರಹ್ಮನಿರ್ಣಯಮ್ ॥135॥

ಸ್ವಭಾರ್ಯಾಂ ಪ್ರತ್ಯುವಾಚೇದಂ 'ಗಚ್ಛ ಪ್ರಾಣಪ್ರಿಯೇ ಗೃಹಂ ।
ಇಚ್ಛಾ ಮೇ ಪೂರ್ಣತಾಂ ಯಾತಾ ತ್ವದ್ಭಕ್ತ್ಯಾ ಪರಿತೋಷಿತಃ' ॥136॥

ಚಂದ್ರಲೇಖೋವಾಚ–

ಹೊರಟಳು. ಮಾಧವನೂ ಸಹ ಅವಳನ್ನೇ ಹಿಂಬಾಲಿಸಿ ವನಕ್ಕೆ ಹೋದನು. (130)

ಪ್ರಾರಬ್ಧಕರ್ಮವಿಪಾಕದಿಂದ ಮಾಧವನು ಅರಣ್ಯದ ಮಧ್ಯಭಾಗದಲ್ಲಿ ಮರದ ಕೆಳಭಾಗದಲ್ಲಿ ಕುಳಿತ, ಆಶ್ಚರ್ಯಕರವಾದ ರೂಪಸೌಂದರ್ಯ ಗಳಿಂದ ಭರಿತಳಾದ, ಪೂರ್ಣಚಂದ್ರನನ್ನು ಹೋಲುವ ಮುಖಕಾಂತಿ ಯಿಂದ ಕೂಡಿದ್ದ, ಬಿಳಿಯ ಬಟ್ಟೆಗಳನ್ನು ಧರಿಸಿದ, ಒಡ್ಯಾಣ, ಮೇಖಲಾ ಇವುಗಳನ್ನು ಧರಿಸಿದ, ಸುಂದರವಾದ ಮೂಗು, ಹುಬ್ಬು, ಮುಖ, ಪುಷ್ಟವಾದ ಸ್ತನಗಳು ಇವುಗಳಿಂದ ಉಪೇತವಾದ ಅನ್ಯಸ್ತ್ರೀಯೊಬ್ಬಳನ್ನು ಕಂಡನು. (131–133) ಸುಂದರವಾದ ಕಪ್ಪಾದ ನೀಳವಾದ ಕೇಶಗಳಿಂದ ಕೂಡಿದ, ಬಿಗಿಯಾದ ಬಟ್ಟೆಗಳನ್ನು ಧರಿಸಿದ್ದ, ಕೋಗಿಲೆಯಂತೆ ಇಂಪಾದ ಸ್ವರದಿಂದ ಕೂಡಿದ, ಕಣ್ಣಿಗೆ ಅಂಜನವನ್ನು ಧರಿಸಿದ, ಮೊಳಕಾಲಿನವರೆಗೆ ಕೂದಲುಗಳನ್ನು ಹೊಂದಿದ್ದ, ತನ್ನ ಪಾದಗಳಿಂದ ಭೂಮಿಯಲ್ಲಿ ಬರೆಯುತ್ತಿದ್ದ ಆ ಅನ್ಯ ಸ್ತ್ರೀಯನ್ನು ನೋಡಿ ಬ್ರಹ್ಮನ ನಿರ್ಣಯವನ್ನು ವಿಚಾರಮಾಡಿದ ಮಾಧವನು ಮೋಹವನ್ನು ಹೊಂದಿದನು. ಅನಂತರ ತನ್ನ ಮಡದಿಗೆ 'ಹೇ ಚಂದ್ರಲೇಖೆಯೇ! ನೀನು ಇನ್ನು ಮನೆಗೆ ಹೋಗು. ನನ್ನ ಇಚ್ಛೆಯು

'ಯುಕ್ತಮುಕ್ತಂ ತ್ವಯಾ ಭದ್ರ ಗಚ್ಛಾಮಿ ಭವನಂ ಸ್ವಕಮ್' ।
ಭರ್ತುರಾಜ್ಞಾಮುಪಾನೀಯ ಚಂದ್ರಲೇಖಾ ಗೃಹಂ ಗತಾ ॥137॥

ಯಾವದ್ಗಚ್ಛತಿ ಸಾ ಭಾರ್ಯಾ ತಾವತ್ತತ್ರ ಸ್ಥಿತೋಽಭವತ್ ।
ಗತಾಯಾಂ ಸ್ವಪ್ರಿಯಾಯಾಂ ಚ ತಾಂ ಬಾಲಾಂ ಪರ್ಯಚಿಂತಯತ್ ॥138॥

ಶನೈರ್ಜಗಾಮ ರಾಜೇಂದ್ರ ಸ್ಮರೇಣ ಹೃತಚೇತನಃ ।
ಸಮೀಪಸ್ಥಂ ಮುನಿಂ ಪ್ರೇಕ್ಷ್ಯ ರಾಜನ್ಪೃಥುಲಲೋಚನಾ ॥139॥

ಸ್ವರಭೇದಂ ಪ್ರಕುರ್ವಂತೀ ವಾಕ್ಯಮೂಚೇಽಥ ಮಾಧವಮ್ ।

ಕುಂತಲೋವಾಚ–

'ಮಾ ಯಾಹಿ ಮುನಿಶಾರ್ದೂಲ ಮತ್ಸಮೀಪಂ ಮಹಾಮತೇ' ॥140

ಸ ಚ ತದ್ವಚನಂ ಶ್ರುತ್ವಾ ಸಹಸಾ ವಾಕ್ಯಮಬ್ರವೀತ್ ।

ಮಾಧವ ಉವಾಚ–

'ಕಾ ತ್ವಂ ಕಲ್ಯಾಣಿ ಭದ್ರಂ ತೇ ಜನನೀ ಜನಿತಾ ಚ ಕಃ ॥141॥

ಆವಾಸಸ್ತವ ಭದ್ರಂ ತೇ ಕಸ್ಮಿನ್ ರಾಷ್ಟ್ರೇ ವರಾನನೇ' ।
ಸಾ ಚೇತ್ಥಮುಕ್ತಾ ಮುನಿನಾ ಜಾತಿಮಾಹ ಮನಸ್ವಿನೀ ॥142॥

ಪೂರ್ಣವಾಯಿತು. ನಿನ್ನ ಭಕ್ತಿಯಿಂದ ನಾನು ಪರಿತುಷ್ಟ ನಾಗಿರುವೆನು' ಎಂದು ನುಡಿದನು. (134–136) ಆಗ ಚಂದ್ರಲೇಖೆಯು 'ನೀವು ಹೇಳುದ್ದು ಸರಿಯಾಗಿರುವದು. ನಾನು ಮನೆಗೆ ಹೋಗುವೆನು' ಎಂದು ನುಡಿದು, ಗಂಡನ ಆಜ್ಞೆಯನ್ನು ಪಡೆದು ಮನೆಗೆ ಹೋದಳು. (137) ತನ್ನ ಮಡದಿಯು ಮನೆಗೆ ಹೋಗುವವರೆಗೂ ಅಲ್ಲಿಯೇ ಇದ್ದ ಮಾಧವನು ಅನಂತರ ಆ ಕುಂತಲೆಯಿದ್ದೆಡೆಗೆ ಕಾಮವಶನಾಗಿ ಮೆಲ್ಲಗೆ ಹೋದನು. (138)

### ಕುಂತಲೆಯಲ್ಲಿಯ ಮಾಧವನ ಅನುರಾಗ

ತನ್ನ ಸಮೀಪದಲ್ಲಿರುವ ಬ್ರಾಹ್ಮಣನನ್ನು ನೋಡಿದ ವಿಶಾಲವಾದ ನಯನಗಳನ್ನು ಹೊಂದಿದ್ದ ಆ ಸ್ತ್ರೀಯು ಸ್ವರಭೇದವನ್ನು ಮಾಡುತ್ತಾ ಮಾಧವನನ್ನು ಕುರಿತು 'ಹೇ ಮುನಿಶ್ರೇಷ್ಠನೆ ! ನನ್ನ ಬಳಿ ಬರಬೇಡ' ಎಂದು ನುಡಿದಳು. ಅವಳ ಮಾತನ್ನು ಕೇಳಿದ ಮಾಧವನು (139–141) 'ಹೇ ಕಲ್ಯಾಣಿಯೇ! ನೀನಾರು? ನಿನ್ನ ತಂದೆ ತಾಯಿಗಳು ಯಾರು? ನೀನು ಎಲ್ಲಿ ವಾಸವಾಗಿರುವಿ?' ಎಂದು ನುಡಿದನು. ಮಾಧವನ ಮಾತನ್ನು ಕೇಳಿ ಕುಂತಲೆಯು (142) 'ಅಂತ್ಯಜ ಸ್ತ್ರೀಪುರುಷರಿಂದ

ಕುಂತಲೋವಾಚ–

'ಕಿಂ ಮಾಂ ಪೃಚ್ಛಸಿ ಪಾಪಿಷ್ಠಾಮಂತ್ಯಜಾತಿಕುಲೋದ್ಭವಾಮ್ ।
ಅಂತ್ಯಜಾಂತ್ಯಜಯೋರ್ಜಾತಾಂಸುರಾಮಾಂಸಾಶಿನೀಂಖಲಾಮ್ ॥143॥

ಮಧ್ಯದೇಶೇನಿವಾಸೋ[16] ಮೇ ಕಿಂ ತ್ವಂ ಪೃಚ್ಛಸಿ ಭೂಸುರ ।
ವೇದವೇದಾಂತವೇದೀ ತ್ವಂ ನ ಮಾಂ ದ್ರಷ್ಟುಮಿಹಾರ್ಹಸಿ ॥144॥

ಮಾಂ ಸ್ಪ್ರಷ್ಟುಂ ಕ್ರೀಡಿತುಂ ವಾಽಪಿ ಕಥಮಿಚ್ಛಸಿ ಮೂಢಧೀಃ' ।
ಜಲ್ಪಂತೀಂ ತಾಂ ಸಮಾಲೋಕ್ಯ ಮಾಧವೋ ವಾಕ್ಯಮಬ್ರವೀತ್ ॥145॥

ಮಾಧವ ಉವಾಚ–

'ವೃಥಾ ನಾರಾಯಣಾಜ್ಜಾತೋ ಬ್ರಹ್ಮಾ ಲೋಕಪಿತಾಮಹಃ ।
ಅಂಧ ಏವ ಮಹಾರಾಜ ರೋಚತೇ ಮೇ ಮತಿಃ ಸದಾ ॥146॥

ವೃಥಾ ಸಂಜನಯಾಮಾಸ ವನಿತಾಂ ವನಹೇತವೇ ।
ತಥಾಽಪಿ ಮಮ ಬುದ್ಧಿಸ್ತು ತ್ವಯ್ಯೇವ ರಮತೇ ಸದಾ ॥147॥

ಯತಸ್ತ್ವಯ್ಯೇವ ನಿರತಂ ಮನೋ ಮೇ ಕೃತವಾನಜಃ ।

ಅಂತ್ಯಜ ಕುಲದಲ್ಲಿ ಹುಟ್ಟಿದ, ಸುರಾಮಾಂಸಾದಿ ಅಭಕ್ಷ್ಯಪದಾರ್ಥಗಳನ್ನು ಭಕ್ಷಣಮಾಡುವ, ಪಾಪಿಷ್ಠೆಯಾದ, ದುಷ್ಟೆಯಾದ ನನ್ನ ದೇಶ ಕುಲಾದಿಗಳನ್ನು ಕೇಳುವದರಿಂದಾದರೂ ಏನು? ನಾನು ಮಧ್ಯದೇಶದಲ್ಲಿ ವಾಸವಾಗಿ ಇರುವೆನು. ನೀನಾದರೂ ವೇದ-ವೇದಾಂತಗಳನ್ನು ತಿಳಿದವನಾಗಿರುವಿ. ನನ್ನನ್ನು ನೋಡುವದೂ ಸಹ ಪಾಪಕರ. ಅಂತಹ ನೀನು ನನ್ನನ್ನು ಮುಟ್ಟಲು, ನನ್ನೊಂದಿಗೆ ಕ್ರೀಡಿಸಲು ಹೇಗೆ ತಾನೆ ಬಯಸುವಿ?' ಎಂದು ನುಡಿದಳು. (142–145)

### ಮಾಧವ ನಿವೇದಿತ ಭೋಗಕಾರಣಗಳು

ಇದನ್ನು ಕೇಳಿದ ಮಾಧವನು 'ನನಗಲ್ಲದೇ ನಿನ್ನನ್ನು ಕೇವಲ ಕಾಡಿಗೋಸ್ಕರವಾಗಿ ಲೋಕಪಿತಾಮಹನಾದ ಬ್ರಹ್ಮನು ಸೃಷ್ಟಿಸಿದ್ದಲ್ಲಿ ಅವನು ಅಂಧನೇ ಸರಿ. ನಾರಾಯಣನಿಂದ ಅವನು ಹುಟ್ಟಿರುವದೇ ವ್ಯರ್ಥವಾಗಿರುವದು. ನನ್ನ ಬುದ್ಧಿಯು ನಿನ್ನಲ್ಲೆ ರಮಣಮಾಡುತ್ತಿರುವದು.

16. 'ಹಿಮವದ್ವಿಂಧ್ಯಯೋರ್ಮಧ್ಯೇ ಯತ್ಪ್ರಾಗ್ವಿನಶನಾದಪಿ । ಪ್ರತ್ಯಗೇವ ಪ್ರಯಾಗಾಚ್ಚ ಮಧ್ಯದೇಶಃ ಸ ಉಚ್ಯತೇ' ಇತಿ ಮನುಸ್ಮೃತಿಃ ॥

ಅತೋ ಮನೋ ಮೇ ಸಂಪೂರ್ಯ ಜೀವಯಾದ್ಯ ಶುಚಿಸ್ಮಿತೇ' ॥148॥

ಕುಂತಲೋವಾಚ–

'ಕುಲಾಟನಂ ಪ್ರಕುರ್ವಾಣಾಃ ಕುಲಮಾಶತಮಾಕುಲಮ್ ।
ದಹಂತೀತಿ ವದಂತಿ ಸ್ಮ ಕುಲಜಾ ವರಮಾನಿನಃ' ॥149॥

ಮಾಧವ ಉವಾಚ–

'ಲವಣೋದಕಜಾತಾನಿ ರತ್ನಾನಿ ವಿವಿಧಾನಿ ಚ ।
ಅಂಗೀಕುರ್ವಂತಿ ದೇವಾಶ್ಚ ತೇಜಃಪ್ರಾಧಾನ್ಯಕಾರಣಾತ್ ॥150॥

ತಸ್ಮಾದಹಂ ಸುರೂಪತ್ವಾತ್ ತ್ವಯಿ ಭೋಗಂ ಕರೋಮಿ ಚ ।
ನರಕಂ ವಾ ಮೃತೋ ಯಾಸ್ಯೇ ಪಿತೃಭಿಃ ಸಹ ಸುಸ್ಮಿತೇ' ॥151॥

ಇತ್ಯೇವಮುಕ್ತಾ ದ್ವಿಜಬಾಲಕೇನ
ರುರೋದ ಕನ್ಯಾ ತರುಣಾರುಣಪ್ರಭಾ ।
ದಿವೌಕಸೋ ವಿಪ್ರವರೋ ವಿಮೋಚ್ಯೋ
ದೋಷಾದಮುಷ್ಮಾದಸತೀ ಪ್ರಸಂಗಾತ್ ॥152॥

ಯಾವ ಕಾರಣದಿಂದ ನನ್ನ ಮನಸ್ಸು ನಿನ್ನಲ್ಲಿಯೇ ಆಸಕ್ತವಾಗುವಂತೆ ಬ್ರಹ್ಮನು ಮಾಡಿರುವನೋ ಆದ್ದರಿಂದ ನೀನು ನನಗೋಸ್ಕರವಾಗಿಯೇ ಜನಿಸಿರುವಿ. ಆದ್ದರಿಂದ ನನ್ನೊಡನೆ ಕ್ರೀಡಿಸಿ ನನ್ನ ಮನೋರಥವನ್ನು ಪೂರ್ಣಗೊಳಿಸಿ ನನ್ನನ್ನು ಬದುಕಿಸು' ಎಂದು ನುಡಿದನು. (146–148) ಇದನ್ನು ಕೇಳಿದ ಕುಂತಲೆಯು 'ಕುಲಾಚಾರಗಳಿಗೆ ವಿರುದ್ಧವಾದ ಪರಸ್ತ್ರೀಗಮನಾದಿಗಳನ್ನು ಮಾಡುವ ಕೃತ್ಯಗಳು ನೂರಾರು ಕುಲಗಳನ್ನು ದಹನ ಮಾಡುತ್ತವೆಯೆಂದು ಕುಲೋತ್ಪನ್ನರಾದ ಶ್ರೇಷ್ಠಜ್ಞಾನಿಗಳು ಹೇಳುತ್ತಾರೆ. ಆದ್ದರಿಂದ ಇಂತಹ ಕೃತ್ಯವನ್ನು ಮಾಡಬಾರದೆಂದು ಮಾಧವನಿಗೆ ಹೇಳಿದಳು. ಆಗ ಮಾಧವನು 'ಲವಣಸಮುದ್ರದಿಂದ ಜನಿಸಿದ ರತ್ನಗಳು ಹೀನ ಸ್ಥಳದಲ್ಲಿ ಜನಿಸಿದ್ದರೂ ಸಹ ತೇಜಸ್ಸಿನ ಕಾರಣದಿಂದ ಅವುಗಳು ದೇವತೆಗಳಿಂದಲೂ ಸಹ ಗ್ರಾಹ್ಯವೆನಿಸಿರುವವು. ಹಾಗೆಯೇ ಸೌಂದರ್ಯ ರೂಪ ಕಾರಣದಿಂದ ನೀನು ಗ್ರಾಹ್ಯಳಾಗಿರುವಿ ಯಾದ್ದರಿಂದ ನಿನ್ನಲ್ಲಿ ಭೋಗವನ್ನು ಮಾಡುವೆನು. ಸತ್ತಮೇಲೆ ಪಿತೃಗಳಿಂದ ಸಹಿತನಾಗಿ ನರಕವನ್ನಾಗಲಿ ಅನುಭವಿಸುವೆನೇ ಹೊರತು ನಿನ್ನ ಸಂಗವನ್ನು ಬಿಡೆನು' ಎಂದು ನುಡಿದನು. (150–151)

### ಕುಂತಲಾನಿವೇದಿತ ಅಸ್ಪೃಶ್ಯತೆಯ ಕಾರಣಗಳು

ಹೀಗೆ ಬ್ರಾಹ್ಮಣನ ಮಾತನ್ನು ಕೇಳಿದ ಕುಂತಲೆಯು ಗಟ್ಟಿಯಾಗಿ ಅಳುತ್ತಾ 'ಹೇ ದೇವತೆಗಳೆ,

ದಿಗ್ದೇವತಾಯಾಶ್ಚ ಗಣಾಧಿಪಾ ಯೇ
ಭಾನ್ವಿಂದುಪೂರ್ವಾಶ್ಚ ನವಗ್ರಹಾ ಯೇ ।
ಶೃಣ್ವಂತು ವಾಕ್ಯಂ ಮಮ ವಿಪ್ರಮುಖ್ಯೋ
ವೃಥಾ ಮೃತಿಂ ಯಾಸ್ಯತಿ ಪಾಪಿಸಂಗಾತ್ ॥153॥

ವಿಲಲಾಪ ಮಹಾರಾಜ ಬ್ರಾಹ್ಮಣಾರ್ಥಂ ಸುಮಧ್ಯಮಾ ।
'ಮಾ ಸ್ಪೃಶಾದ್ಯ ಮಹೀದೇವ ಪಾಪಿನೀಂ ವ್ಯಭಿಚಾರಿಣೀಮ್ ॥154॥

ಕಃ ಸ್ಪೃಶೇದಗ್ನಿಮಾರ್ತಃ ಸನ್ ಸರ್ಪಂ ವ್ಯಾಘ್ರಂ ಗಜಂ ದ್ವಿಜ ।
ಪರಪತ್ನ್ಯಗ್ನಿತುಲ್ಯಾ ಸ್ಯಾತ್ ಕಿಮು ಚಾಂಡಾಲ ಕನ್ಯಕಾ ॥155॥

ಉತ್ತಮಂ ಪದಮಾಸ್ಥಾಯ ನೀಚಾ ಇಚ್ಛಂತ್ಯಧೋಗತಿಮ್ ।
ಜ್ಞಾನಿನೋ ನ ತಥಾ ವಿಪ್ರ ತವ ಬುದ್ಧಿಸ್ತು ತಾದೃಶೀ ॥156॥

ಜಾತೀ ದ್ವೇ ನಿರ್ಮಿತೇ ಪೂರ್ವಂ ವಿಷ್ಣುನಾ ದ್ವಿಜಸತ್ತಮ ।
ಪುಂಸ್ತ್ವಸ್ತ್ರೀತ್ವಪ್ರಭೇದೇನ ಚಾತುರ್ವರ್ಣ್ಯಂ ಚ ಭೂಸುರ ॥158॥

ಬ್ರಾಹ್ಮಣಸ್ಯ ಬ್ರಹ್ಮಯೋನ್ಯಾಂ ರಂತುಮಿಚ್ಛಾ ಪ್ರಶಸ್ಯತೇ ।
ತಥಾಽನ್ಯೇಷಾಂ ಚ ವರ್ಣಾನಾಂ ಸ್ವಸ್ವಜಾತೌ ಪ್ರಶಸ್ಯತೇ ॥159॥

ದಿಗ್ದೇವತೆಗಳೇ, ಗಣದೇವತೆಗಳೇ, ಸೂರ್ಯಚಂದ್ರರೇ ಮೊದಲಾದ ನವಗ್ರಹಗಳೇ! ನನ್ನ ಮಾತನ್ನು ಕೇಳಿರಿ. ಈ ಬ್ರಾಹ್ಮಣನನ್ನು ನನ್ನಿಂದ ಬಿಡಿಸಿರಿ. ಇಲ್ಲವಾದಲ್ಲಿ ಪಾಪಿಷ್ಠೆಯಾದ ನನ್ನ ಸಂಗದಿಂದ ವ್ಯರ್ಥವಾಗಿ ಮರಣವನ್ನು ಹೊಂದುವನು. (152–153) ಹೇ ಬ್ರಾಹ್ಮಣನೇ! ವ್ಯಭಿಚಾರಿಯೂ ಪಾಪಿಷ್ಠೆಯೂ ಆದ ನನ್ನನ್ನು ಮುಟ್ಟಬೇಡ. ಪರಪತ್ನಿಯೇ ಅಗ್ನಿಸಮವೆಂದ ಮೇಲೆ ಚಾಂಡಾಲ ಕನ್ನಿಕೆಯ ಬಗ್ಗೆ ಹೇಳುವದೇನು? ಯಾರು ತಾನೆ ಆರ್ತನಾಗಿ ಸರ್ಪ, ಹುಲಿ, ಆನೆ ಇವುಗಳನ್ನು ಆಶ್ರಯಿಸಿಯಾನು? (154–155) ಉತ್ತಮ ಸ್ಥಾನವನ್ನು ಹೊಂದಿದ ಜ್ಞಾನಿಗಳಾದ ವ್ಯಕ್ತಿಗಳಾರೂ ನೀಚಸ್ಥಾನವನ್ನು ಬಯಸುವದಿಲ್ಲ. ಆದರೆ ನೀನಿಂದು ನನ್ನ ಸಂಗವನ್ನು ಮಾಡಿ ಅಧೋಗತಿಯನ್ನು ಬಯಸುತ್ತಿರುವಿ. (156) ಹೇ ಬ್ರಾಹ್ಮಣನೇ! ಹಿಂದೆ ವಿಷ್ಣುವಿನಿಂದ ಸ್ತ್ರೀ ಮತ್ತು ಪುರುಷರೆಂಬ ಎರಡು ಜಾತಿಗಳು ನಿರ್ಮಿತವಾದವು. ಅವುಗಳಲ್ಲಿ ಪುನಃ ಚಾತುರ್ವರ್ಣ್ಯವು. ಬ್ರಾಹ್ಮಣ ಪುರುಷನಿಗೆ ಬ್ರಾಹ್ಮಣ ಸ್ತ್ರೀಯಲ್ಲಿ ಸಂಗಮವು ಉಕ್ತವಾಗಿರುವದು. ಹಾಗೆಯೇ ಇತರ ಜಾತಿಯವರಿಗೂ ಸಹ ಅವರವರ ಜಾತಿಯ ಸ್ತ್ರೀಯರಲ್ಲಿ ಕ್ರೀಡಿಸುವದು ಉಚಿತವೆನಿಸುವದು. ಇದಕ್ಕೆ ವ್ಯತಿರಿಕ್ತವಾಗಿ ಅನ್ಯಜಾತಿಯ ಸ್ತ್ರೀಯನ್ನು ಹೊಂದುವದು ಧರ್ಮತ್ಯಾಗವೆನಿಸುವದು. (159) ಇನ್ನು ನಮ್ಮೀರ್ವರ

ವಿಪರೀತಮಿಮಂ ಮನ್ಯೇ ಧರ್ಮತ್ಯಾಗಂ ದ್ವಿಜನ್ಮನಾಮ್ ।
ಶರೀರಂ ತವ ವಿಪ್ರೇಂದ್ರ ವೇದಪೂತಂ ವಿಶೇಷತಃ ॥159॥

ಋತುಕಾಲೇ ಯದಾ ಮಾತುಸ್ತವ ಪಿತ್ರಾ ಸಮಾಗಮೇ ।
ರೇತಸ್ಸೃಷ್ಟಂ ವೇದಪೂತಂ ಗರ್ಭಾಧಾನಮಿದಂ ವಿದುಃ ॥160॥

ಸೀಮಂತಂ ಕಲ್ಪಯಾಮಾಸುಃ ಮಂತ್ರೈರ್ವೇದಮಯೈರ್ದ್ವಿಜ ।
ದಶಮೇ ಮಾಸಿ ಸಂಪ್ರಾಪ್ತೇ ಪ್ರಾಸೂತ ಜನನೀ ತವ ॥161॥

ತಥೈವ ಜಾತಕರ್ಮಾದಿ ಕೃತವಾನ್ ಶಾಸ್ತ್ರಪೂರ್ವಕಮ್ ।
ಅನ್ನಪ್ರಾಶನಚೌಲಾದಿಬ್ರಹ್ಮವಾಚನಪೂರ್ವಕಮ್ ॥162॥

ಅಗ್ನಿಸಾಕ್ಷಿವಿಧಾನೇನ ಪ್ರಾಪ್ತದಾರಃ ಕೃತೋ ಭವಾನ್ ।
ಅಧೀತವೇದವೇದಾಂಗಶ್ಚಾಹಿತಾಗ್ನಿವ್ರತೇ ಸ್ಥಿತಃ ॥163॥

ಏತಾದೃಶಸ್ಯ ದೇಹಸ್ಯ ಮಯಾ ಸಂಗಃ ಕಥಂ ಭವೇತ್ ।
ಕರ್ಣೌ ಹರಿಕಥಾ ಶ್ರುತ್ವಾ ಪಾವಿತೌ ನಾಸಿಕಾ ತವ ॥164॥

ಹರ್ಯರ್ಪಿತಸುಗಂಧೇನ ಪಾವಿತಂ ಜಠರಂ ತವ ।

ಶರೀರಗಳೂ ಸಹ ಪರಸ್ಪರ ವಿರುದ್ಧ ಧರ್ಮಗಳಿಂದ ಕೂಡಿರುವವು. ನಿನ್ನ ಶರೀರವಾದರೋ ಪರಮ ಪವಿತ್ರವಾದ ವೇದೋಕ್ತ ಸಂಸ್ಕಾರಗಳಿಂದ ಕೂಡಿರುವದು. ನಿನ್ನ ತಾಯಿಯು ಋತುಕಾಲವು ಪ್ರಾಪ್ತವಾದಾಗ ಗರ್ಭಾಧಾನವೆಂಬ ಸಂಸ್ಕಾರವನ್ನು ಹೊಂದಿದ ಅನಂತರದಲ್ಲಿ ನಿನ್ನ ತಂದೆಯು ರೇತಸ್ಸೇಚನ ವನ್ನು ಮಾಡಿದಾಗ ನೀನು ಗರ್ಭವನ್ನು ಪ್ರವೇಶಮಾಡಿರುವಿ. (160) ವೇದಮಯ ವಾದ ಅನೇಕ ಮಂತ್ರಗಳಿಂದ ಸೂಕ್ತಸಮಯದಲ್ಲಿ ಸೀಮಂತ ಸಂಸ್ಕಾರವನ್ನು ಮಾಡಿರುವರು. ಹತ್ತನೇ ತಿಂಗಳು ಪ್ರಾಪ್ತವಾದಾಗ ನಿನ್ನ ತಾಯಿಯು ನಿನ್ನನ್ನು ಪ್ರಸವಿಸಿರುವಳು.(161) ಶಾಸ್ತ್ರೋಕ್ತವಾದ ವೇದಮಂತ್ರ ಗಳಿಂದ ಕೂಡಿದ ಜಾತಕರ್ಮ–ನಾಮಕರಣ– ಅನ್ನಪ್ರಾಶನ–ಚೌಲ–ಉಪನಯನ ಮೊದಲಾದ ಅನೇಕ ಸಂಸ್ಕಾರಗಳನ್ನು ನಿನ್ನ ಶರೀರವು ಪಡೆದಿರುವದು. (162) ವೇದ–ವೇದಾಂಗಗಳನ್ನು ಅಧ್ಯಯನಮಾಡಿದ ಅನಂತರದಲ್ಲಿ ಅಗ್ನಿಸಾಕ್ಷಿವಿಧಾನದಿಂದ ನೀನು ವಿವಾಹಿತನಾಗಿ ಹೆಂಡತಿಯ ಪಾಣಿಗ್ರಹಣವನ್ನು ಮಾಡಿರುವಿ. ಗೃಹಸ್ಥಾಶ್ರಮವನ್ನು ಸ್ವೀಕರಿಸಿದ ನೀನು ಆಹಿತಾಗ್ನಿ ವ್ರತಸ್ಥನಾಗಿರುವಿ. (163) ಇಂತಹ ವೇದೋಕ್ತ ಸಂಸ್ಕಾರಗಳು, ವೇದೋಕ್ತ ಧರ್ಮಾನುಷ್ಠಾನ ಇವುಗಳಿಂದ ಪೂತವಾದ ನಿನ್ನ ಶರೀರದೊಡನೆ ನನ್ನ ಶರೀರದ ಸಂಗಮವು ಹೇಗೆ ಸಂಗತವಾದೀತು? ಹರಿಯ ಕಥಾಶ್ರವಣದಿಂದ ನಿನ್ನ ಕಿವಿಗಳು ಪವಿತ್ರವಾಗಿರುವವು. (164) ಹರಿಗರ್ಪಿತವಾದ

ವಾಸುದೇವಾರ್ಪಿತಾನ್ನೇನ ಪವಿತ್ರಂ ಪುರುಷರ್ಷಭ ||165||

ಕೃಷ್ಣಾರ್ಚನಪ್ರಸಂಗೇನ ಕರೌ ಪಾವಿತ್ರ್ಯಮಾಗತೌ ।
ಹರಿನಾಮಕಲಾಪೇನ ಜಿಹ್ವಾ ತೇ ಪಾವನೀಕೃತಾ ||166||

ಪುಣ್ಯಕ್ಷೇತ್ರಾನುಚಾರೇಣ ಪಾದೌ ತೇ ಪಾವಿತೌ ಕೃತೌ ।
ಏತಾದೃಶೇನ ದೇಹೇನ ಕಥಂ ಸಂಗಃ ಪ್ರಶಸ್ಯತೇ ||167||

ಮಮಾಪಿ ಶೃಣು ಮಾಹಾತ್ಮ್ಯಂ ದೇಹಸ್ಯಾಮಿತದೋಷಿಣಃ ।
ಅವಾಚ್ಯವಚನೇನೈವ ಜಿಹ್ವಾ ಮೇ ದಹ್ಯತೇ ಸದಾ ||168||

ಸುರಾಮಾಂಸಾಶನೇನೈವ ಜಠರಂ ಗುಲ್ಮತಾಂ ಗತಮ್ ।
ವ್ಯಭಿಚಾರಕಥಾಲಾಪಾತ್ ಕರ್ಣೌ ಮೇ ಶಿಥಿಲೀಕೃತೌ ||169||

ಪಾದೌ ಜಾರಗೃಹಂ ಗತ್ವಾ ಪಾಷಾಣಸದೃಶೌ ಮಮ ।
ಗೋವಧಾನ್ಮತ್ಕರೌ ಕ್ರೂರೌ ಯಮದಂಡಸಮಪ್ರಭೌ ||170||

ಏತಾದೃಶಸ್ಯ ದೇಹಸ್ಯ ಸಂಗಮಸ್ತು ಕಥಂ ಭವೇತ್ ।
ಉತ್ತಮೋ ನೀಚತಾಂ ಪ್ರಾಪ್ಯ ಕಥಂ ಸ್ವರ್ಗಂ ಗಮಿಷ್ಯತಿ ||171||

ಸುಗಂಧಮಯ ನಿರ್ಮಾಲ್ಯದ ಘ್ರಾಣದಿಂದ ನಿನ್ನ ಮೂಗು ಶುದ್ಧವೆನಿಸಿರುವದು. ವಾಸುದೇವನಿಗೆ ನಿವೇದಿತವಾದ ಅನ್ನದ ಸ್ವೀಕಾರದಿಂದ ನಿನ್ನ ಉದರವು ಪವಿತ್ರವಾಗಿರುವದು. (165) ಭಗವಂತನನ್ನು ಆರಾಧನಮಾಡುವದರಿಂದ ನಿನ್ನ ಕರವು ಅತ್ಯಂತ ನಿರ್ಮಲವೆನಿಸಿರುವದು. ಭಗವನ್ನಾಮೋ-ಚ್ಚಾರಣೆಯು ನಿನ್ನ ನಾಲಿಗೆಯನ್ನು ಪವಿತ್ರಗೊಳಿಸಿರುವದು. (166) ಪುಣ್ಯಕ್ಷೇತ್ರಗಳೆಡೆಗೆ ಸಂಚಾರವನ್ನು ಮಾಡಿರುವದರಿಂದ ನಿನ್ನ ಪಾದಗಳು ಪವಿತ್ರವಾಗಿರುವವು. ಇಂತಹ ಪರಮ ಪವಿತ್ರವಾದ ದೇಹವಾದರೋ ನಿನ್ನದು. ಇಂತಹ ನಿನ್ನ ದೇಹದೊಂದಿಗೆ ನನ್ನ ದೇಹದ ಸಂಗವಾದರೋ ಹೇಗೆ ಸಂಭವಿಸೀತು? (167) ಇನ್ನು ನನ್ನ ಸಕಲ ದೋಷಗಳಿಗೆ ಆಧಾರವಾದ ದೇಹದ ಮಾಹಾತ್ಮ್ಯೆಯನ್ನಿಷ್ಟು ಕೇಳು. ಅವಾಚ್ಯವಾದ ಮಾತುಗಳನ್ನಾಡುವದರಿಂದ ನನ್ನ ನಾಲಿಗೆಯು ಸುಡುತ್ತಿರುವದು. (168) ಹೆಂಡ, ಮಾಂಸವೇ ಮೊದಲಾದ ಅಭಕ್ಷ್ಯ-ಅಪೇಯ ವಸ್ತುಗಳಿಂದ ನನ್ನ ಜಠರದಲ್ಲಿ ಗುಲ್ಮ (ಗಡ್ಡೆ)ಗಳಾಗಿರುವವು. ನನ್ನ ಕಿವಿಗಳು ಯಾವಾಗಲೂ ವ್ಯಭಿಚಾರ ಸಂಬಂಧಿಯಾದ ಮಾತುಗಳನ್ನು ಕೇಳುವವು. (169) ಪಾದಗಳು ಜಾರರ ಮನೆಗೆ ತೆರಳಿ ಕಲ್ಲಿನಂತ ಒರಟಾಗಿರುವವು. ಗೋವಧದಿಂದ ನನ್ನ ಕೈಗಳು ಯಮದಂಡಸಮವಾಗಿರುವವು. (170) ಇಂತಹ ದೋಷಗಳಿಂದುಪೇತವಾದ ಹೊಲಸಿನ ಶರೀರದೊಂದಿಗೆ ನಿನ್ನಂಥವನ

ಪರಸ್ತ್ರೀಸಂಗದೋಷೇಣ ಬಹವೋ ನರಕಾನ್ ಗತಾಃ ।
ತಸ್ಮಾದುತ್ತಿಷ್ಠ ಭದ್ರಂ ತೇ ತವ ದಾಸೀ ಭವಾಮಿ ಭೋಃ' ॥172॥

ವನಿತಾವಚನಂ ಶ್ರುತ್ವಾ ವಾಕ್ಯಮೂಚೇ ದ್ವಿಜಾತ್ಮಜಃ ॥172॥

ಮಾಧವ ಉವಾಚ–

'ತ್ವದೀಯಸಂಗೋ ಬಹುಕಾಲಪುಣ್ಯ–
ಪ್ರಭಾವಜೋ ಮುಕ್ತಿಕರಃ ಶುಭಾವಹಃ ।
ದೈವೇನ ಯೋಗೇನ ಹರೇಃ ಪ್ರಸಾದಾತ್
ಪುಣ್ಯೇನ ಲಬ್ಧಃ ಪುರುಷಾರ್ಥಹೇತುಃ ॥173॥

ತಸ್ಮಾದ್ಭಜಸ್ವಾನುಗತೋಽಸ್ಮಿ ಭಾಮಿನಿ
ತ್ಯಜಾದ್ಯ ಲಜ್ಜಾಂ ಕುರು ಮೇ ಮನೋಗತಮ್ ।
ತ್ವದೀಯಬಿಂಬಾಧರಪಾನತೋಽಧಿಕಂ
ಸುಖಂ ನ ಕಾಂಕ್ಷೇ ಸುರಲೋಕದುರ್ಲಭಮ್ ॥174॥

ಗಚ್ಛಂತ್ಯದ್ಯ ಮಮ ಪ್ರಾಣಾಸ್ತ್ವದ್ವಿಯೋಗೇನ ಕೇವಲಮ್ ।
ತಸ್ಮಾಜ್ಜೀವಯ ಭದ್ರೇ ತ್ವಂ ಮರಣಾಭಿಮುಖಂ ಚ ಮಾಮ್' ॥175॥

ಪವಿತ್ರದೇಹದ ಸಂಗಮವು ಹೇಗೆ ತಾನೆ ಸಂಘಟೀಸೀತು? ಉತ್ತಮನಾದ ವ್ಯಕ್ತಿಯು ಎಂದೆಂದಿಗೂ ಸಹ ನೀಚಾವಸ್ಥೆಯನ್ನು ಬಯಸಬಾರದು. ಉತ್ತಮನು ನೀಚತನವನ್ನು ಹೊಂದಿದಲ್ಲಿ ಹೇಗೆ ತಾನೆ ಸ್ವರ್ಗವನ್ನು ಹೊಂದುವನು? (171) ಅಷ್ಟಲ್ಲದೇ, ಪರಸ್ತ್ರೀಸಂಗದೋಷದಿಂದ ಬಹಳಷ್ಟು ಜನರು ನರಕವನ್ನು ಹೊಂದಿರುವರು. ಆದ್ದರಿಂದ ನಿನಗೆ ಮಂಗಳವಾಗಲಿ. ಏಳು. ನಿನ್ನ ದಾಸಿಯಾಗಿರುವೆನು. (ನನ್ನ ಸಂಗದ ಆಶೆಯನ್ನು ಬಿಟ್ಟು ಹೊರಡು)' ಎಂದು ಬಹುವಿಧವಾಗಿ ನುಡಿದಳು. (172)

### ಬಲಾತ್ಕರದಿಂದ ಕುಂತಲೆಯ ಭೋಗ

ಇದನ್ನು ಕೇಳಿದ ಮಾಧವನು 'ನಿನ್ನ ಸಂಗವೇ ನನ್ನ ಬಹುಕಾಲದಿಂದ ಲಭ್ಯವಾದ ಪುಣ್ಯದ ಪ್ರಭಾವವೆಂದು ತಿಳಿದಿರುವೆನು. ಇದು ನನಗೆ ಸುಖವನ್ನುಂಟುಮಾಡಿ ಮುಕ್ತಿಯನ್ನೊದಗಿಸಿ ಕೊಡುವದು. ಭಗವಂತನ ಹರಿಯ ಅನುಗ್ರಹದಿಂದ ಲಬ್ಧವಾದ ನಿನ್ನ ಸಂಗವು ನನ್ನ ಸಕಲ ಪುರುಷಾರ್ಥಸಾಧನವಾಗಿರುವದು. (173) ಆದ್ದರಿಂದ ಹೇ ಭಾಮಿನಿಯೇ! ನೀನು ನಾಚಿಕೆಯನ್ನು ಬಿಡು. ನಿನ್ನನ್ನೇ ಅನುಸರಿಸಿ ಬಂದಿರುವ ನನ್ನ ಮನೋರಥವನ್ನು ಪೂರ್ಣಗೊಳಿಸು. ನಿನ್ನ

ಏವಮುಕ್ತಾ ದ್ವಿಜೇಂದ್ರೇಣ ಪೃಥುಶ್ರೋಣೀ ಸಮುತ್ಥಿತಾ ।
ಪಲಾಯನಾಯಾಶು ಮತಿಂ ಚಕ್ರೇ ಚಂಡಾಲಕನ್ಯಕಾ ॥176॥

ಧಾವಮಾನಾಮನುದ್ರುತ್ಯ ಮಾಧವಸ್ತಾಮುಪಾಸ್ಪೃಶತ್ ।
'ರೌರವಂ ಜನಕಸ್ಯಾಪಿ ಜನನ್ಯಾಃ ಕುಲಯೋರ್ಧ್ರುವಮ್ ॥177॥

ಸ್ಯಾದಿ'ತಿ ಕ್ರೋಶಮಾನಾಂ ತಾಂ ಮಾಧವೋ ಮನ್ಮಥಾऽऽಹತಃ।
ಬಲಾತ್ಕಾರೇಣ ಸಂಗೃಹ್ಯ ಬುಭುಜೇ ಭೋಗಮುತ್ತಮಮ್ ॥178॥

ಭೋಗಾತ್ಯಯೇ ದ್ವಿಜಂ ಬಾಲಾ ವಾಚಮೂಚೇ ಮನಸ್ವಿನೀ ।

ಕುಂತಲೋವಾಚ–

'ಆದ್ಯಪ್ರಭೃತಿ ಭೋ ವಿಪ್ರ ಪತಿಸ್ತ್ವಂ ಮಮ ಭೂಸುರ ॥179॥

ತ್ಯಜ ಯಜ್ಞೋಪವೀತಂ ತ್ವಂ ಮುಂಡಯಿತ್ವಾ ಶಿರಸ್ತಥಾ ।
ಅಬ್ರಾಹ್ಮಣ್ಯಮುಪಾಗಮ್ಯ ಭುಂಕ್ಷ್ವ ಗೋಮಾಂಸಮುತ್ತಮಮ್ ॥180॥

ಪಿಬ ಮದ್ಯೋದಕಂ ಶೀಘ್ರಂ ಚಂಡಾಲತ್ವಮುಪಾಶ್ರಿತಃ'।
ತದ್ವಾಕ್ಯಮಾಕರ್ಣ್ಯ ತದಾ ತಯೋಕ್ತಂ ಸರ್ವಮಾಚರನ್ ॥181॥

ಬಿಂಬಾಧರಪಾನಕ್ಕೆ ಸಮಾನವಾದ ಸುಖವನ್ನು ಸ್ವರ್ಗದಲ್ಲಿಯೂ ಸಹ ನಾನು ಕಾಣಲಾರೆನು. (174) ನಿನ್ನ ವಿಯೋಗದಿಂದ ನನ್ನ ಪ್ರಾಣಗಳು ಹೋಗುತ್ತಿರುವವು. ಮರಣಾಭಿಮುಖನಾದ ನನ್ನನ್ನು ನಿನ್ನ ಸಂಗದಿಂದ ಉಜ್ಜೀವಿಸು' ಎಂದು ನುಡಿದನು. (175) ಇದನ್ನು ಕೇಳಿದ ಚಂಡಾಲ ಕನ್ಯೆಯಾದ ಕುಂತಲೆಯು ಓಡಲು ಪ್ರಯತ್ನಿಸಿದಳು. ಆಗ ಮಾಧವನು ಅವಳನ್ನು ಹಿಂಬಾಲಿಸಿ 'ನಿನ್ನ ತಂದೆ-ತಾಯಿಗಳ ಕುಲಗಳು ರೌರವ ನರಕವನ್ನು ಹೊಂದಲಿ' ಎಂದು ಶಪಿಸುತ್ತಿದ್ದ ಕುಂತಲೆಯನ್ನು ಬಲಾತ್ಕಾರವಾಗಿ ಹಿಡಿದು ಆಕೆಯ ಸಂಗವನ್ನು ಮಾಡಿದನು.(176–178)

### ಮಾಧವನ ಚಂಡಾಲಕೃತ್ಯಾಚರಣ

ಭೋಗಾನಂತರದಲ್ಲಿ ಮಾಧವನನ್ನು ಕುಂತಲೆಯು 'ಇಂದಿನಿಂದ ನೀನು ನನ್ನ ಪತಿಯಾಗಿರುವಿ.(179) ಆದ್ದರಿಂದ ನೀನು ನಿನ್ನ ಯಜ್ಞೋಪ ವೀತವನ್ನು ಬಿಟ್ಟುಬಿಡು. ಶಿಖಾಯುಕ್ತವಾದ ನಿನ್ನ ಶಿರಸ್ಸನ್ನು ಬೋಳಿಸಿ ಕೊಂಡು ಅಬ್ರಾಹ್ಮಣ್ಯವನ್ನು ಹೊಂದು. ಗೋಮಾಂಸವನ್ನು ಭಕ್ಷಣಮಾಡು. (180) ಸುರಾಪಾನಾದಿಗಳನ್ನು ಮಾಡಿ ಚಂಡಾಲರಿಗೆ ಉಚಿತವಾದ ಆಚರಣೆಗಳನ್ನು ಆಚರಿಸು' ಎಂದು ನುಡಿದಳು. ಆಕೆಯ ಮಾತಿನಂತೆ ಮಾಧವನು

ಚಂಡಾಲಚರಿತಾಚಾರಂ ಜಗಾಮ ವಿಧಿಚೋದಿತಃ ।
ವಿಪ್ರಸ್ತಯಾ ಸಮೇತಸ್ತು ಕೃಷ್ಣವೇಣೀನದೀತಟಮ್ ॥182॥

ದ್ವಾದಶಾಬ್ದಂ ವಸನ್ ವಿಪ್ರಃ ತತ್ಸಂಗಪರಿಮೋಹಿತಃ ।
ಅನಿತ್ಯತ್ವಾಚ್ಛರೀರಾಣಾಂ ಕಾಲಪಾಶೇನ ಯಂತ್ರಿತಾ ॥183॥

ಜಗಾಮ ಮರಣಂ ರಾಜನ್ ಕುಂತಲಾ ನೀಲಕುಂತಳಾ ।
ತಯಾ ವಿರಹಿತಃ ಶ್ರೀಮಾನ್ಮಾಧವೋ ದುಃಖಕಾತರಃ ॥184॥

ಅಚರದ್ಭುವನಂ ಸರ್ವಮುನ್ಮಾದೇನೋದ್ಭ್ರಮನ್ನಿವ ।
ಅಕಸ್ಮಾದ್ದೈವಯೋಗೇನ ರಾಜಾನಶ್ಚೋತ್ತರಾಸ್ತದಾ ॥185॥

ಯಾತ್ರಾರ್ಥಂ ಸಮುಪಾಜಗ್ಮುರ್ವರಾಹಸ್ಯ ಚ ಪರ್ವತಮ್।
ಮಾರ್ಗಮಧ್ಯೇ ದದರ್ಶಾಸೌ ಮಾಧವಸ್ತಾನ್ಮಹಿಪತೀನ್ ॥186॥

ಗಚ್ಛನ್ನೇವ ಚ ತೈಸ್ಸಾರ್ಧಂ ತದುಚ್ಛಿಷ್ಟಾನ್ನಭೋಜನಃ ।
ಪ್ರಾಪ ಸರ್ಪಗಿರಿಂ ರಾಜನ್ ದೈವಯೋಗೇನ ಕರ್ಮಣಾ ॥187॥

ಕುಂತಲೆಯ ಮೇಲಿನ ಮೋಹದಿಂದ ಆಕೆ ಹೇಳಿದ್ದೆಲ್ಲವನ್ನು ಮಾಡುತ್ತಾ ವಿಧಿಚೋದಿತನಾಗಿ ಚಂಡಾಲರಿಗೆ ಉಚಿತವಾದ ಕಾರ್ಯಗಳನ್ನು ಮಾಡುತ್ತಾ ಕೃಷ್ಣವೇಣಿಯ ನದಿಯ ತಟದಲ್ಲಿ ಹನ್ನೆರಡು ವರ್ಷಗಳಷ್ಟು ಕಾಲ ವಾಸಮಾಡಿದನು.(181–183)

### ಕುಂತಲೆಯ ಮರಣ–ಭ್ರಮಿಷ್ಟನಾದ ಮಾಧವ

ಕಾಲಪಾಶ ನಿಯಂತ್ರಿತವಾದ ಶರೀರಗಳು ಅನಿತ್ಯವಾದ್ದರಿಂದ ಸುಂದರ ಕೇಶಪಾಶಗಳಿಂದ ಚಿತ್ತಾಕರ್ಷಕಳಾಗಿದ್ದ ಕುಂತಲೆಯು ಮರಣವನ್ನು ಹೊಂದಿದಳು. ಅವಳ ಮರಣದಿಂದ ದುಃಖಸಂತಪ್ತನಾದ ಮಾಧವನು ಉನ್ಮಾದದಿಂದ ಭ್ರಮಿಷ್ಠನಾದವನಂತೆ ಗೊತ್ತುಗುರಿಯಿಲ್ಲದೇ ಸಂಚರಿಸ ಹತ್ತಿದನು.(185) ಆಕಸ್ಮಿಕವಾಗಿ ದೈವಪ್ರೇರಣೆಯಿಂದ ಉತ್ತರದೇಶದ ರಾಜರು ವರಾಹದೇವರ ದರ್ಶನಾರ್ಥವಾಗಿ ವರಾಹಗಿರಿಯ ಯಾತ್ರೆ ಯನ್ನು ಮಾಡುತ್ತಿದ್ದರು. ಅವರನ್ನು ಮಾಧವನು ಮಾರ್ಗಮಧ್ಯದಲ್ಲಿ ಆಕಸ್ಮಿಕವಾಗಿ ನೋಡಿದನು.(186)

### ರಾಜರಿಂದ ಸಹಿತನಾದ ಮಾಧವನ ಶೇಷಗಿರಿಯ ಯಾತ್ರೆ

ಅವರಿಂದ ಸೇರಿಕೊಂಡು ತಾನು ಯಾತ್ರೆಯನ್ನು ಮಾಡುವವನಾಗಿ ಅವರ ಉಚ್ಛಿಷ್ಟಾನ್ನವನ್ನು ಭಕ್ಷಿಸುತ್ತಾ ಪೂರ್ವಕರ್ಮದಿಂದ ಮತ್ತು ಜನ್ಮಾಂತರ ಕೃತವಾದ ಪುಣ್ಯವಿಶೇಷರೂಪವಾದ

ತೇ ರಾಜಾನಸ್ತತ್ರ ತೀರ್ಥೇ ಗತ್ವಾ ಕಪಿಲಸಂಜ್ಞಕೇ ।
ಸ್ನಾತ್ವಾ ಭಕ್ತಿಸಮಾಯುಕ್ತಾಃ ವಪನಂ ಚಕ್ರುರಾದರಾತ್ ॥188।

ಮಾಧವಃ ಸ್ವಯಮಪ್ಯೇತ್ಯ ವಾಪಯಾಮಾಸ ವೈ ಶಿರಃ ।
ಪಾರ್ವಣಾನಿ ಪ್ರಕುರ್ವಂತಃ ತತ್ರ ರಾಜನ್ ಕ್ಷಿತೀಶ್ವರಾಃ ॥189॥

ಪಿಂಡಾನಿ ಚ ಸುಸಂಹೃಷ್ಟಾಃ ಶ್ರಾದ್ಧೀಯಾನಿ ದದುಸ್ತದಾ ।
ಮಾಧವೋಽಪಿ ಶುಭೇ ತೀರ್ಥೇ ಸ್ನಾತ್ವಾ ತದ್ವಚ್ಚ ಪಾರ್ವಣಮ್ ॥190॥

ಕುರ್ವನ್ಪಿಂಡಾನ್ ಮೃದಾ ಕೃತ್ವಾ ಪಿತೃಭ್ಯಃ ಶ್ರದ್ಧಯಾ ದದೌ ।
ದೈವಾತ್ತತ್ಕರ್ಮಣೈವಾಸೌ ತದಾಽಭೂದ್ಗತಕಲ್ಮಷಃ ॥191॥

ತಸ್ಮಾದ್ಯೋ ಮಾನವೋ ಭಕ್ತ್ಯಾ ಕುರ್ಯಾತ್ತೀರ್ಥಾವಗಾಹನಮ್ ।
ಪಿತೃಶ್ರಾದ್ಧಂ ಪಿಂಡದಾನಂ ಮುಕ್ತಿಸ್ತತ್ರ ನ ಸಂಶಯಃ ॥192॥
ಮೃತ್ಪಿಂಡಂ ಕೃತವಾನ್ವಿಪ್ರಃ ಪುಣ್ಯಕ್ಷೇತ್ರೇ ಪುರಾತನೇ ॥193॥

ಕಿಂ ವರ್ಣಯಾಮಃ ಪುರುಷೋತ್ತಮಸ್ಯ
ಕ್ಷೇತ್ರಸ್ಯ ತೀರ್ಥಸ್ಯ ಚ ಪುಣ್ಯಶಕ್ತಿಮ್ ।

ದೈವಯೋಗದಿಂದ ಶೇಷಗಿರಿಯನ್ನು ಕುರಿತು ಬಂದನು.(187) ಆ ರಾಜರು ಅಲ್ಲಿಯ ಕಪಿಲ ತೀರ್ಥವೆಂಬ ತೀರ್ಥದಲ್ಲಿ ಅತ್ಯಂತ ಭಕ್ತಿಯಿಂದ ಸ್ನಾನವನ್ನು ಮಾಡಿ, ಮುಂಡನವನ್ನು ಮಾಡಿಸಿಕೊಂಡರು. (188) ಮಾಧವನೂ ಸಹ ಮುಂಡನವನ್ನು ಮಾಡಿಸಿಕೊಂಡನು. ರಾಜರು ಶ್ರಾದ್ಧವನ್ನು ಮಾಡುವವರಾಗಿ ಪಿತೃಪ್ರೀತ್ಯರ್ಥವಾಗಿ ಪಿಂಡಗಳನ್ನು ಮಾಡಿ ಪಿತೃಗಳನ್ನು ಅರ್ಚಿಸಿದರು. (189) ಮಾಧವನೂ ಸಹ ಕಪಿಲತೀರ್ಥದ ಪುಣ್ಯಕರವಾದ ನೀರಿನಲ್ಲಿ ಸ್ನಾನವನ್ನು ಮಾಡಿ ಮಣ್ಣಿನಿಂದ ಪಿಂಡಗಳನ್ನು ರಚಿಸಿ ಪಿತೃದೇವತೆಗಳಿಗೆ ಅರ್ಪಿಸಿದನು. ಈ ಶ್ರಾದ್ಧ ಮತ್ತು ಪಿಂಡದಾನ ರೂಪ ಕಾರ್ಯದಿಂದ ಹಾಗೂ ದೈವಾನುಗ್ರಹದಿಂದ ಅವನ ಪಾಪ ಗಳೆಲ್ಲವೂ ಸಹ ನಾಶವಾಗಿ ಹೋದವು.(192) ಆದ್ದರಿಂದ ಯಾವ ಮನುಷ್ಯನು ಕಪಿಲತೀರ್ಥದಲ್ಲಿ ಸ್ನಾನವನ್ನು ಮಾಡಿ ಪಿತೃಶ್ರಾದ್ಧ – ಪಿಂಡ ದಾನಗಳನ್ನು ಮಾಡುವನೋ ಅವನಿಗೆ ಮುಕ್ತಿಯು ನಿಶ್ಚಯವಾಗಿಯೂ ಸಹ ಉಂಟಾಗುವದು. (193) ಪುರುಷೋತ್ತಮನ ಕ್ಷೇತ್ರವಾದ ಶೇಷಗಿರಿ, ಮತ್ತು ಕಪಿಲತೀರ್ಥ ಇವುಗಳ ವರ್ಣನೆಯನ್ನು ಹೇಗೆ ತಾನೆ ಮಾಡೇವು? ಕೇವಲ ಮಣ್ಣಿನ ಪಿಂಡಗಳನ್ನು ಅರ್ಪಿಸಿರುವದರಿಂದ ಮಾಧವನ ಪಿತೃಪಿತಾಮಹರೆಲ್ಲರೂ ಮುಕ್ತಿಯನ್ನು ಹೊಂದಿದರೆಂದಮೇಲೆ ಈ ಕ್ಷೇತ್ರದ ತೀರ್ಥದ ಮಹತ್ವವನ್ನು ಹೇಗೆ ತಾನೆ ವರ್ಣಿಸಲು ಸಾಧ್ಯ?(194) ಹೇ ಜನಕ

ಮೃತ್ಪಿಂಡದಾನೇನ ಪಿತಾಮಹಾದ್ಯಾ
ಮುಕ್ತಿಂ ಪ್ರಯಾತಾ ಮುರವೈರಿಶಾಸನಾತ್ ॥194॥

ಪ್ರಭಾತೇ ವಿಮಲೇ ಪ್ರಾಪ್ತೇ ರಾಜಾನೋ ರಾಜಸತ್ತಮ ।
ಸಮಾರೋಹನ್ ಗಿರಿಶ್ರೇಷ್ಠಂ ಸಪುತ್ರಾಶ್ಚ ಸಬಾಂಧವಾಃ ॥195॥

ತೇಷಾಮನುಪದಂ ರಾಜನ್ ಪ್ರಾಪ ಶೇಷಗಿರಿಂ ಚ ಸಃ ।
ವಿಶ್ರಾಮ್ಯಂತಃ ಸರ್ವ ಏವ ತೇ ತಸ್ಥುಸ್ತತ್ರ ತತ್ರ ಚ ॥196॥

ಸೋಽಪಿ ತಸ್ಥೌ ಮಹಾರಾಜ ಮಾಧವೋ ಗಿರಿಮಸ್ತಕೇ ।
ಭೂಧರಸ್ಪರ್ಶಮಾತ್ರೇಣ ತದಘಂ ಪರ್ಯಕಂಪತ ॥197॥

ಮಾಧವಸ್ಯಾಭವತ್ಕಷ್ಟಂ ಯಥಾ ಮಕ್ಷಿಕಭಕ್ಷಣಾತ್ ।
ವಮಂತಮೇನಂ ಸ್ವಂ ಪಾಪಂ ಸಮಾವೃಣ್ವನ್ಸಮಂತತಃ ॥198॥

ತದಂಗಜಾತಃ ಕೋಽಪ್ಯಗ್ನಿರದ್ರಿಮಾಹಾತ್ಮ್ಯತಸ್ತದಾ ।
ಪ್ರಜಜ್ವಾಲ ದಹನ್ಪಾಪಂ ಸುರಾಮಾಂಸಾಶನೋದ್ಭವಮ್ ॥199॥

ತಸ್ಯ ದುರ್ಗಂಧಧೂಮೇನ ವಾಸಿತಾಃ ಸರ್ವದೇವತಾಃ ।
ತದ್ಭಾವಂ ವೇದಿತುಂ ದೇವಾ ಬ್ರಹ್ಮರುದ್ರಪುರಸ್ಸರಾಃ ॥200॥

ರಾಜನೇ! ಹೀಗೆ ಶ್ರಾದ್ಧಾದಿಗಳನ್ನು ಆಚರಿಸಿದ ಅನಂತರ ಮರುದಿನ ಪ್ರಭಾತ ಸಮಯದಲ್ಲಿ ಬಂಧು-ಬಾಂಧವರಿಂದ ಸಹಿತರಾದ ರಾಜರು ಶೇಷಾಚಲವನ್ನೇರಲು ಪ್ರಾರಂಭಿಸಿದರು.(195)

### ಶೇಷಾಚಲಾರೋಹಣ - ಸರ್ವಪಾಪದಹನ

ಅವರನ್ನೇ ಹಿಂಬಾಲಿಸುತ್ತಿದ್ದ ಮಾಧವನೂ ಸಹ ಶೇಷಾಚಲ ವನ್ನೇರಲು ತೊಡಗಿದನು. ಅವರು ಎಲ್ಲೆಲ್ಲಿ ವಿಶ್ರಮಿಸು ತ್ತಿದ್ದರೋ ಮಾಧವನೂ ಸಹ ಅಲ್ಲೇ ವಿಶ್ರಮಿಸಿ ಮುಂದೆ ನಡೆಯುತ್ತಿದ್ದನು. (196) ಯಾವಾಗ ಮಾಧವನು ರಾಜರನ್ನು ಹಿಂಬಾಲಿಸುತ್ತಾ ಶೇಷಾಚಲವನ್ನು ಏರುತ್ತಿರಲು, ಪರ್ವತಸ್ಪರ್ಶ ಮಾತ್ರದಿಂದಲೇ ಮಾಧವನ ಪಾಪವು ಕಂಪಿಸಲಾರಂಭಿಸಿತು. (197) ಚಂಡಾಲ ಸ್ತ್ರೀಗಮನ, ಹೆಂಡ-ಮಾಂಸಗಳನ್ನು ತಿನ್ನುವದರಿಂದ ಉಂಟಾದ ಮಾಧವನ ಪಾಪವು ವಾಂತಿಯ ಮೂಲಕ ಅವನ ದೇಹದಿಂದ ಹೊರಬರಲಾರಂಭಿಸಿತು. ಪರ್ವತದ ತೇಜಸ್ಸಿನಿಂದ ಅವನ ಶರೀರದಲ್ಲಿ ಹುಟ್ಟಿದ ಬೆಂಕಿಯು ಮದ್ಯಮಾಂಸ ಭಕ್ಷಣದಿಂದ ಜನಿಸಿದ ಪಾಪವನ್ನು ದಹಿಸುತ್ತಾ ಪ್ರಜ್ವಲಿಸಿತು.(198-199) ಪಾಪವು ಸುಡುತ್ತಿರುವ ಸಂದರ್ಭದಲ್ಲಿ ಹೊರಬಂದ ದುರ್ಗಂಧಮಯವಾದ ಹೊಗೆಯಿಂದ ಚಕಿತರಾದ ಶೇಷಾಚಲದಲ್ಲಿ ನಿವಾಸವನ್ನು ಮಾಡುತ್ತಿದ್ದ

ವಿಮಾನಾನಿ ವಿಚಿತ್ರಾಣಿ ಭಾಸಯಂತಃ ಸಮಾಗತಾಃ ।
ಖಮಾರ್ಗೇ ಸಂಸ್ಥಿತಾಃ ಸರ್ವೇ ದೃಷ್ಟ್ವಾ ತಚ್ಚರಿತಂ ನೃಪ ॥201॥

ವವರ್ಷುಃ ಪುಷ್ಪವರ್ಷಾಣಿ ಮಾಧವಸ್ಯೋತ್ತಮಾಂಗಕೇ ।
ದೃಷ್ಟ್ವಾ ಪಿತಾಮಹಃ ಶ್ರೀಮಾನ್ವಿಮಾನಾದವರುಹ್ಯ ಸಃ ॥202।

ಮಾಧವಂ ಗತಪಾಪ್ಮಾನಂ[17] ಯಥಾ ಹರಿರಜಾಮಿಲಮ್ ।
ಕೃಪಯೋಧೃತವಾನೇನಂ ಕೃಪಾಲುರ್ದ್ವಿಜಪುಂಗವಮ್ ॥203॥

ಇತಿ ಸಂಚಿಂತಯಂಸ್ತಸ್ಯ ನಿಕಟಂ ಪ್ರಾಪ ಸಾದರಮ್ ।
ಜಿಘ್ರಂಶ್ಚ ತಚ್ಛಿರಃ ಶ್ರೀಮಾನ್ಬ್ರಹ್ಮಾ ವಾಣೀಮಥಾಬ್ರವೀತ್ ॥204॥

'ಭೋ ಭೋ ಮಾಧವ ವಿಪ್ರೇಂದ್ರ ಗತಪಾಪೋಽಸಿ ಕೇವಲಮ್ ।
ಸ್ವಾಮಿತೀರ್ಥಸ್ಯ ನಿಕಟಂ ಗತ್ವಾ ಸ್ನಾತ್ವಾಥ ತಜ್ಜಲೇ ॥205॥

ದೇವತೆಗಳು ಬ್ರಹ್ಮದೇವರನ್ನೇ ಮುಂದಿಟ್ಟುಕೊಂಡು ಹೊಳೆಯುವ ವಿಮಾನಗಳನ್ನೇರಿಕೊಂಡು ಆಕಾಶಮಾರ್ಗದಿಂದ ಮಾಧವನಿದ್ದಲ್ಲಿಗೆ ಬಂದು (200–201) ಪರ್ವತ ಸ್ಪರ್ಶಮಾತ್ರದಿಂದ ತನ್ನೆಲ್ಲ ಪಾಪಗಳನ್ನು ಕಳೆದುಕೊಂಡು ಶುದ್ಧನಾದ ಮಾಧವನನ್ನು ನೋಡಿ ಅವನ ತಲೆಯ ಮೇಲೆ ಪುಷ್ಪವೃಷ್ಟಿಯನ್ನು ಮಾಡಿದರು. ಪಶ್ಚಾತ್ತಾಪ ಭೂಯಿಷ್ಠನಾದ ಮಾಧವನನ್ನು ಪವಿತ್ರವಾದ ಪರ್ವತವು ಸರ್ವಪಾಪಗಳಿಂದ ವಿಮುಕ್ತನನ್ನಾಗಿ ಮಾಡುತ್ತಿರಲು ಬ್ರಹ್ಮಾದಿದೇವತೆಗಳು (203) ಆತನನ್ನು ಉದ್ಧರಿಸಲು ಆಲೋಚಿಸಿ, ವಿಮಾನದಿಂದ ಇಳಿದು, ಅವನ ಬಳಿಗೆ ಹೋಗಿ, ಅವನನ್ನಾಲಿಂಗಿಸಿ ಕೊಂಡು, ಬ್ರಹ್ಮದೇವರು(204)

### ಗತಪಾಪನಾದ ಮಾಧವನಿಗೆ ಬ್ರಹ್ಮದೇವರ ಅನುಗ್ರಹ

ಅವನಿಗೆ 'ಹೇ ಮಾಧವನೇ! ನೀನು ಪಾಪಗಳೆಲ್ಲವನ್ನೂ ಸಹ ಕಳೆದುಕೊಂಡು ಅತ್ಯಂತ

17. ಇಲ್ಲಿ ಮಾಧವನ ವೃತ್ತಾಂತವನ್ನು ಅವಲೋಕಿಸಿದಲ್ಲಿ ಎಲ್ಲ ಪಾಪಗಳೂ ಸಹ ವೇಂಕಟಾಚಲದ ಸ್ಪರ್ಶಮಾತ್ರದಿಂದಲೇ ನಾಶವಾಗುವದರಲ್ಲಿ ಯಾವ ಸಂದೇಹವೂ ಇಲ್ಲ. ಆದರೆ ಇಲ್ಲಿ ಮಾಧವನು ಅಪರೋಕ್ಷಜ್ಞಾನಿಯಾಗಿದ್ದನೆಂಬುದನ್ನು ಗಮನಿಸಬೇಕು. ಆದ್ದರಿಂದಲೇ ಮಾಧವನು ತನ್ನ ಪುಣ್ಯವಿಶೇಷದಿಂದ ಪ್ರಾರಬ್ಧಕರ್ಮಭೋಗವನ್ನು ತಿಳಿದು ಚಂಡಾಲ ಸ್ತ್ರೀಗಮನವು ಬ್ರಹ್ಮನ ನಿರ್ಣಯವನ್ನು ಅರಿತು ಅದರಂತೆ ನಡೆದಿರುವನೇ ಹೊರತು ಇಚ್ಛಾಪೂರ್ವಕವಾಗಿಯಾಗಲಿ ಅಥವಾ ಅಜ್ಞಾನದಿಂದಲೇ ಆಗಲೀ, ಕಾಮ-ಮೋಹಗಳಿಂದಲಾಗಲೀ ಚಂಡಾಲ ಸ್ತ್ರೀಗಮನವನ್ನು ಅವನು ಮಾಡಿರುವದಿಲ್ಲ. ಇದು ಇದೇ ಪುರಾಣದ 'ಚಿಂತಯನ್ ಬ್ರಹ್ಮನಿರ್ಣಯಮ್' (ಶ್ಲೋ.135), `ತ್ವದೀಯ ಸಂಗೋ... ...ಮುಕ್ತಿಕರಃ ಶುಭಾವಹಃ । ದೈವೇನ ಪುಣ್ಯೇನ ಹರೇಃ ಪ್ರಸಾದಾತ್ ಪುಣ್ಯೇನ ಲಬ್ಧಃ **ಪುರುಷಾರ್ಥಹೇತುಃ**' (ಶ್ಲೋ.173) ಇವೇ

ವರಾಹವದನಂ ನತ್ವಾ ತ್ಯಜ ದೇಹಂ ಮಹೀಸುರ ।
ಮಹೀಪಾಲೋಽಥ ಭೂತ್ವಾಽತ್ರ ಕುರು ರಾಜ್ಯಮಕಂಟಕಮ್ ॥206॥

ಪಾಂಡವಾನಾಂ ಚ ದೌಹಿತ್ರಕುಲೇ ಜಾತೋಽತಿಕೀರ್ತಿಮಾನ್।
ಸುಧರ್ಮಸ್ಯ ಸುತೋ ಭೂತ್ವಾಽಽಕಾಶನಾಮಾಥ ದಕ್ಷಿಣೇ ॥207।

ನಾರಾಯಣಪುರೇ ವೀರಃ ತೋಂಡದೇಶಾಧಿಪೋ ಭವ ।
ತವ ಪುತ್ರೀ ಜಗನ್ಮಾತಾ ಜಾಮಾತಾ ಚ ಜಗತ್ಪತಿಃ ॥208॥

ಶುದ್ಧನಾಗಿರುವಿ. ಸ್ವಾಮಿಪುಷ್ಕರಣಿಯಲ್ಲಿ ಸ್ನಾನವನ್ನು ಮಾಡಿ, (205) ವರಾಹಮೂರ್ತಿಯ ದರ್ಶನವನ್ನು ಪಡೆದು, ಆತನನ್ನು ನಮಿಸಿ, ನಿನ್ನ ದೇಹತ್ಯಾಗವನ್ನು ಮಾಡು. ಮುಂದೆ ನೀನು ರಾಜನಾಗಿ ಜನಿಸಿ, ಶತ್ರುಬಾಧೆರಹಿತನಾಗಿ ಇಲ್ಲಿ ರಾಜ್ಯಭಾರ ಮಾಡುವಿ.(206) ಮಹಾತ್ಮರಾದ ಪಾಂಡವರ ದೌಹಿತ್ರ ಸಂತತಿಯಲ್ಲಿ ಸುಧರ್ಮರಾಜನಿಗೆ ಮಗನಾಗಿ ಜನಿಸಿ, ಆಕಾಶರಾಜನೆಂಬ ಹೆಸರಿನಿಂದ ದಕ್ಷಿಣದೇಶದಲ್ಲಿ ಅತ್ಯಂತ ಕೀರ್ತಿವಂತನಾದ ರಾಜನಾಗುವಿ. (207) ನಾರಾಯಣಪುರವೆಂಬ ಪಟ್ಟಣದಲ್ಲಿ ತೋಂಡದೇಶದ ಬಲಿಷ್ಠನಾದ ರಾಜನಾಗು. ಜಗನ್ಮಾತೆಯಾದ ಮಹಾಲಕ್ಷ್ಮಿಯ ಅಂಶ ಸಂಭೂತಳು ನಿನಗೆ ಮಗಳಾಗಿಯೂ, ಜಗದೊಡೆಯನಾದ ಲಕ್ಷ್ಮೀಪತಿ

---

ಮೊದಲಾದವುಗಳಿಂದ ಮುಕ್ತಿಪ್ರತಿಬಂಧಕಪ್ರಾರಬ್ಧಭೋಗಕ್ಷಯಾರ್ಥವಾಗಿಯೇ ಮಾಧವನು ಚಂಡಾಲ ಸ್ತ್ರೀಗಮನವನ್ನು ಮಾಡಿರುವದು ಸ್ಪಷ್ಟವಾಗಿ ತಿಳಿಯುವದು. ಆದ್ದರಿಂದಲೇ 'ಹರಿಯು ಅಜಾಮಿಲನನ್ನು ಉದ್ಧರಿಸಿದಂತೆ ಬ್ರಹ್ಮನು ಇವನನ್ನು ಉದ್ಧರಿಸಿದನು' ಎಂಬುದಾಗಿ ಅಜಾಮಿಲನ ದೃಷ್ಟಾಂತವನ್ನು ಇಲ್ಲಿ ಕೊಟ್ಟಿರುವರು.

ಪ್ರಾರಬ್ಧಕರ್ಮವಶನಾಗಿ ಸ್ತ್ರೀಗಮನಾದ್ಯಸಾಧುಸಮ್ಮತಾಚಾರಗಳಲ್ಲಿ ನಿರತನಾದ ಮಾಧವನು ಪತಿತನಾದ್ದರಿಂದ ಚಂಡಾಲರಿಗುಚಿತವಾದ ಧರ್ಮಗಳನ್ನೇ ಆಚರಿಸಿರುವನು. ಉಚ್ಛಿಷ್ಟಾನ್ನ ಭಕ್ಷಣ, ಮಣ್ಣಿನ ಪಿಂಡಗಳ ಮೂಲಕವಾಗಿ ಪಿತೃದೇವತೆಗಳ ಅರ್ಚನೆ - ಇವು ಸ್ವವರ್ಣಾಶ್ರಮೋಚಿತ ಧರ್ಮಗಳಿಂದ ಭ್ರಷ್ಟಾರಾದವರ ಕರ್ಮಗಳೆನಿಸಿರುವವು. ಮಾಧವನು ಹರಿಯ ನಿರ್ಣಯವನ್ನು ಚಿಂತಿಸುತ್ತಿದ್ದನೆಂಬುದು ಇದರಿಂದ ದೃಢವಾಗುವದು.

ಯಾವದೇ ಕಾರಣದಿಂದಲಾದರೂ ಸಹ ದುಷ್ಕರ್ಮವನ್ನಾಚರಿದಲ್ಲಿ ಅದಕ್ಕೆ ಪಾಪವು ಮತ್ತು ಪಾತಿತ್ಯವು ಇದ್ದೇ ಇರುವದು. ಮಾಧವನಿಲ್ಲಿ ಚಂಡಾಲ ಸ್ತ್ರೀಗಮನವನ್ನು ಮಾಡಿರುವದರಿಂದ ಪಾಪವು ಬಂದೇ ಇರುವದು. ಅವನು ಅಪರೋಕ್ಷಜ್ಞಾನಿಯಾದ್ದರಿಂದ ಅವನಿಗೆ ಪಾಪವುಂಟಾದರೂ ಸಹ ಅದರ ಬಹುತರಲೇಪವು ಅವನಿಗೆ ಉಂಟಾಗಲಿಲ್ಲ. ಅವನ ಪಾಪವೆಲ್ಲವೂ ಸಹ ಶೇಷಗಿರಿಯ ಪ್ರಭಾವದಿಂದ ಭಸ್ಮವಾಯಿತು. ಬ್ರಹ್ಮದೇವರ ಅನುಗ್ರಹದಿಂದ ಅವನು ಪರಿಶುದ್ಧನಾದನು. ಆದರೂ ಸಹ ದೇಹಸಂಬದ್ಧವಾದ ಪಾತಿತ್ಯವು ಅವನಿಗೆ ಇದ್ದೇ ಇದ್ದಿತು. ಅದಕ್ಕೆ ಬ್ರಹ್ಮದೇವರು ಮಾಧವನಿಗೆ 'ಸ್ವಾಮಿಪುಷ್ಕರ್ಣಿಯಲ್ಲಿ ಸ್ನಾನವನ್ನು ಮಾಡಿ ದೇಹತ್ಯಾಗವನ್ನು ಮಾಡು' ಎಂದು ನುಡಿದಿರುವರು. ಸ್ಮೃತ್ಯರ್ಥಸಾರದಲ್ಲಿ 'ಚಂಡಾಲೀಂ ಬುದ್ಧಿಪೂರ್ವಂ ಬಹುದಿನಂ ಗತ್ವಾ

ಭವಿಷ್ಯತಿ ಮಹಾರಾಜ ಪಶ್ಚಾದ್ವೈಕುಂಠಮಾಪ್ನುಹಿ' ।
ಇತಿ ತಸ್ಯ ವರಂ ದತ್ವಾ ಚತುರಶ್ಚತುರಾನನಃ ॥209॥

ತದಾ ನಾಮ ಚಕಾರಾದ್ರೇರ್ವೇಂಕಟಾಚಲ ಇತ್ಯಪಿ ।
ಸರ್ವಪಾಪಾನಿ ವೇಂ ಪ್ರಾಹುಃ ಕಟಸ್ತದ್ದಾಹ ಉಚ್ಯತೇ ॥210॥

ತಸ್ಮಾದ್ವೇಂಕಟಶೈಲೋऽಯಂ ಲೋಕೇ ವಿಖ್ಯಾತಕೀರ್ತಿಮಾನ್ ।
ಪ್ರಭಾತಕಾಲೇ ರಾಜೇಂದ್ರ ಯಃ ಕೀರ್ತಯತಿ ಭೂಧರಮ್ ॥211॥

ಯಾದ ನಾರಾಯಣನು ನಿನಗೆ ಅಳಿಯನಾಗಿಯೂ ಅನುಗ್ರಹಿಸುವನು. (208) ಮಹಾರಾಜನಾದ ನೀನು ಅನಂತರದಲ್ಲಿ ವೈಕುಂಠವನ್ನು ಹೊಂದುವಿ' ಎಂದು ಈ ರೀತಿಯಾಗಿ ಬ್ರಹ್ಮದೇವರು ಮಾಧವನಿಗೆ ವರಪ್ರದಾನಮಾಡಿ ಅನಂತರದಲ್ಲಿ ಈ ಪರ್ವತಕ್ಕೆ ವೇಂಕಟಾಚಲ ವೆಂಬುದಾಗಿ ನಾಮಕರಣವನ್ನು ಮಾಡಿದರು.

### ವೇಂಕಟಾಚಲ ನಾಮಕರಣ

ಭಕ್ತರ ಸಮಸ್ತಪಾಪಗಳನ್ನು ಸುಡುವದರಿಂದ ಈ ಪರ್ವತಕ್ಕೆ ವೇಂಕಟಾಚಲವೆಂಬ ಹೆಸರು ಸಾರ್ಥಕವಾಗಿದೆ. (210) ಪ್ರಭಾತ ಸಮಯದಲ್ಲಿ ಯಾರು ಈ ಪರ್ವತದ ಮಾಹಾತ್ಮ್ಯೆಯನ್ನು ಶ್ರವಣಮಾಡುವರೋ ಅವರ ಫಲವನ್ನು ಹೇಳುವೆನು. ಕೇಳಿರಿ. ಈ ಪರ್ವತದ ಮಹಾತ್ಮೆಯನ್ನು

---

ಅಗ್ನಿನಾ ಮೃತಃ ಶುದ್ಧ್ಯೇತ್ ಎಂಬುದಾಗಿ ದೇಹತ್ಯಾಗವೇ ಮಾಧವನ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವೆಂದು ತಿಳಿಯುವದು. ಇದು ಆದಿತ್ಯಪುರಾಣದಿಂದಲೂ ಸಹ ಸಿದ್ಧವಾಗುವದು.

ಹಾಗಿದ್ದಲ್ಲಿ ಸ್ವೇಚ್ಛಾಪೂರ್ವಕವಾದ ದೇಹತ್ಯಾಗವು ಆತ್ಮಹತ್ಯಾದೋಷ ವೆನಿಸುವದಿಲ್ಲವೇ? ಎಂದು ಶಂಕಿಸಬಾರದು. ಪ್ರಾಯಶ್ಚಿತ್ತಾರ್ಥವಾಗಿ ಮಾಡುವ ಭೃಗುಪತನ, ಕೂಲಪತನ, ತುಷಾರ ದಹನಾದಿಗಳು ಆತ್ಮಘಾತ ವೆನಿಸದೇ ಉತ್ತಮಲೋಕಸಾಧನವೆನಿಸಿರುವವು. `ಸ್ವಯಂ ದೇಹವಿನಾಶಸ್ಯ ಕಾಲೇ ಪ್ರಾಪ್ತೇ ಮಹಾಮತಿಃ । ಅಗಾಧತೋಯರಾಶಿಂ ಚ ಭೃಗೋಃ ಪತನಮೇವ ಚ । ಗಚ್ಛೇನ್ಮಹಾಪಥಂ ವಾऽಪಿ ತುಷಾರೈರಿದಮಾದರಾತ್ । ಪ್ರಯಾಗವಟಶಾಖಾಗ್ರಾತ್ ದೇಹತ್ಯಾಗಂ ಕರೋತಿ ಚ । ಉತ್ತಮಾನಾಪ್ನುಯಾತ್ ಲೋಕಾನ್ ನಾತ್ಮಘಾತೀ ಭವೇನ್ನರಃ '

ಮಾಧವನು ತನ್ನ ಪಾಪ-ಪಾತಿತ್ಯಪರಿಹಾರಾರ್ಥವಾಗಿ ದೇಹತ್ಯಾಗವನ್ನು ಮಾಡಿದರೂ ಸಹ ಅವನಿಗೆ ಅತಿಹೀನವಾದ ಚಂಡಾಲಸ್ತ್ರೀಗಮನದಿಂದ ಮುಂದೆ ಬ್ರಾಹ್ಮಣವರ್ಣದಿಂದ ಹೀನವಾದ ಕ್ಷತ್ರಿಯ ಯೋನಿಯಲ್ಲಿ ಹುಟ್ಟುವ ಪ್ರಸಂಗವು ಬಂದಿತು. ಆದರೂ ಸಹ ಜನ್ಮಾಂತರ ಪುಣ್ಯ ಮತ್ತು ಶೇಷಗಿರಿಯ ಸಂಪರ್ಕದ ಪ್ರಭಾವದಿಂದಾಗಿ ಅವನು ಪರಮಾತ್ಮನಿಗೇ ಮಾವನಾಗುವ ಯೋಗ ಒದಗಿ ಬಂದಿತು.

ತಸ್ಯ ಪುಣ್ಯಫಲಂ ವಕ್ಷ್ಯೇ ಶೃಣು ರಾಜನ್ ಯಥಾಸ್ಥಿತಮ್ ।
ಫಲಂ ಭವೇದ್ಧುವಂ ಗಂಗಾಸೇತುಯಾತ್ರಾಸಹಸ್ರಜಮ್ ॥212॥

ಇತಿಹಾಸಮಿದಂ ಪ್ರೋಕ್ತಂ ಗೌತಮೇನ ಮಯೋದಿತಮ್ ।
ಪುಣ್ಯಂ ಪರಮಕಲ್ಯಾಣಂ ಶ್ರವಣಾದ್ಭದ್ರದಾಯಕಮ್ ॥213॥

॥ ಇತಿ ಶ್ರೀ ಭವಿಷ್ಯೋತ್ತರಪುರಾಣೇ ವೇಂಕಟಗಿರಿಮಾಹಾತ್ಮ್ಯೇ
ಚತುರ್ಯುಗಮಹಿಮಾವಿಶೇಷವರ್ಣನಂ ನಾಮ ಪ್ರಥಮೋಽಧ್ಯಾಯಃ ॥

* * *

ಜ್ಞಾನಪೂರ್ವಕವಾಗಿ ತಿಳಿದು ಸ್ತುತಿಗೈಯುವ ಮನುಜನು ಭರತ ಖಂಡದಲ್ಲಿ ಆಸೇತುಶೀತಾಚಲ ಪರ್ಯಂತವಾಗಿ (ಗಂಗೆಯಿಂದ ರಾಮೇಶ್ವರದ ಪರ್ಯಂತವಾಗಿ) ಸಹಸ್ರಾವರ್ತಿ ಮಾಡಿದ ತೀರ್ಥಯಾತ್ರೆಯ ಪುಣ್ಯಫಲವನ್ನು ಹೊಂದುವನು. ಈ ಪರ್ವತದ ಇತಿಹಾಸವು (ಪೂರ್ವವೃತ್ತಾಂತವು ಗೌತಮ ಋಷಿಗಳಿಂದ ನನಗೆ ಹೇಳಲ್ಪಟ್ಟಿದ್ದು ಅತ್ಯಂತ ಪುಣ್ಯಕರವು ಮಂಗಲ ಕರವೂ ಮತ್ತು ಶ್ರವಣ ಮಾತ್ರದಿಂದಲೇ ಅತ್ಯಂತ ಶ್ರೇಯೋ ದಾಯಕವೂ ಆಗಿರುವದು (211–213)

ಇಲ್ಲಿಗೆ ಶ್ರೀಮದ್ಭವಿಷ್ಯೋತ್ತರ ಪುರಾಣದ ವೇಂಕಟೇಶ ಮಾಹಾತ್ಮೆಯಲ್ಲಿ ಚತುರ್ಯುಗ
ಮಹಿಮಾವಿಶೇಷವರ್ಣನವೆಂಬ ಮೊದಲನೆಯ ಅಧ್ಯಾಯವು ಪರಿಸಮಾಪ್ತವಾಯಿತು

* * *

ಅಥ ಶ್ರೀಭವಿಷ್ಯೋತ್ತರಪುರಾಣೇ ವೇಂಕಟೇಶಮಾಹಾತ್ಮ್ಯೇ

## ದ್ವಿತೀಯೋಽಧ್ಯಾಯಃ

ಜನಕ ಉವಾಚ–

'ಮರುತ್ಪ್ರಾಹಾಹಿರಾಜಂ ತಂ ಭಗವಾನಾಗಮಿಷ್ಯತಿ[18] ।
ಇತಿ ತ್ವಯೋದಿತಂ ಪೂರ್ವಂ ತನ್ಮಮಾಚಕ್ಷ್ವ ವಿಸ್ತರಾತ್ ॥1॥

ಕಥಂ ನಾರಾಯಣಃ ಪ್ರಾಪ್ತಃ ಕಸ್ಮಾದ್ವಾಕಾರಣಾನ್ಮುನೇ ।
ತತ್ರಾಗತ್ಯ ಕೃತಂ ಕರ್ಮ ತನ್ಮಮಾಽಚಕ್ಷ್ವ ಭೂಸುರ ॥2॥

ಕಥಂ ವೈಕುಂಠಲೋಕಂ ತು ತ್ಯಕ್ತವಾನ್ಪುರುಷೋತ್ತಮಃ ।
ಚರಿತಂ ತಸ್ಯ ಮಾಹಾತ್ಮ್ಯಂ ತೀರ್ಥಾನಾಂ ಪರ್ವತಸ್ಯ ಚ ॥3॥

## ಎರಡನೆಯ ಅಧ್ಯಾಯ

ಜನಕ ಕೃತ ಪ್ರಾರ್ಥನಾ

ಜನಕರಾಜನು 'ಹೇ ಶತಾನಂದರೇ! ನೀವು ವಾಯುದೇವರು ಶೇಷ ದೇವರನ್ನು ಕುರಿತು ಭಗವಂತನು ಇಲ್ಲಿಗೆ ಆಗಮಿಸುವದಾಗಿ ನುಡಿದಿರು–ವರೆಂದು ತಿಳಿಸಿದಿರಿ. (1) ವೈಕುಂಠಾಧಿಪತಿಯಾದ ನಾರಾಯಣನು ಇಲ್ಲಿಗೆ ಹೇಗೆ ಬರುವನು? ಯಾವ ಕಾರಣದಿಂದ ಬರುವನು? ಇಲ್ಲಿ ಮಾಡುವ ಕರ್ಮವಾದರೂ ಯಾವದು? ಇದೆಲ್ಲವನ್ನು ನನಗೆ ವಿಸ್ತಾರವಾಗಿ ತಿಳಿಸಿರಿ. (2) ಸಾಕ್ಷಾದ್ವೈಕುಂಠಾಧಿಪತಿಯಾದ ನಾರಾಯಣನು ತನ್ನ ಲೋಕವನ್ನು ತೊರೆದು ಇಲ್ಲಿಗೆ ಬಂದುದಾದರೂ ಏಕೆ? ವರಾಹ ರೂಪಿಯಾದ ವಿಷ್ಣುವಿನ ಮಾಹಾತ್ಮ್ಯ, ಪುಣ್ಯತೀರ್ಥಗಳ

**18.** ಯದ್ಯಪಿ ವಾಯುದೇವರು ಶೇಷದೇವರಿಗೆ ಅನುಗ್ರಹಿಸಿರುವ ವೃತ್ತಾಂತವು ಪೂರ್ವದಲ್ಲಿ ನಿರುಪಿತವಾಗಿದ್ದರೂ ಸಹ ಭಗವಂತನೇ ಸಾಕ್ಷಾತ್ತಾಗಿ ಪರ್ವತರೂಪಿಯಾದ ಶೇಷನ ಮೇಲೆ ಬಂದು ನಿಲ್ಲುವನೆಂಬ ವೃತ್ತಾಂತವು ನಿರುಪಿತವಾಗಿರುವದಿಲ್ಲವಾದರೂ ಸಹ ಬ್ರಹ್ಮಾಂಡ, ಬ್ರಹ್ಮ, ಸ್ಕಾಂದವೇ ಮೊದಲಾದ ಬಹುಪುರಾಣಗಳಲ್ಲಿ ವಿವೃತವಾಗಿರುವದರಿಂದ ಇಲ್ಲಿ ಪುನಃ ಅದನ್ನು ನಿರೂಪಿಸದೇ ಸೂಚ್ಯವಾಗಿ ಅದನ್ನು ಅನುವಾದಿಸಿ ರುವದು. ಇದು ಪುರಾಣಕ್ಕೆ ಪುರಾಣಾಂತರವು ಸಂವಾದಿಯಾಗಿ ಪೂರಕವಾಗಿರುವದೆಂಬುದಕ್ಕೆ ಉದಾಹರಣೆ ಯಾಗಿರುವದು. ಅಥವಾ, ಚಿತ್ರಕೂಟವೃತ್ತಾಂತ ನ್ಯಾಯದಂತೆ ಪೂರ್ವದಲ್ಲಿ ಇದು ನಡೆದಿದ್ದರೂ ಸಹ ಮುಂದೆ ಅವಶ್ಯವಕ್ತವ್ಯತ್ವವು ಈಗ ಇರುವದರಿಂದ ಅದನ್ನು ಆಗ ತಿಳಿಸದೇ ಈಗ ತಿಳಿಸಿರುವರು.

ವರಾಹರೂಪಿಣೋ ವಿಷ್ಣೋರ್ಮಾಹಾತ್ಮ್ಯಂ ವದ ವಿಸ್ತರಾತ್।
ಆಕಾಶರಾಜಚರಿತಂ ಭ್ರಾತುಸ್ತಸ್ಯ ಮಹಾತ್ಮನಃ ॥4॥

ಯಸ್ಯ ಪುತ್ರೀ ರಮಾದೇವೀ ಜಾಮಾತಾ ಚ ಜಗತ್ಪತಿಃ ।
ದೇವಾನಾಂ ಚ ಋಷೀಣಾಂ ಚ ದೇವಸ್ತ್ರೀಣಾಂ ಸಮಾಗಮಮ್' ॥5॥

ಶತಾನಂದ ಉವಾಚ–

ಪುರಾ ತು ಋಷಯಃ ಸರ್ವೇ ಕಶ್ಯಪಾದ್ಯಾ ಮುನೀಶ್ವರಾಃ ।
ಸಮ್ಮುಖಂ ಜಾಹ್ನವೀತೀರೇ ಸಂತೋಷಾಚ್ಚಕ್ರಿರೇ ದ್ವಿಜಾಃ ॥6॥

ತಸ್ಮಿನ್ ಕಾಲೇ ನೃಪಶ್ರೇಷ್ಠ ನಾರದೋ[19] ಮುನಿಸತ್ತಮಃ ।
ಉವಾಚ ವಚನಂ ವಿಪ್ರಾನ್ 'ಕಿಮರ್ಥೋಽಯಂ ಕ್ರತೂತ್ತಮಃ' ॥7॥

ಕೋ ಭುಂಕ್ತೇ ಯಜ್ಞಸುಫಲಂ ಕೋ ವಾ ಧ್ಯೇಯಃ ಸುರೋತ್ತಮಃ ।
ಕೃತಯಜ್ಞಫಲಂ ಕಸ್ಯ ಚಾರ್ಪ್ಯತೇ ಮುನಿಪುಂಗವಾಃ' ॥8॥

ಮಾಹಾತ್ಮ್ಯ ಇವುಗಳನ್ನು ನನಗೆ ತಿಳಿಸಿಕೊಡಿರಿ. (3–4) ಯಾರಿಗೆ ಜಗತ್ಪತಿಯಾದ ನಾರಾಯಣನೇ ಅಳಿಯನಾಗಿರುವನೋ ಅಂತಹ ಆಕಾಶರಾಜನ, ಅವನ ತಮ್ಮನಾದ ತೋಂಡಮಾನನ ಚರಿತ್ರೆಯನ್ನು ನನಗೆ ತಿಳಿಸಿರಿ. ದೇವತೆಗಳ, ಋಷಿಗಳ, ದೇವಸ್ತ್ರೀ ಋಷಿಸ್ತ್ರೀಯರ ಸಮಾಗಮವು ಹೇಗೆ ಆಗುವದೆಂಬುದನ್ನು ತಿಳಿಸಿರಿ' ಎಂದು ಪ್ರಾರ್ಥಿಸಿದಾಗ ಶತಾನಂದರು ವಿಷ್ಣುಸರ್ವೋತ್ತಮತ್ವ ವ್ಯವಸ್ಥಾಪನ ಪುರಸ್ಸರವಾದ ಸಮಗ್ರ ವೃತ್ತಾಂತವನ್ನು ಜನಕರಾಜನಿಗೆ ತಿಳಿಸುತ್ತಾರೆ. (4–5)

### ಭೃಗುವಿನಿಂದ ಸಾತ್ವಿಕದೇವತಾ ಪರೀಕ್ಷೆ

ಪೂರ್ವಕಾಲದಲ್ಲಿ ಕಶ್ಯಪರೇ ಮೊದಲಾದ ಮುನಿಶ್ರೇಷ್ಠರುಗಳು ಗಂಗಾತೀರದಲ್ಲಿ ಅತ್ಯಂತ ಹರ್ಷದಿಂದ ಉತ್ತಮವಾದ ಯಜ್ಞವನ್ನು ಮಾಡಿದರು. (6) ಆ ಸಂದರ್ಭದಲ್ಲಿ ನಾರದಮುನಿಯು ಅಲ್ಲಿಗೆ ಆಗಮಿಸಿ ಋಷಿಶ್ರೇಷ್ಠರನ್ನು ಕುರಿತು "ಯಜ್ಞವು ಯಾರಿಗೋಸ್ಕರವಾಗಿ ಮಾಡಲ್ಪಟ್ಟಿರುವದು? ಯಜ್ಞದ ಫಲವನ್ನು ಭೋಗಿಸುವ ದೇವತೆ ಯರು? ದೇವತೆಗಳಲ್ಲಿ ಶ್ರೇಷ್ಠರು ಯಾರು? ಯಾರನ್ನು ಕುರಿತು ಧ್ಯಾನ ಮಾಡುತ್ತೀರಿ? ಯಜ್ಞಫಲವನ್ನು ಯಾರಿಗೆ ಸಮರ್ಪಿಸುತ್ತೀರಿ?'

19. 'ಗಾಯನ್ನಾರಾಯಣಕಥಾಂ ಸದಾ ಪಾಪಭಯಾಪಹಮ್ | ನಾರದೋ ನಾಶಯನ್ನೇತಿ ನೃಣಾಮಜ್ಞಾನಜಂ ತಮಃ' - ಪರಮಾತ್ಮ ಸಂಬಂಧಿ ಕಥೆಗಳನ್ನುಪದೇಶಿಸುತ್ತಾ ಮನುಷ್ಯರ ಅಜ್ಞಾನವನ್ನು ಕಳೆಯುವವರಾದ್ದರಿಂದ ನಾರದರೆಂಬ ಅನ್ವರ್ಥಕನಾಮವಾಗಿರುವದು.

ಇತಿ ನಾರದವಾಕ್ಯಂ ತು ಶ್ರುತ್ವಾ ತೇ ಮುನಿಪುಂಗವಾಃ ।
ಸಂಶಯಾರ್ಥಂ[20] ಸಮಾಪನ್ನಾಃ ಕಥಮತ್ರ ವಿಚಾರ್ಯತಾಮ್ ॥9॥

ಸಮ್ಮಿಲಿತ್ವಾ ತದಾ ಸರ್ವೇ ಭೃಗುಂ ಬ್ರಹ್ಮವಿದಾಂ ವರಮ್ ।
ತಮೂಚುರ್ಭಕ್ತಿನಮ್ರಾಂಗಾಃ ಕೃತಾಂಜಲಿಪುಟಾ ಸ್ಥಿತಾಃ ॥10॥

'ಗಚ್ಛ ಶೀಘ್ರಂ ಮಹಾಬುದ್ಧೇ ಪರಂ ವೇತ್ತುಂ ಸುರೋತ್ತಮಮ್' ।
ಇತಿ ತೇಷಾಂ ವಚಃ ಶ್ರುತ್ವಾ ಯಯೌ ಕಂಜಜಮಂದಿರಮ್ ॥11॥

ತತ್ರ ದೃಷ್ಟ್ವಾಽಷ್ಟಬಾಹುಂ ತಂ ಸಾಕ್ಷಾದ್ಬ್ರಹ್ಮಾಣಮಗ್ರಜಮ್ ।
ಚತುರ್ಮುಖಮುದಾರಾಂಗಂ ಸರಸ್ವತ್ಯಾಽನುಸೇವಿತಮ್ ॥12॥

ಚತುರಾಸ್ಯಸಮುದ್ಭೂತವೇದಘೋಷವಿರಾಜಿತಮ್ ।
ದಿಶಾಂಪಾಲಗಣೈಃ ಸಾರ್ಧಂ ಕಿರೀಟಮುಕುಟೋಜ್ವಲಮ್[21] ॥13॥

ಸ್ತುವಂತಂ ಜಗದೀಶಾನಂ ನಾರಾಯಣಮನಾಮಯಮ್ ।
ತಂ ನತ್ವಾ ಭಕ್ತಿಭಾವೇನ ಮಹಾದೀಪ್ತ್ಯಾ ವಿರಾಜಿತಮ್ ॥14॥

ಎಂದು ಪ್ರಶ್ನಿಸಿದರು. (7–8) ಹರಿಭಕ್ತಾಗ್ರೇಸರರಾದ ಕಶ್ಯಪಾದಿ ಮುನಿಗಳು ಹರಿಯೇ ಸರ್ವೋತ್ತಮನೆಂಬ ಜ್ಞಾನವನ್ನು ಹೊಂದಿದ್ದರೂ ಸಹ ಲೋಕದಲ್ಲಿ ಅದನ್ನು ವ್ಯಕ್ತಗೊಳಿಸಬೇಕೆಂದು ಬಯಸಿ ಈ ತತ್ವವನ್ನು ಯಾರಿಂದ ಭೂಮಿಯಲ್ಲಿ ನಿಶ್ಚಯಿಸಬೇಕೆಂದು ವಿಚಾರವನ್ನು ಮಾಡಿ, ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಭೃಗುಋಷಿಯನ್ನು ಕೃತಾಂಜಲಿಪುಟರಾಗಿ, 'ದೇವತೆಗಳಲ್ಲಿ ಶ್ರೇಷ್ಠನು ಯಾರು' ಎಂಬುದನ್ನು ನಿರ್ಧರಿಸಲು ಕೇಳಿಕೊಂಡರು. ಭೃಗುಋಷಿಯು ಈ ವಿಷಯವನ್ನು ನಿರ್ಣಯಿಸಲು ಬ್ರಹ್ಮದೇವನ ಮಂದಿರವನ್ನು ಕುರಿತು ಪ್ರಯಾಣ ಮಾಡಿದನು. (9–11) ಸರಸ್ವತಿಯಿಂದ ಸೇವಿಸಲ್ಪಡುವ, ಚತುರ್ಮುಖಗಳಿಂದ ಹೊರಹೊಮ್ಮುವ ವೇದಘೋಷ ಗಳಿಂದ ವಿರಾಜಿತನಾದ, ಕಿರೀಟವೇ ಮೊದಲಾದ ಶಿರೋಭೂಷಣಗಳಿಂದ ಅಲಂಕೃತನಾದ, ಇಂದ್ರಾದಿದಿಕ್ಪಾಲಕ ದೇವತೆಗಳಿಂದ ಪರಿವೃತನಾಗಿ ಜಗನ್ನಿಯಾಮಕನಾದ ನಾರಾಯಣನ ಸ್ತೋತ್ರದಲ್ಲಿ ನಿರತನಾದ ಚತುರ್ಮುಖ ಬ್ರಹ್ಮನನ್ನು ನಮಸ್ಕರಿಸಿದನು. ಭಕ್ತಿಪೂರ್ವಕವಾಗಿ ನಮಸ್ಕರಿಸುತ್ತಿರುವ ಭೃಗುಋಷಿಯನ್ನು ನೋಡಿದರೂ ಹರಿಧ್ಯಾನ ಪರನಾದ, ಹರಿಚಿತ್ತವನ್ನು ತಿಳಿದಿರುವ ಚತುರ್ಮುಖ

20. ಸಂಶಯಾರ್ಥಂ = ಸಂಶಯಸ್ಯ ಅರ್ಥಃ ನಿವೃತ್ತಿಃ ಸಂಶಯಾರ್ಥಃ । ಸೋಽರ್ಥಃ ಪ್ರಯೋಜನಂ ಯಸ್ಯ ತತ್ । ಸಂಶಯನಿವೃತ್ತ್ಯರ್ಥಮ್ ಇತ್ಯರ್ಥಃ (ವ್ಯಾ.)

21. ಕಿರೀಟಮುಕುಟೋಜ್ವಲಮ್ = ಕಿರೀಟಾನ್ಯೇವ ಮುಕುಟಾನಿ ತೈರುಜ್ವಲಂ

ಪಾತಯಾಮಾಸ ಕಾಯಂ ಸ್ವಂ ಪುರತಃ ಕಂಜಜನ್ಮನಃ ।
ಪತಿತಂ ಸ ಭೃಗುಂ ದೃಷ್ಟ್ವಾ ನೋವಾಚ ವಚನಂ ವಿಧಿಃ ॥15॥

ತಂ ಮತ್ವಾ ಕಿಂಚಿದಜ್ಞಾನಾದಪೂಜ್ಯಂ ಮುನಿಪುಂಗವಃ ।
ಅಲಬ್ಧ್ವಾ ಸ್ವಾತ್ಮನಃ ಕಾರ್ಯಂ ಕೈಲಾಸಂ ಸ ಋಷಿರ್ಯಯೌ ॥16॥

ಕೈಲಾಸಗಿರಿಮಾಸಾದ್ಯ ತತ್ರಾದ್ರಾಕ್ಷೀತ್ತ್ರಿಲೋಚನಮ್ ।
ಕಾಮುಕಂ ಪಾರ್ವತೀದೇವ್ಯಾ ಕ್ರೀಡಂತಂ ನಿಜಮಂದಿರೇ ॥17॥

ತಸ್ಮಿನ್ ಕಾಲೇ ಸಮಾಯಾತಂ ನಾಜಾನಾತ್ಕಾಮುಕೋ ಹರಃ ।
ಅಗತಂ ಸಾ ಮುನಿಂ ದೃಷ್ಟ್ವಾ ಪಾರ್ವತೀ ಲಜ್ಜಯಾಽವದತ್ ॥18॥

'ತ್ಯಜ ಶೀಘ್ರಂ ಮಹಾಬಾಹೋ ಹ್ಯಾಗತೋಮುನಿಪುಂಗವಃ' ।
ಇತಿ ತಸ್ಯಾ ವಚಃ ಶ್ರುತ್ವಾ ಕ್ರೋಧಾತ್ತಾಮ್ರವಿಲೋಚನಃ ॥19॥

ಹಂತುಮಭ್ಯದ್ರವಚ್ಛೀಘ್ರಂ ಋಷಿಃ ಶಾಪಾನ್ನಿರಾಕರೋತ್ ।
'ಶಶಾಪ ಸ ಋಷಿಃ ಶಂಭುಂ ಲೋಕೇ ತ್ವಂ ನೈವ ಪೂಜ್ಯಸೇ ॥20॥

ತ್ವಚ್ಛಿಶ್ನಪೂಜನೇನೈವ ಲೋಕೇ ಖ್ಯಾತಿಂ ಗಮಿಷ್ಯಸಿ' ।
ಇತ್ಯುಕ್ತ್ವಾ ಸ ಋಷಿಶ್ಚಾಗಾದ್ ವೈಕುಂಠಂ ಹರಿಮಂದಿರಮ್ ॥21॥

ಬ್ರಹ್ಮನು ಮಾತನಾಡಲಿಲ್ಲ. (12–15) ಇದನ್ನು ನೋಡಿದ ಭೃಗುಋಷಿಯು ಅಜ್ಞಾನವನ್ನು ಹೊಂದಿ, ಚತುರ್ಮುಖನನ್ನು ಅಪೂಜ್ಯನೆಂದು ತಿಳಿದು, ತನ್ನ ಕಾರ್ಯಸಿದ್ಧಿಯಾಗಲಿಲ್ಲವೆಂದು ಭಾವಿಸಿ, ಅಲ್ಲಿಂದ ಕೈಲಾಸಪರ್ವತಕ್ಕೆ ಪ್ರಯಾಣ ಬೆಳೆಸಿದನು. (16) ಕೈಲಾಸದಲ್ಲಿ ಪಾರ್ವತೀಸಹಿತನಾಗಿ ವಿರಹಿಸುತ್ತಿರುವ ಮುಕ್ಕಣ್ಣನನ್ನು ಕಂಡನು. (17) ಪಾರ್ವತಿಯೊಂದಿಗೆ ವಿಹರಿಸುತ್ತಿದ್ದ ಹರನು ಭೃಗುಮಹರ್ಷಿಯು ಅಲ್ಲಿಗೆ ಬಂದದ್ದನ್ನು ತಿಳಿಯಲಿಲ್ಲ. ಪಾರ್ವತಿಯು ಬಂದಿರುವ ಮುನಿಯನ್ನು ನೋಡಿ, ನಾಚಿಕೆಯಿಂದ ರುದ್ರದೇವರನ್ನು ಕುರಿತು 'ಮುನಿಶ್ರೇಷ್ಠನಾದ ಭೃಗುವು ಬಂದಿರುವನು. ನನ್ನನ್ನು ಬಿಡಿರಿ' ಎಂದು ನುಡಿದಳು. (18–19) ಏಕಾಂತ ದಲ್ಲಿದ್ದಾಗಲೂ ಬಂದ ಮುನಿಯನ್ನು ಕಂಡು ತಾಮ್ರನೇತ್ರನಾದ ರುದ್ರದೇವನು ಕೊಲ್ಲಲು ಮುಂದಾದಾಗ ಭೃಗುಮುನಿಯು 'ಲೋಕದಲ್ಲಿ ನಿನ್ನನ್ನು ಯಾರೂ ಪೂಜಿಸದಿರಲಿ' ಎಂದು ಶಾಪವನ್ನಿತ್ತು ಅವನನ್ನು ತಡೆದನು. 'ಲಿಂಗಪೂಜೆಯಿಂದಲೇ ನೀನು ಲೋಕದಲ್ಲಿ ಪ್ರಸಿದ್ಧನಾಗು' ಎಂದು ಹೇಳಿ ವಿಷ್ಣುಮಂದಿರವಾದ ವೈಕುಂಠವನ್ನು ಕುರಿತು ಪ್ರಯಾಣ ಬೆಳೆಸಿದನು. (19–21) ಗೋಪುರಗಳು, ನಾನಾರೀತಿಯಾದ ತೋರಣಗಳು –ಇವುಗಳಿಂದ ಅಲಂಕೃತವಾದ ವೈಕುಂಠದ

ಪ್ರಾಕಾರಗೋಪುರದ್ವಾರನವತೋರಣಭೂಷಿತಮ್ ।
ಚತುರ್ದಿಕ್ಷು ಚತುರ್ದ್ವಾರಪಾಲಕೈರುಪಶೋಭಿತಮ್ ॥22॥

ತತ್ರ ಶಯ್ಯಾಗೃಹೇ ರಮ್ಯೇ ಶೇಷಮಂಚಕಶಾಯಿನಮ್ ।
ಲಕ್ಷ್ಮ್ಯಾ ಸಮೇತಂ ದೇವೇಶಂ ದದರ್ಶ ಸ ಭೃಗುಸ್ತದಾ ॥23॥

ತತಾಡೋರಸಿ ಗೋವಿಂದಂ ಭೃಗುಃ ಪಾದತಲೇನ ತಮ್ ।
ತಾಡ್ಯಮಾನೋ ಹರಿಃ ಸಾಕ್ಷಾದುತ್ಥಾಯ ವಿನಯಾನ್ವಿತಃ ॥24॥

ಪಪಾತ ಭಗವಾನ್ ಭಕ್ತ್ಯಾ ಋಷಿಪಾದಸರೋರುಹೇ ।
ಆಲಿಲಿಂಗ್ಯಾಥ ಭಕ್ತ್ಯೈವ ಚೋವಾಚ ಋಷಿಪುಂಗವಮ್ ॥25॥

ಶ್ರೀಭಗವಾನುವಾಚ–

'ಕಿಮರ್ಥಂ ತ್ವಮೃಷಿಶ್ರೇಷ್ಠ ಮಚ್ಛರೀರಂ ಕಠೋರಕಮ್ ।
ಅಮೃತಂ ತ್ವಜರಾಯುಕ್ತಮಭೇದ್ಯಂ ದೇವದಾನವೈಃ ॥26॥

ವಜ್ರಾದ್ದೃಢತರಂ ವಿದ್ಧಿ ಮಚ್ಛರೀರಂ ದ್ವಿಜೋತ್ತಮ ।
ಕಿಮರ್ಥಂ ತಾಡಿತಂ ವಿಪ್ರ ಕೋಮಲಾಂಘ್ರಿತಲೇನ ತೇ ॥27॥

ಪಾದೌ ತೇ ಕೋಮಲೌ ದಿವ್ಯೌ ಮಚ್ಛರೀರಸಮಾಗಮಾತ್ ।
ಕಿಯದ್ದುಃಖಂ ಸಮಾಪನ್ನೌ ನ ಜಾನಾಮಿ ದ್ವಿಜೋತ್ತಮ' ॥28॥

ಇತ್ಯುಕ್ತ್ವಾ ದ್ವಿಜಪಾದೌ ತೌ ಪ್ರಕ್ಷಾಲ್ಯೋಷ್ಣೋದಕೇನ ವೈ ।

ರಮ್ಯವಾದ ಶಯ್ಯಾಗೃಹದಲ್ಲಿ ಲಕ್ಷ್ಮೀಯಿಂದ ಸಮೇತನಾದ ಭಗವಂತನು ಶೇಷದೇವರೆಂಬ ಮಂಚದಲ್ಲಿ ಮಲಗಿದ್ದನು. ಇಂತಹ ಪರಮಾತ್ಮನನ್ನು ನೋಡಿ ತನ್ನ ಪಾದತಲದಿಂದ ಹರಿಯ ಎದೆಯಮೇಲೆ ಒದ್ದನು. (22–24) ಆಗ ವಿಷ್ಣುವು ಲೋಕಶಿಕ್ಷಣಾರ್ಥವಾಗಿ ಮತ್ತು ಲೋಕ ವಿಡಂಬನಾರ್ಥವಾಗಿ, ಶಯ್ಯೆಯಿಂದ ಮೇಲೆದ್ದು ವಿನಯ ಹಾಗೂ ಭಕ್ತಿಯಿಂದ ಋಷಿಯ ಪಾದಕಮಲಗಳಲ್ಲಿ ನಮಸ್ಕರಿಸಿ, ಭೃಗುಮುನಿಯನ್ನು ಕುರಿತು 'ದೇವ–ದಾನವರಿಂದಲೂ ಅಭೇದ್ಯವಾದ, ಅತ್ಯಂತ ಕಠೋರ ವಾದ, ವಜ್ರಕ್ಕಿಂತಲೂ ದೃಢತರವಾದ ನನ್ನ ಶರೀರಕ್ಕೆ ಏಕೆ ತಾಡನವನ್ನು ಮಾಡಿದೆ? ಅತ್ಯಂತ ಕೋಮಲವಾದ ನಿನ್ನ ದಿವ್ಯವಾದ ಪಾದಗಳು ನನ್ನ ಶರೀರದ ಸಮಾಗಮದಿಂದ ಎಂತಹ ದುಃಖವನ್ನು ಅನುಭವಿಸಿವೆಯೋ ನಾನು ಕಾಣೆ' (26–28) ಈ ರೀತಿಯಾಗಿ ಉಷ್ಣೋದಕದಿಂದ ಭೃಗುವಿನ ಪಾದವನ್ನು ತೊಳೆದು, ಮಂಗಲಕರವಾದ

ದಧಾರ ಶಿರಸಾ ಭಕ್ತ್ಯಾ ವಿಪ್ರಪಾದೋದಕಂ ಶಿವಮ್ ॥29॥

ಜಗೃಹೇ ಸಕುಟುಂಬಶ್ಚ ಸರ್ವಲೋಕಂ ವಿಡಂಬಯನ್ ।
'ವಿಬುಧಾ ದರ್ಶನೇನೈವ ಪುನಂತಿ ಚ ಜಗತ್ತ್ರಯಮ್' ॥30॥

ಇತ್ಯುಕ್ತೋ ದೇವದೇವೇನ ಋಷಿಶ್ಚಾಗಾದ್ಧರಾತಲಮ್ ।
ಋಷೀಣಾಮಗ್ರಜಾತೀನಾಂ ಸಭಾಯಾಂ ಸ ಋಷಿಸ್ತದಾ ॥31॥

ಬೋಧಯಾಮಾಸ ತಾನ್ಸರ್ವಾನ್ 'ಹರಿಃ ಸರ್ವೋತ್ತಮಃ ಸ್ವಯಂ'।
ಇತ್ಯೇವಂ ಚಕ್ರಿರೇ ಯಜ್ಞಮರ್ಪಣಂ ಜಗದೀಶಿತುಃ ॥32॥

'ಹರಿಃ ಸರ್ವೋತ್ತಮಃ ಸಾಕ್ಷಾದ್ರಮಾದೇವೀ ತತಃ ಪರಮ್ ।
ವಿಧಿವಾಯೂ ತದಂತೇ ಚ ತದಂತೇ ಶರ್ವಪೂರ್ವಕಾಃ ॥33॥

ಏವಂ ತರತಮಾ ಜ್ಞೇಯಾಃ ಸುರದೈತ್ಯನರೇಷು ಚ' ।
ಇತ್ಯೇವಂ ಬೋಧಿತಾ ವಿಪ್ರಾ[22] ಭೃಗುಣಾ ತತ್ತ್ವವೇದಿನಾ ॥34॥

ವಿಪ್ರಪಾದೋದಕವನ್ನು ಜಗತ್ ಶಿಕ್ಷಣಾರ್ಥವಾಗಿ ಕುಟುಂಬಸಮೇತನಾಗಿ ಶಿರಸ್ಸಿನಿಂದ ಧಾರಣ ಮಾಡಿದನು. (29) 'ದರ್ಶನಮಾತ್ರದಿಂದ ತ್ರಿಲೋಕಗಳನ್ನು ಪವಿತ್ರೀಕರಿಸುವ ಸಾಮರ್ಥ್ಯವು ಬ್ರಾಹ್ಮಣರುಗಳಿಗೆ ಇದೆ' ಎಂದು ಶ್ಲಾಘಿಸಿದನು. (30) ಭಗವಂತನ ಈ ರೀತಿಯಾದ ಉಪಚಾರದಿಂದ ಪರಮಸಂತುಷ್ಟನಾದ ಋಷಿಯು ಭೂಲೋಕಕ್ಕೆ ಆಗಮಿಸಿ, (31) ಯಜ್ಞನಿರತರಾದ ಋಷಿಪುಂಗವರ ಸಭೆಯಲ್ಲಿ 'ವಿಷ್ಣುವೇ ಸಮಸ್ತ ದೇವಾಧಿದೇವನೂ, ಸರ್ವೋತ್ತಮನೆಂದೂ, ಅವನ ಅನಂತರದಲ್ಲಿ ರಮಾದೇವಿಯೂ, ತದನಂತರದಲ್ಲಿ ಬ್ರಹ್ಮಾ-ವಾಯು ದೇವರು, ತದನಂತರದಲ್ಲಿ ಗರುಡ-ಶೇಷ-ರುದ್ರೇಂದ್ರಾದಿದೇವತೆಗಳೆಂದೂ ತಿಳಿಸಿದನು. ಈ ರೀತಿಯಾಗಿ ಭೃಗುಮುನಿಯಿಂದ ಬೋಧಿತರಾದ ವಿಪ್ರರು ಹರಿಯೇ ಸರ್ವೋತ್ತಮನೆಂದು ನಿಶ್ಚಯಿಸಿ ಅವನಿಗೆ

22. ಭೃಗುಮಹರ್ಷಿಗಳಿಂದಲೇ ಹರಿಸರ್ವೋತ್ತಮತ್ವಜ್ಞಾನವು ಕಶ್ಯಪಾದಿ ಋಷಿಗಳಿಗುಂಟಾಯಿತೆಂದು ತಿಳಿಯಬಾರದು. ಮಹಾಜ್ಞಾನಿಗಳಾದ ಕಶ್ಯಪಾದಿ ಋಷಿಗಳು ಸದಾ ಭಗವತ್ಸರ್ವೋತ್ತಮತ್ವ ಜ್ಞಾನವನ್ನು, ತಾರತಮ್ಯಜ್ಞಾನವನ್ನು ಹೊಂದಿದ್ದರೂ ಸಹ 'ಜಾನಂತೋಽಪಿ ವಿಶೇಷಾರ್ಥಜ್ಞಾನಾಯ ಸ್ಥಾಪನಾಯ ವಾ । ಪೃಚ್ಛಂತಿ ಸಾಧವೋ ಲೋಕೇ.. ..... .... (ಗೀ.ತಾ.4.5)' ಎಂಬ ಆಗ್ನೇಯ ಪುರಾಣದ ಉಕ್ತ್ಯಯಂತೆ ಲೋಕದಲ್ಲಿ ವಿಶೇಷವಾಗಿ ಸರ್ವೋತ್ತಮತ್ವಜ್ಞಾನಾರ್ಥವಾಗಿ ಹೀಗೆ ಪರಸ್ಪರಪ್ರಶ್ನಪ್ರಾರ್ಥನಾದಿಗಳು ಉಪಪನ್ನವಾಗುವವು. ಅಥವಾ, ಸರ್ವಯಜ್ಞಗಳೂ ಸಹ ಜ್ಞಾನಯಜ್ಞದಿಂದಲೇ ಪರಿಪೂರ್ಣ ವಾಗುವದರಿಂದ ಶ್ರುತಿಗಳಿಂದ ಶ್ರುತ-ಅನುಮಿತವಾದ ಹರಿಯ ಸರ್ವೋತ್ತಮತ್ವವನ್ನು ಪ್ರತ್ಯಕ್ಷಸಿದ್ಧವಾಗಿಸಲು ಭೃಗುಮಹರ್ಷಿಗಳನ್ನು ಋಷಿಗಳು ಹೀಗೆ ಪ್ರಾರ್ಥಿಸಿದರು ಎಂದು ತಿಳಿಯಬೇಕು.

ಹರಿಂ ನಿಶ್ಚಿತ್ಯ ಸರ್ವೇಶಂ ಚಕ್ರುಸ್ತಸ್ಮೈ ಮಖಾರ್ಪಣಮ್ ।
ತತಸ್ತು ಭಗವಾನ್ ದೇವ ಏಕಾಂತೇ ನಿಜಮಂದಿರೇ ॥35॥

ಸಾರ್ಧಂ ಚ ರಮಯಾ ತಿಷ್ಠತ್ತದೋವಾಚ ರಮಾ ಹರಿಮ್ ।

ಶ್ರೀರಮೋವಾಚ–

'ಗಚ್ಛಾಮಿ ದೇವದೇವೇಶ ತ್ಯಕ್ತ್ವಾ ತ್ವಾಂ ಜಗದೀಶ್ವರ ॥36॥

ತಾಡಿತೋಽಸಿ ಜಗನ್ನಾಥ ಋಷಿಣಾ ತ್ವಂ ಜಗನ್ಮಯಃ ।
ಮದಾಲಿಂಗಸ್ಥಲೇ ದೇವ ಪಾದೇನೈವ ಜಗತ್ಪತೇ ॥37॥

ಕರವೀರಪುರಂ ದಿವ್ಯಂ ಗಚ್ಛಾಮಿ ಗರುಡಧ್ವಜ ।
ಇತಿ ಪ್ರೇಮ್ಣಾ ಚ ಕಲಹಂ ಕೃತ್ವಾ ತು ಹರಿಣಾ ಸಹ ॥38॥

ರಮಾ ಜಗಾಮ ತತ್ಕ್ಷೇತ್ರಂ ಕರವೀರಪುರಂ ಪ್ರತಿ ।
ಯದಾ ಗತಾ ಮಹಾಲಕ್ಷ್ಮೀಸ್ತದಾ ನಾರಾಯಣೋ ಹರಿಃ ॥39॥

ಅಷ್ಟಾವಿಂಶತಿ ಮೇ ಪ್ರಾಪ್ತೇ ದ್ವಾಪರಾಂತೇ ಕಲೌ ಯುಗೇ ।
ಯಸ್ಮಿನ್ದೇಶೇ ಯದಾ ಪ್ರೇಮಕಲಹೋಽಸ್ಯಾಃ ಪ್ರಶಾಮ್ಯತಿ ॥40।

ಕರ್ಮಣಾ ಯೇನ ಚ ಯಥಾ ತತ್ತಥಾ ಚ ಕರೋಮಿ ತತ್ ।
ಇತಿ ಸಂಕಲ್ಪ್ಯ ಗೋವಿಂದೋ ಲೀಲಾಮಾನುಷವಿಗ್ರಹಃ ॥41॥

ಯಜ್ಞವನ್ನು ಸಮರ್ಪಣ ಮಾಡಿದರು. (32–34)

ಈ ಘಟನೆಯ ಅನಂತರದಲ್ಲಿ ಜಗದಂತರ್ಯಾಮಿಯಾದ ಭಗವಂತನು ವೈಕುಂಠದಲ್ಲಿರುವ ತನ್ನ ಮಂದಿರದಲ್ಲಿ ಏಕಾಂತದಿಂದಿರುವಾಗ (35) ಲಕ್ಷ್ಮೀದೇವಿಯು 'ನನ್ನಿಂದ ಆಲಿಂಗಿಸಲು ಯೋಗ್ಯವಾದ ವಕ್ಷಃಸ್ಥಲದಲ್ಲಿ ನೀನು ಮನುಷ್ಯನಾದ ಭೃಗುಮುನಿಯ ಪಾದತಲದಿಂದ ತಾಡಿಸಿಗೋಳ್ಳಲ್ಪಟ್ಟಿರುವದರಿಂದ ನಾನು ನಿನ್ನೊಂದಿಗೆ ಇರೆನು. ಕರವೀರ ಪುರಕ್ಕೆ ಹೋಗುವೆನು' ಎಂಬುದಾಗಿ ನುಡಿದು ಲಕ್ಷ್ಮೀದೇವಿಯು ಪ್ರಣಯಕಲಹವನ್ನು ಮಾಡಿ, ವೈಕುಂಠವನ್ನು ಪರಿತ್ಯಜಿಸಿ, ಕರವೀರಪುರಕ್ಕೆ ಬಂದು ನೆಲೆಸಿದಳು. (36–38) ಅನಂತರದಲ್ಲಿ ಭಗವಂತನು ಲೌಕಿಕರಂತೆ ಲಕ್ಷ್ಮೀದೇವಿಯ ಪ್ರೇಮಕಲಹವು ಶಮನವಾಗುವ ರೀತಿಯನ್ನು ಅನುಸರಿಸಿ, 'ಯಾವ ಕಾರ್ಯವನ್ನು ಮಾಡಿದರೆ ಲಕ್ಷ್ಮೀದೇವಿಯ ಕೋಪವು ಶಮನವಾಗುವದೋ ಅಂತಹ ಕಾರ್ಯವನ್ನು ಮಾಡುವೆನು' ಎಂದು ನಿಶ್ಚಯಿಸಿ ಲಕ್ಷ್ಮೀಪತಿಯಾದ ನಾರಾಯಣನು ಆನಂದಕರವಾದ ವೈಕುಂಠ ವನ್ನು

ಮಾಯಾವೀ ಪರಮಾನಂದಂ ತ್ಯಕ್ತ್ವಾ ವೈಕುಂಠಮುತ್ತಮಮ್।
ಗಂಗಾಯಾಃ ದಕ್ಷಿಣೇ ದೇಶೇ ಯೋಜನಾನಾಂ ಶತತ್ರಯೇ ॥42॥

ಸುವರ್ಣಮುಖರೀ ನಾಮ[23] ನದೀನಾಂ ಪ್ರವರಾ ನದೀ ।
ಶುಕಸ್ಯ ವರದಾ[24] ಪುಣ್ಯಾ ಹ್ಯಗಸ್ತ್ಯಮುನಿಪೂಜಿತಾ ॥43॥

ತಸ್ಯಾ ಏವೋತ್ತರೇ ತೀರೇ ಕ್ರೋಶಾರ್ಧದ್ವಯಮಾತ್ರಕೇ ।
ಶ್ರೀವೇಂಕಟಗಿರಿರ್ನಾಮ ವರ್ತತೇ ಪುಣ್ಯಕಾನನಃ ॥44॥

ತ್ಯಾಗಮಾಡಿ ಭೂಮಿಗೆ ಬಂದು ಮನುಷ್ಯರಂತೆ ಕಾಣಿಸಿಕೊಂಡು, ವೇಂಕಟಗಿರಿಯನ್ನು ಕುರಿತು ಬಂದು ನೆಲಸಿದನು. (39–42)

### ವೇಂಕಟಗಿರಿವೈಭವ

ಗಂಗಾನದಿಯ ದಕ್ಷಿಣ ದಿಕ್ಕಿನಲ್ಲಿ ಮೂರು ನೂರು ಯೋಜನೆಗಳಷ್ಟು ದೂರದಲ್ಲಿ ಇರುವ ಮೇರುಪರ್ವತದ ಪುತ್ರನಾದ, ಸಮಸ್ತತೀರ್ಥಗಳಿಂದ ಪುಣ್ಯಕರವಾದ, ಅರಣ್ಯಗಳಿಂದ, ಸಮಸ್ತಧಾತುಗಳಿಂದ ಸಂಶೋಭಿತವಾದ, ಅಗಸ್ತ್ಯರಿಂದ ಸಂಪೂಜಿತವಾದ, ಶುಕಮುನಿಗಳಿಗೆ ಅಭೀಪ್ಸಿತ ಭಗವದ್ದರ್ಶನಾದಿಗಳಿಗೆ ಕಾರಣವಾದ, (43) ನದಿಗಳಲ್ಲಿ ಶ್ರೇಷ್ಠವಾದ ಸುವರ್ಣಮುಖೀ ನದಿಯ ಉತ್ತರದಿಕ್ಕಿನಲ್ಲಿ ಎರಡೂವರೆ ಕ್ರೋಶ ದೂರದಲ್ಲಿರುವ, ದಿವ್ಯವಾದ ಅರಣ್ಯಭಾಗದಿಂದ ಯುಕ್ತವಾದ ಪವಿತ್ರ ಪರ್ವತವೇ ವೇಂಕಟಗಿರಿಯು. ನಾರಾಯಣನ ವಾಸಸ್ಥಾನವಾದ

23. ದಕ್ಷಿಣ ದೇಶಕ್ಕೆ ಬಂದ ಅಗಸ್ತ್ಯರು ಪುಣ್ಯನದಿಯಿಂದ ವಿರಹಿತವಾದ ಪ್ರದೇಶವನ್ನು ನೋಡಿ, ಮುನಿಗಳ ಪ್ರಾರ್ಥನೆಯಂತೆ ಬ್ರಹ್ಮದೇವರನ್ನು ಆರಾಧಿಸಿ, ಭಗವಂತನ ಪಾದೋದ್ಭೂತಳಾದ ಮಂದಾಕಿನಿಯನ್ನೇ ನದಿಯನ್ನಾಗಿ ಪಡೆದರು. ಆ ನದಿಯು ಬಂಗಾರದಂತೆ ಎಲ್ಲರ ಅಭ್ಯುದಯ ಸಾಧನವಾದ್ದರಿಂದ ಮತ್ತು ತನ್ನ ಪ್ರಭಾವದಿಂದ ದಿಕ್ಕುಗಳನ್ನು ವ್ಯಾಪಿಸಿರುವದರಿಂದ ಅದಕ್ಕೆ ಸುವರ್ಣಮುಖರೀ ಎಂಬ ಹೆಸರುಂಟಾಯಿತು. 'ಸುವರ್ಣಮಿವ ಲೋಕಾನಾಂ ಭಾಗದೇಯಾದಿಯಂ ನದೀ । ನೀತಾ ಭುವಮಗಸ್ತ್ಯೇನ ಮುಖರೀಕೃತದಿಙ್ಮುಖಾ । ತಸ್ಮಾದ್ಯಾಸ್ಯತಿ ವಿಖ್ಯಾತಿಂ ಸರ್ವಲೋಕಾಭಿನಂದಿತಾ' (ಸ್ಕಾಂ.ಪು. 23.6,7) ಎಂಬುದಾಗಿ ವಾಯುದೇವರು ಈ ನದಿಗೆ ಸುವರ್ಣಮುಖರೀ ಎಂಬ ನಾಮಕರಣವನ್ನು ಮಾಡಿರುವರು.

24. ಶುಕಾಚಾರ್ಯರು ಭಗವದಾಪರೋಕ್ಷ್ಯವನ್ನು ಬಯಸಿ ಸುವರ್ಣಮುಖರಿಯಿಂದ ಜನಿಸಿದ ಪದ್ಮತೀರ್ಥದ ಬಳಿ ತಪಸ್ಸನ್ನು ಮಾಡಿ, ನಂತರ ಸುವರ್ಣಮುಖೀ ನದಿಯ ಮಧ್ಯದಲ್ಲಿಯ, ವಿಷ್ಣು ರುದ್ರಾದಿ ದೇವತೆಗಳಿಂದಧಿಷ್ಠಿತವಾಗಿ ಅಗಸ್ತ್ಯರ ತಪಸ್ಸಿನಿಂದ ಗಯಾಸನ್ನಿಧಾನವನ್ನು ಹೊಂದುವ, ಈ ಪ್ರದೇಶಕ್ಕೆ ಮಧ್ವಾಚಾರ್ಯರೆಂದು ಪ್ರಸಿದ್ಧ ಯತಿರೂಪಿಯಾದ ವಾಯುದೇವರು ಆಗಮಿಸಿ, ಅಲ್ಲಿಯ ಮಂದಿರದಲ್ಲಿ ಚಾತುರ್ಮಾಸ್ಯವನ್ನಾಚರಿಸಿ, ತತ್ತ್ವೋಪದೇಶವನ್ನು ಗೈಯುವರು. ಭಗವದ್ವಿಷಯಕವಾದ ತತ್ತ್ವಜಿಜ್ಞಾಸುಗಳಾದ

ಸುವರ್ಣಗಿರಿಪುತ್ರಸ್ತು ಸರ್ವತೀರ್ಥಸಮನ್ವಿತಃ[25] ।
ಸಾಕ್ಷಾಚ್ಛೇಷಾವತಾರೋಽಸೌ ಸರ್ವಧಾತುವಿರಾಜಿತಃ ॥45॥

ವೈಕುಂಠಸದೃಶೋ ದಿವ್ಯೋ ನಾರಾಯಣಸಮಾಶ್ರಯಃ ।
ಶೇಷಮಾರುತಸಂವಾದಾದಾಗತಃ ಪುಣ್ಯಕಾನನಃ ॥46।

ಶತಯೋಜನವಿಸ್ತೀರ್ಣಸ್ತ್ರಿಂಶದ್ಯೋಜನಮಾಯತಃ ।
ವದನಂ ವೇಂಕಟಗಿರಿರ್ನೃಸಿಂಹಾದ್ರಿಶ್ಚ ಮಧ್ಯಮಃ ॥47॥

ಶ್ರೀಶೈಲಃ ಪುಚ್ಛಭಾಗಸ್ತು ಸರ್ವಕ್ಷೇತ್ರಮಯೋ ಗಿರಿಃ ।
ಸರ್ವವೃಕ್ಷಸಮಾಕೀರ್ಣಃ ಸರ್ವಧಾತುವಿಭೂಷಿತಃ ॥48॥

ಕುಂದಮಂದಾರಪನಸಪ್ಲಕ್ಷೋದುಂಬುರಕಿಂಶುಕೈಃ ।

ವೇಂಕಟಗಿರಿಯು ವೈಕುಂಠಕ್ಕೆ ಸಮಾನವಾಗಿದೆ. ಲೋಕದೃಷ್ಟಿಯಿಂದ ಆದಿಶೇಷನಿಗೂ, ವಾಯುವಿಗೂ ಕಲಹವುಂಟಾದಾಗ ಶೇಷನು ನೂರುಯೋಜನ ಉದ್ದ ಹಾಗೂ ಮೂವತ್ತು ಯೋಜನ ಅಗಲವಾದ ಪರ್ವತರೂಪದಿಂದ ಅಲ್ಲಿ ಬಂದನು. ಶೇಷ-ಮಾರುತರ ಸಂವಾದದಂತೆ ಅಲ್ಲಿ ಅತ್ಯಂತ ಪುಣ್ಯಕರವಾದ ಅರಣ್ಯವಿರುವದು. (44–46) ವೇಂಕಟಗಿರಿಯು ಶೇಷದೇವನ ಹೆಡೆಯಾಗಿಯೂ, ಅಹೋಬಲವು ದೇಹದ ಮಧ್ಯಭಾಗವಾಗಿಯೂ, ಶ್ರೀಶೈಲಪರ್ವತವು ಪುಚ್ಛರೂಪದಲ್ಲಿಯೂ ಕಂಗೊಳಿಸಿದ, ಪರಮಪುಣ್ಯಕರವಾದ ಪವಿತ್ರಕ್ಷೇತ್ರಮಯವಾದ ಶೇಷಾಚಲವು ಸರ್ಪಾಕೃತಿಯಲ್ಲಿರುತ್ತದೆ. (47–48) ಕುಂದುರುಷ್ಕ, ಕೋಲುಮಲ್ಲಿಗೆ, ಹಾಲವಾಣ, ಹಲಸು,

---

ಶುಕಾಚಾರ್ಯರು ಪದ್ಮತೀರ್ಥದಿಂದಾಗಮಿಸಿ ಶಾಸ್ತ್ರಶ್ರವಣವನ್ನು ಮಾಡಿ ಧನ್ಯರಾಗಿರುವರಾದ್ದರಿಂದ ಎಂದು ನುಡಿದು ಜ್ಞಾನಪ್ರದತ್ವಾದಿ ವಿಶಿಷ್ಟ ಶಕ್ತಿಯುಳ್ಳದ್ದು ಸುವರ್ಣಮುಖರಿಯು ಎಂದು ತಿಳಿಸುವದಲ್ಲದೇ ಶುಕಾಚಾರ್ಯರಿಗೆ ಅಭೀಪ್ಸಿತವಾದ ತತ್ತ್ವಜ್ಞಾನವೂ ಸಹ ಮಧ್ವಾಚಾರ್ಯ ರಿಂದ ಈ ನದಿಯ ದಡದಲ್ಲಿಯೇ ಆಗಿರುವದು ಬ್ರಹ್ಮಪುರಾಣದಿಂದ ತಿಳಿಯುತ್ತದೆ. 'ತ್ವಂ ಚಾಪಿ ಗಚ್ಛ ಶೈಲೇಂದ್ರಂ ಪೂರ್ವಂ ಸ್ವರ್ಣಮುಖೀ ತಟೇ । ಯತ್ರ ಬ್ರಹ್ಮಶಿಲಾ ನಾಮ ಸರಿನ್ಮಧ್ಯೇ ಚ ವರ್ತತೇ ॥ ಅಗಸ್ತ್ಯತಪಸಾ ಪಶ್ಚಾತ್ ಗಯಾಸಾನ್ನಿಧ್ಯಮತ್ರ ವೈ । ಯತಿರೂಪೋ ಮಾತರಿಶ್ವಾ ಹ್ಯಷ್ಟಾವಿಂಶತಿಮೇ ಕಲೌ ॥ ಯಜತ್ರಾಯಂ ವದಂತ್ಯದ್ಧಾ ಮಧ್ವನಾಮ್ನಾ ಪರಂ ವಿಭುಮ್ । ತತ್ಸ್ಥಾಪಿತಾಲಯೇ ಪುಣ್ಯೇ ಚಾತುರ್ಮಾಸ್ಯಂ ಕರಿಷ್ಯತಿ ॥ ಶುಕಃ ಶ್ರೋಷ್ಯತಿ ತಚ್ಛಾಸ್ತ್ರಂ...... ' (ಬ್ರಹ್ಮ.3.15-20)

25. ಷಟ್ ಷಷ್ಟಿಕೋಟಿತೀರ್ಥಾನಿ ಪುಣ್ಯಾನ್ಯತ್ರ ನಗೋತ್ತಮೇ । ಅಷ್ಟೋತ್ತರ ಸಹಸ್ರಾಣಿ ತೇಷು ಮುಖ್ಯಾನಿ ಸುವ್ರತ' ಎಂಬ ಪ್ರಮಾಣಾನುಸಾರವಾಗಿ ಇಲ್ಲಿ ಬ್ರಹ್ಮಾಂಡದಲ್ಲಿರುವ ಎಲ್ಲ ಅರವತ್ತಾರು ಕೋಟಿ ತೀರ್ಥಗಳೂ ಸಹ ವಾಸವಾಗಿರುವವು.

ಪಿಚುಮಂದ್ಯೈಃ ಪಾರಿಜಾತ್ಯೈಃ ತಿಂತ್ರಿಣೀಜಂಬುಮಂಡಲ್ಯೈಃ ॥49॥

ಧವಲ್ಯೈಶ್ಚಂದನ್ಯೈಶ್ಚೂತ್ಯೈಃ ಕೃಷ್ಣಾಗರುಭಿರಾಶ್ರಿತ್ಯೈಃ ।
ತಾಲಹಿಂತಾಲಪುನ್ನಾಗೈಃ ದೇವದಾರುಭಿರಾಶ್ರಿತಃ ॥50॥

ಹಂಸಕಾರಂಡವಾಕೀರ್ಣೋ ಬಕಕೋಕಶುಕೈರ್ವೃತಃ ।
ಕಪೋತೈಃ ಕ್ಷೀರಹಂಸೈಶ್ಚ ಮೃಗಷಂಡವಿಭೂಷಿತಃ ॥51॥

ಸಿಂಹಶಾರ್ದೂಲಶರಭಕ್ರೋಡಮಾತಂಗವಾನರೈಃ ।
ಜಂಬುಕೈಶ್ಚೈವ ಭಲ್ಲೂಕೈಃ ಕಸ್ತೂರೀಚಮರೀಮೃಗೈಃ ॥52॥

ತುರುಗೈಶ್ಚ ಗವಾಂ ಷಂಡೈಃ ಮಹರ್ಷಿಗಣಸೇವಿತಃ ।
ಮಲ್ಲಿಕಾಮಾಲತೀಜಾತೀನಂದ್ಯಾವರ್ತ್ಯೈರ್ವಿರಾಜಿತಃ ॥53॥

ಚಂಪಕಾಶೋಕಪುನ್ನಾಗಕೇತಕ್ಯೈಃ ಸ್ವರ್ಣಕೇತಕ್ಯೈಃ ।
ಏವಂ ಮನೋಹರಃ ಶ್ರೀಮಾನ್ ಪರ್ವತಃ ಪುಣ್ಯಕಾನನಃ ॥54॥

ತರವೋ ದೈವತಗಣಾಃ[26] ಮೃಗಾಶ್ಚ ಮುನಿಪುಂಗವಾಃ ।
ಪಿತರಃ ಪಕ್ಷಿಣಸ್ಸರ್ವೇ ಪಾಷಾಣಾ ಯಕ್ಷಕಿನ್ನರಾಃ ॥55॥

ಅಶ್ವತ್ಥ, ಪ್ಲಕ್ಷ, ಅತ್ತಿ, ಮುತ್ತಗ (ಪಲಾಶ) ಬೇವು, ಪಾರಿಜಾತ, ಹುಣಸೆ, ನೇರಳೆ, (49) ಮಾವು, ಶ್ರೀಚಂದನ, ತಮಾಲ, ಅಗರು, ತಾಲ, ತೆಂಗು, ಖರ್ಜೂರ, ಸೋರೆ ಮೊದಲಾದ ಸಮಸ್ತವೃಕ್ಷಗಳೂ, (50) ಹಂಸ, ಕಲಹಂಸ (ಕದಂಬಪಕ್ಷಿ), ನೀರುಕೋಳಿ, ಕೋಗಿಲೆ, ಗಿಳಿ, ಪಾರಿವಾಳ, ಕ್ಷೀರಹಂಸ, ಮೊದಲಾದ ಪಕ್ಷಿಗಳಿಗೂ ಈ ಪರ್ವತವು ಆಶ್ರಯವಾಗಿರುವದು. (51) ಸಿಂಹ, ಶಾರ್ದೂಲ, ಶಲಭ, ಆನೆ, ವರಾಹ, ವಾನರ, ಕರಡಿ, ಕೋತಿ, ಕಸ್ತೂರೀಮೃಗ, ಚಮರೀಮೃಗ, ಕುದುರೆ, ಆಕಳುಗಳ ಸಮೂಹಗಳು– ಇವೇ ಮೊದಲಾದ ವನ್ಯಮೃಗಗಳು, ಮಹರ್ಷಿಗಣಗಳು ಇವುಗಳಿಂದ ಈ ಪರ್ವತವು ಭೂಷಿತವಾಗಿರುವದು. ಮಲ್ಲಿಗೆ, ಇರುವಂತಿಗೆ, ಜಾಜಿ, ಸಂಪಿಗೆ, ನಾಗಸಂಪಿಗೆ, ಕೇದಿಗೆ, ಸುವರ್ಣಕೇದಿಗೆ, ಇವೇ ಮುಂತಾದ ಸುಗಂಧವನ್ನು ಸೂಸುವ ಹೂವಿನ ಗಿಡ–ಬಳ್ಳಿಗಳು. ಇವುಗಳಿಂದ ಕೂಡಿಕೊಂಡು ಅತಿಮನೋಹರವಾಗಿದೆ. (54) ಈ ಪುಣ್ಯಪರ್ವತದಲ್ಲಿಯ ಮರಗಳು ಸಾಕ್ಷತ್‌ದೇವತೆಗಳ ಪ್ರತಿಮಾಸ್ಥಾನೀಯವಾಗಿರುವವು. ಮೃಗಗಳು ಮುನಿಶ್ರೇಷ್ಠರು. ಪಕ್ಷಿಗಳು ಪಿತೃದೇವತೆಗಳು. ಬಂಡೆಕಲ್ಲುಗಳು ಯಕ್ಷರು. ಕಿನ್ನರರು ಆಗಿರುವದರಿಂದ ದೇವಗುಹ್ಯವಾದ ಈ ಪರ್ವತದ ಹಾಗೂ ಪರ್ವತಾಧಿಪತಿಯಾದ ವೇಂಕಟೇಶ್ವರನ ಮಹಿಮೆಯನ್ನು

26. ದೈವತಗಣಾಃ = ದೇವಾನಾಂ ಪ್ರತಿಮಾಸ್ಥಾನೀಯಾಸ್ತರವ ಇತ್ಯಾದಿ ಯೋಜ್ಯಮ್ । - ವ್ಯಾ

ಏವಂ ಪ್ರಭಾವೋऽಸ್ಯ ಗಿರೀಂದ್ರಜನ್ಮನಃ
ಶ್ರೀವೇಂಕಟಾದ್ರೇಸ್ತು ಹರೇಸ್ತಥೈವ ।
ಜಾನಂತಿ ತೇ ಬ್ರಹ್ಮಶಿವೇಂದ್ರಪೂರ್ವಕಾ
ಅತ್ಯಲ್ಪವೀರ್ಯಾ ಮನುಜಾಸ್ತು ಕಿಂ ಪುನಃ ॥56॥

ಇತಿ ಶ್ರೀಭವಿಷ್ಯೋತ್ತರಪುರಾಣೇ ವೇಂಕಟಗಿರಿಮಾಹಾತ್ಮ್ಯೇ ಭಗವತಃವೈಕುಂಠಾತ್ ವೇಂಕಟಾಚಲಾಗಮನವರ್ಣನಂ ನಾಮ ದ್ವಿತೀಯೋऽಧ್ಯಾಯಃ ॥

* * *

ದೇವಾಧಿದೇವತೆಗಳೇ ತಿಳಿಯಬಲ್ಲರು. ಅಲ್ಪಶಕ್ತಿಮಂತರಾದ ಮನುಷ್ಯರು ಈ ಪರ್ವತದ ಮಹಿಮೆಯನ್ನು ಹೇಗೆ ತಾನೆ ತಿಳಿದಾರು?

ಇಲ್ಲಿಗೆ ಶ್ರೀಭವಿಷ್ಯೋತ್ತರಪುರಾಣದಲ್ಲಿಯ ವೇಂಕಟಗಿರಿಮಾಹಾತ್ಮ್ಯದಲ್ಲಿ ಭಗವಂತನ ವೈಕುಂಠದಿಂದ ವೇಂಕಟಾಚಲಾಗಮನವರ್ಣನ ವೆಂಬ ಎರಡನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

ಅಥ ಶ್ರೀಭವಿಷ್ಯೋತ್ತರಪುರಾಣೇ ವೇಂಕಟೇಶಮಾಹಾತ್ಮ್ಯೇ

## ತೃತೀಯೋಽಧ್ಯಾಯಃ

ಶತಾನಂದ ಉವಾಚ–

ತಸ್ಯೋಪರಿ ವರಾ ದಿವ್ಯಾ ಸ್ವಾಮಿಪುಷ್ಕರಿಣೀ ಶುಭಾ ।
ಮತ್ಸ್ಯಕಚ್ಛಪಸಂಬಾಧಾ ಜಲಕುಕ್ಕುಟಭೂಷಿತಾ ॥1॥

ಶಿಂಶುಮಾರಗಣಾಕೀರ್ಣಾ ಮಂಡೂಕಸ್ವರಹುಂಕೃತಾ ।
ತೀರಜೈರ್ವೃಕ್ಷಸಂಘೈಶ್ಚ ತುಂಗೈರಾಚುಂಬಿತಾಂಬರಾ ॥2॥

ಗಂಗಾದಿಸರ್ವತೀರ್ಥಾನಾಂ ಜನ್ಮಭೂಮಿರ್ವಿರಾಜತೇ ।
ತಸ್ಯಾಂ ಯೇ ಸ್ನಾಂತಿ ಮನುಜಾಸ್ತೇ ಧನ್ಯಾಃ ಪುಣ್ಯವರ್ಧನಾಃ ॥3॥

ಧನುರ್ಮಾಸೇ ಸಿತೇ ಪಕ್ಷೇ ದ್ವಾದಶ್ಯಾಮರುಣೋದಯೇ ।
ಕಾಂಕ್ಷಂತಿ ದೇವತಾಸ್ಸರ್ವಾಃ ಮಜ್ಜನಂ ತಜ್ಜಲೇ ಶುಭೇ ॥4॥

ಕಾಂಕ್ಷಂತಿ ಮನುಜಾಃ ಸ್ನಾನಮಿತಿ ಭೋಃ ಕಿಂ ವದಾಮಿ ತೇ ।
ಯೇಽತ್ರ ಶ್ರಾದ್ಧಾದಿಕರ್ಮಾಣಿ ಪಿತೄಣಾಂ ಕುರ್ವತೇ ದ್ವಿಜಾಃ ॥5॥

## ಮೂರನೆಯ ಅಧ್ಯಾಯ

ಸ್ವಾಮಿಪುಷ್ಕರಿಣೀ

ವೇಂಕಟಾಚಲದ ಮೇಲ್ಭಾಗದಲ್ಲಿ ಮೀನು, ಆಮೆ, ನೀರುಕೋಳಿ, ಮೊದಲಾದ ಜಲಚರಗಳಿಂದ ಕೂಡಿದ, ಜಲವೃಶ್ಚಿಕ, ಕಪ್ಪೆ ಮೊದಲಾದವುಗಳಿಂದ ಕೂಡಿದ. ಆಕಾಶಚುಂಬಿಗಳಾದ ವೃಕ್ಷಗಳಿಂದ ಸುತ್ತುವರೆಯಲ್ಪಟ್ಟ, ಗಂಗಾದಿ ಸಮಸ್ತತೀರ್ಥಗಳಿಗೆ ಉತ್ಪತ್ತಿಸ್ಥಾನವಾದ, ಮಂಗಲಕರವಾದ ಸರ್ವತೀರ್ಥಗಳಿಗಿಂತಲೂ ಶ್ರೇಷ್ಠವಾದ ಸ್ವಾಮಿಪುಷ್ಕರಿಣೀ ತೀರ್ಥರಾಜವು ವಿರಾಜಮಾನವಾಗಿದೆ. ಆ ಸರೋವರದಲ್ಲಿ ಸ್ನಾನಮಾಡುವ ಮನುಜರೇ ಪುಣ್ಯವಂತರು. ಅವರೇ ಧನ್ಯರು. (1–3) ಭಾನುವು ಧನುರಾಶಿಯಲ್ಲಿರುವಾಗ – ಧನುರ್ಮಾಸ ಶುಕ್ಲಪಕ್ಷದ್ವಾದಶಿಯ ಅರುಣೋದಯ ಸಮಯದಲ್ಲಿ ಸಮಸ್ತದೇವತೆಗಳೂ ಸಹ ಶುಭಕರವಾಧ ಈ ಪುಷ್ಕರಣಿಯ ಜಲದಲ್ಲಿ ಮಜ್ಜನವನ್ನು ಅಪೇಕ್ಷಿಸುತ್ತಾರೆ. (4) ಮನುಜರು ಇಲ್ಲಿ ಸ್ನಾನಮಾಡುವದನ್ನು ಬಯಸುವರೆಂದು ಪ್ರತ್ಯೇಕವಾಗಿ

ತೇಷಾಂ ಪಿತೃಗಣಾಸ್ತುಷ್ಟಾ ನೃತ್ಯಂತಿ ಹರಿಮಂದಿರೇ ।
ಜನ್ಮನಾ ಕಿಮನೇನೇಹ ವ್ಯರ್ಥೇನ ಭವತಾಮಹೋ ॥6॥

ಸ್ನಾನದಾನೇನ ತತ್ತೀರ್ಥೇ ಮನುಜಾ ಭಾಗ್ಯಶಾಲಿನಃ ।
ಶಂಖೋ ನಾಮ ನೃಪಃ ಕಶ್ಚಿತ್ ಸ್ನಾನಮಾತ್ರೇಣ ರಾಜ್ಯಗಃ[27] ॥7॥

ಪುರಾ ನಾರಾಯಣೋ ನಾಮ ಬ್ರಾಹ್ಮಣೋಽಂಗಿರಸಸ್ಸುತಃ[28] ।
ಸ್ವಾಮಿಪುಷ್ಕರಿಣೀತೀರ್ಥೇ ಮಹಿಮ್ನಾ ಸ್ನಾನಜೇನ ಹಿ ॥8॥

ಹೇಳುವದೇನು? ಜ್ಞಾನಪೂರಿತವಾದ ಸ್ನಾನಮಾತ್ರದಿಂದ ಸಕಲಾಭೀಷ್ಟಪ್ರದವಾದ, ಈ ಪುಷ್ಕರಣಿಯಲ್ಲಿ ಪಿತೃಪ್ರೀತಿಗಾಗಿ ಶ್ರಾದ್ಧಾದಿ ಕರ್ಮಗಳನ್ನು ಮಾಡಿದರೆ ಅವನ ಪಿತೃಗಳು ಪ್ರೀತರಾಗಿ, ಹೃಷ್ಟರಾಗಿ, ಹರಿಮಂದಿರದಲ್ಲಿ ನರ್ತನವನ್ನು ಗೈಯುವರು. (5–6) ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನಮಾಡದ ವ್ಯಕ್ತಿಯ ಜನ್ಮದಿಂದ ಏನು ಪ್ರಯೋಜನ? ಅದು ವ್ಯರ್ಥವೆನಿಸುವದು. ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ದಾನಾದಿಗಳಿಂದ ಭಗವಂತನನ್ನು ಸಂತೋಷ ಗೊಳಿಸುವ ಮನುಷ್ಯರೇ ಭಾಗ್ಯವಂತರೆನಿಸಿರುವರು. ಪೂರ್ವದಲ್ಲಿ ಶಂಖನೆಂಬ ರಾಜನು ಸ್ವಾಮಿಪುಷ್ಕರಿಣೀ ಸ್ನಾನಮಾತ್ರದಿಂದ ತಾನು ಕಳೆದುಕೊಂಡಿದ್ದ ರಾಜ್ಯವನ್ನು ಮರಳಿ ಪಡೆದನು. (7) ಆಂಗಿರಸನ ಪುತ್ರನಾದ ನಾರಾಯಣನೆಂಬ ಬ್ರಾಹ್ಮಣನು ಇಲ್ಲಿಯ ಸ್ನಾನಮಹಿಮೆಯಿಂದ ಭಗವದ್ವಿಷಯಕವಾದ ಜ್ಞಾನವನ್ನು ಪಡೆದು, ಪರಮಾತ್ಮನನ್ನು ನೋಡಿ, ವರವನ್ನು ಪಡೆದು, ವೈಕುಂಠವನ್ನು ಹೊಂದಿದನು. ರಾಮಚಂದ್ರನೂ ಸಹ ಇಲ್ಲಿ ಸ್ನಾನಮಾಡುವದರಿಂದ ರಾವಣನಿಂದ ಹರಣಮಾಡಲ್ಪಟ್ಟ ಸೀತಾಕೃತಿಯನ್ನು ಮರಳಿ ಪಡೆದು, ಪುಷ್ಕರಣಿಯ ಮಾಹಾತ್ಮ್ಯೆಯನ್ನು ಹೆಚ್ಚಿಸಿದನು. (7–9)

---

27. ಶಂಖನೆಂಬ ಹೈಹಯ ಕುಲೋದ್ಭೂತನಾದ ರಾಜನು ಶತ್ರುರಾಜರಿಂದ ಆಕ್ರಮಿತನಾಗಿ, ರಾಜ್ಯವನ್ನು ಕಳೆದುಕೊಂಡು, ಯಾದೃಚ್ಛಿಕವಾಗಿ ಗೋದಾನದಿಯನ್ನು ದಾಟಿ ವೃಷಭಾಚಲದ ಬಳಿ ಬಂದು, ದೈವಪ್ರೇರಣೆಯಂತೆ ಪರ್ವತವನ್ನೇರಿ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡಿ ವರಾಹವದನನಾದ ಹರಿಯನ್ನು ನಮಿಸಿದ ಮಾತ್ರದಿಂದಲೇ ಅವನು ತನ್ನ ರಾಜ್ಯವನ್ನು ಮರಳಿ ಪಡೆದನು. ಅವನ ಶತ್ರುಗಳು ಅಂತಃಕಲಹದಿಂದ ನಾಶವನ್ನು ಹೊಂದಿ ರಾಜ್ಯವು ಅರಾಜಕವಾದಾಗ ಮಂತ್ರಿಗಳು ಇವನನ್ನು ಹುಡುಕಿಕೊಂಡು ಬಂದು ರಾಜ್ಯಕ್ಕೆ ಕರೆದುಕೊಂಡು ಹೋದ ವೃತ್ತಾಂತವು ವರಾಹಪುರಾಣದ ಆರನೆಯ ಅಧ್ಯಾಯದಲ್ಲಿ ವಿಸ್ತೃತವಾಗಿ ವರ್ಣಿತವಾಗಿದೆ. ಶಂಖರಾಜನಿಗೆ ಸ್ವಾಮಿತ್ವಪ್ರದಾಯಕವಾದ್ದರಿಂದಲೇ ಇದಕ್ಕೆ ಸ್ವಾಮಿಪುಷ್ಕರಿಣಿಯೆಂಬ ಅನ್ವರ್ಥಕ ನಾಮವುಂಟಾಯಿತು. ಸ್ವಾಮಿತ್ವಸ್ಯ ಪ್ರದಾನಾಚ್ಚ ಸ್ವಾಮಿಪುಷ್ಕರಿಣೀ ಯತಃ ॥ ... ತೀರ್ಥಾನಾಂ ಸ್ವಾಮಿನೀ ಯತ....

28. ಈ ನಾರಾಯಣನೆಂಬ ಬ್ರಾಹ್ಮಣನು ಇತರಾಸಾಧ್ಯತಪಸ್ಸಿನಿಂದ ಭಗವಂತನನ್ನಾರಾಧಿಸಿ ಸರ್ವದೃಗ್ಗೋಚರತ್ವವನ್ನು ಹೊಂದಿದ ವೃತ್ತಾಂತವು ಬ್ರಹ್ಮಾಂಡ ಪುರಾಣದಲ್ಲಿ ವರ್ಣಿತವಾಗಿರುವದು. (ಬ್ರಹ್ಮಾಂಡ. 3.6-58)

ವರಂ ಲಬ್ಧ್ವಾ ಹರಿಂ ದೃಷ್ಟ್ವಾ ಜಗಾಮ ಹರಿಮಂದಿರಮ್ ।
ರಾಮೋಽಪಿ ತತ್ರ ಸ್ನಾನೇನ ಹೃತಾಂ ಸೀತಾಮವಾಪ ಸಃ[29] ॥9॥

ಏವಂ ತೀರ್ಥವರಂ ತತ್ರ ಸ್ವಾಮಿಪುಷ್ಕರಿಣೀ ಶುಭಾ ।
ತಸ್ಯಾಃ ಪಶ್ಚಿಮದಿಗ್ಭಾಗೇ ವರಾಹವದನೋ ಹರಿಃ ॥10॥

ಧರಾಮಾಲಿಂಗ್ಯ ವಲ್ಮೀಕ ಅಸ್ತೇ ಪಿಪ್ಪಲರಾಜಿತೇ ।
ತ್ರಿಕೋಟಿತೀರ್ಥಜಾತಾನಾಂ ಜನ್ಮಸ್ಥಾನಂ ಸ ಭೂಧರಃ ॥11॥

ಏವಂ ಗಿರಿವರಂ ಪ್ರಾಪ್ಯ ಭಗವಾನ್ವೇಂಕಟಾಚಲಮ್ ।
ವೈಕುಂಠಾದಧಿಕಂ ಮತ್ವಾ ವಿಚಚಾರ ಇತಸ್ತತಃ ॥12॥

ನ ಪ್ರಾಪ ಕಿಂಚಿದಾಸ್ಥಾನಂ ಗೂಹನಾರ್ಥಂ ರಮಾಪತಿಃ ।
ಇತ್ಥಂ ವಿಚಾರ್ಯಮಾಣೇ ತು ಸ್ವಾಮಿಪುಷ್ಕರಿಣೀತಟೇ ॥13॥

ದಕ್ಷಿಣೇ ವಿಮಲಂ ದಿವ್ಯಂ ವಲ್ಮೀಕಂ ದೃಷ್ಟವಾನ್ಮುದಾ ।
ತಿಂತ್ರಿಣೀವೃಕ್ಷಮೂಲಸ್ಥಂ ಭಗವಾನ್ ಜಗದೀಶ್ವರಃ ॥14॥

ಮತ್ವೇದಂ ಪರಮಂ ಸ್ಥಾನಂ ತತ್ರ ಲೀನೋಽಭವದ್ಧರಿಃ ।
ಏವಂ ದೇವೇ ಸ್ಥಿತೇ ತತ್ರ ವತ್ಸರಾಯುತಮಾಗತಂ ॥15॥

### ವೇಂಕಟಾಚಲಕ್ಕೆ ವೈಕುಂಠಾಧಿಪತಿ

ಇಂತಹ ತೀರ್ಥಶ್ರೇಷ್ಠವಾದ ಸ್ವಾಮಿಪುಷ್ಕರಣಿಯ ಪಶ್ಚಿಮ ದಿಗ್ಭಾಗದಲ್ಲಿ ವರಾಹವದನನಾದ ಪರಮಾತ್ಮನು ಧರಾದೇವಿಯಿಂದ ಆಲಿಂಗಿತನಾಗಿ ಅಶ್ವತ್ಥವೃಕ್ಷದ ಬುಡದಲ್ಲಿರುವ ವಲ್ಮೀಕದಲ್ಲಿ ವಾಸವಾಗಿರುವನು. ಮೂರುಕೋಟಿ ತೀರ್ಥಗಳಿಗೆ ಈ ಪರ್ವತವು ಜನ್ಮಸ್ಥಾನವಾಗಿರುವದು. (11) ಇಂತಹ ಪವಿತ್ರವಾದ ಪರ್ವತ ಶ್ರೇಷ್ಠವನ್ನು ಭಗವಂತನು ಹೊಂದಿ, ವೈಕುಂಠಕ್ಕಿಂತಲೂ ಅಧಿಕವೆಂದು ತಿಳಿದು, ಇತಸ್ತತಃ ಸಂಚಾರಮಾಡುತ್ತಾ, ಗೂಹನಾರ್ಥವಾಗಿ ಸ್ಥಾನವೊಂದನ್ನು ಹುಡುಕುತ್ತಿರಲು ಯೋಗ್ಯಸ್ಥಲವು ಅವನಿಗೆ ದೊರೆಯಲಿಲ್ಲ. ಆದರೂ ಮತ್ತೆ ಮತ್ತೆ ವಿಚಾರಿಸುತ್ತಿರುವಾಗ ಸ್ವಾಮಿಪುಷ್ಕರಣೀ ತಟದ ದಕ್ಷಿಣದಲ್ಲಿ ತಿಂತ್ರಿಣೀವೃಕ್ಷದ ಬುಡದಲ್ಲಿರುವ ವಿಮಲವಾದ, ದೇವಸೇವ್ಯವಾದ ವಲ್ಮೀಕ(ಹುತ್ತ) ವೊಂದನ್ನು ಕಂಡನು. (12–14) ತನ್ನ ವಾಸಕ್ಕೆ ಇದೇ ಯೋಗ್ಯವಾದ ಸ್ಥಾನವೆಂದು

29. `ಸ್ವಾಮಿಪುಷ್ಕರಿಣೀ ತೀರ್ಥೇ ಸ್ನಾತ್ವಾ ಪಶ್ಚಾದ್ರಣೇ ರಿಪುಮ್ । ರಾಮೋಽಥ ರಾವಣಂ ಹತ್ವಾ ಸೀತಾಮಾಪ್ತ ಇತಿ ಶ್ರುತಮ್' (ವ.ಪು.)

ಅತೀತೇ ದ್ವಾಪರೇ ಚೈವ ತ್ವಷ್ಟಾವಿಂಶತಿಮೇ ಕಲೌ[30] ।
ಅತೀತೇ ವತ್ಸರೇ ಕಶ್ಚಿತ್ ಚೋಳರಾಜೋ ನೃಪೋತ್ತಮಃ[31] ॥16॥

ಅವತಾರಂ ಸಮಾಪನ್ನೋ ನಾಗಕನ್ಯೋದರೇ ತಥಾ ।
ತಸ್ಮಿನ್ ಶಾಸತಿ ಭೂಖಂಡಂ ಬಹುಪುಣ್ಯಫಲಪ್ರದಮ್ ॥17॥

ಬಹುಕ್ಷೀರಪ್ರದಾ ಗಾವಃ ಪುತ್ರಾ ವೈ ಪಿತೃವತ್ಸಲಾಃ ।
ಕಾಲೇ ವರ್ಷತಿ ಪರ್ಜನ್ಯಃ ಸಸ್ಯಾ ವೈ ಬಹುಧಾನ್ಯದಾಃ ॥18॥

ನಾರ್ಯಃ ಪತಿವ್ರತಾಸ್ಸರ್ವಾಃ ಪುರುಷಾಶ್ಚ ಸತೀವೃತಾಃ ।
ಇತ್ಥಂ ಶಾಸತಿ ರಾಜ್ಞ್ಯಸ್ಮಿನ್ ಜನಾ ಆನಂದತತ್ಪರಾಃ ॥19॥

ತಸ್ಮಿನ್ ಕಾಲೇ ವಿಧಿಸ್ಸಾಕ್ಷಾದ್ಧೇನುರೂಪೀ ಸಮಾಗತಃ ।
ಬ್ರಹ್ಮಧೇನೋಃ ಪಾಲಿಕಾಽಭೂದ್ಗೋಪಾಲೀ ಕಮಲಾಲಯಾ ॥20॥

ಭಾವಿಸಿ ಭಗವಂತನು ಹತ್ತುಸಾವಿರ ವರ್ಷಗಳ ಪರ್ಯಂತವಾಗಿ ಅಡಗಿಕೊಂಡು ಅಲ್ಲಿಯೇ ವಾಸವಾಗಿದ್ದನು. (15)

### ಚೋಲರಾಜನ ರಾಜ್ಯಭಾರ

ದ್ವಾಪರಯುಗದ ಅವಸಾನವಾಗಿ 28ನೇ ಕಲಿಯುಗದ ಸಂಧಿಕಾಲದಲ್ಲಿಯ ಕೆಲವು ವತ್ಸರಗಳು ಕಳೆಯುತ್ತಿರಲು ನೃಪೋತ್ತಮನಾದ ಚೋಳರಾಜನು ನಾಗಕನ್ನಿಕೆಯ ಗರ್ಭದಲ್ಲಿ ಜನಿಸಿ, ಪುಣ್ಯತಮವಾದ ಈ ಭೂಮಂಡಲವನ್ನು ಪರಿಪಾಲಿಸುತ್ತಿದ್ದನು. ಅವನ ರಾಜ್ಯಭಾರಸಮಯದಲ್ಲಿ ಭೂಮಿಯು ಬಹುಪುಣ್ಯಫಲಪ್ರದವಾಗಿದ್ದಿತು. (16-17) ಆಕಳುಗಳು ಹೆಚ್ಚಿನ ಪ್ರಮಾಣದಲ್ಲಿ ಹಾಲನ್ನು ಹಿಂಡುತ್ತಿದ್ದವು. ಎಲ್ಲ ಮಕ್ಕಳುಗಳು ಪಿತೃವತ್ಸಲರಾಗಿದ್ದರು. ಕಾಲ ಕಾಲಕ್ಕೆ ಮಳೆ-ಬೆಳೆಗಳು ಯಥೇಚ್ಛವಾಗಿ ಬರುತ್ತಿದ್ದವು. (18) ಸ್ತ್ರೀಯರು ಪತಿವ್ರತೆಯರಾಗಿದ್ದರು. ಪುರುಷರೂ ಸಹ ತಮ್ಮ ತಮ್ಮ ಸತಿಯರಲ್ಲಿ ಆಸಕ್ತರಾಗಿರುತ್ತಿದ್ದರು. ಈ ಚೋಳರಾಜನ ರಾಜ್ಯದಲ್ಲಿ ಸಮಸ್ತಜನಪದರೂ ಆನಂದವನ್ನನುಭವಿಸುತ್ತಿದ್ದರು. (19)

**30.** ಭಗವಂತನು ಕಲಿಯುಗದಲ್ಲಿ ಅವತರಿಸುವದಿಲ್ಲ; ಇಲ್ಲಿಯೂ ಈಗಲೂ ಸಹ ಕಲಿಯುಗದಲ್ಲಿ ಅವತರಿಸಿಲ್ಲ. 'ಸಂಧಾವಪಿ ಕಲೇಶ್ಚೈವ ವೇಂಕಟೇಶಸ್ಯ ವರ್ತನಮ್' ಎಂಬ ವರಾಹ ಪುರಾಣಾನುಸಾರವಾಗಿ ದ್ವಾಪರ-ಕಲಿಯುಗಗಳ ಸಂಧಿಕಾಲದಲ್ಲಿ ಶ್ರೀನಿವಾಸನು ಭೂಮಿಯಲ್ಲಿ ಕಾಣಿಸಿಕೊಂಡನೆಂದು ತಿಳಿಯಬೇಕು.

**31.** ಈ ಚೋಲರಾಜನ ಸಮಗ್ರವೃತ್ತಾಂತವು ಬ್ರಹ್ಮಾಂಡ ಪುರಾಣದಲ್ಲಿ ವಿಸ್ತಾರವಾಗಿ ನಿರೂಪಿತವಾಗಿರುವದು.

ಸಾಕ್ಷಾದ್ರುದ್ರೋ ವತ್ಸರೂಪೀ ತಾಭ್ಯಾಂ ಚೇಯಂ ಸಮಾಗತಾ ।
ಪಶ್ಯಂತೀ ಪತಿಮಾರ್ಗಂ ತು ಚೋಳರಾಜಂ ಸಮಭ್ಯಗಾತ್ ॥21॥

ಚೋಳರಾಜಗೃಹಂ ಪ್ರಾಪ್ಯ ಸಾ ಮೌಲ್ಯೇನ ಸವತ್ಸಕಾಮ್ ।
ವಿಕ್ರೀಯ ಗಾಂ ಮಹಾಲಕ್ಷ್ಮೀರ್ಜಗಾಮ ನಿಜಧಾಮ ಚ ॥22॥

ಗೃಹೀತ್ವಾ ತಾಂ ಮಹೀಪಾಲೋ ಮುದಮಾಪ ಪ್ರಿಯಾನ್ವಿತಃ ।
ಬಹುಕ್ಷೀರಪ್ರದಾಂ ಸಾಧ್ವೀಂ ಪುತ್ರಾರ್ಥಮಕರೋತ್ತದಾ ॥23॥

ಧೇನುದ್ವಯಸಹಸ್ರೇಣ ಸಾಕಂ ಶ್ರೀವೇಂಕಟಾಚಲಮ್ ।
ಸಾ ಗೌರ್ಗಚ್ಛತಿ ನಿತ್ಯಂ ವೈ ರಮಾನಾಥಂ ವಿಚಿನ್ವತೀ ॥24॥

ತತ್ರ ತತ್ರ ಸಮಾಜಿಘ್ರನ್ ಭೂಧರೇಂದ್ರೇ ವೃಷಾಕಪಿಮ್ ।
ವಿಚಿನೋತಿ ಸ್ಮ ಸರ್ವತ್ರ ಧೇನುರೂಪೀ ವಿಧಿಸ್ತದಾ ॥25॥

ತತಃ ಕಾಲೇನ ಮಹತಾ ಸ್ವಾಮಿಪುಷ್ಕರಿಣೀತಟೇ ।
ವಲ್ಮೀಕಸ್ಥಂ ಹರಿಂ ಜ್ಞಾತ್ವಾ ತುತೋಷ ಮನಸಾ ವಿಧಿಃ ॥26॥

ಸಮಸಿಂಚಚ್ಚ ವಲ್ಮೀಕಂ ಸಮಂತಾತ್ ಕ್ಷೀರಧಾರಯಾ ।

### ಗೋರೂಪನಾದ ಬ್ರಹ್ಮನಿಂದ ಭಗವಂತನ ಸೇವೆ

ಸರ್ವಸಂಪದ್ಭರಿತವಾದ ಆ ರಾಜ್ಯದಲ್ಲಿ ಭಗವಂತನ ಸೇವಾರ್ಥವಾಗಿ ಸಾಕ್ಷಾತ್ ಚತುರ್ಮುಖಬ್ರಹ್ಮದೇವರು ಗೋರೂಪವನ್ನು ಧರಿಸಿದನು. ಗೋರೂಪನಾದ ಬ್ರಹ್ಮನಿಗೆ ಲಕ್ಷ್ಮೀದೇವಿಯೇ ಗೊಲ್ಲತಿಯಗಿ, ಕರುರೂಪವನ್ನು ಧರಿಸಿದ ರುದ್ರನೊಡನೆ ಕೂಡಿಕೊಂಡು ತನ್ನ ಪತಿಯನ್ನು ಹುಡುಕುತ್ತ ಚೋಳರಾಜನ ಬಳಿಗೆ ಬಂದಳು. (20–21) ಕರುಸಹಿತವಾದ ಗೋವನ್ನು ಚೋಳರಾಜನಿಗೆ ವಿಕ್ರಯಮಾಡಿ, ತನ್ನ ಆವಾಸಸ್ಥಾನಕ್ಕೆ ಹೊರಟು ಹೋದಳು. (22) ಬಹುಕ್ಷೀರಪ್ರದವಾದ ಆ ಗೋವನ್ನು ಸಂತುಷ್ಟಮನಸ್ಕನಾದ ಪತ್ನೀಸಮೇತನಾದ ಚೋಳರಾಜನು ತನ್ನ ಪುತ್ರನಿಗೆ ಹಾಲಿನಗೋಸ್ಕರವಾಗಿ ವ್ಯವಸ್ಥೆಮಾಡಿದನು. (23) ಆ ಆಕಳು ನಿತ್ಯದಲ್ಲಿಯೂ ರಾಜನ ಇತರ ಎರಡುಸಾವಿರ ಹಸುಗಳೊಡನೆ ವೇಂಕಟಾಚಲ ಪರ್ವತಕ್ಕೆ ಮೇವು ತಿನ್ನಲು ಹೋಗಿ, ಲಕ್ಷ್ಮೀಪತಿಯು ವಾಸವಾಗಿರುವ ಭೂಮಿಯನ್ನು ಆಘ್ರಾಣಮಾಡುತ್ತಾ ಭಗವಂತನನ್ನು ಹುಡುಕುತ್ತಿತ್ತು. (24) ಬಹುದಿನಗಳ ಅನಂತರದಲ್ಲಿ ಸ್ವಾಮಿಪುಷ್ಕರಿಣಿ ತೀರ್ಥದ ದಡದಲ್ಲಿಯ ವಲ್ಮೀಕದಲ್ಲಿರುವ ಹರಿಯನ್ನು ಕಂಡು ಗೋರೂಪನಾದ ಬ್ರಹ್ಮನು ಬಹುಸಂತೋಷಪಟ್ಟನು. (25–26) ಆ ದಿನವನ್ನು ಮೊದಲ್ಗೊಂಡು ಭಕ್ತ್ಯತಿಶಯದಿಂದ

ತದಾ ಪ್ರಭೃತಿ ನಿತ್ಯಂ ತು ರಾಜಧೇನುಗಣೈಃ ಸಹ ॥27॥

ತತ್ರ ಗತ್ವಾಽತಿಭಕ್ತ್ಯೈವ ವಲ್ಮೀಕೇ ಕ್ಷೀರಸೇಚನಮ್ ।
ಜಗನ್ನಾಥಸ್ಯ ಪ್ರೀತ್ಯರ್ಥಂ ಧೇನುರೂಪೀ ಪಿತಾಮಹಃ ॥28॥

ಕರೋತಿ ಸತತಂ ಗೇಹೇ ನೈವ ಕ್ಷೀರಂ ದದಾತಿ ಸಾ ।
ಏವಂ ಕಾಲೇ ಗತೇ ತಸ್ಮಿನ್ ಚೋಳರಾಜಸತೀ ಸ್ವಯಮ್ ॥29॥
ಧೇನುಪಾಲಂ ಸಮಾಹೂಯ ವಚನಂ ಚೇದಮಬ್ರವೀತ್ ।

ರಾಜ್ಞ್ಯುವಾಚ–

'ಗವಾಂಪಾಲಕ ದುರ್ಬುದ್ಧೇ ಪಯೋಽಸ್ಯಾಃ ಕಿಂ ಕರೋಷಿ ರೇ ॥30॥

ತ್ವಂ ಭುಂಕ್ಷ್ವಸೇಽಥವಾ ವತ್ಸೋ ಭುಂಕ್ತೇ ವಾ ವದ ಭೋ ದ್ರುತಮ್' ।
ಇತಿ ರಾಜ್ಞೀವಚಃ ಶ್ರುತ್ವಾ ಗೋಪಾಲೋ ಭಯವಿಹ್ವಲಃ ॥31॥

ಉವಾಚ ವಚನಂ ಮಂದಂ ರಾಜಭಾರ್ಯಾಂ ಸಗದ್ಗದಮ್ ।

ಗೋಪಾಲ ಉವಾಚ–

'ನ ಜಾನೇಽಹಂ ಚ ತತ್ಕರ್ಮ ನ ಮಯಾ ಪೀಯತೇ ಪಯಃ ॥32॥

ಸ್ವಯಂ ಪಿಬತಿ ವಾ ಧೇನುರ್ವತ್ಸೋ ವೇತಿ ನ ವಿದ್ಮಹೇ ।
ಸತ್ಯಂ ವಚನಮೇತದ್ಧಿ ವಿಚಾರಂ ಕುರು ಭಾಮಿನಿ' ॥33॥

ಪ್ರತಿನಿತ್ಯವೂ ಜಗನ್ನಾಥನ ಪ್ರೀತ್ಯರ್ಥವಾಗಿ ವಲ್ಮೀಕದ ಮೇಲೆ ಆಕಳು ಕ್ಷೀರಸೇಚನವನ್ನು ಮಾಡಹತ್ತಿತು. (27–28) ಹೀಗಾಗಿ ರಾಜಮಂದಿರದಲ್ಲಿ ಆಕಳು ಕ್ಷೀರವನ್ನು ಕೊಡುವದನ್ನು ನಿಲ್ಲಿಸಿತು. ಇದನ್ನು ಕಂಡ ಚೋಳರಾಜನ ಪತ್ನಿಯು ಗೋಪಾಲಕನನ್ನು ಕರೆದು 'ಹೇ ದುಷ್ಟನಾದ ಗೋಪಾಲಕನೇ! ಈ ಆಕಳಿನ ಹಾಲನ್ನು ನೀನೇನು ಮಾಡುತ್ತಿರುವೆ. ಇದು ಹಾಲನ್ನು ಕೊಡುವದಿಲ್ಲ. ಇದರ ಹಾಲನ್ನು ನೀನೇ ಕುಡಿಯುವಿಯೋ ಅಥವಾ ನಿನ್ನ ನಿರ್ಲಕ್ಷದಿಂದ ಇದರ ಕರುವು ಹಾಲನ್ನು ಕುಡಿಯುವದೋ?' ಎಂದು ವಿಚಾರಿಸಿದಳು. (29–31) ಆಗ ಭಯಗ್ರಸ್ತನಾದ ಗೋಪಾಲಕನು ನಡುಗುವ ಧ್ವನಿಯಿಂದ 'ರಾಣಿಯೇ! ಈ ಆಕಳು ಹಾಲನ್ನೇಕೆ ಕೊಡುವದಿಲ್ಲವೆಂಬುದು ನನಗೆ ತಿಳಿಯುತ್ತಿಲ್ಲ. ಇದು ತಾನೆ ಹಾಲನ್ನು ಕುಡಿಯುವದೋ ಅಥವಾ ಕರುವೇ ಇದರ ಹಾಲನ್ನಿಷ್ಟೂ ಕುಡಿದುಬಿಡುವದೋ ಒಂದೂ ತಿಳಿಯದಾಗಿದೆ. ಇದರಲ್ಲಿ ನನ್ನ ಅಪರಾಧವೇನಿಲ್ಲ. ನನ್ನ ಮಾತನ್ನು ಸತ್ಯವೆಂದು ತಿಳಿ' ಎಂದು ನುಡಿದನು. (31–33) ರಾಣಿಯು ಅವನ ಮಾತನ್ನು

ಇತಿ ಗೋಪವಚಃ ಶ್ರುತ್ವಾ ಸಾ ಸತೀ ವಿಹ್ವಲೇಕ್ಷಣಾ ।
ತಾಡಯಾಮಾಸ ತಂ ಗೋಪಂ ರಜ್ಜುಭಿಶ್ಚರ್ಮನಿರ್ಮಿತೈಃ ॥34॥

ತತಃ ಪರದಿನೇ ಪ್ರಾಪ್ತೇ ತಾಡಿತೋ ರಾಜಭಾರ್ಯಯಾ ।
ಕಂಠಾಂಘ್ರಿಬದ್ಧರಜ್ಜುಂ ತಾಂ ತ್ಯಕ್ತ್ವಾ ತತ್ಪೃಷ್ಠತೋ ಯಯೌ ॥35॥

ಧೇನುಃ ಪ್ರಾಪ್ಯಾಥ ವಲ್ಮೀಕಂ ದಿವ್ಯಂ ತದ್ಧರಿಮಂದಿರಮ್ ।
ಅಭಿಷೇಕಂ ಚಕಾರಾಶು ಸ್ವಪಯೋಧರಸಂಭವೈಃ ॥36॥

ತಾಂ ದೃಷ್ಟ್ವಾ ಧೇನುಪಃ ಕೋಪಾತ್ಕುಠಾರಂ ಹಸ್ತಮಾತ್ರಕಮ್।
ಉದ್ಧೃತ್ಯ ತರಸಾ ತಸ್ಯಾ ವಧೋದ್ಯೋಗಂ ಸಮಾಚರತ್ ॥37॥

ತದಾ ವಲ್ಮೀಕಗಃ ಸ್ವಾಮೀ ವಾತ್ಸಲ್ಯಂ ದರ್ಶಯನ್ ಹರಿಃ ।
ಸ್ವಭಕ್ತಹನನಂ ಲೋಕೇ ಸ್ವಾತ್ಮಾರ್ಥಂ ಸಹತೇ ತು ಯಃ ॥38॥

ಸ ಏವ ನರಕಂ ಭುಂಕ್ತೇ ಯಾವದಾಚಂದ್ರತಾರಕಮ್ ।
'ಮದರ್ಥಂ ಚ ಕುಠಾರೇಣ ಹನಿಷ್ಯತಿ ಚ ಗಾಂ ಖಲಃ' ॥39॥

ಇತಿ ಮತ್ವಾ ರಮಾಕಾಂತಃ ಶ್ರೀನಿವಾಸೋ ನಿರಾಮಯಃ ।
'ಏಕೇನ ತುಲಸೀಮಾತ್ರದಲೇನಾಪಿ ನರೋತ್ತಮಃ ॥40॥

ನಂಬದೇ ಕೋಪಾವಿಷ್ಟಳಾಗಿ, ಆವನೇ ಅಪರಾಧಿಯೆಂದು ಭಾವಿಸಿ, ಚರ್ಮನಿರ್ಮಿತ ರಜ್ಜುಗಳಿಂದ (ಚಾವಟಿಗೆಗಳಿಂದ) ಹೊಡೆಸಿದಳು. (34) ಅತಿದುಃಖಿತನಾದ ಗೋಪಾಲಕನು ಮರುದಿನ ಬೆಳಗ್ಗೆ ಹಗ್ಗದಿಂದ ಆಕಳಿನ ಕಾಲು ಹಾಗೂ ಕುತ್ತಿಗೆಯನ್ನು ಬಂಧನಮಾಡಿ, ಅದನ್ನು ಹಿಂಬಾಲಿಸಿದನು. (35) ಪ್ರತಿನಿತ್ಯದಂತೆ ಆಕಳು ವೇಂಕಟಾಚಲಕ್ಕೆ ಬಂದು ಅಲ್ಲಿರುವ ದಿವ್ಯವಾದ ವಲ್ಮೀಕದ ಮೇಲೆ ತನ್ನ ಮೊಲೆಗಳಿಂದ ಹೊರಬರುತ್ತಿರುವ ಹಾಲಿನಿಂದ ವಲ್ಮೀಕಸ್ಥನಾದ ಪರಮಾತ್ಮನಿಗೆ ಅಭಿಷೇಕವನ್ನು ಮಾಡಿತು. (36) ಹುತ್ತಿನ ಮೇಲೆ ಹಾಲ್ಗರೆಯುತ್ತಿರುವದನ್ನು ನೋಡಿದ ಗೋಪಾಲಕನು ಅತಿ ಕೋಪಿಷ್ಠನಾಗಿ ಹಸ್ತದಲ್ಲಿಯೇ ಇರುವ ಕುಠಾರ(ಕೊಡಲಿ)ವನ್ನು ಮೇಲಕ್ಕೆತ್ತಿ ಆಕಳನ್ನು ಕೊಲ್ಲಲು ಉದ್ಯುಕ್ತನಾದನು. (37) ವಲ್ಮೀಕಸ್ಥನಾದ ಪರಮಾತ್ಮನು ಆಕಳಿನ ಮೇಲೆ ತನ್ನ ವಾತ್ಸಲ್ಯವನ್ನು ತೋರಿಸಿ, 'ಲೋಕದಲ್ಲಿ ಯಾರು ತನಗೆ ಭಕ್ತಿಯಿಂದ ನಿಸ್ವಾರ್ಥವಾಗಿ ಸೇವೆ ಮಾಡಿದ ಭಕ್ತ-ಭೃತ್ಯರಿಗೆ ತೊಂದರೆಯಾಗುವದನ್ನು ನೋಡಿಯೂ ಸಹಿಸುವರೋ ಅವರು ಸೂರ್ಯಚಂದ್ರರಿರುವವರೆಗೂ ನರಕವನ್ನು ಹೊಂದುತ್ತಾರೆ ಎಂದು ವಿಚಾರಮಾಡಿ, 'ಉತ್ತಮನಾದ ಮನುಷ್ಯನು ಭಕ್ತಿಯುಕ್ತನಾಗಿ ಒಂದೇ ಒಂದು ತುಲಸೀದಳವನ್ನರ್ಪಿಸಿ

ಪೂಜಯೇದ್ಭಕ್ತಿಭಾವೇನ ತಂ ರಕ್ಷಾಮೀತಿ ಮತ್ಪಣಃ ।
ಇಯಂ ತು ಭಕ್ತ್ಯಾ ಮಾಂ ನಿತ್ಯಂ ಸಿಂಚತಿ ಕ್ಷೀರಧಾರಯಾ ॥41॥

ಇತ್ಥಂ ವಿಚಾರ್ಯ ಗೋವಿಂದಸ್ತತ್ಪ್ರಹಾರಂ ನಿಗೃಹ್ಯ ಚ ।
ಸ್ವಯಂ ದಧಾರ ತದ್ಘಾತಂ ಮೌಲೌ ಸ್ವೇ ಚ ಜಗತ್ಪತಿಃ ॥42॥

ಕುಠಾರೇಣಾತಿತೀಕ್ಷ್ಣೇನ ತಾಡಿತೋ ವೇಂಕಟೇಶ್ವರಃ ।
ಶಿರಸ್ಫೋಟನಮಾಪನ್ನಃ ಕುಠಾರೇಣಾಸಿಧಾರಿಣಾ ॥43॥

ಸಪ್ತತಾಲಪ್ರಮಾಣೇನ ರಕ್ತಸ್ಫೂರ್ತಿರಭೂತ್ತದಾ ।
ಏವಂ ಕೋಲಾಹಲಂ ದೃಷ್ಟ್ವಾ ಗೋಪಾಲೋ ಮರಣಂ ಯಯೌ ॥44॥

ಹತೇ ಗೋಪಾಲಕೇ ಸಾ ಗೌರವರುಹ್ಯ ಗಿರೇಸ್ತಟಾತ್ ।
ರಾಜಾನಂ ಸಮನುಪ್ರಾಪ್ಯ ವತ್ಸಹೀನಾಽತಿದುಃಖಿತಾ ॥45॥

ಲುಠನಂ ಪರಿಚಕ್ರೇಽಥ ರಾಜಾಗ್ರೇ ರಾಜಮಂದಿರೇ ।
ತಾಂ ದೃಷ್ಟ್ವಾ ವಿಹ್ವಲಾಂ ಗಾಂ ಚ ಲುಠಂತೀಂ ಚಾರಮಬ್ರವೀತ್ ॥46॥

'ಕಿಮರ್ಥಂ ಲುಠತೀಯಂ ಗೌಸ್ತ್ಯಕ್ತ್ವಾ ಗೋಸಂತತಿಂ ಮುಹುಃ ।
ಗವಾ ಸಾರ್ಧಂ ಗಚ್ಛ ಚಾರ ಸಮ್ಮೇಲಯ ಗವಾಂ ಗಣೇ ॥47॥

ನನ್ನನ್ನು ಪೂಜಿಸಿದರೂ ಸಹ ಅವರನ್ನು ನಾನು ರಕ್ಷಿಸುವೆನೆಂದು ನನ್ನ ಪ್ರತಿಜ್ಞೆಯಿರುವದು. ಈ ಆಕಳಾದರೂ ನನಗೋಸ್ಕರವಾಗಿ ನಿತ್ಯದಲ್ಲಿಯೂ ಅತ್ಯಂತ ಭಕ್ತಿಯಿಂದ ಹಾಲಿನ ಮಳೆಯನ್ನೇ ಸುರಿಸುತ್ತಿರುವದು' ಎಂಬುದಾಗಿ ವಿಚಾರಿಸಿದ ಗೋವಿಂದನು ಆ ಕೊಡಲಿಯ ಪೆಟ್ಟನ್ನು ಹಸುವಿನಿಂದ ತಪ್ಪಿಸಿ ಅತಿತೀಕ್ಷ್ಣವಾದ ಕುಠಾರದ ಹೊಡೆತವನ್ನು ತಾನೇ ಸ್ವೀಕರಿಸಿದನು. (38–42) ಕೊಡಲಿಯ ಹೊಡೆತದಿಂದ ಭಗವಂತನ ಶಿರಸ್ಫೋಟನವಾಗಿ ಏಳು ತಾಲಗಳ ಎತ್ತರದಷ್ಟು ರಕ್ತವು ಚಿಮ್ಮಿತು. ಇದನ್ನು ಕಂಡು ಗಾಬರಿಯಾದ ಗೋಪಾಲಕನು ತಕ್ಷಣ ಮರಣವನ್ನು ಹೊಂದಿದನು. (43–44) ಬಹುದುಃಖಿತವಾದ ಆಕಳು ಬೆಟ್ಟದಿಂದ ಕೆಳಗಿಳಿದು, ರಾಜಮಂದಿರವನ್ನು ಪ್ರವೇಶಿಸಿ, ಚೋಳರಾಜನ ಸಮ್ಮುಖದಲ್ಲಿ ವ್ಯಸನಪಡುತ್ತಾ ಭೂಮಿಯಲ್ಲಿ ಹೊರಳಾಡಹತ್ತಿತು. ರಾಜನು ತನ್ನ ಸಮ್ಮುಖದಲ್ಲಿ ದುಃಖಿಸುತ್ತಾ ಉರುಳಾಡುತ್ತಿರುವ ಗೋವನ್ನು ನೋಡಿ ತನ್ನ ಭೃತ್ಯನಿಗೆ 'ಗೋ ಸಮೂಹವನ್ನು ಬಿಟ್ಟುಬಂದಿರುವ ಈ ಗೋವು ಏತಕ್ಕೆ ಪುನಃ ಪುನಃ ದುಃಖಿಸುತ್ತಿರುವದು? ಈ ಗೋವನ್ನು ಇತರ ಗೋವುಗಳೊಂದಿಗೆ ವಾಸ್ತವಸಂಗತಿಯನ್ನು ತಿಳಿದುಕೊಂಡು ಬಾ' ಎಂದು ಆಜ್ಞಾಪಿಸಿದನು. (47) ಆಗ ರಾಜನಾಜ್ಞೆಯಂತೆ ಗೋವನ್ನು ಹಿಂಬಾಲಿಸಿ ಪರ್ವತವನ್ನೇರಿ

ಇತಿ ರಾಜ್ಞಾ ಸಮಾಜ್ಞಪ್ತಃ ಚಾರಸ್ತತ್ಪೃಷ್ಠತೋ ಯಯೌ ।
ಆರುಹ್ಯ ವೇಂಕಟಗಿರಿಂ ವಲ್ಮೀಕಾಗ್ರಮುಪಾಶ್ರಿತಃ ॥48॥

ಪತಿತಂ ಧೇನುಪಂ ದೃಷ್ಟ್ವಾ ವಲ್ಮೀಕಾಗ್ರಾತ್ಸಮುತ್ಥಿತಾಮ್ ।
ರಕ್ತವೃಷ್ಟಿಂ ಘೋರತರಾಂ ಸಪ್ತತಾಲಪ್ರಮಾಣಿಕಾಮ್ ॥49॥

ಸಂವೀಕ್ಷ್ಯ ನೃಪಚಾರೋಽಥ ಜಗಾಮ ನೃಪಮಂದಿರಮ್ ॥50॥

ಚಾರಸ್ತಮಾನಮ್ಯ ನರೇಂದ್ರಸನ್ನಿಧೌ
ಗೋಪಾಲಕೃತ್ಯಂ ಸಕಲಂ ಜಗಾದ ।
ಗೋಪಾಲಘಾತೇನ ಕೃತಂ ಸ ರಕ್ತಂ
ವಲ್ಮೀಕರಂಧ್ರಂ ತಮುವಾಚ ದೀನಃ ॥51॥

ರಕ್ತವೃಷ್ಟಿಂ ತತಃ ಶ್ರುತ್ವಾ ರಾಜಾ ವಿಸ್ಮಿತಮಾನಸಃ ।
ಅರುಹ್ಯ ನರಯಾನಂ ಚ ಶೀಘ್ರೇಣಾಗಾದ್ವೃಷಾಚಲಮ್ ॥52॥

ವಲ್ಮೀಕಸ್ಯಾಂತಿಕೇ ಸ್ಥಿತ್ವಾ ಸ ಇದಂ ವಾಕ್ಯಮಬ್ರವೀತ್ ।
'ಕಿಮಿದಂ ಭೋ ಮಹತ್ಕಷ್ಟಂ ಕೇನ ಪಾಪೇನ ವೈ ಕೃತಮ್ ॥53॥

ಧೇನುಪಾಲಸ್ಯ ಮರಣಂ ವಲ್ಮೀಕಂ ರಕ್ತಪೂರಿತಮ್ ।
ಗವಾ ವೃತ್ತಾಂತಕಥನಂ ಕಿಮಿದಂ ವೇಂಕಟಾಚಲೇ' ॥54॥

ಮೇಲೆ ವಲ್ಮೀಕದ ಸಮೀಪಕಕ್ಕೆ ಬಂದ ಚಾರನು ಅಲ್ಲಿನಡೆದ ಗೋಪಾಲಕನ ಮರಣ, ಘೋರತರವಾದ ರಕ್ತದ ಪ್ರವಾಹ ಇವುಗಳನ್ನು ಕಂಡು ಗಾಬರಿಯಾಗಿ ರಾಜನಿಗೆ ಎಲ್ಲವನ್ನು ತಿಳಿಸಿದನು. (50) ಸ್ವತಃ ರಾಜನೇ ಆಶ್ಚರ್ಯದಿಂದ ಪಲ್ಲಕ್ಕಿಯನ್ನೇರಿಕೊಂಡು ಹುತ್ತಿನೆಡೆಗೆ ಬಂದು ಅತ್ಯಂತ ದುಃಖದಿಂದ 'ಇದೇನಿದು ಮಹತ್ಕಷ್ಟವೊದಗಿರುವದು. ನಾನು ಮಾಡಿದ ಯಾವ ಪಾಪದ ಫಲವಾಗಿ ಇಂತಹ ಘೋರವಾದ ಅಪಶಕುನವು (ಅನಿಷ್ಟವು) ನನ್ನ ರಾಜ್ಯದಲ್ಲಿ ಜರುಗಿರುವದು. ಗೋಪಾಲಕನ ಮರಣ, ರಕ್ತಪೂರಿತ ವಾದ ಹುತ್ತು, ಆಕಳು ಅಳುತ್ತಾ ವೃತ್ತಾಂತವನ್ನು ತಿಳಿಸುವದು ಇವೆಲ್ಲವೂ ಏಕೆ ಆಗಿರುವವು' ಎಂದು ವಿಚಾರಿಸುತ್ತಿರುವಾಗ (54)

ಚೋಲರಾಜನಿಗೆ ಶಾಪಪ್ರದಾನ

ಹುತ್ತನ್ನು ಭೇದಿಸಿ ಕೊಂಡು ಹೊರಬಂದ ಭಗವಂತನು ಶಂಖಚಕ್ರಗಳ ಕಾಂತಿಯಿಂದ ಹೊಳೆಯುತ್ತಿರುವ, ದೃಢಾಂಗನಾಗಿದ್ದರೂ ಸಹ ಗದ್ಗದ ಕಂಠದಿಂದ ಕೂಡಿದ ತನ್ನ ಕತ್ತನ್ನು

ಇತಿ ರಾಜ್ಞೋ ವಚಃ ಶ್ರುತ್ವಾ ವಲ್ಮೀಕಸ್ಥೋ ಜಗತ್ಪತಿಃ ॥54॥

ಉದ್ಭಿದ್ಯ ವಲ್ಮೀಕಮನಂತವೀರ್ಯೋ
ಹ್ಯನಂತಶೈಲೇಂದ್ರತಲಂ ಸಮಾಶ್ರಿತಃ ।
ಶ್ರೀಸ್ವಾಮಿತೀರ್ಥಸ್ಯ ಚ ದಕ್ಷಿಣೇ ಶುಭೇ
ವಲ್ಮೀಕ ಸಂಸ್ಥೋ ಭಗವಾನುವಾಚ ॥55॥

ಸಗದ್ಗದೋತ್ಕಂಠಸಮಾಕುಲಾನನಃ
ಸರಕ್ತಬಾಷ್ಪೋದಕಪೂರ್ಣಲೋಚನಃ ।
ಚೋಳಂ ನೃಪೇಂದ್ರಂ ಬಹುನಿಷ್ಠುರಂ ಗಿರಾ
ಸ ಶಂಖಚಕ್ರಪ್ರತಿಮಾಂ ಸಮಾಶ್ರಿತಃ ॥56॥

ಶ್ರೀ ಭಗವಾನುವಾಚ–

'ಪಾಪಿಷ್ಠೋಽಸಿ ದುರಾಚಾರ ರಾಜ್ಯೈಶ್ವರ್ಯಮದೋದ್ಧತ ।
ಅನಾಥಂ ಭುಕ್ತಿಹೀನಂ ಮಾಂ ದರಿದ್ರಂ ವನಚಾರಿಣಮ್ ॥57॥

ಮಾತಾಪಿತೃವಿಹೀನಂ ಚ ಭಾರ್ಯಾಬಂಧುವಿವರ್ಜಿತಮ್ ।
ಸುಭ್ರಾತೃಹೀನಂ ಕುಟಿಲಃ ಕುಠಾರೇಣಾಸಿಧಾರಿಣಾ ॥58॥

ತಾಡಿತೋಽಹಂ ನೃಪಶ್ರೇಷ್ಠ ತದ್ದುಃಖಮತುಲಂ ಹ್ಯಭೂತ್ ।
ಧೇನುಪಾಲಾಯುಧಾಘಾತಾಜ್ಜಾತಂ ದುಃಖಂ ಮಹಾದ್ಭುತಮ್ ॥61॥

ಶಿರೋಭಿನ್ನಂ ಧೇನುಪೇನ ದಯಾಹೀನೇನ ದುರ್ಮತೇ ।
ಯಜಮಾನೋ ಗೃಹೇ ಯಸ್ತು ನ ವಿಚಾರಪರೋ ಭವೇತ್ ॥60

ಮೇಲಕ್ಕೆತ್ತಿದವನಾಗಿ, ಹೊರಬರುತ್ತಿರುವ ರಕ್ತಸಿಕ್ತವಾದ ನೀರಿನಿಂದ ಕೂಡಿದ ಕಣ್ಣುಗಳುಳ್ಳವನಾಗಿ ಚೋಳರಾಜನನ್ನು ಕುರಿತು (55–56) "ದುರ್ಬುದ್ಧಿ ! ದುರಾಚಾರನಾದ ಚೋಳರಾಜನೇ ! ಸಂಪತ್ತಿನ ಮದದಿಂದ ಕೊಬ್ಬಿರುವ ನೀನು ಪಾಪಿಷ್ಠ ಹಾಗೂ ದುರಾಚಾರಿ. ಮಾತಾಪಿತೃಭಾರ್ಯಾಬಂಧುಬಾಂಧವರಿಂದ ವಿವರ್ಜಿತನಾದ, ಅನಾಥನೂ, ಭುಕ್ತಿಹೀನನೂ, ದರಿದ್ರನೂ, ವನಚಾರಿಯೂ ಆದ ನನ್ನನ್ನು ನಿನ್ನ ದೂತನಾದ ಗೋಪಾಲಕನು ಕುಠಾರದಿಂದ ತಾಡನವನ್ನು ಮಾಡಿ, ಭಿನ್ನವಾದ ಶಿರಸ್ಕನನ್ನಾಗಿಸಿ, ಬಹುದುಃಖವನ್ನುಂಟುಮಾಡಿದ್ದಾನೆ. ಹೆಂಡತಿ, ಮಕ್ಕಳು, ದೂತರು ಇವರ ಪಾಪಕೃತ್ಯಕ್ಕೆ ಯಜಮಾನನೇ ಹೊಣೆಯಾಗುವದರಿಂದ ನನಗೆ

ಸ್ತ್ರೀಪುತ್ರಾದ್ಯೈಃ ಕೃತಂ ಕರ್ಮ ತಸ್ಯಾನಿಷ್ಟಕರಂ ವಿದುಃ' ।
ಇತ್ಯುಕ್ತ್ವಾ ಭಗವಾನ್ ದೇವಃ ಶಶಾಪ ನೃಪಪುಂಗವಮ್ ॥61॥

'ಪಿಶಾಚೋ ಭವ ದುರ್ಬುದ್ಧೇ ಮದ್ದುಃಖಾಧಾನಕರ್ಮಣಾ' ।
ಇತ್ಥಂ ಶಪ್ತೋ ನೃಪಶ್ರೇಷ್ಠಃ ಪಪಾತ ಭುವಿ ಮೂರ್ಛಿತಃ ।
ಮುಹೂರ್ತಾಂತೇ ಸಮುತ್ಥಾಯ ಪ್ರೋವಾಚ ಜಗದೀಶ್ವರಮ್ ॥62॥

ಇತಿ ಶ್ರೀ ಭವಿಷ್ಯೋತ್ತರಪುರಾಣೇ ಶ್ರೀ ವೇಂಕಟಗಿರಿಮಾಹಾತ್ಮ್ಯೇ ಅವತಾರಪ್ರಶಂಸನಂ ನಾಮ ತೃತೀಯೋಽಧ್ಯಾಯಃ ॥

* * *

ದುಃಖವನ್ನುಂಟುಮಾಡಿದ ಕಾರಣದಿಂದ ಪಿಶಾಚಿಜನ್ಮವನ್ನು ತಾಳು" ಎಂದು ಶಾಪವನ್ನಿತ್ತನು. ಇದನ್ನು ಕೇಳಿದ ಚೋಳರಾಜನು ಪ್ರಜ್ಞಾವಿಹೀನನಾಗಿ ಒಂದು ಮುಹೂರ್ತಾನಂತರದಲ್ಲಿ ಎಚ್ಚರಗೊಂಡು ಪರಮಾತ್ಮನನ್ನು ಈ ರೀತಿಯಾಗಿ ಪ್ರಾರ್ಥಿಸಿದನು.

ಇಲ್ಲಿಗೆ ಶ್ರೀಭವಿಷ್ಯೋತ್ತರಪುರಾಣದಲ್ಲಿಯ ವೇಂಕಟಗಿರಿಮಾಹಾತ್ಮ್ಯದಲ್ಲಿ ಅವತಾರ ಪ್ರಶಂಸನ ವೆಂಬ ಮೂರನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

ಅಥ ಶ್ರೀಭವಿಷ್ಯೋತ್ತರಪುರಾಣೇ ವೇಂಕಟೇಶಮಾಹಾತ್ಮ್ಯೇ

## ಚತುರ್ಥೋಽಧ್ಯಾಯಃ

ರಾಜೋವಾಚ–

'ಕಿಮರ್ಥಂ ಶಪ್ತವಾನ್ ದೇವ ಹ್ಯಪರಾಧವಿವರ್ಜಿತಮ್ ।
ಅವಿಚಾರ್ಯ ಜಗನ್ನಾಥ ಕಿಂ ಮಯಾ ಚರಿತಂ ತವ ॥1॥

ನ ಜಾನೇಽಹಂ ಕಿಂಚಿದಪಿ ತವ ದುಃಖಕರಂ ಹರೇ ।
ಹಾ ದುಃಖಮತುಲಂ ಪ್ರಾಪ್ತಂ ಕಥಮತ್ರ ಜಗತ್ಪತೇ" ॥2॥

ಇತಿ ತೇನ ಸ ವಿಜ್ಞಪ್ತಃ ಶ್ರೀನಿವಾಸೋಽತಿದುಃಖಿತಃ ।
ಉವಾಚ ವಚನಂ ಮಂದಂ ರಾಜಾನಂ ಶಾಪಮೂರ್ಛಿತಮ್ ॥3॥

ಶ್ರೀನಿವಾಸ ಉವಾಚ–

"ಪಾಪಿಷ್ಠೋಽಹಂ ದುರಾಚಾರೋಽಸ್ಮ್ಯವಿಚಾರೀ ನೃಪೋತ್ತಮ।
ಅಜ್ಞಾನೇನಾತಿದುಃಖೇನ ವೃಥಾ ಶಾಪೋ ಮಯಾಽರ್ಪಿತಃ ॥4॥

## ನಾಲ್ಕನೆಯ ಅಧ್ಯಾಯ

### ಚೋಳರಾಜನ ಪ್ರಾರ್ಥನೆ

ದುಃಖಸಂತಪ್ತನಾದ ಚೋಲರಾಜನು ಶ್ರೀನಿವಾಸನನ್ನು ಕುರಿತು 'ಅಪರಾಧವಿವರ್ಜಿತನಾದ ನನಗೆ, ಹೇ ಸ್ವಾಮಿಯೇ! ವಿಚಾರ ಮಾಡಲಾರದೇ ಏಕೆ ಶಾಪವನ್ನು ಕೊಟ್ಟೆ ? ನಿನ್ನ ದುಃಖಕ್ಕೆ ಕಾರಣವಾದ ಯಾವ ವಿಷಯವನ್ನೂ ನಾನು ಬಲ್ಲವನಲ್ಲ. ನನಗೆ ಅತ್ಯಂತ ದುಃಖವು ವಿನಾಕಾರಣ ಬಂದೊದಗಿರುವದು. ಇದು ಅತ್ಯಂತ ಕಷ್ಟಕರವು' ಎಂದು ನುಡಿದನು. ಈ ರೀತಿಯಾಗಿ ಚೋಳರಾಜನು ವಿಜ್ಞಾಪಿಸುತ್ತಾ ಶಾಪಬಂದೊದಗಿರುವ ಕಾರಣದಿಂದ ಮೂರ್ಛೆಯನ್ನು ಹೊಂದಿದನು.(1–3)

### ಶ್ರೀನಿವಾಸನಿಂದ ಚೋಲರಾಜನ ಸಾಂತ್ವನ

ಶ್ರೀನಿವಾಸನು ಶಾಪಮೂರ್ಛಿತನಾದ ಚೋಳರಾಜನನ್ನು ಸಮಾಧಾನ ಪಡಿಸುತ್ತಾ ಲೋಕವಿಡಂಬನಾರ್ಥವಾಗಿ ಪರಮಾತ್ಮನು 'ಅಜ್ಞಾನದಿಂದ ಅತಿದುಃಖದಿಂದ ನಾನು

ತಥಾಽಪಿ ಮಾಂ ವಿದುರ್ದೇವಾ ಭಗವಂತಂ ಸನಾತನಮ್ ।
ಯತೋಽತೋ ಮದ್ವಚಃ ಸತ್ಯಂ ಮದ್ಭಕ್ತಾ ಮಾಮುಪಾಸತೇ ॥5॥

ಮಚ್ಛಾಪೋ ನಾನೃತೋ ಭೂಯಾದಿತಿ ವೇದವಿದೋ ವಿದುಃ ।
ಭಕ್ತವಾತ್ಸಲ್ಯದೋಷೇಣ ದುಃಖಿತೋಽಸ್ಮಿ ಭೃಶಂ ನೃಪ ॥6॥

ಯಾವತ್ಕಲಿಯುಗಂ ತಿಷ್ಠೇತ್ತಾವದ್ದುಃಖೀ ಭವ ಪ್ರಭೋ ।
ಉಭೌ ದುಃಖಂ ಸಮಾಪನ್ನೌ ಸತ್ಯಸಂಕಲ್ಪದೋಷತಃ ॥7॥

ಭವಿಷ್ಯತಿ ನೃಪಶ್ರೇಷ್ಠ ಆಕಾಶ ಇತಿ ನಾಮವಾನ್ ।
ಸೋಽಪಿ ದಾಸ್ಯತಿ ಮೇ ಕನ್ಯಾಂ ನಾಮ್ನಾ ಪದ್ಮಾವತೀಂಶುಭಾಮ್ ॥8॥

ಕನ್ಯಾಪ್ರದಾನಕಾಲೇ ತು ದದಾತಿ ವರದಕ್ಷಿಣಾಮ್ ।
ಕಿರೀಟಂ ಶತಭಾರಂ ಚ ರತ್ನವಜ್ರಸಮಾಕುಲಮ್ ॥9॥

ಶುಕ್ರವಾರೇ ತು ಸಾಯಾಹ್ನೇ ಕಿರೀಟಂ ಧಾರಯಾಮ್ಯಹಮ್ ।
ಕಿರೀಟಧಾರಣೇ ಕಾಲೇ ನೇತ್ರೇ ಮೇ ಜಲಪೂರಿತೇ ॥10॥

ಘಟಿಕಾಷಟ್ಕಮಾತ್ರಂ ತೇ ಸುಖಂ ತತ್ರ ಭವಿಷ್ಯತಿ" ।
ಇತಿ ಕಾಲಾವಧಿಂ ಕೃತ್ವಾ ರಾಜ್ಞಃ ಸ್ವಸ್ಯ ಚ ಮಾಧವಃ ॥11॥

ವಿಚಾರಮಾಡದೇ ಶಾಪವನ್ನು ಕೊಟ್ಟಿದ್ದೇನೆ. (4) ಆದರೂ ಸಹ ದೇವತೆಗಳು ನನ್ನನ್ನು ಸನಾತನನಾದ ಭಗವಂತನೆಂದು ತಿಳಿದಿದ್ದಾರೆ. ಆದ್ದರಿಂದ ನನ್ನ ವಚನವು ಎಂದೂ ಸುಳ್ಳಾಗುವದಿಲ್ಲ. ಆದ್ದರಿಂದಲೇ ನನ್ನ ಭಕ್ತರು ನನ್ನನ್ನು ಸತ್ಯಸಂಕಲ್ಪ ನೆಂಬುದಾಗಿ ಉಪಾಸನೆ ಮಾಡುತ್ತಾರೆ. (5) ನನ್ನ ಶಾಪವು ವ್ಯರ್ಥವಾಗುವದಿಲ್ಲವೆಂದು ವೇದವನ್ನು ಬಲ್ಲವರು ತಿಳಿದಿರುತ್ತಾರೆ. ನೀನು ಕಲಿಯುಗವಿರುವವರೆಗೆ ದುಃಖವನ್ನು ಅನುಭವಿಸುವವನಾಗು. ಭಕ್ತವಾತ್ಸಲ್ಯದೋಷದಿಂದ ಭಕ್ತನಿಗೆ ಶಾಪಕೊಟ್ಟಿದ್ದಕ್ಕಾಗಿ ನಾನೂ ದುಃಖಿತನಾಗಿದ್ದೇನೆ. (6–7) ಆಕಾಶನೆಂಬ ರಾಜನು ಈ ಕಲಿಯುಗದಲ್ಲಿ ಇನ್ನು ಮುಂದೆ ಜನಿಸುವನು. ಪದ್ಮಾವತೀ ಎಂಬ ತನ್ನ ಕನ್ಯೆಯನ್ನು ನನಗೆ ವಿವಾಹಮಾಡಿ ಕೊಡುವನು. (8) ಕನ್ಯಾದಾನಸಮಯದಲ್ಲಿ ರತ್ನವಜ್ರಖಚಿತವಾದ ಶತಭಾರಗಳಿಂದ ಉಪೇತವಾದ ಸುವರ್ಣಮಯ ಕಿರೀಟವನ್ನು ವರದಕ್ಷಿಣೆಯಾಗಿ ಕೊಡುವನು. (9) ಶುಕ್ರವಾರದ ಸಾಯಂಕಾಲದ ಸಮಯದಲ್ಲಿ ಆ ಕಿರೀಟವನ್ನು ಧಾರಣ ಮಾಡುತ್ತೇನೆ. ಆ ಸಮಮಯದಲ್ಲಿ ನನ್ನ ಕಣ್ಣುಗಳು ಜಲಪೂರಿತವಾಗುವವು. (10) ಆ ಸಂದರ್ಭದಲ್ಲಿ ಆರುಘಳಿಗೆಗಳಷ್ಟು ಸಮಯವು ನಿನಗೆ ಆನಂದಕರ ವಾಗುವದು." (11) ಈ ಪ್ರಕಾರಕವಾಗಿ ಕಾಲಮಿತಿಯನ್ನು ಸೂಚಿಸಿ,

ಸುಖಸ್ಯ ಕಾಲಂ ಸಂಸೂಚ್ಯ ಸ್ವಾವತಾರಪ್ರಯೋಜನಮ್ ।
ಸ್ವಾವತಾರಸ್ಯ ಚರಿತಂ ಕಲೌ ಕನ್ಯಾಪರಿಗ್ರಹಮ್ ॥12॥

ಇತಿ ಸಂಭಾಷ್ಯ ರಾಜಾನಂ ತತ್ರಾಸ್ತೇ ಭಗವಾನ್ ಹರಿಃ ।
ಕ್ಷತಶಾಂತಿಂ ಸಮಾಕಾಂಕ್ಷನ್ ವೈದ್ಯಶಾಸ್ತ್ರವಿಶಾರದಮ್ ॥13॥

ಗುರುಂ ಸುರಪತೇಶ್ಚೈವ ಸಸ್ಮಾರ ಜಗದೀಶ್ವರಃ ।
ಅಗತಂ ಚ ಗುರುಂ ದೃಷ್ಟ್ವಾ "ಸ್ವೌಷಧಂ ವದ ಮೇ ದ್ರುತಮ್" ॥14॥

ಇತಿ ತೇನ ಸಮಾಜ್ಞಪ್ತೋ ಜೀವೋ ಜೀವವತಾಂ ವರಃ ।
ವಿನಯೇನ ಸಮಾಯುಕ್ತಃ ಶ್ರೀನಿವಾಸಮಥಾಬ್ರವೀತ್ ॥15॥

ಗುರುರುವಾಚ–

"ಕ್ಷೀರಮೌದುಂಬರಂ ದೇವ ತಥಾ ಕಾರ್ಪಾಸಮರ್ಕಜಮ್ ।
ಮೇಲಯಿತ್ವಾ ರಮಾಕಾಂತ ತತ್ಕ್ಷತೋಪರಿ ಧಾರ್ಯತಾಮ್" ॥16॥

ಇತ್ಯೇವಂ ಗುರುಣಾऽऽಜ್ಞಪ್ತಸ್ತಚ್ಚಕಾರ ಯಥೋದಿತಮ್ ।

ಕಲಿಯುಗದಲ್ಲಿ ಕನ್ಯಾಪರಿಗ್ರಹರೂಪವಾದ ತನ್ನ ಅವತಾರ ಪ್ರಯೋಜನವನ್ನು ತಿಳಿಸಿ, ಅಲ್ಲಿಯೇ ವೇಂಕಟಾಚಲದಲ್ಲಿ ತಾನು ನೆಲಸಿದನು. (12)

ಭಗವಂತನಿಗೆ ಬೃಹಸ್ಪತಿಯಿಂದ ಚಿಕಿತ್ಸೆ

ವಾಸ್ತವವಾಗಿ ಜ್ಞಾನಾನಂದಾತ್ಮಕ, ಅಪ್ರಾಕೃತ ಸೌಂದರ್ಯ ಮೂರ್ತಿಯಾದ ಭಗವಂತನಿಗೆ ರಕ್ತಮಾಂಸಗಳಿಂದ ಪರಿಪೂರಿತವಾದ ಶರೀರಸಂಬಂಧವೇ ಇಲ್ಲ. ಆದರೂ ಪ್ರಾಜ್ಞರಿಗೆ ಭಗವಂತನ ಲೀಲೆಯ ಆನಂದ, ಅಜ್ಞರಿಗೆ ವಿಡಂಬನೆಯನ್ನು ತೋರುವ ಭಗವಂತನು ಅಜ್ಞದೃಷ್ಟಿಯಿಂದ ಕುಠಾರ ಪ್ರಹಾರದ ಪೆಟ್ಟಿನಿದ ಉಂಟಾದ ಗಾಯವನ್ನು ಗುಣಪಡಿಸಲು ಸುರಪತಿಯಾದ ಇಂದ್ರನಿಗೂ ಗುರುವಾದ, ವೇದಶಾಸ್ತ್ರ ವಿಶಾರದನಾದ ಬೃಹಸ್ಪತಿಯನ್ನು ಜಗದೀಶ್ವರನಾದ ಸ್ವಾಮಿಯು ಮನಸ್ಸಿನಲ್ಲಿ ಸ್ಮರಿಸಿದಾಗ ವಿನಯಾಭರಣಯುಕ್ತನಾದ ಬೃಹಸ್ಪತಿಯು ಸ್ವಾಮಿಯ ಸನ್ನಿಧಾನದಲ್ಲಿ ಪ್ರತ್ಯಕ್ಷವಾಗಿ ಕಂಗೊಳಿಸಿದನು. ಶ್ರೀನಿವಾಸನು 'ನನ್ನ ಗಾಯನಿವಾರಣೆಗೆ ಉತ್ತಮ ಔಷಧವನ್ನು ತಿಳಿಸು' ಎಂದು ನುಡಿದಾಗ (13–15) ಬೃಹಸ್ಪತಿಯು 'ಅತ್ತಿಗಿಡದ ಹಾಲನ್ನು ಹಾಗೂ ಎಕ್ಕೆ ಗಿಡದ ಅರಳೆ(ಹತ್ತಿ)ಯನ್ನು ಮಿಶ್ರಣಮಾಡಿ ಗಾಯದ ಮೇಲೆ ಧಾರಣಮಾಡಲು ಬಿನ್ನವಿಸಿಕೊಂಡಾಗ ಪ್ರತಿನಿತ್ಯ ದಲ್ಲಿಯೂ ಔಷಧೋಪಚಾರವನ್ನು ಮಾಡಿಕೊಳ್ಳುತ್ತಾ ಲಕ್ಷ್ಮೀಪತಿಯಾದ

ಏವಂ ಕುರ್ವನ್ ರಮಾಕಾಂತಃ ತತ್ರಾಸ್ತೇ ಭಗವಾನ್ ಹರಿಃ ॥17॥

ಕೌಸಲ್ಯಾ ಕೀಟಕಗೃಹಂ ತಿಂತ್ರಿಣೀ ದಶದಿಗ್ರಥಃ ।
ಗಿರಿರೂಪೋಽನುಜಸ್ಸಾಕ್ಷಾದಯೋಧ್ಯಾಽಭೂದಧಿತ್ಯಕಾ ॥18॥

ಇತ್ಥಂ ರಾಮಾವತಾರೇಣ ಹ್ಯವತಾರಮಚೀಕರತ್ ।
ವಲ್ಮೀಕಂ ದೇವಕೀ ಸಾಕ್ಷಾದ್ವಸುದೇವೋಽಥ ತಿಂತ್ರಿಣೀ ॥19॥

ಬಲಭದ್ರಃ ಶೇಷಶೈಲೋ ಮಧುರಾ ವೇಂಕಟಾಚಲಃ ।
ಸ್ವಾಮಿಪುಷ್ಕರಿಣೀ ತತ್ರ ಯಮುನಾ ಚ ವ್ಯರಾಜತ ॥20॥

ಯಾದವಾಶ್ಚ ಮೃಗಾಸ್ಸರ್ವೇ ಖಗಾ ವೈ ಗೋಪಿಕಾದಯಃ ।
ಏವಂ ಶ್ರೀಕೃಷ್ಣರೂಪೇಣ ಕ್ರೀಡತೇ ವೇಂಕಟಾಚಲೇ ॥21॥

ಏವಂ ವೇದಮಯ[33]ಸ್ಸಾಕ್ಷಾದ್ಗಿರೀಂದ್ರಃ ಪನ್ನಗಾಚಲಃ ।
ಸ್ವದೇಹಚ್ಛನ್ನವಲ್ಮೀಕೋ ವೈಕುಂಠಾದಧಿಕೋ ಹ್ಯಭೂತ್ ॥22॥

ಸುವರ್ಣಮುಖರೀ ನಾಮ ನದೀ ಸಾ ವಿರಜಾನದೀ ।
ವೈಕುಂಠೋ ವೇಂಕಟಗಿರಿರ್ವಾಸುದೇವೋ ರಮಾಪತಿಃ ॥23॥

ಶ್ರೀನಿವಾಸನು ಅಲ್ಲಿಯೇ ವಾಸವಾದನು. (16–17)

### ವೇಂಕಟಾದ್ರಿ–ಅಯೋಧ್ಯಾ–ಮಧುರಾ ತುಲನೆ

ವೇಂಕಟಾಚಲದಲ್ಲಿ ಶ್ರೀನಿವಾಸನುವಾಸವಾಗಿರುವ ವಲ್ಮೀಕವೇ ಕೃತಯುಗದ ಶ್ರೀರಾಮಚಂದ್ರನ ತಾಯಿಯಾದ ಕೌಸಲ್ಯೆಯು. ತಿಂತ್ರಿಣೀ ವೃಕ್ಷವೇ ಸಾಕ್ಷಾತ್ ದಶರಥನು. ಅನುಜನಾದ ಲಕ್ಷ್ಮಣನೇ ಗಿರಿರೂಪನು. ವೇಂಕಟಾಚಲವೇ ಸಾಕ್ಷಾತ್ ಅಯೋಧ್ಯೆಯು. (18) ಈ ಪ್ರಕಾರಕವಾಗಿ ಭಗವಂತನು ರಾಮಾವತಾರದ ಅನುಸಂಧಾನವನ್ನು ಮಾಡಿ ಇಲ್ಲಿ ವಾಸವಾಗಿದ್ದನು. ಅದರಂತೆ ದೇವಕಿಯು ವಲ್ಮೀಕದಂತೆಯೂ ತಿಂತ್ರಿಣೀ ವೃಕ್ಷವು ವಸುದೇವನು. (19) ಶೇಷಪರ್ವತವೇ ಬಲರಾಮ. ವೇಂಕಟಾಚಲವೇ ಮಧುರಾಪಟ್ಟಣ. ಸ್ವಾಮಿಪುಷ್ಕರಣಿಯೇ ಯಮುನಾ ನದೀ. (20) ಯಾದವರು ಸಮಸ್ತ ಮೃಗಗಳು. ಗೋಪಿಕಾಸ್ತ್ರೀಯರೇ ಸಮಸ್ತ ಪಕ್ಷಿಗಳು. ಹೀಗೆ ಶ್ರೀನಿವಾಸನು ಕೃಷ್ಣಾವತಾರರೂಪದಿಂದ ವೇಂಕಟಾಚಲದಲ್ಲಿ ವಿಹರಿಸುತ್ತಿದ್ದನು. (21) ಪರ್ವತಶ್ರೇಷ್ಠವಾದ ಶೇಷಾಚಲವು ಈ ರೀತಿಯಾಗಿ ವೇದಪ್ರತಿಪಾದ್ಯವಾಗಿರುವದು. ಪರ್ವತದಲ್ಲಿ ಅಡಗಿರುವ ಶ್ರೀನಿವಾಸನಿಗೆ ಆಲಯವಾದ ವಲ್ಮೀಕವು ವೈಕುಂಠದಂತೆ ಅತ್ಯಂತ ಅಧಿಕವಾಗಿ ಶ್ರೇಷ್ಠ ವಾಗಿರುವದು.

ಮುಕ್ತಾ ಅಜಾಃ ಪಕ್ಷಿಗಣಾಃ ಮುಕ್ತಾ ರುದ್ರಾ ಮೃಗೋತ್ತಮಾಃ ।
ಸನತ್ಕುಮಾರಪ್ರಮುಖಾಃ ವಾನರಾದ್ಯಾಶ್ಚ ಭೂಧರೇ ॥24॥

ಮಾನುಷಂ ದೇಹಮಾಸಾದ್ಯ ಯಃ ಪುಮಾನ್ ವೇಂಕಟಾಚಲಮ್।
ಗಂತುಮಿಚ್ಛತಿ ಧರ್ಮಿಷ್ಠಸ್ತೇನ ಸರ್ವಮನುಷ್ಠಿತಮ್ ॥
ಪ್ರೀತೋ ಭವೇದ್ರಮಾನಾಥಃ ಸರ್ವದೇವನಮಸ್ಕೃತಃ ॥25॥

ಶ್ರೀ ವೇಂಕಟಾದ್ರೇರ್ಮಹಿಮಾನಮುತ್ತಮಂ
ಜಾನಂತಿ ತೇ ಬ್ರಹ್ಮಶಿವೇಂದ್ರ ಪೂರ್ವಕಾಃ ।
ಕಿಮಲ್ಪವೀರ್ಯಾ ಮನುಜಾಸ್ತಮೋಗತಾಃ
ಜಾನಂತಿ ವಿಷ್ಣೋಃ ಸ್ಥಲಮದ್ಭುತಂ ಹಿ ತತ್ ॥27॥

ಇತಿ ಶ್ರೀಭವಿಷ್ಯೋತ್ತರಪುರಾಣೇ ಶ್ರೀವೇಂಕಟಗಿರಿಮಾಹಾತ್ಮ್ಯೇ ಪರ್ವತವರ್ಣನಂ ನಾಮ ಚತುರ್ಥೋಽಧ್ಯಾಯಃ ॥

* * *

(22) ವೈಕುಂಠದಲ್ಲಿಯ ವಿರಜಾನದಿಯೇ ಈ ಪರ್ವತದಲ್ಲಿ ಸುವರ್ಣಮುಖಿಯಾಗಿ ಪ್ರವಹಿಸಿದೆ. ವೈಕುಂಠವೇ ವೇಂಕಟಗಿರಿಯಾಗಿ ಶೋಭಿಸುತ್ತಿದೆ. ವೈಕುಂಠಾಧಿಪತಿಯಾದ ಲಕ್ಷ್ಮೀಪತಿಯೇ ಶ್ರೀ ಶ್ರೀನಿವಾಸ ನಾಗಿ ಕಂಗೊಳಿಸಿದನು.(23) ಮುಕ್ತನಾದ ಬ್ರಹ್ಮಾದಿಗಳು ಪಕ್ಷಿರೂಪವನ್ನು ಧರಿಸಿದವರಾಗಿ, ಮುಕ್ತರುದ್ರರು ಸಿಂಹವ್ಯಾಘ್ರಾದಿ ಶ್ರೇಷ್ಠಮೃಗಗಳಾಗಿ ಪರ್ವತದಲ್ಲಿ ಅಡಗಿದವರಾಗಿಯೂ, ಸನತ್ಕುಮಾರಾದಿಗಳು ವಾನರ ಮುಂತಾದ ರೂಪಧಾರಿಗಳಾಗಿಯೂ ಈ ಪರ್ವತದಲ್ಲಿ ವಾಸಮಾಡುವರು. (24) ಭೂಮಿಯಲ್ಲಿ ಜನಿಸಿದ ಧರ್ಮವಂತನಾದ ಮಾನವನು ವೇಂಕಟಾಚಲ ಪರ್ವತಕ್ಕೆ ಹೋಗುವದನ್ನು ಇಚ್ಛಿಸಿದರೂ ಸಹ ಅವನು ಸರ್ವ ಪುಣ್ಯಕಾರ್ಯಗಳನ್ನು ಮಾಡಿದಂತಾಗುವದು. ತನ್ನ ಭಕ್ತರ ಆಗಮನದಿಂದ ಸಂಪ್ರೀತನಾಧ ಭಗವಂತನು ಸರ್ವಾಭೀಷ್ಟಗಳನ್ನೂ ಕರುಣಿಸುವನು. ಇಂತಹ ಸಾಕ್ಷಾದ್ಭಗವಂತನಿಗೇ ಆಶ್ರಯವಾದ ವೇಂಕಟಾಚಲದ ಮಾಹಾತ್ಮೆಯು ಹೇಳಲು, ತಿಳಿಯಲು ಕೇಳಲೂ ಸಹ ಅಸಾಧ್ಯವಾಗಿರುವದು.

ಇಲ್ಲಿಗೆ ಶ್ರೀಭವಿಷ್ಯೋತ್ತರಪುರಾಣದಲ್ಲಿಯ ವೇಂಕಟಗಿರಿಮಾಹಾತ್ಮ್ಯದಲ್ಲಿ ಪರ್ವತ ವರ್ಣನ ವೆಂಬ ನಾಲ್ಕನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

ಅಥ ಶ್ರೀಭವಿಷ್ಯೋತ್ತರಪುರಾಣೇ ವೇಂಕಟೇಶಮಾಹಾತ್ಮ್ಯೇ

## ಪಂಚಮೋऽಧ್ಯಾಯಃ

**ಋಷಯ ಊಚುಃ–**

**'ಸೂತ ಸೂತ ಮಹಾಭಾಗ ಸರ್ವಶಾಸ್ತ್ರವಿಶಾರದ ।**
**ಶ್ರುತಂ ಶ್ರೀವೇಂಕಟೇಶಸ್ಯ ಮಹಾತ್ಮ್ಯಂ ಪಾಪನಾಶನಮ್ ॥1॥**

**ಅವತಾರಪ್ರಭಾವಶ್ಚ ಚೋಲರಾಜನಿಬಂಧನಮ್ ।**
**ವೈಕುಂಠಾಚ್ಚೈವಾಗಮನಂ ಚರಿತಂ ಲೌಕಿಕಂ ಪರಮ್ ॥2॥**

**ಕೃಪಾಲುಸ್ತ್ವಂ ದಯಾಸಾರ ಶಿಷ್ಯಪ್ರೀತಿಪರಾಯಣ ।**
**ತತ್ಕಲ್ಯಾಣವಿಧಿಂ ಬ್ರೂಹಿ ಕೋ ವಾऽऽಕಾಶೋ ನೃಪೋತ್ತಮಃ ॥3॥**

**ಕಥಂ ಪುತ್ರೋऽಭವತ್ಪೂರ್ವಂ ಕಥಂ ಜಾಮಾತೃತಾಂ ಗತಃ ।**
**ಯೋಗಿನಾಂ ಮನಸಾऽಚಿಂತ್ಯಃ ಶ್ರೀನಿವಾಸಸ್ಸತಾಂ ಗತಿಃ ॥4 ॥**

## ಐದನೇ ಅಧ್ಯಾಯ

ಕಲ್ಯಾಣವಿಧಿಯನ್ನು ತಿಳಿಸಲು ಪ್ರಾರ್ಥನೆ

ಕಥಾರಸಾಸ್ವಾದನ ಕುಶಲರಾದ ಶೌನಕಾದಿ ಮುನಿಗಳು ಸೂತಾಚಾರ್ಯರನ್ನು ಕುರಿತು 'ಹೇ ಸರ್ವಶಾಸ್ತ್ರವಿಶಾರದರಾದ ಮಹಾನುಭಾವರಾದ ಸೂತಾಚಾರ್ಯರೇ! ಪಾಪನಾಶಕವಾದ ವೇಂಕಟೇಶನ ಮಾಹಾತ್ಮ್ಯವನ್ನು, ಲಕ್ಷ್ಮಿಯ ಗೋಸ್ಕರವಾಗಿ ಲೌಕಿಕನಂತೆ ವೈಕುಂಠವನ್ನು ತೊರೆದು ಬಂದಿರುವ ಅವನ ಅವತಾರ ಪ್ರಭಾವ, ಚೋಲರಾಜನಿಗೆ ಶಾಪವನ್ನು ಕೊಡುವದು, ಇವೇ ಮೊದಲಾದ ವೃತ್ತಾಂತಗಳನ್ನು ನಿಮ್ಮಿಂದ ಕೇಳಿರುವೆವು. (1–2) ಹೇ ಕೃಪಾನಿಧಿಗಳಾದ, ಶಿಷ್ಯಾನುಗ್ರಹತತ್ಪರರಾದ ಸೂತರೆ! ಇನ್ನು ಮುಂದೆ ಆ ಪರಮಾತ್ಮನ ಕಲ್ಯಾಣವಿಧಿಯನ್ನು ವಿಸ್ತಾರವಾಗಿ ತಿಳಿಸಿರಿ. ಆಕಾಶರಾಜನ ಮಗಳನ್ನು ಶ್ರೀನಿವಾಸನು ವಿವಾಹವಾಗುವನೆಂದು ತಿಳಿಸಿರುವಿರಿ. ಈ ಆಕಾಶರಾಜನಾರು? (3) ಅವನ ಮಗ–ಮಗಳು ಇವರಾರು? ಯೋಗಿಗಳ ಮನಸ್ಸಿನಿಂದಲೂ ಸಹ ಅಚಿಂತ್ಯನಾದ ಭಗವಂತನಾದ ಶ್ರೀನಿವಾಸನು ಹೇಗೆ ಆಕಾಶರಾಜನ ಅಳಿಯನಾಗುವನು? (4) ಇಂತಹ ಶ್ರೇಷ್ಠನಾದ ಶ್ರೀನಿವಾಸನ ವಿವಾಹ ಚರಿತ್ರೆಯನ್ನು ಸಾಂಗವಾಗಿ

ತತಸ್ತದ್ಬ್ರೂಹಿ ಭಗವನ್ ಸಾಂಗಂ ವೈವಾಹಿಕಂ ಶುಭಮ್ ।
ಯಃ ಪುಮಾನ್ವೇಂಕಟೇಶಸ್ಯ ಮಹಿಮಾಕ್ಷೀರಸಾಗರೇ ॥
ಸ್ನಾನಾಚಾರಪರೋ ನಿತ್ಯಂ ಸ ಧನ್ಯಃ ಪುಣ್ಯವರ್ಧನಃ" ॥5॥

ಏವಂ ನಿಶಮ್ಯ ಋಷಿಭಿಃ ಪರಿಭಾಷಿತಂ ಶುಭಂ
ಸೂತೋ ನಿತಾಂತಮವದನ್ನಿಜಶಿಷ್ಯಸಂಘಾನ್ ।
ಉವಾಚ ಭಕ್ತ್ಯಾನ್ವಿತನಮ್ರದೇಹಃ
ಸಾಧ್ವಿತ್ಯಸೌ ತಾನ್ ಕೃಪಯಾಽಭಿನಂದನ್ ॥6॥

ಸೂತ ಉವಾಚ–

ಶೃಣ್ವಂತು ಮುನಯಃ ಸರ್ವೇ ಭಕ್ತಿಭಾವೇನ ಸಂಯುತಾಃ ।
ಪನ್ನಗಾಚಲನಾಥಸ್ಯ ಕನ್ಯಾಸಂಗ್ರಹಣಂ ಶುಭಮ್ ॥7॥

ಕದಾಚಿದ್ವೇಂಕಟೇಶಸ್ತು ಸ್ವೌಷಧಾರ್ಥಂ ಸ್ವಯಂ ಹರಿಃ ।
ಗಮನಾಭಿಮುಖೋ ಭೂತ್ವಾ ನಿರ್ಜಗಾಮಾರುಣೋದಯೇ ॥8।

ತಸ್ಮಿನ್ ಕಾಲೇ ವರಾಹಸ್ತು ಮೃಗಯಾರ್ಥಂ ಸ ಸೂಕರಃ ।
ಶ್ಯಾಮಾಕಹಾರಿಣಂ ಜಿತ್ವಾ ದೈತ್ಯಂ ವೃಷಭನಾಮಕಮ್ ॥9॥

ತಿಳಿಸಿರಿ. ಯಾವ ಮನುಷ್ಯನು ಶ್ರೀಮದ್ವೇಂಕಟೇಶ್ವರನ ಮಹಿಮೆಯೆಂಬ ಕ್ಷೀರಸಾಗರದಲ್ಲಿ ನಿತ್ಯದಲ್ಲಿಯೂ ಸಹ ನಿಮಗ್ನನಾಗಿರುವನೋ ಅವನು ಧನ್ಯನು. ಪುಣ್ಯಶಾಲಿಯು' ಎಂದು ನುಡಿದರು. (5) ಇದನ್ನು ಕೇಳಿದ ಸೂತಾಚಾರ್ಯರು ಶೌನಕರನ್ನು 'ಸಾಧು ಸಾಧು' ಎಂಬುದಾಗಿ ಅಭಿನಂದಿಸಿ, ಭಗವಂತನಲ್ಲಿಯ ಭಕ್ತಿಯಿಂದ ನಮ್ರವಾದ ದೇಹವನ್ನು ಹೊಂದಿರುವ ಸೂತಾಚಾರ್ಯರು 'ಹೇ ಮುನಿಗಳೇ! ನಿಮಗೆ ನಾನು ಶೇಷಾಚಲಾಧೀಶನಾದ ಶ್ರೀನಿವಾಸನ ಮಂಗಳಕರವಾದ ಕನ್ಯಾಸಂಗ್ರಹಣಕಾರ್ಯವನ್ನು ವರ್ಣನಮಾಡುವೆನು. ಏಕಾಗ್ರ್ಯ ಮನಸ್ಸಿನಿಂದ ಭಕ್ತಿಯುಕ್ತರಾಗಿ ಶ್ರವಣಮಾಡಿರಿ' ಎಂದು ನುಡಿದು ಶ್ರೀನಿವಾಸನ ಚರಿತೆಯನ್ನು ಹೇಳಲಾರಂಭಿಸಿದರು.

### ವರಾಹ–ಶ್ರೀನಿವಾಸರ ಸಂದರ್ಶನ

ಶ್ರೀನಿವಾಸನು ತನಗಾದ ಗಾಯಕ್ಕೆ ಔಷಧಿಯನ್ನು ತರುವದಕ್ಕೋಸ್ಕರವಾಗಿ ಒಂದು ದಿವಸ ಅರುಣೋದಯ ಸಮಯದಲ್ಲಿ ವಲ್ಮೀಕದಿಂದ ಹೊರಹೊರಟನು. (8) ಅದೇ ಸಂದರ್ಭದಲ್ಲಿ ಶಾಮಾಕ(ಸಾವಕ್ಕಿ) ಧಾನ್ಯವನ್ನು ಅಪಹರಿಸುತ್ತಿದ್ದ ವೃಷಭಾಸುರನನ್ನು ಬೇಟೆಯಾಡಿ, ಜಯಿಸಿ, (9) ಸೂಕರಗಣಗಳಿಂದ ಸಮನ್ವಿತನಾಗಿ ಬರುತ್ತಿದ್ದ ವರಾಹರೂಪೀ ಪರಮಾತ್ಮನು ವಲ್ಮೀಕದಿಂದ

ಯದಾಗತಸ್ತದಾ ದೇವೋ ದದೃಶೇ ವೇಂಕಟೇಶ್ವರಮ್ ।
ಗರ್ಜಂತಃ 'ಕೋಽಸಿಕೋಽಸೀ'ತಿ ಸೂಕರಾಸ್ತತ್ರ ಚಾಯಯುಃ ॥10॥

ತಾನ್ ದೃಷ್ಟ್ವಾ ಜಗದೀಶಸ್ತು ತತ್ರ ಲೀನೋಽಭವದ್ಧರಿಃ ।
ಲೀನಂ ತಂ ವೇಂಕಟಂ ದೃಷ್ಟ್ವಾ ವರಾಹವದನೋ ಹರಿಃ ॥11॥

ವೈಕುಂಠಾದಾಗತಂ ಮತ್ವಾ ವೇಂಕಟೇಶಂ ಶ್ರಿಯಃ ಪತಿಮ್ ।
ಉವಾಚ ವಚನಂ ದೇವಂ ಧೈರ್ಯಮಾಲಂಬ್ಯ ಬುದ್ಧಿಮಾನ್ ॥12॥

ಸೋಽಪಿ ಶ್ವೇತವರಾಹಂ ತಂ ಜಾನನ್ ವಲ್ಮೀಕತಸ್ತದಾ ।
ನಿರೀಕ್ಷಮಾಣಃ ಸೋತ್ಕಂಠಂ ನಿರ್ಗತ್ಯೋತ್ತರಮಭ್ಯಧಾತ್ ॥13॥

ತತೋಽನ್ಯೋನ್ಯವಿಲೋಕೋತ್ಥಬಾಷ್ಪಸಂದಿಗ್ಧಲೋಚನೌ ।
ಕ್ರೋಢನಾರಾಯಣೌ ಸಾಕ್ಷಾದ್ರೂಪದ್ವಂದ್ವ ವಿರಾಜಿತೌ ॥14॥

ಊಚತುರ್ಭಾಷಣಂ ಚೋಭೌ ದರ್ಶಯಂತೌ ವಿಡಂಬನಮ್।
ತಯೋಸ್ತದದ್ಭುತಂ ಕರ್ಮ ದೃಷ್ಟ್ವಾ ಬ್ರಹ್ಮಪುರೋಗಮಾಃ ॥15॥

ವವರ್ಷುಃ ಪುಷ್ಪವರ್ಷಾಣಿ ಕ್ರೋಡನಾರಾಯಣೋಪರಿ ।
ಯಥಾಯುಗಂ ಯಥಾದೇಶಂ ಯಥಾಕಾಲಂ ಯಥಾವಯಃ ॥16॥

ತಥಾಽವತಾರಮಾಕಾಂಕ್ಷನ್ ರಮತೇ ಪ್ರಾಕೃತೋ ಯಥಾ ॥17॥

ಹೊರಬಂದ ಶ್ರೀನಿವಾಸನನ್ನು ನೋಡಿದನು. ಶ್ರೀನಿವಾಸನನ್ನು ನೋಡಿದ ಸೂಕರಗಳು "ನೀನು ಯಾರು ? ನೀನು ಯಾರು?" ಎಂದು ಧ್ವನಿಗೈಯುತ್ತಾ ಗರ್ಜಿಸಿದವು. (10) ಅವುಗಳನ್ನು ನೋಡಿದ ಶ್ರೀನಿವಾಸನು ಪುನಃ ವಲ್ಮೀಕದಲ್ಲಿ ಮಾಯವಾದನು. ವಲ್ಮೀಕದಲ್ಲಿ ಮರೆಯಾದ ಶ್ರೀನಿವಾಸನನ್ನು ವರಾಹರೂಪೀ ಪರಮಾತ್ಮನು ವೈಕುಂಠಾಧಿಪತಿಯೇ ಇವನೆಂದು ತಿಳಿದು ಧೈರ್ಯದಿಂದ ಮಾತನಾಡಿಸಿದನು. (11–12) ವಲ್ಮೀಕದಿಂದ ಹೊರಬಂದ ಶ್ರೀನಿವಾಸನೂ ಸಹ ಈತನು ಭಗವಂತನ ಶ್ವೇತವರಾಹರೂಪನೆಂದು ಮನಗಂಡು ಅವನೊಂದಿಗೆ ಸಂಭಾಷಿಸುತ್ತಾ ಉತ್ತರವನ್ನು ಕೊಟ್ಟನು (13) ಪರಿಪೂರ್ಣನಾದ ಭಗವಂತನ ಪರಿಪೂರ್ಣವಾದ ರೂಪದ್ವಯದಿಂದ ಕಂಗೊಳಿಸುತ್ತಿದ್ದ ವರಾಹ–ಶ್ರೀನಿವಾಸರು ಅಪ್ರಾಕೃತ ತಸ್ವರೂಪರಾಗಿದ್ದರೂ ಸಹ ಪ್ರಾಕೃತಮರುಷರಂತೆ ಪರಸ್ಪರ ಸಂಭಾಷಣೆ ಯಲ್ಲಿ ನಿರತರಾದರು. ಅಭೂತಪೂರ್ವ ಈ ದೃಶ್ಯವನ್ನು ಕಂಡ ಬ್ರಹ್ಮಾದಿ ದೇವತೆಗಳು ಪರಮಾತ್ಮನ ರೂಪದ್ವಯಗಳನ್ನು ಸಂದರ್ಶಿಸಿ, ನತಿಸಿ, ಅವರ ಮೇಲೆ ಪುಷ್ಪಗಳ ಮಳೆಗೆರೆದು 'ದೇಶಕಾಲಾನುಸಾರವಾಗಿ ಅವತಾರವನ್ನು ಮಾಡುವವರಾದ ವರಾಹಶ್ರೀನಿವಾಸರು

ಏವಂ ವದಂತಃ ಸುರಪುಂಗವಾಸ್ತೇ
ವಿಚಿತ್ರಮಾಯಾಂ ಜಗದೀಶಚೇಷ್ಟಾಮ್ ।
ಸ್ತುವಂತ ಊಚುಸ್ತಮನಂತವೀರ್ಯ-
ಮನಂತಶೈಲಂ ಚ ರಮಾಪತಿಂ ಚ ॥18॥

ಇತ್ಯನ್ಯೋನ್ಯಂ ಭಾಷಮಾಣೌ ಸಾಕ್ಷಾನ್ನಾರಾಯಣಾವುಭೌ ।
ಸಕೌತುಕಂ ಚ ಸಂವೀಕ್ಷ್ಯ ಸ್ತುತ್ವಾ ಸ್ವಂ ಸ್ವಂ ಪದಂ ತತಃ ॥19॥

ಗತೇ ದೇವಗಣೇ ತತ್ರ ವರಾಹೋ ಹರಿಮಬ್ರವೀತ್ ।

ಶ್ರೀ ವರಾಹ ಉವಾಚ-

'ತ್ಯಕ್ತ್ವಾ ವೈಕುಂಠಲೋಕಂ ತು ಕಿಮರ್ಥಂ ತ್ವಮಿಹಾಗತಃ ॥20॥
ತದ್ವದಸ್ವ ಮಹಾಭಾಗ ಶ್ರೀನಿವಾಸ ವರಾನನ' ।
ಇತಿ ತೇನ ಸಮಾಜ್ಞಪ್ತ ಉವಾಚ ಕ್ರೋಡರೂಪಿಣಮ್ ॥21॥

ಶ್ರೀನಿವಾಸ ಉವಾಚ-

'ಭೃಗೋರಂಘ್ರಿಪ್ರಪಾತಾಚ್ಚ ರಮಾ ಕೊಲ್ಹಾಪುರಂ ಗತಾ ।
ತೇನ ದುಃಖೇನ ಸಂತಪ್ತಃ ತ್ಯಕ್ತ್ವಾ ವೈಕುಂಠಮುತ್ತಮಮ್ ॥22॥

ಇಹಾಗತೋ ಧರಾಕಾಂತ ವಲ್ಮೀಕೇ ತವ ದಕ್ಷಿಣೇ ।
ನಿವಸಂತಂ ಚ ಮಾಂ ದೇವ ಧೇನುಪಾಲೋ ಹ್ಯತಾಡಯತ್ ॥23॥

ಭಕ್ತರ ಅನುಗ್ರಹದ ಗೋಸ್ಕರವಾಗಿ ಪ್ರಾಕೃತರಂತೆ ಕ್ರೀಡಿಸುವರು' ಎಂಬುದಾಗಿ ನುಡಿಯುತ್ತಾ ಅವನ ವಿಚಿತ್ರವಾದ ಸರ್ವಮೋಹಕವಾದ ಮಾಯೆಯನ್ನು ಸ್ತುತಿಸುವವರಾಗಿ ತಮ್ಮ ತಮ್ಮ ಲೋಕಗಳಿಗೆ ತೆರಳಿದರು. (14-18) ದೇವತೆಗಳು ತಮ್ಮ ತಮ್ಮ ಲೋಕಗಳಿಗೆ ತೆರಳಿದ ಅನಂತರದಲ್ಲಿ ಶ್ರೀನಿವಾಸನ ವೇಂಕಟಾಚಲಾ ಗಮನವನ್ನು ವರಾಹರೂಪಿಯಾದ ಹರಿಯು 'ವೈಕುಂಠಲೋಕವನ್ನು ಬಿಟ್ಟು ವೇಂಕಟಾಚಲಕ್ಕೆ ಬರಲು ಕಾರಣವೇನು? ಅದನ್ನು ನನಗೆ ತಿಳಿಸು' ಎಂದು ಪ್ರಶ್ನಿಸಿದನು. (21) ಆಗ ಶ್ರೀನಿವಾಸನು 'ಭೃಗುಮುನಿಯ ಪಾದತಲತಾಡನದಿಂದ ಕೋಪಗೊಂಡ ಲಕ್ಷ್ಮೀದೇವಿಯು ವೈಕುಂಠವನ್ನು ತೊರೆದು ಕೊಲ್ಲಾಪುರಕ್ಕೆ ತೆರಳಿದಳು. ಅವಳ ವಿಯೋಗದಿಂದ ದುಃಖಿತನಾದ ನಾನು ಉತ್ತಮವಾದ ವೈಕುಂಠವನ್ನು ತ್ಯಾಗಮಾಡಿ ಇಲ್ಲಿಯೇ ನಿನ್ನ ಬಲಭಾಗದಲ್ಲಿರುವ ಹುತ್ತಿನ ಬಳಿ ವಾಸವಾಗಿರುವನು. ಇಲ್ಲಿ ನನ್ನನ್ನು ಗೋಪಾಲಕನು ತನ್ನ ಕುಠಾರದಿಂದ ತಾಡನಮಾಡಿದನು. (22) ಆ ಗಾಯಕ್ಕೆ ಔಷಧವನ್ನು ಹುಡುಕುತ್ತಾ ನಾನು

ಕುಠಾರೇಣಾಸಿಧಾರೇಣ ತತ್ಕ್ಷತಂ ಮಾಂ ಪ್ರಬಾಧತೇ ।
ಔಷಧಾರ್ಥಂ ವರಾಹಾತ್ಮನ್ ಗಚ್ಛಾಮೀಹ ನಿರಂತರಮ್ ॥24॥

ದೈವೇನ ದೃಷ್ಟವಾನಸ್ಮಿ ತ್ವಾಮದ್ಯೇಹ ಧರಾಧರಮ್ ।
ಅತ್ರೈವ ನಿವಸಾಮೀತಿ ಸಂಕಲ್ಪೋ ಮಮ ವರ್ತತೇ ॥25॥

ಸ್ಥಲಂ ದೇಹ್ಯವನೀಕಾಂತ ಯಾವತ್ಕಲಿಯುಗಂ ಭವೇತ್' ।
ಇತಿ ತೇನ ಸ ವಿಜ್ಞಪ್ತೋ ವರಾಹವದನೋ ಹರಿಃ ॥26॥

ಉವಾಚ ವಚನಂ 'ದೇವ ಸ್ಥಲಂ ಮೂಲ್ಯೇನ ಗೃಹ್ಯತಾಮ್' ।
ಇತಿ ವಾಕ್ಯಂ ತತಃ ಶ್ರುತ್ವಾ ಪ್ರೋವಾಚ ಮಧುರಂ ವಚಃ ॥27॥

'ಪ್ರಥಮಂ ದರ್ಶನಂ ತೀರ್ಥಂ ನೈವೇದ್ಯಂ ಕ್ಷೀರಸೇಚನಮ್ ।
ಇದಮೇವ ಪರಂ ದ್ರವ್ಯಂ ದದಾಮಿ ಕರುಣಾನಿಧೇ ॥28॥

ದಾಸ್ಯಾಮೀಯತ್ತೇ ಭೂಕಾಂತ ತದಂಗೀಕುರು ಮಾಧವ ।
ವರಂ ದ್ರವ್ಯಮಿದಂ ತಾತ ಕೃಪಾಂ ಕುರು ಕೃಪಾನಿಧೇ' ॥29॥

ಇತ್ಯುಕ್ತೋ ಹರಿಣಾ ಪೋತ್ರೀ ಹರಯೇ ಸ್ಥಾನಕಾಂಕ್ಷಿಣೇ ।
ತದಾ ದದೌ ಹರೇಃ ಪಾದಶತಮಾತ್ರಂ ರಮಾಪತೇಃ ॥30॥

ಪರಸ್ಪರಂ ವಿನೋದೇನ ಕುರ್ವಾಣಾವೇಕರೂಪಿಣೌ ।
ಮೋಹನಾರ್ಥಂ ಹ್ಯಭಕ್ತಾನಾಂ ಭಕ್ತಾನಾಂ ಭಕ್ತಿಸಿದ್ಧಯೇ ॥31॥

ಸಂಚರಿಸುತ್ತಿರುವೆನು' ಎಂದು ತನ್ನ ವೃತ್ತಾಂತವನ್ನಾರಂಭಿಸಿ ಪ್ರಸಕ್ತ ಔಷಧಕ್ಕೋಸ್ಕರವಾಗಿ ವಲ್ಮೀಕದಿಂದ ಹೊರಬಂದ ವೃತ್ತಾಂತದವರೆಗಿನ ಎಲ್ಲ ವೃತ್ತಾಂತವನ್ನು ಶ್ರೀನಿವಾಸನು ವರಾಹನಿಗೆ ತಿಳಿಸಿದನು. (25) ಅಷ್ಟೇ ಅಲ್ಲದೇ ಕಲಿಯುಗದಲ್ಲಿ ಎಲ್ಲಿಯವರೆಗೆ ತಾನು ಭೂಲೋಕದಲ್ಲಿ ವಾಸವಾಗಿರುವನೋ ಅಲ್ಲಿಯವರೆಗೆ ಇರಲಿಕ್ಕೆ ಸ್ಥಾನವನ್ನು ದಯಪಾಲಿಸಲು ಕೇಳಿಕೊಂಡನು. (26) ಆಗ ವರಾಹನು ಮೌಲ್ಯವನ್ನು ಕೊಟ್ಟು ಸ್ಥಳವನ್ನು ಪಡೆಯಲು ತಿಳಿಸಿದನು. (27) ಆಗ ಶ್ರೀನಿವಾಸನು 'ನನ್ನ ಭಕ್ತರಿಂದ ನಿನಗೆ ಪ್ರಥಮದಲ್ಲಿ ದರ್ಶನ, ಕ್ಷೀರಾಭಿಷೇಕ, ನೈವೇದ್ಯ, ತೀರ್ಥಸೇವನೆ, ಇವುಗಳನ್ನೇ ಶ್ರೇಷ್ಠವಾದ ಮೌಲ್ಯವೆಂದು ಪಡೆದು ಆಶ್ರಯವನ್ನು ನೀಡೆಂದು ಕೇಳಿಕೊಂಡನು.(28–29) ಆಗ ವರಾಹದೇವರು ಸ್ಥಾನಕಾಂಕ್ಷಿಯಾದ ಶ್ರೀನಿವಾಸನಿಗೆ ನೂರು ಹೆಜ್ಜೆಗಳ ಆಳತೆಯುಳ್ಳ ಸ್ಥಾನವನ್ನು ಕೊಟ್ಟನು. (30) ಪರಸ್ಪರ ವಿನೋದದಲ್ಲಿ

ಸಂಕ್ರೀಡಾತೇ ವೇಂಕಟೇಶಕ್ರೋಡರೂಪೌ ಸುರೋತ್ತಮೌ ।
ತದಾರಭ್ಯ ಧರಾಕಾಂತೋ ಬಕುಲಾಂ ಪಾಕಕಾರಿಣೀಮ್ ॥32॥

ಅರ್ಪಯಾಮಾಸ ದೇವಾಯ ಸೇವಾರ್ಥಂ ತಾಂ ಧರಾಪತಿಃ ।
ಭೋಜನಾರ್ಥಂ ರಮೇಶಸ್ಯ ಶ್ಯಾಮಾಕಾನ್ನಂ ನಿರಂತರಮ್ ॥33॥

ಸಮಧು ಪ್ರೇಷಯನ್ನಿತ್ಯಂ ತಯಾ ಬಕುಲಮಾಲಯಾ ।
ಸಾ ಬಾಲಾ ಭಕ್ತಿನಿರತಾ ಶ್ರೀನಿವಾಸಸ್ಯ ಸನ್ನಿಧೌ ॥34॥

ಅನ್ನಪಾನೌಷಧಾದ್ಯೈಶ್ಚ ಪಾದಸಂವಾಹನಾದಿಭಿಃ ।
ಪೂಜಯಾಮಾಸ ಗೋವಿಂದಂ ಶ್ರೀನಿವಾಸಂ ನಿರಾಮಯಮ್ ॥35॥

ಋಷಯ ಊಚುಃ-

'ಶ್ರುತಂ ಸೂತ ಮಹಾಭಾಗ ದೇವಾಗಮನಮುತ್ತಮಮ್ ।
ಶ್ರುತಂ ಚ ಶ್ರೀವರಾಹಸ್ಯ ಪ್ರಥಮಂ ದರ್ಶನೇ ಫಲಮ್ ॥36॥

ಶ್ರೀನಿವಾಸಸ್ಯ ಕೃಷ್ಣಸ್ಯ ಕಲ್ಯಾಣಂ ಶುಭದಂ ಮಹತ್ ।
ಪುನಃ ಶ್ರೀವೇಂಕಟಗಿರೌ ವಾಸಃ ಶ್ರೀಶಾರ್ಙ್ಗಧಾರಿಣಃ ॥37॥

ಲೋಕವಿಡಂಬನೆಯನ್ನು ಮಾಡಿದ ಅಗಾಧವಾದ ಪರಮಾತ್ಮನ ರೂಪಗಳಲ್ಲಿಯು ವರಾಹಮೂರ್ತಿಯು ಶ್ರೀನಿವಾಸನಿಗೆ ಔಷಧೋಪಚಾರಕ್ಕಾಗಿ ಮತ್ತು ಪಾಕವನ್ನು ಸಿದ್ಧಪಡಿಸುವದಕ್ಕಾಗಿ, ಸೇವೆಮಾಡುವದಕ್ಕಾಗಿ ಬಕುಲೆಯನ್ನು ಒಪ್ಪಿಸಿದನು. (30-32) ನಿತ್ಯದಲ್ಲಿಯೂ ಭೋಜನಕ್ಕೋಸ್ಕರವಾಗಿ ಸಾಮೆ ಅಕ್ಕಿಯಿಂದ ನಿರ್ಮಿತವಾದ ಅನ್ನವನ್ನು ಜೇನುತುಪ್ಪದಿಂದ ಸಹಿತವಾಗಿ ಊಟಮಾಡಲು ಬಕುಲೆಯ ಮುಖಾಂತರವಾಗಿ ಕಳುಹಿಸಿಕೊಡುತ್ತಿದ್ದನು. ಬಾಲೆಯಾದ ಬಕುಲಾಮಾಲೆಯು ಅತ್ಯಂತ ಭಕ್ತಿಯಿಂದ ಶ್ರೀನಿವಾಸನ ಸನ್ನಿಧಿಯಲ್ಲಿ ಅನ್ನ-ಪಾನ, ಔಷಧಾದಿಗಳಿಂದ ಹಾಗೂ ಪಾದ ಸಂವಹನಾದಿಗಳಿಂದ ನಿರಂತರವಾಗಿ ನಿರಾಮಯನಾದ ಶ್ರೀನಿವಾಸನ ಸೇವೆಮಾಡುತ್ತಿದ್ದಳು. (35)

### ಬಕುಲೆಯ ಪೂರ್ವಜನ್ಮವೃತ್ತಾಂತ

ವೇಂಕಟೇಶ ಮಾಹಾತ್ಮೆಯನ್ನು ಕೇಳಬಯಸಿದ ಋಷಿಗಳು ಸೂತಾಚಾರ್ಯರನ್ನು ಕುರಿತು 'ಹೇ ಮಹಾನುಭಾವರಾದ ಸೂತಾಚಾರ್ಯರೇ! ಭಗವಂತನ ಭೂಲೋಕಾಗಮನಕಾರಣವನ್ನು ಹಾಗೂ ವರಾಹದೇವರಿಗಿರುವ ಆದ್ಯತೆಯನ್ನು ನಮಗೆ ತಿಳಿಸಿದಿರಿ. (36) ಹಾಗೆಯೇ ಕಲ್ಯಾಣಾರ್ಥವಾಗಿಯೇ ಅವತರಿಸಿದ ಶ್ರೀನಿವಾಸನ ವೇಂಕಟಾಚಲದಲ್ಲಿಯ ವಾಸವನ್ನು ತಿಳಿಸುತ್ತಾ

ಬಕುಲಾ ಸೇವಿಕಾ ಪ್ರೋಕ್ತಾ ಕಾ ಸಾ ಪೂರ್ವಂ ವದಸ್ವ ನಃ' ।

ಸೂತ ಉವಾಚ–

ಪುರಾ ಯಶೋದಾ ಬಕುಲಾ ಕೃಷ್ಣಸ್ಯ ಜನನೀ ಹ್ಯಭೂತ್ ॥38॥

ಅದೃಷ್ಟ್ವಾಽನಂತರೂಪಸ್ಯ ಕೃಷ್ಣಸ್ಯ ತನಯಸ್ಯ ಚ ।
ಕಲ್ಯಾಣಾದಿಮಹಾಪುಣ್ಯಂ ತದಾ ಯಾಚತ ತಂ ಹರಿಮ್ ॥39॥

'ಮನಸ್ಸೀದತಿ ಮೇ ಕೃಷ್ಣ ತವ ಕಲ್ಯಾಣ ವೀಕ್ಷಣೇ ।
ದರ್ಶಯಸ್ವ ರಮಾನಾಥ ಯಶೋದಾನಂದವರ್ಧನ ॥40॥

ಕಲ್ಯಾಣಾದಿಮಹಾಪುಣ್ಯಂ ಪಾವನಂ ಚರಿತಂ ತವ' ।
ತಯೇತ್ಯುಕ್ತೋ ರಮಾನಾಥಃ ಸೋಽವದನ್ಮಧುರಂ ವಚಃ ॥41॥

ಶ್ರೀಭಗವಾನುವಾಚ–

'ಜನ್ಮನ್ಯನಂತರೇ ದೇವಿ ತಾವಕೀನಂ ಮನೋರಥಮ್ ।
ಶ್ರೀಶೈಲೇ ಪೂರಯಿಷ್ಯಾಮಿ ಕಂಚಿತ್ಕಾಲಾದನಂತರಮ್' ॥42॥

ದೇವೇನೇತ್ಥಂ ದತ್ತವರಾ ಸಾಽತ್ಯಜತ್ತೇನ ಹೇತುನಾ ।

ಬಕುಲೆಯು ಶ್ರೀನಿವಾಸನ ಸೇವಿಕೆಯೆಂಬುದಾಗಿ ತಿಳಿಸಿದಿರಿ. (37) ಆ ಬಕುಲೆಯು ಯಾರು? ಅವಳ ಪೂರ್ವವೃತ್ತಾಂತವೇನು? ಎಂಬುದನ್ನು ತಿಳಿಸಿರಿ' ಎಂದು ಪ್ರಾರ್ಥಿಸಿದರು. ಇದಕ್ಕುತ್ತರವಾಗಿ ಸೂತರು ಬಕುಲೆಯ ಹಿಂದಿನ ವೃತ್ತಾಂತವನ್ನು ತಿಳಿಸುತ್ತಾರೆ

ದ್ವಾಪರಯುಗದಲ್ಲಿ ಶ್ರೀಕೃಷ್ಣಪರಮಾತ್ಮನ ಸಾಕುತಾಯಿಯಾದ ಯಶೋದಾ ದೇವಿಯೇ ಶ್ರೀನಿವಾಸನ ಸೇವಾನಿರತಳಾದ ಈ ಬಕುಲಾದೇವಿಯು. (38) ಅನಂತರೂಪನಾದ ತನ್ನ ತನಯನಾದ ಶ್ರೀಕೃಷ್ಣನ ಮಹಾ ಪುಣ್ಯಪ್ರದವಾದ ಕಲ್ಯಾಣಾದಿ ಮಹಾ ಉತ್ಸವಗಳನ್ನು ಅವಲೋಕಿಸದ ನಂದಪತ್ನಿಯಾದ ಯಶೋದಾ ಮಾತೆಯು(40) ಕಲ್ಯಾಣಾದಿಮಹಾ ಉತ್ಸವಗಳನ್ನು ನೋಡಬೇಕೆಂಬ ಅಪೇಕ್ಷೆಯಿಂದ 'ಹೇ ಕೃಷ್ಣನೇ! ನಿನ್ನ ಮಂಗಳಕರವಾದ ವಿವಾಹಾದಿ ಉತ್ಸವವನ್ನು ನೋಡಲು ನನ್ನ ಮನಸ್ಸು ಹಾತೊರೆಯುತ್ತಿದೆ. ಅದನ್ನು ನನಗೆ ತೋರಿಸು' ಎಂದು ಕೃಷ್ಣಪರಮಾತ್ಮನನ್ನು ಪ್ರಾರ್ಥಿಸಿದಳು. (42) ಆಗ ಶ್ರೀಕೃಷ್ಣನು 'ನಿನ್ನ ಮನೋರಥವನ್ನು ಮುಂದಿನ ಅವತಾರದಲ್ಲಿ ಶ್ರೀಶೈಲಪರ್ವತದಲ್ಲಿ ಪೂರೈಸುವೆನೆಂಬ ವರವನ್ನು ಕೊಟ್ಟನು. ಅನಂತರದಲ್ಲಿ ಯಶೋದೆಯು ದೇಹತ್ಯಾಗವನ್ನು ಮಾಡಿದಳು. (43) ಆ ಯಶೋದೆಯ ಪ್ರೀತಿಯಗೋಸ್ಕರವಾಗಿ

ಕಲೇವರಂ ತು ಕಲ್ಯಾಣೇ ಯಶೋದಾ ನಂದವಲ್ಲಭಾ ॥43॥

ತಸ್ಯಾಃ ಪ್ರೀತ್ಯೈ ವಾಸುದೇವೋ ಹ್ಯಷ್ಟಾವಿಂಶತಿ ಮೇ ಕಲೌ ।
ಆವಿರ್ಭೂಯ ಯಶೋದಾಯಾಸ್ತೋಷಕೈರ್ಗುಣಕರ್ಮಭಿಃ ॥44॥

ಕ್ರೀಡನ್ನಾಸ್ತೇ ಜಗದ್ಯೋನಿರ್ನಿರ್ದೋಷೋಽಪೀಶ್ವರೋಽಪಿ ಚ ।
ಕಲೌ ಕಲ್ಮಷಚಿತ್ತಾನಾಂ ಪಾಪಾಚಾರಪರಾತ್ಮನಾಮ್ ॥45॥

ರಕ್ಷಣಾರ್ಥಂ ರಮಾಕಾಂತಃ ರಮತೇ ಪ್ರಾಕೃತೋ ಯಥಾ ।
ದೈತ್ಯಾನಾಂ ಮೋಹನಾರ್ಥಾಯ ಸುರಾಣಾಂ ಮುಕ್ತಿಸಿದ್ಧಯೇ ॥46॥

ಸ್ವಭಕ್ತನಾಂ ಹಿತಾಯೈವ ವಿರಕ್ತಾನಾಂ ವಿಶೇಷತಃ ।
ಮುಕ್ತಿಮಾಪಾದಯನ್ ದೇವಃ ಕ್ರೀಡತೇ ಪ್ರಾಕೃತಾಕೃತಿಃ ॥47॥

ಕ್ರೀಡತೇ ಚಾತ್ಮಕೈವಲ್ಯಃ ಜಗತ್ಪಾಲಕಬಾಲಕಃ ।
ಜಗನ್ಮೋಹನಸೌಂದರ್ಯಲೀಲಾಮಾನುಷಮೂರ್ತಿಮಾನ್ ॥48॥

ನ ಕೃತಂ ದೇವಸಂಘೈಶ್ಚ ನ ಕೃತಂ ವಿಶ್ವಕರ್ಮಣಾ ।
ಸ್ವೇಚ್ಛಯಾ ಕ್ರೀಡತೇ ತತ್ರ ಹೀಚ್ಛಾರೂಪವಿರಾಜಿತಃ ॥49॥

ಇತ್ಯೇವಂ ಕಾರಣಾದೇವ ಯಶೋದಾ ಬಕುಲಾಽಭವತ್ ।
ಸಾ ಕರಿಷ್ಯತಿ ಕಲ್ಯಾಣಂ ಹರೇರ್ವೈಕುಂಠವಾಸಿನಃ ॥50॥

ವಾಸುದೇವನು 28ನೇ ಕಲಿಯುಗದಲ್ಲಿ ವೇಂಕಟಾಚಲದಲ್ಲಿ ಆವಿರ್ಭೂತನಾಗಿ, ಯಶೋದೆಗೆ ಸಂತುಷ್ಟಿಕರವಾದ ಗುಣ-ಕರ್ಮಗಳಿಂದ ಸಾಧಾರಣ ಮನುಷ್ಯನಂತೆ ವರ್ತಿಸುತ್ತಿರುವನು. (44) ಸಕಲ,ದೋಷ ವಿದೂರನೂ, ಸಕಲ ಜಗನ್ನಿಯಾಮಕನೂ ಸಹ ಆಗಿರುವ ಶ್ರೀನಿವಾಸನು ಕಲಿಯುಗದಲ್ಲಿ ಕಲ್ಮಷಮನಸ್ಕರಾದ, ಪಾಪಾಚಾರ ಪರರಾದ ಮನುಷ್ಯರ ರಕ್ಷಣಾರ್ಥವಾಗಿ, (45) ಭಕ್ತರ ಕ್ಷೇಮಾರ್ಥವಾಗಿ ಮತ್ತು ದೈತ್ಯರ ಮೋಹನಾರ್ಥವಾಗಿ ವಿಶೇಷತಃ ವಿರಕ್ತರಾದ ಜ್ಞಾನಿಗಳಿಗೆ ಮುಕ್ತಿಯನ್ನೊದಗಿಸುವದಕ್ಕಾಗಿ ವೇಂಕಟಾಚಲದಲ್ಲಿ ಪ್ರಾಕೃತ ಮಾನವರಂತೆ ಕ್ರಿಡಿಸುತ್ತಿರುವನು. (46) ದೇವತೆಗಳ ಮೋಕ್ಷಾರ್ಥವಾಗಿ ತಾಮಸಿಗಳ ನರಕಾರ್ಥವಾಗಿ ವೇಂಕಟಾಚಲದಲ್ಲಿ ಶ್ರೀನಿವಾಸನು ಸ್ವೇಚ್ಛಾನುಸಾರವಾಗಿ ವಿನೋದಿಸುತ್ತಿರುವನು. (47) ಇಂತಹ ಸ್ವರಮಣನಾದ, ಚತುರ್ಮುಖಾದಿಗಳ ಜನಕನಾದ ಶ್ರೀನಿವಾಸನನ್ನು ಸೃಷ್ಟಿಸಿದವರಾರೂ ಇಲ್ಲ. (48) ಈ ಪರಮಾತ್ಮನು ತಂದೆ-ತಾಯಿಗಳಿಂದಾಗಲೀ, ವಿಶ್ವಕರ್ಮನಿಂದಾಗಲೀ ಸೃಷ್ಟವಾಗಿಲ್ಲ. ಕೇವಲ ಇಚ್ಛಾಮಾತ್ರದಿಂದಲೇ ತನ್ನ ರೂಪಗಳನ್ನು ಸ್ವೀಕರಿಸಿರುವನು. (49) ಇಂತಹ

ಬಕುಲಾ ಸೇವಿಕಾ ಪ್ರೋಕ್ತಾ ಕಾ ಸಾ ಪೂರ್ವಂ ವದಸ್ವ ನಃ' ।

ಸೂತ ಉವಾಚ–

ಪುರಾ ಯಶೋದಾ ಬಕುಲಾ ಕೃಷ್ಣಸ್ಯ ಜನನೀ ಹ್ಯಭೂತ್ ॥38॥

ಅದೃಷ್ಟ್ವಾಽನಂತರೂಪಸ್ಯ ಕೃಷ್ಣಸ್ಯ ತನಯಸ್ಯ ಚ ।
ಕಲ್ಯಾಣಾದಿಮಹಾಪುಣ್ಯಂ ತದಾ ಯಾಚತ ತಂ ಹರಿಮ್ ॥39॥

'ಮನಸ್ಸೀದತಿ ಮೇ ಕೃಷ್ಣ ತವ ಕಲ್ಯಾಣ ವೀಕ್ಷಣೇ ।
ದರ್ಶಯಸ್ವ ರಮಾನಾಥ ಯಶೋದಾನಂದವರ್ಧನ ॥40॥

ಕಲ್ಯಾಣಾದಿಮಹಾಪುಣ್ಯಂ ಪಾವನಂ ಚರಿತಂ ತವ' ।
ತಯೇತ್ಯುಕ್ತೋ ರಮಾನಾಥಃ ಸೋಽವದನ್ಮಧುರಂ ವಚಃ ॥41॥

ಶ್ರೀಭಗವಾನುವಾಚ–

'ಜನ್ಮನ್ಯನಂತರೇ ದೇವಿ ತಾವಕೀನಂ ಮನೋರಥಮ್ ।
ಶ್ರೀಶೈಲೇ ಪೂರಯಿಷ್ಯಾಮಿ ಕಂಚಿತ್ಕಾಲಾದನಂತರಮ್' ॥42॥

ದೇವೇನೇತ್ಥಂ ದತ್ತವರಾ ಸಾಽತ್ಯಜತ್ತೇನ ಹೇತುನಾ ।

ಬಕುಲೆಯು ಶ್ರೀನಿವಾಸನ ಸೇವಿಕೆಯೆಂಬುದಾಗಿ ತಿಳಿಸಿದಿರಿ. (37) ಆ ಬಕುಲೆಯು ಯಾರು? ಅವಳ ಪೂರ್ವವೃತ್ತಾಂತವೇನು? ಎಂಬುದನ್ನು ತಿಳಿಸಿರಿ' ಎಂದು ಪ್ರಾರ್ಥಿಸಿದರು. ಇದಕ್ಕುತ್ತರವಾಗಿ ಸೂತರು ಬಕುಲೆಯ ಹಿಂದಿನ ವೃತ್ತಾಂತವನ್ನು ತಿಳಿಸುತ್ತಾರೆ

ದ್ವಾಪರಯುಗದಲ್ಲಿ ಶ್ರೀಕೃಷ್ಣಪರಮಾತ್ಮನ ಸಾಕುತಾಯಿಯಾದ ಯಶೋದಾ ದೇವಿಯೇ ಶ್ರೀನಿವಾಸನ ಸೇವಾನಿರತಳಾದ ಈ ಬಕುಲಾದೇವಿಯು. (38) ಅನಂತರೂಪನಾದ ತನ್ನ ತನಯನಾದ ಶ್ರೀಕೃಷ್ಣನ ಮಹಾ ಪುಣ್ಯಪ್ರದವಾದ ಕಲ್ಯಾಣಾದಿ ಮಹಾ ಉತ್ಸವಗಳನ್ನು ಅವಲೋಕಿಸದ ನಂದಪತ್ನಿಯಾದ ಯಶೋದಾ ಮಾತೆಯು(40) ಕಲ್ಯಾಣಾದಿಮಹಾ ಉತ್ಸವಗಳನ್ನು ನೋಡಬೇಕೆಂಬ ಅಪೇಕ್ಷೆಯಿಂದ 'ಹೇ ಕೃಷ್ಣನೇ! ನಿನ್ನ ಮಂಗಳಕರವಾದ ವಿವಾಹಾದಿ ಉತ್ಸವವನ್ನು ನೋಡಲು ನನ್ನ ಮನಸ್ಸು ಹಾತೊರೆಯುತ್ತಿದೆ. ಅದನ್ನು ನನಗೆ ತೋರಿಸು' ಎಂದು ಕೃಷ್ಣಪರಮಾತ್ಮನನ್ನು ಪ್ರಾರ್ಥಿಸಿದಳು. (42) ಆಗ ಶ್ರೀಕೃಷ್ಣನು 'ನಿನ್ನ ಮನೋರಥವನ್ನು ಮುಂದಿನ ಅವತಾರದಲ್ಲಿ ಶ್ರೀಶೈಲಪರ್ವತದಲ್ಲಿ ಪೂರೈಸುವೆನೆಂಬ ವರವನ್ನು ಕೊಟ್ಟನು. ಅನಂತರದಲ್ಲಿ ಯಶೋದೆಯು ದೇಹತ್ಯಾಗವನ್ನು ಮಾಡಿದಳು. (43) ಆ ಯಶೋದೆಯ ಪ್ರೀತಿಯಗೋಸ್ಕರವಾಗಿ

ಕಲೇವರಂ ತು ಕಲ್ಯಾಣೇ ಯಶೋದಾ ನಂದವಲ್ಲಭಾ ॥43॥

ತಸ್ಯಾಃ ಪ್ರೀತ್ಯೈ ವಾಸುದೇವೋ ಹ್ಯಷ್ಟಾವಿಂಶತಿ ಮೇ ಕಲೌ ।
ಆವಿರ್ಭೂಯ ಯಶೋದಾಯಾಸ್ತೋಷಕೈರ್ಗುಣಕರ್ಮಭಿಃ ॥44॥

ಕ್ರೀಡನ್ನಾಸ್ತೇ ಜಗದ್ಯೋನಿರ್ನಿರ್ದೋಷೋಽಪೀಶ್ವರೋಽಪಿ ಚ ।
ಕಲೌ ಕಲ್ಮಷಚಿತ್ತಾನಾಂ ಪಾಪಾಚಾರಪರಾತ್ಮನಾಮ್ ॥45॥

ರಕ್ಷಣಾರ್ಥಂ ರಮಾಕಾಂತಃ ರಮತೇ ಪ್ರಾಕೃತೋ ಯಥಾ ।
ದೈತ್ಯಾನಾಂ ಮೋಹನಾರ್ಥಾಯ ಸುರಾಣಾಂ ಮುಕ್ತಿಸಿದ್ಧಯೇ ॥46॥

ಸ್ವಭಕ್ತನಾಂ ಹಿತಾಯೈವ ವಿರಕ್ತಾನಾಂ ವಿಶೇಷತಃ ।
ಮುಕ್ತಿಮಾಪಾದಯನ್ ದೇವಃ ಕ್ರೀಡತೇ ಪ್ರಾಕೃತಾಕೃತಿಃ ॥47॥

ಕ್ರೀಡತೇ ಚಾತ್ಮಕೈವಲ್ಯಃ ಜಗತ್ಪಾಲಕಬಾಲಕಃ ।
ಜಗನ್ಮೋಹನಸೌಂದರ್ಯಲೀಲಾಮಾನುಷಮೂರ್ತಿಮಾನ್ ॥48॥

ನ ಕೃತಂ ದೇವಸಂಘೈಶ್ಚ ನ ಕೃತಂ ವಿಶ್ವಕರ್ಮಣಾ ।
ಸ್ವೇಚ್ಛಯಾ ಕ್ರೀಡತೇ ತತ್ರ ಹೀಚ್ಛಾರೂಪವಿರಾಜಿತಃ ॥49॥

ಇತ್ಯೇವಂ ಕಾರಣಾದೇವ ಯಶೋದಾ ಬಕುಲಾಽಭವತ್ ।
ಸಾ ಕರಿಷ್ಯತಿ ಕಲ್ಯಾಣಂ ಹರೇರ್ವೈಕುಂಠವಾಸಿನಃ ॥50॥

ವಾಸುದೇವನು 28ನೇ ಕಲಿಯುಗದಲ್ಲಿ ವೇಂಕಟಾಚಲದಲ್ಲಿ ಆವಿರ್ಭೂತನಾಗಿ, ಯಶೋದೆಗೆ ಸಂತುಷ್ಟಿಕರವಾದ ಗುಣ-ಕರ್ಮಗಳಿಂದ ಸಾಧಾರಣ ಮನುಷ್ಯನಂತೆ ವರ್ತಿಸುತ್ತಿರುವನು. (44) ಸಕಲ,ದೋಷ ವಿದೂರನೂ, ಸಕಲ ಜಗನ್ನಿಯಾಮಕನೂ ಸಹ ಆಗಿರುವ ಶ್ರೀನಿವಾಸನು ಕಲಿಯುಗದಲ್ಲಿ ಕಲ್ಮಷಮನಸ್ಕರಾದ, ಪಾಪಾಚಾರ ಪರರಾದ ಮನುಷ್ಯರ ರಕ್ಷಣಾರ್ಥವಾಗಿ, (45) ಭಕ್ತರ ಕ್ಷೇಮಾರ್ಥವಾಗಿ ಮತ್ತು ದೈತ್ಯರ ಮೋಹನಾರ್ಥವಾಗಿ ವಿಶೇಷತಃ ವಿರಕ್ತರಾದ ಜ್ಞಾನಿಗಳಿಗೆ ಮುಕ್ತಿಯನ್ನೊದಗಿಸುವದಕ್ಕಾಗಿ ವೇಂಕಟಾಚಲದಲ್ಲಿ ಪ್ರಾಕೃತ ಮಾನವರಂತೆ ಕ್ರಿಡಿಸುತ್ತಿರುವನು. (46) ದೇವತೆಗಳ ಮೋಕ್ಷಾರ್ಥವಾಗಿ ತಾಮಸಿಗಳ ನರಕಾರ್ಥವಾಗಿ ವೇಂಕಟಾಚಲದಲ್ಲಿ ಶ್ರೀನಿವಾಸನು ಸ್ವೇಚ್ಛಾನುಸಾರವಾಗಿ ವಿನೋದಿಸುತ್ತಿರುವನು. (47) ಇಂತಹ ಸ್ವರಮಣನಾದ, ಚತುರ್ಮುಖಾದಿಗಳ ಜನಕನಾದ ಶ್ರೀನಿವಾಸನನ್ನು ಸೃಷ್ಟಿಸಿದವರಾರೂ ಇಲ್ಲ. (48) ಈ ಪರಮಾತ್ಮನು ತಂದೆ-ತಾಯಿಗಳಿಂದಾಗಲೀ, ವಿಶ್ವಕರ್ಮನಿಂದಾಗಲೀ ಸೃಷ್ಟವಾಗಿಲ್ಲ. ಕೇವಲ ಇಚ್ಛಾಮಾತ್ರದಿಂದಲೇ ತನ್ನ ರೂಪಗಳನ್ನು ಸ್ವೀಕರಿಸಿರುವನು. (49) ಇಂತಹ

ಕಿಮಲಭ್ಯಾ ಹರೌ ತುಷ್ಟೇ ಜ್ಞಾನವಿಜ್ಞಾನಸಂಪದಃ ।
ಕಶ್ಚಿದ್ದೇವಂ ಪೂಜಯತಿ ಕಶ್ಚಿದ್ದೇವೇನ ಪೂಜ್ಯತೇ ॥51॥

ಹನೂಮತಾ ಪೂಜಿತೋಽಪಿ ಸ್ವಯಮರ್ಜುನಮರ್ಚತಿ ।
ಕೋ ವರ್ಣಯೇದ್ಧರೇಃ ಕ್ರೀಡಾಂ ವಿಚಿತ್ರಾಂ ಜನಪಾವನೀಮ್ ॥52॥

ನಿತ್ಯಶುದ್ಧಸ್ಯ ವೈ ವಿಷ್ಣೋರ್ಯದಮುಷ್ಯಾಭಿವಂದನೇ ।
ಕೃತೇ ಪುಣ್ಯಮೃಷೀಣಾಮಪ್ಯಕೃತೇ ದೋಷಸಂಗ್ರಹಃ ॥53॥

ತಸ್ಮಾತ್ಪೂಜ್ಯಃ ಸುರೈರ್ಯಜ್ಞೈಃ ಋಷಿಭಿಸ್ತತ್ರ ಕೋವಿದೈಃ ।
ಪಿತೃಭಿರ್ಭೂಮಿಪೈರ್ವಿಪ್ರೈಃ ಮಾನವೈಃ ರಾಕ್ಷಸೈರ್ಜಡೈಃ ॥54॥

ಕಲೌ ಕಲುಷಚಿತ್ತಾನಾಂ ಪಾಪಾಚಾರರತಾತ್ಮನಾಮ್ ।
ರಕ್ಷಣಾರ್ಥಂ ರಮಕಾಂತೋ ರಮತೇ ಪ್ರಾಕೃತೋ ಯಥಾ ॥55॥

ನಿರ್ದುಷ್ಟಾನಂದ ಸ್ವರೂಪನಾದ ಭಗವಂತನ ಅನುಗ್ರಹದಗೋಸ್ಕರವಾಗಿ ಯಶೋದೆಯು ಬಕುಲೆಯಾಗಿ ಜನಿಸಿ ಪರಮಾತ್ಮನ ವಿವಾಹ ಮಹೋತ್ಸವವನ್ನು ಮಾಡಿಸುವಳು. (50) ಪರಮಾತ್ಮನು ಸಂತೋಷಗೊಂಡಲ್ಲಿ ದೊರೆಯದಿರುವ ಜ್ಞಾನವಿಜ್ಞಾನಾದಿ ಸಂಪತ್ತುಗಳಾದರೂ ಯಾವವು? (ಎಲ್ಲವೂ ದೊರಕುವವು). ಪರಮಾತ್ಮನ ವೈಭವವೆಂದರೆ ಕೆಲವರು ಪರಮಾತ್ಮನನ್ನು ಪೂಜಿಸುತ್ತಾರ ಮತ್ತೆ ಕೆಲವರು ಪರಮಾತ್ಮನಿಂದಲೇ ಪೂಜಿಸಿಗೊಳ್ಳಲ್ಪಡುತ್ತಾರೆ. (51) ಅ ಹನುಮಂತನಿಂದ ರಾಮಚಂದ್ರದೇವರು ಪೂಜಿಸಿಕೊಳ್ಳಲ್ಪಟ್ಟವರಾದರೂ ಸಹ ಸ್ವಯಂ ಶ್ರೀಕೃಷ್ಣಪರಮಾತ್ಮನೇ ಸಾರಥಿಯಾಗಿ ಅರ್ಜುನನನ್ನು ಅರ್ಚಿಸುತ್ತಾನೆ. ಈ ರೀತಿಯಾಗಿ ಸಜ್ಜನರಿಗೆ ಪಾವಿತ್ರ್ಯವನ್ನುಂಟುಮಾಡುವ, ದುರ್ಜನರಿಗೆ ಪಾಪವನ್ನು ತಂದುಕೊಡುವ ಪರಮಾತ್ಮನ ವಿಚಿತ್ರ ಕ್ರೀಡಾವಿಧಾನವನ್ನು ಯಾರು ತಾನೆ ವರ್ಣಿಸಲು ಸಮರ್ಥರಾದಾರು? (52) ನಿತ್ಯಶುದ್ಧನಾದ ಪರಮಾತ್ಮನಿಗೆ ನಿತ್ಯದಲ್ಲಿ ನಮನ ಸ್ತೋತ್ರಪಾರಾಯಣಾದಿಗಳಿಂದ ಋಷ್ಯಾದಿ ಭಕ್ತಜನರಿಗೆ ಪುಣ್ಯಾಭಿವೃದ್ಧಿಯಾಗುವದು. ಇವುಗಳಲ್ಲಿ ಅನಾಸಕ್ತರಾದ ದುರ್ಜನರಿಗೆ ನಿಶ್ಚಿತವಾಗಿಯೂ ದೋಷವುಂಟಾಗುವದು. (53) ಆದ್ದರಿಂದ ಅವರವರ ಯೋಗ್ಯತಾನುಸಾರವಾಗಿ ಯಜ್ಞಗಳ ಮುಖಾಂತರವಾಗಿ ಋಷಿಗಳಿಂದ, ದೇವತೆಗಳಿಂದ, ಪಿತೃಗಳಿಂದ, ಪಂಡಿತರಿಂದ, ರಾಜರುಗಳಿಂದ, ವಿದ್ವಾಂಸರಾದ ಬ್ರಾಹ್ಮಣರಿಂದ, ಮಾನವರಿಂದ ರಾಕ್ಷಸರಿಂದ ಪ್ರಜ್ಞಾಶೂನ್ಯರಾದ ಜನರಿಂದಲೂ ಸಹ ಪರಮಾತ್ಮನು ಪೂಜ್ಯನಾಗಿರುವನು. (54) ಕಲಿಯುಗದಲ್ಲಿ ಕಲಿಕಲ್ಮಷದಿಂದ ಅಶುದ್ಧವಾದ ಮನಸ್ಸಿನಿಂದ ಕೂಡಿದವರೂ, ಪಾಪಾಚಾರಗಳಲ್ಲಿ ಆಸಕ್ತವಾದ ಮನಸ್ಸುಳ್ಳ ಸಜ್ಜನರ ರಕ್ಷಣಾರ್ಥವಾಗಿ

ಕ್ಷೇತ್ರಸ್ಯ ಮಹಿಮಾ ದಿವ್ಯಃ ತಥಾ ತೀರ್ಥಸ್ಯ ವೈಭವಃ ।
ತತ್ರ ಸಾಕ್ಷಾದ್ರಮಾಕಾಂತಃ ಕಿಂ ತತ್ರ ಸುಕೃತಂ ಫಲಮ್ ॥56॥

ಬಹುಜನ್ಮಾರ್ಜಿತೈಃ ಪುಣ್ಯೈರ್ಲಭತೇ ಕ್ಷೇತ್ರದರ್ಶನಮ್ ।
ತತ್ರಾಪಿ ವೇಂಕಟಗಿರೇರ್ದರ್ಶನಂ ಮುಕ್ತಿದಂ ಪರಮ್ ॥

ದುರ್ಲಭಂ ದೇವಸಂಘಾನಾಂ ಮನುಷ್ಯಾಣಾಂ ತು ಕಾ ಕಥಾ ॥57॥

॥ ಇತಿ ಶ್ರೀಭವಿಷ್ಯೋತ್ತರಪುರಾಣೇ ಶ್ರೀವೇಂಕಟಗಿರಿಮಾಹಾತ್ಮ್ಯೇ ವರಾಹದರ್ಶನಂ ಬಕುಲಾಲಾಭೋ ನಾಮ ಪಂಚಮೋಽಧ್ಯಾಯಃ ॥

* * *

ಲಕ್ಷ್ಮೀಪತಿಯಾದ ನಾರಾಯಣನು ಪ್ರಾಕೃತರಂತೆ ವರ್ತಿಸುತ್ತಿರುವನು. (55) ಇಂತಹ ಪರಮಾತ್ಮನ ವೇಂಕಟಾಚಲ ಕ್ಷೇತ್ರದ ಮಹಿಮೆಯು ದಿವ್ಯವಾಗಿದೆ. ಅಲ್ಲಿಯ ಸ್ವಾಮಿಪುಷ್ಕರಿಣೀ ತೀರ್ಥದ ವೈಭವವೂ ಸಹ ಅಸದೃಶವಾಗಿದೆ. ಇದು ಬಹುಕಾಲದ ಪುಣ್ಯದ ಫಲವಾಗಿರುವದು. ಬಹುಜನ್ಮದ ಸುಕೃತದಿಂದ ಇಂತಹ ಪವಿತ್ರಕ್ಷೇತ್ರದ ದರ್ಶನವಾಗಿ ಅಧಿಕಾರಿಗಳು ಮುಕ್ತಿಯನ್ನೂ ಸಹ ಭಗವದನುಗ್ರಹದಿಂದ ಸಂಪಾದಿಸುವರೆಂಬ ವಿಷಯದಲ್ಲಿ ಯಾವ ಸಂಶಯವೂ ಇಲ್ಲ.

ಇಲ್ಲಿಗೆ ಶ್ರೀಭವಿಷ್ಯೋತ್ತರಪುರಾಣದಲ್ಲಿಯ ವೇಂಕಟಗಿರಿಮಾಹಾತ್ಮ್ಯದಲ್ಲಿ **ವರಾಹ ದರ್ಶನ ಮತ್ತು ಬಕುಲಾಲಾಭ** ವೆಂಬ ಐದನೆಯ ಅಧ್ಯಾಯವು ಸಮಾಪ್ತವಾಯಿತು.

* * *

ಅಥ ಶ್ರೀಭವಿಷ್ಯೋತ್ತರಪುರಾಣೇ ವೇಂಕಟೇಶಮಾಹಾತ್ಮ್ಯೇ

## ಷಷ್ಠೋಽಧ್ಯಾಯಃ

ಸೂತ ಉವಾಚ–

ಕದಾಚಿದ್ವೇಂಕಟೇಶಸ್ತು ಚಿಂತಯಾಮಾಸ ವೈ ಹಯಮ್ ।
ಮನಸಾ ಚಿಂತ್ಯಮಾನೇ ತು ಹಯಃ ಪ್ರತ್ಯಕ್ಷಮಾಗತಃ ॥1॥

ವಾಯುರಶ್ವತ್ವಮಾಪನ್ನೋ ರಜ್ಜುಸ್ತತ್ತ್ವಾಭಿಮಾನಿನೀ ।
ಉಪಾಸರ್ಪತ್ತ್ವಯಂ ಲಕ್ಷ್ಮೀಸ್ತತೋಽಶ್ವಂ ತಂ ಸ ಪೂಜಯತ್ ॥2॥

ಹಯೋಪರಿ ಸಮಾಸ್ಥಾಯ ಸರ್ವಾಭರಣಭೂಷಿತಃ ।
ಕಾಂಚೀಂ ಬಧ್ವಾ ರಮಾಕಾಂತಃ ಕಾಂಚೀದಾಮ ವಿರಾಜಿತಃ ॥3॥

ಶುಭ್ರವಸ್ತ್ರಂ ಪಂಚದಶಹಸ್ತಂ ಬಿಭ್ರತ್ತಥೋಪರಿ ।
ಶುಭ್ರವರ್ಣಂ ಚೋತ್ತರೀಯಂ ಪಂಚಹಸ್ತಂ ತಥಾ ದಧತ್ ॥4॥

ಆದರ್ಶ್ಯಾಲೋಕಿತೇ ವಕ್ತ್ರೇ ಧೃತ್ವಾ ಶುಭ್ರಾಂ ಚ ಮೃತ್ತಿಕಾಮ್ ।
ತನ್ಮಧ್ಯೇ ಕುಂಕುಮಸ್ಯಾಪಿ ತಿಲಕಂ ಸುಮನೋಹರಮ್ ॥5॥

## ಆರನೆಯ ಅಧ್ಯಾಯ

ಮೃಗಯಾರ್ಥವಾಗಿ ಹೊರಟ ಶ್ರೀನಿವಾಸನ ವರ್ಣನೆ

ವೇಂಕಟಾಚಲಕ್ಕೆ ಒಡೆಯನಾದ ಶ್ರೀನಿವಾಸನು ಒಂದು ದಿನ ಮನಸ್ಸಿನಿಂದ ಕುದುರೆಯನ್ನು ಯೋಚಿಸಿದನು ತತ್ಕ್ಷಣ ವಾಯುದೇವರೇ ಕುದುರೆಯಾಗಿ ಬಂದನು. (1) ಸಕಲತತ್ತ್ವಾಭಿಮಾನಿ ನಿಯಾಮಕಳಾದ ಲಕ್ಷ್ಮೀದೇವಿಯು ಹಗ್ಗದ ರೂಪದಿಂದ ಆವಿರ್ಭವಿಸಿದಳು. ಕುದುರೆಯನ್ನು ಪ್ರಯಾಣಕ್ಕೆ ಸಿದ್ಧಪಡಿಸಿ ಅಲಂಕರಿಸಿದ ಶ್ರೀನಿವಾಸನು ತಾನೂ ಸಹ ಸಕಲಾಭರಣಗಳಿಂದ ಭೂಷಿತನಾದನು. (2–3) ಟೊಂಕಕ್ಕೆ ಸುವರ್ಣಮಯ ಪಟ್ಟಿಯನ್ನು ಬಂಧನಮಾಡಿಕೊಂಡು, ಬಂಗಾರದ ಉಡುದಾರದಿಂದ ವಿರಾಜಿತನಾಗಿ, ಹದಿನೈದು ಮೊಳ ಉದ್ದವಾದ ಶುಭ್ರವಾದ ವಸ್ತ್ರವನ್ನು ಉಟ್ಟು ಐದು ಮೊಳ ಉದ್ದದ ಉತ್ತರೀಯವನ್ನು ತೊಟ್ಟುಕೊಂಡನು (4) ಕನ್ನಡಿಯಲ್ಲಿ ತನ್ನಮುಖವನ್ನು ನೋಡಿಕೊಂಡು ಶುಭಕರವಾದ ಊರ್ಧ್ವಪುಂಡ್ರವನ್ನು ಧಾರಣಮಾಡಿ ಅದರ

ಸಪೂಗೀಫಲತಾಂಬೂಲಂ ಚೂರ್ಣನಿಕ್ಷೇಪಪಾತ್ರಕಮ್ ।
ಕರ್ಪೂರವಾಸಿತೈಃ ಪೂಗಕಾಚೈರ್ಜಾತೀಫಲೈಃ ಶುಭೈಃ ॥6॥

ಲವಂಗೈಃ ಪತ್ರಸಮ್ಮಿಶ್ರೈರ್ಗರ್ಭಿತಾಂ ರತ್ನಪೇಟಿಕಾಮ್ ।
ಆದರ್ಶಂ ಮೃತ್ತಿಕಾಂ ಶುಭ್ರಾಂ ತಥಾ ಕುಂಕುಮ ಭಾಜನಮ್ ॥7॥

ಸ್ವರ್ಣನಿರ್ಮಿತವಸ್ತ್ರೇಣ ಬಧ್ವಾ ತು ಕಟಿಮಧ್ಯತಃ ।
ಸ್ವರ್ಣಯಜ್ಞೋಪವೀತಾಂಗಃ ಕಂಠಾಭರಣಭೂಷಿತಃ ॥8॥

ಕಂಕಣಾಂಕಿತದೋರ್ಭ್ಯಾಂ ವೈ ಸಂಪೂರ್ಣವರಗಾತ್ರಕಃ ।
ಭುಜಕೀರ್ತ್ಯಾ ರತ್ನಮಯ್ಯಾ ರಾಜಮಾನೋಽಂಗುಲೀಯಕೈಃ ॥9॥

ಕುಂಕುಮಾಕ್ತಸುಗಂಧೇನ ಲಿಪ್ತೋರೋಬಾಹುರಂಜಿತಃ ।
ಕಬರೀಕೃತಕೇಶೇಷು ರಕ್ತವಸ್ತ್ರಂ ಸುವೇಷ್ಟ್ಯ ಚ ॥10॥

ಲಂಬಿತೈಃ ಪುಷ್ಪಜಾಲೈಶ್ಚ ಸ್ಕಂಧಗೈಃ ಪರಿಭೂಷಿತಃ ।
ಸುವರ್ಣರತ್ನಸಂಬದ್ಧಪಾದುಕಾಗೂಹಿತಾಂಘ್ರಿಕಃ ॥11॥

ಧನುರ್ಬಾಣಧರಃ ಶ್ರೀಮಾನ್ ಸಾಕ್ಷಾನ್ಮನ್ಮಥಮನ್ಮಥಃ ।
ಏವಂ ಮನೋಹರಂ ರೂಪಂ ಧೃತ್ವಾ ಶ್ರೀವೇಂಕಟೇಶ್ವರಃ ॥12॥

ಮಧ್ಯದಲ್ಲಿ ಕುಂಕುಮದ ತಿಲಕವನ್ನಿಟ್ಟುಕೊಂಡು, (5) ಪೂಗೀಫಲ, ತಾಂಬೂಲ, ಸುಣ್ಣ, ಪಚ್ಚಕರ್ಪೂರ, ಅಡಿಕೆ, ಕಾಚು, ಜಾಜೀಕಾಯಿ, ಲವಂಗ, ಪತ್ರಿ ಇವುಗಳನ್ನು ರತ್ನಖಚಿತವಾದ ಪೆಟ್ಟಿಗೆಯಲ್ಲಿಟ್ಟುಕೊಂಡು ಕುಂಕುಮ ಮತ್ತು ಶುಭ್ರಮೃತ್ತಿಕೆಯುಳ್ಳ ಸುವರ್ಣದ ಭರಣಿಯನ್ನು ಸ್ವರ್ಣನಿರ್ಮಿತವಾದ ವಸ್ತ್ರದಲ್ಲಿ ಕಟ್ಟಿಕೊಂಡು, ಚಿನ್ನದ ಯಜ್ಞೋಪವೀತ, ಕಂಠಾಭರಣಗಳಿಂದ ಭೂಷಿತನಾಗಿ, (6–8) ಚಿನ್ನದ ಕಡಗಗಳನ್ನು ಕೈಗಳಲ್ಲಿ ಧರಿಸಿ, ರತ್ನಮಯವಾದ ಭುಜಕೀರ್ತಿ, ಉಂಗುರಗಳಿಂದ ವಿರಾಜಿತನಾಗಿ, (9) ಸುಗಂಧದ್ರವ್ಯದಿಂದ ಲೇಪಿಸಲ್ಪಟ್ಟ ಅವಯವಗಳುಳ್ಳವನಾಗಿ, ತಲೆಕೂದಲು ಗಳನ್ನು ಕೂಡಿಸಿ ಕಟ್ಟಿ, ಕೆಂಪುರುಮಾಲನ್ನು ತೊಟ್ಟು, (10) ಲಂಬಿತವಾದ ಪುಷ್ಪಜಾಲಗಳಿಂದ ಅಲಂಕೃತವಾದ ಸ್ಕಂದವುಳ್ಳವನಾಗಿ ಸುವರ್ಣ–ರತ್ನಗಳಿಂದ ಶೋಭಿತವಾದ ಪಾದುಕೆಗಳನ್ನು ಧರಿಸಿ (11) ಸಾಕ್ಷಾತ್ ಮನ್ಮಥನಿಗಿಂತಲೂ ಮನ್ಮಥನಾದ ಶ್ರೀನಿವಾಸನು ಈ ರೀತಿಯಾದ ಮನೋಹರ ರೂಪವನ್ನು ತೆಗೆದುಕೊಂಡು, ಧನುರ್ಬಾಣಧಾರಿಯಾಗಿ ಸಾಕ್ಷಾತ್ ಮನ್ಮಥನನ್ನು ಮೀರಿಸುವ ಸೌಂದರ್ಯವುಳ್ಳವನಾಗಿ ಮನ್ಮಥ ಜನಕನಾದ ಪರಮಾತ್ಮನು ಕಂಗೊಳಿಸಿದನು. (12) ರತ್ನಮಯವಾದ ಸಾಮಗ್ರಿಗಳಿಂದ ಭೂಷಿತವಾದ ಸುವರ್ಣತಿಲಕದಿಂದ

ಹಯಂ ರತ್ನಸಮಾಕೀರ್ಣೈರುಪಬರ್ಹೈರ್ವಿಭೂಷಿತಮ್ ।
ಸುವರ್ಣತಿಲಕಾಯುಕ್ತಂ ವಾಯುವೇಗಂ ಮನೋಜವಮ್ ॥13॥

ನೀಲವರ್ಣಂ ಪಾಂಡುಪಾದಂ ಹಸ್ತಪಂಚದಶೋನ್ನತಮ್ ।
ಆರುಹ್ಯ ದೇವಮಣ್ಯಾದಿಸರ್ವಲಕ್ಷಣಸಂಯುತಮ್ ॥14॥

ಅವರುಹ್ಯ ಗಿರಿಶ್ರೇಷ್ಠಾನ್ಮೃಗಯಾರ್ಥಂ ಜಗಾಮ ಸಃ ।
ಮೃಗಾನ್ಬಹುವಿಧಾಕಾರಾನ್ ಸಿಂಹಶಾರ್ದೂಲಜಂಬುಕಾನ್ ॥15॥

ಮಾತಂಗಾನ್ ಶರಭಾನ್ಘೋರಾನೇಣಾನ್ವೈ ಮಹಿಷಾನಪಿ ।
ಜಘಾನ ವಿಪಿನೇ ದೇವಃ ಸಂಚರನ್ ಸ ಇತಸ್ತತಃ ॥16॥

ತತ್ರೈಕಂ ಹಸ್ತಿನಂ ದೃಷ್ಟ್ವಾ ಮದಮತ್ತಂ ವನೇಚರಮ್ ।
ತಂ ಹಂತುಮಗಮತ್ತೃಷ್ಣಮನುಸೃತ್ಯ ರಮಾಪತಿಃ ॥17॥

ಸ ಜಗಾಮ ವನೇ ದೂರಂ ಭಯಾದ್ಭೀತೋ ವೃಷಾಕಪೇಃ ।
ಯೋಜನಂ ಸಾರ್ಧಕಂ ಗತ್ವಾ ತತ್ರ ದೇವಂ ಜನಾರ್ದನಮ್ ॥18॥

ದಂಡವತ್ಪತಿತೋ ಭೂತ್ವಾ ಶುಂಡಾಮುದ್ಯಮ್ಯ ಗರ್ಜಯನ್ ।
ಯದಾ ಗತಸ್ತದಾ ಕನ್ಯಾ ದೃಷ್ಟಿಮಾರ್ಗಮುಪಾಗತಾಃ ॥19॥

ಋಷಯ ಊಚುಃ–

ಅಲಂಕೃತವಾದ ವಾಯುವೇಗ–ಮನೋವೇಗ ಗಳನ್ನು ಮೀರುವ ವೇಗವುಳ್ಳ, (13) ನೀಲವಾದ ಮೈಬಣ್ಣ, ಬಿಳುಪಾದ ಪಾದ, ಹದಿನೈದು ಹಸ್ತಗಳಷ್ಟು ಎತ್ತರವಾದ ದೇವಮಣಿಯೇ ಮುಂತಾದ ಸಮಸ್ತ ಅಶ್ವಲಕ್ಷಣಗಳಿಂದ ಯುಕ್ತವಾದ ವಾಯುದೇವತಾರೂಪವಾದ ಶ್ರೇಷ್ಠವಾದ ಕುದುರೆಯನ್ನು ಹತ್ತಿ ವೇಂಕಟಾದ್ರಿಯಿಂದ ಕೆಳಗಿಳಿದು, ಬೇಟೆಯಾಡುವದಕ್ಕಾಗಿ ಹೊರಟನು. (14–15) ಸಿಂಹ, ವ್ಯಾಘ್ರ, ಆನೆ, ಶರಭ, ಜಿಂಕೆ ಮುಂತಾದ ವನ್ಯಮೃಗಗಳನ್ನು ಬೇಟೆಯಾಡುತ್ತಾ, ವನದಲ್ಲಿ ಅಲ್ಲಲ್ಲಿ ಸಂಚರಿಸುತ್ತಿರುವ ಶ್ರೀನಿವಾಸನು ಮದೋನ್ಮತ್ತವಾದ ಆನೆಯನ್ನು ನೋಡಿ ಅದನ್ನು ಸಂಹರಿಸಲು ಹಿಂಬಾಲಿಸಿದನು. (16–17) ಶ್ರೀನಿವಾಸನ ಭಯದಿಂದ ಭೀತವಾದ ಆನೆಯು ಒಂದೂವರೆ ಯೋಜನ ದಷ್ಟು ದೂರ ಓಡಿ, ಸೊಂಡಿಯನ್ನು ಮೇಲಕ್ಕೆತ್ತಿ ಗರ್ಜನೆಯನ್ನು ಮಾಡುತ್ತಾ ದಂಡವತ್ಪ್ರಣಾಮವನ್ನು ಮಾಡುವಂತೆ ಭೂಮಿಯಲ್ಲಿ ಪತಿತವಾಯಿತು. ಇದೇ ಸಂದರ್ಭದಲ್ಲಿ ಶ್ರೀನಿವಾಸನು ಸಖಿಯರಿಂದೊಡಗೂಡಿದ ಪದ್ಮಾವತಿ ಯನ್ನು ನೋಡಿದನು.(18,19)

ಕಾಃ ಕನ್ಯಾಃ ಕಸ್ಯ ಸಂಬದ್ಧಾಃ ಕಿಮರ್ಥಂ ವನಮಾಗತಾಃ ।
ಕಸ್ಯೈವ ತನಯಾಸ್ಸರ್ವಾಃ ತದ್ವದಸ್ವ ಮಹಾಮತೇ ॥20॥

ಇತಿ ತೈಶ್ಚ ಸ ವಿಜ್ಞಪ್ತಃ ಸೂತಃ ಪರಮಧಾರ್ಮಿಕಃ ।
ಉವಾಚ ವಚನಂ ಭಕ್ತ್ಯಾ ಸಂತೋಷೋದ್ರಿಕ್ತಮಾನಸಃ ॥21॥

ಸೂತ ಉವಾಚ–

ಶೃಣ್ವಂತು ಮುನಯಸ್ಸರ್ವೇ ಕನ್ಯಾಯಾಃ ಜನ್ಮ ಪಾವನಮ್ ।
ಪುರಾ ತು ದ್ವಾಪರಸ್ಯಾಂತೇ ಪಾಂಡವಾನಾಂ ಮಹಾತ್ಮನಾಮ್ ॥22॥

ಯುದ್ಧೇ ತು ಭಾರತೇಽತೀತೇ ಅಷ್ಟಾವಿಂಶತಿಮೇ ಕಲೌ ।
ವಿಕ್ರಮಾರ್ಕಾದಯೋ ಭೂಪಾಃ ಸ್ವರ್ಗಲೋಕಂ ಯದಾ ಯಯುಃ ॥23॥

ತತ್ಕಾಲಾಂತೇ ವತ್ಸರಾಣಾಂ ಸಹಸ್ರೇಷು ಗತೇಷು ವೈ ।
ಚಂದ್ರವಂಶೇ ನೃಪಃ ಕಶ್ಚಿತ್ ಸುವೀರ ಇತಿ ನಾಮಕಃ ॥24॥

ಜಜ್ಞೇ ಸುಧರ್ಮಸ್ತತ್ಪುತ್ರಸ್ತತ್ಸುತೌ ನೃಪಪುಂಗವೌ ।
ಆಕಾಶತೋಂಡಮಾನಾಖ್ಯೌ ಜಾತೌ ಲೋಕಯಶಸ್ಕರೌ ॥25॥

ಧರ್ಮಿಷ್ಠೌ ಹರಿಭಕ್ತೌ ತೌ ನಾರಾಯಣಪರಾಯಣೌ ।

ಋಷಿಗಳು 'ಶ್ರೀನಿವಾಸನು ಕಂಡ ಕನ್ಯೆಯರು ಯಾರು? ಯಾವ ಕಾರಣದಿಂದ ಅವರು ವನಕ್ಕೆ ಬಂದಿದ್ದರು? ಅವರು ಯಾರಿಗೆ ಸಂಬಂಧಿಸಿದವರು? ಎಂದು ಪ್ರಶ್ನಿಸಿದರು (20) ಆಗ ಸೂತಾಚಾರ್ಯರು ಅತ್ಯಂತ ಸಂತೋಷದಿಂದ ಪದ್ಮಾವತಿಯ ವೃತ್ತಾಂತವನ್ನು ತಿಳಿಸಲಾರಂಭಿಸುತ್ತಾರೆ. (21)

### ಪದ್ಮಾವತಿಯ ವೃತ್ತಾಂತ

ದ್ವಾಪರಾಂತ್ಯದಲ್ಲಿ ಮಹಾಭಾರತಯುದ್ಧವು ಪರಿಸಮಾಪ್ತವಾದ ಅನಂತರದಲ್ಲಿ 28 ನೇ ಕಲಿಯುಗದಲ್ಲಿ ವಿಕ್ರಮಾದಿತ್ಯನೇ ಮೊದಲಾದ ರಾಜರು ಸ್ವರ್ಗಸ್ಥರಾದ ಅನಂತರದಲ್ಲಿ, ಚಂದ್ರವಂಶದಲ್ಲಿ ಸುವೀರನೆಂದು ಪ್ರಸಿದ್ಧನಾದ ಧರ್ಮಿಷ್ಠರಾಜನಿದ್ದನು. (22–24) ಸುವೀರನಿಗೆ ಸುಧರ್ಮನೆಂಬ ಪುತ್ರನಿದ್ದನು. ಸುಧರ್ಮನಿಗೆ ಆಕಾಶರಾಜ ಮತ್ತು ತೋಂಡಮಾನರೆಂಬ ಲೋಕಪ್ರಸಿದ್ಧರಾಜರು ಪುತ್ರರಾಗಿ ಜನಿಸಿದರು. (25) ಇವರಲ್ಲಿ ಹಿರಿಯನಾದ ಆಕಾಶರಾಜನು ತೋಡದೇಶಕ್ಕೆ ದೊರೆಯಾಗಿ ಧರ್ಮ–ನ್ಯಾಯ–ರಾಜನೀತಿಗಳಿಗನುಗುಣವಾಗಿ ಪರಮ

ಜ್ಯೇಷ್ಠೋ ವಿಯನ್ನೃಪಃ ಸಾಧುಃ ಕನಿಷ್ಠಸ್ತೋಂಡಮಾನ್ನೃಪಃ ॥26।

ತೋಂಡದೇಶಾಧಿಪೋ ಭೂತ್ವಾ ಶಶಾಸ ಪೃಥಿವೀಮಿಮಾಮ್ ।
ರಕ್ಷಮಾಣೇ ನೃಪೇ ತಸ್ಮಿನ್ ಜನಾಃ ಧರ್ಮಪರಾಯಣಾಃ ॥27॥

ನಿರಾತಂಕಂ ಭವತ್ಸರ್ವಂ ಜಗತ್ ಸ್ಥಾವರಜಂಗಮಮ್ ।
ಗಾವೋ ಬಹುಪಯೋದಾಶ್ಚ ನಾರ್ಯಃ ಪತಿಪರಾಯಣಾಃ ॥28॥

ಕದಾಚಿತ್ಪುತ್ರಕಾಂಕ್ಷೀ ಸ ಹ್ಯೇಕಾಂತೇ ಭವನೇ ಸ್ಥಿತಃ ।
ಅಪುತ್ರೋ ನೃಪತಿರ್ದುಃಖಾದ್ಗುರುಂ ಪ್ರೋವಾಚ ಭಕ್ತಿತಃ ॥29।

ಆಕಾಶರಾಜ ಉವಾಚ–

'ಅನುಭೂತಮಿದಂ ರಾಜ್ಯಂ ಹಸ್ತ್ಯಶ್ವರಥಸಂಕುಲಮ್ ।
ನಾನಾದಾನಂ ಕೃತಂ ಚೈವ ತೀರ್ಥಯಾತ್ರಾ ವಿಶೇಷತಃ ॥30॥

ನಾನುಭೂತಂ ಪುತ್ರಸೌಖ್ಯಂ ಪಿತೄಣಾಂ ಮುಕ್ತಿದಂ ದ್ವಿಜ ।
ಕಿಂ ಮಯಾ ಚರಿತಂ ಪಾಪಂ ಕಸ್ಯ ಪುತ್ರೋ ಹತಃ ಪುರಾ ॥31॥

ಕೇನ ಪಾಪೇನ ವಿಪ್ರೇಂದ್ರ ನ ಪ್ರಾಪ್ತಂ ಪುತ್ರಜನ್ಮ ಮೇ ।

ಭಗವದ್ಭಕ್ತನಾಗಿ ರಾಜ್ಯವನ್ನಾಳುತ್ತಿದ್ದನು. (27) ಭಗವದನುಗ್ರಹದಿಂದ ಅವನ ರಾಜ್ಯವು ಸರ್ವವಿಧ ಸಂಪತ್ತುಗಳಿಂದ ತುಂಬಿ ತುಳುಕುತ್ತಿತ್ತು. ಪತಿವ್ರತೆಯರಾದ ಸ್ತ್ರೀಯರು, ಧರ್ಮಪರಾಯಣರಾದ ಪುರುಷರು, ಬಹುಕ್ಷೀರಪ್ರದವಾದ ಗೋವುಗಳು, ಆತಂಕರಹಿತರಾದ ಪ್ರಜಾಜನರು, ಅವನ ರಾಜ್ಯದಲ್ಲಿ ಎಲ್ಲೆಡೆಯು ಕಂಡು ಬರುತ್ತಿದ್ದರು.(28) ಆದರೆ ಅಪುತ್ರನಾದ ಅವನಿಗೆ ಪುತ್ರರಿಲ್ಲದ ಕೊರಗು ಸದಾ ಕಾಡುತ್ತಿತ್ತು. ಪಾಪಿಷ್ಠನಾದ ತನ್ನನ್ನು ಉದ್ಧರಿಸಿ ಪುತ್ರನನ್ನು ಪಡೆಯುವ ಉಪಾಯವನ್ನು ಕರುಣಿಸಬೇಕೆಂದು ಆಕಾಶರಾಜನು ದೇವಗುರುವಾದ ಬೃಹಸ್ಪತ್ಯಾಚಾರ್ಯರನ್ನು ಏಕಾಂತದಲ್ಲಿ ಪ್ರಾರ್ಥಿಸಿದನು.(29)

ಆಕಾಶರಾಜನ ಅನಪತ್ಯತ್ವ ದುಃಖ

'ಹೇ ದ್ವಿಜಶ್ರೇಷ್ಠರಾದ ಬೃಹಸ್ಪತ್ಯಾಚಾರ್ಯರೇ! ಆನೆ–ಕುದುರೆ– ರಥಾದಿಗಳಿಂದುಪೇತವಾದ ಈ ರಾಜ್ಯವನ್ನು ನಾನು ಅನುಭವಿಸಿರುವೆನು. ನಾನಾದಾನಗಳನ್ನು, ವಿವಿಧತೀರ್ಥಕ್ಷೇತ್ರಗಳ ಯಾತ್ರೆಯನ್ನು ಆಚರಿಸಿರುವೆನಾದರೂ ಸಹ ಪಿತೃಗಳಿಗೆ ಸೌಖ್ಯವನ್ನುಂಟುಮಾಡುವ ಪುತ್ರಸುಖವನ್ನು

ನೇತ್ರಾಭ್ಯಾಂ ನೈವ ದೃಷ್ಟಂ ಚ ಪುತ್ರಸ್ಯ ಮುಖಪಂಕಜಮ್ ||32||

ಕರ್ಣಾಭ್ಯಾಂ ನ ಶ್ರುತಃ ಶಬ್ದಃ ಪುತ್ರೇಣ ರುದತಾ ಕೃತಃ ।
ದ್ವಿಜೇಂದ್ರ ಪಿತೃಬಂಧೂನಾಂ ದುರ್ಗತಿಶ್ಚ ಭವೇತ್ತಥಾ ||33||

"ಅಪುತ್ರಸ್ಯ ಗತಿರ್ನಾಸ್ತೀ"ತ್ಯೇವಂ ವೇದವಿದೋ ವಿದುಃ ।
ಪುತ್ರೇಣ ರುಗ್ಮಪಾತ್ರೇ ತು ನಾನ್ನಂ ಭುಕ್ತಂ ಮಯಾ ಸಹ ||34||

ಕೃತದೋಷೇಣ ನ ಮಯಾ ಕದಾಚಿಲ್ಲಾಲಿತಃ ಸುತಃ ।
ಭೂಷಣಾನ್ಯಾದರಾತ್ ಕೃತ್ವಾ ನ ಪುತ್ರೋऽಲಂಕೃತೋ ಮಯಾ ||35||

ಸ ಸಂಜಾತೋ ನ ಮೇ ಯಃ ಸ್ಯಾತ್ ಪುತ್ರಃ ಪಿತೃಹಿತೋ ರತಃ ।
ಪಾಪಿಷ್ಠೋऽಹಂ ದುರಾಚಾರೀ ಹ್ಯಪುತ್ರೋऽಹಂ ದರಿದ್ರವಾನ್ ||36||

ಭೂಷಣಾನಿ ಕೃತಾನದ್ಯ ಪುತ್ರಾರ್ಥಂ ಯತ್ನತೋ ಮಯಾ ।
ಪುತ್ರಾರ್ಥಂ ಕವಚಂ ಕೃತ್ವಾ "ಇತ ಏಹೀ"ತಿ ನೋದಿತಮ್ ||37||

ಪುತ್ರಹೀನಂ ಚ ಮಾಂ ದೃಷ್ಟ್ವಾ ಕರ್ಷಂತಿ ಯಮಕಿಂಕರಾಃ ।
"ಗಚ್ಛ ರಾಜನ್ ತ್ವರೇಣೈವ ಯಮಸ್ಯ ಸದನಂ ಪ್ರತಿ" ||38||

ಮಾತ್ರ ನಾನು ಅನುಭವಿಸಿರುವದಿಲ್ಲ. ಯಾವ ಪಾಪದಿಂದ ನನಗೆ ಈ ದುಃಖವೊದಗಿರುವದೋ ನಾನು ಕಾಣೆ. ಯಾರ ಮಗನನ್ನು ನಾನು ಹಿಂದೆ ಕೊಂದಿರುವೆನೋ ಏನೋ ಈ ಜನ್ಮದಲ್ಲಿ ನನಗೆ ಮಕ್ಕಳಾಗಿಲ್ಲ. (30–31) ಯಾವ ಪಾಪದಿಂದ ನನಗೆ ಮಕ್ಕಳು ಜನಿಸಿರುವದಿಲ್ಲ? ಕಣ್ಣಿನಿಂದ ಮಗನ ಮುಖ ಪಂಕಜವನ್ನು, ಕರ್ಣಗಳಿಂದ ಮಕ್ಕಳ ಅಳುವನ್ನು ನಾನು ಕೇಳಿಲ್ಲ. 'ಅಪುತ್ರಸ್ಯ ಗತಿರ್ನಾಸ್ತಿ – ಮಕ್ಕಳಿಲ್ಲದವನಿಗೆ ಉತ್ತಮ ಗತಿಯಿರುವದಿಲ್ಲ'ವೆಂಬುದಾಗಿ ವೇದವನ್ನು ಬಲ್ಲವರು ತಿಳಿದಿರುವರು. ಮಕ್ಕಳಿಲ್ಲದ ನನ್ನಿಂದಾಗಿ ನನ್ನ ಪಿತೃಗಳಿಗೆ ದುರ್ಗತಿಯು ಬಂದೊದಗುವದು. ಮಗನಿಗೆ ಬಂಗಾರದ ಪಾತ್ರೆಯಲ್ಲಿ ಅನ್ನವನ್ನು ನನಗೆ ತಿನ್ನಿಸಲಾಗಲಿಲ್ಲ. ಮಗನನ್ನು ಲಾಲಿಸುವ ಅವಕಾಶ ಪಾಪಿಷ್ಠನಾದ ನನಗೆ ದೊರೆತಿಲ್ಲ. ನಾನಾವಿಧವಾದ ಕವಚವೇ ಮೊದಲಾದ ಭೂಷಣಗಳಿಂದ ಮಗನನ್ನು ಅಲಂಕರಿಸಲಾಗಲಿಲ್ಲ. ಏಕೆಂದರೆ ನನಗೆ ಪಿತೃಹಿತರತನಾದ ಮಗನು ಇನ್ನು ಕೂಡ ಹುಟ್ಟಿರುವದಿಲ್ಲ. ಪುತ್ರರಹಿತನಾದ ನನ್ನನ್ನು ಯಮಕಿಂಕರರು 'ಹೇ ಅಪುತ್ರನಾದ ರಾಜನೇ! ಯಮಲೋಕವನ್ನು ಕುರಿತು ನಡೆ' ಎಂದು ಬೈಯುತ್ತಾ ತಮ್ಮ ಪಾಶಗಳಿಂದ ನನ್ನನ್ನು ಕಟ್ಟಿ ಎಳೆದೊಯ್ಯುತ್ತಿರುವಾಗ ಅಪುತ್ರನಾದ ನಾನು ಏನು ತಾನೇ

ಪಾಶಕುಂಠಿತನಮ್ರಾಂಗಃ ಕಿಮು ವಕ್ಷ್ಯಾಮ್ಯಪುತ್ರವಾನ್ ।
ಲಿಖಿತಂ ಚಿತ್ರಗುಪ್ತಾಭ್ಯಾಮಪುತ್ರತ್ವಂ ಮಹಾಮತೇ ॥39॥

ಮದ್ಗರ್ಭಜಾತಪುತ್ರೇಣ ಮಾರ್ಜಿತಂ ತು ಕದಾ ಭವೇತ್ ।
"ದುರಾಚಾರಾತಿದುರ್ಬುದ್ಧೇ ಹ್ಯಪುತ್ರೇ"ತಿ ಯಮೇನ ಚ ॥40॥

ಭಾಷಿತಂ ವಚನಂ ಶ್ರುತ್ವಾ ಕಃ ಪುಮಾನ್ ಸುಖಮಾಪ್ನುಯಾತ್।
ನಷ್ಟದೀಪೋಽತಿನೈಷ್ಠೂರ್ಯಾಃ ಕಷ್ಟೋದ್ಭೂತಕಲೇವರಃ ॥41॥

ವೃಥಾ ಜಾತೋಽತಿಪಾಪಾತ್ಮಾ ಸ್ವಾತ್ಮನೋ ನರಕಾವಹಃ ।
ಪುತ್ರಹೀನಂ ಕುಲಂ ಚಾಪಿ ಹ್ಯನೀರಂ ಕೂಪಗಹ್ವರಮ್ ॥42॥

ಭರ್ತೃಹೀನಾಂ ಯಥಾಲೋಕಾಃ ನಿಂದಂತಿ ಜನಸಂಸದಿ ।
ಕಿಂ ಕರೋಮಿ ಮಹೀದೇವ ಕ್ವ ಗಚ್ಛಾಮ್ಯದ್ಯ ಕಾ ಗತಿಃ ॥43॥

ಕಂ ದೇವಂ ಶರಣಂ ಗತ್ವಾ ಭವಾಬ್ಧಿಂ ಪ್ರತರಾಮ್ಯಹಮ್ ।
ರುದಂತಂ ಪುತ್ರಮಾಲೋಕ್ಯ ವಿನಿಂದ್ಯಾತ್ಮಸತೀಂ ರುಷಾ ॥44॥

ವಾಚಂ ನಿಶಮ್ಯ "ಹೇ ಪುತ್ರ ಮಾ ರುದಸ್ವೇ"ತಿ ನೋದಿತಮ್ ।

ನುಡಿಯಬೇಕು? ಚಿತ್ರಗುಪ್ತರಿಂದ ಬರೆದ ಪುತ್ರವಿಹೀನತ್ವವು ನನಗೆ ಹುಟ್ಟುವ ಮಗನಿಂದ ಯಾವಾಗ ತಾನೇ ಅಳಿಸೀತು? 'ದುರಾಚಾರಿಯೇ! ದುರ್ಬುದ್ಧಿಯೇ! ಮಕ್ಕಳಿಲ್ಲದವನೇ! ಎಂಬ ಅತಿ ನಿಷ್ಠುರವಾದ ಯಮನ ಮಾತುಗಳನ್ನು ಕೇಳಿದ ಯಾವ ಪುರುಷನು ಸುಖವನ್ನನುಭವಿಸುವನು? ಕುಲವನ್ನು ಅಂಧಕಾರದಲ್ಲಿ ಕೆಡವಿದವನು ನಾನಾಗಬೇಕಾದೀತು. ನನ್ನ ಕುಲವನ್ನು ಮುಂದುವರೆಸಲಾಗದ ನಾನು ಶ್ರೇಷ್ಠವಾದ ಸುಧರ್ಮನ ಕುಲದಲ್ಲಿ ಹುಟ್ಟಿರುವದು ವ್ಯರ್ಥವಾಗಿರುವದಷ್ಟೇ ಅಲ್ಲ ನರಕಪ್ರಾಪಕವೂ ಸಹ ಆಗಿರುವದು. 'ನೀರಿಲ್ಲದ ಬಾವಿ, ಪತಿಯಿಲ್ಲದ ಸತಿ ಇವುಗಳನ್ನು ಹೇಗೆ ಜನರು ನಿಂದಿಸುವರೋ ಹಾಗೆಯೇ ಪುತ್ರಸಂತಾನವಿಲ್ಲದ ಕುಲವನ್ನು ಸಹ ಜನರು ನಿಂದಿಸುವರು. ಯಾವ ದೇವರನ್ನು ಶರಣುಹೊಂದಿ ಪುತ್ರನನ್ನು ಪಡೆದು ಈ ಸಂಸಾರಸಮುದ್ರವನ್ನು ದಾಟೇನು? ಮಕ್ಕಳಿಲ್ಲದ ಕಾರಣದಿಂದ ನಾನು ಅಳುತ್ತಿರುವ ಮಗನನ್ನು ಸಮಾಧಾನಮಾಡಲು ಪತ್ನಿಯನ್ನು ಬೈದು 'ಮಗನೆ! ಅಳದಿರು' ಎಂದು ಸಮಾಧಾನಿಸಿ 'ಇವನಿಗೆ ಹಾಲನ್ನು ಕುಡಿಸು. ಇಲ್ಲದೇ ಹೋದಲ್ಲಿ ಹೊಡೆಯುವೆನು. ಶಿಶುವಿಗೆ ಘಂಟೆ, ಗೊಂಬೆಗಳು, ಹಣ್ಣು, ಆಟದ ಚಂಡು ಇವುಗಳನ್ನು ಕೊಡು' ಎಂದು ನುಡಿಯಲಾಗಲಿಲ್ಲ; ಮಗನನ್ನು ಆನೆಯ ಮೇಲೆ ಕುಳ್ಳಿರಿಸಿ ಗ್ರಾಮಪ್ರದಕ್ಷಿಣೆಯನ್ನು ಮಾಡಿಸುವಾಗ 'ಅಪ್ಪ ! ನಾವು

"ಪಯಃ ಸಂಪಾಯಯೇತ್ಯಾಽಶು ನೋ ಚೇತ್ತ್ವಾಂತಾಡಯಾಮ್ಯಹಮ್ ॥45॥

ಘಂಟಾಂ ಚ ಪ್ರತಿಮಾಂ ದೇಹಿ ಪುತ್ರಸ್ಯ ಫಲಕಂದುಕೇ" ।
ಗಜಮಾರೋಪ್ಯ ತನಯಂ ಕುರ್ವನ್ ಗ್ರಾಮಪ್ರದಕ್ಷಿಣಮ್ ॥46॥

"ಸಭಾಂ ಗಚ್ಛಾಥ ರಾಜೇಂದ್ರ ತಥಾ ತಾಲಸ್ವನೇನ ಚ" ।
ಇತಿ ಪುತ್ರೇಣ ಸೋತ್ಕಂಠಂ ಕೃತಂ ಮಂಜುಲಭಾಷಿಣಾ ॥47॥

ಕದಾಚಿದಪಿ ನೈವಾಹಂ ಶ್ರುತವಾನ್ ಪ್ರಾರ್ಥನಾಮಿ"ತಿ ।
ಅಜಾತಪುತ್ರಃ ಶೋಕೇನ ಮೂರ್ಛಾಮಾಪ ಮಹೀಪತಿಃ ॥48॥

ಪುನಃ ಸಂಜ್ಞಾಮವಾಪ್ಯಾಥ ವಿಲಲಾಪ ಸುದುಃಖಿತಃ ।
'ಬಾಲ್ಯೇ ನ ಜಾತಕರ್ಮಾಪಿ ನಾಕಾರ್ಷಂ ನಾಪಿ ಚಾಭಿಧಾಮ್॥49॥

ಕವಚಂ ಕಾರಯಿತ್ವಾ ತು ಶಿರೋಭೂಷಣಮದ್ಭುತಮ್ ।
ಕೇಶಭೂಷಣಮತ್ಯಂತಂ ರತ್ನವಜ್ರಸಮಾಕುಲಮ್ ॥50॥

ಭೂಷಯಿತ್ವಾ ಶಿಶುಂ ನಾಹಮಾಲೋಕ್ಯ ಪ್ರೀತಿಮಾಪ್ತವಾನ್ ।
ಅಂಕಮಾರೋಪ್ಯ ತನಯಂ ನ ಮಯಾ ಲಾಲಿತಃ ಸುತಃ ॥51॥

ನೋಪನೀತೋಽತಿಪ್ರೀತ್ಯೈವ ಸುತೋ ಮೇ ಪಂಚವಾರ್ಷಿಕಃ ।
ಅಷ್ಟಮೇ ವಾಽಥ ದಶಮೇ ನ ಕೃತೋ ದಾರಸಂಗ್ರಹಃ ॥52॥

ಪುತ್ರಾರ್ಜಿತಂ ಧನಂ ಬ್ರಹ್ಮನ್ನೋಪಜೀವಿತಮದ್ಯ ಮೇ ।

ತಾಲವಾದ್ಯಘೋಷದೊಂದಿಗೆ ರಾಜಸಭೆಗೆ ಹೋಗೋಣ' ಎಂಬ ಕರ್ಣಾನಂದಕರವಾದ ಮಾತನ್ನು ನಾನು ಕೇಳಲಾಗಲಿಲ್ಲ' ಎಂದು ಆಕಾಶಾರಾಜನು ಬಹುವಾಗಿ ದುಃಖಿಸುತ್ತಾ ದುಃಖಾಧಿಕ್ಯದಿಂದ ಮೂರ್ಛೆಯನ್ನು ಹೊಂದಿದನು. (48) ಅನಂತರ ಸಂಜ್ಞೆಯನ್ನು ಹೊಂದಿದ ಆಕಾಶರಾಜನು 'ಮಕ್ಕಳಿಲ್ಲದ ನಾನು ಬಾಲ್ಯದಲ್ಲಿ ಶಿಶುವಿಗೆ ಜಾತಕರ್ಮ, ನಾಮಕರಣ ಇವುಗಳನ್ನು ಮಾಡಲಾಗಲಿಲ್ಲ; (49) ಕವಚ, ಅದ್ಭುತವಾದ ರತ್ನಸಮಾಕುಲವಾದ ಶಿರೋಭೂಷಣಗಳು, ಕೇಶಭೂಷಣಗಳು ಇವುಗಳಿಂದ ಶಿಶುವನ್ನಲಂಕರಿಸಿ ಅವನನ್ನು ನೋಡಿ ಸಂತೋಷಪಡಲಿಲ್ಲ; ಮಗನನ್ನು ತೊಡೆಯಲ್ಲಿರಿಸಿಕೊಂಡು ಲಾಲನಮಾಡಲಾಗಲಿಲ್ಲ. (50-51) ಐದು ಅಥವಾ ಎಂಟನೆ ವಯಸ್ಸಿನಲ್ಲಿ ಅವನಿಗೆ ಉಪನಯನವನ್ನು, ಅದಾದ ಹತ್ತು ವರ್ಷಗಳಲ್ಲಿ ವಿವಾಹವನ್ನಾಗಲಿ ಮಾಡಲಾಗಿಲ್ಲ. ಮಗನ ದ್ರವ್ಯದಿಂದ ಬದುಕುವ ಯೋಗ ನನಗಿನ್ನು ಬರಲಿಲ್ಲ. ಅವನನ್ನು ರಾಜ್ಯದಲ್ಲಿ

ಅಭಿಷಿಚ್ಯ ತು ತಂ ರಾಜ್ಯೇ ಭಾರ್ಯಯಾ ಕೃತಭೋಜನಮ್ ।
ನ ಗತಂ ಚ ವನಂ ಬ್ರಹ್ಮನ್ ಪಾರಂಪರ್ಯಾಗತಂ ಮಮ ॥53॥

ಅಹೋ ದರಿದ್ರಸ್ಯ ಮಹಾನುಭಾವ
ಸತ್ಪುತ್ರಹೀನಸ್ಯ ಗತಿರ್ಭವೇತ್ ಕಾ ।
ವೃಥಾ ಶರೀರಂ ಘಟಕುಡ್ಯಸನ್ನಿಭಂ
ಜಾತಂ ಸುಧರ್ಮಸ್ಯ ಕುಲೇಽತಿಪುಣ್ಯೇ ॥54॥

ಮನುಷ್ಯಾಣಾಮನಾಥಾನಾಂ ದುರ್ಲಭಂ ಪುತ್ರಜನ್ಮ ಚ ।
ಬಹುಪುಣ್ಯವಶಾತ್ ಪುತ್ರಃ ಜಾಯತೇ ಮಾನವೋದರೇ ॥55॥

ಅಸ್ಮಾಕಮತಿಪಾಪಾನಾಂ ಕನ್ಯಕಾ ನೈವ ಚಾಭವತ್ ।
ಸತ್ಪುತ್ರಾಃ ಕ್ವ ನು ಜಾಯೇರನ್ ಧರ್ಮಸಂತಾನಸಂಜ್ಞಕಾಃ ॥56॥

ವರದಾಚ್ಯುತ ರಂಗೇಶ ಜಗನ್ನಾಥ ಜಗದ್ಗುರೋ ।
ಸುಬ್ರಹ್ಮಣ್ಯ ಸುರಾಧೀಶ ಕೃಪಾಂ ಕುರು ದಯಾನಿಧೇ ॥57॥

ವೇಂಕಟೇಶ ರಮಾಕಾಂತ ವರಾಹವದನಾಚ್ಯುತ ।
ನಾರಾಯಣ ನಗಾಧೀಶ ರಾಮಕೃಷ್ಣ ನಮೋಸ್ತುತೇ ॥58॥

ಸುಪುತ್ರವಂಶತಃ ಖಲು ಭಾಗ್ಯವಂತೋ
ಹ್ಯಪುತ್ರವಂತಃ ಖಲು ಭಾಗ್ಯಹೀನಾಃ ।

ಪಟ್ಟಾಭಿಷೇಕಮಾಡಿ ಪತ್ನೀಸಮತನಾಗಿ ನಾನಾ ಭೋಗಗಳನ್ನು ಮಾಡಿ ನಮ್ಮ ಪರಂಪರೆಯಂತೆ ವನಕ್ಕಿನ್ನೂ ತೆರಳಲಿಲ್ಲ; (53) ಅಯ್ಯೋ! ಅತ್ಯಂತ ಪವಿತ್ರವಾದ ಸುಧರ್ಮನ ಕುಲದಲ್ಲಿ ಹುಟ್ಟಿದ ನಾನು ಸತ್ಪುತ್ರನನ್ನು ಪಡೆಯಲಾಗದೇ ಜನಿಸಿರುವದೇ ವ್ಯರ್ಥವೆನಿಸಿರುವದು. ಗಡಿಗೆಯ ರಾಶಿಯಂತೆ ನನ್ನ ಶರೀರವು ಪುಣ್ಯಪ್ರಾಪ್ತಿಸಾಧನವಾಗಲಿಲ್ಲ. (54) ಮನುಷ್ಯರ ಪೂರ್ವಪುಣ್ಯ ಪ್ರಭಾವದಿಂದ ಮಗನು ಜನಿಸುವನು. ಅತ್ಯಂತ ಪಾಪಿಷ್ಠನಾದ ನನಗೆ ಮಗನಿರಲಿ, ಮಗಳೂ ಸಹ ಜನಿಸಿರುವದಿಲ್ಲ. (55–56) ಪುತ್ರದಾಯಕ ರೆಂದು ಪ್ರಸಿದ್ಧರಾದ ಕಾಂಚೀ ವರದರಾಜನೇ! ಶ್ರೀರಂಗನಾಥನೇ! ಜಗದ್ಗುರುವಾದ ಜಗನ್ನಾಥ! ದೇವಸೇನಾನಿಯಾದ ತಾರಕಾರಿಯಾದ ಸುಬ್ರಹ್ಮಣ್ಯನೇ! ನಾರಾಯಣಗಿರಿಯ ಅಧಿಪತಿಯಾದ ಶ್ರೀನಿವಾಸ! ಲಕ್ಷ್ಮೀಪತಿಯಾದ ವರಾಹನೇ! ರಾಮಕೃಷ್ಣರೇ! ನಿಮ್ಮೆಲ್ಲರಿಗೂ ನಮಸ್ಕಾರಗಳು. (59) ಮಕ್ಕಳಿರುವವರೇ ಭಾಗ್ಯವಂತರು. ಅವರೇ ಪುಣ್ಯಶಾಲಿಗಳು. ಮಕ್ಕಳಿಲ್ಲದವರು ನಿಜವಾಗಿಯೂ ಭಾಗ್ಯವಿಹೀನರು. ಸಂಸಾರ ಸಮುದ್ರವನ್ನು ದಾಟಲಶಕ್ತರಾದವರು.

ಸಂಸಾರಸಿಂಧೋಸ್ತರಣೇ ಹ್ಯಶಕ್ತಾಃ
ಕಾ ನೋ ಗತಿಃ ಕರ್ಮಫಲಾನುಭೋಗಿನಾಮ್ ॥59॥

ಕಾನ್ ಲೋಕಾನ್ವಾ ಗಮಿಷ್ಯಾಮಿ ಕ್ರೂರಂ ವಾ ನರಕಂ ಗುರೋ ।
ಕ ಉಪಾಯೋ ಮಹಾಪ್ರಾಜ್ಞ ಪುತ್ರಲಾಭೇ ದ್ವಿಜೋತ್ತಮ" ॥60॥

ಏವಮುಕ್ತ್ವಾ ಮಹೀದೇವಂ ವಿರರಾಮ ಮಹಿಪತಿಃ ।
'ಪಾಪಿಷ್ಠೋಽಹಂ ದುರಾಚಾರಃ ಪುತ್ರೇಣಾಹಂ ದರಿದ್ರಿತಃ' ॥61॥

ಇತಿ ರಾಜವಚಃ ಶ್ರುತ್ವಾ ಗುರುರ್ವಾಕ್ಯಮುವಾಚ ತಮ್ ।

ಗುರುರುವಾಚ–

'ಯಜ್ಞಂ ಕುರು ನೃಪಶ್ರೇಷ್ಠ ಪುತ್ರಸ್ತೇನ ಭವಿಷ್ಯತಿ' ॥62॥

ಗುರೋರ್ವಾಕ್ಯಂ ಸಮಾಕರ್ಣ್ಯ ಯಜ್ಞಾಯಾಶೋಧಯದ್ಧರಾಮ್।
ಸ್ವರ್ಣಲಾಂಗಲಸಂಘೈಶ್ಚ ದ್ವಿಜಮಂತ್ರಗಣೈಸ್ತಥಾ ॥63॥

ಶೋಧ್ಯಮಾನೇ ಧರಾಪೃಷ್ಠೇ ತತ್ರ ಪದ್ಮಂ ದದರ್ಶ ಸಃ ।
ಸಹಸ್ರಪದ್ಮಂ ರಾಜೇಂದ್ರಃ ಕಿಮೇತದಿತಿ ವಿಸ್ಮಿತಃ ॥64॥

ಕನ್ಯಾ ಚ ಪತ್ರೇಷು ರಮಾಕೃತಿಂ ಶುಭಾಂ
ದೃಷ್ಟ್ವಾ ಚ ಸಂತುಷ್ಟಮನಾ ಬಭಾಷೇ ।
ದೇವೇನ ದತ್ತಾ ತ್ವಿಯಮಿಂದಿರಾಭಾ
ಕನ್ಯಾಕುಮಾರೀ ಕಮಲಾಭನೇತ್ರೀ ॥65॥

ಕರ್ಮಫಲಾನು–ಸಾರುವಾಗಿ ಭೋಗವನ್ನು ಮಾಡುವ ಮಕ್ಕಳಿಲ್ಲದ ನನಗೆ ಮುಂದೇನು ಗತಿ? (60) ಯಾವ ಕ್ರೂರವಾದ ಲೋಕಗಳನ್ನು ಅಥವಾ ಕಷ್ಟಕರವಾದ ನರಕಗಳನ್ನು ಹೊಂದುವೆನು? ಇದೊಂದೂ ಸಹ ತಿಳಿಯದಾಗಿದೆ. ಹೇ ತ್ರಿಕಾಲಜ್ಞಾನಿಗಳಾದ ಗುರುಗಳೇ! ಮಕ್ಕಳನ್ನು ಹೊಂದಲೇನು ಮಾಡಬೇಕೆಂದು ನನಗೆ ತಿಳಿಸಿರಿ' ಎಂದು ನಾನಾ ರೀತಿಯಾಗಿ ವಿಲಾಪವನ್ನು ಮಾಡುತ್ತಾ ಪ್ರಾರ್ಥಿಸಿದಾಗ (61–62) ಅವನಿಗೆ ಸಾಂತ್ವನಗೈದು ದೇವಗುರುವಾದ ಬೃಹಸ್ಪತ್ಯಾಚಾರ್ಯರು "ಯಜ್ಞವನ್ನು ಮಾಡು. ಅದರಿಂದ ನಿನಗೆ ಪುತ್ರೋತ್ಪತ್ತಿಯಾಗುವದು' ಎಂದು ಅನುಗ್ರಹಿಸಿದರು. (62) ಸಂತುಷ್ಟನಾದ ಆಕಾಶರಾಜನು ಯಾಗವನ್ನು ಮಾಡುವದಕ್ಕಾಗಿ ಭೂಮಿಯನ್ನು ಬ್ರಾಹ್ಮಣರ ವೇದಮಂತ್ರ ಸಹಿತವಾಗಿ ಬಂಗಾರದ ನೇಗಿಲುಗಳಿಂದ ಶೋಧಿಸುತ್ತಿರುವಾಗ, ಸಹಸ್ರ ದಳಗಳುಳ್ಳ

ಇತ್ಥಂ ಸಮಾಭಾಷ್ಯ ನೃಪೋತ್ತಮಃ ಶಿಶುಂ
ಹಸ್ತೇ ಪ್ರಗೃಹ್ಯಾಽಶು ಮುಮೋದ ದೀನಃ ।
ಮಾಯಾ ಮಹೇಶಸ್ಯ ದುರತ್ಯಯಾ ಹರೇಃ
ಕೇಯಂ ತು ಯಾ ಸಂಪ್ರತಿಗೃಹ್ಯತೇ ಮಯಾ' ॥66॥

ಇತ್ಯೇವಂ ಸಂಶಯಾನಂ ತಮಾಕಾಶಾಖ್ಯಂ ನರಾಧಿಪಮ್ ।
ಉವಾಚಾಕಾಶಗಾ ವಾಣೀ "ಪುತ್ರೀಯಂ ತವ ಪುಣ್ಯದಾ ॥67॥

ಸಂರಕ್ಷಸ್ವ ಮಹಾಭಾಗ ಬಹುಕೀರ್ತಿಫಲಪ್ರದಾಮ್" ।
ಇತ್ಯನಂತಗತಾಂ ವಾಣೀಂ ಶ್ರುತ್ವಾ ರಾಜಾಽತಿಹರ್ಷಿತಃ ॥68॥

ತಾಂ ಕನ್ಯಾಂ ಪ್ರತಿಗೃಹ್ಯಾಽಶು ಸ್ವಭಾರ್ಯಾಂ ಪ್ರತ್ಯುವಾಚ ಸಃ ।
'ಶೃಣು ಭದ್ರೇ ಮಹಾಪ್ರಾಜ್ಞೇ ದೇವದತ್ತಾಮಿಮಾಂ ಶುಭಾಮ್ ॥69॥

ಸಂವರ್ಧಸ್ವ ವರಾಂ ಪುತ್ರೀಂ ಗರ್ಭಜಾತಾಂ ಸುತಾಮಿವ" ।
ಇತ್ಯುಕ್ತ್ವಾ ತತ್ಕರೇ ದತ್ವಾ ಬಹುದಾನಮಥಾಕರೋತ್ ॥70॥

ಕನ್ಯಾಗಮನಪುಣ್ಯೇನ ಸಾ ದೇವಿ ಗರ್ಭಮಾದಧೇ ।
ಗರ್ಭಿಣೀಂ ಸ್ವಸತೀಂ ದೃಷ್ಟ್ವಾ ಚಕ್ರೇ ಪುಂಸವನಂ ಪತಿಃ ॥71॥

ಪಂಚಮೇ ಮಾಸಿ ಸಂಪ್ರಾಪ್ತೇ ಸೀಮಂತಂ ನೃಪಸತ್ತಮಃ ।

ಕಮಲವನ್ನು ಕಂಡನು. (63–64) ವಿಸ್ತಾರವಾದ ಆ ಕಮಲದ ಎಸಳುಗಳ ಮಧ್ಯಭಾಗದಲ್ಲಿ ರಮಾಕೃತಿಯನ್ನು ಹೋಲುವ ಹೆಣ್ಣುಮಗುವನ್ನು ನೋಡಿ ಲಕ್ಷ್ಮೀಯಂತೆ ಕಂಗೊಳಿಸುವ ಈ ಶಿಶುವು ಪರಮಾತ್ಮನ ವರಪ್ರಸಾದವೆಂದು ಭಾವಿಸಿ, ಸಂತೋಷದಿಂದ ಆ ಕೂಸನ್ನು ಕೈಗೆತ್ತಿಕೊಂಡು ಅತ್ಯಂತ ಸಂತೋಷವನ್ನು ಹೊಂದಿದನು. ಅನಂತರ 'ಪರಮಾತ್ಮನ ಮಾಯೆಯು ಅತ್ಯಂತ ವಿಚಿತ್ರವಾಗಿದ್ದು ತಿಳಿಯಲು ಅಶಕ್ಯವಾಗಿರುವದು. ಆದರೆ ಈ ಕೂಸು ಯಾರದ್ದು? ಎಂಬುದಾಗಿ ಕೂಸಿನ ಕುಲ–ಗೋತ್ರಗಳ ಬಗ್ಗೆ ಸಂಶಯಪಡುತ್ತಿರಲು 'ಈ ಕೂಸು ನಿನಗೆ ಹೆಚ್ಚಾದ ಪುಣ್ಯವನ್ನೂ, ಬಹಳವಾದ ಕೀರ್ತಿಯನ್ನೂ, ಇಹ–ಪರಗಳಲ್ಲಿ ಉತ್ತಮ ಫಲವನ್ನೂ ಕೊಡುವವಳಾಗುವದರಿಂದ ನಿಸ್ಸಂಶಯ ವಾಗಿ ಈ ಕೂಸನ್ನು ಚನ್ನಾಗಿ ಸಂರಕ್ಷಿಸು' ಎಂಬ ಅಶರೀರವಾಣಿಯನ್ನು ಕೇಳಿದನು. (68) ಸಂತುಷ್ಟನಾದ ಆಕಾಶರಾಜನು ಆ ಕೂಸನ್ನು ತನ್ನ ಹೆಂಡತಿಯ ಕೈಯಲ್ಲಿ ಕೊಟ್ಟು 'ಈ ದೇವರಿಂದಲೇ ಕೊಡಲ್ಪಟ್ಟ ಶಿಶುವನ್ನು ಹೊಟ್ಟೆಯಿಂದ ಹುಟ್ಟಿದ ಶಿಶುವಿನಂತೆ ಪ್ರಯತ್ನಪೂರ್ವಕವಾಗಿ, ಶ್ರದ್ಧೆಯಿಂದ ಸಂರಕ್ಷಿಸು' ಎಂದು ನುಡಿದನು. ಅನಂತರ ಮಗಳು ದೊರಕಿದ ಸಂತೋಷದಿಂದ

ಕಾರಯಾಮಾಸ ವಿಧಿವದ್ಬ್ರಾಹ್ಮಣೈರ್ಯಜುಷಾಂ ಗಣೈಃ ॥72॥

ತತಃ ಕಾಲೇನ ಸಾ ಸಾಧ್ವೀ ನವಮಾಸೇ ಗತೇ ಸತಿ ।
ಮಾಸೇ ತು ದಶಮೇ ಪ್ರಾಪ್ತೇ ಸುಷುವೇ ಪುತ್ರಮುತ್ತಮಮ್ ॥73॥

ಮಾಸೇ ಕನ್ಯಾಗತೇ ಭಾನೌ ದಶಮ್ಯಾಂ ರೋಹಿಣೀಯುತೇ ।
ಪಕ್ಷೇ ತು ಪ್ರಥಮೇ ದೇವೀ ಸಾಯಂಕಾಲೇ ಗುರೋರ್ದಿನೇ ॥74॥

ಪುತ್ರೋತ್ಪತ್ತಿಪ್ರವಕ್ತೄಣಾಂ ಸರ್ವಸ್ವಂ ದತ್ತವಾಂಸ್ತದಾ ।
ಗವಾಂ ಕೋಟಿ ಸಹಸ್ರಾಣಿ ಅಶ್ವಾನಾಮಯುತಂ ತಥಾ ॥75॥

ನವಧಾನ್ಯಾಧಿಕಂ ದಾನಂ ವಿನಾ ಸ್ವೇ ಛತ್ರಚಾಮರೇ ।
ದಾನಂ ಕೃತ್ವಾ ನೃಪಶ್ರೇಷ್ಠಃ ಸ್ವಸ್ತಿವಾಚನಮಾಚರತ್ ॥76॥

ಜಾತಕರ್ಮಾದಿಕಂ ಕರ್ಮ ಕೃತವಾನ್ ತತ್ಕ್ಷಣಂ ನೃಪಃ ।
ದಿವಸೇ ದ್ವಾದಶೇ ಪ್ರಾಪ್ತೇ ಕೃತ್ವಾ ಪುತ್ರಾಭಿಧಾನಕಮ್ ॥77॥

ತದ್ದಿನೇ ಬಹುವಿಪ್ರಾಣಾಂ ಭೋಜನಂ ಕೃತವಾನ್ನೃಪಃ ।
ಯನ್ನಾಮ್ನಾ ವಸುದಾನೇತಿ ಲೋಕೇ ಖ್ಯಾತಿಂ ಗಮಿಷ್ಯತಿ ॥78॥

**ಋಷಯ ಊಚುಃ–**

ಬಹುವಿಧವಾದ ದಾನಗಳನ್ನು ಶ್ರೇಷ್ಠವಿಪ್ರರಿಗೆ ಕೊಟ್ಟನು. (69–70) ಈ ಕೂಸಿನ ಪುಣ್ಯಪ್ರಭಾವದಿಂದಲೇ ಆಕಾಶರಾಜನ ಪತ್ನಿಯು ಗರ್ಭಿಣಿಯಾದಳು. ಗರ್ಭಿಣಿಯಾದ ಧರಣೀದೇವಿಯನ್ನು ಕಂಡು ಸಂತುಷ್ಟನಾದ ರಾಜನು ಮೂರನೆಯ ತಿಂಗಳಿನಲ್ಲಿ ಪುಂಸವನವನ್ನು, (71) ಐದನೇ ತಿಂಗಳಿನಲ್ಲಿ ಸೀಮಂತವನ್ನು ಯಜುರ್ವೇದೋಕ್ತವಾದ ಮಂತ್ರಗಳಿಂದ ವಿಧ್ಯುಕ್ತವಾಗಿ ಬ್ರಾಹ್ಮಣರ ಮೂಲಕವಾಗಿ ಮಾಡಿಸಿದನು. (72) ನವಮಾಸಗಳು ಕಳೆದು ಹತ್ತನೆಯ ತಿಂಗಳು ಪ್ರಾಪ್ತವಾದಾಗ ಕನ್ಯಾ ಮಾಸದ ಶುಕ್ಲಪಕ್ಷದ ದಶಮೀತಿಥಿಯಂದು ರೋಹಿಣೀ ನಕ್ಷತ್ರ– ವಿರುವಾಗ ಗುರುವಾರ ಸಂಜೆಯ ಸಮಯದಲ್ಲಿ ಒಂದು ಗಂಡುಮಗು ವನ್ನು ಪ್ರಸವಿಸಿದಳು. (73–74) ತನ್ನ ಮಗನು ಹುಟ್ಟಿದ ಸಂತೋಷದಿಂದ ರಾಜನು ಬಹುವಿಧವಾದ ಗೋದಾನ, ಅಶ್ವದಾನಗಳನ್ನು, ನವಧಾನ್ಯಾದಿ ದಾನಗಳನ್ನು ಮಾಡಿದನು. ಮಗನು ಹುಟ್ಟಿದ ಸುದ್ದಿಯನ್ನು ತಿಳಿಸಿದ ವ್ಯಕ್ತಿಗಳಿಗೆ ತನ್ನ ಛತ್ರ–ಚಾಮರವನ್ನು ಹೊರತು ಪಡಿಸಿ ಉಳಿದೆಲ್ಲವನ್ನೂ ಸಹ ದಾನಮಾಡಿದನು. (75–76) ಮುಂದೆ ಹನ್ನೆರಡನೆಯ ದಿನ ಪ್ರಾಪ್ತವಾದಾಗ ಬಹಳಷ್ಟು ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ, ಬಹುವಿಧವಾದ ದಾನಗಳನ್ನು ಕೊಟ್ಟು ಮಗನಿಗೆ ನಾಮಕರಣ ಸಂಸ್ಕಾರವನ್ನು

'ಶ್ರುತಃ ಪುತ್ರಪ್ರಭಾವಶ್ಚ ನ ಶ್ರುತಂ ಮುನಿಪುಂಗವ ।
ಅಯೋನಿಜಾಯಾಸ್ತತ್ಪುತ್ರ್ಯಾಃ ಕಿಂ ನಾಮ ಕೃತವಾನ್ನೃಪಃ' ॥79॥

ಸೂತ ಉವಾಚ–

'ಪದ್ಮೋದರೀಂ ಪದ್ಮಗರ್ಭಾಂ ಪದ್ಮಜಾತಾಂ ವರಾನನಾಮ್ ।
ಪದ್ಮಾಯಾ ಅವತಾರಾಂ ತಾಂ ಮತ್ವಾ ತಸ್ಯಾಸ್ತದಾಕರೋತ್ ॥80॥

ಅನುರೂಪಂ ನಾಮಕರ್ಮ ನಾಮ್ನಾ ಪದ್ಮಾವತೀತಿ ಚ ।
ವರ್ಧಮಾನೌ ಸುತೌ ದೃಷ್ಟ್ವಾ ರಾಜಾ ಸಂತೋಷಮಾಗತಃ ॥81॥

ಅಕಲಂಕೇಂದುಸದೃಶೌ ರಮಾಚಂದ್ರಸಮಾವುಭೌ ।
ಕಿಂ ತೇನ ಸುಕೃತಂ ರಾಜ್ಞಾ ಬಹುಜನ್ಮಾರ್ಜಿತಂ ಫಲಮ್ ॥82॥

ಅಗ್ರಜಾಂ ಪುತ್ರಿಕಾಂ ದೃಷ್ಟ್ವಾ ತದಂತೇ ಪುತ್ರಮುತ್ತಮಮ್ ।
ದೃಷ್ಟ್ವಾ ತುತೋಷ ಮನಸಾ ಸಂಪೂರ್ಣಾನಂದಸಾಗರಃ ॥83॥

ಮಾಡಿದನು. ಆ ಮಗು ಜಗತ್ತಿನಲ್ಲಿ ವಸುಧಾನನೆಂದು ಪ್ರಸಿದ್ಧವಾಯಿತು. (78)

ಆಕಾಶರಾಜನ ವೃತ್ತಾಂತವನ್ನು ತಿಳಿದ ಋಷಿಗಳು ಸೂತಾಚಾರ್ಯರನ್ನು ಕುರಿತು 'ಪುತ್ರಜನ್ಮವು ನಮ್ಮಿಂದ ಕೇಳಲ್ಪಟ್ಟಿರುವದು. ಆಕಾಶರಾಜನ ಅಯೋಜಿಜೆಯಾದ ಮಗಳಿಗೆ ಏನೆಂದು ನಾಮಕರಣವಾಯಿತು' ಎಂದು ಪ್ರಶ್ನಿಸಿದಾಗ (79) 'ಯಜ್ಞಭೂಮಿಯಲ್ಲಿ ದೊರೆತ ಅಯೋನಿಜೆಯಾದ ಹೆಣ್ಣುಮಗು ಪದ್ಮದಂತೆ ಉದರ, ಪದ್ಮದ ಮಧ್ಯಭಾಗದಂತೆ ಬಹು ಕೋಮಲಳೂ, ಪದ್ಮದಂತೆ ಶ್ರೇಷ್ಠವಾದ ಸುಂದರ ಮುಖವುಳ್ಳವಳೂ ಪದ್ಮೋದ್ಭವಳೂ ಹಾಗೂ ಪದ್ಮಾ ಎಂದು ಪ್ರಸಿದ್ಧಳಾದ ಲಕ್ಷ್ಮಿಯ ಅವತಾರ ಭೂತಳಾಗಿರುವಳೆಂದು ತಿಳಿದು ಪದ್ಮಾವತೀ ಎಂದು ನಾಮಕರಣ ಮಾಡಿದನು' ಎಂದು ಉತ್ತರಿಸಿದರು. (81)

ಕಲಂಕರಹಿತನಾದ ಚಂದ್ರಬಿಂಬದಂತೆ ಸೌಂದರ್ಯಭರಿತರಾದ ಸಮುದ್ರಮಥನಕಾಲದಲ್ಲಿ ಸಮುದ್ಭೂತರಾದ ಲಕ್ಷ್ಮೀ ಮತ್ತು ಚಂದ್ರನಂತಿರುವ ಪದ್ಮಾವತಿ ಮತ್ತು ವಸುದಾನರು ಆಕಾಶ ರಾಜನಿಗೆ ಬಹುಜನ್ಮಾರ್ಜಿತವಾದ ಪುಣ್ಯಫಲದಂತೆ ಆಕಾಶರಾಜನ ಅರಮನೆಯಲ್ಲು ಶೋಭಿಸುತ್ತಿದ್ದರು. (82) ಅಗ್ರಜಳಾದ ಪುತ್ರಿಯನ್ನು ಅನಂತರದಲ್ಲಿ ಸಮುದ್ಭೂತನಾದ ಪುತ್ರನನ್ನು ನೋಡುತ್ತಾ ಮನಸ್ಸಿನಿಂದಲೇ ಸಂಪೂರ್ಣವಾದ ಆನಂದ ಸಮುದ್ರದಲ್ಲಿ ಮುಳುಗಿದಂತೆ ಆಕಾಶರಾಜನು ಸಂತೋಷಪಡುತ್ತಿದ್ದನು. (83) ಹೀಗೆ ಭಗವತ್ಪ್ರದತ್ತವಾದ ಸುಂದರವಾದ ಸಂಸಾರ, ಸಂಪದ್ಭರಿತವಾದ ಸಾಮ್ರಾಜ್ಯ ಇವುಗಳಿಂದ ಸಂತುಷ್ಟನಾಗಿ ರಾಜ್ಯಭಾರ ಮಾಡುತ್ತಿದ್ದ ಆಕಾಶರಾಜನಿಗೆ

ಏವಂ ಕಾಲೇ ಗತೇ ತಸ್ಮಿನ್ ಸಾ ಬಾಲಾ ಯೌವನಂ ಗತಾ ।
ಯೌವನಾಢ್ಯಾಂ ವಿಶಾಲಾಕ್ಷೀಂ ದೃಷ್ಟ್ವಾ ರಾಜಾ ವ್ಯಚಿಂತಯತ್ ॥84॥

ವಿಚಾರಯಾಮಾಸ ನೃಪಃ ಪುತ್ರ್ಯರ್ಥಂ ವರಮುತ್ತಮಮ್ ।
ನ ಪ್ರಾಪ ದುಃಖಸಂತಪ್ತಃ 'ಕಸ್ಮೈ ದೇಯಾ ಮಯಾ ಸುತಾ' ॥85॥

ಇತಿ ಚಿಂತಾಬ್ಧಿಮಗ್ನೋಽಭೂತ್ ಪುತ್ರೀಪರಿಣಯೇ ತದಾ ।
ಅಸಮ್ಮತೋಽಕರೋತ್ಪುತ್ರಂ ಪರಂ ಸಂಸ್ಕಾರಸಂಸ್ಕೃತಮ್ ॥86॥

ಶ್ರುತ್ವಾ ರಾಜಸುತಾ ಬಾಲಾ ಬ್ರಾಹ್ಮಣೈರನುಜಂ ಪರಮ್ ।
ತದೋಪನೀತಂ ಸದ್ಯೋಽಭೂತ್ಪುತ್ರೀ ಯೌವನಪೀಡಿತಾ ॥87॥

ಸಾ ಕದಾಚಿದ್ವನಂ ಬಾಲಾ ಸಖೀಭಿಃ ಪರಿವಾರಿತಾ ।
ಜಗಾಮ ಪುಷ್ಪಾಣ್ಯಾಹರ್ತುಂ ಕನ್ಯಾ ಕಮಲಲೋಚನಾ ॥88॥

ವಸಂತಮಾಗತಂ ವೀಕ್ಷ್ಯ ವನೇ ತಾಭಿರ್ಭಯಾಕುಲಾ ।
ಪುಷ್ಪಾಣ್ಯಾಹಾರಯಾಮಾಸ ತರುಮೂಲಮುಪಾಶ್ರಿತಾ ॥89॥

ತದಾಗತೋ ನಾರದಸ್ತು ವೃದ್ಧೋ ಭೂತ್ವಾ ಜಟಾಧರಃ ।
ಧೂಲೀಧೂಸರಿತಾಂಗಶ್ಚ ಕರ್ಪೂರಸದೃಶದ್ಯುತಿಃ ॥90॥

ಪದ್ಮಾವತಿಯ ಭವಿಷ್ಯದ ಬಗ್ಗೆ, ಯೋಗ್ಯವರನ ಅನ್ವೇಷಣಾರ್ಥವಾಗಿ ಪುನಃ ಪುನಃ ಆಲೋಚನೆಯು ಬರುತ್ತಿತ್ತು. ಉತ್ತಮವಾದ ಅಳಿಯನನ್ನು ಹೊಂದಬೇಕುಂದು ಆಕಾಶರಾಜನು ಪದ್ಮಾವತಿಯ ಬಗ್ಗೆ ಪುನಃ ಪುನಃ ವಿಚಾರ ಮಾಡಿದರೂ ಸಹ ವರನು ದೊರೆಯದಿದ್ದಾಗ ಪುತ್ರನ ಉಪನಯನವನ್ನು ಮಾಡಿ ಮುಗಿಸಿದ ಆಕಾಶರಾಜನಿಗೆ ಮಗಳ ವಿವಾಹದ ಚಿಂತೆಯು ದಿನದಿನಕ್ಕೆ ಹೆಚ್ಚಾಯಿತು.(86)

ಒಂದು ಬಾರಿ .ಯೌವನಭರಿತಳಾದ, ಸುಂದರಾಂಗಿಯಾದ ಪದ್ಮಾವತಿಯು ಸಖಿಯರಿಂದ ಕೂಡಿಕೊಂಡು ಪುಷ್ಪಸಂಚಯಾರ್ಥವಾಗಿ ಕಾಡಿಗೆ ಹೋಗಿದ್ದಳು. (88) ಆಗ ಅಲ್ಲಿ ಬಂದ ಗಜವನ್ನು ನೋಡಿ ಭಯವನ್ನು ಹೊಂದಿ ಸಖಿಯರಿಂದ ಸಮೇತಳಾಗಿ ಮರದ ಹಿಂದೆ ಅಡಗಿದಳು. (89) ಅಲ್ಲಿಗೆ ನಾರದ ಮಹರ್ಷಿಯು ಜಟಾಧಾರಿಯಾದ, ಕರ್ಪೂರ ಸದೃಶವಾದ ಕಾಂತಿಯುಳ್ಳ, ವೃದ್ಧಬ್ರಾಹ್ಮಣನ ವೇಷದಿಂದ ಸಖಿಯರಿಂದೊಡಗೂಡಿದ ಪದ್ಮಾವತಿಯ ಸಮೀಪಕ್ಕೆ ತೆರಳಿದನು. (90) ವೃದ್ಧಬ್ರಾಹ್ಮಣನನ್ನು ನೋಡಿ ಆಶ್ಚರ್ಯಚಕಿತಳಾದ, ಪದ್ಮಾವತಿಯಿಂದ 'ಹೇ ಸಖಿಯರೇ! ಭಯಂಕರನಾದ ಈ ಬ್ರಾಹ್ಮಣನು ಯಾರು? ಇಲ್ಲಿಗೆ ಏಕೆ ಬಂದಿರುವನು. ಎಲ್ಲಿಗೆ ಹೋಗುವನು? ಎಂಬುದನ್ನು ವಿಚಾರಿಸಿರಿ' ಎಂಬುದಾಗಿ ತನ್ನ ಸಖಿಯರಿಗೆ ತಿಳಿಸಿದಾಗ

ಆಗತಂ ತಂ ಮುನಿಂ ದೃಷ್ಟ್ವಾ ವಿಸ್ಮಯಾಕುಲಮಾನಸಾ ।
ಪದ್ಮಾವತೀ ಸಖೀಃ ಪ್ರಾಹ ಚಟುಲಾ ಭೃಶಕಾತರಾ ॥91॥

'ಕೋಽಸೌ ಭಯಂಕರೋ ಬಾಲಾಃ ಕ್ವಯಾತ್ಯತ್ರವಿಚಾರ್ಯತಾಮ್' ।
ಇತ್ಯುಕ್ತಾಸ್ತಾಸ್ತದಾ ಕನ್ಯಾಃ ಪಪ್ರಚ್ಛುಃ ಸ್ಥವಿರಂ ದ್ವಿಜಮ್ ॥92॥

ಕನ್ಯಾ ಊಚುಃ–

'ಕೋಽಸಿ ವಿಪ್ರ ಮಹಾಪ್ರಾಜ್ಞ ಕಿಮರ್ಥಂ ತ್ವಮಿಹಾಽಗತಃ' ।
ವಾಕ್ಯಂ ತಾಸಾಂ ಸಮಾಕರ್ಣ್ಯ ಗುರುಃ ಪ್ರೋವಾಚ ಸದ್ವಚಃ ॥93॥

ನಾರದ ಉವಾಚ–

'ಅಹಂ ಕುಲಗುರುಃ ಸಾಕ್ಷಾದ್ಯುಷ್ಮಾಕಂ ವರಯೋಷಿತಾಮ್ ।
ಹಸ್ತಂ ದರ್ಶಯ ಬಾಲೇ ತ್ವಂ ಲಕ್ಷಣಾನಿ ವದಾಮಿ ತೇ' ॥94॥

ಉವಾಚ ಲಜ್ಜಯಾ ದೇವೀ "ಕಿಂ ವದಿಷ್ಯತಿ ಹೇ ದ್ವಿಜ"।
'ವಿದ್ಧಿ ತ್ವಂ ಪಿತೃತುಲ್ಯಂ ಮಾಂ ಮನಸಾ ನಿರ್ಮಲೇನ ಚ' ॥95॥

ಇತ್ಯುಕ್ತಾ ಮುನಿನಾ ತೇನ ಹಸ್ತಂ ದತ್ವಾ ವರಾಂಗನಾ ।
ಪ್ರಾಹ ಭಾವಿಶುಭಂ ಶ್ರೋತುಂ ನಿಜಲಕ್ಷಣಲಕ್ಷಿತಮ್ ॥96॥

ರಾಜಕುಮಾರಿಯಿಂದ ಪ್ರೇರಿತರಾದ ಸಖಿಯರು ವೃದ್ಧಬ್ರಾಹ್ಮಣ ರೂಪದಲ್ಲಿರುವ ನಾರದರನ್ನು ವಿಚಾರಿಸಿದರು. ಆಗ ನಾರದರು 'ಉತ್ತಮಕುಲಾಂಗನೆಯರಾದ ನಿಮಗೆ ನಾನು ಕುಲಪರಂಪರೆಯಿಂದ ಬಂದ ಪ್ರತ್ಯಕ್ಷ ಗುರುವಾಗಿದ್ದೇನೆ' ಎಂದು ಹೇಳಿ, ಪದ್ಮಾವತಿಯನ್ನು ಕುರಿತು 'ಸಾಮುದ್ರಿಕಶಾಸ್ತ್ರದಲ್ಲಿ ಹೇಳಿದ ಶುಭಸೂಚಕವಾದ ಲಕ್ಷಣಗಳನ್ನು ನಿನಗೆ ತಿಳಿಸುವೆನು. ನಿನ್ನ ಕೈಯನ್ನು ತೋರಿಸು' ಎಂದು ಹೇಳಲು, ಪರಪುರುಷರಿಗೆ ತನ್ನ ಹಸ್ತವನ್ನು ತೋರಿಸಲು ಸಂಕೋಚಹೊಂದಿದಳು. ಆಗ ನಾರದರು 'ತಂದೆಗೆ ಸಮಾನನೂ ಹಾಗೂ ವೃದ್ಧನೂ ನಿಮ್ಮ ಕುಲಗುರುವೂ ಆದ ನನ್ನನ್ನು ನೋಡಿ ಲಜ್ಜೆಪಡುವ ಅವಶ್ಯಕತೆಯಿಲ್ಲ'ವೆಂದು ಸ್ಪಷ್ಟವಾಗಿ ತಿಳಿಸಿದಾಗ ಶ್ರೇಷ್ಠಳಾದ ಪದ್ಮಾವತಿಯು ತನ್ನ ಹಸ್ತವನ್ನು ಚಾಚಿ ಮುಂದಿನ ಶುಭವನ್ನು ತಿಳಿಸಲು ಕೇಳಿಕೊಂಡಳು.(97)

### ನಾರದರಿಂದ ಉಕ್ತವಾದ ಪದ್ಮಾವತಿಯ ಸಲ್ಲಕ್ಷಣಗಳು

ಹಸನ್ಮುಖರಾದ ನಾರದರು, ಪದ್ಮಾವತಿಯ ಅಂಗೈಯನ್ನು ನೋಡಿ 'ಜಗದೊಡೆಯನಾದ ಸಾಕ್ಷಾಲ್ಲಕ್ಷ್ಮೀಪತಿಯೇ ನಿನ್ನ ಪಾಣಿಗ್ರಹಣವನ್ನು ಮಾಡಿ ಪತಿಯಾಗುವನು. ನಿನ್ನ ಹಸ್ತಗಳು

ಪದ್ಮಾವತ್ಯುವಾಚ–

'ಸತ್ಯಂ ವದ ಮಹಾಪ್ರಾಜ್ಞ ಲಕ್ಷಣಾನಿ ವಿಲೋಕ್ಯ ಮೇ' ।
ದೃಷ್ಟ್ವಾ ಪಾಣಿತಲಂ ಪ್ರಾಹ ಹಸನ್ವಿಧಿತನೂದ್ಭವಃ ॥97॥

ನಾರದ ಉವಾಚ–

'ಪತಿರ್ಭವತಿ ಧರ್ಮಜ್ಞೇ ತ್ರಿಲೋಕೇಶೋ ರಮಾಪತಿಃ ।
ಪಾಣೀ ಪದ್ಮದಲೋಪೇತೌ ಪಾದೌ ತೇ ಸ್ವಸ್ತಿಕಾಯತೌ ॥98॥

ಮುಖಂ ಚಂದ್ರಸಮಾಕಾರಂ ಚಕ್ಷುಃ ಕಮಲಕುಡ್ಮಲಮ್ ।
ತಿಲಪುಷ್ಪಸಮಾಕಾರಾ ನಾಸಿಕಾ ತೇ ವಿರಾಜತೇ ॥99॥

ಮುಕುರಾಭೌ ಕಪೋಲೌ ತೇ ಭ್ರುವೌ ತೇ ಧನುಷಾ ಸಮೇ ।
ಆಸ್ಯಂ ಕರ್ಪೂರಪಾತ್ರಂ ಚ ದಂತಾ ದಾಡಿಮಬೀಜವತ್ 100॥

ಅಧರಂ ರಕ್ತಪದ್ಮಾಭಂ ಜಿಹ್ವಾ ಮೃದುತರಾ ಶುಭೇ ।
ಅರಾಲಾಲಕಸಂಬದ್ಧಾ ಶ್ಯಾಮಲಾ ಭಾತಿ ವೇಣಿಕಾ ॥101॥

ಲಲಾಟಂ ರತ್ನಪೀಠಾಭಂ ಶ್ರೋತ್ರೇ ಶಷ್ಕಲಿಕಾಸಮೇ ।
ತನುಸ್ತೇ ಮನ್ಮಥಾಕಾರಪ್ರತಿಮಾಽಪ್ರತಿಮಪ್ರಭಾ ॥102॥

ಕಂಠಃ ಸೂರ್ಯಾಂಶುಸದೃಶಸ್ತಾಂಬೂಲರಸದರ್ಶಕಃ ।
ಸ್ತನೌ ಪೀನೌ ಘನೌ ಕುಬ್ಜೌ ಶುಭೌ ತೇ ಮಗ್ನಚೂಚುಕೌ ॥103॥

ಉದರಂ ಕದಲೀಪರ್ಣಸದೃಶಂ ನಿಮ್ನನಾಭಿಕಮ್ ।
ಕಟಿಸ್ತವ ಕರಿಧ್ವಂಸಿಕಟಿಸಾಮ್ಯಯುತಾ ಶುಭಾ ॥104॥

ಪದ್ಮಚಿಹ್ನೆಗಳಿಂದ ಕೂಡಿವೆ. ಪದ್ಮದ ಎಲೆಗಳಂತೆ ಪ್ರಕಾಶಿಸುತ್ತಿವೆ. ಪಾದಗಳು ಸ್ವಸ್ತಿಕ ಚಿಹ್ನೆಯಿಂದ ಕೂಡಿವೆ. (98) ಚಂದ್ರನಂತಹ ಮುಖ, ಕಮಲದಂತಹ ನೇತ್ರಗಳು, ಎಳ್ಳಿನ ಹೂವಿನಂತಿರುವ ಮೂಗು, ಕನ್ನಡಿಯಂತೆ ಪ್ರಕಾಶಿಸುತ್ತಿರುವ ನಿನ್ನ ಕಪಾಳಗಳು, ಬಿಲ್ಲಿಗೆ ಸಮಾನವಾದ ಹುಬ್ಬು, ಕರ್ಪೂರದ ಪಾತ್ರೆಯಂತೆ ಹೊಳೆಯುತ್ತಿರುವ ಮುಖ, ದಾಳಿಂಬದ ಬೀಜದಂತೆ ಪ್ರಕಾಶಮಾನವಾದ ದಂತಪಂಕ್ತಿಗಳು, ಕೆಂದಾವರೆಯಂತೆ ಕೆಂಪಾದ ತುಟಿ, ಕೋಮಲವಾದ ನಾಲಿಗೆ, ಗುಂಗುರು ಕೂದಲುಗಳಿಂದ ಕೂಡಿದ ನೀಳವಾದ ಕಪ್ಪಾದ ಹೆರಳು, ಮುಂಗುರುಳುಗಳು, ರತ್ನಮಯಪೀಠದಂತೆ ಹೊಳೆಯುವ ಹಣೆ, ಚಕ್ಕುಲಿಯಂತೆ ಮನೋಹರವಾದ ಕಿವಿಗಳು, ಅಪ್ರತಿಮ ಪ್ರಭಾಯುಕ್ತವಾದ, ಮನ್ಮಥನನ್ನು ಧಿಕ್ಕರಿಸುವ ರೂಪವುಳ್ಳ ದೇಹ, ಸೂರ್ಯಕಿರಣ, ತಾಂಬೂಲರಸ ಇವುಗಳಂತೆ

ರಂಭಾಸ್ಥಂಭಸಮಾಕಾರಂ ತವೋರುಯುಗಲಂ ರಮೇ ।
ಪೃಷ್ಠಂ ತೇ ವೇದಿವದ್ಭಾತಿ ಕಿಂ ತ್ವಯಾ ಸುಕೃತಂ ಕೃತಮ್ ॥105॥

ಗಮನಂ ಕರಿರಾಜಸ್ಯ ಸದೃಶಂ ತೇ ವರಾನನೇ ।
ಪೂರ್ವಾರ್ಜಿತೇನ ಪುಣ್ಯೇನ ಲಭ್ಯತೇ ಸಕಲಂ ಶುಭೇ" ॥106॥

ಇತಿ ಸಂಭಾಷ್ಯ ತಾಂ ದೇವೀಂ ದೇವರ್ಷಿಃ ಪದ್ಮಸಂಭವಾಮ್ ।
ಅಂತರ್ದಧೇ ನಾರದಸ್ತು ಸರ್ವಾಸಾಂ ಪುರತೋ ಮುನಿಃ ॥107॥

ಸಂಸ್ತುತ್ಯ ಕಮಲಾಂ ದೇವೀಂ ಮನಸಾ ಚಿಂತಯನ್ ರಮಾಮ್।
ಮನಸಾ ವಂದನಂ ಕೃತ್ವಾ ಜಗಾಮಾಥ ಋಷಿಸ್ತದಾ ॥108॥

ಸ್ತುತಿಂ ರಮಾಯಾಃ ಕಮಲೋದ್ಭವಾಯಾಃ
ಋಷಿಶ್ಚ ಕೃತ್ವಾ ಕಮಲೋದ್ಭವಾತ್ಮಜಃ ।
ಜಗಾಮ ಸುಸ್ಥಾನಮನಂತ ಶೈಲಂ
ನಾರಾಯಣಸ್ಯೈವ ಮನೋಹರಂ ಶುಭಮ್ ॥109॥

ಇತಿ ಶ್ರೀ ಭವಿಷ್ಯೋತ್ತರಪುರಾಣೇ ಶ್ರೀವೇಂಕಟಗಿರಿಮಾಹಾತ್ಮ್ಯೇ
'ಮೃಗಯಾವಿಹಾರೋದ್ಯುಕ್ತಶ್ರೀನಿವಾಸಾಲಂಕಾರಾದಿವರ್ಣನಂ' ನಾಮ ಷಷ್ಠೋಽಧ್ಯಾಯಃ

* * *

ಉಜ್ಜ್ವಲವಾದ, ಶೋಭಾಯಮಾನವಾದ ಕಂಠ, ಸುಂದರ ಮಂಗಲಮಯ ಕುಚಗಳು, ಬಾಳೆಯ ಎಲೆಯಂತಿರುವ ತೆಳ್ಳಗಿನ ಉದರ, ಉದರದಲ್ಲಿ ಒಳಹೊಕ್ಕ ನಾಭಿ, ಸಿಂಹದ ಸೊಂಟದಂತಿರುವ ಸೊಂಟ, ಕದಲೀಕಾಂಡಗಳಿಗೆ ಸಮಾನವಾದ ತೊಡೆಗಳು – ಹೀಗೆ ಪರಮಸುಂದರವಾದ, ಪರಮ ಮಂಗಲಮಯವಾದ ರೂಪವುಳ್ಳವಳೆಂದು ಪದ್ಮಾವತಿಯ ಆಕಾರವನ್ನು ವರ್ಣಿಸಿ, ಪೂರ್ವಸುಕೃತದಿಂದ ನಿನಗೆ ಸರ್ವಮಂಗಲವೂ ಲಭಿಸುವದೆಂದು ಹೇಳಿ, ಸಖಿಯರಿಂ–ದೊಡಗೂಡಿದ ಪದ್ಮಾವತಿಯ ಸಮ್ಮುಖದಲ್ಲಿಯೇ ಅಂತರ್ಧಾನ ವನ್ನು ಹೊಂದಿದರು. ತಮ್ಮ ಮನಸ್ಸಿನಲ್ಲಿ ಲಕ್ಷ್ಮೀದೇವಿಯನ್ನು ಸ್ತುತಿಸಿ, ಅವಳ ಪಾದಪದ್ಮಗಳಿಗೆ ನಮಸ್ಕರಿಸಿ, ಅವಳನ್ನು ಸ್ಮರಿಸುತ್ತಾ, ಕಮಲೋದ್ಭವಳಾದ ಮಹಾಲಕ್ಷ್ಮಿಯ ಸ್ತೋತ್ರವನ್ನು ಮಾಡುತ್ತಾ, ಬ್ರಹ್ಮಪುತ್ರರಾದ ನಾರದರು ಶ್ರೀನಿವಾಸನ ಆವಾಸಸ್ಥಾನವಾದ ಶೇಷಪರ್ವತಕ್ಕೆ ಪ್ರಯಾಣವನ್ನು ಬೆಳಸಿದರು.

ಇಲ್ಲಿಗೆ ಶ್ರೀಭವಿಷ್ಯೋತ್ತರಪುರಾಣದಲ್ಲಿಯ ವೇಂಕಟಗಿರಿಮಾಹಾತ್ಮ್ಯದಲ್ಲಿ
ಮೃಗಯಾವಿಹಾರೋದ್ಯುಕ್ತಶ್ರೀನಿವಾಸಾಲಂಕಾರಾದಿವರ್ಣನ ವೆಂಬ ಆರನೆಯ ಅಧ್ಯಾಯವು
ಪರಿಸಮಾಪ್ತವಾಯಿತು.

ಅಥ ಶ್ರೀಭವಿಷ್ಯೋತ್ತರಪುರಾಣೇ ವೇಂಕಟೇಶಮಾಹಾತ್ಮ್ಯೇ

## ಸಪ್ತಮೋಽಧ್ಯಾಯಃ

ಶ್ರೀ ಸೂತ ಉವಾಚ–

ಕನ್ಯಾಯಾಃ ಜನನಂ ಪ್ರೋಕ್ತಂ ಕುಮಾರಸ್ಯಾಪಿ ವೈ ತತಃ ।
ಸಾಂಗಂ ವದಾಮಿ ಚಾರಿತ್ರ್ಯಂ ವೈವಾಹಂ ಪುಣ್ಯವರ್ಧನಮ್ ॥1॥

ಕರೀಂದ್ರಸಂಗೇನ ಸಮಾಗತೋ ಹರಿ–
ಸ್ತುರಂಗಮಾಸ್ಥಾಯ ವರಾಂಗನಾನಾಮ್ ।
ಶ್ರೀಗಂಧಲೇಪಾರುಣಚಾರುವಕ್ತ್ರಾ
ಬಾಲಾರ್ಕಭಾಃ ಸೋಽಥ ಸಮೀಪಮಾಯಯೌ ॥2॥

ಗರ್ಜಂತಂ ಗಜರಾಜಂ ತಂ ದೃಷ್ಟ್ವಾ ಪದ್ಮಾವತೀಮುಖಾಃ ।
ವನಸ್ಪತಿಮುಪಾಶ್ರಿತ್ಯ ತತ್ರ ಲೀನಾ ಬಭೂವಿರೇ ॥3॥

## ಏಳನೆಯ ಅಧ್ಯಾಯ

ವಸುದಾನ ಮತ್ತು ಪದ್ಮಾವತಿಯರ ಜನನವನ್ನು ತಿಳಿಸಿದ ಸೂತಾಚಾರ್ಯರು ಶೌನಕಾದಿ ಋಷಿಗಳನ್ನು ಕುರಿತು 'ಇನ್ನು ಮುಂದೆ ನಾನು ನಿಮಗೆ ಪುಣ್ಯಕರವಾದ ಶ್ರೀಶ್ರೀನಿವಾಸಪದ್ಮಾವತಿಯರ ಸಾಂಗವಾದ ವಿವಾಹ ಚರಿತ್ರೆಯನ್ನು ವರ್ಣನ ಮಾಡುವೆನು. ಕೇಳುವವರಾಗಿರಿ' ಎಂದು ನುಡಿದು ಪದ್ಮಾವತೀಶ್ರೀನಿವಾಸರ ಸಂದರ್ಶನ ಸಂಭಾಷಣಾದಿಗಳನ್ನು ವರ್ಣನಮಾಡುವರು.(1)

ಪದ್ಮಾವತೀ ಶ್ರೀನಿವಾಸರ ಸಂವಾದ

ಮೃಗಯಾರ್ಥವಾಗಿ ಬೆಟ್ಟದಿಂದ ಕೆಳಗಿಳಿದ ಶ್ರೀನಿವಾಸನು ಆನೆಯ ನಿಮಿತ್ತವಾಗಿ ಬಂದವನಾಗಿ ಕುದುರೆಯನ್ನೇರಿ ಕುಳಿತುಕೊಂಡೇ ಕಾನನದಲ್ಲಿ ಪುಷ್ಪಸಂಚಯನದಲ್ಲಿ ನಿರತರಾದ ಶ್ರೀಗಂಧಾದಿ ಸೌಂದರ್ಯವರ್ಧಕಗಳಿಂದ ಅಲಂಕೃತರಾದ, ಉದಯಿಸುವ ಸೂರ್ಯನಂತೆ ಸ್ವರ್ಣವರ್ಣದಿಂದ ಹೊಳೆಯುತ್ತಿದ್ದ ಸುಂದರಿಯರಾದ ಅಂಗನೆಯರ ಸಮೀಪಕ್ಕೆ ಬಂದನು. (2) ಘೀಳಿಡುತ್ತಿದ್ದ ಗಜರಾಜನನ್ನು ನೋಡಿ ಭೀತರಾದ ಪದ್ಮಾವತಿಯಿಂದ ಕೂಡಿದ ಸಖಿಯರು ಭೀತಿಯಿಂದ ಕಣ್ಣುಗಳನ್ನು ಮುಚ್ಚಿಕೊಂಡು, ಒಬ್ಬರನ್ನೊಬ್ಬರು ಗಟ್ಟಿಯಾಗಿ ಹಿಡಿದುಕೊಂಡು ಮರ ಬಳ್ಳಿಗಳ

ನಿಮೀಲ್ಯ ನೇತ್ರವರ್ತ್ಮಾನಿ ವ್ಯೂಹಂ ಕೃತ್ವಾ ವರಾಂಗನಾಃ ।
ಪಶ್ಯಂತಿ ಚ ತರುಚ್ಛನ್ನಾಃ ಪುನಃ ಪುನರವಸ್ಥಿತಾಃ ॥4॥

ತದಂತರೇಽಬಲಾಸ್ಸರ್ವಾ ದದೃಶುರ್ಹಯಮುತ್ತಮಮ್ ॥
ಬಾಲಾರ್ಕಸದೃಶಾಕಾರಂ ರತ್ನಾಭರಣಭೂಷಿತಮ್ ॥5॥

ಪುರುಷೇಣ ಸಮಾಯುಕ್ತಂ ಮನ್ಮಥಾಕಾರತೇಜಸಾ ।
ತಂ ದೃಷ್ಟ್ವಾ ಚೇಭರಾಜೋಽಪಿ ಹಯಸ್ಥಂ ಪುರುಷೋತ್ತಮಮ್ ॥6॥

ನಮಸ್ಕೃತ್ಯ ಯಥಾನ್ಯಾಯಂ ಜಗಾಮ ವಿಪಿನಂ ನದನ್ ।
ತಂ ದೃಷ್ಟ್ವಾ ಯೋಷಿತಸ್ಸರ್ವಾಃ ವಿಸ್ಮಯಾಕುಲಮಾನಸಾಃ ॥7॥

ಕರಸಂಪುಟಮಾಪನ್ನಾಶ್ಚಲಿತಾಸ್ತು ಭಯಾತುರಾಃ ।
ವೃಕ್ಷಮೂಲಗತಾ ಬಾಲಾ ಅನ್ಯೋನ್ಯಂ ವಾಕ್ಯಮಬ್ರುವನ್ ॥8॥

"ಕೋಽಯಮತ್ರ ವರಾರೋಹೇ ಸಖಿ ಕಂಜಾಯತೇಕ್ಷಣೇ ।
ಕೋಽಸೌ ಕಿರಾತರೂಪೀ ಚ ಕಿಂ ನ ದೃಷ್ಟಸ್ತ್ವಯಾ ಪುರಃ ॥9॥

ತುರಗೋಪರಿ ಸಂಸ್ಥಾಯ ಯ ಆಗಚ್ಛತಿ ಹೇ ಸಖಿ" ।
ಏವಂ ವದಂತ್ಯಸ್ತಾಸ್ತಸ್ಥುಃ ಸಾ ಚ ಪದ್ಮಾವತೀ ಶುಭಾ ॥10॥

ಉವಾಚ ಮಂದಂ ವಚನಂ ಸಖೀನಾಮಗ್ರತೋ ದ್ವಿಜ ।

ಪದ್ಮಾವತ್ಯುವಾಚ–

ಮರೆಯಲ್ಲಿ ಅವಿತುಕೊಂಡರು. (3–4) ಭೀತಿಯಿಂದ ಇಣುಕಿ ನೋಡುತ್ತಿದ್ದ ಅವರು, ಸೂರ್ಯನಂತೆ ತೇಜಸ್ವಿಯಾದ, ರತ್ನಾಭರಣಗಳಿಂದ ಅಲಂಕೃತವಾದ ಶ್ರೇಷ್ಠವಾದ ಹಯದ ಮೇಲೆ ಆಸೀನನಾದ ಮನ್ಮಥನಿಗಿಂತಲೂ ಮನ್ಮಥನಾದ, ಪುರುಷೋತ್ತಮ ನನ್ನು ಹಾಗೂ ಗರ್ಜಿಸುತ್ತಿರುವ ಗಜರಾಜನು ಆ ಪುರುಷಶ್ರೇಷ್ಠನನ್ನು ನೋಡಿ ನಮಸ್ಕಾರವನ್ನು ಮಾಡಿ ಗರ್ಜಿಸುತ್ತಾ ಕಾಡಿನೊಳಗೆ ಹೊರಟುಹೋದುದನ್ನು ನೋಡಿ ಆಶ್ಚರ್ಯಚಕಿತರಾದರು. (5–7) 'ಯಾರೀ ಕಿರಾತರೂಪದಲ್ಲಿರುವ ಪುರುಷಶ್ರೇಷ್ಠನು? ಇವನನ್ನು ನಾವೆಲ್ಲಿಯೂ ಸಹ ಈ ಹಿಂದೆ ನೋಡಿರುವದಿಲ್ಲ. ಹೇ ಕಮಲ ನಯನೆಯೇ! ಇವನು ಕುದುರೆಯನ್ನೇರಿ ನಮ್ಮೆಡೆಗೇ ಬರುತ್ತಿರುವನು' ಎಂದು ಪರಸ್ಪರ ಮಾತನಾಡಿಕೊಂಡರು. (9) ಅಷ್ಟರಲ್ಲಿ ತಾವಿದ್ದಲ್ಲಿಗೇ ಕುದುರೆಯನ್ನೇರಿ ಬರುತ್ತಿದ್ದ ಕಿರಾತರೂಪಿಯಾದ ಪುರುಷೋತ್ತಮನ ತಂದೆ, ತಾಯಿ, ಬಂಧು–

'ಪೃಚ್ಛಂತು ತಸ್ಯ ವೃತ್ತಾಂತಂ ಪಿತೃಮಾತೃಸ್ವಬಾಂಧವಾನ್ ॥11॥
ದೇಶಂ ವೃತ್ತಂ ಕುಲಂ ಶೀಲಂ ನಾಮಗೋತ್ರಾದಿಕಂ ತಥಾ ।
ಇತಿ ಸಖ್ಯಾ ಸಮಾಜ್ಞಪ್ತಾಸ್ತಾ ಊಚುರ್ವಚನಂ ಸ್ತ್ರಿಯಃ ॥12॥
ಅಗತಂ ಪುರುಷಂ ದೃಷ್ಟ್ವಾ 'ಕೋಽಸಿಕೋಽಸೀ'ತಿ ಚಾಬ್ರುವನ್।

ಕನ್ಯಾ ಊಚುः–

'ಕಿಮರ್ಥಮಾಗತೋಽಸಿ ತ್ವಂ ಕಿಂ ತೇ ಕಾರ್ಯಂ ವದ ಪ್ರಭೋ ॥13॥
ನ ಸಂತಿ ಪುರುಷಾ ಹ್ಯತ್ರ ಗಚ್ಛ ಗಚ್ಛೇ'ತಿ ಚಾಬ್ರುವನ್ ।
ತಾಸಾಂ ತದ್ವಚನಂ ಶ್ರುತ್ವಾ ಹಯಸ್ಥೋ ವಾಚಮೂಚಿವಾನ್ ॥14॥

ಶ್ರೀನಿವಾಸ ಉವಾಚ–

'ಅಸ್ತಿ ಕಾರ್ಯಂ ವರಾರೋಹಾಃ ರಾಜಪುತ್ರ್ಯಾಃ ಸಮೀಪಕೇ' ।
ಇತಿ ತಸ್ಯ ವಚಃ ಶ್ರುತ್ವಾ ಸಖ್ಯಸ್ತಾಃ ಪುನರಬ್ರುವನ್ ॥15॥

ಕನ್ಯಾ ಊಚುः–

'ಕಿಂ ಕಾರ್ಯಂ ವದ ಶೀಘ್ರೇಣ ಯತ್ತೇ ಮನಸಿ ವರ್ತತೇ ।
ಕ್ವ ತೇ ವಾಸಶ್ಚ ಕಿಂ ನಾಮ ಕಾ ತೇ ಮಾತಾ ಚ ಕಃ ಪಿತಾ ॥16॥
ಕೋ ಭ್ರಾತಾ ಕಾ ಚ ಭಗಿನೀ ಕಿಂ ಕುಲಂ ಗೋತ್ರಮೇವ ಚ' ।
ಇತಿ ತಾಸಾಂ ವಚಃ ಶ್ರುತ್ವಾ ನ್ಯಗದಜ್ಜಗದೀಶ್ವರಃ ॥17॥

ಬಾಂಧವರು, ದೇಶ, ಕುಲ, ವೃತ್ತಾಂತ, ಶೀಲ, ಹೆಸರು, ಗೋತ್ರ ಇತ್ಯಾದಿ ಸಮಾಚಾರವನ್ನು ವಿಚಾರಿಸಲು ಪದ್ಮಾವತಿಯು ತನ್ನ ಸಖಿಯರಿಗೆ ತಿಳಿಸಿದಳು. (12) ಆಗ ಸಖಿಯರು ಪುರುಷಶ್ರೇಷ್ಠನನ್ನು 'ನೀನಾರು? ಇಲ್ಲಿಗೇಕೆ ಬರುತ್ತಿರುವೆ? ಇಲ್ಲಿ ನಿನ್ನ ಕೆಲಸವಾದರೂ ಏನು? ಇಲ್ಲಿ ಪುರುಷರಾರೂ ಇರುವದಿಲ್ಲ. ನೀನು ಬೇಗನೆ ಇಲ್ಲಿಂದ ಹೊರಡು' ಎಂದು ನುಡಿದರು. (13–14) ಇದನ್ನು ಕೇಳಿದ ಶ್ರೀನಿವಾಸನು 'ರಾಜಪುತ್ರಿಯಾದ ಪದ್ಮಾವತಿಯ ಬಳಿ ನನಗೆ ಕೆಲಸವಿರುವದೆಂದು ತಿಳಿಸಿದನು. (15) ಆಗ ಸಖಿಯರು 'ನಿನಗೇನು ಕೆಲಸವಿರುವದನ್ನು ಶೀಘ್ರದಲ್ಲಿ ಹೇಳುವವನಾಗು. ನೀನು ಯಾರು? ಎಲ್ಲಿರುವಿ? ನಿನ್ನ ಹೆಸರೇನು? ನಿನ್ನ ತಂದೆ ತಾಯಿಗಳಾರು? ನಿನ್ನ ಅಣ್ಣ ತಮ್ಮ ತಂಗಿಯರಾರು? ನಿನ್ನ ಕುಲಗೋತ್ರಗಳಾವವು? ಎಂಬುದನ್ನು ಶೀಘ್ರದಲ್ಲಿ ತಿಳಿಸು' ಎಂದು ನುಡಿದಾಗ (16–17) ಶ್ರೀನಿವಾಸನು 'ಕನ್ಯಾಪೇಕ್ಷೆಯು ನನ್ನ

ಶ್ರೀನಿವಾಸ ಉವಾಚ-

'ಕನ್ಯಾಪೇಕ್ಷಾ ಮುಖ್ಯಕಾರ್ಯಂ ತದಂತೇ ಪ್ರವದಾಮಿ ವಃ' ।
ಇತಿ ತಾಃ ಪ್ರೋಚ್ಯ ಚೋವಾಚ ದೇವೀಂ ಪದ್ಮಾವತೀಮಥ ॥18॥

'ಸಿಂಧುಪುತ್ರಕುಲಂ ಪ್ರಾಹುರಸ್ಮಾಕಂ ತು ಪುರಾವಿದಃ ।
ಜನಕೋ ವಸುದೇವಶ್ಚ ದೇವಕೀ ಜನನೀ ಮಮ ॥19॥

ಅಗ್ರಜಃ ಶ್ವೇತಕೇಶಸ್ತು ಸುಭದ್ರಾ ಭಗಿನೀ ಮಮ ।
ಪಾರ್ಥೋಽಪಿ ಮೇ ಸಖಾ ದೇವಿ ಪಾಂಡವಾ ಮಮ ಬಾಂಧವಾಃ ॥20॥

ಷಣ್ಣಾಂ ತು ಮೃತ ಪುತ್ರಾಣಾಂ ಕೃತನಾಮ್ನಾ ಮಹಾತ್ಮನಾಮ್ ।
ವಿಯೋಗತಪ್ತೌ ಪಿತರೌ ಸಪ್ತಮಂ ರಾಮ ಇತ್ಯಥ ॥21॥

ಚಕ್ರತುರ್ನಾಮಕರಣಂ ಪಿತೃಲಿಂಗಮುಪಾಗತಮ್ ।
ಜಾತೋಽಹಮಷ್ಟಮೋಽಷ್ಟಮ್ಯಾಂ ಸುಭದ್ರಾ ಮದನಂತರಮ್ ॥22॥

ಮಾತೃವರ್ಣಶ್ಚ ಮೇ ದೇವಿ ಕೃಷ್ಣಪಕ್ಷೇ ಜನಿರ್ಮಮ ।
ತಸ್ಮಾತ್ ಕೃಷ್ಣೇತಿ ಮಾಂ ದೇವಿ ಚಕ್ರತುರ್ನಾಮ ಸಂಸ್ಕೃತಂ ॥23॥

ವರ್ಣತೋ ನಾಮತಶ್ಚಾಪಿ ಕೃಷ್ಣಂ ಪ್ರಾಹುರ್ಮನೀಷಿಣಃ ।
ವೃತ್ತಾಂತೋ ಹ್ಯಖಿಲೋ ಮತ್ತೋ ಜ್ಞೇಯಃ ಪಂಡಿತನಂದಿನಿ ॥24॥

ಮುಖ್ಯ ಕಾರ್ಯವಾಗಿರುವದು. ಪದ್ಮಾವತಿಯ ಬಳಿಯಲ್ಲಿಯೇ ಇದೆಲ್ಲವನ್ನೂ ವಿವರಿಸುವದಾಗಿ ಹೇಳಿ, ಪದ್ಮಾವತಿಯ ಬಳಿಗೆ ಬಂದು, (18) "ಪೂರ್ವದಲ್ಲಿ ನಮ್ಮನ್ನು ಬಲ್ಲವರು ನನ್ನ ಕುಲವು ಸಿಂಧುಪುತ್ರನಾದ ಚಂದ್ರನ ಕುಲವೆಂದು ತಿಳಿಸುವರು. ನನ್ನ ತಂದೆ ವಸುದೇವ. ದೇವಕಿಯೇ ನನ್ನ ತಾಯಿ. (19) ಬಲರಾಮನು ನನ್ನ ಅಗ್ರಜ. ಸುಭದ್ರೆಯು ನನ್ನ ತಂಗಿ. ಕುಂತೀ ಪುತ್ರನಾದ ಅರ್ಜುನನು ನನ್ನ ಗೆಳೆಯನು. ಪಾಂಡವರೆಲ್ಲರೂ ನನ್ನ ಬಂಧುಗಳು. (20) ಅವರು ನನ್ನ ಸೋದರತ್ತೆಯ ಮಕ್ಕಳು. ಆರು ಜನ ಮಕ್ಕಳು ಜನಿಸಿ ಕಂಸನಿಂದ ಮರಣಹೊಂದಿದ ಅನಂತರದಲ್ಲಿ ಪುತ್ರವಿಯೋಗ ತಪ್ತರಾದ ನನ್ನ ತಾಯಿ-ತಂದೆಯರು ಹುಟ್ಟಿದ ಏಳನೆ ಮಗನಿಗೆ ರಾಮ ಎಂಬುದಾಗಿ ನಾಮಕರಣವನ್ನು ಮಾಡಿದರು. ಅವನು ನನ್ನ ತಂದೆಯಂತೆ ಶ್ವೇತವರ್ಣದವನಾಗಿರುವನು. ನಾನು ಕೃಷ್ಣಪಕ್ಷದ ಅಷ್ಟಮಿಯಂದು ಹುಟ್ಟಿರುವದರಿಂದ, (21-22) ತಾಯಿಯಂತೆ ಕೃಷ್ಣವರ್ಣ ನಾಗಿರುವದರಿಂದ ಪ್ರಾಜ್ಞರು ನನ್ನನ್ನು ವರ್ಣದಿಂದಲೂ,

ಯುಷ್ಮಾಭಿರುಚ್ಯತಾಂ ವಾರ್ತಾ ಗೋತ್ರನಾಮಾಕುಲಾದಿಕಮ್' ।
ಇತಿ ತೇನ ಸಮಾಜ್ಞಪ್ತಾ ಪ್ರೋವಾಚ ನೃಪನಂದಿನೀ ॥25॥

ಪದ್ಮಾವತ್ಯುವಾಚ–

'ಆಕಾಶರಾಜತನಯಾಂ ನಿಷಾಧಾಧಿಪ ವಿದ್ಧಿ ಮಾಮ್ ।
ನಾಮ್ನಾ ಪದ್ಮಾವತೀಂ ಕೃಷ್ಣ ಕುಲಂ ಶೀತಕರಸ್ಯ ಚ ॥26॥

ಗೋತ್ರಮತ್ರೇಃ ಕೀರಾತೇಂದ್ರ ಶೀಘ್ರಂ ಗಚ್ಛೇ'ತಿ ಚಾಬ್ರವೀತ್ ।

ಶ್ರೀನಿವಾಸ ಉವಾಚ–

'ಕಿಮರ್ಥಂ ನಿಷ್ಠುರಂ ವಾಕ್ಯಂ ಮಂದಂ ಕಿಂ ನ ಪ್ರಭಾಷಸೇ ॥27॥

ಅನ್ನಂ ಕಾಂಕ್ಷಂತಿ ವೈ ಲೋಕಾ ಯೋ ದದಾತಿ ನರೋತ್ತಮಃ ।
ಸ ಪುಮಾನ್ಪುಣ್ಯಮಾಪ್ನೋತಿ ಜಲದೋಽಪಿ ಫಲಂ ಲಭೇತ್ ॥28

ಆದಿಶನ್ ಮೃದುಭಾಷೀ ಚ ನ ತು ನಿಷ್ಠುರಭಾಷಣಃ ।
ತಥಾಽಹಂ ಕಾಮಮುದ್ದಿಶ್ಯ ಪಾತ್ರಭೂತೋಽಸ್ಮಿ ಸಾಂಪ್ರತಮ್ ॥29॥

ಸುಖಮೇಷ್ಯಸಿ ದಾನೇನ ತ್ವಂತೇ ಸ್ವರ್ಗಂ ಗಮಿಷ್ಯಸಿ ।
ಆತ್ಮಾನಂ ದಿಶ ಮಹ್ಯಂ ತ್ವಂ ಕಿಂ ವೃಥಾ ನಿಷ್ಠುರೋಕ್ತಿಭಿಃ' ॥30॥

ಹೆಸರಿನಿಂದಲೂ ಕೃಷ್ಣನೆಂದೇ ಕರೆಯುವರು. ಸುಭದ್ರೆಯು ನನ್ನ ಅನಂತರದಲ್ಲಿ ಜನಿಸಿರುವಳು ಇದೆಲ್ಲವು ನನ್ನ ವೃತ್ತಾಂತ" ಎಂದು ತಿಳಿಸಿ (24) "ನಿನ್ನ ಕುಲ–ಗೋತ್ರಗಳನ್ನು ತಿಳಿಸು' ಎಂದು ಪದ್ಮಾವತಿಯನ್ನು ಕೇಳಿದಾಗ ಪದ್ಮಾವತಿಯು 'ನಾನು ಆಕಾಶರಾಜನ ಮಗಳು, ತನ್ನದು ಚಂದ್ರವಂಶ, ಅತ್ರಿಮುನಿಯ ಗೋತ್ರ, ತನ್ನ ಹೆಸರು ಪದ್ಮಾವತೀ' ಎಂಬುದಾಗಿ ತಿಳಿಸಿ, ಇಲ್ಲಿಂದ ಶೀಘ್ರವಾಗಿ ಹೊರಟುಹೋಗೆಂದು ಹೇಳಿದಳು. (26) ಶ್ರೀನಿವಾಸನು ಲೌಕಿಕ ಯುವಕರಂತೆ ವಿಡಂಬನೆಯನ್ನು ಮಾಡುತ್ತಾ 'ಏಕೆ ನಿಷ್ಠುರವಾದ ವಚನಗಳನ್ನಾಡುವಿ. ಅನ್ನವನ್ನು ಬಯಸುವ ಜನರಿಗೆ ಅನ್ನವನ್ನು ಕೊಡುವದೇನೋ ಅತ್ಯಂತ ಪುಣ್ಯಕರವಾದದ್ದು. ಹಾಗೆಯೇ ಜಲದಾನವೂ ಸಹ. ಆದರೆ ಅನ್ನ–ಜಲಗಳನ್ನು ನಗುಮುಖದಿಂದ ನೀಡಿದಲ್ಲಿ ಅದು ಪುಣ್ಯದಾಯಕವೇ ಹೊರತು ನಿಷ್ಠುರಮಾತಗಳನ್ನಾಡುತ್ತಾ ಗಂಟುಮುಖದಿಂದ ದಾನಮಾಡಿದಲ್ಲಿ ಯಾವ ಫಲವೂ ಸಹ ಇರುವದಿಲ್ಲ. (29) ಹಾಗೆಯೇ ನಾನು ನಿನ್ನಲ್ಲಿ ಕಾಮನೆಯನ್ನು ಹೊಂದಿ ಇಲ್ಲಿಗೆ ಬಂದಿರುವೆನು. ನಾನು ನಿನಗೆ ಯೋಗ್ಯನಾಗಿದ್ದು ನಿನ್ನನ್ನೇ ನನಗೆ ಅರ್ಪಿಸಿಕೋ. ಇಲ್ಲಿಯೂ ಸುಖವನ್ನು ಹೊಂದಿ ಕೊನೆಗೆ ಸ್ವರ್ಗವನ್ನು ಹೊಂದುವಿ. ಏಕೆ ವ್ಯರ್ಥವಾದ ನಿಷ್ಠುರವಾದ

ಸಾ ತಸ್ಯ ವಚನಂ ಶ್ರುತ್ವಾ ಕ್ರೋಧಾತ್ತಾಮ್ರವಿಲೋಚನಾ ।

ಪದ್ಮಾವತ್ಯುವಾಚ–

'ಅವಾಚ್ಯಂ ವದಸೇ ಮೂಢ ಜೀವನೇಚ್ಛಾ ನ ವಿದ್ಯತೇ ॥31॥

ಆಕಾಶ ರಾಜಸ್ತ್ವಾಂ ದೃಷ್ಟ್ವಾ ಹನಿಷ್ಯತಿ ನ ಸಂಶಯಃ ।
ಯಾವನ್ನಾಯಾತಿ ತಾವತ್ತ್ವಂ ಗಚ್ಛ ಶೀಘ್ರಂ ಸ್ವಮಾಲಯಮ್' ॥32॥

ಶ್ರೀನಿವಾಸ ಉವಾಚ–

'ಕಾರ್ಯಂತೇ ಮರಣಂ ಸೌಖ್ಯಂ ಕಾರ್ಯಹಾನೌ ಮೃತಿಃ ಕುತಃ ।
ಕಥಂ ಹನ್ಯಾತ್ಸ ರಾಜೇಂದ್ರ ಅಧರ್ಮಾಭಿಮುಖೋ ಹಿ ಮಾಮ್ ॥33॥

ತ್ವಂ ಕನ್ಯಾಽಹಂ ವರೋ ದೇವಿ ಕೋಽತ್ರಾನ್ಯಾಯೋ ಮಹೀಪತೇಃ ।

ಪದ್ಮಾವತ್ಯುವಾಚ–

'ಶೃಣು ಮೂಢ ನ ಜಾನಾಸಿ ಬಾಲಭಾವೇನ ಕಿಂ ವೃಥಾ ॥34॥

ತ್ವಾಂ ದೃಷ್ಟ್ವಾಽಽಕಾಶರಾಜೋಽಪಿ ಕೃತ್ವಾ ತೇ ಗಲಬಂಧನಮ್ ।
ಬಧ್ನೀಯಾನ್ನಿಗಡೈರ್ಮೂರ್ಖ ಭವಿಷ್ಯತ್ಪ್ರವದಾಮ್ಯಹಮ್' ॥35॥

ಶ್ರೀನಿವಾಸ ಉವಾಚ–

ಮಾತುಗಳನ್ನು ನುಡಿಯುವಿ' (30) ಎಂದು ಮಾತನ್ನು ಮುಂದುವರೆಸಿದಾಗ "ಮೂಢನಾದ ನೀನು ಅವಾಚ್ಯವಾದ ವಚನಗಳನ್ನಾಡುತ್ತಿರುವಿ. ನಿನಗೆ ಬದುಕುವ ಆಸೆ ಇಲ್ಲವೆಂದು ಕಾಣುತ್ತದೆ. ಆಕಾಶರಾಜನು ನೀನು ಇಲ್ಲಿಗೆ ಬಂದಿದ್ದನ್ನು ನೋಡಿದರೆ ನಿನ್ನನ್ನು ಶಿಕ್ಷಿಸುವದರಲ್ಲಿ ಸಂದೇಹವಿಲ್ಲ. ಆಕಾಶರಾಜನು ಬರುವದರೊಳಗಾಗಿ ನೀನು ಇಲ್ಲಿಂದ ಹೊರಡು" ಎಂದು ಹೇಳಿದರೂ ಸಹ ಶ್ರೀನಿವಾಸನು ಅಲ್ಲಿಂದ ಹೋಗಲಿಲ್ಲ. (32) ಅಷ್ಟಲ್ಲದೇ 'ಕಾರ್ಯವು ಮುಗಿದ ಅನಂತರದಲ್ಲಿ ಮರಣವು ಸುಖವೆನಿಸುವದು. ಕಾರ್ಯವು ಪೂರ್ಣವಾಗದೇ ಮರಣವಾದರೂ ಹೇಗೆ ಬರುವದು? ಅಧರ್ಮದಿಂದ ವಿಮುಖನಾದ, ಅಪರಾಧವಿವರ್ಜಿತನಾದ ನನ್ನನ್ನು ಆಕಾಶರಾಜನು ಹೇಗೆ ತಾನೆ ಶಿಕ್ಷಿಸುವನು? (33) ನೀನು ಕನ್ಯೆ; ನಾನು ವರ. ನಾನು ನಿನ್ನನ್ನು ಬಯಸುವದರಲ್ಲಿ ತಪ್ಪೇನಿದೆ?' ಎಂಬುದಾಗಿ ಮಾತನ್ನು ಮುಂದುವರೆಸತೊಡಗಿದಾಗ, ಪದ್ಮಾವತಿಯು ಅತ್ಯಂತ ಕೋಪದಿಂದ 'ಹೇ ಮೂರ್ಖನೇ! ಬಾಲಿಶನಾದ ನೀನು ಯಾವದನ್ನೂ ಸರಿಯಾಗಿ ತಿಳಿದಿರುವದಿಲ್ಲ. (34) ನಿನ್ನ ಭವಿಷ್ಯವೇನೆಂಬುವದನ್ನು ಹೇಳುವೆನು ಕೇಳು. ನನ್ನೊಡನೆ ಅವಾಚ್ಯ

'ನಿಶ್ಚಿತಂ ಮರಣಂ ದೇವಿ ರಂತುಕಾಮೋಽಸ್ಮ್ಯಹಂ ತ್ವಯಾ ।
ಜಾತಸ್ಯ ಮರಣಂ ನಿತ್ಯಂ ಪೂರ್ವಕರ್ಮಫಲಾನುಗಮ್ ॥36॥
ಆಕಾಶರಾಜೋ ಧರ್ಮಾತ್ಮಾ ಕಥಂ ಹನ್ಯಾದನಾಗಸಮ್' ।

ಪದ್ಮಾವತ್ಯುವಾಚ–

'ಗೌರವಂ ಯನ್ನಿಷಾದೇಂದ್ರ ನೃಪಸ್ಯಾಸ್ಯ ಹರೇರ್ಯಥಾ ॥38॥
ವರದಸ್ಯಾಥ ರಂಗಸ್ಯ ವೇಂಕಟಾಚಲವಾಸಿನಃ ।
ತದ್ರಕ್ಷ ತ್ವಂ ಮಹಾಬಾಹೋ ಸುಖಂ ಗಚ್ಛ ಸ್ವಮಾಲಯಮ್' ॥39।
ಇತ್ಯುಕ್ತೋಽಪಿ ತಯಾ ದೇವ್ಯಾ ನಿಷಾದೇಂದ್ರಾಕೃತಿರ್ಹರಿಃ ।
ನಿರಾಕೃತ್ಯ ಚ ತದ್ವಾಕ್ಯಂ ಹಯಸ್ಥಃ ಪುನರಾಪತತ್ ॥40॥
ಹಯಮಗ್ರೇ ಕೃತಂ ವೀಕ್ಷ್ಯ ಸಾ ಬಾಲಾ ವಾಕ್ಯಮಬ್ರವೀತ್ ।

ಪದ್ಮಾವತ್ಯುವಾಚ–

'ತ್ಯಕ್ತ್ವಾ ಚ ಪಿತರೌ ಬಂಧೂನ್ ಭ್ರಾತೃಮುಖ್ಯಾನ್ ವನೇಚರ ॥41॥
ಅನಾಥೋ ಮ್ರಿಯಸೇ ವ್ಯರ್ಥಂ ಕಿಮರ್ಥಂ ಕಾಕಭೋಜನಮ್' ।
ಇತಿ ತಸ್ಯಾಃ ವಚಃ ಶ್ರುತ್ವಾ ತಾಮೂಚೇ ವಾರಿಜೇಕ್ಷಣಃ ॥42॥

ಶ್ರೀನಿವಾಸ ಉವಾಚ–

ಮಾತುಗಳನ್ನಾಡುವದನ್ನು ಆಕಾಶರಾಜನು ನೋಡಿದಲ್ಲಿ ನಿನ್ನ ಕುತ್ತಿಗೆಗೆ ನೇಣುಹಾಕುವನು ಅಥವಾ ಬೇಡಿಗಳಿಂದ ನಿನ್ನನ್ನು ಬಂಧಿಸಿ ಸೆರೆಮನೆಗೆ ತಳ್ಳುವನು' ಎಂದು ಎಚ್ಚರಿಸಿದಳು.(35) ಆಗ ಶ್ರೀನಿವಾಸನು 'ಜನಿಸಿದ ಪ್ರತಿಯೊಬ್ಬನಿಗೂ ಸಹ ಪೂರ್ವಕರ್ಮ ಫಲಾನುಸಾರವಾಗಿ ಮರಣವೆಂಬುದು ನಿಶ್ಚಿತವು. ಸಾಯುವದರಲ್ಲಿ ನಾನು ನಿನ್ನೊಡನೆ ಕ್ರೀಡಿಸಬೇಕೆಂಬ ಬಯಕೆಯನ್ನು ಹೊಂದಿರುವೆನು. (36) ಇಂತಹ ಅಪರಾಧರಹಿತನಾದ ನನ್ನನ್ನು ಧಾರ್ಮಿಕನಾದ ಆಕಾಶರಾಜನು ಹೇಗೆ ಕೊಲ್ಲುವನು (ಶಿಕ್ಷಿಸುವನು?)' ಎಂದು ನುಡಿದನು. ಇದರಿಂದ ಬಹುರೋಷಾವಿಷ್ಟಳಾದ ಪದ್ಮಾವತಿಯು 'ವೇಂಕಟಾಚಲ ನಿವಾಸಿಯಾದ ಪರಮಾತ್ಮನ, ಶ್ರೀರಂಗಾಧಿಪತಿಯ ಮೇಲಿನ ಗೌರವದಿಂದ, ರಾಜನ ಮೇಲಿನ ಗೌರವದಿಂದ ನಿನ್ನನ್ನು ಹಾಗೆಯೇ ಬಿಡುತ್ತಿರುವೆನು. ಅವರೆಲ್ಲರೂ ಸಹ ನಿನ್ನನ್ನು ರಕ್ಷಿಸಲಿ. ಶೀಘ್ರವಾಗಿ ಇಲ್ಲಿಂದು ಹೊರಟು ನಿನ್ನ ಮನೆಯನ್ನು ಸೇರಿಕೋ' ಎಂದೆಚ್ಚರಿಸಿದಳು. (38–39) ಹೀಗೆ ಎಚ್ಚರಿಸಿದರೂ ಸಹ ಶ್ರೀನಿವಾಸನು ಅವಳ ಮಾತನ್ನು

'ವಿಧಿನಾ ಲಿಖಿತಂ ಯತ್ತು ನ ತದ್ವ್ಯರ್ಥಂ ಭವಿಷ್ಯತಿ ।
ಜಯೋವಾಽಪಜಯೋ ವಾಸ್ಯಾತ್ತ್ವಯಿಭೋಗಂಕರೋಮ್ಯಹಮ್' ॥43॥

ಇತ್ಯುಕ್ತಾ ಕೋಪತಾಮ್ರಾಕ್ಷೀ ಸಖೀಭಿಃ ಪರಿವಾರಿತಾ ।
ತರ್ಜಯಂತೀ ಜಗದ್ಯೋನಿಂ ಶಿಲಾಪಾಣಿಸ್ಸಮಾಗಮತ್ ॥44॥

ತಾಡಯಾಮಾಸ ಗೋವಿಂದಂ ಶಿಲಾಭಿಃ ಶೀಘ್ರಗತ್ವರೈಃ ।
ತಾಡ್ಯಮಾನಃ ಶಿಲಾವರ್ಷೈರ್ನ್ಯಪತದ್ಧಯರಾಟ್ತ್ವಯಮ್ ॥45॥

ತ್ಯಕ್ತ್ವಾಸುಂ ಸ್ವಹಯಂ ದೃಷ್ಟ್ವಾ ಮುಕ್ತಕೇಶೋ ಮುಹುರ್ಮುಹುಃ ।
ಪಶ್ಯನ್ಪಶ್ಯನ್ ದಿಶಃ ಸರ್ವಾ ಅಭ್ರಮನ್ ವಿಭ್ರಮನ್ನಿವ ॥46॥

ಹಯೋ ವೈ ಸಂಕಟಂ ಪ್ರಾಪ್ತೋ ಮಮಾತ್ರ ಕೃತಸನ್ನಿಧೇಃ ।
ಇತ್ಯುಚ್ಚರನ್ ರಮಾಕಾಂತೋ ಜಗಾಮೋತ್ತರದಿಙ್ಮುಖಃ ॥47॥

ಆರೂಢಸೋಪಾನಗಣೋ ಗಿರೇರ್ವಿಭು–
ರ್ವಿಡಂಬಯಂಲ್ಲೋಕಮವಾಪ ಶಯ್ಯಾಮ್ ।

ಲೆಕ್ಕಿಸದೇ ಕುದುರೆಯನ್ನು ಮುಂದೆ ನಡೆಸುವದನ್ನು ಕಂಡು ಪದ್ಮಾವತಿಯು (40) 'ನಿನ್ನ ತಂದೆತಾಯಿ ಬಂಧು ಬಾಂಧವರು ಅಣ್ಣತಮ್ಮಂದಿರು ಇವರನ್ನು ಬಿಟ್ಟು ವ್ಯರ್ಥವಾಗಿ ನನ್ನ ಕೈಯಿಂದ ಮರಣವನ್ನು ಹೊಂದಿ ಅನಾಥ ಹೆಣವಾಗಿ ಕಾಗೆಗಳಿಗೆ ಆಹಾರವಾಗುವಿಯೇಕೆ? ಶೀಘ್ರದಲ್ಲಿ ಹಿಂದಿರುಗು' ಎಂದು ನುಡಿದಳು. (41–42) ಆಗ ಶ್ರೀನಿವಾಸನು 'ವಿಧಿಲಿಖಿತವು ವ್ಯರ್ಥವಾಗುವದಿಲ್ಲ. ಜಯವೋ ಅಪಜಯವೋ ಏನಾದರಾಗಲಿ ನಾನು ನಿನ್ನೊಡನೆ ಕ್ರೀಡಿಸುವೆನು' ಎಂದನು. (43) ಇದರಿಂದ ಅತ್ಯಂತ ಕೋಪದಿಂದ ಕೆಂಪಾದ ಕಣ್ಣಗಳುಳ್ಳ ಪದ್ಮಾವತಿಯು ಶ್ರೀನಿವಾಸನನ್ನು ಬೈಯುತ್ತಾ ಕೈಯಲ್ಲಿ ಕಲ್ಲುಗಳನ್ನು ತೆಗೆದುಕೊಂಡು ಜೋರಾಗಿ ತಾಡನಮಾಡಿದಳು. (45) ಕುದುರೆಯೂ ಸಹ ಕಲ್ಲುಗಳ ಪೆಟ್ಟಿನಿಂದ ನೆಲಕ್ಕೆ ಬಿದ್ದು ಮರಣವನ್ನು ಹೊಂದಿತು. ಶ್ರೀನಿವಾಸನು ಜಗದ್ವಿಡಂಬನೆಯನ್ನು ಮಾಡುವಂತೆ ಕುದುರೆಯ ರೂಪವನ್ನು ತಾಳಿದ ವಾಯುದೇವನೂ ವಿಡಂಬನೆಮಾಡಿದ್ದನ್ನು ನಾವು ಇಲ್ಲಿ ನೋಡಬಹುದಾಗಿದೆ. (46) ಕಪಟನಾಟಕ ಸೂತ್ರಧಾರಿಯಾದ ಶ್ರೀನಿವಾಸನು ಸಂಕಟಕ್ಕೀಡಾದವನಂತೆ ಸುತ್ತಮುತ್ತಲೂ ನೋಡುತ್ತಾ, ಕೆದರಿದ ಕೂದಲುಗಳುಳ್ಳವನಾಗಿ, ಉತ್ತರದಿಕ್ಕನ್ನು ಕುರಿತು ಪ್ರಯಾಣ ಮಾಡಿ, ಬೆಟ್ಟವನ್ನೇರಿ, ಸಂಕಟವಿಲ್ಲ

ಪ್ರಾಪ್ಯಾಧಿಮಾನಂದಯುತೋऽಪಿ ಮಾಧವೋ
ಯಥಾ ಯುಗಾಂತೇ ವಟಪತ್ರಶಾಯೀ ||48||

ಇತಿ ಶ್ರೀ ಭವಿಷ್ಯೋತ್ತರಪುರಾಣೇ ಶ್ರೀವೇಂಕಟಗಿರಿಮಾಹಾತ್ಮ್ಯೇ ಪದ್ಮಾವತೀಶ್ರೀನಿವಾಸಯೋಃ ಪರಸ್ಪರಸಂವಾದಾದಿವರ್ಣನಂ ನಾಮ ಸಪ್ತಮೋಽಧ್ಯಾಯಃ

* * *

ದವನಾದರೂ ಸಹ ಮಹಾನಂದಪರಿಪೂರ್ಣನಾಗಿದ್ದರೂ ಸಹ, ಜಗದ್ವಿಡಂಬನಾರ್ಥವಾಗಿ ಮಹಾಪ್ರಳಯ ಕಾಲದಲ್ಲಿ ಆಲದೆಲೆಯ ಮೇಲೆ ಮಲಗುವಂತೆ ತನ್ನ ವಾಸಸ್ಥಾನವಾದ ವಲ್ಮೀಕದಲ್ಲಿ ಹಾಸಿಗೆಯ ಮೇಲೆ ಮಲಗಿಕೊಂಡನು.(48)

ಇಲ್ಲಿಗೆ ಶ್ರೀಭವಿಷ್ಯೋತ್ತರಪುರಾಣದಲ್ಲಿಯ ವೇಂಕಟಗಿರಿಮಾಹಾತ್ಮ್ಯದಲ್ಲಿ ಪದ್ಮಾವತೀಶ್ರೀನಿವಾಸಯೋಃ ಪರಸ್ಪರಸಂವಾದಾದಿವರ್ಣನ ವೆಂಬ ಏಳನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

ಅಥ ಶ್ರೀಭವಿಷ್ಯೋತ್ತರಪುರಾಣೇ ವೇಂಕಟೇಶಮಾಹಾತ್ಮ್ಯೇ

## ಅಷ್ಟಮೋऽಧ್ಯಾಯಃ

**ಸೂತ ಉವಾಚ–**

**ಶಯನಂ ಪ್ರಾಪ ಪರ್ಯಂಕೇ ಶ್ರೀನಿವಾಸೋ ವೃಷಾಕಪಿಃ ।**
**ತದಾऽऽಗತಾ ಚ ಸಾ ದೇವೀ ಸೇವಾರ್ಥಂ ಬಕುಲಾ ಶುಭಾ ॥1॥**

**ಷಡ್ವಿಧಾನ್ನಂ ಸಮಾದಾಯ ಸೂಪಾಪೂಪರಸಾನ್ವಿತಮ್ ।**
**ರಮಾಪತೇಸ್ತು ಬಕುಲಾ ಭಕ್ತಿಭಾವೇನ ಸಂಯುತಾ ॥2॥**

**ಶಯಾನಂ ಶ್ರೀನಿವಾಸಂ ಚ ವಲ್ಮೀಕಸ್ಥಾನಮಾಶ್ರಿತಮ್ ।**
**ಶ್ವಸಂತಂ ದೀರ್ಘನಿಶ್ವಾಸಂ ರುದಂತಂ ನೇತ್ರಬಿಂದುಭಿಃ ॥3॥**

**ಅಭಾಷಮಾಣಂ ಶ್ರೀಕಾಂತಂ ಬಭಾಷೇ ಬಕುಲಾ ಶುಭಾ ।**

**ಬಕುಲಾ ಉವಾಚ–**

**'ಉತ್ತಿಷ್ಠೋತ್ತಿಷ್ಠ ಗೋವಿಂದ ಕಿಂ ಶೇಷೇ ಪುರುಷೋತ್ತಮ ॥4॥**

**ನ ಕದಾಚಿದ್ದಿವಾಸ್ವಾಪಃ ನ ಕೃತಂ ರೋದನಂ ಹರೇ ।**
**ಕಿಮರ್ಥಂ ದುಃಖ ಮೇ ತತ್ತೇ ಆರ್ತವದ್ದೃಶ್ಯಸೇ ಕುತಃ ॥5॥**

## ಎಂಟನೆಯ ಅಧ್ಯಾಯ

### ಶ್ರೀನಿವಾಸನನ್ನು ಕುರಿತು ಬಕುಲಾಮಾಲೆಯ ಸಾಂತ್ವನ

ಬೆಟ್ಟವನ್ನೇರಿ ಬಂದು ತನ್ನ ವಲ್ಮೀಕವನ್ನು ಸೇರಿದ ಭಗವಂತನು ಒಬ್ಬ ಸಾಮಾನ್ಯ ಮನುಷ್ಯನಂತೆ, ಮಲಗಿಕೊಂಡು ನಿಟ್ಟುಸಿರು ಬಿಡುತ್ತಾ ಕಣ್ಣೀರು ಸುರಿಸುತ್ತಾ, ಅಳುತ್ತಾ, ಮಾತನಾಡದೇ ಮಲಗಿದನು. ಇಂತಹ ಲಕ್ಷ್ಮೀಪತಿಯಾದ ಶ್ರೀನಿವಾಸನನ್ನು ಕಂಡು ಷಡ್‌ವಿಧ ರಸಗಳಿಂದ ಯುಕ್ತವಾದ ಆಹಾರವನ್ನು ಭೋಜನಕ್ಕಾಗಿ ತಂದ ಬಕುಲಾಮಾಲೆಯು ಬಹು ದುಃಖಿತಳಾಗಿ 'ಹೇ ಗೋವಿಂದನೇ! ಪುರುಷೋತ್ತಮನಾದ ನೀನು ಹೀಗೇಕೆ ದುಃಖತಪ್ತನಾದವನಂತೆ ಮಲಗಿರುವಿ. ನೀನೆಂದಿಗೂ ಹಗಲು ಮಲಗಿದ್ದನ್ನಾಗಲೀ ಈ ರೀತಿಯಾಗಿ ದುಃಖಿಸಿದ್ದನ್ನಾಗಲಿ ನಾನು ನೋಡಿರುವದಿಲ್ಲ.

ಮನೋಗತಂ ವಾ ಕಿಂ ದೇವ ತದ್ವದಸ್ವ ಯಥಾರ್ಥತಃ ।
ಪರಮಾನ್ನಂ ಕೃತಂ ದೇವ ಭೋಕ್ತುಮಾಗಚ್ಛ ಮಾಧವ' ॥6॥

ಬಕುಲಾ ವಚನಂ ಶ್ರುತ್ವಾ ನೋವಾಚ ವಚನಂ ಹರಿಃ ।
ಹರಿಂ ದೃಷ್ಟ್ವಾ ಹಿರಣ್ಯಾಂಗೀ ಪುನರ್ವಾಕ್ಯಮುವಾಚ ಸಾ ॥7॥

"ಕಿಂ ದೃಷ್ಟಂ ವಿಪಿನೇ ಕೃಷ್ಣ ಕಿಮರ್ಥಂ ದುಃಖಮುಲ್ಬಣಮ್ ।
ಆರ್ತಿಹೀನೋಽಪಿ ದೇವ ತ್ವಮಾರ್ತವದ್ದೃಶ್ಯಸೇ ಕುತಃ ॥8॥

ಮನೋಗತಂ ವದಾದೇಶಂ ಗೌರವಂ ಮಯಿ ಮಾ ಕ್ರಥಾಃ ।
ಗೌರವಂ ಬಲರಾಮೇ ಸ್ಯಾದ್ದೇವಕೀವಸುದೇವಯೋಃ ॥9॥

ದುಃಖಂ ಭವತಿ ತ್ವಾಂ ದೃಷ್ಟ್ವಾ ಹ್ಯಭುಕ್ತಂ ಭೂತಭಾವನ ।
ಸರ್ವಲೋಕಾರ್ತಿಸಂಹರ್ತಃ ಪುಣ್ಯಮೂರ್ತೇ ನಮೋಽಸ್ತುತೇ ॥10॥

ಕಾ ದೃಷ್ಟ್ವಾ ಭುವಿ ಕನ್ಯಾ ವಾ ಗಾಂಧರ್ವೀ ವಾ ಸುರೋತ್ತಮ ।
ಕಸ್ಯಾಃ ಸಂಗಂ ಸಮಾಪೇಕ್ಷ್ಯ ಚಿತ್ತವೈಕಲ್ಯಮದ್ಯ ತೇ ॥11॥

ನೀನೇಕೆ ಆರ್ತನಾದವನಂತೆ ತೋರುತ್ತಿರುವಿ? ನೀನು ದುಃಖಿತನಂತೆ ಏಕೆ ವರ್ತಿಸುತ್ತಿರುವೆಯೆಂಬುದರ ಕಾರಣವನ್ನಾದರೂ ತಿಳಿಸು. ನಿನ್ನ ಮನಸ್ಸಿನಲ್ಲಿ ಏನಿರುವದೋ ಅದನ್ನು ನನಗೆ ತಿಳಿಸು. ಹೇ ಸ್ವಾಮಿಯೇ! ನಿನಗೋಸ್ಕರವಾಗಿ ಪರಮಾನ್ನವನ್ನು ಮಾಡಿ ತಂದಿರುವೆನು. ಭೋಜನಾರ್ಥವಾಗಿ ಆಗಮಿಸು' ಎಂದು ನುಡಿದಳು. (6) ಇಷ್ಟು ನುಡಿದರೂ ಸಹ ಭಗವಂತನು ಏನನ್ನೂ ಮಾತನಾಡಲಿಲ್ಲ. ಆಗ ಬಕುಲೆಯು 'ಹೇ ಭಗವಂತನೇ! ನೀನು ಅರಣ್ಯದಲ್ಲಿ ಏನು ನೋಡಿರುವಿ? ದುಃಖರಹಿತನಾಗಿದ್ದರೂ ಸಹ ನೀನೇಕೆ ದುಃಖಿತನಾದಂತೆ ತೋರುತ್ತಿರುವಿ? (8) ನೀನು ಸಂಕೋಚವನ್ನು ಮಾಡಲಾರದೇ ನಿನ್ನ ಮನಸ್ಸಿನಲ್ಲಿ ಏನಿದೆಯೆಂಬುದನ್ನು ತಿಳಿಸು. ನಿನಗೆ ಬೇಕಾದರೆ ಬಲರಾಮನಲ್ಲಿಯೇ ಆಗಲೀ, ವಸುದೇವ-ದೇವಕಿಯರಲ್ಲಿ ನೀನು ಗೌರವ ಮೂಲಕವಾದ ಸಂಕೋಚವನ್ನಿಟ್ಟುಕೋ. ಆದರೆ ನನ್ನಲ್ಲಿ ಯಾವದೇ ಸಂಕೋಚ ಪಡದೇ ನಿನ್ನ ಮನಸ್ಥವಾದ ವಿಷಯವನ್ನು ಹೇಳು. (9) ಊಟವಿಲ್ಲದೇ ದುಃಖಿತನಂತೆ ವರ್ತಿಸುತ್ತಿರುವ ನಿನ್ನನ್ನು ನೋಡಿ ನನಗೆ ದುಃಖವಾಗುತ್ತಿದೆ. ಸರ್ವಲೋಕಗಳ ದುಃಖಪರಿಹಾರಕನಾದ ಹೇ ಸ್ವಾಮಿಯೇ! ಮಂಗಳಮೂರ್ತಿಯೇ ! ನಿನಗೆ ನಮಸ್ಕಾರಗಳು. (10) ನೀನು ಯಾವದೇ ಕನ್ಯೆಯನ್ನಾಗಲೀ, ಗಂಧರ್ವಸ್ತ್ರೀಯನ್ನಾಗಲೀ ನೋಡಿ ಮೋಹಗೊಂಡಿರುವೆಯೋ ಹೇಗೆ? ಯಾರ ಸಂಗವನ್ನಪೇಕ್ಷಿಸಿ ನಿನಗಿಂದು ಈ ಮನೋವಿಕಲತೆಯು

ಕಾ ಚ ಪುಣ್ಯವತೀ ಬಾಲಾ ಬಾಲಂ ಭಕ್ತವಶಂ ಹರಿಮ್ ।
ಮೋಹಯಾಮಾಸ ಕಾಮಾರ್ತಾ ನ ಜಾನಾಮಿ ಜಗದ್ಗುರೋ ॥12॥

ವದ ಗೋವಿಂದ ತತ್ಕಾರ್ಯಂ ಕ್ಷಣಮಾತ್ರಾತ್ಕರೋಮ್ಯಹಮ್ ।
ಮೃಗಂ ದೃಷ್ಟ್ವಾ ಭಯಂ ಪ್ರಾಪ್ತಃ ಚೋರಂ ವಾ ಕ್ರೂರರೂಪಿಣಮ್ ॥13॥

ಪಿಶಾಚಭೂತಪ್ರೇತಾನ್ ವಾ ನ ಜಾನಾಮಿ ರಮಾಪತೇ ।
ಮಂತ್ರಂ ವಾ ಯಂತ್ರಪೂಗಾನ್ ವಾ ಮೂಲಿಕಾನೌಷಧಾನ್ಯಪಿ ॥14॥

ಕಾರಯಿತ್ವಾ ಯಥಾಶಾಸ್ತ್ರಂ ತತ್ಸರ್ವಂ ಶಮಯಾಮ್ಯಹಮ್' ।
ಇತ್ಯುಕ್ತೇಽಪಿ ಹರೌ ತೂಷ್ಣೀಂ ಸ್ಥಿತೇ ಬಕುಲಮಾಲಿಕಾ ॥15॥

ಆನೀತಂ ತತ್ರ ನಿಕ್ಷಿಪ್ಯ ತತ್ಸಮೀಪಮುಪಾಗತಾ ।
ಪಾದಸಂವಹನಂ ಕೃತ್ವಾ ಸಾಂತ್ವಯಾಮಾಸ ಚಾಸಕೃತ್ ॥16॥

ಸಾಂತ್ವಯಿತ್ವಾ ತಯಾಽಽಯಾಸಸ್ವಿನ್ನಂ ದೇಹಂ ಸಮಂತತಃ ।
ಆಪಾದಮೌಲಿಪರ್ಯಂತಂ ಕರಾಭ್ಯಾಂ ಪರಿಮೃಜ್ಯ ಚ ॥17॥

ಬಂದಿರುವದು. (11) ಪುಣ್ಯವತಿಯಾದ ಯಾವ ಕನ್ಯೆಯು ಭಕ್ತವಶನಾದ ಸರ್ವದೋಷಹರನಾದ ನಿನ್ನನ್ನು ಮೋಹಗೊಳಿಸಿರುವಳು? ನಿನಗೆ ಏನಾಗಬೇಕೆಂಬುದು ನನಗೆ ತಿಳಿಯದಾಗಿದೆ. (12) ನೀನು ತಿಳಿಸಿದಲ್ಲಿ ಯಾವದೇ ಕಾರ್ಯವನ್ನಾಗಲೀ ಕ್ಷಣಮಾತ್ರದಲ್ಲಿ ಸಾಧಿಸಿಕೊಡುವೆನು. ಹೇ ಗೋವಿಂದನೇ! ಅರಣ್ಯದಲ್ಲಿ ಕಳ್ಳರು, ಕ್ರೂರರೂಪಿಗಳಾದ ಭೂತಪ್ರೇತಪಿಶಾಚಾದಿಗಳು, ಕ್ರೂರಮೃಗಗಳು – ಇವುಗಳನ್ನು ನೋಡಿ ನೀನು ಭಯಗೊಂಡಿರುವೆಯಾ ಹೇಗೆ? ನಾನು ಪಿಶಾಚಿಗಳನ್ನೇ ಆಗಲಿ ಭೂತಪ್ರೇತಗಳನ್ನೇ ಆಗಲೀ ನಾನು ತಿಳಿದಿರುವದಿಲ್ಲ. ಆದರೂ ಸಹ ಯಂತ್ರ–ಮಂತ್ರಗಳನ್ನಾಗಲೀ ಮಾಡಿಸಿ ಆ ಭಯವನ್ನು ನಾನು ಪರಿಹರಿಸುವೆನು' ಎಂದು ನಾನಾ ವಿಧವಾದ ಸಾಂತ್ವನ ವಚನಗಳನ್ನಾಡುತ್ತಾ ಸಮಾಧಾನ ಪಡಿಸಿದಳು. (15) ಆದರೂ ಸಹ ಪರಮಾತ್ಮನು ಮಾತನಾಡದೇ ಇದ್ದಾಗ ಅವನು ತನ್ನ ಕೈಯಲ್ಲಿ ತಂದಿದ್ದ ಅನ್ನಪಾತ್ರೆಯನ್ನು ಕೆಳಗಿಟ್ಟು ಮಲಗಿರುವ ಜಗತ್ಪತಿಯ ಪಾದಸಂವಹನಾದಿ ಕಾರ್ಯಗಳನ್ನು ಮಾಡಿದ:ಳು. (16) ಆಯಾಸದಿಂದ ಬೆವರಿದಂತಿರುವ ಅವನ ಶರೀರದ ಮೇಲೆ ಕೈಯಾಡಿಸುತ್ತಾ ಸಾಂತ್ವನ ಗೊಳಿಸಿದಳು. (17) ಆದರೂ ಸಹ ರಮಾಕಾಂತನು ಏನೂ ನುಡಿಯದೇ ಇದ್ದಾಗ ಬಕುಲೆಯು ಅತ್ಯಂತ ದುಃಖದಿಂದ ಅವನು ಹೊದ್ದಿರುವ ವಸ್ತ್ರವನ್ನು ತೆಗೆದು 'ಹೇ ಪುರಾಣ ಪುರುಷೋತ್ತಮನಾದ ದೇವದೇವನಾದ ಜಗನ್ನಾಥನೇ! (18–19) ನಿನ್ನ ಮನಸ್ಸಿನಲ್ಲಿ ಏನಿರುವದೆಂಬುದನ್ನು ತಿಳಿಸು.

ಬೋಧಿತೋಽಪಿ ರಮಾಕಾಂತೋ ನೋವಾಚ ವಚನಂ ಯದಾ ।
ತದಾ ಸಾ ಬಕುಲಾ ಖೇದಾದುವಾಚ ವಚನಂ ಹರಿಮ್ ॥18॥

ಪೃಥಕ್ಕೃತ್ವಾ ಛನ್ನವಸ್ತ್ರಂ ಹಸ್ತೇನ ಪರಿಮೃಜ್ಯ ಚ ।
'ದೇವದೇವ ಜಗನ್ನಾಥ ಪುರಾಣಪುರುಷೋತ್ತಮ ॥19॥

ಮನೋಗತಂ ಕರಿಷ್ಯಾಮಿ ನಾತ್ರ ಕಾರ್ಯಾ ವಿಚಾರಣಾ ।
ಸತ್ಯಂ ವದ ಮನಸ್ಥಂ ತೇ ಮಾ ಲಜ್ಜಾಂ ಮಾ ಭಯಂ ಕುರು ॥20।

ಪೂರಯಾಮ್ಯವಿಲಂಬೇನ ಯಾವಾನ್ಮೇ ವರ್ತತೇ ಬಲಮ್" ।
ಇತಿ ತದ್ವಚನಂ ಶ್ರುತ್ವಾ ಹರಿರುಷ್ಣಂ ಸಮುಚ್ಛ್ವಸನ್ ॥21॥

ಉವಾಚ ಚಾತಿದುಃಖೇನ ಮಂದಂ ಮಂದಂ ಮನೋಗತಮ್ ।

ಶ್ರೀನಿವಾಸ ಉವಾಚ–

ನಾಮೋಹಯನ್ಮಾಂ ಗಾಂಧರ್ವೀ ನರ್ಷಿಪುತ್ರೀ ನ ರಾಕ್ಷಸೀ ॥22॥

ನ ಪಿಶಾಚಾ ಭೂತಗಣಾಃ ಪ್ರೇತಾ ವಾ ಮೇ ಭಯಾವಹಾಃ ।

ನಾನು ಅದನ್ನು ಈಡೇರಿಸುವೆನು. ಯಾವದೇ ಭಯವನ್ನೇ ಆಗಲೀ ಅಥವಾ ಸಂಕೋಚವನ್ನಾಗಲೀ ಮಾಡದೇ ನಿನ್ನ ಅಭೀಷ್ಟವನ್ನು ತಿಳಿಸು. ನನ್ನ ಇಷ್ಟೂ ಶಕ್ತಿಯನ್ನು ಬಳಸಿ ನಿನ್ನ ಕಾರ್ಯವನ್ನು ಸಾಧಿಸುವೆನು' ಎಂದು ನುಡಿದಃಳು. ಇದನ್ನು ಕೇಳಿದ ಶ್ರೀನಿವಾಸನು ಬಿಸಿಯುಸಿರನ್ನು ಬಿಡುತ್ತಾ, ಅತ್ಯಂತ ದುಃಖದಿಂದ ತನ್ನ ಮನೋಗತ ವನ್ನು ಬಕುಲೆಗೆ ತಿಳಿಸಿದನು. (21) ಶ್ರೀನಿವಾಸನು ಬಕುಲೆಯನ್ನು ಕುರಿತು 'ಹೇ ಬಕುಲಾಮಾಲೆಯೇ! ನನ್ನನ್ನು ರಾಕ್ಷಸಪುತ್ರಿ, ಗಂಧರ್ವಸ್ತ್ರೀ, ಇವರೇ ಆಗಲೀ ನನ್ನನ್ನು ಮೋಹಗೊಳಿಸಲಿಲ್ಲ (22) ಅಥವಾ ಭೂತಪ್ರೇತ ಪಿಶಾಚಿಗಳೆ ಆಗಲಿ, ಆರಣ್ಯಕ ಮೃಗಗಳೇ ಆಗಲೀ ಅಥವಾ ಕಳ್ಳರೇ ಆಗಲಿ ಭಯವನ್ನುಂಟು ಮಾಡುವದಿಲ್ಲ. (23) ನನ್ನ ನಾಮಸ್ಮರಣ ಮಾತ್ರದಿಂದಲೇ ಆ ಭಯಗಳೆಲ್ಲವೂ ಸಹ ದೂರ ಓಡುವವು. ಮೃತ್ಯುವಿಗೂ ಸಹ ಮೃತ್ಯುವಾದ ನನಗೆ ಇವುಗಳಿಂದ ಭಯವೆಲ್ಲಿಯದು? (24) ನಾನು ವನದಲ್ಲಿ ಪದ್ಮಾವತಿಯೆಂಬ ಅತ್ಯಂತ ಸುಂದರಿಯಾದ ಕನ್ಯೆಯನ್ನು ನೋಡಿದೆನು. ಇದರಿಂದ ನನ್ನ ಮನಸ್ಸು ಅವಳಲ್ಲಿಯೇ ನೆಟ್ಟು ಕಾಮಮೋಹವಶವಾಗಿರುವದು. (25) ನಾನು ನೋಡಿದ ಆ ಪದ್ಮಾವತಿಯೆಂಬ ಕನ್ನಿಕೆಯು ಸುಂದರವಾದ ಹುಬ್ಬುಗಳು, ಕಪ್ಪಾದ ಉದ್ದವಾದ ಕೂದಲುಗಳು, ಪೂರ್ಣಚಂದ್ರನಂತೆ ಸುಂದರವಾದ ಮುಖ – ಇವುಗಳಿಂದ ಕೂಡಿದವಳಾಗಿ ಅತ್ಯಂತ ಸುಂದರವಾದ

ಮೃಗಾಶ್ಚಾರಣ್ಯಕಾಶ್ಚೋರಾ ನ ಕ್ರೂರಾ ಮೇ ಕದಾಚನ ॥23॥

ಮನ್ನಾಮಸ್ಮರಣಾದೇತೇ ವಿದ್ರವಂತಿ ದಿಶೋ ದಶ ।
ತತಸ್ತೇಭ್ಯೋ ಭಯಂನೇಹಮೃತ್ಯುರ್ಮೃತ್ಯೋರ್ಮಮಾನಘೇ ॥24।

ಮಯಾ ದೃಷ್ಟ್ವಾ ವರಾ ಕನ್ಯಾ ನಾಮ್ನಾ ಪದ್ಮಾವತೀ ಶುಭಾ ।
ತಾಂ ದೃಷ್ಟ್ವಾಮೇ ಮನೋ ಭ್ರಾಂತಂಕಾಮಮೋಹವಶಂ ಗತಮ್ ॥25॥

ಸುರೂಪಾಂ ಸುಂದರೀಂ ಸುಭ್ರೂಂ ನೀಲಾಲಕವಿರಾಜಿತಾಮ್ ।
ಪೂರ್ಣೇಂದುವದನಾಂ ಶ್ಯಾಮಾಂ ನೀಲಮಾಣಿಕ್ಯವಿಗ್ರಹಾಮ್ ॥26॥

ರಮಾಸಮಾಮಿಮಾಂ ಕನ್ಯಾಂ ಘಟಯಾಶು ವರಾನನೇ ।
ಜನ್ಮಜನ್ಮಾರ್ಜಿತೇನೈವ ಪುಣ್ಯೇನೈಷಾ ಹಿ ಲಭ್ಯತೇ ॥27॥

ಮತ್ಪುಣ್ಯಂ ಪಕ್ವತಾಂ ಪ್ರಾಪ್ತಂ ದರ್ಶನೇನ ಸುಲೋಚನೇ ।
ಮಾನುಷಂ ದೇಹಮಾಸಾದ್ಯ ತಾಂ ಕನ್ಯಾಂ ಕಃ ಪುಮಾನ್ ತ್ಯಜೇತ್ ॥28॥

ಲೋಕೇ ವಿನಾ ಜಡಮತಿಮನ್ನಪಾನವಿವರ್ಜಿತಮ್ ।
ಜೀವನೇನ ಕಿಮೇತೇನ ಕಾರ್ಯಹೀನೇನ ಮೇ ಸಖಿ ॥29॥

ಘಟಯಾಽಶು ವರಾಂಗೀಂ ತಾಮಾಕಾಶನೃಪನಂದಿನೀಮ್ ।
ತಾಂ ವಿನಾ ನಹಿ ಜೀವಾಮಿ ಸತ್ಯಮಿತ್ಯವಧಾರಯ ॥30॥

ತಾಡಿತೋಽಹಂ ಶಿಲಾವರ್ಷೈರ್ಹತಾಶ್ಚೋಽಸ್ಮಿ ವರಾನನೇ ।
ಮಜ್ಜೀವನಂ ವೃಥಾ ಮಾತರ್ಜಾತಂ ವೈ ವೇಂಕಟಾಚಲೇ ॥31॥

ನೀಲಮಾಣಿಕ್ಯದ ಬೊಂಬೆಯಂತಿರುವಳು. (26) ಲಕ್ಷ್ಮೀಯಂತಿರುವ ಈ ಕನ್ಯೆಯನ್ನು ನನಗೆ ಘಟನಮಾಡಿಕೊಡು. ಜನ್ಮಜನ್ಮಾರ್ಜಿತವಾದ ಪುಣ್ಯಗಳಿಂದ ಮಾತ್ರ ಇವಳು ಸಿಗಲು ಸಾಧ್ಯ. (27) ಅವಳ ದರ್ಶನ ಮಾತ್ರದಿಂದಲೇ ನನ್ನ ಪುಣ್ಯವೆಲ್ಲವೂ ಫಲವಾಯಿತೆಂದು ನಾನು ಭಾವಿಸುವೆನು. ಮನುಷ್ಯದೇಹವನ್ನು ಹೊಂದಿದ ಯಾರೂ ಸಹ ಆ ಸ್ತ್ರೀಯನ್ನು ಬಯಸದೇ ಇರಲು ಸಾಧ್ಯವಿಲ್ಲ. (28) ಅವಳಿಲ್ಲದ ಈ ವ್ಯರ್ಥವಾದ ಜೀವನದಿಂದ ಬರುವದಾದರೂ ಏನು? ಅಂತಹ ಸುಂದರಿಯಾದ ಪದ್ಮಾವತಿಯೊಂದಿಗೆ ನನ್ನ ವಿವಾಹವನ್ನು ನೆರವೇರಿಸು. ಅವಳಿಲ್ಲದೇ ನಾನು ಬದುಕಿರುವದಿಲ್ಲ. ಇದು ಸತ್ಯವೆಂದು ತಿಳಿ. (30) ಅವಳನ್ನು ಬಯಸಿದ ನಾನು ನನ್ನ ಮನೋಬಯಕೆಯನ್ನು ಅವಳಲ್ಲಿ ತಿಳಿಸಿದಾಗ ಅವಳು ನನ್ನ ಮೇಲೆ ಕಲ್ಲುಗಳ

ಯತೋಽಭೂದವತಾರೋಽತ್ರ ಪದ್ಮಾವತ್ಯರ್ಥಮೇವ ಮೇ ।
ಪುತ್ರೋ ಮೇ ವೈರಮಾಪನ್ನಃ ಕಿಂ ಕೃತಂ ಪೂರ್ವ ಜನ್ಮನಿ ॥32॥

ದೃಷ್ಟಿಹೀನೇನ ವಿಧಿನಾ ನಿರ್ಮಿತಾ ಕನ್ಯಕಾ ವರಾ ।
ಅನಾಯಾಸೇನ ಮೇ ಭೂಯಾದಿತಿ ಮೇ ನಿಶ್ಚಿತಾ ಮತಿಃ ॥33॥

ಕಿಂ ದೃಷ್ಟಂ ಬ್ರಹ್ಮಣಾ ಪೂರ್ವಂ ಮತ್ಪಾಪಂ ಘೋರದರ್ಶನಮ್ ।
ತತ್ಪಾಪಮನುಸೃತ್ಯೈವ ಘಟನಂ ನಾಕರೋದ್ವಿಧಿಃ ॥34॥

ಮದ್ಭಾಗಸ್ಥೋ ವಿಧಿಸ್ತ್ವಂ ಹಿ ಸಹಾಯ್ಯಂ ಕುರುಮೇಽಂಗನೇ ।
ನ ಕರಿಷ್ಯಸಿ ಚೇದ್ಬಾಲೇ ತದಾ ಮೇ ಮರಣಂ ಧ್ರುವಮ್ ॥35॥

ಮರಣೇ ಜೀವನೋಪಾಯಂ ಯೇ ಕುರ್ವಂತಿ ನರೋತ್ತಮಾಃ ।
ತೇ ದಿವಂ ಯಾಂತಿ ಯಾನೇನ ಪುಣ್ಯಮಾರ್ಗೇಣ ಕನ್ಯಕೇ ॥36॥

ಇತ್ಥಂ ಧರ್ಮಾರ್ಥಮಾಸಾದ್ಯ ಧರ್ಮಮಾರ್ಗಮುಪಾಶ್ರಯ ।
ಕಿಮುಕ್ತೇನ ವಿಶೇಷೇಣ ವಿದಿತಾಶಾಽಪಿ ಸಂಗಮೇ ॥37॥

ತ್ವಂ ಮೇ ಮಾತಾ ಪಿತಾ ದೇವಿ ಭ್ರಾತಾ ಮಾತುಲ ಏವ ಚ ।
ತ್ವಂ ಪ್ರಹ್ಲಾದಸ್ತ್ವಮಕ್ರೂರಸ್ತ್ವಂ ಧ್ರುವಸ್ತ್ವಂ ಗಜೇಶ್ವರಃ ॥38॥

ಮಳೆಯನ್ನೇ ಸುರಿಸಿದಳು. ಹೇ ತಾಯಿಯೇ! ನಾನು ಅವತರಿಸಿರುವದೇ ಪದ್ಮಾವತಿಯೊಡನೆ ವಿವಾಹ ವಾಗುವದರಗೋಸ್ಕರವಾಗಿ. (31) ಅವಳಿಲ್ಲದೇ ನನ್ನ ಅವತಾರವೇ ವ್ಯರ್ಥವೆನಿಸುವದು. ಸೃಷ್ಟಿಕರ್ತಾರನೂ, ಎಲ್ಲರ ವಿವಾಹ ಬಂಧವನ್ನುಂಟು ಮಾಡುವವನೂ ಆದ ನನ್ನ ಮಗನಾದ ಚತುರ್ಮುಖನೇ ನನಗೆ ವಿರೋಧಿಯಾದಂತಿದೆ. ಇಂತಹ ಸುಂದರ ಕನ್ಯೆಯನ್ನು ಸೃಷ್ಟಿಸಿ ನನಗೆ ದೊರೆಯದಂತೆ ಮಾಡಿರುವನು. (33) ಅವಳು ದೊರೆಯದಂತೆ ಮಾಡಲು ನನ್ನಲ್ಲಿ ಏನು ದೋಷವನ್ನು ಕಂಡಿರುವನೋ ಆ ಬ್ರಹ್ಮನು? (34) ಹೇ ಬಕುಲೆಯೇ! ನೀನೇ ನನ್ನ ಭಾಗದ ವಿಧಿಯು. ನನಗೆ ಸಹಾಯವನ್ನು ಮಾಡು. ಪದ್ಮಾವತಿಯನ್ನು ಹೊಂದಲು ನೀನು ಸಹಾಯ ಮಾಡದಿದ್ದಲ್ಲಿ ನಾನು ಮರಣಹೊಂದುವದು ನಿಶ್ಚಯ. (35) ಯಾರು ಸಾಯುತ್ತಿರುವ ವ್ಯಕ್ತಿಯು ಬದುಕುವಂತೆ ಸಹಾಯವನ್ನು ಮಾಡಿ ಜೀವನೋಪಾಯವನ್ನು ಕಲ್ಪಿಸುವರೋ ಅವರು ಪುಣ್ಯಮಾರ್ಗದಿಂದ ಸ್ವರ್ಗವನ್ನೇ ಹೊಂದುವರು. (36) ಹೀಗೆ ನನಗೆ ಸಹಾಯ ಮಾಡುವದರಿಂದ ಧರ್ಮಾರ್ಥಾದಿ ಪುರುಷಾರ್ಥ ಗಳು ಸಂಭವಿಸುವದರಿಂದ ನನಗೆ ಪದ್ಮಾವತಿಯೊಡನೆ ಸಮಾಗಮ ವಾಗುವಂತೆ ಸಹಾಯವನ್ನು ಮಾಡು. ಹೆಚ್ಚೇನು ಹೇಳುವದಿದೇ?

ತ್ವಮುದ್ಧವೋ ಮೇ ಭಕ್ತಶ್ಚ ತ್ವಂ ಕಿರೀಟೀ ಬಲಿಸ್ತಥಾ ।
ಅಜಾಮಿಲೋ ದ್ರೌಪದೀ ಚ ಭಕ್ತೋ ಮೇ ತ್ವಂ ವಿಭೀಷಣಃ ॥39॥

ಏತೇ ಪ್ರಾಣಸಮಾಭಕ್ತಾ ಅನ್ಯೇ ಭಕ್ತಾಶ್ಚ ಯೇ ಚ ತೇ ।
ಸರ್ವೇ ತ್ವಮೇವ ಬಕುಲೇ ಏತತ್ಕಾರ್ಯಂ ಸಮಾಚರ ॥40॥

ತ್ವಾಂ ದೃಷ್ಟ್ವಾ ಮೇ ಮನೋ ಹರ್ಷಂ ಗಚ್ಛತಿ ಸ್ಮ ನಿರಂತರಮ್।
ಮದ್ದುಃಖಾನ್ವಯನಾಶಾಯ ನಿರ್ಮಿತಾ ವಿಧಿನಾಽಂಗನಾ ॥41॥

ಗವಾಂ ಕೋಟಿ ಸಹಸ್ರೇಣ ಹಯಾನಾಮಯುತೈಸ್ತಥಾ ।
ಸುವರ್ಣತಿಲದಾನೈಶ್ಚ ಸಮಂ ಮಾಂಗಲ್ಯವರ್ಧನಮ್[32] ॥42॥

ಕನ್ಯಾಂ ದೃಷ್ಟ್ವಾಽತಿ ಸಂತೋಷಂ ಲಭತೇ ನಾತ್ರ ಸಂಶಯಃ ।
ಇತಿ ತೇನ ಸಮಾಜ್ಞಪ್ತಾ ಬಕುಲಾ ವಾಕ್ಯಮಬ್ರವೀತ್ ॥43।

ಬಕುಲಾ ಉವಾಚ–

'ಕುತ್ರಾಸ್ತೇ ಜಗದಾಧಾರ ತ್ವಯಾ ಯಾಽತ್ರ ನಿರೀಕ್ಷಿತಾ ।

ನನ್ನ ಮನದಿಚ್ಛೆಯನ್ನು ತಿಳಿದಿರುವಿ. (37) ನನ್ನ ತಂದೆ, ತಾಯಿ, ಅಣ್ಣ, ತಮ್ಮ, ಬಂಧು ಬಳಗ ಎಲ್ಲವೂ ಸಹ ನೀನೇ ಆಗಿರುವಿ. ಪ್ರಹ್ಲಾದ, ಅಕ್ರೂರ, ಗಜೇಂದ್ರ, ಉದ್ಧವ, ಅರ್ಜುನ, ಬಲಿ, ಅಜಾಮಿಲ, ದ್ರೌಪದೀ, ವಿಭೀಷಣ ಇವರೇ ಮೊದಲಾದ ನನ್ನ ಪ್ರಾಣಸಮ ಭಕ್ತರಿದ್ದಾರೋ ಅವರೆಲ್ಲರನ್ನೂ ಸಹ ನಿನ್ನಲ್ಲೇ ಕಾಣುವೆನು. ಭಕ್ತರು ತಮ್ಮ ಸ್ವಾಮಿಯ ಕಾರ್ಯವನ್ನು ಸಾಧಿಸುವದು ಕರ್ತವ್ಯವಲ್ಲವೇ? ನೀನು ನನ್ನ ಈ ಕಾರ್ಯವನ್ನು ಸಾಧಿಸಿಕೊಡು. (40) ಹೇ ಬಕುಲೆಯೇ! ನಿನ್ನನ್ನು ನೋಡಿದ ನನ್ನ ಮನಸ್ಸಿನಲ್ಲಿ ಹರ್ಷವುಂಟಾಗುತ್ತಿರುವದು. ನನ್ನ ದುಃಖವನ್ನು ನಾಶಮಾಡಲೆಂದೇ ಬ್ರಹ್ಮನಿಂದ ಸೃಷ್ಟಳಾಗಿರುವಿ. (41) ಸಾವಿರಾರು ಗೋಮಿಥುನಗಳನ್ನು ಹತ್ತು ಸಾವಿರ ಕುದುರೆಗಳನ್ನು ದಾನಮಾಡಿದಲ್ಲಿ ಯಾವ ಫಲವು ಬರುವದೋ, ಸುವರ್ಣದಾನ, ತಿಲದಾನಗಳಿಗೆ ಯಾವ ಫಲವು ಬರುವದೋ ಅದೆಲ್ಲವೂ ಸಹ ವಿವಾಹವನ್ನು ಮಾಡಿಸಿದಲ್ಲಿ ಬರುವದು. (ಮಾಂಗಲ್ಯಬಂಧನ ಮಾಡಿಸಿದಲ್ಲಿ ಆ ಫಲವೆಲ್ಲವೂ ಬರುವದು). (42) ಹೇ ಬಕುಲಾಮಾಲೆಯೇ! ಕನ್ಯೆಯನ್ನು ನೋಡಿ ನೀನೂ ಸಹ ಸಂತೋಷವನ್ನು ಹೊಂದುವಿ' ಎಂದು ಶ್ರೀನಿವಾಸನು ಪರಿಪೂರ್ಣಸೌಂದರ್ಯದ ಸಾಕಾರ ಮೂರ್ತಿ ಯಂತಿರುವ

34. ಮಾತಾಪಿತೃವಿಹೀನಂ ಯೋ ಸಂಸ್ಕಾರೋದ್ವಾಹನಾದಿಭಿಃ । ಯಃ ಸ್ಥಾಪಯತಿ ತಸ್ಯೇಹ ಪುಣ್ಯಸಂಖ್ಯಾ ನ ವಿದ್ಯತೇ - ಇತಿ ಸ್ಮೃತಿಃ ॥

ತನ್ಮಾರ್ಗಂ ವದ ಗೋವಿಂದ ಗಚ್ಛಾಮಿ ಕರುಣಾನಿಧೇ ॥44॥

ಕಾ ಸಾ ಪೂರ್ವಂ ಕಿಮರ್ಥಂ ಚ ಕನ್ಯಕಾ ಜನಿತಾ ಭುವಿ ।
ತದ್ವೃತ್ತಮಖಿಲಂ ಬ್ರೂಹಿ ಸತ್ಯೇನ ಮಮ ಕೇಶವ' ॥45॥

ಇತ್ಯಾಪೃಷ್ಟೋ ವಿರಿಂಚೇಶವಿನತಾಂಘ್ರಿಸರೋರುಹಃ ।
ಉವಾಚ ವಚನಂ ಮಂದಂ ಬಕುಲಾಂ ಧರಣೀಧರಃ ॥46॥

ಶ್ರೀನಿವಾಸ ಉವಾಚ–

'ಶೃಣು ಬಾಲೇ ಪುರಾ ವೃತ್ತಂ ಪದ್ಮಾವತ್ಯಾ ಜನೇಃ ಶುಭಮ್ ।
ತ್ರೇತಾಯಾಂ ರಾಮರೂಪೇಣ ತ್ವವತಾರಮಹಂ ಗತಃ ॥47॥

ಪಿತೃಮಾತೃವಚಃ ಶ್ರುತ್ವಾ ದಂಡಕಾರಣ್ಯಮಾಗತಃ ।
ಲಕ್ಷ್ಮಣೇನ ಸಹ ಭ್ರಾತ್ರಾ ಸೀತಾಯಾ ಭಾರ್ಯಯಾ ಶುಭೇ ॥48॥

ಪದ್ಮಾವತಿಯನ್ನು ಕಂಡು ಲೋಕವಿಡಂಬನ ದೃಷ್ಟಿಯಿಂದ ಮೋಹಿತನಾದ ವಿಷಯವನ್ನು ತಿಳಿಸುತ್ತಾ, ಬೆಟ್ಟದಡಿಯಲ್ಲಿ ನಡೆದ ವೃತ್ತಾಂತವೆಲ್ಲವನ್ನು ಸವಿಸ್ತಾರವಾಗಿ ಬಣ್ಣಿಸುತ್ತಾ, ಪದ್ಮಾವತಿಯು ತನಗೆ ಲಭ್ಯವಾಗುವಂತೆ ಉಪಾಯವನ್ನು ಮಾಡಿ ಪುಣ್ಯವನ್ನು ಸಂಪಾದಿಸಿಕೊಂಡು ಅತಿಶಯವಾದ ಸಂತೋಷವನ್ನು ಪಡೆಯಲು ಆಜ್ಞಾಪಿಸುತ್ತಾನೆ. (43) ಕನ್ಯಾಘಟನಾರ್ಥವಾಗಿ ಪ್ರವೃತ್ತಳಾಗುವ ಇಚ್ಛೆಯಿಂದ ಬಕುಲಾಮಾಲೆಯು 'ಹೇ ಭಗವಂತನೇ! ನೀನು ನೋಡಿ ಮೋಹಗೊಂಡ ಪದ್ಮಾವತಿಯು ಎಲ್ಲಿರುವಳು? ಅವಳ ಬಳಿಗೆ ಹೇಗೆ ಹೋಗಬೇಕು? ಎಂಬುದನ್ನು ತಿಳಿಸು. (44) ಹೇ ಕರುಣಾನಿಧಿಯಾದ ಶ್ರೀನಿವಾಸನೇ! ಅವಳು ಯಾರು? ಅವಳು ಹಿಂದೆ ಏನಾಗಿದ್ದಳು? ಈ ಎಲ್ಲ ವೃತ್ತಾಂತವನ್ನು ನನಗೆ ಸತ್ಯವಾಗಿಯೂ ತಿಳಿಸು' (45) ಎಂದು ಪದ್ಮಾವತಿಯ ಸಮಗ್ರ ವೃತ್ತಾಂತವನ್ನು ತಿಳಿಯ ಬಯಸಿದಳು. ಆಗ ಶ್ರೀನಿವಾಸನು ಪದ್ಮಾವತಿಯ ಪೂರ್ವವೃತ್ತಾಂತವನ್ನು ತಿಳಿಸುವನು. (46)

### ಪದ್ಮಾವತಿಯ ಪೂರ್ವಜನ್ಮದ ವೃತ್ತಾಂತ

'ಹೇ ಬಕುಲಾಮಾಲೆಯೇ! ಪದ್ಮಾವತಿಯ ಜನ್ಮವೃತ್ತಾಂತವನ್ನು ತಿಳಿಸುವೆನು. ಕೇಳು. ತ್ರೇತಾಯುಗದಲ್ಲಿ ಪರಮಾತ್ಮನೇ ಆದ ನಾನು ದೈತ್ಯಹನನಾರ್ಥವಾಗಿ ದಶರಥನ ಪುತ್ರನಾಗಿ ರಾಮರೂಪದಿಂದ ಅವತಾರ ಮಾಡಿದಾಗ ತಾಯಿಯಾದ ಕೈಕೇಯಿಯ ಮಾತನ್ನು ಆದರಿಸಿ, ಭ್ರಾತೃನಾದ ಲಕ್ಷ್ಮಣನಿಂದಲೂ ಸತಿಯಾದ ಸೀತೆಯನ್ನು ಒಡಗೂಡಿ, ಅರಣ್ಯವನ್ನು ಪ್ರವೇಶ ಮಾಡಿ ದಂಡಕಾರಣ್ಯದಲ್ಲಿ ವಾಸವಾಗಿದ್ದೆನು. (48) ಮಾಯಾ ಜಿಂಕೆಯನ್ನು ಹಿಡಿದು ತರಲು

ತದಾ ತು ರಾವಣೋ ನಾಮ ರಾಕ್ಷಸೋ ಲೋಕಕಂಟಕಃ ।
ಲೋಕಭರ್ತುಃ ಸತೀಂ ಹೃತ್ವಾ ಲಂಕಾಂ ಗಂತುಮವರ್ತತ ।
ಲಕ್ಷ್ಮಣೋಽಪ್ಯಗ್ರಜಂ ಪ್ರಾಪ್ತಃ ಸೀತಯಾ ಪ್ರೇಷಿತೋ ಬಲಾತ್ ॥49॥

ತತ್ಕಾಲಮಾಲಕ್ಷ್ಯ ಸ ರಾಕ್ಷಸೇಂದ್ರೋ
ವಿಮಾನಮಾರೋಪಯಿತುಂ ಹಿ ಸೀತಾಮ್ ।
ಪ್ರಾವರ್ತತೈಷಾ ಚ ತದಾ ರುರಾವ
ಹಾ ರಾಮ ಹಾ ಲಕ್ಷ್ಮಣ ರಾಘವೇತಿ ॥50॥

ತದಾರ್ತರಾವೇಣ ತದಾ ವನೌಕಸಃ
ವಿಚುಕ್ರುಶುಃ ತತ್ರವನಾಂತರಸ್ಥಾಃ ।
ತದ್ವಾಕ್ಯಮಾಕರ್ಣ್ಯ ಚ ಹವ್ಯವಾಹನಃ
ಪಾತಾಲಲೋಕಾದುದಗಾದ್ಧರಾತಲಮ್ ॥51॥

ಸಮಾಯತೋ ದುರಾಧರ್ಷಮಾಕರ್ಷಂತಂ ಚ ಜಾನಕೀಮ್ ।
ಸಂಭಾಷ್ಯ ರಾವಣಂ ಕ್ರೂರಂ ಪಾತಾಲಾದಮುಪಗಮ್ಯ ಚ ॥52॥

ರಾವಣೇನ ಸುಪಾಪೇನ ಸಹಿತಃ ಸೀತಯಾ ಸಹ ।
ರಾವಣಂ ಬೋಧಯಾಮಾಸ ನಾನಾವಾಕ್ಯಗಣೈಸ್ತದಾ ॥53॥

'ಇಯಂ ಜನಕ ಪುತ್ರೀ ನ ವಿಪ್ರಭಾರ್ಯಾಽಸುರೇಶ್ವರ ।

ಹೊರಟ ಶ್ರೀರಾಮನನ್ನು ಸೀತಾಮಾತೆಯ ಮಾತಿನಂತೆ ಲಕ್ಷ್ಮಣನು ರಾಮನನ್ನು ಅನುಸರಿಸಿ ಹೋದನು. (49) ಆಗ ಲೋಕಕಂಟಕನಾದ ರಾಕ್ಷಸಾಧಿಪನಾದ ರಾವಣನು ಸೀತಾದೇವಿಯನ್ನು ಅಪಹರಿಸಿ ಲಂಕಾಪುರಕ್ಕೆ ಬಲಾತ್ಕಾರದಿಂದ ವಿಮಾನದಲ್ಲಿ ಕುಳ್ಳರಿಸಿ ಕರೆದೊಯ್ಯಲು ಪ್ರಯತ್ನಿಸುತ್ತಿದ್ದಾಗ, 'ಹಾ ರಾಮ! ಹಾ ಲಕ್ಷ್ಮಣ!' ಎಂಬುದಾಗಿ ದೈನ್ಯದಿಂದ ರಾಮಲಕ್ಷ್ಮಣರನ್ನು ಕೂಗಿಕೊಂಡ ಸೀತಾಮಾತೆಯ ಆರ್ತ ಧ್ವನಿಯನ್ನು ಕೇಳಿದ ವನದಲ್ಲಿಯ ಜೀವಿಗಳೆಲ್ಲವೂ ಸಹ ಅತ್ಯಂತ ಶೋಕವನ್ನು ಹೊಂದಿದವು. ಸೀತೆಯ ಧ್ವನಿಯನ್ನು ಕೇಳಿದ ಪಾತಾಳದಲ್ಲಿದ್ದ ಅಗ್ನಿದೇವನು ಪಾತಾಳಲೋಕದಿಂದ ಭೂಲೋಕಕ್ಕೆ ಆಗಮಿಸಿದನು. ಸೀತೆಯನ್ನು ಬಲಾತ್ಕಾರದಿಂದ ಅಪಹರಿಸಿ ಕರೆದೊಯ್ಯುತ್ತಿರುವ ಪಾಪಿಷ್ಠನಾದ ರಾವಣನಿಗೆ ನಾನಾ ರೀತಿಯಿಂದ ಬೋಧಿಸಿದನು. (52–53) 'ಹೇ ರಾವಣನೇ! ರಾಕ್ಷಸೇಶ್ವರನೇ! ನೀನು ಕರೆದೊಯ್ಯುತ್ತಿರುವವಳು ರಾಮನ ಮಡದಿಯಾದ ಸೀತೆಯಲ್ಲ. ಬ್ರಾಹ್ಮಣನೋರ್ವನ ಮಡದಿಯು. ರಾಮನು ನಿನ್ನ ಹೆದರಿಕೆಯಿಂದ ಜಾನಕಿಯನ್ನು

ರಾಘವಸ್ತ್ವದ್ಭಯಾದ್ರಕ್ಷಃ ಜಾನಕೀಂ ಮಮ ಸನ್ನಿಧೌ ॥54॥

ಸಂಸ್ಥಾಪ್ಯ ವಿಪಿನೇ ರಾಮೋ ವ್ಯಚರತ್ ಸಹ ಲಕ್ಷ್ಮಣಃ ।
ಶಿಷ್ಯೋಽಸಿ ಪರಮೋದಾರ ಮಮ ಕಲ್ಯಾಣ ರಾವಣ ॥55॥

ಪ್ರಿಯೋಽಸಿ ಮಾ ಗಮೋ ವಿಪ್ರಪತ್ನ್ಯಾಂ ಸೀತಾಭ್ರಮಂವೃಥಾ' ।
ಇತಿ ಪ್ರತಾರಯನ್ ರಕ್ಷಶ್ಛದ್ಮನಾ ಜನಕಾತ್ಮಜಾಮ್ ॥56॥

ಇತ್ಥಂ ಸ್ವಲೋಕಮಾದಾಯ ತಾಂ ಸಂಪೂಜಯಿತುಂ ದ್ರುತಮ್ ।
ಸ್ವಾಹಾಯಾಂ ಸನ್ನಿವೇಶ್ಯಾಥ ನಾಮ್ನಾ ವೇದವತೀಂ ಶುಭಾಮ್ ॥57॥

ಪ್ರಾಗ್ರಾವಣಾಪಚಾರೇಣ ಪ್ರತಿಶ್ರುತ್ಯ ಚ ತದ್ವಧಮ್ ।
ಕೃತಪ್ರವೇಶಾಂ ಕ್ರೋಧೇನ ಸಮಿದ್ಧೇ ಜಾತವೇದಸಿ ॥58॥

ತತ ಆರಭ್ಯ ಸಮಯಮಾಕಾಂಕ್ಷಂತೀಂ ಸ್ಮಿತಾಂ ಸತೀಮ್ ।
ಸೀತಾಕೃತಿಧರಾಂ ಕೃತ್ವಾ ಮಾಯಯಾ ಮೇಷವಾಹನಃ ॥59॥

ನನ್ನ ಬಳಿ ಬಿಟ್ಟು ತಾನು ಲಕ್ಷ್ಮಣನೊಡನೆ ವನದಲ್ಲಿ ಸಂಚರಿಸುತ್ತಿರುವನು. ನೀನು ನನ್ನ ಪರಮ ಪ್ರಿಯ ಶಿಷ್ಯನಾಗಿರುವದರಿಂದ ನೀನು ಮೋಸಹೊಂದಬಾರದೆಂಬ ಬುದ್ಧಿಯಿಂದ ನಿನಗೆ ಇದನ್ನು ತಿಳಿಸಿರುವೆನು. (55) ಆದ್ದರಿಂದ ಹೇ ರಾವಣನೇ! ನೀನು ಬ್ರಾಹ್ಮಣ ಸ್ತ್ರೀಯಲ್ಲಿ ಸೀತೆಯೆಂಬ ಬುದ್ಧಿಯನ್ನು ಮಾಡಬೇಡ. ಅವಳನ್ನು ಬಿಟ್ಟು ಬಿಡು' ಎಂದು ಮೋಹಕವಾದ ಮಾತುಗಳನ್ನು ನುಡಿದನು. (56) ಸೀತಾಮಾತೆಯನ್ನು ತನ್ನ ವಾಸಸ್ಥಾನಕ್ಕೆ ಕರೆದೊಯ್ದು ಪೂಜಿಸಬೇಕೆಂಬ ಉತ್ಕಟ ಇಚ್ಛೆಯಿಂದ ಜಗಜ್ಜನನಿಯಾದ ಮಹಾತಾಯಿಯನ್ನು ಆದರಪೂರ್ವಕವಾಗಿ ಪಾತಾಳಲೋಕಕ್ಕೆ ಕರೆದುಕೊಂಡು ಹೋಗಿ, ಅವಳ ಅನುಗ್ರಹವನ್ನು ಪಡೆಯಲು ಅವಳ ಅರ್ಚನ ಸೇವಾ ತತ್ಪರಳಾಗುವಂತೆ ತನ್ನ ಪತ್ನಿಯಾದ ಸ್ವಾಹಾ ದೇವಿಯನ್ನು ನಿಯೋಜಿಸಿ, ವೇದವತಿಯೆಂಬುವವಳನ್ನು ತನ್ನ ಜೊತೆಯಲ್ಲಿ ರಾವಣನೆಡೆಗೆ ಕರೆದುಕೊಂಡು ಹೋದನು. (57) ಪೂರ್ವಜನ್ಮದಲ್ಲಿ ತಪೋನಿರತಳಾದ ವೇದವತಿಯನ್ನು ರಾವಣನು ಮುಂಗೋಪದಿಂದ ಹಿಡಿದೆಳೆಯಲು ಪ್ರಯತ್ನಿಸಿದಾಗ 'ಮುಂದಿನ ಜನ್ಮದಲ್ಲಿ ನಿನ್ನ ಮೃತ್ಯುವಿಗೆ ಕಾರಣಳಾಗುವೆನು' ಎಂದು ಪ್ರತಿಜ್ಞೈಗೈದು ಪ್ರಜ್ವಲಿಸುತ್ತಿರುವ ಅಗ್ನಿಯಲ್ಲಿ ತನ್ನನ್ನು ಸಮರ್ಪಿಸಿಕೊಂಡು ಅಗ್ನಿದೇವನ ಬಳಿಯಲ್ಲಿ ತನ್ನ ಪ್ರತಿಜ್ಞೆಯನ್ನು ಪೂರೈಸಲು ಸಮಯ ನಿರೀಕ್ಷೆಯನ್ನು ಮಾಡುತ್ತಿದ್ದಳು. ಆನಂತರ ತನ್ನ ಶಕ್ತಿಯಿಂದ ಅಗ್ನಿದೇವನು ವೇದವತಿಯನ್ನು ಸೀತೆಯ ರೂಪದಂತೆ ತೋರುವವಳನ್ನಾಗಿ ಮಾಡಿ, (59) ರಾವಣನ ಬಳಿಗೆ ಕರೆದೊಯ್ದು ರಾವಣನಿಗೆ 'ಇವಳೇ

ಪ್ರದರ್ಶಯನ್ನುವಾಚಾಥ ರಾವಣಂ ಪ್ರೀಣಯನ್ನಿವ ।
'ಇಮಾಂ ಸೀತಾಂ ಸಮಾದಾಯ ಗಚ್ಛ ಶೀಘ್ರಂ ನಿಶಾಚರ ॥60॥

ಇತ್ಯುಕ್ತಃ ಪಾವಕೇನಾಯಂ ತಾಮಾದಾಯಾಗಮದ್ದ್ರುತಮ್ ।
ಹರೇ ಚಾಗ್ನೌ ವಿಶೇಷೇಣ ಭಕ್ತಿರ್ವೈ ರಾವಣಸ್ಯ ಚ ॥61॥

ತಸ್ಮಾದಗ್ನಿವಚಃ ಶ್ರುತ್ವಾ ತ್ವೇವಂ ತಾಂ ಜಾನಕೀಂ ತದಾ ।
ಅಜ್ಞಾನಾನ್ಮನ್ಯಮಾನೋಽಸೌ ರಾವಣೋ ಮೋಹದರ್ಪಿತಃ ॥62॥

ಲಂಕಾಂ ಗತ್ವಾಽಶೋಕವನೇ ಶಿಂಶುಪಾವೃಕ್ಷಮೂಲತಃ ।
ಸ್ಥಾಪ್ಯ ಸೀತಾಕೃತಿಂ ಕ್ರೂರ ಇಂದ್ರಾವಿಷ್ಟಾಂ ಸ ರಾಕ್ಷಸಃ ॥63॥

ಕೃತಕೃತ್ಯಂ ತದಾಽಽತ್ಮಾನಂ ಸ ಮೇನೇ ಕಾಲಚೋದಿತಃ ।
ರಾಮೋ ಗತ್ವಾ ತು ತಂ ಹತ್ವಾ ರಾವಣಂ ಸಗಣಂ ಖಲಮ್ ॥64॥

ಸೀತಾಂ ಪ್ರಾಪ್ಯ ಜಗನ್ನಾಥೋ ಯುದ್ಧಾಂತೇ ಪರ್ಯಚಿಂತಯತ್।
ತಾಂ ತು ಲೋಕಾಪವಾದೇನ ಪಾವಕೇನ ವಿಶೋಧಿತಾಮ್ ॥65॥

ಜಿಘೃಕ್ಷುಣಾ ರಾಘವೇಣ ಸೀತಾ ಚಾಗ್ನೌ ಪ್ರವೇಶಿತಾ ।
ಸೀತಾದ್ವಂದ್ವಂ ತದಾ ದೃಷ್ಟ್ವಾ ಪ್ರೋವಾಚ ನಿಜಭಾಮಿನೀಮ್ ॥66॥

ನಿಜವಾದ ಸೀತೆಯು. ಇವಳನ್ನು ಕರೆದುಕೊಂಡು ಶೀಘ್ರದಲ್ಲಿ ಇಲ್ಲಿಂದ ಹೊರಟುಹೋಗು' ಎಂದು ನುಡಿದನು. (60) ಅಗ್ನಿ ಮತ್ತು ರುದ್ರದೇವರಲ್ಲಿ ವಿಶೇಷ ಭಕ್ತಿಯನ್ನು ಹೊಂದಿದ್ದ ಮೋಹದರ್ಪಿತನಾದ ರಾವಣನು ಅಗ್ನಿಯ ಮಾತನ್ನು ಕೇಳಿ, ಅವನು ನುಡಿದಂತೆ ವ್ಯವಹಾರ ಸಿದ್ಧ್ಯರ್ಥವಾಗಿ ಇಂದ್ರನಿಂದ ಆವಿಷ್ಟಳಾದ ವೇದವತಿಯನ್ನೇ ಸೀತೆಯೆಂಬುದಾಗಿ ಭ್ರಮಿಸಿ, ಅವಳನ್ನು ಕರೆದೊಯ್ದು ಲಂಕೆಯಲ್ಲಿರುವ ಅಶೋಕವನದಲ್ಲಿ ಶಿಂಶುಪಾವೃಕ್ಷದ ಕೆಳಗೆ ಅವಳನ್ನು ಇರಿಸುವ ವ್ಯವಸ್ಥೆಯನ್ನು ಮಾಡಿದಾಗ, ಸೀತಾಕೃತಿಗೆ ರಾವಣನನ್ನು ಎದುರಿಸುವ ಧೈರ್ಯವನ್ನು ತಂದೊಡ್ಡಲು ಇಂದ್ರದೇವನೂ ಸಹ ಪ್ರವೇಶಿಸುವಂತೆ ವ್ಯವಸ್ಥೆ ಮಾಡಿದನು.(63) ಅನಂತರ ದುಷ್ಟರಲ್ಲಿ ಅಗ್ರಗಣ್ಯನಾದ ರಾವಣನ ವದಾರ್ಥವಾಗಿಯೇ ಅವತರಿಸಿದ ಶ್ರೀರಾಮಚಂದ್ರನು ರಾಕ್ಷಸರಿಂದ ಕೂಡಿದ ರಾವಣನನ್ನು ಸಂಹರಿಸಿ, ಸೀತಾಕೃತಿಯ ಪಾತಿವ್ರತ್ಯವನ್ನು ಪ್ರದರ್ಶಿಸಿ, ಅನಂತರದಲ್ಲಿ ಅವಳನ್ನು ತನ್ನ ರಾಜ್ಯಕ್ಕೆ ಕರದೊಯ್ಯಬೇಕೆಂಬ ಇಚ್ಛೆಯಿಂದ ನಿನ್ನ ಪಾವಿತ್ರ್ಯವನ್ನು ಜಗತ್ತಿಗೆ ಸ್ಪಷ್ಟವಾಗಿ ತೋರಿಸಲು ಅಗ್ನಿಕುಂಡದಲ್ಲಿ ಹಾರಲು ಆಜ್ಞಾಪಿಸಿದನು. (65) ಆಗ ಸೀತೆಯು ಅಗ್ನಿಯನ್ನು ಪ್ರವೇಶಿಸಿದಾಗ ಅಗ್ನಿಕುಂಡದಿಂದ ಹೊರಬಂದ ಸೀತಾದ್ವಯರನ್ನು

ಕಾ ಸಾ ದೇವಿ ತವ ಸಮಾ ತವ ರೂಪಸಮನ್ವಿತಾ ।
ನ ಜಾನೇಽಹಂ ವರಾಂಗೀಂ ತಾಂ ತವ ಬಿಂಬನಿಭಾಂ ಶುಭಾಮ್ ॥67॥
ರಾಘವೇಣೈವಮುಕ್ತಾ ಸಾ ಜಾನಕೀ ವಾಕ್ಯಮಬ್ರವೀತ್ ।

ಜಾನಕೀ ಉವಾಚ–

'ಮದ್ದುಃಖಂ ಹ್ಯೇತಯಾ ಭುಕ್ತಂ ನಿರ್ನಿಮಿತ್ತಂ ದಯಾಲುನಾ ॥68॥
ನಾಮ್ನಾ ವೇದವತೀ ಚೇಯಂ ಸ್ವಾಹಾಯಾಸ್ಸನ್ನಿಧೌ ಸ್ಥಿತಾ ।
ತಾಮಂಗೀಕುರು ಗೋವಿಂದ ವಿವಾಹಂ ವಿಧಿಪೂರ್ವಕಮ್ ॥69॥
ಇತಿ ಸೀತಾವಚಶ್ಶ್ರುತ್ವಾ ರಾಮೋ ವಚನಮಬ್ರವೀತ್ ।

ಶ್ರೀರಾಮ ಉವಾಚ–

ಏಕಪತ್ನೀವ್ರತಂ ಮೇಽದ್ಯ ಕೃತಂ ಜಾನಾಸಿ ಭಾಮಿನಿ ॥70॥
ದ್ವಾಪರೇಽಂಗೀಕರೋಮೀತಿ ಬಹೂನಾಂ ವರದೋ ಯತಃ ।
ತವ ವಾಕ್ಯಂ ಕರಿಷ್ಯಾಮಿ ತ್ವಷ್ಟಾವಿಂಶತಿಮೇ ಕಲೌ ॥71॥
ತಾವದೇಷಾ ಬ್ರಹ್ಮಲೋಕೇ ಬ್ರಹ್ಮಣಾ ಪೂಜಿತಾ ಭವೇತ್ ।

ನೋಡಿ ಲೋಕಮೋಹಕದೃಷ್ಟಿಯಿಂದ 'ರೂಪ–ಆಕೃತಿಯಲ್ಲಿ ಸಮಾನಳಾದ ನಿನ್ನಂತೆ ತೋರುವ ಇನ್ನೊಬ್ಬಳು ಯಾರು' ಎಂದು ಪ್ರಶ್ನಿಸಿದಾಗ ಸೀತಾದೇವಿಯು 'ನಾನು ಅನುಭವಿಸಬೇಕಾದ ರಾವಣನಿಂದ ಕೊಡಲ್ಪಟ್ಟ ದುಃಖವೆಲ್ಲವನ್ನು ನಿರ್ವ್ಯಾಜಳಾಗಿ ಅನುಭವಿಸಿದ ಈಕೆಯೇ ಸ್ವಾಹಾ ದೇವಿಯ ಸನ್ನಿಧಾನದಲ್ಲಿ ಬಹುದಿನಗಳಿಂದಲೂ ಇದ್ದ ವೇದವತಿಯು. ಇವಳನ್ನು ನೀನು ಅಂಗಿಕಾರಮಾಡಿ ವಿವಾಹವಾಗಬೇಕು'' ಎಂದು ರಾಮಚಂದ್ರನನ್ನು ಸೀತಾದೇವಿಯು ಪ್ರಾರ್ಥಿಸಿದಳು. (69) ಹೀಗೆ ಸೀತೆಯಿಂದ ಸಂಪ್ರಾರ್ಥಿತನಾದ ಶ್ರೀರಾಮಚಂದ್ರನು 'ನಾನು ಈ ರಾಮಾವತಾರದಲ್ಲಿ ಏಕಪತ್ನೀವ್ರತವನ್ನು ಧಾರಣಮಾಡಿರುವದು ನಿನಗೂ ಸಹ ತಿಳಿದಿರುವದು. (70) ಮುಂದೆ ಬರುವ ದ್ವಾಪರ ಯುಗದಲ್ಲಿ ಬಹುಜನರಿಗೆ ನಾನು ವರವನ್ನು ಕೊಟ್ಟಿರುವದರಿಂದ ಈ ವೇದವತಿಯನ್ನು ವಿವಾಹ ಮಾಡಿಕೊಳ್ಳಬೇಕೆಂಬ ನಿನ್ನ ಮಾತನ್ನು ಮುಂದೆ ದ್ವಾಪರಯುಗಾಂತ್ಯದಲ್ಲಿ 28ನೇ ಕಲಿಯುಗದ ಸಂಧಿಕಾಲದಲ್ಲಿ ನಿನ್ನ ಪೂರೈಸುವೆನು. (71) ಅಲ್ಲಿಯವರೆಗೆ ಇವಳು ಸತ್ಯಲೋಕದಲ್ಲಿ ವಾಸವಾಗಿರಲಿ' ಎಂದು ಅನುಗ್ರಹಿಸಿರುವೆನು. ಆ ವೇದವತಿಯೇ ಈಗ ಪದ್ಮಾವತಿಯಾಗಿ ಜಗನ್ಮಾತೆಯ ಅವೇಶವುಳ್ಳವಳಾಗಿ ಅವತಾರವನ್ನು ಮಾಡಿರುವಳು. (72)

ಶ್ರುತ್ವಾ ದಾಶರಥೇರ್ವಾಕ್ಯಂ ಜಗಾಮ ಭವನಂ ವಿಧೇಃ ॥72॥

ಪದ್ಮಾವತ್ಯಾಃ ಕಾರಣಂ ತು ಭಣಿತಂ ತವ ಸುವ್ರತೇ ।
ನ ಮೇ ವಾಕ್ಯಮಸದ್ಭೂಯಾದಿತಿ ವೇದವಿದೋ ವಿದುಃ ॥73॥

ಶ್ರುತ್ವಾ ತಜ್ಜನನೇ ಹೇತುಂ ಬಕುಲಾಽऽನಂದ ನಿರ್ಭರಾ ।
ಕೌತೂಹಲಸಮಾವಿಷ್ಟಾ ಶ್ರೀನಿವಾಸಮಭಾಷತ ॥74॥

ಬಕುಲಾ ಉವಾಚ–

'ಗಚ್ಛಾಮಿ ರಾಜೇಂದ್ರಸಭಾಂ ಸಭಾಸದೈಃ
ಸಂಪೂರ್ಣಸರ್ವಾರ್ಥವಿಶಾರದೈರ್ಯುತಾಮ್ ।
ಆಕಾಶರಾಜಸ್ಯ ಪುರೀಂ ಸುರೋತ್ತಮೈಃ
ಸಂಸ್ತೂಯಮಾನಾಂ ಚ ರಮಾವಿಗೂಹಿತಾಮ್' ॥75॥

ಇತ್ಯೇವಮುಕ್ತೋ ಭಗವಾನ್ ಜಗದ್ಗುರುಃ
ಸಂಪ್ರೇಷಯಿಷ್ಯನ್ ಬಕುಲಾಂ ಸ್ವಕಾರಣಾತ್ ।
ಉತ್ಥಾಯ ತಲ್ಪಸ್ತಿಮಿತಾಂತರಂಗ–
ಸ್ತಸ್ಥೌತದಾನೀಂ ಭೃಶಹೃಷ್ಟಚೇತಾಃ ॥76॥

ಹೇ ಬಕುಲಾಮಾಲೆಯೇ! ಪದ್ಮಾವತಿಯ ಜನ್ಮವೃತ್ತಾಂತ ಮತ್ತು ಅವತಾರ ಕಾರಣಗಳನ್ನು ನಿನಗೆ ನಾನು ತಿಳಿಸಿರುವೆನು. ನನ್ನ ಮಾತೆಂದೂ ಸುಳ್ಳಾಗದು ಎಂಬುದಾಗಿ ವೇದಜ್ಞರು ತಿಳಿದಿರುವರು. ನನ್ನ ಪ್ರತಿಜ್ಞೆಯು ಸುಳ್ಳಾಗುವದು ಬೇಡ. ನೀನು ಅದನ್ನು ಸತ್ಯವಾಗಿಸು' ಎಂದು ನುಡಿದನು. (73)

### ನಾರಾಯಣಪಟ್ಟಣಕ್ಕೆ ಬಕುಲಾಮಾಲೆಯ ಗಮನ

ಈ ವೃತ್ತಾಂತವನ್ನು ಕೇಳಿ ಬಹುಸಂತುಷ್ಟಳಾದ ಬಕುಲಾದೇವಿಯು 'ನಾನು ತಕ್ಷಣವೇ ಸಭಾಸದರಿಂದ ಪರಿವಾರದಿಂದ ಸಂಪೂರ್ಣವಾದ ದೇವತೆಗಳಿಗೂ ಮಾನ್ಯವಾದ ಲಕ್ಷ್ಮೀದೇವಿಯಿಂದ ಅಧಿಷ್ಠಿತವಾದ ಆಕಾಶರಾಜನ ಸಭಾ ಮಂದಿರಕ್ಕೆ ತೆರಳಿ, ನಿನ್ನ ಕಾರ್ಯವನ್ನು ಅತಿ ಶೀಘ್ರವಾಗಿ ಫಲಪ್ರದವಾಗಿಸುತ್ತೇನೆಂದು ಶ್ರೀನಿವಾಸನಿಗೆ ತಿಳಿಸಿದಳು. (74–75) ಆಗ ಶ್ರೀನಿವಾಸನು ಸಹ ಸಂತೋಷದಿಂದ ಸಮಾಧಾನ ಮನಸ್ಕನಾಗಿ, ತನ್ನ ಕಾರ್ಯಸಿದ್ಧಿಗಾಗಿ ಬಕುಲೆಯನ್ನು ಕಳುಹಿಸುವದಕ್ಕೋಸ್ಕರವಾಗಿ ಮನಸ್ಸಮಾಧಾನ ಹೊಂದಿದವನಂತೆ ತೋರುತ್ತಾ

ಭುಕ್ತ್ವಾಽನ್ನಮುತ್ತಮಮಸೌ ಬಕುಲಾಪ್ರದತ್ತ-
ಮಾನಂದಪೂರ್ಣಸುಮನಾಃ ಸುರವೃಂದವಂದ್ಯಃ ।
ತಸ್ಥಾವಲಂಕೃತವಪುಶ್ಚ ವಿಭೂಷಣೌಘೈಃ
ಮುಕ್ತಾಫಲೈಃ ಸುರಚಿರೈರಥ ಪುಷ್ಪಸಂಘೈಃ ॥77॥

ದಿವ್ಯಾಂ ತುರಂಗೀಮಾಸ್ಥಾಯ ನಿರ್ಮಿತಾಂ ದೇವಮಾಯಯಾ ।
ಮಾರ್ಗಂ ವಿಜ್ಞಾತುಕಾಮಾ ತಮಾಪೃಚ್ಛ್ಯ ಬಕುಲಾಽವದತ್ ॥78॥

ಬಕುಲಾ ಉವಾಚ-

'ಮಾರ್ಗಂ ವದ ರಮಾನಾಥ ಗಚ್ಛಾಮಿ ನೃಪಪುಂಗಮ್' ।

ಶ್ರೀನಿವಾಸ ಉವಾಚ-

'ಅಸ್ಮಾದೇವ ವರಾನ್ಮಾರ್ಗಾದವರುಹ್ಯ ಗಿರೇಸ್ತಟಾತ್ ॥79॥

ಪರ್ವತಾಧಃ ಪ್ರದೇಶೇ ಚ ಕಪಿಲಾಪೂಜಿತಃ ಶಿವಃ ।
ತತ್ರಾಽಸ್ತೇ ತೀರ್ಥರಾಜೋಽಸೌ ಕಪಿಲೇಶ್ವರಸನ್ನಿಧೌ ॥80॥

ತತ್ರ ಸ್ನಾತ್ವಾ ಯಥಾಯೋಗ್ಯಂ ಮದರ್ಥಂ ತೀರ್ಥಪುಂಗವೇ ।
ಕಪಿಲೇಶ್ವರಮಾಸಾದ್ಯ ಯಾಚ್ಯತಾಂ ವರಮವ್ಯಯಮ್ ॥81॥

ಶ್ರೀನಿವಾಸೇನ ಬಾಲೇನ ಸದಾ ಕಲ್ಯಾಣಕಾಂಕ್ಷಿಣಾ ।
ಪ್ರೇಷಿತಾಽಹಂ ತದರ್ಥಂ ವೈ ಕುರು ಮೇಽಭೀಪ್ಸಿತಂಪ್ರಿಯಮ್ ॥82॥

ಅತ್ಯಂತ ಸಂತೋಷದಿಂದ ಹಾಸಿಗೆಯಿಂದ ಎದ್ದು ಬಕುಲಾಮಾಲೆಯು ಬಡಿಸಿದ ರುಚಿಕರವಾದ ಷಡ್ವಿಧಾನ್ನವನ್ನು ಭೋಜನ ಮಾಡಿ, ಆಭರಣಗಳಿಂದ ಅಲಂಕೃತನಾದನು. (76-77) ಅನಂತರ ಬಕುಲಾಮಾಯೆಯು ದಿವ್ಯವಾದ ದೇವಮಾಯೆಯಿಂದ ನಿರ್ಮಿತವಾದ ಅಶ್ವವನ್ನು ಏರಿ ನಾರಾಯಣಪಟ್ಟಣವನ್ನು ಕುರಿತು ಗಮನೋನ್ಮುಖಳಾದ ಬಕುಲಾಮಾಲೆಯು 'ರಮಾನಾಥನಾದ ಶ್ರೀನಿವಾಸನೇ! ಆಕಾಶ ರಾಜನ ಪಟ್ಟಣಕ್ಕೆ ಹೋಗುವ ಮಾರ್ಗವನ್ನು ತಿಳಿಸು' ಎಂದು ನುಡಿದಳು. (78-79) ಆಗ ಶ್ರೀನಿವಾಸನು ಗಮನಮಾರ್ಗವನ್ನು ತಿಳಿಯಪಡಿಸುತ್ತಾ 'ನಾನು ವಾಸವಾಗಿರುವ ಈ ಪರ್ವತದ ಬಳಿಯಲ್ಲಿ ಗೋಚರಿಸುವ ಮಾರ್ಗದಿಂದ ಕೆಳಗಿಳಿದು, ಕಪಿಲ ಋಷಿಯಿಂದ ಪೂಜಿಸಲ್ಪಟ್ಟ ಕಪಿಲೇಶ್ವರನ ಸನ್ನಿಧಿಯಲ್ಲಿ (80) ಇರುವ ಕಪಿಲ ತೀರ್ಥದಲ್ಲಿ ಸ್ನಾನವನ್ನು ಮಾಡಿ ಶೀಘ್ರವಾಗಿ ಕಲ್ಯಾಣಘಟನೆಗಾಗಿ ಕಪೀಲೇಶ್ವರನಲ್ಲಿ (81) 'ಸದಾ ಕಲ್ಯಾಣವನ್ನು ಬಯಸುವ ಬಾಲಕನಾದ ಶ್ರೀನಿವಾಸನಿಂದ ನಾನು ಕಳುಹಿಸಲ್ಪಟ್ಟಿರುವೆನು. ನಮ್ಮ ಮನೋಭೀಷ್ಟಗಳು

ಏವಮುಕ್ತ್ವಾ ಶಿವಂ ದೇವಿ ತತಃ ಪದ್ಮತಟಂ ಗತಾ ।
ತತ್ರ ದೃಷ್ಟ್ವಾ ಕೃಷ್ಣರಾಮೌ ತೌ ನತ್ವಾ ಭಕ್ತಿಭಾವತಃ ॥83॥

ಪದ್ಮತೀರ್ಥಸಮುದ್ಭೂತೈಃ ಕಮಲೈಃ ಕಮಲಾನನೇ ।
ಪೂಜಾಂಕುರು ಮದರ್ಥಂ ವಾ ಭ್ರಾತೃಭೂತೌ ಹಿ ಮೇ ಮತೌ ॥84॥

ಸುವರ್ಣಮುಖರೀಂ ತೀರ್ತ್ವಾ ತತ್ರ ಗಚ್ಛ ಯಥಾ ಸುಖಮ್ ।
ಉಚಿತಂ ಕುರು ಕಲ್ಯಾಣಿ ಕನ್ಯಾರ್ಥಂ ಕಮಲಾನನೇ' ॥85॥

ಆಜ್ಞಪ್ತಾ ದೇವದೇವೇನ ತ್ವಿತ್ಥಂ ಬಕುಲಮಾಲಿಕಾ ।
ಜಗಾಮ ಶನಕೈಶ್ಯೇಷಶೈಲಾದುತ್ತೀರ್ಯ ಚಾಂಗನಾ ॥86॥

ಯಥೋಕ್ತಂ ಶ್ರೀನಿವಾಸೇನ ತಚ್ಚಕಾರ ತದಾಽಬಲಾ ।
ಹಯಮಾರುಹ್ಯ ಬಕುಲಾ ಸುವರ್ಣಮುಖರೀಂ ತದಾ ॥87॥

ತೀರ್ತ್ವಾಽಗಸ್ತ್ಯಾಶ್ರಮಂ ಪ್ರಾಪ್ತಾ ಸಖೀಸ್ತಸ್ಯಾವಲೋಕಯತ್ ।
ಶಿವಾಲಯೇ ಶಿವಂ ದ್ರಷ್ಟುಮಾಗತಾ ಯಾಸ್ತು ತತ್ರ ವೈ ॥88॥

ತತ್ರ ದೃಷ್ಟ್ವಾ ವರಾಃ ಕನ್ಯಾಃ 'ಕಾ ಯೂಯ'ಮಿತಿ ಚಾಬ್ರವೀತ್
ತಯಾ ಸಂಭಾಷಿತಾ ಬಾಲಾ ಊಚುರೇನಾಂ ತಥೋತ್ತರಮ್ ॥89॥

ಪೂರೈಸುವಂತೆ ಮಾಡು' ಎಂದು ವರವನ್ನು ಪ್ರಾರ್ಥಿಸಿಕೊಂಡು (82) ಪದ್ಮಸರೋವರದ ಕಡೆಗೆ ಪ್ರಯಾಣ ಬೆಳೆಸು. ಅಲ್ಲಿ ಸ್ನಾನವನ್ನು ಮಾಡಿ ಅಲ್ಲಿರುವ ನನ್ನ ಸಹೋದರರಾದ ರಾಮಕೃಷ್ಣರ ಮೂರ್ತಿಯನ್ನು ತನ್ನ ವಿವಾಹಕ್ಕಾಗಿ ಭಕ್ತಿಯಿಂದ ಸ್ತುತಿಸಿ, ನಮಿಸಿ, ಪ್ರಾರ್ಥಿಸಿ, ಪದ್ಮ ತೀರ್ಥದಲ್ಲಿಯ ಕಮಲಗಳಿಂದ ಅರ್ಚಿಸಿ, (84) ಅಲ್ಲಿಂದ ಸುವರ್ಣಮುಖಿ ನದಿಯನ್ನು ದಾಟಿ ಆಕಾಶರಾಜನ ಪಟ್ಟಣಕ್ಕೆ ಹೋಗಿ ಪದ್ಮಾವತಿಯನ್ನು ಪಡೆಯಲು ಉಚಿತವಾದ ರೀತಿಯಲ್ಲಿ ಮಾತನಾಡಿ ಕಾರ್ಯವನ್ನು ಶೀಘ್ರದಲ್ಲಿ ನೇರವೇರಿಸು' ಎಂದು ತಿಳಿಸಿದನು. (85) ಅದರಂತೆ ಬಕುಲಾದೇವಿಯೂ ಸಹ ಅಶ್ವಾರೂಢಳಾಗಿ, ಶ್ರೀನಿವಾಸನು ತಿಳಿಸಿದ ಮಾರ್ಗವಾಗಿ ಬರುತ್ತಾ ಅವನು ಹೇಳಿದಂತೆ ಕಾರ್ಯಗಳನ್ನಾಚರಿಸಿ ಸುವರ್ಣಮುಖರೀ ನದಿಯನ್ನು ದಾಟಿ ಅಗಸ್ತ್ಯ ಋಷಿಗಳ ಆಶ್ರಮಕ್ಕೆ ಬಂದಾಗ ಪದ್ಮಾವತಿಯ ಸಖಿಯರನ್ನು ಅಲ್ಲಿ ಕಂಡಳು. (87) ಅಗಸ್ತ್ಯೇಶ್ವರನ ದೇವಸ್ಥಾನದಲ್ಲಿ ಅಗಸ್ತ್ಯೇಶ್ವರನಿಗೆ ಅಭಿಷೇಕಕ್ಕಾಗಿ ರಾಜನ ಆಜ್ಞೆಯಿಂದ ಬಂದಿದ್ದ ಪದ್ಮಾವತಿಯ ಈ ಸಖಿಯರನ್ನು ನೋಡಿದ ಬಕುಲಾಮಾಲೆಯು 'ನೀವು ಯಾರು' ಎಂದು ಪ್ರಶ್ನಿಸಿದಳು. (89) ಆಗ ಆ ಕನ್ಯೆಯರು 'ನಾವೆಲ್ಲರೂ ಆಕಾಶರಾಜನ ಸನ್ನಿಧಾನದಿಂದ ಬಂದಿರುವೆವು.

ಕನ್ಯಾ ಊಚುಃ–

'ವಯಮಾಕಾಶರಾಜಸ್ಯ ಸನ್ನಿಧಾನಗತಾಸ್ಸದಾ ।
ಇತಃ ಪೂರ್ವದಿನೇ ಕಶ್ಚಿತ್ಪುರುಷಸ್ತುರಗಾರುಹಃ ॥90॥

ಪದ್ಮಾವತ್ಯಾಃ ಸಮೀಪಂ ಚ ಸಂಪ್ರಾಪ್ತೋ ಮನ್ಮಥಾಕೃತಿಃ ।
ದೃಷ್ಟವತ್ಯೋ ವಯಂ ಸರ್ವಾಃ ಕಿರಾತಾಕೃತಿ ಶೋಭನಮ್ ॥91॥

ದೃಷ್ಟ್ವಾ ಪದ್ಮಾವತೀ ಭೀತ್ಯಾ ಜ್ವರತಾಪವಿಮೂರ್ಛಿತಾ ।
ತತ್ತಾಪಸ್ಯೋಪಶಾಂತ್ಯರ್ಥಂ ರಾಜ್ಞಾಽಽಜ್ಞಪ್ತಾ ವಯಂತ್ವಿಹ ॥92॥

ಅಗಸ್ತ್ಯೇಶಾಭಿಷೇಕಾರ್ಥಂ ವಸಾಮೋಽದ್ಯ ಸಮಾಗತಾಃ ।
ಇದಾನೀಂ ಕನ್ಯಕಾರೂಪಾಂ ತ್ವಾಂ ತು ವೀಕ್ಷಾಮಹೇ ವಯಮ್' ॥93॥

ಇತಿ ತದ್ವಚನಂ ಶ್ರುತ್ವಾ ಬಕುಲಾ ವಾಕ್ಯಮಬ್ರವೀತ್ ।

ಬಕುಲಾ ಉವಾಚ–

'ಕೋಽಸೌ ಕಿರಾತರೂಪೀ ಚ ಭವತೀಭಿಶ್ಚ ಸಂಗತಃ ॥94॥

ವದಧ್ವಂ ಕನ್ಯಕಾಸ್ಸರ್ವಾಸ್ತದ್ವೃತ್ತಮಖಿಲಂ ಮಮ' ।

ಕನ್ಯಕಾ ಊಚುಃ–

'ಸಹಿತಾಃ ಪದ್ಮವತ್ಯಾ ಚ ಕದಾಚಿದ್ವನಮಾಗತಾಃ ॥95॥

ಪುಷ್ಪಾಪಚಯನಂ ಕರ್ತುಮಾರಬ್ಧಾಸ್ತದ್ವನಾಂತರೇ ।
ತತ್ರ ಕಶ್ಚಿತ್ ಪುಮಾನ್ ಪ್ರಾಪ್ತೋ ವಿಚಿತ್ರತುರಗಾನ್ವಿತಃ ॥96॥

ಹಿಂದಿನ ದಿನ ಮನ್ಮಥನಂತೆ ಸುಂದರನಾಗಿದ್ದ, ಕಿರಾತವೇಷದಿಂದ ಕೂಡಿದ್ದ, ಅಶ್ವಾರೋಹಿಯಾದ ಪುರುಷನೋರ್ವನು ಬಂದನು. (90–91) ಅವನನ್ನು ನೋಡಿ ಹೆದರಿದ ರಾಜಕುಮಾರಿಯು ಮೂರ್ಛೆಯನ್ನು ಹೊಂದಿದಳು. ಅವಳ ಜ್ವರದ ಶಾಂತಿಯಗೋಸ್ಕರವಾಗಿ ಆಕಾಶರಾಜನಿಂದ ಆಜ್ಞಪ್ತರಾದ ನಾವು (92) ಅಗಸ್ತ್ಯೇಶಾಭಿಷೇಕದ ಗೋಸ್ಕರವಾಗಿ ಬಂದಿರುವೆವು. ಇಲ್ಲಿ ನಿನ್ನನ್ನು ನೋಡಿರುವೆವು' ಎಂದು ನುಡಿದರು. (93) ಆಗ ಬಕುಲೆಯು ಕಿರಾತನ ವೃತ್ತಾಂತವನ್ನು ವಿಸ್ತಾರವಾಗಿ ತಿಳಿಸಲು ಕೇಳಿದಾಗ ಆ ಕನ್ಯೆಯರು 'ನಾವೆಲ್ಲರೂ ಪದ್ಮಾವತಿಯಿಂದ ಸಹಿತರಾಗಿ ಹೂವುಗಳನ್ನು ತರುವದರಗೋಸ್ಕರವಾಗಿ ವನಕ್ಕೆ ಹೋಗಿದ್ದೆವು. ಆಗ ಅಲ್ಲಿ ಕುದುರೆಯನ್ನೇರಿದ್ದ

ಏವಮುಕ್ತ್ವಾ ಶಿವಂ ದೇವಿ ತತಃ ಪದ್ಮತಟಂ ಗತಾ ।
ತತ್ರ ದೃಷ್ಟ್ವಾ ಕೃಷ್ಣರಾಮೌ ತೌ ನತ್ವಾ ಭಕ್ತಿಭಾವತಃ ॥83॥

ಪದ್ಮತೀರ್ಥಸಮುದ್ಭೂತೈಃ ಕಮಲೈಃ ಕಮಲಾನನೇ ।
ಪೂಜಾಂಕುರು ಮದರ್ಥಂ ವಾ ಭ್ರಾತೃಭೂತೌ ಹಿ ಮೇ ಮತೌ ॥84॥

ಸುವರ್ಣಮುಖರೀಂ ತೀರ್ತ್ವಾ ತತ್ರ ಗಚ್ಛ ಯಥಾ ಸುಖಮ್ ।
ಉಚಿತಂ ಕುರು ಕಲ್ಯಾಣಿ ಕನ್ಯಾರ್ಥಂ ಕಮಲಾನನೇ' ॥85॥

ಆಜ್ಞಪ್ತಾ ದೇವದೇವೇನ ತ್ವಿತ್ಥಂ ಬಕುಲಮಾಲಿಕಾ ।
ಜಗಾಮ ಶನಕೈಶ್ಶೈಷಶೈಲಾದುತ್ತೀರ್ಯ ಚಾಂಗನಾ ॥86॥

ಯಥೋಕ್ತಂ ಶ್ರೀನಿವಾಸೇನ ತಚ್ಚಕಾರ ತದಾಽಬಲಾ ।
ಹಯಮಾರುಹ್ಯ ಬಕುಲಾ ಸುವರ್ಣಮುಖರೀಂ ತದಾ ॥87॥

ತೀರ್ತ್ವಾಽಗಸ್ತ್ಯಾಶ್ರಮಂ ಪ್ರಾಪ್ತಾ ಸಖೀಸ್ತಸ್ಯಾವಲೋಕಯತ್ ।
ಶಿವಾಲಯೇ ಶಿವಂ ದ್ರಷ್ಟುಮಾಗತಾ ಯಾಸ್ತು ತತ್ರ ವೈ ॥88॥

ತತ್ರ ದೃಷ್ಟ್ವಾ ವರಾಃ ಕನ್ಯಾಃ 'ಕಾ ಯೂಯ'ಮಿತಿ ಚಾಬ್ರವೀತ್
ತಯಾ ಸಂಭಾಷಿತಾ ಬಾಲಾ ಊಚುರೇನಾಂ ತಥೋತ್ತರಮ್ ॥89॥

ಪೂರೈಸುವಂತೆ ಮಾಡು' ಎಂದು ವರವನ್ನು ಪ್ರಾರ್ಥಿಸಿಕೊಂಡು (82) ಪದ್ಮಸರೋವರದ ಕಡೆಗೆ ಪ್ರಯಾಣ ಬೆಳೆಸು. ಅಲ್ಲಿ ಸ್ನಾನವನ್ನು ಮಾಡಿ ಅಲ್ಲಿರುವ ನನ್ನ ಸಹೋದರರಾದ ರಾಮಕೃಷ್ಣರ ಮೂರ್ತಿಯನ್ನು ತನ್ನ ವಿವಾಹಕ್ಕಾಗಿ ಭಕ್ತಿಯಿಂದ ಸ್ತುತಿಸಿ, ನಮಿಸಿ, ಪ್ರಾರ್ಥಿಸಿ, ಪದ್ಮ ತೀರ್ಥದಲ್ಲಿಯ ಕಮಲಗಳಿಂದ ಅರ್ಚಿಸಿ, (84) ಅಲ್ಲಿಂದ ಸುವರ್ಣಮುಖಿ ನದಿಯನ್ನು ದಾಟಿ ಆಕಾಶರಾಜನ ಪಟ್ಟಣಕ್ಕೆ ಹೋಗಿ ಪದ್ಮಾವತಿಯನ್ನು ಪಡೆಯಲು ಉಚಿತವಾದ ರೀತಿಯಲ್ಲಿ ಮಾತನಾಡಿ ಕಾರ್ಯವನ್ನು ಶೀಘ್ರದಲ್ಲಿ ನೇರವೇರಿಸು' ಎಂದು ತಿಳಿಸಿದನು. (85) ಅದರಂತೆ ಬಕುಲಾದೇವಿಯೂ ಸಹ ಅಶ್ವಾರೂಢಳಾಗಿ, ಶ್ರೀನಿವಾಸನು ತಿಳಿಸಿದ ಮಾರ್ಗವಾಗಿ ಬರುತ್ತಾ ಅವನು ಹೇಳಿದಂತೆ ಕಾರ್ಯಗಳನ್ನಾಚರಿಸಿ ಸುವರ್ಣಮುಖರೀ ನದಿಯನ್ನು ದಾಟಿ ಅಗಸ್ತ್ಯ ಋಷಿಗಳ ಆಶ್ರಮಕ್ಕೆ ಬಂದಾಗ ಪದ್ಮಾವತಿಯ ಸಖಿಯರನ್ನು ಅಲ್ಲಿ ಕಂಡಳು. (87) ಅಗಸ್ತ್ಯೇಶ್ವರನ ದೇವಸ್ಥಾನದಲ್ಲಿ ಅಗಸ್ತ್ಯೇಶ್ವರನಿಗೆ ಅಭಿಷೇಕಕ್ಕಾಗಿ ರಾಜನ ಆಜ್ಞೆಯಿಂದ ಬಂದಿದ್ದ ಪದ್ಮಾವತಿಯ ಈ ಸಖಿಯರನ್ನು ನೋಡಿದ ಬಕುಲಾಮಾಲೆಯು 'ನೀವು ಯಾರು' ಎಂದು ಪ್ರಶ್ನಿಸಿದಳು. (89) ಆಗ ಆ ಕನ್ಯೆಯರು 'ನಾವೆಲ್ಲರೂ ಆಕಾಶರಾಜನ ಸನ್ನಿಧಾನದಿಂದ ಬಂದಿರುವೆವು.

ಕನ್ಯಾ ಊಚುಃ–

'ವಯಮಾಕಾಶರಾಜಸ್ಯ ಸನ್ನಿಧಾನಗತಾಸ್ಸದಾ ।
ಇತಃ ಪೂರ್ವದಿನೇ ಕಶ್ಚಿತ್ಪುರುಷಸ್ತುರಗಾರುಹಃ ॥90॥

ಪದ್ಮಾವತ್ಯಾಃ ಸಮೀಪಂ ಚ ಸಂಪ್ರಾಪ್ತೋ ಮನ್ಮಥಾಕೃತಿಃ ।
ದೃಷ್ಟವತ್ಯೋ ವಯಂ ಸರ್ವಾಃ ಕಿರಾತಾಕೃತಿ ಶೋಭನಮ್ ॥91॥

ದೃಷ್ಟ್ವಾ ಪದ್ಮಾವತೀ ಭೀತ್ಯಾ ಜ್ವರತಾಪವಿಮೂರ್ಛಿತಾ ।
ತತ್ತಾಪಸ್ಯೋಪಶಾಂತ್ಯರ್ಥಂ ರಾಜ್ಞಾಽಽಜ್ಞಪ್ತಾ ವಯಂತ್ವಿಹ ॥92॥

ಅಗಸ್ತ್ಯೇಶಾಭಿಷೇಕಾರ್ಥಂ ವಸಾಮೋಽದ್ಯ ಸಮಾಗತಾಃ ।

ಇದಾನೀಂ ಕನ್ಯಕಾರೂಪಾಂ ತ್ವಾಂ ತು ವೀಕ್ಷಾಮಹೇ ವಯಮ್' ॥93॥

ಇತಿ ತದ್ವಚನಂ ಶ್ರುತ್ವಾ ಬಕುಲಾ ವಾಕ್ಯಮಬ್ರವೀತ್ ।

ಬಕುಲಾ ಉವಾಚ–

'ಕೋಽಸೌ ಕಿರಾತರೂಪೀ ಚ ಭವತೀಭಿಶ್ಚ ಸಂಗತಃ ॥94॥

ವದಧ್ವಂ ಕನ್ಯಕಾಸ್ಸರ್ವಾಸ್ತದ್ವೃತ್ತಮಖಿಲಂ ಮಮ' ।

ಕನ್ಯಕಾ ಊಚುಃ–

'ಸಹಿತಾಃ ಪದ್ಮವತ್ಯಾ ಚ ಕದಾಚಿದ್ವನಮಾಗತಾಃ ॥95॥

ಪುಷ್ಪಾಪಚಯನಂ ಕರ್ತುಮಾರಬ್ಧಾಸ್ತದ್ವನಾಂತರೇ ।
ತತ್ರ ಕಶ್ಚಿತ್ ಪುಮಾನ್ ಪ್ರಾಪ್ತೋ ವಿಚಿತ್ರತುರಗಾನ್ವಿತಃ ॥96॥

ಹಿಂದಿನ ದಿನ ಮನ್ಮಥನಂತೆ ಸುಂದರನಾಗಿದ್ದ, ಕಿರಾತವೇಷದಿಂದ ಕೂಡಿದ್ದ, ಅಶ್ವಾರೋಹಿಯಾದ ಪುರುಷನೋರ್ವನು ಬಂದನು. (90–91) ಅವನನ್ನು ನೋಡಿ ಹೆದರಿದ ರಾಜಕುಮಾರಿಯು ಮೂರ್ಛೆಯನ್ನು ಹೊಂದಿದಳು. ಅವಳ ಜ್ವರದ ಶಾಂತಿಯಗೋಸ್ಕರವಾಗಿ ಆಕಾಶರಾಜನಿಂದ ಆಜ್ಞಪ್ತರಾದ ನಾವು (92) ಅಗಸ್ತ್ಯೇಶಾಭಿಷೇಕದ ಗೋಸ್ಕರವಾಗಿ ಬಂದಿರುವೆವು. ಇಲ್ಲಿ ನಿನ್ನನ್ನು ನೋಡಿರುವೆವು' ಎಂದು ನುಡಿದರು. (93) ಆಗ ಬಕುಲೆಯು ಕಿರಾತನ ವೃತ್ತಾಂತವನ್ನು ವಿಸ್ತಾರವಾಗಿ ತಿಳಿಸಲು ಕೇಳಿದಾಗ ಆ ಕನ್ಯೆಯರು 'ನಾವೆಲ್ಲರೂ ಪದ್ಮಾವತಿಯಿಂದ ಸಹಿತರಾಗಿ ಹೂವುಗಳನ್ನು ತರುವದರಗೋಸ್ಕರವಾಗಿ ವನಕ್ಕೆ ಹೋಗಿದ್ದೆವು. ಆಗ ಅಲ್ಲಿ ಕುದುರೆಯನ್ನೇರಿದ್ದ

ಅಸ್ಮಾನ್ ಪ್ರತ್ಯುದಿತಂ ತೇನಾಪ್ಯವಾಚ್ಯವಚನಂ ರುಷಾ ।
ತಚ್ಛ್ರುತ್ವಾ ತನಯಾ ರಾಜ್ಞೋ ರುಷ್ಟಾ ವಚನಮಬ್ರವೀತ್ ॥97॥

ತಯೋಃ ಕಲಹ ಆಪನ್ನಃ ಕದನೇ ತಾಡಿತೋ ಹಯಃ ।
ನಿಪಪಾತ ತದಶ್ವಸ್ತು ಶಿಲಾಭಿರ್ಹತಚೇತನಃ ।
ಸ ಘೋಟಂ ಸಂಪರಿತ್ಯಜ್ಯ ಜಗಾಮೋತ್ತರದಿಙ್ಮುಖಃ ॥98॥

ಗತೇ ಕಿರಾತೇ ಕಮಲೋದ್ಭವಾಽಥ
ಮೂರ್ಛಾಮುಪಾಗಮ್ಯ ಪಪಾತ ಭೂಮೌ ।
ತಾಂ ಕನ್ಯಕಾಸ್ತಾ ಉಪವೇಶ್ಯ ಯಾನೇ
ವಯಂ ಸ್ವಕಂ ರಾಜಪುರಂ ಗತಾ ಸ್ಮಃ ॥99॥

ತಮಾಗತಾಂ ಯಾನಗತಾಂ ಸುತಾಂ ನೃಪ
ಶ್ಚಿಂತಾಮುಪಾಗಮ್ಯ ರುರೋದ ದೀನಃ ।
ಅಂಕೇ ನಿಧಾಯಾಽತ್ಮಸುತಾಂ ಪ್ರಪಶ್ಯನ್
ಮುಖಂ ಮುದಾಹೀನಮಭಾಷಣಂ ಚ ॥100॥

ಕಿಂ ವಾಽಭವನ್ಮೇ ದುಹಿತರ್ದುರಾಸದಾ
ಬಿಭೀಷಿಕಾ ವಿಶ್ವವಿನಾಶಕಾರಿಣೇ ।

ಲೋಕವಿಲಕ್ಷಣನಾದ ಪುರುಷನೊಬ್ಬನು ಅಲ್ಲಿಗೆ ಬಂದನು. (96) ಅವನು ನಮ್ಮೊಡನೆ ಅವಾಚ್ಯವಾದ (ಕನ್ಯೆಯರೊಡನೆ ನುಡಿಯಬಾರದ) ಮಾತುಗಳನ್ನಾಡಿದನು. ಇದನ್ನು ಕೇಳಿದ ಪದ್ಮಾವತಿಯು ಅತ್ಯಂತ ರೋಷದಿಂದ ಅವನನ್ನು ಬಯ್ದಳು. (97) ಅವರಿಬ್ಬರ ಮಧ್ಯದಲ್ಲಿ ಕಲಹವುಂಟಾಗಿ ನಾವು ಬೀಸಿದ ಕಲ್ಲಿನೇಟಿನಿಂದ ಆ ಕಿರಾತರೂಪಿಯಾದ ವ್ಯಕ್ತಿಯ ಕುದುರೆಯು ಸತ್ತು ಕೆಳಗೆ ಬಿದ್ದಿತು ಮತ್ತು ಅವನು ಉತ್ತರ ದಿಕ್ಕಿನೆಡೆಗೆ ಓಡಿಹೋದನು. (98) ಆ ಕಿರಾತನು ಅತ್ತ ತೆರಳುತ್ತಲೇ ನಮ್ಮ ರಾಜಕುಮಾರಿಯು ಮೂರ್ಛೆಯನ್ನು ಹೊಂದಿ ಕೆಳಗೆ ಬಿದ್ದಳು. ಅವಳನ್ನು ನಾವು ವಾಹನದ ಮೂಲಕವಾಗಿ ಅರಮನೆಗೆ ಕರೆತಂದೆವು. (99) ಮೂರ್ಛಿತಳಾದ, ಮಗಳ ಕಾಂತಿವಿಹೀನವಾದ ಮುಖವನ್ನು ನೋಡಿ, ಆಕಾಶರಾಜನು ಅತ್ಯಂತ ದುಃಖಿತನಾಗಿ, ನನ್ನ ಮಗಳಿಗೆ ಏನಾಗಿದೆ ಎಂಬುದನ್ನು ತಿಳಿಯಲು ದೇವಗುರುವಾದ ಬೃಹಸ್ಪತ್ಯಾಚಾರ್ಯರೇ ಸಮರ್ಥರೆಂದು ನಿರ್ಣಯಿಸಿ, ತನ್ನ ಮಗನಾದ ವಸುದಾನನ ಮೂಲಕವಾಗಿ ಬೃಹಸ್ಪತ್ಯಾಚಾರ್ಯರನ್ನು ಕರೆಕಳುಹಿಸಿದನು. ಅವನ ಪ್ರಾರ್ಥನೆಯಂತೆ ಶೀಘ್ರವಾಗಿ ಆಕಾಶರಾಜನ

ತಸ್ಯಾ ವಿನಾಶಂ ನ ಹಿ ಜಾನತೇ ನರಾ
ಗುರುಂ ವಿನೇತಿ ಪ್ರಸಮೀಕ್ಷ್ಯ ಭೂಮಿಪಃ ॥101॥

ತತಃ ಸುರಾಣಾಂ ಗುರುಮಾತ್ತಕಂಪಃ
ಸಮಾನಯತ್ತತ್ರ ಸುತೇನ ಶೀಘ್ರಮ್ ।
ತದ್ವಾಕ್ಯಮಾಕರ್ಣ್ಯ ಗುರುರ್ಧರಾತಲಂ
ಶೀಘ್ರಂ ಪ್ರಪನ್ನೋ ನೃಪಮಂದಿರಂ ಚ ॥102॥

ಪ್ರಾಪ್ತಂ ಗುರುಂ ಪ್ರಾಣಮಿವಾಗತಂ ನೃಪಃ
ಪ್ರಾಪ್ಯೇವ ಪುಣ್ಯಂ ಪರಿಪಕ್ವಮಾಗತಮ್ ।
ದತ್ವಾಽಽಸನಂ ರತ್ನಮಯಂ ಸಮರ್ಚ್ಯ
ಸುಸಾಧನೈಸ್ಸಾಧ್ಯಸುಪುಣ್ಯಭೋಜನೈಃ ॥103॥

ರಾಜಾಽತಿಥೇಯೋ ದ್ವಿಜಮಾಬಭಾಷೇ
ಸುತಾನಿಮಿತ್ತಂ ಗಗನಾಭಿಧೋ ನೃಪಃ ।
ತದ್ವಾಕ್ಯಮಾಕರ್ಣ್ಯ ಗುರುಸ್ಸತಾಂ ಗುರುಃ
ಸಂಪ್ರೀಣಯನ್ ವಾಕ್ಯಮುವಾಚ ಭೂಮಿಪಮ್ ॥104॥

ಬೃಹಸ್ಪತಿರುವಾಚ–

ದುಹಿತುಸ್ತೇಽದ್ಯ ಸಂಕಷ್ಟಂ ನಿಮಿತ್ತಂ ಶೃಣು ಭೂಮಿಪ ।
ಅನುಕೂಲಗ್ರಹಾಃ ಸರ್ವೇ ತವ ಪುತ್ರ್ಯಾಃ ನೃಪೋತ್ತಮ ॥105॥

ಪುಷ್ಪಾರ್ಥಂ ತು ಗತಾ ಬಾಲಾ ಭೀತಾ ಪುರುಷದರ್ಶನಾತ್ ।
ತಸ್ಯ ಶಾಂತಿಂ ಪ್ರವಕ್ಷ್ಯಾಮಿ ಶ್ರೂಯತಾಮವಧಾನತಃ ॥106॥

ಅರಮನೆಗೆ ಬಂದರು. (102) ಬಂದಿರುವ ಬೃಹಸ್ಪತ್ಯಾಚಾರ್ಯರನ್ನು ನೋಡಿ, ರಾಜನು ತನ್ನ ಪುಣ್ಯವು ಪಕ್ವವಾಯಿತೆಂದು ಭಾವಿಸಿ, ಅತ್ಯಂತ ಭಕ್ತಿಯಿಂದ ಅವರಿಗೆ ರತ್ನಮಯವಾದ ಆಸನವನ್ನು ಸಮರ್ಪಿಸಿ, ಅವರಿಗೆ ನಾನಾವಿಧವಾದ ಉಪಚಾರ–ಸತ್ಕಾರಗಳನ್ನು ಮಾಡಿ ಅನಂತರದಲ್ಲಿ ತನ್ನ ಮಗಳ ವೃತ್ತಾಂತವನ್ನು ತಿಳಿಸಿ, ಅವಳ ಕ್ಷೇಮದ ಗೋಸ್ಕರವಾಗಿ ಪ್ರಾರ್ಥಿಸಿದನು. (104) ಆಗ ಬೃಹಸ್ಪತ್ಯಾಚಾರ್ಯರು 'ನಿನ್ನ ಮಗಳಿಗೆ ಒದಗಿದ ಸಂಕಷ್ಟಕ್ಕೆ ಕಾರಣವನ್ನು ಹೇಳುವೆನು ಕೇಳು. ನಿನ್ನ ಮಗಳ ಗ್ರಹಗಳೆಲ್ಲವೂ ಅನುಕೂಲ ಸ್ಥಾನದಲ್ಲಿರುವವು. (105) ಆದರೂ ಸಹ ಅವಳು ಪುಷ್ಪಗಳನ್ನು ತರಲು ವನಕ್ಕೆ ತೆರಳಿದಾಗ ಅಪರಿಚಿತನಾದ ಪುರುಷನ ದರ್ಶನದಿಂದ ಅವಳು

ಕಾರಯಂತ್ವಧುನಾ ವಿಪ್ರಾ ಅಭಿಷೇಕಂ ಶಿವಸ್ಯ ಚ ।
ಅಗಸ್ತ್ಯೇಶಸ್ಯ ವೈ ರಾಜನ್ ರುದ್ರೈಕಾದಶಭಿಃ ಪ್ರಭೋ ॥107॥

ಏವಮುಕ್ತೋಽಥ ಗುರುಣಾ ರಾಜಾಽಪ್ಯಸ್ಮಾನ್ಸಮಾದಿಶತ್ ।
ಸಂಪಾದ್ಯ ಸರ್ವಸಂಭಾರಾನ್ ಯೂಯಂ ವಿಪ್ರೈಸ್ಸಮನ್ವಿತಾಃ ॥108॥

ಮತ್ಪುತ್ರೀ ಜ್ವರತಾಪೇನ ಶಯಾನಾ ನಿಜಮಂದಿರೇ ।
ತಚ್ಛಾಂತ್ಯರ್ಥಂ ವಯಂ ಪ್ರಾಪ್ತಾ ಅಭಿಷೇಕಾರ್ಥಮಂಗನೇ ॥109॥

ಧಿಷಣೇನ ಸಮಾಜ್ಞಪ್ತಾ ದ್ವಿಜವರ್ಯಾಃ ಸಮಾಗತಾಃ ।
ತೇಷಾಂ ಸಂಗಾತ್ಸಮಾಯಾತಾಃ ಕೈಲಾಸಪತಿಮಂದಿರಮ್ ॥110॥

ಗಚ್ಛಸಿ ತ್ವಂ ಕುತ್ರ ಬಾಲೇ ಕಿಮರ್ಥಂ ತ್ವಮಿಹಾಽಗತಾ ।
ವದಾದೇಶ'ಮಿತಿ ಸ್ತ್ರೀಭಿರ್ಬಕುಲಾ ಚೋದಿತಾಽಬ್ರವೀತ್ ॥111॥

ಪ್ರಭಾವಮಾತ್ಮಾನುಭವಸ್ಯ ವಿಷ್ಣೋ –
ರ್ಯೂಯಂ ನ ಜಾನೀಥ ಪುರಾಣಪುಂಸಃ ।
ಕೃಷ್ಣಂ ಮುಕುಂದಂ ತನಯಂ ವಿದಂತ್ಯಾ
ವೃಥಾ ಶರೀರಂ ಪುನರಾಗತಂ ಮಮ ॥112॥

ಭಯಗ್ರಸ್ತಳಾಗಿರುವಳು. ಆದ್ದರಿಂದ ಮೂರ್ಛಿತಳಾಗಿರುವಳು. ಅವಳ ಜ್ವರದ ಶಾಂತಿಯಗೋಸ್ಕರವಾಗಿ ಉಪಾಯವನ್ನು ಹೇಳುವೆನು ಕೇಳಿರಿ. (106) ಶೀಘ್ರದಲ್ಲಿ ನೀನು ಏಕಾದಶ ರುದ್ರರಿಂದ ಪರಿವೃತನಾದ ಅಗಸ್ತ್ಯೇಶ್ವರನಿಗೆ ಅಭಿಷೇಕವನ್ನು ಬ್ರಾಹ್ಮಣರ ಮೂಲಕವಾಗಿ ಮಾಡಿಸು' ಎಂದು ತಿಳಿಸಿದನು. (107) ಗುರುವಿನಿಂದ ಆಜ್ಞಪ್ತನಾದ ಆಕಾಶರಾಜನು ನಮ್ಮನ್ನು ಕುರಿತು 'ನನ್ನ ಮಗಳು ಜ್ವರತಾಪದಿಂದ ಮೂರ್ಛಿತಳಾಗಿರುವಳು. ಜ್ವರಶಾಂತ್ಯರ್ಥವಾಗಿ ನೀವೆಲ್ಲರೂ ಸಹ ಪೂಜೆಗೆ ಬೇಕಾದ ಎಲ್ಲ ಸಾಮಗ್ರಿ ಗಳನ್ನು ಒಟ್ಟುಗೂಡೀಸಿಕೊಂಡು ಬ್ರಾಹ್ಮಣರಿಂದ ಸಮೇತರಾಗಿ ಅಭಿಷೇಕದ ಗೋಸ್ಕರವಾಗಿ ಅಗಸ್ತ್ಯೇಶ್ವರನ ಸನ್ನಿಧಾನಕ್ಕೆ ತೆರಳಿರಿ' ಎಂದು ನುಡಿದನು. (109) ಅದರಗೋಸ್ಕರವಾಗಿ ನಾವು ಅಭಿಷೇಕದಗೋಸ್ಕರವಾಗಿ ಬ್ರಾಹ್ಮಣರಿಂದ ಸಮೇತರಾಗಿ ಈ ಶಿವಮಂದಿರಕ್ಕೆ ಬಂದಿರುವೆವು' ಎಂದು ನುಡಿದು (110) ಬಕುಲಾಮಾಲೆಯನ್ನು ಕುರಿತು 'ನೀನಾರು? ನೀನೇಕೆ ಇಲ್ಲಿಗೆ ಬಂದಿರುವಿ? ನಿನ್ನ ವೃತ್ತಾಂತವನ್ನು ನಮಗೆ ತಿಳಿಸು' ಎಂದು ನುಡಿದರು. (111) ಆಗ ಬಕುಲಾಮಾಲೆಯು ಪದ್ಮಾವತಿಯು ಕಂಡ ಪುರುಷನ ವಿವರವನ್ನು ಹಾಗೂ ತನ್ನ ವಿವರವನ್ನು ಆ ಕನ್ನಿಕಯರಿಗೆ ತಿಳಿಸಿದಳು. ಜಗತ್ತಿನಲ್ಲಿ ರಮಾಬ್ರಹ್ಮಾದಿ

ಜಗದ್ವಿಧೀಶಾನಮಹೇಂದ್ರಪೂರ್ವಂ
ಸೃಜನ್ನಯಂ ಮಾನುಷವದ್ವಿಭಾತಿ ।
ಯುಷ್ಮಾನ್ ಸಹಾಸ್ಮಾಭಿರಿಹಾನ್ಯದೈವತಂ
ಸಂಪ್ರಾರ್ಥಯಾನಾಃ ಸ್ವಶುಭಂ ಕರೋತ್ಯಸೌ ॥113॥

ಹರಿರೇವ ಬಲಂ ಯಸ್ಮಾತ್ಸರ್ವಾರ್ಥಾನಾಂ ಬಲಂ ಭವೇತ್ ।
ಧ್ರುವಂತತೋನ್ಯಣಾಂಮೋಹಾತ್ಕುಪಥೋಽನ್ಯಸಮಾಶ್ರಯಃ ॥114॥

ಹರೇರ್ಬಮಮೃತಂ ಯಸ್ಮಾತ್ಕುಪದಂ ಚ ತದಾಶ್ರಯಮ್ ।
ಲಾಲಯಾಮಿ ತತೋ ಮಾಂ ವೈ ಬಕುಲಾಮವಗಚ್ಛತ ॥115॥

ಮಾ ಮಾಂ ಲಾಲಯತೀತ್ಯೇವಂ ಮಾಲಾಮಪ್ಯವಗಚ್ಛತ ।
ಶೃಣ್ವಂತು ಕನ್ಯಕಾಸ್ಸರ್ವಾಃ ಮದ್ವಾಕ್ಯಮವಿಚಾರತಃ ॥116॥

ಅಹಂ ಶ್ರೀವೇಂಕಟೇಶಸ್ಯ ದಾಸೀಭೂತಾಽಸ್ಮಿ ಸಾಂಪ್ರತಮ್ ।
ಧರಣ್ಯಾ ರಾಜಭಾರ್ಯಾಯಾಃ ಸಮೀಪೇ ಕಾರ್ಯಮಸ್ತಿ ಮೇ ॥117॥

ಸಕಲ ಜೀವ ಜಡಗಳಿಗೂ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ ಇವುಗಳನ್ನು ಕೊಡುವವನು ಸಾಕ್ಷಾತ್ ಶ್ರೀಮನ್ನಾರಾಯಣನೇ. ರಮಾಬ್ರಹ್ಮರುದ್ರಾದಿ ಸಕಲ ದೇವತಾ ವೃಂದವು ಸಹ ಆ ಪರಮಾತ್ಮನ ಕಿಂಕರರೇ ಆಗಿದ್ದು, ಭಗವಂತನು ನೀಡಿದ ಶಕ್ತಿಯನ್ನು ಅವಲಂಬಿಸಿ ಅವರು ಜಗತ್ತಿನ ಇಷ್ಟಾರ್ಥಗಳನ್ನು ಪೂರೈಸುವರು. ಹೀಗಿರುವಾಗ ನಮ್ಮ ಎಲ್ಲ ಅಭೀಷ್ಟಗಳ ಸಾಧನೆಗಾಗಿ ನಾವು ಪರಮಾತ್ಮನನ್ನೇ ಪ್ರಧಾನವಾಗಿ ಅರ್ಚಿಸಿ ಅನಂತರದಲ್ಲಿ ಇತರ ದೇವತೆಗಳನ್ನು ಪ್ರಾರ್ಥಿಸುವದು ಸರ್ವಾರ್ಥಸಿದ್ಧಿಗೆ ಸನ್ಮಾರ್ಗ ವಾಗಿರುವುದು. ಪ್ರಾಧಾನ್ಯದಿಂದ ಇತರ ದೇವತೆಗಳನ್ನು ಆಶ್ರಯಿಸುವುದು ಅದೊಂದು ದುರ್ಮಾರ್ಗದ ದಾರಿಯಿದ್ದಂತೆ. (113) ಈ ದೃಷ್ಟಿಯಿಂದ ನಾನು ಶ್ರೀಹರಿಯ ಅಮೃತಮಯವಾದ ಮೋಕ್ಷಸ್ಥಾನವನ್ನು ಲಾಲನೆ ಮಾಡುವದರಿಂದ ನನ್ನನ್ನು ಬಕುಲಾ ಎಂದು (ಬ ಎಂದರೆ ಅಮೃತ. ಕು ಎಂದರೆ ಸ್ಥಾನ. ಲಾ ಎಂದರೆ ಲಾಲಿಸುವವಳು) ಬಕುಲಾ ಎಂದು ಮತ್ತು ಸಾಕ್ಷಾತ್ ಜಗದೊಡೆಯಳಾದ 'ಮಾ' ಲಕ್ಷ್ಮಿದೇವಿಯೇ ನನ್ನನ್ನು ಯಾವಾಗಲೂ ಲಾಲಿಸುವದರಿಂದ ನನ್ನನ್ನು ಬಕುಲಾಮಾಲಾ ಎಂದು ಕರೆಯುತ್ತಾರೆ. (115) ಹೇ ಕನ್ನಿಕೆಯರೇ ನನ್ನಲ್ಲಿ ಸಂಶಯಿಸದೇ ನನ್ನ ಮಾತನ್ನು ಕೇಳಿರಿ. ಪೂರ್ವಜನ್ಮದಲ್ಲಿ ನಾನು ಜಗದೊಡೆಯನಾದ, ಸಮಸ್ತ ಪ್ರಪಂಚಕ್ಕೂ ಜನಕನಾದ ಶ್ರೀಕೃಷ್ಣಪರಮಾತ್ಮನನ್ನೇ ನನ್ನ ಮಗನೆಂದು ಭ್ರಮಿಸಿದ್ದರಿಂದ ವ್ಯರ್ಥವಾಗಿ ನನಗೆ ಈ ಜನ್ಮವು ಪ್ರಾಪ್ತವಾಗಿದೆ. ಕೃಷ್ಣನನ್ನು ಸಾಕ್ಷಾತ್ ಭಗವಂತನೆಂದೇ ಯಾವಾಗಲೂ ಭಾವಿಸಿದ್ದರೆ ನಾನು

ನಾರಾಯಣಪುರಂ ದಿವ್ಯಮಭೇದ್ಯಂ ಪರದೇಶಿಭಿಃ ।
ಭವತೀಸಂಗಮಾತ್ರೇಣ ಪುರಸ್ಯಾಂತಃಪ್ರವೇಶನಮ್ ॥118॥

ಇತ್ಥಮುಕ್ತ್ವಾ ಸ್ಥಿತಾ ಬಾಲಾ ಕನ್ಯಾಭಿಃ ಸಾ ಚ ಸಂಗತಾ ।
ಏವಂ ಗತಾಯಾಂ ತಸ್ಯಾಂ ತು ನ ವಿಶ್ವಾಸಮಗಾದ್ಧರಿಃ ॥119॥

'ಏಕಪುತ್ರೋ ಹ್ಯಪುತ್ರಃ ಸ್ಯಾದೇಕನೇತ್ರೋ ಹ್ಯನೇತ್ರವಾನ್ ।
ಸ್ತ್ರೀಭಿಶ್ಚ ಯತ್ಕೃತಂ ಕಾರ್ಯಂ ನ ತತ್ಕಾರ್ಯಫಲಪ್ರದಮ್' ॥120॥

ಇತಿ ಸಂಚಿತ್ಯ ಗೋವಿಂದೋ ಮಾಯಾವೀ ಕಾಮರೂಪವಾನ್।
ಸ್ವಯಂ ಶ್ರೀವೇಂಕಟಾಧೀಶಃ ವನಿತಾರೂಪಮಾಶ್ರಿತಃ ॥121॥

ಪುಲಿಂದವೇಷಧಾರೀ ಸ ಚಕ್ರೇ ತದ್ವೇಷಭೂಷಣಮ್ ।
ಚೀರವಸ್ತ್ರಂ ತತೋ ಬಧ್ವಾ ಛಿದ್ರಕಂಚುಕರಂಜಿತಃ ॥122॥

ಬ್ರಹ್ಮಾಣಂ ಚ ಶಿಶುಂ ಕೃತ್ವಾ ಯಷ್ಟಿಂ ಕೃತ್ವಾ ಮಹೇಶ್ವರಮ್ ।

ಈಗ ವೈಕುಂಠದಲ್ಲಿ ಇರುತ್ತಿದ್ದೆ. ಸಾಕ್ಷಾತ್ ಶ್ರೀಕೃಷ್ಣ ಪರಮಾತ್ಮನ ಅವತಾರನಾದ ಶ್ರೀನಿವಾಸನ ದಾಸಿಯಾಗಿರುವ ನಾನು ಇಲ್ಲಿಗೆ ರಾಜಪತ್ನಿಯಾದ ಧರಣಿದೇವಿಯನ್ನು ಕಾಣಲು ಬಂದಿದ್ದೇನೆ. (117) ಅಪರಿಚಿತರಿಗೆ ನಿಮ್ಮ ಪುರಪ್ರವೇಶವು ಅಸಾಧ್ಯವಾದುದರಿಂದ ನಿಮ್ಮೊಡನೆ ನಾನೂ ಸಹ ಆಕಾಶರಾಜನ ಪಟ್ಟಣದಲ್ಲಿ ಪ್ರವೇಶವನ್ನು ಬಯಸುತ್ತೇನೆ. ಎಂದು ತಿಳಿಸಿ, ಅವರೊಡನೆ ಪುರಪ್ರವೇಶವನ್ನು ಮಾಡಿದಳು. (118–119)

### ಪುಲಿಂದಾವೇಷಧಾರಿಯಾದ ಶ್ರೀನಿವಾಸನಿಂದ ನಾರಾಯಣಪುರ ಗಮನ

ಬಕುಲಾಮಾಲೆಯು ಪರ್ವತದಿಂದ ಇಳಿದು ನಾರಾಯಣ ಪುರದೆಡೆಗೆ ಹೊರಟಮೇಲೆ ಶ್ರೀನಿವಾಸನು ಸಾಮಾನ್ಯವಾಗಿ ಲೋಕದಲ್ಲಿ ಹೇಗೆ ಒಂದೇ ಮಗ, ಒಂದೇ ಕಣ್ಣು ಇದ್ದರೂ ಸಹ ಕಾರ್ಯಪೂರ್ತ್ಯರ್ಥವಾಗಿ ಸಮರ್ಥವಾಗುವದಿಲ್ಲವೋ, ಅವು ಇಲ್ಲದಂತೆಯೆಂದು ಪರಿಗಣಿಸ ಲ್ಪಡುವವೋ ಹಾಗೆ ಕೇವಲ ಸ್ತ್ರೀಯರಿಂದ ಮಾಡಲ್ಪಡುವ ಕಾರ್ಯಗಳು ಶೀಘ್ರವಾಗಿ ಫಲಪ್ರದ ವಾಗಲಿಕ್ಕಿಲ್ಲವೆಂಬ ಲೌಕಿಕ ಸಂಶಯವನ್ನು ಅವಲಂಬಿಸಿ, ಚಿಂತಾಕ್ರಾಂತನಾದಂತೆ ನಟಿಸಿದನು. (120) ಇಚ್ಛಾಮಾತ್ರದಿಂದ ಇಷ್ಟರೂಪವನ್ನು ಧರಿಸಲು ಶಕ್ತನಾದ ಶ್ರೀಶ್ರೀನಿವಾಸನು ಕನ್ಯಾಘಟನಾರ್ಥವಾಗಿ ತಾನು ವನಿತೆಯ ರೂಪವನ್ನು ಆಶ್ರಯಮಾಡಿ, (121) ಕೊರವಂಜಿಯ ವೇಷವನ್ನು ಧರಿಸಿದನು. ಆ ವೇಷಕ್ಕೆ ಅನುಕೂಲವಾಗುವಂತೆ ಅಲಂಕರಿಸಿಕೊಂಡು, ನಾರಿನ ಬಟ್ಟೆಯನ್ನುಟ್ಟು, ಛಿದ್ರವಾದ ಹರಕು ಕುಪ್ಪಸವನ್ನು ತೊಟ್ಟು, (122) ಸಾಕ್ಷಾತ್ ಚತುರ್ಮುಖ

ಬ್ರಹ್ಮಾಂಡಂ ಜಗದಾಧಾರಂ ತ್ರೈಗುಣ್ಯಂ ಗುಲ್ಮಮೇವ ಚ ॥123॥

ವಿಕೀರ್ಯ ಕೇಶಪುಂಖಾನಿ ಪಂಚಾಶದ್ವರ್ಷಸಂಯುತಾ ।
ಗುಂಜಾಮಣಿವಿಭೂಷಾಂಗಾ ಶಂಖಬದ್ಧಸುಹಾರಿಕಾ ॥124॥

ವೇಣುಗುಲ್ಮಂ ಸ್ವಶಿರಸಿ ದಧಾನಾ ಧಾನ್ಯಪೂರಿತಮ್ ।
ಲಂಬೋದರೀ ಲಂಬಕರ್ಣಾ ಲಂಬಿತಾತ್ಮಪಯೋಧರಾ ॥125॥

ಅದಂತಾ ಶುಷ್ಕವದನಾ ತದಾಽಭೂದ್ಧರ್ಮದೇವತಾ ।
ಬ್ರಹ್ಮಾಣಂ ನಾಭಿಸಂಭೂತಂ ಸಪ್ತಮಾಸಾತ್ಮಕಂ ಶಿಶುಮ್ ॥126॥

ರುದಂತಂ ಶುಷ್ಕವದನಂ ಕೃಶಾಂಗಂ ದೀರ್ಘಬಾಹುಕಮ್ ।
ಶಿಶುಂ ಬಧ್ವಾ ಚೀರವಸ್ತ್ರೇ ನೃತ್ಯಂತೀ ಜಗದೀಶ್ವರಿ ॥127॥

ಯಷ್ಟಿಂ ಧೃತ್ವಾ ಕರೇ ಚಾಗಾತ್ ಸಾ ಬಾಲಾ ಧರ್ಮದೇವತಾ ।
ನಾರಾಯಣಪುರಂ ಪ್ರಾಪ್ತಾ ನಾರದಾಬ್ಜಜವಂದಿತಾ ॥128॥

ಪುರೀಂ ಸಮಾಗತ್ಯ ಚ ಗರ್ಜಯಂತೀ
ಸುತಾನ್ಪತೀನ್ ಬಂಧುಗಣಾನ್ ದದಾಮಿ ।

ಬ್ರಹ್ಮನನ್ನೇ ಶಿಶುವನ್ನಾಗಿ ಮಾಡಿಕೊಂಡು, ಮಹೇಶ್ವರನಾದ ರುದ್ರನನ್ನೇ ಕೋಲನ್ನಾಗಿ ಮಾಡಿ ಧರಿಸಿ, ಸತ್ತ್ವರಜಸ್ತಮೋ ಗುಣಗಳಿಗೆ ಆಶ್ರಯವಾದ ಬ್ರಹ್ಮಾಂಡವನ್ನೇ ಬುಟ್ಟಿಯನ್ನಾಗಿ ಮಾಡಿಕೊಂಡು, (123) ತಲೆಗೂದಲುಗಳನ್ನು ಹರವಿಕೊಂಡು ಐವತ್ತು ವರ್ಷ ವಯಸ್ಸಾದ ಹೆಂಗಸಿನ ರೂಪವನ್ನು ಧರಿಸಿ, ಗುಲಗಂಜಿ ಮಣಿಗಳ ಆಭರಣಗಳಿಂದ ಅಲಂಕೃತಳಾಗಿ, ಶಂಖದ ಹಾರಗಳನ್ನು ಧರಿಸಿ, (124) ಧಾನ್ಯದಿಂದ ತುಂಬಿದ ಬಿದಿರಿನ ಬುಟ್ಟಿಯನ್ನು ತನ್ನ ಶಿರಸ್ಸಿನಲ್ಲಿ ಧಾರಣಮಾಡಿ, ಜೋತುಬಿದ್ದ ಹೊಟ್ಟೆ, ಕಿವಿಗಳು ಮತ್ತು ಸ್ತನಗಳುಳ್ಳವಳಾಗಿ, (125) ದಂತಶೂನ್ಯಳಾಗಿ, ಬಾಡಿದ ಮುಖವುಳ್ಳವಳಾಗಿ, ಧರ್ಮದೇವತೆಯೆಂಬ ಹೆಸರನ್ನಿಟ್ಟುಕೊಂಡು, ತನ್ನ ನಾಭಿಸಂಭೂತನಾದ ರೋದಿಸುತ್ತಾ, ಕೃಶನಾದ, ಉದ್ದವಾದ ತೋಳುಗಳುಳ್ಳ ಆ ಶಿಶುವನ್ನು ಹರಿದ ಬಟ್ಟೆಯ ಜೋಳಿಗೆಯಲ್ಲಿ ಕಟ್ಟಿಕೊಂಡು, ಕೈಯಲ್ಲಿ ಬಡಿಗೆಯನ್ನು ಹಿಡಿಯುತ್ತಾ, ಕುಣಿಯುತ್ತಾ (126–127) ನಾರದಾದಿ ಮುನಿಗಳಿಂದಲೂ, ಬ್ರಹ್ಮಾದಿ ದೇವತೆಗಳಿಂದಲೂ ನಮಸ್ಕೃತಳಾಗಿ, ನಾರಾಯಣಪುರವನ್ನು ಪ್ರವೇಶ ಮಾಡಿ, ಮಕ್ಕಳು, ಗಂಡಂದಿರು, ಬಂಧು ಬಳಗಗಳು– ನಿಮಗೆ ಬೇಕಾದುದೆಲ್ಲವನ್ನೂ ಈಡೇರಿಸಿಕೊಡುತ್ತೇನೆಂದು ಘರ್ಜನೆ ಮಾಡುತ್ತಾ ಸಂಚರಿಸಹತ್ತಿದಳು. (128–129) ಇದನ್ನು ಕಂಡ ಆಕಾಶರಾಜನ ಪತ್ನಿಯಾದ ಧರಣಿದೇವಿಯ ಸಖಿಯರು

ಶ್ರುತ್ವಾ ವಚಸ್ತದ್ಗದಿತಂ ಪುರಾಂಗನಾ
ಊಚುಸ್ತದಾ ತಾಂ ನೃಪವಲ್ಲಭಾಂ ಪ್ರತಿ ॥129॥

ಗ್ರಾಮಿಕಾ ಊಚುಃ–

'ಧರ್ಮದೇವೀ ಸಮಾಯಾತಾ ನರನಾರಾಯಣಾಶ್ರಮಾತ್ ।
ವೃದ್ಧಾ ಸಾ ವರ್ತತೇ ಹ್ಯಂಬ ಮಿತಭಾಷೇವ ದೃಶ್ಯತೇ ॥130॥

ಮನೋಗತಂ ವದಾಮೀತಿ ವದತಿ ಸ್ಮ ಪುನಃ ಪುನಃ ।
ತಾಮಾಹ್ವಯ ಮಹಾಭಾಗೇ ಧರ್ಮದೇವೀಂ ಪತಿವ್ರತಾಮ್' ॥131॥

ತಾಭಿಸ್ಸಮಾಭಾಷಿತಚಿತ್ತವೃತ್ತಿ–
ರುವಾಚ ವಾಕ್ಯಂ ಸ್ವಸಖೀಗಣೇಭ್ಯಃ ।
ತಾಮಾಹ್ವಯತ್ತತ್ರ ಸಖೀಭಿರಾದರಾತ್
ಸಂಪ್ರಾಪ್ತಭಾಗ್ಯಾಹಮಿತಿ ಸ್ಮರಂತೀ ॥132॥

ಆಜ್ಞಪ್ತಾ ಧರಣೀದೇವ್ಯಾ ಆಗತಾಸ್ತಾ ವರಾಂಗನಾಃ ।
ಊಚುಸ್ತಾಮಗ್ರಗಾಃ ಸರ್ವಾಃ ತಾಂ ಬಾಲಾಂ ಧರ್ಮದೇವತಾಮ್ ॥133॥

ಗ್ರಾಮಿಕಾ ಊಚುಃ–

'ಏಹಿ ಮಂಗಲದೇ ದೇವಿ ರಾಜಭಾರ್ಯಾಮಿಮಾ'ಮಿತಿ ।
ಸಾ ಶ್ರುತ್ವಾ ವಚನಂ ತಾಸಾಂ ಮಂದಮಾಹ ಮನಸ್ವಿನೀ ॥134॥

ಧರಣಿದೇವಿಯನ್ನು ಕುರಿತು 'ಬದರಿಕಾಶ್ರಮದಲ್ಲಿರುವ ನಾರಾಯಣಾಶ್ರಮ ದಿಂದ ಇಲ್ಲಿಗೆ ಸಂಪ್ರಾಪ್ತಳಾದ ಧರ್ಮದೇವತೆ ಎಂಬ ಕೊರವಂಜಿಯು ಸಕಲ ಇಷ್ಟಾರ್ಥಗಳನ್ನು ಪೂರೈಸಬಲ್ಲವಳಾಗಿದ್ದಾಳೆ. 'ನಿಮ್ಮ ಮನೋಭೀಷ್ಟ ಗಳೆಲ್ಲವನ್ನೂ ಪೂರೈಸುವೆನೆಂದು ಮೇಲಿಂದ ಮೇಲೆ ಹೇಳುತ್ತಿರುವಳು. ವೃದ್ಧಳೂ ಮಿತಭಾಷಿಯೂ ಆದ ಆಕೆಯನ್ನು ರಾಜಧಾನಿಗೆ ಕರೆಯಿಸಿ ನಿನ್ನ ಮನೋಗತವನ್ನು ಪೂರೈಸಿಕೊಳ್ಳು" ಎಂದು ಹೇಳಿದರು. ಹೀಗೆ ಸಖಿಯರಿಂದ ಪರಿಬೋಧಿತಳಾದ ಧರಣಿ ದೇವಿಯು ಹೃಷ್ಟಳಾಗಿ ಕೊರವಂಜಿಯನ್ನು ತನ್ನ ಅಂತಃಪುರಕ್ಕೆ ಕರೆದುಕೊಂಡು ಬರಲು ಅಲ್ಲಿದ್ದ ಸ್ತ್ರೀಯರಿಗೆ ಅಜ್ಞಾಪಿಸಿದಳು. (132)

ಆಗ ಕೊರವಂಜಿಯ ಬಳಿ ಬಂದ ಧರಣೀ ದೇವಿಯಿಂದ ಆಜ್ಞಪ್ತರಾದ ಸ್ತ್ರೀಯರು 'ಹೇ ಮಂಗಳದೇವತೆಯೇ! ರಾಜಪತ್ನಿಯಾದ ಧರಣೀದೇವಿಗೆ ಸನ್ನಿಧಿಗೆ ಬರಬೇಕು' ಎಂದು ಕೊರವಂಜಿಯನ್ನು ಪ್ರಾರ್ಥಿಸಿಕೊಂಡರು. (133–134) ಇದನ್ನು ಕೇಳಿದ ಕೊರವಂಜಿಯು

ಧರ್ಮದೇವೀ ಉವಾಚ–

'ಅಹಂ ದರಿದ್ರಾ ಕುಟಿಲಾ ಸಾ ಬಾಲಾ ಭಾಗ್ಯಸಂಯುತಾ ।
ಆಹ್ವಾನಂ ಕಿಂ ವಿನೋದಾರ್ಥಂಹಾಸ್ಯಾರ್ಥಂಹಸಿತಾನನಾಃ ॥135॥

ಮದ್ವಸ್ತ್ರಂ ಪಶ್ಯತ ಛಿದ್ರಂ ಮದಾಭರಣಮಂಡಲಮ್ ।
ನವಧಾನ್ಯಸಮಾಕೀರ್ಣಂ ಗುಂಜಾಮಣಿವಿಭೂಷಿತಮ್ ॥136॥

ಅನ್ನಹೀನಂ ಶಿಶುಂ ಮಾಂ ಚ ದೃಷ್ಟ್ವಾ ದೇವ್ಯೇತಿ ನೋ ಧ್ರುವಮ್ ।
ನಾಗಚ್ಛಾಮಿ ವಿಶಾಲಾಕ್ಷ್ಯಃ ಕಿಂ ಕಾರ್ಯಂ ರಾಜಮಂದಿರೇ' ॥137॥

ಧರ್ಮದೇವೀ ವಚಃ ಶ್ರುತ್ವಾ ಜಗ್ಮುಸ್ತಾ ಧರಣೀಂ ಪ್ರತಿ ।
ಯಥೋಕ್ತಂ ಧರ್ಮದೇವ್ಯಾ ತು ತದಾಚಖ್ಯುಶ್ಚ ತಾಂ ಪ್ರತಿ ॥138॥

ತಾಸಾಂ ತದ್ವಚನಂ ಶ್ರುತ್ವಾ ಧರಣೀ ತಾಂ ಯಯೌ ಸ್ವಯಮ್ ।
ಉವಾಚ ಧರ್ಮದೇವೀಂ ತಾಂ ಧರಣೀ ರಾಜಸುಂದರೀ ॥139॥

ಧರಣ್ಯುವಾಚ–

'ಏಹಿ ಭದ್ರೇ ಮಹಾಭಾಗೇ ಸಾಕ್ಷಾತ್ತ್ವಂ ಧರ್ಮದೇವತಾ ।
ದೈವಯೋಗಾದಾಗತಾಽಸಿ ಮಮ ಕಲ್ಯಾಣವರ್ಧಿನೀ ॥140॥

ಮನೋರಥೋ ಮನಸ್ಸಂಸ್ಥಸ್ತಥ್ಯಂ ಮೇ ಕಥ್ಯತಾ'ಮಿತಿ ।

ತನಗೆ ಧನಾಪೇಕ್ಷೆ ಯಿಲ್ಲವೆಂಬುದನ್ನು ತೋರಿಸಲು ಆ ಸ್ತ್ರೀಯರನ್ನು ಕುರಿತು 'ನಾನಾದರೋ ದರಿದ್ರಳು. ಧರಣೀದೇವಿಯು ಅತ್ಯಂತ ಐಶ್ವರ್ಯವಂತಳು. ಛಿದ್ರವೇಷ 'ಧಾರಿಯೂ, ಅನ್ನ–ವಸನಗಳಿಲ್ಲದವಳೂ, ಪಾದಚಾರಿಯೂ, ಬಡತನ ದಿಂದಾಗಿ ನವಧಾನ್ಯಗಳ ಆಭರಣಗಳನ್ನು ಧರಿಸಿದವಳೂ ಆದ ನನ್ನನ್ನು ರಾಜಪತ್ನಿಯು ಏಕೆ ಕರೆದಾಳು? ನನಗೆ ರಾಜಮಂದಿರದಲ್ಲಿ ಕಾರ್ಯವಾವದೂ ಸಹ ಇರುವದಿಲ್ಲ. ನಗುವಿನಿಂದ ಕೂಡಿದ ನೀವು ನನ್ನನ್ನು ಹಾಸ್ಯಮಾಡುವ–ದಕ್ಕಾಗಿಯೇ ನೀವೆಲ್ಲರೂ ಕರೆಯಬಂದಿವಿರೋ ಹೇಗೆ? ನಾನು ರಾಜ ಮಂದಿರಕ್ಕೆ ಬರುವದಿಲ್ಲ' ಎಂದು ನುಡಿದಳು. (135–137) ಧರ್ಮದೇವಿಯ ಮಾತನ್ನು ಕೇಳಿದ ರಾಣಿಯ ಸಖಿಯರು ಧರಣೀ ದೇವಿಯ ಬಳಿಗೆ ಬಂದು ಕೊರವಂಜಿಯ ಮಾತುಗಳನ್ನು ತಿಳಿಸಿದರು. (138) ಸ್ತ್ರೀಯರಿಂದ ಇದನ್ನು ತಿಳಿದ ಧರಣಿದೇವಿಯು, ಧರ್ಮದೇವಿಯ ಬಳಿ ಸ್ವತಃ ತಾನೇ ಆಗಮಿಸಿ 'ಹೇ ಮಂಗಳಕರಳಾದ ಧರ್ಮದೇವತೆಯೇ! ನಿನಗೆ ಸ್ವಾಗತವು. ದೈವಯೋಗದಿಂದ ನಮ್ಮ

ಭಾಷಿತಾ ರಾಜಪತ್ನ್ಯಾ ಸಾ ಸತ್ಯಮಾಹ ಧರಾಂ ಪ್ರತಿ ||141||

ಧರ್ಮದೇವ್ಯುವಾಚ-

'ಮಯಾ ನಿಗದಿತಂ ವಾಕ್ಯಮಸತ್ಯಂ ಚೇನ್ಮನಸ್ವಿನಿ ।
ಪುರಾನ್ನಿಷ್ಕಾಸ್ಯ ಮಾಂ ದೇವಿ ಛೇದನಂ ಕರಯೋಃ ಕುರು ||142||

ಕಠಿನಂ ಮಮ ವಾಕ್ಯಂ ತು ಹ್ಯಸತ್ಯೇ ಹಸ್ತಛೇದನಮ್ ।
ನರನಾರಾಯಣಃ ಶ್ರೀಮಾನ್ ಭರ್ತಾ ಮೇ ರಾಜವಲ್ಲಭೇ ||143||

ತದ್ವೀರ್ಯಜಾತಪುತ್ರಂ ತು ಪ್ರಜಾಪತಿಮಿಮಂ ವಿದುಃ ।
ತೇನಾಜ್ಞಪ್ತಾ ತ್ವದರ್ಥೇ ಚ ಸಂಪ್ರಾಪ್ತಾ ತವ ಮಂದಿರಮ್ ||144||

ಭೂತಂ ಭವ್ಯಂ ಭವಿಷ್ಯಚ್ಚ ವದಾಮಿ ಜಗದೀಶ್ವರಿ' ।
ಇತ್ಯುಕ್ತ್ವಾ ಧರ್ಮದೇವ್ಯಾ ಸಾ ರಾಜಪತ್ನೀ ಪತಿವ್ರತಾ ||145||

ಸಾಂತ್ವಯಿತ್ವಾ ಮಹಾಬುದ್ಧಿರ್ಧರಣೀ ಧರ್ಮದೇವತಾಮ್ ।
ಪ್ರಾಪಯದ್ಭವನಂ ದೇವೀ ಮಂದಂ ಮಂದಂ ಮುದಾನ್ವಿತಾ ||146||

ತಾಮಾದಾಯ ಗೃಹಂ ಪ್ರಾಪ್ಯ ವರಂ ಸಿಂಹಾಸನಂ ದದೌ ।
ಸಿಂಹಾಸನಗತಾ ಸಾ ಚ ಧರ್ಮದೇವೀ ವಚೋಽಬ್ರವೀತ್ ||147||

ಪುಣ್ಯವನ್ನು ಹೆಚ್ಚಿಸಲು, ಶುಭವನ್ನುಂಟು ಮಾಡಲು ನೀನಿಲ್ಲಿಗೆ ಬಂದಿರುವಿ. (139–140) ನನ್ನ ಮನಸ್ಸಿನಲ್ಲಿ ಬಯಕೆ ಯೊಂದಿರುವದು. ಅದನ್ನು ಸತ್ಯವನ್ನಾಗಿಸಿ ಅನುಗ್ರಹಿಸು' ಎಂದು ಪ್ರಾರ್ಥಿಸಿದಳು. ಧರಣೀದೇವಿಯ ಮಾತುಗಳನ್ನು ಕೇಳಿದ ಧರ್ಮ ದೇವತೆಯು (141) 'ನಾನು ಹೇಳುವ ಮಾತುಗಳೇನಾದರೂ ಸು:ಳ್ಳಾದಲ್ಲಿ ನನ್ನ ಕೈಗಳನ್ನು ಕತ್ತರಿಸಿ ಈ ಊರಿನಿಂದ ಹೊರಗೆ ಹಾಕಿಸು. (142) ನನ್ನ ವಾಕ್ಯಗಳು ಕಠಿಣವೆನಿಸುವವು. ಅವು ಅಸತ್ಯವಾದಲ್ಲಿ ನನ್ನ ಕೈಗಳನ್ನು ಕತ್ತರಿಸು. ಹೇ ರಾಣಿಯೇ! ಸಾಕ್ಷಾತ್ ಬದರಿಕಾಶ್ರಮಾಧೀಶನಾದ ನಾರಾಯಣನೇ ನನ್ನ ಪತಿಯಾಗಿರುವನು. (143) ಅವನ ವೀರ್ಯೋತ್ಪನ್ನನಾದ ಪುತ್ರನೇ ಈ ಪ್ರಜಾಪತಿಯೆನಿಸಿದ ಶಿಶುವು. ಅವನಿಂದ ಆಜ್ಞಪ್ತನಾಗಿ ನಿನಗೋಸ್ಕರವಾಗಿ ನಿನ್ನ ಮಂದಿರದ ಬಳಿ ಬಂದಿರುವೆನು. (144) ಭೂತ-ಭವಿಷ್ಯದ್ವರ್ತಮಾನಗಳೆಲ್ಲವನ್ನೂ ನಿನಗೆ ನಾನು ತಿಳಿಸುವೆನು' ಎಂದು ನುಡಿದಾಗ ಧರಣೀದೇವಿಯು ಧರ್ಮದೇವತೆಯನ್ನು ಸಮಾಧಾನ ಗೊಳಿಸಿ ತಮಗೆಲ್ಲರಿಗೂ ಸರ್ವವಿಧವಾದ ಮಂಗಳವನ್ನುಂಟುಮಾಡಲು ರಾಜಾಸ್ಥಾನಕ್ಕೆ ಆಗಮಿಸಿ ಅನುಗ್ರಹಿಸಲು ಪುನಃ ಪುನಃ ಬೇಡಿಕೊಂಡಾಗ, ಧರ್ಮದೇವತೆಯು ಸಮ್ಮತಿಸಿದಳು. (145–146) ಧರ್ಮದೇವತೆಯ

ಧರ್ಮದೇವ್ಯುವಾಚ–

'ಮಜ್ಜನಂ ಕುರು ಕಲ್ಯಾಣಿ ಶುಭ್ರವಸ್ತ್ರಾ ಸುಕಂಚುಕಾ ।
ಗುರುದೇವನಮಸ್ಕಾರಂ ಕುರು ದೇವಿ ಹರಿಪ್ರಿಯಮ್' ॥148॥

ಏವಮುಕ್ತಾಽಥ ಕಲ್ಯಾಣೀ ತಥಾ ಚಕ್ರೇ ಯಥೋದಿತಾ ।
ತಸ್ಯಾಶ್ಚಾಭಿಮುಖೀ ಭೂಯಃ ಪಶ್ಚಾದ್ವಾಕ್ಯಮುವಾಚ ಸಾ ॥149॥

ಧರಣ್ಯುವಾಚ–

'ಕಿಂ ಕಾರ್ಯಂ ವದ ಕಲ್ಯಾಣಿ ಕರೋಮಿ ತವ ಶಾಸನಾತ್' ।

ಪುಲಿಂದೋವಾಚ–

'ಉಪಾಯನಂ ದೇಹಿ ಭದ್ರೇ ದೇವಾನಾಂ ಪ್ರೀತಿಸಾಧಕಮ್ ॥150॥

ಇತ್ಥಂ ಪುಲಿಂದಾವಚನಂ ಶ್ರುತ್ವಾ ಸಾ ಧರಣೀ ತದಾ ।
ಸ್ವರ್ಣಶೂರ್ಪಂ ಸಮಾಪೂರ್ಯ ಮುಕ್ತಾತಂಡುಲಪೂರ್ವಕೈಃ ॥151॥

ನಿಕ್ಷಿಪ್ಯ ಬಹುಭಕ್ತ್ಯೈವ ಧರ್ಮದೇವೀ ವಚೋಽಬ್ರವೀತ್ ।

ಧರಣ್ಯುವಾಚ–

'ಸತ್ಯಂ ವದ ಮಹಾಪ್ರಾಜ್ಞೇ ಮಮ ದುಃಖಂ ಪ್ರಣೋದಯ ॥152॥

ಸಮ್ಮತಿಯನ್ನು ಅರಿತು, ಸಂತೋಷದಿಂದ ಆಕೆಯನ್ನು ಅರಮನೆಗೆ ಕರೆತಂದು, ಶ್ರೇಷ್ಠವಾದ ಸಿಂಹಾಸನದಲ್ಲಿ ಕುಳ್ಳರಿಸಿದಳು. (147) ಆಗ ಧರ್ಮದೇವತೆಯು ಧರಣಿದೇವಿಯನ್ನು ಕುರಿತು ನಿನ್ನ ಅಭೀಷ್ಟಗಳನ್ನು ಈಡೇರಿಸಿಕೊಳ್ಳಲು ಮಂಗಲಸ್ನಾನವನ್ನು ಮಾಡಿ, ಶುಭ್ರವಸ್ತ್ರವನ್ನು ಮತ್ತು ಅಂದವಾದ ಕುಪ್ಪಸವನ್ನು ಧಾರಣಮಾಡಿ, ಗುರು–ದೇವತೆಗಳಿಗೆ ಹರಿಪ್ರೀತಿಕರವಾದ ನಮಸ್ಕಾರವನ್ನು ಮಾಡಿಬರಲು ಆಜ್ಞಾಪಿಸಿದಳು. (148) ಅದರಂತೆ ಅನುಷ್ಠಾನ ಮಾಡಿ ಧರಣಿದೇವಿಯು ಧರ್ಮದೇವತೆಯ ಎದುರಿಗೆ ಭಯ–ಭಕ್ತಿಗಳಿಂದ ಬಂದು (149) 'ನೀನು ಹೇಳಿರುವದೆಲ್ಲವನ್ನು ಮಾಡಿರುವೆನು. ಮುಂದೇನು ಮಾಡಬೇಕು' ಎಂದು ಕೇಳಿದಳು. ಧರ್ಮದೇವತೆಯು 'ದೇವತೆಗಳಿಗೆ ಪ್ರಿಯವಾದ ಉಪಾಯನವನ್ನು ಕೊಡು' ಎಂದು ಕೇಳಿದಳು. (150) ಆಗ ಧರಣಿದೇವಿಯು ಬಂಗಾರದ ಮೊರದಲ್ಲಿ ಅದರ ತುಂಬ ಮುತ್ತು–ರತ್ನಗಳನ್ನು ತುಂಬಿ, ಬಹುಭಕ್ತಿಯಿಂದ ಧರ್ಮದೇವತೆಗೆ ಸಮರ್ಪಿಸಿ, "ಮಹಾಪ್ರಾಜ್ಞಳಾದ ಧರ್ಮದೇವತೆಯೇ ! ನನ್ನ ದುಃಖವೆಲ್ಲವನ್ನೂ ದೂರಮಾಡು. ಸತ್ಯವಾದುದೆಲ್ಲವನ್ನೂ ನನಗೆ ತಿಳಿಸು" ಎಂದು ಪ್ರಾರ್ಥಿಸಿದಳು.(151–152)

ಧರಣೀವಾಕ್ಯಮಾಕರ್ಣ್ಯ ಧರ್ಮದೇವೀ ವಚೋಽಬ್ರವೀತ್ ।

ಧರ್ಮದೇವ್ಯುವಾಚ–

'ಸತ್ಯಂ ವದಾಮಿ ಸುಶ್ರೋಣಿ ಶಿಶೋರನ್ನಂ ಪ್ರಯಚ್ಛ ಮೇ ॥153॥

ಅಹಃಕೃತಂ ರಾತ್ರಿಕೃತಂ ಸುಪಕ್ವಂ ರಸಸಂಯುತಮ್' ।
ಶ್ರುತ್ವಾ ತದ್ವಚನಂ ರಮ್ಯಂ ತ್ವರಯಾಽಽನೀಯ ಭಾಮಿನೀ ॥154॥

ಕ್ಷೀರಾನ್ನಂ ಸ್ವರ್ಣಪಾತ್ರಸ್ಥಮರ್ಭಕಸ್ಯ ದದೌ ನೃಪ ।
ತದ್ದೃಷ್ಟ್ವಾ ಸ್ವರ್ಣಪಾತ್ರಸ್ಥಂ ಮಾನುಷಾನ್ನಂ ನ ಭುಕ್ತವಾನ್ ॥155॥

ರುರೋದ ಸ ಶಿಶುಸ್ತಸ್ಯಾಃ ಧರ್ಮದೇವ್ಯಾಶ್ಚ ಭೂಮಿಪ ।
ರುದಂತಮಾತ್ಮಜಂ ದೃಷ್ಟ್ವಾ ವಿನಿಂದ್ಯ ಪ್ರತ್ಯತಾಡಯತ್ ॥156॥

'ದರಿದ್ರೋಽಪಿ ದುರಾಚಾರ ಕಂದಮೂಲಫಲಾಶನ ।
ಕಥಂ ನು ಭೋಕ್ಷ್ಯಸೇ ಮೃಷ್ಟಂ ಕ್ಷೀರಾನ್ನಂ ರಾಜನಿರ್ಮಿತಮ್ ॥157॥

ಸದಾಪಿ ರೋದನಂ ಮಾತಃ ಕಿಂ ಕರಿಷ್ಯಾಮಿ ಭೂಮಿಪೇ'।
ಇತಿ ತಂ ಭರ್ತ್ಸಯಿತ್ವಾಥ ಸ್ವಯಂ ಭುಕ್ತ್ವಾಽನ್ನಮುತ್ತಮಮ್ ॥158॥

ಮಮೋದರಗತಂ ಚಾನ್ನಂ ಪುತ್ರಸ್ಯ ಹಿತಕಾರಣಮ್ ।
ಇತ್ಯುಕ್ತ್ವಾ ಭೋಜನಂ ಚಕ್ರೇ ಧರ್ಮದೇವೀ ನೃಪೋತ್ತಮ ॥159॥

ಆಗ ಅದಕ್ಕುತ್ತರವಾಗಿ ಪುಲಿಂದೆಯು "ಸತ್ಯವನ್ನೇ ಹೇಳುತ್ತೇನೆ. ಆದರೆ ನನ್ನ ಮಗುವಿಗೆ ಹಸಿವಾಗಿದೆ. (153) ನಿನ್ನೆರಾತ್ರಿಯದ್ದೋ, ಇವತ್ತಿನದ್ದೋ ಎಂತಹದೋ ಒಂದಿಷ್ಟು ರುಚಿಕರವಾದ, ಸುಪಕ್ವವಾದ ರಸಯುಕ್ತವಾದ ಅನ್ನವನ್ನು ಕೊಡು" ಎಂದು ಕೇಳಿದಳು. ರಾಣಿಯು ಆಗ ಸ್ವರ್ಣಪಾತ್ರೆಯಲ್ಲಿ ಕ್ಷೀರಾನ್ನವನ್ನು ತಂದು ಆ ಮಗುವಿಗೆ ಕೊಟ್ಟಳು. ಮನುಷ್ಯರಿಗೆ ಉಚಿತವಾದ ಈ ಅನ್ನವನ್ನು ಶಿಶುರೂಪಿಯಾದ ಚತುರ್ಮುಖನು ಭೋಜನ ಮಾಡಲಿಲ್ಲ. (155) ಶಿಶುವು ರೋದನವನ್ನು ಮಾಡಹತ್ತಿತು. ಅಳುತ್ತಿರುವ ಮಗನನ್ನು ಹೊಡೆದು "ಕಂದಮೂಲ ತಿಂದುಕೊಂಡು ಬಿದ್ದಿರುವ ನಿನಗೆ ರಾಜಯೋಗ್ಯವಾದ ಕ್ಷೀರಾನ್ನವನ್ನು ಭುಂಜಿಸಲು ಹೇಗೆ ಸಾಧ್ಯ? (156–157) ಯಾವಾಗಲೂ ಅಳುತ್ತಿದ್ದರೆ ನಾನಾದರೂ ಏನು ಮಾಡಬೇಕು?" ಎಂದು ಬಯ್ಯುತ್ತಾ 'ಈ ಅನ್ನವು ನನ್ನ ಹೊಟ್ಟೆಯನ್ನು ಸೇರಿ ಕ್ಷೀರರೂಪದಿಂದ ಮಗನಿಗೆ ಹಿತಕರವಾಗುವದು' ಎಂದು ಹೇಳುತ್ತಾ ಕ್ಷೀರಾನ್ನವನ್ನು ತಾನೇ ಭೋಜನಮಾಡಿದಳು. (158–159) ಊಟವಾದ

ಕ್ಷೀರಾನ್ನಭೋಜನಂ ಕೃತ್ವಾ ಸ್ವಸ್ಥಚಿತ್ತಾ ತದಾಽಬ್ರವೀತ್ ।
'ಸತ್ಯಂ ವದಾಮಿ ಸುಶ್ರೋಣಿ ತಾಂಬೂಲಂ ದೇಹಿಮೇಽಂಗನೇ' ॥160॥

ಇತ್ಯುಕ್ತ್ವಾ ಧರಣೀದೇವೀ ಧರ್ಮದೇವ್ಯಾ ಪುಲಿಂದಯಾ ।
ಏಲಾಲವಂಗಕರ್ಪೂರನಾಗವಲ್ಲೀದಲೈರ್ಯುತಮ್ ॥161॥

ತಾಂಬೂಲಮರ್ಪಯಮಾಸ ಪುಲಿಂದಾಯೈ ಪತಿವ್ರತಾ ।
ಸಾ ಪೂರ್ವಾಭಿಮುಖೀ ಭೂತ್ವಾ ಪುತ್ರಮಂಕೇ ನಿಧಾಯ ಚ ॥162॥

ಪುರತೋ ಗುಲ್ಮಮಾಸ್ಥಾಯ ಪಾದಾವಾಸ್ತೀರ್ಯ ಸಂಸ್ಥಿತಾ ।
ಏವಂ ರೂಪಂ ಗತಂ ಕೃಷ್ಣಂ ಶ್ರೀನಿವಾಸಂ ಸುರೋತ್ತಮಾಃ ॥163॥

ದ್ರಷ್ಟುಕಾಮಾಶ್ಚ ರಾಜೇಂದ್ರ ವೈಖರೀಂ ಪ್ರಾಕೃತೋಚಿತಾಮ್ ।
ಸದಾರಾಶ್ಚ ಸುಪುತ್ರಾಶ್ಚ ಸವಿಮಾನಗಣಾಸ್ತಥಾ ॥164॥

ಅನ್ಯೋನ್ಯಂ ಭಾರತೀಂ ಪ್ರೋಚುಃ ಸಂಭ್ರಮಾತ್ಕೌತುಕಾನ್ವಿತಾಃ ।
ಕಿಂ ತಯಾ ಸುಕೃತಂ ರಾಜ್ಞಾ ಕೃತಂ ಪೂರ್ವಂ ಯಯಾಽಧುನಾ ॥165॥

ಲಕ್ಷ್ಮೀಸಹಾಯೋ ಭಗವಾನ್ ಕ್ರಿಡತೇ ಪ್ರಾಕೃತೋ ಯಥಾ ॥166॥

ಏವಂ ಹರೇಶ್ಚಿತ್ರಚರಿತ್ರಕರ್ಮ
ಗಾಯಂತಿ ಕಂಜೋದ್ಭವಶಂಭುಶಕ್ರಾಃ ।

ಮೇಲೆ ಧರಣಿದೇವಿಯನ್ನು 'ನಿನಗೆ ಸತ್ಯವನ್ನೇ ಹೇಳುವೆನು. ತಾಂಬೂಲವನ್ನು ಕೊಡು' ಯಾಚಿಸಿದಾಗ (160) ಎಲಕ್ಕಿ, ಲವಂಗ, ಕರ್ಪೂರಗಳಿಂದ ಮಿಶ್ರಿತವಾದ ತಾಂಬೂಲವನ್ನು ಧರಣೀ ದೇವಿಯು ಕೊಟ್ಟಳು. ಅದನ್ನು ಜವಿಯುತ್ತಾ ಪೂರ್ವಾಭಿಮುಖವಾಗಿ ಕುಳಿತುಕೊಂಡು ಧರ್ಮದೇವತೆಯು (161–162) ಕೂಸನ್ನು ತನ್ನ ತೊಡೆಯ ಮೇಲೆ ಇರಿಸಿಕೊಂಡು ಎದುರಿನಲ್ಲಿ ಬುಟ್ಟಿಯನ್ನು ಇಟ್ಟುಕೊಂಡು ಕಾಲುಗಳನ್ನು ಚಾಚಿಕೊಂಡು ಕುಳಿತುಕೊಂಡಳು. ಪ್ರಾಕೃತ ಮನುಷ್ಯರಂತೆ ಆಟವಾಡುತ್ತಿರುವ ಶ್ರೀನಿವಾಸನ ಈ ಮಹಾಮಹಿಮೆ ಯನ್ನು ನೋಡಲು ಬ್ರಹ್ಮರುದ್ರಾದಿಮಹಾದೇವತೆಗಳು ಆಕಾಶ ಮಾರ್ಗ ದಿಂದ ವಿಚಿತ್ರ ವಿಮಾನಗಳ ಮೂಲಕವಾಗಿ ಆಗಮಿಸಿ ಪರಮಾತ್ಮನ ಪುಲಿಂದಾವೇಷವನ್ನು ನೋಡಿ (163–164) ಅನನ್ಯವಾಗಿ ಶ್ಲಾಘಿಸುತ್ತಾ, 'ಧರಣೀದೇವಿಯ ಭಾಗ್ಯವಾದರೂ ಎಂತಹದು. ಸಾಕ್ಷಾತ್ ಲಕ್ಷ್ಮೀಪತಿ ಯಾದ ಭಗವಂತನೇ ಪ್ರಾಕೃತ ಮನುಷ್ಯನಂತೆ ಪುಲ್ಕಸಾ ರೂಪದಿಂದ ಅವಳ ಬಳಿ ಬಂದಿರುವನೆಂದು' ಅವಳನ್ನು ಪ್ರಶಂಸಿಸುತ್ತಾ, (166) ಕಲಿಯುಗದಲ್ಲಿ ಪಾಪಿಗಳನ್ನು ಉದ್ಧರಿಸುವದರಗೋಸ್ಕರವಾಗಿ

ಕಲೌಯುಗೇ ಪಾಪಕೃತಾಂ ನರಾಣಾ-
ಮುದ್ಧಾರಣಾರ್ಥಂ ಜಗದೀಶಚೇಷ್ಟಾ ॥167॥

ಇತಿ ಶ್ರೀಭವಿಷ್ಯೋತ್ತರಪುರಾಣೇ ಶ್ರೀವೇಂಕಟಗಿರಿಮಾಹಾತ್ಮೇ ಶ್ರೀನಿವಾಸಸ್ಯ
ಪುಲಿಂದಿನೀರೂಪವರ್ಣನಂ ನಾಮಾಷ್ಟಮೋಽಧ್ಯಾಯಃ

* * *

ನಡೆಯುತ್ತಿರುವ ಈ ಶ್ರೀನಿವಾಸನ ಲೀಲೆಯು ಅತ್ಯದ್ಭುತವಾದುದೆಂದು ಶ್ಲಾಘಿಸಿದರು. (167)

ಇಲ್ಲಿಗೆ ಶ್ರೀಭವಿಷ್ಯೋತ್ತರಪುರಾಣದಲ್ಲಿಯ ವೇಂಕಟಗಿರಿಮಾಹಾತ್ಮ್ಯದಲ್ಲಿ ಶ್ರೀನಿವಾಸನ
ಪುಲಿಂದಿನೀರೂಪವರ್ಣನವೆಂಬ ಎಂಟನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ನವಮೋಽಧ್ಯಾಯಃ

ಶತಾನಂದ ಉವಾಚ–

ಭೋಜನಾಂತೇಽಸ್ಮರದ್ದೇವೀ ದೇವಾನ್ ಸ್ವಕುಲಪೂಜಿತಾನ್ ।
ಆದೌ ನಾರಾಯಣಂ ಧ್ಯಾತ್ವಾ ಪಶ್ಚಾಲ್ಲಕ್ಷ್ಮೀಂ ಪಿತಾಮಹಮ್ ॥1॥

ಸರಸ್ವತೀಮುಮಾಕಾಂತಮುಮಾಮಿಂದ್ರಮತಃ ಪರಮ್ ।
ಶಚೀಮಗ್ನಿಯಮಾದ್ಯಾಂಶ್ಚ ಸದಾರಾನ್ ದಿಕ್ಪತೀನಥ ॥2॥

ದೇವಾನೃಷೀನ್ಪಿತೃನ್ರಾಜನ್ ಗಂಧರ್ವಾನ್ ರಾಜಸತ್ತಮಾನ್ ।
ಕಾಶೀಶಂ ವಿಶ್ವನಾಥಂ ಚ ಬಿಂದುಮಾಧವಮೇವ ಚ ॥3॥

ವಿಷ್ಣುಪಾದಂ ಪ್ರಯಾಗಂ ಚ ಗೋದಾತೀರನಿವಾಸಿನಮ್ ।
ನಾರಸಿಂಹಂ ಜಗನ್ನಾಥಂ ಪಾಂಡುರಂಗಮಹೋಬಲಮ್ ॥4॥

ಪಂಪಾಧ್ಯಕ್ಷಂ ವಿರೂಪಾಕ್ಷಂ ಶ್ರೀಶೈಲಂ ಪುಣ್ಯಕಾನನಮ್ ।
ಶ್ರೀವೇಂಕಟಗಿರೀಶಂ ಚ ಕಾಲಹಸ್ತೀಶ್ವರಂ ಹರಮ್ ॥5॥

## ಒಂಬತ್ತನೆಯ ಅಧ್ಯಾಯ

ಧರಣಿದೇವಿಗೆ ಧರ್ಮದೇವತೆಯ ಹಿತವಚನ

ಮೃಷ್ಟಾನ್ನಭೋಜನವಾದ ಮೇಲೆ ಧರ್ಮದೇವತೆಯು ತನ್ನ ವಂಶಜರಿಂದ ಪೂಜಿತರಾದ ದೇವತೆಗಳನ್ನು ಧ್ಯಾನಮಾಡುತ್ತಾ, ಮೊದಲು ಶ್ರೀಮನ್ನಾರಾಯಣನ್ನು ಅನಂತರದಲ್ಲಿ ಲಕ್ಷ್ಮೀದೇವಿಯನ್ನು, (1) ಬ್ರಹ್ಮನನ್ನು ಸರಸ್ವತಿ, ರುದ್ರ, ಇಂದ್ರ ಮುಂತಾದ ದೇವತೆಗಳನ್ನು, ಶಚಿಯಿಂದ ಸಮೇತನಾದ ಇಂದ್ರ, ಅಗ್ನಿ, ಯಮ ಮೊದಲಾದ ಸಪತ್ನೀಕರಾದ ದಿಗ್ದೇವತೆಗಳನ್ನು, (2) ದೇವತೆಗಳು, ಪಿತೃದೇವತೆಗಳು, ಗಂಧರ್ವರು, ಚಕ್ರವರ್ತಿಗಳು ಇವರೇ ಮೊದಲಾದ ವಿಷ್ಣುಭಕ್ತರನ್ನು, ಕಾಶೀ ಕ್ಷೇತ್ರದಲ್ಲಿಯ ವಿಶ್ವನಾಥ, ಬಿಂದುಮಾಧವ, (3) ಪ್ರಯಾಗಮಾಧವ, ಗಯಾಕ್ಷೇತ್ರದಲ್ಲಿಯ ಗದಾಧರ, ವಿಷ್ಣುಪಾದ, ಗೋದಾನದಿಯ ದಡದಲ್ಲಿಯ ನರಸಿಂಹ, ಪುರೀ ಜಗನ್ನಾಥ, ಅಹೋಬಲ ನೃಸಿಂಹ, (4) ಪಾಂಡುರಂಗ, ಪಂಪಾಪುರಾಧೀಶನಾದ ವಿರೂಪಾಕ್ಷ,

ಘಟಿಕಾಚಲಸಂಸ್ಥಾನಂ ವೃದ್ಧಾಚಲನಿವಾಸಿನಮ್ ।
ವರದಂ ಸರ್ವಲೋಕೇಶಂ ಶ್ರೀರಂಗಂ ಶ್ವೇತರೂಪಿಣಮ್ ॥6॥

ಕುಂಭಘೋಣಾಲಯಂ ಕೃಷ್ಣಂ ಶಾರ್ಙ್ಗಪಾಣಿಂ ಮಹೀಪತೇ ।
ಸೇತುಂ ರಾಮಕೃತಂ ರಾಜನ್ ಪದ್ಮನಾಭಮನಂತರಮ್ ॥7॥

ಸುಬ್ರಹ್ಮಣ್ಯಂ ಕುಮಾರಾಖ್ಯಂ ಮಧುಸೂದನಶಂಕರೌ ।
ಚಂದ್ರೇಶ್ವರಂ ಚ ಗೋಕರ್ಣಂ ತಥಾ ಹರಿಹರೌ ನೃಪ ॥8॥

ಗಂಗಾಂ ಗೋದಾವರೀಂ ಕೃಷ್ಣಾಂ ತುಂಗಭದ್ರಾಂ ಮಲಾಪಹಾಮ್।
ಕಾವೇರೀಂ ಕಪಿಲಾಂ ಕ್ಷೀರಾಂ ಸುವರ್ಣಮುಖರೀಂತಥಾ ॥9॥

ಮೂಕಾಂಬಿಕಾಂ ಭೈರವಂ ಚ ಕಾಲಭೈರವಮೇವ ಚ ।
ಕಾಮಾಕ್ಷೀಂ ಚ ವಿಶಾಲಾಕ್ಷೀಂ ಮತ್ವಾ ಕ್ಷೀಮಪಿ ಸೌಖ್ಯದಾಮ್ ॥10॥

ಸಸ್ಮಾರ ಲೋಕಭಾವೇನ ಚೋವಾಚ ಮಧುರಂ ವಚಃ ।
ರಮೇ ಕೋಲ್ಹಾಪುರಾಧ್ಯಕ್ಷೇ ಪಾಹಿ ಮಾಂ ಪರದೇಶಗಾಮ್ ॥11॥

ಇತಿ ಸ್ವಕೀಯ ಭಾವೇನ ಸ್ಮರಂತೀ ಧರ್ಮದೇವತಾ ।
'ಶೃಣು ಮಾತಃ ಸವಿಸ್ತಾರಂ ಶಪೇ ಗುಲ್ಮಂ ಸುಪುತ್ರಕಮ್ ॥12॥

ಶ್ರೀಶೈಲ, ವೇಂಕಟಗಿರೀಶನಾದ ಶ್ರೀನಿವಾಸ, ಕಾಲಹಸ್ತೀಶ್ವರ, (5) ಘಟಿಕಾಚಲನರಸಿಂಹ, ವೃದ್ಧಾಚಲ ವಾಸಿಯಾದ ಸದ್ಯೋಜಾತ, ಸರ್ವಲೋಕಾನುಗ್ರಾಹಕನಾದ ಕಾಂಚೀ ವರದರಾಜ, ಶ್ರೀರಂಗನಾಥ, ಶ್ರೀಮುಷ್ಣದ ಶ್ವೇತವರಾಹದೇವರು, (6) ಕುಂಭಕೋಣದ ಶಾರ್ಙ್ಗಪಾಣಿಯೆನಿಸಿದ ಕೃಷ್ಣ, ರಾಮಸೇತು, ರಾಮೇಶ್ವರ, ಅನಂತಪದ್ಮನಾಭ, (7) ಸುಬ್ರಹ್ಮಣ್ಯದ ಕುಮಾರಸ್ವಾಮಿ, ಹರಿಹರೇಶ್ವರ, ಗೋಕರ್ಣದ ಈಶ್ವರ, ಚಂದ್ರೇಶ್ವರ, ಶಂಕರನಾರಾಯಣ ಇವರೇ ಮೊದಲಾದ ಕ್ಷೇತ್ರ-ಕ್ಷೇತ್ರಸ್ವಾಮಿಯಾದ ದೇವತೆಗಳನ್ನು, (8) ಗಂಗಾ, ಗೋದಾವರಿ, ಕೃಷ್ಣಾ, ತುಂಗಭದ್ರಾ, ಮಲಾಪಹಾ, ಕಾವೇರಿ, ಕಪಿಲಾ, ಕೃಷ್ಣಾ, ಕ್ಷೀರಾ, ಸುವರ್ಣಮುಖರೀ ಮೊದಲಾದ ತೀರ್ಥ-ತೀರ್ಥಾಭಿಮಾನಿಗಳಾದ ದೇವತೆಗಳನ್ನು, (9) ಕಾಮಾಕ್ಷೀ, ವಿಶಾಲಾಕ್ಷಿ, ಮೀನಾಕ್ಷಿ, ಮಹಾಲಕ್ಷ್ಮೀ ಇವರೇ ಮೊದಲಾದ ಸ್ತ್ರೀದೇವತೆಗಳನ್ನು, ಸಕಲ ವಸ್ತುಗಳಲ್ಲಿ ವ್ಯಾಪ್ತವಾದ ದೇವತೆಗಳನ್ನು, ಅಂತರ್ಯಾಮಿಯಾದ ದೇವತಾಸ್ವರೂಪವನ್ನು ಧ್ಯಾನಮಾಡಿ, (10) 'ಕೊಲ್ಲಾಪುರನಿವಾಸಿಯಾದ ಲಕ್ಷ್ಮೀದೇವಿಯೇ ನನ್ನನ್ನು ರಕ್ಷಿಸು' ಎಂದು ಮಹಾಲಕ್ಷ್ಮೀಯನ್ನು ಆತ್ಮೀಯ ಭಾವದಿಂದ ಸ್ಮರಿಸಿ, (11) ತನಗೆ ಭವಿಷ್ಯವನ್ನು ಹೇಳಲು ಆಧಾರವಾದ ಬುಟ್ಟಿಯ ಮೇಲೂ, ತನ್ನ ಮಗನ

ಭರ್ತಾರಂ ಬದರೀವಾಸಂ ಮಾತರಂ ಪಿತರಂ ಗುರುಮ್ ।
ಸ್ವಾತ್ಮಾನಂ ತು ಶಪೇ ರಾಜ್ಞಿ ಸತ್ಯಮಿತ್ಯವಧಾರಯ ॥13॥

ಸತ್ಯಂ ವದಾಮಿ ಸುಶ್ರೋಣಿ ತಾಂಬೂಲಂ ದೇಹಿ ಮೇಽಂಗನೇ।
ಏಲಾಲವಂಗಕರ್ಪೂರಜಾತೀಪತ್ರಂ ಸಪೂಗಕಮ್ ॥14॥

ನಾಗವಲ್ಲೀದಲೈರ್ಯುಕ್ತಂ ದೇಹಿ ಮೇ ಮಂದಗಾಮಿನಿ ।
ಇತ್ಯುಕ್ತಾ ಧರಣೀದೇವೀ ತಾಂಬೂಲಂ ಪುನರಪ್ಯದಾತ್ ॥15॥

ಧರುಣ್ಯುವಾಚ–

'ಸತ್ಯಂ ವದ ಮಹಾಪ್ರಾಜ್ಞೇ ಸರ್ವದುಃಖಪ್ರಶಾಂತಯೇ ।
ತ್ರಿರಾಶಿಂ ಮೌಕ್ತಿಕಾನಾಂ ತುಶೂರ್ಪಪೂರ್ಣಮಿದಂಶುಭಮ್' ॥16॥

ಇತಿ ತಸ್ಯಾ ವಚಃ ಶ್ರುತ್ವಾ ತುಷ್ಟೋ ಭಾಗೀರಥೀಪಿತಾ ।
ಪುನರಾಲೋಚಯಂತೀ ಸಾ ಪುಲಿಂದಾ ವಾಕ್ಯಮಬ್ರವೀತ್ ॥17॥

ಪುಲಿಂದೋವಾಚ–

ಕೃತ್ವಾ ಮೌಕ್ತಿಕರಾಶೀಂಸ್ತ್ರೀನೇಕರಾಶೌ ವಿಚಿಂತ್ಯತಾಮ್ ।
ಹಸ್ತೇ ದತ್ವಾ ವರಾಂ ಯಷ್ಟಿ'ಮೇಷ್ವೇಕಮನಯಾ ಸ್ಪೃಶ' ॥18॥

ಇತ್ಯುಕ್ತಯಾ ತಯಾ ದೇವ್ಯಾ ಮಧ್ಯರಾಶೌ ವಿಲೋಡಿತೇ ।
ಭಾವಸಾಮ್ಯಂ ತತೋ ಜ್ಞಾತ್ವಾ ಪ್ರಹೃಷ್ಟಾ ವಾಕ್ಯಮಬ್ರವೀತ್ ॥19॥

ಮೇಲೂ, ಬದರಿಕಾಶ್ರಮ ನಿವಾಸಿಯಾದ ತನ್ನ ಗಂಡನ ಮೇಲೂ, ತನ್ನ ತಾಯಿಯ ಮೇಲೂ ಹಾಗೂ ತನ್ನ ಮೇಲೂ ಆಣೆಯನ್ನು ಇಟ್ಟು ಸತ್ಯವನ್ನೇ ಹೇಳುತ್ತೇನೆಂದು ರಾಜಪತ್ನಿಯನ್ನು ನುಡಿದು, (12–14) 'ಮತ್ತೊಮ್ಮೆ ತಾಂಬೂಲವನ್ನು ಕೊಡು' ಎಂದು ಧರಣಿದೇವಿಯನ್ನು ಪ್ರಾರ್ಥಿಸಲು ಧರಣಿದೇವಿಯು ದಿವ್ಯವಾದ ತಾಂಬೂಲವನ್ನು ಕೊಟ್ಟಳು ಮತ್ತು ಮೂರು ಮುತ್ತಿನ ರಾಶಿಗಳನ್ನು ಮರಗಳಲ್ಲಿ ಅವಳ ಮುಂದಿಟ್ಟು ದುಃಖವನ್ನು ನಿವಾರಿಸಲು ಪ್ರಾರ್ಥಿಸಿಕೊಂಡಳು. (16) ಧರ್ಮದೇವಿಯು ಇರಿಸಿದ ಸುಂದರವಾದ ಚಿನ್ನದ ಮೊರದಲ್ಲಿ ಮೂರು ಮುತ್ತಿನ ರಾಶಿಗಳಲ್ಲಿ ಒಂದರಲ್ಲಿ ತನ್ನ ಮನದ ಅಭಿಲಾಷೆಯನ್ನು ಚಿಂತಿಸಬೇಕು' ಎಂದು ಧರ್ಮದೇವತೆಯು ಧರಣಿದೇವಿಗೆ ತಿಳಿಸಿ, ತನ್ನ ಕೈಯಲ್ಲಿನ ಕೋಲನ್ನು ಧರಣಿದೇವಿಗೆ ಕೊಟ್ಟು, ಮುತ್ತಿನ ರಾಶಿಯಲ್ಲಿನ ಒಂದು ರಾಶಿಯನ್ನು ಮುಟ್ಟಲು ತಿಳಿಸಿದಳು. ಆಗ ಧರಣಿದೇವಿಯು ಮಧ್ಯದಲ್ಲಿನ ಮುತ್ತಿನ ರಾಶಿಯನ್ನು ಮುಟ್ಟಿದಳು. ಆಗ ನಸುನಕ್ಕು "ಭಾವಸಾಮ್ಯವಿದೆ" ಎಂದು

ಧರ್ಮದೇವ್ಯುವಾಚ–

'ವದೇಯಂ ಕಾರಣಂ ದೇವಿ ದುಹಿತುಸ್ತೇಽಂಗಶೋಷಣೇ ।
ಆಗತಃ ಪುರುಷೇಣಾಸ್ಯಾ ಯೇನ ಕೇನಾಪ್ಯುಪದ್ರವಃ ॥20॥

ಸವಿಸ್ತರಂ ರಾಜಪುತ್ರಿ ಪ್ರವದಾಮಿ ನಿಬೋಧ ತತ್ ।
ಇತಃ ಪೂರ್ವದಿನೇ ಕಂಚಿತ್ಪುರುಷಂ ತುರಗಾರುಹಮ್ ॥21॥

ದೃಷ್ಟ್ವಾ ಮೋಹವಶಂ ಯಾತಾ ಕಾಮಜ್ವರಸುಪೀಡಿತಾ ।
ಪತಿಂ ಶ್ರೀವೇಂಕಟಾಧೀಶಂ ಕರ್ತುಮಿಚ್ಛತಿ ತೇ ಸುತಾ ॥22॥

ತಥಾ ಭವಿಷ್ಯತಿ ಶುಭಂ ವಾಗಿಯಂ ನಾನ್ಯಥಾ ಭವೇತ್ ।
ಯೋಽಸೌ ತುರಗಮಾರೂಢಃ ಪುರುಷಃ ಪೂರ್ವಮಾಗತಃ ॥23॥

ಕಿರಾತರೂಪಧಾರೀ ಸಃ ಸಾಕ್ಷಾನ್ಮಥಮನ್ಮಥಃ ।
ತಂ ದೃಷ್ಟ್ವಾ ಮೋಹಮಾಯಾತಾ ಕಾಮಜ್ವರಸುಪೀಡಿತಾ ॥24॥

ದುಹಿತಾ ತೇಽಭವದ್ರಾಜ್ಞಿ ತತೋಽಸ್ಯಾ ಅಂಗಶೋಷಣಮ್ ।
ತಚ್ಛಾಂತ್ಯರ್ಥಂ ವರಾರೋಹೇ ತಸ್ಮೈ ಸಾ ಸಂಪ್ರದೀಯತಾಮ್' ॥25॥

ತಿಳಿದ ಧರ್ಮದೇವತೆಯು (19) ರಾಜಪತ್ನಿಯ ಮಗಳ ಅಂಗಶೋಷಣೆಯ ಕಾರಣವನ್ನು ತಿಳಿಸುತ್ತಾ `ಒಬ್ಬ ಪುರುಷನಿಂದ ನಿನ್ನ ಪುತ್ರಿಗೆ ಬಾಧೆಯುಂಟಾಗಿದೆ. ಅಶ್ವಾರೋಹಿಯಾದ ಪುರುಷನೊಬ್ಬ ನಿನ್ನಿನ ದಿವಸ ನಿನ್ನ ಪುತ್ರಿಯ ಕಣ್ಣಿಗೆ ಬಿದ್ದಾಗ, ಆತನನ್ನು ಮೋಹಿಸಿದ ನಿನ್ನ ಪುತ್ರಿಯು ಕಾಮಜ್ವರದಿಂದ ಪೀಡಿತಳಾಗಿರುವಳು. ಜಗತ್ಸ್ವಾಮಿಯಾದ ಶ್ರೀನಿವಾಸನೇ ಆ ಪುರಷನು. ಅವನನ್ನೇ ಈಕೆಯು ಅಪೇಕ್ಷಿಸುತ್ತಿದ್ದಾಳೆ. (22) ಅವಳು ಅವನನ್ನೇ ವಿವಾಹ ವಾಗುವಳು. ನನ್ನ ಮಾತೆಂದೂ ಸುಳ್ಳಾಗದು. ಅವನು ನಿನ್ನೆ ಉನ್ನತವಾದ ಅಶ್ವವನ್ನೇರಿಕೊಂಡು, ಕಿರಾತರೂಪದಿಂದ ಬಂದಿದ್ದನು. ಮನ್ಮಥಮನ್ಮಥನಂತಿದ್ದ ಅವನನ್ನು ನೋಡಿ ನಿನ್ನ ಮಗಳು ಮೋಹವನ್ನು ಹೊಂದಿ ಕಾಮಜ್ವರ ಪೀಡಿತಳಾಗಿರುವಳು. (24) ಇದೇ ನಿನ್ನ ಮಗಳ ಅಂಗಶೋಷಣೆಯ ಕಾರಣವು. ನೀನು ನಿನ್ನ ಮಗಳನ್ನು ಅವನಿಗೇ ವಿವಾಹ ಮಾಡಿಕೊಡು. ಈ ಜ್ವರಬಾಧೆಯ ಪರಿಹಾರಕ್ಕಾಗಿ ಪದ್ಮಾವತಿಯನ್ನು ಆ ಪುರಷನಿಗೆ ವಿವಾಹಮಾಡಿ ಕೊಡಬೇಕು" (25) ಎಂದಳು. ಆಗ ಧರಣೀ ದೇವಿಯು 'ನನ್ನ ಮಗಳು ಮೋಹಿಸಿದ ಪುರಷನು ಯಾರು? ಅವನೆಲ್ಲಿರುವನು? ಅವನ ಹೆಸರು, ಕುಲ-ಗೋತ್ರಗಳು ಯಾವವು? ಎಂದು ಪ್ರಶ್ನಿಸಿದಳು.

ಇತ್ಯುಕ್ತ್ವಾ ಧರಣೀದೇವೀ ಧರ್ಮದೇವೀಂ ವಚೋಽಬ್ರವೀತ್ ।

ಧರಣ್ಯುವಾಚ–

'ಕ್ವಾಸ್ತೇ ಕಿರಾತರೂಪೀ ಸಃ ದುಹಿತುರ್ಮೇಽಂಗಶೋಷಕಃ ॥26॥
ವದ ತನ್ನಾಮ ಕಿಂ ಭದ್ರೇ ವರಂ ದಾಸ್ಯೇ ತವೇಪ್ಸಿತಮ್' ।
ಇತಿ ಪೃಷ್ಟಾ ಧರ್ಮದೇವೀ ಧರಣೀಂ ವಾಕ್ಯಮಬ್ರವೀತ್ ॥27॥

ಧರ್ಮದೇವ್ಯುವಾಚ–

'ವೈಕುಂಠಸ್ಥೋ ಹರಿಸ್ಸಾಕ್ಷಾದ್ವರ್ತತೇ ವೇಂಕಟಾಚಲೇ ।
ಶ್ರೀನಿವಾಸ ಇತಿ ಖ್ಯಾತೋ ವಿದ್ಯಾವಾನ್ ಧನವಾನ್ ಬಲೀ ॥28॥

ಪುತ್ರ್ಯಾ ತವ ವರಾರೋಹೇ ಹತೋ ಯಸ್ಯ ಹಯೋತ್ತಮಃ ।
ಆರಾಮದ್ವಾರನಿಕಟೇ ಪತಿತಃ ಸ ಹಯೋತ್ತಮಃ ॥29॥

ಅಶ್ಮಭಿಸ್ತಾಡಿತೋಽತ್ಯಂತಂ ವಿಹ್ವಲಃ ಪೃಚ್ಛ ತತ್ಸಖೀಃ ।
ಗೌರವಾದ್ರಾಜಪುತ್ರ್ಯಾಸ್ತು ಕ್ಷಮಿತಂ ಪುರುಷೇಣ ತತ್ ॥30॥

ಸತ್ಯಂ ವಿದ್ಧಿ ವಚೋ ಮೇಽದ್ಯ ದತ್ವಾ ತಾಂ ಸುಖಮೇಷ್ಯಸಿ ।
ಅದತ್ವಾ ದುಃಖಮಾಪ್ನೋಷಿ ನ ಮೇ ವಾಣೀ ವೃಥಾಭವೇತ್ ॥31॥

ಅದಾನೇ ದಿನ ಮಾತ್ರೇ ಸಾ ಮರಿಷ್ಯತಿ ನ ಸಂಶಯಃ' ।
ಅಮಂಗಲವಚಃ ಶ್ರುತ್ವಾ ಕಿಂಚಿದ್ದುಃಖಸಮಾಕುಲಾ ॥32॥

(27) ಆಗ ಧರ್ಮದೇವತೆಯು 'ವೈಕುಂಠಾಧಿಪತಿಯಾದ ಶ್ರೀವಿಷ್ಣುವೇ ಈಗ ವೇಂಕಟಾಚಲದಲ್ಲಿ ಶ್ರೀನಿವಾಸ ಎಂಬ ಹೆಸರಿನಿಂದ ವಾಸವಾಗಿದ್ದಾನೆ. ಅವನು ಮಹಾ ಬಲಿಷ್ಠ, ವಿದ್ಯಾವಂತ, ಸರ್ವಗುಣಪರಿಪೂರ್ಣ ಹಾಗೂ ಶ್ರೀಮಂತನೂ ಆಗಿದ್ದಾನೆ. (28) ನಿನ್ನ ಮಗಳು ನಿನ್ನಿನ ದಿವಸ ಕಲ್ಲಿನಿಂದ ಆತನ ಕುದುರೆಯನ್ನು ಕೊಂದಿದ್ದಾಳೆ. ನಿಮ್ಮ ಉದ್ಯಾನವನದ ಬಾಗಿಲಲ್ಲಿ ಇನ್ನೂ ಅದೂ ಬಿದ್ದಿದೆ. (29) ರಾಜಪುತ್ರಿಯು ಮಾಡಿದ ದೊಡ್ಡ ಅಪರಾಧವಿದು ರಾಜನ ಗೌರವದಿಂದ ಶ್ರೀನಿವಾಸನು ಅದನ್ನು ಸಹಿಸಿಕೊಂಡಿದ್ದಾನೆ. ಪದ್ಮಾವತಿಯ ಸಖಿಯಿರಿಂದ ಈ ವೃತ್ತಾಂತದ ಸತ್ಯಾಸತ್ಯತೆಯನ್ನು ಪರೀಕ್ಷೀಸು. (30) ಪದ್ಮಾವತಿಯನ್ನು ಶ್ರೀನಿವಾಸನಿಗೆ ವಿವಾಹ ಮಾಡಿಕೊಟ್ಟರೆ ಅವಳಿಗುಂಟಾದ ಜ್ವರಬಾಧೆಯು ನಿವೃತ್ತವಾಗುವುದು. ಹಾಗೆ ಮಾಡದಿದ್ದಲ್ಲಿ ದುಃಖವನ್ನೇ ಅನುಭವಿಸ ಬೇಕಾಗಬಹುದು. (31) ದಿನ ಮಾತ್ರದಲ್ಲಿ ಅವಳ ಅಪೇಕ್ಷೆಯು

ಧರಣ್ಯುವಾಚ–

'ಕಿಂ ಮಾಂ ವದಸಿ ದುರ್ವಾಕ್ಯಮಸತ್ಯಂ ವಾಮಲೋಚನೇ' ।
ಇತಿ ತಸ್ಯಾ ವಚಃ ಶ್ರುತ್ವಾ ಪುನರಾಹ ಪುಲಿಂದಜಾ ॥33॥

ಧರ್ಮದೇವ್ಯುವಾಚ–

'ನಾಸತ್ಯಂ ವಚನಂ ದೇವಿ ಮಯೋಕ್ತಂ ಪೂರ್ವಮೇವ ತತ್'।
ಇತಿ ಭೀತಾ ತದ್ವಚನಾದ್ರಾಜ್ಞೀ ವಾಕ್ಯಮಥಾಬ್ರವೀತ್ ॥34॥

ಧರಣ್ಯುವಾಚ–

'ಅಯಾಚಿತಾ ಮಯಾ ಕನ್ಯಾ ಕಥಂ ದೇಯಾ ಭವಿಷ್ಯತಿ'।
ಇತಿ ಚಿಂತಾಪರಾಂ ರಾಜ್ಞೀಂ ಧರ್ಮದೇವೀ ವಚೋಽಬ್ರವೀತ್ ॥35॥

ಧರ್ಮದೇವ್ಯುವಾಚ–

'ಅದ್ಯೈವ ಘಟಿಕಾಂತೇ ತ್ವಾಮಾಗಮಿಷ್ಯತಿ ಕಾಚನ ।
ಅಬಲಾ ಬಹುವೃದ್ಧಾ ಚ ಧರ್ಮಾರ್ಥಕುಶಲಾ ಭುವಿ ॥36॥

ಮದ್ವಾಕ್ಯಂ ವಿಶ್ವಸಂತೀ ತ್ವಂ ರಾಜಾನಂ ಪರಿಬೋಧಯ ।
ತೋಂಡಮಾನಂ ಚ ತೇ ಭರ್ತುರ್ಭ್ರಾತರಂ ಸಸುಹೃದ್ಗಣಮ್ ॥37॥

ಈಡೇರದಿದ್ದಲ್ಲಿ ಮೃತಿಯನ್ನು ಹೊಂದುವದರಲ್ಲಿ ಸಂಶಯವಿಲ್ಲ' ಎಂದು ಹೇಳಿದಳು. ಇದರಿಂದ ದುಃಖಿತಳಾದ ಧರಣಿದೇವಿಯು (32) 'ನನ್ನ ಬಗ್ಗೆ ಇಂತಹ ಕೆಟ್ಟ ಮಾತುಗಳನ್ನೇಕೆ ನುಡಿಯುವಿ?; ಎಂದು ನುಡಿದಳು. ಧರ್ಮದೇವಿಯು ಇದನ್ನು ಕೇಳಿ (33) 'ನಾನು ಈ ಹಿಂದೆಯೇ ನಿನಗೆ ತಿಳಿಸಿದಂತೆ ನಾನೆಂದೂ ಸುಳ್ಳನ್ನು ಹೇಳುವದಿಲ್ಲ, ನಾನು ನುಡಿದುದೆಲ್ಲವೂ ಸಹ ಸತ್ಯವೇ ಆಗುವದು' ಎಂದು ತಿಳಿಸಿದಾಗ ಧರಣೀದೇವಿಯು ಅತ್ಯಂತ ಭಯಗ್ರಸ್ತಳಾಗಿ (34) 'ಯಾರಾದರೂ ಬಂದು ಕನ್ನೆಯನ್ನು ಯಾಚಿಸಿದರೆ ಮದುವೆ ಮಾಡಿ ಕೊಡಬಹುದು. ಆಯಾಚಿತಳಾದ ನನ್ನ ಮಗಳನ್ನು ಹೇಗೆ ಕೊಡಲು ಸಾಧ್ಯ' ಎಂದು ಚಿಂತಾಪರಳಾದಳು. (35) ಆಗ ಧರ್ಮದೇವಿಯು "ಇವತ್ತಿನ ದಿವಸವೇ ಇನ್ನೊಂದು ಘಳಿಗೆಯ ಅನಂತರದಲ್ಲಿ ವೃದ್ಧೆಯಾದ ಹೆಂಗಸೊಬ್ಬಳು ಧರ್ಮಾರ್ಥಕಾಮಗಳನ್ನು ಅರಿತವಳೂ, ಜ್ಞಾನವೃದ್ಧಳೂ ಆಗಿರುವವಳು ಕನ್ಯಾರ್ಥಿಯಾಗಿ ನಿನ್ನನ್ನು ಯಾಚಿಸುತ್ತಾಳೆ. (36) ಈ ವೃತ್ತಾಂತವನ್ನು ನಿನ್ನ ಪತಿಯಾದ ಆಕಾಶರಾಜನಿಗೆ, ಆತನ ತಮ್ಮನಾದ ತೊಂಡಮಾನ ರಾಜನಿಗೆ, ನಿನ್ನ ಮಗನಿಗೂ, ಆಪ್ತಮಿತ್ರರಿಗೂ ತಿಳಿಸಿ, ಆ ಪುರುಷನಿಗೆ

ಸಂಬೋಧ್ಯ ಸಾಧುಮಾರ್ಗಂ ತು ಸಮಾಶ್ರಯ ನೃಪಪ್ರಿಯೇ ।
ಸನ್ನಿಧೌ ಮಮ ಸಂಕಲ್ಪಂ ಕುರು ಕನ್ಯಾನಿಮಿತ್ತಕಮ್' ॥39॥

ಧರಣ್ಯುವಾಚ–

'ಯೇನ ಕೇನಾಪ್ಯುಪಾಯೇನ ಜೀವಿತಾ ಸ್ಯಾತ್ ಸುತಾ ಮಮ।
ಸುತಾಂ ತಸ್ಯೈವ ದಾಸ್ಯಾಮಿ ಗಿರಿಗಹ್ವರವಾಸಿನಃ ॥39॥

ಧರ್ಮದೇವ್ಯುವಾಚ–

'ಏವಂ ಚೇತ್ತೇ ಸುತಾ ರಾಜ್ಞಿ ಜೀವಿಷ್ಯತಿ ನ ಸಂಶಯಃ ।
ಪತಿರ್ಮೇ ವರ್ತತೇ ಯತ್ರ ದೇವಿ ತತ್ರ ವ್ರಜಾಮ್ಯಹಮ್' ॥40॥

ಇತ್ಯುಕ್ತಾ ತದ್ವಚಃ ಸತ್ಯಂ ದ್ರಷ್ಟುಕಾಮಾ ಧರಾಽಬ್ರವೀತ್ ।

ಧರಣ್ಯುವಾಚ–

'ತದಾ ತೇ ವಚನಂ ಸತ್ಯಂ ಯದ್ಯೇವಂ ಸಂಭವಿಷ್ಯತಿ' ॥41॥

ಇತ್ಯುಕ್ತಾ ಸಾ ಜಗಾಮಾಽಶು ನಿಜಧಾಮ ವರಾಂಗನಾ ।
ಸಾಽಪಿ ತಾಂ 'ಬಾಢ'ಮಿತ್ಯುಕ್ತ್ವಾ ನಿರ್ಜಗಾಮ ಪುರಾದ್ಬಹಿಃ ॥42॥

ಕಕ್ಷೇ ಬಧ್ವಾ ಸುತಂ ರಾಜನ್ ಸ್ವರ್ಣಶೂರ್ಪಂ ಸಗುಲ್ಮಕಮ್ ।
ಜಗಾಮೋತ್ತರಮಭ್ಯೇತ್ಯ ಪುಲಿಂದಾ ಮಿಥಿಲೇಶ್ವರ ॥43॥

ನಿನ್ನ ಮಗಳನ್ನು ವಿವಾಹಮಾಡಿ ಕೊಡು. ಈಗ ನನ್ನೆದುರು ಕನ್ಯಾದಾನವನ್ನು ಮಾಡುವ ಸಂಕಲ್ಪವನ್ನು ಮಾಡು" ಎಂದು ಹೇಳಿದಳು. (37–38) ಆಗ ಧರಣಿದೇವಿಯು ತನ್ನ ಮಗಳು ಬದುಕಬೇಕೆಂಬ ಇಚ್ಛೆಯಿಂದ "ವೆಂಕಟಗಿರಿಯಲ್ಲಿ ವಾಸವಾಗಿರುವ ಶ್ರೀನಿವಾಸನಿಗೆ ನನ್ನ ಮಗಳನ್ನು ವಿವಾಹ ಮಾಡಿಕೊಡುತ್ತೇನೆ" ಎಂದು ಧರ್ಮದೇವತೆಯ ಸಮ್ಮುಖದಲ್ಲಿ ಪ್ರತಿಜ್ಞೆ ಮಾಡಿದಳು. (39) ರಾಣಿಯ ಪ್ರತಿಜ್ಞೆಯಿಂದ ಸಂತುಷ್ಟಳಾದ ಧರ್ಮದೇವತೆಯು 'ಹಾಗಾದರೆ ನಿನ್ನ ಮಗಳು ಜೀವಿಸುವಳು' ಎಂದು ನುಡಿದಳು. (40) ಆಗ ಧರಣೀ ದೇವಿಯು ನನ್ನ ಮಗಳು ಸುಖವಾಗಿ ಬದುಕಿ ಇದ್ದಲ್ಲಿ ನಿನ್ನ ಮಾತು ಸತ್ಯವೆಂದು ನುಡಿಯುತ್ತಾಳೆ. (41) ತನ್ನ ಗಂಡನ ಬಳಿಗೆ ಹೋಗುವೆನೆಂದು ಧರಣಿದೇವಿಗೆ ತಿಳಿಸಿ, ಅವಳಪ್ಪಣೆಯನ್ನು ಪಡೆದು, ಟೊಂಕದಲ್ಲಿ ಮಗುವನ್ನು ಕಟ್ಟಿಕೊಂಡು ಚಿನ್ನದ ಮೊರವನ್ನು, ಬಿದಿರು ಬುಟ್ಟಿಯನ್ನು ತೆಗೆದುಕೊಂಡು ಪಟ್ಟಣದಿಂದ ಹೊರಕ್ಕೆ ಹೊರಟು ಉತ್ತರದಿಕ್ಕಿನ ಕಡೆಗೆ ಪ್ರಯಾಣ ಮಾಡಿದಳು. (43)

ಪುಲಿಂದಿನ್ಯಾಂ ಗತಾಯಾಂ ತು ಧರಣೀ ವಾಮಲೋಚನಾ ।
ಪುತ್ರೀನಿಕೇತನಂ ಪ್ರಾಪ್ಯ ರುದಂತೀ ಭೃಶದುಃಖಿತಾ ॥44॥

ಧರಣ್ಯುವಾಚ–

'ಕಿಂ ತೇ ಮನೋಗತಂ ಪುತ್ರಿ ನ ವದಿಷ್ಯಸಿ ಕಿಂ ಚ ಮಾಮ್ ।
ನ ಚ ಮಾತೃಸಮಂ ಮಿತ್ರಂ ಪುತ್ರೀಣಾಂ ವಿದ್ಯತೇ ಶುಭೇ ॥45॥

ಕಿಂ ನು ಕಾರ್ಯಮಕಾರ್ಯಂ ವಾ ತನ್ಮಮಾಚಕ್ಷ್ವ ಭಾಮಿನಿ ।
ಪೂರಯಾಮಿ ಮನಃಸ್ಥಂ ತೇ ಕಿಂ ವೃಥಾ ದೇಹಶೋಷಣಾತ್ ॥46॥

ಅಭಾಗ್ಯಾಽಹಂ ಮಹಾಭಾಗೇ ವಿಷಪಾನಂ ಕರೋಮಿ ಚ' ।
ಇತ್ಯುಕ್ತ್ವಾ ಸಾ ಪರಾಧೀನಾ ರುದತೀ ದುಃಖಿತಾಽಭವತ್ ॥47॥

ದುಃಖಿತಾಂ ಜನನೀಂ ದೃಷ್ಟ್ವಾ ಮಂದಮಾಹ ಮನೋಗತಮ್ ।

ಪದ್ಮಾವತ್ಯುವಾಚ–

'ಕಿಂ ವದಿಷ್ಯಾಮಿ ಹೇ ಮಾತಃ ಸೂತಿಕಾದುಃಖಮಾಗತಮ್ ॥48॥

ಅಥವಾ ಪುತ್ರಲಾಭಂ ವಾ ಪ್ರವದಾಮಿ ನಿಗೂಢಜಮ್ ।
ನಾಕೃತಂ ತಾದೃಶಂ ಕಿಂಚಿಜ್ಞಾತಾ ಕ್ವಾಪಿ ತು ಮೇ ವರೇ ॥49॥

### ಧರಣೀಪದ್ಮಾಸಂವಾದ

ಅತ್ತ ಕೊರವಂಜಿಯು ಹೊರಡುತ್ತಿರಲು ಧರಣೀದೇವಿಯು ಪದ್ಮಾವತಿಯ ಸಮೀಪಕ್ಕೆ ಹೋಗಿ, ಅತ್ಯಂತ ದುಃಖದಿಂದ ಕಣ್ಣುಗಳಲ್ಲಿ ನೀರುತುಂಬಿಕೊಂಡು (44) 'ಹೇ ಮಗಳೇ! ನಿನ್ನ ಮನಸ್ಸಿನಲ್ಲಿ ಏನಿರುವದು ಎಂಬುದನ್ನು ನನಗೆ ತಿಳಿಸುವದೇ ಇಲ್ಲವಲ್ಲ. ತಾಯಿಗೆ ಸಮಾನರಾದ ಮಿತ್ರರು ಹೆಣ್ಣುಮಕ್ಕಳಿಗೆ ಇರುವದಿಲ್ಲ. (45) ನೀನು ಏನು ಮಾಡಿರುವಿ, ಅದು ಕಾರ್ಯವೋ ಅಥವಾ ಅಕಾರ್ಯವೋ ಅದೇನಿದ್ದರೂ ಅದನ್ನು ನನಗೆ ತಿಳಿಸು. ನಿನ್ನ ಮನೋಭೀಷ್ಟವನ್ನು ನನಗೆ ತಿಳಿಸು. ಅದನ್ನು ನಾನು ಪೋರೈಸುವೆನು. (46) ನಿನ್ನ ಮನೋಗತ ಇಚ್ಛೆಯನ್ನು ನನಗೆ ತಿಳಿಸದಿದ್ದಲ್ಲಿ ಮಂದಭಾಗ್ಯಳಾದ ನಾನು ವಿಷಪಾನವನ್ನು ಮಾಡುವೆನು' ಎಂದು ನುಡಿದಳು. ತಾಯಿಯ ದುಃಖವನ್ನು ನೋಡಿ ದುಃಖಿತಳಾದ ಪದ್ಮಾವತಿಯು (47) ತನ್ನ ತಾಯಿಯನ್ನು ಕುರಿತು 'ನಾನು ನಿನಗೆ ಏನೆಂದು ಹೇಳಲಿ? ನನಗೆ ಪ್ರಸವ ವೇದನೆಯೆಂದಾಗಲಿ ಅಥವಾ ನಿಗೂಢವಾದ ಪುತ್ರನು ಜನಿಸಿರುವನೆಂದಾಗಲಿ ನೀನು ತಿಳಿಯದಿರು. ಅಂತಹ ಯಾವ

ಕಾಂಕ್ಷಾ ಸಂಪ್ರತಿ ತಾಮದ್ಯ ವಕ್ತುಂ ಶಕ್ನೋಮಿ ನ ಸ್ವಯಮ್ ।
ತಥಾಽಪಿ ತತ್ಪ್ರವಕ್ಷ್ಯಾಮಿ ಮಾತೃತ್ವಾಚ್ಛೃಣು ಭಾಮಿನಿ ॥50॥

ತ್ವಯಾಽಽಜ್ಞಪ್ತಾ ಗತಾ ಮಾತಃ ಪುಷ್ಪಾರಾಮಂ ಸಖೀಯುತಾ ।
ತತ್ರ ಕಶ್ಚಿತ್ಪುಮಾನ್ ಪ್ರಾಪ್ತಃ ಪುರಾಣಪುರುಷೋತ್ತಮಃ ॥51॥

ಮಾತಃ ಸ್ಮರಾಮಿ ತದ್ವಕ್ತ್ರಂ ಪುಂಡರೀಕನಿಭೇಕ್ಷಣಮ್ ।
ತಂ ವಿನಾ ನಹಿ ಜೀವಾಮಿ ಸತ್ಯಮಿತ್ಯವಧಾದಯ ॥52॥

ಚರಿತಂ ತಸ್ಯ ಕೃಷ್ಣಸ್ಯ ಜಾನಂತಿ ವಿಬುಧಾರಯಃ ।
ಪಾಪಾಲಯಾಶ್ಚ ಮನುಜಾಃ ಪ್ರಭಾವಂ ನ ಹರೇಃ ಪರಮ್ ॥53॥

ಸತ್ಯಂ ಸರ್ವೋತ್ತಮಃ ಸಾಕ್ಷಾತ್ ಸ ಏವ ಪುರುಷೋತ್ತಮಃ ।
ದಕ್ಷಿಣಂ ಪಾಣಿಮಾಶ್ರಿತ್ಯ ರಾಜತೇ ಚಕ್ರಮುತ್ತಮಮ್ ॥54॥

ತಥಾ ಸವ್ಯೇ ಶಂಖವರೋ ರಾಜತೇ ರಾಜವಲ್ಲಭೇ ।
ಯತ್ಕಂಠೇ ಕೌಸ್ತುಭಂ ರತ್ನಂ ಕರ್ಣೇ ಮಕರಕುಂಡಲೇ ॥55॥

ಯಸ್ಯ ಚಕ್ರ ಪ್ರಭಾವೇಣ ದಗ್ಧಾ ವಾರಾಣಸೀ ಪುರೀ[35] ।

ಅಕಾರ್ಯಗಳನ್ನೂ ಸಹ ನಾನು ಮಾಡಿರುವದಿಲ್ಲ. (48-49) ನನ್ನ ಮನಸ್ಸಿನಲ್ಲಿ ಅಭಿಲಾಷೆಯೊಂದಿರುವದಾದರೂ ನಾಚಿಕೆಯಿಂದ ನಾನೇ ಅದನ್ನು ನುಡಿಯಲು ಸಾಧ್ಯವಾಗುತ್ತಿಲ್ಲ. ಆದರೂ ಸಹ ನೀನು ನನ್ನ ತಾಯಿಯಾಗಿರುವದರಿಂದ ನಿನಗೆ ತಿಳಿಸುವೆನು. ಕೇಳು. (50) ನಿನ್ನೆ ನಿನ್ನಿಂದ ಆಜ್ಞಪ್ತರಾದ ನಾನು ನನ್ನ ಸಖಿಯರಿಂದ ಸಮೇತಳಾಗಿ ಉದ್ಯಾನವನಕ್ಕೆ ಹೂವುಗಳನ್ನು ತರಲು ಹೋದೆನು. ಅಲ್ಲಿ ಪುರಾಣ ಪುರುಷೋತ್ತಮನಾದ ವ್ಯಕ್ತಿಯೊಬ್ಬನು ಕುದುರೆಯನ್ನೇರಿ ಬಂದನು.(51) ಅವನ ಕಮಲದಂತೆ ಸುಂದಾರವಾದ ಮುಖವನ್ನು ನಾನು ಇಂದಿಗೂ ಸಹ ನೆನಪಿನಲ್ಲಿಟ್ಟುಕೊಂಡಿರುವೆನು. ಅವನಿಲ್ಲದೇ ನಾನು ಬದುಕಿರುವದಿಲ್ಲ. ಇದು ಸತ್ಯವೆಂದು ತಿಳಿ. (52) ಕಲಿಮಲಾಪಹನಾದ ಕೃಷ್ಣನ ಚರಿತ್ರೆಯನ್ನು ದೇವತೆಗಳು ತಿಳಿದಾರೆಯೇ ಹೊರತು ರಾಕ್ಷಸರು, ಪಾಪಿಗಳಾದ ಮನುಷ್ಯರು ಹರಿಯ ಪ್ರಭಾವವನ್ನು ತಿಳಿದಿರುವದಿಲ್ಲ. (53) ಕ್ಷರಾಕ್ಷರ ಜೀವರಾಶಿಗಳಿಗಿಂತ ಶ್ರೇಷ್ಠನಾಗಿರುವ, ಪುರುಷೋತ್ತಮನೆನಿಸಿದ ಅವನೇ

35. ಹಿಂದೆ ಕೃಷ್ಣನು ಪೌಂಡ್ರಕ ವಾಸುದೇವನ ಮಾತಾಮಹನಾದ ಕಾಶಿರಾಜನನ್ನು ಸಂಹರಿಸಿದಾಗ ಆವನ ಮಗನಾದ ಸುದಕ್ಷಿಣನು ಕೃಷ್ಣದ್ವೇಷದಿಂದ ಶಿವನ ಮಾತಿನಂತೆ ದಕ್ಷಿಣಾಗ್ನಿಯನ್ನು ವೇದೋಕ್ತವಾದ

ಯಸ್ಯ ಶಂಖಧ್ವನಿಂ ಶ್ರುತ್ವಾ ವಿದ್ರವಂತ್ಯಸುರಾದಯಃ ॥56॥

ತದ್ಭಕ್ತಲಕ್ಷಣಂ ವಕ್ಷ್ಯೇ ಶೃಣು ಮಾತಃ ಸವಿಸ್ತರಮ್ ।
ವೇದಶಾಸ್ತ್ರಪರಾ ಯೇ ಚ ಯೇ ಚ ಧರ್ಮವ್ರತೇ ಪರಾಃ ॥57॥

ವೇದೋಕ್ತಂ ಕರ್ಮ ಕುರ್ವಂತಿ ತದ್ಭಕ್ತಾನ್ ವಿದ್ಧಿ ವೈಷ್ಣವಾನ್।
ಶಂಖಚಕ್ರಾಂಕಿತಾ ಯೇ ಚ ಊರ್ಧ್ವಪುಂಡ್ರಧರಾಶ್ಚ ಯೇ ॥58॥

ನಾಸತ್ಯವಚನಾ ಯೇ ತು ಪಿತೃಮಾತೃಮತೇ ಸ್ಥಿತಾಃ ।
ತದ್ಭಕ್ತಲಕ್ಷಣಂ ಚೈತತ್ತಂ ವಿನಾ ಕೋ ನು ಜೀವತಿ' ॥59॥

ನಂದಿನೀವಚನಂ ಶ್ರುತ್ವಾ ಸಾನಂದಾ ವಾಕ್ಯಮಬ್ರವೀತ್ ।

ಧರಣ್ಯುವಾಚ–

ಸರ್ವೋತ್ತಮನಾಗಿರುವನು. ಅವನ ಬಲಗೈಯನ್ನಾಶ್ರಯಿಸಿ ಸುದರ್ಶನ ಚಕ್ರವಿರುವದು. (54) ಎಡಗೈಯಲ್ಲಿ ಶಂಖವು ವಿರಾಜಮಾನವಾಗಿರುವದು. ಯಾರ ಕಂಠದಲ್ಲಿ ಕೌಸ್ತುಭಮಣಿಯು, ಕಿವಿಗಳಲ್ಲಿ ಮಕರ ಕುಂಡಲ ಗಳಿರುವವೋ, (55) ಯಾರ ಚಕ್ರದ ಪ್ರಭಾವದಿಂದ ವಾರಾಣಸೀ ಪಟ್ಟಣವು ದಗ್ಧವಾಗಿ ಹೋಯಿತೋ, ಯಾರ ಶಂಖದ ಧ್ವನಿಮಾತ್ರ ಶ್ರವಣದಿಂದ ರಾಕ್ಷಸ, ಪಿಶಾಚಾದಿಗಳು ದೂರ ಓಡಿಹೋಗುವವೋ ಅಂತಹ ಪರಮಾತ್ಮನೇ ಅವನು. (56) ಅವನ ಭಕ್ತರ ಲಕ್ಷಣವನ್ನು ಹೇಳುವೆನು. ಕೇಳು. ವೇದಶಾಸ್ತ್ರೋಕ್ತವಾದ ಧರ್ಮದ ಆಚರಣೆಯಲ್ಲಿ ನಿರತರಾಗಿದ್ದು ಸದಾ ವೇದಶಾಸ್ತ್ರಾಧ್ಯಯನರತರಾಗಿರುವರೋ, (57) ವೇದೋಕ್ತ ಕರ್ಮಗಳನ್ನು ಮಾತ್ರ ಆಚರಿಸುವರೋ ಅಂತಹ ವಿಷ್ಣುಭಕ್ತರನ್ನು ಆ ಹರಿಯ ಭಕ್ತರೆಂದು ತಿಳಿ. ತಪ್ತ ಶಂಖಚಕ್ರಾಂಕಿತರು, ಊರ್ಧ್ವಪುಂಡ್ರಗಳಾನ್ನು ಧರಿಸಿಸಿದವರು, (58) ಸುಳ್ಳು ನುಡಿಯದವರು, ತಂದೆತಾಯಿಗಳಿಗೆ ಹಿತವನ್ನುಂಟುಮಾಡುವವರು ಅವನ ಭಕ್ತರೆನಿಸುವರು. ಇಂತಹ ಪರಮಾತ್ಮನಿಲ್ಲದೇ ಯಾರು ತಾನೆ ಬದುಕುವರು?' ಎಂದು ನುಡಿದಳು. (59) ಮಗಳ

ಶತ್ರುಮಾರಣಯಜ್ಞದಿಂದ ಆರಾಧಿಸಿ ಅಭಿಚಾರಕೃತ್ಯವನ್ನು ಕೃಷ್ಣನಾಶಾರ್ಥವಾಗಿ ದ್ವಾರಾವತಿಯ ಮೇಲೆ ಪ್ರಯೋಗಿಸಿದನು. ದಹಿಸುತ್ತಿದ್ದ ಕೃತ್ಯೆಯಿಂದ ಬಾಧಿತರಾದ ಯಾದವರು ಕೃಷ್ಣನನ್ನು ಶರಣುಹೊಂದಿದಾಗ ಪಗಡೆಯಾಡುತ್ತಿದ್ದ ಕೃಷ್ಣನು ತನ್ನ ಸುದರ್ಶನವನ್ನು ಕಳುಹಿಸಿದಾಗ ಆ ಸುದರ್ಶನವು ಕೃತ್ಯೆಯನ್ನು ಹಿಂದಿರುಗಿಸಿ, ಕಾಶಿಪಟ್ಟಣವನ್ನು ಸುಟ್ಟುಹಾಕಿತು. ಆ ಕೃತ್ಯೆಯು ಹಿಂದಿರುಗಿ ಸುದಕ್ಷಿಣ ಮತ್ತು ಅವನ ಪರಿವಾರವನ್ನು ನಾಶಮಾಡಿತು. ಕೃಷ್ಣನು ಸುದರ್ಶನ ಚಕ್ರದ ಮೂಲಕ ದುಷ್ಟರಿಂದ ಅಧಿಷ್ಠಿತವಾದ ಪಟ್ಟಣವನ್ನು ಸುಟ್ಟಿರುವನಲ್ಲದೇ ಇಂದ್ರನ ಪ್ರಾರ್ಥನೆಯಂತೆ ಕಾಶಿಪಟ್ಟಣವು ಮತ್ತಷ್ಟು ಪವಿತ್ರವಾಗುವಂತೆ ಅನುಗ್ರಹಿಸಿದನು. (ಭಾ.10.69)

'ಸತ್ಯಂ ವದ ವರಾರೋಹೇ ಭ್ರಮೋ ವಾ ಜ್ವರಕಾರಣಮ್' ॥60॥

ಪದ್ಮಾ ಉವಾಚ–

'ಸತ್ಯಂ ವದಾಮಿ ಹೇ ಮಾತಃ ದೃಷ್ಟ ಏವ ಮಹಾಪ್ರಭುಃ ।
ತದ್ದರ್ಶನಧಿಯಾ ಮೇಽದ್ಯ ಜಾಯತೇ ದೇಹಶೋಷಣಮ್ ॥61॥

ಶತಾನಂದ ಉವಾಚ–

ಸಾಂತಯಿತ್ವಾ ಸುತಾಂ ಭದ್ರಾ ಭರ್ತುರ್ಭವನಮಭ್ಯಗಾತ್ ।
ಪಾಕಾರ್ಥಂ ಪರಮಾನಂದಭರಿತಾ ಭಾಗ್ಯಸಂಪದಾ ॥62॥

ಪುತ್ರ್ಯಂಗಶೋಷಸಂಕ್ಷುಬ್ಧಂ ಕೃಚ್ಛ್ರಸಂತಾಪಸಂಯುತಮ್ ।
ಆವದತ್ ಸಾ ಪತಿಂ ಪ್ರಾಪ್ಯ ಪುತ್ರೀಕಾಯವಿಶೋಷಣೇ ॥63॥

ಏತಸ್ಮಿನ್ನೇವ ಸಮಯೇ ಕನ್ಯಾಶ್ಚ ಬಕುಲಾನ್ವಿತಾಃ ।
ಅಭಿಷಿಚ್ಯಾಪ್ಯಗಸ್ತ್ಯೇಶಂ ಶಂಕರಂ ಬ್ರಾಹ್ಮಣೈಃ ಸಹ ॥64॥

ಸಂಭಾರಾನ್ ಶಿರಸಾ ಧೃತ್ವಾ ಬ್ರಾಹ್ಮಣೈಃ ಸಪುರೋಹಿತೈಃ ।
ರಾಜಧಾನೀಂ ಸಮಾಸಾದ್ಯ ಅಂತರ್ಭವನಮಭ್ಯಯುಃ ॥65॥

ಮಾತನ್ನು ಕೇಳಿ ಧರಣಿಯು ಆನಂದ ತುಂದಿತಳಾಗಿ 'ನೀನು ಕಂಡಿರುವದು ಸತ್ಯವೋ ಅಥವಾ ಜ್ವರದಿಂದ ಭ್ರಮಿಸಿ ಹೀಗೆ ನುಡಿತ್ತಿರುವಿಯೋ?' ಎಂದು ಪ್ರಶ್ನಿಸಿದಳು. (60) ಆಗ ಪದ್ಮಾವತಿಯು 'ನಾನು ಹೇಳುವದೆಲ್ಲವೂ ಸತ್ಯವೇ ಆಗಿರುವದು. ನಾನು ನಿಜವಾಗಿಯೂ ಆ ಮಹಾಪುರುಷನನ್ನು ನೋಡಿರುವನು. ಅವನನ್ನು ಮತ್ತೊಮ್ಮೆ ನೋಡುವದರಗೋಸ್ಕರವಾಗಿಯೇ ನನಗೆ ಈ ದೇಹಶೋಷಣ (ಜ್ವರ) ವುಂಟಾಗಿರುವದು' ಎಂದು ನುಡಿದಳು. (61) ಆಗ ಧರಣೀದೇವಿಯು ಮಗಳು ಪರಮಾತ್ಮನನ್ನು ಬಯಸಿರುವದನ್ನು ತಿಳಿದು ಧರ್ಮದೇವತೆಯ ಮಾತೆಲ್ಲವೂ ಸತ್ಯವೆಂದು ಮನಗಂಡು ಅತ್ಯಂತ ಸಂತುಷ್ಟಳಾಗಿ, ಮಗಳನ್ನು ಸಾಂತ್ವನಗೊಳಿಸಿ, ಪಾಕಾರ್ಥವಾಗಿ ರಾಜಮಂದಿರಕ್ಕೆ ತೆರಳಿದಳು. (62) ಮಗಳಿಗೆ ಬಂದ ಜ್ವರದಿಂದ ದುಃಖಿತನಾದ ಆಕಾಶರಾಜನಿಗೆ ರಾಜಪತ್ನಿಯು ಎಲ್ಲ ವೃತ್ತಾಂತವನ್ನು ನಿವೇದಿಸಿದಳು. (63)

### ಅರಮನೆಗೆ ಬಕುಲೆಯ ಆಗಮನ–ಕನ್ಯಾಯಾಚನ

ಇದೇ ಸಂದರ್ಭದಲ್ಲಿ ರಾಜಾಜ್ಞೆಯಿಂದ ಬ್ರಾಹ್ಮಣರೊಡಗೂಡಿ ದೇವಸ್ಥಾನಕ್ಕೆ ತೆರಳಿದ ಅರಮನೆಯ ಸ್ತ್ರೀಯರು ಅಭಿಷೇಕವನ್ನು ಪೂರೈಸಿಕೊಂಡು, ಫಲಮಂತ್ರಾಕ್ಷತೆ ಅಭಿಷೇಕ ಜಲಗಳಿಂದ ಸಹಿತರಾಗಿ ರಾಜಾಸ್ಥಾನಕ್ಕೆ ದಯಮಾಡಿಸಿದರು. ಅವರೊಡನೆ ಬಕುಲಾಮಾಲೆಯು ಬಂದಿದ್ದಳು. (64–

ಸಮಾಗತಾನ್ ದ್ವಿಜಾನ್ರಾಜಾ ಸಂಪೂಜ್ಯ ವಿಧಿಪೂರ್ವಕಮ್ ।
ಗಂಧಪುಷ್ಪಾಕ್ಷತಾದ್ಯೈಶ್ಚ ವಸ್ತ್ರಾಲಂಕಾರಭೂಷಣೈಃ ॥66॥

ವಿಪ್ರಾಶಿಷೋಕ್ತಮಂತ್ರೈಶ್ಚ ಸುತಾಂ ಸಮ್ಮಾರ್ಜಯತ್ತದಾ ।
ಸ್ವಯಂ ಭುಕ್ತ್ವಾ ಮಹಾರಾಜೋ ಬ್ರಾಹ್ಮಣಾನಾಮಥಾಜ್ಞಯಾ ॥167॥

ಸಾಽಪಿ ಭುಕ್ತ್ವಾ ಮಹಾರಾಜ ಧರಣೀ ಬಹಿರಾಗತಾ ।
ದದರ್ಶ ತಾಂ ಮಹಾರಾಜ ಬಕುಲಾಂ ನವರೂಪಿಣೀಮ್ ॥68॥

ಧರ್ಮದೇವೀವಚಃಸ್ಮೃತ್ವಾ ತತ್ಸಮೀಪಮುಪಾಗತಾ ।
ಪಪ್ರಚ್ಛ ತಾಸ್ತದಾ ಕನ್ಯಾ ಏತದ್ವೃತ್ತಾಂತಕೋವಿದಾಃ ॥69॥

ಧರಣ್ಯುವಾಚ–

'ಕೈಷಾ ಕಸ್ಮಾದುಪಾಯಾತಾ ಪೂಜ್ಯೇವ ಪ್ರತಿಭಾತಿ ಮೇ ।
ಪೃಚ್ಛತಾಂ ಕನ್ಯಕಾ ಅಸ್ಯಾಃ ಕಿಮಾಗಮನಕಾರಣಮ್' ॥70॥

ಏವಮುಕ್ತಾಃ ಕನ್ಯಕಾಸ್ತು ಧರಣೀಮಬ್ರುವಂಸ್ತದಾ ।

ಕನ್ಯಕಾ ಊಚುಃ–

'ವಾಸಃ ಪನ್ನಗಶೈಲೇಂದ್ರೇ ಸ್ವಾಮೀ ಶ್ರೀವೇಂಕಟೇಶ್ವರಃ ॥71॥

ತದಾಜ್ಞಾಕಾರಿಕಾ ಕಾಚಿನ್ನಾಮ್ನಾ ಬಕುಲಮಾಲಿಕಾ ।
ಅನಯಾ ಧರಣೀದೇವ್ಯಾಃ ಸನ್ನಿಧೌ ಮಮ ಕಿಂಚನ ॥72॥

65) ಬಂದಿರುವ ಬ್ರಾಹ್ಮಣರನ್ನು ವಿಧಿಪೂರ್ವಕವಾಗಿ ಗಂಧ, ಪುಷ್ಪ, ಅಕ್ಷತಾ, ಫಲಾದಿಗಳಿಂದ, ವಸ್ತ್ರಾಲಂಕಾರಗಳಿಂದ ಪೂಜಿಸಿ, (66) ಅವರ ಆಶೀರ್ವಾದ ಮತ್ರಗಳಿಂದ ಅಭಿಷೇಕ ಜಲವನ್ನು ತಾನೂ ಪ್ರೋಕ್ಷಿಸಿಕೊಂಡು, ಮಗಳಿಗೂ ಪ್ರೋಕ್ಷಿಸಿದನು. ಬ್ರಾಹ್ಮಣರ ಆಜ್ಞೆಯಂತೆ ಆಕಾಶರಾಜ–ಧರಣೀದೇವಿಯರು ಭೋಜನವನ್ನು ಮಾಡಿ ಹೊರಬಂದಾಗ (66–67) ಧರಣೀದೇವಿಯು ಕನ್ನಿಕೆಯರಿಂದೊಡಗೂಡಿ ಬಂದ ಬಕುಲಾಮಾಲೆಯನ್ನು ನೋಡಿ (68) ಧರ್ಮದೇವತೆಯು ಹೇಳಿರುವ ಮಾತನ್ನು ಸ್ಮರಿಸಿಕೊಂಡು, ಕನ್ಯೆಯರನ್ನು ಕುರಿತು (69) 'ಈಕೆ ಯಾರು? ಪೂಜ್ಯಳಂತೆ ತೋರುವ ಈಕೆ ಎಲ್ಲಿಂದ ಬಂದಿರುವಳು? ಈಕೆಯ ಕಾರ್ಯವೇನು? ಇವುಗಳನ್ನು ವಿಚಾರಿಸಿರಿ' ಎಂದು ನುಡಿದಳು. (70) ಆಗ ಆ ಕನ್ನಿಕೆಯರು ಶೇಷಾಚಲ ನಿವಾಸಿಯಾದ ಈಕೆಯ ಒಡೆಯನು ಸಾಕ್ಷಾದ್ವೇಂಕಟೇಶ್ವರನು. (71) ಇವಳು ಆತನ ಆಜ್ಞಾಧಾರಕಳು, ಬಕುಲಾಮಾಲೆ

ಕಾರ್ಯಮಸ್ತೀತಿ ಕಥಿತಂ ತತಸ್ತು ಸಹಿತಾಸ್ತಯಾ ।
ವಯಂ ಪ್ರಾಪ್ತಾ ಮಹಾಭಾಗೇ ತ್ವತ್ಸಮೀಪಮಿಹಾಧುನಾ ॥73॥

ಪೃಚ್ಛ ತಾಂ ಸ್ವೈವ ವೃತ್ತಾಂತಂ ತದಾಗಮನಕಾರಣಮ್' ।
ಏವಮುಕ್ತ್ವಾಽಥ ಕಲ್ಯಾಣೀ ಪ್ರತಿನಂದ್ಯಾಹ ಭಾರತೀಮ್ ॥74॥

ಧರಣ್ಯುವಾಚ–

'ತಿಷ್ಠ ಭದ್ರೇ ವರಾರೋಹೇ ರತ್ನಪೀಠೇ ಸುನಿರ್ಮಲೇ ।'
ಇತ್ಯುಕ್ತ್ವಾ ಸಾ ತಯಾ ಬಾಲಾ ರತ್ನಪೀಠೇ ನಿವೇಶಿತಾ ॥75॥

ಮೇನೇ ಕೃತಾರ್ಥಮಾತ್ಮನಂ ಸಾಫಲ್ಯಂ ಜನ್ಮನೋಽಪಿ ಚ ।
ಉವಾಚ ನೃಪಭಾರ್ಯಾಽಥ ಧರಣೀ ದೇವಮಾತರಮ್ ॥76॥

ಧರಣ್ಯುವಾಚ–

'ಸ್ವಾಗತಂ ತೇ ಮಹಾಭಾಗೇ ಮಮ ಪುಣ್ಯಸಮುಚ್ಚಯಾತ್ ।
ಮನ್ಯೇ ಕೃತಾರ್ಥಮಾತ್ಮಾನಂ ಸಫಲಂ ಸಾಧುಸಂಗಮಾತ್ ॥77॥

ನಿರ್ದೇಷ್ಟವ್ಯಂ ಭವತ್ಕರ್ಮ ತದದ್ಯ ವಿದಧೀಮಹಿ ।
ಕಿಮರ್ಥಮಾಗಮೋ ಮಾತಃ ಶೀಘ್ರಂ ತತ್ಕಥ್ಯತಾಮಿತಿ' ॥78॥

ಬಭಾಷೇ ಬಕುಲಾ ಭಾರ್ಯಾಂ ರಾಜ್ಞಸ್ತಸ್ಯ ಮಹಾತ್ಮನಃ ।

ಎಂದು ಪ್ರಸಿದ್ಧಳಾಗಿದ್ದಾಳೆ. ನಿಮ್ಮನ್ನು ಕಾಣಬೇಕೆಂಬ ಉದ್ದೇಶದಿಂದ ರಾಣಿಯಲ್ಲಿ ಕೆಲಸವಿದೆಯೆಂದು ಹೇಳಿದುದರಿಂದ ಈಕೆಯನ್ನು ನಮ್ಮೊಡನೆ ಇಲ್ಲಿಗೆ ಕರೆತಂದಿದ್ದೇವೆ. (72–73) ಆಕೆಯನ್ನು ವಿಚಾರಿಸಬೇಕೆಂದು ಧರಣಿದೇವಿಯನ್ನು ಕುರಿತು ಕನ್ನಿಕೆಯರು ತಿಳಿಸಿದಾಗ, ತನ್ನ ಕಾರ್ಯದ ಸಫಲತೆ ಹಾಗೂ ಕೃತಕೃತ್ಯತೆಯನ್ನು ಭಾವಿಸಿದ ಧರಣಿದೇವಿಯು ಬಕುಲಾಮಾಲೆಯನ್ನು ಆದರದಿಂದ ರತ್ನಪೀಠದಲ್ಲಿ ಕೂಡಿಸಿದಳು. (74–76) ಆನಂತರ ಬಕುಲಾಮಾಲೆಯನ್ನು ಕುರಿತು 'ಹೇ ಪೂಜ್ಯಳೇ! ನಿನಗೆ ಸ್ವಾಗತವು. ನನ್ನ ಪುಣ್ಯದ ಫಲವಾಗಿ ನೀನಿಲ್ಲಿಗೆ ಬಂದಿರುವಿಯೆಂದು ತಿಳಿಯುತ್ತೇನೆ. ನಿನ್ನಂತಹ ಸಜ್ಜನರ ಸಂಗದಿಂದಾಗಿ ನಾನು ಕೃತಕೃತ್ಯಳಾಗಿದ್ದೇನೆ. ನನ್ನಿಂದೇನಾಗಬೇಕೆಂಬುದನ್ನು ತಿಳಿಸು. ನಾನದನ್ನು ಮಾಡಿಕೊಡುವೆನು. ನಿನಿಲ್ಲಿಗೇಕೆ ಬಂದಿರುವಿಯೆಂಬುದನ್ನು ಬೇಗನೇ ತಿಳಿಸು' ಎಂದು ನುಡಿದಳು. (77–78) ಆಗ ಬಕುಲಾಮಾಲೆಯು 'ಕನ್ಯಾಪೇಕ್ಷೆಯೇ ಮುಖ್ಯಕಾರ್ಯವು. ನಿನ್ನ ಮಗಳನ್ನಪೇಕ್ಷಿಸಿ ನಾನಿಲ್ಲಿಗೆ

ಬಕುಲಾ ಉವಾಚ-

'ಕನ್ಯಾಪೇಕ್ಷಾ ಮುಖ್ಯಕಾರ್ಯಂ ಪುನಃ ಕಾರ್ಯಶತೇನ ಕಿಮ್' ॥79॥

ಮುಖ್ಯಕಾರ್ಯಂ ತತಃ ಶ್ರುತ್ವಾ ವರಾರೋಹಾಮಥಾಬ್ರವೀತ್ ।

ಧರಣ್ಯುವಾಚ-

'ಸಮ್ಯಗುಕ್ತಂ ತ್ವಯಾ ದೇವಿ ವರಾಪೇಕ್ಷಾಽಪಿ ವರ್ತತೇ ॥80॥

ಕೋ ವಾ ವರಃ ಕಶ್ಚ ದೇಶೋ ಗೋತ್ರಂ ನಕ್ಷತ್ರಕಂ ಚ ಕಿಮ್ ।
ಜನನೀ ತಸ್ಯ ಕಾ ಬಾಲಾ ಜನಕಃ ಕೋ ಮಹಾಮತೇ ॥81॥

ಸ ಕಿಂ ಕುಲಂ ಚ ಕ ಆಚಾರಃ ಜಾತಿರ್ವಾ ತಸ್ಯ ಕಾ ವದ '।
ಕುಲಾಚಾರಕಥಾಂ ಶ್ರುತ್ವಾ ಬಕುಲಾ ವಾಕ್ಯಮಬ್ರವೀತ್ ॥82॥

ಬಕುಲಾ ಉವಾಚ-

'ಶೃಣು ರಾಜ್ಞಿ ಸವಿಸ್ತಾರಂ ಗೋತ್ರಂ ಬಂಧುಜನಂ ತಥಾ ।
ದೇವಕೀ ಜನನೀ ತಸ್ಯ ಜನಕಃ ಶೂರ ನಂದನಃ ॥83॥

ನಿಶಾಕರಕುಲಂ ತಸ್ಯ ನಾಮ್ನಾ ಕೃಷ್ಣ ಇತಿ ಸ್ಮೃತಃ ।
ವಸಿಷ್ಠಗೋತ್ರೇ ಚೋತ್ಪನ್ನಃ ನಕ್ಷತ್ರಂ ಶ್ರವಣಂ ತಥಾ ॥84॥

ಅವಾಸೋ ವೇಂಕಟಗಿರೌ ವಿದ್ಯಾವಾನ್ಧನವಾನ್ಬಲೀ ।
ಬಹುಲಾಚಾರ ಸಂಪನ್ನಃ ಪಂಚವಿಂಶತಿ ವಾರ್ಷಿಕಃ ॥85॥

ಬಂದಿರುವೆನು. ಇನ್ನುಳಿದಿರುವ ನೂರು ಕಾರ್ಯಗಳಿಂದೇನು? ನಾನಿಲ್ಲಿ ಕನ್ಯಾರ್ಥಿಯಾಗಿ ಬಂದಿರುವೆನು' ಎಂದು ನುಡಿದಳು. (79) ಆಗ ಧರಣೀದೇವಿಯು ಸಂತೋಷದಿಂದ 'ಸಮೀಚೀನವಾದದ್ದನ್ನೇ ಹೇಳಿರಿವಿರಿ. ನಮಗೂ ವರಾಪೇಕ್ಷೆಯಿರುವದು. (80) ವರನಾರು? ಅವನೆಲ್ಲಿಯವನು? ಅವನ ಕುಲ-ಗೋತ್ರ-ನಕ್ಷತ್ರಗಳಾವವು? ಅವನ ತಂದೆ ತಾಯಿಗಳಾರು? ಅವನ ಕುಲ ಆಚಾರ ಜಾತಿ ಇವುಗಳಾವವು? ಎಂದು ಕೇಳಿದಳು. (81-82) ಆಗ ಬಕುಲಾದೇವಿಯು 'ರಾಜಪತ್ನಿಯೇ! ವಿಸ್ತಾರವಾಗಿ ವರನ ಗೋತ್ರಾದಿಗಳನ್ನು ಹೇಳುವೆನು. ಕೇಳು. ವರನ ತಾಯಿ ದೇವಕಿ. ತಂದೆ ವಸುದೇವ. (83) ಅವನದು ಚಂದ್ರ ವಂಶ. ವರನ ಹೆಸರು ಕೃಷ್ಣ. ವಸಿಷ್ಠ ಗೋತ್ರ, ಶ್ರವಣಾ ನಕ್ಷತ್ರ, (84) ವಿದ್ಯಾವಂತ, ಧನವಂತ, ಬಲಿಷ್ಠ, ಬಹಳವಾದ ಆಚಾರ-ವಿಚಾರಗಳಿಂದ ಸಂಪನ್ನ. ಆತನಿಗೆ ಇಪ್ಪತ್ತೈದುವರ್ಷ ವಯಸ್ಸು.

ಪಾಣಿಗ್ರಹಣಕಾಲೇ ತು ತಂ ದೃಷ್ಟ್ವಾ ತೋಷಮೇಷ್ಯಸಿ ।
ಕಿಮತ್ರ ಬಹುನೋಕ್ತೇನ ದರ್ಶನಾತ್ತೇ ಸುಖಂ ಭವೇತ್' ॥86॥

ತದ್ವೃತ್ತಮಖಿಲಂ ಶ್ರುತ್ವಾ ತಾಮಾಹಾನಂದನಿರ್ಭರಾ ।

ಧರಣ್ಯುವಾಚ–

'ಶಂಕಾ ಜಾತಾ ವರಾರೋಹೇ ಮಮ ತೇ ವಚನಾಚ್ಛುಭೇ ॥87॥

ಸಭಾಗ್ಯಶ್ಚ ಕುಲೀನಶ್ಚ ಬುದ್ಧಿಮಾಂಶ್ಚ ಯುವಾ ಬಲೀ ।
ವಾಗ್ಮೀ ಚೋಕ್ತೋಽಸ್ಯ ಚೈತಾವದ್ವಿವಾಹೋ ನ ಕೃತಃ ಕುತಃ' ॥88॥

ಸಾ ತದ್ವಚನಮಾಕರ್ಣ್ಯಾನಪತ್ಯಮನುಚಿಂತ್ಯ ತಮ್ ।
ಧೈರ್ಯೇಣ ವಚನಂ ಪ್ರಾಹ ಧರಣೀಂ ರಾಜವಲ್ಲಭಾಮ್ ॥89॥

ಬಕುಲಾ ಉವಾಚ–

'ಕೃತವೈವಾಹಿಕೋ ದೇವಿ ಬಾಲ್ಯೇ ಭಾಗೀರಥೀಪಿತಾ ।
ತತ್ರಾಪತ್ಯಮನಾಲೋಕ್ಯ ದ್ವಿತೀಯಂ ಕರ್ತುಮುದ್ಯತಃ ॥90॥

ಇದಂ ಕಾರಣಮಾವಿದ್ಧಿ ಶ್ರೀನಿವಾಸೇ ನಿರಾಮಯೇ' ।
ತದ್ವೃತ್ತಮಖಿಲಂ ಶ್ರುತ್ವಾ ಸಂಪೂಜ್ಯ ಬಕುಲಾಂ ನೃಪ ॥91॥

ಸಾ ಪುತ್ರಂ ಸಂದಿದೇಶಾಥ ನೃಪಾಹ್ವಾನೇ ನೃಪೋತ್ತಮ ।
ಸ ಪುತ್ರವಚನಂ ಶ್ರುತ್ವಾ ಹರ್ಷಾದಂತಃಪುರಂ ಯಯೌ ॥92॥

ವೆಂಕಟಗಿರಿಯೇ ಆತನ ಆವಾಸಸ್ಥಾನ. (85) ಆತನನ್ನು ನೋಡಿದರೆ ನಿಮಗೆ ಬಹಳ ಸಂತೋಷವಾಗುತ್ತದೆ. ವಿವಾಹ ಸಮಯದಲ್ಲಿ ವರನ ದರ್ಶನಮಾತ್ರದಿಂದ ಸರ್ವ ಸಜ್ಜನರೂ ಸುಖವನ್ನು ಅನುಭವಿಸುವರು' ಎಂದು ಹೇಳಿದಳು. (86) ಬಕುಳೆಯ ಈ ಮಾತನ್ನು ಆಲಿಸಿದ ಧರಣೀದೇವಿಯು 'ಇಷ್ಟು ಗುಣವಂತ, ಧನವಂತನಾದ, ಸಿರಿವಂತನಾದ ಶ್ರೀನಿವಾಸನಿಗೆ 25 ವರ್ಷ ವಯಸ್ಸಾದರೂ ಸಹ ಮದುವೆಯಾಗದಿರಲು ಕಾರಣವೇನು? ಎಂದು ಪ್ರಶ್ನಿಸಿದಳು. (87–88) ಆಗ ಬಕುಲಾ ದೇವಿಯು ಧೈರ್ಯದಿಂದ 'ಗಂಗಾಜನಕನಾದ ಶ್ರೀವಿಷ್ಣುವಿಗೆ ಬಾಲ್ಯದಲ್ಲೇ ಮದುವೆಯಾಗಿತ್ತು. ಇದುವರೆಗೂ ಆ ಹೆಂಡತಿಯಲ್ಲಿ ಮಕ್ಕಳಾಗದಿರುವುದರಿಂದ ಎರಡನೇ ವಿವಾಹವನ್ನು ಮಾಡಲು ಉದ್ಯುಕ್ತರಾಗಿದ್ದೇವೆ. (90) ನಿರಾಮಯನಾದ ಶ್ರೀನಿವಾಸನಲ್ಲಿ ಈ ಕಾರಣವನ್ನು ಬಿಟ್ಟು ಎರಡನೇ ಮದುವೆಗೆ ಬೇರೆ ಯಾವ ಕಾರಣವೂ ಇಲ್ಲ'ವೆಂದು ತಿಳಿಸಿದಾಗ

ಏಕಾಂತೇ ರಾಜಶಾರ್ದೂಲಮಿದಂ ವಚನಮಬ್ರವೀತ್ ।

ಧರಣ್ಯುವಾಚ–

'ಕನ್ಯಾರ್ಥಮಾಗತಾ ರಾಜನ್ ಬಕುಲಾ ವೇಂಕಟಾಚಲಾತ್ ॥93॥

ಸುತಂ ಸಂಪ್ರೇಷಯಿತ್ವಾಥ ಪುರೋಹಿತಮಿಹಾನಯ ।
ವರಸ್ಯಾಪಿ ವಿಚಾರ್ಯಾಽಶು ಕುಲವಿದ್ಯಾಬಲಾದಿಕಮ್ ॥
ಗೋತ್ರಋಕ್ಷಾದ್ಯಾನುಕೂಲ್ಯಂ ಬ್ರಾಹ್ಮಣೈರ್ವೇದ ಪಾರಗೈಃ ॥95॥

ವಿಚಾರ್ಯ ವರವಧ್ವೋಶ್ಚ ಯೋನಿನಾಡೀ ಸುಸಂಗತೀಮ್ ।
ಸರ್ವಂ ಸಮ್ಯಕ್ ಸಮಾಲೋಕ್ಯ ಕನ್ಯಾದಾನಂ ಕುರು ಪ್ರಭೋ ॥96॥

ಕನ್ಯಾರ್ಥಮಾಗತಾ ಸಾಧ್ವೀ ದುಹಿತುರ್ವಿದಿತಂ ಮನಃ ।
ತಮೇವೇಚ್ಛತಿ ತ್ವತ್ಪುತ್ರೀ ವೇಂಕಟಾದ್ರಿ ನಿವಾಸಿನಮ್ ॥97॥

ಧರ್ಮದೇವೀವಚಸ್ಸತ್ಯಂ ಶುಭಂ ಶೀಘ್ರಂ ವಿಧೀಯತಾಮ್' ।
ಇತಿ ಪತ್ನ್ಯಾ ವಚಃ ಶ್ರುತ್ವಾ ಪರಮಾನಂದನಿರ್ಭರಃ ॥98॥

ರಾಜೋವಾಚ–

'ಅಹೋ ಮಂಗಲಮಸ್ಮಾಕಂ ಸಂಪ್ರಾಪ್ತಂ ಪೂರ್ವಪುಣ್ಯತಃ ।

ಧರಣಿದೇವಿಗೆ ಬಹುಸಂತೋಷವಾಗಿ ಬಕುಲಾದೇವಿಗೆ ಸಕಲ ರಾಜಮರ್ಯಾದೆಗಳನ್ನು ಮಾಡಿದಳು. (91) ಆನಂತರದಲ್ಲಿ ರಾಣಿಯು ಆಕಾಶರಾಜನನ್ನು ಕರೆತರುವುದಕ್ಕೆ ತನ್ನ ಮಗನನ್ನು ಕಳುಹಿಸಿದಳು. ಆಕಾಶರಾಜನು ಮಗನ ಮಾತನ್ನು ಕೇಳಿ ಅತ್ಯಂತ ಸಂತೋಷದಿಂದ ಧರಣಿಯಿದ್ದಲ್ಲಿಗೆ ಬಂದನು. (92) ಅಲ್ಲಿಗೆ ಬಂದ ಆಕಾಶರಾಜನಿಗೆ ಏಕಾಂತದಲ್ಲಿ 'ರಾಜನೇ! ವೇಂಕಟಾಚಲದಿಂದ ಕನ್ಯಾರ್ಥಿಯಾಗಿ ಬಕುಲಾದೇವಿಯು ಬಂದಿರುವಳು. (93) ಮಗನಾದ ವಸುದಾನನಮೂಲಕವಾಗಿ ಪುರೋಹಿತರಾದ ಬೃಹಸ್ಪತ್ಯಾಚಾರ್ಯರನ್ನು ಕರೆಯಿಸಿ ವರನ ಕುಲಗೋತ್ರಗಳನ್ನು ವಿಚಾರಿಸಿ, (94) ವೇದಪಾರಂಗತರಾದ ಬ್ರಾಹ್ಮಣರ ಮೂಲಕವಾಗಿ ಗೋತ್ರ ನಕ್ಷತ್ರಾದಿಗಳ ಅನುಕೂಲ್ಯ (ಹೊಂದಾಣಿಕೆ) ಯನ್ನು ವಿಚಾರಿಸಿ, ಯೋನಿಕೂಟ, ನಾಡಿಕೂಟಗಳ ಮೇಲನವಿದ್ದಲ್ಲಿ ವಿವಾಹವನ್ನು ನಿಶ್ಚಯಿಸಿ ಕನ್ಯಾದಾನವನ್ನು ಮಾಡಿಕೊಡು. (95–96) ಕನ್ಯಾಯಾಚನಾರ್ಥವಾಗಿಯೇ ಸಾಧ್ವಿಯಾದ ಬಕುಲೆಯೂ ಸಹ ವೇಂಕಟಗಿರಿಯಿಂದ ಇಲ್ಲಿಗೆ ಆಗಮಿಸಿರುವಳು. ನಿನ್ನ ಮಗಳೂ ಸಹ ಅವನನ್ನೇ ಬಯಸುವಳು. (97) ಧರ್ಮದೇವಿಯ ಮಾತು ಸತ್ಯವಾಯಿತು. ಶುಭಕರವಾದ ಈ ಕಲ್ಯಾಣಮಹೋತ್ಸವವು ಶೀಘ್ರದಲ್ಲಿ ನೆರವೇರಲಿ' ಎಂದು ನುಡಿದು ಎಲ್ಲ ವೃತ್ತಾಂತವನ್ನು

ಬಕುಲಾಗಮನೇऽಸ್ಮಾಕಂ ಶಿವಂ ಭದ್ರೇ ಸಮಾಗತಮ್ ॥99॥

ಅಭವನ್ ಪಿತರಃ ಸರ್ವೇ ಕೃತಾರ್ಥಾ ಮುಕ್ತಿಭಾಗಿನಃ ।
ತ್ವದ್ವಾಕ್ಯಾಮೃತಪಪಾನೇನ ರೋಮಹರ್ಷಸ್ತು ಜಾಯತೇ ॥100॥

ಕದಾ ಪಶ್ಯಾಮಿ ಕಲ್ಯಾಣಂ ವಧೂವರಸಮಾಗಮಮ್ ।
ಸಭರ್ತೃಕಾಂ ರಾಜಪುತ್ರೀಂ ಸ್ವರ್ಣಸಿಂಹಾಸನೇ ಸ್ಥಿತಾಮ್ ॥101॥

ಕದಾ ಪಶ್ಯಾಮಿ ನೇತ್ರಾಭ್ಯಾಂ ಬಂಧುಮಂಡಲಮಧ್ಯಗಾಮ್' ।
ಇತ್ಯುಕ್ತ್ವಾ ಭವನಂ ಚಾಗಾದ್ದುಹಿತುರ್ದುಹಿತೃಪ್ರಿಯಃ ॥102॥

ರಾಜಾ ಪದ್ಮಾವತೀಂ ಪ್ರಾಹ ಸಾಂತ್ವಯನ್ ವಚಸಾऽऽದರಾತ್ ।

ರಾಜೋವಾಚ–

'ಭದ್ರೇ ದುಃಖಂ ಮನಸ್ಥಂ ತೇ ತ್ಯಜ ಶೀಘ್ರಮತಃಪರಮ್ ॥103॥

ಹೃದಯೇ ತವ ಕಲ್ಯಾಣಿ ಕಾऽಪೇಕ್ಷಾ ವರ್ತತೇ ವದ ।
ತದದ್ಯಾಹಂ ಕರಿಷ್ಯಾಮಿ ನಾತ್ರ ಕಾರ್ಯಾ ವಿಚಾರಣಾ' ॥104॥

ಜನಕಸ್ಯ ವಚಃ ಶ್ರುತ್ವಾ ಜನನೀಂ ವಾಕ್ಯಮಬ್ರವೀತ್ ।

ತಿಳಿಸಿದಳು. ಬಹುಸಂತುಷ್ಟನಾದ ಆಕಾಶರಾಜನು (98) 'ನಮ್ಮ ಪೂರ್ವಪುಣ್ಯದಿಂದ ಇಂತಹ ಮಂಗಲ ಮಯವಾದ ವಿವಾಹ ಮಹೋತ್ಸವವನ್ನು ಶೀಘ್ರದಲ್ಲಿ ನೊಡುವ ಭಾಗ್ಯವೊದಗಿರುವದು. ಬಕುಲಾ ದೇವಿಯು ಬಂದಿರುವದು ನಮಗೆ ಸಕಲ ಸನ್ಮಂಗಳಗಳೂ ಬಂದಂತಾಗಿವೆ. ನನ್ನ ಪಿತೃದೇವತೆ ಗಳೆಲ್ಲರೂ ಸಹ ಕೃತಾರ್ಥರಾಗಿ ಮುಕ್ತಿಭಾಗಿಗಳಾಗಿರುವರು. ನಿನ್ನ ಮಾತನ್ನು ಕೇಳಿಯೇ ನನಗೆ ರೋಮಾಂಚನವುಂಟಾಗಿರುವದು. (99–100) ಯಾವಾಗ ವಧೂವರರ ಸಮಾಗಮವನ್ನು–ವಿವಾಹವನ್ನು ನೋಡೇನು? ಯಾವಾಗ ತಾನೆ ಬಂಧುಗಳಿಂದ ಪರಿವಾರಿತಳಾದ ಪದ್ಮಾವತಿಯನ್ನು ಶ್ರೀನಿವಾಸನೊಡನೆ ಸ್ವರ್ಣಸಿಂಹಾಸನದಲ್ಲಿ ಕುಳ್ಳರಿಸೇನು? ವಿವಾಹಿತರಾದ ಅವರೀರ್ವರನ್ನು ಯಾವಾಗ ತಾನೆ ನನ್ನ ಕಣ್ಣುಗಳಿಂದ ನೋಡೇನು? ಎಂದು ಕಾತುರನಾಗಿರುವೆನು' ಎಂದು ನುಡಿದನು. (102) ಶ್ರೀನಿವಾಸನಿಗೆ ಕನ್ಯಾಪ್ರದಾನ ಮಾಡುವದಾಗಿ ಧರಣೀದೇವಿಗೆ ತಿಳಿಸಿ, ಪದ್ಮಾವತಿಯ ಅಂತಃಪುರಕ್ಕೆ ಹೋದನು. ಅವಳನ್ನು ಸಂತೈಸಿ 'ಹೇ ಮಗಳೇ! ನಿನ್ನ ದುಃಖವನ್ನು ಬಿಡು. (103) ನಿನ್ನ ಮನಸ್ಸಿನಲ್ಲೇನಿದೆ ಎಂಬುದನ್ನು ನನಗೆ ತಿಳಿಸು. ನಾನದನ್ನು ಪೂರೈಸುವೆನು. ಸಂದೇಹಿಸದೇ ನಿನ್ನ ಮನೋಗತವನ್ನು ತಿಳಿಸು(104)' ಎಂದು ನುಡಿದನು.

ಪದ್ಮಾ ಉವಾಚ–

'ಮಾತಸ್ತೇ ಕಥಿತಂ ಸರ್ವಂ ಜನಕಾಯ ವಚೋ ಮಮ ॥105॥

ಸಮಾಚಕ್ಷ್ವಾದ್ಯ ಸಂಕೋಚಾನ್ನ ವಕ್ತುಮಹಮುತ್ಸಹೇ' ।
ಪುತ್ರೀಗಿರಂ ವಿದಿತ್ವಾ ಸಾ ಭರ್ತಾರಂ ವಾಕ್ಯಮಬ್ರವೀತ್ ॥107॥

ಧರಣ್ಯುವಾಚ–

'ಸಾಧಯಸ್ವ ಮಹಾರಾಜ ವಿವಾಹಂ ವಿಧಿಪೂರ್ವಕಮ್ ।
ವಿಲಂಬೋ ನೈವ ಕರ್ತವ್ಯಃ ಶುಭಸ್ಯಾರ್ಥಂ ಶುಭಾನನ' ॥108॥

ರಾಜೋವಾಚ–

'ತಸ್ಮೈ ದಾಸ್ಯಾಮಿ ಕೃಷ್ಣಾಯ ಶ್ರೀನಿವಾಸಾಯ ಭಾಮಿನಿ' ।
ಇತ್ಯಾಶ್ವಾಸ್ಯ ಸುತಾಂ ರಾಜಾ ಪುತ್ರಮಿಂದ್ರನಿಕೇತನಮ್ ॥109॥

ಪ್ರೇಷಯಾಮಾಸ ರಾಜೇಂದ್ರ ಗುರ್ವಾಗಮನಕಾಂಕ್ಷಯಾ ।
ವಿಲಿಖ್ಯ ಪತ್ರಿಕಾಂ ರಾಜಾ ಪುತ್ರೀಕಲ್ಯಾಣಕಾರಿಕಾಮ್ ॥110॥

ಸ ಗತ್ವಾಽತಿತ್ವರೇಣೈವ ಚಂದ್ರಾಂಶತ್ವಾಚ್ಚ ಭೂಮಿಪ ।
ಅವಂದತಾನಂದಪೂರ್ಣೋ ಗುರುಮಿಂದ್ರಸ್ಯ ಚಕ್ಷಣಾತ್ ॥111॥

ಆಗ ಪದ್ಮಾವತಿಯು ಧರಣಿದೇವಿಯನ್ನು ಕುರಿತು 'ನನಗೆ ತಿಳಿಸಲು ಸಂಕೋಚವೆನಿಸುವದರಿಂದ ನೀನೇ ಆಕಾಶರಾಜನಿಗೆ ನನ್ನ ಮನೋಭಿಲಾಷೆಯನ್ನು ತಿಳಿಸು. ಮನಸ್ಸಂಕೋಚದಿಂದಾಗಿ ನಾನೇ ತಿಳಿಸಲು ಉತ್ಸುಕಳಾಗಿರುವದಿಲ್ಲ' ಎಂದು ನುಡಿದಳು. (105–106) ಆಗ ಮಗಳ ಅಭಿಪ್ರಾಯವನ್ನು ತಿಳಿದ ಧರಣೀದೇವಿಯು 'ಶೀಘ್ರವಾಗಿ ಪದ್ಮಾವತಿಯ ವಿವಾಹವನ್ನು ಶ್ರೀನಿವಾಸನೊಡನೆ ನೆರವೇರಿಸಬೇಕೆಂದು ರಾಜನಿಗೆ ಪ್ರಾರ್ಥಿಸಿದಳು. (108) ಆಗ ಆಕಾಶರಾಜನು 'ಶ್ರೀನಿವಾಸನಿಗೆ ನಿನ್ನನ್ನು ವಿವಾಹಮಾಡಿಕೊಡುವೆ'ನೆಂದು ಪದ್ಮಾವತಿಗೆ ಆಶ್ವಾಸನೆಯನ್ನಿತ್ತು ಮಗನಾದ ವಸುದಾನನನ್ನು ಮುಂದಿನ ವೈವಾಹಿಕ ಕಾರ್ಯವನ್ನು ವಿಚಾರಿಸಲು ಬ್ರಹಸ್ಪತ್ಯಾಚಾರ್ಯರನ್ನು ಕರೆದುಕೊಂಡು ಬರಲು ತನ್ನ ಪುತ್ರೀಕಲ್ಯಾಣ ವಿಷಯಕವಾದ ಪತ್ರವನ್ನು ಬರೆದುಕೊಟ್ಟು, ಕಳುಹಿಸಿದನು. (109–110) ಚಂದ್ರಾಂಶನಾದ ಆಕಾಶರಾಜನ ಪುತ್ರನು ಕ್ಷಣಮಾತ್ರದಲ್ಲಿ ಅತೀ ಶೀಘ್ರವಾಗಿ ಸ್ವರ್ಗಲೋಕವನ್ನು ಸೇರಿ, ಬೃಹಸ್ಪತ್ಯಾಚಾರ್ಯರನ್ನು ನಮಸ್ಕರಿಸಿ ಶುಭಪತ್ರಿಕೆಯನ್ನು ಅವರಿಗೆ ಸಮರ್ಪಿಸಿದನು. ಇದೆಲ್ಲವನ್ನೂ ಕಂಡು ಬಹು ಸಂತುಷ್ಟರಾದ ಬೃಹಸ್ಪತ್ಯಾಚಾರ್ಯರು

ಸಪತ್ರಂ ರಾಜಪುತ್ರಂ ಚ ಸಮಾಲೋಕ್ಯಾಗತಂ ಗುರುಃ ।
ಪ್ರತಿಷ್ಠಾಪ್ಯಾಸನೇ ತಂ ಚ ತೇನಾಽನೀತಾಂ ತದಾ ಶುಭಮ್ ॥112॥

ಕರದ್ವಯೇನ ತಾಮಾಶು ಗೃಹೀತ್ವಾಽಽನಂದನಿರ್ಭರಃ ।
ಸ ಪಪಾಠ ಮಹಾರಾಜ ಪತ್ರಿಕಾಂ ಶುಭಸೂಚಿಕಾಮ್ ॥113॥

ತತ್ಕ್ಷಣಾದಾಗಮದ್ರಾಜನ್ ರಾಜಾನಂ ಸ ಪುರೋಹಿತಃ ।
ಪ್ರಾಪ್ತಂ ಪುರೋಹಿತಂ ನತ್ವಾ ಕೃತ್ವಾ ಪೂಜಾಂ ಯಥಾವಿಧಿ ॥114॥

ಕಾಲೋಚಿತಂ ವಾಚಯಿತ್ವಾ ವಂದಮಾನ ಉವಾಚ ಸಃ ।

ರಾಜೋವಾಚ–

'ತವಾಽಜ್ಞಯಾ ಕರಿಷ್ಯಾಮಿ ವಿವಾಹಂ ದುಹಿತುರ್ಮಮ ॥115॥

ಶ್ರೀನಿವಾಸಸ್ಯ ಸಂಬಂಧೋವಿದಿತಃ ಸ್ಯಾತ್ತವಾನಘ ।
ಕನ್ಯಾರ್ಥಮಾಗತಾ ಸಾಧ್ವೀ ವಿದಿತೇ ಗೋತ್ರನಾಮನೀ ॥116॥

ತಥಾಽಪಿ ತವ ವಾಕ್ಯೇನ ಕರಿಷ್ಯೇ ಕರ್ಮ ತನ್ಮುನೇ' ।
ಸ ರಾಜವಚನಂ ಶ್ರುತ್ವಾ ರಾಜಾನಂ ಪ್ರತ್ಯಭಾಷತ ॥117॥

ಗುರುರುವಾಚ–

'ಸಫಲಂ ವೃಕ್ಷಮಾಶ್ರಿತ್ಯ ಬಹವೋ ಜೀವಿತಾ ಭುವಿ ।

ವಸುದಾನನನ್ನು ಆಸನದಲ್ಲಿ ಕೂಡಿಸಿ, ಅವನು ತಂದಿರುವ ಶುಭಸೂಚಕವಾದ ಪತ್ರವನ್ನು ತೆಗೆದುಕೊಂಡು ಓದಿ ಅತ್ಯಂತ ಸಂತುಷ್ಟರಾದರು. (111–113) ಆ ಕ್ಷಣದಲ್ಲಿಯೇ ಅವರು ಆಕಾಶರಾಜನ ಪಟ್ಟಣವಾದ ನಾರಾಯಣಪುರಕ್ಕೆ ವಸುದಾನನಿಂದ ಕೂಡಿಕೊಂಡು ಆಗಮಿಸಿದರು. ಸ್ವರ್ಗದಿಂದ ಆಗಮಿಸಿದ ಬ್ರಹಸ್ಪತ್ಯಾಚಾರ್ಯರಿಗೆ ವಿಧ್ಯುಕ್ತ ರೀತಿಯಲ್ಲಿ ಅರ್ಘ್ಯಪಾದ್ಯಾದಿಪೂಜೆಗಳನ್ನು ಸಮರ್ಪಿಸಿ, (114) ಕಾಲೋಚಿತವಾದ ಸಂಭಾಷಣೆಯನ್ನು ಮಾಡಿ ನಮಸ್ಕರಿಸುತ್ತಾ "ನಿಮ್ಮ ಆಜ್ಞೆಯಿಂದ ನನ್ನ ಮಗಳಿಗೆ ವಿವಾಹ ಮಾಡಬೇಕೆಂದು ಇಚ್ಛಿಸುತ್ತೇನೆ. (115) ಜಗಜ್ಜನಕನಾದ ಶ್ರೀನಿವಾಸನ ವಿಷಯವು ನಿಮಗೆ ವಿದಿತವೇ ಆಗಿದೆ. ವರವನ್ನು ಬಲ್ಲ ಬಕುಲಾ ಮಾಲೆಯು ಕನ್ಯಾರ್ಥಿಯಾಗಿ ಇಲ್ಲಿಗೆ ಆಗಮಿಸಿದ್ದಾಳೆ. (116) ಗೋತ್ರಾದಿಗಳನ್ನು ನಾವು ತಿಳಿದಿದ್ದರೂ ಸಹ ನಿಮ್ಮ ಆಜ್ಞೆಯಂತೆ ಈ ವಿವಾಹ ಕಾರ್ಯವನ್ನು ಮಾಡಲು ಇಚ್ಛಿಸುತ್ತೇವೆ" ಎಂದು ಹೇಳಿದಾಗ ಸಂತುಷ್ಟರಾದ ಬೃಹಸ್ಪತ್ಯಾಚಾರ್ಯರು, ಆಕಾಶರಾಜನನ್ನು ಕುರಿತು (117) 'ಫಲ ಪುಷ್ಪಾದಿಗಳಿಂದ

ತಥಾ ವಯಂ ಹಿ ಜೀವಾಮಸ್ತವ ಭಾಗ್ಯಾವಲಂಬಿನಃ ॥119॥

ಅಹಂ ಕದಾಚಿದೇವಾತ್ರ ಸಮಾಗಚ್ಛಾಮಿ ಭೂತಲಮ್ ।
ನ ಜಾನಾಮಿ ತತಃ ಸಮ್ಯಕ್ ಶುಕ ಆಶ್ರಿತವಾನ್ ಸದಾ ॥119॥

ಸ ಜಾನಾತಿ ಮಹಾರಾಜ ಸ್ಥಿತಿಮೇತಸ್ಯ ಶಾರ್ಙ್ಗಿಣಃ ।
ಅತ್ರೈವೋತ್ತರದಿಗ್ಭಾಗೇ ಕ್ರೋಶಪಂಚಾತ್ಮಕೇ ನೃಪ ॥120॥

ವರ್ತತೇ ವ್ಯಾಸತನಯಃ ಶ್ರೀನಿವಾಸಪರಾಯಣಃ ।
ತಮಾಹ್ವಯ ಮಹಾರಾಜ ಶೀಘ್ರಂ ತೇ ಪೃಥಿವೀಪತೇ ॥121॥

ಸ ವದತ್ಯಾತ್ಮನಸೌಖ್ಯಂ ತಸ್ಯ ವೃತ್ತಾಂತಮಾದಿತಃ ।
ಏವಮುಕ್ತೋಽಥ ಗುರುಣಾ ಭ್ರಾತರಂ ಬ್ರಾಹ್ಮಣಪ್ರಿಯಮ್ ॥122॥

ಸಂದಿದೇಶ ಮಹಾರಾಜ ಶುಕಾಶ್ರಮಮರಿಂದಮಃ ।
ಸ ಗತ್ವಾ ವಾಯುವೇಗೇನ ರಥೇಽನಾದಿತ್ಯವರ್ಚಸಾ ॥123॥

ಧ್ಯಾನಯೋಗಾದುತ್ಥಿತಂ ತಂ ದೃಷ್ಟ್ವಾ ಶುಕಮುವಾಚ ಹ ।

**ತೋಂಡಮಾನ ಉವಾಚ–**

ಸಹಿತವಾದ ವೃಕ್ಷವನ್ನು ಬಹಳಷ್ಟು ಪಶು ಪಕ್ಷಿಗಳೇ ಮೊದಲಾದ ಜೀವಿಗಳು ಆಶ್ರಯಿಸುವಂತೆ ನಾವು ನಿನ್ನ ಪುಣ್ಯವನ್ನು ಆಶ್ರಯಿಸುವೆವು' (118) ಎಂದು ನುಡಿದು, ಆಕಾಶರಾಜನನ್ನು ಬಹುಪುಣ್ಯಜೀವಿಯೆಂದು ಶ್ಲಾಘಿಸುತ್ತಾ "ಸ್ವರ್ಗದಲ್ಲಿರುವ ನಾನು ಭೂತಲಕ್ಕೆ ಮೇಲಿಂದ ಮೇಲೆ ಬರುವವನಲ್ಲ. ಯಾವಾಗಲಾದರೂ ಒಮ್ಮೊಮ್ಮೆ ಬರುತ್ತಿರುತ್ತೇನೆ. ವೇಂಕಟಾಚಲ ನಿವಾಸಿಯಾದ ಶ್ರೀನಿವಾಸನ ಬಗ್ಗೆ ಚೆನ್ನಾಗಿ ತಿಳಿಯಲಾರೆನು. (119) ವ್ಯಾಸಪುತ್ರರಾದ ಶುಕಾಚಾರ್ಯರು ಇಲ್ಲಿಯೇ ಉತ್ತರ ದಿಕ್ಕಿನಲ್ಲಿ ಐದು ಕ್ರೋಶಗಳಷ್ಟು ದೂರದಲ್ಲಿರುವ ಪದ್ಮಸರೋವರದ ಬಳಿ ವಾಸವಾಗಿರುವರು. ಅವರಿಗೆ ಶ್ರೀನಿವಾಸನ ವೃತ್ತಾಂತವೆಲ್ಲವೂ ಸರಿಯಾಗಿ ತಿಳಿದಿದೆ. (121) ಅವರು ಶ್ರೀನಿವಾಸನ ವೃತ್ತಾಂತವನ್ನು ನಿನಗೆ ಸಂತೋಷವಾಗುವಂತೆ ತಿಳಿಸಿಕೊಡುತ್ತಾರೆ. ಆ ಮುನಿಗಳನ್ನು ಶೀಘ್ರವಾಗಿ ಇಲ್ಲಿಗೆ ಕರೆತರೆಸು" (122) ಎಂದು ಹೇಳಿದಾಗ ಆಕಾಶರಾಜನು, ತನ್ನ ಸಹೋದರನಾದ ತೊಂಡಮಾನರಾಜನನ್ನು ಶುಕಾಶ್ರಮಕ್ಕೆ ಕಳುಹಿಸಿದನು. ಆಗ ತೋಂದಮಾನ ರಾಜನು ಸೂರ್ಯನಂತೆ ಹೊಳೆಯುವ, ಅತ್ಯಂತ ವೇಗವಾಗಿ ಚಲಿಸುವ ರಥವನ್ನೇರಿಕೊಂಡು ಶುಕಾಶ್ರಮಕ್ಕೆ ಬಂದನು. (123) ಅದೇ ತಾನೆ ಧ್ಯಾನಯೋಗದಿಂದ ಹೊರಬಂದ ಶುಕಾಚಾರ್ಯರನ್ನು ಕಂಡು 'ತಪಸ್ವಿಶ್ರೇಷ್ಠರಾದ ಶುಕಾಚಾರ್ಯರೇ! ರಾಜಕುಮಾರಿಯಾದ

'ಶೃಣು ತಾಪಸಶಾರ್ದೂಲ ವಚನಂ ರಾಜಭಾಷಿತಮ್ ॥124॥

ಪದ್ಮಾವತೀ ವಿವಾಹಾರ್ಹಾ ಸಂಪನ್ನಾ ಗುರುಪೂಜಿತ ।
ಶ್ರೀನಿವಾಸಾಯ ತಾಂ ಕನ್ಯಾಂ ಪ್ರದಾತುಂ ಕಾಂಕ್ಷತೇ ನೃಪಃ ॥125॥

ಯುಕ್ತಾಯುಕ್ತವಿಚಿಂತಾಯೈ ಗುರುಮಾಹೂತವಾನಪಿ ।
ತದರ್ಥಮೇವ ಚಾದ್ಯ ತ್ವಾಂ ಸಮಾಹ್ವಯತಿ ಭೂಮಿಪಃ ॥126॥

ಯಕ್ತಾಯುಕ್ತವಿಚಿಂತ್ಯಾಥ ಲೇಖಿತುಂ ಶುಭಪತ್ರಿಕಾಮ್ ।
ಅವಕಾಶಂ ಚ ಕೃತ್ವಾದ್ಯ ಗಚ್ಛ ತನ್ನಗರೀಂ ಪ್ರತಿ' ॥128॥

ಏವಮುಕ್ತೋ ಮಹೀದೇವೋ ಮಹೀಪಾಲೇನ ಭೂಮಿಪ ।
ಸಸಂಭ್ರಮಾತ್ ಸಮುತ್ಥಾಯ ವ್ಯಭ್ರಮದ್ವಿಭ್ರಮನ್ನಿವ ॥129॥

ಛಿಂದನ್ಕಮಂಡಲುಂ ರಾಜನ್ ಛಿಂದನ್ ಕೃಷ್ಣಮೃಗತ್ವಚಮ್ ।
ವಿಚ್ಛಿದ್ಯ ಮಣಿಮಾಲಾಶ್ಚ ಸ ನನರ್ತ ಮಹಾಮುನಿಃ ॥129॥

ಮುಹೂರ್ತಮಿತ್ಥಂ ರಾಜೇಂದ್ರ ತದ್ಬುದ್ಧಿರವಶಂ ಗತಾ ।
ಉವಾಚ ಪಶ್ಚಾದ್ರಾಜಾನಂ ಕೃಷ್ಣದ್ವೈಪಾಯನಿರ್ಮುನಿಃ ॥130॥

ಶ್ರೀಶುಕ ಉವಾಚ–

'ಸಾಧೂದಿತಂ ವಾಕ್ಯಮುದಾರವಿಕ್ರಮ
ತ್ವಯಾ ಹರೇರ್ವೇಂಕಟಶೈಲವಾಸಿನಃ ।

ಪದ್ಮಾವತಿಯು ವಿವಾಹ ವಯಸ್ಕಳಾಗಿದ್ದು ಶ್ರೀನಿವಾಸನಿಗೆ ಅವಳನ್ನು ವಿವಾಹಮಾಡಿಕೊಡಲು ಆಕಾಶರಾಜನು ಬಯಸಿರುವನು. (125) ವಧೂವರರ ಯುಕ್ತಾಯುಕ್ತ ಚಿಂತನೆಗಾಗಿ ಗುರುವಾದ ಬೃಹಸ್ಪತ್ಯಾಚಾರ್ಯರನ್ನು ಕರೆದಿರುವನು. ಘಟನಾಘಟನಾದಿಗಳನ್ನು ವಿಚಾರಿಸಿ ವಿವಾಹ ಪತ್ರಿಕೆಯನ್ನು ಬರೆಯಲು ತಮ್ಮನ್ನೂ ಸಹ ಕರೆದುಕೊಂಡು ಬರಲು ತಿಳಿಸಿರುವನು. ಆದ್ದರಿಂದ ಅವಕಾಶವನ್ನು ಮಾಡಿಕೊಂಡು ಆಕಾಶರಾಜನ ಪಟ್ಟಣಕ್ಕೆ ಬರಬೇಕು' ಎಂದು ಪ್ರಾರ್ಥಿಸಿದನು. (126–127) ಶ್ರೀನಿವಾಸನ ವಿವಾಹ ವೃತ್ತಾಂತವನ್ನು ತಿಳಿದ ಶುಕಾಚಾರ್ಯರು ಸಂತೋಷದಿಂದ ಮೇಲೆದ್ದು ಸಂಭ್ರಮದಿಂದ ಎಚ್ಚರವಿಲ್ಲದವರಂತೆ ತಮ್ಮ ಕಮಂಡಲ ಪಾತ್ರೆಯನ್ನು ಒಡೆದು ಕೃಷ್ಣಾಜಿನವನ್ನು ಹರಿದು, ತಾವು ಧರಿಸಿದ ಮಣಿಮಾಲೆಗಳನ್ನು ಛಿದ್ರಗೊಳಿಸಿ, ಸಂತೋಷದಿಂದ ಮೈಮರೆತು ನರ್ತಿಸತೊಡಗಿದರು. (128–129) ಹೀಗೆ ಒಂದು ಮುಹೂರ್ತಕಾಲ ಪರವಶರಾದ

ಕನ್ಯಾಪ್ರದಾನಂ ಪುರುಷಾರ್ಥಸಾಧನಂ
ಸಮಸ್ತಲೋಕಸ್ಯ ಪವಿತ್ರಕಾರಣಮ್ ॥131॥

ಆಕಾಶರಾಜಧಿಷಣೌ ಶ್ರೀನಿವಾಸಕೃಪಾಬಲಾತ್ ।
ಮಹಾದಾನಪರಾವಿತ್ಥಂ ಭೂಯಾಸ್ತಾಂ ಚ ದಿನೇ ದಿನೇ' ॥132॥

ಇತ್ಯಾಶಿಷಾ ಪ್ರಶಂಸ್ಯಾಥ ಪದ್ಮತೀರ್ಥೇಽವಗಾಹ್ಯ ಚ ।
ಕೃತ್ವಾ ಮಾಧ್ಯಾಹ್ನಿಕಾಂ ಸಂಧ್ಯಾಂ ತ್ಯಕ್ತ್ವಾ ಜೀರ್ಣಂ ಸ್ವಭೂಷಣಮ್ ॥133॥

ಸ ನವಾನಿ ಕುಶಾಗ್ರಾಣಿ ನಿಕೃತ್ಯ ಮನಿಸತ್ತಮಃ ।
ಕಿರೀಟಂ ಬಂಧಯಿತ್ವಾ ತೈರುತ್ತಮಾಂಗನಿಬಂಧನಮ್ ॥134॥

ಕವಚಂ ಕಲ್ಪಯಾಮಾಸ ಕುಶಾಗ್ರೈಃ ಕುಸುಮೈಸ್ತದಾ ।
ತುಲಸೀಮಣಿಮಾಲಾಭಿಃ ಕಂಠಕರ್ಣವಿಭೂಷಿತಃ ॥135॥

ಅಪಾದಲಂಬಿಕೃಷ್ಣತ್ವಕ್ಕಂಚುಕೈಃ ಸಮಲಂಕೃತಃ ।
ಅಶ್ವಯಾನೇಽಧಿರೋಪ್ಯೈನಂ ನಿನಾಯ ಸ ನೃಪಾನುಜಃ ॥136॥

ತಮಾಯಾಂತಂ ಮುನಿಂ ದೃಷ್ಟ್ವಾ ಚತುರಂಗಬಲಾನ್ವಿತಃ ।

ಶುಕಮುನಿಗಳು ಅನಂತರ 'ಆಕಾಶರಾಜನ ಮಾತುಗಳು ಅತ್ಯಂತ ಉತ್ತಮವಾಗಿರುವವು. ಅವನು ವೆಂಕಟಾಚಲಾಧೀಶನಾದ ಶ್ರೀನಿವಾಸನಿಗೆ ಮಾಡುವ ಕನ್ಯಾಪ್ರದಾನವು ಸಮಸ್ತ ಲೋಕಗಳಿಗೂ ಸಹ ಮಂಗಳಕರವಾಗಿರುವದು. (130–131) ಆಕಾಶರಾಜ ಮತ್ತು ಬೃಹಸ್ಪತ್ಯಾಚಾರ್ಯರು ಶ್ರೀನಿವಾಸನ ಕೃಪಾಬಲದಿಂದ ಇಂತಹ ಶುಭಕರವಾದ ಕಾರ್ಯಗಳಲ್ಲಿ ಯಾವಾಗಲೂ ಆಸಕ್ತರಾಗಿರಲಿ' (132) ಎಂಬುದಾಗಿ ನುಡಿದು ಪದ್ಮ ಸರೋವರದಲ್ಲಿ ಸ್ನಾನವನ್ನು ಮಾಡಿ ಮಾಧ್ಯಾಹ್ನದ ಜಪ ತಪಾದಿಗಳನ್ನು ತೀರಿಸಿಕೊಂಡು, ತಮ್ಮ ಜೀರ್ಣವಾದ ಆಭರಣಗಳನ್ನು ತ್ಯಜಿಸಿ, (133) ಹೊಸದಾಗಿ ಇರುವ ದರ್ಭಾಗ್ರಗಳನ್ನು ತಂದು ಧರ್ಬೆಯ ತಲೆಗೆ ಕೀರಿಟವನ್ನು ಮಾಡಿಕೊಂಡರು. (134) ಕುಶಾಗ್ರಗಳು ಮತ್ತು ಹೂವುಗಳಿಂದ ಕವಚವನ್ನು ನಿರ್ಮಿಸಿ, ಧಾರಣ ಮಾಡಿಕೊಂಡು, ತುಲಸಿಮಣಿಹಾರಗಳಿಂದ ಕಂಠವನ್ನು ಅಲಂಕರಿಸಿ ಕೊಂಡರು. ಕಿವಿಯಲ್ಲಿ ತುಳಸಿಯನ್ನು ಧರಿಸಿದ್ದರು. (135) ಪಾದದ ವರೆಗೂ ಕೃಷ್ಣಮೃಗ ಚರ್ಮವನ್ನು ಧರಿಸಿದ್ದ ಕೃಷ್ಣದ್ವೈಪಾಯನರ ಮಕ್ಕಳಾದ ಶುಕಾಚಾರ್ಯರನ್ನು ಕುದುರೆಯ ರಥದಲ್ಲಿ ಕೂಡಿಸಿಕೊಂಡು ತೋಂಡಮಾನನು ಆಕಾಶರಾಜನ ಪುರವನ್ನು ಪ್ರವೇಶಿಸಿದನು. (137) ಆಗ ಚತುರಂಗ ಬಲಾನ್ವಿತನಾದ ಆಕಾಶರಾಜನು ಬೃಹಸ್ಪತ್ಯಾಚಾರ್ಯರನ್ನು ಮುಂದಿಟ್ಟುಕೊಂಡು ಹಣ್ಣು–

ಪುರೋಹಿತಂ ಪುರಸ್ಕೃತ್ಯ ಕುಶಮೂಲಫಲೋದಕೈಃ ॥137॥

ಸಮಾಯಾಂತಂ ನೃಪಂ ದೃಷ್ಟ್ವಾ ಸಂತುಷ್ಟೋಽಭೂನ್ಮಹಾಮುನಿಃ।
ಯಾನಾದುತ್ತೀರ್ಯ ರಾಜೇಂದ್ರಃ ಸಾಷ್ಟಾಂಗಂ ಪ್ರಣಿಪತ್ಯತಮ್ ॥138।

ಗಜಮಾರೋಪ್ಯ ತಮೃಷಿಂ ಸಪುರೋಹಿತ ಆದರಾತ್ ।
ಗೃಹಮಾನೀಯ ತಮೃಷಿಂ ರತ್ನಪೀಠೇ ನಿವೇಶ್ಯ ಚ ॥139॥

ನಿಕೇತನಾಂತರ್ಭವನೇ ನಿವೇಶ್ಯ
ನಿಧಿಂ ಮುನೀನಾಂ ನಿರತಂ ಪರಾತ್ಪರೇ ।
ಸಂಪೂಜಯಾಮಾಸ ವಿಧಾನವಿತ್ತಮೋ
ವಿದ್ಯಾಗುರುಂ ಜ್ಞಾನಗುರುಂ ಚ ನತ್ವಾ ॥140॥

ತಾಪಸಂ ಪರಿಪಪ್ರಚ್ಛ ಕನ್ಯಾರ್ಥಂ ಸ ತು ಭೂಪತಿಃ ॥141॥

ರಾಜೋವಾಚ–

'ಪದ್ಮಾವತೀಂ ಪ್ರದಾಸ್ಯಾಮಿ ಭವದ್ಭ್ಯಾಮನುಮೋದಿತಃ ।
ಶ್ರೀನಿವಾಸಾಯ ಕೃಷ್ಣಾಯ ನಿಶ್ಚಿತೋ ಹಿ ಮಯಾ ವರಃ' ॥142॥

ಸ ತದ್ವಚನಮಾಕರ್ಣ್ಯ ರಾಜಾನಂ ರಾಜಸತ್ತಮಮ್ ।
ಶುಕೋಽಬ್ರವೀದ್ಗಿರಂ ಪುತ್ರೀಕಾರಣಾತ್ಕರುಣಾನ್ವಿತಃ ॥143॥

ಕಂದಮೂಲಗಳು, ನೀರು ಇವುಗಳನ್ನು ತೆಗೆದುಕೊಂಡು ಬರುತ್ತಿರುವದನ್ನು (138) ನೋಡಿ ಶುಕಾಚಾರ್ಯರು ಅತ್ಯಂತ ಸಂತುಷ್ಟರಾದರು. ಆಕಾಶರಾಜನು ಭಕ್ತಿಇಯಿಂದ ಅವರಿಗೆ ನಮಸ್ಕರಿಸಿ, ಅವರನ್ನು ಆನೆಯ ಮೇಲೆ ಕುಳ್ಳರಿಸಿ ಆದರ ಪೂರ್ವಕಭಕ್ತಿವಿಶ್ವಾಸಗಳಿಂದ ಅರಮನೆಗೆ ಕರೆತಂದು, ಶುಕಾಚಾರ್ಯರನ್ನು ರತ್ನಪೀಠದಲ್ಲಿ ಕುಳ್ಳರಿಸಿ, (139) ಯಾವಾಗಲೂ ಪರಮಾತ್ಮನಲ್ಲಿ ಆಸಕ್ತರಾದ, ತಪಸ್ವಿ ಪ್ರವರರಾದ, ಜ್ಞಾನಾಧಿಕರಾದ ಶುಕಾಚಾರ್ಯರನ್ನು ನಮಸ್ಕರಿಸಿ, ಪುರೋಹಿತ ರಿಂದೊಡಗೂಡಿ ಕಂದಮೂಲ–ಫಲಗಳಿಂದ ಪೂಜಿಸಿ, ಮಗಳಿಗೋಸ್ಕರವಾಗಿ ಹೀಗೆ ಪ್ರಾರ್ಥಿಸಿದನು. 'ನನ್ನ ಮಗಳಾದ ಪದ್ಮಾವತಿಯನ್ನು ನೀವು ಅನುಮೋದಿಸಿದಲ್ಲಿ ಶ್ರೀನಿವಾಸನಿಗೆ ವಿವಾಹಮಾಡಿ ಕೊಡುವದಾಗಿ ನಿಶ್ಚಯಿಸಿರುವೆನು' ಎಂದು ನುಡಿದನು. (142) ಆಗ ಶುಕಾಚಾರ್ಯರು ಅತ್ಯಂತ ಸಂತೋಷದಲ್ಲಿ 'ಈ ವಿವಾಹ ವಿಷಯದಲ್ಲಿ ಯಾವ ಸಂದೇಹವನ್ನು ಮಾಡದೇ ಶೀಘ್ರದಲ್ಲಿ ಪದ್ಮಾವತಿ–ಶ್ರೀನಿವಾಸರ ವಿವಾಹವನ್ನು ನೆರವೇರಿಸು. ನೀನು ಧನ್ಯನಾಗಿರುವಿ. ಈ ವಿವಾಹದಿಂದ

**ಶುಕ ಉವಾಚ–**

'ಮಾ ಕುರುಷ್ವ ಮಹಾಭಾಗ ಸಂದೇಹಂ ದಾನಕರ್ಮಣಿ ।
ಧನ್ಯೋಽಸಿ ತ್ವಂ ಮಹೀಪಾಲ ಕುಲಂ ಪಾವನತಾಂ ಗತಮ್ ॥144॥

ಪಿತರಸ್ತ್ರಿದಿವಂ ಪ್ರಾಪ್ತಾ ನಾತ್ರ ಕಾರ್ಯಾ ವಿಚಾರಣಾ ।
ಕಿಂ ತ್ವಯಾಽಽಚರಿತಂ ಪುಣ್ಯಂ ಪೂರ್ವಜನ್ಮನಿಭೂಮಿಪ ॥145॥

ಭಗವಾನರವಿಂದಾಕ್ಷಃ ಶ್ರೀನಿವಾಸಸ್ಸತಾಂ ಗತಿಃ ।
ಜಾಮಾತೃತ್ವಂ ಸಮಾಪನ್ನಃ ತಸ್ಮಾನ್ನಾಸ್ತಿ ತವಾಧಿಕಃ ॥146॥

ವಿಲಂಬೋ ನೈವ ಕರ್ತವ್ಯಃ ಶುಭಂ ಶೀಘ್ರಂ ವಿಧೀಯತಾಮ್।
ವಯಂ ಧನ್ಯಾಃ ಕೃತಾರ್ಥಾಃ ಸ್ಮಸ್ತವ ಸಂಗೇನ ಭೂಮಿಪ ॥148॥

ವಯಂ ತು ತಪಸಾಽಽರಾಧ್ಯ ಕಂದಮೂಲಫಲಾಶನಾಃ ।
ಸರ್ವಸಂಗಂ ಪರಿತ್ಯಜ್ಯ ನ ಪಶ್ಯಾಮೋಽತ್ರ ತಂ ವಿಭುಮ್ ॥148॥

ಸಂಗತೇಸ್ತವ ಪಶ್ಯಾಮಃ ಶ್ರೀನಿವಾಸಂ ಶ್ರಿಯಾ ಯುತಮ್ ।
ಸಂಗತಿಸ್ತವ ಭದ್ರಾ ನೋ ಭವೇಜ್ಜನ್ಮನಿ ಜನ್ಮನಿ' ॥149॥

ನಿನ್ನ ಕುಲವು ಶುದ್ಧವಾಗುವದು. (144) ನಿನ್ನ ಪಿತೃಗಳೆಲ್ಲರೂ ಸಹ ಸ್ವರ್ಗವನ್ನೇ ಹೊಂದುವರು. ಇದರಲ್ಲಿ ನೀನು ಸಂಶಯ ಪಡಬೇಡ. ನಿನ್ನ ಪೂರ್ವಜನ್ಮಾರ್ಜಿತ ಪುಣ್ಯವಾದರೂ ಎಂತಹದು? (145) ಸಾಕ್ಷಾತ್ ಭಗವಂತನೇ ಆದ, ಸಜ್ಜನರಿಗೆ ಗತಿಯಾದ ಶ್ರೀನಿವಾಸನು ನಿನ್ನ ಅಳಿಯನೆನಿಸುವನೆಂದ ಮೇಲೆ ನಿನಗಿಂತ ಉತ್ತಮರಾರೂ ಇರುವದಿಲ್ಲ. (146) ಈ ಕಲ್ಯಾಣ ವಿಷಯದಲ್ಲಿ ಯಾವುದೇ ವಿಳಂಬವನ್ನು ಮಾಡಲಾರದೇ ವಿವಾಹ ಮಹೋತ್ಸವವನ್ನು ಶೀಘ್ರದಲ್ಲಿ ನೆರವೇರಿಸಬೇಕೆಂದು ಆಜ್ಞಾಪಿಸಿದರು. ಇಂತಹ ಅಲಭ್ಯವಾದ ವಿವಾಹವನ್ನು ಕಂಡು ನಾವು ಸಹ ಪುಣ್ಯಭಾಗಿಗಳೂ, ಕೃತಕೃತ್ಯರೂ ಆಗುತ್ತೇವೆಂದು ತಿಳಿಸಿದರು. (147) 'ಸಂಸಾರಸಂಗವನ್ನು ತೊರೆದು, ತಪೋಮಾರ್ಗಿ ಗಳಾಗಿ, ಗಡ್ಡೆಗೆಣಸು, ಹಣ್ಣು–ಹಂಪಲಗಳಿಂದ ಜೀವನವನ್ನು ಸಾಗಿಸಿ, ವಿರಕ್ತಶಿಖಾಮಣಿ ಗಳಾದರೂ ಸಹ ಭಗವಂತನಾದ ಆ ಶ್ರೀನಿವಾಸನನ್ನು ಕಾಣುವುದು ಅತ್ಯಂತ ದುಸ್ತರವಾಗಿದೆ. ನಿನ್ನ ಸಂಬಂಧದಿಂದ ಆ ಲಕ್ಷ್ಮೀಯುಕ್ತನಾದ ಮಹಾನುಭಾವನನ್ನು ಕಂಡು ನಾವು ಕೃತಾರ್ಥರಾಗುತ್ತೇವೆ. ಇಂತಹ ನಿನ್ನ ಸಂಬಂಧವು ನಮಗೆ ಯಾವಾಗಲೂ ಇರಲಿ" (148–149) ಎಂದು ಬಹುಸಂತೋಷದಿಂದ ಪುನಃ ಪುನಃ ಹೇಳುತ್ತಿರಲು, ಇದರಿಂದ

ಏವಮುಕ್ತ್ವಾ ಸ ರಾಜರ್ಷಿಂ ತೂಷ್ಣೀಮಾಸ ಸ ತಾಪಸಃ ।
ಶುಕವಾಕ್ಯಂ ತತಃ ಶ್ರುತ್ವಾ ಸ ರಾಜಾऽऽನಂದನಿರ್ಭರಃ ॥150॥

ವೈಯಾಸಕೇರ್ವಚಃ ಶ್ರುತ್ವಾ ಪ್ರಶಶಂಸ ಪ್ರಜಾಪತಿಃ ।
'ಮನ್ಯೇ ಕೃತಾರ್ಥಮಾತ್ಮಾನಂ ವ್ಯಾಸಪುತ್ರ ನಮೋऽಸ್ತು ತೇ ॥151॥

ಗ್ರಹಾಣಾಂ ಚ ಗತಿಸ್ತಾತ ತಯೋರ್ಯೋರ್ಗೋ ವಿಚಿಂತ್ಯತಾಮ್ ।
ಋಕ್ಷಯೋಗಂ ಗೋತ್ರಯೋಗಂ ಪಶ್ಯ ವಿಪ್ರ ಬಲಾಬಲಮ್' ॥152॥

ಇತಿ ರಾಜ್ಞೋ ವಚಃ ಶ್ರುತ್ವಾ ಸುರಾಚಾರ್ಯಃ ಸಸಂಭ್ರಮಃ ।
ಛಾಯಾಶಾಸ್ತ್ರವಿಧಾನಜ್ಞೋ ಬಕುಲಾಂ ವಾಕ್ಯಮಬ್ರವೀತ್ ॥153॥

ಬೃಹಸ್ಪತಿರುವಾಚ –

'ಗೋತ್ರಂ ಶ್ರೀವೇಂಕಟೇಶಸ್ಯ ತನ್ಮಮಾಚಕ್ಷ್ವ ಭಾಮಿನಿ ।
ನಕ್ಷತ್ರಂ ಚ ವರಾರೋಹೇ ಕಥ್ಯತಾ'ಮಿತಿಚಾಬ್ರವೀತ್ ॥154॥

ಸಾ ಚ ತದ್ವಚನಂ ಶ್ರುತ್ವಾ ಕಿಂಚಿತ್ಕೋಪಾನ್ವಿತಾऽಬ್ರವೀತ್ ।

ಬಕುಲಾ ಉವಾಚ–

'ಬ್ರಾಹ್ಮಣಾಃ ಸತ್ಯಸಂಪನ್ನಾಃ ಕಲೌ ಮಿಥ್ಯಾಪ್ರವಾದಿನಃ ॥155॥

ಜ್ಞಾನವಂತೋ ಮಹಾರಾಜ ನ ವದಂತಿ ಹಿತಾಹಿತಮ್' ।

ಸಂತುಷ್ಟನಾದ ಆಕಾಶರಾಜನು ಕೃತಕೃತ್ಯ ನಾದೆನೆಂದು ತನ್ನ ಜೀವನದ ಸಾರ್ಥಕತೆಯನ್ನು ವ್ಯಕ್ತಪಡಿಸಿ, ಶುಕಾಚಾರ್ಯರಿಗೆ ನಮಸ್ಕರಿಸಿ, ಬ್ರಹಸ್ಪತ್ಯಾಚಾರ್ಯರೊಡನೆ ಶ್ರೀನಿವಾಸ ಪದ್ಮಾವತಿಯರ ಗ್ರಹಸ್ಥಿತಿಯನ್ನು, ಗೋತ್ರ–ನಕ್ಷತ್ರಗಳ ಯೋಗ, ಬಲಾಬಲಗಳನ್ನು ವಿಚಾರಿಸಲು ಪ್ರಾರ್ಥಿಸಿದನು. (152) ಆಗ ಜ್ಯೋತಿಷ್ಯಾಶಾಸ್ತ್ರಜ್ಞರಾದ ಸಂಪ್ರದಾಯವನ್ನು ಅರಿತ ದೇವಗುರುವಾದ ಬ್ರಹಸ್ಪತ್ಯಾಚಾರ್ಯರು ಬಕುಲಾದೇವಿಯನ್ನು ಕುರಿತು ವೇಂಕಟೇಶನ ಗೋತ್ರ ನಕ್ಷತ್ರಗಳನ್ನು ತಿಳಿಸಲು ಹೇಳಿದರು. (154) ಆಗ ಬಕುಲೆಯು ಕಿಂಚಿತ್ ಕೋಪಗೊಂಡವಳಂತೆ 'ಸತ್ಯಸಂಪನ್ನರಾದ ಬ್ರಾಹ್ಮಣರೂ ಸಹ ಕಲಿಯುಗದಲ್ಲಿ ಮಿಥ್ಯಾಭಾಷಿಗಳಾಗುತ್ತಿರುವರು. ಶ್ರೀನಿವಾಸನ ಸಮಗ್ರವೃತ್ತಾಂತವನ್ನು ತಿಳಿದಿದ್ದರೂ ಸಹ ಹಿತಾಹಿತಗಳನ್ನು ಪರಿಗಣಿಸದೇ ಏನೂ ಸಹ ತಿಳಿಯದಂತಿರುವರು' ಎಂದು ನುಡಿದಳು. (155) ಆಗ ಶುಕಾಚಾರ್ಯರು 'ಬ್ರಾಹ್ಮಣರಲ್ಲಿ ಮತ್ತು ಕ್ಷತ್ರಿಯರಲ್ಲಿ ಎಂದಿಗೂ ಸಹ ಅವಿಶ್ವಾಸವನ್ನು ಮಾಡಬಾರದು. ಹಾಗೆ ಅವಿಶ್ವಾಸಮಾಡಿದಲ್ಲಿ ಧರ್ಮಾಧರ್ಮಗಳು ವ್ಯತ್ಯಸ್ತವಾಗುವವು.

ಶ್ರೀಶುಕ ಉವಾಚ–

'ಅವಿಶ್ವಾಸಸ್ತು ವಿಪ್ರಾಣಾಂ ಕ್ಷತ್ರಿಯಾಣಾಂ ವರಾನನೇ ॥156॥

ಧರ್ಮೋಽಪ್ಯಧರ್ಮತಾಮೇತಿ ಹ್ಯಧರ್ಮೋ ಧರ್ಮತಾಂ ಗತಃ ।
ತಸ್ಮಾತ್ತ್ವಯಾ ಮಹಾಭಾಗೇ ಕಥಿತವ್ಯಂ ಹಿತಾಹಿತಮ್' ॥157॥

ಬಕುಲಾ ಉವಾಚ–

'ನಕ್ಷತ್ರಂ ಶ್ರವಣಂ ತಸ್ಯ ಗೋತ್ರಂ ವಾಸಿಷ್ಠಸಂಜ್ಞಕಮ್ ।
ಊಚುಃ ಪುರಾತನಾ ಮತ್ಸ್ಯಕೂರ್ಮಕೃಷ್ಣಾದಿರೂಪಿಣಃ' ॥158॥

ಬಕುಲಾವಚನಾಂತೇ ತು ಸಂತೋಷಾತ್ ಸಪುರೋಹಿತಃ ।

ರಾಜೋವಾಚ–

'ಗೋತ್ರಮತ್ರೇರ್ಮಹಾಭಾಗ ನಕ್ಷತ್ರಂ ಮೃಗಶೀರ್ಷಕಮ್ ॥159॥

ಉಭಯೋರ್ವಚನಂ ಶ್ರುತ್ವಾ ಗುರುರ್ಯೋಗಂ ವಿಚಿಂತ್ಯ ಸಃ ।
ಹರ್ಷೋದ್ರಿಕ್ತಮನಾ ಭೂತ್ವಾ ಸತ್ಯಮಾಹ ಮಹಾಮತಿಃ ॥160॥

ಗುರುರುವಾಚ–

'ನಾಡೀಕೂಟಂ ವಿಶೇಷೇಣ ಸೂತ್ರಕೂಟಂ ಚ ಭೂಮಿಪ ।
ಯೋನಿಕೂಟಂ ಚಾನುಕೂಲಂ ಗ್ರಹಾಶ್ಚ ಶುಭದರ್ಶನಾಃ ॥161॥

ಸರ್ವಂ ವಿಚಾರ್ಯ ಭೂಪಾಲ ಸ್ವಾರ್ಥಭಾವಂ ಸಮಾಶ್ರಿತಃ ।

ಆದ್ದರಿಂದ ಹಿತಾಹಿತವನ್ನು ಲಕ್ಷ್ಯದಲ್ಲಿರಿಸಿ ಶ್ರೀನಿವಾಸನ ಗೋತ್ರನಕ್ಷತ್ರಗಳನ್ನು ತಿಳಿಸು' ಎಂದು ಹೇಳಿದರು. (157) ಬಕುಲೆಯು ಶ್ರೀನಿವಾಸನು ವಸಿಷ್ಠಗೋತ್ರದವನಾಗಿದ್ದು ಅವನದು ಶ್ರವಣ ನಕ್ಷತ್ರ, ಪುರಾಣಕೋವಿದರು ಇವನನ್ನು ಮತ್ಸ್ಯಕೂರ್ಮಾದಿ ಅವತಾರಗಳನ್ನು ಧರಿಸಿದವನೆಂದು ನುಡಿಯುವರು ಎಂದು ವರನ ಗೋತ್ರೇತಿಹಾಸವನ್ನು ತಿಳಿಸಿದಳು. (158) ಅನಂತರ ಆಕಾಶರಾಜನೂ ಸಹ ಪದ್ಮಾವತಿಯದ್ದು ಅತ್ರಿಗೋತ್ರ, ಮೃಗಶಿರಾ ನಕ್ಷತ್ರವೆಂದು ತಿಳಿಸಿದನು. (159) ಇವರೀರ್ವರ ಗೋತ್ರನಕ್ಷತ್ರಗಳನ್ನು ಮೇಳೈಸಿ ನೋಡಿದ ಜ್ಯೋತಿಃಶಾಸ್ತ್ರಜ್ಞರಾದ ಬೃಹಸ್ಪತ್ಯಾಚಾರ್ಯರು ಅತ್ಯಂತ ಸಂತೋಷದಿಂದ "ಗ್ರಹಕೂಟ, ನಾಡಿಕೂಟ, ರಜ್ಜುಕೂಟ, ಯೋನಿಕೂಟ, ವಧು–ವರರ ಬಲ ಅತ್ಯಂತ ಉತ್ತಮವಾಗಿವೆ. ಇವರೀರ್ವರ ಜಾತಕವು ಚೆನ್ನಾಗಿ ಕೂಡಿ ಬರುವದರಿಂದ ಬಂಧುಮಿತ್ರರನ್ನು ವಿಚಾರಿಸಿ, ಶೀಘ್ರದಲ್ಲಿ ಕನ್ಯಾದಾನವನ್ನು

ಸಮ್ಮಂತ್ರ್ಯ ಬಂಧುಮಿತ್ರಾದ್ಯೈಃ ಕನ್ಯಾದಾನಂ ಕುರು ಪ್ರಭೋ' ॥163॥

ಏವಂ ಗುರುಮುಖಾಚ್ಛ್ರುತ್ವಾ ಪಿಚಾರ್ಯಾಶು ವಿಚಕ್ಷಣಃ ।
ಭಕ್ತ್ಯಾ ಪರಮಯಾ ರಾಜಾ ಸ್ವಾರ್ಯಭಾವಂ ಸಮಾಶ್ರಿತಃ ॥164॥

ಜ್ಞಾತಿಬಾಂಧವಸಂಬಂಧಿಸುಹೃನ್ಮಿತ್ರಜನೈರ್ವೃತಃ ।
ಮಂತ್ರಂ ಚಕಾರ ರಾಜೇಂದ್ರ ಕನ್ಯಾದಾನನಿಮಿತ್ತಕಮ್ ॥165॥

ತೇ ಸರ್ವೇ ಬಂಧುವರ್ಗಾಶ್ಚ ರಾಜಾನಂ ಪ್ರತ್ಯಪೂಜಯನ್ ।
ಸಭಾಂ ಚ ಕಾರಯಾಮಾಸ ರತ್ನಸಿಂಹಾಸನೇ ಸ್ಥಿತಃ ॥166॥

ವಾಚಯಿತ್ವಾಽಥ ಪುಣ್ಯಾಹಂ ಕನ್ಯಾನಿಶ್ಚಯಕಾರಣಾತ್ ।
ತಾಂಬೂಲಂ ದಕ್ಷಿಣಾಂ ಚಾದಾತ್ ಪೂಜಯಿತ್ವಾ ಗಣಾಧಿಪಮ್ ॥167॥

ಭುಜಮುದ್ಧೃತ್ಯ ರಾಜೇಂದ್ರಃ ಸಭಾಮಧ್ಯೇ ವಚೋಽಬ್ರವೀತ್ ।

ರಾಜೋವಾಚ–

'ಪದ್ಮಾವತೀಂ ಪ್ರದಾಸ್ಯಾಮಿ ಶ್ರೀನಿವಾಸಾಯ ಶಾರ್ಙ್ಗಿಣೇ ॥168॥

ಯೂಯಂ ಬಂಧುಗಣಾಶ್ಚಾತ್ರ ದಯಾಂ ಕುರುತ ಮಾಂ ಪ್ರತಿ' ।
ಪ್ರತಿಜ್ಞಾಮಕರೋದಿತ್ಥಂ ಕನ್ಯಾರ್ಥೇ ವೇಂಕಟೇಶಿತುಃ ॥169॥

ಮಾಡಿಕೊಡಬಹುದೆಂದು" ತಮ್ಮ ಒಪ್ಪಿಗೆಯನ್ನು ಸೂಚಿಸಿದರು.(160–163)

ವಾಗ್ದಾನ

ಗುರುಗಳ ಈ ಮಾತನ್ನು ಕೇಳಿದ ಆಕಾಶ ರಾಜನು ಚನ್ನಾಗಿ ಆಲೋಚಿಸಿ ತನ್ನ ಸಮಗ್ರ ಬಂಧು ಬಾಂಧವರೆಲ್ಲರನ್ನು, ಆಪ್ತೇಷ್ಟರನ್ನೂ ಎಲ್ಲರನ್ನು ಆಹ್ವಾನಿಸಿ, ಕನ್ಯಾದಾನಾರ್ಥವಾಗಿ ವಿಚಾರವನ್ನು ಮಾಡಿದನು (164–165) ಆಕಾಶರಾಜನ ಬಂಧು ಜನರೆಲ್ಲರೂ ಸಹ ಆಕಾಶರಾಜನನನ್ನು ಕೊಂಡಾಡುತ್ತಾ ಶ್ರೀನಿವಾಸನೊಂದಿಗೆ ಪದ್ಮಾವತಿಯ ವಿವಾಹವನ್ನು ಸಮ್ಮತಿಸಿದರು. ರಾಜನು ಕನ್ಯಾನಿಶ್ಚಯಾರ್ಥವಾಗಿ ಎಲ್ಲರನ್ನೂ ಆಮಂತ್ರಿಸಿ, ಕನ್ಯಾನಿಶ್ಚಯವನ್ನು ಮಾಡುವುದಕ್ಕಾಗಿ ಗಣಪತಿ ಪೂಜೆಯನ್ನು, ಪುಣ್ಯಾವಹವಾಚನೆಯನ್ನು ಮಾಡಿಸಿ, ತಾಂಬೂಲ ದಕ್ಷಿಣಾದಿಗಳನ್ನು ಯಥೇಚ್ಛವಾಗಿ ಬ್ರಾಹ್ಮಣರಿಗೆ ದಾನಮಾಡಿ, (167) ಸಭಾಮಧ್ಯದಲ್ಲಿ ತನ್ನ ಭುಜಗಳನ್ನು ಮೇಲಕ್ಕೆತ್ತಿ "ವೇಂಕಟಾಚಲಪತಿಯಾದ ಶಾರ್ಙ್ಗಪಾಣಿಯಾದ ಶ್ರೀಶ್ರೀನಿವಾಸನಿಗೆ ನನ್ನ ಪುತ್ರಿಯಾದ ಪದ್ಮಾವತಿಯನ್ನು ವಿವಾಹ ವಿಧಿಪೂರ್ವಕವಾಗಿ ದಾನ ಮಾಡಿಕೊಡುತ್ತೇನೆ.

ಸ ಚೋವಾಚ ಮಹಾರಾಜೋ ಗುರುಂ ಚಾಪಿ ಗುರುಪ್ರಿಯಃ ।

ರಾಜೋವಾಚ–

'ಕಿಂ ಕಾರ್ಯ ವದ ವಿಪ್ರೇಂದ್ರ ಸಂಕಲ್ಪಾನಂತರಂ ಮಯಾ' ॥170॥

ರಾಜಾನಮಬ್ರವೀದ್ರಾಜನ್ನಂಗಿರಾ ದೇವತಾಗುರುಃ ।

ಬೃಹಸ್ಪತಿರುವಾಚ–

'ವಿಲಿಖ್ಯ ಪತ್ರಿಕಾಂ ರಾಜನ್ ಶ್ರೀನಿವಾಸಾಯಾ ವಿಷ್ಣವೇ ॥171॥

ವಿಪ್ರಂ ಪ್ರೇಷಯ ರಾಜೇಂದ್ರ ತಸ್ಯಾಗಮನಕಾರಣಾತ್' ।
ಸ ಗುರೋರ್ವಾರ್ಕ್ಯಮಾಕರ್ಣ್ಯ ರಾಜಾ ಗುರುಮಭಾಷತ ॥172॥

ರಾಜೋವಾಚ–

'ಕಿಂ ಲೇಖ್ಯಂ ಪ್ರಾಕೃತೈರ್ವಿದ್ವನ್ನಪ್ರಾಕೃತಶರೀರಿಣಃ ।
ತಥಾಪಿ ಲೇಖನೀಯಂ ಯತ್ತದ್ಬ್ರೂಹಿ ಗುರುಸತ್ತಮ' ॥173॥

ಆಕಾಶರಾಜವಚನಂ ಶ್ರುತ್ವಾ ಗೀಷ್ಪತಿರಾದರಾತ್ ।
ಲಿಖಿತ್ವಾ ಬೋಧಯಾಮಾಸ ರಾಜ್ಞಸ್ತಸ್ಯ ಮಹಾತ್ಮನಃ ॥174।

ಬಂಧುಗಳಾದ ತಾವೆಲ್ಲರೂ ಈ ಕಾರ್ಯಕ್ಕಾಗಿ ನನ್ನ ಮೇಲೆ ಸಹಕರಿಸಿ ಸಮ್ಮತಿಸಿ ದಯೆಯುಳ್ಳವರಾಗಬೇಕು" (168–169) ಎಂದು ಪ್ರತಿಜ್ಞೆಯನ್ನು ಮಾಡಿದನು. ಅನಂತರದಲ್ಲಿ ಕನ್ಯಾದಾನ ಸಂಕಲ್ಪಾನಂತರದಲ್ಲಿ ಮುಂದೇನು ಮಾಡಬೇಕು? (170) ಎಂದು ಆಕಾಶರಾಜನು ಬೃಹಸ್ಪತ್ಯಾಚಾರ್ಯರನ್ನು ಪ್ರಶ್ನಿಸಿದಾಗ 'ಪರಮಾತ್ಮನಾದ ಶ್ರೀನಿವಾಸನನ್ನು ವಿವಾಹಾರ್ಥವಾಗಿ ಆಹ್ವಾನಿಸಲು ಅವನಿಗೊಂದು ವಿಜ್ಞಪ್ತಿ ಪತ್ರಿಕೆಯನ್ನು ಬರೆದು ಬ್ರಾಹ್ಮಣರ ಮೂಲಕವಾಗಿ ಕೊಟ್ಟುಕಳುಹಿಸು' ಎಂದು ಸೂಚಿಸಿದರು.(171–172)

ವಿವಾಹಪತ್ರಿಕಾಲೇಖನ

'ಅಪ್ರಾಕೃತ ಗುಣನಿಧಿಯಾದ ಆ ಪರಮಾತ್ಮನಿಗೆ ಅಲ್ಪರಾದ ಪ್ರಾಕೃತರಾದ ನಾವು ಏನೆಂದು ಪತ್ರವನ್ನು ಬರೆಯುವದು? ಆದರೂ ಸಹ ವಿವಾಹಾರ್ಥವಾಗಿ ಪತ್ರವನ್ನು ಹೇಗೆ ಬರೆಯಬೇಕೆಂಬುದನ್ನು ನನಗೆ ನೀವು ತಿಳಿಸಿರಿ. ಅದೇ ರೀತಿಯಾಗಿ ಬರೆಯುವೆನು' ಎಂದು ಆಕಾಶರಾಜನು ಪ್ರಾರ್ಥಿಸಿದಾಗ, ಆದರದಿಂದ ಪತ್ರದ ಒಕ್ಕಣೆಯನ್ನು ಆಕಾಶರಾಜನಿಗೆ ಬೃಹಸ್ಪತ್ಯಾಚಾರ್ಯರು ತಿಳಿಸಿದರು. (173–174) ಆಗ 'ಬೃಹಸ್ಪತ್ಯಾಚಾರ್ಯರ ಸೂಚನೆಯಂತೆ

ಗುರೂಪದಿಷ್ಟಮಾರ್ಗೇಣ ವಿಲಿಲೇಖ ಸ ಪತ್ರಿಕಾಮ್ ।
'ಅಪ್ರಾಕೃತಾಯ ನಿತ್ಯಾಯ ಸಚ್ಚಿದಾನಂದಮೂರ್ತಯೇ ॥175॥

ಸ್ವತಂತ್ರಾಯಾದ್ವಿತೀಯಾಯಾನಂತರೂಪಾಯ ಶಾರ್ಙ್ಗಿಣೇ ।
ಭಕ್ತಪ್ರಿಯಾಯ ಭಕ್ತೈಕವೇದ್ಯೋಪಾದೇಯರೂಪಿಣೇ ॥176॥

ದೇವಾಧಿದೇವಪೂಜ್ಯಾಯ ವಾಸುದೇವಾಯ ವಿಷ್ಣವೇ ।
ಶ್ರೀನಿವಾಸಾಯ ಕೃಷ್ಣಾಯ ವೇಂಕಟಾಚಲವಾಸಿನೇ ॥177॥

ಸಾಂಗೈಃ ಸರ್ವೈಶ್ಚ ವೇದಾದ್ಯೈರಾಗಮೈಃ ಸಪುರಾಣಕೈಃ ।
ಅವೇದಿತಾನಂತಗುಣಕರ್ಮಣೇ ಶ್ರೀಧರಾಯ ತೇ ॥178॥

ಆಶೀರ್ವಾದಂ ಕರಿಷ್ಯಾಮಿ ಬಂಧುತ್ವಾತ್ ತೇ ಸುರೋತ್ತಮ ।
ತ್ವತ್ಪಾದಪದ್ಮಸಂವೀಕ್ಷಾಕಾಮ ಆಕಾಶನಾಮಕಃ ॥179।

ತ್ವದಾಶ್ರಯಂ ಸಮಾಕಾಂಕ್ಷಂಲ್ಲೇಖಯಾಮ್ಯದ್ಯ ಮಾಧವ ।
ಸ್ತ್ರೀಪುತ್ರಭ್ರಾತೃಭಿಃ ಸಾಕಂ ಸರ್ವೇ ಕುಶಲಿನೋ ವಯಮ್ ॥180॥

ತ್ವದನುಗ್ರಹಮಾತ್ರೇಣ ವಸಾಮೋಽತ್ರ ಹರೇಃ ಪುರೇ ।

ಶ್ರೀನಿವಾಸನಿಗೆ ವಿವಾಹಪತ್ರಿಕೆಯನ್ನು ಲೇಖನವಮಾಡಿದನು. 'ಅಪ್ರಾಕೃತನೂ, ನಿತ್ಯನೂ, ಜ್ಞಾನಾನಂದಾದಿ ಗುಣಸ್ವರೂಪನೂ, ನಿರ್ದೋಷಿಯೂ, (175) ಸ್ವತಂತ್ರನೂ, ಸಮಾಧಿಕ ರಹಿತನೂ, ಶಾರ್ಙ್ಗಪಾಣಿಯೂ, ಅನಂತಾನಂತ ರೂಪಧಾರಿಯೂ, ಭಕ್ತಪ್ರಿಯನೂ, ಭಕ್ತ್ಯೇಕವೇದ್ಯನೂ, ಭಕ್ತ್ಯೇಕಗಮ್ಯನೂ, ಭಕ್ತರಿಂದ ಆರಾಧಿಸಲ್ಪಡುವವನೂ (176) ರಮಾಬ್ರಹ್ಮಾದಿ ದೇವಾದಿ ದೇವತೆಗಳಿಂದಲೂ ಸಹ ಪೂಜ್ಯನೂ, ಸಚ್ಚಿದಾನಂದ ಮೂರ್ತಿಯೂ, ಜಗತ್ತನ್ನು ವ್ಯಾಪಿಸಿರುವದರಿಂದ ವಾಸುದೇವನೆಂದು ಪ್ರಸಿದ್ಧನೂ, ವಿಷ್ಣುಸ್ವರೂಪಿಯೂ ಆದ ವೇಂಕಟ ಪರ್ವತದ ನಿವಾಸಿಯಾದ ಶ್ರೀಕೃಷ್ಣನ ರೂಪಿಯೂ, (177) ಲಕ್ಷ್ಮಿಪತಿಯೂ, ಷಡಂಗಗಳಿಂದ ಕೂಡಿದ ಸಮಸ್ತವೇದಗಳೂ ಪುರಾಣಗಳೂ ಮೊದಲಾದ ಶಾಸ್ತ್ರಗಳಿಂದ ತಿಳಿಯಲಸಾಧ್ಯನಾದ ಅಪರಿಮಿತ ಗುಣಗಳಿಂದಲೂ, ಕರ್ಮಗಳಿಂದಲೂ ಸದಾ ಶೋಭಿಸುತ್ತಿರುವ (178) ಶ್ರೀನಿವಾಸನಿಗೆ ಆಕಾಶರಾಜನಾದ ನಾನು ನಿನ್ನ ಪಾದಾರವಿಂದಗಳನ್ನು ಕಾಣಲು ಸರ್ವದಾ ಇಚ್ಛಿಸುತ್ತಿರುವವನಾಗಿ, ನೀನು ದೇವದೇವೋತ್ತಮನಾಗಿದ್ದರೂ ಸಹ ಬಂಧುವಾದ ಕಾರಣದಿಂದ ಆಶೀರ್ವಾದವನ್ನು ಮಾಡುತ್ತೇನೆ. (179) ಸರ್ವದಾ ನಿನ್ನ ಆಶ್ರಯವನ್ನು ಆಪೇಕ್ಷಿಸಿ ನಿನಗೆ ಈ ಲೇಖನವನ್ನು ಮಾಡುತ್ತಿದ್ದೇನೆ. ಸ್ತ್ರೀಯರು ಪುತ್ರ-ಭ್ರಾತೃಗಳಿಂದ ಸಮೇತರಾಗಿ ನಾವು ಕುಶಲಿಗಳಾಗಿ ಕೇವಲ

ಸರ್ವೇಷಾಂ ಭವತಾಂ ಕ್ಷೇಮಂ ಪತ್ರದ್ವಾರಾ ನಿಭೋಧಯ ॥181॥

ಚೈತ್ರಶುಕ್ಲತ್ರಯೋದಶ್ಯಾಮೇತತ್ಪತ್ರಂ ವಿಲಿಖ್ಯತೇ ।
ಕನ್ಯಾಂ ಪದ್ಮಾವತೀಂ ತುಭ್ಯಂ ದಾಸ್ಯಾಮೀತಿ ಮತಿರ್ಮಮ ॥182॥

ತಾಮಂಗೀಕುರು ಗೋವಿಂದ ವಿವಾಹವಿಧಿಪೂರ್ವಕಮ್ ।
ವೈಶಾಖಶುದ್ಧದಶಮೀಶುಕ್ರವಾರೇ ಶುಭೇ ದಿನೇ ॥183॥

ಬಂಧುಭಿಸ್ಸಹ ಸಂಪ್ರಾಪ್ಯ ಮಾಮುದ್ಧೃತ್ಯಾನುಗೈಸ್ಸಹ ।
ಅಧಿಕಂ ಲೇಖನೀಯಂ ತೇ ಕಿಮಸ್ತಿ ಪುರುಷೋತ್ತಮ ॥184॥

ಶುಕೋ ವೇತ್ತಿ ಗುರುರ್ವೇತ್ತಿ ಹೃದಯಂ ಮಮ ಸರ್ವದಾ ।
ಮಾ ಕುರುಷ್ವಾತ್ರ ಸಂದೇಹಂ ಕನ್ಯಾರ್ಥಂ ಪುರುಷೋತ್ತಮ ॥185॥

ಶುಕೋ ವದತಿ ತತ್ಸರ್ವಂ ತತ್ಸತ್ಯಂ ಕುರು ಕೇಶವ ॥186॥

ಇತ್ಯಾಶಿಷಃ ಸಂತು ಮಹಾನುಭಾವ ತೇ
ಸಮಸ್ತ ಕಲ್ಯಾಣಗುಣಾರ್ಣವ ಪ್ರಭೋ ।
ನಿತ್ಯಾಯ ಸತ್ಯಾಯ ಸುಖಸ್ವರೂಪಿಣೇ
ಸಮಸ್ತಲೋಕಪ್ರಭವೇ ಮಹಾತ್ಮನೇ' ॥187॥

ನಿನ್ನ ಅನುಗ್ರಹದಿಂದ ಉತ್ತಮ ರೀತಿಯಾಗಿ ಈ ನಾರಾಯಣಪುರದಲ್ಲಿ ವಾಸವಾಗಿದ್ದೇವೆ. ತಮ್ಮೆಲ್ಲರ ಕ್ಷೇಮವಾರ್ತೆ ಯನ್ನು ಪತ್ರದ ಮುಖಾಂತರವಾಗಿ ತಿಳಸುತ್ತಿರಬೇಕು.(180–181) ಚೈತ್ರಶುಕ್ಲ ತ್ರಯೋದಶಿಯಂದು ಈ ಪತ್ರವನ್ನು ಬರೆಯುತ್ತಿದ್ದೇನೆ. ನನ್ನ ಮಗಳಾದ ಕನ್ಯೆಯಾದ ಪದ್ಮಾವತಿಯನ್ನು ವಿವಾಹ ವಿಧಿಪೂರ್ವಕವಾಗಿ ನಿನಗೆ ಪ್ರದಾನ ಮಾಡಬೇಕೆಂದು ನಿಶ್ಚಿಯಿಸಿರುತ್ತೇನೆ. (182) ಅದಕ್ಕನುಗುಣವಾಗಿ ವೈಶಾಖ ಶುದ್ಧ ದಶಮಿ ಶುಕ್ರವಾರದ ಶುಭ ಮೂಹೂರ್ತದಲ್ಲಿ ಬಂಧುಗಳೆಲ್ಲರಿಂದ ಸಮೇತನಾಗಿ ಇಲ್ಲಿಗೆ ಬಂದು, ಅವಳನ್ನು ವಿವಾಹವಿಧಿಪೂರ್ವಕವಾಗಿ ಅಂಗೀಕರಿಸಿ, ನನ್ನನ್ನು ಅನುಗ್ರಹಮಾಡು. (183) ಪುರುಷೋತ್ತಮನಾದ ನಿನ್ನ ಸನ್ನಿಧಿಗೆ ಅಧಿಕ ಲೇಖನವು ಅನವಶ್ಯಕವಾಗಿರುವುದು. (184) ನನ್ನ ಹೃದಯವನ್ನು ಶುಕಾಚಾರ್ಯರು, ಬೃಹಸ್ಪತ್ಯಾಚಾರ್ಯರು ಬಲ್ಲವರಾರಿಗಿದ್ದಾರೆ. ಕನ್ಯೆಯನ್ನು ಸ್ವೀಕಾರಮಾಡುವ ವಿಷಯದಲ್ಲಿ ಯಾವ ಸಂದೇಹವನ್ನೂ ಮಾಡಬೇಡ. (185) ಶುಕಾಚಾರ್ಯರು ಎಲ್ಲವನ್ನು ನಿನಗೆ ಪ್ರತ್ಯಕ್ಷವಾಗಿ ತಿಳಿಸುತ್ತಾರೆ. ಅದೆಲ್ಲವನ್ನೂ ಹೇ ಕೇಶವನೇ ! ಸತ್ಯವನ್ನಾಗಿ ಮಾಡು. (186) ಸಮಸ್ತ ಕಲ್ಯಾಣಗುಣಪರಿಪೂರ್ಣನಾದ, ಮಹಾನುಭಾವನಾದ, ನಿತ್ಯನಾದ, ಸತ್ಯನಾದ, ನಿತ್ಯ

ಇತ್ಥಂ ಲಿಖಿತ್ವಾ ವರಪತ್ರಿಕಾಂ ಶುಭಾಮ್
ಆಕಾಶರಾಜೋ ಜಗದೀಶಸನ್ನಿಧಿಮ್ ।
ಸಂಪ್ರೇಷಯಾಮಾಸ ಶುಕಂ ಮಹಾಂತಂ
ಸಪುತ್ರಮಿತ್ರೈಃ ಸಹಭಾಂದವಾನುಗಃ ॥188॥

ಕ್ರೋಶಮಾತ್ರಮುಪಾಗಮ್ಯ ಶುಕಂ ವಚನಮಬ್ರವೀತ್ ।

ರಾಜೋವಾಚ–

'ಯೇನ ಕೇನ ಪ್ರಕಾರೇಣ ತಸ್ಯ ಚಿತ್ತಂ ವಶೀಕರು ॥189॥

ಕೋಟಿಂ ವಾಽಪ್ಯರ್ಬುದಂ ವಾಽಪಿ ಲಕ್ಷಂ ವಾಽಯುತಮೇವ ವಾ ।
ದಾಸ್ಯಾಮಿ ದ್ರವ್ಯನಿಚಯಂ ನಾತ್ರ ಕಾರ್ಯಾ ವಿಚಾರಣಾ' ॥190॥

ಏವಮುಕ್ತೋ ಮಹೀಪೇನ ಶುಕಃ ಶೇಷಾಚಲಂ ಪ್ರತಿ ।
ಗಮನಾಯ ಮತಿಂ ಚಕ್ರೇ ಶ್ರೀನಿವಾಸದಿದೃಕ್ಷಯಾ ॥191॥

ಮಧ್ಯಂ ಗತೇ ಚಿತ್ರಭಾನೌ ಮಹಾತ್ಮಾ
ಸಮಾಗತಸ್ತತ್ರ ಶುಕಃ ಸಶಿಷ್ಯಃ ।
ಹರೇರ್ಜನನ್ಯಾನುಗತೋ ವಿರಾಗೀ
ತದ್ದರ್ಶನಾಹ್ಲಾದಗತಾದ್ಧಕ್ಲೇಶಃ ॥192॥

ಸುಖಸ್ವರೂಪಿಯಾದ, ಸಮಸ್ತ ಲೋಕಗಳಿಗೆ ಪ್ರಭುವಾದ, ಮಹಾತ್ಮನಾದ ಹೇ ಪರಮಾತ್ಮನೇ ! ನಿನಗೆ ಆಶೀರ್ವಾದಗಳಿರಲಿ" ಎಂದು ಲೇಖನವನ್ನು ಮಾಡಿ ಪತ್ರವನ್ನು ಶುಕಾಚಾರ್ಯರ ಮುಖಾಂತರವಾಗಿ ಕಳುಹಿಸಲು ಅವರ ಕೈಯಲ್ಲಿ ಕೊಟ್ಟನು. (187–188)

### ಶುಕಾಚಾರ್ಯರಿಂದ ಶ್ರೀನಿವಾಸ ದರ್ಶನ–ಪತ್ರಪ್ರೇಷಣ

ಅನಂತರ ವೇಂಕಟಗಿರಿಗೆ ಹೊರಟ ಶುಕಾಚಾರ್ಯರನ್ನು ಸ್ವಲ್ಪ ದೂರದ ವರೆಗೆ ಹಿಂಬಾಲಿಸಿದ ಆಕಾಶರಾಜನು "ಹೇ ಶುಕಾಚಾರ್ಯರೇ ! ಯಾವ ರೀತಿಯಿಂದಲೇ ಆಗಲಿ ಭಗವಂತನಾದ ಶ್ರೀನಿವಾಸನ ಮನಸ್ಸನ್ನು ವಶೀಕರಿಸಿಕೊಳ್ಳಿರಿ. (189) ಹತ್ತುಸಾವಿರ, ಕೋಟಿ, ಅರ್ಬುದ ಬೇಕಾದಷ್ಟು ದ್ರವ್ಯಗಳನ್ನು ಕೊಟ್ಟು ಕನ್ಯಾದಾನವನ್ನು ಮಾಡಿಕೊಡುವೆನು. ಈ ವಿಷಯದಲ್ಲಿ ಯಾವ ಸಂದೇಹವೂ ಬೇಡ"ಎಂದು ಶುಕಾಚಾರ್ಯರನ್ನು ಬಿಳ್ಕೊಟ್ಟು ಶ್ರೀನಿವಾಸನ ಸನ್ನಿಧಿಗೆ ಕಳುಹಿಸಿಕೊಟ್ಟನು. (190) ಶುಕಾಚಾರ್ಯರು ಬಹುಸಂತೋಷದಿಂದ ಶ್ರೀನಿವಾಸನ ದರ್ಶನಾರ್ಥವಾಗಿ ಪತ್ರವನ್ನು ತೆಗೆದುಕೊಂಡು ವೇಂಕಟಗಿರಿಗೆ ಹೊರಟರು. (191) ಶಿಷ್ಯರಿಂದ ಸಹಿತರಾದ, ಪರಮ ವಿರಾಗಿಗಳಾದ

ಅಂಬಾಮವೀಕ್ಷ್ಯ ಚಾಯಾಂತೀಂ ವೇಂಕಟಾದ್ರಿಶಿಖಾಮಣಿಃ ।
ಮಾತಾ ನ ಚಾಗತಾ ಕಸ್ಮಾದಿತಿ ಚಿಂತಾಪರೋಽಭವತ್ ॥193॥

ಏತಸ್ಮಿನ್ನೇವ ಕಾಲೇ ತು ಕೃಷ್ಣದ್ವೈಪಾಯನಾತ್ಮಜಮ್ ।
ದದರ್ಶ ಸಶಿರಃಪಾಣಿಂ ಕೃತಕಾರ್ಯವಿನಿಶ್ಚಯಮ್ ॥

ಶುಕಂ ಪ್ರಾಹಾತಿಭಕ್ತ್ಯೈವ ಚಾಸನಾದುತ್ಥಿತೋ ಹರಿಃ ॥194॥

ಶ್ರೀನಿವಾಸ ಉವಾಚ–

'ಕಾರ್ಯಂ ಮದೀಯಂ ವಿಪ್ರೇಂದ್ರ ಪಕ್ವಂ ವಾಽಪಕ್ವಮೇವ ವಾ'॥

ಶ್ರೀಶುಕ ಉವಾಚ–

'ಕಾರ್ಯಂ ತವ ದಯಾಸಿಂಧೋ ಪಕ್ವಮೇವ ನ ಸಂಶಯಃ' ।
ಶುಭಂ ವಾಕ್ಯಂ ತತಃ ಶ್ರುತ್ವಾ ದಂಡವತ್ಪ್ರಣಿಪತ್ಯ ತಮ್ ॥196॥

ಸಮಾಲಿಂಗ್ಯ ಶುಕಂ ಕೃಷ್ಣೋ ಭಕ್ತ್ಯಾ ಹರ್ಷವಶಂ ಗತಃ ।
ಅತಿಚಿತ್ರಚರಿತ್ರಾತ್ಮಾ ಶುಕಮಾಹ ಮಹೀಪತೇ ॥197॥

ಶ್ರೀನಿವಾಸ ಉವಾಚ–

ಶುಕಾಚಾರ್ಯರು ಸೂರ್ಯನು ನಡುನೆತ್ತಿಗೆ ಬರುತ್ತಿರಲು (ಮಧ್ಯಾಹ್ನ ಸಮಯದಲ್ಲಿ) ಶೇಷಾಚಲಕ್ಕೆ ಬಂದು, ಅಲ್ಲಿ ಶ್ರೀನಿವಾಸನನ್ನು ನೋಡಿದ ಸಂತೋಷದಿಂದ ತನ್ನ ಮಾರ್ಗಾಯಾಸವನ್ನೆಲ್ಲವನ್ನು ಮರೆತರು. (193)

ವಿವಾಹಘಟನಾರ್ಥವಾಗಿ ವೇಂಕಟಾದ್ರಿಯಿಂದ ನಾರಾಯಣ ಪುರಕ್ಕೆ ತೆರಳಿದ ತನ್ನ ತಾಯಿಯು ಬಹು ಕಾಲದವರೆಗೆ ಬರದಿರುವುದರಿಂದ ಚಿಂತಾಮಗ್ನನಾದ ಶ್ರೀನಿವಾಸನು, ತಲೆಯಮೇಲೆ ಕೈಮುಗಿದುಕೊಂಡು ಕಾರ್ಯನಿಶ್ಚಯವನ್ನು ಮಾಡಿಕೊಂಡು ಬರುತ್ತಿರುವ ಶುಕಾಚಾರ್ಯರನ್ನು ನೋಡಿ, ಸಂತೋಷಗೊಂಡು ತಾನು ಕುಳಿತಿದ್ದ ಆಸನದಿಂದ ಎದ್ದು ಶುಕಾಚಾರ್ಯರನ್ನು ಕುರಿತು 'ನನ್ನ ಕಾರ್ಯವು ಪಕ್ವವಾಯಿತೂ ಇಲ್ಲವೋ? (ಹಣ್ಣೋ ಕಾಯಿಯೋ) ಎಂದು ತನ್ನ ಕೆಲಸವಾದ ಬಗ್ಗೆ ಪ್ರಶ್ನಿಸಿದನು. (194–195) ಅದಕ್ಕುತ್ತರವಾಗಿ ಶುಕಾಚಾರ್ಯರು "ನಿನ್ನ ಕಾರ್ಯವು ಪಕ್ವವೇ ಆಗಿದೆ. ಇದರಲ್ಲಿ ಯಾವ ಸಂಶಯವೂ ಬೇಡ" ಎಂದು ದಂಡವತ್ಪ್ರಣಾಮ ಮಾಡಿ ತಿಳಿಸಿದಾಗ ಶ್ರೀನಿವಾಸನು ಶುಕಾಚಾರ್ಯರನ್ನು ಆಲಿಂಗಿಸಿದನು. (196) ಹರ್ಷೋಪೇತನಾದ ಶ್ರೀನಿವಾಸನು ಲೋಕವಿಡಂಬನೆಯನ್ನು ಮಾಡುತ್ತಾ ಶುಕಾಚಾರ್ಯರನ್ನು

ವದಂತಿ ಲೋಕಾ ಅನೃತಾನ್ ಸಹಸ್ರಾನ್
ವಿವಾಹಕಾಮಾ ನರಜನ್ಮನೋ ಯೇ ।
ತೇ ಯಾಂತಿ ಮೇ ಧಾಮ ಕಿಮತ್ರ ವಾಚ್ಯಂ
ಜಗತ್ಕುಟುಂಬಸ್ಯ ವಿವಾಹಕಾಮೇ ॥198॥

ನರೋ ಬಿಭರ್ತಿ ಸ್ವಸುತಂ ಸ್ವಭಾರ್ಯಾಂ ಸ್ವಜನಂ ಗೃಹಮ್ ।
ಅಹಂ ಬಿಭರ್ಮಿ ಸ್ವಂ ಪುತ್ರಂ ಸ್ವಭಾರ್ಯಾಂ ಸ್ವಜನಂ ತಥಾ ॥199॥

ಬ್ರಹ್ಮಾಂಡಂ ಭವನಂ ವಿದ್ವನ್ ಬ್ರಹ್ಮಾ ಮನ್ನಾಭಿಸಂಭವಃ ।
ಯಾ ಲಕ್ಷ್ಮೀರ್ಮಮ ಕಲ್ಯಾಣೀ ಯೇ ಚಾನ್ಯೇ ಮಮ ಔರಸಾಃ ॥200॥

ಚತುರ್ನವತಿಲಕ್ಷಂ ಚ ಜೀವರಾಶಿರಸಂಖ್ಯಯಾ ।
ಏತೇಷಾಂ ರಕ್ಷಣೇ ದೀಕ್ಷಾಬದ್ಧೋಽಹಂ ಮುನಿಸತ್ತಮ ॥201॥

ಮಹಾಕುಟುಂಬಯುಕ್ತಸ್ಯ ಮಮ ಕಲ್ಯಾಣಕಾರಣಾತ್ ।
ಯನ್ಮಿಥ್ಯಾಭಾಷಿತಂ ರಾಜ್ಞಸ್ತ್ವಯಾಽದ್ಯ ಮುನಿಸತ್ತಮ ॥202॥

ತ್ವತ್ಕೃತಸ್ಯೋಪಕಾರಸ್ಯ ಪ್ರತಿದಾತುಂ ನ ವಿದ್ಯತೇ ।

ಕುರಿತು (197) 'ಪರೋಪಕಾರಾರ್ಥವಾಗಿ ವಿವಾಹ ಮಾಡಿಸಹೊರಟ ಸಾಮಾನ್ಯ ಜನರು ವಿವಾಹವಾಗುವದರ ಗೋಸ್ಕರವಾಗಿ ಸಾವಿರಾರು ಸುಳ್ಳುಗಳನ್ನು ನುಡಿಯುವವರಾದರೂ ಸಹ ಯಾವದೇ ಪಾಪವನ್ನು ಹೊಂದಲಾರದೇ ನನ್ನ ಲೋಕವನ್ನು ಅವರು ಹೊಂದುವರು. ವಿವಾಹವು ಘಟಿಸುವಂತೆ ಮಾಡುವದು ಅಷ್ಟು ಪುಣ್ಯಕರವು. ಇನ್ನು ವಿವಾಹವಾಗ ಬಯಸಿದ ಜಗತ್ಕುಟುಂಬಿಯಾದ ನನ್ನ ವಿವಾಹವನ್ನೇ ನಿಶ್ಚಯಿಸಿದ ನಿಮ್ಮ ಬಗ್ಗೆ ಹೇಳುವದೇನಿದೆ? (198) ಸಾಮಾನ್ಯ ಮನುಷ್ಯನು ತನ್ನ ಮಗ, ಹೆಂಡತಿ, ತನ್ನ ಜನರು, ತಮ್ಮ ಮನೆ ಇವುಗಳನ್ನು ರಕ್ಷಿಸಿದರೆ ನಾನು ಸಹ ನನ್ನ ಮಗ, ನನ್ನ ಹೆಂಡತಿ, ನನ್ನ ಜನರು, ನನ್ನ ಮನೆಗಳನ್ನು ರಕ್ಷಿಸುವೆನು. (199) ಆದರೆ ಇಡೀ ಬ್ರಹ್ಮಾಂಡವೇ ನನ್ನ ಮನೆ. ಸೃಷ್ಟಿಕರ್ತೃವಾದ ಚತುರ್ಮುಖ ಬ್ರಹ್ಮನು ನನ್ನ ನಾಭಿಕಮಲದಿಂದುದ್ಭವಿಸಿದ ಮಗನು. ಜಗನ್ಮಾತೆಯಾದ ಮಹಾಲಕ್ಷ್ಮಿಯು ನನ್ನ ಮಡದಿಯು. ವಾಯ್ವಾದಿಗಳು ನನ್ನ ಔರಸ ಪುತ್ರರೆನಿಸಿರುವರು. (200) 94 ಲಕ್ಷ ಜೀವಪ್ರಭೇದದಿಂದ ಕೂಡಿದ ಅಸಂಖ್ಯ ಜೀವರಾಶಿಗಳು– ಇವರನ್ನು ರಕ್ಷಿಸುವ ಕಾರ್ಯದಲ್ಲಿ ನಾನು ದೀಕ್ಷಾಬದ್ಧನಾಗಿರುವೆನು. (201) ಇಂತಹ ಮಹಾಕುಟುಂಬಿಯಾದ ನನ್ನ ವಿವಾಹಾರ್ಥವಾಗಿ ನೀನೇನಾದರೂ ಸುಳ್ಳುನುಡಿದಿದ್ದಲ್ಲಿ ಅದೂ ಸಹ ಪುಣ್ಯಕರವೇ ಆಗಿರುವದು. (202) ನಿನ್ನ

ತಥಾಪಿ ತವ ದಾಸ್ಯಾಮಿ ಶರೀರಾಲಿಂಗನಂ ಮುನೇ ॥203॥

ಮಚ್ಛರೀರಾದ್ಗರಿಷ್ಠಂ ತು ನ ವಿಜಾನಾಮಿ ತೇ ಶುಭಮ್' ।
ಏವಮುಕ್ತ್ವಾಂಗಸಂಗಂ ಚ ತಸ್ಯಾದಾತ್ಪುರುಷೋತ್ತಮಃ ॥204॥

'ತ್ವದೀಯ ಪುಣ್ಯಸ್ಯ ನ ಪಾರಮಿಕ್ಷೇ
ಮದೀಯಸಂಗಂ ತವ ಪುಣ್ಯಸಂಭವಮ್ ।
ತ್ವಯಾ ತಥಾ ಕರ್ಮ ಕೃತಂ ಯಥಾ ಪುರಾ
ಸೀತಾನಿಮಿತ್ತಂ ಕೃತವಾನ್ ಕಪೀಶ್ವರಃ ॥205॥

ಸೀತಾ ನಿಮಿತ್ತಂ ಯತ್ಕರ್ಮ ಕೃತವಾನ್ಮಾರುತಾತ್ಮಜಃ ।
ತಸ್ಯ ತೃಪ್ತೋ ಮಹೀದೇವ ದತ್ತವಾನ್ ಸಹಭೋಜನಮ್॥206॥

ಸತ್ಯಲೋಕಾಧಿಪತ್ಯಂ ಚ ಸೀತಾವಾರ್ತಾವಲಂಬಿನಃ ।
ತಸ್ಮಾದ್ಗರಿಷ್ಠಂ ತೇ ಕರ್ಮ ಮುನೇ ತಾಪಸಪುಂಗವ' ॥207॥

ಏವಮುಕ್ತ್ವಾ ಸುಭದ್ರಾಣಿ ವಾಕ್ಯಾನಿ ವಿವಿಧಾನಿ ಚ ।
ತತಃ ಪ್ರೋವಾಚ ಭಗವಾನ್ 'ಕಕ್ಷೇ ಕಿಂ ಭಾತಿ ಭಾನುವತ್॥208।

ಶ್ರೀಶುಕ ಉವಾಚ–

ಉಪಕಾರಕ್ಕೆ ಪ್ರತಿಯಾಗಿ ಕೊಡಲು ನನ್ನ ಬಳಿ ನನ್ನ ಶರೀರವನ್ನು ಬಿಟ್ಟು ಬೇರೇನೂ ಇರುವದಿಲ್ಲ. ಜಗತ್ತಿನಲ್ಲಿ ಅದಕ್ಕಿಂತ ಶ್ರೇಷ್ಠ ಪದಾರ್ಥವೂ ಸಹ ಯಾವದೂ ಇರುವದಿಲ್ಲ. ಅದನ್ನೇ ನಾನು ನಿನಗೆ ಕೊಡುವೆನು' ಎಂದು ಹೇಳಿ ಶುಕಾಚಾರ್ಯ ರನ್ನಾಲಿಂಗಿಸಿ ಕೊಂಡು ತನ್ನ ಅಂಗಸಂಗವನ್ನು ಅವರಿಗೆ ದಯಪಾಲಿಸಿ (204) 'ನಿನ್ನ ಪುಣ್ಯಕ್ಕೆ ಎಣೆಯೇ ಇರುವದಿಲ್ಲ. ನನ್ನ ಅಂಗಸಂಗ ವೆಂಬುದು ನಿನ್ನ ಪುಣ್ಯದ ಫಲವೆಂದು ತಿಳಿ. ಹಿಂದೆ ಸೀತೆಯ ಗೋಸ್ಕರವಾಗಿ ಇದೇರೀತಿ ಸೇವೆಯನ್ನು ಮಾಡಿದ ಹನುಮಂತನಿಗೆ ನಾನು ನನ್ನ ಆಲಿಂಗನವನ್ನು ದಯಪಾಲಿಸಿದ್ದೆನು. (205) ಅವನಾದರೋ ನನ್ನ ಹೆಂಡತಿಯಾದ ಸೀತೆಯನ್ನು ಪುನಃ ದೊರೆಯಲು ಸಹಾಯವನ್ನು ಮಾಡಿದ್ದನು. ಸೀತೆಯ ವೃತ್ತಾಂತವನ್ನು ತಿಳಿಸೋಣ ಮಾತ್ರದಿಂದ ತೃಪ್ತನಾದ ನಾನು ಅವನಿಗೆ ಸಹಭೋಗವನ್ನು ಕೊಡುವದಲ್ಲದೇ ಸತ್ಯಲೋಕಾಧಿಪತ್ಯವನ್ನೂ ಸಹ ಅನುಗ್ರಹಿಸಿರುವೆನು. ನಿನ್ನ ಕಾರ್ಯವಾದರೋ ಇನ್ನೂ ಮಹತ್ತ್ವದ್ದು. ಅವನು ಇದ್ದ ಹೆಂಡತಿಯನ್ನೇ ಹುಡುಕಿ ಕೊಟ್ಟಿರುವನು. ನೀನು ನನಗೆ ಹೆಂಡತಿಯನ್ನೇ ವಿವಾಹದ ಮೂಲಕವಾಗಿ ದೊರಕಿಸಿಕೊಡುತ್ತಿರುವಿ. ಆದ್ದರಿಂದ ನಿನ್ನದ್ದು ಗರಿಷ್ಠಸೇವೆಯೆನಿಸುವದು' (206–207) ಎಂದು ಶುಕಾಚಾರ್ಯರಿಗೆ

'ರಾಜರಾಜೇನ ಲಿಖಿತಾ ಪತ್ರಿಕಾ ಪುರಷೋತ್ತಮ ।
ಪ್ರೋಕ್ತಂ ತ್ವಯಾ ಮಹಾಭಾಗ ಪೂರ್ವಮೇವಾಸ್ಯ ಕಾರಣಮ್' ॥209॥
ಇತ್ಯುಕ್ತಃ ಸನ್ ರಮಾಕಾಂತಃ ಪತ್ರಿಕಾಂ ಶಿರಸಾ ದಧೌ ।

ಶ್ರೀನಿವಾಸ ಉವಾಚ–

'ಕುಶಲೀ ವರ್ತತೇ ರಾಜಾ ತಸ್ಯ ಭಾರ್ಯಾ ಪತಿವ್ರತಾ ॥210॥
ಭ್ರಾತಾ ತಸ್ಯ ಮಹಾಭಾಗಃ ಪುತ್ರಸ್ತಸ್ಯ ವಿಶಾಂಪತೇಃ' ।

ಶ್ರೀಶುಕ ಉವಾಚ–

'ಸರ್ವಂ ತು ಕುಶಲಂ ತಸ್ಯ ಭಗವನ್ಭೂತಭಾವನ' ॥211॥
ಏವಮುಕ್ತೋ ಪಪಾಠಾಥ ಪತ್ರಿಕಾಂ ಪುರುಷೋತ್ತಮಃ ।
ಪಠನ್ ಹೃಷ್ಟಮನಾ ಭೂತ್ವಾ ವಾಚಮೂಚೇ ರಮಾಪತಿಃ ॥212॥

ಶ್ರೀನಿವಾಸ ಉವಾಚ–

'ಅವಿದಿತ್ವಾ ಕುಲಂ ಗೋತ್ರಂ ನಾಮ ಸಂಸ್ಥಾನಮಂದಿರಮ್ ।
ಕಥಂ ದಾಸ್ಯತಿ ರಾಜೇಂದ್ರಃ ಕನ್ಯಾಂ ತಾಂ ಮೇ ಮಹೀಸುರ ॥213॥

ಸಂತೋಷವಾಗುವಂತೆ ನುಡಿದು 'ನಿಮ್ಮ ಕಂಕುಳಲ್ಲಿ ಸೂರ್ಯನಂತೆ ಹೊಳೆಯುತ್ತಿರುವದೇನು? ಎಂದು ಪ್ರಶ್ನಿಸಿದನು. (208) ಆಗ ಶುಕಾಚಾರ್ಯರು 'ರಾಜಾಧಿರಾಜನಾದ ಆಕಾಶರಾಜನು ಹಿಂದೆ ತಿಳಿಸಿದಂತೆ ವಿವಾಹಾರ್ಥವಾಗಿ ಪತ್ರವನ್ನು ಬರೆದು ಕಳುಹಿಸಿರುವನು' ಎಂದು ನುಡಿದು ರಾಜನಿಂದ ಪ್ರದತ್ತವಾದ ಪತ್ರಿಕೆಯನ್ನು ಶ್ರೀನಿವಾಸನಿಗೆ ಸಮರ್ಪಿಸಿದರು. (209) ಅದನ್ನು ನೋಡಿದ ಶ್ರೀನಿವಾಸನು ಲೋಕವಿಡಂಬನೆಯನ್ನು ಮಾಡುತ್ತಾ ತನ್ನ ವಿವಾಹ ಪತ್ರಿಕೆಯನ್ನು ಶಿರಸಾ ಧರಿಸಿ ಆಕಾಶರಾಜ, ಅವನ ತಮ್ಮ, ಪತಿವ್ರತೆಯಾದ ಅವನ ಮಡದಿ, ಅವನ ಮಗ ಎಲ್ಲರ ಕ್ಷೇಮವನ್ನು ವಿಚಾರಿಸಿದಾಗ ಶುಕಾಚಾರ್ಯರು 'ಸಮಗ್ರ ಜೀವರಾಶಿಗಳಿಗೆ ಸುಖದಾಯಕನಾದ ನಿನ್ನ ಅನುಗ್ರಹದಿಂದ ಎಲ್ಲರೂ ಕುಶಲಿಗಳಾಗಿರುವರು' ಎಂದು ನುಡಿದರು. (210–11) ಅನಂತರ ಪುರುಷೋತ್ತಮನಾದ ಶ್ರೀನಿವಾಸನು ಪತ್ರಿಕೆಯನ್ನು ಓದಿ ಅತ್ಯಂತ ಸಂತೋಷವನ್ನು ಹೊಂದಿ 'ನನ್ನ ಹೆಸರು, ಕುಲ, ಗೋತ್ರ, ತಂದೆ, ತಾಯಿ, ಆವಾಸ ಇವುಗಳನ್ನಾವದನ್ನೂ ತಿಳಿಯದ ರಾಜನು ನನಗೆ ಕನ್ಯೆಯನ್ನು ವಿವಾಹಮಾಡಲು ಹೇಗೆ ಒಪ್ಪಿರುವನು? ಇದು ಅತ್ಯಂತ ಆಶ್ಚರ್ಯವೆನಿಸುವದು' ಎಂದು ನುಡಿದನು. (213) ಆಗ ಶುಕಾಚಾರ್ಯರು 'ಜನನ ಮರಣ ವಿದೂರನಾದ ನಿನಗೆ ಕುಲ, ಗೋತ್ರ, ತಂದೆ, ತಾಯಿ,

ಶ್ರೀಶುಕ ಉವಾಚ–

'ನ ಕುಲಂ ನ ಚ ಗೋತ್ರಂ ತೇ ನ ಜನ್ಮ ಮರಣಂ ಹರೇ ।
ನ ಜರಾ ನ ಚ ವೃದ್ಧಿಶ್ಚ ನ ಚ ಸ್ಥಾನಂ ನ ಚಾಶ್ರಯಃ ॥214॥

ವಿಡಂಬಮಾತ್ರಂ ಗೋವಿಂದ ಕುರುಷೇ ಪುರುಷೋತ್ತಮ ।
ನ ತೇऽಪೇಕ್ಷ್ಯಂ ಕುಲಂ ಗೋತ್ರಂ ವಿದಿತಸ್ಯ ಜಗತ್ಪತೇಃ ॥215॥

ಮಮ ವಾಕ್ಯಾದ್ವಿಯದ್ರಾಜಃ ಕನ್ಯಾಂ ತೇ ಸಂಪ್ರದಾಸ್ಯತಿ ।
ಮಮ ವಾಕ್ಯಾಜ್ಜಗನ್ನಾಥ ದಯಾಂ ಕೃತ್ವಾ ವಿಯನ್ನೃಪೇ ॥216॥

ಇಯಂ ಚ ಕನ್ಯಾ ಗೋವಿಂದ ಸ್ವೀಕಾರ್ಯಾ ಪುರುಷೋತ್ತಮ' ॥217॥

ಇತ್ಥಂ ಸ ಸಂಪ್ರಾರ್ಥಿತಚಿತ್ತವೃತ್ತಿಃ
ಶುಕೇನ ದೇವೋऽಪಿ ಪುರಾಣಮೂರ್ತಿಃ ।
ತತ್ಪೃಷ್ಠಭಾಗೇ ಪುರುಹೂತಮಿತ್ರಂ
ಸ್ವಯಂ ಲಿಲೇಖಾಥ ಮಹಾರ್ಥಸಂಯುತಮ್ ॥218।

ಶ್ರೀನಿವಾಸ ಉವಾಚ–

'ಪತ್ರಿಕಾ ಲಿಖ್ಯತೇ ವಿಪ್ರ ಮಯಾऽऽಕಾಶನೃಪಾಯ ಚ ।

ಇವುಗಳೆಲ್ಲಿಯವು? ಸ್ವಾಮಿನ್ ! ನಿನಗೆ ವೃದ್ಧಿ, ಜರಾ ಮರಣಗಳಾವವೂ ಇಲ್ಲ. ಬ್ರಹ್ಮಾಂಡದ ಒಳಹೊರಗೂ ವ್ಯಾಪಿಸಿರುವ ನಿನಗೆ ಮಿತವಾದ ಸ್ಥಾನವೆಲ್ಲಿಯದು? (214) ಕೇವಲ ವಿಡಂಬನಾರ್ಥವಾಗಿ ಪ್ರಾಕೃತ ಮನುಷ್ಯನಂತೆ ಇಲ್ಲಿ ನಟಿಸುತ್ತಾ ಹೀಗೆ ನುಡಿಯುತ್ತಿರುವಿ. ಮೂರು ಲೋಕಗಳಲ್ಲಿ ಖ್ಯಾತನಾದ ಅಪ್ರಾಕೃತ ಕಲ್ಯಾಣಗುಣನಿಧಿಯಾದ ನಿನಗೆ ಕುಲ, ಗೋತ್ರಗಳ ಅಪೇಕ್ಷೆಯೇ ಇರುವದಿಲ್ಲ. (215) ಆದರೂ ಸಹ ಆಕಾಶರಾಜನು ನನ್ನ ಮಾತಿನ ಮೇಲೆ ವಿಶ್ವಾಸವನ್ನಿಟ್ಟು ನಿನಗೆ ಕನ್ಯಾದಾನವನ್ನು ಮಾಡುತ್ತಿರುವನು. ನೀನು ಸಹ ನನ್ನ ಮಾತಿನಂತೆ ಆಕಾಶರಾಜನಲ್ಲಿ ದಯೆಯಿಟ್ಟು ಆ ಕನ್ಯೆಯನ್ನು ಸ್ವೀಕರಿಸಿ, ನನ್ನ ಮಾತನ್ನು ಸತ್ಯವನ್ನಾಗಿಸು. ಅನುಗ್ರಹಿಸು' ಎಂದು ಪ್ರಾರ್ಥಿಸಿದರು. (217) ಹೀಗೆ ಶುಕಾಚಾರ್ಯರಿಂದ ಸಂಪ್ರಾರ್ಥಿತನಾದ ಶ್ರೀನಿವಾಸನು ವಿವಾಹಕ್ಕೆ ಕಾರಣೀಭೂತರಾದ ಶುಕಾಚಾರ್ಯರನ್ನು ಬಹುವಿಧವಾಗಿ ಶ್ಲಾಘಿಸಿ, ಅನುಗ್ರಹಿಸಿ, ಆಕಾಶರಾಜನ ಪತ್ರಿಕೆಗೆ ಉತ್ತರರೂಪವಾಗಿ, ತನ್ನ ಸಮ್ಮತಿಯನ್ನು ತೋರಿಸುವದಕ್ಕಾಗಿ ತಾನು ಸಹ ಪತ್ರವೊಂದನ್ನು ಬರೆಯಬಯಿಸಿ 'ನಿನ್ನ ಮಾತಿನಂತೆಯೇ ನಾನು ಆಕಾಶರಾಜನಿಗೆ ಸಂತೋಷವನ್ನುಂಟುಮಾಡುವ ಅಂಗೀಕಾರಪೂರ್ವಕವಾದ ಪತ್ರವೊಂದನ್ನು ಬರೆಯುವೆನು'

ತ್ವದ್ವಾಚಮನುಸೃತ್ಯೈವ ರಾಜ್ಞಃ ಪ್ರೀತಿವಿಧಾಯಿಕಾ ॥219॥

ರಾಜಾಧಿರಾಜಪೂಜ್ಯಾಯ ಸುಧರ್ಮತನಯಾಯ ಚ ।
ನಮೋ ನಮೋಽತಿಭಕ್ತ್ಯೈವ ಕ್ಷೇಮಮಾಲಿಖ್ಯತೇಽನಘ ॥220॥

ಶ್ರೀನಿವಾಸೇನ ಬಾಲೇನ ಪೋಷ್ಯೇಣ ನೃಪಸತ್ತಮ ।
ಲಿಖ್ಯತೇ ಶ್ರೀನಿವಾಸೇನ ಶುಭವಿಜ್ಞಪ್ತಿಗರ್ಭಿಣೀ ॥220॥

ಶ್ರೀಮದ್ರಾಜಾಧಿರಾಜೇಂದ್ರಕಿರೀಟಾಘೃಷ್ಟಪಾದುಕ ।
ಅಸ್ಮದ್ಬಂಧುವರೇಣ್ಯಾಥ ಗುಣಪೂರ್ಣಸಮೃದ್ಧಿಮನ್ ॥221॥

ಸುಧರ್ಮತನಯಾಽಕಾಶನಾಮ್ನಾಽಽಶಾಸು ಸುಕೀರ್ತಿಮನ್ ।
ನಮೋ ನಮೋಽಸ್ತು ತೇ ರಾಜನ್ಶ್ರೀನಿವಾಸಸ್ಯ ಶಾರ್ಙ್ಗಿಣಃ ॥222॥

ಶ್ರೀನಿವಾಸೇನ ಬಾಲೇನ ವಿಜ್ಞಪ್ತಿಃ ಕ್ರಿಯತೇ ತ್ವಿಯಮ್ ।
ಭವದ್ಭಿರ್ಲಿಖಿತಂ ದೃಷ್ಟ್ವಾ ಸಂತೋಷೋ ಹ್ಯಭವನ್ಮಮ ॥223॥

ವೈಶಾಖಶುದ್ಧದಶಮೀಶುಕ್ರವಾರೇ ಮಹೋತ್ಸವೇ ।
ಅಂಗೀಕರೋಮಿ ರಾಜೇಂದ್ರ ಕನ್ಯಾಂ ತವ ಮಹಿಪತೇ ॥224॥

ಯಥಾ ಪುರಾ ಸಾಗರೋ ಮೇ ಕನ್ಯಾದಾನಂ ಸುಕೀರ್ತಿಮಾನ್ ।

ಎಂದು ಹೇಳಿ ಆಕಾಶರಾಜನು ಬರೆದುಕೊಟ್ಟ ಲಗ್ನಪತ್ರದ ಹಿಂಭಾಗದಲ್ಲಿಯೇ ಶ್ರೀನಿವಾಸನು ಹೀಗೆ ಪತ್ರವನ್ನು ಬರೆದನು. (218–219)

### ಆಕಾಶರಾಜನಿಗೆ ವಿವಾಹ ಸಮ್ಮತಿ ಪತ್ರ

"ರಾಜಾಧಿರಾಜರಾದ ಪೂಜ್ಯರಾದ ಸುಧರ್ಮರಾಜನ ಮಗನಾದ ಆಕಾಶರಾಜನಿಗೆ ಅತ್ಯಂತ ಭಕ್ತಿಯಂದ ಮಾಡುವ ನಮಸ್ಕಾರವು. ಇಲ್ಲಿ ಎಲ್ಲವೂ ಕ್ಷೇಮ. (220) ಬಾಲಕನೂ, ಪೋಷ್ಯನೂ ಆದ ಶ್ರೀನಿವಾಸನಿಂದ ಈ ವಿಜ್ಞಾಪನ ಪತ್ರವು ಬರೆಯಲ್ಪಡುತ್ತಿದೆ. ಶ್ರೀಮದ್‌ರಾಜಾಧಿರಾಜರ ಕೀರೀಟಗಳಿಂದ ಘಟ್ಟಿಸಲ್ಪಟ್ಟ ಪಾದಪೀಠವುಳ್ಳ, (220) ಸದ್ಗುಣಗಳ ಗಣಿಯಾದ, ಸುಧರ್ಮರಾಜನ ತನಯನಾದ, ಜಗತ್ತಿನಲ್ಲಿ ಆಕಾಶರಾಜನೆಂದು ಮಹಾ ಕೀರ್ತಿಯನ್ನು ಗಳಿಸಿದ ನಿನಗೆ ನಮಸ್ಕಾರವು. ಬಾಲಕನಾದ ಶ್ರೀನಿವಾಸನಿಂದ ಈ ವಿಜ್ಞಪ್ತಿಯು ಮಾಡಲ್ಪಡುತ್ತಿದೆ. ನಿಮ್ಮಿಂದ ಲಿಖಿತ ಲೇಖನವನ್ನು ನೋಡಿ ನನಗೆ ಅತ್ಯಂತ ಸಂತೋಷವಾಯಿತು. (221–23) ವೈಶಾಖ ಶುದ್ಧ ದಶಮಿಯಂದು ನಿಮ್ಮ ಮಗಳನ್ನು ನಾನು ವಿವಾಹ ವಿಧಿಪೂರ್ವಕವಾಗಿ ಅಂಗೀಕಾರ ಮಾಡುತ್ತೇನೆ. (224)

ತಥಾ ದತ್ವಾ ತು ಮೇ ಕನ್ಯಾಂ ಭವೇಸ್ತ್ವಂ ಬಹುಕೀರ್ತಿಮಾನ್ ॥225॥

ಯಥಾ ವೈ ಸಾಗರಾನ್ರಾಜನ್ ಕಪಿಲೇನ ನಿಪಾತಿತಾನ್ ।
ಭಗೀರಥೋ ಮಹಾರಾಜೋ ಗಂಗಾಮಾದಾಯ ತಾಂ ಪುರಾ ॥226॥

ಉದ್ಧೃತ್ಯ ಕೀರ್ತಿಮಾಪೇದೇ ತಥಾ ತ್ವಂ ರಾಜಸತ್ತಮ ।
ದತ್ವಾ ಮೇ ಸುಭಗಾಂ ಕನ್ಯಾಂ ತವ ಪೂರ್ವೋತ್ತರಂ ಕುಲಮ್ ॥227॥

ಉದ್ಧೃತ್ಯ ಬಹುಲಾಂ ಕೀರ್ತಿಂ ಲಭಸ್ವೇತರದುರ್ಲಭಾಮ್ ।
ಲಿಖಿತವ್ಯಂ ವಿಶೇಷೇಣ ಕಿಂ ತೇಽಸ್ತಿ ನೃಪಸತ್ತಮ' ॥228॥

ಇತ್ಥಂ ಲಿಖಿತ್ವಾ ವರಪತ್ರಿಕಾಂ ಶುಭಾಂ
ಶೇಷಾದ್ರಿನಾಥೋ ವಿಯದೀಶಸನ್ನಿಧಿಮ್ ।
ಸಂಪ್ರೇಷಯಾಮಾಸ ಸುರೇಂದ್ರಪೂಜ್ಯಃ
ಪುರಂ ನೃಪೇಂದ್ರಸ್ಯ ವಿಯನ್ನೃಪಸ್ಯ ॥229॥

ಪುನಃ ಸ್ತುತ್ವಾ ಶುಕಸ್ತೀವ್ರಂ ವಿಸೃಷ್ಟೋ ಹರಿಣಾ ಪುನಃ ।
ಹರಿಸಂದರ್ಶನಾಲ್ಲಬ್ಧಹರ್ಷೋ ರಾಜಪುರಂ ಯಯೌ ॥230॥

ಹಿಂದೆ ಸಮುದ್ರರಾಜನು ತನ್ನ ಮಗಳಾದ ಲಕ್ಷ್ಮೀದೇವಿಯನ್ನು ನನಗೆ ವಿವಾಹ ಮಾಡಿಕೊಟ್ಟು ಲೋಕೋತ್ತರವಾದ ಕೀರ್ತಿಯನ್ನು ಮತ್ತು ಇತರಾಲಭ್ಯವಾದ ಪುಣ್ಯಲೋಕಗಳನ್ನು ಸಹ ಹೊಂದಿರುವನು. ನೀನು ಸಹ ನಿನ್ನ ಮಗಳನ್ನು ನನಗೆ ವಿವಾಹ ಮಾಡಿಕೊಟ್ಟು ಅದೇ ರೀತಿಯಾಗಿ ಕೀರ್ತಿ ಮತ್ತು ಪುಣ್ಯಗಳೆರಡನ್ನೂ ಸಹ ಹೊಂದುವವನಾಗು. (225) ಹಿಂದೆ ಸಗರ ಚಕ್ರವರ್ತಿಯ ಮಕ್ಕಳು ಕಪಿಲ ಮಹರ್ಷಿಗಳ ಶಾಪದಿಂದ ಪಾತಾಲ ಲೋಕದಲ್ಲಿ ಸುಟ್ಟು ಬೂದಿಯಾಗಿದ್ದಾಗ ಅವರ ಕುಲದಲ್ಲಿಯೇ ಜನಿಸಿದ ಭಗೀರಥನು ಸ್ವರ್ಗದಿಂದ ಗಂಗೆಯನ್ನು ತಂದು, ತನ್ನ ಪಿತೃಗಳನ್ನು ಉದ್ಧರಿಸಿದನೋ ಹಾಗೆಯೇ ನೀನೂ ಸಹ ನಿನ್ನ ಮಗಳನ್ನು ನನಗೆ ವಿವಾಹ ಮಾಡಿಕೊಟ್ಟು ನಿನ್ನ ಎರಡೂ ಕುಲಗಳನ್ನು ಉದ್ಧರಿಸಿ ಇತರದುರ್ಲಭವಾದ ಕೀರ್ತಿಯನ್ನು ಪಡೆ. ಕನ್ಯಾದಾನ ಮಾಡುವದರಿಂದ ನಿಮ್ಮ ಪೂರ್ವೋತ್ತರ ಕುಲವು ಉದ್ಧಾರವಾಗುವದಲ್ಲದೆ ಇತರರಿಗೆ ಅಸಾಧ್ಯವಾದ ಉತ್ತಮ ಕೀರ್ತಿಯನ್ನು ಜಗತ್ತಿನಲ್ಲಿ ಹೊಂದುವಿರಿ. ಇದಕ್ಕಿಂತ ಹೆಚ್ಚಿಗೆ ಬರೆಯುವ ವಿಶೇಷವೇನಿದೆ ?" (226-228)ಈ ರೀತಿಯಾಗಿ ಪತ್ರಲೇಖನವನ್ನು ಮಾಡಿ ಶ್ರೀನಿವಾಸನು ಶುಕಾಚಾರ್ಯರ ಕೈಯಲ್ಲಿ ಕೊಡಲು, ಪರಮಾತ್ಮನ ದರ್ಶನದಿಂದ ಅತ್ಯಂತ ಹೃಷ್ಟರಾದ ಶುಕಾಚಾರ್ಯರು ಪತ್ರವನ್ನು ತೆಗೆದುಕೊಂಡು ಆಕಾಶರಾಜನ ಪಟ್ಟಣ ಕುರಿತು ಪ್ರಯಾಣ ಮಾಡಿದರು. (230)

ಗತೇ ತು ಮುನಿಶಾರ್ದೂಲೇ ಭಗವಾನ್ಮಾಧವೋ ನೃಪ ।
ಮಾತರಂ ಸಂದದರ್ಶಾಥ ಮಾರ್ಗಶ್ರಾಂತಾಂ ವಯೋಗತಾಮ್ ॥231॥
ಬಕುಲಾಂ ಪ್ರಣಿಪತ್ಯಾಥ ಮಾಧವೋ ವಾಕ್ಯಮಬ್ರವೀತ್ ॥231॥

ಶ್ರೀನಿವಾಸ ಉವಾಚ–

ಅಂಬ ಕಾಲವಿಲಂಬಸ್ತೇ ಕಿಮರ್ಥಂ ಕಮಲಾನನೇ ।
ಕಾ ತತ್ರ ವಾರ್ತಾ ನಗರೇ ತನ್ಮಮಾಽಚಕ್ಷ್ವ ಭಾಮಿನಿ ॥232॥

ಬಕುಲಾ ಉವಾಚ–

'ಸಾಧಿತಾ ಬಹುಯತ್ನೇನ ಕನ್ಯಾ ತೇ ಪುರುಷೋತ್ತಮ ।
ದೈವಮೇವ ಪರಂ ಮನ್ಯೇ ಪೌರುಷಂ ನೈವ ಕಾರಣಮ್ ॥233॥

ನಾರಾಯಣಾಶ್ರಮಾತ್ ಕೃಷ್ಣ ಧರ್ಮದೇವೀ ಸಮಾಗತಾ ।
ದೈವಯೋಗೇನ ಸಾ ಭದ್ರಾ ಸಂಪ್ರಾಪ್ತಾ ರಾಜಮಂದಿರಮ್ ॥234॥

ಉವಾಚ ತಾಂ ಭವದ್ದಾನಯೋಗ್ಯಾಂ ಕನ್ಯಾಂ ನೃಪಾತ್ಮಜ ।
ಕನ್ಯಾಽಪಿ ತ್ವದೃತೇಽನ್ಯಂ ಸಾ ನೈವ ಕಾಂಕ್ಷತಿ ಲೌಕಿಕಮ್ ॥235॥

ತಯೋರ್ವಾಕ್ಯಂ ಸಮಾಕರ್ಣ್ಯ ದಾತುಂ ತೇ ಸೋಽನ್ವಮನ್ಯತ ।
ಇಮಾಂ ದಾಸ್ಯಾಮಹೇ ಪುತ್ರೀಂ ವೇಂಕಟಾದ್ರಿನಿವಾಸಿನೇ ॥236॥

ಇತ್ಥಂ ಸಂಕಲ್ಪಯಾಮಾಸ ಸಭಾಮಧ್ಯೇ ಮುದಾ ನೃಪಃ ।
ತ್ವಯೈವ ಜಾತಮೇತದ್ಧಿ ನ ದೈವಂ ಭವತಃ ಪರಮ್' ॥238॥

ಇತ್ತಕಡೆ ಕನ್ಯಾಘಟನಾರ್ಥವಾಗಿ ಪ್ರಯಾಣಿಸಿದ ಬಕುಳೆಯೂ ಸಹ ಮಾರ್ಗಾಯಾಸದಿಂದ ಬಳಲಿದವಳಾಗಿ ತನ್ನ ಬಳಿಗೆ ಬಂದಿರುವದನ್ನು ಕಂಡು ಬಕುಲಾಮಾತೆಗೆ ನಮಸ್ಕಾರವನ್ನು ಮಾಡಿ ಶ್ರೀನಿವಾಸನು ವಿವಾಹ ವಾರ್ತೆಯನ್ನು ಪ್ರಶ್ನಿಸಿದಾಗ (231-32) ಬಕುಲಾಮಾತೆಯು "ಮಹಾ ಪ್ರಯತ್ನಪೂರ್ವಕವಾಗಿ ನಿನಗೆ ಕನ್ಯಾಘಟನೆಯು ಸಾಧಿಸಲ್ಪಟ್ಟಿದೆ. ಇದರಲ್ಲಿ ದೈವವೇ ಕಾರಣ. ಮನುಷ್ಯ ಪ್ರಯತ್ನವೇನೂ ಇಲ್ಲ (233) ನಾರಾಣಾಶ್ರಮದಿಂದ ಧರ್ಮದೇವಿಯು ರಾಜಮಂದಿರಕ್ಕೆ ಬಂದು, ನಿನಗೆ ಯೋಗ್ಯವಾದ ಕನ್ಯೆಯಾದ ಪದ್ಮಾವತಿಯನ್ನು ಕೊಡಲು ನಿಶ್ಚಯಿಸಬೇಕೆಂದು ತಿಳಿಸಿದಾಗ, ರಾಜನು ವೆಂಕಟಾದ್ರಿ ನಿವಾಸಿಯಾದ ಶ್ರೀನಿವಾಸನಿಗೆ ಕನ್ಯಾಪ್ರದಾನ ಮಾಡುವುದಾಗಿ ಸಭಾಮಧ್ಯದಲ್ಲಿ ಸಂತೋಷದಿಂದ ಸಂಕಲ್ಪ ಮಾಡಿದನು. ಇದೆಲ್ಲವೂ ನಿನ್ನಿಂದಲೇ

ಇತಿ ಮಾತೃವಚಃ ಶ್ರುತ್ವಾ ಕಿಂಚಿದ್ಧಾಸ್ಯಮುಖೋ ಹರಿಃ ।
ಮಾತರಂ ಪ್ರತಿನಂದ್ಯಾಥ ಚಿಂತಯನ್ ವಾಕ್ಯಮಬ್ರವೀತ್ ॥239॥

ಇತಿ ಶ್ರೀ ಭವಿಷ್ಯೋತ್ತರಪುರಾಣೇ ಶ್ರೀವೇಂಕಟಗಿರಿಮಾಹಾತ್ಮ್ಯೇ ಪದ್ಮಾವತೀಪರಿಣಯನಿಶ್ಚಯೋ ನಾಮ ನವಮೋऽಧ್ಯಾಯಃ ॥

* * *

ತಿಳಿಯಲ್ಪಟ್ಟಿದೆ. ನಿನಗಿಂತಲೂ ಶ್ರೇಷ್ಠವಾದ ದೇವತೆ ಜಗತ್ತಿನಲ್ಲಿ ಬೇರೆ ಯಾರೂ ಇಲ್ಲ" ಎಂಬ ತಾಯಿಯ ಈ ಮಾತಿನಿಂದ ಸಂತೋಷಗೊಂಡವನಂತೆ ಹಸನ್ಮುಖದಿಂದ ಶ್ರೀನಿವಾಸನು ಸಮ್ಮತಿಯನ್ನು ಸೂಚಿಸುತ್ತಾ ಹೀಗೆ ಮಾತನಾಡಿದನು.

ಇಲ್ಲಿಗೆ ಶ್ರೀಭವಿಷ್ಯೋತ್ತರಪುರಾಣದಲ್ಲಿಯ ವೇಂಕಟಗಿರಿಮಾಹಾತ್ಮ್ಯದಲ್ಲಿ ಪದ್ಮಾವತೀಪರಿಣಯನಿಶ್ಚಯವೆಂಬ ಒಂಭತ್ತನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

॥ಶ್ರೀಃ॥

ಅಥ ಶ್ರೀಭವಿಷ್ಯೋತ್ತರಪುರಾಣೇ ವೇಂಕಟೇಶಮಾಹಾತ್ಮ್ಯೇ

# ದಶಮೋಽಧ್ಯಾಯಃ

ಜನಕ ಉವಾಚ–

'ಮಾತುರ್ವಚನಮಾಕರ್ಣ್ಯ ಕೃತವಾನ್ ಕಿಂ ರಮಾಪತಿಃ ।
ತನ್ಮಮಾಽಚಕ್ಷ್ವ ಭಗವನ್ ಸವಿಸ್ತಾರಂ ಸತಾಂ ಪ್ರಿಯಮ್' ॥1॥

ಶತಾನಂದ ಉವಾಚ–

'ತ್ವಂ ಹರೇರಸಿ ಭಕ್ತೇಷು ಪ್ರಥಮೋಽತಿಪ್ರಿಯಃ ಸದಾ ।
ತಸ್ಮಾದ್ಧರಿಕಥಾಸಕ್ತಮನಾಸ್ತೇ ತು ವದಾಮಿ ತತ್ ॥2॥

ಸ್ವಯಮಾನಂದಪೂರ್ಣೋಽಪಿ ಕರ್ಮಭುಙ್ನರವದ್ಧರಿಃ ।
ಮಾತ್ರಾ ಚೋದಿತಮಾಕರ್ಣ್ಯ ತಾಮೂಚೇ ಮಧುರಂ ವಚಃ ॥3॥

ಶ್ರೀನಿವಾಸ ಉವಾಚ–

'ನೋತ್ಸವೇ ವಿದ್ಯತೇ ಬುದ್ಧಿರ್ಮಮ ಮಾತಸ್ತಥಾಽನಘೇ ।

## ಹತ್ತನೆಯ ಅಧ್ಯಾಯ

### ಕಲ್ಯಾಣಮಹೋತ್ಸವಕ್ಕಾಗಿ ವೇಂಕಟಾಚಲಕ್ಕೆ ಬ್ರಹ್ಮಾದಿದೇವತೆಗಳ ಆಗಮನ

'ತಾಯಿಯಿಂದ ವಿವಾಹ ನಿಶ್ಚಯವಾದ ವಿಷಯಗಳನ್ನು ಕೇಳಿತಿಳಿದ ಶ್ರೀನಿವಾಸನು ಮುಂದೇನು ಮಾಡಿದನು? ಎಂಬುದನ್ನು ವಿಸ್ತಾರವಾಗಿ ತಿಳಿಸಿರಿ' ಎಂದು ಜನಕರಾಜನಿಂದ ಪ್ರಾರ್ಥಿತರಾದ ಶತಾನಂದರು ಜನಕನನ್ನು ಪ್ರಶಂಸಿಸುತ್ತಾ 'ನೀನು ಹರಿಭಕ್ತರಲ್ಲಿ ಶ್ರೇಷ್ಠನಾಗಿರುವದರಿಂದ ಭಗವತ್ಕಥೆಯಲ್ಲಿ ನಿನಗೆ ಉತ್ಕಟೇಚ್ಛೆಯುಂಟಾಗಿರುವದು. ಇಂತಹ ಹರಿಭಕ್ತಾಗ್ರೇಸರನಾದ ಭಗವತ್ಕಥಾಸಕ್ತನಾದ ನಿನಗೆ ಆ ಪರಮಾತ್ಮನ ವಿವಾಹ ಚರಿತ್ರೆಯನ್ನು ಹೇಳುವೆನು' ಎಂದು ನುಡಿದು ಭಗವಂತನ ವಿವಾಹದ ಚರಿತ್ರೆಯನ್ನು ಮುಂದುವರೆಸುವರು. (1–2)

ಭಗವಂತನು ಸ್ವತಃ ಆನಂದಪೂರ್ಣನಾಗಿದ್ದರೂ ಸಹ ಸಜ್ಜನರ ಅಭ್ಯುದಯಕ್ಕೆ ಹಾಗೂ ದುರ್ಜನರ ಅಧೋಗತಿಗೆ ಮನುಷ್ಯರಂತೆ ವಿವಾಹಾದಿ ಲೌಕಿಕ ಕರ್ಮಗಳಲ್ಲಿ ಆಸಕ್ತನಾದವನಂತೆ ನಟಿಸುತ್ತಾ, ವಿವಾಹಘಟನೆಯನ್ನು ಮಾಡಿಬಂದ ಬಕುಲಾಮಾಲೆಯ ಮಾತನ್ನು ಆಲಿಸುತ್ತಾ,

ಅಬಂಧೋರ್ಬಂಧುಯುಕ್ತಸ್ಯ ಸಂಬಂಧೋ ನ ಪ್ರಶಸ್ಯತೇ ॥4॥

ಯಯೋರೇವ ಸಮಂ ವಿತ್ತಂ ಯಯೋರೇವ ಸಮಂ ಕುಲಮ್।
ತಯೋರ್ವಿವಾಹೋ ಮೈತ್ರೀ ಚ ನೋತ್ತಮಾಧಮಯೋಃ ಕ್ವಚಿತ್ ॥5॥

ವಿವಾಹಶ್ಚ ವಿವಾದಶ್ಚ ಸಮಯೋರೇವ ಶೋಭತೇ ।
ಅಹಮೇಕಃ ಸೋಽಪಿ ಬಂಧುಸಮೇತೋ ಧರಣೀಪತಿಃ ॥6॥

ಕಥಂ ನೃಪಸ್ಯಾಸ್ಯ ಮಯೋಚಿತಃ ಸ್ಯಾತ್
ಅಬಂಧುನಾ ಬಂಧುಯುತಸ್ಯ ಸಂಗಃ ।
ಭವೇತ್ ಸುಖಂ ನೇತಿ ವದಂತಿ ಸಂತ
ಇತ್ಯದ್ಯ ಚಿಂತಾ ಖಲು ಬಾಧತೇ ಮಾಮ್ ॥7॥

ಬಂಧುಹೀನಸ್ಯ ಮೇ ರಾಜಾ ಕಥಂ ಕನ್ಯಾಂ ಪ್ರದಾಸ್ಯತಿ' ।
ವಾಸುದೇವವಚಃ ಶ್ರುತ್ವಾ ಬಕುಲಾ ವಾಕ್ಯಮಬ್ರವೀತ್ ॥8॥

ಬಕುಲಾ ಉವಾಚ–

'ತ್ವಾದೃಶಃ ಪುರುಷೋ ಲೋಕೇ ನಾಸತ್ಯಂ ವದತಿ ಕ್ವಚಿತ್ ।
ಸತ್ಯಮೇವ ಪ್ರಶಂಸಂತಿ ಮುನಯೋ ವೀತಕಲ್ಮಷಾಃ ॥9॥

ಶುಕಸ್ತ್ವತ್ಕಾರ್ಯನಿಷ್ಠಸ್ತು ದೇವಾನಾಂ ಗುರುರಂಗಿರಾಃ ।
ಸ ಧರ್ಮಿಷ್ಠೋ ಮಹೀಪಾಲಃ ತದ್ವಾಕ್ಯಂ ಮಾ ವೃಥಾ ಕುರು ॥10॥

ಸಂತೋಷಗೊಂಡವನಂತೆ ನಟಿಸುತ್ತಾ, ಪುನಃ ಪ್ರಾಕೃತ ಮನುಜರಂತೆ(3) "ಬಂಧುಬಾಂಧವರಿಂದ ರಹಿತನಾದ ತನಗೆ ಬಂಧುಬಾಂಧವರಿಂದ ಸಹಿತನಾದ ಆಕಾಶರಾಜನೊಡನೆ ಬಾಂಧವ್ಯವು ಅನುಚಿತವೆಂದು ದುಃಖಪಡುವವನಂತೆ ತನ್ನ ತಾಯಿಯ ಎದುರು ವಿವಾಹ–ವಿವಾದಗಳು ಸಮರಲ್ಲಿ ಶೋಭೆಯನ್ನುಂಟುಮಾಡುವವು. ಆ ರಾಜನಾದರೋ ಬಹುಬಂಧುಗಳಿಂದ ಸಮೇತನಾದವನು. ನಾನಾದರೋ ಏಕಾಕಿಯು. ಇಂತಹ ಅಸಮಾನರಾದ ನಮ್ಮಗಳಿಗೆ ಈ ವಿವಾಹವು ಉಚಿತವಲ್ಲವೆಂದು" ತಿಳಿಸಿದಾಗ ಬಕುಲಾದೇವಿಯು (4–8) 'ನಿನ್ನಂತಹ ಲೋಕ ವಿಲಕ್ಷಣವಾದ ಪುರುಷನಾರೂ ಬ್ರಹ್ಮಾಂಡದಲ್ಲಿ ಸಿಗುವದಿಲ್ಲ. ನಿನ್ನಂತಹ ಪುರುಷರು ಜಗತ್ತಿನಲ್ಲಿ ಸುಳ್ಳು ಹೇಳುವದಿಲ್ಲ. ಹೇಳಿದಂತೆ ಕಂಡರೂ ಸಹ ಅದು ಸತ್ಯವೆಂಬುದಾಗಿ ದೋಷವಿದೂರರಾದ ಋಷಿಗಳು ಹೇಳುವರು. (9) ಸಮಸ್ತ ಬ್ರಹ್ಮಾಂಡವೇ ನಿನ್ನ ಅಧೀನದಲ್ಲಿರುವಾಗ ನಿಷ್ಕಲ್ಮಷರಾದ ಶುಕ, ಬೃಹಸ್ಪತ್ಯಾಚಾರ್ಯರಂತಹ ಮಹಾನುಭಾವರ ಸಮ್ಮುಖದಲ್ಲಿ ಆಕಾಶರಾಜನಿಂದ

ಸ್ಮರ ಬಂಧೂನ್ ಸುರಾನ್ ಸರ್ವಾನ್ ಬ್ರಹ್ಮೇಶಾನಪುರೋಗಮಾನ್।
ಪುತ್ರಾನ್ಪೌತ್ರಾಂಸ್ತಥಾ ಭ್ರಾತೄನ್ ಸ್ನುಷಾಶ್ಚ ಪುರುಷೋತ್ತಮ ॥11॥

ತೇಷಾಂ ಗತಿಸ್ತು ಗೋವಿಂದ ದುರ್ಲಭಾ ಚ ಕಲೌಯುಗೇ ।
ಸೋಽಪಿ ಪಶ್ಯತು ರಾಜರ್ಷಿಸ್ತ್ವತ್ಸಂಬಂಧಿಜನಾನಿಹ' ॥12॥

ಮಾತುರ್ವಚನಮಾಕರ್ಣ್ಯ ಮನಸಾ ಶೇಷಪಕ್ಷಿಣೌ ।
ಸಸ್ಮಾರ ಪೃಥಿವೀಪಾಲ ಶ್ರೀನಿವಾಸಃ ಸತಾಂ ಗತಿಃ ॥13॥

ತಾವಾಗತೌ ಶೇಷವಿಯಚ್ಚರೌ ತದಾ
ಕ್ಷಣೇನ ಶೇಷಾಚಲವಲ್ಲಭಾಂತಿಕಮ್ ।
ದದರ್ಶ ಭಕ್ತ್ಯಾ ಪುರತಃ ಸ್ಥಿತಾವಿಮೌ
ನಿರ್ದೇಶಯಾಮಾಸ ಪುರಾಣಪೂರುಷಃ ॥14॥

ಶ್ರೀನಿವಾಸ ಉವಾಚ–

'ಪಕ್ಷಿರಾಡ್ ಗಚ್ಛ ಮೇ ಪುತ್ರಂ ಸತ್ಯಲೋಕೇಶ್ವರಂ ಪ್ರಿಯಮ್ ।
ಗಚ್ಛಾಹಿಭೂಷಣಂ ಶೇಷ ಮಮ ಪೌತ್ರಮುಮಾಪತಿಮ್' ॥15॥

ಇತ್ಯುಕ್ತ್ವಾ ಪತ್ರಿಕಾಂ ತಾಭ್ಯಾಂ ವಿಲಿಖ್ಯಾದಾಚ್ಛುಭಾತ್ಮಿಕಾಮ್ ।
ಪ್ರಣಿಪತ್ಯಾಥ ವಿಶ್ವೇಶಂ ಸ್ವಸ್ವಮಾರ್ಗೇಣ ಜಗ್ಮತುಃ ॥16॥

ಸಂಕಲ್ಪಿತವಾದ ಈ ವಿವಾಹವು ಸರ್ವಥಾ ತಿರಸ್ಕಾರ್ಯವಲ್ಲ. (10) ಚತುರ್ಮುಖ ಬ್ರಹ್ಮ, ರುದ್ರೇಂದ್ರಾದಿ ದೇವತೆಗಳನ್ನು ಸ್ಮರಿಸು. ಪುತ್ರ ಪೌತ್ರ, ಭ್ರಾತೃ, ಸೊಸೆಯಂದಿರನ್ನು ಜ್ಞಾಪಿಸಿಕೊಳ್ಳು. ಕಲಿಯುಗದಲ್ಲಿ ನಿನ್ನ ಪರಿವಾರರಾದ ದೇವತೆಗಳು ಭೂಮಿಯಲ್ಲಿ ಕಂಗೊಳಿಸುವದು ಅತ್ಯಂತ ದುರ್ಲಭ. ಧರ್ಮಿಷ್ಠನಾದ ಆಕಾಶರಾಜನು ಹಾಗೂ ಅವನ ಪರಿವಾರವು ಅವರೆಲ್ಲರನ್ನು ನೋಡಿ ಪುನೀತರಾಗಿ ಸಂತೋಷಪಡಲಿ" ಎಂದು ಹೇಳಿದಳು. (11–12)

ತಾಯಿಯ ವಚನವನ್ನು ಆಲಿಸಿದ ಶ್ರೀನಿವಾಸನು ಶೇಷ–ಗರುಡರನ್ನು ಮನದಲ್ಲಿ ಜ್ಞಾಪಿಸಿಕೊಂಡ ತಕ್ಷಣದಲ್ಲಿಯೇ ನಿಮಿಷಾರ್ಧದಲ್ಲಿ ಶೇಷಾಚಲದಲ್ಲಿ ಶ್ರೀನಿವಾಸನ ಎದುರಿಗೆ ಬಂದು ನಿಂತರು. ಅವರಿಗೆ ಶ್ರೀನಿವಾಸನು ಪತ್ರಗಳನ್ನು ಬರೆದು ಕೊಟ್ಟು(13–14) 'ಹೇ ಗರುಡನೇ! ನೀನು ಈ ಪತ್ರವನ್ನು ತೆಗೆದುಕೊಂಡು ಸತ್ಯಲೋಕಕ್ಕೆ ಹೋಗಿ ಬ್ರಹ್ಮನಿಗೆ ಕೊಡು. ಹೇ ಶೇಷನೆ! ಇದನ್ನು ನೀನು ನನ್ನ ಮೊಮ್ಮಗನಾದ ರುದ್ರನಿಗೆ ಕೊಡು' ಎಂದು ನುಡಿದನು. (15) ಅವರಿಬ್ಬರೂ ಶ್ರೀನಿವಾಸನಿಗೆ ನಮಸ್ಕರಿಸಿ ಪತ್ರವನ್ನು ತೆಗೆದುಕೊಂಡು ತಮ್ಮ ತಮ್ಮ ಮಾರ್ಗಗಳಲ್ಲಿ ಹೊರಟರು.

ಸತ್ಯಲೋಕಂ ತತೋ ಗತ್ವಾ ಬ್ರಹ್ಮಾಣಂ ಭಾಸ್ಕರೋಪಮಮ್ ।
ದೃಷ್ಟ್ವಾ ನತ್ವಾಽತಿಭಕ್ತ್ಯೈವ ಪಕ್ಷಿರಾಟ್ ಪತ್ರಿಕಾಮದಾತ್ ॥17॥

ಪಿತಾಮಹಸ್ತು ತಂ ದೃಷ್ಟ್ವಾ ಗರುಡಂ ಪ್ರತ್ಯಭಾಷತ ।

ಬ್ರಹ್ಮೋವಾಚ–

'ಚಿರಕಾಲೇನ ಸಂಪ್ರಾಪ್ತಃ ಪಕ್ಷಿರಾಡ್ವಿಷ್ಣುವಾಹನ ॥18॥

ಕ್ವ ಚಾಸ್ತಿ ವಾಸುದೇವಸ್ತು ಶ್ರೀನಿವಾಸಃ ಪಿತಾ ಮಮ' ।
ಪಿತಾಮಹವಚಃ ಶ್ರುತ್ವಾ ಪಕ್ಷಿರಾಡ್ವಾಕ್ಯಮಬ್ರವೀತ್ ॥19॥

ಗರುಡ ಉವಾಚ–

'ವಾಸುದೇವೋ ವಸತ್ಯಂಗ ವೇಂಕಟಾಚಲಮೂರ್ಧನಿ ।
ತದ್ವಿವಾಹಾರ್ಥಮಾಯಾಂತಂ ಮಾಂ ವಿದ್ಧಿ ಚತುರಾನನ' ॥20॥

ನಾರಾಯಣೇನ ಲಿಖಿತಾಂ ಪತ್ರಿಕಾಮವಲೋಕಯ' ।
ಪಪಾಠ ಪತ್ರಿಕಾಮಿತ್ಥಂ ಚೋದಿತೋಽನೇನ ವೈ ವಿಧಿಃ ॥21॥

ಪತ್ರಿಕಾಂ ಕೀರ್ತಯಾಮಾಸ ವಾಯುಸ್ಸರ್ವಾತ್ಮಗೋಚರಃ ।
'ಚಿರಂಜೀವಾಯ ಪುತ್ರಾಯ ಬ್ರಹ್ಮಣೇ ನಾಭಿಜನ್ಮನೇ ॥22॥

ಶ್ರೀವೇಂಕಟಾದ್ರಿನಾಥಸ್ಯ ಶ್ರೀನಿವಾಸಸ್ಯ ಮಂಗಲಾಃ ।

(16) ಗರುಡನು ಸತ್ಯಲೋಕಕ್ಕೆ ಹೋಗಿ ಬ್ರಹ್ಮನೆದುರಿಗೆ ಭಕ್ತಿಯಿಂದ ನಮಸ್ಕರಿಸಿ, ಪರಮಾತ್ಮನು ಬರೆದುಕೊಟ್ಟ ಶುಭಪತ್ರಿಕೆಯನ್ನು ಕೊಟ್ಟನು. (17) ಅದನ್ನು ನೋಡಿ ಬ್ರಹ್ಮನು 'ವಿಷ್ಣುವಾಹನನಾದ ಪಕ್ಷಿರಾಜನೇ! ಬಹುಕಾಲದಿಂದಿಲ್ಲಿಗೆ ಬಂದಿರುವಿ. ನಿನ್ನ ಸ್ವಾಮಿಯಾದ ನನ್ನ ತಂದೆಯಾದ ಶ್ರೀನಿವಾಸನು ಈಗೆಲ್ಲಿರುವನು?' (18–19) ಎಂದು ಕೇಳಿದನು. ಆಗ ಗರುಡನು 'ಪ್ರಕೃತದಲ್ಲಿ ವಾಸುದೇವನು ಭೂಲೋಕದಲ್ಲಿ ವೇಂಕಟಾಚಲದ ಮೇಲೆ ವಾಸವಾಗಿರುವನು. ಅವನ ವಿವಾಹಕಾರ್ಯದಗೋಸ್ಕರವಾಗಿ ನಾನಿಂದು ಬಂದಿರುವೆನು. ನಾರಾಯಣನಿಂದ ಬರೆದು ಕೊಡಲ್ಪಟ್ಟ ಪತ್ರಿಕೆಯನ್ನು ನೋಡಿರಿ' ಎಂದು ನುಡಿದನು. ಬ್ರಹ್ಮನಿಂದ ಪ್ರಚೋದಿತರಾದ ವಾಯುದೇವರು ಬ್ರಹ್ಮನ ಸಮ್ಮುಖದಲ್ಲಿ ಅದನ್ನು ಓದಿದರು. (20–22)

`ನನ್ನ ನಾಭಿಕಮಲದಿಂದ ಸಮುದ್ಭೂತನಾದ, ಚಿರಂಜೀವಿಯಾದ, ಪುತ್ರನಾದ ಚತುರ್ಮುಖ ಬ್ರಹ್ಮನಿಗೆ, ವೇಂಕಟಾದ್ರಿಗೆ ಒಡೆಯನಾದ ಶ್ರೀನಿವಾಸನ ಪುಷ್ಕಲವಾದ ಮಂಗಲಕರವಾದ ವೇದೋಕ್ತ

ವೈದಿಕ್ಯ ಆಶಿಷಃ ಸರ್ವಾಃ ಸರ್ವದಾ ಸಂತು ಪುಷ್ಕಲಾಃ ॥23॥

ಕಲಾವಾಕಾಶರಾಜೋ ಮೇ ಕನ್ಯಾದಾನಂ ಕರಿಷ್ಯತಿ ।
ಪತ್ರಿಕಾದರ್ಶನಾದೇವ ಸುಪುತ್ರಸ್ಸಪರಿಗ್ರಹಃ ॥24॥

ಸಲೋಕಪಾಲಃ ಸಸ್ತ್ರೀಕಃ ಸಗಂಧರ್ವಸ್ಸಹೋರಗಃ ।
ಸಮಾಗತ್ಯಾಽಶು ಕಲ್ಯಾಣಂ ದೃಷ್ಟ್ವಾ ಗಚ್ಛ ಯಥಾಸುಖಮ್' ॥25॥

ಇತೀರಪಠಿತಂ ಶ್ರುತ್ವಾ ಪತ್ರಾರ್ಥಂ ಸ ಪ್ರಜಾಪತಿಃ ।
ಪತ್ರಿಕಾರ್ಥಮಿತಿ ಜ್ಞಾತ್ವಾ ಕಿಂಚಿದ್ಧ್ಯಾನಮುಪಾಗತಃ ॥26॥

ಸಂತೋಷಮತುಲಂ ಲೇಭೇ ವಿಧಿಃ ಕಲ್ಯಾಣಕೌತುಕೀ ।
ದ್ವಾರಪಾಲಾನ್ಸಮಾಹೂಯ ಚೇದಂ ವಚನಮಬ್ರವೀತ್ ॥28॥

ಚತುರ್ಮುಖ ಉವಾಚ –

'ಭೇರೀದುಂದುಭಯಶ್ಚಾದ್ಯ ವಾದ್ಯಂತಾಂ ಸರ್ವತೋಮುಖಮ್ ।
ಭವದ್ಭಿರ್ಮೇ ಖ್ಯಾಪಯದ್ಭಿರ್ಗಮನಂ ಧರಣೀತಲೇ' ॥
ಇತ್ಯುಕ್ತಾ ದ್ವಾರಪಾಲಾಸ್ತೇ ವಾದ್ಯಾನಿ ಸಮವಾದಯನ್ ॥28॥

ಸ ದ್ವಾರಪಾಲೋಽಪಿ ಹಿರಣ್ಯಗರ್ಭಂ
ಪ್ರಣಮ್ಯ ಕಾರ್ಯಾನುಗುಣಂ ವಚೋಽಬ್ರವೀತ್ ।
'ಕಂ ದೇಶಮುದ್ದಿಶ್ಯ ಪಿತಾಮಹಾದ್ಯ
ನಿಗದ್ಯತಾಂ ವಾದ್ಯಮಿತಃ ಪರಂ ಪ್ರಭೋ' ॥29॥

ಅನೇಕ ಮಂಗಲೋಕ್ತಿಗಳು. (23) ಈ ಕಲಿಯುಗದಲ್ಲಿ ಆಕಾಶರಾಜನು ನನಗೆ ಕನ್ಯಾದಾನವನ್ನು ಮಾಡುತ್ತಾನೆ. ಈ ಪತ್ರಿಕೆಯನ್ನು ನೋಡಿದ ತಕ್ಷಣ ಕುಟುಂಬ ಸಹಿತನಾಗಿ ದಿಕ್ಪಾಲಕರು, ಗಂಧರ್ವರು ಮುಂತಾದ ಪರಿವಾರದಿಂದೊಡಗೂಡಿ ಶೀಘ್ರವಾಗಿ ಬಂದು ವಿವಾಹಮಹೋತ್ಸವವನ್ನು ನೋಡಿ ಸುಖವಾಗಿ ಹೋಗು" (24–25) ಈ ರೀತಿಯಾಗಿ ವಾಯುದೇವರಿಂದ ಓದಲ್ಪಟ್ಟ ಪತ್ರಾರ್ಥವನ್ನು ಶ್ರವಣಮಾಡಿದ ಪ್ರಜಾಪತಿಯು ಧ್ಯಾನಾವಸ್ಥೆಯನ್ನು ಹೊಂದಿ ಕಲ್ಯಾಣೋತ್ಸವದರ್ಶನ ಕೌತುಕಿಯಾಗಿ, ಅತುಲವಾದ ಆನಂದ ಭರಿತನಾಗಿ, ದ್ವಾರಪಾಲಕರನ್ನು ಕರೆದು (26–28) 'ನನ್ನ ಭೂಲೋಕದೆಡೆಗಿನ ಸಂಚಾರವನ್ನು ತಿಳಿಸುವ ಭೇರಿದುಂದುಭಿಗಳು ಎಲ್ಲೆಡೆಯೂ ಸಹ ಮೊಳಗಲಿ' ಎಂದು ನುಡಿದರು. (28) ಆಗ ದ್ವಾರಪಾಲಕರು ನಮಸ್ಕರಿಸಿ 'ಯಾವ ದೇಶವನ್ನು ಕುರಿತು ಭೇರ್ಯಾದಿ ವಾದ್ಯಗಳನ್ನು ಮೊಳಗಿಸಬೇಕು' ಎಂದು ಕೇಳಿದರು. ಆಗ ಬ್ರಹ್ಮದೇವರು

ಬ್ರಹ್ಮೋವಾಚ–

'ಭಾರತೇऽಸ್ಮಿನ್ ಮಹೀಖಂಡೇ ಜಂಬೂದ್ವೀಪಸ್ಯ ದಕ್ಷಿಣೇ ।
ಶೇಷಶೈಲಂ ಸಮುದ್ದಿಶ್ಯ ನಿಯುಂಕ್ಷ್ವ ಚತುರಂಗಿಣೇಮ್' ॥30॥

ದ್ವಾರಪಾಲಸ್ತದಾಕರ್ಣ್ಯ ಸೇನಾಪತಿಮಭಾಷತ ।
'ಸ್ಕಂದಾಹ್ವಯ ಸುರಾನ್ಸರ್ವಾನ್ ಸರ್ವಾನ್ ದಿಕ್ಪಾಲಕಾನಿ'ತಿ ॥31॥

ವಿವಾಹಾರ್ಥಂ ಪ್ರಯಾಣಸ್ಯ ಸನ್ನಾಹಂ ಕರ್ತುಮುತ್ಸುಕಃ ।
ಸತ್ಯಲೋಕಸ್ಥಿತಾನ್ಸರ್ವಾನ್ ಜನಾನಾಹೂಯ ಕಂಜಜಃ ॥32॥

'ಭವಂತೋ ರಸಿಕಾಸ್ಸರ್ವೇ ಕಲ್ಯಾಣಾರ್ಥಂ ಕಲೌ ಯುಗೇ ।
ಶ್ರೀನಿವಾಸಸ್ಯ ಕೃಷ್ಣಸ್ಯ ಪಿತುರ್ಮೇ ಪುರುಷರ್ಷಭಾಃ ॥33॥

ಸಮಾಗಚ್ಛಂತು ಸರ್ವೇ ಮೇ ಸೇನಾಧೀಶಾ ಮಯಾ ಸಹ' ।
ಬ್ರಹ್ಮಣೋ ಭಾರತೀಂ ಶ್ರುತ್ವಾ ಸೇನಾನಾಥಾಸ್ತಮಬ್ರುವನ್ ॥34॥

ಸೇನಾಪತಯ ಊಚುಃ–

'ವಾರ್ಷಿಕಂ ದೇಹಿ ನೋ ಬ್ರಹ್ಮನ್ನಾಗಚ್ಛಾಮಸ್ತ್ವಯಾ ಸಹ' ।
ಏವಮುಕ್ತೋ ಧನಂ ತೇಷಾಂ ದತ್ತವಾನ್ ಸ ಪಿತಾಮಹಃ ॥35॥

ವಾಹನಾನಿ ವಿಚಿತ್ರಾಣಿ ರಥಾಂಶ್ಚ ವಿವಿಧಾನಿ ಚ ।

'ಜಂಬೂ ದ್ವೀಪದ ದಕ್ಷಿಣದಲ್ಲಿರುವ ಭರತಖಂಡದಲ್ಲಿಯ ವೇಂಕಟಾಚಲಕ್ಕೆ ಪ್ರಯಾಣ ಮಾಡುವದನ್ನು ಘೋಷಿಸಿ, ಭೇರೀ ದುಂಧುಭಿಗಳನ್ನು ಮೊಳಗಿಸಬೇಕೆಂದು ಆಜ್ಞಾಪಿಸಿದನು. (30) ಇದನ್ನು ಕೇಳಿದ ದ್ವಾರಪಾಲಕರು ದೇವಸೇನಾನಿಯಾದ ಸುಬ್ರಹ್ಮಣ್ಯನಿಗೆ ದೇವತೆಗಳನ್ನು ಮತ್ತು ದಿಕ್ಪಾಲಕರನ್ನು ಕರೆಯಲು ತಿಳಿಸಿದರು. (31) ತನ್ನ ತಂದೆಯ ವಿವಾಹ ಮಹೋತ್ಸವಕ್ಕೆ ಹೊರಡಲು ಸಿದ್ಧನಾದ ಬ್ರಹ್ಮನು ಸತ್ಯಲೋಕದಲ್ಲಿಯ ಸಮಸ್ತರನ್ನೂ 'ಭಗವದ್ಭಕ್ತಿ ಪರಾಯಣರಾದ ನೀವೆಲ್ಲರೂ ನನ್ನ ತಂದೆಯಾದ ಶ್ರೀನಿವಾಸನ ಕಲಿಯುಗದಲ್ಲಿಯ ವಿವಾಹವನ್ನು ನೊಡಲು ನನ್ನೊಡನೆ ಬನ್ನಿರಿ' ಎಂದು ಆಮಂತ್ರಿಸಿದನು. ಸೈನ್ಯವನ್ನು ಸಜ್ಜೀಕರಿಸಲು ಸೇನಾಧಿಪತಿಗಳಿಗೆ ಆಜ್ಞಾಪಿಸಿದರು. (32–34) ಇದನ್ನಾಲಿಸಿದ ಸೇನಾನಾಯಕರು 'ವಾರ್ಷಿಕ ಭತ್ಯವನ್ನು ನೀಡಿದಲ್ಲಿ ಮಾತ್ರ ತಾವು ಬರುವದಾಗಿ ತಿಳಿಸಿದರು. ಆಗ ಬ್ರಹ್ಮನು ಅವರಿಗೆ ಬಾಕಿ ಇದ್ದ ಸಂವತ್ಸರದ ಸಂಬಳವನ್ನು ಕೊಡಿಸಿದನು. (35) ತನ್ನ ಪತ್ನಿಯರಿಗೂ ಸಹ ಸಂದೇಶವನ್ನು ಕಳಿಸಿ, ಅವರಿಂದ

ಭೂಷಣಾನಿ ಚ ವಸ್ತ್ರಾಣಿ ರತ್ನಾನಿ ವಿವಿಧಾನಿ ಚ ॥36॥

ಪತ್ನೀಃ ಸಂದೇಶಯಾಮಾಸ ವಿವಾಹಾರ್ಥಂ ಪಿತಾಮಹಃ ।
ಸ್ವಯಮಂತರ್ಗತಃ ಶ್ರೀಮಾನಾತ್ಮಾನಂ ಸಮಭೂಷಯತ್ ॥37॥

ದಧಾರ ಶಿರಸಾ ಧಾತಾ ಕಿರೀಟಂ ಪಶ್ಚಿಮೇನ ಚ ।
ಅನ್ಯೇನ ಶಿರಸಾ ಧಾತಾ ರಕ್ತೋಷ್ಣೀಷಮಧಾರಯತ್ ॥38॥

ದಕ್ಷಿಣೇನೋತ್ತಮಾಂಗೇನ ಶಿರೋವೇಷ್ಟಮಬಂಧಯತ್ ।
ಕುಶಕೇತುಂ ಕುಶಶ್ರೇಷ್ಠೈಃ ಧೃತವಾನನ್ಯಮೂರ್ಧನಿ ॥39॥

ನೀಲಮೌಕ್ತಿಕವೈಢೂರ್ಯಲಸನ್ಮಕರಕುಂಡಲೇ ।
ಧೃತ್ವಾ ಸ್ವಕರ್ಣಯೋರ್ಹಸ್ತಾನ್ ಭೂಷಯನ್ರತ್ನಕಂಕಣೈಃ ॥40॥

ಕವಚಂ ಧಾರಯಾಮಾಸ ನವರತ್ನಸಮಾಕುಲಮ್ ।
ಕಾಂಚೀದಾಮಸಮಾಬದ್ಧಮುಕ್ತಾಮಣಿವಿಭೂಷಿತಾಮ್ ॥41॥

ಸರಸ್ವತೀಂ ಚ ಸಾವಿತ್ರೀಂ ಗಾಯತ್ರೀಂ ಚ ತತಃ ಪರಮ್ ।
ಪುತ್ರಾನ್ಪೌತ್ರಾನ್ ದ್ವಿಜಾನ್ ಸರ್ವಾನ್ ಸವಾಜಿರಥಕುಂಜರಾನ್ ॥42॥

ಮನಃಪುತ್ರಾನ್ವೀರ್ಯಪುತ್ರಾನ್ ಸಮಾಹೂಯ ಪಿತಾಮಹಃ ।

ಸಮೇತನಾಗಿ ಪ್ರಯಾಣವನ್ನು ಆರಂಭಿಸಿದನು. ನಾನಾ ವಿಧವಾದ ಆಭರಣಗಳು, ರತ್ನಾದಿಗಳಿಂದ ಅಲಂಕೃತವಾದ ವಸ್ತ್ರಗಳು ಇವುಗಳನ್ನು ಧರಿಸಿಕೊಂಡು ಬಗೆಬಗೆಯ ವಾಹನಗಳು, ರಥಗಳು –ಇವುಗಳನ್ನು ಏರಿ, ಶ್ರೀನಿವಾಸನ ವಿವಾಹಾರ್ಥವಾಗಿ ಭೂಮಿಯೆಡೆಗೆ ಎಲ್ಲರೂ ಪ್ರಯಾಣವನ್ನು ಬೆಳಸಿದರು. (36–38) ಅವರ ಮಧ್ಯದಲ್ಲಿದ್ದ ಚತುರ್ಮುಖ ಬ್ರಹ್ಮನೂ ಸಹ ಸರ್ವಾಭರಣಾದಿಗಳಿಂದ ಅಲಂಕೃತನಾದನು. ನಾಲ್ಕು ತಲೆಗಳನ್ನು ಹೊಂದಿದ್ದ ಬ್ರಹ್ಮನು ತನ್ನ ಪಶ್ಚಿಮದ ತಲೆಗೆ ಕಿರೀಟವನ್ನು, ಮತ್ತೊಂದು ತಲೆಗೆ ಕೆಂಪು ಬಣ್ಣದ ಉಷ್ಣೀಶ (ರುಮಾಲು) ವನ್ನು, ಬಲಭಾಗದ ತಲೆಗೆ ಶಿರೋವೇಷ್ಟನ (ಮುಂಡಾಸ)ವನ್ನು ಮತ್ತು ಕುಶ (ದರ್ಭೆ) ಗಳಿಂದ ನಿರ್ಮಿತವಾದ ಕಿರೀಟವನ್ನು ಮತ್ತೊಂದು ತಲೆಯಲ್ಲಿ ಧರಿಸಿದನು. ನೀಲಮಣಿ, ಮುತ್ತು ವೈಡೂರ್ಯಾದಿಗಳಿಂದ ಹೊಳೆಯುತ್ತಿದ್ದ ಕರ್ಣಕುಂಡಲಗಳನ್ನು ಧರಿಸಿದ ಬ್ರಹ್ಮನು, ರತ್ನಕಂಕಣದಿಂದ ಕೈಗಳನ್ನು ಅಲಂಕರಿಸಿಕೊಂಡು, ನವರತ್ನ ಸಮಾಯುಕ್ತವಾದ ಕವಚ, ಮುತ್ತು–ಮಣಿಗಳಿಂದ ಹೊಳೆಯುತ್ತಿದ್ದ ಕಾಂಚೀದಾಮ (ಒಡ್ಯಾಣ) ವನ್ನು ಧರಿಸಿಕೊಂಡು, (39–41) ಹಂಸಾರೂಢನಾಗಿ, ಸಾವಿತ್ರೀ, ಗಾಯತ್ರೀ ಸರಸ್ವತಿ, ಇವರನ್ನು, ತನ್ನ ಮನಃಪುತ್ರರು, ವೀರ್ಯಪುತ್ರರು, ಮೊಮ್ಮಕ್ಕಳು, ಬ್ರಾಹ್ಮಣರು, ಇವರನ್ನು

ಅಲಂಕಾರಯುತಾನ್ಕೃತ್ವಾ ಗಮನಾಭಿಮುಖೋಽಭವತ್ ॥43॥

ಹಂಸಂ ಚಂದ್ರಪ್ರತೀಕಾಶಂ ಸಮಾರುಹ್ಯ ಪಿತಾಮಹಃ ।
ಸ್ವಸೇನಾಂ ಪುರತಃ ಕೃತ್ವಾ ನಾಭಿಜೋ ನಿರ್ಯಯೌ ಪುರಾತ್ ॥44॥

ತದಾ ಪುತ್ರಾದಯಸ್ಸರ್ವೇ ಸರಸ್ವತ್ಯಾದಿಕಾಃ ಸ್ತ್ರಿಯಃ ।
ವಾಹನಾನಿ ವಿಚಿತ್ರಾಣಿ ವಿಮಾನಾನಿ ರಥಾನಪಿ ॥45॥

ಆರುಹ್ಯ ಸರ್ವೇ ಬ್ರಹ್ಮಾಣಮನುಜಗ್ಮುಸ್ಸಸಂಭ್ರಮಾಃ ।
ಸೇನಾಮಧ್ಯೇತು ರಾಜಾಽಸೌ ವಾಯುಸ್ಸರ್ವಾತ್ಮಗೋಚರಃ ॥46॥

ದಿವ್ಯಮೇಣಂ ಸಮಾರುಹ್ಯ ಸರ್ವಾಭರಣಭೂಷಿತಃ ।
ಘಂಟಾಚಾಮರನಿರ್ಘೋಷೈಸ್ಸಾನುಗೈಃ ಸಮರಾಜತ ॥47॥

ಶೂರಾ ವೀರವರಾ ಧೀರಾಃ ಗಜಾಶ್ವರಥಸಂಸ್ಥಿತಾಃ ।
ಸಮುಚ್ಛ್ರಿತೈರ್ಧ್ವಜೈರ್ದೀರ್ಘಪತಾಕೈಸ್ಸಮಲಂಕೃತಾಃ ॥48॥

ನಾನಾಯುಧಧರಾ ವೀರಾಸ್ತೇಷಾಂ ಮಧ್ಯೇ ಪಿತಾಮಹಃ ।
ರರಾಜ ಚಂದ್ರಮಾ ರಾಜನ್ ತಾರಾಭಿರ್ಗಗನೇ ಯಥಾ ॥49॥

ಶ್ವೇತಛತ್ರಂ ಹೇಮದಂಡಂ ರತ್ನಕುಂಭಮಹೋಜ್ಜ್ವಲಮ್ ।
ಯೋಜನತ್ರಯವಿಸ್ತೀರ್ಣಂ ದಶಲಕ್ಷಜನೈರ್ವೃತಮ್ ॥50॥

ಅಲಂಕೃತರನ್ನಾಗಿಸಿ, ರಥ, ಅಶ್ವ, ಗಜಾದಿಗಳಿಂದ ಕೂಡಿಕೊಂಡು, ಸೈನ್ಯವನ್ನು ಮುಂದೆ ಮಾಡಿಕೊಂಡು ಶುಭ್ರವಾದ ಹಂಸವನ್ನೇರಿ ಭೂಲೋಕವನ್ನು ಕುರಿತು ಪ್ರಯಾಣ ಬೆಳಸಿದನು. (42–44) ಸರಸ್ವತೀದೇವಿಯೇ ಮುಂತಾದ ಪರಿವಾರವೂ ಸಹ ವೇಂಕಟಾಧಿಪತಿಯ ವಿವಾಹ ಮಹೋತ್ಸವಕ್ಕಾಗಿ ಸರ್ವಾಲಂಕಾರ ಭೂಷಿತರಾಗಿ, ನಾನಾವಿಧವಾದ ವಾಹನಗಳನ್ನು ಏರಿ ಆತನನ್ನು ಹಿಂಬಾಲಿಸಿತು. (45–46) ಸಮಸ್ತ ಜಗನ್ನಿಯಾಮಕನಾದ, ಪ್ರಾಣಪತಿಯಾದ ವಾಯುದೇವರೂ ದಿವ್ಯವಾದ ಜಿಂಕೆಯನ್ನೇರಿ, ಘಂಟಾ–ಚಾಮರಗಳ ಧ್ವನಿಗೈಯುತ್ತಾ ಭಾರತೀ ದೇವಿಯರು ಹಾಗೂ ಸಮಸ್ತ ಪರಿವಾರ ಸಮೇತರಾಗಿ, ಬ್ರಹ್ಮದೇವರನ್ನು ಅನುಸರಿಸಿದರು. ನಾನಾ ಆಯುಧಗಳನ್ನು ಧರಿಸಿದ, ಉನ್ನತವಾದ ಪತಾಕೆಗಳಿಂದ ಅಲಂಕೃತವಾಗಿದ್ದ ರಥ, ಕುದುರೆ ಆನೆಗಳ ಮೇಲೆ ಕುಳಿತಿದ್ದ ನಾನಾ ವಿಧರಾದ ವೀರರು, ಧೀರರು, ಶೂರರು ಪರಾಕ್ರಮಿಗಳ ಮಧ್ಯದಲ್ಲಿ ಚತುರ್ಮುಖನು ಆಕಾಶದಲ್ಲಿ ನಕ್ಷತ್ರಗಳ ಮಧ್ಯದಲ್ಲಿ ಹೊಳೆಯುವ ಚಂದ್ರನಂತೆ ಕಾಣುತ್ತಿದ್ದನು. (47–49) ಶ್ವೇತಛತ್ರ, ಬಂಗಾರದ ದಂಡ, ರತ್ನಕುಂಭಗಳು

ನಭಃ ಪ್ರಕಾಶಯಾಮಾಸ ದೇವದೇವಸ್ಯ ವೈ ತದಾ ।
ಅವಾದಯನ್ಮಹಾರಾಜ ವಾದ್ಯಾನಿ ವಿವಿಧಾನಿ ಚ ॥51॥

ಭೇರೀಣಾಂ ನವಸಾಹಸ್ರಂ ದುಂದುಭೀನಾಂ ಶತತ್ರಯಮ್ ।
ಮೃದಂಗಪಣವಾನ್ ಢಕ್ಕಾಮಡ್ಡುನಿಸ್ಸಾಣಡಿಂಡಿಮಾನ್ ॥52॥

ಗೋಮುಖಾನ್ಮುರಜಾನ್ ವೀಣಾಸ್ತಥಾ ವೈ ಝುರ್ಝುರಾದಿಕಾನ್ ।
ಬರ್ಬರೈಃ ಶತಶೃಂಗೈಶ್ಚ ದೀರ್ಘಶೃಂಗೈಶ್ಚ ಸುಸ್ವರೈಃ ॥53॥

ಸಪ್ತಸ್ವರೈಃ ಸಪ್ತರಾಗೈಸ್ಸರ್ಪಾಣಾಮಪಿ ಮೋಹಕೈಃ ।
ಪೂತ್ಕಾರೈಶ್ಚ ವಷಟ್ಕಾರೈಃ ಧ್ವನಯದ್ಭಿಶ್ಚ ವಾರಿಜಾನ್ ॥54॥

ಗಂಧರ್ವೈರ್ಗಾನನಿಪುಣೈಃ ಸ್ವರಮೂರ್ಛಾವಿಚಕ್ಷಣೈಃ ।
ವೀಣಾದಂಡಸುಯಂತ್ರಾಣಿ ವಾದಯದ್ಭಿಃ ಶುಭಾವಹೈಃ ॥55॥

ನರ್ತಕೈರ್ನಟಕೈಶ್ಚಾಪಿ ಹಾಹಾಹೂಹೂಮುಖೈರ್ವೃತಮ್ ।
ಸ್ತೂಯಮಾನಂ ತುಂಬುರುಣಾ ಸೂತಮಾಗಧವಂದಿಭಿಃ ॥56॥

ಸುರಾಃ ಸರ್ವೇ ಶ್ರೀನಿವಾಸಮಹೋತ್ಸವದಿದೃಕ್ಷವಃ ।
ಅನುಜಗ್ಮುರ್ಮಹಾರಾಜಂ ಬ್ರಹ್ಮಾಣಂ ಯಾಂತಮಗ್ರತಃ ॥57॥

ಇವುಗಳಿಂದ ಅಲಂಕೃತವಾಗಿದ್ದ ಬ್ರಹ್ಮದೇವರ ಪರಿವಾರವು ಮೂರು ಯೋಜನ ವಿಸ್ತೀರ್ಣವಾಗಿದ್ದು ಹತ್ತು ಲಕ್ಷ ಜನರಿಂದ ಉಪೇತ ವಾಗಿತ್ತು. ದೇವದೇವನಾದ ಚತುರ್ಮುಖನ ತೇಜಸ್ಸಿನಿಂದ ಆಕಾಶವೆಲ್ಲವೂ ಸಹ ಹೊಳೆಯುತ್ತಿತ್ತು. (50–51) ಅವನ ಸೈನ್ಯವು ನಾನಾ ವಿಧವಾದ ವಾದ್ಯಗಳ ಧ್ವನಿಯನ್ನು ಗೈಯುತ್ತಾ ಮುಂದುವರೆಯುತ್ತಿತ್ತು. 9000 ಭೇರಿಗಳು, 300 ದುಂದುಭಿಗಳು, ಮೃದಂಗ, ಮದ್ದಳೆ, ಚಂಡೆ, ಢಕ್ಕೆ, ನಿಸ್ಸಾಣ, ಡಿಂಡಿಮ, ಗಳನ್ನು ಬಾರಿಸುತ್ತಾ, ಗೋಮುಖ (ತುತ್ತೂರಿ), ಮುರಜ, ವೀಣಾ, ಝುರ್ಝುರಿಕೆ, ಕಹಳೆ, ಕೊಂಬು ಮೊದಲಾದ ಸುಸ್ವರಯುಕ್ತವಾದ ವಾದ್ಯಗಳನ್ನು, ಸಪ್ತಸ್ವರಗಳಿಂದ, ಸಪ್ತರಾಗಗಳಿಂದ ಸರ್ಪಗಳಿಗೂ ಸಹ ಆಕರ್ಷಕವಾದ ಧ್ವನಿಯನ್ನು ಮಾಡುತ್ತಾ, ಪೂತ್ಕಾರ, ವಷಟ್ಕಾರಗಳನ್ನು ಮಾಡುವ ಶಂಖಗಳನ್ನೂದುತ್ತಾ ಮುಂದುವರೆಯುತ್ತಿತ್ತು. ನಾನಾವಿಧವಾದ ಸ್ವರಗ್ರಾಮಗಳನ್ನು ಸೃಷ್ಟಿಮಾಡುತ್ತಾ, ವೀಣಾದಿಗಳನ್ನು ನುಡಿಸುತ್ತಿದ್ದ ಹಾಹಾಹೂಹೂ ಮೊದಲಾದ ಗಂಧರ್ವರು ಗಾನವನ್ನು ಮಾಡುತ್ತಿದ್ದರು. ನರ್ತಕರು ನರ್ತನವನ್ನು, ನಟರು ನಾಟ್ಯವನ್ನು ಮಾಡುತ್ತಿದ್ದರು. (52–56) ತುಂಬುರು, ಸೂತಮಾಗದರೇ ಮೊದಲಾದ ವಂದಿಜನರು ಪರಮಾತ್ಮನನ್ನು ಮತ್ತು ಬ್ರಹ್ಮದೇವರನ್ನು ಸ್ತೋತ್ರಮಾಡುತ್ತಿದ್ದರು. (57) ಇಂತಹ ಪರಿವಾರದಿಂದ

ಸತ್ಯಲೋಕಾತ್ತಪೋಲೋಕಂ ಜನೋಲೋಕಂ ತತಃ ಪರಮ್ ।
ಮಹರ್ಲೋಕಾತ್ಸ್ವರ್ಗಲೋಕಂ ಸ್ವರ್ಗಲೋಕಾನ್ಮಹೀತಲಮ್ ॥58॥

ಸಂಪ್ರಾಪ್ತಂ ತಂ ಮಹಾಬಾಹುಂ ಬ್ರಹ್ಮಾಣಂ ದದೃಶುರ್ಜನಾಃ ।
ಋಷಯಸ್ಸತ್ವಸಂಪನ್ನಾಃ ಅದೃಷ್ಟ್ವಾಽದ್ಭುತದರ್ಶನಮ್ ॥59॥

ವಾಸುದೇವಸಮಾಕಾರಂ ವೈಶ್ವಾನರಸಮಾನನಮ್ ।
ಸರ್ವಲೋಕಪ್ರಭುಂ ಶಾಂತಂ ಸಾಕ್ಷಾನ್ನಾರಾಯಣಾತ್ಮಜಮ್ ॥60॥

ಕೇಚಿನ್ನಾರಾಯಣಂ ತಂ ಹಿ ಗಾಂಭೀರ್ಯಾದಬ್ರುವಂಸ್ತತಃ ।
ಕೇಚಿನ್ನಾರಾಯಣೋ ನಾಯಂ ವದನಾನಾಂ ವಿಪರ್ಯಯಾತ್ ॥61॥

ಇತ್ಯಬ್ರುವಂಸ್ತತಃ ಸರ್ವೇ ಮತ್ವಾ ತಂ ಚತುರಾನನಮ್ ।
ಹಂಸಸ್ಥಂ ಭೂಷಣೈರ್ಯುಕ್ತಂ ಕವಚಾಡಂಬರಾನ್ವಿತಮ್ ॥62॥

ಪಪ್ರಚ್ಛುಸ್ತಾನ್ಮಹೀದೇವಾಃ ಬ್ರಹ್ಮಣೋಽನುಚರಾನ್ ಜನಾನ್।

ಮಹೀದೇವಾ ಊಚುಃ–

'ಕಂ ವಾ ದೇಶಂ ಪ್ರತಿ ಜನಾಃ ಕುತೋ ವಾ ಗಮನಂ ವಿಧೇಃ' ॥63॥

ಪರಿವೃತನಾದ ಚತುರ್ಮುಖ ಬ್ರಹ್ಮದೇವರನ್ನು ದೇವತೆಗಳೆಲ್ಲರೂ ಶ್ರೀನಿವಾಸನ ವಿವಾಹವನ್ನು ನೋಡುವದರಗೋಸ್ಕರವಾಗಿ ಹಿಂಬಾಲಿಸುತ್ತಾ ಸತ್ಯಲೋಕ, ತಪೋಲೋಕ, ಜನೋಲೋಕ, ಮಹರ್ಲೋಕ, ಸ್ವರ್ಗಲೋಕಗಳನ್ನು ದಾಟಿ ಬಂದರು. (58) ಬ್ರಹ್ಮದೇವನು ಭೂಲೋಕಕ್ಕೆ ಆಗಮಿಸುತ್ತಿರಲು ಋಷಿಗಳು, ಸಜ್ಜನರು ಹಿಂದೆಂದೂ ನೋಡದಿದ್ದ, ವಾಸುದೇವನಂತೆ ವರ್ಚಸ್ವಿಯಾಗಿದ್ದ, ಬೆಂಕಿಯಂತೆ ತೋಜೋರೂಪ ನಾಗಿದ್ದ, ಸರ್ವಲೋಕ ಸ್ವಾಮಿಯಾಗಿದ್ದ ಆ ಬ್ರಹ್ಮನನ್ನು ನೋಡಿ ಸಾಕ್ಷಾತ್ ನಾರಾಯಣನ ಮಗನೆಂದು ಬಗೆದರು. (59–60) ಅವನ ಗಾಂಭೀರ್ಯವನ್ನು ಕಂಡ ಕೆಲವರು ಇವನನ್ನೇ ನಾರಾಯಣನೆಂದು ತಿಳಿದರೆ ಮತ್ತೆ ಕೆಲವರು ಇವನಿಗೆ ನಾಲ್ಕು ಮುಖಗಳಿರುವದರಿಂದ ಇವನು ನಾರಾಯಣನಲ್ಲ ವೆಂದು ತಿಳಿದರು. ಕವಚಾದಿಗಳನ್ನು ಧರಿಸಿ, ಹಂಸದ ಮೇಲೆ ಅಲಂಕರಿಸಿಕೊಂಡು ಕುಳಿತಿದ್ದ ಬ್ರಹ್ಮನನ್ನು ನೋಡಿ ಹೀಗೆ ಪರಸ್ಪರರಾಗಿ ಮಾತನಾಡಿದ ಬ್ರಾಹ್ಮಣರು (62) ಬ್ರಹ್ಮದೇವರ ಅನುಚರರನ್ನು 'ನೀವೆಲ್ಲಗೆ ಹೋಗುತ್ತಿರುವಿರಿ? ಏತಕ್ಕಾಗಿ ಈ ಭೂಲೋಕಪ್ರಯಾಣ?' ಎಂದು ನುಡಿದರು. (63) ಆಗ ಜನರೆಲ್ಲರೂ 'ನಾವೆಲ್ಲರೂ ಶ್ರೀನಿವಾಸನ ವಿವಾಹವನ್ನು ನೋಡುವದಕ್ಕಾಗಿ ಸತ್ಯಲೋಕದಿಂದ

ಜನಾ ಊಚುಃ–

'ಗಚ್ಛಾಮೋಽದ್ಯ ವಿವಾಹಾರ್ಥಂ ಶ್ರೀನಿವಾಸಸ್ಯ ಭೂತಲಮ್ ।
ತೇನೈವಾಕಾರಿತಾಸ್ಸರ್ವೇ ಸತ್ಯಲೋಕಾನ್ಮಹೀಸುರಾಃ ॥64॥

ತೇ ಶ್ರುತ್ವಾ ವಚನಂ ತೇಷಾಮನುಜಗ್ಮುರ್ಮಹರ್ಷಯಃ ।
ಸಾಗ್ನಿಹೋತ್ರಾಸ್ಸಪುತ್ರಾಶ್ಚ ಸಶಿಷ್ಯಾಸ್ಸಪರಿಗ್ರಹಾಃ ॥65॥

ಏವಂ ವಿಭವಮಾಸ್ಥಾಯ ಬ್ರಹ್ಮಾಽಗಾದ್ವೇಂಕಟಾಚಲಮ್ ।
ವಾದಿತ್ರಾಣಾಂ ಸ್ವನೇನೈವ ತಥಾ ದುಂದುಭಿನಿಸ್ವನೈಃ ॥66॥

ಆಪೂರಿತಂ ಜಗದಿದಂ ಸಶೈಲವನಕಾನನಮ್ ।
ಏತಸ್ಮಿನ್ನೇವ ಕಾಲೇ ತು ಭಗವಾನ್ ಲೌಕಿಕೈಃ ಸಮಃ ॥67॥

ಅದೃಷ್ಟ್ವಾ ಖಗರಾಜಂ ತಂ ಮಾತರಂ ವಾಕ್ಯಮಬ್ರವೀತ್ ।

ಶ್ರೀನಿವಾಸ ಉವಾಚ–

'ಕಿನ್ನಾಗತೋಽಂಬ ಖಗರಾಟ್ಪುತ್ರಾರ್ಥಂ ಪ್ರೇಷಿತೋ ಮಯಾ ॥

ಮಾರ್ಗೇ ನಿರೋಧಿತಃ ಕೇನ ಕಿಂ ವಾ ಸ್ಯಾತ್ ಕಾರಣಂ ವದ ।
ಏವಂ ವದತಿ ಗೋವಿಂದೇ ಚಾರೋ ದೃಷ್ಟಿಪಥಂ ಗತಃ ॥69॥

ಚಾರಂ ದೃಷ್ಟ್ವಾತಿಸಂತೋಷಂ ಸ ಲೇಭೇ ಪುರುಷೋತ್ತಮಃ ।

ಶ್ರೀನಿವಾಸ ಉವಾಚ–

ಭೂಲೋಕಕ್ಕೆ ಹೊರಟಿರುವೆವು' ಎಂದು ನುಡಿದರು. (64) ಇದನ್ನು ಕೇಳಿ ಬ್ರಾಹ್ಮಣರೂ ಸಹ ವಿವಾಹವನ್ನು ನೋಡುವದಕ್ಕಾಗಿ ತಮ್ಮ ಪತ್ನಿಯರು, ಶಿಷ್ಯರು, ಪುತ್ರರು, ಅಗ್ನಿಹೋತ್ರಾದಿಗಳಿಂದ ಸಮೇತರಾಗಿ ದೇವತೆಗಳನ್ನು ಹಿಂಬಾಲಿಸಿ ಹೊರಟರು. (65) ಅವರ ಕಲಕಲ ಶಬ್ದ, ಮಂಗಳವಾದ್ಯಗಳ ಘೋಷ ಇವುಗಳ ಸದ್ದಿನಿಂದ ಜಗತ್ತೆಲ್ಲವೂ ತುಂಬಿಹೋಗಿದೆಯೆಂದೆನಿಸುತ್ತಿತ್ತು.

ಇದೇ ಸಮಯದಲ್ಲಿ ಶ್ರೀನಿವಾಸನು ಲೌಕಿಕ ಮನುಷ್ಯರಂತ ತನ್ನ ತಾಯಿಯೊಂದಿಗೆ ಮಾತನಾಡುತ್ತಾ 'ಪಕ್ಷಿಶ್ರೇಷ್ಠನಾದ ಗರುಡನು ನನ್ನಿಂದ ಬ್ರಹ್ಮದೇವರ ಲೋಕಕ್ಕೆ ಕಳುಹಿಸಲ್ಪಟ್ಟಿರುವನು. ಅವನಿನ್ನೂ ಹಿಂದಿರುಗಿ ಬಂದಿಲ್ಲ. ಅವನನ್ನು ಯಾರಾದರೂ ತಡೆದಿರುವರೋ ಹೇಗೆ? ತಡವಾಗಲು ಕಾರಣವೇನೆಂದು ತಿಳಿಯುತ್ತಿಲ್ಲ' ಎಂದು ನುಡಿಯುತ್ತಿದ್ದಾಗಲೇ ಚಾರನೋರ್ವನು ಬಂದನು. (69) ಅವನನ್ನು ನೋಡಿ ಸಂತುಷ್ಟನಾದ ಶ್ರೀನಿವಾಸನು 'ನನ್ನ ಪುತ್ರನು ಎಲ್ಲಿರುವನೆಂದು

'ಕ್ವ ಚಾರ ಮಮ ಪುತ್ರಸ್ತು ಕೇನ ಚ ಪ್ರೇಷಿತೋ ಭವಾನ್' ॥70॥

ಚಾರ ಉವಾಚ–

'ಅದ್ಯಾಽಗಚ್ಛತಿ ಗೋವಿಂದ ಗಂಗಾಂ ತರತಿ ತೇ ಸುತಃ ।
ಏವಂ ವದತಿ ಚಾರೇ ತು ಪುನರೇಕೋಽಭ್ಯಭಾಷತ ॥71॥

ದ್ವಿತೀಯಚಾರ ಉವಾಚ–

'ಗೋದಾಂ ತರತಿ ತೇ ಪುತ್ರಃ ಯುಕ್ತಃ ಪೌರಜನೈಸ್ಸಹ' ।
ಸ ದೂತವಚನಂ ಶ್ರುತ್ವಾ ಕಿಂಚಿದ್ಧಾಸ್ಯಮುಖೋಽಭವತ್ ॥72॥

ತದಾ ಜಗಾಮ ಗರುಡಃ ಪಕ್ಷಿರಾಡ್ಬ್ರಹ್ಮಚೋದಿತಃ ।
।ಪ್ರಣಿಪತ್ಯ ಶ್ರೀನಿವಾಸಂ ಪ್ರೋವಾಚ ಚ ವಚಸ್ತದಾ ॥73॥

ಗರುಡ ಉವಾಚ–

'ಕೃಷ್ಣಾಂ ತೀರ್ತ್ವಾ ತು ತೇ ಪುತ್ರಃ ಶ್ರೀಶೈಲಮುಪಗಮ್ಯ ಚ ।
ಅಹೋಬಲಂ ಸಮಾಪನ್ನಃ ತತ್ರಾಜ್ಞಪ್ತೋಽಹಮಾಗತಃ' ॥74॥

ಇತ್ಯೇವಮುಚ್ಯಮಾನೇ ತು ಗರುಡೇನ ಮಹಾತ್ಮನಾ ।
ತತ್ಕ್ಷಣೇನೈವ ರಾಜೇಂದ್ರ ವಿಷ್ವಕ್ಸೇನೋಽಭಿವಂದ್ಯ ಚ ॥75॥

ವಿನೀತೋ ವಾಚಮೂಚೇಽಥ ಶ್ರೀನಿವಾಸಂ ಪರಾತ್ಪರಮ್ ।

ವಿಶ್ವಕ್ಸೇನ ಉವಾಚ–

'ತೌಂಬುರಂ ತೀರ್ಥಮಾಸಾದ್ಯ ಹರೇ ತತ್ರಾವಗಾಹತೇ ॥76॥

ಕೇಳಿದಾಗ(70) ಚಾರನು ಗಂಗಾನದಿಯನ್ನು ನಿನ್ನ ಮಗನು ದಾಟುತ್ತಿರುವನೆಂದು ತಿಳಿಸಿದನು. ಅಷ್ಟರಲ್ಲಿಯೇ ಎರಡನೆಯ ಚಾರನು ಸಪರಿವಾರನಾದ ಬ್ರಹ್ಮದೇವನು ಗೋದಾವರೀ ನದಿಯನ್ನು ದಾಟಿ ಬಂದಿರುವನೆಂದು ನುಡಿದನು. ಇದರಿಂದ ಸಮಾಧಾನಗೊಂಡ ನಾರಾಯಣನು ಮಂದಹಾಸವನನ್ನು ಬೀರಿದನು.(71–72) ಅದೇ ಹೊತ್ತಿಗೆ ಚತುರ್ಮುಖನಿಂದ ಆಜ್ಞಪ್ತನಾಗಿ ಬಂದಿದ್ದ ಗರುಡನು ಶ್ರೀನಿವಾಸನಿಗೆ ನಮಸ್ಕರಿಸಿ (73) 'ನಿನ್ನ ಮಗನು ಕೃಷ್ಣಾನದಿಯನ್ನು ದಾಟಿ ಶ್ರೀಶೈಲಕ್ಕೆ ಬಂದು ಅಲ್ಲಿಂದ ಅಹೋಬಲಕ್ಕೆ ಬಂದಿರುವನು' (74) ಎಂದು ನುಡಿಯುತ್ತಿದ್ದಂತೆ ವಿಷ್ವಕ್ಸೇನನು ಅಲ್ಲಿಗೆ ಬಂದು, ದೇವನಿಗೆ ನಮಸ್ಕರಿಸಿ 'ತುಂಬುರು ತೀರ್ಥದಲ್ಲಿ ಸ್ನಾನವನ್ನು ಮಾಡಿ ನಿನ್ನ ಮಗನಾದ ಚತುರ್ಮುಖ ಬ್ರಹ್ಮನು ನಿನ್ನ ದರ್ಶನಾರ್ಥವಾಗಿ ಇಲ್ಲಿಗೆ

ಪುತ್ರಸ್ತವ ಜಗತ್ಕರ್ತುಃ ಪರಮಾತ್ಮಂಶ್ಚತುರ್ಮುಖಃ ।
ಪುತ್ರಸ್ತವಾಗಚ್ಛತೀಹ ಭವದ್ದರ್ಶನಕೌತುಕೀ ॥77॥

ಸೇನಾಪತೌ ವದತ್ಯೇವಂ ಭಗವಾನುತ್ಥಿತೋ ಮುದಾ ।
ಗರುಡಸ್ಕಂಧಮಾರೂಢಃ ಪ್ರಯಾಣಾಭಿಮುಖೋ ಹರಿಃ ॥78॥

ಉತ್ತರಾಭಿಮುಖಃ ಪ್ರಾಯಾತ್ ಪುತ್ರಸ್ನೇಹೇನ ಭೂಮಿಪ ।
ಗಮನಾಭಿಮುಖಂ ದೃಷ್ಟ್ವಾ ವಿಷ್ವಕ್ಸೇನೋಽತಿವೇಗವಾನ್ ॥79॥

ತ್ವರಯಾ ಪುರತೋ ಗತ್ವಾ ಬ್ರಹ್ಮಾಣಮುಪಗಮ್ಯ ಚ ।

ವಿಷ್ವಕ್ಸೇನ ಉವಾಚ–

'ಭಗವಾನರವಿಂದಾಕ್ಷಸ್ತವ ದರ್ಶನಲಾಲಸಃ ॥80॥

ಗರುಡಸ್ಕಂಧಮಾರುಹ್ಯ ಸಮಾಗಚ್ಛತಿ ತೇಽಂತಿಕಮ್ ।
ವಿಷ್ವಕ್ಸೇನೋದಿತಂ ಶ್ರುತ್ವಾ ಭಕ್ತ್ಯಾ ಪರಮಯಾ ಮುದಾ ॥81॥

ಚಂದ್ರಬಿಂಬಸಮಾದ್ಧಂಸಾದವರುಹ್ಯ ಪಿತಾಮಹಃ ।
ಪಾದಾಭ್ಯಾಮಗಮಚ್ಛೀಘ್ರಂ ಯತ್ರಾಽಗಚ್ಛತಿ ಕೇಶವಃ ॥82॥

ಸ ದದರ್ಶ ಮಹಾರಾಜ ಜನಕಂ ಚತುರಾನನಃ ।
ದಂಡವತ್ಪ್ರಣಿಪತ್ಯಾಥ ಚಾಗ್ರೇ ಬಧ್ವಾ ಕರೌ ಸ್ಥಿತಃ ॥83॥

ಬರುತ್ತಿರುವನು' ಎಂದು ವಿನೀತನಾಗಿ ನುಡಿದಾಗ (75–77) ಮಗನ ಮೇಲೆ ಅತ್ಯಂತ ಅಂತಃಕರಣವನ್ನು ಹೊಂದಿದ್ದ ಶ್ರೀನಿವಾಸನು ಮಗನನ್ನು ಕಾಣಲು ಉತ್ಸುಕನಾಗಿ, ಅತ್ಯಂತ ಹರ್ಷದಿಂದ, ಗರುಡನ ಹೆಗಲನ್ನೇರಿಕೊಂಡು ಬ್ರಹ್ಮನಿದ್ದ ಉತ್ತರ ದಿಕ್ಕಿನೆಡೆಗೆ ಪ್ರಯಾಣ ಬೆಳೆಸಿದನು. (78–79) ಶ್ರೀನಿವಾಸನೇ ಬ್ರಹ್ಮನಿದ್ದೆಡೆಗೆ ಧಾವಿಸಿ ಬರುವದನ್ನು ನೋಡಿದ ವಿಷ್ವಕ್ಸೇನನು ವೇಗವಾಗಿ ಬ್ರಹ್ಮದೇವರಿದ್ದಲ್ಲಿಗೆ ಹೋಗಿ, 'ಭಗವಂತನಾದ ಪುಂಡರೀಕಾಕ್ಷನು ನಿನ್ನನ್ನು ಕಾಣುವದರಗೋಸ್ಕರವಾಗಿ ನೀನಿದ್ದೆಡೆಗೇ ಗರುಡನನ್ನೇರಿ ಬರುತ್ತಿರುವನು' ಎಂದು ತಿಳಿಸಿದನು. (81) ಇದನ್ನು ಕೇಳಿದ ಚತುರ್ಮುಖ ಬ್ರಹ್ಮದೇವರು ಅತ್ಯಂತ ಭಕ್ತಿಯಿಂದ ಮತ್ತು ಸಂತೋಷದಿಂದ ಚಂದ್ರಮಂಡಲದಂತಿದ್ದ ಬೆಳ್ಳಗಿನ ಹಂಸದಿಂದ ಕೆಳಗಿಳಿದು ಭಗವಂತನನ್ನು ನೋಡುವದರಗೋಸ್ಕರವಾಗಿ ನಡೆಯುತ್ತಲೇ ಅವನು ಬರುತ್ತಿರುವ ದಿಕ್ಕಿನಲ್ಲಿಯೇ ವೇಗವಾಗಿ ನಡೆದನು. (82) ಮಾರ್ಗದಲ್ಲಿ ತನ್ನ ತಂದೆಯಾದ ಪರಮಾತ್ಮನನ್ನು ಕಂಡ ಚತುರ್ಮುಖ ಬ್ರಹ್ಮನು ಪರಮಾತ್ಮನಿಗೆ ದಂಡವತ್ಪ್ರಣಾಮವನ್ನು ಮಾಡಿ,

ಸ ಚಾವರುಹ್ಯ ಗರುಡಾದಾಸಸಾದ ಪಿತಾಮಹಮ್ ।
ಉತ್ಥಾಪ್ಯಾಽಲಿಂಗ್ಯ ಸ ಸ್ನೇಹಾದುವಾಚ ಮಧುಸೂದನಃ ॥84॥

ಶ್ರೀನಿವಾಸ ಉವಾಚ–

'ಉತ್ತಿಷ್ಠ ತಾತ ಭದ್ರಂ ತೇ ಪಶ್ಯ ಮಾಮಾತುರಂ ಕೃಶಮ್ ।
ಬಹುಕಾಲೇನ ತೇ ಬುದ್ಧಿರ್ಮಮ ದರ್ಶನಲಾಲಸಾ ॥85॥

ತದೇವ ಪರಮಂ ಮನ್ಯೇ ತ್ವದ್ಬುದ್ಧಿರ್ಮಮ ದರ್ಶನೇ ।
ಕೌತೂಹಲಂ ನೋಪನೀತಾ ಕದಾಚಿದಪಿ ಯೇನ ವೈ ॥86॥

ನ ಕಶ್ಚಿದ್ದೀಯತೇ ಕ್ವಾಪಿ ತ್ವಾಂ ವಿನಾ ಚತುರಾನನ' ।
ವದತ್ಯೇವಂ ಹೃಷೀಕೇಶೇ ನೋವಾಚ ಚತುರಾನನಃ ॥87॥

ಮುಹೂರ್ತದ್ವಯಮಾತ್ರಂ ತು ಶ್ರೀನಿವಾಸೋಽಪಿ ನೋಚಿವಾನ್।
ಆನಂದಬಾಷ್ಪಸಂಪೂರ್ಣನಯನೌ ತೌ ಪರಸ್ಪರಮ್ ॥88॥

ಸ್ನೇಹಾತ್ಪ್ರಫುಲ್ಲವದನೌ ಮುಖಂ ದದೃಶತುರ್ಮುದಾ ।
ಪಿತುರ್ಮುಖಂ ಸುತೋಽಪಶ್ಯತ್ಸುತವಕ್ತ್ರಂ ಹರಿಸ್ತಥಾ ॥89॥

ಕೈಗಳನ್ನು ಜೋಡಿಸಿ ಶ್ರೀನಿವಾಸನಿಗೆದುರಾಗಿ ನಿಂತನು. (83) ಶ್ರೀನಿವಾಸನೂ ಸಹ ತನ್ನ ಮಗನಾದ ಚತುರ್ಮುಖನನ್ನು ಕಂಡು, ಗರುಡನಿಂದ ಕೆಳಗಿಳಿದು, ಅವನ ಬಳಿಗೆ ಬಂದು, ಅವನನ್ನು ಹಿಡಿದೆಬ್ಬಿಸಿ, ಆಲಿಂಗಿಸಿ 'ಹೇ ಮಗನೇ! ಎದ್ದೇಳು. ನಿನಗೆ ಮಂಗಳವಾಗಲಿ. ಬಹುಕಾಲದಿಂದಲೂ ಸಹ ನಿನ್ನನ್ನು ನೋಡಬೇಕೆಂದು ಬಯಸಿದ್ದೆನು. (84–85) ನೀನು ಸಹ ನನ್ನನ್ನು ನೋಡಬೇಕೆಂದು ಬಯಸಿರುವಿಯೆಂದು ತಿಳಿದಿರುವೆನು. ನಿನ್ನನ್ನು ನೋಡದೇ ನಾನು ಅತ್ಯಂತ ಕೃಶನಾಗಿರುವೆನು. ನಿನ್ನನ್ನು ನೋಡಬೇಕೆಂದು ನಾನು ಕುತೂಹಲಗೊಂಡಿದ್ದೆನು. ಯಾರನ್ನು ನೋಡಿದರೂ ಸಹ ಆ ಕುತೂಹಲವು ಕಳೆದಿರಲಿಲ್ಲ. ಇಂದು ನನ್ನ ಬಯಕೆಯು ಪೂರ್ಣವಾಗಿರುವದು' ಎಂದು ನುಡಿದನು. ಶ್ರೀನಿವಾಸನು ಹೀಗೆ ನುಡಿಯುತ್ತಿದ್ದರೂ ಸಹ ಆನಂದೋದ್ರೇಕದಿಂದ ಗದ್ಗದ ಕಂಠನಾದ ಚತುರ್ಮುಖ ಬ್ರಹ್ಮನು ಏನೂ ಮಾತನಾಡಲಿಲ್ಲ. (86–87) ಬ್ರಹ್ಮನ ಮುಖವನ್ನು ನೋಡುತ್ತಿದ್ದ ಶ್ರೀನಿವಾಸನೂ ಸಹ ಏನೂ ಮಾತನಾಡದೇ ಎರಡು ಮುಹೂರ್ತಗಳಷ್ಟು ಕಾಲ ಮೌನವಾಗಿದ್ದನು. ಇವರಿಬ್ಬರೂ ಸಹ ಆನಂದಬಾಷ್ಪದಿಂದ ಕಣ್ಣುಗಳನ್ನು ತುಂಬಿಕೊಂಡು, ಅತ್ಯಂತ ಸಂತುಷ್ಟರಾಗಿ ಪರಸ್ಪರವಾದ ಪ್ರೀತಿಯಿಂದ ಒಬ್ಬರನ್ನೊಬ್ಬರು ನೋಡುತ್ತಾ ಪರಮಾನಂದಭರಿತರಾದರು. (88–89) ಪರಮಾತ್ಮ ಮತ್ತು ಬ್ರಹ್ಮದೇವರು ಇವರಿಬ್ಬರೂ

ತತಃ ಸಂತುಷ್ಟಮನಸೌ ಲೇಭಾತೇ ಪರಮಾಂ ಮುದಮ್ ।
ತೌ ಕ್ರೀಡಂತೌ ಶ್ರೀನಿವಾಸಬ್ರಹ್ಮಾಣೌ ದೇವಸಂಸದಿ ॥90॥

ಪಿತಾಪುತ್ರೌ ತದಾ ದೃಷ್ಟ್ವಾ ಸತ್ಯಲೋಕನಿವಾಸಿನಃ ।
ಲೇಭಿರೇ ಪರಮಾನಂದಂ ತನ್ಮಯಾಮೋಹಿತಾಸ್ಸುರಾಃ ॥91॥

ದೇವಾ ಊಚುಃ–

'ನ ತೇನ ಸದೃಶಃ ಪುತ್ರೋ ನ ತೇನ ಜನಕೋ ಭುವಿ' ।
ಪ್ರಶಶಂಸುರ್ಮಹಾರಾಜ ಭಕ್ತಿಸ್ನೇಹವಶಂ ಗತಾಃ ॥92॥

ತತಸ್ಸುತಂ ಸಮಾಶ್ವಾಸ್ಯ ಪರಿಮೃಜ್ಯಾಕ್ಷಿಜಂ ಜಲಮ್ ।
ಬ್ರಹ್ಮಣಃ ಪಾಣಿಮುದ್ಧೃತ್ಯ ಸ್ವನೇತ್ರಜಲಮಾಮೃಜತ್ ॥93॥

ವಲ್ಮೀಕಸ್ಥಾನಮಾಸಾದ್ಯ ಪುತ್ರೇಣ ಸಹ ತಸ್ಥಿವಾನ್ ।
ತತ್ರ ಚ ಶ್ರೀನಿವಾಸಸ್ತಮುವಾಚ ಪುರುಷೋತ್ತಮಃ ॥94॥

ಶ್ರೀಭಗವಾನುವಾಚ–

'ಕಚ್ಚಿತ್ತೇ ಕುಶಲಂ ಪುತ್ರ ಸ್ನುಷಾಯಾ ಮಮ ಸಾಂಪ್ರತಮ್ ।

ಸಹ ಯಾವಾಗಲೂ ಒಬ್ಬರನ್ನೊಬ್ಬರು ನೋಡುತ್ತಿದ್ದರೂ ಸಹ ದೇವತೆಗಳ ಮಧ್ಯದಲ್ಲಿ ಬಹುಕಾಲದಿಂದ ಒಬ್ಬರನ್ನೊಬ್ಬರು ನೋಡದಿರುವವರಂತೆ ನಾಟಕವಾಡುತ್ತಿರುವದನ್ನು ಮತ್ತು ಚಿರಕಾಲ ವಿರಹದಿಂದ ತಪ್ತರಾಗಿ ಈಗ ಸಮಾಗಮವನ್ನು ಹೊಂದಿದವರಂತೆ ಕ್ರೀಡಿಸುತ್ತಿದ್ದ ಇವರೀರ್ವರನ್ನು ನೋಡಿದ ಸತ್ಯಲೋಕ ನಿವಾಸಿಗಳು ಭಗವನ್ಮಾಯೆಯಿಂದ ಮೋಹಿತರಾಗಿ (90–91) ಅತ್ಯಂತ ಸಂತೋಷವನ್ನು ಹೊಂದಿ ಅತ್ಯಂತಭಕ್ತಿಯಿಂದ 'ಚತುರ್ಮುಖನಿಗೆ ಸದೃಶನಾದ ಮಗನೂ, ಶ್ರೀನಿವಾಸನಿಗೆ ಸದೃಶನಾದ ಜನಕನೂ ಈ ಜಗತ್ತಿನಲ್ಲೆಲ್ಲಿಯೂ ಸಹ ಕಾಣಸಿಗುವದಿಲ್ಲ' ಎಂದು ಪ್ರಶಂಸಿಸಿದರು. (92–93) ಅನಂತರ ಶ್ರೀನಿವಾಸನು ತನ್ನ ಕೈಯ್ಯಿಂದ ಚತುರ್ಮುಖನ ಕಣ್ಣೀರನ್ನೊರೆಸಿ ಬ್ರಹ್ಮನ ಕೈಯಿಂದ ತನ್ನ ಕಣ್ಣಲ್ಲಿಯ ನೀರನ್ನೊರೆಸಿಕೊಂಡು ಚತುರ್ಮುಖ ಬ್ರಹ್ಮನ ಕೈಯನ್ನು ಹಿಡಿದುಕೊಂಡು ತನ್ನ ನಿವಾಸವಾದ ವಲ್ಮೀಕದೆಡೆಗೆ ಕರೆದುಕೊಂಡು ಬಂದು (94) 'ಹೇ ಪುತ್ರನೇ! ನೀನು ಕುಶಲದಿಂದಿರುವೆಯಾ? ನಿನ್ನ ಪುತ್ರ, ಪೌತ್ರ, ಪತ್ನಿ, ಸೊಸೆ ಮತ್ತು ನಿನ್ನೆಲ್ಲ ಪರಿವಾವರವು ಕ್ಷೇಮದಿಂದ ಇರುವದೋ? ಎಲ್ಲರ ಕ್ಷೇಮಸಮಾಚಾರವನ್ನು ತಿಳಿಸು' ಎಂದು ಬ್ರಹ್ಮದೇವರ ಕುಶಲವನ್ನು ಪ್ರಶ್ನಿಸಿದನು. (95) ಆಗ ಚತುರ್ಮುಖನು ನಿನ್ನ ಅನುಗ್ರಹದಿಂದ ಎಲ್ಲರೂ ಸಹ ಕ್ಷೇಮದಿಂದಿರುವರೆಂದು ತಿಳಿಸಿ 'ನಿಮ್ಮ ಕ್ಷೇಮವಾರ್ತೆಯನ್ನು

ಪುತ್ರಪೌತ್ರಪ್ರಪೌತ್ರಾಣಾಂ ಕ್ಷೇಮಂ ಪ್ರಬ್ರೂಹಿ ಮೇ ಸುತ' ॥95॥

ಬ್ರಹ್ಮೋವಾಚ–

'ಸರ್ವಮಂಗಲಮಸ್ಮಾಕಂ ತ್ವತ್ಪ್ರಸಾದೇನ ಕೇಶವ ।
ತಾತ ಮೇ ವದ ತೇ ಕ್ಷೇಮಂ ಪುರಾಣಪುರುಷೋತ್ತಮ' ॥96॥

ಶ್ರೀಭಗವಾನುವಾಚ–

'ದ್ವಾಪರಾಂತೇ ಕೃತಂ ಕರ್ಮ ಶೃಣು ಪುತ್ರ ಸಮಾಧಿನಾ ।
ವೈಕುಂಠೇ ಶೇಷತಲ್ಪಸ್ಥಂ ಭೃಗುಃ ಪಾದತಲೇನ ಮಾಮ್ ॥97॥

ತತಾಡೋರಸಿ ತೇ ಮಾತುರಾಸ್ಪದೇ ಕಮಲಾಸನ ।
ತದಾ ತೇ ಜನನೀ ಪುತ್ರ ಕರವೀರಪುರಂ ಗತಾ ॥98॥

ತೇನ ದುಃಖೇನ ಸಂತಪ್ತಸ್ತ್ಯಕ್ತ್ವಾ ವೈಕುಂಠಮುತ್ತಮಮ್ ।
ಇಹಾಗತೋ ವೇಂಕಟಾದ್ರಿಂ ತತ್ರಾಪಶ್ಯನ್ನಿಕೇತನಮ್ ॥99॥

ಅತ್ರ ವಲ್ಮೀಕಗೋ ನಿತ್ಯಂ ಚೋಲಭೃತ್ಯಃ ಕುಠಾರತಃ ।
ಪ್ರಾಹರನ್ಮಾಂ ರಾಜಭಾರ್ಯಾತಾಡಿತೋಧೇನುಕೋಪತಃ ॥100॥

ಬೃಹಸ್ಪತಿಪ್ರಸಾದೇನ ಜೀವಾಮಿ ತವ ಕಾರಣಾತ್ ।

ತಿಳಿಸಿರಿ' ಎಂದು ಪ್ರಾರ್ಥಿಸಿದನು. (96) ಆಗ ಶ್ರೀನಿವಾಸನು 'ದ್ವಾಪರ ಯುಗದ ಅಂತ್ಯಭಾಗದಲ್ಲಿ ಭೃಗುಮಹರ್ಷಿಗಳು ವೈಕುಂಠಲೋಕಕ್ಕಾಗಮಿಸಿ ಶೇಷತಲ್ಪದಲ್ಲಿ ಮಲಗಿದ್ದ ನನ್ನನ್ನು ಪಾದದಿಂದ ನಿನ್ನ ತಾಯಿಯಾದ ಲಕ್ಷ್ಮೀದೇವಿಗೆ ಆಶ್ರಯವಾದ ವಕ್ಷಃಸ್ಥಲದಲ್ಲಿ ತಾಡನ ಮಾಡಿದರು. (97) ಇದರಿಂದ ಸಿಟ್ಟಿಗೆದ್ದ ಕಮಲಾದೇವಿಯು ನನ್ನೊಡನೆ ಪ್ರೇಮಕಲಹವನ್ನು ಮಾಡಿಕೊಂಡು ಕರವೀರಪುರಕ್ಕೆ ಬಂದಳು. (98) ಅವಳಿಲ್ಲದೇ ವೈಕುಂಠದಲ್ಲಿರಲು ಬಯಸದ ನಾನೂ ಸಹ ಉತ್ತಮವಾದ ವೈಕುಂಠವನ್ನು ಬಿಟ್ಟು ಈ ವೇಂಕಟಾಚಲದಲ್ಲಿ ವಲ್ಮೀಕವೊಂದನ್ನು ನನ್ನ ನಿವಾಸವನ್ನಾಗಿ ಮಾಡಿಕೊಂಡಿದ್ದೆನು. (99) ಅಲ್ಲಿ ವಾಸವಾಗಿದ್ದಾಗ ಆಕಳು ಹಾಲನ್ನು ಕೊಡದಿರುವದರಿಂದ ಕೋಪಗೊಂಡಿದ್ದ ರಾಣಿಯಿಂದ ಹೊಡೆತವನ್ನು ತಿಂದಿದ್ದ ಚೋಲರಾಜನ ಭೃತ್ಯನು ನನ್ನ ಹುತ್ತಿನ ಮೇಲೆ ಹಾಲನ್ನು ಸುರಿಸುತ್ತಿದ್ದ ಆಕಳಿನ ಮೇಲಿನ ಸಿಟ್ಟಿನಿಂದ ಕೊಡಲಿಯಿಂದ ನನ್ನನ್ನು ಹೊಡೆದನು. (100) ಅದರಿಂದ ನನ್ನ ಶಿರಃಸ್ಫೋಟನವಾಯಿತು. ಆದರೂ ಸಹ ನಿನ್ನನ್ನು ನೋಡಬೇಕೆಂಬ ಒಂದೇ ಒಂದು ಕಾರಣದಿಂದ ಇಂದಿನವರೆಗೂ ಸಹ ಬೃಹಸ್ಪತಿಯಿಂದ ಚಿಕಿತ್ಸೆಯನ್ನು ಪಡೆದು ಬದುಕಿರುವೆನು. ಇಂದು ನಿನ್ನನ್ನು ನೋಡಿದೆನಾದ್ದರಿಂದ ನನ್ನ ದುಃಖ

ಆದ್ಯ ದಗ್ಧಂ ಮಹದ್ದುಃಖಂ ದರ್ಶನಾತ್ತವ ಪುತ್ರಕ ॥101॥

ಅಭಿವಾದಯ ಕಲ್ಯಾಣೀಂ ಮಾತರಂ ಮಮ ನಂದನ' ।
ಇತ್ಯುಕ್ತೋ ಬಕುಲಾಂ ಬ್ರಹ್ಮಾ ವವಂದೇ ಹರಿಮಾತರಮ್ ॥102॥

ಬ್ರಹ್ಮೋವಾಚ–

'ಜನನೀ ತವ ಗೋವಿಂದ ಕುತ್ರೇಯಂ ಜನಿತಾ ಪುರಾ ।
ಏತದಾಖ್ಯಾಹಿ ಭಗವಂಚ್ಛ್ರೋತುಂ ಕೌತೂಹಲಂ ಹಿ ಮೇ ॥103॥

ಶ್ರೀನಿವಾಸ ಉವಾಚ–

'ಯಶೋದಾ ಬಕುಲಾ ಭೂತ್ವಾ ವರ್ತತೇ ವೇಂಕಟಾಚಲೇ ।
ರಕ್ಷಿತೋಽಹಂ ತಯಾ ಭದ್ರ ಬಹುಕಾಲಂ ಪಿತಾಮಹ ॥104॥

ಆಪತ್ಕಾಲೇ ಹಿ ಯೋ ರಕ್ಷೇತ್ತಂ ವಿದ್ಯಾತ್ಪಿತರಂ ಗುರುಮ್ ।
ಕದಾಚಿನ್ಮೃಗಯಾಸಕ್ತಃ ಪದ್ಮತೀರ್ಥಸಮೀಪತಃ ॥105॥

ಆಗಾಮಹಂ ತತ್ರ ಪುಷ್ಪವನೇ ಕನ್ಯಾ ಉಪಾಗಮನ್ ।
ತಾಸಾಂ ಮಧ್ಯೇ ವಿರಾಜಂತೀ ಕನ್ಯಾ ಕಾಚಿದುಪಾಗಮತ್ ॥106॥

ಯಾಮಾಕಾಶಪ್ರಭೋಃ ಪುತ್ರೀಂ ನಾಮ್ನಾ ಪದ್ಮಾವತೀಂ ವಿದುಃ ।

ವೆಲ್ಲವೂ ನಷ್ಟವಾಯಿತು' ಎಂದು ನುಡಿದು ಅಲ್ಲಿಯೇ ಇದ್ದಬಕುಲೆಯನ್ನು ತೋರಿಸಿ 'ನನ್ನ ತಾಯಿಯಾದ ಬಕುಲೆಗೆ ನಮಸ್ಕರಿಸು' ಎಂದು ನುಡಿದನು. (101–102) ಆಗ ಚತುರ್ಮುಖನು ಅವಳಿಗೆ ನಮಸ್ಕರಿಸಿ 'ಹುಟ್ಟೇ ಇಲ್ಲದ ನಿನಗೆ ತಾಯಿಯೆಲ್ಲಿಂದ ಹುಟ್ಟಿರುವಳು ಎಂಬುದನ್ನು ನನಗೆ ತಿಳಿಸು' ಎಂದು ನುಡಿದಾಗ (103) ಭಗವಂತನು 'ಪೂರ್ವದಲ್ಲಿ ನನ್ನ ಸಾಕುತಾಯಿಯಾಗಿದ್ದ ಯಶೋದೆಯೇ ನನ್ನ ಸೇವಾರ್ಥವಾಗಿ ಬಕುಲೆಯಾಗಿ ವೇಂಕಟಾಚಲದಲ್ಲಿ ಹುಟ್ಟಿ ನನ್ನ ಸೇವೆಯನ್ನು ಮಾಡುತ್ತಾ ಬಹುಕಾಲ ನನ್ನನ್ನು ರಕ್ಷಿಸಿರುವಳು. (104) ಆಪತ್ಕಾಲದಲ್ಲಿ ಯಾರು ನಮ್ಮನ್ನು ರಕ್ಷಿಸುವರೋ ಅವರನ್ನೇ ತಂದೆ, ತಾಯಿ, ಗುರುವೆಂದು ತಿಳಿಯಬೇಕಲ್ಲವೇ? ಒಂದು ಬಾರಿ ನಾನು ಕ್ರೀಡಾರ್ಥವಾಗಿ ಬೇಟೆಯನ್ನಾಡುತ್ತಾ ಪದ್ಮತೀರ್ಥದ ಬಳಿಯಿರುವ ಪುಷ್ಪೋದ್ಯಾನ ಸಮೀಪಕ್ಕೆ ಬಂದಾಗ ಕನ್ಯೆಯರ ಮಧ್ಯದಲ್ಲಿದ್ದ ಆಕಾಶರಾಜನ ಮಗಳಾದ ಪದ್ಮಾವತಿಯೆಂಬ ಸುಂದರಿಯಾದ ಕನ್ಯೆಯನ್ನು ನೋಡಿ ಅವಳ ಅನುಪಮ ಸೌಂದರ್ಯದಿಂದ ಅವಳಲ್ಲಿಯೇ ನನ್ನ ಮನಸ್ಸು ಮೋಹಗೊಂಡಿರುವದು.(106) ಅವಳನ್ನೇ ವಿವಾಹವಾಗಬೇಕೆಂದು ಬಯಸಿರುವೆನು.

ತಾಮೇವೇಚ್ಛತಿ ಮೋಹೇನ ಸೌಂದರ್ಯಾತ್ತತ್ರ ಮೇ ಮನಃ ॥107॥

ತಾಮೇವ ಘಟಯಾಽಶು ತ್ವಂ ಪುತ್ರೋಽಸಿ ಪರಮೋ ಮಮ ।
ವದತ್ಯೇವಂ ಹೃಷೀಕೇಶೇ ಶುಶ್ರುವೇ ದುಂದುಭಿಸ್ವನಃ ॥108॥

ಶ್ರೀಭಗವಾನುವಾಚ –

'ಕಸ್ಯ ವಾದ್ಯಮಿದಂ ಬ್ರೂಹಿ ಕಶ್ಚ ಮಾಮುಪಗಚ್ಛತಿ' ।
ವದತ್ಯೇವಂ ಪರೇ ಧಾಮ್ನಿ ವಾಯುಸ್ತಮಭಿಪದ್ಯತ ॥109॥

ಏಣಂ ಸಮಾರುಹ್ಯ ಸ ಭಾರತೀಶಃ
ಸುಂಗಧಮಾದಾಯ ಯಯೌ ಗಿರೀಂದ್ರಮ್ ।
ಜ್ಯೇಷ್ಠಂ ಸುತಂ ಶ್ರೇಷ್ಠಗುಣಂ ಜನಾರ್ದನಃ
ಮೋಕ್ಷಾವಲಂಬಂ ದದೃಶೇ ಮುದಾನ್ವಿತಃ ॥110॥

ಸ್ಥೀಯತಾ'ಮಿತಿ ತಂ ವಾಯುಂ ಸಾಧುಸಾಧ್ವಿತ್ಯಭಾಷತ ।

ಶ್ರೀನಿವಾಸ ಉವಾಚ–

'ಪುತ್ರಾಣಾಂ ಮಮ ಕಲ್ಯಾಣ ಗರಿಷ್ಠೋ ಭಾರತೀಪತೇ ।
ಭಾರತೀ ಸರ್ವಲೋಕೇಷು ವಿಶ್ರುತಾ ಪ್ರತಿಭಾತಿ ಮೇ' ॥111॥

ವದತ್ಯೇವಂ ಶ್ರೀನಿವಾಸೇ ನೀಲಕಂಠೋಽಭ್ಯಪದ್ಯತ ।
ಪಿತಾಮಹಂ ಚ ಪಿತರಂ ವವಂದೇ ವಸುಧಾಧಿಪ ॥112॥

ನನ್ನ ಆಜ್ಞಾಧಾರಕ ಪುತ್ರನಾದ ಪರಮ ಪ್ರಿಯನಾದ ಚತುರ್ಮುಖನೇ ! ಅವಳನ್ನೇ ನಾನು ವಿವಾಹವಾಗುವಂತೆ ಘಟನೆಮಾಡು' ಎಂದು ಭಗವಂತನು ಎಲ್ಲ ವಿಷಯವನ್ನೂ ತಿಳಿಸಿಕೊಟ್ಟನು. (107–08) ಅದೇ ಹೊತ್ತಿಗೆ ಮಂಗಲ ವಾದ್ಯಗಳ ಘೋಷಗಳು ಕೇಳಿಬರುತ್ತಿರಲು ಶ್ರೀನಿವಾಸನು 'ಯಾರು ಬರುತ್ತಿರುವರು' ಎಂದು ವಿಚಾರಿಸುತ್ತಿರುವಾಗಲೇ ಏಣ (ಚಿಗರೆ)ವಾಹನನಾಗಿ, ಸುಗಂಧವನ್ನು ಸೂಸುತ್ತಾ, ಭಾರತೀ ಸಮೇತನಾಗಿ ಅಲ್ಲಿಗೆ ಆಗಮಿಸಿದ ವಾಯುದೇವರನ್ನು ಕಂಡು ಬಹುಸಂತೋಷಗೊಂಡು 'ಭಾರತೀಪತಿಯಾದ ವಾಯುವೇ! ನನ್ನ ಪರಿವಾರದಲ್ಲಿಯೇ ನೀನು ನನಗೆ ಅತ್ಯಂತ ಪ್ರೇಮಾಸ್ಪದನಾಗಿರುವಿ. ನಿನ್ನ ಕೀರ್ತಿಯು ಜಗತ್ತಿನಲ್ಲೆಡೆಯೂ ಪ್ರಸಿದ್ಧವಾಗಿರುವದು. ನಿನ್ನ ಮಡದಿಯಾದ ಭಾರತಿಯ ಕೀರ್ತಿಯೂ ಸಹ ಲೋಕದಲ್ಲಿ ಮನೆಮಾತಾಗಿರುವದು' ಎಂದು ನುಡಿದನು. (111) ಅನಂತರದಲ್ಲಿ ಆಗಮಿಸಿದ ಪಾರ್ವತೀ ಷಣ್ಮುಖಾದಿಗಳಿಂದ ಸಮೇತನಾದ, ತನ್ನನ್ನು ನಮಸ್ಕರಿಸಿದ ತನ್ನ ಪೌತ್ರನಾದ ರುದ್ರದೇವರನ್ನು

ಪಾರ್ವತ್ಯಾ ಷಣ್ಮುಖೇನಾಥ ಪ್ರಮಥಾದಿಗಣೈರ್ವೃತಃ ।
ತಮಾಲಿಂಗ್ಯ ಹೃಷೀಕೇಶಃ ಪ್ರಾಹ ಶಂಕರಮಾಗತಮ್ ॥113॥

ವತ್ಸಾತ್ರಾಯಾಹಿ ನಿಕಟಂ ತಿಷ್ಠ ಭದ್ರ ವರಾಸನೇ ।
ಏವಂ ಸಂಭಾಷಮಾಣೇ ತು ನೀಲಕಂಠೇನ ಕೇಶವೇ ॥114॥

ತತಸ್ಸಮಾಗತಸ್ಸದ್ಯಃ ಕುಬೇರೋ ನರವಾಹನಃ ।
ಯಕ್ಷೈಃ ಸಭೃತ್ಯೈಃ ಪುತ್ರೈಶ್ಚ ಭಾರ್ಯಾಬಂಧುಜನೈರ್ವೃತಃ ॥115॥

ತಮಾಯಾಂತಮುಪಾಲಕ್ಷ್ಯ ಭಗವಾನಾಹ ಭೂಮಿಪ ।
'ಧನಾಧಿಪ ಮಹಾಪ್ರಾಜ್ಞ ಧನವಾನ್ ಭವ ಸರ್ವದಾ' ॥116॥

ಇತ್ಯಾಶಿಷಾಽಽನಂದಯತಿ ಹೃಷೀಕೇಶೇ ಧನೇಶ್ವರಮ್ ।
ಸ್ವಾಹಾಸ್ವಧಾಸಮೇತಶ್ಚ ಮೇಷವಾಹನಮಾಸ್ಥಿತಃ ॥117॥

ಅಗ್ನಿಶ್ಚಾಗಾತ್ಸಪುತ್ರಶ್ಚ ಸಬಂಧುರ್ವೇಂಕಟಾಚಲಮ್ ।
ಸ ಜಾತವೇದಸಂ ದೃಷ್ಟ್ವಾ ಜಾತಾಹ್ಲಾದೋ ಜಗತ್ಪ್ರಭುಃ ॥118॥

ತಮಾಲಿಂಗ್ಯಾತಿವೇಗೇನ ತಿಷ್ಠ ತಿಷ್ಠೇತಿ ಚಾಬ್ರವೀತ್ ।
ತತಃ ಪ್ರೇತಪತಿಶ್ಚಾಗಾದ್ಯಮದೂತೈಃ ಸಭಾರ್ಯಕಃ ॥119॥

ಮಹಿಷೇಶಂ ಸಮಾರುಹ್ಯ ಪ್ರಾಪ ಶೇಷಗಿರೀಶ್ವರಮ್ ।
ಚಿತ್ರಗುಪ್ತೋ ಮಹಾಭಾಗಸ್ಸಂಪ್ರಾಪ್ತೋ ರಾಜಸತ್ತಮ ॥120॥

ತತೋ ವಾರಾಂಪತಿಶ್ಚಾಗಾನ್ನಕ್ರಮಾರುಹ್ಯ ಭಕ್ತಿಮಾನ್ ।

ಭಗವಂತನು 'ಹೇ ಪ್ರಿಯನಾದ ಶಿವನೇ! ಇಲ್ಲಿ ನನ್ನ ಬಳಿಬಂದು ಕುಳಿತುಕೋ ಎಂದು ನುಡಿದು ಅವನನ್ನು ಬರಮಾಡಿಕೊಂಡನು. (114) ಅಲ್ಲಿಗೆ ಆಗಮಿಸಿದ ಯಕ್ಷರೇ ಮೊದಲಾದ ಭೃತ್ಯರಿಂದ ಸಮೇತನಾದ ಕುಬೇರನನ್ನು ಕಂಡು 'ನೀನು ಯಾವಾಗಲೂ ಧನವಂತನಾಗಿರು' ಎಂದು ಅವನನ್ನು ಆಶೀರ್ವದಿಸಿದನು. (116) ಹಾಗೆಯೇ ಅಲ್ಲಿಗೆ ಬಂಧುಗಳಿಂದ ಪರಿವಾರದಿಂದ ಸಮೇತನಾಗಿ ಆಗಮಿಸಿದ ಅಗ್ನಿಯನ್ನು ನೋಡಿ ಸಂತುಷ್ಟನಾಗಿ ಅವನನ್ನು ಭಗವಂತನು ಆಲಿಂಗಿಸಿಕೊಂಡು ಸ್ವಾಗತಿಸಿದನು. (118) ಅದೇ ರೀತಿಯಾಗಿಯೇ ಭಗವಂತನ ವಿವಾಹಾರ್ಥವಾಗಿ ಅಲ್ಲಿಗೆ ಆಗಮಿಸಿದ ಚಿತ್ರಗುಪ್ತರಿಂದ ಮತ್ತು ಯಮದೂತರಿಂದ, ಪತ್ನಿಯಾದ ಶಾಮಲೆಯಿಂದ ಸಮೇತನಾದ ಯಮ, (120) ರತ್ನಗಳಿಂದಲಂಕೃತನಾಗಿ ಮಡದಿಯಿಂದೊಡಗೂಡಿದ,

ಭಾರ್ಯಯಾ ಬಹುರತ್ನಾಢ್ಯೋ ನಾರಾಯಣಗಿರಿಂ ಪ್ರತಿ ॥121॥

ಆರುಹ್ಯ ಗಜರಾಜಂ ಸ್ವಮಿಂದ್ರಸ್ಸಾಕ್ಷಾಚ್ಛಚೀಪತಿಃ ।
ಭೋಗಿರಾಜಗಿರಿಂ ರಾಜನ್ಸರ್ವಭೋಗಾಲಯೋ ಮಹಾನ್ ॥122॥

ಪೌಲೋಮ್ಯಾ ಸಹ ಪುತ್ರೇಣ ಸಂಪ್ರಾಪ್ತಸ್ತ್ರಿದಿವೇಶ್ವರಃ ।
ಯಥಾರ್ಹಂ ಶ್ರೀನಿವಾಸೇನ ಸತ್ಕೃತೋ ನಿಷಸಾದ ಚ ॥123॥

ಏತಸ್ಮಿನ್ನೇವ ಕಾಲೇ ತು ಸಂಪ್ರಾಪ್ತೌ ಸೂರ್ಯಚಂದ್ರಕೌ ।
ಮನ್ಮಥೋ ಮೂಲರೂಪೇಣ ಸರತಿಸ್ತುರಗೋಪರಿ ॥124॥

ಮುನಯಶ್ಚ ಮಹಾರಾಜ ಸಮಾಜಗ್ಮುರ್ಮಹಾಗಿರಿಮ್ ।
ಕಶ್ಯಪೋಽತ್ರಿರ್ಭರದ್ವಾಜೋ ವಿಶ್ವಾಮಿತ್ರೋಽಥ ಗೌತಮಃ ॥125॥

ಜಮದಗ್ನಿರ್ವಸಿಷ್ಠಶ್ಚ ವಾಲ್ಮೀಕಿಶ್ಚಾಣುಕಶ್ಯಲಃ ।
ಪುಲಸ್ತ್ಯಶ್ಚ ದಧೀಚಿಶ್ಚ ಶುನಶ್ಶೇಪಶ್ಚ ಗಾಲವಃ ॥126॥

ಗಾರ್ಗ್ಯಃ ಕಣ್ವೋ ಮಹಾರಾಜ ಸಪುತ್ರಾಸ್ಸಪರಿಗ್ರಹಾಃ ।
ಗಂಧರ್ವಾಪ್ಸರಸಸ್ಸರ್ವಾಃ ಪಿತರಸ್ಸಿದ್ಧಚಾರಣೈಃ ॥128॥

ವಿಷ್ಣುಭಕ್ತಾಶ್ಚ ರಾಜಾನಃ ತೇಽಪಿ ತತ್ರ ಸಮಾಗತಾಃ ।
ವೈಮಾನಿಕಾಸ್ತಥಾ ಜಗ್ಮುಃ ಸರ್ವೇ ಸಂಭ್ರಮಕಾತರಾಃ ॥129॥

ಸಮಾಶ್ವಾಸ್ಯಾಥ ಗೋವಿಂದಃ ಯಥಾಯೋಗ್ಯಂ ಯಥಾವಯಃ ।
'ಸ್ಥೀಯತಾ'ಮಿತಿ ಚೋವಾಚ ಸರ್ವೇಷಾಂ ಪುರತೋ ಹರಿಃ ॥129॥

ಜಲಾಧಿಪತಿಯಾದ ಮೊಸಳೆಯನ್ನೇರಿ ಬಂದ ವರುಣ, ಐರಾವತವನ್ನೇರಿ ಬಂದಿದ್ದ, ಶಚೀಪತಿಯದ ಇಂದ್ರ, (123) ಮೂಲರೂಪದಲ್ಲಿದ್ದ ಮನ್ಮಥ, ಸೂರ್ಯ ಚಂದ್ರರು ಇವರೇ ಮೊದಲಾದ ಸಮಸ್ತದೇವತೆಗಳನ್ನೂ, ಕಶ್ಯಪ, ಅತ್ರಿ ಭರದ್ವಾಜ, ವಿಶ್ವಾಮಿತ್ರ , ಗೌತಮ ಜಮದಗ್ನಿ, ವಸಿಷ್ಠ, ವಾಲ್ಮೀಕಿ, ಚಣಕ, ಶಲ, ಪುಲಸ್ತ್ಯ, ದಧೀಚಿ, ಶುನಃಶೇಫ, ಗಾಲವ, ಗಾರ್ಗ್ಯ, ಕಾಣ್ವರೇ ಮೊದಲಾದ ಮಹರ್ಷಿಗಳು, ಸಮಸ್ತ ಗಂಧರ್ವರು, ಅಪ್ಸರಾ ಸ್ತ್ರೀಯರು, ಪಿತೃದೇವತೆಗಳು, ಸಿದ್ಧರು, ಚಾರಣರು, ವಿದ್ಯಾಧರರು, ಮಹಾಭಗವದ್ಭಕ್ತರಾದ ರಾಜರುಗಳೂ ಹೀಗೆ ಎಲ್ಲರನ್ನೂ ಸ್ವಾಗತಿಸಿ, ಆಶೀರ್ವದಿಸಿದನು. (129) ಅನಂತರದಲ್ಲಿ ವಿಶ್ವಕರ್ಮನನ್ನು ಕಂಡ ಭಗವಂತನು ಕೊಂಚ ಕೋಪಗೊಂಡವನಂತೆ ನಟಿಸುತ್ತಾ ದೇವೇಂದ್ರನನ್ನು ಕುರಿತು 'ಹೇ ಇಂದ್ರನೇ! ಈ

ವಾಸುದೇವಸ್ಯ ರಾಜೇಂದ್ರ ವಿಶ್ವಕರ್ಮಾಕ್ಷಿಗೋಚರಃ ।
ತಮಾಲೋಕ್ಯ ಹೃಷಿಕೇಶಃ ಇಂದ್ರಮಾಹಾತಿಮನ್ಯುವಾನ್ ॥130॥

ಶ್ರೀಭಗವಾನುವಾಚ–

ಪಶ್ಯೇಂದ್ರ ಗರ್ವಮತುಲಮಸ್ಯ ವಿಶ್ವಕೃತೋಽಧುನಾ ।
ಭ್ರಾತುರ್ಬಾಹುಬಲಾದೇಷ ನ ಜಾನಾತಿ ಹಿತಾಹಿತಮ್ ॥131॥

ಯಥಾನ್ಯಾನ್ ಪಶ್ಯತಿ ಸುರಾಂಸ್ತಥಾ ಮಾಮಪಿ ಪಶ್ಯತಿ ।
ಸಾಧು ಜಾತಂ ಸುರಶ್ರೇಷ್ಠ ತ್ಯಜ್ಯೈನಮಸಮಂಜಸಮ್ ॥132॥

ಅನ್ಯಂ ಶಾಲಾಕರ್ಮರತಂ ಶುದ್ಧಂ ಮದ್ಭಕ್ತಿಸಂಯುತಮ್ ।
ನಿಯೋಜಯ ಸುರಶ್ರೇಷ್ಠ ದೇವತಾಗೃಹಕರ್ಮಣಿ' ॥133॥

ಇತ್ಯಪ್ರಿಯಂ ವಚಃ ಶ್ರುತ್ವಾ ವಿಶ್ವಕರ್ಮಾ ನರೇಶ್ವರ ।
ಪ್ರಣಿಪತ್ಯಾಹ ಗೋವಿಂದಂ ವರ್ಧಕಿರ್ಭಯವಿಹ್ವಲಃ ॥134॥

ವಿಶ್ವಕರ್ಮೋವಾಚ–

ಭಗವಂಸ್ತ್ವದಭೀಷ್ಟಂ ಯದಜ್ಞಾನಾನ್ನ ಮಯಾ ಕೃತಮ್ ।
ಕ್ಷಮಸ್ವಾನಂತದೌರಾತ್ಮ್ಯಂ ಭಗವನ್ ಕರುಣಾನಿಧೇ' ॥135॥

ದೇವಾದಿದೇವ ದೇವೇಶ ಸ್ವಲ್ಪಸ್ಯ ಮಮ ಕಾರಣಾತ್ ।
ಇಯಾನ್ಕೋಪಃ ಕಿಮರ್ಥಂ ತೇ ಸಂಜಾತೋ ಭಗವನ್ ಹರೇ ॥136॥

ಏವಂ ಸಂಪ್ರಾರ್ಥಿತಃ ಶಕ್ರಂ ಶ್ರೀನಿವಾಸ ಉವಾಚ ಹ ।

ವಿಶ್ವಕರ್ಮನ ಗರ್ವವನ್ನಾದರೂ ನೋಡು. ತನ್ನ ಸಹೋದರನ ಬಲದಿಂದ ಇವನು ಹಿತಾಹಿತಗಳನ್ನು ತಿಳಿಯದೇ ಎಲ್ಲರೊಡನೆ ಸಾಮಾನ್ಯವಾಗಿ ವ್ಯವಹರಿಸುವಂತೆ ನನ್ನೊಡನೆ ವ್ಯವಹರಿಸುತ್ತಿರುವನು. ಇಂತಹ ಅಸಮಂಜಸನಾದ ಇವನನ್ನು ಅವನ ಸ್ಥಾನದಿಂದ ತೆಗೆದುಹಾಕಿ, ಭವನನಿರ್ಮಾಣಾದಿ ಕಾರ್ಯಗಳಲ್ಲಿ ಸಮರ್ಥನಾದ, ಅಹಂಕಾರಾದಿ ದೋಷವರ್ಜಿತನಾದ ನನ್ನಲ್ಲಿ ಭಕ್ತಿಯನ್ನು ಮಾಡುವ ಬೇರೊಬ್ಬನನ್ನು ಇವನ ಸ್ಥಾನದಲ್ಲಿ ನಿಯೋಜಿಸು' ಎಂದು ನುಡಿದನು. (133) ಭಗವಂತನ ಈ ಅಪ್ರಿಯವಾದ ಮಾತುಗಳನ್ನು ಕೇಳಿ ಭಯಗ್ರಸ್ತನಾದ ವಿಶ್ವಕರ್ಮನು ಭಗವಂತನಿಗೆ ನಮಸ್ಕರಿಸಿ 'ಸ್ವಾಮಿ! ನನ್ನ ದುರ್ನಡತೆಯನ್ನು ಕ್ಷಮಿಸು. ನಾನು ಅಜ್ಞಾನದಿಂದ ನಿನ್ನ ಕಾರ್ಯವನ್ನು ತಿಳಿದಿರುವದಿಲ್ಲ. (ಏನು ಮಾಡಬೇಕೆಂಬುದು ತಿಳಿಯಲಿಲ್ಲ). ಕರುಣಾನಿಧಿಯಾದ

'ಸಭಾಂ ಕಾರಯ ದೇವೇಂದ್ರ ದೇವಾರ್ಥಂ ಮುನಿಕಾರಣಾತ್ ॥137॥

ಪಂಚಾಶದ್ಯೋಜನಗಣವಿಶಾಲಾಂ ಸುಮನೋಹರಾಮ್ ।
ಸುವಿಚಿತ್ರಾಂ ಚ ಮಹತೀಂ ತ್ರಿಂಶದ್ಯೋಜನಮಾಯತಾಮ್' ॥138॥

ಇತ್ಯೇವಂ ಶಾಸಿತಃ ಶಕ್ರಸ್ತೇನ ವರ್ಧಕಿನಾ ತದಾ ।
ಕಾರಯಾಮಾಸ ವಿಪುಲಾಂ ವಿಚಿತ್ರಾಂ ಮಹತೀಂ ಸಭಾಮ್ ॥139॥

ಚಕ್ರೇ ಶಕ್ರಾಜ್ಞಯಾ ತತ್ರ ವಿಶ್ವಕರ್ಮಾ ಮಯಾಗ್ರಜಃ ।
ಅನಂತರಂ ವಾಕ್ಯಮೂಚೇ ಶತಕ್ರತುಮನಾಮಯಮ್ ॥140॥

ಶ್ರೀನಿವಾಸ ಉವಾಚ–

'ಆಕಾಶರಾಜನಗರಂ ಗಚ್ಛ ಶೀಘ್ರಂ ಶಚೀಪತೇ ।
ರಾಜಾನಂ ಸಾಂತ್ವವಚನೈಃ ಕಾರ್ಯೇ ಕರ್ಮಣಿಬೋಧಯ ॥141॥

ತತ್ರಾಪ್ಯನೇನ ಕರ್ತವ್ಯಂ ಸಭಾಗೇಹಾದಿ ಕಾರಯ' ।
ವಾಸುದೇವಸ್ಯ ವಾಕ್ಯಾನಿ ಶ್ರುತ್ವಾ ಭಕ್ತ್ಯಾ ಶಚೀಪತಿಃ ॥142॥

ಜಗಾಮ ರಾಜಭವನಂ ಸಹಿತೋ ವಿಶ್ವಕರ್ಮಣಾ ।
ವಿಸ್ತಾರ್ಯ ನಗರಂ ರಾಜ್ಞಃ ಪರಿತೋ ಬಹುಯೋಜನಮ್ ॥143॥

ದೇವಾಧಿದೇವನಾದ ಭಗವಂತನೇ! ಅಲ್ಪನಾದ ನನ್ನ ವಿಷಯದಲ್ಲಿ ಇಷ್ಟೇಕೆ ಕೋಪಗೊಳ್ಳುವೆ? ನನಗೆ ನಿನ್ನ ಕಾರ್ಯವನ್ನಾಜ್ಞಾಪಿಸು; ಪ್ರಸನ್ನನಾಗು' ಎಂದು ಪ್ರಾರ್ಥಿಸಿದನು.(137) ಆಗ ಶ್ರೀನಿವಾಸನು ಇಂದ್ರದೇವರನ್ನು ಕುರಿತು 'ವಿವಾಹಾರ್ಥವಾಗಿ ಆಗಮಿಸಿದ ದೇವತೆಗಳು ಮತ್ತು ಮುನಿಗಳಿಗೋಸ್ಕರವಾಗಿ ಹದಿನೈದು ಯೋಜನ ಅಗಲ ಮತ್ತು ಮೂವತ್ತು ಯೋಜನ ಉದ್ದವಿರುವ, ವಿಚಿತ್ರವಾದ, ಸುಂದರವಾದ ಮತ್ತು ದೊಡ್ಡದಾದ ಸಭಾಗೃಹವೊಂದನ್ನು ನಿರ್ಮಿಸು' ಎಂದು ಆಜ್ಞಾಪಿಸಿದನು. (139) ಭಗವಂತನ ಆಜ್ಞೆಯಂತೆ ಇಂದ್ರನು ವಿಶ್ವಕರ್ಮನ ಮೂಲಕವಾಗಿ ಭವ್ಯವಾದ ದೇವತೆಗಳಿಗೆ ಯೋಗ್ಯವಾದ ಸಭಾಮಂದಿರವನ್ನು ನಿರ್ಮಿಸಿದನು. (140) ಅನಂತರದಲ್ಲಿ ಮತ್ತೆ ಭಗವಂತನು ಇಂದ್ರನನ್ನು ಕುರಿತು ' ಆಕಾಶರಾಜನ ನಗರಕ್ಕೆ ಹೋಗಿ ಅಲ್ಲಿ ರಾಜನನ್ನು ಸೂಕ್ತವಚನಗಳಿಂದ ಸಮಾಧಾನ ಗೊಳಿಸಿ, ವಿವಾಹಾರ್ಥವಾಗಿ ಮಾಡಬೇಕಾದ ಸಿದ್ಧತೆಗಳಲ್ಲಿ ಅವನನ್ನು ನಿಯೋಜಿಸು. ಅಲ್ಲಿಯೂ ಸಹ ನಮ್ಮೆಲ್ಲರಿಗೂ ಉಚಿತವಾದ ಸಭಾಗೃಹಾದಿ ಗಳನ್ನು ವಿಶ್ವಕರ್ಮನ ಮೂಲಕವಾಗಿ ನಿರ್ಮಿಸು' ಎಂದು ಆಜ್ಞಾಪಿಸಿದನು. (142) ಆಗ ಶಚೀಪತಿಯೆನಿಸಿದ ಇಂದ್ರನು ವಾಸುದೇವನ ಆಜ್ಞೆಯಂತೆ ವಿಶ್ವಕರ್ಮನಿಂದ ಸಮೇತನಾಗಿ ಆಕಾಶರಾಜನ ಪಟ್ಟಣವಾದ

ಸಂಛಿದ್ಯ ಚ ಮಹಾರಾಜ ವನಾನಿ ಗಿರಿಗಹ್ವರಾನ್ ।
ವಿಷಮಾಂ ಚ ಸಭಾಂ ಚಕ್ರೇ ಧರಾಂ ತಾಂ ಧರಣೀಪತೇಃ ॥144॥
ಗೃಹಾಣಿ ಚ ವಿಚಿತ್ರಾಣಿ ಸಭಾಶ್ಚ ಪಟಮಂಟಪಾನ್ ॥144॥

ಕಲ್ಯಾಣವೇದಿಂ ಕಮನೀಯರತ್ನೈಃ
ಸಂಪೂರ್ಣಕಕ್ಷೈಃ ಸುಕೃತಾಂ ವಿಚಿತ್ರಾಮ್ ।
ಸ್ತಂಭೈರ್ಯುತಾಂ ಮೌಕ್ತಿಕರತ್ನಚಿತ್ರಾಂ
ನಾರಾಯಣಸ್ಯೈವ ನೃಪೇಣ ನಿರ್ಮಿತಾಮ್ ॥145॥

ವಾಸುದೇವಸ್ಯ ಭವನಂ ವಾಸವೋ ವಿಶ್ವಕರ್ಮಣಾ ।
ಕಾರಯಾಮಾಸ ರಾಜೇಂದ್ರ ರತ್ನಸ್ತಂಭಂ ಸಗೋಪುರಮ್ ॥146॥

ಧನಧಾನ್ಯಸಮಾಕೀರ್ಣಂ ರತ್ನತೋರಣಮಂಡಿತಮ್ ।
ವಾಪೀಕೂಪಶತಂ ವಾಜಿಗಜಾನಾಂ ಭವನೈಸ್ತದಾ ॥148॥

ಇತಿ ಶ್ರೀಭವಿಷ್ಯೋತ್ತರಪುರಾಣೇ ಶ್ರೀವೇಂಕಟಗಿರಿಮಾಹಾತ್ಮ್ಯೇ ಬ್ರಹ್ಮಾದ್ಯಾಗಮನಂ ನಾಮ ದಶಮೋऽಧ್ಯಾಯಃ

* * *

ನಾರಾಯಣಪುರಕ್ಕೆ ಹೋಗಿ ಅಲ್ಲಿ ಆಕಾಶರಾಜನಿಗೆ ಸಮಾಧಾನಕರವಾದ ವಾಕ್ಯಗಳಿಂದ ಧೈರ್ಯವನ್ನು ತುಂಬಿ ಅಲ್ಲಿದ್ದ ಪರ್ವತ–ವನಗಳನ್ನು ಕತ್ತರಿಸಿ, ನಗರವನ್ನು ಬಹುಯೋಜನಗಳಷ್ಟು ವಿಸ್ತಾರಗೊಳಿಸಿದನು. ಅಂಕುಡೊಂಕಾಗಿದ್ದ ಭೂಮಿಯನ್ನು ಸಮವನ್ನಾಗಿಸಿ ಅದರಲ್ಲಿ ವಿಚಿತ್ರವಾದ ಸಭಾಗೃಹಗಳು, ನಾನಾವಿಧವಾದ ಮನೆಗಳು, ತಾತ್ಕಾಲಿಕವಾದ ಪಟಮಂಡಪಗಳು ಇವುಗಳನ್ನು ನಿರ್ಮಿಸಿದನು. ಅನಂತರದಲ್ಲಿ ಬಹು ಸ್ತಂಭಗಳಿಂದ ಉಪಶೋಭಿತವಾದ ಅನರ್ಘರತ್ನಗಳಿಂದ ಅಲಂಕೃತವಾದ ಶ್ರೇಷ್ಠವಾದ ಕಲ್ಯಾಣವೇದಿಕೆಯನ್ನು ಭಗವಂತನಿಗೋಸ್ಕರವಾಗಿ ರಾಜನಿಂದ ನಿರ್ಮಿಸಲ್ಪಟ್ಟಿತು. ಶ್ರೀನಿವಾಸನ ವಾಸಸ್ಥಾನಕ್ಕೆ ರತ್ನಮಯವಾಧ ಸ್ತಂಭ, ಗೋಪುರ, ತೋರಣಗಳಿಂದ ವಿರಾಜಮಾನವಾದ ಧನಧಾನ್ಯಗಳಿಂದ ತುಂಬಿ ತುಳುಕುತ್ತಿರುವ ಸದನವನ್ನು ವಿಶ್ವಕರ್ಮನಿಂದ ನಿರ್ಮಾಣ ಮಾಡಿಸಿ, ಆಶ್ವಶಾಲೆ, ಗಜಶಾಲೆ, ಅನೇಕವಿಧವಾದ ವಾಪೀಕೂಪ ತಟಾಕಗಳನ್ನು ಭಗವದನುಗ್ರಹದಗೋಸ್ಕರವಾಗಿ ಇಂದ್ರದೇವನು ವಿಶ್ವಕರ್ಮನಿಂದ ಸಿದ್ಧಗೊಳಿಸಿದನು.

ಇಲ್ಲಿಗೆ ಶ್ರೀಭವಿಷ್ಯೋತ್ತರಪುರಾಣದಲ್ಲಿಯ ವೇಂಕಟಗಿರಿಮಾಹಾತ್ಮ್ಯದಲ್ಲಿ ಬ್ರಹ್ಮಾದ್ಯಾಗಮನವೆಂಬ ಹತ್ತನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

ಅಥ ಶ್ರೀಭವಿಷ್ಯೋತ್ತರಪುರಾಣೇ ವೇಂಕಟೇಶಮಾಹಾತ್ಮ್ಯೇ

## ಏಕಾದಶೋऽಧ್ಯಾಯಃ

**ಶ್ರೀ ಶತಾನಂದ ಉವಾಚ–**

**ವಾಸವೇ ತು ಗತೇ ರಾಜನ್ ವಾಸುದೇವೋऽಬ್ರವಿತ್ಸುರಾನ್ ॥1॥**

**ಶ್ರೀಭಗವಾನುವಾಚ–**

**ಆಕಾಶರಾಜಸ್ಯ ಸುತಾऽಪ್ತಿ ಯಾ ಸುರಾ**
**ಇಚ್ಛಾಮಿ ಕರ್ತುಂ ಕಿಲ ತತ್ಕರಗ್ರಹಮ್ ।**
**ಅಂಗೀಕೃತಂ ಚೇದ್ಭವದೀಯಮಂಡಲೈಃ**
**ಅಂಗೀಕರೋಮ್ಯಾಶು ಸುರಾಜಕನ್ಯಾಮ್ ॥2॥**

**ವಾಸುದೇವವಚಃಶ್ರುತ್ವಾ ವಾಸುದೇವಾತ್ಮಜಾದಿಕಾಃ ।**
**ವಾಕ್ಯಮಾಹುರ್ಮಹಾರಾಜ ವಾಸುದೇವಪರಾಯಣಾಃ ॥3॥**

**ದೇವಾ ಊಚುಃ–**

**ವಯಂ ತು ದಾಸಭಾವೇನ ತಿಷ್ಠಾಮಃ ಪುರುಷೋತ್ತಮ ।**
**ವ್ಯಾಹರ್ತುಮಕ್ಷಮಾಃ ಸರ್ವೇಪಶ್ಯಾಮೋऽತ್ರಮಹೋತ್ಸವಮ್ ॥4।**

## ಹನ್ನೊಂದನೆಯ ಅಧ್ಯಾಯ

**ಭಗವಂತನಿಂದ ವಿವಾಹದ ಪೂರ್ವಸಿದ್ಧತೆ**

ಇಂದ್ರನು ನಾರಾಯಣ ಪುರದತ್ತತೆರಳಿದ ಅನಂತರದಲ್ಲಿ ಭಗವಂತನಾದ ಶ್ರೀನಿವಾಸನು ದೇವತೆಗಳೆಲ್ಲರನ್ನು ಉದ್ದೇಶಿಸಿ 'ಆಕಾಶರಾಜನ ಮಗಳಾದ ಪದ್ಮಾವತಿಯನ್ನು ನಾನು ವಿವಾಹವಾಗಬಯಸಿರುವೆನು. ನೀವೆಲ್ಲರೂ ಒಪ್ಪಿಗೆಯನ್ನು ಕೊಟ್ಟಲ್ಲಿ ನಾನು ಅವಳನ್ನು ವಿವಾಹವಾಗುವೆನು' ಎಂದು ತಾನು ವಿವಾಹವಾಗಲು ದೇವತೆಗಳ ಒಪ್ಪಿಗೆಯನ್ನು ಕೇಳುವಂತೆ ನಟಿಸಿದನು. (1–2) ಬ್ರಹ್ಮಾದಿ ದೇವತೆಗಳು ಭಗವಂತನ ಎದುರಿಗೆ ಮಾತನಾಡಲೂ ಸಹ ಅಸಮರ್ಥರಾದ ತಮ್ಮಗಳ ಒಪ್ಪಿಗೆಯನ್ನು ಕೇಳುವದು ಕೇವಲ ಲೋಕವಿಡಂಬನೆಯೆಂದು ಭಾವಿಸಿದರು.(3–4) ವಿನೋದಕ್ಕಾಗಿ ಮಾತನಾಡಿದ ಭಗವಂತನನ್ನು ಕುರಿತು ರುದ್ರದೇವರು

ಶಂಕರ ಉವಾಚ–

'ವಿನೋದವಚನಂ ಕೃಷ್ಣ ಭಾಷಸೇ ಪ್ರಾಕೃತೋ ಯಥಾ ।
ಮನಸಸ್ತೇ ಪ್ರಶಸ್ತಂ ಚೇತ್ ಕ್ರಿಯತಾಮಿತಿ ಚಾಬ್ರವೀತ್ ॥5॥

ಶಂಕರಸ್ಯ ವಚಃಶ್ರುತ್ವಾ ಪ್ರಶಶಂಸ ಹಸನ್ ಹರಿಃ ।
ತತಶ್ಚತುರ್ಮುಖಃ ಪ್ರಾಹ ಶೇಷಾಚಲಪತಿಂ ಪ್ರತಿ ॥6॥

ಬ್ರಹ್ಮೋವಾಚ–

'ಸರ್ವಜ್ಞಸ್ತ್ವಂ ದಯಾಸಾರ ಸತ್ಯಸಂಕಲ್ಪವಾನಸಿ ।
ಅಷ್ಟವರ್ಗಂ ತತಃ ಕಾರ್ಯಂ ವಿವಾಹಾತ್ಪೂರ್ವಮೇವ ಹಿ ॥7॥

ತಸ್ಮಾದಾಜ್ಞಾಂ ಚ ಮೇ ದೇಹಿ ಪುಣ್ಯಾಹೇ ಪುರುಷೋತ್ತಮ ।
ಸ ಪುತ್ರವಚನಂ ಶ್ರುತ್ವಾ ವಸಿಷ್ಠಮುನಿಮಾನಯತ್ ॥8॥

ವಸಿಷ್ಠಂ ಚ ಮಹಾಭಾಗಂ ಪೌರೋಹಿತ್ಯೇ ನ್ಯಯೋಜಯತ್ ।
ಯಜುಶ್ಶಾಖಾಮಹಾಮಂತ್ರೈಃ ಕರ್ತವ್ಯಂ ಸ್ವಸ್ತಿವಾಚನಮ್ ॥9॥

ಸರ್ವೇಷಾಮಪಿ ದೇವಾನಾಂ ಯಜಮಾನೋ ಭವಾನಿತಿ ।
ದೇವಾನಾಂ ಚ ಋಷೀಣಾಂ ಚ ಮಾನನೇ ಶಂಕರಃಸ್ವಯಮ್ ॥10॥

"ನಿನಗೆ ಒಪ್ಪಿಗೆಯಿದ್ದರೆ ವಿವಾಹವಾಗು. ಪ್ರಾಕೃತರಂತೆ ನಮ್ಮನ್ನೇನು ಕೇಳುವದು?" ಎಂದು ಹಾಸ್ಯಮಾಡಿದಂತೆ ನುಡಿದನು.(5) ಚತುರ್ಮುಖ ಬ್ರಹ್ಮದೇವರು ಆನಂದಭರಿತವಾದ ಈ ಸಭಾಮಧ್ಯದಲ್ಲಿ ಎದ್ದು ನಿಂತು 'ಸತ್ಯಸಂಕಲ್ಪನಾದ ಹೇ ಭಗವಂತನೆ! ಸರ್ವಜ್ಞನೇ! ದಯಾನಿಧಿಯೇ! ವಿವಾಹಾಂಗ ಭೂತಗಳಾದ ಅಷ್ಟವರ್ಗ ಕಾರ್ಯಗಳನ್ನು ಮಾಡಿಕೊಳ್ಳಲು ಪುಣ್ಯಾಹವನ್ನು ಮಾಡಿಸಿಕೊಳ್ಳಲು ತನಗೆ ಅಪ್ಪಣೆಕೊಡು' ಎಂಬುದಾಗಿ ಭವಗಂತನನ್ನು ಪ್ರಾರ್ಥಿಸಿದನು. (6–8) ಅದರಂತೆ ಭಗವಂತನು ವಸಿಷ್ಠ ಮಹರ್ಷಿಗಳನ್ನು ಕರೆದು ಪೌರೋಹಿತ್ಯಕರ್ಮಗಳಲ್ಲಿ ನಿಯುಕ್ತಿಗೊಳಸಿದನು. (9) ಬ್ರಹ್ಮದೇವರಿಗೆ ಎಲ್ಲ ದೇವತೆಗಳ ಯಾಜಮಾನ್ಯವನ್ನು ಒಪ್ಪಿಸಿದನು. ದೇವತೆಗಳು ಮತ್ತು ಋಷಿಗಳಿಗೆ ಸನ್ಮಾನಮಾಡುವ ಕಾರ್ಯವನ್ನು ರುದ್ರದೇವರಿಗೆ ವಹಿಸಿಕೊಟ್ಟನು. (10) ದೇವಾಹ್ವಾನ ಕಾರ್ಯವನ್ನು ಮುಖ್ಯವಾಗಿ ಕುಮಾರನಿಗೆ, ಸ್ವಾಗತ–ಪ್ರತ್ಯುತ್ಥಾನಗಳನ್ನು ಮನ್ಮಥನಿಗೆ ವಹಿಸಿಕೊಟ್ಟನು. ಇವರೆಲ್ಲರಿಗೂ ತಾಂಬೂಲವನ್ನು ಕೊಟ್ಟು ಕಾರ್ಯಪ್ರವೃತ್ತರಾಗುವಂತೆ ಆಜ್ಞಾಪಿಸಿ(11), ಅಗ್ನಿದೇವನನ್ನು ಕರೆದು, ಪಾಕನಿರ್ಮಾಣಕಾರ್ಯವನ್ನು ವಹಿಸಿಕೊಳ್ಳಲು

ದೇವಾಹ್ವಾನೇ ಕುಮಾರಸ್ತು ಪ್ರತ್ಯುತ್ಥಾನೇ ತು ಮನ್ಮಥಃ ।
ದತ್ವಾ ತೇಷಾಂ ವೀಟಿಕಾಂ ತು ಕೃಷ್ಣವರ್ತ್ಮಾನಮಾಹ್ವಯತ್ ॥11॥

'ಗೃಹಾಣ ವೀಟಿಕಾಂ ಚಾತ್ರ ಪಾಕಾರ್ಥಂ ಹವ್ಯವಾಹನ ।
ಋಷೀಣಾಂ ಸರ್ವದೇವಾನಾಂ ತವ ಪಾಕಸ್ತು ಸಮ್ಮತಃ ॥12॥

ತಸ್ಮಾತ್ಪಾಕಸ್ತು ಕರ್ತವ್ಯಃ ಸ್ವಧಾಸ್ವಾಹಾಸಮನ್ವಿತಃ' ।
ಇತಿ ಶಿಷ್ಟೋ ಯಜ್ಞಮೂರ್ತಿಸ್ತಥಾಽಸ್ತ್ವಿತ್ಯವದನ್ನೃಪ ॥13॥

ತತಸ್ಸ ಪ್ರಾಹ ವರುಣಂ ಜಲಾರ್ಥಂ ಸರ್ವದೇಹಿನಾಮ್ ।
ದುಷ್ಟಾನಾಂ ದಂಡನೇ ರಾಜನ್ ಶಿಷ್ಟಾನಾಂ ಪರಿಪಾಲನೇ ॥14॥

ಯಮಂ ಚ ಕಲ್ಪಯಾಮಾಸ ಸುಗಂಧೇ ವಾಯುಮಾದಿಶತ್ ।
ಧನದಾನೇ ಬ್ರಾಹ್ಮಣಾನಾಂ ವಸ್ತ್ರಾಲಂಕಾರಭೂಷಣೇ ॥15॥

ಕುಬೇರಂ ಪ್ರೇರಯಾಮಾಸ ಭಗವಾನ್ನೃಪಸತ್ತಮ ।
ಪ್ರದೀಪಧಾರಣೇ ರಾಜನ್ನಿಶಾಕರಮಯೋಜಯತ್ ॥16॥

ವಸೂನ್ಸಂದೇಶಯಾಮಾಸ ಭಾಂಡಾನಾಂ ಶುದ್ಧಿಕಾರಣಾತ್ ।
ಗ್ರಹಾಂಶ್ಚ ದ್ರೋಣಪಾತ್ರೇಷು ನ್ಯಯೋಜಯದರಿಂದಮ ॥17॥

ಏವಂ ಸಂಶಾಸಿತಾಸ್ತೇನ ಪುರಾಣಪುರುಷೇಣ ಚ ।
ಆಜ್ಞಾಮಾದಾಯ ನಿತರಾಂ ಸರ್ವೇ ಸ್ವಸ್ಥಾಃ ಸ್ವಕರ್ಮಸು ॥18॥

ತಾಂಬೂಲವನ್ನು ಕೊಟ್ಟು "ಋಷಿಗಳಿಗೂ, ದೇವತೆಗಳಿಗೂ ನಿನ್ನ ಪಾಕವೇ ಸಮ್ಮತವಾಗಿರುವದರಿಂದ ನಿನ್ನ ಪತ್ನಿಯರಾದ ಸ್ವಾಹಾದೇವೀ ಮತ್ತು ಸ್ವಧಾದೇವಿಯರಿಂದ ಕೂಡಿಕೊಂಡು ಪಾಕವನ್ನು ಸಿದ್ಧಪಡಿಸುವ ಕಾರ್ಯದಲ್ಲಿ ತತ್ಪರನಾಗು" ಎಂದು ಆಜ್ಞಾಪಿಸಿದನು. (12–13) ವರುಣನನ್ನು ನೀರನ್ನು ಪೂರೈಸುವ ಕಾರ್ಯದಲ್ಲಿ ನಿಯೋಜಿಸಿದನು. ದುಷ್ಟರನ್ನು ಶಿಕ್ಷಿಸುವ ಕಾರ್ಯವು ಯಮನಿಗೆ ಬಂದೊದಗಿತು. ಪರಿಮಳ 'ದ್ರವ್ಯಗಳನ್ನು ತರುವ ಕಾರ್ಯವನ್ನು ವಾಯುವಿಗೆ ಒಪ್ಪಿಸಿದನು. (15) ಬ್ರಾಹ್ಮಣರಿಗೆ ವಸ್ತ್ರಾಲಂಕಾರ, ವಡವೆ, ದಕ್ಷಿಣೆಗಳನ್ನು ಕೊಡಲು ಕುಬೇರನನ್ನು, ದೀಪಾಲಂಕಾರಗೊಳಿಸಲು ಚಂದ್ರನನ್ನು, ಪಾಕಪಾತ್ರೆಗಳನ್ನು ಶುದ್ಧೀಕರಿಸುವ ಕೆಲಸದಲ್ಲಿ ಅಷ್ಟವಸುಗಳನ್ನು, ದ್ರೋಣಪಾತ್ರೆ ಗಳನ್ನು ಶುದ್ಧ ಮಾಡುವದರಲ್ಲಿ ನವಗ್ರಹಗಳನ್ನು ನೇಮಕ ಮಾಡಿದನು.(17)

ಎಲ್ಲ ವ್ಯವಸ್ಥೆಯೂ ಪರಿಸಮಾಪ್ತವಾದಮೇಲೆ ಚತುರ್ಮುಖ ಬ್ರಹ್ಮದೇವರು ಪುಣ್ಯಾಹವೇ

ತತೋ ವಾಕ್ಯಮುವಾಚೇದಂ ಬ್ರಹ್ಮಾ ಲೋಕಪಿತಾಮಹಃ ।

ಬ್ರಹ್ಮೋವಾಚ–

'ಮಜ್ಜನಂ ಕುರು ಗೋವಿಂದ ಮಂಗಲಂ ಮಧುಸೂದನ ॥19॥

ಪುಣ್ಯಾಹಪೂರ್ವಕರ್ಮಾಣಿ ಸ್ವೇಷ್ಟದೇವಪ್ರಪೂಜನಮ್ ।
ಕುಲದೇವಪ್ರತಿಷ್ಠಾಂ ಚ ಸಾಂಗಂ ಕುರು ರಮಾಪತೇ ॥20॥

ಸ ಪುತ್ರವಚನಂ ಶ್ರುತ್ವಾ ಸಸ್ಮಾರ ಜಗದೀಶ್ವರಃ ।
ರಮಾಂ ರಾಜೀವನಯನಾಂ ಕರವೀರಪುರಾಲಯಾಮ್ ॥21॥

ನಿತ್ಯಾಽವಿಯೋಗಿನೀಂ ರಾಜನ್ ನರವನ್ನರಸತ್ತಮ ।
ರುರೋದ ಲೋಕರೀತ್ಯೈವ ಭಗವಾನ್ ಲೌಕಿಕೈಃ ಸಮಃ ॥22॥

ನ ಶೋಭತೇ ಸಭಾ ದಿವ್ಯಾ ತಯಾ ವಿರಹಿತಾ ಸುತ ।
ಭವಾನಹಂ ಮಹಾಪ್ರಾಜ್ಞ ದೇವಾಶ್ಚ ಸಪರಿಗ್ರಹಾಃ ॥23॥

ನ ಶೋಭಂತೇ ಯಥಾಽಽಕಾಶೇ ತಾರಾಸ್ತಾರಾಪತಿಂ ವಿನಾ ।
ಅಪಾದಪಂ ಯಥಾರಣ್ಯಮಪಕ್ಷಾಶ್ಚ ವಿಹಂಗಮಾಃ ॥24॥

ಅಫಲಾಶ್ಚ ಯಥಾ ವೃಕ್ಷಾಃ ಅಧನಾಸ್ಸುಹೃದೋ ಯಥಾ ।
ತಥಾ ವಯಂ ಮಹಾಲಕ್ಷ್ಮ್ಯಾ ರಹಿತಾಃ ಕಮಲಾಸನ' ॥25॥

ಮೊದಲಾದ ಕರ್ಮಗಳನ್ನು ಸ್ವೇಷ್ಟದೇವತಾರ್ಚನ– ಕುಲದೇವತಾ ಪ್ರತಿಷ್ಠಾ ಇವುಗಳನ್ನು ಸಾಂಗಮಾಡಲು ಮಂಗಲಸ್ನಾನವನ್ನು ಮಾಡಲು ಭಗವಂತನ್ನು ಪ್ರಾರ್ಥಿಸಿಕೊಂಡನು. (18–20) ಆಗ ಭಗವಂತನು ಸಾಮಾನ್ಯಮನುಷ್ಯನಂತೆ, ನಿತ್ಯಾವಿಯೋಗಿಯಾದರೂ ಸಹ ಲಕ್ಷ್ಮೀವಿರಹದಿಂದ ದುಃಖಿತನಾದವನಂತೆ ಅಳುತ್ತಾ, (22) "ಲಕ್ಷ್ಮೀರಹಿತವಾದ ಈ ಸಭೆಯು ಶೋಭಿಸುವದಿಲ್ಲ. ಆಕಾಶದಲ್ಲಿ ಚಂದ್ರನಿಲ್ಲದ ನಕ್ಷತ್ರಗಳಂತೆ, ಮರಗಳಿಲ್ಲದ ಅರಣ್ಯಗಳಂತೆ, ರೆಕ್ಕೆಗಳಿಲ್ಲದ ಪಕ್ಷಿಗಳಂತೆ, ಹಣ್ಣುಗಳಿಲ್ಲದ ಮರಗಳಂತೆ ಲಕ್ಷ್ಮೀರಹಿತರಾದ ನಾನು, ನೀನು, ಸಪರಿವಾರರಾದ ದೇವತೆಗಳೂ ಸಹ ಕಾಂತಿವಿಹೀನರಾಗಿದ್ದೇವೆ. ರಾಜೀವನಯನಳಾದ, ಕರವೀರಪುರದಲ್ಲಿ ವಾಸವಾಗಿರುವ, ನಿತ್ಯಾವಿಯೋಗಿನಿಯಾದ, ನಮ್ರಳಾದ ರಮಾದೇವಿಯಿಂದ ರಹಿತವಾದ ನನ್ನ ಮನಸ್ಸು ವ್ಯಾಕುಲವಾಗಿರುವದು" ಎಂದು ರೋದಿಸಹತ್ತಿದನು. (25) ಅಳುವವನಂತೆ ನಟಿಸುತ್ತಿರುವ ಶ್ರೀನಿವಾಸನನ್ನು ಕುರಿತು ಶಂಕರನು ಸಭಾಮಧ್ಯದಲ್ಲಿ ಎದ್ದುನಿಂತು "ಹೇ ಸ್ವಾಮೀ!

ವಾಸುದೇವವಚಃ ಶ್ರುತ್ವಾ ಶಂಕರೋಽಥ ಮಹಾಭುಜಃ ।
ಸಭಾಮಧ್ಯಾತ್ಸಮುತ್ಥಾಯ ವಾಸುದೇವಮಭಾಷತ ॥26॥

ಶಂಕರ ಉವಾಚ–

'ಕಿಮರ್ಥಂ ರೋದನಂ ಸ್ವಾಮಿನ್ ಕಿಂ ತೇಕಾರ್ಯಂವಿಡಂಬನಮ್।
ಅಸಂಗಸ್ಯಾಪ್ರಮೇಯಸ್ಯ ಅಕ್ರೂರವರದಸ್ಯ ಚ ॥27॥

ಅಕ್ಲೇಶಕಸ್ಯ ದೇವೇಶ ಕಿಮರ್ಥಂ ರೋದನಂ ವೃಥಾ' ।
ಸ ಚ ತದ್ವಚನಂ ಶ್ರುತ್ವಾ ನೀಲಕಂಠಮಭಾಷತ ॥28॥

ಶ್ರೀಭಗವಾನುವಾಚ–

ನೈವ ಜಾನಾಸಿ ಭೋ ಶಂಭೋ ಬಾಲಭಾವೇನ ಪೌತ್ರಕ ।
ಯದಾ ಬ್ರಹ್ಮಾವಸಾನೇ ಚ ನ ಕಿಂಚಿದವಶಿಷ್ಯತೇ ॥29॥

ತದಾ ಕ್ಷೀರೋದಕೇ ಶಂಭೋ ನಿರಾಲಂಬೇ ನಿರಾಶ್ರಯೇ ।
ಸಾ ಮೇ ಶಯ್ಯಾಸಖೀ ಭೂತ್ವಾ ಕ್ರೀಡತೇ ಹಿತಕಾರಿಣೀ ॥30॥

ಏತಾದೃಶೀಂ ವಿನಾ ಶಂಭೋ ಮಮ ಸೌಖ್ಯಂ ಕಥಂ ಭವೇತ್।
ಜಗನ್ನಾಥೇನೈವಮುಕ್ತೋ ವೇಧಾ ವಾಕ್ಯಮಭಾಷತ ॥31॥

ಬ್ರಹ್ಮೋವಾಚ–

'ನೋಕ್ತಂ ತ್ವಯಾ ಹಿ ಗೋವಿಂದ ಪೂರ್ವಮೇವ ಜನಾರ್ದನ ।

ಸರ್ವಸಂಗರಹಿತನಾದ ನೀನು ಎಂತಹ ವಿಡಂಬನೆಯನ್ನು ಮಾಡುತ್ತಿರುವಿ. ನಿನ್ನ ಮಾಹಾತ್ಮೆಯನ್ನು ಸಂಪೂರ್ಣವಾಗಿ ಯಾರೂ ಅರಿಯಲಾರರು. ಅಕ್ರೂರವರದನಾದ ಮಹಾತ್ಮನೇ ! ಏತಕ್ಕೆ ನಿನ್ನ ಈ ರೋದನ–ವಿಡಂಬನೆ" ಎಂದು ಪ್ರಶ್ನಿಸಿದನು. (28) ಆಗ ರುದ್ರದೇವರನ್ನು ಕುರಿತು ಭಗವಂತನು "ಮೊಮ್ಮಗನಾದ ಶಂಭುವೇ! ಬಾಲಕನಾದ ನಿನಗೆ ಇದೇನೂ ತಿಳಿಯದು. ಬ್ರಹ್ಮಪ್ರಳಯದ ಸಮಯದಲ್ಲಿ ಸಮಗ್ರ ಪ್ರಪಂಚವೂ ಸಂಪೂರ್ಣವಾಗಿ ನಾಶವಾದಾಗ, ಯಾವ ಪದಾರ್ಥವೂ ಇಲ್ಲದಿರುವ ಸಮಯದಲ್ಲಿಯೂ ಸಹ ನಿರಾಧಾರ, ನಿರಾಶ್ರಯವಾದ ಕ್ಷೀರಸಾಗರದಲ್ಲಿ ಲಕ್ಷ್ಮೀದೇವಿಯೊಬ್ಬಳೇ ನನಗೆ ಹಿತವನ್ನುಂಟುಮಾಡುತ್ತಾ, ನನ್ನೊಡನೆ ಮಲಗಿ ಸಖಿಯಾಗಿ ಕ್ರೀಡಿಸುತ್ತಿರುವಳು. ಇಂಥವಳನ್ನ ಬಿಟ್ಟು ನನಗೆ ಸೌಖ್ಯವಾದರೂ ಹೇಗೆ ದೊರಕುವದು?" ಎಂದು ನುಡಿದನು. (31) ಈ ವಚನವನ್ನು ಕೇಳಿದ ಚತುರ್ಮುಖ ಬ್ರಹ್ಮದೇವರು

ಅದ್ಯ ಮಾಂ ಕಮಲಾನಾಥ ರಮಾಹ್ವಾನೇ ನಿಯೋಜಯ ॥32॥

ಸೋऽಪಿ ಪುತ್ರವಚಃ ಶ್ರುತ್ವಾ ದ್ಯುಮಣಿಂ ಶೀಘ್ರಮಾಹ್ವಯತ್ ।
ಷಣ್ಮುಖೇನ ಮಹಾರಾಜ ಸೋऽಪಿ ತತ್ರ ಸಮಾಗಮತ್ ॥33॥

ಭಾಸ್ಕರಂ ಭಕ್ತಿನಮ್ರಾಂಗಂ ಭಗವಾನಾಹ ಹೃದ್ಗತಮ್ ।

ಶ್ರೀಭಗವಾನುವಾಚ–

'ಸೃಗಾಲವಾಸುದೇವಸ್ಯ ನಗರಂ ಗಚ್ಛ ಭಾನುಮನ್ ॥34॥

ತತ್ರಾಸ್ತೇ ಜಗತಾಂ ಮಾತಾ ತಾಮಾನಯ ಮಮ ಪ್ರಿಯಾಮ್' ।
ಭಾರತೀಂ ವಾಸುದೇವಸ್ಯ ನಿಶಮ್ಯ ನೃಪಸತ್ತಮ ॥35॥

ವಿನಯೇನ ಸಮಾಯುಕ್ತಃ ಶಿರಸಾನಮ್ಯ ಚಾವದತ್ ।

ಭಾನುರುವಾಚ–

'ಕಥಂ ತಾಂ ಲೋಕಜನನೀಮಾನಯಿಷ್ಯೇ ತವಾಂತಿಕಮ್ ॥36॥

ತನ್ಮಮಾऽಚಕ್ಷ್ವ ಗೋವಿಂದ ಕಥಂ ಮಾಂ ವಿಶ್ವಸೇದ್ರಮಾ' ।

ಶ್ರೀಭಗವಾನುವಾಚ–

'ತ್ವಯಿ ತಸ್ಯಾಃ ಸ್ನೇಹ ಏವ ಸದಾ ಲೋಕಮಹೋದಯೇ ॥37॥

ತ್ವದಾಗಮನಸಂಹೃಷ್ಟಾ ಸಮಾಯಾತಿ ಮಮಾಂತಿಕಮ್ ।
ಉಪಾಯಂ ಪ್ರವದಿಷ್ಯಾಮಿ ತದಾಗಮನಕರ್ಮಣಿ ॥38॥

"ಪೂರ್ವದಲ್ಲಿಯೇ ಈ ವಿಷಯವನ್ನು ತಿಳಿಸಿದ್ದರೆ ವ್ಯವಸ್ಥೆ ಮಾಡಬಹುದಿತ್ತು. ಈಗಲಾದರೂ ಸಹ ಲಕ್ಷ್ಮೀದೇವಿಯನ್ನು ಕರೆದುಕೊಂಡು ಬರಲು ನನಗೆ ಅಪ್ಪಣೆಯನ್ನು ಕೊಡು" ಎಂದು ಪ್ರಾರ್ಥಿಸಲು (32) ಪರಮಾತ್ಮನು ಷಣ್ಮುಖನನ್ನು ಕಳುಹಿಸಿ ಸೂರ್ಯನನ್ನು ಕರೆಯಿಸಿದನು. ಭಕ್ತಿನಮ್ರನಾಗಿ ವಂದಿಸಿದ ಸೂರ್ಯನನ್ನು ಕುರಿತು "ಸೃಗಾಲವಾಸುದೇವನ ನಗರವಾದ ಕರವೀರಪುರಕ್ಕೆ ಹೊಗಿ, ಜಗಜ್ಜನನಿಯಾದ ಮಹಾಲಕ್ಷ್ಮಿಯನ್ನು ಕರೆದುಕೊಂಡು ಬಾ" ಎಂದು ಅಜ್ಞಾಪಿಸಿದನು. (35) ಭಗವಂತನ ಈ ಮಾತನ್ನು ಕೇಳಿದ ಸೂರ್ಯನು 'ನಿನ್ನೊಡನೆ ಕಲಹ ಮಾಡಿಕೊಂಡೇ ಕರವೀರ ಪುರಕ್ಕೆ ಹೊರಟು ಹೋಗಿರುವ ಆ ಮಹಾಲಕ್ಷ್ಮಿಯನ್ನು ನಾನು ಕರೆತರುವದಾದರೂ ಹೇಗೆ? ರಮಾದೇವಿಯು ನನ್ನಲ್ಲಿ ವಿಶ್ವಾಸವನ್ನು ಮಾಡುವ ಉಪಾಯವನ್ನು ತಿಳಿಸು' ಎಂದು ಪ್ರಶ್ನಿಸಿದನು.(37) ಆಗ ಭಗವಂತನು ಸೂರ್ಯನನ್ನು ಕುರಿತು 'ಪದ್ಮಗಳನ್ನು

ಆಶ್ರು ಮುಂಚನ್ನಪಮೃಜಂಸ್ತದ್ದ್ವಾರನಿಕಟೇ ಸ್ಥಿತಃ ।
ತ್ವಾಂ ಚ ದೃಷ್ಟ್ವಾ ಜಗನ್ಮಾತಾ ಸಾಂತ್ವಯಿಷ್ಯತಿ ಭಾನುಮನ್ ॥39॥

ಏವಂ ವದಂತೀ ವಾಕ್ಯಂ ತ್ವಾಂ ಕಿಂಚಿದ್ದುಃಖಸಮಾಕುಲಾ ।
ಶಾಸನಂ ತೇ ಹೃತಂ ಕೇನ ಧರಣ್ಯಾಂ ಕಥ್ಯತಾಮಿತಿ ॥40॥

ತ್ವಂ ಸಮಾಚಕ್ಷ್ವ ತಾಂ ದೇವೀಮಿತ್ಥಮತ್ಯಂತದುಃಖಿತಃ ।
ನ ಶಾಸನಂ ಹೃತಂ ಮೇಽದ್ಯ ಮಾತಃ ಕೇನಾಪಿ ಭೂತಲೇ ॥41॥

ಶಯನಂ ತು ಕೃತಂ ತೇನ ತವ ಭರ್ತ್ರಾಽದ್ಯ ಭೂತಲೇ ।
ಯೇನ ವೈ ಶಾಸನಂ ದತ್ತಂಮಾತರ್ಮೇಽಕೃಪಯೇದೃಶಮ್ ॥42॥

ನಿಶ್ಚೇತನೋಽದ್ಯ ಪತಿತೋ ಭರ್ತಾ ಜೀವತಿ ತೇ ನ ವಾ ।
ಭರ್ತಾ ತವ ಜಗನ್ನಾಥಸ್ತ್ವಶಕ್ತೋಽದ್ಯ ವಿಭಾತಿ ಮೇ ॥43॥

ಕದಾ ದ್ರಕ್ಷ್ಯಾಮಿ ದೇವೀಂ ತಾಮಿತ್ಯಾಸ್ತೇ ಪ್ರಲಪನ್ನಿತಿ ।
ಸಾ ತ್ವದ್ವಚನಮಾಕರ್ಣ್ಯ ಸಮಾಯಾತಿ ನ ಸಂಶಯಃ ॥44॥

ಉಪಾಯಂ ತು ತತಃ ಶ್ರುತ್ವಾ ಕಿಂಚಿದ್ಧಾಸ್ಯಮುಖಾನ್ವಿತಃ ।

ಅರಳಿಸುವ ನಿನಗೂ ಮತ್ತು ಪದ್ಮನಿವಾಸಿನಿಯಾದ ಲಕ್ಷ್ಮೀದೇವಿಗೂ ಮೊದಲಿನಿಂದಲೂ ಸ್ನೇಹವಿರುವದು. ನೀನು ಬಂದಿರುವ ಕಾರಣದಿಂದ ಸಂತುಷ್ಟಳಾದ ಲಕ್ಷ್ಮೀದೇವಿಯು ನಿನ್ನೊಡನೆ ಹೊರಟು ಬರುವಳು. ಅಷ್ಟಲ್ಲದೇ ನಿನಗೊಂದು ಉಪಾಯವನ್ನು ಹೇಳುವೆನು ಕೇಳು. (37–38) ನೀನು ಕಣ್ಣೀರನ್ನು ಸುರಿಸುತ್ತಾ ಅವಳ ಮನೆಯ ಬಾಗಿಲಿನ ಬಳಿ ನಿಂತುಕೋ. ಅಳುತ್ತಿರುವ ನಿನ್ನನ್ನು ನೋಡಿ ನೊಂದುಕೊಂಡ ಲಕ್ಷ್ಮಿಯು ನಿನ್ನನ್ನು ಸಮಾಧಾನ ಪಡಿಸುತ್ತಾ, 'ಯಾರಿಂದಲಾದರೂ ನಿನ್ನ ಸೂರ್ಯಪದವು ಅಪಹೃತವಾಗಿರುವದೋ ಹೇಗೆ? ನಿನಗೊದಗಿರುವ ದುಃಖವಾವುದು? ಎಂದು ಕೇಳುವಳು. (40) ಆಗ ನೀನು ಅತ್ಯಂತ ದುಃಖಿತನಾಗಿ ನನ್ನ ಶಾಸನವಾರಿಂದಲೂ ಸಹ ಅಪಹೃತವಾಗಿಲ್ಲವೆಂದು ತಿಳಿಸಿ "ಸರ್ವ ಜಗತ್ತಿಗೂ ಪ್ರಕಾಶಕನಾಗಿ ಸರ್ವಜಗತ್ತನ್ನೂ ಬೆಳಗುವ ನನಗೂ ಸಹ ಪ್ರಕಾಶಕತ್ವಶಕ್ತಿಯನ್ನು ಕೊಟ್ಟಿರುವ ನನ್ನ ಸ್ವಾಮಿಯಾದ, ನಿನ್ನ ಪತಿಯಾದ ಜಗನ್ನಾಥನು ರೋಗದಿಂದ ಬಳಲಿ ಮೂರ್ಛಿತನಾಗಿದ್ದಾನೆ. ಅವನು ಬದುಕುವದೂ ಸಹ ಸಂಶಯಾಸ್ಪದ. ನಿನ್ನನ್ನು ಯಾವಾಗಲೂ ನೆನಸಿ, ನಿನ್ನನ್ನು ನೋಡಬೇಕೆಂದು ಹಂಬಲಿಸುತ್ತಿದ್ದಾನೆ" ಎಂದು ಹೇಳು. ನಿನ್ನ ಮಾತನ್ನು ನಂಬಿ ಮಹಾಲಕ್ಷ್ಮಿಯು ನಿನ್ನೊಡನೆ ಹೊರಟು ನನ್ನ ಬಳಿ ಬರುವಳು' ಎಂದು ನುಡಿದನು. (41–44) ಭಗವಂತನ ಉಪಾಯವನ್ನು

ಬಭಾಷೇ ಭಕ್ತಿನಮ್ರಾಂಗೋ ಭಯಭಕ್ತಿಸಮನ್ವಿತಃ ॥45॥

ಸರ್ವಜ್ಞಾ ಸರ್ವಲೋಕೇಷು ವಿಶ್ರುತಾ ಕಮಲಾಲಯಾ ।
ಜಾನಾತಿ ಹೃದ್ಗತಂ ಕೃಷ್ಣ ಕಥಂ ಮಾಂ ವಿಶ್ವಸೇದ್ವಿಭೋ ॥46॥

ಆರೋಗಸ್ಯಾಥ ರೋಗಂ ಹಿ ಕಥಂ ವಕ್ಷ್ಯಾಮಿ ತೇ ಹರೇ' ।
ಸ ಭಾನೋರ್ವಚನಂ ಶ್ರುತ್ವಾ ಭಾನುಮಾಹ ಮನೋಗತಮ್ ॥47॥

ಶ್ರೀಭಗವಾನುವಾಚ–

'ಮಮ ಮಾಯಾಮೋಹಿತಾ ಸಾ ಭವಿಷ್ಯತಿ ನ ಸಂಶಯಃ' ।
ಇತ್ಯುಕ್ತಃ ಪ್ರಣಿಪತ್ಯಾಥ ವಾಸುದೇವಂ ರಥೇ ಸ್ಥಿತಃ ॥48॥

ಕರವೀರಪುರಂ ಗತ್ವಾ ಯಥೋಕ್ತಂ ತತ್ತಥಾऽಕರೋತ್ ।
ಸಾ ತದ್ವಚನಮಾಕರ್ಣ್ಯ ಯಥಾದೇಶಂ ತದಾ ರಮಾ ॥49॥

ರಥಮಾರುಹ್ಯ ವೇಗೇನ ಭಾನುವಾಕ್ಯಾದರೇಣ ಸಾ ।
ಸಂಪ್ರಾಪ್ತಾ ವಾಯುವೇಗೇನ ರವಿಯುಕ್ತಾ ರಮಾಪತಿಮ್ ॥50॥

ತದಾಗಮನವಾರ್ತಾಂ ಚ ಶ್ರುತ್ವಾ ತಸ್ಮಿನ್ ಕ್ಷಣೇ ಹರಿಃ ।
ಜಗಾಮ ದರ್ಶನಾಪೇಕ್ಷೀ ಹ್ಯಶಕ್ತ ಇವ ಸಮ್ಮುಖಮ್ ॥51॥

ಕೇಳಿದ ಸೂರ್ಯನು ಸ್ವಲ್ಪ ನಕ್ಕು ಅನಂತರದಲ್ಲಿ ಭಯಭಕ್ತಿಸಮನ್ವಿತನಾಗಿ (45) 'ಸರ್ವಜ್ಞಳೂ ಸರ್ವಲೋಕವ್ಯಾಪ್ತಳೂ, ಎಲ್ಲರ ಹೃದಭಿಪ್ರಾಯವನ್ನು ತಿಳಿದವಳೂ ಜಗನ್ಮಾತೆಯೂ ಆದ ಲಕ್ಷ್ಮೀದೇವಿಯು ನನ್ನ ಈ ಸುಳ್ಳನ್ನು ನಂಬಿ ಹೇಗೆ ನನ್ನಲ್ಲಿ ವಿಶ್ವಾಸವನ್ನು ಮಾಡುವಳು? (46) ಅಷ್ಟೇ ಅಲ್ಲದೇ ಸ್ಮರಣ ಮಾತ್ರದಿಂದ ಭವರೋಗವನ್ನೇ ನಾಶಮಾಡುವ, ರೋಗರಹಿತನಾದ ನಿನಗೆ ರೋಗವಿರುವದೆಂಬುದನ್ನು ನಾನು ಹೇಗೆ ನುಡಿಯಲಿ? ಎಂದು ಕೇಳಿದನು. (47) ಆಗ ಶ್ರೀನಿವಾಸನು "ನನ್ನಲ್ಲಿ ಪರಮವಿಶ್ವಾಸವಿರುವ, ಅಂತಃಕರಣವಿರುವ, ನನ್ನ ಮಾಯಾಮೋಹಿತಳಾದ ಮಹಾಲಕ್ಷ್ಮಿಯು ಇದನ್ನು ನಂಬಿ ಶೀಘ್ರವಾಗಿ ಇಲ್ಲಿಗೆ ಹೊರಟು ಬರುತ್ತಾಳೆ" ಎಂದು ಹೇಳಿದಾಗ (48) ಸೂರ್ಯನು ಭಗವಂತನಿಗೆ ನಮಸ್ಕರಿಸಿ, ರಥವನ್ನೇರಿ ಕರವೀರಪುರಕ್ಕೆ ಹೋಗಿ, ಶ್ರೀನಿವಾಸನು ಹೇಳಿದಂತೆಯೇ ಮಾಡಲು, ಸೂರ್ಯನ ಮಾತಿನಲ್ಲಿ ನಂಬಿಕೆಯಿಟ್ಟ ಮಹಾಲಕ್ಷ್ಮಿಯು ಶೀಘ್ರದಲ್ಲಿಯೇ ಆತನೊಡನೆ ಹೊರಟು ಶ್ರೀನಿವಾಸನ ಸನ್ನಿಧಿಗೆ ವಾಯುವೇಗದಿಂದ ಬಂದಳು. (50)

ಮಹಾಲಕ್ಷ್ಮಿಯ ಆಗಮನ ವಾರ್ತೆಯನ್ನು ಕೇಳಿದ ಶ್ರೀನಿವಾಸನು ಆಕೆಯನ್ನು ನೋಡುವ

ತಾದೃಶೀಮಾಕೃತಿಂ ಪ್ರಾಪ್ಯ ತದದ್ಭುತಮಿವಾಕರೋತ್ ।
ದೇವಾನಾಂ ಪೂರ್ವದೇವಾನಾಂ ಮುನೀನಾಮೂರ್ಧ್ವರೇತಸಾಮ್ ॥52॥

ಭುಜೇ ಭುಜಂಗಭೂಷಸ್ಯ ಭುಜಮಾಸ್ಥಾಯ ಭೂಮಿಪ ।
ತಥೇತರಂ ಬ್ರಹ್ಮಕಂಠೇ ನಿಧಾಯ ನಿಜಮಾತ್ಮಭೂಃ ॥53॥

ಏವಂ ಭೂತಂ ಶ್ರೀನಿವಾಸಂ ದದರ್ಶ ಕಮಲಾಲಯಾ ।
ರಥಾದುತ್ತೀರ್ಯ ವೇಗೇನ ಕಿಂಚಿದ್ಧಾಸ್ಯಮುಖಾಂಬುಜಾ ॥54॥

ಚಂಪಕಾಪುಷ್ಪನಿಚಯಂ ವಿಕೀರ್ಯ ಪದಪಂಕಜೇ ।
ಸಮಾಲಿಂಗ್ಯಾತಿಭಕ್ತ್ಯೈವ ಮುಹೂರ್ತದ್ವಯಮಾಸ್ಥಿತಾ ॥55॥

ರಮಾಲಿಂಗನಮಾತ್ರೇಣ ಪುಷ್ಟಾಂಗೋ ವಿಷ್ಟರಶ್ರವಾಃ ।
ಕುಶಲಂ ಪರಿಪಪ್ರಚ್ಛ ತಸ್ಯಾಃ ಸಾಽಪಿ ಹರೇಸ್ತಥಾ ॥56॥

ಪಿತರೌ ಸರ್ವಲೋಕಾನಾಂ ರಮಾನಾರಾಯಣಾವುಭೌ ।
ಸಂಪ್ರಾಪ್ತೌ ಸ್ವಸ್ಥತಾಂ ರಾಜನ್ ಸರ್ವದೇವನಮಸ್ಕೃತೌ ॥57॥

ಮಹಾಲಕ್ಷ್ಮ್ಯುವಾಚ–

'ಮಾಂ ಚ ಸಮ್ಮೋಹಯತ್ಯೇವ ತವ ಮಾಯಾ ದುರತ್ಯಯಾ ।
ಭಾನುನಾ ಮಯಿ ಗೋವಿಂದ ಕರ್ಮ ಚಿತ್ರಂ ತ್ವಯಾ ಕೃತಮ್ ॥58॥

ಅಪೇಕ್ಷೆಯುಳ್ಳವನಂತೆ ನಟಿಸಿ, ಅತ್ಯಂತ ಅಶಕ್ತನಾದವನಂತೆ ರೂಪವನ್ನು ತಾಳಿ, ರುದ್ರನ ಭುಜದ ಮೇಲೆ ಒಂದು ತೋಳನ್ನೂ, ಚತುರ್ಮುಖ ಬ್ರಹ್ಮನ ಭುಜದ ಮೇಲೆ ಮತ್ತೊಂದು ತೋಳನ್ನಿಟ್ಟುಕೊಂಡು ಮಹಾಲಕ್ಷ್ಮಿಯನ್ನು ನೋಡುವದಕ್ಕಾಗಿ ಎದುರಿಗೆ ಬಂದನು.(53) ಶ್ರೀನಿವಾಸನ ಕಪಟನಾಟಕವನ್ನರಿತ ಮಹಾಲಕ್ಷ್ಮಿಯು ರಥದಿಂದ ಇಳಿದು, ಸ್ವಲ್ಪ ನಗುಮುಖಳಾಗಿ, ಅವನ ಪಾದಗಳ ಮೇಲೆ ಸಂಪಿಗೆಯ ಪುಷ್ಪಗಳನ್ನು ಹರಡಿ, ಅತ್ಯಂತ ಭಕ್ತಿಯಿಂದ ನಮಸ್ಕರಿಸಿ, ಮಹೂರ್ತ ದ್ವಯಪರ್ಯಂತವಾಗಿ ಅವನನ್ನು ಆಲಿಂಗಿಸಿಕೊಂಡಳು. (55) ರಮಾಲಿಂಗನ ಮಾತ್ರದಿಂದ ಪುಷ್ಟಾಂಗನಾದ ಶ್ರೀನಿವಾಸನು ಹೃಷ್ಟಮನಸ್ಕನಾಗಿ, ಯೋಗಕ್ಷೇಮವನ್ನು ವಿಚಾರಿಸಿ, ಪರಸ್ಪರರು ಸಂತೋಷವನ್ನು ಪಡುತ್ತಿರಲು ಸಮಸ್ತಜಗನ್ಮಾತಾಪಿತೃಗಳಾದ ಲಕ್ಷ್ಮೀ–ಶ್ರೀನಿವಾಸರೀರ್ವರಿಗೂ ಸರ್ವದೇವತೆಗಳೂ ಹಾಗೂ ಸಮಸ್ತರೂ ನಮಸ್ಕಾರಗಳನ್ನು ಮಾಡಿದರು.(57)

ರಮಾದೇವಿಯನ್ನು ಕರೆತರಲು ಶ್ರೀನಿವಾಸನು ಮಾಡಿದ ಉಪಾಯ ವನ್ನು ತಿಳೀದು

ತ್ವನ್ಮಾಯಾಮೋಹಿತಾಸ್ಸರ್ವೇ ಬ್ರಹ್ಮೇಶಾನಾದಯಃ ಸುರಾಃ ।
ವದಾದೇಶಂ ವಾಸುದೇವ ಮಮಾದ್ಯಾಹ್ವಾನಕಾರಣಮ್ ॥
ಸ ರಮಾವಚನಂ ಶ್ರುತ್ವಾ ಸಾಧ್ವೀಮಾಹ ರಮಾಪತಿಃ ॥59॥

ಶ್ರೀನಿವಾಸ ಉವಾಚ–

'ತ್ವಯಾ ರಾಮಾವತಾರೇ ತು ಕಥಿತಂ ಸ್ಮರ ಭಾಮಿನಿ ।
ವೇದವತ್ಯಾ ವಿವಾಹಸ್ಯ ಸಂಪ್ರಾಪ್ತಃ ಕಾಲ ಏಷ ವೈ ॥60॥

ತ್ವತ್ಸನ್ನಿಧೌ ಕರ್ತುಕಾಮೋ ವಿವಾಹಂ ಚ ಕಲೌ ಯುಗೇ ।
ಏವಂ ವದತಿ ದೇವೇಶೇ ಸಾಽಸ್ಮರತ್ ಪೂರ್ವಿಕಾಂ ಗಿರಮ್ ॥61॥

ರಮೋವಾಚ–

'ತಾಮಂಗೀಕುರು ಗೋವಿಂದ ವಿವಾಹವಿಧಿಪೂರ್ವಕಮ್ ।
ವಚನಂ ಸಫಲಂ ಕೃಷ್ಣ ಕುರು ಮೇ ಭಕ್ತವತ್ಸಲ' ॥62॥

ಇತ್ಯುಕ್ತ್ವಾ ಶ್ರೀನಿವಾಸಂ ಸಾ ನನಾಮ ಚ ಮುದಾನ್ವಿತಾ ।
ಹರಿಸ್ತು ಲೋಕಜನನೀಮಾನಂದಯದುದಾರಧೀಃ ॥63॥

ಸ ರಮಾಗಿರಮಾಕರ್ಣ್ಯ ಪರಿಪೂರ್ಣಮನೋರಥಃ ।
ಪರಮಾನಂದಪೂರ್ಣಃ ಸನ್ನುರಗಾದ್ರೌ ವ್ಯರಾಜತ ॥64॥

'ಜಗತ್ತಿಗೆ ಮೋಹವನ್ನು ಉಂಟುಮಾಡುವ ನನ್ನನ್ನೇ ನಿನ್ನ ಇಚ್ಛಾರೂಪ ಮಾಯೆಯು ಮೋಹಗೊಳಿಸುವದೆಂದ ಮೇಲೆ ನಿನ್ನ ಮಾಯೆಯು ದಾಟಲಶಕ್ಯವಾಗಿರುವದು. ಬ್ರಹ್ಮಾದಿ ದೇವತೆಗಳೆಲ್ಲರೂ ಸಹ ನಿನ್ನ ಮಾಯಾಮೋಹಿತರೇ ಆಗಿರುವರು. ಸೂರ್ಯನ ಮೂಲಕವಾಗಿ ನನ್ನನ್ನು ಕರಿಸಿದ ಉಪಾಯವು ಅತ್ಯಂತ ಆಶ್ಚರ್ಯ ಕರವಾಗಿರುವದು. ನನ್ನನ್ನು ಕರೆಸಲು ಕಾರಣವೇನೆಂಬುದನ್ನು ಆಜ್ಞಾಪಿಸು' ಎಂಬುದಾಗಿ ಪ್ರಾರ್ಥಿಸಿದಳು. (59) ರಾಮಾವತಾರದ ಪೂರ್ವ ವೃತ್ತಾಂತವನ್ನು ನೆನಪಿಸುತ್ತಾ ಶ್ರೀನಿವಾಸನು 'ವೇದವತಿಯ ಅಂಶದಿಂದ ಜನಿತಳಾದ ಪದ್ಮಾವತಿಯ ವಿವಾಹವನ್ನು ನಿನ್ನ ಸನ್ನಿಧಾನದಲ್ಲಿ ಮಾಡಿಕೊಳ್ಳಲು ಬಯಸಿದ್ದೇನೆ' ಎಂದು ತಿಳಿಸಿದಾಗ (61) ರಮಾದೇವಿಯು "ವಿವಾಹವಿಧಿಪೂರ್ವಕವಾಗಿ ಆವಳನ್ನು ಅಂಗೀಕಾರ ಮಾಡಿ ನನ್ನ ಸೀತಾವತಾರದಲ್ಲಿಯ ವಚನವನ್ನು ಸತ್ಯವನ್ನಾಗಿಸು" ಎಂದು ಪ್ರಾರ್ಥಿಸಿದಳು.

ಆನಂದಬಾಷ್ಪೇಣ ಸಮೃದ್ಧನೇತ್ರಃ
ಸ್ವಾನಂದಸಂವಿತ್ಪರಿಪೂರ್ಣಗಾತ್ರಃ ।
ಬ್ರಹ್ಮೇಶಶಕ್ರಸ್ತುತಸಚ್ಚರಿತ್ರಃ
ತದಾ ಬಭೌ ವೇಂಕಟಶೈಲಮಿತ್ರಃ ॥65॥

ಇತಿ ಶ್ರೀಭವಿಷ್ಯೋತ್ತರಪುರಾಣೇ ಶ್ರೀವೇಂಕಟಗಿರಿಮಾಹಾತ್ಮ್ಯೇ ರಮಾಸಮಾಗಮೋ ನಾಮ ಏಕಾದಶೋಽಧ್ಯಾಯಃ ॥

* * *

ಇದರಿಂದ ಅತ್ಯಂತ ಸಂತುಷ್ಟನಾದ ಭಗವಂತನು ಬ್ರಹ್ಮರುದ್ರಾದಿದೇವತೆಗಳಿಂದ ಸಂಸ್ತೂಯಮಾನನಾಗಿ ಸಭಾಮಧ್ಯದಲ್ಲಿ ಆನಂದಪೂರ್ಣನಾಗಿ ಪ್ರಜ್ವಲಿಸಿದನು.

ಇಲ್ಲಿಗೆ ಶ್ರೀಭವಿಷ್ಯೋತ್ತರಪುರಾಣದಲ್ಲಿಯ ವೇಂಕಟಗಿರಿಮಾಹಾತ್ಮ್ಯದಲ್ಲಿ ರಮಾಸಮಾಗಮವೆಂಬ ಹನ್ನೊಂದನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

ಅಥ ಶ್ರೀಭವಿಷ್ಯೋತ್ತರಪುರಾಣೇ ವೇಂಕಟೇಶಮಾಹಾತ್ಮ್ಯೇ

## ದ್ವಾದಶೋಽಧ್ಯಾಯಃ

ಜನಕ ಉವಾಚ–

ತತಃ ಕಿಮುಕರೋತ್ ಕೃಷ್ಣಃ ಶ್ರೀನಿವಾಸಃ ಸತಾಂ ಗತಿಃ ।
ತನ್ಮಮಾಚಕ್ಷ್ವ ಭಗವನ್ವಿಸ್ತರೇಣ ಮಹಾಮುನೇ ॥1॥

ಶತಾನಂದ ಉವಾಚ–

ಶ್ರೀಲಕ್ಷ್ಮೀಸಹಿತಃ ಶ್ರೀಮಾಂಚ್ಛ್ರೀನಿವಾಸಃ ಪಿತಾಮಹಮ್ ।
ಅಬ್ರವೀತ್ ಪ್ರೀತಮನಸಾ ಪ್ರಯುಂಜಾನಃ ಪ್ರಯೋಜನೇ ॥2॥

ಶ್ರೀನಿವಾಸ ಉವಾಚ–

'ಕರ್ಮಾಣಿ ಪುತ್ರ ಕಾರ್ಯಾಣಿ ಕುರು ಶೀಘ್ರಮತಂದ್ರಿತಃ ।
ಸ ತದ್ವಚನಮಾಕರ್ಣ್ಯ ಸಂತೋಷೇಣ ಪಿತಾಮಹಃ ॥3॥

## ಹನ್ನೆರಡನೆಯ ಅಧ್ಯಾಯ

### ವಿವಾಹಕ್ಕಾಗಿ ಮಂಗಲಸ್ನಾನ

ಭಗವಂತನ ವಿವಾಹ ಮಹೋತ್ಸವದ ವರ್ಣನೆಯನ್ನು ಕೇಳಬಯಸಿದ ಜನಕ ರಾಜನು ಶತಾನಂದರನ್ನು ಕುರಿತು 'ಸಜ್ಜನರಿಗೆ ಪರಮ ಗತಿಯಾದ ಶ್ರೀನಿವಾಸನು ಮುಂದೇನು ಮಾಡಿದನು ಎಂಬುದನ್ನು ವಿಸ್ತಾರವಾಗಿ ವರ್ಣಿಸಿರಿ' ಎಂದು ಪ್ರಾರ್ಥಿಸಿದರು. ಆಗ ಶತಾನಂದರು ಪರಮ ಮಂಗಲವಾದ ಭಗವಂತನ ವಿವಾಹಕಥೆಯನ್ನು ವಿಸ್ತಾರವಾಗಿ ವರ್ಣಿಸಲು ಆರಂಭಿಸಿದರು. (1–2)

ಕರವೀರಪುರದಿಂದ ಆಗಮಿಸಿದ ಲಕ್ಷ್ಮೀದೇವಿಯಿಂದ ಒಡಗೂಡಿದ ಅತ್ಯಂತ ಹೃಷ್ಟಮನಸ್ಕನಾದ ಶ್ರೀನಿವಾಸನು ಚತುರ್ಮುಖ ಬ್ರಹ್ಮದೇವರನ್ನು 'ವಿವಾಹ ಮಹೋತ್ಸವಕ್ಕಾಗಿ ಮಾಡಬೇಕಾದ ಸಮಸ್ತ ಕೃತ್ಯಗಳನ್ನು ಅತೀ ಶೀಘ್ರದಲ್ಲಿ ಮಾಡಿ ಮುಗಿಸಬೇಕು" ಎಂದು ಆಜ್ಞಾಪಿಸಿದನು.

ಶ್ರೀನಿವಾಸನ ಈ ಮಾತನ್ನು ಕೇಳಿದ ಚತುರ್ಮುಖ ಬ್ರಹ್ಮದೇವನು ಕಾರ್ಯತತ್ಪರನಾಗಿ

ಕಟಾಹಭಾಂಡನಿಚಯಾನಾನೇತುಂ ಪ್ರೇಷಯತ್ಸುರಾನ್ ।
ಗರುಡಪ್ರಮುಖಾನ್ವೀರಾನ್ ನಾರಾಯಣಪರಾಯಣಾನ್ ॥4॥

ತೇ ತಸ್ಯ ವಚನಂ ಶ್ರುತ್ವಾ ಕ್ಷಣೇನ ಗರುಡಾದಯಃ ।
ಕಟಾಹಾದೀನ್ ಗೃಹೀತ್ವಾಥ ಸಮಾಜಗ್ಮುರನೇಕಧಾ ॥5॥

ಅಪೂರಯತ್ತತಸ್ತೇಷು ಸವಾಯುಸ್ಸಲಿಲಾಧಿಪಃ ।
ಸುಗಂಧಂ ತೋಯನಿಚಯಂ ದಿವ್ಯತೀರ್ಥೋದ್ಭವಂಶುಭಮ್ ॥6॥

ತತಃ ಸರ್ವಾಸ್ಸುವಾಸಿನ್ಯೋ ವಸ್ತ್ರಾಲಂಕಾರಮಂಡಿತಾಃ ।
ಅರುಂಧತೀಂ ಪುರಸ್ಕೃತ್ಯ ಕೃತಮಂಗಲಕೌತುಕಾಃ ॥7॥

ಸದೀಪಕಲಶಾ ರಾಜನ್ ಪಾರ್ವತಿಪ್ರಮುಖಾಃ ಸ್ತ್ರೀಯಃ ।

ಅತ್ಯಂತ ಸಂತೋಷದಿಂದ, ಭಗವಂತನಲ್ಲಿ ಬಹು ಭಕ್ತಿಭರಿತರಾದ ಮಹಾ ಬಲಶಾಲಿಗಳಾದ ಗರುಡನೇ ಮುಂತಾದ ದೇವತೆಗಳನ್ನು ಕೊಪ್ಪರಿಗೆಯೇ ಮೊದಲಾದ ಬೃಹದಾಕಾರದ ಪಾತ್ರೆಗಳನ್ನು ತರಲು ನಿಯೋಜಿಸಿದನು. (3–4)

ಆಗ ಅವರು ಕ್ಷಣಮಾತ್ರದಲ್ಲಿಯೇ ನಾನಾ ಸ್ಥಾನಗಳಿಂದ ಕಟಾಹ ಪಾತ್ರೆಗಳನ್ನು ಹಿಡಿದುಕೊಂಡು ಬಂದರು. ವರುಣನು ವಾಯುದೇವರಿಂದ ಕೂಡಿಕೊಂಡು ಉತ್ತಮ ಸುಗಂಧ ಭರಿತವಾದ ತಿರ್ಥೋದಕಗಳನ್ನು ಆ ಪಾತ್ರೆಯಲ್ಲಿ ತುಂಬಿಸಿದನು. (5–6) ವಸ್ತ್ರಾಲಂಕಾರಗಳಿಂದ ಭೂಷಿತರಾದ ಸುಮಂಗಲಾ ಸ್ತ್ರೀಯರು ವಸಿಷ್ಠಪತ್ನಿಯಾದ ಅರುಂಧತಿಯನ್ನು ಮುಂದೆ ಮಾಡಿಕೊಂಡು ಕಲ್ಯಾಣಕರವಾದ ಕೆಲಸಗಳಲ್ಲಿ ತತ್ಪರರಾದರು.

[ಇಲ್ಲಿ ಅರುಂಧತಿಯೇ ಮೊದಲಾದ ಸ್ತ್ರೀಯರು ಅಷ್ಟಮಂಗಲಗಳನ್ನು ಸಿದ್ಧಗೊಳಿಸುತ್ತಾರೆ. 'ದರ್ಪಣ, ಪೂರ್ಣಕಲಶ, ಕಲಶವತಿ, ಹೂ, ಅಕ್ಷತಾ, ದೀಪ, ಮಂಗಲ ಮತ್ತು ಲಾಜಾ (ಭತ್ತರಳು) ಇವು ಎಂಟು ವಿವಾಹ ಸಂದರ್ಭದಲ್ಲಿ ಅವಶ್ಯವಾಗಿದ್ದು ಅಷ್ಟ ಮಂಗಳಗಳೆನಿಸುವವು. ಎಲ್ಲ ಪದಾರ್ಥಗಳನ್ನು ಸಿದ್ಧ ಪಡಿಸಿಕೊಂಡ ಅನಂತರದಲ್ಲಿ ದೀಪ, ದರ್ಪಣ ಮತ್ತು ಕಲಶಗಳಿಂದ ವರನೊಂದಿಗೆ ಇರುವ ಕಲಶವತಿ (ಕಳಸಗಿತ್ತಿ) ಯಾರಾಗಬೇಕೆಂದು ಚರ್ಚಿಸುತ್ತಾರೆ. ಧರ್ಮಶಾಸ್ತ್ರಗಳು

ಭಗಿನೀ ವರವಧ್ವೋರ್ಯಾ ಕನ್ಯಾ ಕಲಶಧಾರಣೇ ।
ಸಾ ಕನ್ಯಾ ದರ್ಪಣಸ್ಯಾಪಿ ಧಾರಣೇ ಸರ್ವಸಮ್ಮತಾ'

ಎಂಬುದಾಗಿ 'ಯಾವ ವರ ಅಥವಾ ವಧುವಿನ ತಂಗಿಯು ಕಲಶವನ್ನು ಧಾರಣಮಾಡುವಳೋ ಅವಳೇ ದೀಪ ಮತ್ತು ದರ್ಪಣಗಳನ್ನು ಧರಿಸಬೇಕು' ಎಂದು ತಿಳಿಸುವದರಿಂದ ದೀಪ,

ಚಕ್ರುಸ್ಸಮಂತಾನ್ಮಾಂಗಲ್ಯಾನ್ ಸಸಾವಿತ್ರೀಪುರಸ್ಸರಾಃ ॥9॥

ಗಾಯಂತ್ಯಃ ಶುಭಗಾನಾನಿ ಸಿರಾತಂಕಕೃತಂ ತಥಾ ।
ಕೃಷ್ಣಾವತಾರವಿಭವಂ ಗಾಯಂತ್ಯಶ್ಚಾಮರಾಂಗನಾಃ ॥9॥

ಸಿದ್ಧಾಂಗನಾಶ್ಚ ರಾಜೇಂದ್ರ ತಥಾ ವೈಖಾನಸಾಂಗನಾಃ ।
ಏವಂ ಪ್ರವರ್ತಿತೇ ಪುಣ್ಯೇ ವಿವಾಹೇ ವೇಂಕಟೇಶಿತುಃ ॥10॥

ಸ್ನುಷಾಶ್ಚ ವಾಸುದೇವಸ್ಯ ಹಸಂತ್ಯಶ್ಚಾರುಲೋಚನಾಃ ।
ಶ್ವಶ್ರೂಂ ಚ ಪುರತಃ ಕೃತ್ವಾ ಮಾತರಂ ಬಕುಲಾಂ ಹರೇಃ ॥11॥

ಏವಂ ಮಹೋತ್ಸವಸ್ತತ್ರ ಸಮಭೂತ್ ಸಪ್ತಮೀದಿನೇ ।
ಚತುರ್ದಿಕ್ಷು ಚ ಸಂಸ್ಥಾಪ್ಯ ಕಲಶಾನ್ ಜಲಪೂರಿತಾನ್ ॥12॥

ಸೂತ್ರೇಣ ವೇಷ್ಟಯಿತ್ವಾ ತು ತನ್ಮಧ್ಯೇ ರತ್ನಪೀಠಿಕಾಮ್ ।
ಸಂಸ್ಥಾಪ್ಯ ಸಂಭ್ರಮೇಣೈವ ಇದಮಾಹುಃ ಸುರಾಂಗನಾಃ ॥13॥

ದರ್ಪಣಗಳನ್ನು ಹಿಡಿದ ಸ್ತ್ರೀಯೇ ಕಲಶವನ್ನೂ ಸಹ ವಿವಾಹಸಂದರ್ಭದಲ್ಲಿ ಹಿಡಿಯಬೇಕೆಂದು ತಿಳಿಸುವದು. ಇಲ್ಲಿ ಸಾವಿತ್ರಿ, ಸರಸ್ವತಿಯೇ ಮೊದಲಾದ ಸ್ತ್ರೀಯರು ಅರುಂಧತ್ಯಾದಿ ಋಷಿಸ್ತ್ರೀಯರು ಸಮ್ಮಿಲಿತರಾಗಿ ವಿಚಾರಿಸಿ ಪಾರ್ವತಿಯನ್ನೇ ಕಳಸಗಿತ್ತಿಯನ್ನಾಗಿ ನಿಯಮಿಸುವರು. ಏಕೆಂದರೆ ಕೃಷ್ಣನಾಗಿದ್ದಾಗ ಪಾರ್ವತಿಯೇ ಅಂಶರೂಪದಿಂದ ಸುಭದ್ರೆಯಾಗಿ ಕೃಷ್ಣನ ಭಗಿನಿಯಾದ್ದರಿಂದ ಮತ್ತು ಮೀನಾಕ್ಷಿಯಾಗಿ ಕನ್ಯಾರೂಪಳಾದ್ದರಿಂದ ಅವಳನ್ನೇ ಕಳಸವತಿಯನ್ನಾಗಿಸಿದರು.]

ಪಾರ್ವತಿಯೇ ಪ್ರಮುಖರಾದ ಸಾವಿತ್ರಿ ಮೊದಲಾದ ದೇವತಾ ಸ್ತ್ರೀಯರುಗಳು ದೀಪಸ್ತಂಭಗಳನ್ನು ಹಿಡಿದುಕೊಂಡು ಪರಮಾತ್ಮನನ್ನು ಅನುಸರಿಸಿದರು. ಅರುಂಧತಿ, ಗೌರಿ ಮೊದಲಾದ ಋಷಿ-ಮುನಿ-ದೇವತಾಂಗನೆಯರು, ಸಿದ್ಧಾಂಗನೆ ವೈಖಾನಸಾಂಗನೆಯರು ಭಗವಂತನ ಕೃಷ್ಣಾವಾತಾರದಲ್ಲಿಯ ಮಂಗಲಸೂಚಕ ವಿವಿಧ ಪದ್ಯಗಳನ್ನು ಗಾನ ಮಾಡಹತ್ತಿದರು. ಹೀಗೆ ವಿವಾಹ ಮಹೋತ್ಸವದ ಮಂಗಲಕಾರ್ಯಗಳು ರಭಸದಿಂದ ಸಾಗುತ್ತಿರಲು ಮನೋಹರವಾದ ನೇತ್ರಗಳುಳ್ಳ ವಾಸುದೇವನ ಸೊಸೆಯಂದಿರು ಮಂದಹಾಸವನ್ನು ಸೂಸುತ್ತಾ ಶ್ರೀನಿವಾಸನ ತಾಯಿ ಯಾದ ಬಕುಲಾದೇವಿಯನ್ನು, ತಮ್ಮ ಅತ್ತೆಯಾದ ಲಕ್ಷ್ಮೀದೇವಿಯನ್ನು ಪ್ರಧಾನವಾಗಿರಿಸಿಕೊಂಡು ವೈಶಾಖ ಶುದ್ಧ ಸಪ್ತಮಿ ದಿವಸದಲ್ಲಿ ನೆರವೇರಿಸಬೇಕಾದ ಉತ್ಸವ ಕಾರ್ಯಗಳನ್ನು ಪ್ರಾರಂಭಿಸಿದರು. (8-11) ನಾಲ್ಕು ದಿಕ್ಕುಗಳಲ್ಲಿ ಜಲದಿಂದ ಪೂರ್ಣವಾದ ಕಲಶಗಳನ್ನು ಸಂಸ್ಥಾಪನೆ ಮಾಡಿ ಸೂತ್ರದಿಂದ ಅವುಗಳನ್ನು ಸುತ್ತಿ ಅವುಗಳ ಮಧ್ಯದಲ್ಲಿ

**'ಉತ್ತಿಷ್ಠ ಪುರುಷಶ್ರೇಷ್ಠ ತಿಷ್ಠ ತತ್ಸೂತ್ರಮಂಡಲೇ' ।**
**ಸ ಇತ್ಥಮುಕ್ತೋ ಭಗವಾನ್ಯೋಷಿತಾಂ ಪುರತೋ ಹರಿಃ ॥14॥**

**ಪ್ರೋವಾಚ ವಚನಂ ದೀನಃ ಪ್ರಸ್ರವನ್ನೇತ್ರಜಂ ಜಲಮ್ ।**
**'ಪಿತಾಮಹ ಮಹಾಪ್ರಾಜ್ಞ ವಿವಾಹವಿಭವೇ ಮಮ ॥15॥**

ರತ್ನಖಚಿತವಾದ ಮಣಿಯನ್ನು ಸ್ಥಾಪನೆಮಾಡಿ ಸಂಭ್ರಮದಿಂದ ಸುರಾಂಗನೆಯರು ಪುರುಷೋತ್ತಮನನ್ನು ಸೂತ್ರ ಮಂಡಲದ ಮಧ್ಯದಲ್ಲಿ ನಿಂತುಕೊಳ್ಳಲು ಆಹ್ವಾನಿಸಿದರು. (14)

[ಆಗ ಭಗವಂತನು ವಿಚಾರವನ್ನು ಮಾಡುತ್ತಾನೆ – ವಿವಾಹಾದಿ ಶುಭಕರವಾದ ಉತ್ಸವಗಳಲ್ಲಿ ಕರ್ಮಗಳ ಅನುಷ್ಠಾನವು ಯಾವಚ್ಛಾಸ್ತ್ರಪೂರ್ತಿ ಅಥವಾ ಯಾವದಿಚ್ಛಾಪೂರ್ತಿ ಎಂಬುದಾಗಿ ಎರಡು ರೀತಿಯಾಗಿರುತ್ತದೆ. ಯಾವಾಗಲೂ ಮಂಗಲಸ್ನಾನಾದಿಗಳನ್ನು ಮಾಡಬೇಕಾದಲ್ಲಿ ತೈಲೋದ್ವರ್ತನವನ್ನು ಮಾಡಿಸಿಕೊಳ್ಳಬೇಕು. ಇಲ್ಲಿ ಯಾರಿಂದ ಎಣ್ಣೆಯನ್ನು ಹಚ್ಚಿಸಿಕೊಳ್ಳಬೇಕು? ವಿವಾಹ ಕರ್ಮದಲ್ಲಿ ಬ್ರಹ್ಮನು ಅಧಿಕೃತನಾಗಿರುವನು. ಇನ್ನು ತೈಲೋದ್ವರ್ತನಾದಿಗಳನ್ನು ಸ್ತ್ರೀಯರ ಕೈಯ್ಯಿಂದಲೇ ಮಾಡಿಸಿಕೊಳ್ಳಬೇಕು. ಇದು

ಅಕ್ಷತಾಃ ವಿಪ್ರಹಸ್ತೇನ ಮಾತೃಹಸ್ತೇನ ಭೋಜನಮ್ ।
ದಾನಂ ದದ್ಯಾತ್ ಸ್ವಹಸ್ತೇನ ನಾರೀಹಸ್ತೇನ ಮರ್ದನಮ್'

'ಬ್ರಾಹ್ಮಣರ ಕೈಯಿಂದ ಮಂತ್ರಾಕ್ಷತೆಗಳನ್ನೂ, ತಾಯಿಯ ಕೈಯಿಂದ ಭೋಜನವನ್ನು ಮಾಡಬೇಕು. ತನ್ನ ಕೈಯಿಂದ ದಾನವನ್ನು ಕೊಡಬೇಕು. ಆದರೆ ಅಭ್ಯಂಜನದ ಪ್ರಸಕ್ತಿಯು ಬಂದಾಗ ಸ್ತ್ರೀಯರಿಂದಲೇ ತೈಲೋದ್ವರ್ತನ ಅಭ್ಯಂಜನಾದಿಗಳು' ಎಂಬ ಪ್ರಮಾಣ ಪ್ರಮಿತ ವಾಗಿರುವದು. ಅಷ್ಟೇ ಅಲ್ಲದೇ 'ಆತೈಲಾಭ್ಯಂಗನಾದಾನಾಕಬಲಿ ಸ್ತ್ರೀಣಾಂ ಭೂರಿ' ಇವೇ ಮೊದಲಾದ ಗೃಹ್ಯಸೂತ್ರಗತ ವಾಕ್ಯಗಳೂ ಸಹ ವಿವಾಹಾದಿ ನಿಮಿತ್ತಕ ಅಭ್ಯಂಗದಲ್ಲಿ ಸ್ತ್ರೀಯರಿಗೆ ಪ್ರಾಧಾನ್ಯತೆಯನ್ನು ಹೇಳಿರುವದು. ಆದ್ದರಿಂದ ನನ್ನ ಪರಿವಾರದಲ್ಲಿ ಅನೇಕ ಬಲಯುತ ಪುರುಷರಿದ್ದರೂ ಸಹ ಅವರು ಎಣ್ಣೆಯೊತ್ತಲು ಪ್ರಶಸ್ತರೆನಿಸುವದಿಲ್ಲ. ಇನ್ನು ಅರುಂಧತಿಯೇ ಮೊದಲಾದ ಸುವಾಸಿನೀ ಸ್ತ್ರೀಯರು ವೃದ್ಧರಾಗಿರುವದರಿಂದ ನನ್ನ ವಜ್ರಸದೃಶಕಠೋರವಾದ ಶರೀರದ ಉದ್ವರ್ತನಾದಿಗಳನ್ನು ಮಾಡಲು ಸಮರ್ಥರಲ್ಲ. ಸರಸ್ವತ್ಯಾದಿಗಳು ನನಗೆ ಸೊಸೆಯರಾದ್ದರಿಂದ ಲಜ್ಜಾದಾಕ್ಷಿಣ್ಯಾದಿಗಳಿಂದ ಅವರಿಂದ ಅಭ್ಯಂಜನವನ್ನು ಮಾಡಿಸಿಕೊಳ್ಳಲು ಆಗುವದಿಲ್ಲ. ಅಭ್ಯಂಜನವಿಲ್ಲದೇ ವಿವಾಹವಿಲ್ಲ. ತೈಲೋದ್ವರ್ತನವಿಲ್ಲದೇ ಅಭ್ಯಂಜನವಿಲ್ಲ. ಆಶೀಃಪುರುಸ್ಸರವಾಗಿ ತೈಲೋದ್ವರ್ತನವನ್ನು ಮಾಡುವವರೇ ಇರದಿರುವದರಿಂದ ನನಗೆ ವಿವಾಹದ ಯಾವ ವಿಧಿವಿಧಾನಗಳೂ ಸಹ ಪೂರ್ಣವೆನಿಸುವದಿಲ್ಲ ಎಂದು ಆಲೋಚಿಸಿ ಲಕ್ಷ್ಮೀದೇವಿಯಿಂದ ತೈಲಾಭ್ಯಂಗನಾದಿಗಳನ್ನು ಮಾಡಿಸಿಕೊಳ್ಳಬಯಸಿದನು.

ಕಃ ಕರೋತ್ಯಭಿಷೇಕಂ ಮೇ ತೈಲೇನಾಶೀಃ ಕ್ರಮೇಣ ವೈ ।
ಯಸ್ಯ ನಾಸ್ತಿ ಮಹಾರಾಜ ಮಾತಾ ವಾಽಪಿ ಪಿತಾ ತಥಾ ॥16॥

ವಿವಾಹೇ ಚ ವಿಪತ್ತೌ ಚ ತಸ್ಯ ಧಿಗ್ಜನ್ಮ ಜೀವನಮ್ ।
ಭಗಿನ್ಯೋ ಭ್ರಾತರಶ್ಚೈವ ಮಾತುಲೋ ಭಾಗಿನೇಯಕಃ ॥17॥

ನ ಮೇ ಸಂತಿ ಮಹಾರಾಜ ಕಃ ಕರೋತ್ಯಭಿಷೇಚನಮ್ ।
ಮಾತಾಪಿತೃವಿಹೀನಾನಾಂ ಕಾ ಗತಿರ್ವಾ ಭವಿಷ್ಯತಿ ॥18॥

ನ ಚ ಮಾತೃಸಮಂ ಮಿತ್ರಂ ಜನಕೇನ ಸಮಂ ಸುಖಮ್ ।
ನ ಭಾರ್ಯಾಸದೃಶಂ ಭಾಗ್ಯಂ ನ ಪುತ್ರೇಣ ಸಮಾ ಗತಿಃ ॥19॥

ಯದ್ಯಪಿ ತೈಲಾಭ್ಯಂಗನವು ಆಶೀ ರೂಪವಾದ್ದರಿಂದ ವೃದ್ಧರಿಂದಲೇ ಅದು ಕಾರ್ಯವಾಗಿರುವದು. ಪರಮಾತ್ಮನಿಗಾರೂ ಹಿರಿಯರು ಇಲ್ಲದಿರುವದರಿಂದ ಸಮರಿಂದಲಾದರೂ ಅಭಿಷೇಕವನ್ನು ಮಾಡಿಸಿಕೊಳ್ಳಬೇಕು. ಲಕ್ಷ್ಮೀದೇವಿಯು ದೇಶತಃ ಸಮಳಾದ್ದರಿಂದ ಸಮನಾ ಶಬ್ದವಾಚ್ಯಳಾಗಿರುವದರಿಂದ, ಮಂಗಳ ದೇವತೆಯೂ, ತನ್ನ ನಿಯತ ಪತ್ನಿಯೂ ಆಗಿರುವದರಿಂದ

'ಅಥವಾ ಷಿಡ್ಗವ್ಯವಹಾರೇ ವಿಪರೀತಂ ಬಲಾಬಲಮ್'

ಎಂಬ ನಿಯಮದಂತೆ ಲಕ್ಷ್ಮೀದೇವಿಯು ತನಗೆ ತೈಲೋದ್ವರ್ತನವನ್ನು ಮಾಡಲು ಸಮರ್ಥಳೆನಿಸುವಳು. ಅವಳಲ್ಲಿ ಲಜ್ಜಾ, ಅಪಹಾಸ, ದಾಕ್ಷಿಣ್ಯಾದಿ ಯಾವ ದೋಷಗಳೂ ಸಹ ಇರುವದಿಲ್ಲ' ಎಂದು ಲಕ್ಷ್ಮಿಯ ಕೈಯಿಂದಲೇ ಮಂಗಳಸ್ನಾನಾಂಗಗಳಾದ 'ಆಶೀಃಪೂರ್ವಕವಾಗಿ ಎಣ್ಣೆಯನ್ನು ಹಚ್ಚುವದು, ಯಥೇಚ್ಛವಾಗಿ ಎಣ್ಣೆಯನ್ನು ಉಣಿಸುವದು, ಹಚ್ಚಿದ ಎಣ್ಣೆಯನ್ನು ಹಿತವಾಗಿ ತಿಕ್ಕುವದು, ಬಿಸಿನೀರಿನಿಂದ ಅಭೀಷೇಕ, ಅನಂತರ ಜಿಡ್ಡನ್ನು ದೂರಮಾಡುವ ಸಿಗೆಕಾಯಿ. ಹರಿದ್ರಾ, ಇವೇ ಮೊದಲಾದ ದ್ರವ್ಯಗಳಿಂದ ಎಣ್ಣೆಯನ್ನು ತಿಕ್ಕಿ ತೆಗೆದು ಬಿಸಿನೀರಿನಿಂದ ಅಭಿಷೇಕವನ್ನು ಮಾಡಿ ಹಿತವಾಗಿ ಒರೆಸುವದು –ಇವೇ ಮೊದಲಾದ ಕಾರ್ಯಗಳನ್ನು ಮಾಡಿಸಿಕೊಳ್ಳಲು ಬಯಸಿ, ಅದನ್ನು ಕಾರ್ಯರೂಪಕ್ಕೆ ತರಲು ನಾಟಕವನ್ನಾಡುತ್ತಾನೆ.]

ಆಗ ಭಗವಂತನು ದುಃಖದಿಂದಲೋ ಎಂಬುವಂತೆ ಕಣ್ಣುಗಳಲ್ಲಿ ನೀರನ್ನು ಸುರಿಸುತ್ತಾ ಪಿತಾಮಹನನ್ನು ಕುರಿತು "ತಂದೆ ತಾಯಿಯವರಿಂದ ವಿಹೀನನಾದ ನನಗೆ ತೈಲಾಭ್ಯಂಜನವನ್ನು ಮಾಡಿಸುವವರಾರು? (15) ವಿವಾಹದಲ್ಲಿ, ವಿಪತ್ತಿನಲ್ಲಿ ಸಹೋದರಿ, ಅಣ್ಣ ತಮ್ಮ, ಮಾತುಲ ಭಾಗಿನೇಯರುಗಳಿಂದ ರಹಿತನಾದವನ ಜೀವನಕ್ಕೆ ಧಿಕ್ಕಾರವಿರಲಿ. ಇವರಾರು ಇಲ್ಲದ ನನಗೆ ಅಭಿಷೇಕವನ್ನು ಮಾಡುವವರಾರು? (16–18) ತಾಯಿಗೆ ಸಮಾನವಾದ ಮಿತ್ರಳು, ತಂದೆಗೆ

ನಚ ಭ್ರಾತೃಸಮೋ ಬಂಧುರ್ನ ವಿಷ್ಣೋರ್ದೇವತಾ ಪರಾ ।
ಇತಿ ಸಂಭಾಷ್ಯ ಗೋವಿಂದೋ ಲೀಲಾಮಾನುಷವಿಗ್ರಹಃ ॥20॥

ರುರೋದ ಲೋಕರೀತ್ಯೈವ ಪಶ್ಯನ್ ಬ್ರಹ್ಮಾನನಂ ಹರಿಃ ।
ಉಪಧಾರ್ಯ ಹರೇರ್ವಾಕ್ಯಂ ಸ ಭವಃ ಕಂಜಸಂಭವಃ ॥21॥

ಸಾಂತ್ವಯನ್ ವಾಸುದೇವಂ ಚ ಭಾರತೀಮಾಹ ಭೂಪತೇ ।

ಬ್ರಹ್ಮೋವಾಚ–

'ಕಿಮರ್ಥಂ ಮೋಹಯಸಿ ನೋ ಮಾಯಾಪಂಜರವಾಸಿನಃ ॥22॥

ಕೋಽಪಿ ನಾಸ್ತೀತಿ ಯತ್ಪ್ರೋಕ್ತಂ ತದಸತ್ಯಂ ಚತುರ್ಭುಜ ।
ಪುತ್ರೋಽಹಂ ತವ ಕಲ್ಯಾಣ ಪೌತ್ರಸ್ಸಾಕ್ಷಾತ್ತ್ರಿಲೋಚನಃ ॥23॥

ಮನ್ಮಥೋಽನ್ಯಃ ಪುಮಾನ್ಪುತ್ರಃ ಪೌತ್ರಪುತ್ರಃ ಷಡಾನನಃ ।
ಜಗತ್ಪ್ರಾಣೋ ಜ್ಯೇಷ್ಠಪುತ್ರಃ ಸ್ನುಷಾ ತೇ ಭಾರತೀ ಹರೇ ॥24॥

ಸರಸ್ವತ್ಯಾದಿಕಾಸ್ಸರ್ವಾಃ ಸ್ತ್ರೀಯಸ್ತ್ವತ್ಪಾದಸೇವಿಕಾಃ ।
ತ್ವಂ ಪುಮಾನ್ಪುರುಷಃ ಸಾಕ್ಷಾಜ್ಜಗದ್ಧಾತ್ರೀ ತವಾಂಗನಾ ॥25॥

ಸಮಾನವಾದ ಸುಖವು, ಭಾರ್ಯಾ–ಪುತ್ರರಿಗೆ ಸಮಾನವಾದ ಗತಿಯು, ಭ್ರಾತೃವಿಗೆ ಸಮಾನವಾದ ಬಂಧುವು, ವಿಷ್ಣುವಿಗೆ ಸಮಾನವಾದ ಪರದೇವತೆಯು ಜಗತ್ತಿನಲ್ಲಿ ಯಾರೂ ಇಲ್ಲವೆಂದು ಸಂಭಾಷಣೆ ಮಾಡುತ್ತಾ ಲೀಲಾಮಯನಾದ ಶ್ರೀನಿವಾಸನು ಬ್ರಹ್ಮದೇವನ ಮುಖವನ್ನು ನೋಡುತ್ತಾ ಅತ್ತವನಂತೆ ನಟಿಸಿದನು. [15–21] ಭಗವಂತನ ವಚನವನ್ನು ಕೇಳಿ ಅವನ ನಟನೆಗೆ ಅನುಗುಣವಾಗಿ ಬ್ರಹ್ಮದೇವರೂ ಸಹ ನಾಟಕವಾಡುತ್ತಾ ಸಾಂತ್ವನ ಗೊಳಿಸುವಂತೆ ವರ್ತಿಸಿದರು.

ಚತುರ್ಮುಖ ಬ್ರಹ್ಮದೇವನು 'ಯಾರೂ ಇಲ್ಲದಂತೆ ನೀನು ಹೇಳಿರುವುದು ಅತ್ಯಂತ ಸುಳ್ಳು. ಇಂತಹ ಮಾತುಗಳನ್ನಾಡಿ ಮಾಯಾಪಂಜರವಾಸಿಗಳಾದ ನಮ್ಮನ್ನು ಏಕೆ ಮೋಹಗೊಳಿಸುತ್ತೀ? ನಿನ್ನೆದುರಿಗಿರುವ ನಾನೇ ನಿನ್ನ ಮಗನಾಗಿದ್ದೇನೆ. ಸಾಕ್ಷಾತ್ ತ್ರಿಲೋಚನನಾದ ರುದ್ರದೇವನು ಮೊಮ್ಮಗನಾಗಿದ್ದಾನೆ. (22–23) ಮನ್ಮಥನಿದ್ದಾನೆ. ಮೊಮ್ಮಗನ ಮಗನಾದ ಷಣ್ಮುಖನು ಇದ್ದಾನೆ. ಸಮಸ್ತ ಜೀವರಾಶಿಗಳಿಗೆ ಪ್ರಾಣದಾತೃವಾಗಿ ಜಗತ್ಪ್ರಾಣನೆಂದು ಪ್ರಸಿದ್ಧನಾದ ವಾಯು ದೇವನು ನಿನಗೆ ಜೇಷ್ಠ ಪುತ್ರನಾಗಿದ್ದಾನೆ. ಭಾರತೀ ದೇವಿಯು ಮತ್ತೊಬ್ಬ ಸೊಸೆಯಾಗಿರುವಳು. (24) ಭಾರತೀ, ಸರಸ್ವತೀ, ಪಾರ್ವತೀ ಮೊದಲಾದ ದೇವತಾ ಸ್ತ್ರೀಯರುಗಳು ನಿನ್ನ

ಕ್ರೀಡಾಮಾತ್ರಮಿದಂ ಮನ್ಯೇ ತ್ವತ್ಕೃತಂ ಪುರುಷೋತ್ತಮ ।
ಏವಂ ವಿಭವಮಾಪನ್ನಸ್ತ್ವಂ ನೋ ಮೋಹಯಸೇ ವೃಥಾ' ॥26॥

ಏವಮುಕ್ತ್ವಾ ಚತುರ್ವಕ್ತ್ರೋ ವಾಸುದೇವಂ ರಮಾಪತಿಃ ।
ರಮಾಂ ಸಂಕೇತಯಾಮಾಸ ಸಾ ರಮಾ ವಾಕ್ಯಮಬ್ರವೀತ್ ॥27॥

ರಮೋವಾಚ–

'ವಿದಿತಂ ಹೃದಯಂ ದೇವ ತವ ವೇಂಕಟವಲ್ಲಭ ।
ತೈಲಾಭ್ಯಂಗಾದಿಕರ್ಮಾಣಿ ಕರಿಷ್ಯೇ ಪುರುಷೋತ್ತಮ ॥28॥

ಉತ್ತಿಷ್ಠ ತ್ಯಜ ದುಃಖಂ ತ್ವಂ ಸಮಾರೋಹ ವರಾಸನಮ್' ।
ಸ ರಮಾಗಿರಮಾಕರ್ಣ್ಯ ಸಂತೋಷಾನ್ನಯನಾಜ್ಜಲಮ್ ॥29॥

ಮುಂಚನ್ಮುನಿವರಾನ್ ರಾಜನ್ ನಂದಯನ್ ನರಸಾರಥಿಃ ।
ಕಶ್ಯಪಾತ್ರಿಭರದ್ವಾಜವಿಶ್ವಾಮಿತ್ರಪುರೋಗಮಾನ್ ॥30॥

ಪ್ರಣಿಪತ್ಯ ವಸಿಷ್ಠಂ ಸ ಆಹ ವಿಶ್ವಂ ವಿಡಂಬಯನ್ ।

ಶ್ರೀನಿವಾಸ ಉವಾಚ–

'ಅನುಜ್ಞಾಂ ದೇಹಿ ಮೇ ಬ್ರಹ್ಮನ್ ಮಜ್ಜನಾರ್ಥಂ ಮಹಾಮುನೇ॥

ಪಾದಸೇವಿಕೆಯರಾಗಿರುತ್ತಾರೆ. ಪುರುಷೊತ್ತಮನಾದ ನಿನಗೆ ಜಗಜ್ಜನನಿಯಾದ ಮಹಾಲಕ್ಷ್ಮಿಯೇ ಪತ್ನಿಯಾಗಿರುವಳು. (25) ಆದ್ದರಿಂದ ಇದುವರೆಗೆ ಮಾಡಿದ ನಿನ್ನ ವಿಲಾಪಗಳೆಲ್ಲವೂ ಕೇವಲ ಕ್ರೀಡಾಮಾತ್ರ ವೆಂದು ಭಾವಿಸುತ್ತೇನೆ' ಎಂದು ಹೇಳುತ್ತಾ ಚತುರ್ಮುಖನು ರಮಾದೇವಿಯತ್ತ ಸಂಕೇತ ಮಾಡಿದನು (26–27) ಆಗ ರಮಾದೇವಿಯು ಪರಮಾತ್ಮನನ್ನು ಕುರಿತು 'ನಿನ್ನ ಹೃದ್ಗತವೆಲ್ಲವನ್ನು ಬಲ್ಲವಳಾಗಿದ್ದೇನೆ. ತೈಲಾಭ್ಯಂಜನಾದಿ ಸಮಸ್ತ ಕರ್ಮಗಳನ್ನು ನಾನೇ ಮಾಡಿಸುತ್ತೇನೆ. ದುಃಖವನ್ನು ಬಿಟ್ಟು ಎದ್ದು ಶ್ರೇಷ್ಠವಾದ ಆಸನವನ್ನು ಆರೋಹಣ ಮಾಡು' ಎಂದು ಹೇಳಿದಳು. (28–29)

ಇದರಿಂದ ಸಂತುಷ್ಟನಾಗಿ ನೇತ್ರಗಳನ್ನು ಅರಳಿಸಿದ ರಮಾಪತಿಯು ಆನಂದಭಾಷ್ಪಗಳನ್ನು ಸುರಿಸುತ್ತಾ ಮುನಿಶ್ರೇಷ್ಠರನ್ನು ಸಂತೋಷಪಡಿಸುತ್ತಾ ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮ ಮೊದಲಾದ ಮುನಿವರರನ್ನು ವಂದಿಸುತ್ತಾ, 'ಹೇ ಋಷಿಶ್ರೇಷ್ಠರೇ! ನಾನು ಮಂಗಲ ಸ್ನಾನವನ್ನು ಮಾಡುವೆನು. ನನಗೆ ಅನುಜ್ಞೆಯನ್ನು ಕೊಡಿರಿ' ಎಂದು ನುಡಿಯುತ್ತ ಜಗತ್ತಿಗೆ

ತಥಾಽಸ್ತ್ವಿತ್ಯಬ್ರವೀತ್ ಕೃಷ್ಣಂ ವಸಿಷ್ಠಸ್ಸಪುರೋಹಿತಃ ।
ಸಪತ್ನೀಕಾನ್ ಸುರಾನ್ ಸರ್ವಾನ್ ಸಭಾರ್ಯಾನೃಷಿಮಂಡಲಾನ್ ॥32॥

ಅನುಜ್ಞಾಪ್ಯಾನುಗೈಃ ಸಾರ್ಧಮುದತಿಷ್ಠತ್ಸುರೋತ್ತಮಃ ।
ವಿಕೀರ್ಯ ಕೇಶಮೂಲಾನಿ ಪೂರ್ವಾಭಿಮುಖಮಾಸ್ಥಿತಃ ॥33॥

ಆರೋಪಯನ್ ರತ್ನಪೀಠಂ ಶ್ರೀನಿವಾಸಂ ಸುಯೋಷಿತಃ ।
ತಾಸಾಂ ಮಧ್ಯೇ ಸಿಂಧುಪುತ್ರೀ ರಮಾ ಕಮಲಲೋಚನಾ ॥34॥

ರುಕ್ಮಪಾತ್ರಂ ಸಮಾದಾಯ ತೈಲಪೂರಿತಮಾದರಾತ್ ।
ಅಭ್ಯಂಜಯತ್ತದಾ ದೇವಿ ಸ್ವಾಶೀರ್ಭಿರಭಿನಂದ್ಯ ಚ ॥35॥

ರಮೋವಾಚ–

'ದೀರ್ಘಾಯುರ್ಭವ ಗೋವಿಂದ ಪುತ್ರವಾನ್ ಧನವಾನ್ಭವ ।
ಚತುರ್ದಶಾನಾಂ ಲೋಕನಾಮೇಕಚ್ಛತ್ರಾಧಿಪೋ ಭವ' ॥36॥

ಏವಮುಕ್ತ್ವಾ ತದಾ ದೇವೀ ಸಾಭ್ಯನಕ್ತಿ ಸ್ಮ ಮಾಧವಮ್ ।
ದೇವಾಂಗಂ ಮರ್ದಯಾಮಾಸ ತೈಲೇನಾತಿಸುಗಂಧಿನಾ ॥37॥

ತದಾ ದದೌ ಬ್ರಹ್ಮಪತ್ನೀ ಚಂದ್ರಕಾಶ್ಮೀರಕರ್ದಮಮ್ ।
ಮಾರ್ಜಾಲತೈಲಗಂಧೇನ ತಥಾ ಮೃಗಮದೇನ ಚ ॥38॥

ಆಶ್ಚರ್ಯವನ್ನುಂಟುಮಾಡುವ ರೀತಿಯಲ್ಲಿ ವಿಡಂಬನೆಯನ್ನು ಮಾಡುತ್ತಾ, ಮಜ್ಜನಾರ್ಥವಾಗಿ ವಸಿಷ್ಠರಿಂದ ಅನುಮತಿಯನ್ನು ಪಡೆದು ಸುರಶ್ರೇಷ್ಠನಾದ ಶ್ರೀನಿವಾಸನು ಮಜ್ಜನಾರ್ಥವಾಗಿ ಮೆಲಕ್ಕೆದ್ದನು. (33)

ತಲೆಗೂದಲುಗಳನ್ನು ಹರಡಿಕೊಂಡು ಪೂರ್ವಾಭಿಮುಖನಾಗಿ ಕುಳಿತುಕೊಂಡ ಆತನನ್ನು ಶ್ರೇಷ್ಠವಾದ ಸ್ತ್ರೀಯರು ರತ್ನ ಪೀಠದ ಮೇಲೆ ಕುಳ್ಳರಿಸಿದರು. ಅವರುಗಳ ಮಧ್ಯದಲ್ಲಿ ಕಮಲಲೋಚನೆಯಾದ ಸಿಂಧುಪುತ್ರಿಯಾದ ರಮಾದೇವಿಯು ತೈಲಪೂರಿತವಾದ ಚಿನ್ನದ ಪಾತ್ರೆಯನ್ನು ಹಿಡಿದುಕೊಂಡು ಆಶೀರಾಶಿಗಳಿಂದ ಭಗವಂತನನ್ನು ಅಭಿನಂದಿಸುತ್ತಾ ಅಭ್ಯಂಜನವನ್ನು ಮಾಡಿಸುತ್ತಾ 'ಚಿರಂಜಿವಿಯಾಗು. ಧೀರ್ಘಾಯುವಾಗು, ಪುತ್ರವಂತ, ಧನವಂತನಾಗು. ಚತುರ್ದಶ ಭುವನಗಳಿಗೆ ಏಕಚಕ್ರಾಧಿಪತಿಯಾಗು' (36) ಈ ರಿತಿಯಾಗಿ ಹೇಳುತ್ತಾ ಅತಿ ಸುಗಂಧವಾದ ತೈಲದಿಂದ ಭಗವಂತನ ದೇವಾಂಗವನ್ನು ಸಮಸ್ತದೇಹವನ್ನು ಮರ್ದನಮಾಡಿದಳು. (37)

ಹರಿದ್ರಾಚೂರ್ಣಪಿಷ್ಟೇನ ಪ್ರಾಮೃಜದ್ವೇಂಕಟೇಶ್ವರಮ್ ।
ಸುಮಂಗಲೈರ್ವಾದ್ಯಘೋಷೈಃ ಸಹಸರ್ವಪರಿಚ್ಛದೈಃ ॥39॥

ಸಮಂತಾತ್ಸರ್ವವಿಧಿಷು ಕರಿಕುಂಭೈರುಪಾಹೃತೈಃ ।
ಸಮಂತಾತ್ಪುಣ್ಯತೀರ್ಥಸ್ಥಪುಣ್ಯತೀರ್ಥಾಭಿಪೂರಿತೈಃ ॥40॥

ಸರತ್ನೈಃ ಕಾಂಚನೈಃ ಕುಂಭೈಃ ಸ್ಥಾಪಿತೋದಕಮಿಶ್ರಿತೈಃ ।
ಅಭಿಷೇಕಂ ತತಶ್ಚಕ್ರೇ ಸರ್ವಾಂಗಂ ಜಗದೀಶಿತುಃ ॥41॥

ಆಪಾದಮೌಲಿಪರ್ಯಂತಂ ಸಾ ಕೃತ್ವೋದ್ವರ್ತನಂ ಹರೇಃ ।
ಮೇನೇ ಕೃತಾರ್ಥಮಾತ್ಮಾನಂ ಸೇವಯಾ ಕೇಶವಸ್ಯ ಚ ॥42॥

ಚತಸ್ರಸ್ತಾಸ್ಸುವಾಸಿನ್ಯಃ ಪಾಣಿಭಿಃ ಕಲಶಾನ್ನೃಪ ।
ಧೃತ್ವಾ ಮೌಕ್ತಿಕತೋಯೈಸ್ತಮಭ್ಯಷಿಂಚನ್ ರಮಾಪತಿಮ್ ॥43॥

ಜಲೈರ್ನೀರಾಜಯಾಮಾಸುಃ 'ಪುತ್ರವಾನ್ ಧನವಾನ್ ಭವ' ।
ಇತ್ಯಾಶಿಷಾಽಭಿನಂದಂತ್ಯಃ ಶ್ರೀನಿವಾಸಂ ಸುರಾಂಗನಾಃ ॥44॥

ಗಾಯಂತ್ಯಃ ಶುಭಗೀತಾನಿ ಕುಂಕುಮೈಸ್ಸಲಿಲೈಸ್ತತಃ ।
ಆರಾರ್ತಿಕಾಂ ಮಾಂಗಲಿಕೀಂ ಸರ್ವಾಶ್ಚಕ್ರುಸ್ತಥಾಽಂಗನಾಃ ॥45॥

ಆಗ ಸರಸ್ವತಿ ದೇವಿಯು ಚಂದ್ರಕಾಶ್ಮೀರ (ಚಂದ್ರ ಕೇಸರ)ವನ್ನು ಕೊಟ್ಟಳು. ಮಾರ್ಜಾಲ ತೈಲದ ಪರಿಮಳದಿಂದ ಮತ್ತು ಕಸ್ತೂರಿಯಿಂದಲೂ, ಹರಿದ್ರಾಚೂರ್ಣದಿಂದಲೂ ವೇಂಕಟೇಶ್ವರನಿಗೆ ಸ್ನಾನ ಮಾಡಿಸಿದಳು. (38–39) ಮಂಗಳವಾದ್ಯಗಳ ಮಂಜುಳ ಧ್ವನಿಯು ಮೊಳಗುತ್ತಿರಲು ಆನೆಯ ಮೇಲೆ ಇರಿಸಿತಂದ ಸುವರ್ಣಕುಂಭಗಳಲ್ಲಿ ತುಂಬಿದ ಪುಣ್ಯ ತಿರ್ಥೋದಕಗಳನ್ನು ಆಪಾದಮೂಲ ಪರ್ಯಂತರವಾಗಿ ಪರಮಾತ್ಮನಿಗೆ ಅಭಿಷೇಕವನ್ನು ಮಾಡಿಸಿ ಉದ್ವರ್ತನವನ್ನು ಮಾಡಿ ಈ ಸೇವೆಯಿಂದ ತಾನು ಕೃತಾರ್ಥಳಾದಳೆಂದು ಭಾವಿಸಿದಳು. (42) ನಾಲ್ಕು ಜನ ಸುವಾಸಿನಿ ಸ್ತ್ರೀಯರು ನಾಲ್ಕು ದಿಕ್ಕಿನಲ್ಲಿಟ್ಟಿರುವ ಕಲಶದಲ್ಲಿರುವ ಮಂಗಲೋದಕವನ್ನು ಕೈಯಲ್ಲಿ ಹಿಡಿದು ಶ್ರೀನಿವಾಸನಿಗೆ ಅಭಿಷೇಕಮಾಡಿದರು. (43) ಅನಂತರದಲ್ಲಿ ಸುವಾಸಿನಿ ಸ್ತ್ರೀಯರು, ದೇವತಾ ಸ್ತ್ರೀಯರು 'ಪುತ್ರವಂತನೂ ಧನವಂತನೂ ಆಗು' ಎಂದು ಹರಸುತ್ತಾ ನೀರಿನಿಂದ ಶ್ರೀನಿವಾಸನಿಗೆ ನೀರಾಜನವನ್ನು ಮಾಡಿದರು. (44) ಭಗವಂತನ ಮಂಗಳಚರಿತೆಯನ್ನು ಗಾನಮಾಡುತ್ತಾ ಕುಂಕುಮ ಮಿಶ್ರಿತವಾದ ನೀರಿನಿಂದ ಮಾಂಗಲಿಕ ಆರತಿಯನ್ನು ಮಾಡಿದರು. (45) ಬ್ರಹ್ಮಪತ್ನಿಯಾದ ಸಾವಿತ್ರೀ ದೇವಿಯು ದಿವ್ಯವಾದ ವಸ್ತ್ರವನ್ನು ಕೊಟ್ಟಳು. ಮಹಾಲಕ್ಷ್ಮಿಯು

ತದಾ ದದೌ ಬ್ರಹ್ಮಪತ್ನೀ ಸಾವಿತ್ರೀ ವಸ್ತ್ರಮುತ್ತಮಮ್ ।
ತೇನ ವಸ್ತ್ರೇಣ ಸರ್ವಾಂಗಂ ಮಮಾರ್ಜ ವಿಧಿವದ್ರಮಾ ॥46॥

ಪಾರ್ವತೀ ಧೂಪಮಾದಾಯ ದದೌ ಲಕ್ಷ್ಮೀಕರಾಂಬುಜೇ ।
ಧೂಪಯಿತ್ವಾ ಸುಧೂಪೇನ ವಿಕೀರ್ಯಾಸಿತಮೂರ್ಧಜಾನ್ ॥48॥

ಬಬಂಧ ಕಮಲಾದೇವೀ ಮೂರ್ಧಜಾನ್ಮಧುಘಾತಿನಃ ।
ಆದರ್ಶಂ ದರ್ಶಯಾಮಾಸ ಸಾವಿತ್ರೀ ಸ್ವರ್ಣಭೂಷಿತಮ್ ॥49॥

ರತೀಶಚ್ಯೌ ಚಾಮರೇ ಚ ವೀಜಂತ್ಯೌ ಚಂದ್ರಸನ್ನಿಭೇ ।
ಛತ್ರಂ ದಧಾರ ಸಾ ದೇವೀ ಭಾರತೀ ಭಕ್ತಿಸಂಯುತಾ ॥
ಪಾದುಕೇ ಪ್ರದದೌ ಭದ್ರಾ ಗಂಗಾ ಗಂಗಾಪಿತುಸ್ತದಾ ॥49॥

ನಿಧಾಯ ಪಾದೌ ವರಪಾದುಕಾದ್ವಯೇ
ಯಯೌ ಪ್ರಪನ್ನಾರ್ತಿಹರೋ ಹರಿಃ ಸ್ವಯಮ್ ।
ಯಾಭ್ಯಾಂ ಪುರಾ ಪಾವನತಾಂ ಗತಾ ಮುನೇಃ
ಶಾಪೇನ ಚಾಶ್ಮತ್ವಮುಪಾಗತಾऽಬಲಾ ॥50॥

ಪಾದುಕಾಭ್ಯಾಂ ಚರನ್ ಭೂಮಿಂ ಪರಮಾಸನಮಾಸ್ಥಿತಃ ।
ಬ್ರಹ್ಮಾದಯಸ್ಸುರಶ್ರೇಷ್ಠಾ ಇಂದ್ರಾದ್ಯಾ ಲೋಕಪಾಲಕಾಃ ॥51॥

ಕಶ್ಯಪಾದಿಮುನಿಶ್ರೇಷ್ಠಾ ವಸಿಷ್ಠಾದಿತಪೋಧನಾಃ ।

ದಿವ್ಯವಾದ ವಸ್ತ್ರದಿಂದ ಶ್ರೀನಿವಾಸನ ಸರ್ವಾಂಗವನ್ನು ಒರೆಸಿದಳು. (46) ಪಾರ್ವತೀ ದೇವಿಯು ಧೂಪವನ್ನು ತಂದು ಲಕ್ಷ್ಮೀದೇವಿಯ ಕರಕಮಲಗಳಿಗೆ ಸಮರ್ಪಿಸಲು ಮಹಾಲಕ್ಷ್ಮಿಯು ಶ್ರೀನಿವಾಸನ ಕಪ್ಪಾದ ಕೂದಲುಗಳಿಗೆ ಧೂಪವನ್ನು ಹಾಕಿ ಕೂದಲಗಳನ್ನು ಬಂಧನ ಮಾಡಿದಳು. ಸ್ವರ್ಣಭೂಷಿತ ವಾದ ಕನ್ನಡಿಯನ್ನು ಸಾವಿತ್ರಿಯು ತೋರಿಸಿದಳು. (47–48) ರತೀ–ಶಚೀ ದೇವಿಯರು ಶುಭ್ರವಾದ ಚಾಮರಗಳನ್ನು ಬಿಸುತ್ತಿದ್ದರು. ಭಾರತೀ ದೇವಿಯು ಭಕ್ತಿ ಸಹಿತಳಾಗಿ ಶ್ವೇತ ಛತ್ರವನ್ನು ಧಾರಣ ಮಾಡಿದ್ದಳು. ಗಂಗಾಜನಕನಾದ ಶ್ರೀನಿವಾಸನಿಗೆ ಗಂಗೆಯು ಮಂಗಲಕರವಾದ ಪಾದುಕೆಗಳನ್ನು ಕೊಟ್ಟಳು. (49) ಭಕ್ತರ ದುಃಖಗಳನ್ನು ಪರಿಹರಿಸುವ ತನ್ನ ಪಾದಗಳನ್ನು ಆ ಪಾದುಕೆಗಳಿಂದ ಭೂಷಿತವಾಗುವಂತೆ ಮಾಡಿದನು. ಕಲ್ಲಾದ ಅಹಲ್ಯೆಯನ್ನು ಉದ್ಧರಿಸಿದ ದಿವ್ಯ ಪಾದಗಳನ್ನು ಪಾದುಕೆಗಳಿಂದ ಭೂಷಿಸಿಕೊಂಡ ಪರಮಾತ್ಮನು ನಡೆದುಬಂದು ತನಗಾಗಿಯೇ ನಿರ್ಮಿತವಾದ ಶ್ರೇಷ್ಠವಾದ ಪೀಠದಲ್ಲಿ ಆಸೀನನಾದನು. (50–51)

ಸನಕಾದ್ಯಾಶ್ಚ ಯೋಗೀಂದ್ರಾಃ ಭೃಗ್ವಾದ್ಯಾಶ್ಚ ಋಷೀಶ್ವರಾಃ ॥52॥

ಅರ್ಯಮಾದ್ಯಾಶ್ಚ ಪಿತರಃ ತುಂಬುರ್ವಾದ್ಯಾಶ್ಚ ಗಾಯಕಾಃ ।
ರಂಭಾದ್ಯಾಶ್ಚೈವ ನರ್ತಕ್ಯಃ ಸೂತಮಾಗಧವಂದಿನಃ ॥53॥

ಉಪಾಸತಾಸನೇ ರಮ್ಯಂ ಪಶ್ಯಂತಃ ಪುರುಷೋತ್ತಮಮ್ ।
ಸ್ವಾಮಿಪುಷ್ಕರಣೀತೀರೇ ದಕ್ಷಿಣೇ ಪಕ್ಷಿವಾಹನಮ್ ॥54॥

ಅಷ್ಟಮೀಂದುಕಲಾಕಾರೇ ಲಲಾಟೇ ದರ್ಪಣಸ್ಫುಟೇ ।

ಊರ್ಧ್ವಪುಂಡ್ರಂ ದಧಾರಾಶು ಶ್ರೀನಿವಾಸಸ್ಸತಾಂ ಗತಿಃ ॥
ತದಾऽऽಸಹ ಕಮಲಾಂ ರಾಜನ್ ಬಕುಲಾ ಲೋಕಮಾತರಮ್ ॥55।

'ರೇಖಾಂ ರಚಯ ಕಲ್ಯಾಣಿ ಲಲಾಟೇ ಕುಂಕುಮೇನ ತು' ।
ಏವಮುಕ್ತಾ ದೇವಮಾತ್ರಾ ರಮಾ ಕುಂಕುಮಮಾಲಿಖತ್ ॥56॥

ತದಾ ಮುಹೂರ್ತಕಾಲಸ್ತು ದರ್ಶಿತೋ ದೈವಚಿಂತಕೈಃ ।
ಭೂಷಣಾನಿ ಸ್ವಪುತ್ರಸ್ಯ ಪೌತ್ರಂ ತು ಜಗದೀಶಿತುಃ ॥57॥

ಯಾಚಯಿತ್ವಾ ಮಹಾರಾಜ ಕುಬೇರಂ ಸಾ ರಮಾ ತದಾ ।
ಆದಾಯ ತದ್ದದರ್ಶಾಥ ಭಗವಾನಾಹ ತಾಂ ನೃಪ ॥58॥

ಸ್ವಾಮಿಪುಷ್ಕರಣಿಯ ದಕ್ಷಿಣದಲ್ಲಿ ಆಸೀನನಾದ ಮಂಗಲಮೂರ್ತಿ ಯಾದ ಸುಂದರ ಪುರುಷ ಶ್ರೀನಿವಾಸನನ್ನು ಸಮಸ್ತರಾದ ಬ್ರಹ್ಮಾದಿದೇವತೆಗಳು, ಇಂದ್ರಾದಿ ಲೋಕಪಾಲಕರು, ಕಶ್ಯಪಾದಿ ವಸಿಷ್ಠಾದಿ ಋಷಿಗಳು, ಸನಕಾದಿ ಯೋಗಿಗಳಿ, ಭೃಗುವೇ ಮೊದಲಾದ ಜ್ಞಾನಿಶ್ರೇಷ್ಠರು, ಅರ್ಯಮಾದಿ ಪಿತೃಗಳು, ತುಂಬುರು ಮೊದಲಾದ ದೇವಗಾಯಕರು, ಸೂತಮಾಗಧವಂದಿಗಳು, ರಂಭಾದ್ಯಪ್ಸರಾ ಸ್ತ್ರೀಯರು, ಮನುಜರು ಇವರೆಲ್ಲರೂ ಭಗವಂತನನ್ನು ಆರಾಧನಾದೃಷ್ಟಿಯಿಂದ ಸಂತತವಾಗಿ ದರ್ಶಿಸುತ್ತಾ ಆನಂದಪಡುತ್ತಿರಲು, ಅಷ್ಟಮಿಯ ಚಂದ್ರನಂತೆ ಆಕಾರವಿರುವ, ದರ್ಪಣದಂತೆ ಸ್ಫುಟವಾದ ತನ್ನ ಲಲಾಟದಲ್ಲಿ ಊರ್ಧ್ವಪುಂಡ್ರವನ್ನು ಧಾರಣ ಮಾಡಿದನು. (51-55)

ಬಕುಳಾದೇವಿಯು ಲಕ್ಷ್ಮೀದೇವಿಯನ್ನು ಕುರಿತು ಶ್ರೀನಿವಾಸನಿಗೆ ಕುಂಕುಮವನ್ನು ಹಚ್ಚಲು ತಿಳಿಸಿದಾಗ ಮಹಾಲಕ್ಷ್ಮಿಯು ಶ್ರೀನಿವಾಸನಿಗೆ ಕುಂಕುಮವನ್ನು ಹಚ್ಚಿದಳು. (56) ಮೂಹೂರ್ತದ ಸಾಮೀಪ್ಯವನ್ನು ಜ್ಯೋತಿಷ್ಯ ಶಾಸ್ತ್ರಜ್ಞರು ತಿಳಿಸುತ್ತಿರಲಾಗಿ ಜಗದೀಶ್ವರನಾದ ತನ್ನ ಪತಿಗೆ ಮಹಾಲಕ್ಷ್ಮಿಯು ತನ್ನ ಮೊಮ್ಮಗನಾದ ರುದ್ರದೇವನಿಂದ ಸಕಲ ಭೂಷಣಗಳನ್ನು ಒಡವೆಗಳನ್ನು ಕುಬೇರನನ್ನು ಬೇಡಿ ತರಿಸಿದಳು. (57) ಅದನ್ನು ನೋಡಿ ಶ್ರೀನಿವಾಸನು ಅತ್ಯಂತ ಸಂತುಷ್ಟನಾಗಿ

ಶ್ರೀಭಗವಾನುವಾಚ–

'ಸಂಭೂಷಯ ವರಾರೋಹೇ ಭೂಷಣೈರ್ಮಾಂ ವರಾನನೇ ।
ಏವಮುಕ್ತಾ ಹಸಂತೀ ಸಾ ಭೂಷಣೈಸ್ಸಮಭೂಷಯತ್ ॥59॥

ಪೀತಾಂಬರಂ ದಧಾರಾಶು ಕಟಿಸೂತ್ರಮನರ್ಘ್ಯಕಮ್ ।
ಸ್ವರ್ಣೈರಾಭರಣೈರ್ವಸ್ತ್ರೈಃ ಭೂಷಿತಸ್ತು ತತೋ ಹರಿಃ ॥60॥

ಕಶ್ಯಪಾತ್ರಿಭರದ್ವಾಜವಸಿಷ್ಠಾದಿಮಹಾಮುನೀನ್ ।
ನಮಶ್ಚಕ್ರೇ ವಿರಿಂಚೇಶವಿನುತೋಽಪಿ ವಿಡಂಬಯನ್ ॥61॥

ಸಂಧ್ಯಾಮುಪಾಸ್ಯ ವಿಧಿವತ್ಕೃತ್ವಾ ತಾತ್ಕಾಲಿಕೀಃ ಕ್ರಿಯಾಃ ।
ವಸಿಷ್ಠಮಾಜುಹಾವೋಚ್ಚೈಃ ಸಂತೋಷೋದ್ರಿಕ್ತಮಾನಸಃ ॥62॥

ಶ್ರೀಭಗವಾನುವಾಚ–

'ಮುನಿಶ್ರೇಷ್ಠ ವಸಿಷ್ಠ ತ್ವಮುತ್ತರಂ ಕಾರ್ಯಮಾಚರ ।
ವಾಸುದೇವವಚಃಶ್ರುತ್ವಾ ವಸಿಷ್ಠೋ ವದತಾಂ ವರಃ ॥63॥

ವಿಲಿಖ್ಯ ವೇದಿಕಾಂ ತತ್ರ ಮೌಕ್ತಿಕೈಃ ಚತುರಸ್ರಿಕಾಮ್ ।
ಶ್ರೀನಿವಾಸಂ ಪ್ರತಿಷ್ಠಾಪ್ಯ ಸಂಕಲ್ಪವಿಧಿಪೂರ್ವಕಮ್ ॥64॥

ಕೃತ್ವಾ ಪುಣ್ಯಾಹಕರ್ಮಾಣಿ ವರಯಿತ್ವಾ ದ್ವಿಜನ್ಮನಃ ।
ಅಷ್ಟವರ್ಗಂ[36] ತತಶ್ಚಕ್ರೇ ಸೃಷ್ಟಿಕರ್ತಾ ಪಿತಾಮಹಃ ॥65॥

'ಆಭರಣಗಳಿಂದ ನನ್ನನ್ನಲಂಕರಿಸು' ಎಂದು ನುಡಿದನು. ಆಗ ರಮಾದೇವಿಯು ಆ ಆಭರಣಗಳಿಂದ ಪರಮಾತ್ಮನನ್ನು ಅಲಂಕರಿಸಿದಳು. ಪೀತಾಂಬರವನ್ನು ಉಟ್ಟು, ಅನರ್ಘ್ಯವಾದ ಕಟಿಸೂತ್ರವನ್ನು ಧರಿಸಿ, ಸ್ವರ್ಣಮಯವಾದ ಚಿನ್ನಾಭರಣ ಗಳಿಂದಲೂ ಉತ್ತಮೋತ್ತಮವಾದ ವಸ್ತ್ರಗಳಿಂದಲೂ, ಭೂಷಿತನಾದ ಪರಮಾತ್ಮನು ಬ್ರಹ್ಮಾದಿದೇವತಾಸಂಘಟ್ಟಿತ ಪಾದಪೀಠನಾಗಿದ್ದರೂ ಸಹ ಲೋಕವಿಡಂಬನ ಹಾಗೂ ಶಿಕ್ಷಣಾರ್ಥವಾಗಿ ಕಶ್ಯಪ, ಅತ್ರಿ ಭರದ್ವಾಜ ವಸಿಷ್ಠಾದಿ ಮಹಾಮುನಿಗಳನ್ನು ನಮಸ್ಕಾರ ಮಾಡಿ ವಸಿಷ್ಠರಿಗೆ ಮುಂದಿನ ಮಂಗಲ ಕಾರ್ಯಗಳನ್ನು ನೆರವೇರಿಸಲು ಆಜ್ಞಾಪಿಸಿದನು. (63)

ಚತುರಸ್ರವಾದ ವೇದಿಕೆಯನ್ನು ಮೌಕ್ತಿಕಗಳಿಂದ ಲೇಪನಮಾಡಿ ಶ್ರೀನಿವಾಸನನ್ನು ಅಲ್ಲಿ ಕೂರಿಸಿ ಸಂಕಲ್ಪಪೂರ್ವಕವಾಗಿ ಪುಣ್ಯಾಹ ಕರ್ಮಗಳನ್ನು ಮಾಡಿಸಿ ಬ್ರಾಹ್ಮಣರುಗಳನ್ನು ಕರೆದು ಸೃಷ್ಟಿಕರ್ತನಾದ

ತತೋ ನಿಯುಕ್ತವಿಧಿನಾ ದತ್ವಾ ತಾಂಬೂಲದಕ್ಷಿಣಾಃ ।
ವಿಪ್ರೇಭ್ಯೋ ವೇದವಿದ್ಭ್ಯಶ್ಚ ತಥಾ ಮಂಗಲವಾದಿನಾಮ್ ॥66॥
ದದುರ್ದೇವಾ ಧನಂ ವಸ್ತ್ರಂ ವಾಸುದೇವಸ್ಯ ಯೇ ಪ್ರಿಯಾಃ ।
ಸಮಾಪ್ಯ ಸರ್ವಕರ್ಮಾಣಿ ವಸಿಷ್ಠಸ್ತಾನಿ ಭೂಮಿಪ ॥67॥
ಕುಲದೇವೀಮಪೃಚ್ಛತ್ತಂ ವಸಿಷ್ಠೋ ವಸುಧಾಧಿಪ ।
ಸ ತಸ್ಯ ವಚನಂ ಶ್ರುತ್ವಾ ಭಗವಾನಾಹ ತಂ ಹರಿಃ ॥68॥

ಶ್ರೀಭಗವಾನುವಾಚ–

'ವಸಿಷ್ಠ ಮಮ ಕಲ್ಯಾಣೀ ಕುಲದೇವೀ ಶಮೀ ಸ್ಮೃತಾ ।
ಮಮಾಪಿ ಪಾಂಡವಾನಾಂ ಚ ನಾತ್ರ ಕಾರ್ಯಾವಿಚಾರಣಾ' ॥69॥

ವಸಿಷ್ಠ ಉವಾಚ–

'ಕ್ವ ಚಾಸ್ತಿ ಸ ದ್ರುಮಶ್ರೇಷ್ಠ' ಇತ್ಯುಕ್ತೇಽಗಸ್ತ್ಯ ಊಚಿವಾನ್ ।

ಅಗಸ್ತ್ಯ ಉವಾಚ–

'ಅತ್ರೈವೋತ್ತರದಿಗ್ಭಾಗೇ ತೀರ್ಥೇ ಕೌಮಾರಸಂಜ್ಞಕೇ ॥70॥
ವರ್ತತೇ ವೃಕ್ಷರಾಜಸ್ತು ತತ್ರ ಗತ್ವಾ ತಮಾನಯ' ।
ಅಗಸ್ತ್ಯವಚನೇನೈವ ತತ್ರ ಗತ್ವಾಽಥ ತಂ ದ್ರುಮಮ್ ॥71॥

ಪಿತಾಮಹನು ಅಷ್ಟವರ್ಗ ಕರ್ಮವನ್ನು ಮಾಡಿದನು. ವೇದವನ್ನು ಬಲ್ಲ ವಿಪ್ರರೆಲ್ಲರಿಗೂ ತಾಂಬೂಲ ದಕ್ಷಿಣಾದಿಗಳನ್ನು ಕೊಟ್ಟನು. ವಾಸುದೇವನಿಗೆ ಪ್ರೀತಿಪಾತ್ರರಾದ ದೇವತೆಗಳು ಧನಕನಕ ವಸ್ತ್ರಗಳನ್ನು ಶ್ರೀನಿವಾಸನಿಗೆ ಸಮರ್ಪಣ ಮಾಡಿದನು. (67)

### ಕುಲದೇವತಾ ಪ್ರತಿಷ್ಠಾಪನ

ಅನಂತರ ವಸಿಷ್ಠರು ವಿವಾಹಾಂಗವಾದ ಕುಲದೇವಿಯ ಪ್ರತಿಷ್ಠಾಪನವನ್ನು ಮಾಡಬಯಸಿ 'ಶ್ರೀನಿವಾಸನ ಕುಲದೇವಿ ಯಾರು?' ಎಂದು ಪ್ರಶ್ನಿಸಿದರು. ಆಗ ಶ್ರೀನಿವಾಸನು 'ನನಗೂ ಮತ್ತು ಪಾಂಡವರಿಗೂ ಶಮೀದೇವಿಯೇ ಕುಲದೇವತೆಯಾಗಿರುವಳು' ಎಂದು ಹೇಳಿದನು. (69) ಭಗವಂತನ ವಚನವನ್ನು ಕೇಳಿ ವಸಿಷ್ಠರು ಕುಲ ದೇವತಾ ಸ್ಥಾಪನೆಯಲ್ಲಿ ತತ್ಪರರಾದರು. ಶಮೀಯನ್ನು ತರಲು ವಸಿಷ್ಠರು 'ಆ ಶ್ರೇಷ್ಠವಾದ ವೃಕ್ಷವು ಎಲ್ಲಿರುವದು?' ಎಂದು ವಿಚಾರಿಸಿದಾಗ 'ಇಲ್ಲಿಯೇ ಉತ್ತರ ದಿಕ್ಕಿನಲ್ಲಿರುವ ಕುಮಾರಧಾರಾ ತೀರ್ಥದ ಬಳಿ ಶಮೀ ವೃಕ್ಷವಿರುವದು.

ಕೃತ್ವಾ ಪ್ರದಕ್ಷಿಣಂ ರಾಜನ್ ಭಗವಾನ್ ಲೌಕಿಕೈಸ್ಸಮಃ ।
ನಮಶ್ಚಕ್ರೇ ಶಮೀವೃಕ್ಷಂ ಕುಲದೈವಂ ವೃಷಾಕಪಿಃ ॥72॥

ಶ್ರೀಭಗವಾನುವಾಚ–

'ಶಮೀ ಶಮಯ ಮೇ ಪಾಪಂ ಶಮೀ ಶತ್ರು ವಿನಾಶಿನೀ ।
ಅರ್ಜುನಸ್ಯ ಧನುರ್ಧಾರೀ ರಾಮಸ್ಯ ಪ್ರಿಯದರ್ಶಿನೀ ॥73॥

ಮಾತರ್ಮೇ ಕುರು ಕಲ್ಯಾಣಮವಿಘ್ನೇನ ಸುರಪ್ರಿಯೇ ।
ಕಲಹಸ್ಸರ್ವದೇವಾನಾಂ ರಾಜ್ಞಷ್ಷಸ್ಯ ಚ ನೋದ್ಭವೇತ್' ॥74॥

ಇತಿ ಸಂಪ್ರಾರ್ಥ್ಯ ದೇವೇಶಃ ಕುಲದೇವೀಂ ಸುರಾರ್ಚಿತಾಮ್ ।
ಅರ್ಚಯಿತ್ವಾ ವಿಧಾನೇನ ಸ್ಕಂಧಮಲ್ಪಂ ಮಹೀಪತೇ ॥75॥

ನಿಕೃತ್ಯ ಶಿರಸಾ ಧೃತ್ವಾ ವಾದಿತ್ರಾಣಾಂ ಸ್ವನೇನ ಚ ।
ಪೂರಯನ್ನಂಬರಂ ಸರ್ವಂ ಪುನಸ್ಸ ಸ್ಥಾನಮಾಗತಃ ॥76॥

ಶ್ರೀನಿವಾಸ ಉವಾಚ–

'ಸಾ ಕುತ್ರ ಸ್ಥಾಪ್ಯತೇ ಬ್ರಹ್ಮನ್ ವಸಿಷ್ಠ ಕುಲದೇವಿಕಾ' ।

ಅಲ್ಲಿಗೆ ಹೋಗಿ ಆ ವೃಕ್ಷವನ್ನು ಸಂಗ್ರಹಿಸಬೇಕು' ಎಂದು ಅಗಸ್ತ್ಯ ಮುನಿಗಳು ತಿಳಿಸಿದರು. (72) ಆಗ ಅಲ್ಲಿಗೆ ತೆರಳಿ, ಭಗವಂತನು ಕುಲದೇವತೆಯಾದ ಶಮೀವೃಕ್ಷಕ್ಕೆ ಲೌಕಿಕ ಸಾಮಾನ್ಯ ವ್ಯಕ್ತಿಗಳಂತೆ ಪ್ರದಕ್ಷಿಣೆ– ನಮಸ್ಕಾರವನ್ನು ಮಾಡಿ 'ಹೇ ಶಮೀದೇವಿಯೇ! ನನ್ನ ಪಾಪವನ್ನು ಹೋಗಲಾಡಿಸು. ನನ್ನ ಶತ್ರುಗಳನ್ನು ನಾಶಗೊಳಿಸು. ಅರ್ಜುನನ ಧನಸ್ಸುನ್ನು ರಕ್ಷಿಸಿದವಳೂ, ರಾಮಚಂದ್ರನ ಪ್ರಿಯದರ್ಶಿನಿಯೂ ಆದ ನೀನು ದೇವತೆಗಳಿಗೆ ಪರಮ ಇಷ್ಟಳೂ ಆಗಿರುವಿ. ನಿರ್ವಿಘ್ನವಾಗಿ ನನ್ನ ಕಲ್ಯಾಣ ಕಾರ್ಯವನ್ನು ನೆರವೇರಿಸು. ವಿವಾಹಕ್ಕಾಗಿ ಆಗಮಿಸಿದ ಅಸಂಖ್ಯಾತ ದೇವತೆಗಳು ಮತ್ತು ರಾಜರುಗಳು ಇವರುಗಳಿಗೆ ಪರಸ್ಪರವಾಗಿ ಕಲಹವಾಗದಂತೆ ಸಂರಕ್ಷಿಸು. ಮಂಗಲವನ್ನೇ ಯಾವಾಗಲೂ ಕರುಣಿಸು' ಎಂದು ಸಂಪ್ರಾರ್ಥಿಸಿ, ಸುರಾರ್ಚಿತವಾದ ಕುಲದೇವತೆಯನ್ನು ದೇವೇಶನು ವಿಧಿಪೂರ್ವಕವಾಗಿ ಅರ್ಚಿಸಿ, ಶಮೀ ವೃಕ್ಷದ ಒಂದು ರೆಂಬೆಯನ್ನು ಸ್ವಲ್ಪ ಕತ್ತರಿಸಿಕೊಂಡು ಶಿರಸ್ಸಿನ ಮೇಲಿಟ್ಟು ಕೊಂಡು ಮಂಗಲಧ್ವನಿಯಿಂದ ಕೂಡಿದವರಾಗಿ ತನ್ನ ಸ್ಥಾನಕ್ಕೆ ಹಿಂತಿರುಗಿದನು. (73–76)

ಹೀಗೆ ತಂದ ಕುಲದೇವತೆಯನ್ನು ಎಲ್ಲಿ ಸ್ಥಾಪಿಸಬೇಕೆಂಬ ವಿಚಾರದಲ್ಲಿ ಭಗವಂತನು ನಿರತನಾದಾಗ ನಾರದರು ವರಾಹದೇವರ ಸಮೀಪದಲ್ಲಿ ಕುಲದೇವತೆಯನ್ನು ಸ್ಥಾಪಿಸಲು ತಿಳಿಸಿದರು.

ವದತ್ಯೇವಂ ವಾಸುದೇವೇ ವಸಿಷ್ಠಂ ವಸುಧಾಧಿಪ ॥77॥
ನಾರದಶ್ಚಾಂತಿಕಂ ಗತ್ವಾ ಪ್ರೋವಾಚ ಮಧುಸೂದನಮ್ ।

ನಾರದ ಉವಾಚ–

'ವರಾಹಶರಣೇ ದೇವ ಸ್ಥಾಪ್ಯತಾಂ ಕುಲದೇವತಾ ॥78॥
ಯಸ್ಮಿನ್ ಸ್ಥಾನೇ ಸ್ವಕಂ ಧಾಮ ತತ್ರ ತಾಂ ಸ್ಥಾಪ್ಯ ಪೂಜಯೇತ್।
ಏವಂ ವಿದ್ವನ್ಮತಂ ಪೂರ್ವಂ ನಿರ್ಮಿತಂ ಪರಮೇಷ್ಠಿನಾ' ॥79॥
ಸ ನಾರದವಚಃಶ್ರುತ್ವಾ ವಸಿಷ್ಠಸಹಿತೋ ಹರಿಃ ।
ವರಾಹಶರಣಂ ಗತ್ವಾ ವಚ ಏತತ್ತಮಬ್ರವೀತ್ ॥80॥

ಶ್ರೀನಿವಾಸ ಉವಾಚ–

'ಪ್ರಸಾದಾತ್ತವ ಗೋವಿಂದ ವಿವಾಹಂ ಕರ್ತುಮುತ್ಸುಕಃ ।
ಸಹಿತೋ ಧರಯಾ ದೇವ್ಯಾ ತ್ವಮಾಗಚ್ಛ ನೃಪಾಲಯಮ್ ॥81॥
ಗುರುಸ್ತ್ವಂ ಸರ್ವಲೋಕಾನಾಂ ಕೃತಕೃತ್ಯಂ ಚ ಮಾಂ ಕುರು' ।
ಶ್ರೀನಿವಾಸವಚಃಶ್ರುತ್ವಾ ಭೂಧರೋ ವಾಕ್ಯಮಬ್ರವೀತ್ ॥82॥

ವರಾಹ ಉವಾಚ–

'ಮಮ ಸ್ಥಾನೇ ಮಹಾರಾಜ ಬಕುಲಾಂ ವಿದ್ಧಿ ಶ್ರೀಪತೇ ।
ಕ್ಷೇತ್ರಂ ಪಕ್ವಂ ಮದೀಯಂ ತು ತಸ್ಮಾನ್ಮಾಂ ತ್ಯಕ್ತುಮರ್ಹಸಿ' ॥83॥

'ತನ್ನ ಸ್ವಂತ ಸ್ಥಳದಲ್ಲಿಯೇ ಕುಲದೇವತೆಯನ್ನು ಸ್ಥಾಪಿಸಬೇಕೆಂಬ ಬ್ರಹ್ಮದೇವರ ನಿಯಮವಾಗಿರುವುದರಿಂದ ಅಲ್ಲಿಯೇ ಸ್ಥಾಪಿಸುವದು ಉಚಿತವಾಗಿದೆ' ಎಂದು ನಾರದರ ಮಾತನ್ನು ಕೇಳಿ, ವಸಿಷ್ಠರಿಂದ ಸಮೇತನಾದ ಶ್ರೀನಿವಾಸನು ವರಾಹ ದೇವರ ಸನ್ನಿಧಿಗೆ ಹೋಗಿ ಈ ರೀತಿಯಾಗಿ ಮಾತನಾಡಿದನು. (80) "ಹೇ ವರಾಹನೇ! ಗೋವಿಂದನೇ! ನಿನ್ನ ಪರಮಾನುಗ್ರಹದಿಂದ ನಾನು ವಿವಾಹವನ್ನು ಮಾಡಿಕೊಳ್ಳಲು ಉತ್ಸುಕನಾಗಿದ್ದೇನೆ. ಧರಾದೇವಿಯಿಂದ ಸಹಿತನಾಗಿ ಆಕಾಶರಾಜನ ಆಲಯದಲ್ಲಿ ನಡೆಯುತ್ತಿರುವ ವಿವಾಹ ಮಹೋತ್ಸವಕ್ಕೆ ಸರ್ವದೇವತೆಗಳಿಗೆ ಗುರುವಾದ ನೀನು ಆಗಮಿಸಿ ನನ್ನನ್ನು ಕೃತಕೃತ್ಯನನ್ನಾಗಿ ಮಾಡು' ಎಂದು ಪ್ರಾರ್ಥಿಸಿದನು. (82) ಇದನ್ನು ಕೇಳಿದ ವರಾಹದೇವನು 'ಹೇ ಶ್ರೀನಿವಾಸನೇ! ನನ್ನ ಸ್ಥಾನದಲ್ಲಿ ಬಕುಲಾದೇವಿಯು ಬಂದಿರುವಳು. ನನ್ನ ಕ್ಷೇತ್ರದಲ್ಲಿಯ ಸಸ್ಯಗಳು ಪಕ್ವವಾಗಿ ಫಲಭರಿತವಾಗಿವೆ. ಆದ್ದರಿಂದ ನಾನು

ವರಾಹವಚನಂ ಶ್ರುತ್ವಾ ವಾಸುದೇವೋ ವಚೋಽಬ್ರವೀತ್ ।

ಶ್ರೀನಿವಾಸ ಉವಾಚ–

'ಕುಲದೇವೀಪ್ರತಿಷ್ಠಾಂ ಚ ಕರಿಷ್ಯೇ ಶರಣೇ ತವ' ॥84॥

ಇತ್ಯೇವಂ ಪ್ರಾರ್ಥಯಂತಂ ತಂ ಶ್ರೀನಿವಾಸಂ ಪರಾತ್ಪರಮ್ ।
'ತಥಾಽಸ್ತ್ವಿ'ತ್ಯವದದ್ರಾಜನ್ ಕ್ರೋಡರೂಪೀ ಹರಿಃ ಸ್ವಯಮ್ ॥85॥

ಕಲಶೇ ಸ್ವರ್ಣಖಚಿತೇ ಮುಕ್ತಾರಾಶಿಂ ಪ್ರಪೂರ್ಯ ಚ ।
ವಸ್ತ್ರೇಣ ವೇಷ್ಟಯಿತ್ವಾಽಥ ಪೂಜಾಂ ಕೃತ್ವಾ ವಿಧಾನತಃ ॥86॥

ಪ್ರತಿಷ್ಠಾಪ್ಯ ವರಾಹಸ್ಯ ಸನ್ನಿಧೌ ಪ್ರಾಕೃತೋ ಯಥಾ ।
ಪುನರಾಗತ್ಯ ಸ್ವಸ್ಥಾನಂ ಶ್ರೀನಿವಾಸಸ್ಸತಾಂ ಗತಿಃ ॥87॥

ಅಭೋಜನೇನ ಗಂತವ್ಯಂ ನಾರಾಯಣಪುರಾಹ್ವಯಮ್ ।
ಆಕಾಶರಾಜನಗರಮಿತಿ ನಿಶ್ಚಿತ್ಯ ಚೇತಸಿ ॥88॥

ಬ್ರಹ್ಮಾಣಮಬ್ರವೀದ್ರಾಜನ್ ತ್ವರಯಾ ಗಮನೇ ರತಃ ।

ಶ್ರೀನಿವಾಸ ಉವಾಚ–

'ವಿಧೇಽದ್ಯೈವ ನಿಯುಂಕ್ಷ್ವ್ಯೃತಾಂ ಸೇನಾಂ ತೇ ಚತುರಂಗಿಣೀಮ್ ॥89॥

ಈ ಕ್ಷೇತ್ರವನ್ನು ಬಿಟ್ಟು ಬರಲಾರೆನು' ಎಂದು ಹೇಳಿದಾಗ ಶ್ರೀನಿವಾಸನು ಕುಲದೇವತಾ ಪ್ರತಿಷ್ಠಾಪನಾರ್ಥವಾಗಿ ಸ್ಥಾನವನ್ನು ಕರುಣಿಸಲು ವರಾಹನನ್ನು ಸಂಪ್ರಾರ್ಥಿಸಿದನು. ವರಾಹಮೂರ್ತಿಯು ಅದಕ್ಕೆ ಸಮ್ಮತಿಸಿದನು. ಆಗ ಶ್ರಿನಿವಾಸನು ಸ್ವರ್ಣಖಚಿತವಾದ ಕಲಶದಲ್ಲಿ ಮುತ್ತುಗಳನ್ನು ತುಂಬಿ, ವಸ್ತ್ರದಿಂದ ವೇಷ್ಟನ ಮಾಡಿ, ಶಾಸ್ತ್ರೋಕ್ತ ವಿಧಾನದಿಂದ ಪೂಜೆಯನ್ನು ಮಾಡಿ, ಪ್ರಾಕೃತಮನುಷ್ಯನಂತೆ ವರಾಹದೇವರ ಸನ್ನಿಧಿಯಲ್ಲಿ ಕುಲದೇವತಾ ಪ್ರತಿಷ್ಠಾಪನ ಮಾಡಿ, ಪುನಃ ತನ್ನ ಸ್ವಸ್ಥಾನಕ್ಕೆ ಬಂದನು. (87)

### ಉಪವಾಸದಿಂದ ಪ್ರಯಾಣಬೆಳೆಸಲು ನಿರ್ಧಾರ

ಭೋಜನ ಮಾಡದೇ ಎಲ್ಲರೂ ಆಕಾಶರಾಜನ ನಾರಾಯಣಪುರಕ್ಕೆ ಪ್ರಯಾಣ ಮಾಡಬೇಕೆಂದು ನಿಶ್ಚಯಿಸಿದನು. ಅದರಂತೆ ಚತುರ್ಮುಖ ಬ್ರಹ್ಮದೇವರನ್ನು ಕರೆದು 'ನಿನ್ನ ಚತುರಂಗ ಸೇನಾ ಸಮೇತನಾಗಿ, ದೇವ ಋಷಿ ಮನುಜರಿಂದ ಯುಕ್ತನಾಗಿ ನಾರಾಯಣ ಪುರದೆಡೆಗೆ ಪ್ರಯಾಣವನ್ನು

ಶೀಘ್ರಂ ಗಂತುಂ ಚತುರ್ವಕ್ತ್ರ ನಾರಾಯಣಪುರಂ ಪ್ರತಿ ।
ಮಾ ಭೂತ್ಕಾಲೋ ವೃಥೈವಾತ್ರ ದೂರೋಽಧ್ವಾ ಹ್ಯಸ್ಯ ವರ್ತತೇ ॥90॥

ಬಲಂ ಸರ್ವಂ ವನೇ ತಾತ ವೃದ್ಧಬಾಲಾಬಲಾನ್ವಿತಮ್ ।
ಶನೈರ್ಗಚ್ಛತು ಭೋ ಪುತ್ರ ಮುನಿಮಂಡಲಪೂರ್ವಕಮ್' ॥91॥

ಸ ತಸ್ಯ ವಚನಂ ಶ್ರುತ್ವಾ ಚಕ್ರಪಾಣೇಶ್ಚತುರ್ಮುಖಃ ।
ವಚನಂ ವ್ಯಾಹರತ್ತೀವ್ರಂ ಪಿತರಂ ಪುರುಷೋತ್ತಮಮ್ ॥92॥

ಬ್ರಹ್ಮೋವಾಚ–

'ಕೃತ್ವಾ ಪುಣ್ಯಾಹಕರ್ಮಾಣಿ ಪ್ರತಿಷ್ಠಾಪ್ಯ ಕುಲೇಶ್ವರೀಮ್ ।
ಉಪವಾಸೇನ ಗೋವಿಂದ ನ ಗಂತವ್ಯಂ ಹಿ ತತ್ಪುರಮ್ ॥93॥

ಮುನಯಃ ಕ್ಷುಧಿತಾಸ್ಸರ್ವೇ ಬಾಲವೃದ್ಧಾಬಲಾದಯಃ' ।
ವದತ್ಯೇವಂ ಚತುರ್ವಕ್ತ್ರೇ ಚಕ್ರಪಾಣಿರಭಾಷತ ॥94॥

ಶ್ರೀನಿವಾಸ ಉವಾಚ–

'ವಚನಾನಿ ಮಹಾರ್ಹಾಣಿ ತವ ಪುತ್ರ ಪಿತಾಮಹ ।
ಕಥಂ ಕಾರ್ಯಮಕಾರ್ಯಂ ಚ ನೈವ ಜಾನಾಸಿ ಪುತ್ರಕ ॥95॥

ದೇಶಕಾಲಾವನಾಲೋಚ್ಯ ಭಾಷಸೇ ಬಾಲಿಶೋ ಯಥಾ ।

ಬೆಳಸು. ದಾರಿಯು ಬಹು:ಳಷ್ಟಿರುವದರಿಂದ ಮತ್ತು ವೃದ್ಧರು, ಬಾಲಕರು ಮತ್ತು ಸ್ತ್ರೀಯರು ಇರುವದರಿಂದ ಕಾಲವಿಲಂಬವನ್ನು ಮಾಡದೇ ಮುನಿಮಂಡಲವನ್ನು ಮುಂದಿಟ್ಟುಕೊಂಡು ಮೆಲ್ಲನೆ ಪ್ರಯಾಣವನ್ನು ಆರಂಭಿಸೋಣ' ಎಂದು ನುಡಿದನು. (91) ಪರಮಾತ್ಮನ ಈ ಮಾತನ್ನು ಕೇಳಿದ ಚತುರ್ಮುಖ ಬ್ರಹ್ಮ ದೇವರು 'ಕುಲದೇವತಾ ಪ್ರತಿಷ್ಠೆಯನ್ನು ಮಾಡಿ ಭೋಜನ ಮಾಡಲಾರದೇ ಉಪವಾಸವಿದ್ದು ನಾರಾಯಣಪುರಕ್ಕೆ ಪ್ರಯಾಣ ಮಾಡಬಾರದೆಂದೂ, ಬಾಲಕರು, ವೃದ್ಧರು, ಅಬಲೆಯರು, ಮುನಿಗಳು ಹೀಗೆ ಎಲ್ಲರೂ ಸಹ ಹಸಿದಿರುವದರಿಂದ ಭೋಜನಾಂತರದಲ್ಲಿ ಪ್ರಯಾಣಿಸಬೇಕೆಂದು ತಿಳಿಸಿದಾಗ (94) ಶ್ರೀನಿವಾಸನು ಕ್ರುದ್ಧನಂತೆ ನಟಿಸಿ "ಕಾರ್ಯಾಕಾರ್ಯಗಳನ್ನು ತಿಳಿಯಲಾರದೇ ದೇಶಕಾಲಗಳ ಪರಿಜ್ಞಾನ ವಿಲ್ಲದೆ ಮೂಢನಂತೆ ಬಾಲಿಶನಾಗಿ ದೊಡ್ಡ ದೊಡ್ಡ ಮಾತನಾಡುತ್ತಿರುವಿ. ಇಂತಹ ಕಾನನ ಪ್ರದೇಶದಲ್ಲಿಯೂ ಸಹ ಈಗಾಗಲೇ ಹತ್ತು ಸಾವಿರ ದ್ರವ್ಯವೂ ನನ್ನಿಂದ ಖರ್ಚಾಗಿದೆ. ಇಷ್ಟೊಂದು ಹಣವು ಖರ್ಚಾಗುವದನ್ನು

ದ್ರವ್ಯಾಣಾಮಯುತಂ ತಾತ ಗತಂ ಮೇ ಕಾನನೇ ಗಿರೌ ॥96॥

ಏವಂ ವ್ಯಯಂ ಸಮಾಪನ್ನಂ ಕಥಂ ಪಶ್ಯಸಿ ಚಕ್ಷುಷಾ ।
ಜ್ಞಾತ್ವಾಽಪಿ ರಿಕ್ತತಾಂ ಮೇಽದ್ಯ ತ್ವೇವಮುಕ್ತೋಕಥಂಭವೇತ್' ॥97॥

ವದತ್ಯೇವಂ ಸ್ವಪಿತರಿ ಬ್ರಹ್ಮಾ ಲೋಕಪಿತಾಮಹಃ ।
ತೂಷ್ಣೀಮಾಸ ಮಹಾರಾಜ ಭಗವತ್ತುರತಸ್ತದಾ ॥98॥

ನೀಲಕಂಠೋಽಬ್ರವೀದ್ವಾಕ್ಯಂ ಪಿತರಂ ಸ್ವಪಿತುಸ್ತಥಾ ।

ನೀಲಕಂಠ ಉವಾಚ–

'ಶ್ರೋತವ್ಯಂ ವಚನಂ ತಾತ ಮಮ ಬಾಲಸ್ಯ ಮಾಧವ ॥99॥

ವಿವಾಹಕರಣೇ ದೇವ ತಥಾ ಭವನಕರ್ಮಣಿ ।
ಆರಬ್ಧಸ್ಯಾಂತಪರ್ಯಂತಂ ಯೋ ಹಿ ಯತ್ನಂ ಸಮಾಚರೇತ್ ॥100॥

ಸ ಏವ ಪುಣ್ಯವಾನ್ ಲೋಕೇ ಕೀರ್ತಿಮೇತಿ ನ ಸಂಶಯಃ ।
ಸಂಪಾದ್ಯಾಸ್ಸರ್ವಸಂಭಾರಾಃ ಶುಭಕಾರ್ಯೇಷು ಪುಷ್ಕಲಾಃ ॥101॥

ಬಹುಲಾರ್ಥವ್ಯಯೇನಾಪಿ ತದಭಾವೇ ತ್ರ್ಯಣಂ ಚರೇತ್' ।
ಸ ಶಂಭುವಚನಂ ಶ್ರುತ್ವಾ ಶಂಬರಾರಿಪಿತಾಽಬ್ರವೀತ್ ॥102॥

ಶ್ರೀಭಗವಾನುವಾಚ–

ಸಭಾಯಾಂ ಕಿಮಿದಂ ಪ್ರೋಕ್ತಂ ಪೌರುಷೇಣ ವಚಃ ಶಿವ ।

ಹೇಗೆ ತಾನೆ ಕಣ್ಣಿನಿಂದ ನೋಡಲು ಸಾಧ್ಯ? ನಾನು ರಿಕ್ತನಿರುವೆನೆಂದು ತಿಳಿದೂ ಸಹ ನೀನು ಹೀಗೆ ಮಾತನಾಡುವುದು ಅಸಮಂಜಸ' ಎಂದು ನುಡಿದನು. (97) ಆಗ ಚತುರ್ಮುಖ ಬ್ರಹ್ಮದೇವನು ಮೌನವನ್ನು ಆಶ್ರಯಿಸಿದನು. ಆಗ ಮೊಮ್ಮಗನಾದ ನೀಲಕಂಠನು 'ವಿವಾಹ ಮತ್ತು ಗೃಹನಿರ್ಮಾಣವೇ ಮೊದಲಾದ ಶುಭಕಾರ್ಯಗಳಲ್ಲಿ ಆರಂಭಿಸಿದ ಕಾರ್ಯವನ್ನು ಪೂರ್ಣಗೊಳಿಸುವವನೇ ನಿಜವಾದ ಪುಣ್ಯಶಾಲಿಯೂ ಕೀರ್ತಿಶಾಲಿಯೂ ಆಗುವನು. ಅವು ಪೂರ್ಣವಾಗುವವರೆಗೂ ಪ್ರಯತ್ನವನ್ನು ಮಾಡುತ್ತಲೇ ಇರಬೇಕು. ಶುಭಕಾರ್ಯಗಳಲ್ಲಿ ಆವಶ್ಯಕವಾದ ಸಮಸ್ತ ಸಾಮಗ್ರಿಗಳನ್ನು ಬಹು ದ್ರವ್ಯ ವ್ಯಯದಿಂದಾದರೂ ಸಂಪಾದಿಸಿ ಸಿದ್ಧಪಡಿಸಿಟ್ಟುಕೊಳ್ಳಬೇಕು. ದ್ರವ್ಯ ಇರದಿದ್ದರೆ ಸಾಲವನ್ನಾದರೂ ಮಾಡಿ ಸಂಪಾದಿಸಿಕೊಳ್ಳಬೇಕು' ಎಂದು ಶುಭವಚನವನ್ನು ನುಡಿದನು. (102) ಆಗ ಶಂಬರಾರಿಪಿತನು ಶಿವನನ್ನು ಕುರಿತು "ಸಭೆಯಲ್ಲಿ ಒಳ್ಳೆಯ ಪೌರುಷದ

ಕೋ ವಾಽದ್ಯ ಋಣದಾತಾಽಸ್ತಿ ವಿವಾಹಸ್ಯಾಸ್ಯ ಪುಷ್ಕಲಮ್ ॥103॥

ಪುರುಷಃ ಪೌರುಷಂ ಯತ್ನಮಾಚರೇನ್ನ ತು ಭಾಷಯೇತ್ ।
ಏವಮುಕ್ತ್ವಾ ಶಿವಂ ಪ್ರಾಹ ಕುಬೇರಂ ಪುರುಷೋತ್ತಮಃ ॥104॥

ಶ್ರೀಭಗವಾನುವಾಚ–

'ರಹಸ್ಯಂ ವರ್ತತೇ ಕಿಂಚಿದಿತ ಏಹಿ ಧನಾಧಿಪ' ।
ಸ ಇತ್ಥಮುಕ್ತೋ ಧನದಃ ಪಿತಾಮಹಸಮನ್ವಿತಃ ॥105॥

ಸಮುತ್ತಸ್ಥೌ ಸಭಾಮಧ್ಯಾತ್ ಕುಬೇರಃ ಶಿವಸಂಯುತಃ ।
ಬ್ರಹ್ಮಣಾ ಸ ಕುಬೇರೇಣ ಶಂಕರೇಣ ರಮಾಪತಿಃ ॥106॥

ಏಕಾಂತೇ ಸ್ವಾಮಿತೀರ್ಥಸ್ಯ ಪಶ್ಚಿಮೇಽಶ್ವತ್ಥಸನ್ನಿಧೌ ।
ಗತ್ವೋವಾಚ ಧನೇಶಾನಂ ಶ್ರೀನಿವಾಸಸ್ಸತಾಂ ಗತಿಃ ॥107॥

ಶ್ರೀನಿವಾಸ ಉವಾಚ–

'ಸಾಧಯಸ್ವಾದ್ಯ ವಸುಪ ಕಲ್ಯಾಣಂ ಮೇ ಕಲೌ ಯುಗೇ ।
ದತ್ವಾ ಧನಂ ಯಾವದಿಷ್ಟಂ ಪುತ್ರಸ್ಯ ನರವಾಹನ' ॥108॥
ವಾಸುದೇವವಚಃಶ್ರುತ್ವಾ ವಸುಪಾಲೋಽಬ್ರವೀದ್ವಚಃ ॥108॥

ಮಾತನ್ನಾಡಿರುವಿ. ನನ್ನ ವಿವಾಹಕ್ಕೆ ಪುಷ್ಕಳವಾದ ದ್ರವ್ಯದ ಅವಶ್ಯಕತೆ ಇದೆ. ನಾನು ರಿಕ್ತನೆಂದು ತಿಳಿದೂ ಸಹ ಸಾಲವನ್ನಾದರೂ ಯಾರು ಕೊಡುವವರಿದ್ದಾರೆ? ಕೇವಲ ಮಾತನ್ನಾಡುವದು ಪೌರುಷವಲ್ಲ ಆಚರಣದಿಂದ ಅದನ್ನು ತೋರಿಸಿದರೇ ಅದು ನಿಜವಾದ ಪೌರಷವಾಗುವದು' ಎಂದು ಹೇಳಿ (104)

ಶ್ರೀನಿವಾಸನಿಗೆ ಕುಬೇರನಿಂದ ಸಾಲ:

ಕುಬೇರನನ್ನು ಕುರಿತು 'ಹೇ ಕುಬೇರನೇ! ನಿನ್ನೊಡನೆ ರಹಸ್ಯವಾಗಿ ಮಾತನಾಡುವದಿದೆ. ಸ್ವಲ್ಪ ಇತ್ತಕಡೆ ಬಾ' ಎಂದು ನುಡಿದನು. ಆಗ ಪಿತಾಮಹನಾದ ಬ್ರಹ್ಮದೇವರಿಂದ ಸಮೇತನಾದ ಕುಬೇರನು ರುದ್ರದೇವರಿಂದ ಸಮನ್ವಿತನಾಗಿ ಸಭಾಮಧ್ಯದಿಂದ ಎದ್ದು ಪರಮಾತ್ಮನಿದ್ದಲ್ಲಿಗೆ ಬಂದನು. (106) ಆಗ ಭಗವಂತನು ಏಕಾಂತದಲ್ಲಿ ಸ್ವಾಮಿ ಪುಷ್ಕರಣಿಯ ಪಶ್ಚಿಮ ದಿಗ್ಭಾಗದಲ್ಲಿ ಅಶ್ವತ್ಥವೃಕ್ಷದ ಸನ್ನಿಧಿಯಲ್ಲಿ ಕುಬೇರನನ್ನು ಕರೆದುಕೊಂಡು ಹೋಗಿ ಬ್ರಹ್ಮ ರುದ್ರರ ಸಮ್ಮುಖದಲ್ಲಿ ಕುಬೇರನನ್ನು ಕುರಿತು ಈ ರೀತಿಯಾಗಿ ಮಾತನಾಡಿದನು. 'ಹೇ ಕುಬೇರನೇ! ಈ ಕಲಿಯುಗದಲ್ಲಿ

ಕುಬೇರ ಉವಾಚ–

'ತವಾಧೀನಮಿದಂ ಸರ್ವಂ ಜಗದೇತಚ್ಚರಾಚರಮ್ ।
ಬಹೂನಾಂ ಜೀವರಾಶೀನಾಂ ಮಧ್ಯೇ ಕೋಽಹಂ ಜಗತ್ಪತೇ॥

ನಿಯೋಜಿತಸ್ತ್ವಯಾ ತಾತ ರಕ್ಷಿತುಂ ಚ ಧನಂ ಮಯಾ ।
ದಾನಾದಾನೇ ನೈವ ಶಕ್ತಿರ್ಮಮ ನಾಸ್ತಿ ಖಗಧ್ವಜ ॥110॥

ತ್ವನ್ನಿಧೇಸ್ತ್ವಂ ಚ ದಾತಾ ಚ ದಾನಾದಾನೇ ಸ್ವತಂತ್ರವಾನ್' ।
ಬ್ರುವತ್ಯೇವಂ ಧನಪತೌ ಶ್ರೀಪತಿರ್ವಾಕ್ಯಮಬ್ರವೀತ್ ॥111॥

ಶ್ರೀನಿವಾಸ ಉವಾಚ–

'ಏಕಸ್ಮಿನ್ ಬ್ರಹ್ಮದಿವಸೇ ತ್ವವತಾರಾ ದಶ ಸ್ಮೃತಾಃ ।
ಮಮಾವತಾರಸಮಯೇ ನಾನಯಾಮಿ ಧನಂ ಗೃಹಾತ್ ॥112॥

ಭೂಗತಂ ಚ ಧನಂ ರಾಜನ್ ನೈವ ನೇಷ್ಯಾಮಿ ಮದ್ಗೃಹಮ್।
ಯಥಾಯುಗಂ ಯಥಾಕಾಲಂ ಯಥಾದೇಶಂಯಥಾವಯಃ ॥113

ತಥಾವತಾರಮಾಕಾಂಕ್ಷನ್ ರೇಮೇಽತ್ರ ರಮಯಾ ಸಹ ।
ನಿಮಿತ್ತಮಾತ್ರಂ ದಾನೇ ತ್ವಂ ಧನಸ್ಯ ನರವಾಹನ ॥114॥

ನನಗೆ ವಿವಾಹ ಮಹೋತ್ಸವವನ್ನು ಸಾಧಿಸಿಕೊಡು ನನ್ನ ಪುತ್ರನು ಅಪೇಕ್ಷಿಸಿದಷ್ಟು ಧನವನ್ನು ಕೊಟ್ಟು ಕಲ್ಯಾಣೋತ್ಸವವನ್ನು ಸಾಂಗಮಾಡು' (108) ಎಂದು ಹೇಳಿದಾಗ ಭಗವಂತನ ಮಾತನ್ನು ಕೇಳಿದ ಕುಬೇರನು ವಿನಮ್ರನಾಗಿ ಈ ರೀತಿಯಾಗಿ ನುಡಿದನು "ಹೇ ಭಗವಂತನೇ! ಚರಾಚರಾತ್ಮಕವಾದ ಈ ಪ್ರಪಂಚವು ನಿನ್ನ ಆಧೀನವೇ ಆಗಿರುವಾಗ ಬಹುತರವಾದ ಜೀವ ರಾಶಿಗಳ ಮಧ್ಯದಲ್ಲಿ ನಿನಗೆ ಧನವನ್ನು ಕೊಡಲು ನಾನು ಯಾರು? ಹೇ ಸ್ವಾಮಿ! ಧನವನ್ನು ರಕ್ಷಿಸುವದಕ್ಕಾಗಿ ನಾನು ನಿನ್ನಿಂದಲೇ ಆಜ್ಞಪ್ತನಾಗಿ ನಿಯೋಜಿಸಲ್ಪಟ್ಟಿರುವೆನು. ಹಣವನ್ನು ಕೊಡುವದಕ್ಕೂ ಅದನ್ನು ತೆಗೆದುಕೊಳ್ಳುವುದಕ್ಕೂ ನನಗೆ ಎಳ್ಳಷ್ಟು ಸಾಮರ್ಥ್ಯವಿಲ್ಲ. ನನ್ನಲ್ಲಿನ ಸಮಸ್ತ ನಿಧಿಗೆ ನೀನೇ ಅಧಿಪತಿಯು. ನಿಧಿಯನ್ನು ಪಡೆಯಲು ಕೊಡಲು ನೀನೇ ಸ್ವತಂತ್ರನು." (111) ಈ ರೀತಿಯಾಗಿ ಕುಬೇರನ ವಚನವನ್ನು ಕೇಳಿದ ಶ್ರೀನಿವಾಸನು ಕುಬೇರನನ್ನು ಕುರಿತು 'ಬ್ರಹ್ಮನ ಒಂದು ದಿವಸದಲ್ಲಿ ನನ್ನ ಹತ್ತು ಅವತಾರಗಳು ಆಗುವವೆಂದು ಸರ್ವ ಸ್ಮೃತಿಗಳಲ್ಲಿ ಪ್ರಸಿದ್ಧವಾಗಿರುವದು. ನನ್ನ ಅವತಾರ ಸಮಯದಲ್ಲಿ ನಾನು ಭೂಲೋಕಕ್ಕೆ ನನ್ನ ವೈಕುಂಠದಿಂದ ಧನವನ್ನು ತರುವುದಿಲ್ಲ. ಮತ್ತು ನಾನು ವೈಕುಂಠಕ್ಕೆ ತೆರಳುವ ಸಂದರ್ಭದಲ್ಲಿ ಭೂಮಿಯಲ್ಲಿರುವ

ಯುಗಾನುಸಾರಿಣೇ ದೇಹಿ ದೇಶಕಾಲಾನುಸಾರತಃ' ।
ಸ ತಸ್ಯ ವಚನಂ ಶ್ರುತ್ವಾ ಕುಬೇರೋ ವಾಕ್ಯಮಬ್ರವೀತ್ ॥115॥

ಕುಬೇರ ಉವಾಚ–

'ಯುಗಾನುಸಾರಿಣಸ್ತೇಽದ್ಯ ಕಥಂ ದಾಸ್ಯಾಮಿ ಚಕ್ರಭೃತ್ ।
ಯದಿ ದತ್ತಂ ತ್ವಯಾ ಪತ್ರಂ ತದಾ ದಾಸ್ಯಾಮಿ ತೇ ವಸು ॥116॥

ಅಧನಃ ಸಧನಂ ಲೋಕೇ ಯಥಾ ಕಾಂಕ್ಷತಿ ಮಾಧವ ।
ತಥೈವ ನರಶಾರ್ದೂಲ ಭಗವಾನ್ ಲೌಕಿಕೈಃ ಸಮಃ' ॥117॥

ಏವಂ ತದ್ವಚನಂ ಶ್ರುತ್ವಾ ಪಶ್ಯನ್ ಬ್ರಹ್ಮಾನನಂ ಹರಿಃ ।
'ಕಥಂ ಲೇಖ್ಯಂ ಮಯಾ ಪತ್ರಮೃಣಾದಾನೇ ವದಾದ್ಯ ಮೇ ॥118॥

ಬ್ರಹ್ಮೋವಾಚ–

'ಋಣಗ್ರಾಹೀ ಶ್ರೀನಿವಾಸೋ ಧನದಾಯೀ ಧನೇಶ್ವರಃ ।
ಆತ್ಮಕಾರ್ಯನಿಮಿತ್ತಂ ತು ಕಲ್ಯಾಣಾರ್ಥಂ ಕಲೌ ಯುಗೇ ॥119॥

ವೈಶಾಖೇ ಶುಕ್ಲಸಪ್ತಮ್ಯಾಂ ವಿಲಂಬೇ ಚೈವ ವತ್ಸರೇ ।

ಈ ದ್ರವ್ಯವನ್ನು ತೆಗೆದೂಕೊಂಡು ಹೋಗುವುದಿಲ್ಲ. ಯುಗ ಕಾಲ ದೇಶ ವಯಸ್ಸುಗಳಿಗೆ ಅನುಗುಣವಾಗಿ, ರಮಾದೇವಿಯಿಂದ ಸಹಿತನಾಗಿ ಅವತಾರ ಮಾಡುತ್ತಾ ಕ್ರೀಡಿಸುತ್ತಿರುವೆನು. ನರವಾಹನಾದ ಕುಬೇರನೇ! ಧನವನ್ನು ಕೊಡುವದರಲ್ಲಿ ನೀನು ನಿಮಿತ್ತಮಾತ್ರನು. ಯುಗಾನುಸಾರವಾಗಿ ನನಗೆ ದೇಶಕಾಲಾನು–ಸಾರವಾಗಿ ಧನವನ್ನು ಕೊಡು' ಎಂದು ಹೇಳಿದಾಗ (115) ಕುಬೇರನು 'ಯುಗಾನುಸಾರವಾಗಿ ಅವತಾರವನ್ನು ಮಾಡುವ ನಿನಗೆ ಯುಗಾನುಸಾರ ವಾಗಿ ಧನವನ್ನು ಕೊಡುವದು ಕಷ್ಟಕರವು. ಕಲಿಯುಗದ ನಿಯಮಾನು–ಸಾರವಾಗಿ ಯಾವದೇ ಆಧಾರವನ್ನು ಕೊಡಲಾರದೇ ನಿನಗೆ ಸಾಲವನ್ನಾದರೂ ಹೇಗೆ ಕೊಡಬೇಕು? ಅಧನನು ಧನಿಕನನ್ನು ಕುರಿತು ಸಾಲಪತ್ರವನ್ನು ಬರೆದು ಕೊಡುವಂತೆ ಋಣಪತ್ರವನ್ನು ಬರೆದುಕೊಟ್ಟರೆ ಧನವನ್ನು ಕೊಡಲಾಗುವುದು'(117) ಎಂದು ತಿಳಿಸಿದನು. ಕುಬೇರನ ಈ ಮಾತನ್ನು ಕೇಳಿ ಶ್ರೀನಿವಾಸನು ಬ್ರಹ್ಮನ ಮುಖವನ್ನು ನೋಡುತ್ತಾ 'ಋಣವನ್ನು ಪಡೆಯಲು ಹೇಗೆ ಪತ್ರವನ್ನು ಬರೆಯಬೇಕು, ಅದನ್ನು ತಿಳಿಸು' ಎಂದು ಹೇಳಿದನು. (118) ಆಗ ಚತುರ್ಮುಖ ಬ್ರಹ್ಮದೇವರು "ಸಾಲವನ್ನು ಪಡೆಯತಕ್ಕವನು ಶ್ರೀನಿವಾಸನು. ಸಾಲವನ್ನು ಕೊಡುವವನು ಧನೇಶ್ವರನಾದ ಕುಬೇರನು. ಕಲಿಯುಗದಲ್ಲಿ ತನ್ನ ಕಲ್ಯಾಣೋತ್ಸವದ ನಿಮಿತ್ತಕವಾಗಿ ವಿಲಂಬಿ ನಾಮಸಂವತ್ಸರದ ವೈಶಾಖ

ನಿಷ್ಕಾಣಾಂ ರಾಮಮುದ್ರಾಣಾಂ ಲಕ್ಷಾಣಿ ಚ ಚತುರ್ದಶ ॥120॥

ದ್ರವ್ಯಂ ದತ್ತಂ ಧನೇಶೇನ ವೃದ್ಧಿಗ್ರಹಣಕಾರಣಾತ್ ।
ಸವೃದ್ಧಿದಿತ್ಸತಾ ಮೂಲಂ ಸ್ವೀಕೃತಂ ಚಕ್ರಪಾಣಿನಾ ॥121॥

ವಿವಾಹವರ್ಷಮಾರಭ್ಯ ಸಹಸ್ರಾಂತೇ ಧನಂ ಪುನಃ ।
ದಾತವ್ಯಂ ಯಕ್ಷರಾಜಾಯ ಶ್ರೀನಿವಾಸೇನ ಶಾರ್ಙ್ಗಿಣಾ ॥122॥

ಏಕಸ್ಸಾಕ್ಷೀ ಚತುರ್ವಕ್ತ್ರೋ ದ್ವಿತೀಯಸ್ತು ತ್ರಿಲೋಚನಃ ।
ತೃತೀಯೋಽಶ್ವತ್ಥರಾಜಸ್ತು ವೇತ್ತಿ ಸರ್ವಮಿದಂ ದೃಢಮ್ ॥123॥

ಇತ್ಯೇತದೃಣಪತ್ರಂ ತು ಶ್ರೀನಿವಾಸೋಽಲಿಖತ್ಸ್ವಯಮ್ ।
ಏವಂ ಪತ್ರಾರ್ಥಮಾಕರ್ಣ್ಯ ಋಣಪತ್ರಂ ರಮಾಪತಿಃ ॥124॥

ಲಿಖಿತ್ವಾ ತತ್ಕರೇ ದತ್ವಾ ಧನೇಶಂ ಚಾಬ್ರವೀದ್ಧರಿಃ ।
ಧನಂ ದೇಹಿ ಧನೇಶಾನ ಪತ್ರೇ ಲಿಖಿತಮಾತ್ರಕಮ್' ॥125॥

ಏವಮುಕ್ತೋ ವಸುಪತಿಃ ವಾಸುದೇವೇನ ಭೂಮಿಪ ।
ದದೌ ಧನಂ ಕುಬೇರಸ್ತು ಕ್ಲೃಪ್ತಸಂಖ್ಯಂ ವೃಷಾಕಪೇಃ ॥126॥

ದೃಷ್ಟ್ವಾ ತದ್ಧನರಾಶಿಂ ತು ತತ್ಕರೇಽದಾದ್ದರಿರ್ನೃಪ ।
ಕುಬೇರಮಬ್ರವೀದ್ದೇವಃ ಸಂಭಾರಾನಯನಂ ಪ್ರತಿ ॥127॥

ಶುದ್ಧ ಸಪ್ತಮಿಯ ದಿವಸದಲ್ಲಿ ರಾಮದೇವರ ಮುದ್ರಿಕೆಯಿಂದ ಕೂಡಿದ 14 ಲಕ್ಷ ರಾಮಟಂಕಿಗಳನ್ನು, ಬಡ್ಡಿಯನ್ನು ಪಡೆಯುವ ನಿಮಿತ್ತದಿಂದ, ಚಕ್ರಪಾಣಿಗೆ ಸಾಲವು ಕೊಡಲ್ಪಟ್ಟಿರುವದು. ಶ್ರೀನಿವಾಸನು ಬಡ್ಡಿಯನ್ನು ಕೊಡಲೊಪ್ಪಿ ಹಣವನ್ನು ಸ್ವೀಕರಿಸಿರುವನು. (121) ವಿವಾಹವರ್ಷವನ್ನು ಪ್ರಾರಂಭಿಸಿಕೊಂಡು ಕಲಿಯುಗದಲ್ಲಿ ಸಾವಿರ ವರ್ಷಗಳು ಕೊನೆಗೊಳ್ಳುವದೊರಳಗಾಗಿ 14 ಲಕ್ಷ ರಾಮವರಾಹ ಟಂಕಿಗಳನ್ನು ಶ್ರೀನಿವಾಸನು ಕುಬೇರನಿಗೆ ಮರಳಿ ಕೊಡಬೇಕು. ಇದಕ್ಕೆ ಮೊದಲನೇ ಸಾಕ್ಷಿ ಚತುರ್ಮುಖನು. ಎರಡನೇ ಸಾಕ್ಷಿಯು ತ್ರಿಲೋಚನನಾದ ರುದ್ರದೇವನು. ಮೂರನೇ ಸಾಕ್ಷಿಯು ಅಶ್ವತ್ಥರಾಜನು. ಈ ಮೂವರು ಸಹ ಚೆನ್ನಾಗಿ ಬಲ್ಲವರಾಗಿರುವರು' (124) ಎಂದು ಬ್ರಹ್ಮದೇವರು ಪತ್ರದ ಒಕ್ಕಣೆಯನ್ನು ತಿಳಿಸಿದಾಗ ಅದೇ ಪ್ರಕಾರಕವಾಗಿ ಶ್ರೀನಿವಾಸನು ಋಣಪತ್ರವನ್ನು ಸ್ವಹಸ್ತದಿಂದ ಲೇಖನ ಮಾಡಿ ಕುಬೇರನಿಗೆ ಕೊಟ್ಟು 'ಪತ್ರದಲ್ಲಿ ಬರೆದಷ್ಟು ಧನವನ್ನು ಮಾತ್ರ ಕೊಡು' ಎಂದು ನುಡಿದನು. (127) ಆಗ ಕುಬೇರನು ಪತ್ರದಲ್ಲಿ ಬರೆದಷ್ಟೇ ಹಣವನ್ನು

ಶ್ರೀನಿವಾಸ ಉವಾಚ–

ಆನೀಯತಾಂ ತಂಡುಲಂ ಚ ಮಿತಂ ಪ್ರಸ್ಥೈರ್ಧನೇಶ್ವರ ।
ಮಾಷಾದಿಕಂ ಚ ಮುದ್ಗಾದೀನ್ ವಸ್ತೂನೀಹ ಸಮಾನಯ ॥128॥

ಗುಡತೈಲಮಧುಕ್ಷೀರಶರ್ಕರಾಜ್ಯದಧೀನಿ ಚ ।
ವಸ್ತ್ರಾಣಿ ಯೋಗ್ಯಮೂಲ್ಯಾನಿ ಸೋತ್ತರೀಯಾಣಿ ಚಾನಯ ॥129॥

ತಿಲಹಿಂಗುಮರೀಚ್ಯಾದಿಜೀರಾಸರ್ಷಪಮೇಥಿಕಾನ್ ।
ಹರಿದ್ರಾಕ್ತಾನಿ ಕುರ್ವೀಥಾ ವಸ್ತ್ರಾಣಿ ದ್ವಿಜಯೋಷಿತಾಮ್ ॥130॥

ಕಂಬಲಾಶ್ಚ ಧನಾದೀಶ ಕ್ರಿಯಂತಾಮಿತಿ ಚಾಬ್ರವೀತ್ ।
ದೇವಾನಾಮುತ್ತರೀಯಾಣಿ ದೇವಸ್ತ್ರೀಣಾಂ ದುಕೂಲಕಾನ್ ॥131॥

ಪೂಗೀಫಲಾನಿ ದಿವ್ಯಾನಿ ನಾಗವಲ್ಲೀದಲಾನಿ ಚ ।
ಏಲಾಲವಂಗಕರ್ಪೂರಮೃಗನಾಭಿರಸಂ ತಥಾ ॥132॥

ಮಾಂಗಲ್ಯತಂತುಂ ಕನ್ಯಾರ್ಥಂ ಪಾದಾಂಗುಷ್ಠಾದಿಮುದ್ರಿಕಾಮ್।
ಹಸ್ತಾಂಗುಲೀಯಕಂ ಮೇಽದ್ಯ ಕುಬೇರ ಕುರು ಶೀಘ್ರತಃ' ॥133॥

ಗೋವಿಂದವಚನಂ ಶ್ರುತ್ವಾ ನಿರ್ಮಮೇ ಕ್ಷಣಮಾತ್ರತಃ ।

ಶ್ರೀನಿವಾಸನಿಗೆ ಕೊಟ್ಟನು. ಆಗ ಅದೆಲ್ಲವನ್ನು ಶ್ರೀನಿವಾಸನು ಕುಬೇರನ ಕೈಯಲ್ಲಿ ಕೊಟ್ಟು 'ವಿವಾಹದ ಗೋಸ್ಕರವಾಗಿ ಅಕ್ಕಿ ಮತ್ತು ಬೆಲ್ಲಗಳನ್ನು ತರಬೇಕು. ಉದ್ದು, ಹೆಸರು, ತೊಗರಿ ಮೊದಲಾದ ಧಾನ್ಯಗಳನ್ನು ತೆಗೆದುಕೊಂಡು ಬಾ. ಬೆಲ್ಲ, ಹಾಲು, ಜೇನುತುಪ್ಪ, ಎಣ್ಣೆ, ಸಕ್ಕರೆ, ಮೊಸರು ಮೊದಲಾದ ಸಾಮಗ್ರಿಗಳನ್ನು, ಎಳ್ಳು, ಹಿಂಗು, ಮೆಣಸು, ಜೀರಿಗೆ, ಸಾಸಿವೆ, ಮೆಂಥೆ ಮೊದಲಾದ ಮಸಾಲೆ ಸಾಮಗ್ರಿಗಳನ್ನು, ತಾರತಮ್ಯಾನುಸಾರವಾಗಿ ಯೋಗ್ಯ ಮೂಲ್ಯದ ಉತ್ತರೀಯ ಸಹಿತವಾದ ವಸ್ತ್ರಗಳನ್ನು ತೆಗೆದುಕೊಂಡು ಬಾ. ಬ್ರಾಹ್ಮಣ ಸ್ತ್ರೀಯರಿಗೆ ವಸ್ತ್ರಗಳನ್ನು ಅರಿಷಿಣದಲ್ಲಿ ಎದ್ದಿ ತರಬೇಕು. ಕಂಬಳಿಗಳನ್ನು ತರಬೇಕು. ದೇವತೆಗಳಿಗೆ ಉತ್ತರೀಯ (ಶಲ್ಯ) ಮತ್ತು ದೇವಸ್ತ್ರೀಯರಿಗೆ ದುಕೂಲ (ಕಣ) ಗಳನ್ನು ತರಬೇಕು. ವೀಳೆದೆಲೆ, ಅಡಿಕೆ, ಏಲಕ್ಕಿ, ಲವಂಗ, ಕರ್ಪೂರ, ಕಸ್ತೂರಿ ಇವುಗಳನ್ನು ತನ್ನಿರಿ. ಕನ್ಯೆಯ ಗೋಸ್ಕರವಾಗಿ ಮಾಂಗಲ್ಯ ತಂತು, ಕಾಲುಂಗುರ, ಉಂಗುರ ಗಳನ್ನು ತರಬೇಕು. ನನಗೆಂದು ಉಂಗುರವನ್ನು ತನ್ನಿರಿ' ಎಂದು ಆಜ್ಞಾಪಿಸಿದನು. (133) ಕುಬೇರನು ಗೋವಿಂದನ ಆಜ್ಞೆಯಂತೆ ಕ್ಷಣಮಾತ್ರದಲ್ಲಿಯೇ ಎಲ್ಲವನ್ನೂ ಸಿದ್ಧಗೊಳಿಸಿ 'ಹೇ

ಕುಬೇರ ಉವಾಚ–

'ತ್ವತ್ಪ್ರಸಾದೇನ ಗೋವಿಂದ ಸರ್ವಂ ಸಜ್ಜೀಕೃತಂ ಮಯಾ ॥134॥

ಪಾಕಾರ್ಥಂ ಪುಂಡರೀಕಾಕ್ಷ ನಿಯುಂಕ್ಷ್ವಾಗ್ನಿಮತಃಪರಮ್' ।
ಏವಮುಕ್ತಃ ಕುಬೇರೇಣ ಶ್ರೀನಿವಾಸಃ ಸತಾಂ ಗತಿಃ ॥135॥

ಷಣ್ಮುಖಂ ಪ್ರೇಷಯಾಮಾಸ ವಹ್ನ್ಯಾಹ್ವಾನಾಯ ವೈ ಹರಿಃ ।
ಸ ಗತ್ವಾ ತ್ವರಿತಂ ಸ್ಕಂದಃ ಶಾಸನಂ ಜ್ಞಾಪಯನ್ ಹರೇಃ ॥136॥

ಸಂಪ್ರಾಪ್ತೋ ವಾಯುವೇಗೇನ ಸಹಿತೋ ಜಾತವೇದಸಾ ।
ತತಃ ಪ್ರೋವಾಚ ಭಗವಾಸ್ತ್ವರಿತಂ ಹವ್ಯವಾಹನಮ್ ॥138॥

ಶ್ರೀಭಗವಾನುವಾಚ–

'ಪಾಕಂ ಭಕ್ಷ್ಯಾನ್ನಶಾಕಾನಿ ಕುರು ಸ್ವಾಹಾಸಮನ್ವಿತಃ' ।
ನಾರಾಯಣವಚಃ ಶ್ರುತ್ವಾ ನಾರಾಯಣಮಭಾಷತ ॥138॥

ಅಗ್ನಿರುವಾಚ–

'ಪಾಕಾರ್ಥಂ ಭಾಜನಂ ಕೃಷ್ಣ ನಾಸ್ತ್ಯೇಕಮಪಿ ಮೇ ಹರೇ ।
ಕಥಂ ಪಾಕೋ ಮಹಾರಾಜ ಬಹೂನಾಂ ಭಕ್ತವತ್ಸಲ' ॥139॥

ಸ ತಸ್ಯ ವಚನಂ ಶ್ರುತ್ವಾ ಶಾರ್ಙ್ಗ್ಯಗ್ನಿಂ ಪ್ರತ್ಯಭಾಷತ ।

ಶ್ರೀಭಗವಾನುವಾಚ–

ಪರಮಾತ್ಮನೇ! ನಿನ್ನ ಅನುಗ್ರಹದಿಂದ ಎಲ್ಲವೂ ಸಿದ್ಧವಾಗಿರುವದು. ಅಡಿಗೆಯನ್ನು ಮಾಡುವದರ 'ಗೋಸ್ಕರವಾಗಿ ಅಗ್ನಿಯನ್ನು ನಿಯೋಜಿಸು' ಎಂದು ನುಡಿದನು.

ಅಗ್ನಿದೇವನಿಂದ ಅಡಿಗೆ

ಕುಬೇರನ ಮಾತನ್ನು ಕೇಳಿದ ಶ್ರೀನಿವಾಸನು ಅಗ್ನಿಯನ್ನು ಕರೆಯಲು ಷಣ್ಮುಖನನ್ನು ಕಳುಹಿಸಿದನು.. ಅಗ್ನಿಯು ವಾಯುವೇಗದಿಂದ ಭಗವಂತನ ಬಳಿಗೆ ಬಂದನು. ಆಗ ಭಗವಂತನು ಅಗ್ನಿಯನ್ನು ಕುರಿತು 'ಸ್ವಾಹಾದೇವಿಯಿಂದ ಸಮೇತನಾಗಿ ನಾನಾವಿಧವಾದ ಭಕ್ಷ್ಯಗಳನ್ನು ಸಿದ್ಧಗೊಳಿಸು' ಎಂದು ಆಜ್ಞಾಪಿಸಿದನು. ಆಗ ಚಿಂತಾಕ್ರಾಂತನಾದ ಅಗ್ನಿದೇವನು 'ಅಡಿಗೆಯನ್ನು ಮಾಡಲು ಒಂದೇ ಒಂದು ಪಾತ್ರೆಯೂ ಸಹ ಇರುವದಿಲ್ಲ. ಹೀಗಿರಲು ಇಲ್ಲಿ ನೆರೆದ ಬಹುಜನರಿಗೆ ಅಡಿಗೆಯನ್ನು ಮಾಡುವದಾದರೂ ಹೇಗೆ? ಎಂದು ನುಡಿದನು. (139) ಆಗ ಭಗವಂತನು

'ಭವತಾಂ ಭವನೇ ತಾತ ಕಿಂಚಿಜ್ಜಾತೇ ಮಹೋತ್ಸವೇ ॥140॥
ಭಾಜನಾನಿ ಮಹಾಭಾಗ ವರ್ಧಂತೇ ವಟಬೀಜವತ್ ।
ಮಮ ಕಲ್ಯಾಣಸಮಯೇ ಭಾಂಡಮೇಕಂ ನ ದೃಶ್ಯತೇ ॥141॥
ದೈವಮೇವ ಪರಂ ಮನ್ಯೇ ಸರ್ವೇಷಾಂ ಸರ್ವಸಾಧನೇ ।
ಉಪಾಯಂ ಶೃಣು ಸಪ್ತಾಸ್ಯ ಪಾಕಾರ್ಥಂ ಭಾಜನೈರ್ವಿನಾ ॥142॥
ಅನ್ನಂ ಸ್ವಾಮಿಸರೋಮಧ್ಯೇ ಸೂಪಂ ಪಾಪವಿನಾಶನೇ ।
ವಿಯದ್ಗಂಗಾಜಲೇ ವಹ್ನೇ ಪರಮಾನ್ನಂ ಗುಡಾನ್ವಿತಮ್ ॥143॥
ದೇವತೀರ್ಥೇ ಶಾಕಮಗ್ನೇ ತುಂಬುತೀರ್ಥೇ ಘೃತಂ ತಥಾ ।
ಕುಮಾರಧಾರಿಕಾತೀರ್ಥೇ ಭಕ್ಷ್ಯಾಣಿ ವಿವಿಧಾನಿ ಚ ॥144॥
ಪಾಂಡುತೀರ್ಥೇ ಚ ಕರ್ತವ್ಯಸ್ತಿಂತ್ರಿಣೀರಸ ಉತ್ತಮಃ ।
ವ್ಯಂಜನಾನ್ಯನ್ಯತೀರ್ಥೇಷು ಕಂದಮೂಲಫಲೈರಪಿ ॥145॥
ಕ್ರಿಯಂತಾಂ ಲೇಹ್ಯಪೇಯಾನಿ ತೀರ್ಥೇಷ್ವನ್ಯೇಷು ಪಾವಕ' ।
ಇತಿ ದೇವಸ್ಯ ವಾಕ್ಯಾನಿ ಪ್ರಶಶಂಸುರ್ಮಹರ್ಷಯಃ ॥146॥
ತಥಾ ಚ ಕೃತವಾನ್ ಜಾತವೇದಾ ವೇದವಿಶಾರದಃ ।

ಕೋಪಗೊಂಡವನಂತೆ 'ನಿಮ್ಮ ನಿಮ್ಮ ಮನೆಗಳಲ್ಲಿ ಉತ್ಸವವಿದ್ದಾಗ ಪಾತ್ರೆಗಳು ವಟವೃಕ್ಷದ ಬೀಜದಂತೆ ವೃದ್ಧಿಯಾಗುತ್ತವೆ ಆದರೆ ನನ್ನ ಕಲ್ಯಾಣ ಸಮಯದಲ್ಲಿ ಒಂದು ಪಾತ್ರೆಯೂ ಸಹ ಕಾಣಿಸುವದಿಲ್ಲವಲ್ಲವೇ? (141) ಸಮಸ್ತ ಕಾರ್ಯಗಳನ್ನು ಸಾಧಿಸುವದರಲ್ಲಿ ದೈವವೇ ಪರಮ ಶ್ರೇಷ್ಠವೆಂದು ನಾನು ತಿಳಿದಿರುತ್ತೇನೆ. ಹೇ ಸಪ್ತಾಸ್ಯನಾದ ಅಗ್ನಿಯೇ! ಪಾತ್ರೆಗಳು ಇಲ್ಲದಂತೆ ಪಾಕವನ್ನು ತಯಾರಿಸುವ ಉಪಾಯವನ್ನು ತಿಳಿಸುವೆನು, ಕೇಳು. (142) ಸ್ವಾಮಿ ಪುಷ್ಕರಣಿಯಲ್ಲಿ ಅನ್ನವನ್ನು, ಪಾಪನಾಶಿನಿ ತೀರ್ಥದಲ್ಲಿ ತವ್ವೆಯನ್ನು, ಆಕಾಶಗಂಗೆಯಲ್ಲಿ ಪರಮಾನ್ನವನ್ನು, ದೇವತೀರ್ಥದಲ್ಲಿ ಕಾಯಿಪಲ್ಯೆಯನ್ನು, ತುಂಬುರ ತೀರ್ಥದಲ್ಲಿ ತುಪ್ಪವನ್ನು, ನಾನಾವಿಧವಾದ ಭಕ್ಷ್ಯಗಳನ್ನು ಕುಮಾರ ತೀರ್ಥದಲ್ಲೂ, ಶ್ರೇಷ್ಠವಾದ ಹುಣಸೆ ಹಣ್ಣಿನ ಗೊಜ್ಜನ್ನು ಪಾಂಡುತೀರ್ಥ ದಲ್ಲಿಯೂ, ಇನ್ನು ಉಳಿದ ಸಣ್ಣ ತೀರ್ಥಗಳಲ್ಲಿ ನಾನಾವಿಧದ ಗಡ್ಡೆ, ಗೆಣಸು, ಫಲಗಳಿಂದ ವ್ಯಂಜನ ಸಾಮಗ್ರಿಗಳನ್ನು ಮತ್ತು ಲೇಹ್ಯಗಳನ್ನು, ಪೇಯಗಳನ್ನು ಬೇರೆ ಬೇರೆ ತೀರ್ಥಗಳಲ್ಲಿ ಮಾಡಬೇಕು' ಎಂದು ತಿಳಿಸಿದನು. (146) ಆಗ ದೇವತೆಗಳು ಇದನ್ನು ಕೇಳಿ ಯುಗಾನುಸಾರವಾಗಿ

ಏವಂ ವಿಚಿತ್ರಕರ್ಮಾಣಿ ಹರೇರ್ವೈಕುಂಠವಾಸಿನಃ ||147||

ಯುಗಾನುಸಾರಿಣಸ್ತಸ್ಯ ಹ್ಯದ್ಭುತಂ ತದ್ವಿಡಂಬನಮ್ ।
ಅಚಿಂತ್ಯಂ ದೇವಕಾರ್ಯಂ ಹಿ ಅವಾಙ್ಮನಸಗೋಚರಮ್ ||148||

ಅಗ್ನಿರುವಾಚ–

'ದಧ್ಯೋದನಂ ತಿಲಾನ್ನಂ ಚ ಪರಮಾನ್ನಂ ಮಧುಸ್ರವಮ್ ।
ಮಾಷಾಪೂಪಾ ಗುಡಾಪೂಪಾಃ ಶಾಕದ್ವಯಮತಃ ಪರಮ್ ||149

ಸತಿಂತ್ರಿಣೀರಸೋಪೇತಂ ಕೂಷ್ಮಾಂಡಂ ಸೂಪಪೂರಿತಮ್ ।
ಕಂದಮೂಲಫಲಂ ಚಾಪಿ ಭಕ್ಷ್ಯಕಾರೇಣ ಕಾರಿತಮ್ ||150||

ಪಾಕಃ ಸಂಪೂರ್ಣತಾಂ ಪ್ರಾಪ್ತಃ ತ್ವತ್ಪ್ರಸಾದೇನ ಕೇಶವ ।
ಆಮಂತ್ರಯ ದ್ವಿಜೇಂದ್ರಾಂಶ್ಚ ಸುರಾನಪಿ ಮುನೀನಪಿ ||151||

ಅಗ್ನಿವಾಣೀಂ ಸಮಾಕರ್ಣ್ಯ ಶ್ರೀನಿವಾಸೋ ನಿರಾಮಯಃ ।
ಸಂಪ್ರೇಷಯಚ್ಛರ್ವಸುತಂ ಷಣ್ಮುಖಂ ಮಿಥಿಲೇಶ್ವರ ||152||

ಸ ಜಗಾಮಾತಿವೇಗೇನ ಜಪತೋಽಗ್ನಿಪರಾಯಣಾನ್ ।
ಬ್ರಾಹ್ಮಣಾನ್ ವೇದವಿದುಷಃ ಆಜುಹಾವ ಜನಾಧಿಪ ||153||

ಅವತಾರವನ್ನು ಮಾಡಿ ಆಯಾ ಕಾಲದ ಮನುಷ್ಯರಂತೆ ವಿಡಂಬನೆಯನ್ನು ಮಾಡುವ ಭಗವಂತನ ಈ ಕಾರ್ಯವು ಲೋಕವಿಲಕ್ಷಣವಾಗಿದ್ದು ವಾಙ್ಮನಸ್ಸುಗಳಿಗೆ ಅತೀತ ವಾಗಿರುವದು ಎಂದು ಶ್ಲಾಘಿಸಿದರು. ಅಗ್ನಿದೇವನು ಭಗವಂತನ ಅಪ್ಪಣೆಯಂತೆ ಸರ್ವ ವಿಧವಾದ ಪಾಕವನ್ನು ಸಿದ್ಧಗೊಳಿಸಿದನು. (148) ಅನಂತರ ಅಗ್ನಿಯು ಭಗವಂತನನ್ನು ಕುರಿತು "ಮೊಸರನ್ನವು, ತಿಲಾನ್ನವು, ಮಧುರವಾದ ಪರಮಾನ್ನವು, ಉದ್ದಿನ ಭಕ್ಷಗಳು, ಬೆಲ್ಲದ ಭಕ್ಷಗಳು, ಕಜ್ಜಾಯಗಳು, ಹುಣಸೇ ಹಣ್ಣಿನ ಗೊಜ್ಜು, ನಾನಾ ವ್ಯಂಜನಗಳು, ಹುಳಿ, ಉಪ್ಪು, ಖಾರಗಳಿಂದ ಸಿದ್ಧವಾದ ಕೂಷ್ಮಾಂಡದಿಂದ ಮಾಡಿದ ಹುಳಿ, ತವ್ವೆ, ಪಲ್ಯೆಗಳು, ಗಡ್ಡೆ–ಗೆಣಸುಗಳ ಇತರ ಪಲ್ಲೆಗಳು ಸಕಲ ಭಕ್ಷ್ಯಗಳು ನಿನ್ನ ಪ್ರಸಾದದಿಂದ ಸಿದ್ಧವಾಗಿವೆ. ಮುನಿಗಳನ್ನು ದ್ವಿಜರನ್ನು ದೇವತೆಗಳನ್ನು ಸಹ ಭೋಜನಕ್ಕಾಗಿ ಆಮಂತ್ರಿಸಬಹುದು' ಎಂದು ವಿಜ್ಞಾಪಿಸಿದನು. (151)

### ಭೋಜನಕ್ಕಾಗಿ ಆಮಂತ್ರಣ:

ಹವ್ಯವಾಹನನ ವಿಜ್ಞಾಪನದಂತೆ ಭಗವಂತನು ದೇವತೆಗಳನ್ನು ಮುನಿಗಳನ್ನು ಬ್ರಾಹಣರನ್ನು

ಪಾಕಃ ಸಂಪೂರ್ಣತಾಂ ಪ್ರಾಪ್ತ ಉತ್ತಿಷ್ಠಥ ಸುರದ್ವಿಜಾಃ ।
ಇತಿ ತೇನ ಸಮಾಹೂತಾಃ ಕಶ್ಯಪಾತ್ರಿಪುರೋಗಮಾಃ ॥154॥

ದೇವಾಶ್ಚ ನಿಕಟಂ ತಸ್ಯ ಪಾಕಸ್ಥಾನಸ್ಯ ಭೇಜಿರೇ ।
ವಿಭಜ್ಯ ವಿಪ್ರಾನ್ ವಿಧಿವಚ್ಛಂಭುಸ್ತೇಷಾಂ ಪೃಥಕ್ ಪೃಥಕ್ ॥155॥

ಪಂಕ್ತೀಂಶ್ಚ ಕಾರಯಾಮಾಸ ತಾರತಮ್ಯಾನುಸಾರತಃ ।
ಪಾತ್ರಾಣಿ ವ್ಯಸೃಜಚ್ಛಂಭುಃ ಪಾತ್ರಾಪಾತ್ರವಿಚಕ್ಷಣಃ ॥156॥

ಪಾಂಡುತೀರ್ಥಂ ಸಮಾರಭ್ಯ ಶ್ರೀಶೈಲಾವಧಿ ಭೂಸುರಾಃ ।
ದೇವಾಶ್ಚ ನಿಬಿಡೀಭೂತಾಸ್ತಸ್ಮಿನ್ ಕೃಷ್ಣಮಹೋತ್ಸವೇ ॥157॥

ಸ್ಥಿತಾ ದೇವದ್ವಿಜಾಸ್ತತ್ರ ಸ್ವಸ್ವಪಾತ್ರಾಂತಿಕೇ ಪೃಥಕ್ ।
ತದಾಹ ಭಗವಾನ್ ರಾಜನ್ ಬ್ರಹ್ಮಾಣಂ ಚತುರಾನನಮ್ ॥158॥

ಶ್ರೀಭಗವಾನುವಾಚ–

'ಅನರ್ಪಿತಂ ನ ದಾತವ್ಯಂ ದೇವಾನಾಂ ಚ ದ್ವಿಜನ್ಮನಾಮ್' ।

ಬ್ರಹ್ಮೋವಾಚ–

ಭೋಜನಕ್ಕೆ ಕರೆದುಕೊಂಡು ಬರಲು ಷಣ್ಮುಖನನ್ನು ಕಳುಹಿಸಿದನು. (152) ಅತೀ ವೇಗದಿಂದ ಷಣ್ಮುಖನು ಅಲ್ಲಿಂದ ಹೊರಟು ಜಪ ಮಾಡುತ್ತಿರುವ, ಹೋಮದಿಂದ ಅಗ್ನಿಯನ್ನು ಸಂತೋಷ ಪಡಿಸುತ್ತಾ ಅಗ್ನಿಪರಾಯಣರಾದ ವೇದವಿದ್ವಾಂಸರಾದ ಬ್ರಾಹ್ಮಣರನ್ನು ಆಹ್ವಾನಿಸಿದಾಗ ಕಶ್ಯಪಾದಿ ಮಹರ್ಷಿಗಳು, ದೇವತೆಗಳು, ಪಾಕಸ್ಥಾನದ ಸಮೀಪಕ್ಕೆ ಆಗಮಿಸಿದರು. (155) ಆಗ ರುದ್ರದೇವರು ಅವರವರ ಯೋಗ್ಯತಾನುಸಾರವಾಗಿ, ತಾರತಮ್ಯಾನುಸಾರವಾಗಿ ಪಂಕ್ತಿಗಳನ್ನು ಮಾಡಿ ಅದಕ್ಕನುಗುಣವಾಗಿ ಎಲೆಗಳನ್ನು ಪಾತ್ರಾಪಾತ್ರ ವಿವೇಕದಿಂದ ಹಾಕಿದನು. ಪಾಂಡುತೀರ್ಥವನ್ನು ಆರಂಭಿಸಿಕೊಂಡು ಶ್ರೀಶೈಲಪರ್ಯಂತರವಾಗಿ ದೇವತೆಗಳು, ಬ್ರಾಹ್ಮಣರು ತಮ್ಮ ತಮ್ಮ ಎಲೆಗಳ ಸಮೀಪದಲ್ಲಿ (ಮುಂದೆ) ಕುಳಿತುಕೊಂಡರು. (157)

### ನರಸಿಂಹನಿಗೆ ನೈವೇದ್ಯ

ಆಗ ಭಗವಂತನು ಚತುರಾನನನನ್ನು ಕುರಿತು "ದೇವತೆಗಳಿಗೂ ಮತ್ತು ಬ್ರಾಹ್ಮಣರಿಗೂ ಭಗವಂತನಿಗೆ ಅನರ್ಪಿತವಾದ ನೈವದ್ಯವಿಲ್ಲದ ಅನ್ನವನ್ನು ಊಟಮಾಡಿಸಬಾರದು' ಎಂದು ಹೇಳಿದನು. (158) ಆಗ ಚತುರ್ಮುಖ ಬ್ರಹ್ಮದೇವರು 'ಸರ್ವಜ್ಞನೂ, ಸರ್ವಭೋಕ್ತಾರನೂ, ಸರ್ವ

'ಸರ್ವಜ್ಞಂ ಸರ್ವಭೋಕ್ತಾರಂ ಸರ್ವಲೋಕೇಶ್ವರೇಶ್ವರಮ್ ।
ತ್ವಾಮೇವ ವೇದ್ಮಿ ಗೋವಿಂದ ನ ತ್ವತ್ತುಲ್ಯೋ ನ ಚಾಧಿಕಃ ॥159॥

ಕಸ್ಮೈ ನಿವೇದಯೇಯಂ ಭೋಃ ಪ್ರಶಾಧಿ ಕಮಲಾಪತೇ' ।
ಸ ಪುತ್ರವಚನಂ ಶ್ರುತ್ವಾ ಪುತ್ರಮಾಹ ಹಸನ್ನಿವ ॥160॥

ಶ್ರೀಭಗವಾನುವಾಚ–

'ಅಹೋಬಲನೃಸಿಂಹಸ್ಯ ಪೂಜಾಂ ಕೃತ್ವಾ ನಿವೇದಯ' ।
ಇತ್ಯುಕ್ತೋ ವಾಸುದೇವೇನ ನೃಸಿಂಹಾಸ್ಯಾರ್ಪಣಂ ನೃಪ ॥161॥

ಬ್ರಹ್ಮಾ ಚಕಾರ ಸರ್ವೇಷಾಂ ಮುನೀನಾಮಪಿ ಸಮ್ಮತಮ್ ।
ವೈಶ್ವದೇವಂ ತತಃ ಕೃತ್ವಾ ದೇವಾನಾಮರ್ಚನಂ ತಥಾ ॥162॥

ಗ್ರಹಾನಾರಾಧಯದ್ದೇವೋ ನಾಮಮಂತ್ರಾದಿಪೂರ್ವಕಮ್ ।
ಅಕ್ಷತಾರ್ಘ್ಯಾಂಬುಗಂಧೈಶ್ಚ ಧೂಪದೀಪಾನುಲೇಪನೈಃ ॥163॥

ವಿಪ್ರಾಣಾಮರ್ಚನಂ ಪಶ್ಚಾತ್ ಕೃತವಾನ್ ವಿಧಿಪೂರ್ವಕಮ್ ।
ನನಾಮಾನಂದಸಂಪೂರ್ಣೋ ಭಗವಾನ್ ಲೌಕಿಕೈಸ್ಸಮಃ ॥164॥

ಪರಿವೇಷಂ ತತಶ್ಚಕ್ರುರಷ್ಟದಿಕ್ಪಾಲಕಾಸ್ತದಾ ।
ಪಾತ್ರಸಂಸ್ಕಾರಪೂರ್ವಂ ತು ಚಕ್ರುಸ್ತೇ ಪರಿವೇಷಣಮ್ ॥165॥

ಲೋಕೇಶ್ವರನೂ ನೀನೇ ಇರುವಾಗ ನಿನಗೆ ಸಮಾಧಿಕರಾದ ಇನ್ನೊಬ್ಬರನ್ನು ನಾನು ಕಾಣಲಾರೆನು. ಸ್ವಾಮಿ! ಸರ್ವಯಜ್ಞ ಭೋಕ್ತಾರಾನಾದ ನಿನ್ನನ್ನು ಹೊರತುಪಡಿಸಿ ನಾನು ಯಾರಿಗೆ ನೈವೆದ್ಯವನ್ನು ಸಮರ್ಪಿಸಬೇಕು?' ಎಂದು ಕೇಳಿದಾಗ ನಗುತ್ತಾ ಭಗವಂತನು (160) "ಅಹೋಬಲ ಕ್ಷೇತ್ರದಲ್ಲಿ ವಾಸವಾಗಿರುವ ನರಸಿಂಹದೇವರಿಗೆ ಪೂಜೆಯನ್ನು ಮಾಡಿ, ನೈವೆದ್ಯ ಸಮರ್ಪಣೆಯನ್ನು ಮಾಡು' ಎಂದು ಆಜ್ಞಾಪಿಸಿದನು. (161) ಆಗ ಚತುರ್ಮುಖ ಬ್ರಹ್ಮದೇವನು ನರಸಿಂಹ ದೇವರಿಗೆ ಅರ್ಚನ ಮಾಡಿ, ನೈವೇದ್ಯವನ್ನು ಸಮರ್ಪಣ ಮಾಡಿ, ಸರ್ವ ಮುನಿಗಳಿಗೆ ಸಮ್ಮತವಾಗುವಂತೆ ವೈಶ್ವದೇವವನ್ನು ಮಾಡಿದನು. (162) ಅನಂತರದಲ್ಲಿ ದೇವತೆಗಳ ಅರ್ಚನೆಯನ್ನು, ಗ್ರಹಗಳ ಆರಾಧನೆಯನ್ನು ಮಾಡಿದನು. ಅರ್ಘ್ಯ ಅಕ್ಷತೆ ಧೂಪ ದೀಪ ನೈವೇದ್ಯಗಳಿಂದ ಅರ್ಹರಾದ ದೇವತೆಗ:ಗಳನ್ನು ಅರ್ಚನೆ ಮಾಡಿ (163) ಅನಂತರದಲ್ಲಿ ಶಾಸ್ತ್ರವಿಧಿಗೆ ಅನುಗುಣವಾಗಿ ಬ್ರಾಹ್ಮಣರನ್ನು ಸಂಪೂಜಿಸಿದನು. ಲೌಕಿಕರಂತೆ ಭಗವಂತನು ಸಂತೋಷದಿಂದ ಅವರಿಗೆ ನಮಸ್ಕಾರ ಮಾಡಿದನು. ಅಷ್ಟದಿಕ್ಪಾಲಕರು ಪರಿವೇಷಣವನ್ನು (ಆಹಾರವನ್ನು ಬಡಿಸುವದನ್ನು) ಪ್ರಾರಂಭಿಸಿದರು.

ಲವಣಂ ಚ ಸಮಾರಭ್ಯ ಘೃತಾಂತಂ ಬ್ರಹ್ಮವಾದಿನಾಮ್ ।
ಪರಿವೇಷಂ ತು ಸಂಪೂರ್ಣಮಿತ್ಯುಕ್ತೋಽಗ್ನಿಮುಖಾದ್ಧರಿಃ ॥166॥

ಏಕೋ ವಿಷ್ಣುರ್ಮಹದ್ಭೂತಂಪೃಥಗ್ಭೂತಾನ್ಯನೇಕಶಃ ।
ತ್ರೀನ್ ಲೋಕಾನ್ವ್ಯಾಪ್ಯ ಭೂತಾತ್ಮಾ ಭುಂಕ್ತೇ ವಿಶ್ವಭುಗವ್ಯಯ ॥16

ಇತ್ಥಂ ಕೃಷ್ಣಾರ್ಪಣಂ ಚಕ್ರೇ ಶ್ರೀನೃಸಿಂಹಾಯ ವಿಷ್ಣವೇ ।
ಕಶ್ಯಪಾದ್ಯಾಂಶ್ಚ ಗೋವಿಂದೋ 'ಜುಷಧ್ವ'ಮಿತಿ ಚಾಬ್ರವೀತ್ ॥168॥

'ಭವಂತೋ ಜ್ಞಾನಸಂಪೂರ್ಣಾಃ ಕಿಮನೇನಾದ್ಯ ಪೂರ್ಣತಾ ।
ಭವಿಷ್ಯತಿ ಮಹಾಪ್ರಾಜ್ಞಾಃ ದಯಾವಂತಶ್ಚ ಸಾಧವಃ ॥169॥

ದರಿದ್ರಂ ಮಾಂ ಚ ಜಾನಂತಃ ಸ್ವನ್ನಂ ಮೇ ಸಜಲಂ ಲಘು ।
ಬಹೂಕೃತ್ಯ ಸ್ವೀಕುರುತ ಕೃಪಯಾ ನಿತರಾಮ್'ಇತಿ ॥170॥

ಪ್ರಾರ್ಥನಾಂ ಬ್ರಾಹ್ಮಣಾನಾಂ ತು ಕೃತವಾನ್ ಪ್ರಾಕೃತೋ ಯಥಾ।
ವಾಸುದೇವವಚಃ ಶ್ರುತ್ವಾ ವಾಕ್ಯಮಾಹುರ್ಮಹೀಸುರಾಃ ॥171॥

ದೇವತೆಗಳಿಗೂ, ಬ್ರಾಹ್ಮಣರಿಗೂ ಲವಣದಿಂದ ಪ್ರಾರಂಭಿಸಿ ತುಪ್ಪದವರೆಗೂ ಸರ್ವಪದಾರ್ಥವನ್ನು ಬಡಿಸಿ ಅಗ್ನಿಗೆ ತಿಳಿಸಲು, ಅಗ್ನಿಯು ಪರಿವೇಷಣ ಸಂಪೂರ್ಣತೆಯನ್ನು ಭಗವಂತನಲ್ಲಿ ವಿಜ್ಞಾಪಿಸಿದನು. ಆಗ ಶ್ರೀಹರಿಯು "ಏಕೋ ವಿಷ್ಣುರ್ಮಹದ್ಭೂತಂ' (ವಿಷ್ಣು ಒಬ್ಬನೆ ಮುಖ್ಯವಾಗಿ ಪಂಚಭೂತಾತ್ಮಕವಾದ ಪ್ರಪಂಚಕ್ಕೆ ಒಡೆಯನಾದುದರಿಂದ ಮಹದ್ಭೂತ ನೆನಿಸುತ್ತಾನೆ. ಆತನ ಅಧೀನದಲ್ಲಿ ಅನೇಕ ಭೂತಗಳು ಪ್ರತ್ಯೇಕವಾಗಿ ಇರುತ್ತವೆ. ಸಮಸ್ತಭೂತಗಳ ಅಂತರ್ಯಾಮಿಯಾದ ಆ ವಿಷ್ಣುವು ಮೂರು ಲೋಕಗಳನ್ನು ಸಹ ವ್ಯಾಪಿಸಿಕೊಂಡು ಸರ್ವ ಭೋಕ್ತಾರನೆನಿಸಿ, ಸರ್ವಾಂತರ್ಯಾಮಿಯಾಗಿ ಸಕಲವನ್ನೂ ಭೋಜನ ಮಾಡುತ್ತಾನೆ) (167) ಎಂಬ ಮಂತ್ರದಿಂದ ಅಹೋಬಲ ನರಸಿಂಹನಿಗೆ ಕೃಷ್ಣಾರ್ಪಣವನ್ನು ಮಾಡಿ, ಕಶ್ಯಪಾದಿ ಸರ್ವರಿಗೂ ಊಟ ಮಾಡಲು ಆಜ್ಞಾಪಿಸಿ, (168) 'ಎಲ್ಲರೂ ಜ್ಞಾನಪೂರ್ಣ ರಾಗಿರುವಿರಿ. ನಾನು ಕೊಟ್ಟ ಅನ್ನದಿಂದ ನಿಮಗೆ ಪೂರ್ಣತೆ ಯಾಗುವುದಿಲ್ಲ. ಮಹಾಪ್ರಾಜ್ಞರೂ, ದಯಾವಂತರೂ. ಸಾಧುಗಳೂ ಆದ ನೀವೂ ದರಿದ್ರನಾದ ನನ್ನಿಂದ ಕೊಡಲ್ಪಟ್ಟ ಸ್ವಲ್ಪವಾದ ಅನ್ನ ಮತ್ತು ಉದಕವನ್ನು ಅನಂತವನ್ನಾಗಿಸಿ, ದಯಾದೃಷ್ಟಿಯಿಂದ ಸ್ವೀಕಾರ ಮಾಡಿರಿ' ಎಂದು ಪ್ರಾಕೃತ ಮನುಷ್ಯನು ವಿಜ್ಞಾಪಿಸಿಕೊಳ್ಳುವಂತೆ ಬ್ರಾಹ್ಮಣರುಗಳಿಗೆ ಪ್ರಾರ್ಥಿಸಿಕೊಂಡನು.(171) ವಾಸುದೇವನ ಈ ವಚನವನ್ನು ಕೇಳಿ ಭೂಸುರರಾದ ಬ್ರಾಹ್ಮಣರು ಮುನಿಗಳು 'ನಿನ್ನ ಅನ್ನವು ಅಮೃತಕ್ಕೆ ಸಮಾನವಾಗಿದೆ. ಮುಕ್ತಿಮಾರ್ಗಕ್ಕೆ

ಮುನಯ ಊಚುಃ-

'ತವಾನ್ನಮಮೃತಪ್ರಖ್ಯಂ ಮುಕ್ತಿಮಾರ್ಗಸ್ಯ ಸಾಧನಮ್ ।
ವಯಂ ಧನ್ಯಾಃ ಕೃತಾರ್ಥಾಃ ಸ್ಮಃ ಕಲೌ ಪಾಪಾಕುಲೇ ಹರೇ' ॥172॥

ಅಭಿನಂದ್ಯ ತಮಿತ್ಥಂ ತೇ ಸುಸಂತುಷ್ಟಾ ಅಭುಂಜತ ।
ಭೋಜನಾನಂತರಂ ರಾಜನ್ ಬ್ರಾಹ್ಮಣಾನಾಂ ಯಥಾರ್ಹತಃ ॥173॥

ತಾಂಬೂಲದಕ್ಷಿಣಾಂ ಚೈವ ಪ್ರದದೌ ಭಗವಾನ್ ಹರಿಃ ।
ನಿಷ್ಕಂ ದ್ವಿಜವರಾಣಾಂ ಚ ತದರ್ಧಂ ಬ್ರಹ್ಮವಾದಿನಾಮ್ ॥174॥

ತದರ್ಧಂ ಬ್ರಹ್ಮಚಾರೀಣಾಂ ಯಥಾಯೋಗ್ಯಮದಾದ್ಧರಿಃ ।
ಸ ವಿಪ್ರಭೋಜನಾಂತೇ ಚ ಸ್ವಯಂ ಭೋಜನಮಾಚರತ್ ॥175॥

ಪುತ್ರೇಣ ಪುತ್ರಪುತ್ರೇಣ ಭಾರ್ಯಾಬಂಧುಸಮನ್ವಿತಃ ।
ಸಾಗ್ನಿಃ ಸಲೋಕಪಾಲಾಶ್ಚ ಸಶೇಷೋ ಗರುಡಾನ್ವಿತಃ ॥176॥

ಭೋಜನಾಂತೇ ದಿನಾಧೀಶಃ ರಾತ್ರಿಸ್ಥಾನಮುಪಾಗತಃ ।
ಶಯನಂ ಕೃತವಾನ್ ಕೃಷ್ಣಃ ಪರ್ಯಂಕೇ ರಮಯಾ ಸಹ ॥177॥

ಸ್ವಯಂ ನಿದ್ರಾವಿಹೀನೋಽಪಿ ರೇಮೇ ಪ್ರಾಕೃತವದ್ಧರಿಃ ।
ಏವಂ ವಿಭವಮಾಪನ್ನಾ ದೇವಾಶ್ಚ ಋಷಯಸ್ತಥಾ ॥178॥

ಸಾಧನವಾಗಿರುವದು. ಪಾಪ ಭೂಯಿಷ್ಠವಾದ ಈ ಕಲಿಯುಗದಲ್ಲಿ ನಿನ್ನ ಅನ್ನಭೋಜನದಿಂದ ನಾವು ಕೃತಾರ್ಥರಾಗಿದ್ದೇವೆ' ಎಂದು ಪರಮಾತ್ಮನನ್ನು ಅಭಿನಂದಿಸಿ ಸಂತೋಷಭರಿತರಾಗಿ ಭೋಜನವನ್ನು ಮಾಡಿದರು. (173) ಭೋಜನಾನಂತರದಲ್ಲಿ ಭಗವಂತನು ಬ್ರಾಹ್ಮಣರಿಗೆ ಅವರ ಅವರ ಯೋಗ್ಯತಾನುಸಾರವಾಗಿ ತಾಂಬೂಲ-ದಕ್ಷಿಣಗಳನ್ನು ಕೊಟ್ಟನು. ದ್ವಿಜಶ್ರೇಷ್ಠರಿಗೆ ಒಂದು ವರಹವನ್ನು, ವೇದಜ್ಞರಿಗೆ ಅರ್ಧವರಹವನ್ನು, ಬ್ರಹ್ಮಚಾರಿಗಳಿಗೆ ಕಾಲು ವರಹವನ್ನು ದಕ್ಷಿಣೆಯಾಗಿ ದಯಪಾಲಿಸಿದನು. ಬ್ರಾಹ್ಮಣಭೋಜನಾನಂತರದಲ್ಲಿ ಬ್ರಹ್ಮ, ರುದ್ರ, ಮಹಾಲಕ್ಷ್ಮಿ, ಅಗ್ನಿ ಮೊದಲಾದ ಪುತ್ರ, ಪೌತ್ರ, ಭಾರ್ಯಾ, ಬಂಧು-ಬಾಂಧವ ಸಮನ್ವಿತನಾಗಿ ಭೋಜನ ಮಾಡಿದನು. (176) ಅಷ್ಟರಲ್ಲಿ ಸೂರ್ಯನು ಅಸ್ತಂಗತನಾದನು. ಲಕ್ಷ್ಮಿ ಸಮೇತನಾದ ಶ್ರೀನಿವಾಸನು ರಾತ್ರಿ ಸಮಯವಾಗುತ್ತಿರಲು ನಿದ್ರಾಹೀನನಾಗಿದ್ದರೂ ಸಹ ನಿದ್ರೆಯನ್ನು ಮಾಡುವವರಂತೆ ಪರ್ಯಂಕದಲ್ಲಿ ಮಲಗಿ ರಮಾ ಸಹಿತನಾಗಿ ನಿದ್ರೆ ಮಾಡುವನಂತೆ ನಟಿಸಿದನು. (177) ಸರ್ವದೇವತೆಗಳು ಋಷಿಗಳು ಮಹಾವೈಭವದಿಂದ, ಪರಮಾತ್ಮನ ಸನ್ನಿಧಾನದಲ್ಲಿ ಹರ್ಷಚಿತ್ತರಾಗಿ, ಆ ಸಪ್ತಮಿಯ

ನೀತ್ವಾ ತಾಂ ಸಪ್ತಮೀರಾತ್ರಿಂ ಸರ್ವೇ ಸಂಭ್ರಮಕಾತರಾಃ ।
ಬ್ರಹ್ಮಾದಯಸ್ಸುರಶ್ರೇಷ್ಠಾಃ ಕಶ್ಯಪಾತ್ರಿಪುರೋಗಮಾಃ ॥179॥

ಶಯನಂ ಚಕ್ರಿರೇ ರಾಜನ್ ಕಂದರೇಷು ಗೃಹೇಷು ಚ ।
ವೃಕ್ಷಮೂಲೇಷು ಶೈಲಾನಾಂ ಗಹ್ವರೇಷು ದರೀಷು ಚ ॥180॥

ತತಃ ಪ್ರಭಾತೇ ವಿಮಲೇ ಶ್ರೀನಿವಾಸಃ ಸತಾಂ ಗತಿಃ ।
ಗರುಡಂ ಪ್ರೇಷಯಾಮಾಸ ಬ್ರಹ್ಮಾಣಂ ಚತುರಾನನಮ್ ॥181॥

ಸ ಗತ್ವಾ ವಾಯುವೇಗೇನ ಬ್ರಹ್ಮಾಣಂ ತಲ್ಪಸಂಸ್ಥಿತಮ್ ।
ಪ್ರತ್ಯುವಾಚ ಮಹಾರಾಜ ಪಕ್ಷಿರಾಟ್ ಪರಮಂ ವಚಃ ॥182॥

ಗರುಡ ಉವಾಚ–

'ಗಚ್ಛ ತಾತಾಂತಿಕಂ ಬ್ರಹ್ಮನ್ ವಸ್ತ್ರಾಲಂಕಾರಭೂಷಿತಃ ।
ಹಂಸಮಾರುಹ್ಯ ಚಂದ್ರಾಭಂ ಗಂತುಂ ರಾಜೇಂದ್ರಪತ್ತನಮ್ ॥183॥

ವಾದ್ಯತಾಂ ಚ ವಿಚಿತ್ರಾಣಿ ವಾದಿತ್ರಾಣಿ ಮಹಾಂತಿ ಚ ।
ಗಜಮಾರೋಪ್ಯ ಮಹತೀ ಭೇರೀ ಚಾಪ್ಯನುವಾದ್ಯತಾಮ್ ॥184॥

ರಾತ್ರಿಯನ್ನು ಕಳೆದರು. ಬ್ರಹ್ಮಾದಿ ದೇವತೆಗಳು, ಕಶ್ಯಪಾದಿ ಮುನಿಗಳು ಬೆಟ್ಟದ ಸಂದುಗಳಲ್ಲಿ, ಕಲ್ಲಿನ ಗುಹೆಗಳಲ್ಲಿ, ಮರಗಳ ಬುಡದಲ್ಲಿ, ಪರ್ವತಗಳ ಪೊದರುಗಳಲ್ಲಿಯೂ ಮಲಗಿ ರಾತ್ರಿಶೇಷವನ್ನು ಕಳೆದರು.(180)

#### ಆಕಾಶರಾಜನ ಪುರಕ್ಕೆ ಸಪರಿವಾರವಾಗಿ ಶ್ರೀನಿವಾಸನ ಗಮನ:

ಮರುದಿವಸ ಪ್ರಭಾತ ಸಮಯದಲ್ಲಿ ಆಕಾಶರಾಜನ ಪುರವನ್ನು ಕುರಿತು ಪ್ರಯಾಣ ಮಾಡಲು ಭಗವಂತನು ಚತುರ್ಮುಖದೇವನನ್ನು ಕರೆದುಕೊಂಡು ಬರಲು ಗರುಡನನ್ನು ಕಳಿಸಿದನು. (181) ಶ್ರೀನಿವಾಸನ ಆಜ್ಞೆಯಂತೆ ಬ್ರಹ್ಮದೇವರ ಬಳಿ ಬಂದ ಗರುಡನು 'ಹೇ ಚತುರ್ಮುಖನೇ! ನಾರಾಯಣ ಪುರದೆಡೆಗೆ ಹೋಗುವದರಗೋಸ್ಕರವಾಗಿ ವಸ್ತ್ರಾಲಂಕಾರ ಗಳಿಂದ ಅಲಂಕರಿಸಿಕೊಂಡು, ಚಂದ್ರನಂತೆ ಬೆಳ್ಳಗೆ ಹೊಳೆಯುವ ಹಂಸವನ್ನೇರಿಕೊಂಡು, ನಾನಾವಾದ್ಯಗಳ ಧ್ವನಿಯನ್ನು ಮಾಡುತ್ತಾ, ದೊಡ್ಡದಾದ ಭೇರಿನಾದವನ್ನು ಗೈಯುತ್ತಾ, ವಿಚಿತ್ರವಾದ ವಾಹನಗಳು, ರಥಗಳು, ಪಲ್ಲಕ್ಕಿಗಳು ಇವುಗಳೆಲ್ಲವನ್ನು ಸಜ್ಜಾಗಿಸಿ, ಮುಂದಿಟ್ಟುಕೊಂಡು ನಿನ್ನ ತಂದೆಯ ಬಳಿ ತೆರಳು' ಎಂದು ನುಡಿದನು. (183) ಆಗ ಚತುರ್ಮುಖ ಬ್ರಹ್ಮದೇವರು ವಸ್ತ್ರಾಭರಣಗಳಿಂದ

ವಾಹನಾನಿ ವಿಚಿತ್ರಾಣಿ ರಥಾ ಆಂದೋಲಿಕಾ ಅಪಿ ।
ಅಲಂಕ್ರಿಯಂತಾಂ ರಾಜೇಂದ್ರಪುರೀಂ ಗಂತುಂ ಸಸಂಭ್ರಮಮ್' ॥185॥

ಪಕ್ಷಿರಾಡ್ವಚನಂ ಶ್ರುತ್ವಾ ಪಕ್ಷಿವಾಹನನಂದನಃ ।
ನಿಯೋಜಯಾಮಾಸ ತದಾ ಬಲಂ ದೇವಗಣಸ್ಯ ಚ ॥184॥

ಗಜಾನಾಂ ಚ ಹಯಾನಾಂ ಚ ವೃಷಭಾಣಾಂ ಚ ಮಂಡಲಮ್।
ಪದಾತೀನಾಂ ಚ ಶೂರಾಣಾಂ ಮಂಡಲಂ ಸಮಲಂಕೃತಮ್ ॥185॥

ಶೂರಾಶ್ಚ ಕೃತವಿದ್ಯಾಶ್ಚ ಧೃತಶಸ್ತ್ರಾಸ್ತ್ರಪಾಣಯಃ ।
ಪಿತಾಮಹಂ ಪುರಸ್ಕೃತ್ಯ ಜಗ್ಮುರ್ನಾರಾಯಣಾಂತಿಕಮ್ ॥186॥

ತಂ ದೃಷ್ಟ್ವಾ ಸರ್ವದೇವೇಶಂ ಭಗವಾನಾಹ ಭೂಪತೇ ।

ಶ್ರೀನಿವಾಸ ಉವಾಚಃ-

'ವಿಲಂಬಃ ಕ್ರಿಯತೇ ಕಸ್ಮಾದ್ಗಮನಾರ್ಥಂ ಪಿತಾಮಹ ॥187॥

ನಿಯೋಜಯ ಬಲಂ ಸರ್ವಂ ರಾಜಧಾನೀಂ ನೃಪಸ್ಯ ಚ' ।
ವಾಸುದೇವವಚಃಶ್ರುತ್ವಾ ವಾಸುದೇವಾತ್ಮಜೋಽಬ್ರವೀತ್ ॥188॥

ಬ್ರಹ್ಮೋವಾಚ-

ಅಲಂಕರಿಸಿಕೊಂಡು ವಿಚಿತ್ರವಾದ ವಾದ್ಯಗಳನ್ನು ಬಾರಿಸುತ್ತಾ, ದೊಡ್ಡ ದೊಡ್ಡ ಭೇರಿಗಳನ್ನು ಗಜದ ಮೇಲೆ ಇರಿಸಿ, ನಾದಗೈಯ್ಯುತ್ತಾ, ವಾಹನಗಳನ್ನು, ಪಲ್ಲಕ್ಕಿಗಳನ್ನು, ರಥವನ್ನು ಅಂದವಾಗಿ ಅಲಂಕಾರ ಮಾಡಿಕೊಂಡು ದೇವತೆಗಳ ಸೇನೆಗೆ ಬರಲು ಆಜ್ಞೆ ಮಾಡಿದನು. ಅದರಂತೆ ಆನೆ ಕುದುರೆ ವೃಷಭಗಳನ್ನು ಹತ್ತಿಕೊಂಡು ಕಾಲಾಳುಗಳ ಹಾಗೂ ಶೂರರ ಸಮೂಹವು ಅಲಂಕೃತಗೊಂಡು ಅಲ್ಲಿಂದ ಹೊರಟಿತು.(186) ಶೂರರು ಸಮಸ್ತ ಯುದ್ಧ ವಿದ್ಯಾ ನಿಪುಣರೂ, ಶಸ್ತ್ರಗಳನ್ನು ಧಾರಣಮಾಡಿದವರೂ ಆದ ಮಹಾಸೈನಿಕರು ಪಿತಾಮಹನನ್ನು ಮುಂದೆ ಮಾಡಿಕೊಂಡು ನಾರಾಯಣನಾದ ಶ್ರೀನಿವಾಸನ ಬಳಿಗೆ ಬಂದರು. ಇದನ್ನು ನೋಡಿ ಭಗವಂತನು ವಿಳಂಬವಿಲ್ಲದೆ ಆಕಾಶರಾಜನ ಅರಮನೆಯನ್ನು ಕುರಿತು ಪ್ರಯಾಣ ಬೆಳಸಬೇಕೆಂದು ಆಜ್ಞಾಪಿಸಿದನು.(188) ಆಗ ಚತುರ್ಮುಖ ಬ್ರಹ್ಮದೇವರು 'ಎಲ್ಲವೂ ಸಜ್ಜೀಕೃತವಾಗಿದೆ. ನೀನು ಸಹ ಗರುಡಾರೂಢನಾಗಿ ಹೊರಡಲು ಸಿದ್ಧನಾಗು' ಎಂದು ಪ್ರಾರ್ಥಿಸಿದಾಗ ಶ್ರೀನಿವಾಸನು ಚತುರ್ಮುಖ ಬ್ರಹ್ಮದೇವನನ್ನು ಮುಂದೆ ಮಾಡಿಕೊಂಡು, ರುದ್ರದೇವನನ್ನು ಬಲಭಾಗದಲ್ಲೂ, ವಾಯುದೇವನನ್ನೂ ಎಡಭಾಗದಲ್ಲೂ, ಷಣ್ಮುಖಾದಿ ದೇವತೆಗಳನ್ನು ಹಿಂಬಾಗದಲ್ಲೂ ಬರಮಾಡಿಕೊಂಡು, ಸ್ವರ್ಣರಂಜಿತವಾದ ರಥದಲ್ಲಿ

'ಸಜ್ಜೀಕೃತಂ ಬಲಂ ಸರ್ವಂ ಧೃತ್ವಾ ಕಾಂಚನನಿರ್ಮಿತೇ ॥191॥

ಮಾತರಂ ಬಕುಲಾಂ ರಾಜನ್ವಿಮಾನಂ ಸೂರ್ಯಸನ್ನಿಭಮ್ ।
ಸಮಾರೋಪ್ಯ ಮಹಾರಾಜ ಭಗವಾನ್ ಭಕ್ತವಸ್ಸಲಃ ॥192॥

ಸ್ವಯಂ ತು ಗುರುಡಾರೂಢೋ ಜಗಾಮ ಚ ಸತಾಂ ಗತಿಃ ।
ಶೇಷೋ ದಧಾರ ರಾಜೇಂದ್ರ ಶ್ವೇತಚ್ಛತ್ರಂ ಶಶಿಪ್ರಭಮ್ ॥193॥

ಚಾಮರೇ ಚಂದ್ರಸಂಕಾಶೇ ವೀಜಯಾಮಾಸ ಮಾರುತಃ ।
ವ್ಯಜನೇನ ವಿಚಿತ್ರೇಣ ರತ್ನದಂಡೇನ ಮಾಧವಮ್ ॥194॥

ವೀಜಯಾಮಾಸ ರಾಜೇಂದ್ರ ವಿಷ್ವಕ್ಸೇನಃ ಪ್ರತಾಪವಾನ್ ।
ಭೇರೀದುಂದುಭಿನಿರ್ಘೋಷೈರ್ವಾದಿತ್ರಾಣಾಂ ಮಹಾಸ್ವನೈಃ ॥195॥

ನರ್ತಕೈರ್ಗಾಯಕೈಶ್ಚಾಪಿ ಹಾಹಾಹೂಹೂಯುತೋऽಂಜಸಾ ।
ಏವಂ ವಿಭವಸಂಪನ್ನಃ ಸರ್ವಾತ್ಮಾ ಸರ್ವತೋಮುಖಃ ॥196॥

ಗಮನೇ ವಾಸುದೇವಸ್ಯ ದೇವಾನಾಮಪಿ ಭೂಮಿಪ ।
ಋಷೀಣಾಂ ಪೂರ್ವದೇವಾನಾಂ ಗಂಧರ್ವಾಣಾಂ ತಪಸ್ವಿನಾಮ್ ॥197॥

ಸಮ್ಮರ್ದಸ್ತು ಬಭೂವಾತ್ರ ಪಶೂನಾಂ ಮಾನುಷಾತ್ಮನಾಮ್ ।
ವನಿತಾನಾಂ ಚ ವೃದ್ಧಾನಾಂ ಬಾಲಾನಾಂ ರಕ್ಷಸಾಮಪಿ ॥198॥

ಮಹಾಲಕ್ಷ್ಮಿಯನ್ನು ಕುಳ್ಳಿರಿಸಿ, ತಾಯಿಯಾದ ಬಕುಲಾದೇವಿಯನ್ನು ಸೂರ್ಯನಂತೆ ಪ್ರಕಾಶಿಸುತ್ತಿರುವ ವಿಮಾನದಲ್ಲಿ ಹತ್ತಿಸಿ, ಭಕ್ತವತ್ಸಲನಾದ ಭಗವಂತನು ಗರುಡಾರೂಢನಾಗಿ ಆಕಾಶರಾಜನ ಪಟ್ಟಣವನ್ನು ಕುರಿತು ಪ್ರಯಾಣ ಬೆಳಸಿದನು.(193) ಆಗ ಆದಿಶೇಷನು ಶ್ವೇತಛತ್ರವನ್ನು ಹಿಡಿದನು. ವಾಯುದೇವನು ಶುಭ್ರವಾದ ಚಾಮರಗಳನ್ನು ಬೀಸಿದನು. ವಿಷ್ವಕ್ಸೇನನು ರತ್ನಖಚಿತ ಹಿಡಿಕೆಯುಳ್ಳ ಬೀಸಣಿಕೆಯನ್ನು ಬೀಸುತ್ತಿದ್ದನು. ಗಗನಚುಂಬಿಯಾದ ಭೇರಿ ದುಂಧುಬಿಗಳ ಧ್ವನಿಗಳಿಂದಲೂ, ಇತರ ವಾದ್ಯ ವೈಭವಗಳಿಂದಲೂ, ನರ್ತಕರು, ಗಾಯಕರು, ಹಾಹಾ- ಹೂಹೂ ಮುಂತಾದ ಗಂಧರ್ವರಿಂದಲೂ ಸುತ್ತುವರಿದು ವೈಭವದಿಂದ ಸರ್ವಾಂತರ್ಯಾಮಿಯಾಗಿರುವ ವಿಶ್ವತೋಮುಖನಾದ ಭಗವಂತನು ಸರ್ವರ ತನುಮನಗಳನ್ನು ತಣಿಸುತ್ತಾ ಪ್ರಯಾಣ ಬೆಳೆಸಿದನು. ಹೀಗೆ ಮಹಾ ವೈಭವದಿಂದ ದೇವತೆಗಳು, ಋಷಿಗಳು, ರಾಕ್ಷಸರು, ಮನುಷ್ಯರು, ಆನೆ, ಕುದುರೆ, ಒಂಟೆ, ಮೊದಲಾದ ಸರ್ವವಿಧ ಸಂಪತ್ತುಗಳಿಂದ ಪರಿದೃಶ್ಯನಾಗಿ ಪ್ರಯಾಣ ಬೆಳಸಿದನು.(197) ದಾರಿಯಲ್ಲಿ ಜನರ ಸಮ್ಮರ್ದದಿಂದಾಗಿ ಪಶುಗಳು, ಮನುಷ್ಯರು, ವೃದ್ಧರು, ಬಾಲಕರು, ಸ್ತ್ರೀಯರು,

ಅನ್ಯೋನ್ಯಕಲಹಸ್ತತ್ರ ವನಿತಾನಾಮಭೂತ್ತದಾ ।
ಋಷೀಣಾಮೃಷಿಕನ್ಯಾನಾಂ ದೇವಸ್ತ್ರೀಣಾಂ ಚ ದೈವತೈಃ ॥199॥

ತತ್ರಾಧನಾ ತು ಗಚ್ಛಂತೀ ಮಾರ್ಗಮಧ್ಯೇ ಮಹೀಪತೇ ।
ಕಾಚಿದ್ಭರ್ತಾರಮಾಲಂಬ್ಯ ಪುತ್ರಮಂಸೇ ನಿಧಾಯ ಚ ॥200॥

ಭಾರಮುದ್ಧೃತ್ಯ ಶಿರಸಾ ಪದ್ಭ್ಯಾಮೇವ ಸ್ಮ ಗಚ್ಛತಿ ।
ತಸ್ಮಿನ್ ಕಾಲೇ ಮಹಾರಾಜ ರಥಸ್ಥಾಸ್ಸುರಯೋಷಿತಃ ॥201॥

ಪಂಥಾನಮನುರುಂಧಂತ್ಯೋऽತರ್ಜಯಂಶ್ಚಾಧನಾನ್ ಕೃಶಾನ್।
ತದಾ ವಿಯೋಗಮಾಪನ್ನಾ ಭರ್ತ್ರಾ ಸಾ ಭಾರಪೀಡಿತಾ ॥202॥

ಕೂಜಂತೀ 'ನಾಥ ಹಾ ನಾಥ ವನೇ ಮಾ ತ್ಯಕ್ತುಮರ್ಹಸಿ' ।
ಏವಮುಕ್ತ್ವಾ ವಿಪ್ರಪತ್ನೀ ಸಪುತ್ರಾ ಪತಿತಾ ಭುವಿ ॥203॥

ರುದಂತಃ ಶಿಶವಸ್ತತ್ರ ಪ್ರಹೃಷ್ಟಾಸ್ತತ್ರ ಕೇಚನ ।
ಕೇಚಿತ್ಪಯಃ ಪ್ರಕಾಂಕ್ಷಂತಿ ಕೇಚಿದನ್ನಂ ಮಹೀಪತೇ ॥204॥

ಕೇಚಿದ್ಭುಂಜಂತಿ ಕ್ಷೀರಾನ್ನಂ ಕೇಚಿದ್ದಧ್ಯೋದನಂ ನೃಪ ।
ಹಸಂತಿ ಕೇಚಿತ್ಪ್ರರುದಂತಿ ಕೇಚಿತ್ಪ್ರಯಾಂತಿಕೇಚಿತ್ಪ್ರಲಪಂತಿಕೇಚಿತ್ ॥205॥

ರಾಕ್ಷಸರು ಇವರ ಮಧ್ಯದಲ್ಲಿ ಗೊಂದಲ–ಕೋಲಾಹಲಗಳೇರ್ಪಡುತ್ತಿದ್ದವು. (199) ದೇವಸ್ತ್ರೀಯರು, ಋಷಿಸ್ತ್ರೀಯರು, ಬ್ರಾಹ್ಮಣಸ್ತ್ರೀಯರು ಇವರ ಮಧ್ಯದಲ್ಲಿ ಕಲಹವೇರ್ಪಡುತ್ತಿತ್ತು. (199) ಮಾರ್ಗಮಧ್ಯದಲ್ಲಿ ನಡೆದು ಹೋಗುತ್ತಿದ್ದ ನಿರ್ಧನಳಾದ ಸ್ತ್ರೀಯೋರ್ವಳು ತನ್ನ ಮಗನನ್ನು ಹೆಗಲ ಮೇಲೆ ಕೂಡಿಸಿಕೊಂಡು ತಲೆಯ ಮೇಲೆ ಭಾರವನ್ನು ಹೊತ್ತುಕೊಂಡು ತನ್ನ ಗಂಡನನ್ನು ಅವಲಂಬಿಸಿ ನಡೆಯುತ್ತಿದ್ದಳು. ಅವಳನ್ನು ನೋಡಿದ ರಥದಲ್ಲಿ ಕುಳಿತ ದೇವಸ್ತ್ರೀಯರು ರಥಮಾರ್ಗಕ್ಕೆ ಅಡ್ಡಬಂದುದರಿಂದ ಅವಳನ್ನು ಮತ್ತು ನಿರ್ಧನರಾದ ಅನೇಕರನ್ನು ಗಟ್ಟಿಯಾಗಿ ಬಯ್ದರು. ಈ ಕೋಲಾಹಲದಲ್ಲಿ ಅವಳ ಪತಿಯು ಅವಳಿಗಿಂತ ಬೇರೆಡೆ ಸರಿದನು. ಭಾರವನ್ನು ಹೊತ್ತಿದ್ದ ಆ ಸ್ತ್ರೀಯು ಅತ್ಯಂತ ಕಷ್ಟದಿಂದ 'ಹೇ ನಾಥನೇ! ನನ್ನನ್ನು ಬಿಟ್ಟ ಎಲ್ಲಿಗೆ ಹೋಗಿರುವಿ? ನನ್ನನ್ನು ಬಿಡಬೇಡ' ಎಂದು ದುಃಖ–ಭಯಗಳಿಂದ ನುಡಿಯುತ್ತಾ ಭಾರವನ್ನು ಸಹಿಸಲಾರದೇ, ಮಗನಿಂದ ಸಹಿತಳಾಗಿ ಭೂಮಿಯಲ್ಲಿ ಬಿದ್ದುಬಿಟ್ಟಳು. (203) ಕೆಲವು ಶಿಶುಗಳು ಆ ಜನಸಮ್ಮರ್ದವನ್ನು ಕಂಡು ಉತ್ಸುಕತೆಯಿಂದ ಆನಂದವನ್ನು ಹೊಂದಿದ್ದರೆ ಕೆಲವು ಶಿಶುಗಳು ಗಾಬರಿಯಿಂದ ಅಳುತ್ತಿದ್ದವು. ಮತ್ತೆ ಕೆಲವು ಬಾಲಕರು ಹಾಲು ಅನ್ನವನ್ನು ಬಯಸಿದರೆ

ಪತಂತಮನ್ಯೇ ಕರಪಲ್ಲವೇನ ಸಮುದ್ಧರಂತಿ ಸ್ಮ ಹಸಂತಿ ಕೇಚನ।
ಸುರಾಂಗನಾಸ್ತು ರಾಜೇಂದ್ರ ತಥಾ ವೈಖಾನಸಾಂಗನಾಃ ॥206॥

ಋಷ್ಯಂಗನಾಶ್ಚ ಗಂಧರ್ವ್ಯಃ ಕಿನ್ನರ್ಯಶ್ಚಾರುಲೋಚನಾಃ ।
ಅವಾರೋಹನ್ ಗಿರೇಶ್ಶೈವ ಶ್ರೀನಿವಾಸಪರಾಯಣಾಃ ॥208॥

ಶೇಷಾಚಲಂ ಸಮಾರಭ್ಯ ನಾರಾಯಣಪುರಾವಧಿ ।
ತಿಲಮಾತ್ರಾವಕಾಶಂ ತು ಸ್ಥಲಮಾತ್ರಂ ನ ದೃಶ್ಯತೇ ॥209॥

ಮಧ್ಯೇ ಕೃತ್ವಾ ಪದ್ಮತೀರ್ಥಂ ಗತಾ ಸಾ ವಾಹಿನೀ ಹರೇಃ ।
ಋಗ್ಯಜುಸ್ಸಾಮಾಥರ್ವಾದ್ಯೈರ್ಗೀಯಮಾನೋ ಜಗದ್ಗುರುಃ ॥209॥

ಶ್ರೀಪತಿಃ ಪದ್ಮತೀರ್ಥಾಖ್ಯಂ ಮಹಾತೀರ್ಥಂ ಮಹೀಪತೇ ।
ಆಸಸಾದ ಜಗದ್ಯೋನಿಃ ಸಚ್ಚಿದಾನಂದವಿಗ್ರಹಃ ॥210॥

ಸಸುರಾಸುರಗಂಧರ್ವಸಿದ್ಧಸಾಧ್ಯಮರುದ್ಗಣೈಃ ।

ಕೆಲವು ಬಾಲಕರು ಹಾಲಿಗಾಗಿ ಹಾತೊರೆಯುತ್ತಿದ್ದರು. (205) ಆ ಮಾರ್ಗದಲ್ಲಿಯೇ ಕೆಲವು ಶಿಶುಗಳು ಹಾಲನ್ನವನ್ನು, ಕೆಲವು ಮೊಸರವನ್ನು ಭಕ್ಷಿಸುತ್ತಿದ್ದವು. ಹೀಗೆ ಭಗವಂತನ ಪರಿವಾರದವರ ಮೆರವಣಿಗೆಯಲ್ಲಿ ಕೆಲವು ಮಕ್ಕಳು ಅಳುತ್ತಾ, ನಗುತ್ತಾ, ಸುಂದರವಾದ ಮಾತು– ಆಟಗಳನ್ನಾಡುತ್ತಾ ನಡೆಯುತ್ತಿದ್ದವು. (206) ಕೆಲವು ಶಿಶುಗಳು ತಮ್ಮ ಪಾಲಕರ ಕೈಯಿಂದ ಕೆಳಕ್ಕೆ ಬೀಳುತ್ತಿದ್ದವು. ಅವನ್ನು ನೋಡಿದ ಅವರ ಪಾಲಕರು ನಗುತ್ತಾ ಎತ್ತಿಕೊಂಡು ಶಿಶುಗಳನ್ನು ರಮಿಸುತ್ತಿದ್ದರು. (207) ಹೀಗೆ ದೇವಸ್ತ್ರೀಯರು, ವೈಖಾನಸಾಂಗನೆಯರು, ಋಷಿಸ್ತ್ರೀಯರು, ಗಂಧರ್ವಸ್ತ್ರೀಯರು, ಕಿನ್ನರ ಸ್ತ್ರೀಯರು, ಸುಂದರಿ ಯರಾದ ಅಪ್ಸರೆಯರೇ ಮೊದಲಾದ ದೇವಾಂಗನೆಯರು, ಬ್ರಾಹ್ಮಣ ಸ್ತ್ರೀಯರೇ ಮೊದಲಾದ ಶ್ರೀನಿವಾಸ ಪರಾಯಣರಾದ ಅತ್ಯಧಿಕ ಜನಸಮ್ಮರ್ದದಿಂದ ಕೂಡಿದ ಶ್ರೀನಿವಾಸನ ವಿವಾಹ ಮೆರವಣಿಗೆಯು ಪರ್ವತದಿಂದಿಳಿದು ಪದ್ಮತೀರ್ಥವನ್ನು ಮಧ್ಯಮಾಡಿಕೊಂಡು ನಾರಯಣ ಪುರದೆಡೆಗೆ ಸಾಗುತ್ತಿದ್ದರೆ ಮಧ್ಯಭಾಗ ದಲ್ಲಿ ಒಂದು ಎಳ್ಳುಕಾಳನ್ನು ಇಡುವದಕ್ಕೂ ಸಹ ಸ್ಥಳವು ದೊರೆಯುತ್ತಿರಲಿಲ್ಲ. (209)

### ಶುಕಾಶ್ರಮದಲ್ಲಿ ಭೋಜನ

ದೇವತೆಗಳು, ಗಂಧರ್ವರು, ಸಿದ್ಧರು, ಸಾಧ್ಯರು, ವಸುಗಳು, ಮರುದ್ಗಣಗಳೇ ಮೊದಲಾದ ತನ್ನ ಪರಿವಾರದಿಂದ ಪರಿವಾರಿತನಾದ ಸಚ್ಚಿದಾನಂದ ಸ್ವರೂಪಿಯಾದ ಭಗವಂತನು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದಗಳಿಂದ ತನ್ನ ಭಕ್ತರಿಂದ ಸ್ತೋತ್ರಮಾಡಿಸಿ

ಸಂಪ್ರಾಪ್ತಂ ಗುರುಡಾರೂಢಂ ಕೃಷ್ಣದ್ವೈಪಾಯನಿರ್ಮುನಿಃ ॥211॥

ಸಾಷ್ಟಾಂಗಪೂರ್ವಕಂ ರಾಜನ್ ಪ್ರಣಿಪತ್ಯ ಶುಕೋಽಬ್ರವೀತ್ ।

ಶ್ರೀಶುಕ ಉವಾಚ–

'ತಪಶ್ಚ ಸಫಲಂ ಮನ್ಯೇ ಕೃತಂ ಮೇ ಪುರುಷೋತ್ತಮ ॥212॥

ಯೋ ಭವಾನ್ ಬ್ರಹ್ಮರುದ್ರಾದ್ಯೈರಗಮ್ಯೋ ವೇದಗೋಚರಃ ।
ತಂ ಭವಂತಂ ಪ್ರಪಶ್ಯಾಮಿ ನೇತ್ರಾಭ್ಯಾಂ ಪುರುಷೋತ್ತಮ ॥213॥

ಸಪುತ್ರಮಿತ್ರಾಖಿಲಲೋಕಪಾಲಂ
ಸಶೇಷಲಕ್ಷ್ಮ್ಯಾ ಚ ಯುತಂ ಯತೋ ಹರೇ ।
ಪಶ್ಯಾಮಿ ಭಾಗ್ಯೋದಯಶಾಲಿದೃಗ್ಭ್ಯಾಂ
ತ್ವತ್ಪಾದಪೂಜಾ ಸಫಲಾ ತತೋ ಮೇ ॥214॥

ವಿಜ್ಞಾಪನಂ ಮೇ ಶೃಣು ದೇವದೇವ
ಪ್ರಸಾದಹೇತೋಸ್ತವ ವಾಸುದೇವ ।
ಕೃತ್ವಾ ಕೃಪಾಂ ವೇಂಕಟಶೈಲನಾಥ
ಭುಕ್ತ್ವಾ ಮದೀಯಂ ಫಲಕಂದಮೂಲಮ್' ॥215॥

ಕೊಳ್ಳಲ್ಪಟ್ಟವನಾಗಿ, ಮಾರ್ಗ ಮಧ್ಯದಲ್ಲಿ ಪದ್ಮತೀರ್ಥದ ಸಮೀಪಕ್ಕೆ ಬರಲು, ವ್ಯಾಸಮುನಿಯ ಪುತ್ರನಾದ ಶುಕಾಚಾರ್ಯನು ದೇವಾಸುರ ಸಿದ್ಧ ಗಂಧರ್ವ ಸಾಧ್ಯರೇ ಮೊದಲಾದ ದೇವಸಮೂಹಗಳಿಂದ ಒಡಗೂಡಿ ಗರುಡಾರೂಢನಾಗಿ ಬಂದ ಭಗವಂತನಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿ(212) 'ಹೇ ಭಗವಂತನೇ! ಬ್ರಹ್ಮರುದ್ರಾದಿ ಗಳಿಂದಲೂ ಸಹ ಅಗಮ್ಯನಾದ, ವೇದಗಳಿಗೆ ಸಾಕಲ್ಯೇನ ಅಗೋಚರನಾದ ನಿನ್ನನ್ನು ನಾನು ನನ್ನ ಕಣ್ಣುಗಳಿಂದ ಇಂದು ನೋಡಿರುವೆನೆಂದರೆ ಇದುವರೆಗೂ ಮಾಡಿದ ನನ್ನ ತಪಸ್ಸು ಸಾರ್ಥಕವಾಯಿತೆಂದು ತಿಳಿಯುವೆನು. (213) ಬ್ರಹ್ಮಾದಿ ಪುತ್ರರಿಂದಲೂ, ಸಕಲ ಲೋಕಪಾಲಕರಿಂದಲೂ, ಶೇಷದೇವರು, ಲಕ್ಷ್ಮೀದೇವಿಯೇ ಮೊದಲಾದ ನಿನ್ನ ಸೇವಕ ಜನ ಪರಿವಾರದಿಂದ ಸಹಿತನಾದ ನಿನ್ನನ್ನು ನನ್ನ ಈ ಭಾಗ್ಯಶಾಲಿಗಳಾದ ಕಣ್ಣುಗಳಿಂದ ನೋಡಿರುವೆನೆಂದ ಮೇಲೆ ನಾನು ಈವರೆಗೆ ಮಾಡಿರುವ ನಿನ್ನ ಪೂಜೆಯು ಸಫಲವೇ ಆಗಿರುವದೆಂದು ತಿಳಿದಿದ್ದೇನೆ. ಹೇ ದೇವದೇವನಾದ ಭಗವಂತನೇ! ನನ್ನ ಪ್ರಾರ್ಥನೆಯನ್ನಾಲಿಸು. ಹೇ ವಾಸುದೇವನೇ! ವೇಂಕಟಾಚಲ ನಿವಾಸಿಯಾದ ನೀನು ನನ್ನ ಮೇಲೆ ಕೃಪೆಯನ್ನು ಮಾಡಿ ನಾನು ಅರ್ಪಿಸುವ ಹಣ್ಣು–ಹಂಪಲಗಳನ್ನು, ಕಂದಮೂಲಗಳನ್ನು

ಇತ್ಯುಕ್ತೋ ಮುನಿನಾ ತೇನ ವಾಸುದೇವೋಽಭ್ಯಭಾಷತ ।

ಶ್ರೀಭಗವಾನುವಾಚ–

'ಶೃಣು ತಾಪಸಶಾರ್ದೂಲ ವಚನಂ ಸಾಧುಸಮ್ಮತಮ್ ॥216॥

ಭವಾನ್ ಕೃಶೋ ವಿರಾಗೀ ಚ ಬ್ರಹ್ಮಚಾರೀ ದೃಢವ್ರತಃ ।
ವಯಂ ಸಂಸಾರನಿರತಾಃ ಬಹವಶ್ಚಾತ್ರ ಭೂಸುರಾಃ ॥217॥

ಅದ್ಯೈವ ನಗರಂ ಗತ್ವಾ ರಾಜ್ಞಸ್ತಸ್ಯ ಮಹಾತ್ಮನಃ ।
ತತ್ರೈವ ಭೋಜನಂ ಕುರ್ಮ ಇತಿ ಮೇ ವರ್ತತೇ ಮನಃ' ॥218॥

ವದತ್ಯೇವಂ ಹೃಷೀಕೇಶೇ ವ್ಯಾಸಪುತ್ರೋಽಭ್ಯಭಾಷತ ।

ಶ್ರೀಶುಕ ಉವಾಚ

'ನಿಷ್ಕಿಂಚನೋಽಹಂ ಗೋವಿಂದ ನಿಷ್ಕಿಂಚನಜನಪ್ರಿಯ ॥219॥

ತ್ವಯಿ ಭುಕ್ತೇ ಜಗದ್ಭುಕ್ತಂ ನಾತ್ರ ಕಾರ್ಯಾ ವಿಚಾರಣಾ' ।
ವದತ್ಯೇವಂ ಶುಕೇ ಕೃಷ್ಣಂ ಬಕುಲಾ ವಾಕ್ಯಮಬ್ರವೀತ್ ॥220॥

ಬಕುಲಾ ಉವಾಚ–

ಸ್ವೀಕರಿಸಿ, ನನ್ನನ್ನು ಅನುಗ್ರಹಿಸಬೇಕು' ಎಂದು ನುಡಿದನು. (215) ಆಗ ಭಗವಂತನು ಶುಕಾಚಾರ್ಯರನ್ನು ಕುರಿತು 'ಹೇ ತಾಪಸಶ್ರೇಷ್ಠನೇ! ಸಾಧು ಸಮ್ಮತವಾದ ನನ್ನ ವಚನವನ್ನು ಕೇಳು. ವಿರಾಗಿಯೂ, ಕೃಶನೂ, ಬ್ರಹ್ಮಚಾರಿಯೂ, ವ್ರತಿಷ್ಠನೂ ನಿನಾಗಿರುವಿ. ನಾವು ಸಂಸಾರಿಗಳು. ಅನೇಕರಾದ ಬಹು ಸಂಖ್ಯಾಕರಾದ ದೇವಬ್ರಾಹ್ಮಣಮುನಿಗಳೆಲ್ಲರೂ ನಮ್ಮೊಡನೆ ಬಂದಿರುವರು. ಇವತ್ತಿನ ದಿವಸವೇ ಆಕಾಶರಾಜನ ಪಟ್ಟಣಕ್ಕೆ ತೆರಳಿ ಅಲ್ಲಿಯೇ ಭೋಜನವನ್ನು ಮಾಡುವೆವೆಂದು ನನ್ನ ಸಂಕಲ್ಪ ವಿರುವದು' ಎಂದು ಹೇಳಿದಾಗ (218) ಶುಕಾಚಾರ್ಯರು 'ನಿಷ್ಕಿಂಚನ 'ಜನಪ್ರಿಯನಾದ ಭಗವಂತನೇ! ನಾನು ನಿಷ್ಕಿಂಚನನು. ನೀನೊಬ್ಬನು ಭೋಜನವನ್ನು ಮಾಡಿದರೇ ಸಮಸ್ತ ಪ್ರಪಂಚವೂ ಭೋಜನವನ್ನು ಮಾಡಿದಂತಾಗುವುದು. ಆದುದರಿಂದ ನನ್ನ ಕಂದಮೂಲ ಫಲಗಳನ್ನು ಸ್ವೀಕರಿಸಿ ಇಲ್ಲಿಂದ ಪಯಣ ಬೆಳಸಬೇಕು' (220) ಎಂದು ಕೇಳಿಕೊಂಡನು. ಆಗ ಬಕುಲಾದೇವಿಯು 'ಶುಕಾಚಾರ್ಯರ ಪ್ರಯತ್ನದಿಂದಾಗಿಯೇ ನಿನ್ನ ವಿವಾಹಮಹೋತ್ಸವವು ನೆರವೇರಿಸಲ್ಪಟ್ಟಿರುವ ದರಿಂದ ಶುಕಾಚಾರ್ಯರ ಪ್ರಾರ್ಥನೆಯನ್ನು ಮನ್ನಿಸು' ಎಂದು ತಿಳಿಸಿದಳು. (221) ಆಗ ಶ್ರೀನಿವಾಸನು ಶುಕಾಚಾರ್ಯರನನ್ನು ಕುರಿತು ಹೇ "ಋಷಿಶ್ರೇಷ್ಠನೇ! ನಿನ್ನ

'ಶೃಣು ತದ್ವಚನಂ ಕೃಷ್ಣ ತ್ವದ್ವಿವಾಹೇ ರಮಾಪತೇ ।
ಯತ್ನಂ ಬಹುತರಂ ಚಕ್ರೇ ರಾಜಾನಂ ಪರ್ಯಬೋಧಯತ್'॥
ಮಾತುರ್ವಚನಮಾಕರ್ಣ್ಯ ಮಾಧವಃ ಶುಕಮಬ್ರವೀತ್ ॥221॥

ಶ್ರೀನಿವಾಸ ಉವಾಚ–

'ತ್ವದ್ವಾಕ್ಯಾಮೃತಪಾನೇನ ತೃಪ್ತಿರ್ಮೇಽಭೂನ್ಮುನೀಶ್ವರ ।
ಕಿಮನ್ಯೇನ ಪ್ರಾಕೃತೇನ ಫಲೇನಾಲ್ಪರಸೇನ ಮೇ ॥222॥

ತಥಾಽಪಿ ತವ ವಾಕ್ಯೇನ ಕರಿಷ್ಯೇ ಭೋಜನಂ ಮುನೇ' ।
ಸಾಂತ್ವಯಿತ್ವಾ ಮುನಿವರಂ ಗರುಡಾದವರುಹ್ಯ ಸಃ ॥223॥

ಕುಟೀರಂ ಸಂಪ್ರವಿಶ್ಯಾಥ ಸ ಪುತ್ರಸ್ಸಪರಿಗ್ರಹಃ ।
ಮೌಂಜೈಃ ಕೃತಾಸನೇ ರಮ್ಯೇ ಸಂಸ್ಥಿತಃ ಪರಮೇಶ್ವರಃ ॥224॥

ಶುಕಃ ಸ್ನಾತ್ವಾ ಪದ್ಮತೀರ್ಥೇ ಕೃತ್ವಾಽನ್ನಂ ಭಕ್ತಿಸಂಯುತಃ ।
ಅಮೃತಾಬೀಜನಿಚಯಂ ಮುಷ್ಟಿಭಿಃ ಪ್ರವಿಹತ್ಯ ಚ ॥225॥

ತತ್ತಂಡುಲೈರ್ಮಹಾರಾಜ ಕೃತವಾನನ್ನಮುತ್ತಮಮ್ ।
ಬೃಹತೀಫಲಸಂಯುಕ್ತಂ ತಿಂತ್ರಿಣೀರಸಸಂಯುತಮ್ ॥226॥

ಸ್ವಾಂತರಸ್ಥಸ್ಯ ಯಜ್ಞೋಽಯಂ ಪೂಜಾಸಾಧನಮೇವ ಚ ।
ತೇನೈವ ಬಾಹ್ಯಮೂರ್ತೇಸ್ತು ಪೂಜನಂ ಸಾಧುಸಮ್ಮತಮ್ ॥227॥

ವಾಕ್ಯಾಮೃತ ಪಾನದಿಂದ ನನಗೆ ಅತ್ಯಂತ ಸಂತೋಷವಾಗಿದೆ. ಪ್ರಾಕೃತವಾದ, ಅಲ್ಪರಸಯುಕ್ತವಾದ ಫಲಗಳಿಂದ ಏನು ಪ್ರಯೋಜನ? ಆದರೂ ಸಹ ನಿಮ್ಮ ಪ್ರಾರ್ಥನಾನುಸಾರವಾಗಿ ನಾನು ಭೋಜನ ಮಾಡುತ್ತೇನೆ' ಎಂದು ಸಾಂತ್ವನಗೊಳಿಸಿ, ಗರುಡನಿಂದ ಕೆಳಗಿಳಿದು, ಸಪರಿವಾರನಾಗಿ ಶುಕಕುಟೀರವನ್ನು ಪ್ರವೇಶಿಸಿದನು. (224) ಆಗ ಶುಕಮುನಿಯು ಮೌಂಜಿಯಿಂದ ನಿರ್ಮಿತವಾದ ಆಸನದಲ್ಲಿ ಭಗವಂತನನ್ನು ಕುಳ್ಳರಿಸಿದನು. ಅನಂತರದಲ್ಲಿ ಶುಕಾಚಾರ್ಯರು ಪದ್ಮತೀರ್ಥದಲ್ಲಿ ಸ್ನಾನಮಾಡಿ, ಭಕ್ತಿಭರಿತನಾಗಿ , ಉತ್ತರಾಣಿ ಬೀಜಗಳನ್ನು (ಕಾಡುಹೆಸರು) ತಂದು ಮುಷ್ಟಿಗಳಿಂದ ಕುಟ್ಟಿ, ಅವುಗಳ ಸಿಪ್ಪೆಯನ್ನು ತೆಗೆದು, ಆ ಅಕ್ಕಿಯಿಂದ ಅನ್ನವನ್ನು ಮಾಡಿದನು. ಬೃಹತಿಫಲಕ್ಕೆ ತಿಂತ್ರಿಣಿ ರಸವನ್ನು ಸೇರಿಸಿ, ರಸಾಯನವನ್ನು ಮಾಡಿದನು.(226) 'ಸ್ವಾಂತಃಸ್ಥನಾದ ಭಗವಂತನಿಗೆ ಮನುಜನು ಯಾವ ವಸ್ತುಗಳಿಂದ ಅರ್ಚಿಸುತ್ತಾನೋ ಅವುಗಳಿಂದಲೇ ಬಾಹ್ಯಮೂರ್ತಿಯ ಅರ್ಚನೆಯನ್ನು ಮಾಡುವದು ಸಾಧು ಸಮ್ಮತವಾಗಿದೆ' ಎಂದು ತಿಳಿದ ಮಹಾ ತತ್ವಜ್ಞಾನಿಯಾದ

ಇತಿ ಮತ್ವಾರ್ಥತತ್ವಜ್ಞಃ ಕೃತ್ವಾ ಪಾದಾವನೇಜನಮ್ ।
ಪದ್ಮಪತ್ರಾಣಿ ಚಾಸ್ತೀರ್ಯ ತತ್ರಾನ್ನಂ ರಸಸಂಯುತಮ್ ॥228॥

ವಿನಿಕ್ಷಿಪ್ಯ ವಿಶೇಷೇಣ ಕೃತಸಾಷ್ಟಾಂಗಸನ್ನತಿಃ ।
'ಭೋಜನಂ ಕುರು ಗೋವಿಂದ ಸದಾ ಪೂರ್ಣಮನೋರಥ ॥229॥

ಏವಂ ಸಂಪ್ರಾರ್ಥಿತೋ ದೇವಃ ಶುಕೇನ ಪರಮರ್ಷಿಣಾ ।
ತದ್ಭಕ್ತಿಪಾರವಶ್ಯೇನ ಭಗವಾನಾತ್ಮಭೂಃ ಸ್ವಯಮ್ ॥230॥

ಋಷೀಣಾಮುಚಿತಾಹಾರಂ ಬುಭುಜೇ ಸರ್ವಭೋಜನಃ ।
ಲಕ್ಷ್ಮೀಸ್ತಸ್ಯಾಜ್ಞಯಾ ಸಾರ್ಧಂ ತಯಾಬಕುಲಮಾಲಯಾ ॥231॥

ಬುಭುಜೇ ಮುನಿನಾ ದತ್ತಂ ತದನ್ನಮಮೃತಪ್ರಭಮ್ ।
ತಸ್ಮಿನ್ ಭುಕ್ತವತಿ ಶ್ರೀಶೇ ಋಷಯಃ ಕೋಪಪೂರಿತಾಃ ॥232॥

ಶುಕಂ ಚ ಭೀಷಯಂತಸ್ತೇ ಸಮುತ್ತಸ್ಥುರ್ವರಾಸನಾತ್ ।
ಶಾಪಾನುಗ್ರಹಸಾಮರ್ಥ್ಯಸಾಧನಾಶ್ಚ ತಪೋಧನಾಃ ॥233॥

ತೇಷಾಂ ಮತಂ ತು ವಿಜ್ಞಾಯ ಭಗವಾನ್ ಬಹಿರಾಗತಃ ।
ಪೂತ್ಕಾರಂ ಕೃತವಾನ್ ಕೃಷ್ಣಃ ಸರ್ವೇಷಾಂ ತೃಪ್ತಿಹೇತವೇ ॥234॥

ಶುಕಾಚಾರ್ಯರು ಶ್ರೀನಿವಾಸನ ಪಾದಗಳನ್ನು ತೊಳೆದು, ಭೋಜನಕ್ಕಾಗಿ ಕಮಲದ ಎಲೆಗಳನ್ನು ಹಾಕಿ, ತಾನು ಮಾಡಿದ ರಸದಿಂದ ಕೂಡಿದ ಅನ್ನವನ್ನು ಬಡಿಸಿ, ವಿಶೇಷವಾಗಿ ಸಾಷ್ಟಾಂಗ ಪ್ರಣಾಮವನ್ನು ಮಾಡಿ, ಪೂರ್ಣ ಮನೋರಥನಾದ ಭಗವಂತನನ್ನು ಕುರಿತು ಭೋಜವನ್ನು ಮಾಡಲು ವಿಜ್ಞಾಪಿಸಿಕೊಂಡನು. (229) ಶುಕಾಚಾರ್ಯರ ಭಕ್ತಿಗೆ ಪರವಶನಾದ ಭಗವಂತನು ಋಷಿಗಳಿಗೆ ಉಚಿತವಾದ ಆಹಾರವನ್ನು ಭೋಜನ ಮಾಡಿದನು. ಲಕ್ಷ್ಮೀದೇವಿಯೂ ಮತ್ತು ಬಕುಲಾಮಾಲೆಯೂ ಸಹ ಶುಕಾಚಾರ್ಯರಿಂದ ಪ್ರದತ್ತವಾದ, ಅಮೃತಕ್ಕೆ ಸಮಾನವಾದ ಅನ್ನವನ್ನು ಭೋಜನ ಮಾಡಿದರು.(231) ಭಗವಂತನು ಭೋಜನ ಮಾಡಿದ್ದನ್ನು ಅರಿತ ಕೆಲವು ಋಷಿಗಳು ಕೋಪಪೂರಿತರಾಗಿ ಶುಕಾಚಾರ್ಯರನ್ನು ಹೆದರಿಸುತ್ತಾ, ತಮ್ಮ ತಮ್ಮ ಶ್ರೇಷ್ಠವಾದ ಆಸನಗಳಿಂದ ಮೇಲಕ್ಕೆದ್ದರು. ಶಾಪಾನುಗ್ರಹ ಸಾಧನರೂ ತಪೋಧನರೂ ಆಗಿರುವ ಮುನಿಗಳ ಮನೋಗತವನ್ನು ತಿಳಿದ ಭಗವಂತನು ಕುಟೀರದಿಂದ ಹೊರಬಂದು ಪೂತ್ಕಾರವನ್ನು ಮಾಡಿ ಸರ್ವರಿಗೂ ತೃಪ್ತಿಯುಂಟಾಗಲೆಂಬ ಕಾರಣದಿಂದ ತೇಗಿದಾಗ ಭಗವಂತನ ಮುಖಾರವಿಂದಿಂದ ಸಂಭೂತ ವಾದ ವಾಯುವಿನಿಂದ ಸರ್ವಋಷಿಗಳು ಊಟ ಮಾಡಿದವರಂತೆ ಅತ್ಯಂತ ತೃಪ್ತಿಯನ್ನು

ತನ್ಮುಖಾಂಭೋಜಸಂಭೂತವಾಯುನಾ ತೃಪ್ತಿಮಾಯಯುಃ ।
ಸುರಧೇನ್ವಾ ಯಥಾ ತೃಪ್ತಾಸ್ತಥೈವ ಮುನಿಪುಂಗವಾಃ ॥235॥

ಶುಕಂ ಸಂತೋಷಯಾಮಾಸುರ್ವಚನೈಃ ಸ್ತೋತ್ರಮಿಶ್ರಿತೈಃ ।
ಅಷ್ಟಮ್ಯಾಂ ತತ್ರ ವಾಸಂ ಚ ನವಮ್ಯಾಂ ಗುರುವಾಸರೇ ॥236॥

ಪ್ರಭಾತಸಮಯೇ ಪ್ರಾಪ್ತೇ ಶ್ರೀನಿವಾಸಸ್ತ್ವರಾನ್ವಿತಃ ।
ಪುನರ್ಗರುಡಮಾರುಹ್ಯ ಗುರುವಾರೇ ಜಗದ್ಗುರುಃ ॥237॥

ಚತುರಂಗಬಲಾಧ್ಯಕ್ಷಂ ಬ್ರಹ್ಮಾಣಂ ಚ ಪಿತಾಮಹಮ್ ।
ನಿಧಾಯ ಪುರತೋ ರಾಜನ್ ಜಗಾಮ ಜಗದೀಶ್ವರಃ ॥238॥

ಅಸ್ತಾದ್ರಿಂ ಪ್ರಸ್ಥಿತೇ ಭಾನೌ ತಸ್ಮಿನ್ ಕಾಲೇ ಮಹೀಪತಿಃ ।
ಅಷ್ಟವರ್ಗಂ ತತಃ ಕೃತ್ವಾ ಕೃತಮಂಗಲಕೌತುಕಃ ॥239॥

ಪದ್ಮಾವತೀಂ ಸ್ನಾಪಯಿತ್ವಾ ಗಂಧತೈಲೇನ ಭೂಮಿಪ ।
ಅಲಂಕೃತ್ಯ ವರಾಂ ಕನ್ಯಾಮಲಂಕಾರೈರ್ಮಹಿಪತಿಃ ॥240॥

ಹೊಂದಿ, ಸ್ತೋತ್ರ ಮಿಶ್ರಿತವಾದ ಉತ್ತಮವಾದ ವಚನಗಳಿಂದ ಶುಕಾಚಾರ್ಯರನ್ನು ಸಂತೋಷಪಡಿಸಿದರು. ಅಷ್ಟಮಿಯ ದಿನದಂದು ಶುಕಾಚಾರ್ಯರ ಆಶ್ರಮದಲ್ಲಿಯೇ ಸಪರಿವಾರನಾಗಿ ವಾಸಮಾಡಿದ ಭಗವಂತನು ಮರುದಿವಸ ನವಮಿಯ ದಿನ ಪ್ರಾತಃಕಾಲದಲ್ಲಿ ತ್ವರಾನ್ವಿತನಾಗಿ ಗರುಢಾರೂಢನಾಗಿ ಚತುರಂಗ ಬಲಾಧ್ಯಕ್ಷನಾದ ಚರ್ತುಮುಖನನ್ನು ಮುಂದೆಮಾಡಿಕೊಂಡು ಪ್ರಯಾಣವನ್ನು ಬೆಳೆಸಿದನು. (238)

### ನಾರಾಯಣಪುರದಲ್ಲಿ ಶ್ರೀನಿವಾಸ

ಇದೇ ಸಂದರ್ಭದಲ್ಲಿ ಸೂರ್ಯನು ಅಸ್ತಾಚಲವನ್ನು ತಲುಪತ್ತಿರಲು ಆಕಾಶರಾಜನು ಅಷ್ಟವರ್ಗ ಕರ್ಮಗಳನ್ನು ಮಾಡಿ, ಮಂಗಲ ಕೆಲಸಗಳನ್ನು ಪರಿಸಮಾಪ್ತಿಗೊಳಿಸಿ, ಗಂಧತೈಲಗಳಿಂದ ಪದ್ಮಾವತಿಗೆ ಅಭ್ಯಂಗ ಸ್ನಾನವನ್ನು ಮಾಡಿಸಿ, ಶ್ರೇಷ್ಠವಾದ ಅಲಂಕಾರಗಳಿಂದ ಭೂಷಿತಳನ್ನಾಗಿ ಮಾಡಿ, ಭಾರ್ಯಾಪುತ್ರರಿಂದ ಕೂಡಿಕೊಂಡು ಮಗಳನ್ನು ಗಜಾರೂಢಳನ್ನಾಗಿ ಮಾಡಿ, ಪುರೋಹಿತನಾದ ಬೃಹಸ್ಪತಿ, ತಮ್ಮನಾದ ತೊಂಡಮಾನ ರಾಜ ಹಾಗೂ ದೇವೆಂದ್ರನಿಂದ ಕೂಡಿಕೊಂಡು ಲಕ್ಷ್ಮೀಪತಿಯಾದ ಶ್ರೀನಿವಾಸನನ್ನು ಕಾಣುವ ಆತುರದಿಂದ ಚತುರಂಗ ಸೈನ್ಯವನ್ನು ಮುಂದೆ ಮಾಡಿಕೊಂಡು ಧ್ವಜ, ಪತಾಕ, ಛತ್ರ, ಚಾಮರ, ಬೀಸಣಿಕೆಗಳಿಂದಲೂ ಭೇರಿ ದುಂಧುಬಿಗಳ ಧ್ವನಿಗಳಿಂದಲೂ ನರ್ತಕ ನರ್ತಕಿಯರಿಂದ ವಿರಾಜಿಸುತ್ತಾ, ಸೂತರು, ಸ್ತುತಿಪಾಠಕರು ಇವರುಗಳಿಂದ

ಗಜಮಾರೋಪ್ಯ ತರಸಾ ಪುತ್ರೀಂ ಪುತ್ರೀಹಿತೇ ರತಃ ।
ಆಕಾಶರಾಜೋ ಧರ್ಮಾತ್ಮಾ ಪುತ್ರೇಣ ಸಹ ಭಾರ್ಯಯಾ ॥241॥

ಪುರೋಹಿತೇನ ಶಕ್ರೇಣ ತೋಂಡಮಾನೇನ ನಿರ್ಯಯೌ ।
ಶ್ರೀನಿವಾಸಂ ಜಗದ್ಯೋನಿಂ ದ್ರಷ್ಟುಕಾಮೋ ರಮಾಪತಿಮ್ ॥242॥

ಚತುರಂಗಬಲೈಃ ಸರ್ವೈರ್ಗಜಾಶ್ವರಥಸಂಯುತೈಃ ।
ಧ್ವಜೈಶ್ಛತ್ರೈಃ ಪತಾಕೈಶ್ಚ ಚಾಮರೈರ್ವ್ಯಜನೈರಪಿ ॥243॥

ಭೇರೀದುಂದುಭಿನಿರ್ಘೋಷೈರ್ವಾದಿತ್ರಾಣಾಂ ಮಹಾಸ್ವನೈಃ ॥
ನರ್ತಕೈರ್ನಟಕೈಶ್ಚಾಪಿ ಸೂತಮಾಗಧವಂದಿಭಿಃ ॥244॥

ಸ್ತೂಯಮಾನೋ ಮಹಾರಾಜಃ ಸೈನ್ಯಮಧ್ಯೇ ವಿರಾಜಿತಃ ।
ಯಥಾಽಽಕಾಶೇ ಚಂದ್ರಬಿಂಬಂ ನಕ್ಷತ್ರಗಣಮಂಡಲೈಃ ॥245॥

ರಾಜಾ ದದರ್ಶ ಗೋವಿಂದಂ ಶಕ್ರೇಣ ಪರಿದರ್ಶಿತಮ್ ।
ಗರುಡಸ್ಕಂಧಮಾರೂಢಂ ಶ್ವೇತಛತ್ರಾದಿಭಿರ್ಯುತಮ್ ॥246॥

ಸುಕುಮಾರಂ ಯುವಾನಂ ಚ ಸುಂದರಂ ಸುಂದರಾನನಮ್ ।
ಶ್ರೀನಿವಾಸಂ ಜಗದ್ಯೋನಿಂ ಸಚ್ಚಿದಾನಂದವಿಗ್ರಹಮ್ ॥248॥

ದೃಷ್ಟ್ವಾ ಸಂತುಷ್ಟಮನಸಾ ವಾಹನಾದವರುಹ್ಯ ಚ ।
ಪದ್ಮಾವತೀಂ ಸ್ವಪುತ್ರೀಂ ಚ ನಿಧಾಯ ಪುರತೋ ನೃಪಃ ॥249॥

ಪುರೋಹಿತಂ ಪುರಸ್ಕೃತ್ಯ ಚೇದಂ ವಚನಮಬ್ರವೀತ್ ।

ಆಕಾಶರಾಜ ಉವಾಚ–

ಸ್ತೋತ್ರ ಮಾಡಿಸಿಕೊಳ್ಳುತ್ತಾ ಸೈನ್ಯ ಮಧ್ಯದಲ್ಲಿ ಪ್ರಕಾಶಮಾನನಾಗಿ ರಾರಾಜಿಸುತ್ತಾ, ಇಂದ್ರನಿಂದ ಪ್ರದರ್ಶಿತನಾದ ತನ್ನ ಪುರಕ್ಕೆ ಆಗಮಿಸುತ್ತಿರುವ ಶ್ರೀನಿವಾಸನನ್ನು ನೋಡಿದನು. (245) ಗರೂಢಾರೂಢನೂ, ಶ್ವೇತಛತ್ರಾದಿಗಳಿಂದ ಸಹಿತನೂ, ಅತ್ಯಂತ ಯುವಕನೂ, ಮನೋಹರನೂ, ಸಚ್ಚಿದಾನಂದ ಸ್ವರೂಪನೂ ಆದ ಗೋವಿಂದನನ್ನು ಮನಸಾ ತೃಪ್ತಿಯನ್ನು ಹೊಂದಿದ ಆಕಾಶರಾಜನು ವಾಹನದಿಂದ ಇಳಿದು ತನ್ನ ಪದ್ಮಾವತಿಯನ್ನು ಮುಂದೆ ಮಾಡಿಕೊಂಡು ಪುರೋಹಿತನನ್ನು ಕುರಿತು ತಾನೂ ಧನ್ಯನಾದನೆಂದು ಕೃತಕೃತ್ಯನಾದನೆಂದು ಮೋಕ್ಷಪ್ರಾಪ್ತಿಗೆ ಅರ್ಹನಾದನೆಂದು ಬಣ್ಣಿಸುತ್ತಾ ಬಹು ಸಂತೋಷಪಟ್ಟನು.(250)

'ಧನ್ಯೋऽಹಂ ಕೃತಕೃತ್ಯೋऽಹಂ ಸ್ವರ್ಗಮಾರ್ಗಸಮಾಸ್ಥಿತಃ' ॥250॥

ಏತಸ್ಮಿನ್ನೇವ ಕಾಲೇ ತು ಶ್ರೀನಿವಾಸಃ ಸತಾಂ ಗತಿಃ ।
ದದರ್ಶ ರಾಜಶಾರ್ದೂಲಂ ನಾರದೇನ ಪ್ರದರ್ಶಿತಮ್ ॥250॥

ನಾರದ ಉವಾಚ–

'ದೀರ್ಘಶ್ಮಶ್ರುಂ ದೀರ್ಘಬಾಹುಂ ಶ್ವೇತಛತ್ರಸಮನ್ವಿತಮ್ ।
ಶ್ವಶುರಂ ತಂ ಗೋವಿಂದ ಪಶ್ಯ ಮಾಧವ ಭೂಮಿಪಮ್' ॥251॥

ಶ್ರೀನಿವಾಸ ಉವಾಚ–

'ಧನ್ಯಂ ನಾರದ ಮೇ ಜನ್ಮ ಯದಾऽऽಕಾಶೋऽದ್ಯ ಬಾಂಧವಃ ।
ತೇನ ಸಂಬಂಧಪ್ರಾಪ್ತೌ ಕಿಂ ಮಯಾ ಚರಿತಂ ಪುರಾ' ॥252॥

ವದತ್ಯೇವಂ ಹೃಷಿಕೇಶೇ ರಾಜಾ ಸತ್ಯಪರಾಕ್ರಮಃ ।
ದ್ವಾರತೋರಣಮಾಸಾಧ್ಯ ಶ್ರೀನಿವಾಸಂ ದದರ್ಶ ಹ ॥253॥

ಪೂಜಯಾಮಾಸ ಗೋವಿಂದಂ ವಸ್ತ್ರೈರಾಭರಣಾದಿಭಿಃ ।
ಗಂಧತೈಲೇನ ರಾಜೇಂದ್ರ ಜಾಮಾತರಮಪೂಜಯತ್ ॥254॥

ಸಾ ದದರ್ಶ ವರಾರೋಹಾ ಪತಿಂ ಪರಮಪಾವನಮ್ ।
ಪದ್ಮಾವತೀ ವಿಶಾಲಾಕ್ಷೀ ಲಜ್ಜಯಾ ಪರಿಮೋಹಿತಾ ॥255॥

ತಾಂ ದದರ್ಶ ಜಗದ್ಯೋನಿಃ ಕಮಲಾಕ್ಷೀಂ ಮಹೀಪತೇ ।

ಇದೇ ಸಮಯದಲ್ಲಿ ನಾರದಮುನಿಯು ಶ್ರೀನಿವಾಸನಿಗೆ ಆಕಾಶರಾಜನನ್ನು ತೋರಿಸುತ್ತಾ 'ಹೇ ಲಕ್ಷ್ಮೀಪತಿಯೇ! ಆಜಾನುಬಾಹುವಾದ, ದೀರ್ಘವಾದ ಗಡ್ಡಮೀಸೆಗಳುಳ್ಳವನೂ ಶ್ವೇತಛತ್ರಧಾರಿಯಾದವನೂ ಆದ ಆಕಾಶಾರಾಜನೇ ನಿನಗೆ ಶ್ವಶುರ (ಮಾವ) ನಾಗತಕ್ಕವನೆಂದು ಆಕಾಶರಾಜನನ್ನು ತೋರಿಸಿದನು. ಆಗ ಶ್ರೀನಿವಾಸನು ಬಹು ಸಂತೋಷವನ್ನು ವ್ಯಕ್ತ ಪಡಿಸುತ್ತಾ 'ಆಕಾಶರಾಜನು ಇಂದು ನನ್ನ ಬಂಧುವಾಗಿರುವನಾದ್ದರಿಂದ ನಾನು ಧನ್ಯನಾದೆನು. ಅವನ ಸಂಬಂಧವನ್ನು ಹೊಂದಲು ನಾನು ಪೂರ್ವದಲ್ಲಿ ಮಾಡಿರುವ ಪುಣ್ಯವಾದರೋ ಎಂತಹದ್ದು? ಎಂದು ನುಡಿದನು. (253) ಹೀಗೆ ಶ್ರೀನಿವಾಸನು ನುಡಿಯುತ್ತಿರುವಾಗಲೇ ಸತ್ಯಪರಾಕ್ರಮನಾದ ರಾಜನು ಊರ ಹೆಬ್ಬಾಗಿಲಿನ ಬಳಿ ಆಗಮಿಸಿ, ಶ್ರೀನಿವಾಸನನ್ನು ನೋಡಿ, ವಸ್ತ್ರಾಭರಣಗಳಿಂದಲೂ ಸುಗಂಧಮಯ ತೈಲಗಳಿಂದಲೂ ಪೂಜಿಸಿದನು.(255) ವಿಶಾಲಾಕ್ಷಿಯಾದ ಪದ್ಮಾವತಿಯು

ಪದ್ಮಾವತೀಶ್ರೀನಿವಾಸೌ ವಾಹನಾದವರುಹ್ಯ ಚ ॥256॥

ಅನ್ಯೋನ್ಯಾಲೋಕನಂ ರಾಜಂಶ್ಚಕ್ರಾತೇ ಸಂಸ್ಥಿತೌ ತತಃ ।
ವಾಸುದೇವಸ್ಯ ಯೇ ಭಕ್ತಾಸ್ತೇಽನ್ಯೋನ್ಯಂ ಪರಿರೇಭಿರೇ ॥258॥

ನಗರದ್ವಾರನಿಲಯಾಂ ದುರ್ಗಾಂ ಮಯಾಯುತೋ ಹರಿಃ ।
ಪದ್ಮಾವತ್ಯನುಗೋ ರಾಜನ್ ದೇವೀಂ ನತ್ವಾ ವಿಶೇಷತಃ ॥259॥

ವರಂ ಯಯಾಚೇ ಗೋವಿಂದಃ 'ಕುರು ಭಾರ್ಯಮಿಮಾಮ್'ಇತಿ।
ಪದ್ಮಾವತೀ ವಿಶಾಲಾಕ್ಷೀ ಸಾ ವವ್ರೇ ವರಮುತ್ತಮಮ್ ॥259॥

'ಪತಿಂ ಕರು ರಮಾನಾಥಂ ಶ್ರೀನಿವಾಸಂ ಜಗನ್ಮಯಮ್' ।
ಇತಿ ವೃತ್ವಾ ಚ ಸಾ ದೇವೀಂ ನತ್ವೈರಾವತಮಾಶ್ರಿತಾ ॥260॥

ಗರುಡಸ್ಕಂಧಮಾರೂಢೋ ಭಗವಾನ್ ಭಕ್ತವತ್ಸಲಃ ।
ದೀಪಕೈಸ್ತೈಲಸಂಸಿಕ್ತೈಃ ಸಹಸ್ರಾಯುತಸಂಖ್ಯಕೈಃ ॥261॥

ಲಾಜಾನ್ ಪುಷ್ಪಾಣ್ಯಕ್ಷತಾಂಶ್ಚ ವಿಕಿರದ್ಭಿರಿತಸ್ತತಃ ।
ಸ್ತುವದ್ಭಿರ್ವಂದಿವೃಂದೈಶ್ಚ ಸಸೂತೈರ್ಮಾಗಧೈರಪಿ ॥262॥

ತನ್ನ ಅರಳಿದ ನೇತ್ರಗಳಿಂದ ಲಜ್ಜಾನ್ವಿತಳಾಗಿ ಶ್ರೀನಿವಾಸನನ್ನು ಮೋಹಪಟ್ಟು ನೋಡಿದಳು. ಶ್ರೀನಿವಾಸನೂ ಪದ್ಮಾವತಿಯನ್ನು ವೀಕ್ಷಿಸಿದನು. ಅವರೀರ್ವರೂ ವಾಹನದಿಂದ ಕೆಳಗಿಳಿದು ಅನ್ಯೋನ್ಯವಾಗಿ ದರ್ಶನ ಮಾಡಿಕೊಂಡರು. ಪರಮಾತ್ಮನ ಭಕ್ತರೇ ಆದ ಕನ್ಯಾ-ವರರ ಪರಿವಾರವು ಪರಸ್ಪರ ಆಲಿಂಗನವನ್ನು ಮಾಡಿಕೊಂಡು ಹರ್ಷವನ್ನು ವ್ಯಕ್ತಪಡಿಸಿದರು. (259) ಲಕ್ಷ್ಮಿಸಹಿತನಾದ ಶ್ರೀನಿವಾಸನು ನಾರಾಯಣಪುರದ ಬಾಗಿಲಿನಲ್ಲಿರುವ ದುರ್ಗಾಮಂದಿರವನ್ನು ಪ್ರವೇಶಿಸಿ, ಲೋಕವಿಡಂಬಕನಾದ ಭಗವಂತನು ದೇವಿಯನ್ನು ನಮಸ್ಕರಿಸಿ 'ಸುಂದರಳಾದ, ವಿಶಾಲಾಕ್ಷಿಯಾದ ಪದ್ಮಾವತಿಯೇ ತನಗೆ ಪತ್ನಿಯಾಗು ವಂತೆ ವರವನ್ನು ಬೇಡಿದನು. ಪದ್ಮಾವತಿಯೂ ಸಹ ಜಗಜ್ಜನಕನಾದ ಶ್ರೀನಿವಾಸನೇ ತನಗೆ ಪತಿಯಾಗುವಂತೆ ಪ್ರಾರ್ಥಿಸಿಕೊಳ್ಳುತ್ತಾ ದುರ್ಗೆಗೆ ನಮಸ್ಕಾರ ಮಾಡಿ ಐರಾವತವೆಂಬ ಆನೆಯನ್ನು ಏರಿದಳು. (260) ಭಕ್ತವತ್ಸಲನಾದ ಭಗವಂತನು ಗರೂಢಾರೂಢನಾದನು. ಶ್ರೀನಿವಾಸನ ಸುತ್ತಲೂ ಭಕ್ತರುಗಳು ಪುಷ್ಪಗಳು, ಭತ್ತರಳು, ಮಂತ್ರಾಕ್ಷತೆಗಳನ್ನು ಸೂರೆ ಮಾಡುತ್ತಾ ಭಗವಂತನನ್ನು ಸ್ತುತಿಸಿದರು. ಸೂತಮಾಗಧರಿಂದಲೂ, ಬಂದಿಗಳಿಂದ ಸ್ತುತಿಸಲ್ಪಟ್ಟ, ವೇದಮಂತ್ರಗಳಿಂದ ಆಶೀರ್ವಾದವನ್ನು ನುಡಿಯುತ್ತಿದ್ದ ಬ್ರಾಹ್ಮಣರಿಂದ ಉಪೇತನಾದ, ಬ್ರಹ್ಮಾದಿ ದೇವತೆಗಳು, ಶುಕಾದಿಮುನಿಗಳು ಇವರಿಂದ ಪರಿವಾರಿತನಾದ ಶ್ರೀನಿವಾಸನನ್ನು

ಆಶೀರ್ವಾದಂ ಪ್ರಕುರ್ವದ್ಭಿರ್ವೇದಘೋಷಪುರಸ್ಸರಮ್ ।
ಬ್ರಹ್ಮಾದಿಭಿಸ್ಸುರಶ್ರೇಷ್ಠೈರ್ಭೂಸುರೈಃ ಶುಕಪೂರ್ವಕೈಃ ॥263॥

ಶ್ರೀನಿವಾಸಂ ಪ್ರಪಶ್ಯದ್ಭಿಃ ಪೌರನಾರೀನರೈರ್ವೃತಃ ।
ವೀಣಾವೇಣುಮೃದಂಗಾದಿಪಣವಾನಕದುಂದುಭೀನ್ ॥264॥

ವಾದಯದ್ಭಿರ್ಜನೈಶ್ಚಾನ್ಯೈರ್ವಾರನಾರೀಗಣೈಸ್ತಥಾ ।
ಗಂಧರ್ವೈರ್ಗಾನನಿಪುಣೈಃ ಸೂತಾಮಾತ್ಯೈಶ್ಚ ಸಂಯುತಃ ॥265॥

ಆಕಾಶರಾಜೋ ಧರ್ಮಾತ್ಮಾ ಶ್ರೀನಿವಾಸಪರಾಯಣಃ ।
ಪದ್ಮಾವತ್ಯಾ ಸಮೇತಂ ತಂ ಶ್ರೀನಿವಾಸಂ ಸಸಂಭ್ರಮಮ್ ॥266॥

ಸಂಚಾರಯನ್ ಸಮಂತಾಚ್ಚ ನಾರಾಯಣಪುರೇ ಶನೈಃ ।
ರಂಭಾಸ್ತಂಭೈರಿಕ್ಷುದಂಡೈಃ ಪೂಗೀಪೋತೈರಲಂಕೃತಮ್ ॥267॥

ರಸಾಲಪಲ್ಲವೈಶ್ಚಾಪಿ ಪೂರ್ಣಕುಂಭೈರ್ವಿಭೂಷಿತಮ್ ।
ಮುಕ್ತಾಜಾಲಾವೃತೈಶ್ಚಾನ್ಯೈಃ ಪದ್ಮರಾಗವಿರಾಜಿತೈಃ ॥268॥

ವಜ್ರವೈಡೂರ್ಯಖಚಿತೈರಿಂದ್ರನೀಲಸಮಪ್ರಭೈಃ ।
ತಥಾ ಮರಕತಪ್ರಖ್ಯೈಃ ತೋರಣೈರುಪಶೋಭಿತಮ್ ॥269॥

ಕುಂಕುಮೋದಕಸಂಪೂರ್ಣಕ್ವಣತ್ಕನಕಭಾಜನೈಃ ।

ನೋಡಲಾಗಮಿಸಿದ ಪಟ್ಟಣದ ಸಮಸ್ತ ಸ್ತ್ರೀ-ಪುರುಷರು ಅತ್ಯಂತ ಸಂತೋಷದಿಂದ 'ಇವನೇ ನಮ್ಮ ರಾಜಕುಮಾರಿಯ ಪಾಣಿಗ್ರಹಣವನ್ನು ಮಾಡಿ ರಾಜನ ಅಳಿಯನಾಗಲಿ' ಎಂದು ಬಯಸಿದರು. (263) ವೀಣೆ, ಕೊಳಲು, ಮದ್ದಲೆ, ದುಂಧುಬಿ, ಮೊದಲಾದ ವಾದ್ಯಗಳನ್ನು ಬಾರಿಸುತ್ತಾ, ಸಂತೋಷದಿಂದ ಕುಣಿಯುತ್ತಿರುವ ನರ್ತಕರಿಂದಲೂ, ಹಾಡುತ್ತಾ ಇದ್ದ, ಗಾನ ನಿಪುಣರಾದ ಗಂಧರ್ವರಿಂದ ಉಪೇತನಾದ ಆಕಾಶರಾಜನು ಪದ್ಮಾವತಿ- ಶ್ರೀನಿವಾಸರನ್ನು ಬಾಳೆಸ್ತಂಭಗಳು, ಕಬ್ಬಿನ ಜಲ್ಲೆಗಳು, ಮಾವಿನ ತೋರಣ, ಅಡಿಕೆಯ ಎಸಳುಗಳಿಂದ ಅಲಂಕೃತವಾದ, ಕೆಂಪಾಗಿ ಸುಂದರವಾಗಿ ತೋರುತ್ತಿದ್ದ ಚಿಗುರುಗಳಿಂದಲೂ, ಪೂರ್ಣಕುಂಭಗಳಿಂದಲೂ ಭೂಷಿತವಾದ, ಪದ್ಮರಾಗ ಮಣಿಗಳಿಂದ ಭೂಷಿತವಾದ ಮುತ್ತಿನ ಸರಳುಗಳಿಂದಲೂ, ವಜ್ರ, ವೈಡೂರ್ಯ, ಮರಕತ, ಇಂದ್ರನೀಲವೇ ಮೊದಲಾದ ಅನರ್ಘ ಮಣಿಗಳಿಂದ ಮಾಡಲ್ಪಟ್ಟ ತೋರಣಗಳಿಂದ ಬಹುಸುಂದರವಾಗಿ ಅಲಂಕೃತವಾದ ನಾರಾಯಣಪುರದ ರಾಜಬೀದಿ ಗಳಲ್ಲಿ ಮೆರವಣಿಗೆ ಯನ್ನು ಮಾಡಿಸಿದನು. (270) ಮಾರ್ಗದಲ್ಲಿ ಬಂಗಾರದ ಕಲಶಗಳನ್ನು ಹೊತ್ತ ಸ್ತ್ರೀಯರು

ಸ್ತ್ರೀಭಿರ್ನೀರಾಜಯಂತೀಭಿಃ ರಾಜಮಾನಚತುಷ್ಪಥಮ್ ॥
ವೀಥೀತ್ರಯಂ ಪರಿಕ್ರಮ್ಯ ವಾಸುದೇವಾಲಯಂ ಯಯೌ ॥270॥

ಪ್ರವೇಶಯಾಮಾಸ ವರಂ ಸುಮಂದಿರಂ
ಶ್ರೀವೇಂಕಟೇಶಂ ರಮಯಾ ಸಮನ್ವಿತಮ್ ।
ತದ್ಬಂಧುಸಂಘಂ ಮುನಿವರ್ಯಗುಪ್ತಂ
ಬಲಂ ನಿಯುಜ್ಯಾತ್ಮನಿಕೇತನೇಷು ॥271॥

ರಾತ್ರಿಸ್ತು ಪಂಚಘಟಿಕಾ ಸಮಭೂದ್ರಾಜಸತ್ತಮ ।
ಜಗಾಮ ಭವನಂ ರಾಜಾ ಸ್ವಕೀಯಂ ರಾಜವಲ್ಲಭಮ್ ॥272॥

ತದಾऽऽಗತೋ ಮಹಾರಾಜಃ ತೋಂಡಮಾನೋ ಮಹೀಪತೇ।
ತದಾಹ ಕರುಣಂ ಶ್ರೀಮಾನ್ಶ್ರೀನಿವಾಸಃ ಕ್ಷುಧಾತುರಃ ॥273॥

ಶ್ರೀನಿವಾಸ ಉವಾಚ-

'ವೈವಾಹಿಕಜನಾಸ್ಸರ್ವೇ ಉಪವಾಸಪರಾಯಣಾಃ ।
ಅಹಂ ಚ ಮಮ ಪುತ್ರಶ್ಚ ಮಮ ಮಾತಾ ಸುರಾದಯಃ ॥274॥

ಭಾರ್ಯಾ ಪತಿವ್ರತಾ ಲಕ್ಷ್ಮೀಃ ಕ್ಷುಧಯಾ ಪರಿಮೋಹಿತಾ ।
ತೇಷಾಮನ್ನಂ ಮಹಾರಾಜ ಭಕ್ಷ್ಯಾಣಿ ವಿವಿಧಾನಿ ಚ ॥275॥

ಕುಂಕುಮೋದಕದಿಂದ ನೀರಾಜನವನ್ನು ಮಾಡುತ್ತಿದ್ದರು. ಹೀಗೆ ಮೆರವಣಿಗೆಯ ಮೂಲಕ ಮೂರು ರಾಜಬೀದಿ ಗಳನ್ನು ದಾಟಿ ಶ್ರೀನಿವಾಸನ ವಾಸಸ್ಥಾನವನ್ನಾಗಿ ನಿರ್ಮಿಸಿದ ಮನೆಯನ್ನು ದಿಬ್ಬಣವು ಪ್ರವೇಶಿಸಿತು. ಮದುಮಗನಾದ ಲಕ್ಷ್ಮೀಸಮೇತನಾದ ಶ್ರೀನಿವಾಸನನ್ನು ಆಕಾಶರಾಜನು ಮನೆಯೊಳಗೆ ಪ್ರವೇಶ ಮಾಡಿಸಿದನು. (271) ಉಳಿದವರೆಲ್ಲರಿಗೂ ಯಥೋಚಿತವಾದ ವಾಸಸ್ಥಾನವನ್ನು ವ್ಯವಸ್ಥೆ ಮಾಡಿದನು. ಹೀಗೆ ಸಾಯಂಕಾಲದ ಐದು ಗಳಿಗೆ (ಎರಡು ತಾಸಿನ) ಸಮಯವು ಅತೀತವಾಗುತ್ತಿರಲು, ಸರ್ವವನ್ನು ಸಜ್ಜೀಕರಿಸಿದ ಆಕಾಶರಾಜನ ತಮ್ಮನಾದ ತೊಂಡಮಾನ ರಾಜನನ್ನು ಕರೆದು ಶ್ರೀನಿವಾಸನು 'ವಿವಾಹಕ್ಕಾಗಿ ಆಗಮಿಸಿದ ಜನರೆಲ್ಲರೂ ಉಪವಾಸದಿಂದ ಬಳಲಿದ್ದು ಅತ್ಯಂತ ಹಸಿದಿರುವರು. ನಾನು, ನನ್ನ ತಾಯಿಯಾದ ಬಕುಲೆ, ಬ್ರಹ್ಮದೇವರು, ಪತಿವ್ರತೆಯಾದ ಲಕ್ಷ್ಮೀದೇವಿ, ನನ್ನ ಪರಿವಾರರಾದ ದೇವತೆಗಳು- ಹೀಗೆ ಎಲ್ಲರೂ ಹಸಿವೆಯಿಂದ ಕಂಗೆಟ್ಟಿರುವೆವು. ಅವರಿಗೆ ವಿಧವಿಧವಾದ ಭಕ್ಷ್ಯಗಳಿಂದ ಕೂಡಿದ ಅನ್ನವು ಅತ್ಯಂತ ಅವಶ್ಯಕವಾಗಿದ್ದು ಅದನ್ನು ಮಾಡಿಸು. ಊರ್ಧ್ವರೇತಸ್ಕರಾದ ಮುನಿಗಳಿಗೂ

ಕುರು ರಾಜನ್ ಸತ್ವರಸ್ತ್ವಮೃಷೀಣಾಮೂರ್ಧ್ವರೇತಸಾಮ್ ।
ಪಾಕಸ್ತ್ವತ್ರ ವಿಶೇಷೇಣ ಕರ್ತವ್ಯೋ ಜಾತವೇದಸಾ ॥276॥

ಮಮಾಪಿ ಪ್ರೇಷಿತವ್ಯಂ ಚ ಪಕ್ವಾನ್ನಂ ರಾಜಸತ್ತಮ' ।
ವಾಸುದೇವವಚಃಶ್ರುತ್ವಾ ತೋಂಡಮಾನೋಽಬ್ರವೀದ್ಧರಿಮ್ ॥277॥

ತೋಂಡಮಾನ ಉವಾಚ–

ಇದಂ ಶರೀರಂ ಜಗದೀಶ ರಾಜ್ಯಂ
ತ್ವದೀಯಮೇವಾತ್ರ ಮುಕುಂದಮೂರ್ತೇ ।
ನರೋ ಯಥಾ ಲೋಕಗತಿಂ ಪ್ರಯಾತಿ
ತಥಾ ಮಮಾನ್ನಂ ಪ್ರತಿಮುಹ್ಯಸಿ ತ್ವಮ್ ।278॥

ಏವಮುಕ್ತ್ವಾ ಮಹಾರಾಜ ಜಗಾಮ ಭವನಂ ಸ್ವಕಮ್ ।
ಕ್ಷಣೇನ ಕಾರಯಾಮಾಸ ಪಾಕಂ ರಾಜಾ ಹವಿರ್ಭುಜಾ ॥279॥

ಋಷೀಣಾಂ ವೇದವಿದುಷಾಂ ಸುರಾಣಾಂ ಸುರಯೋಷಿತಾಮ್।
ರಾಜಾಽನ್ನಮರ್ಪಯಾಮಾಸ ವಿಪ್ರಾಣಾಂ ಚಾನ್ನಕಾಂಕ್ಷಿಣಾಮ್ ॥280॥

ಭೋಜನಂ ಕೃತವಂತಸ್ತೇ ಭಕ್ಷ್ಯಾನ್ನರಸಸಂಯುತಮ್ ।
ಸ್ವಯಂ ಸಮೇತ್ಯ ರಾಜೇಂದ್ರೋಽಕಲ್ಪಯದ್ಭೋಜನಂ ಹರೇಃ ॥281॥

ವಾಸುದೇವಸ್ಯ ರಾಜೇಂದ್ರಃ ಪ್ರೇಷಯಾಮಾಸ ಸಾದರಮ್ ।

ಸಹ ಸಂಜೆಯ ಆಹಾರದ ವಿಶೇಷ ವ್ಯವಸ್ಥೆಯಾಗಬೇಕು. ಹೀಗೆ ಎಲ್ಲ ಪರಿವಾರಕ್ಕೂ ಸಹ ಅಗ್ನಿಯಿಂದ ಅಡಿಗೆಯನ್ನು ಮಾಡಿಸಿ ನನಗೂ ಸಹ ಪಕ್ವಾನ್ನವನ್ನು ಕಳುಹಿಸು' ಎಂದು ನುಡಿದನು.(277) ಆಗ ರಾಜಭ್ರಾತೃವಾದ ತೋಂಡಮಾನನು 'ಹೇ ಮುಕ್ತಾಧಿಪತಿಯಾದ ಸ್ವಾನಂದಮೂರ್ತಿಯಾದ ಶ್ರೀನಿವಾಸನೇ! ಈ ಶರೀರ, ರಾಜ್ಯ, ಸಮಸ್ತವೆಲ್ಲವೂ ನಿನ್ನದೇ ಆಗಿರುವದು. ಸ್ವರಮಣನಾದ ನಿನಗೆಲ್ಲಿಯ ಹಸಿವು-ತೃಷೆಗಳು? ಆದರೂ ಸಹ ಹೇಗೆ ಮನುಷ್ಯರು ನಡೆಯುವರೋ ಹಾಗೆ ಲೋಕರೀತಿಯನ್ನನುಸರಿಸಿ ನಮ್ಮ ಅನ್ನವನ್ನು ಸ್ವೀಕರಿಸುವವನಂತೆ– ಅದಕ್ಕಾಗಿ ಕಾತರಿಸುವವನಂತೆ ತೋರುತ್ತಾ, ನಮ್ಮನ್ನು ಮೋಹಗೊಳಿಸುವಿ' ಎಂದು ನುಡಿದು, ಅತೀ ಶೀಘ್ರದಲ್ಲಿ ತೊಂಡಮಾನ ರಾಜನು ಅಡುಗೆಯನ್ನು ಮಾಡಿಸಿ, ಅನ್ನವನ್ನು ಬಯಸುವ ಎಲ್ಲರಿಗೂ ಭೋಜನವನ್ನು ಮಾಡಿಸಿದನು. ಸ್ವತಃ ಆಕಾಶರಾಜನೇ ಶ್ರೀನಿವಾಸನಿಗೆ ನಾನಾವಿಧವಾದ ಭಕ್ಷ್ಯ, ಭೋಜ್ಯ ಪದಾರ್ಥಗಳಿಂದ ಕೂಡಿದ, ಜೇನುತುಪ್ಪ, ಉದ್ದು ಇವುಗಳಿಂದುಪೇತವಾದ ಷಡ್ರಸಾನ್ನವನ್ನು

ಅನ್ನಂ ಬಹುವಿಧಂ ಭಕ್ಷ್ಯಂ ಸಮಾಪಂ ಮಧುಸಂಯುತಮ್ ||282||

ಬುಭುಜೇ ಪುರುಷಶ್ರೇಷ್ಠಃ ಲಕ್ಷ್ಮ್ಯಾ ಚ ಪರಮೇಷ್ಠಿನಾ ।
ಮಾತ್ರಾ ಚ ಸಹಿತೋ ರಾಜನ್ ಸಶೇಷೋ ಗರುಡಾನ್ವಿತಃ ||283||

ದತ್ವಾ ವಸ್ತ್ರಾಣಿ ದಿವ್ಯಾನಿ ಜಾಮಾತುಃ ಶ್ರೀಪತೇರ್ನೃಪ ।
ಜಗಾಮ ಭವನಂ ರಾಜನ್ ವಾಸುದೇವಾಜ್ಞಯಾ ನೃಪಃ ||284||

ಗತೇ ರಾಜ್ಞಿ ಮಹಾರಾಜ ಶ್ರೀನಿವಾಸಸ್ಸುಖಾನ್ವಿತಃ ।
ನಿದ್ರಾಂ ಚಕಾರ ವಿಧಿವನ್ನಿರ್ನಿದ್ರೋಽಪಿ ಸುಖಾಸನೇ ||285||

ಏವಂ ಗತಾ ಚ ಸಾ ರಾತ್ರಿಃ ಪ್ರಭಾತಸಮಯೋಽಭವತ್ ।
ಪೂರ್ವದೇವಗುರೋರ್ವಾರಃ ಸಂಪ್ರಾಪ್ತೋ ದಶಮೀದಿನೇ ||286|

ಸಮುತ್ಥಿತೋ ವಾಸುದೇವಃ ಕೃತಮಂಗಲಮಜ್ಜನಃ ।
ವಸಿಷ್ಠಮಬ್ರವೀದ್ರಾಜನ್ ಭಗವಾನ್ ವಾಕ್ಯಮುತ್ತಮಮ್ ||287||

ಶ್ರೀ ಭಗವಾನುವಾಚ–

'ಮಯಾ ನ ಭೋಜನಂ ಕಾರ್ಯಂ ಲಕ್ಷ್ಮ್ಯಾ ಚ ಪರಮೇಷ್ಠಿನಾ।

ವ್ಯವಸ್ಥೆಮಾಡಿದನು. ಬ್ರಾಹ್ಮಣರು, ದೇವತೆಗಳು, ಇವರೆಲ್ಲರೂ ಭಕ್ಷ್ಯಾನ್ನಗಳಿಂದ ಕೂಡಿದ್ದ ಬಹು ರಸಸಂಯುತವಾದ ರುಚಿಕರವಾದ ಭೋಜನವನ್ನು ಮಾಡಿದ ಅನಂತರದಲ್ಲಿ ಭಗವಂತನೂ ಸಹ ಲಕ್ಷ್ಮೀ, ಬ್ರಹ್ಮ, ಬಕುಲಾ, ಶೇಷಗರುಡಾದಿಗಳಿಂದ ಸಹಿತನಾಗಿ, ರಾಜನಿಂದ ಕಳುಹಿಸಲ್ಪಟ್ಟ ಉತ್ತಮವಾದ ಆಹಾರವನ್ನು ಭೋಜನ ಮಾಡಿದನು. (293) ಅನಂತರದಲ್ಲಿ ಅಳಿಯರಾದ ಶ್ರೀನಿವಾಸನಿಗೆ ರಾಜನು ಉತ್ತಮ ವಸ್ತ್ರಗಳನ್ನು ಉಡುಗೊರೆಯಾಗಿ ಕೊಟ್ಟು, ನಂತರ ಅತನ ಅಪ್ಪಣೆಯನ್ನು ಪಡೆದು ಸ್ವಗೃಹಕ್ಕೆ ತೆರಳಿದನು. ಸುಖರೂಪನಾದ ಶ್ರೀನಿವಾಸನು ನಿದ್ರಾವಿಹೀನ ನಾದರೂ ಸಹ ಎಲ್ಲರಿಂದ ಒಡಗೂಡಿ ನಿದ್ರೆಯನ್ನು ಮಾಡಿದನು. (294)

ಶುಕ್ರವಾರ–ದಶಮೀ

ಈ ರೀತಿಯಾಗಿ ರಾತ್ರಿಯನ್ನು ಸುಖದಿಂದ ಕಳೆದು ಮರುದಿವಸ ಬೆಳಗಾಗಲು ಶುಕ್ರವಾರ ದಶಮಿಯ ದಿವಸದಂದು ಶ್ರೀನಿವಾಸನು ಎದ್ದು ಮಂಗಲ ಸ್ನಾನವನ್ನು ಮಾಡಿ ವಸಿಷ್ಠ ಮುನಿಯನ್ನು ಕರೆದು ಹೀಗೆ ಹೇಳಿದನು "ವಿವಾಹವನ್ನು ಮಾಡಿಕೊಳ್ಳುವ ನಾನು ಇವತ್ತು ಭೋಜನವನ್ನು ಮಾಡಬಾರದು. ಲಕ್ಷ್ಮೀದೇವಿಯು ಬ್ರಹ್ಮದೇವರು ಬಕುಲಾದೇವಿಯು ಪುರೋಹಿತರು – ಈ

ಮಾತ್ರಾ ಪುರೋಹಿತೇನಾಽಪಿ ವಯಂ ಪಂಚಾನ್ನವರ್ಜಿತಾಃ ॥288॥

ರಾಜ್ಞಸ್ತು ಭವನೇ ರಾಜಾ ರಾಜಪತ್ನೀ ಪತಿವ್ರತಾ ।
ಕನ್ಯಾ ಪುರೋಹಿತೋ ಭ್ರಾತಾ ತೇಽಪಿ ಪಂಚಾನ್ನವರ್ಜಿತಾಃ[37]" ॥289॥

ಏವಮುಕ್ತ್ವಾ ವಸಿಷ್ಠಂ ತು ಪುರೋಹಿತಮರಿಂದಮಃ ।
ಕುಬೇರಮಬ್ರವೀದ್ರಾಜನ್ ಶ್ರೀನಿವಾಸಸ್ಸತಾಂಗತಿಃ ॥290॥

ಶ್ರೀನಿವಾಸ ಉವಾಚ–

'ಗಚ್ಛ ಯಕ್ಷಗಣಾಧ್ಯಕ್ಷ ರಾಜಾನಂ ವಿಪ್ರಕಾರಣಾತ್' ।
ಸ ತಸ್ಯ ವಚನಂ ಶ್ರುತ್ವಾ ಯಕ್ಷರಾಡ್ ರಾಜಸತ್ತಮಮ್ ॥291॥

ಗತ್ವಾಽಽಹ ಭಾರತೀಂ ಪುಣ್ಯಾಂ ಶ್ರೀನಿವಾಸೇನ ಭಾಷಿತಾಮ್ ।

ಕುಬೇರ ಉವಾಚ–

ಭೋಜನಂ ತ್ವೃಷಿಮುಖ್ಯಾನಾಂ ಕರ್ತವ್ಯಂ ಪೂರ್ವಮೇವ ಹಿ ।
ಮಹೂರ್ತಕಾಲೋ ರಾತ್ರೌ ತು ನಾಡಿಕಾನಾಂ ತ್ರಯೋದಶ ॥292॥

ತದಾಽಸಾಧ್ಯಂ ಮಹಾರಾಜ ರಾತ್ರೌ ಬ್ರಾಹ್ಮಣಭೋಜನಮ್ ।
ಇತಿ ಸಂದಿಶ್ಯ ರಾಜಾನಂ ಕುಬೇರಃ ಪುನರಾಗತಃ ॥293।

ತಥಾ ಚಕಾರ ರಾಜರ್ಷಿರ್ಭೋಜನಂ ಬ್ರಹ್ಮವಾದಿನಾಮ್ ।
ದತ್ವಾ ಚ ದಕ್ಷಿಣಾಂ ನಿಷ್ಕಂ ತಾಂಬೂಲಂ ಚ ದ್ವಿಜನ್ಮನಾಮ್ ॥294॥

ಏವರು ಇವತ್ತು ಅನ್ನ ವರ್ಜಿತರಾಗಿದ್ದೇವೆ ಅದರಂತೆ ಆಕಾಶರಾಜನ ಮನೆಯಲ್ಲೂ ಸಹ ಆಕಾಶರಾಜ, ಅವನ ಪತ್ನಿಯಾದ ಧರಣೀದೇವಿ, ಕನ್ಯೆಯಾದ, ಪದ್ಮಾವತಿ ಹಾಗೂ ಭ್ರಾತೃರಾದ ವಸುದಾನನೂ ಸಹ ಅನ್ನ ವರ್ಜಿತರಾಗಿರುತ್ತಾರೆ" ಈ ರೀತಿಯಾಗಿ ಹೇಳಿ (290) ಕುಬೇರನನ್ನು ಕರೆದು ವಿವಾಹವಾಗುವದಕ್ಕಿಂತ ಪೂರ್ವದಲ್ಲಿಯೇ ಋಷಿ–ಮುನಿಗಳೆಲ್ಲರಿಗೂ ಭೋಜನ ಮಾಡಿಸಬೇಕೆಂದು ರಾತ್ರಿಯಲ್ಲಿ ಹರಿಮೂರು ನಾಡಿಗಳ ಅನಂತರದಲ್ಲಿ ಮೂಹೂರ್ತ ವಿರುವದರಿಂದ ಆ ಸಮಯದಲ್ಲಿ ಬ್ರಾಹ್ಮಣ ಭೋಜನವು ಅಸಾಧ್ಯವಾದ್ದ ರಿಂದ ಈಗಲೇ ಭೋಜನವನ್ನು ಮಾಡಿಸಬೇಕೆಂದು ಆಕಾಶರಾಜನಿಗೆ ಹೇಳಿಕಳಿಸಿದನು. ಅದರಂತೆ ಆಕಾಶರಾಜನು ಸಹ ಎಲ್ಲರಿಗೂ

37. ಕನ್ಯಾವರೌ ತಯೋರ್ಮಾತಾಪಿತರೌ ಚ ಪುರೋಧಸೌ । ಲಾಜಾಹೋಮಾತ್ ಪುರಾ ಕಶ್ಚಿತ್ ಭೋಜನಂ ನ ಸಮಾಚರೇತ್"ಇತಿ॥

ಏವಂ ಭೂತೇ ಮಹೀಪಾಲಃ ಕಲ್ಯಾಣದಿವಸೇ ಹರೇಃ ।
ಭೃಗುವಾರೇ ದಶಮ್ಯಾಂ ತು ಸಾಯಂಕಾಲೇ ವಿಯನ್ನೃಪಃ ॥295॥

ಚತುರಂಗಬಲಂ ಸರ್ವಂ ನಿಧಾಯ ಪುರತಸ್ಸುತಮ್ ।
ವಸುದಾನಂ ಮಹಾರಾಜಃ ತೋಂಡಮಾನಂ ಚ ಸೋದರಮ್ ॥296॥

ಪುರೋಹಿತಂ ಪುರಸ್ಕೃತ್ಯ ಸುಹೃತ್ಸಂಬಂಧಿಬಾಂಧವೈಃ ।
ಐರಾವತಂ ಮಹಾನಾಗಂ ರತ್ನಕಂಬಲಭೂಷಿತಮ್ ॥297॥

ಮೇಘರಾಡ್ವರ್ಣಸಂಯುಕ್ತಂ ಬದ್ಧಘಂಟಾಕುಲಾನ್ವಿತಮ್ ।
ಚತುರ್ದಂತಂ ಮಹಾರಾವಂ ಕರ್ಣಬದ್ಧಸುಚಾಮರಮ್ ॥298॥

ಪುರಂದರಂ ಪುರಸ್ಕೃತ್ಯ ಗಜಮೈರಾವತಂ ನೃಪಃ ।
ಆಹ್ವಾನಕಾರಣಾತ್ ಪ್ರಾಪ್ತಃ ಶ್ರೀನಿವಾಸಾಲಯಂ ತದಾ ॥299॥

ತಸ್ಮಿನ್ಮಹಾಗೃಹೇ ರಾಜನ್ನಯುತಸ್ತಂಭಶೋಭಿತಾಮ್ ।
ಸಭಾಂ ಚಕಾರ ರತ್ನಾಢ್ಯಾಂ ವಿಶ್ವಕರ್ಮಾ ವಿಭೋಃಪ್ರಿಯಾಮ್ ॥300॥

ಭೋಜನವನ್ನು ಮಾಡಿಸಿ ಬ್ರಾಹ್ಮಣರಿಗೆ ಅವರವರಿಗೆ ಉಚಿತವಾದ ರೀತಿಯಲ್ಲಿ ತಾಂಬೂಲ ದಕ್ಷಿಣಾದಿಗಳನ್ನು ಕೊಟ್ಟನು.(295)

### ವರಪೂಜೆಗಾಗಿ ಆಹ್ವಾನ

ಈ ಪ್ರಕಾರಕವಾಗಿ ಪರಮಾತ್ಮನ ವಿವಾಹ ಮಹೋತ್ಸವ ದಿನದಂದು ಆಕಾಶರಾಜನು ಶುಕ್ರವಾರದ ದಶಮೀದಿವಸದಂದು ಸಂಜೆಯಾಗುತ್ತಿರಲು ಸಮಸ್ತಪರಿವಾರವನ್ನು ಮುಂದಿಟ್ಟುಕೊಂಡು ಪುತ್ರನಾದವಸುದಾನ, ಸೋದರನಾದ ತೊಂಡಮಾನ ಮಹಾರಾಜ ಮತ್ತು ಪುರೋಹಿತರನ್ನು ಮುಂದೆ ಮಾಡಿಕೊಂಡು ಸರ್ವಬಂಧು ಬಾಂಧವರಿಂದ ಕೂಡಿಕೊಂಡು ರತ್ನಕಂಬಲಭೂಷಿತವಾದ, ಗಂಟೆಗಳ ಧ್ವನಿಯನ್ನು ಮಾಡುತ್ತಿದ್ದ, ಬಿಳಿಯ ಮೋಡದಂತೆ ಕಾಣುತ್ತಿದ್ದ, ಹೊಳೆಯುವ ನಾಲ್ಕು ದಂತದಿಂದ ಯುಕ್ತವಾದ ಐರಾವತವೆಂಬ ಗಜರಾಜನನ್ನು ನಾನಾ ವಿಧವಾಗಿ ಅಲಂಕರಿಸಿಕೊಂಡು ಶ್ರೀನಿವಾಸನನ್ನು ಆಹ್ವಾನಮಾಡುವದರಗೋಸ್ಕರವಾಗಿ, ಇಂದ್ರದೇವನನ್ನು ಮುಂದಿಟ್ಟುಕೊಂಡು, ಶ್ರೀನಿವಾಸನ ಬಿಡಾರಕ್ಕೆ ಬಂದನು. (299) ಬ್ರಹ್ಮ ದೇವರೇ ಮೊದಲಾದ ಸಮಸ್ತ ದೇವತೆಗಳು, ವಿಶ್ವಾಮಿತ್ರ, ಅತ್ರಿ, ಭರದ್ವಾಜ, ವಸಿಷ್ಠ, ಗೌತಮರೇ ಮೊದಲಾದ ಉತ್ತಮರಾದ ಮುನಿಗಳು, ದುರ್ವಾಸಾದಿ ಮಹರ್ಷಿಗಳು, ವಾಲ್ಮೀಕಿ, ವೈಖಾನಸರಾದ ಮಾರ್ಕಾಂಡೇಯ,

ತತ್ರಾಸೀನಾ ಮಹಾಭಾಗಾ ಬ್ರಹ್ಮಾದ್ಯಾಸ್ಸರ್ವದೇವತಾಃ ।
ವಿಶ್ವಾಮಿತ್ರೋ ಭರದ್ವಾಜೋ ವಸಿಷ್ಠೋ ಗೌತಮಸ್ತಥಾ ॥301॥

ಭೃಗುರತ್ರಿಸ್ಸ್ವಯಂಪಾಕೋ ವಾಲ್ಮೀಕಿರ್ಮಿಥಿಲೇಶ್ವರ ।
ವೈಖಾನಸಾಸ್ಸದುರ್ವಾಸಾಃ ಮಾರ್ಕಂಡೇಯೋಽಥ ಗಾಲವಃ ॥302॥

ದಧೀಚಿಶ್ಚ್ಯವನೋ ರಾಜನ್ ಸನಕಶ್ಚ ಸನಂದನಃ ।
ಏತೇ ಶ್ರೇಷ್ಠತಮಾ ಲೋಕೇ ಮುನಯೋ ವೀತಕಲ್ಮಷಾಃ ॥303॥

ಜಟಾಮಕುಟಭೂಷಾಂಗಾಃ ಜ್ವಲತ್ಕೃಷ್ಣಾಜಿನಾಂಬರಾಃ ।
ಕಶ್ಯಪಂ ತು ಪುರಸ್ಕೃತ್ಯ ಸಮಾಸೀನಾಃ ಸಭಾಂತರೇ ॥304॥

ತನ್ಮಧ್ಯೇ ವಾಸುದೇವಸ್ತು ರತ್ನಕಂಬಲಸಂಸ್ಥಿತಃ ।
ಕೃತಾಂಜಲಿಪುಟಸ್ತಸ್ಥೌ ಬ್ರಹ್ಮಾ ಲೋಕಪಿತಾಮಹಃ ॥305॥

ತತ್ಸಭಾದ್ವಾರಮಾಸಾದ್ಯ ರಾಜಾ ಸತ್ಯಪರಾಕ್ರಮಃ ।
ಪುರೋಹಿತಂ ಪುರಸ್ಕೃತ್ಯ ಸಂಪ್ರಾಪ್ತಃ ಸನ್ನಿಧಿಂ ಹರೇಃ ॥306॥

ಸಮುತ್ತಸ್ಥೌ ವಾಸುದೇವೋ ದೃಷ್ಟ್ವಾ ರಾಜಾನಮಾಗತಮ್ ।
ಪರಿರಂಭಣಮಾಸಾದ್ಯ ಭಗವಾನ್ ವಾಕ್ಯಮಬ್ರವೀತ್ ॥307॥

ಶ್ರೀನಿವಾಸ ಉವಾಚ–

'ಭವಾನ್ ಶ್ರೇಷ್ಠತಮೋಽತ್ಯಂತಂ ವೃದ್ಧೋಽಸಿ ನೃಪಸತ್ತಮ ।
ಕಿಮರ್ಥಮಾಗತೋಽಸಿ ತ್ವಂ ಮದ್ಗೃಹಂ ರಾಜಸತ್ತಮ ॥308॥

ಗಾಲವ, ದಧೀಚಿ, ಚ್ಯವನ, ಸನಕ, ಸನಂದನರೇ ಮೊದಲಾದ ಲೋಕದಲ್ಲಿ ಅತ್ಯಂತ ಶ್ರೇಷ್ಠರಾದ, ನಿಷ್ಕಲ್ಮಶರಾದ ಮುನಿಗಳು ತಮ್ಮ ತಮ್ಮ ಆಸನಗಳಲ್ಲಿ ಆಸೀನರಾಗಿದ್ದರು. ಜಟಾಧಾರಿಗಳಾದ, ಹೊಳೆಯುವ ಕೃಷ್ಣಾಜಿನಗಳಿಂದ ಅಲಂಕೃತರಾದ ಋಷಿಮಂಡಲವು ಕಶ್ಯಪರನ್ನು ಮುಂದಿಟ್ಟುಕೊಂಡು ಸಭಾಮಧ್ಯದಲ್ಲಿ ಆಸೀನವಾಗಿದ್ದಿತು. ಋಷಿಮುನಿ ದೇವತೆಗಳ ಮಧ್ಯದಲ್ಲಿ ವಾಸುದೇವನು ರತ್ನಗಂಬಳಿಯಲ್ಲಿ ಕುಳಿತಿದ್ದನು. ಅಂಜಲಿಬದ್ಧನಾದ ಬ್ರಹ್ಮನು ಆತನ ಸನಿಹದಲ್ಲಿ ಇದ್ದನು. (305) ಆಕಾಶರಾಜನು ಹಿಗೆ ವಿರಾಜಿತವಾದ ಸಭೆಯ ಮಹಾದ್ವಾರಕ್ಕೆ ಬಂದು ಪುರೋಹಿತರನ್ನು ಮುಂದೆ ಮಾಡಿಕೊಂಡು ಶ್ರೀನಿವಾಸನ ಬಳಿಗೆ ಬಂದನು. ಆಗ ಶ್ರೀನಿವಾಸನು ಮೇಲಕ್ಕೆದ್ದು ಆಲಿಂಗಿಸಿಕೊಂಡು ವೃದ್ಧರಾದ ಆಕಾಶರಾಜನನ್ನು ಬರಮಾಡಿಕೊಂಡನು. ಆಗ ಶ್ರೀನಿವಾಸನು ಆಕಾಶರಾಜನನ್ನು ಕುರಿತು 'ಹೇ ರಾಜನೇ! ಬಾಂಧವ್ಯದಿಂದ ನನಗೆ ಮಾವನೂ

ವಿಷ್ವಕ್ಸೇನಂ ತು ರಾಜೇಂದ್ರ ಮಮಾಽಹ್ವಾನೇ ನಿಯೋಜಯ' ।
ವದತ್ಯೇವಂ ಶ್ರೀನಿವಾಸೇ ಪುರೋಹಿತಮಭಾಷತ ॥309॥

ರಾಜೋವಾಚ–

'ವಿಲಂಬಃ ಕ್ರಿಯತೇ ಕಸ್ಮಾತ್ ಪೂಜಾಂ ಕುರು ರಮಾಪತೇಃ' ।
ಸ ರಾಜವಚನಂ ಶ್ರುತ್ವಾ ಧರಣೀಂ ವಾಕ್ಯಮಬ್ರವೀತ್ ॥310॥

ವಸಿಷ್ಠ ಉವಾಚ–

'ಅರುಂಧತೀಂ ಪುರಸ್ಕೃತ್ಯ ಕುರು ಪೂಜಾಂ ರಮಾಪತೇಃ' ।
ಸಾ ಸಂಭ್ರಮಾತ್ ಸಮುತ್ಥಾಯ ಬಾಷ್ಪಸಂದಿಗ್ಧಲೋಚನಾ ॥311

ಮುಖಂ ವಿಲೋಕ್ಯ ರಾಜೇಂದ್ರ ಕೃಷ್ಣಸ್ಯ ನೃಪವಲ್ಲಭಾ ।
ಮತ್ವಾ ಕೃತಾರ್ಥಮಾತ್ಮಾನಮಾನಂದಪರಿಪೂರಿತಾ ॥312॥

ಸಲಜ್ಜಾ ಪೂಜಯಾಮಾಸ ಸಚ್ಚಿದಾನಂದವಿಗ್ರಹಮ್ ।
ತಾಂ ದೃಷ್ಟ್ವಾ ಯೋಷಿತಸ್ಸರ್ವಾ ವಿಸ್ಮಯಾಕುಲಮಾನಸಾಃ ॥
ಪ್ರಾಹುಃ ಪ್ರಹೃಷ್ಟಹೃದಯಾ ಧರಣೀಂ ರಾಜವಲ್ಲಭಾಮ್ ॥313॥

ಯೋಷಿತ ಊಚುಃ–

'ಕಿಂ ತ್ವಯಾ ಚರಿತಂ ಪುಣ್ಯಂ ಪೂರ್ವಜನ್ಮನಿ ಹೇ ಧರೇ ।

ಮತ್ತು ವಯಸ್ಸಿನಿಂದ ಜ್ಯೇಷ್ಠನೂ ಆದ್ದರಿಂದ ನನ್ನನ್ನು ಕರೆಯಲು ನೀನೇ ಸ್ವತಃ ಬರುವದೇಕೆ? ನನ್ನನ್ನು ಕರೆಯಲು ವಿಷ್ವಕ್ಸೇನನನ್ನು ನಿಯೋಜಿಸು' ಎಂದು ನುಡಿದು ಗೌರವವನ್ನು ಸೂಚಿಸಿದನು.(309)

### ವರಪೂಜೆ

ಶ್ರೀನಿವಾಸನು ಹೀಗೆ ನುಡಿಯುತ್ತಿರಲು ಆಕಾಶರಾಜನು ವಸಿಷ್ಠರನ್ನು ಕುರಿತು ಆದಷ್ಟು ಬೇಗದಲ್ಲಿ ಶ್ರೀನಿವಾಸನ ಪೂಜೆಯನ್ನು ಪ್ರಾರಂಭಿಸಬೇಕೆಂದು ಪ್ರಾರ್ಥಿಸಿದಾಗ ವಸಿಷ್ಠರು ರಾಜಪತ್ನಿಯಾದ ಧರಣಿದೇವಿಯನ್ನು ಕುರಿತು 'ಅರುಂಧತಿಯನ್ನು ಮುಂದಿಟ್ಟುಕೊಂಡು ಶ್ರೀನಿವಾಸನ ಪೂಜೆಯನ್ನು ಪ್ರಾರಂಭಿಸು' ಎಂದು ತಿಳಿಸಿದರು. ಆನಂದಭಾಷ್ಪ ಪೂರಿತವಾದ ನೇತ್ರಗಳಿಂದ ಕೂಡಿದ ಲಜ್ಜಾನ್ವಿತಳಾದ ಧರಣೀದೇವಿಯು ಅರುಂಧತಿಯನ್ನು ಮುಂದಿಟ್ಟುಕೊಂಡು ಸಚ್ಚಿದಾನಂದ ಸ್ವರೂಪಿಯಾದ ಶ್ರೀನಿವಾಸನನ್ನು ಪೂಜೆಗೈದಳು. (313) ಸಮಸ್ತ ಸ್ತ್ರೀಸಮೂಹ

ವಾಸುದೇವಾರ್ಚನವಿಧೌ ನಿರ್ಮಿತಾ ಪರಮೇಷ್ಠಿನಾ ॥314॥

ಯಾ ತ್ವಮಿತ್ಥಂ ಪೂಜಯಸಿ ಸಾಕ್ಷಾನ್ನಾರಾಯಣಂ ಸ್ವಯಮ್'।
ಇತ್ಯೇವಂ ಸಂಸ್ತುತಾ ದೇವೀ ಧರಣೀ ರಾಜವಲ್ಲಭಾ ॥315॥

ತೈಲಕರ್ಪೂರಗಂಧೇನ ಚಂದನೇನ ಸುಗಂಧಿನಾ ।
ಅರ್ಚಯಾಮಾಸ ಕಲ್ಯಾಣೀ ಶ್ರೀನಿವಾಸಂ ಸುರೇಶ್ವರಮ್ ॥316॥

ವಸ್ತ್ರೈರ್ನಾನಾವಿಧೈರ್ಮುಕ್ತಾರತ್ನನಿರ್ಮಿತಭೂಷಣೈಃ ।
ಪುರೋಹಿತವಚಃಶ್ರುತ್ವಾ ಪುರಾಣಪುರುಷೋತ್ತಮಮ್ ॥317॥

ಗಜಮಾರೋಪಯದ್ರಾಜಾ ಜಾಮಾತರಮನಾಮಯಮ್ ।
ಸಹಿತೋ ವಾಸುದೇವಸ್ತು ಬ್ರಹ್ಮಣಾ ಶಂಭುನಾ ತಥಾ ॥318॥

ಕುಬೇರೇಣಾಹಿರಾಜೇನ ಗರುಡೇನಾಗ್ನಿನಾ ತಥಾ ।
ವಾಯುನಾ ವರುಣೇನಾಪಿ ಯಮೇನ ಮರುತಾಂ ಗಣೈಃ ॥319॥

ಅಷ್ಟಭಿರ್ವಸುಭಿಶ್ಚಾಪಿ ರುದ್ರಾದಿತ್ಯಪುರೋಗಮೈಃ ।
ಸ್ವಸ್ತ್ರೀಭಿಃ ಸಹಿತೈಃ ಸರ್ವೈಃ ಸಹ ಶ್ರೀವೇಂಕಟೇಶ್ವರಃ ॥320॥

ವಸಿಷ್ಠಾದಿಮುನಿಶ್ರೇಷ್ಠೈಃ ಸದಾರೈಸ್ಸಸುತೈಸ್ತಥಾ ।
ನಾನಾಜನಸಮಾಕೀರ್ಣಂ ರತ್ನತೋರಣಮಂಡಿತಮ್ ॥321॥

ವೆಲ್ಲವೂ ಸಾಕ್ಷಾತ್ ಶ್ರೀಮನ್ನಾರಯಣನನ್ನೇ ಪೂಜಿಸುತ್ತಿರುವ ಆಕೆಯ ಧನ್ಯತೆಯನ್ನು ಕಂಡು 'ಹೇ ಧರಣೀದೇವಿಯೇ! ಪೂರ್ವ ಜನ್ಮದಲ್ಲಿ ನೀನು ಮಾಡಿರುವ ಪುಣ್ಯವಾದರೂ ಎಂತಹದು? ಭಗವಂತನಾದ ಶ್ರೀನಿವಾಸನನ್ನು ಪೂಜಿಸುವದಕ್ಕಾಗಿಯೇ ನೀನು ಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿರುವಿ. ಪುಣ್ಯಶೀಲೆಯಾದ ನೀನು ಸಾಕ್ಷಾನ್ನಾರಾಯಣನನ್ನೇ ಪೂಜಿಸುತ್ತಿರುವಿ. ನೀನು ಅತ್ಯಂತ ಧನ್ಯಳು' ಎಂಬುದಾಗಿ ನುಡಿದರು. (315) ಸುಗಂಧ ತೈಲಗಳಿಂದ ನಾನಾವಿಧವಾದ ಮುತ್ತು-ರತ್ನಗಳಿಂದ ನಿರ್ಮಿತವಾದ ಭೂಷಣಗಳಿಂದ ಪುರೋಹಿತರು ಹೇಳುವಂತೆ ಪುರಾಣ ಪುರುಷೋತ್ತಮನಾದ ಶ್ರೀನಿವಾಸನನ್ನು ಧರಣಿದೇವಿಯು ಭಕ್ತಿಪುರಸ್ಸರವಾಗಿ ಅರ್ಚಿಸಿದಳು.(317) ಅನಂತರದಲ್ಲಿ ಆಕಾಶರಾಜನು ತನ್ನ ಅಳಿಯನಾದ ನಿರಾಮಯನಾದ ಶ್ರೀನಿವಾಸನನ್ನು ಗಜದ ಮೇಲೆ ಕುಳ್ಳರಿಸಿದನು. ಪತ್ನಿಸಮೇತರಾದ ಬ್ರಹ್ಮ, ರುದ್ರ, ಕುಬೇರ, ಶೇಷ, ಗರುಡ, ಅಗ್ನಿ, ವಾಯು, ವರುಣ, ಯಮ, ಮುಂತಾದ ದೇವತೆಗಳಿಂದ, ದೇವಾನುದೇವತೆಗಳು, ಅಷ್ಟ ವಸುಗಳು, ಏಕಾದಶ ರುದ್ರರೂ,

ಜಗಾಮ ರಾಜಭವನಂ ನಾನಾಲಂಕಾರಮಂಡಿತಮ್ ।
ಮಹಾವಾದ್ಯಸ್ವನೈರ್ಯುಕ್ತಂ ದೀಪಾಯುತವಿದೀಪಿತಮ್ ॥322॥

ಜಾಮಾತೃಸಹಿತೋ ರಾಜಾ ದ್ವಾರತೋರಣಸನ್ನಿಧೌ ।
ಚತುರಂಗಬಲಂ ಮುಕ್ತ್ವಾ ಗೃಹಾಂತರ್ಗಂತುಮುದ್ಯತಃ ॥323॥

ತತ್ರಾಂತರೇ ಶ್ರೀನಿವಾಸಂ ನೀರಾಜಯಿತುಮಾಗತಾ ।
ತೋಂಡಮಾನ್ನೃಪತೇರ್ಭಾರ್ಯಾಕುಂಕುಮೋದಕಭಾಜನಮ್ ॥324॥

ಸಮಾದಾಯಾಶು ಕಲ್ಯಾಣೇ ವಾಸುದೇವಮಪೂಜಯತ್ ।
ತತಃ ಪಶ್ಚಾಚ್ಛ್ರೀನಿವಾಸಃ ಪ್ರಾವಿಶದ್ರಾಜಮಂದಿರಮ್ ॥325॥

ದ್ವಾರಾಣ್ಯತೀತ್ಯಾಥ ಬಹೂನಿ ದೇವೋ
ರಾಜ್ಞಾ ಸಮೇತಃ ಪ್ರವಿವೇಶ ರಾಜನ್ ।
ರತ್ನಾಸನೇ ರಾಜವಿನಿರ್ಮಿತೇ ಹರೀ
ರರಾಜ ರಾಜೀವಸಮಾನನೇತ್ರಃ ॥326॥

ಚತುಸ್ತಂಭಾಂ ರತ್ನವೇದೀಮಧಿಷ್ಠಾಪ್ಯ ಖಗಧ್ವಜಮ್ ।
ಪರಿವಾರ್ಯ ತಮಾತಸ್ಥುಃ ಮುನಯೋ ವೀತಕಲ್ಮಷಾಃ ॥327॥

ಬ್ರಹ್ಮಾಣಮಗ್ರತಃ ಕೃತ್ವಾ ಸರ್ವೇ ದೇವಾ ಯಥಾಸುಖಮ್ ।
ಸ್ವರ್ಣಾಸನೇ ಸಮಾಸೀನಾಃ ಪಶ್ಯಂತೋ ನಯನೋತ್ಸವಮ್ ॥328॥

ದ್ವಾದಶಾದಿತ್ಯರು, ವಸಿಷ್ಠಾದಿ ಋಷಿಗಳು, ಬಗೆಬಗೆಯಾದ ಇನ್ನೂ ಅನೇಕ ಜನ ಸಮೂಹ – ಇವರುಗಳಿಂದ ಕೂಡಿದ ಶ್ರೀನಿವಾಸನು ನಾನಾ ವಿಧವಾದ ಅಲಂಕಾರ ಗಳಿಂದ ಶೃಂಗರಿಸಲ್ಪಟ್ಟಿರುವ, ಹತ್ತು ಸಾವಿರ ದೀಪಗಳಿಂದ ಅಲಂಕೃತವಾದ ಆಕಾಶರಾಜನ ಮಂದಿರಕ್ಕೆ ಮಹಾ ಮಹಾ ವಾದ್ಯವೈಭವಗಳಿಂದ ವಿಜೃಂಭಿತನಾಗಿ ಬಂದನು. (322)

### ವಿವಾಹ ಮಂದಿರ ಪ್ರವೇಶ

ಮದುಮಗನಿಂದ ಯುಕ್ತನಾದ ಆಕಾಶರಾಜನು ಚತುರಂಗ ಸೈನ್ಯವನ್ನು ಬಾಗಿಲಲ್ಲಿ ನಿಲ್ಲಿಸಿ, ಮನೆಯೊಳಗೆ ಪ್ರವೇಶಿಸಲು ಮುಂದಾದನು. ಆಗಮಿಸಿದ ಶ್ರೀನಿವಾಸನನ್ನು ತೊಂಡಮಾನ ರಾಜನ ಪತ್ನಿಯು ಕುಂಕುಮೋದಕಗಳಿಂದ ನೀರಾಜನವನ್ನು ಮಾಡಿ ಪೂಜಿಸಿದಳು. ಅನಂತರದಲ್ಲಿ ಶ್ರೀನಿವಾಸನು ಬಹುದ್ವಾರಗಳಿಂದ ಸಹಿತವಾದ ಅರಮನೆಗೆ ಆಕಾಶರಾಜಸಹಿತನಾಗಿ ಪ್ರವೇಶ

ತತಃ ಸ ರಾಜಶಾರ್ದೂಲಃ ಕೃತಮಂಗಲಮಜ್ಜನಃ ।
ಸಾಽಪಿ ಸ್ನಾತ್ವಾ ಮಹಾರಾಜ್ಞೀ ತೈಲೇನಾತಿಸುಗಂಧಿನಾ ॥329॥

ಅಲಂಕಾರೈರಲಂಕೃತ್ಯ ಸ್ವಾತ್ಮಾನಂ ರಾಜವಲ್ಲಭಾ ।
ಸ್ವಾಮಿಪುಷ್ಕರಣೀತೋಯಂ ಹೇಮಕುಂಭಾಭಿಪೂರಿತಮ್ ॥330॥

ಆನಯಿತ್ವಾ ಬ್ರಾಹ್ಮಣೈಶ್ಚ ಹರೇಃ ಪಾದಾವನೇಜನಮ್ ।
ಸಂಕಲ್ಪ್ಯ ವಿಧಿವದ್ರಾಜಾ ಕನ್ಯಾದಾನಾಂಗಪೂರ್ವಕಮ್ ॥331॥

ತತಶ್ಚಕಾರ ರಾಜೇಂದ್ರ ಮಧುಪರ್ಕಂ ಪುರೋಹಿತಃ ।
ಪುರೋಹಿತೋಕ್ತಮಂತ್ರೇಣ ತಸ್ಯ ಪಾದಾವನೇಜನಮ್ ॥332॥

'ಸಹಸ್ರಶೀರ್ಷಾ ಪುರುಷ' ಇತಿ ಮಂತ್ರಂ ಸಮುಚ್ಚರನ್ ।
ಧರಣ್ಯಾ ಸ್ರಾವಿತೈಃ ಕೃತ್ವಾ ಸ್ವಾಮಿತೀರ್ಥಜಲೈಃ ಶುಭೈಃ ॥333॥

ಹರಿಪಾದೋದಕಂ ಪುಣ್ಯಂ ದಧಾರಾಕಾಶರಾಟ್ ಸ್ವಯಮ್ ।
ಭಾರ್ಯಾಂ ಪುತ್ರಂ ಭ್ರಾತರಂ ಚ ಭವನಂ ಕೋಶಮೇವ ಚ ॥334॥

ಮಾಡಿದನು.(325) ವಿವಾಹಾರ್ಥವಾಗಿಯೇ ನಿರ್ಮಿತವಾದ ರತ್ನಪೀಠದಲ್ಲಿ ವಿರಾಜಮಾನನಾಗಿ ಶ್ರೀನಿವಾಸನು ಎಲ್ಲರ ಮಧ್ಯದಲ್ಲಿ ಪ್ರಕಾಶಿಸಿದನು. ನಾಲ್ಕು ಸ್ಥಂಭಗಳುಳ್ಳ ಮಂಟಪ ಮಧ್ಯದಲ್ಲಿ ಗರುಡಧ್ವಜನನ್ನು ಕುಳ್ಳರಿಸಿ ಋಷಿ-ಮುನಿಗಳೆಲ್ಲರೂ ಶ್ರೀನಿವಾಸನನ್ನು ಮುತ್ತಿಕೊಂಡರು. ಚತುರ್ಮುಖನನ್ನು ಮುಂದೆ ಮಾಡಿಕೊಂಡು ದೇವತೆಗಳು ತಮ್ಮ ತಮ್ಮಗಳಿಗೆ ಉಚಿತವಾದ ಸ್ವರ್ಣ, ರತ್ನಖಚಿತವಾದ ಪೀಠಗಳಲ್ಲಿ ವಿರಾಜಮಾನರಾದರು. (329) ಆಕಾಶರಾಜನು ಮಂಗಳಸ್ನಾನವನ್ನು ಮಾಡಿದ ಮೇಲೆ ಧರಣಿದೇವಿಯು ಸಹ ಸುಗಂಧ ತೈಲದಿಂದ ಮಂಗಲಾಭ್ಯಂಜನವನ್ನು ಮಾಡಿಕೊಂಡಳು. ಅಲಂಕಾರ ಭರಿತಳಾಗಿ ಚಿನ್ನದ ಕುಂಭದಲ್ಲಿ ಪರಿಪೂರಿತವಾದ ಸ್ವಾಮಿಪುಷ್ಕರಣಿ ಉದಕವನ್ನು ಬ್ರಾಹ್ಮಣರಿಂದ ತರಿಸಿ, ಶ್ರೀಹರಿಯ ಪಾದಪ್ರಕ್ಷಾಲನವನ್ನು ಮಾಡಲು ಸಿದ್ಧಳಾದಳು. (330)

### ಕನ್ಯಾದಾನಾಂಗ ಸಂಕಲ್ಪ-ಪಾದಪ್ರಕ್ಷಾಲನ-ಮಧುಪರ್ಕ

ಆಕಾಶರಾಜನು ಕನ್ಯಾದಾನಾಂಗ ಪೂರ್ವಕವಾಗಿ ವಿಧಿಪೂರ್ವಕವಾಗಿ ಸಂಕಲ್ಪವನ್ನು ಮಾಡಿ, ಪುರೋಹಿತರಿಂದ ಉಕ್ತವಾದ ಮಂತ್ರಗಳಿಂದ ಅವರಿಗೆ ಉಕ್ತವಾದ ರೀತಿಯಲ್ಲಿ ಮಧುಪರ್ಕವನ್ನು ಮಾಡಿ, ಧರಣಿದೇವಿಯಿಂದ ಸುರಿಸಲ್ಪಟ್ಟ ಸ್ವಾಮಿತೀರ್ಥಜಲದಿಂದ ಪುರುಷಸೂಕ್ತವನ್ನು ಪಠಿಸುತ್ತಾ ಪರಮಾತ್ಮನ ಪಾದಪ್ರಕ್ಷಾಲನೆಯನ್ನು ಮಾಡಿದನು. (333) ಬಹು ಪುಣ್ಯಕರವಾದ ಭಗವಂತನ

ಗಜಾಗಾರಂ ವಾಜಿಗೃಹಂ ವಸ್ತ್ರಾಗಾರಂ ಚ ತಜ್ಜಲೈಃ ।
ಮಾರ್ಜಯಾಮಾಸ ರಾಜೇಂದ್ರಃ ಶ್ರೀನಿವಾಸಪರಾಯಣಃ ॥335॥

ರಾಜೋವಾಚ-

'ಅದ್ಯ ಮೇ ಸಫಲಂ ಜನ್ಮ ಜೀವಿತಂ ಚ ಸುಜೀವಿತಮ್ ।
ಅದ್ಯ ಮೇ ಪಿತರಸ್ತುಷ್ಟಾಃ ವಾಸುದೇವಪದೋದಕಾತ್' ॥336॥

ಏವಮುಕ್ತ್ವಾ ಮಹಾರಾಜಃ ಕನ್ಯಾಂ ಕಮಲಲೋಚನಾಮ್ ।
ಅಲಂಕೃತ್ಯ ವಿಚಿತ್ರೈಸ್ತಾಮಲಂಕಾರೈರ್ಮಹೀಪತೇ ॥337॥

ತತಸ್ತು ಘಂಟಿಕಾಘೋಷಂ ಕೃತವಾನ್ ದೇವಚಿಂತಕಃ ।
ಸುಮುಹೂರ್ತೋಽಯಮಿತ್ಯೇವ ಮಂಗಲಾಷ್ಟಕಮಬ್ರುವನ್ ॥338॥

ಕನ್ಯಾಪ್ರದಾನಸಮಯೇ ಭೂಪಾಲೋ ವರದಕ್ಷಿಣಾಮ್ ।
ಕೋಟಿಸಂಖ್ಯಾನಿಷ್ಕಪುಂಜಾನ್ ದತ್ತವಾನ್ವೇಂಕಟೇಶಿತುಃ ॥339॥

ತಂ ದೃಷ್ಟ್ವಾ ಧನರಾಶಿಂ ತು ಭಗವಾನಾಹ ಭೂಮಿಪಮ್ ।

ಶ್ರೀನಿವಾಸ ಉವಾಚ-

'ದಾತವ್ಯಂ ಕಿಂ ತ್ವಯಾ ರಾಜನ್ ಪುತ್ರಸ್ಯ ತವ ಭೂಪತೇ ।

ಪಾದೋದಕವನ್ನು ಶಿರಸಾ ಧರಿಸಿ ಬಂಧು ಬಾಂಧವರಿಗೆ ಪ್ರೋಕ್ಷಿಸಿ, ಗಜ, ಅಶ್ವ ಶಾಲೆಗಳನ್ನು ಆರಂಭಿಸಿ, ಸಮಸ್ತ ರಾಜ್ಯದಲ್ಲೆಲ್ಲಾ ಪ್ರೋಕ್ಷಣೆಯನ್ನು ಮಾಡಿದನು. ವಾಸುದೇವನ ಪಾದಪ್ರಕ್ಷಾಲನದಿಂದ ತನ್ನ ಜನ್ಮವೂ ಸಾರ್ಥಕವಾಗುತ್ತದೆಂದು ತನ್ನ ಪಿತೃಗಳು ತೃಪ್ತರಾದರೆಂದು ಭಾವಿಸಿದನು. (336)

### ಕನ್ಯಾದಾನ-ವರದಕ್ಷಿಣೆ

ಕಮಲನಯನೆಯಾದ ಪದ್ಮಾವತಿಯನ್ನು ಉಚಿತವಾಗಿ ಅಲಂಕರಿಸಿದರು. ದೈವಚಿಂತಕರಾದ ಜ್ಯೋತಿಷ್ಕರು ಘಂಟಾಘೋಷವನ್ನು ಮಾಡಲು ಬ್ರಾಹ್ಮಣರು ಇದು ಸುಮೂಹರ್ತವೆಂದು ಮಂಗಲಾಷ್ಟಕವನ್ನು ಗಾನ ಮಾಡಿದರು. (338)

ಕನ್ಯಾದಾನ ಸಮಯದಲ್ಲಿ ಆಕಾಶರಾಜನು ಕೋಟಿ ವರಹಗಳನ್ನು ವೆಂಕಟಾಧಿಪನಿಗೆ ವರದಕ್ಷಿಣೆಯಾಗಿ ಸಮರ್ಪಿಸಿದನು.(339) ಇದನ್ನು ನೋಡಿದ ಶ್ರೀನಿವಾಸನು 'ಹೇ ರಾಜನೇ! ನಿನ್ನ ಪುತ್ರಸಮನಾದ ನನಗೆ ಕೊಡುವದಾದರೂ ಏನು? ವಿವಾಹ ಕರ್ಮ ನಿಪುಣನಾದ ನೀನು

ವಿವಾಹಕರ್ಮನಿಪುಣೋ ಭವಾನ್ ದಾನಪರಾಯಣಃ ॥340॥

ದದಸ್ವ ಭೂಷಣಾನ್ಯಂಗ ಬಹುರತ್ನಾನ್ವಿತಾನಿ ಚ' ।
ಇತ್ಯುಕ್ತೋ ವಾಸುದೇವಾಯ ಭೂಷಣಾನಿ ತದಾ ದದೌ ॥341।

ಕಿರೀಟಂ ಶತಭಾರಂ ಚ ಕಂಠಿಕಾಮಪಿ ತಾವತೀಮ್ ।
ಕೇಯೂರನೂಪುರೇ ದಿವ್ಯೇ ತದರ್ಧಂ ಚೈವ ಪಾದುಕಾಮ್ ॥342।

ಪತಾಕಾಸ್ಸಪ್ತಸಂಖ್ಯಾಕಾ ಅನರ್ಘಾಶ್ಚ ನೃಪೋತ್ತಮಃ ।
ಪುನರೇಕಂ ತದರ್ಧಂ ಚ ತದರ್ಧಂ ಚಾತ್ರ ಘಂಟಿಕಾಮ್ ॥343॥

ಪದಕಾನಿ ಸ ಸಪ್ತಾದಾದನರ್ಘ್ಯಾಣಿ ನೃಪೋತ್ತಮಃ ।
ಮಾಲಿಕಾಂ ಮೌಕ್ತಿಕೀಂ ಚಾಪಿ ಭುಜಭೂಷಣದ್ವಂದ್ವಕಮ್ ॥344॥

ಕರ್ಣಭೂಷೇ ಮೌಕ್ತಿಕೇ ತು ನಿಂಬಮಾತ್ರಪ್ರಮಾಣಕೇ ।
ಕಂಕಣೇ ರತ್ನಮಾಣಿಕ್ಯವಜ್ರವೈಡೂರ್ಯನಿರ್ಮಿತೇ ॥345॥

ದ್ವಾತ್ರಿಂಶದ್ಭಾರಸಂಯುಕ್ತೇ ಅನರ್ಘ್ಯೇ ದತ್ತವಾನ್ನೃಪಃ ।
ದ್ವಂದ್ವಂ ಚ ಬಾಹುಪುರ್ಯಾಶ್ಚ ನಾಗಭೂಷಣಕಂ ತಥಾ ॥346॥

ಅಂಗುಲ್ಯಾಭರಣಂ ರಾಜನ್ ವೀರಮುದ್ರಾಮತಃ ಪರಮ್ ।
ಕಟಿಸೂತ್ರಂ ಸ್ವರ್ಣಮಯಂ ವರವಜ್ರಸಮನ್ವಿತಮ್ ॥348॥

ಬಹುದಾನ ಪರಾಯಣನಾಗಿರುವಿ. ನನಗೆ ಮತ್ತಷ್ಟು ರತ್ನಖಚಿತವಾದ ಆಭರಣಗಳನ್ನು ವಿವಾಹಾಂಗವಾಗಿ ದಾನಮಾಡು' ಎಂದು ನುಡಿದನು. (341) ಆಗ ಆಕಾಶರಾಜನು ರತ್ನಖಚಿತಗಳಾದ ಅನೇಕ ಆಭರಣಗಳನ್ನು ಶ್ರೀನಿವಾಸನಿಗೆ ದಾನಮಾಡಿದನು. ನೂರು ಭಾರದ ಕಿರೀಟವನ್ನು, ಅಷ್ಟೇ ಭಾರದ ಕಂಠೀಹಾರವನ್ನು, ಅದರ ಅರ್ಧ ಭಾರದ (ಅಂದರೆ ಐವತ್ತು ಭಾರದ) ಪಾದುಕೆಯನ್ನು, (342) ದಿವ್ಯ ಕೇಯೂರ ನೂಪುರಗಳನ್ನು, ಅಮೂಲ್ಯಗಳಾದ ಸಪ್ತ ಪತಾಕೆಗಳನ್ನು, ಸಪ್ತ ಪದಕಗಳನ್ನು, ಮುತ್ತಿನ ಸರಗಳನ್ನು, ಎರಡು ನಾಗಮುರಿಯನ್ನು, ಆಕಾಶರಾಜನು ಅಮೂಲ್ಯವಾದ ಕಡಗಳನ್ನು, ಬೇವಿನ ಬೀಜಗಳಂತೆ, ಸೂಕ್ಷ್ಮವಾದ ಮುತ್ತಿನಿಂದ ನಿರ್ಮಿತವಾದ ಕರ್ಣಾಭರಣಗಳನ್ನು, ರತ್ನ, ಮಾಣಿಕ್ಯ, ವಜ್ರ, ವೈಡೂರ್ಯ ಗಳಿಂದ ನಿರ್ಮಿತವಾದ ಕಂಕಣಗಳನ್ನು, ಮೂವತ್ತೆರಡು ಭಾರೋಪೇತವಾದ ಅನರ್ಘ್ಯವಾದ ತೋಳುಬಂದಿಗಳನ್ನು, (344) ಉಂಗುರ ಗಳನ್ನು, ಮುದ್ರಿಕೆಗಳನ್ನು, ವಜ್ರಖಚಿತವಾದ ಬಂಗಾರದ ಉಡುದಾರ ವನ್ನು, ಐನೂರು ಭಾರದ ಚಿನ್ನದ ಪದಕವನ್ನು, ಸೊಂಟದಿಂದ ಕುತ್ತಿಗೆ ಯವರೆಗೆ ಕವಚವನ್ನು, ಐದು ನೂರು ಭಾರ

ತತಸ್ತು ಪಾದುಕಾಂ ದತ್ವಾ ಭಾರಪಂಚಶತಂ ತಥಾ ।
ಕವಚಂ ಕಟಿಮಾರಭ್ಯ ಬಹುರತ್ನವಿಚಿತ್ರಿತಮ್ ॥349॥

ಶತಮೇಕಾದಶಂ ಭಾರಂ ಬಹುರತ್ನಸಮನ್ವಿತಮ್ ।
ಪಾದಯುಗ್ಮಂ ತತೋ ರಾಜಾ ದತ್ತವಾನ್ ಮಧುಘಾತಿನೇ ॥349॥

ದದೌ ಭೋಜನಪಾತ್ರಂ ಚ ಷಷ್ಟಿಭಾರಸಮನ್ವಿತಮ್ ।
ಕಂಬಲಾನಾಂ ಚತುಃಷಷ್ಟಿಂ ದತ್ತವಾನ್ರಾಜಸತ್ತಮಃ ॥350॥

ಭೂಷಣೈರ್ಭೂಷಿತಾಂಗಸ್ಯ ಕನ್ಯಾದಾನಮಥಾಕರೋತ್ ।
ಕನ್ಯಾಪ್ರವರಮೂಚೇಽಥ ಗುರುಸ್ಸಾಕ್ಷಾದ್ಬೃಹಸ್ಪತಿಃ ॥351॥

ಬೃಹಸ್ಪತಿರುವಾಚ–

'ಅತ್ರಿಗೋತ್ರಸಮೂದ್ಭೂತಾಂ ಸುವೀರಸ್ಯ ಪ್ರಪೌತ್ರಿಕಾಮ್ ।
ಸುಧರ್ಮಣಶ್ಚ ಪೌತ್ರೀಂ ತಾಂ ಪುತ್ರೀಮಾಕಾಶಭೂಪತೇಃ ॥352॥

ತ್ವಮಂಗೀಕುರು ಗೋವಿಂದ ಕನ್ಯಾಂ ಕಮಲಲೋಚನಾಮ್ ।
ಏವಮುಕ್ತೇ ಮಹಾರಾಜೋ ಮುದಾ ರತ್ನಾಂಬರಂ ದದೌ ॥353॥

ವಸಿಷ್ಠ ಉವಾಚ–

'ಪ್ರಪೌತ್ರಸ್ಯ ಯಯಾತೇಶ್ಚ ಪೌತ್ರಸ್ಯಾಮಿತತೇಜಸಃ ।
ಶೂರಸೇನಸ್ಯ ರಾಜೇಂದ್ರ ವಸುದೇವಸ್ಯ ಭೂಪತೇಃ ॥354॥

ತೂಕದ ಪಾದುಕೆಯನ್ನು, ಅರವತ್ತು ಭಾರ ತೂಕದ ಚಿನ್ನದ ಭೋಜನ ಪಾತ್ರವನ್ನು, ಅರವತ್ನಾಲಕ್ಕು ರತ್ನಗಂಬಳಿಗಳನ್ನು ಕೊಟ್ಟನು. (350)

ತನ್ನಿಂದ ಕೊಡಲ್ಪಟ್ಟ ಚಿನ್ನಾಭರಣಗಳಿಂದ ಅಲಂಕೃತನಾದ ಶ್ರೀನಿವಾಸನಿಗೆ ಕನ್ಯಾದಾನವನ್ನು ಮಾಡಲು ಆಕಾಶರಾಜನು ಉದ್ಯುಕ್ತನಾದಾಗ ಬೃಹಸ್ಪತಿಯು ಕನ್ಯಾವರಣ ವಾಕ್ಯಗಳನ್ನು ಹೇಳಿದನು. 'ಅತ್ರಿಗೋತ್ರ ಸಮುದ್ಭೂತಳೂ, ಸುವೀರಮಹಾರಾಜನ ಪ್ರಪೌತ್ರಿಯೂ, ಸುಧರ್ಮರಾಜನ ಪೌತ್ರಿಯೂ, ಆಕಾಶರಾಜನ ಪುತ್ರಿಯೂ, ಕಮಲಲೋಚನೆಯೂ ಆಗಿರುವ ಪದ್ಮಾವತಿ ಎಂಬ ಕನ್ಯೆಯನ್ನು ನೀನು ಪರಿಗ್ರಹಿಸು' ಎಂದು ನುಡಿದನು. ಸಭಾಮಧ್ಯದಲ್ಲಿ ಮಹಾರಾಜರಾದ ಆಕಾಶರಾಜನು ಶ್ರೀನಿವಾಸನಿಗೆ ರತ್ನಖಚಿತವಾದ ವಸ್ತ್ರವನ್ನು ಕೊಟ್ಟನು. (353) ಆಗ ವಸಿಷ್ಠಮುನಿಯು 'ಯಯಾತಿ ಮಹಾರಾಜನ ಪ್ರಪೌತ್ರನೂ, ಅಮಿತ ತೇಜೋಮೂರ್ತಿ ಯಾದ ಶೂರಸೇನನ ಪೌತ್ರನೂ,

ಪುತ್ರಸ್ಯ ವೇಂಕಟೇಶಸ್ಯ ಗೋತ್ರೇ ವಾಸಿಷ್ಠಸಂಜ್ಞಕೇ ।
ಜಾತಸ್ಯಾತ್ರಿಕುಲೋತ್ಪನ್ನಾಂ ಕನ್ಯಾಂ ಕನಕಭೂಷಿತಾಮ್ ॥355॥

ಗೃಹೀಷ್ಯಾಮೋ ವಯಂ ರಾಜನ್ ತವ ಪುತ್ರೀಂ ನೃಪೋತ್ತಮ ।
ಕನ್ಯಾವರಪ್ರವರಯೋರಿತ್ಯುಚ್ಚಾರಿತಯೋರಥ ॥356॥

ಧರಣ್ಯಾ ಸಹ ರಾಜೇಂದ್ರಃ ಕನ್ಯಾದಾನಪರಾಯಣಃ ।
ಪ್ರಹೃಷ್ಟಹೃದಯಃ ಪ್ರಾಹ ಶ್ರೀನಿವಾಸಂ ಪರಾತ್ಪರಮ್ ॥357॥

ಆಕಾಶರಾಜ ಉವಾಚ–

'ಕನ್ಯಾಮಿಮಾಂ ಪ್ರದಾಸ್ಯಾಮಿ ಗೃಹಾಣ ಪುರುಷೋತ್ತಮ' ।
ಇತ್ಯುಕ್ತ್ವಾ ಪ್ರಾಕ್ಷಿಪದ್ರಾಜಾ ಧರಣ್ಯಾ ಸ್ರಾವಿತಾಂ ತದಾ ॥358॥

ಮಂತ್ರಪೂತಾಂ ಸ್ವಾಮಿತೀರ್ಥಧಾರಾಂ ಸಕನಕಾಂ ಕರೇ ।
ದಕ್ಷಿಣೇ ಶ್ರೀನಿವಾಸಸ್ಯ ದದೌ ಪದ್ಮಾವತೀಂ ತತಃ ॥359॥

ವಿಧಾನಂ ಚ ತತಶ್ಚಕ್ರೇ ರಾಜೇಂದ್ರಃ ಸ ಪುರೋಹಿತಃ ।
ಮುನೀನಾಮಂಜಲಿಪುಟೇ ನಾನಾರತ್ನಾಕ್ಷತಾನ್ ದದೌ ॥360॥

ತೇ ವೇದಮನ್ತ್ರೈಃ ಜಗದೀಶಮೂರ್ಧ್ನಿ
ಮುಕ್ತಾಕ್ಷತಾನ್ ವೇದವಿದಃ ಪ್ರಸುಸ್ರುವುಃ ।

ವಸುದೇವನ ಮಗನೂ ವಸಿಷ್ಠ ಗೋತ್ರೋದ್ಭವನೂ ಆದ ವೇಂಕಟೇಶ್ವರನಿಗೆ ಅತ್ರಿಗೋತ್ರೋತ್ಪನ್ನಳಾದ ಸ್ವರ್ಣಾಲಂಕಾರ ಅಲಂಕೃತಳೂ ಆದ ನಿನಗೆ ಮಗಳೂ ಆಗಿರುವ ಪದ್ಮಾವತೀ ಎಂಬ ಕನ್ಯೆಯನ್ನು ನಾವು ಪರಿಗ್ರಹಿಸುವೆವಂದು ಕನ್ಯಾವರಣಕ್ಕೆ ಬೇಕಾದ ಗೋತ್ರ ಪ್ರವರಗಳನ್ನು ಉಚ್ಚರಿಸಿದರು. (356) ಆಮೇಲೆ ಆಕಾಶರಾಜನು ಕನ್ಯಾದಾನಪರಾಯಣಪ್ರಹೃಷ್ಟಹೃದಯನಾಗಿ ಪರಾತ್ಪರನಾದ ಶ್ರೀನಿವಾಸನನ್ನು ಈ ರೀತಿಯಾಗಿ ವಿಜ್ಞಾಪಿಸಿಕೊಂಡುನು "ಹೇ ಪುರುಷಶ್ರೇಷ್ಠನೇ! ಈ ಕನ್ಯೆಯನ್ನು ನಿನಗೆ ದಾನ ಮಾಡಿ ಕೊಡುತ್ತೇನೆ ನೀನು ಪರಿಗ್ರಹಿಸು' ಎಂದು ಹೇಳಿ, ಧರಣಿದೇವಿಯಿಂದ ಸ್ರಾವಿತವಾದ ಮಂತ್ರಪೂರಿತವಾದ ಸ್ವಾಮಿಪುಷ್ಕರಿಣೀತೀರ್ಥ ಜಲಧಾರೆಯನ್ನು ಶ್ರೀನಿವಾಸನ ದಕ್ಷಿಣಹಸ್ತದಲ್ಲಿ ಹಾಕಿ, ಸುವರ್ಣ ದಕ್ಷಿಣೆಯೊಂದಿಗೆ ಪದ್ಮಾವತಿಯನ್ನು ಆತನ ಕೈಯಲ್ಲಿ ಕೊಟ್ಟನು.

ಅಕ್ಷತೆ

ಅನಂತರದಲ್ಲಿ ಪುರೋಹಿತರು ಮಾಡಬೇಕಾದ ವಿವಾಹವಿಧಿ–ವಿಧಾನ ಗಳನ್ನು ಮಾಡಿಸಿದರು.

ತದಾಭವತ್ತತ್ರ ಮಹೋತ್ಸವೋ ನೃಪ
ಆಕಾಶರಾಜಾಲಯವಾಸಿನಾಂ ಚ ॥361॥

ವೈವಾಹಿಕಂ ಸಮಾಪ್ಯಾಶು ಮಾಂಗಲ್ಯಂ ಸೂತ್ರಬಂಧನಮ್ ।
ಶ್ರೀನಿವಾಸೇನ ದೇವೇನಾಕಾರಯತ್ಸಪುರೋಹಿತಃ ॥362॥

ಸುವಾಸಿನ್ಯಃ ಊಚುಃ-

'ಸಾವಿತ್ರೀವ ಚ ಕಲ್ಯಾಣೀ ಬಹುಪುತ್ರವತೀ ಭವ ।
ಸರ್ವಲೋಕಸ್ಯ ಜನನೀ ಸರ್ವಮಂಗಲದಾಯಿನೀ' ॥363॥

ಇತ್ಥಂ ಸುಮಂಗಲೀಸ್ತ್ರೀಷು ಗಾಯಂತೀಷು ಶುಭಾಶಿಷಃ ।
ಬ್ರಾಹ್ಮಣಾನಾಂ ಕರಸ್ಪರ್ಶಾದ್ರಾಜ್ಞಶ್ಚಾಪಿ ಮಹಾತ್ಮನಃ ॥364॥

ಬಬಂಧ ಪೂತಂ ಮಾಂಗಲ್ಯಸೂತ್ರಂ ಮಂತ್ರಾಭಿಮಂತ್ರಿತಮ್ ।
ಕಂಠೇ ಪದ್ಮಾವತೀದೇವ್ಯಾಃ ಶ್ರೀನಿವಾಸೋ ಜಗತ್ಪತಿಃ ॥365॥

'ಮಾಂಗಲ್ಯತಂತುನಾಽನೇನ ಜಗಜ್ಜೀವನಹೇತುನಾ ।
ಕಂಠೇ ಬಧ್ನಾಮಿ ಸುಭಗೇ ಚಿರಂಜೀವ ಮಯಾ ಸಹ' ॥366॥

ಋಷಿಗಳ ಹಸ್ತಗಳಲ್ಲಿ ರತ್ನಸಹಿತವಾದ ಮಂತ್ರಾಕ್ಷತೆ ಯನ್ನು ಕೊಟ್ಟರು. ದೈವಜ್ಞರಾದ ಬ್ರಾಹ್ಮಣರು ವೇದಮಂತ್ರಗಳಿಂದ ಜಗದೀಶನ ಶಿರಸ್ಸಿನ ಮೇಲೆ ಆಶೀರ್ವಾದ ಪುರಸ್ಸರವಾಗಿ ಮುತ್ತಿನ ಅಕ್ಷತೆಗಳನ್ನು ಸೂರೆಗೈದರು. ಆಗ ಆಕಾಶರಾಜನ ಪುರವಾಸಿಗಳು, ಬಂಧು-ಬಾಂಧವರೆಲ್ಲರಿಗೂ ಮಹೋತ್ಸವ ಉಂಟಾಯಿತು. (361)

### ಕಂಕಣ ಬಂಧನ-ಮಾಂಗಲ್ಯ ಬಂಧನ

ಹೀಗೆ ವಿವಾಹದ ವಿಧಿಗಳನ್ನು ಸಮಾಪ್ತಿಗೊಳಿಸಿ ಮಾಂಗಲ್ಯ ಸೂತ್ರ ಬಂಧವನ್ನು ಶ್ರೀನಿವಾಸನಿಂದ ಪುರೋಹಿತರು ಮಾಡಿಸಿದರು ಆಗ ಸುವಾಸಿನಿಯರು 'ಸಾವಿತ್ರಿಯಂತೆ ಮಂಗಳಸ್ವರೂಪಳಾಗು. ಬಹುಪುತ್ರ ವತಿಯಾಗು. ಸರ್ವಲೋಕ ಜನನಿಯಾಗು ಸಕಲ ಮಂಗಳಗಳನ್ನು ಕೊಡುವವಳಾಗು' ಎಂದು ಶುಭಾಶೀರ್ವಾದಗಳನ್ನು ಗಾನ ಮಾಡಿ ಪದ್ಮಾವತಿಯನ್ನು ಹರಸುತ್ತಿರಲು, ಬ್ರಾಹ್ಮಣರ ಮತ್ತು ಆಕಾಶರಾಜನ ಹಸ್ತಸ್ಪರ್ಶದಿಂದ ಪವಿತ್ರವಾಗಿ ಮಂತ್ರಿಸಲ್ಪಟ್ಟ, ಮಂತ್ರಗಳಿಂದ ಅಭಿಮಂತ್ರಿತವಾದ ಮಾಂಗಲ್ಯ ಸೂತ್ರವನ್ನು ಜಗತ್ಪತಿಯಾದ ಶ್ರೀನಿವಾಸನು, ಪದ್ಮಾವತಿಯ ಕಂಠದಲ್ಲಿ, 'ಜಗತ್ತಿನ ಜೀವನಕ್ಕೆ ಕಾರಣೀಭೂತವಾದ ಈ ಮಾಂಗಲ್ಯ ಸೂತ್ರವನ್ನು ನಿನ್ನ

ಪುತ್ರಸ್ಯ ವೇಂಕಟೇಶಸ್ಯ ಗೋತ್ರೇ ವಾಸಿಷ್ಠಸಂಜ್ಞಕೇ ।
ಜಾತಸ್ಯಾತ್ರಿಕುಲೋತ್ಪನ್ನಾಂ ಕನ್ಯಾಂ ಕನಕಭೂಷಿತಾಮ್ ॥355॥

ಗೃಹೀಷ್ಯಾಮೋ ವಯಂ ರಾಜನ್ ತವ ಪುತ್ರೀಂ ನೃಪೋತ್ತಮ ।
ಕನ್ಯಾವರಪ್ರವರಯೋರಿತ್ಯುಚ್ಚಾರಿತಯೋರಥ ॥356॥

ಧರಣ್ಯಾ ಸಹ ರಾಜೇಂದ್ರಃ ಕನ್ಯಾದಾನಪರಾಯಣಃ ।
ಪ್ರಹೃಷ್ಟಹೃದಯಃ ಪ್ರಾಹ ಶ್ರೀನಿವಾಸಂ ಪರಾತ್ಪರಮ್ ॥357॥

ಆಕಾಶರಾಜ ಉವಾಚ–

'ಕನ್ಯಾಮಿಮಾಂ ಪ್ರದಾಸ್ಯಾಮಿ ಗೃಹಾಣ ಪುರುಷೋತ್ತಮ' ।
ಇತ್ಯುಕ್ತ್ವಾ ಪ್ರಾಕ್ಷಿಪದ್ರಾಜಾ ಧರಣ್ಯಾ ಸ್ರಾವಿತಾಂ ತದಾ ॥358॥

ಮಂತ್ರಪೂತಾಂ ಸ್ವಾಮಿತೀರ್ಥಧಾರಾಂ ಸಕನಕಾಂ ಕರೇ ।
ದಕ್ಷಿಣೇ ಶ್ರೀನಿವಾಸಸ್ಯ ದದೌ ಪದ್ಮಾವತೀಂ ತತಃ ॥359॥

ವಿಧಾನಂ ಚ ತತಶ್ಚಕ್ರೇ ರಾಜೇಂದ್ರಃ ಸ ಪುರೋಹಿತಃ ।
ಮುನೀನಾಮಂಜಲಿಪುಟೇ ನಾನಾರತ್ನಾಕ್ಷತಾನ್ ದದೌ ॥360॥

ತೇ ವೇದಮನ್ತ್ರೈಃ ಜಗದೀಶಮೂರ್ಧ್ನಿ
ಮುಕ್ತಾಕ್ಷತಾನ್ ವೇದವಿದಃ ಪ್ರಸುಸ್ರುವುಃ ।

ವಸುದೇವನ ಮಗನೂ ವಸಿಷ್ಠ ಗೋತ್ರೋದ್ಭವನೂ ಆದ ವೇಂಕಟೇಶ್ವರನಿಗೆ ಅತ್ರಿಗೋತ್ರೋತ್ಪನ್ನಳಾದ ಸ್ವರ್ಣಾಲಂಕಾರ ಅಲಂಕೃತಳೂ ಆದ ನಿನಗೆ ಮಗಳೂ ಆಗಿರುವ ಪದ್ಮಾವತೀ ಎಂಬ ಕನ್ಯೆಯನ್ನು ನಾವು ಪರಿಗ್ರಹಿಸುವೆವಂದು ಕನ್ಯಾವರಣಕ್ಕೆ ಬೇಕಾದ ಗೋತ್ರ ಪ್ರವರಗಳನ್ನು ಉಚ್ಚರಿಸಿದರು. (356) ಆಮೇಲೆ ಆಕಾಶರಾಜನು ಕನ್ಯಾದಾನಪರಾಯಣಪ್ರಹೃಷ್ಟಹೃದಯನಾಗಿ ಪರಾತ್ಪರನಾದ ಶ್ರೀನಿವಾಸನನ್ನು ಈ ರೀತಿಯಾಗಿ ವಿಜ್ಞಾಪಿಸಿಕೊಂಡುನು "ಹೇ ಪುರುಷಶ್ರೇಷ್ಠನೇ! ಈ ಕನ್ಯೆಯನ್ನು ನಿನಗೆ ದಾನ ಮಾಡಿ ಕೊಡುತ್ತೇನೆ ನೀನು ಪರಿಗ್ರಹಿಸು' ಎಂದು ಹೇಳಿ, ಧರಣಿದೇವಿಯಿಂದ ಸ್ರಾವಿತವಾದ ಮಂತ್ರಪೂರಿತವಾದ ಸ್ವಾಮಿಪುಷ್ಕರಿಣೀತೀರ್ಥ ಜಲಧಾರೆಯನ್ನು ಶ್ರೀನಿವಾಸನ ದಕ್ಷಿಣಹಸ್ತದಲ್ಲಿ ಹಾಕಿ, ಸುವರ್ಣ ದಕ್ಷಿಣೆಯೊಂದಿಗೆ ಪದ್ಮಾವತಿಯನ್ನು ಆತನ ಕೈಯಲ್ಲಿ ಕೊಟ್ಟನು.

ಅಕ್ಷತೆ

ಅನಂತರದಲ್ಲಿ ಪುರೋಹಿತರು ಮಾಡಬೇಕಾದ ವಿವಾಹವಿಧಿ–ವಿಧಾನ ಗಳನ್ನು ಮಾಡಿಸಿದರು.

ತದಾಭವತ್ತತ್ರ ಮಹೋತ್ಸವೋ ನೃಪ
ಆಕಾಶರಾಜಾಲಯವಾಸಿನಾಂ ಚ ॥361॥

ವೈವಾಹಿಕಂ ಸಮಾಪ್ಯಾಶು ಮಾಂಗಲ್ಯಂ ಸೂತ್ರಬಂಧನಮ್ ।
ಶ್ರೀನಿವಾಸೇನ ದೇವೇನಾಕಾರಯತ್ಸಪುರೋಹಿತಃ ॥362॥

ಸುವಾಸಿನ್ಯಃ ಊಚುಃ-

'ಸಾವಿತ್ರೀವ ಚ ಕಲ್ಯಾಣೀ ಬಹುಪುತ್ರವತೀ ಭವ ।
ಸರ್ವಲೋಕಸ್ಯ ಜನನೀ ಸರ್ವಮಂಗಲದಾಯಿನೀ' ॥363॥

ಇತ್ಥಂ ಸುಮಂಗಲೀಸ್ತ್ರೀಷು ಗಾಯಂತೀಷು ಶುಭಾಶಿಷಃ ।
ಬ್ರಾಹ್ಮಣಾನಾಂ ಕರಸ್ಪರ್ಶಾದ್ರಾಜ್ಞಶ್ಚಾಪಿ ಮಹಾತ್ಮನಃ ॥364॥

ಬಬಂಧ ಪೂತಂ ಮಾಂಗಲ್ಯಸೂತ್ರಂ ಮಂತ್ರಾಭಿಮಂತ್ರಿತಮ್ ।
ಕಂಠೇ ಪದ್ಮಾವತೀದೇವ್ಯಾಃ ಶ್ರೀನಿವಾಸೋ ಜಗತ್ಪತಿಃ ॥365॥

'ಮಾಂಗಲ್ಯತಂತುನಾಽನೇನ ಜಗಜ್ಜೀವನಹೇತುನಾ ।
ಕಂಠೇ ಬಧ್ನಾಮಿ ಸುಭಗೇ ಚಿರಂಜೀವ ಮಯಾ ಸಹ' ॥366॥

ಋಷಿಗಳ ಹಸ್ತಗಳಲ್ಲಿ ರತ್ನಸಹಿತವಾದ ಮಂತ್ರಾಕ್ಷತೆ ಯನ್ನು ಕೊಟ್ಟರು. ದೈವಜ್ಞರಾದ ಬ್ರಾಹ್ಮಣರು ವೇದಮಂತ್ರಗಳಿಂದ ಜಗದೀಶನ ಶಿರಸ್ಸಿನ ಮೇಲೆ ಆಶೀರ್ವಾದ ಪುರಸ್ಸರವಾಗಿ ಮುತ್ತಿನ ಅಕ್ಷತೆಗಳನ್ನು ಸೂರೆಗೈದರು. ಆಗ ಆಕಾಶರಾಜನ ಪುರವಾಸಿಗಳು, ಬಂಧು-ಬಾಂಧವರೆಲ್ಲರಿಗೂ ಮಹೋತ್ಸವ ಉಂಟಾಯಿತು. (361)

### ಕಂಕಣ ಬಂಧನ-ಮಾಂಗಲ್ಯ ಬಂಧನ

ಹೀಗೆ ವಿವಾಹದ ವಿಧಿಗಳನ್ನು ಸಮಾಪ್ತಿಗೊಳಿಸಿ ಮಾಂಗಲ್ಯ ಸೂತ್ರ ಬಂಧವನ್ನು ಶ್ರೀನಿವಾಸನಿಂದ ಪುರೋಹಿತರು ಮಾಡಿಸಿದರು ಆಗ ಸುವಾಸಿನಿಯರು 'ಸಾವಿತ್ರಿಯಂತೆ ಮಂಗಳಸ್ವರೂಪಳಾಗು. ಬಹುಪುತ್ರ ವತಿಯಾಗು. ಸರ್ವಲೋಕ ಜನನಿಯಾಗು ಸಕಲ ಮಂಗಳಗಳನ್ನು ಕೊಡುವವಳಾಗು' ಎಂದು ಶುಭಾಶೀರ್ವಾದಗಳನ್ನು ಗಾನ ಮಾಡಿ ಪದ್ಮಾವತಿಯನ್ನು ಹರಸುತ್ತಿರಲು, ಬ್ರಾಹ್ಮಣರ ಮತ್ತು ಆಕಾಶರಾಜನ ಹಸ್ತಸ್ಪರ್ಶದಿಂದ ಪವಿತ್ರವಾಗಿ ಮಂತ್ರಿಸಲ್ಪಟ್ಟ, ಮಂತ್ರಗಳಿಂದ ಅಭಿಮಂತ್ರಿತವಾದ ಮಾಂಗಲ್ಯ ಸೂತ್ರವನ್ನು ಜಗತ್ಪತಿಯಾದ ಶ್ರೀನಿವಾಸನು, ಪದ್ಮಾವತಿಯ ಕಂಠದಲ್ಲಿ, 'ಜಗತ್ತಿನ ಜೀವನಕ್ಕೆ ಕಾರಣೀಭೂತವಾದ ಈ ಮಾಂಗಲ್ಯ ಸೂತ್ರವನ್ನು ನಿನ್ನ

ಮಂತ್ರೇಣಾನೇನ ಗೋವಿಂದಃ ಕಂಠೇ ತಸ್ಯಾ ಬಬಂಧ ಚ ।
ತತಶ್ಚಕಾರ ರಾಜೇಂದ್ರಃ ಮಧುಪರ್ಕಂ ಪುರೋಹಿತಃ ॥367॥

ಕಂಕಣಂ ಬಂಧಯಾಮಾಸ ವಾಸುದೇವಕರಾಂಬುಜೇ ।
ಕರಾಂಭೋಜೇ ಪದ್ಮವತ್ಯಾಃ ಕಂಕಣಂ ಸೂತ್ರನಿರ್ಮಿತಮ್ ॥368॥

ಮುನಿಭಿಸ್ಸಹ ವಿದ್ವದ್ಭಿರ್ಲಾಜೈರ್ಹೋರ್ಮಮಂ ಪುರೋಹಿತಃ ।
ವಸಿಷ್ಠೋಽಕಾರಯತ್ಪದ್ಮಾವತ್ಯಂಜಲ್ಯರ್ಪಿತೈಸ್ತತಃ ॥369॥

ಯಜುಃಶಾಖಾಕ್ರಮೇಣೈವ ಜುಹಾವಾಗ್ನೌ ಯಥಾವಿಧಿ ।
ತಸ್ಮಿನ್ ಕಾಲೇ ಮಹಾರಾಜೋ ದಕ್ಷಿಣಾಂ ಬ್ರಹ್ಮವಾದಿನಾಮ್॥

ದಾಪಯಾಮಾಸ ಸಂತುಷ್ಟೋ ವಿಪ್ರೈಸ್ತಾಂಬೂಲಪೂರ್ವಕಮ್।
ಗವಾಂ ಕೋಟಿಸಹಸ್ರಾಣಿ ಚಾಶ್ವಾನಾಮಯುತಂ ತಥಾ ॥371॥

ವಸ್ತ್ರಾಣಾಂ ನಿಚಯಂ ರಾಜನ್ ವಿಪ್ರೇಭ್ಯೋ ದತ್ತವಾನ್ ಪೃಥಕ್।
ಏವಂ ಮಹೋತ್ಸವಸ್ತತ್ರ ಸಮಭೂದ್ದಶಮೀದಿನೇ ॥372॥

ರತ್ನಪೀಠೇ ಪ್ರತಿಷ್ಠಾಪ್ಯ ಭೋಜನಾರ್ಥಂ ವೃಷಾಕಪಿಮ್ ।
ಪದ್ಮಾವತ್ಯಾ ಚ ಸಹಿತಂ ಭೋಜನೇ ಚ ಪೃಥಕ್ ಸ್ಥಿತಮ್ ॥373॥

ಕೊರಳಿಗೆ ಕಟ್ಟುತ್ತೇನೆ. ನನ್ನಿಂದೊಡಗೂಡಿ ಬಹುಕಾಲದವರೆಗೂ ಜೀವನವನ್ನು ಮಾಡು' ಎಂದು ಪದ್ಮಾವತಿಯ ಕೊರಳಿಗೆ ಬಂಧನ ಮಾಡಿದನು. ಅನಂತರಲ್ಲಿ ಆಕಾಶರಾಜನು ಮಧುಪರ್ಕವನ್ನು ಅರ್ಪಿಸಿದನು. (368) ಪುರೋಹಿತರು ಶ್ರೀನಿವಾಸನ ಕೈಗೆ ಸೂತ್ರನಿರ್ಮಿತವಾದ ಕಂಕಣ ಬಂಧನವನ್ನು ಮಾಡಿಸಿ ಪದ್ಮಾವತಿಯ ಕೈಗೂ ಸಹ ಶ್ರೀನಿವಾಸನಿಂದ ಕಂಕಣ ಬಂಧನವನ್ನು ಮಾಡಿಸಿದರು. ಅನಂತರ ಮುನಿಗಳು, ವೇದಜ್ಞರಾದ ಋಷಿಗಳಿಂದೊಡಗೂಡಿದ ಪುರೋಹಿತರಾದ ವಸಿಷ್ಠರು ಪದ್ಮಾವತಿಯ ಕೈಯಿಂದ ವಿಧಿಪ್ರಕಾರಕವಾಗಿ ಯಜುಃಶಾಖಾಕ್ರಮದಿಂದ ಅಗ್ನಿಯಲ್ಲಿ ಲಾಜಾಹೋಮವನ್ನು ಮಾಡಿಸಿದರು. (370)

ಆಕಾಶ ರಾಜನು ಬ್ರಾಹ್ಮಣರಿಗೆ ಹರ್ಷಚಿತ್ತನಾಗಿ ತಾಂಬೂಲ ದಕ್ಷಿಣೆಗಳನ್ನು ಸಮರ್ಪಿಸಿದನು. ಈ ಸಂದರ್ಭದಲ್ಲಿ ಆತನು ಬ್ರಾಹ್ಮಣರಿಗೆ ಹತ್ತು ಸಾವಿರ ಗೋವುಗಳನ್ನು, ಕುದುರೆಗಳನ್ನು ಅಸಂಖ್ಯವಾದ ವಸ್ತ್ರಗಳನ್ನು ದ್ವಿಜೋತ್ತಮರಿಗೆ ದಾನ ಮಾಡಿದನು. ಈ ಪ್ರಕಾರಕವಾಗಿ ದಶಮೀ ದಿವಸದಲ್ಲಿ ಆಕಾಶರಾಜನ ಅರಮನೆಯಲ್ಲಿ ಮಂಗಲ ಮಹೋತ್ಸವವು ವಿಜೃಂಭಣೆಯಿಂದ ಜರುಗಿತು. (372)

ಅನ್ನಂ ಬಹುವಿಧಂ ಸೂಪರಸಭಕ್ಷ್ಯಸಮನ್ವಿತಮ್ ।
ಪರಮಾನ್ನಂ ಚ ಸಘೃತಂ ಸಕ್ಷೀರಂ ಶರ್ಕರಾಯುತಮ್ ॥374॥

ಪರಿವೇಷಂ ತತಶ್ಚಕ್ರುಃ ಸರ್ವೇಷಾಂ ಚ ಪೃಥಕ್ ಪೃಥಕ್ ।
ಪುರೋಹಿತೇನ ಸಹಿತೋ ಪುತ್ರಪೌತ್ರಾದಿಭಿರ್ವೃತಃ ॥375॥

ಭೋಜನಂ ಕೃತವಾನ್ ಕೃಷ್ಣಃ ಪದ್ಮಾವತ್ಯಾ ಸಮನ್ವಿತಃ ।
ಆಕಾಶರಾಜೋ ರಾಜೇಂದ್ರ ಭುಕ್ತವಾನ್ ಕೃಷ್ಣಸನ್ನಿಧೌ ॥376॥

ಲಕ್ಷ್ಮೀಸಮೇತಾ ಧರಣೀ ತಥಾ ಬಕುಲಮಾಲಯಾ ।
ಭುಕ್ತ್ವಾಽನ್ನಂ ರಸಸಂಯುಕ್ತಂ ರಾಜಭಾರ್ಯಾ ಮುದಾನ್ವಿತಾ ॥

ತತಃ ಪ್ರಭಾತೇ ರಾಜೇಂದ್ರ ಸುವಾಸಿನ್ಯಃ ಸುರೇಶಿತುಃ ।
ಮಜ್ಜನಂ ಕಾರಯಾಮಾಸುರ್ಗಂಧತೈಲೈಸ್ತು ನಿರ್ಮಲೈಃ ॥378॥

ಅನ್ಯೋನ್ಯಮಜ್ಜನಂ ತತ್ರ ತತ್ರ ಚೋದ್ವರ್ತನಂ ತಥಾ ।
ಹರಿಪದ್ಮಾವತೀ ದೇವ್ಯೋಸ್ತಾಃ ಸಹಾಸಮಕಾರಯನ್ ॥379॥

ಸ ರಾಜಾ ವಿಪ್ರಮುಖ್ಯಾನಾಂ ಸುರಾಣಾಂ ಬಹುಭೋಜನಮ್।
ಸ್ತ್ರೀಣಾಂ ಚ ಪುರುಷಾಣಾಂ ಚ ಬಹುಮಾನಪುರಸ್ಸರಮ್ ॥380॥

### ಭೋಜನ

ಪದ್ಮಾವತೀ ಸಹಿತನಾದ ಶ್ರೀನಿವಾಸನನ್ನು ಭೋಜನಕ್ಕಾಗಿ ಪ್ರತ್ಯೇಕ-ಪ್ರತ್ಯೇಕವಾಗಿ ರತ್ನಪೀಠದಲ್ಲಿ ಕುಳ್ಳರಿಸಿ, ನಾನಾ ವಿಧವಾದ ಭಕ್ಷ್ಯ-ಭೋಜ್ಯಾದಿಗಳಿಂದ ಕೂಡಿದ ಅನ್ನ, ಪರಮಾನ್ನ ಇತ್ಯಾದಿಗಳನ್ನು ಬಡಿಸಿ, ಅನಂತರದಲ್ಲಿ ಇತರರೆಲ್ಲರಿಗೂ ಬಡಿಸಿದ ಮೇಲೆ, ಪುತ್ರ ಪೌತ್ರಾದಿಗಳಿಂದಲೂ ಹಾಗೂ ಪುರೋಹಿತರಿಂದಲೂ ಸಹಿತನಾದ ಭಗವಂತನು ಪದ್ಮಾವತೀ ಸಮನ್ವಿತನಾಗಿ ಭೋಜನವನ್ನು ಮಾಡಿದನು. ಆಕಾಶರಾಜನು ಶ್ರೀನಿವಾಸನ ಬಳಿಯಲ್ಲಿ ಕುಳಿತು ಭೋಜನ ಮಾಡಿದನು.(376) ಲಕ್ಷ್ಮಿದೇವಿ ಹಾಗೂ ಬಕುಲಾದೇವಿಯರಿಂದ ಸಹಿತಳಾಗಿ ಧರಣೀದೇವಿಯು ಬಹಳ ಅನಂದದಿಂದ ಭೋಜನವನ್ನು ಮಾಡಿದಳು. (377)

ಮರುದಿನ ಪ್ರಭಾತ ಸಮಯದಲ್ಲಿ ಮುತ್ತೈದೆಯರು ಶ್ರೀನಿವಾಸನಿಗೆ ಸುಗಂಧ ತೈಲದಿಂದ ಸ್ನಾನವನ್ನು ಮಾಡಿಸಿದರು. ಮಂಗಲ ಮಹೋತ್ಸವದ ಈ ಸಂದರ್ಭದಲ್ಲಿ ಪರಸ್ಪರರು ಅನ್ಯೂನ್ಯವಾಗಿ ಸ್ನಾನಾದಿ ಗಳನ್ನು ಮಾಡಿದ ನಂತರ ಪದ್ಮಾವತಿ ಶ್ರೀನಿವಾಸರ ಸಂಗಡ ಸುವಾಸಿನಿ ಯರು ಬಹು ಪರಿಹಾಸದೊಡನೆ ಸಂತೋಷಪಡುತ್ತಿದ್ದರು. (379)

ದೇವಾನಾಂ ಚ ಋಷೀಣಾಂ ಚ ನೃಪಾಣಾಂ ಮಾನುಷಾತ್ಮನಾಮ್
ಯಥೇಷ್ಟಂ ದಾಪಯಾಮಾಸ ಹೃಷ್ಟ ಆಕಾಶಭೂಮಿಪಃ ॥381॥

ಅಪೂಪಾನ್ವಿವಿಧಾನ್ ದಿವ್ಯಾನ್ ಸೂಪಶಾಕಾದಿಕಾಂಸ್ತಥಾ ।
ಘೃತಕುಲ್ಯಾಂ ಕ್ಷೀರಕುಲ್ಯಾಂ ದಧಿಕುಲ್ಯಾಂ ತತಃ ಪರಮ್ ॥382॥

ತತ ಉದ್ಧೃತ್ಯ ನಿಕ್ಷಿಪ್ತಂ ಬಹಿರ್ಭುಕ್ತವತಾಂ ನೃಣಾಮ್ ।
ಉಚ್ಛಿಷ್ಟಪತ್ರಜಾಲಂ ಚ ಪುಷ್ಕಲಾನ್ನಾದಿಸಂಯುತಮ್ ॥383॥

ಸಾರಮೇಯಗಣೈಃ ಕೀರ್ಣಂ ರಾಕ್ಷಸಾನಾಂ ಗಣೈಸ್ತಥಾ ।
ಏವಂ ಕೋಲಾಹಲಂ ಚಕ್ರೇ ದಿವಸಾಂಶ್ಚತುರಸ್ತಥಾ ॥384॥

ಹಾಸಸ್ತತ್ರ ವಿನೋದೇನ ನಿತ್ಯಮಾಸೀಚ್ಚ ಮಜ್ಜನಮ್ ।
ದಿವಸೇ ಪಂಚಮೇ ಪ್ರಾಪ್ತೇ ಕೃತ್ವಾ ನಾಕಬಲಿಂ ತಥಾ ॥385॥

ಕಲಶಾನ್ ಚತುರೋ ನ್ಯಸ್ಯ ದೀಪಜ್ವಾಲಾಭಿರಾಜಿತಾನ್ ।
ವಧೂವರೌ ಪ್ರತಿಷ್ಠಾಪ್ಯ ವರಸಿಂಹಾಸನೇ ಶುಭೇ ॥386॥

ಪೂಜಯಾಮಾಸ ಗೋವಿಂದಂ ಜಾಮಾತರಮನಾಮಯಮ್।
ಆಕಾಶರಾಜೋ ಧರ್ಮಾತ್ಮಾ ಕ್ಷೀರಪಾತ್ರಂ ಕರೇ ದಧತ್ ॥387॥

ರಾಜನು ಸಹ ಬ್ರಾಹ್ಮಣರಿಗೂ ದೇವತಾ ಸ್ತ್ರೀಯರಿಗೂ ಯತೇಚ್ಛವಾದ ಭೋಜನ, ಮಾನ ಮರ್ಯಾದೆಗಳೊಂದಿಗೆ ಬಹುದಕ್ಷಿಣಾ ದಾನಗಳನ್ನು ವಿತರಿಸಿದನು. (381) ವಿಧವಿಧವಾದ ಅಪೂಪಗಳು, ರುಚಿಕರವಾದ ನಾನಾವಿಧವಾದ ತರಕಾರಿಗಳಿಂದ ಸಿದ್ಧವಾದ ಪಲ್ಯಗಳು, ತೊವ್ವೆಗಳು ಇವುಗಳ ಯಥೇಚ್ಛವಾದ ವಿನಿಯೋಗವಾಗುತ್ತಿತ್ತು. ಊಟದ ಸಮಯದಲ್ಲಿ ತುಪ್ಪ, ಹಾಲು, ಮೊಸರುಗಳ ಕಾಲುವೆಯೇ ಅಲ್ಲಿ ಹರಿಯುತ್ತಿತ್ತು. ರಾಶಿ ರಾಶಿಯಾಗಿ ಉಳಿದ–ಹೊರಚೆಲ್ಲಿದ ಅನ್ನ ಭಕ್ಷ್ಯಾದಿಪದಾರ್ಥಗಳನ್ನು ರಾಕ್ಷಸರು ಮತ್ತು ಸಕಲ ಪ್ರಾಣಿಗಳು ತಿಂದು ತೇಗುತ್ತಿದ್ದರು. ಮದುವೆಯಾದ ನಾಲ್ಕು ದಿನಗಳ ಪರ್ಯಂತರವಾಗಿ ಅಭ್ಯಂಜನ ಸ್ನಾನಾದಿಗಳು, ಹಾಸ್ಯ ಭರಿತವಾದ, ವಿನೋದಪ್ರದ ಕಾರ್ಯಕ್ರಮಗಳು ಸಂತತವಾಗಿ ಜರುಗುತ್ತಿದ್ದವು. (385)

### ನಾಗಬಲಿ (ನಾಗೋಲಿ)

ಐದನೇಯ ದಿವಸ ನಾಗಬಲಿಯನ್ನು ಮಾಡಿ, ಶ್ರೇಷ್ಠವಾದ ಸಿಂಹಾಸನದಲ್ಲಿ ಪ್ರಜ್ವಲಿಸುತ್ತಿರುವ ದೀಪಜ್ವಾಲೆಗಳ ಮಧ್ಯದಲ್ಲಿ ವಧೂ –ವರರನ್ನು ಪ್ರತಿಷ್ಠಾಪಿಸಿ ಅಳಿಯನಾದ ಶ್ರೀನಿವಾಸನನ್ನು ಆಕಾಶರಾಜನು ಪೂಜೆ ಮಾಡಿದನು. ಬಕುಲಾಮಾಲೆಯನ್ನು ಸಹ ಉಚಿತ ವಸ್ತ್ರಾಲಂಕಾರ

ಮಾತರಂ ವಾಸುದೇವಸ್ಯ ರಾಜನ್ ಬಕುಲಮಾಲಿಕಾಮ್ ।
ಪೂಜಯಿತ್ವಾ ವಿಧಾನೇನ ವಸ್ತ್ರಾಲಂಕಾರಭೂಷಣೈಃ ॥388॥

ನಾಭಿಂ ಕ್ಷೀರೇಣ ಸಮ್ಮೃಜ್ಯ ಪುತ್ರೀಂ ಪದ್ಮಾವತೀಂ ನೃಪಃ ।
ಅರ್ಪಯಾಮಾಸ ದುಃಖೇನ ಬ್ರಹ್ಮಣೋ ರಾಜಸತ್ತಮಃ ॥389॥

ಮಹಾಲಕ್ಷ್ಮ್ಯಾ ನಾಭಿಮೂಲಂ ಸಘೃತಕ್ಷೀರಸೇಚನಮ್ ।
ಕೃತ್ವಾಽರ್ಪಯಾಮಾಸ ಪುತ್ರೀಂ ರುದನ್ಗದ್ಗದಕಂಠವಾನ್ ॥390॥

ಶ್ರೀನಿವಾಸಸ್ಯ ಕೃಷ್ಣಸ್ಯ ಶೇಷಾಚಲನಿವಾಸಿನಃ ।
ರಾಜಭಾರ್ಯಾ ಮಹಾಭಾಗ ರುದಂತೀ ಕುರರೀ ಯಥಾ ॥391॥

ಪುತ್ರೀಹಸ್ತಂ ಸ್ವಹಸ್ತೇನ ಧೃತ್ವಾ ರಾಜಕುಲಾಂಗನಾ ।
ಕ್ಷೀರಂ ಸಂಯೋಜ್ಯ ಕೃಷ್ಣಸ್ಯ ನಾಭಿಮೂಲೇಽತಿದುಃಖಿತಾ ॥392॥

ಭೃಶಂ ರುದಂತೀ ಮಂತ್ರೇಣ ದುಃಖಸಂದಿಗ್ಧಲೋಚನಾ ।
ಅರ್ಪಯಾಮಾಸ ಕೃಚ್ಛ್ರೇಣ ಪುತ್ರೀಂ ಪದ್ಮಾವತೀಂ ತತಃ ॥393॥

ಪ್ರೋವಾಚ ಚ ಶ್ರೀನಿವಾಸಂ ರುದಂತೀ ರಾಜವಲ್ಲಭಾ ।

ಧರಣ್ಯುವಾಚ–

ಗಳಿಂದ ಪೂಜಿಸಿ, ಆಕೆಯ ನಾಭಿಕಮಲಕ್ಕೆ ಹಾಲೆರೆದು, ಅದರಂತೆ ಮಹಾಲಕ್ಷ್ಮಿಯನ್ನು ಸಹ ಅರ್ಚಿಸಿ, ಆಕೆಯ ನಾಭಿಕಮಲಕ್ಕೂ ಸಹ ಘೃತಮಿಶ್ರಿತವಾದ ಕ್ಷೀರಸೇಚನವನ್ನು ಮಾಡಿ, ಪದ್ಮಾವತಿಯನ್ನು, ವಿರಹದುಃಖದಿಂದ ರೋದನ ಮಾಡುತ್ತಾ, ಅವರಿಗೆ ಒಪ್ಪಿಸಿದನು.(389)

### ಕನ್ಯಾಸಮರ್ಪಣ (ಹೆಣ್ಣು ಒಪ್ಪಿಸುವದು)

ಧರಣಿದೇವಿಯೂ ಸಹ ಪದ್ಮಾವತಿ ವಿರಹವೇದನೆಯಿಂದ ದುಃಖಿತಳಾಗಿ ಲಕ್ಷ್ಮೀನಿವಾಸನಾದ ಶ್ರೀನಿವಾಸನಿಗೆ ಆತನ ನಾಭಿಕಮಲಕ್ಕೆ ಹಾಲನ್ನೆರದು ಪದ್ಮಾವತಿಯ ಕೈಯನ್ನು ಹಿಡಿದು ಆತನ ಕೈಯಲ್ಲಿಟ್ಟು ಪದ್ಮಾವತಿಯನ್ನು ಶ್ರೀನಿವಾಸನಿಗೆ ಅರ್ಪಿಸಿದಳು.(392) "ನವಮಾಸ 'ಗಳನ್ನು ಉದರದಲ್ಲಿ ಧರಿಸಿ, ಲಾಲಿಸಿ, ಇದುವರೆಗೆ ಪೋಷಿಸಿ, ಬೆಳೆಸಿದ ಪದ್ಮಾವತಿಯನ್ನು ನಿನ್ನ ಅಧೀನಳನ್ನಾಗಿ ಮಾಡುತ್ತಿದ್ದೇನೆ" ಎಂದು ಹೇಳುತ್ತಾ ಪದ್ಮಾವತಿಯನ್ನು ಆಲಿಂಗಿಸಿ, ರೋದಿಸಹತ್ತಿದಳು. ಇದನ್ನು ನೋಡಿದ ಆಕಾಶರಾಜನೂ ಸಹ ಬಹುದುಃಖಿತನಾಗಿ 'ಹಾ ಪದ್ಮಾವತಿಯೇ! ನಿನ್ನ ವಿಯೋಗದಿಂದ ನಾನು ಅತ್ಯಂತ ಮಂದಭಾಗ್ಯ ನಾಗಿರುವೆನು. ನನ್ನ

'ಪಾಲಿತಾಂ ಲಾಲಿತಾಂ ಪುತ್ರೀಂ ನವಮಾಸಧೃತಾಂ ಮಯಾ ॥394॥

ತ್ವದಧೀನಾಂ ಜಗನ್ನಾಥ ಕರಿಷ್ಯೇ ಮಮ ನಂದಿನೀಮ್' ।
ಇತ್ಯೇವಮರ್ಪಯಾಮಾಸ ಶ್ರೀನಿವಾಸಕರಾಂಬುಜೇ ॥395॥

ಸ ತಸ್ಯಾ ರೋದನಂ ದೃಷ್ಟ್ವಾ ರಾಜಾ ದುಃಖಪರಾಯಣಃ ।
ರುರೋದ ದೀನವದನಃ ಪುತ್ರೀಮಾಲಿಂಗ್ಯ ಭೂಪತಿಃ ॥396॥

ರಾಜೋವಾಚ–

'ಹಾ ಪುತ್ರೀ ಮಂದಭಾಗ್ಯೋಽಹಂ ತ್ವದ್ವಿಯೋಗೇನ ಕೇವಲಮ್ ।
ಜೀವನಂ ಮಮ ಕಲ್ಯಾಣಿ ನ ಸ್ಥಿರಂ ಚ ಭವಿಷ್ಯತಿ ॥397॥

ಕ್ರೀಡಾಮೃಗಶ್ಚ ತೇ ಪುತ್ರಿ ಆಹಾರಂ ಚ ನ ಸೇವತೇ ।
ಕ್ರೀಡಾಗೃಹೇ ರಾಜಪುತ್ರಿ ತಥಾ ಭೋಜನಸದ್ಮನಿ ॥398॥

ಭ್ರಾತಾ ತವ ವರಾರೋಹೇ ಕಥಂ ಕ್ರೀಡಾಂ ಕರಿಷ್ಯತಿ' ।
ಏವಂ ರುದಂತಮಾಲೋಕ್ಯ ಭ್ರಾತರಂ ದೀನಚೇತಸಮ್ ॥399॥

ತೋಂಡಮಾನೋ ನೃಪಶ್ರೇಷ್ಠ ದುಃಖಿತೋ ವಾಕ್ಯಮಬ್ರವೀತ್ ।

ತೋಂಡಮಾನ ಉವಾಚ–

'ವಯಂ ದರಿದ್ರಾ ನಿರ್ಭಾಗ್ಯಾ ಕೃಪಣಾ ದೀನಚೇತಸಃ ॥400॥

ವಯಂ ಮರಣಮಾಪನ್ನಾ ನಾತ್ರ ಕಾರ್ಯಾ ವಿಚಾರಣಾ ।
ಏತಾದೃಶೀ ಚ ಕಲ್ಯಾಣೀ ನೈವ ಲಬ್ಧಾ ಕಲೌ ಯುಗೇ ॥401॥

ಜೀವನವೇ ಅತಂತ್ರವಾಗಿರುವದು. ನಿನ್ನ ಕ್ರೀಡಾಮೃಗಗಳು ನೀನಿಲ್ಲದೇ ಆಹಾರವನ್ನು ಸ್ವೀಕರಿಸುವದಿಲ್ಲ. ಕ್ರೀಡಾಗೃಹ ದಲ್ಲಿ ಆಗಲೀ ಭೋಜನ ಗೃಹದಲ್ಲಿಯೇ ಆಗಲೀ ನೀನಿಲ್ಲದೇ ನಿನ್ನ ತಮ್ಮನು ಹೇಗೆ ಕ್ರೀಡಿಸಿಯಾನು?' ಎಂದು ಬಹುಪ್ರಕಾರವಾಗಿ ದುಃಖಿಸಿದನು. (399) ಆಕಾಶರಾಜನು ಅಳುವದನ್ನು ನೋಡಿದ ಅವನ ತಮ್ಮನಾದ ತೋಂಡಮಾನನು 'ನಾವಿಂದು ಪದ್ಮಾವತಿಯಿಲ್ಲದೇ ನಿಶ್ಚಯವಾಗಿಯೂ ನಿರ್ಭಾಗ್ಯರಾಗಿರುವೆವು. ನಾವು ದರಿದ್ರರೂ, ಕೃಪಣರೂ ದೀನರೂ ಆಗಿರುವೆವು. ಪದ್ಮಾವತಿಯಿಲ್ಲದ ನಾವೆಲ್ಲರೂ ಸತ್ತಂತೆಯೇ ಸರಿ. ಇಂತಹ ಕನ್ಯೆಯು ಈ ಕಲಿಯುಗದಲ್ಲಿ ಕಾಣಿಸುವದೇ ಅತ್ಯಂತ ದುರ್ಲಭವು. ಅವಳ ವಿಯೋಗವು ನಮಗೆ ಮರಣ ವಿದ್ದಂತೆಯೇ ಸರಿ' ಎಂದು ನುಡಿದನು. (402) ಆಗ ವಿಷ್ವಕ್ಸೇನನಾದ ವಸುದಾನನು

ಇತ್ಥಂ ವಯಂ ನಿಶ್ಚಿನುಮೋ ವಿಯೋಗಭೃಶದುಃಖಿತಾः' ।
ಏವಂ ತಾನ್ ರುದತೋ ದೃಷ್ಟ್ವಾ ವಿಷ್ವಕ್ಸೇನೋऽತಿದುಃಖಿತಃ ॥402॥
ಭಗಿನೀಂ ದೀನವದನಾಮಾಲಿಂಗ್ಯ ಪ್ರಾರುದನ್ಮುಹುಃ ॥403॥

ವಸುದಾನ ಉವಾಚ–

'ಮಾತರ್ಮಾಂ ಬಾಲಕಂ ತ್ಯಕ್ತ್ವಾ ಯಥಾ ಲೋಕೇ ಧನಾರ್ಜಕಃ ।
ಗಚ್ಛೇತ್ತಥಾ ಮಾಂ ಭಗಿನಿ ತ್ಯಕ್ತ್ವಾ ತ್ವಂ ಕ್ವ ನು ಗಚ್ಛಸಿ' ॥404॥

ಏವಂ ಪ್ರಸಂಗಾತ್ತತ್ರಾऽಸೀದ್ದೇವಾನಾಮಪಿ ಭೂಮಿಪ ।
ಋಷೀಣಾಂ ಕಶ್ಯಪಾದೀನಾಂ ದುಃಖಮತ್ಯಂತದಾರುಣಮ್ ॥405॥

ರುದಂತಂ ನೃಪತಿಂ ದೃಷ್ಟ್ವಾ ಶ್ರೀನಿವಾಸಃ ಸತಾಂ ಗತಿಃ ।
ಸ್ವಯಂ ರುರೋದ ಗೋವಿಂದೋ ಭಗಿನೀಂ ಪಾರ್ಥವಲ್ಲಭಾಮ್ ॥406॥

ಸ್ಮೃತ್ವಾ ಶ್ರೀದೇವಕೀಪುತ್ರೋ ತದದ್ಭುತಮಿವಾಭವತ್ ।
ಇತ್ಥಂ ಕೃತ್ವಾ ಲೋಕರೀತಿಮೈರಾವತಮುಪಾಶ್ರಿತಃ ॥407॥

ಪದ್ಮಾವತ್ಯಾ ತಯಾ ಸಾರ್ಧಂ ಸರ್ವವಾದ್ಯಸಮನ್ವಿತಃ ।
ಗ್ರಾಮಂ ಪ್ರದಕ್ಷಿಣೀಕೃತ್ಯ ರಮಯಾ ಸಹಿತೋ ಹರಿಃ ॥408॥

ಸ್ವನಿವೇಶಗೃಹಂ ಭೇಜೇ ಪದ್ಮಾಸನಭವಾದಿಕೈಃ ।
ತತೋ ಹರಿಃ ಶ್ರೀನಿವಾಸಃ ಸ್ವಸ್ಥಾನಂ ಗಂತುಮೈಹತ ॥409॥

ಅತಿ ದುಃಖಿತನಾಗಿ 'ಹೇ ಪದ್ಮಾವತಿಯೇ! ಬಾಲಕನಾದ ನನ್ನನ್ನು ಬಿಟ್ಟು ನೀನೆಲ್ಲಿ ಹೋಗುತ್ತಿರುವಿ. ಧನವನ್ನು ಬಯಸುವ ವ್ಯಕ್ತಿಯು ಧನಾರ್ಜನೆಗೆ ತನ್ನೆಲ್ಲ ಪರಿವಾರವನ್ನು ಬಿಟ್ಟು ಲೋಕಾಂತರವನ್ನು ಕುರಿತು ಹೋಗುವಂತೆ ನೀನು ನನ್ನನ್ನು ಬಿಟ್ಟು ಹೊರಡುತ್ತಿರುವಿ. ನೀನಿರದೇ ಹೇಗಿರಲಿ? ಎಂದು ಅಳಹತ್ತಿದನು. ಇದನ್ನು ನೋಡಿದ ಕಶ್ಯಪಾದಿ ಋಷಿಗಳೂ ಸಹ ಆರ್ದ್ರಹೃದಯರಾಗಿ ಬಹುದುಃಖವನ್ನನುಭವಿಸಿದರು. ಇದರಂತೆ ಬಂಧು ಬಾಂಧವರೆಲ್ಲರೂ ಸಹ ದುಃಖಭರಿತರಾಗಿ ಪದ್ಮಾವತಿಯನ್ನು ಭಗವಂತನಿಗೆ ಒಪ್ಪಿಸಿದರು. (407) ಎಲ್ಲರ ದುಃಖವನ್ನು ನೋಡುತ್ತಿದ್ದ ಶ್ರೀನಿವಾಸನು ಕೃಷ್ಣಾವತಾರದಲ್ಲಿ ಸುಭದ್ರೆಯನ್ನು ಅಗಲಿದ ಸಂದರ್ಭವನ್ನು ಜ್ಞಾಪಿಸಿಕೊಂಡವನಂತೆ ಅಳಹತ್ತಿದನು. ಈ ರೀತಿಯಾಗಿ ಲೋಕನಟನೆಯನ್ನು ಮಾಡುತ್ತಾ ಮಾನವ ಜನ್ಮದಲ್ಲಿ ಅವತರಿಸಿದಾಗ ಅಪ್ರಾಕೃತ ಸಚ್ಚಿದಾನಂದ ವಿಗ್ರಹನಾಗಿದ್ದರೂ ಸಹ ಮಾನವರಂತೆ ನಟನೆ ಮಾಡುತ್ತಾ ಮಾನವ ಕಾರ್ಯಗಳನ್ನು ಮಾಡುತ್ತಾ ಪದ್ಮಾವತೀ ಸಮೇತನಾದ ಪರಮಾತ್ಮನು

ಗರುಡಸ್ಕಂಧಮಾರೂಢಃ ಪತ್ನೀಂ ಪದ್ಮಾವತೀಮಪಿ ।
ಆರೋಪಯನ್ ವರಾರೋಹಾಮನ್ಯೋನ್ಯಂ ಪರಿರಭ್ಯ ಚ ॥410॥

ಗರುಡಸ್ಕಂಧಮಾರೂಢೋ ಗಂತುಂ ಸ್ವಸ್ಥಾನಮುತ್ಸುಕಃ ।
ಹರಿರಾಮಂತ್ರಣಾರ್ಥಂ ತು ಶ್ವಶ್ರೂಶ್ವಶುರಯೋಸ್ತದಾ ॥411॥

ಪುನರ್ಗೃಹಂ ಸಂಪ್ರವಿಶ್ಯ ಗಮನೇಚ್ಛುರಭೂದಥ ।
ಶ್ವಶ್ರೂಂ ಚ ಶ್ವಶುರಂ ಚೈವ ಸಾಷ್ಟಾಂಗಂ ಪ್ರಣನಾಮ ಚ ॥412॥

ಆಶೀರ್ವಾದಮತಶ್ಚಕ್ರೇ ಸ್ವಜಾಮಾತರನಾಮಯಮ್ ।
ಆಕಾಶರಾಜಶ್ವಶುರಃ ಶ್ವಶ್ರ್ವಾ ಚ ಧರಯಾ ಸಹ ॥413॥

ಆಕಾಶರಾಜ ಉವಾಚ–

'ದೀರ್ಘಾಯುರ್ಭವ ಗೋವಿಂದ ಸರ್ವಲೋಕಧುರಂಧರ' ।
ಇತ್ಯಾಶಿಷಾಽಭಿನಂದ್ಯಾಥ ವಾಸುದೇವಮಭಾಷತ ॥414॥

'ಮಾಸಾಂತೇ ಗಚ್ಛ ಗೋವಿಂದ ವಧ್ವಾ ಸಹ ವಯೋಗತಮ್ ।
ಶ್ವಶುರಂ ಮಾಂ ಚ ತೇ ಶ್ವಶ್ರೂಂ ಮಾನಯಸ್ವ ಮಹಾಮತೇ ॥415॥

ಇತಿ ತಸ್ಯ ವಚಃ ಶ್ರುತ್ವಾ ವಾಸುದೇವೋಽಬ್ರವೀನ್ನೃಪಮ್ ।

ಶ್ರೀನಿವಾಸ ಉವಾಚ–

'ನೃಪ ವಾಕ್ಯಂ ಶೃಣುಷ್ವೇದಂ ಕಾರ್ಯಸ್ಯ ಮಹತೀ ತ್ವರಾ ॥416॥

ಐರಾವತವನ್ನೇರಿ ಲಕ್ಷ್ಮೀಸಮೇತನಾಗಿ, ಗ್ರಾಮಪ್ರದಕ್ಷಿಣೆಯನ್ನು ಮಾಡಿ, ಬ್ರಹ್ಮರುದ್ರಾದಿ ದೇವತೆಗಳೊಂದಿಗೆ ತನ್ನ ನಿವಾಸಕ್ಕೆ ಬಂದನು. (409)

### ಊರಿಗೆ ಮರಳಲು ಸಿದ್ಧತೆ

ಅನಂತರದಲ್ಲಿ ತನ್ನ ಸ್ವಂತ ನಿವಾಸಕ್ಕೆ ಪ್ರಯಾಣ ಬೆಳೆಸುವ ಇಚ್ಛೆಯಿಂದ ಪದ್ಮಾವತಿಯೊಡನೆ ಗರೂಢಾರೂಢನಾಗಿ ಗಮನೇಚ್ಛುವಾಗಿ ತನ್ನ ಅತ್ತೆ ಧರಣಿದೇವಿಗೂ, ಮಾವ ಆಕಾಶರಾಜನಿಗೂ ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು. ಆಗ ಆಕಾಶರಾಜನು "ಸಮಸ್ತ ಭುವನಗಳನ್ನು ಸರ್ವದಾ ರಕ್ಷಣ ಮಾಡತಕ್ಕ ಜಗನ್ನಿಯಾಮಕನಾದ ಹೇ ಭಗವಂತನೇ! ಧೀರ್ಘಾಯುಷ್ಯವಂತನಾಗಿ ನಮಗೆ ಗೋಚರಿಸು. ಒಂದು ತಿಂಗಳವರೆಗೆ ಇಲ್ಲಿಯೇ ಇದ್ದು ಅನಂತರದಲ್ಲಿ ಇಲ್ಲಿಂದ ನಿನ್ನ ಊರಿಗೆ ಪ್ರಯಾಣಿಸು" ಎಂದು ಪ್ರಾರ್ಥಿಸಿದನು. (415) ಆದರೆ ಶ್ರೀನಿವಾಸನು ಕಾರ್ಯದ

ತಸ್ಮಾದಾಜ್ಞಾಂ ಚ ಮೇ ದೇಹಿ ರಾಜನ್ ತೇ ಸ್ಯಾತ್ಕೃಪಾ ಮಯಿ'।
ಇತ್ಯುಕ್ತ್ವಾ ವಾಸುದೇವಸ್ತು ಗರುಡಸ್ಕಂಧಮಾರುಹತ್ ॥417॥

ಜಗಾಮ ಭಗವಾನ್ ಸಾಕ್ಷಾತ್ಸರ್ವದೇವೈಸ್ಸಮನ್ವಿತಃ ।
ಅಕುಲಾ ವ್ಯಾಕುಲಾಃ ಸರ್ವಂ ಪೌರಾ ಜಾನಪದಾದಯಃ ॥418॥

ಪ್ರಾಕಾರಗೋಪುರಾರೂಢಾಃ ಪಶ್ಯಂತಃ ಸ್ವದೃಶಾಽವದನ್ ।

ಜನಾ ಊಚುಃ-

'ಧನ್ಯಾ ರಾಜಕುಲೋತ್ಪನ್ನಾ ಪದ್ಮಾ ಕಮಲಲೋಚನಾ ॥419॥

ಅನುಗಚ್ಛತಿ ಗೋವಿಂದಂ ಪಶ್ಯತೇತಿ ಪರಸ್ಪರಮ್' ।
ಇತ್ಯೇವಂ ಪೌರನಾರೀಣಾಂ ಸಲ್ಲಾಪಶ್ಚ ಬಭೂವ ಹ ॥420॥

ತದಾ ದದೌ ಮಹಾರಾಜಃ ಪಾರಿಬರ್ಹಂ ಶ್ರೀಯಃ ಪತೇಃ ।
ತಂಡುಲಾನ್ ಶಾಲಿಸಂಭೂತಾನ್ ವೃಷಭಾಣಾಂ ರಥೋಪರಿ ॥421॥

ಆರೋಪ್ಯ ಪ್ರೇಷಯಾಮಾಸ ಶತಂ ಖಾರೀ ವಿಯನ್ನೃಪಃ ।
ಮುದ್ಗಾನ್ ಗೋಸ್ವಾಮಿಸಂರೂಢಾಂಸ್ತ್ರಿಂಶತ್ಖಾರೀರ್ದದೌಹರೇಃ ॥422॥

ಒತ್ತಡ ವಿರುವುದರಿಂದ ಅವತ್ತಿನ ದಿವಸವೇ ಸಮಸ್ತ ದೇವತೆಗಳಿಂದ ಕೂಡಿಕೊಂಡು ಗರೂಢಾರೂಢನಾಗಿ ಪ್ರಯಾಣಬೆಳೆಸುವೆನೆಂದು ತಿಳಿಸಿ ಹೊರಡಲುದ್ಯುಕ್ತನಾದನು. ಅನಂತರ ಸಮಸ್ತ ಬಂಧು ಬಾಂಧವರು ಹಾಗೂ ಪುರಜನರು ಬಹು ವ್ಯಸನದಿಂದ ಭಗವಂತನನ್ನು ಬೀಳ್ಕೊಟ್ಟು, ಪ್ರಾಕಾರ ಗೋಪುರಗಳನ್ನು ಏರಿ ನಿಂತ ಪೌರರು ಭಗವಂತನನ್ನು ಅನುಸರಿಸಿ ಹೊರಟ ಪದ್ಮಾವತಿಯ ಕೃತಾರ್ಥತೆಯನ್ನು ಬಾಯಿತುಂಬಾ ಹೊಗಳುತ್ತಾ 'ರಾಜಕುಲೋತ್ಪನ್ನಳಾದ ಕಮಲಲೋಚನೆಯಾದ ಪದ್ಮಾವತಿಯು ಗೋವಿಂದನನ್ನು ಅನುಸರಿಸಿ ಹೊರಟಿರುವಳು. ನೋಡಿರಿ' ಎಂದು ನುಡಿದರು.(420)

### ಉಪಾಯನಪ್ರದಾನ

ಆಕಾಶರಾಜನು ಅಳಿಯನಾದ ಶ್ರೀನಿವಾಸನಿಗೆ ವೃಷಭಗಳ ಮೇಲೆ ನೂರು ಅಕ್ಕಿಯ ಭಾರಗಳನ್ನು, ಮುವತ್ತು ಹೆಸರಿನ ಭಾರಗಳನ್ನು, ದೊಡ್ಡದಾದ ಒಂದು ಭಾರ ಗುಡವನ್ನು, ಅಷ್ಟೇ ಹುಣಸೇ ಹಣ್ಣನ್ನು, ಸಾವಿರಾರು ಕೊಡ ಹಾಲು ತುಪ್ಪವನ್ನು, ನೂರಾರು ಕೊಡ ಮೊಸರನ್ನು, ಐದುನೂರು

ಗುಡಭಾರಂ ಮಹಾಂತಂ ಚ ತಿಂತ್ರಿಣೀಭಾರಮೇವ ಚ ।
ಪಯೋಘಟಸಹಸ್ರಾಣಿ ದಧಿಭಾಂಡಶತಾನಿ ಚ ॥423॥

ಸಹಸ್ರಾರ್ಧಂ ಘೃತಾಕ್ತಾನಿ ಚರ್ಮಪಾತ್ರಾಣಿ ಸರ್ಷಪಾನ್ ।
ಮೇಥಿಕಾನಿ ಚ ಹಿಂಗುಂ ಚ ಲವಣಂ ತೈಲಮೇವ ಚ ॥424॥

ತದಾ ಶರ್ಕರಯಾ ಪೂರ್ಣಘಟಾಂಸ್ತು ದ್ವೇ ಶತೇ ತಥಾ ।
ಉರ್ವಾರುಕುಂ ಚೂತಕಂ ಚ ರಾಜರಂಭಾಫಲಾನಿ ಚ ॥425॥

ಕೂಷ್ಮಾಂಡಂ ಕಂದಮೂಲಾನಿ ಮರೀಚ್ಯಾಮಲಕಾನಿ ಚ ।
ಮಧುಭಾಂಡಶತೇ ದ್ವೇ ಚ ರಂಭಾಪರ್ಣಾನಿ ಕಾಷ್ಠಕಾನ್ ॥426॥

ಅಶ್ವಾನಾಮಯುತಂ ದತ್ವಾ ಗಜಾನಾಂ ಚ ಸಹಸ್ರಕಮ್ ।
ಧೇನೂನಾಂ ಪಂಚಸಾಹಸ್ರಮವಿಕಾನಾಂ ಶತಂ ತಥಾ ॥427॥

ದಾಸೀನಾಂ ದ್ವಿಶತಂ ರಾಜನ್ ದಾಸಾನಾಂ ತ್ರಿಶತಂ ತಥಾ ।
ವಸ್ತ್ರಾಣಿ ವಿವಿಧಾನ್ಯಾಶು ಪರ್ಯಂಕಂ ರತ್ನಭೂಷಿತಮ್ ॥428॥

ಉಪಬರ್ಹಸಮಾಯುಕ್ತಂ ಹಂಸತೂಲಿಕಯಾಽನ್ವಿತಮ್ ।
ಏವಮಾದೀನಿ ವಸ್ತೂನಿ ಗೃಹೀತ್ವಾ ನೃಪಸತ್ತಮಃ ॥429॥

ಪುತ್ರೇಣ ಸಹಿತೋ ರಾಜಾ ಶ್ರೀನಿವಾಸಪರಾಯಣಃ ।
ಆಕಾಶರಾಜಃ ಸಂಪ್ರಾಪ್ತಃ ಶ್ರೀನಿವಾಸಸ್ಯ ಸನ್ನಿಧಿಮ್ ॥430॥

ಕೊಡ ತುಪ್ಪವನ್ನು, ಉಪ್ಪು, ಸಾಸಿವೆ, ಇಂಗು, ಸಕ್ಕರೆ, ಎಣ್ಣೆ, ದೊಡ್ಡಗಾತ್ರದ ಬಾಳೆ ಹಣ್ಣುಗಳು, ಸಿಹಿ ಬೂದುಗುಂಬಳಕಾಯಿ ಹಾಗೂ ಗೆಡ್ಡೆಗೆಣಸುಗಳು, ನೆಲ್ಲಿ ಚೆಟ್ಟುಗಳು, ನೂರು ಜೇನುತುಪ್ಪದ ಬಾಂಡಿಗಳು, ಬಾಳೆ ಎಲೆಗಳು, ಕಾಷ್ಠಗಳು, ಹತ್ತು ಸಾವಿರ ಕುದುರೆಗಳು, ಒಂದುಸಾವಿರ ಆನೆಗಳು, ಐದುಸಹಸ್ರ ಗೋವುಗಳು, ಒಂದುನೂರು ಆಡುಗಳು, ಎರಡುನೂರು ದಾಸಿಯರು, ಮೂರುನೂರು ದಾಸರು, ರತ್ನಭೂಷಿತವಾದ ಪರ್ಯಂಕ, ತಲೆದಿಂಬಿನಿಂದ ಸಹಿತವಾದ ಹಂಸತೂಲಿಕಾ ಇವೇ ಮುಂತಾದ ವಸ್ತುಗಳನ್ನು ತನ್ನೊಡನೆ ತಂದು ಪುತ್ರನಿಂದ ಸಹಿತನಾದ ಆಕಾಶರಾಜನು ಶ್ರೀನಿವಾಸನ ಸನ್ನಿಧಿಗೆ ಬಂದು ಅವೆಲ್ಲವನ್ನು ಸಮರ್ಪಿಸಿದನು. (430)

**ಆಕಾಶರಾಜನಿಗೆ ಅನುಗ್ರಹ**

ಆಗ ಶ್ರೀನಿವಾಸನು 'ನಾನು ಹೋಗಬೇಕಾಗಿರುವ ಸ್ಥಳವು ಬಹು ದೂರದಲ್ಲಿರುವದು.

ಅಗತಂ ಶ್ವಶುರಂ ದೃಷ್ಟ್ವಾ ಚೋತ್ತಸ್ಥೌ ಜಗದೀಶ್ವರಃ ।

ಶ್ರೀನಿವಾಸ ಉವಾಚ–

'ದೂರಾಧ್ವಾನಂ ಮಹಾರಾಜ ಕಿಮರ್ಥಂ ತ್ವಂ ಸಮಾಗತಃ ॥431॥

ದಾತವ್ಯಂ ಕಿಂ ನೃಪಶ್ರೇಷ್ಠ ತವ ಪುತ್ರಸ್ಯ ಮೇಽನಘ ।
ಕನ್ಯಾ ದತ್ತಾ ಸುತಃ ಪ್ರಾಪ್ತಃ ಸುಕೃತಂ ಕಿಂ ಕೃತಂ ತ್ವಯಾ ॥432॥

ಸಂತೋಷೋ ಹ್ಯತುಲಃ ಪ್ರಾಪ್ತಃ ಮಮ ತಾವನ್ನ ಸಂಶಯಃ ।
ಕಿಂ ತೇ ಮನೋಗತಂ ರಾಜನ್ ತನ್ಮಮಾಽಚಕ್ಷ್ವ ಭೂಪತೇ ॥433॥

ಸಂದೇಹಂ ಮಾ ಕುರುಷ್ವಾತ್ರ ದಾನಾದಾನೇ ಮಹೀಪತೇ' ।
ವಾಸುದೇವವಚಃ ಶ್ರುತ್ವಾ ವಾಸುದೇವಮಭಾಷತ ॥434॥

ರಾಜೋವಾಚ–

'ಸರ್ವಮಂಗಲಮಸ್ಮಾಕಂ ತ್ವತ್ಪ್ರಸಾದೇನ ಕೇಶವ ।
ನಾನ್ಯದ್ಯಾಚೇ ರಮಾನಾಥ ತವ ಪಾದಸರೋರುಹೇ ॥435॥

ಭಕ್ತಿಂ ದೇಹ್ಯಚಲಾಂ ಕೃಷ್ಣ ಸಕುಟುಂಬಸ್ಯ ಮೇಽನಘ' ।
ತಚ್ಛ್ರುತ್ವಾ ವಚನಂ ತಸ್ಯ ಶ್ವಶುರಸ್ಯ ಮಹಾತ್ಮನಃ ॥436॥

ದತ್ತವಾಂಸ್ತಸ್ಯ ಸಾಯುಜ್ಯಮಾಕಾಶನೃಪತೇಸ್ತದಾ ।
ಶ್ಯಾಲಕಸ್ಯ ದದೌ ವಸ್ತ್ರಂ ಸ್ವಾಂಗಸ್ಥಂ ಮಧುಸೂದನಃ ॥437॥

ನೀನೇಕೆ ಪುನಃ ಅನುಸರಿಸಿ ಬಂದಿರುವಿ? ನೀನು ನಿನ್ನ ಮಗಳನ್ನೇ ನನಗೆ ವಿವಾಹಮಾಡಿಕೊಟ್ಟ ಮೇಲೆ ಪುತ್ರಸಮನಾದ ನನಗೆ ಕೊಡುವದಾದರೂ ಏನಿದೆ? ನಾನು ನಿನ್ನ ಉಪಚಾರದಿಂದ ಬಹು ಸಂತುಷ್ಟನಾಗಿರುವೆನು. ಇದರಲ್ಲಿ ಯಾವ ಸಂದೇಹವೂ ಬೇಡ' ಎಂಬುದಾಗಿ ಪ್ರಾಸ್ತಾವಿಕ ಮಾತುಗಳನ್ನಾಡಿ, ಆಕಾಶರಾಜನನನ್ನು ಅನುಗ್ರಹಿಸಲು "ಸಂದೇಹ ಮಾಡದೇ ನಿನ್ನ ಮನಸ್ಸಿನಲ್ಲಿ ಏನಿದೇ ಎಂಬುದನ್ನು ತಿಳಿಸು–ವರವನ್ನು ಬೇಡು" ಎಂದನು. ಆಗ ಆಕಾಶರಾಜನು "ಹೇ ಭಗವಂತ ! ನಿನ್ನ ಪರಮಾನುಗ್ರಹದಿಂದ ನನಗೆ ಸಮಸ್ತ ಮಂಗಲವೂ ಸರ್ವದಾ ಪೂರ್ಣವಾಗಿದೆ. ನಿನ್ನ ಪಾದಕಮಲವನ್ನು ಬಿಟ್ಟು ಬೇರೆ ಏನನ್ನೂ ನಾನು ಯಾಚಿಸುವುದಿಲ್ಲ. ಸಕುಟುಂಬನಾದ ನನಗೆ ನಿನ್ನಲ್ಲಿ ಅಚಲವಾದ ಭಕ್ತಿಯನ್ನು ಕೊಡು" ಎಂದನು. ಆಗ ಶ್ರೀನಿವಾಸನು ಆಕಾಶರಾಜನಿಗೆ ಸಾಯುಜ್ಯವನ್ನು ದಯಪಾಲಿಸಿದನು ಮತ್ತು ತಾನು ಮೈಮೇಲೆ ಹೊತ್ತುಕೊಂಡಿರುವ ಉತ್ತರೀಯ

ಜಾಮಾತ್ರಾ ಸ ತ್ವನುಜ್ಞಪ್ತಃ ಪುತ್ರೀಭವನಮಭ್ಯಗಾತ್ ।
'ಪುತ್ರಿ ಗಚ್ಛಾಮಿ ನಗರಂ ವಿಹರಸ್ವ ಹರಿಪ್ರಿಯೇ ||438||

ಶಯನೇ ಶ್ರೀನಿವಾಸಸ್ಯ ಶಯನಂ ಕುರುಮಂಗಲೇ' ।
ಸಾಂತ್ವಯಿತ್ವಾ ಸುತಾಂ ವೀರಃ ಪುಣ್ಯಾಂ ಕಮಲಲೋಚನಾಮ್ ||439||

ಶಶಾಸ ಸಾ ಸ್ವಪಿತ್ರೋಕ್ತಂ ಶೀಘ್ರಂ ಮಾಧವಮಭ್ಯಗಾತ್ ।
ರುದನ್ ಗದ್ಗದಕಂಠೇನ ಜಗಾಮ ನಗರಂ ನೃಪಃ ||440||

ಪದ್ಮಾವತ್ಯನುಗೋ ದೇವೋ ಬ್ರಹ್ಮರುದ್ರಾದಿಕೈರ್ಯುತಃ ।
ಸುವರ್ಣಮುಖರೀಂ ಪ್ರಾಪ್ಯ ತತ್ರಾऽವಾಸಮಕಲ್ಪಯತ್ ||441||

ಷಣ್ಮಾಸಾವಧಿ ಲಕ್ಷ್ಮೀಶೋ ದೀಕ್ಷಿತೋऽಹಂ ಮಹೀಪತೇ ।
ನ ಶೈಲರಾಜಮಾರೋಹ ಇತಿ ನಿಶ್ಚಿತ್ಯ ದೇವರಾಟ್ ||442||

ಅಗಸ್ತ್ಯಭವನಂ ಗತ್ವಾ ತತ್ರ ವಾಸಮಕಲ್ಪಯತ್ ।
ದೇವಾನ್ ಸಂಪ್ರೇಷಯಾಮಾಸ ಸ್ವಧಾಮಾನಿ ವೃಷಾಕಪಿಃ ॥
ಬ್ರಹ್ಮಾದೀನಾಂ ಸುರಾಣಾಂಚಮುನೀನಾಮೂರ್ಧ್ವರೇತಸಾಮ್ ||443||

ದಧೌ ವಸ್ತ್ರಂ ಯಥಾಯೋಗ್ಯಂ ಭಗವಾನ್ ಭಕ್ತವತ್ಸಲಃ ॥

ವಸ್ತ್ರವನ್ನು ತನ್ನ ಶಾಲಕನಿಗೆ ಕೊಟ್ಟು ಶಾಲಕನನ್ನು ಅನುಗ್ರಹಿಸಿದನು. (437)

ಆಕಾಶರಾಜನು ಪದ್ಮಾವತಿಗೆ ಪತಿಯೊಡನೆ ಸುಖವಾಗಿ ಇರಲು ಸಮಾಧಾನಕರ ವಾಕ್ಯಗಳನ್ನು ಹೇಳಿ 'ನಾನು ನನ್ನ ನಗರಕ್ಕೆ ಹಿಂದಿರುಗುವೆನು. ನೀನು ಶ್ರೀನಿವಾಸನೊಂದಿಗೆ ವಿಹರಿಸು. ಸುಖವಾಗಿರು' ಎಂದು ಆಶೀರ್ವದಿಸಿ, ಗದ್ಗದ ಕಂಠನಾಗಿ, ಕಣ್ಣೀರು ಸುರಿಸುತ್ತಾ ತನ್ನ ಪಟ್ಟಣವನ್ನು ಕುರಿತು ಪ್ರಯಾಣವನ್ನು ಬೆಳಿಸಿದನು. (440)

### ಅಗಸ್ತ್ಯಾಶ್ರಮದಲ್ಲಿ ಶ್ರೀನಿವಾಸ

ಅಲ್ಲಿಂದ ಶ್ರೀನಿವಾಸನು ಪದ್ಮಾವತಿಯೊಡನೆ ಬ್ರಹ್ಮರುದ್ರಾದಿ ಸಕಲ ದೇವತಾ ವೃಂದದಿಂದೊಡಗೂಡಿ ಸುವರ್ಣಮುಖೀ ನದಿಯ ದಡಕ್ಕೆ ಆಗಮಿಸಿ ಆರು ತಿಂಗಳ ವರೆಗೆ ವೇಂಕಟ ಶೈಲವನ್ನು ಏರುವುದಿಲ್ಲವೆಂದು ಸಂಕಲ್ಪಿಸಿ, ದೀಕ್ಷಾಬದ್ಧನಾಗಿ, ಅಲ್ಲಿಯೇ ಸಮೀಪದಲ್ಲಿ ಅಗಸ್ತ್ಯಾಶ್ರಮಕ್ಕೆ ಹೋಗಿ ಅಲ್ಲಿ ವಾಸಮಾಡಿದನು. (443)

ತನ್ನ ಮಂಗಲ ಮಹೋತ್ಸವಕ್ಕೆ ಆಗಮಿಸಿದ ಸಮಸ್ತರಾದ ದೇವತೆಗಳನ್ನು ಹಾಗೂ ಉರ್ಧ್ವ

ತೇನಾಽಜ್ಞಪ್ತಾ ಜಗದ್ಧಾತ್ರಾ ಜಗ್ಮುರ್ಲೋಕಂ ಸ್ವಕಂ ಸುರಾಃ ॥444॥

ಋಷಯಶ್ಚ ತಪೋಽರಣ್ಯಂ ಜಗ್ಮುರ್ನಾರಾಯಣಾಜ್ಞಯಾ ।
ಗತೇ ದೇವಗಣೇ ತತ್ರ ರಮೋವಾಚ ರಮಾಪತಿಮ್ ॥445॥

'ಗಚ್ಛಾಮಿ ಜಗದೀಶಾದ್ಯ ಕರವೀರಪುರಂ ಪ್ರತಿ' ।
ಅಜ್ಞಪ್ತಾ ದೇವದೇವೇನ ರಮಾ ಕೋಲ್ಹಾಪುರಂ ಯಯೌ ॥446॥

ಮಹೋತ್ಸವಂ ತಂ ತ್ವನುಭೂಯ ದೇವತಾ
ಬ್ರಹ್ಮೇಶಪೂರ್ವಾಃ ಸಹಸಾಽತಿಸಂಭ್ರಮಾತ್ ।
ಜಗ್ಮುಃ ಸ್ವಕಂ ಧಾಮ ಮಹಾನುಭಾವಾಃ
ನರೇಂದ್ರ ಪೂಜ್ಯಂ ಪ್ರಶಶಂಸುರಾದರಾತ್ ॥448॥

ಗತೇ ದೇವಗಣೇ ತತ್ರ ತ್ವಗಸ್ತ್ಯನಿಲಯೇ ಹರಿಃ ।
ಭುಂಜಾನೋ ಭೋಗಮತುಲಂ ತತ್ರಾಸ್ತೇ ಭಗವಾನಜಃ ॥449॥

ಶ್ರೀ ಶತಾನಂದ ಉವಾಚ–

'ವಿವಾಹಾಧ್ಯಾಯಮಹಿಮಾಂ ಯೇ ಶೃಣ್ವಂತಿ ಜನೇಶ್ವರ ।
ತೇಷಾಂ ಭಾಗ್ಯೋದಯಂ ವಕ್ಷ್ಯೇ ಶೃಣು ರಾಜನ್ ಸವಿಸ್ತರಮ್ ॥450॥

ರೇತಸ್ಕರಾದ ಮುನಿಗಳನ್ನು ಭಕ್ತವತ್ಸಲನಾದ ಭಗವಂತನು ಅವರವರ ಯೋಗ್ಯತಾನುಸಾರವಾಗಿ ವಸ್ತ್ರಾದಿಗಳನ್ನು ಅನುಗ್ರಹಿಸಿ, ತಮ್ಮ ತಮ್ಮ ಗೃಹಗಳಿಗೆ ಮರಳಲು ಅನುಮತಿಯನ್ನು ಕೊಟ್ಟನು. ದೇವತೆಗಳೆಲ್ಲರೂ ತಮ್ಮ ಲೋಕಗಳಿಗೆ ಹಿಂತಿರುಗಿದರು. ಅದರಂತೆ ಮಂಗಲ ಮಹೋತ್ಸವಕ್ಕೆ ಆಗಮಿಸಿದ್ದ ಮಹಾಲಕ್ಷ್ಮಿಯೂ ಸಹ ಶ್ರೀನಿವಾಸನ ಅನುಜ್ಞೆಯನ್ನು ಪಡೆದು, ಕರವೀರಮರಕ್ಕೆ ಹಿಂದಿರುಗಿದಳು. ಹೀಗೆ ಎಲ್ಲರೂ ತಮ್ಮ ತಮ್ಮ ಸ್ಥಾನಗಳಿಗೆ ಹಿಂತಿರುಗಿದ ಸಮಯದಲ್ಲಿ ಅಗಸ್ತ್ಯಮುನಿಗಳ ಆಶ್ರಮದಲ್ಲಿ ಉತ್ತಮವಾದ ಅಪ್ರಾಕೃತ ಭೊಗಗಳನ್ನು ಭುಂಜಿಸುವವನಾಗಿ, ಉತ್ಪತ್ತಿರಹಿತನಾಗಿದ್ದರೂ ಸಹ ಜಗತ್ತಿನಲ್ಲಿ ಉತ್ಪನ್ನನಾದವನಂತೆ ಲೋಕದೃಗ್ಗೋಚರನಾಗುತ್ತಾ ಸ್ವೋಚಿತ ಅಪ್ರಾಕೃತ ಭೋಗಗಳನ್ನು ಭುಂಜಿಸುತ್ತಾ ಅಲ್ಲಿಯೇ ವಾಸಮಾಡಿದನು.

### ವಿವಾಹ ಮಹೋತ್ಸವದ ಕಥಾಶ್ರವಣದ ಫಲ

ಶತಾನಂದರು ಜನಕರಾಜನನ್ನು ಕುರಿತು ವಿವಾಹ ಮಹೋತ್ಸವ ವೃತ್ತಾಂತ ವನ್ನು ಸವಿಸ್ತಾರವಾಗಿ ಬಣ್ಣಿಸಿದ ಮೇಲೆ ಈ ಕಥಾಶ್ರವಣವನ್ನು ಮಾಡಿದ ಪುಣ್ಯಜೀವಿಗಳು ಹೊಂದುವ ಫಲವನ್ನು

ಕೋಟಿಕನ್ಯಾಪ್ರದಾನಾಚ್ಚ ಯಾವದ್ಭೂಮಿಪ್ರದಾನತಃ ।
ಯತ್ಫಲಂ ಲಭತೇ ದೇಹೀ ತತ್ಫಲಂ ಶ್ರವಣಾಲ್ಲಭೇತ್ ॥451॥

ಯೇ ಉತ್ಸವಂ ಕಾರಯಂತಿ ವೈವಾಹಂ ವೇಂಕಟೇಶಿತುಃ ।
ತಸ್ಯೋತ್ಸವೋ ಭವೇದ್ರಾಜನ್ ವೇಂಕಟೇಶಪ್ರಸಾದತಃ ॥451॥

ಇತೀ ತೇ ಕಥಿತಂ ರಾಜನ್ ವಿವಾಹಚರಿತಂ ಹರೇಃ ।
ಶೃಣುಯಾಚ್ಛ್ರಾವಯೇದ್ವಾಪಿ ಸರ್ವಾಭೀಷ್ಟಮವಾಪ್ನುಯಾತ್ ॥
ಶುಭದಂ ಶೃಣ್ವತಾಂ ರಾಜನ್ ಸರ್ವೇಷಾಂ ಮಂಗಲಪ್ರದಮ್ ॥452॥

ಇತಿ ಶ್ರೀ ಭವಿಷ್ಯೋತ್ತರ ಪುರಾಣೇ ವೈಕುಂಠಗಿರಿಮಹಾತ್ಮೇ
ಶ್ರೀವೇಂಕಟೇಶಕಲ್ಯಾಣಮಹೋತ್ಸವವರ್ಣನಂ ನಾಮ ದ್ವಾದಶೋಧ್ಯಾಯಃ

॥ಶ್ರೀ ಕೃಷ್ಣಾರ್ಪಣಮಸ್ತು॥

* * * * *

ಈ ಕೆಳಗಿನಂತೆ ವಿವರಿಸಿದರು.

ಕೋಟಿ ಕನ್ಯಾದಾನವನ್ನು ಸಮಸ್ತ ಭೂಮಂಡಲ ದಾನವನ್ನು ಮಾಡಿದರೆ ಯಾವ ಫಲವು ಲಭಿಸುತ್ತದೆಯೋ ಅದೇ ಫಲವನ್ನು ಅಧಿಕಾರಿಯು ಭಕ್ತಿಯಿಂದ ಈ ಕಥೆಯನ್ನು ಶ್ರವಣ ಮಾಡಿದರೆ ಹೊಂದುವನು. ಯಾರು ಶ್ರೀನಿವಾಸನ ಕಲ್ಯಾಣ ಮಹೋತ್ಸವವನ್ನು ಭಕ್ತಿ ಭರಿತರಾಗಿ ಮಾಡಿಸುತ್ತಾರೋ ಭಗವಂತನ ಪ್ರಸಾದದಿಂದ ಅವರು ಸರ್ವದಾ ಮಂಗಲಮಯ ಉತ್ಸವವುಳ್ಳವರಾಗುವರು.

ಇಂತಹ ಶ್ರೇಷ್ಠವಾದ ಮಂಗಲ ಮಹೋತ್ಸವ ಕಥೆಯನ್ನು ಹೇಳಿದವರೂ ಕೇಳಿದವರೂ ಮತ್ತು ಕೇಳಿಸಿದವರೂ ಇವರೆಲ್ಲರೂ ಸಕಲ ಅಭಿಷ್ಟಗಳನ್ನು ಹೊಂದುವರು. ಈ ರೀತಿಯಾಗಿ ಶ್ರವಣ ಕೀರ್ತನಾದಿಗಳಲ್ಲಿ ಆಸಕ್ತರಾದ ಸರ್ವಭಕ್ತರಿಗೂ ಸಹ ಈ ಕಥಾನಕವು ಮಂಗಲಪ್ರದವೂ ಹಾಗೂ ಶುಭದಾಯಕವೂ ಕಲ್ಯಾಣಾದಿ ಸಮಸ್ತ ಮಂಗಲಕಾರ್ಯ ಸಂಸಿದ್ಧಿದಾಯಕವೂ ಆಗುವುದು.

ಇಲ್ಲಿಗೆ ಭವಿಷ್ಯೋತ್ತರ ಪುರಾಣಂತರ್ಗತವಾದ ಶ್ರೀ ವೇಂಕಟಗಿರಿ ಮಹಾತ್ಮೆಯಲ್ಲಿ ಶ್ರೀನಿವಾಸನ ಕಲ್ಯಾಣ ಕಥಾ ನಿರೂಪಣ ಪರವಾದ ಹನ್ನೆರಡನೆಯ ಪರಿಸಮಾಪ್ತವಾಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು ॥

*****

|| ಶ್ರೀ ಬಾದರಾಯಣೋ ವಿಜಯತೇ ||

ಶ್ರೀ ಸ್ಕಾಂದ ಪುರಾಣಾಂತರ್ಗತಂ

# ಶ್ರೀವೇಂಕಟೇಶಮಾಹಾತ್ಮ್ಯಂ

ಕನ್ನಡ ಸರಳಾನುವಾದ ಸಹಿತ

॥ಶ್ರೀ ಬಾದರಾಯಣೋ ವಿಜಯತೇ ತರಾಮ್ ॥

ಸ್ಕಾಂದಪುರಾಣಾಂತರ್ಗತಮ್

# ಶ್ರೀಮದ್ವೇಂಕಟೇಶಮಾಹಾತ್ಮ್ಯಮ್

## ಅಥ ಪ್ರಥಮೋऽಧ್ಯಾಯಃ

ಶ್ರೀಗುರುಭ್ಯೋ ನಮಃ ॥ ಹರಿಃ ಓಂ

ಶ್ರಿಯಃ ಕಾಂತಾಯ ಕಲ್ಯಾಣನಿಧಯೇ ನಿಧಯೇऽರ್ಥಿನಾಮ್ ।
ಶ್ರೀವೇಂಕಟನಿವಾಸಾಯ ಶ್ರೀನಿವಾಸಾಯ ಮಂಗಲಮ್ ॥*॥

ಶ್ರೀವೇಂಕಟಾಚಲಾಧೀಶಂ ಶ್ರಿಯಾಧ್ಯಾಸಿತವಕ್ಷಸಮ್ ।
ಶ್ರಿತಚೇತನಮಂದಾರಂ ಶ್ರೀನಿವಾಸಮಹಂ ಭಜೇ ॥*॥

ಪಾವನೇ ನೈಮಿಷಾರಣ್ಯೇ ಶೌನಕಾದ್ಯಾ ಮಹರ್ಷಯಃ ।
ಚಕ್ರಿರೇ ಲೋಕರಕ್ಷಾರ್ಥಂ ಸತ್ರಂ ದ್ವಾದಶವಾರ್ಷಿಕಮ್ ॥1॥

ಶ್ರೀ ಸ್ಕಾಂದಪುರಾಣಾಂತರ್ಗತವಾದ

## ಶ್ರೀವೇಂಕಟೇಶಮಾಹಾತ್ಮೆ

ಕನ್ನಡದಲ್ಲಿ ಸರಳಾನುವಾದ

## ಮೊದಲನೆಯ ಅಧ್ಯಾಯ

### ಮಂಗಳಾಚರಣ

ಶ್ರೀ ಗುರುಭ್ಯೋ ನಮಃ

ಶ್ರೀ ಲಕ್ಷ್ಮೀರಮಣ, ಅನಂತಕಲ್ಯಾಣಗುಣಾಕರ, ಅರ್ಥಿಜನ ಇಷ್ಟಾರ್ಥನಿಧಿಯಾದ ಶ್ರೀವೇಂಕಟಾಚಲವಾಸಿಯಾದ ಶ್ರೀನಿವಾಸದೇವರಿಗೆ ಮಂಗಳವು.

ಶ್ರೀವೇಂಕಟಾಚಲಪತಿಯಾದ, ಲಕ್ಷ್ಮೀದೇವಿಯಿಂದ ಶೋಭಿತವಾದ ವಕ್ಷಸ್ಥಳವುಳ್ಳ, ಆಶ್ರಿತಜನ ಮಂದಾರನಾದ ಶ್ರೀಶ್ರೀನಿವಾಸದೇವರನ್ನು ನಾನು ಸ್ತುತಿಸುತ್ತೇನೆ.

### ಸೂತರನ್ನು ಕುರಿತು ಶೌನಕಾದಿಗಳ ಪ್ರಾರ್ಥನೆ

ಪಾವನ ವಾದ ನೈಮಿಷಾರಣ್ಯದಲ್ಲಿ ಶೌನಕಾದಿಮಹರ್ಷಿಗಳು ದ್ವಾದಶವಾರ್ಷಿಕವಾದ

ತಾನಭ್ಯಗಚ್ಛತ್ತಥಕೋ ವ್ಯಾಸಶಿಷ್ಯೋ ಮಹಾಮತಿಃ ।
ಮುನಿರುಗ್ರಶ್ರವಾ ನಾಮ ರೋಮಹರ್ಷಣಸಂಭವಃ ॥2॥

ಸಮ್ಯಗಭ್ಯರ್ಚಿತಸ್ತೇಷಾಂ ಸೂತಃ ಪೌರಾಣಿಕೋತ್ತಮಃ ।
ಕಥಯಾಮಾಸ ತದ್ದಿವ್ಯಂ ಪುರಾಣಂ ಸ್ಕಂದನಾಮಕಮ್ ॥3॥

ಸೃಷ್ಟಿಸಂಹಾರವಂಶಾನಾಂ ವಂಶಾನುಚರಿತಸ್ಯ ಚ ।
ಕಥಾ ಮನ್ವಂತರಾಣಾಂ ಚ ವಿಸ್ತರಾತ್ಸ ನ್ಯವೇದಯತ್ ॥4॥

ಕಥಾಸ್ತೀರ್ಥಪ್ರಭಾವಾಣಾಂ ಶ್ರುತ್ವಾ ತೇ ಮನಿಪುಂಗವಾಃ ।
ಊಚಿರೇ ವಶಿನಂ ಸೂತಂ ಕಥಾಶ್ರವಣಕಾಂಕ್ಷಯಾ ॥5॥

ಋಷಯ ಊಚುಃ–

'ರೋಮಹರ್ಷಣ ಸರ್ವಜ್ಞ ಪುರಾಣಾರ್ಥವಿಶಾರದಃ ।
ಮಾಹಾತ್ಮ್ಯಂ ಶ್ರೋತುಮಿಚ್ಛಾಮೋ ಗಿರೀಂದ್ರಾಣಾಂ ಮಹೀತಲೇ' ॥6॥

ಶ್ರೀ ಸೂತ ಉವಾಚ–

ಏತಮೇವ ಪುರಾ ಪ್ರಶ್ನಮಪೃಚ್ಛಂ ಜಾಹ್ನವೀತಟೇ ।
ವ್ಯಾಸಂ ಮುನಿವರಶ್ರೇಷ್ಠಂ ಸೋಽಬ್ರವೀನ್ಮೇ ಗುರೂತ್ತಮಃ ॥7॥

ವ್ಯಾಸ ಉವಾಚ–

ಸತ್ರಯಾಗವೊಂದನ್ನು ಲೋಕಹಿತಾರ್ಥವಾಗಿ ಆಚರಿಸುತ್ತಿದ್ದರು. ಆಸಂದರ್ಭದಲ್ಲಿ ಅಲ್ಲಿಗೆ ಬಂದ ವೇದವ್ಯಾಸರ ಶಿಷ್ಯರಾದ, ರೋಮಹರ್ಷಣರಿಂದ ಜನಿಸಿದ ಉಗ್ರಶ್ರವಸ್ ಎಂಬ ಪುರಾಣಿಕೋತ್ತ–ಮಾಚಾರ್ಯರನ್ನು ಸಂತೋಷಗೊಳಿಸಿ, ಅವರಿಂದ ಸೃಷ್ಟಿ–ಸಂಹಾರಾದಿ ಭಗವಂತನ ಲೀಲೆಗಳನ್ನು ತಿಳಿಯುವವರಾಗಿ, ದಿವ್ಯವಾದ ಸ್ಕಂದಪುರಾಣವನ್ನು ಶ್ರವಣ ಮಾಡುವವರಾಗಿ ನಾನಾವಿಧವಾದ ತೀರ್ಥ–ಕ್ಷೇತ್ರಗಳ ಪ್ರಭಾವವನ್ನು ತಿಳಿಯುವದರಗೋಸ್ಕರವಾಗಿ ಸೂತಾಚಾರ್ಯರನ್ನು 'ಹೇ ಸರ್ವಜ್ಞರಾದ ಪುರಾಣಾರ್ಥವಿಶಾರದರಾದ ಸೂತಾಚಾರ್ಯರೇ! ಭೂಮಿಯಲ್ಲಿರುವ ಶ್ರೇಷ್ಠ ಪರ್ವತಗಳ ಮಹತ್ತ್ವವನ್ನು ತಿಳಿಯಬಯಸುತ್ತೇವೆ. ಅವುಗಳ ಮಾಹಾತ್ಮೆಯನ್ನು ನಮಗೆ ತಿಳಿಸಿರಿ' ಎಂದು ಪ್ರಾರ್ಥಿಸಿದರು. ಆಗ ಸೂತರು ವೇದವ್ಯಾಸದೇವರನ್ನು ಇದೇ ವಿಷಯವಾಗಿ ಪ್ರಶ್ನಿಸಿದಾಗ ವೇದವ್ಯಾಸರು ತಿಳಿಸಿದ ವಿಷಯವನ್ನೇ ನಾನು ನಿಮಗೆ ತಿಳಿಸುವೆನೆಂದು ನುಡಿದು ವೇದವ್ಯಾಸರು ತಮಗೆ ತಿಳಿಸಿದ ವಿಷಯವನ್ನು ತಿಳಿಸುತ್ತಾರೆ.

ಪುರಾ ದೇವಯುಗೇ ಸೂತ ನಾರದೋ ಮುನಿಸತ್ತಮಃ ।
ಸುಮೇರುಶಿಖರಂ ಗತ್ವಾ ನಾನಾರತ್ನಸುಶೋಭಿತಮ್ ॥8॥

ತನ್ಮಧ್ಯೇ ವಿಪುಲಂ ದೀಪ್ತಂ ಬ್ರಹ್ಮಣೋ ದಿವ್ಯಮಾಲಯಮ್ ।
ದೃಷ್ಟ್ವಾ ತಸ್ಯೋತ್ತರೇ ದೇಶೇ ಪಿಪ್ಪಲದ್ರುಮಮುತ್ತಮಮ್ ॥9॥

ಸಹಸ್ರಯೋಜನೋಚ್ಛ್ರಾಯಂ ವಿಸ್ತೀರ್ಣಂ ದ್ವಿಗುಣಂ ತಥಾ ।
ತನ್ಮೂಲೇ ಮಂಡಪಂ ದಿವ್ಯಂ ನಾನಾರತ್ನಸಮನ್ವಿತಮ್ ॥10॥

ಪದ್ಮರಾಗಮಣಿಸ್ತಂಭೈಃ ಸಹಸ್ರೈಃ ಸಮಲಂಕೃತಮ್ ।
ವೈಡೂರ್ಯಮುಕ್ತಾಮಣಿಭಿಃ ಕೃತಸ್ವಸ್ತಿಕಮಾಲಿಕಮ್ ॥11॥

ನವರತ್ನಸಮಾಕೀರ್ಣಂ ದಿವ್ಯತೋರಣಶೋಭಿತಮ್ ।
ಮೃಗಪಕ್ಷಿಭಿರಾಕೀರ್ಣಂ ನವರತ್ನಮಯೈಃ ಶುಭೈಃ ॥12॥

ಪುಷ್ಪರಾಗಮಹಾದ್ವಾರಂ ಸಪ್ತಭೂಮಿಕಗೋಪುರಮ್ ।
ಸಂದೀಪ್ತವಜ್ರಸುಕೃತಕವಾಟದ್ವಯಶೋಭಿತಮ್ ॥13॥

ಪ್ರವಿಶ್ಯಾಸೌ ದದರ್ಶಾಂತರ್ದಿವ್ಯಮೌಕ್ತಿಕಮಂಡಪಮ್ ।
ವೈಡೂರ್ಯವೇದಿಕಂ ತುಂಗಮಾರುರೋಹ ಮಹಾಮುನಿಃ ॥14॥

ತನ್ಮಧ್ಯೇ ತುಂಗಮತುಲಂ ವಸುಪಾದವಿರಾಜಿತಮ್ ।
ದದರ್ಶ ಮುಕ್ತಾಸಂಕೀರ್ಣಂ ಸಿಂಹಾಸನಂ ಮಹಾದ್ಯುತಿ ॥15॥

ತನ್ಮಧ್ಯೇ ಪುಷ್ಕರಂ ದಿವ್ಯಂ ಸಹಸ್ರದಲಶೋಭಿತಮ್ ।
ಶ್ವೇತಂ ಚಂದ್ರಸಹಸ್ರಾಭಂ ಕರ್ಣಿಕಾಕೇಸರೋಜ್ಜ್ವಲಮ್ ॥16॥

ತಸ್ಯ ಮಧ್ಯೇ ಸಮಾಸೀನಂ ಪೂರ್ಣಚಂದ್ರಾಯುತಪ್ರಭಮ್ ।
ಕೈಲಾಸಪರ್ವತಾಕಾರಂ ಸುಂದರಂ ಪುರುಷಾಕೃತಿಮ್ ॥17॥

ಹಿಂದೆ ನಾರದರು ಸಂಚರಿಸುತ್ತಾ ಸುಮೇರು ಶಿಖರದ ಬಳಿ ಹೋಗಿ, ಅದರ ಮಧ್ಯಭಾಗದಲ್ಲಿ ಹೊಳೆಯುವ ಬ್ರಹ್ಮ ಮಂದಿರದ ಬಳಿಯಿರುವ ಪಿಪ್ಪಲ ವೃಕ್ಷದ ಕೆಳಗಿನ ಮಂಟಪದಲ್ಲಿ ವಿರಾಜಮಾನನಾದ, ಸುಂದರವಾದ ಸಹಸ್ರದಲ ಶೋಭಿತವಾದ ಕಮಲದ ಮಧ್ಯಭಾಗದಲ್ಲಿ ಸಾವಿರಾರು ಚಂದ್ರರ ಕಾಂತಿಯನ್ನು ಧಿಕ್ಕರಿಸುವ ತೇಜಸ್ಸಿನಿಂದ ಉಪೇತನಾದ, ನಾಲ್ಕುಭುಜಗಳಿಂದ ಶಂಖ ಚಕ್ರ-ಅಭಯ -ವರ ಮುದ್ರೆಗಳನ್ನು ಧರಿಸಿರುವ ಪುರುಷೋತ್ತಮನಾದ ವರಾಹದೇವರನ್ನು

ಚತುರ್ಬಾಹುಮುದಾರಾಂಗಂ ವರಾಹವದನಂ ಶುಭಮ್ ।
ಶಂಖಚಕ್ರಾಭಯವರಾನ್ ಬಿಭ್ರಾಣಂ ಪುರುಷೋತ್ತಮಮ್ ॥18॥

ಪೀತಾಂಬರಧರಂ ದೇವಂ ಪುಂಡರೀಕಾಯತೇಕ್ಷಣಮ್ ।
ಪೂರ್ಣೇಂದುಸೌಮ್ಯವದನಂ ಧೂಪಗಂಧಿಮುಖಾಂಬುಜಮ್ ॥19॥

ಸಾಮಧ್ವನಿಂ ಯಜ್ಞಮೂರ್ತಿಂ ಸ್ರಕ್ತುಂಡಂ ಸ್ರುವನಾಸಿಕಮ್ ।
ಕ್ಷೀರಸಾಗರಸಂಕಾಶಂ ಕಿರೀಟೋಜ್ಜ್ವಲಿತಾನನಮ್ ॥20॥

ಶ್ರೀವತ್ಸವಕ್ಷಸಂ ಶುಭ್ರಯಜ್ಞಸೂತ್ರವಿರಾಜಿತಮ್ ।
ಕೌಸ್ತುಭಶ್ರೀಸಮುದ್ಯೋತಂ ಸಮುನ್ನತಮಹೋರಸಮ್ ॥21॥

ಜಾಂಬೂನದಮಯೈರ್ದಿವ್ಯೈಃ ಸುರತ್ನಾಭರಣೈರ್ಯುತಮ್ ।
ವಿದ್ಯುನ್ಮಾಲಾಪರಿಕ್ಷಿಪ್ತಶರನ್ಮೇಘಮಿವೋಜ್ಜ್ವಲಮ್ ॥22॥

ವಾಮಪಾದತಲಾಕ್ರಾಂತಪಾದಪೀಠವಿರಾಜಿತಮ್ ।
ಕಟಕಾಂಗದಕೇಯೂರಕುಂಡಲೋಜ್ಜ್ವಲಿತಂ ಸದಾ ॥23॥

ಚತುರ್ಮುಖವಸಿಷ್ಠಾತ್ರಿಮಾರ್ಕಂಡೇಯೈರ್ಮುನೀಶ್ವರೈಃ ।
ಭೃಗ್ವಾದಿಭಿರನೇಕೈಶ್ಚ ಸೇವ್ಯಮಾನಮಹರ್ನಿಶಮ್ ॥24॥

ಇಂದ್ರಾದಿಲೋಕಪಾಲೈಶ್ಚ ಗಂಧರ್ವಾಪ್ಸರಸಾಂ ಗಣೈಃ ।
ಸೇವಿತಂ ದೇವದೇವೇಶಂ ಪ್ರಣಿಪತ್ಯಾಭಿಗಮ್ಯ ಚ ॥25॥

ದಿವ್ಯೈರುಪನಿಷದ್ಭಾಗೈರಭಿಷ್ಟೂಯ ಧರಾಧರಮ್ ।
ನಾರದಃ ಪರಮಪ್ರೀತಃ ಸ್ಥಿತೋ ದೇವಸ್ಯ ಸನ್ನಿಧೌ ॥26॥

ಏತಸ್ಮಿನ್ನಂತರೇ ಚಾಭೂದ್ದಿವ್ಯದುಂದುಭಿನಿಃಸ್ವನಃ ।
ತತಸ್ಸಮಾಗತಾ ದೇವೀ ಧರಣೀ ಸಖಿಸಂಯುತಾ ॥27॥

ನೋಡಿ, ಉಪನಿಷದ್ಗತ ಸ್ತುತಿಗಳಿಂದ ಅವರನ್ನು ಸ್ತುತಿಸಿ, ನಮಿಸಿ ಅವರ ಬಳಿಯೇ ಕುಳಿತುಕೊಂಡನು.

ಅದೇ ಸಂದರ್ಭದಲ್ಲಿ ದಿವ್ಯವಾದ ಮಂಗಲಧ್ವನಿಯನ್ನು ಮಾಡುತ್ತಾ ತನ್ನ ಸಖಿಯರಾದ ಇಲಾ ಮತ್ತು ಪಿಂಗಲಾದೇವಿಯರಿಂದ ಸಮೇತಳಾಗಿ ಭೂದೇವಿಯು ಅಲ್ಲಿಗೆ ಆಗಮಿಸಿ, ನಾನಾ

ಸರತ್ನಸಾಗರಾಕಾರದಿವ್ಯಾಂಬರಸಮುಜ್ಜ್ವಲಾ ।
ಸುಮೇರುಮಂದರಾಕಾರಸ್ತನಭಾರಾವನಾಮಿತಾ ॥28॥

ನವದೂರ್ವಾದಲಶ್ಯಾಮಾ ಸರ್ವಾಭರಣಭೂಷಿತಾ ।
ಇಲಯಾ ವೈ ಪಿಂಗಲಯಾ ಸಖೀಭ್ಯಾಂ ಚ ಸಮನ್ವಿತಾ ॥29॥

ತತಸ್ತಾಭ್ಯಾಂ ಸಮಾನೀತಂ ಪುಷ್ಪಾಣಾಂ ನಿಚಯಂ ಮಹೀ ।
ಶ್ರೀಮದ್ವರಾಹದೇವಸ್ಯ ಪಾದಮೂಲೇ ವಿಕೀರ್ಯ ಚ ॥30॥

ಪ್ರಣಮ್ಯ ದೇವದೇವೇಶಂ ಕೃತಾಂಜಲಿಪುಟಾ ಸ್ಥಿತಾ ॥31॥

ತಾಂ ದೇವೀಂ ಶ್ರೀವರಾಹೋಽಪಿ ಹ್ಯಾಲಿಂಗ್ಯಾಂಕೇ ನಿಧಾಯ ಚ ।
ಪಪ್ರಚ್ಛ ಕುಶಲಂ ಪೃಥ್ವೀಂ ಪ್ರೀತಿಪ್ರವಣಮಾನಸಃ ॥32॥

ಶ್ರೀವರಾಹ ಉವಾಚ–

'ತ್ವಾಂ ನಿವೇಶ್ಯ ಮಹೀದೇವೀ! ಶೇಷಶೀರ್ಷೇ ಸುಖಾವಹೇ ।

ಲೋಕಂ ತ್ವಯಿ ನಿವೇಶ್ಯೈವ ತ್ವತ್ಸಹಾಯಾನ್ ಧರಾಧರಾನ್ ।
ಇಹಾಗತೋಽಸ್ಮ್ಯಹಂ ದೇವೀ ಕಿಮರ್ಥಂ ತ್ವಮಿಹಾಗತಾ' ॥33॥

ಪೃಥಿವ್ಯುವಾಚ –

'ಮಾಂ ಸಮುದ್ಧೃತ್ಯ ಪಾತಾಲಾತ್ಸಹಸ್ರಫಣಶೋಭಿತೇ ।
ರತ್ನಪೀಠ ಇವೋತ್ತುಂಗೇ ಸರತ್ನೇಽನಂತಮೂರ್ಧನಿ ॥34॥

ಕೃತ್ವಾ ಮಾಂ ಸುಸ್ಥಿರಾಂ ದೇವ ಭೂಧರಾನ್ ಸನ್ನಿವೇಶ್ಯ ಚ ॥35॥

ವಿಧವಾದ ಪುಷ್ಪಗಳನ್ನು ವರಾಹ ದೇವರ ಪದತಲಗಳಲ್ಲರ್ಪಿಸಿ, ನಮಿಸಿ, ಕೈಮುಗಿದುಕೊಂಡು ಅವರ ಬಳಿಯೇ ನಿಂತಳು. ಆಗ ವರಾಹ ದೇವರು ಅವಳನ್ನು ನೋಡಿ ಅವಳ ಕುಶಲವನ್ನು ವಿಚಾರಿಸಿ, ಅವಳ ಆಗಮನದ ಕಾರಣವನ್ನು ವಿಚಾರಿಸಿದರು.

### ಪರ್ವತ ವರ್ಣನಾರ್ಥವಾಗಿ ಭೂಮಿಯ ಪ್ರರ್ಥನೆ

ಆಗ ಭೂದೇವಿಯು 'ಹೇ ದೇವನೇ ! ಪಾತಾಲಲೋಕದಿಂದ ನನ್ನನ್ನುದ್ಧರಿಸಿ, ರಕ್ಷಿಸಿ, ನನ್ನ ಮೇಲೆ ನಾನಾವಿಧವಾದ, ಪುಣ್ಯಕರಗಳಾದ, ನನ್ನನ್ನು ಧರಿಸಲು ಸಮರ್ಥವಾದ ಪರ್ವತಗಳನ್ನು ಪ್ರತಿಷ್ಠಾಪಿಸಿರುವಿ. ಅವುಗಳಲ್ಲಿ ಮುಖ್ಯವಾದವುಗಳನ್ನು ವರ್ಣಿಸಿರಿ' ಎಂದು ಸಂಪ್ರಾರ್ಥಿಸಿದಳು.

ಮದ್ಧಾರಣಕ್ಷಮಾನ್ಪುಣ್ಯಾಂಸ್ತ್ವನ್ಮಯಾನ್ಪುರುಷೋತ್ತಮ ।
ತೇಷು ಮುಖ್ಯಾನ್ಮಹಾಬಾಹೋ ಮದಾಧಾರಾನ್ವದಸ್ವ ಮೇ ॥36॥

ಶ್ರೀವರಾಹ ಉವಾಚ–

ಸುಮೇರುರ್ಹಿಹಿಮವಾನ್ವಿಂಧ್ಯೋ ಮಂದರೋ ಗಂಧಮಾದನಃ ।
ಸಾಲಗ್ರಾಮಶ್ಚಿತ್ರಕೂಟೋ ಮಾಲ್ಯವಾನ್ಪಾರಿಯಾತ್ರಕಃ ॥37॥

ಮಹೇಂದ್ರೋ ಮಲಯಃ ಸಹ್ಯಃ ಸಿಂಹಾದ್ರಿರಪಿ ರೈವತಃ ।
ಮೇರುಪುತ್ರೋಽಂಜನೋ ನಾಮ ಶೈಲಃ ಸ್ವರ್ಣಮಯೋ ಮಹಾನ್ ॥38॥

ಏತೇ ಶೈಲವರಾಃ ಸರ್ವೇ ತ್ವದಾಧಾರಾ ವಸುಂಧರೇ ।
ಯೇ ಮಯಾ ದೇವಸಂಘೈಶ್ಚ ಋಷಿಸಂಘೈಶ್ಚ ಸೇವಿತಾಃ ॥39॥

ಏತೇಷು ಪ್ರವರಾನ್ವಕ್ಷ್ಯೇ ತತ್ವತಃ ಶೃಣು ಮಾಧವಿ ।
ಸಾಲಗ್ರಾಮಶ್ಚ ಸಿಂಹಾದ್ರಿಃ ಶೈಲೇಂದ್ರೋ ಗಂಧಮಾದನಃ ॥40॥

ಏತೇ ಶೈಲವರಾ ದೇವೀ ದಿಶಂ ಹೈಮವತೀಂ ಶ್ರಿತಾಃ ।
ದಕ್ಷಿಣಸ್ಯಾಂ ಪ್ರತೀತಾಂಸ್ತು ವಕ್ಷ್ಯೇ ಶೈಲಾನ್ವಸುಂಧರೇ ॥41॥

ಅರುಣಾದ್ರಿರ್ಹಸ್ತಿಶೈಲೋ ಗೃಧ್ರಾದ್ರಿರ್ಘಟಿಕಾಚಲಃ ।
ಏತೇ ಶೈಲವರಾಃ ಸರ್ವೇ ಕ್ಷೀರನದ್ಯಾಸ್ಸಮೀಪಗಾಃ ॥42॥

ಹಸ್ತಿಶೈಲಾದುತ್ತರತಃ ಪಂಚಯೋಜನಮಾತ್ರತಃ ।

### ಭೂಧರ ವರ್ಣನೆ

ಆಗ ವರಾಹ ದೇವರು ಸುಮೇರು, ಹಿಮವತ್ಪರ್ವತ, ಮಂದರ, ಗಂಧಮಾದನ, ಸಾಲಗ್ರಾಮ, ಚಿತ್ರಕೂಟ, ಮಾಲ್ಯವಂತ, ಪಾರಿಯಾತ್ರ, ಮಹೇಂದ್ರ, ಮಲಯ, ಸಹ್ಯ, ಸಿಂಹಾದ್ರಿ, ರೈವತ, ಮೇರುಪುತ್ರನಾದ ಅಂಜನವೆಂಬ ಸ್ವರ್ಣಮಯವಾದ ಪರ್ವತ– ಇವೇ ಮೊದಲಾದವುಗಳು ದೇವಸಂಘ–ಋಷಿಸಂಘಗಳಿಂದ ಸೇವಿತವಾಗಿದ್ದು ನಿನ್ನನ್ನು ಧಾರಣ ಮಾಡಿರುವವು. ಇವುಗಳಲ್ಲಿ ಸಾಲಗ್ರಾಮ, ಸಿಂಹಾದ್ರಿ, ಗಂಧಮಾದನ ಇವೇ ಮೊದಲಾದವು ಹಿಮವತ್ಪರ್ವತದ ಬಳಿಯಿರುವವು. ದಕ್ಷಿಣದಿಕ್ಕಿನಲ್ಲಿ ಅರುಣಾದ್ರಿ, ಕರಿಗಿರಿ, ಗೃಧ್ರಾದ್ರಿ, ಘಟಿಕಾಚಲವೇ ಮೊದಲಾದವು ಅತ್ಯಂತ ಶ್ರೇಷ್ಠವೆನಿಸಿ ಪ್ರಸಿದ್ಧವಾಗಿರುವವು.

### ವೇಂಕಟಾಚಲ ವರ್ಣನ

ಸುವರ್ಣಮುಖರೀನಾಮ ನದೀನಾಂ ಪ್ರವರಾ ನದೀ ॥43॥

ತಸ್ಯಾ ಏವೋತ್ತರೇ ತೀರೇ ಕಮಲಾಖ್ಯಂ ಸರೋವರಮ್ ।
ತತ್ತೀರೇ ಭಗವಾನಾಸ್ತೇ ಶುಕಸ್ಯ ವರದೋ ಹರಿಃ ॥44॥

ಬಲಭದ್ರೇಣ ಸಂಯುಕ್ತಃ ಕೃಷ್ಣೋ ಭಕ್ತಾರ್ತಿನಾಶನಃ ।
ವೈಖಾನಸೈರ್ಮುನಿಗಣೈರ್ನಿತ್ಯಮಾರಾಧಿತೋಽಮಲೈಃ ॥45॥

ಕಮಲಾಖ್ಯಸ್ಯ ಸರಸ ಉತ್ತರೇ ಕಾನನೋತ್ತಮೇ ।
ಕ್ರೋಶದ್ವಯಾರ್ಧಮಾತ್ರೇ ತು ಹರಿಚಂದನಶೋಭಿತೇ ।

ಶ್ರೀವೇಂಕಟಾಚಲೋ ನಾಮ ವಾಸುದೇವಾಲಯೋ ಮಹಾನ್ ॥46॥

ಸಪ್ತಯೋಜನವಿಸ್ತೀರ್ಣಃ ಶೈಲೇಂದ್ರೋ ಯೋಜನೋಚ್ಛ್ರಿತಃ ।
ಅಸ್ತಿ ಸ್ವರ್ಣಮಯೋ ದೇವಿ ರತ್ನಸಾನುಭೃದಾಯತಃ ॥47॥

ಇಂದ್ರಾದ್ಯಾ ದೈವತಗಣಾ ವಸಿಷ್ಠಾದ್ಯಾ ಮುನೀಶ್ವರಾಃ ।
ಸಿದ್ಧಾಃ ಸಾಧ್ಯಾಶ್ಚ ಮರುತೋ ದಾನವಾ ದೈತ್ಯರಾಕ್ಷಸಾಃ ।
ರಂಭಾದ್ಯಾ ಅಪ್ಸರಃಸಂಘಾ ವಸಂತಿ ನಿಯತಂ ಧರೇ ॥48॥

ತಪಶ್ಚರಂತಿ ನಾಗಾಶ್ಚ ಗರುಡಾಃ ಕಿನ್ನರಾಸ್ತಥಾ ।
ಏತೈರಧಿಷ್ಠಿತಾಸ್ತತ್ರ ಸರಿತಃ ಪುಣ್ಯದರ್ಶನಾಃ ॥49॥

ವರದರಾಜನ ಕ್ಷೇತ್ರವೆನಿಸಿದ ಕಂಚಿಯ ಬಳಿಯಿರುವ ಕರಿಗಿರಿಯಿಂದ ಐದು ಯೋಜನ ದೂರದಲ್ಲಿ ಸುವರ್ಣಮುಖರೀ ಎಂಬ ನದಿಯಿದ್ದು, ಆ ನದಿಯ ಉತ್ತರ ದಿಕ್ಕಿನಲ್ಲಿ ಪದ್ಮತೀರ್ಥವೆಂಬ ಸರೋವರವಿರುವದು. ಆ ಸರೋವರದ ದಡದಲ್ಲಿಯೇ ಸಹೋದರನಾದ ಬಲರಾಮನಿಂದ ಸಹಿತನಾದ ಕೃಷ್ಣನು ಶುಕಮುನಿಗಳಿಗೆ ಅನುಗ್ರಹಿಸುವದಕ್ಕಾಗಿ ವಾಸವಾಗಿರುವನು. ಆ ಪದ್ಮತೀರ್ಥದ ಉತ್ತರ ದಿಕ್ಕಿನಲ್ಲಿ ಎರಡೂವರೆ ಕ್ರೋಶದಲ್ಲಿ ಶ್ರೀಗಂಧ, ಹರಿಚಂದನಾದಿ ವೃಕ್ಷಗಳಿಂದುಪಶೋಭಿತವಾದ ಅರಣ್ಯಪ್ರಾಂತ್ಯಗಳನ್ನು ಹೊಂದಿರುವ, ಏಳು ಯೋಜನ ವಿಸ್ತೀರ್ಣವಾದ, ಒಂದು ಯೋಜನ ಎತ್ತರವಾದ, ಭಗವಂತನಿಗೆ ಆವಾಸವಾದ ವೇಂಕಟಾಚಲವೆಂಬ ಪರ್ವತವಿದ್ದು, ಸ್ವರ್ಣ-ರತ್ನಮಯವಾದ ಸಾನು(ಕೋಡುಗಲ್ಲು)ಗಳಿಂದ ವಿರಾಜಮಾನ ವಾಗಿರುವದು. ಇಂದ್ರಾದಿದೇವತೆಗಳು, ವಸಿಷ್ಠಾದಿ ಋಷಿಗಳು ಭಗವತ್ಪ್ರೀತ್ಯರ್ಥವಾಗಿ ಆ ಪರ್ವತ ಪ್ರದೇಶದಲ್ಲಿ ತಪವನ್ನಾಚರಿಸುತ್ತಿರುವರು.

### ವೇಂಕಟಾಚಲದಲ್ಲಿಯ ತೀರ್ಥಗಳು

ಸರಾಂಸಿ ವಿವಿಧಾನ್ಯತ್ರ ಸಂತಿ ದಿವ್ಯಾನಿ ಮಾಧವಿ ।
ತೀರ್ಥಾನಾಂ ಚೈವ ಸರ್ವೇಷಾಂ ಶೃಣುಷ್ವ ಪ್ರವರಾಣಿ ವೈ ॥50॥

ಚಕ್ರತೀರ್ಥಂ ದೇವತೀರ್ಥಂ ವಿಯದ್ಗಂಗಾ ತಥೈವ ಚ ।
ಕುಮಾರಧಾರಿಕಾತೀರ್ಥಂ ಪಾಪನಾಶನಮೇವ ಚ ।
ಪಾಂಡವಂ ನಾಮ ತೀರ್ಥಂ ಚ ಸ್ವಾಮಿಪುಷ್ಕರಿಣೀ ತಥಾ ॥51॥

ಸಪ್ತೈತಾನಿ ವರಾಣ್ಯಾಹುರ್ನಾರಾಯಣಗಿರೌ ಶುಭೇ ।
ಏತೇಷು ಪ್ರವರಾ ದೇವೀ ಸ್ವಾಮಿಪುಷ್ಕರಿಣೀ ಶುಭಾ ॥52॥

ಅಸ್ಯಾಸ್ತು ಪಶ್ಚಿಮೇ ತೀರೇ ನಿವಸಾಮಿ ತ್ವಯಾ ಸಹ ।
ಆಸ್ತೇऽಸ್ಯಾ ದಕ್ಷಿಣೇ ತೀರೇ ಶ್ರೀನಿವಾಸೋ ಜಗತ್ಪತಿಃ ॥53॥

ಗಂಗಾದ್ಯೈಃ ಸಕಲೈಸ್ತೀರ್ಥೈಃ ಸಮಾ ಸಾ ಸಾಗರಾಂಬರೇ ।
ತ್ರಲೋಕ್ಯೇ ಯಾನಿ ತೀರ್ಥಾನಿ ಸರಾಂಸಿ ಸರಿತಸ್ತಥಾ ॥
ತೇಷಾಂ ಸ್ವಾಮಿತ್ವಮಾಪನ್ನಂ ಧರೇ ಸ್ವಾಮಿಸರೋವರೇ ॥54॥

ಸ್ವಾಮಿಪುಷ್ಕರಿಣೀಂ ಪುಣ್ಯಾಂ ಸೇವಿತುಂ ದಿವ್ಯಭೂಧರೇ ।
ವಸಂತಿ ಸರ್ವತೀರ್ಥಾನಿ ತೇಷಾಂ ಸಂಖ್ಯಾಂ ವದಾಮಿ ತೇ ॥55॥

ಷಟ್‌ಷಷ್ಟಿಕೋಟಿತೀರ್ಥಾನಿ ಪುಣ್ಯೇऽಸ್ಮಿನ್ಭೂಧರೋತ್ತಮೇ ।
ತೇಷು ಚಾತ್ಯಂತಮುಖ್ಯಾನಿ ಷಟ್‌ತೀರ್ಥಾನಿ ವಸುಂಧರೇ ॥56॥

ಆ ಪರ್ವತವು ದಿವ್ಯವಾದ ನಾನಾವಿಧವಾದಪಾಪಪರಿಹಾರಕಗಳಾದ ತೀರ್ಥಗಳಿಂದ ಉಪೇತವಾಗಿರುವದು. ಅವುಗಳಲ್ಲಿ ಚಕ್ರತೀರ್ಥ, ದೇವತೀರ್ಥ, ಆಕಾಶಗಂಗಾ, ಕುಮಾರಧಾರಾ, ಪಾಪನಾಶನ, ಪಾಂಡುತೀರ್ಥ ಮತ್ತು ಸ್ವಾಮಿಪುಷ್ಕರಿಣಿಯೆಂಬ ಏಳು ತೀರ್ಥಗಳು ಅತ್ಯಂತ ಶ್ರೇಷ್ಠವೆನಿಸಿರುವವು. ಈ ಸ್ವಾಮಿಪುಷ್ಕರಿಣಿಯ ಪಶ್ಚಿಮ ದಡದಲ್ಲಿ ನಾನು (ವರಾಹದೇವನು) ನಿನ್ನಿಂದ (ಭೂದೇವಿಯಿಂದ) ಸಮೇತನಾಗಿ ವಿರಾಜಮಾನನಾಗಿರುವೆನು. ದಕ್ಷಿಣದ ತೀರದಲ್ಲಿ ಲಕ್ಷ್ಮೀಪತಿಯಾದ, ಜಗದೊಡೆಯನಾದ ಶ್ರೀನಿವಾಸನು ವಾಸವಾಗಿರುವನು. ತ್ರೈಲೋಕ್ಯದಲ್ಲಿರುವ ಎಲ್ಲ ತೀರ್ಥಗಳಿಗೂ ಸಹ ಸ್ವಾಮಿಯಂತಿರುವದರಿಂದ ಆ ತೀರ್ಥಕ್ಕೆ ಸ್ವಾಮಿಪುಷ್ಕರಿಣಿಯೆಂಬ ಹೆಸರು. ಈ ವೇಂಕಟಾಚಲದಲ್ಲಿ ನೆಲಸಿರುವ ಅರವತ್ತಾರು ಕೋಟಿ ತೀರ್ಥಗಳೂ ಸಹ ಸ್ವಾಮಿಪುಷ್ಕರಿಣಿಯ ಸೇವಾರ್ಥವಾಗಿರುವವು. ಅವುಗಳಲ್ಲಿ ಮೇಲೆ ಹೇಳಿದ ಆರು ತೀರ್ಥಗಳೇ ಮುಖ್ಯವಾಗಿರುವವು. ಯಾರು ಈ ತೀರ್ಥಗಳಲ್ಲಿ ಸ್ನಾನವನ್ನು ಮಾಡುವರೋ ಅವರು ಮತ್ತೊಮ್ಮೆ

ಪಂಚಾನಾಂ ತೀರ್ಥರಾಜಾನಾಂ ತುಂಬೋರ್ಗರ್ಭಸಮೋ ಮಹಾನ್।
ಗರ್ಭವಾಸಭಯಧ್ವಂಸೀ ಸ್ನಾತಾನಾಂ ಭೂಧರೋತ್ತಮೇ ॥57॥

ಧರಣ್ಯುವಾಚ–

'ಷಟ್ತೀರ್ಥಾನಿ ಮಹಾಬಾಹೋ ತ್ವಯೋಕ್ತಾನಿ ಮಹೀಧರೇ ।
ಮಾಹಾತ್ಮ್ಯಂ ವದ ತೇಷಾಂ ಮೇ ಯಥಾಕಾಲಂ ಯಥಾವಿಧಿ ।
ಫಲಾನಿ ತೇಷು ಸ್ನಾತಾನಾಂ ನರಾಣಾಂ ವದ ಭೂಧರ' ॥57॥

ಶ್ರೀವರಾಹ ಉವಾಚ–

ನಾರಾಯಣಾದ್ರಿಮಹಾತ್ಮ್ಯಂ ವದಾಮಿ ಶೃಣು ಮಾಧವಿ ॥58॥

ದೇವಾಶ್ಚ ಋಷಯಶ್ಚೈವ ಯೋಗಿನಃ ಸನಕಾದಯಃ ।
ಕೃತೇಽಂಜನಾದ್ರಿಂ ತ್ರೇತಾಯಾಂ ನಾರಾಯಣಗಿರಿಂ ತಥಾ ॥59॥

ದ್ವಾಪರೇ ಸಿಂಹಶೈಲಂ ಚ ಕಲೌ ಶ್ರೀವೇಂಕಟಾಚಲಮ್ ।
ಪ್ರವದಂತೀಹ ವಿದ್ವಾಂಸಃ ಪರಮಾತ್ಮಾಲಯಂ ಗಿರಿಮ್ ॥60॥

ಯೋಜನಾನಾಂ ಸಹಸ್ರಾಂತೇ ದ್ವೀಪಾಂತರಗತೋಽಪಿ ವಾ ।
ಯೋ ನಮೇದ್ಭೂಧರೇಂದ್ರಂ ತದ್ದಿಶಮುದ್ದಿಶ್ಯ ಭಕ್ತಿತಃ ॥61॥

ತಾಯಿಯ ಗರ್ಭವನ್ನು ಪ್ರವೇಶಿಸುವದಿಲ್ಲ' ಎಂದು ನುಡಿದರು.

ಆಗ ಭೂದೇವಿಯು 'ಆ ತೀರ್ಥಗಳ ಮಾಹಾತ್ಮೆಯನ್ನು, ಅವುಗಳಲ್ಲಿ ಸ್ನಾನ ಮಾಡುವ ವಿಧಿಯನ್ನು, ಸ್ನಾನದಿಂದ ಬರುವ ಫಲವನ್ನು ನನಗೆ ತಿಳಿಸಿರಿ' ಎಂದು ಪ್ರಾರ್ಥಿಸಿದಾಗ ವರಾಹ ದೇವರು ಅವಳಿಗೆ ಆ ತೀರ್ಥಗಳ ಮಾಹಾತ್ಮೆಯನ್ನು ತಿಳಿಸುವವರಾಗುತ್ತಾರೆ.

### ನಾರಾಯಣಾದ್ರಿಯ ಮಾಹಾತ್ಮ್ಯ

ಕೃತಯುಗದಲ್ಲಿ ಅಂಜನಾಚಲ, ತ್ರೇತಾಯುಗದಲ್ಲಿ ನಾರಾಯಣಗಿರಿ, ದ್ವಾಪರಯುಗದಲ್ಲಿ ಸಿಂಹಾಚಲ ಮತ್ತು ಕಲಿಯುಗದಲ್ಲಿ ವೇಂಕಟಾಚಲವೆಂದು ದೇವತೆಗಳು, ಋಷಿಗಳು ಮತ್ತು ಸನಕಾದಿ ಯೋಗಿಗಳಿಂದ ಪರಿಗೀಯಮಾನವಾದ ನಾರಾಯಣಗಿರಿಯನ್ನು ಯಾರು ಭಕ್ತಿಯಿಂದ ಆ ದಿಕ್ಕನ್ನುದ್ದೇಶಿಸಿ ನಮಸ್ಕರಿಸಿದರೂ ಸಹ ಆ ಮನುಷ್ಯರು ತಮ್ಮೆಲ್ಲ ಪಾಪಗಳಿಂದ ವಿನಿರ್ಮುಕ್ತರಾಗಿ ವಿಷ್ಣುಲೋಕವನ್ನು ಹೊಂದಿ ಸುಖಿಸುವರೆಂದ ಮೇಲೆ ಈ ಪರ್ವತದ ಮಾಹಾತ್ಮ್ಯವನ್ನು ಹೇಳುವದೇನಿದೆ? ಆ ತೀರ್ಥಗಳಲ್ಲಿಯ ಸ್ನಾನಕಾಲವನ್ನು ಹೇಳುವೆನು. ಏಕಾಗ್ರ್ಯಚಿತ್ತಳಾಗಿ

ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ಸ ಗಚ್ಛತಿ ।
ತಸ್ಮಿನ್ ಷಟ್ತೀರ್ಥಮಾಹಾತ್ಮ್ಯಂ ಯಥಾಕಾಲಂ ವದಾಮಿ ತೇ ॥62॥

ಶೃಣುಷ್ವಾವಹಿತಾ ಭದ್ರೇ ಸರ್ವಪಾಪಪ್ರಣಾಶನಮ್ ।
ಕುಂಭಸಂಸ್ಥೇ ರವೌ ಮಾಘೇ ಪೌರ್ಣಮಾಸ್ಯಾಂ ಮಹಾತಿಥೌ ॥63॥

ಮಘಾನಕ್ಷತ್ರಯುಕ್ತಾಯಾಂ ಭೂಧರೇಂದ್ರೇ ವಸುಂಧರೇ ।
ಕುಮಾರಧಾರಿಕಾನಾಮ ಸರಸೀ ಲೋಕಪಾವನೀ ॥64॥

ಯತ್ರಾಸ್ತೇ ಪಾರ್ವತೀಸೂನುಃ ಕಾರ್ತಿಕೇಯೋಽಗ್ನಿಸಂಭವಃ ।
ದೇವಸೇನಾಸಮಾಯುಕ್ತಃ ಶ್ರೀನಿವಾಸಾರ್ಚಕೋಽಮಲೇ ॥65॥

ತಸ್ಯಾಂ ಯಃ ಸ್ನಾತಿ ಮಧ್ಯಾಹ್ನೇ ತಸ್ಯ ಪುಣ್ಯಫಲಂ ಶೃಣು ॥66॥

ಗಂಗಾದಿಸರ್ವತೀರ್ಥೇಷು ಯಃ ಸ್ನಾತಿ ನಿಯಮಾದ್ಧರೇ ।
ದ್ವಾದಶಾಬ್ದಂ ಜಗದ್ಧಾತ್ರಿ ತತ್ಫಲಂ ಸಮವಾಪ್ನುಯಾತ್ ॥67॥

ಯೋಽನ್ನಂ ದದಾತಿ ತತ್ತೀರ್ಥೇ ಶಕ್ತ್ಯಾ ದಕ್ಷಿಣಯಾಽನ್ವಿತಮ್ ।
ಸ ತಾವತ್ಫಲಮಾಪ್ನೋತಿ ಸ್ನಾನೇ ತೂಕ್ತಂ ಫಲಂ ಯಥಾ ॥68॥

ಮೀನಸಂಸ್ಥೇ ಸವಿತರಿ ಪೌರ್ಣಮಾಸೀತಿಥೌ ಧರೇ ।

ಕೇಳು.

ಶ್ರೀನಿವಾಸಾರಾಧಕನಾದ, ದೇವಸೈನ್ಯಸಮಾಯುಕ್ತನಾದ, ಪಾರ್ವತಿಯ ಪುತ್ರನಾದ ಷಣ್ಮುಖನು ಯಾವ ತೀರ್ಥದ ಬಳಿ ವಾಸವಾಗಿರುವನೋ ಅಂತಹ ಕುಮಾರಧಾರಾ ತೀರ್ಥದಲ್ಲಿ, ಸೂರ್ಯನು ಕುಂಭರಾಶಿಯಲ್ಲಿರುವಾಗ ಹುಣ್ಣಿಮೆಯಂದು ಮಘಾನಕ್ಷತ್ರದಲ್ಲಿ ಮಧ್ಯಾಹ್ನ ಯಾರು ಸ್ನಾನವನ್ನು ಮಾಡುವರೋ ಅವರು ಹನ್ನೆರಡು ವರ್ಷಗಳಷ್ಟು ಕಾಲ ವಿಧಿಯುಕ್ತವಾಗಿ ಗಂಗಾನದಿಯಲ್ಲಿ ಸ್ನಾನವನ್ನು ಮಾಡಿದ ಫಲವನ್ನು ಹೊಂದುವರು. ಅಂದು ಯಾರು ಅನ್ನದಾನವನ್ನು ಮಾಡಿ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಅರ್ಪಿಸುವರೋ ಅವರೂ ಸಹ ಗಂಗಾದಿ ಸರ್ವತೀರ್ಥಗಳಲ್ಲಿ ಸ್ನಾನ-ಅನ್ನದಾನಾದಿಗಳನ್ನು ಮಾಡಿದ ಫಲವನ್ನು ಹೊಂದುವರು.

ಫಾಲ್ಗುನಮಾಸದ ಹುಣ್ಣಿಮೆಯಂದು ಉತ್ತರಾನಕ್ಷತ್ರವಿರುವಾಗ ಸೂರ್ಯನು ಮೀನರಾಶಿಯಲ್ಲಿರುವಾಗ ಮಧ್ಯಾಹ್ನ ಸಮಯದಲ್ಲಿ ಯಾರು ಪಂಚ ತೀರ್ಥಗಳಿಂದ ಉಪೇತವಾದ ಈ ಪರ್ವತದ ಕೊರಕಲಿನಲ್ಲಿರುವ ತುಂಬುತೀರ್ಥದಲ್ಲಿ ಯಾರು ಸ್ನಾನವನ್ನು ಮಾಡುವರೋ

ಉತ್ತರಾಫಲ್ಗುನೀ ಯುಕ್ತೇ ಚತುರ್ಥೇ ಕಾಲ ಉತ್ತಮೇ ॥69॥

ಪಂಚಾನಾಮಾಪಿ ತೀರ್ಥಾನಾಂ ತುಂಬೇಽಥ ಗಿರಿಗಹ್ವರೇ ।
ಯಃ ಸ್ನಾತಿ ಮನುಜೋ ದೇವಿ ಪುನರ್ಗರ್ಭೇ ನ ಜಾಯತೇ ॥70॥

ಅಗ್ನಿವಾಹಸ್ಥಿತೇ ಭಾನೌ ಚಿತ್ರಾನಕ್ಷತ್ರಸಂಯುತೇ ।
ಪೂರ್ಣಿಮಾಖ್ಯೇ ತಿಥೌ ಪುಣ್ಯೇ ಪ್ರಾತಃಕಾಲೇ ತಥೈವ ಚ ।
ಆಕಾಶಗಂಗಾಸರಿತಿ ಸ್ನಾತೋ ಮೋಕ್ಷಮವಾಪ್ನುಯಾತ್ ॥71॥

ವೃಷಭಸ್ಥೇ ರವೌ ರಾಧೇ ದ್ವಾದಶ್ಯಾಂ ರವಿವಾಸರೇ ।
ಶುಕ್ಲೇ ವಾಽಪ್ಯಥವಾ ಕೃಷ್ಣೇ ಪಕ್ಷೇ ಭೌಮಸಮನ್ವಿತೇ ॥72॥

ಶುಕ್ಲೇ ವಾಪ್ಯಥವಾ ಕೃಷ್ಣೇ ಭಾನುವಾರೇಣ ಸಂಯುತೇ ।
ಪುಷ್ಯನಕ್ಷತ್ರಸಂಯುಕ್ತೇ ಹಸ್ತಕ್ಷ್ಯೇರ್ಣ ಯುತೇಽಪಿ ವಾ ॥73॥

ತೀರ್ಥೇ ಪಾಂಡವನಾಮ್ನ್ಯತ್ರ ಸಂಗಮೇ ಸ್ನಾತಿ ಯೋ ನರಃ ।
ನೇಹದುಃಖಮವಾಪ್ನೋತಿ ಪರತ್ರ ಸುಖಮಶ್ನುತೇ ॥74॥

ಶುಕ್ಲೇ ಪಕ್ಷೇಽಥವಾ ಕೃಷ್ಣೇ ಯಾಽರ್ಕವಾರೇಣ ಸಪ್ತಮೀ ।
ಪುಷ್ಯನಕ್ಷತ್ರಸಂಯುಕ್ತಾ ಹಸ್ತರ್ಕ್ಷೇಣ ಯುತಾಽಪಿ ವಾ ॥75॥

ಅವರು ಪುನರ್ಜನ್ಮವನ್ನು ಹೊಂದುವದಿಇಲ್ಲ.

ಮೇಷರಾಶಿಯಲ್ಲಿ ಸೂರ್ಯನಿರುವಾಗ (ಚೈತ್ರಮಾಸದ) ಚಿತ್ರಾನಕ್ಷತ್ರವಿರುವ ಹುಣ್ಣಿಮೆಯಂದು ಪ್ರಾತಃಕಾಲದಲ್ಲಿ ಆಕಾಶಗಂಗಾ ತೀರ್ಥದಲ್ಲಿ ಯಾರು ಸ್ನಾನವನ್ನು ಮಾಡುವರೋ ಅವರು ತಮ್ಮೆಲ್ಲ ಪಾಪಗಳಿಂದ ವಿನಿರ್ಮುಕ್ತರಾಗಿ ಮೋಕ್ಷವನ್ನು ಹೊಂದುವರು.

ವೃಷಭರಾಶಿಯಲ್ಲಿ ಸೂರ್ಯನಿರುವಾಗ ಶುಕ್ಲ ಅಥವಾ ಕೃಷ್ಣ ಪಕ್ಷದ ದ್ವಾದಶಿಯ ದಿನ ರವಿವಾರದಲ್ಲಾಗಲೀ, ಅಥವಾ ಯಾವದೇ ಮಾಸದಲ್ಲಾದರೂ ಪುಷ್ಯನಕ್ಷತ್ರ, ಹಸ್ತ ನಕ್ಷತ್ರಗಳಿಂದ ಯುಕ್ತವಾದ ಮಂಗಳವಾರ, ಭಾನುವಾರಗಳಲ್ಲಿ, ಶುಕ್ಲ ಅಥವಾ ಕೃಷ್ಣಪಕ್ಷಗಳಲ್ಲಿ ಪೂರ್ವಾಹ್ನದಲ್ಲಿ ಪಾಂಡವತೀರ್ಥದಲ್ಲಿ ಸ್ನಾನವನ್ನು ಮಾಡುವ ಮನುಷ್ಯರು ಇಹಲೋಕ-ಪರಲೋಕಗಳಲ್ಲಿ ಸಕಲ ದುಃಖಗಳನ್ನು ಕಳೆದುಕೊಂಡು ಸುಖವನ್ನು ಹೊಂದುವರು.

ಯಾವದೇ ಮಾಸದ ಶುಕ್ಲಪಕ್ಷ ಅಥವಾ ಕೃಷ್ಣಪಕ್ಷದ ಸಪ್ತಮಿಯಂದು ಆದಿತ್ಯವಾರವಿರುವಾಗ ಪುಷ್ಯನಕ್ಷತ್ರವಿರುವಾಗ ಅಥವಾ ಹಸ್ತ ನಕ್ಷತ್ರವಿರುವಾಗ ಯಾರು ಪಾಪನಾಶನತೀರ್ಥದಲ್ಲಿ ಸ್ನಾನವನ್ನು

ತಸ್ಯಾಂ ತಿಥೌ ಮಹಾಭಾಗೇ ಪಾಪನಾಶನಸಂಜ್ಞಕೇ ।
ತೀರ್ಥೇ ಯಃ ಸ್ನಾತಿ ನಿಯಮಾದ್ಭೂಧರೇಂದ್ರಸ್ಯ ಮಸ್ತಕೇ ॥76॥

ಕೋಟಿಜನ್ಮಾರ್ಜಿತೈಃ ಪಾಪೈರ್ಮುಚ್ಯತೇ ಸ ನರೋತ್ತಮಃ ॥77॥

ಶೃಣು ದೇವಿ ಪರಂ ಗುಹ್ಯಮನಂತಾಖ್ಯೇ ಮಹಾಗಿರೌ ।
ಮದ್ದಿವ್ಯಾಲಯವಾಯುವ್ಯೇ ಶಿಖರೇ ಗಿರಿಗಹ್ವರೇ ॥78॥

ದೇವತೀರ್ಥಮಿತಿ ಖ್ಯಾತಂ ತಟಾಕಮತಿಶೋಭನಮ್ ।
ತಸ್ಮಿನ್ಪುಣ್ಯತಮೇ ದೇವಿ ಸ್ನಾನಕಾಲಂ ವದಾಮಿ ತೇ ॥79॥

ಗುರುಪುಷ್ಯೇ ವ್ಯತೀಪಾತೇ ಸೋಮಶ್ರವಣಕೇ ತಥಾ ।
ದಿನೇಷ್ವೇತೇಷು ಯಃ ಸ್ನಾತಿ ತಸ್ಯ ಪುಣ್ಯಫಲಂ ಶ್ರುಣು ॥80॥

ಯಾನಿ ಕಾನೀಹ ಪಾಪಾನಿ ಜ್ಞಾನಾಜ್ಞಾನಕೃತಾನಿ ಚ ।
ತಾನಿ ಸರ್ವಾಣಿ ನಶ್ಯಂತಿ ದೇವತೀರ್ಥೇಽತಿಪಾವನೇ ॥81॥

ಪುಣ್ಯಾನ್ಯಪಿ ಚ ವರ್ಧಂತೇ ದೇವತೀರ್ಥನಿಮಜ್ಜನಾತ್ ।
ದೀರ್ಘಮಾಯುರವಾಪ್ನೋತಿ ಪುತ್ರಪೌತ್ರಸಮನ್ವಿತಃ ।
ಅಂತೇ ಸ್ವರ್ಗಂ ಸಮಾಸಾದ್ಯ ಚಂದ್ರಲೋಕೇ ಮಹೀಯತೇ ॥82॥

ತದ್ದಿನೇಷ್ವನ್ನದೋ ದೇವಿ ಯಾವಜ್ಜೀವಾನ್ನದೋ ಭವೇತ್ ।

ಮಾಡುವರೋ ಅವರು ಕೋಟಿಜನ್ಮಗಳಿಂದ ಅರ್ಜಿತವಾದ ಪಾಪಗಳನ್ನು ಕಳೆದು ಕೊಂಡು ಸುಖವನ್ನು ಹೊಂದುವರು.

ವೇಂಕಟಾಚಲದಲ್ಲಿ ನನ್ನ ಮಂದಿರದಿಂದ ವಾಯುವ್ಯ ದಿಕ್ಕಿನಲ್ಲಿರುವ ಪುಣ್ಯಕರವಾದ ದೇವತೀರ್ಥ ವೆಂಬ ತೀರ್ಥದಲ್ಲಿ, ಗುರುಪುಷ್ಯಗಳಲ್ಲಿ, ವ್ಯತೀಪಾತಗಳಲ್ಲಿ, ಸೋಮವಾರ ಶ್ರವಣಾ ನಕ್ಷತ್ರ ವಿರುವಾಗ ಯಾರು ಈ ತೀರ್ಥದಲ್ಲಿ ಸ್ನಾನವನ್ನು ಮಾಡುವರೋ ಅವರು ತಿಳಿದೋ, ತಿಳಿಯದೆಯೋ ಮಾಡಿರುವ ಪಾಪಗಳನ್ನು ಕಳೆದುಕೊಂಡು, ದೀರ್ಘಾಯುಷ್ಯ, ಆರೋಗ್ಯಗಳನ್ನು ಪಡೆದು, ಪುತ್ರಪೌತ್ರ ಸಮನ್ವಿತರಾಗಿ ಕೊನೆಗೆ ಸ್ವರ್ಗವನ್ನು ಹೊಂದಿ ಸುಖಿಸಿ, ಚಂದ್ರಲೋಕದಲ್ಲಿ ವಿರಾಜಮಾನರಾಗುವರು. ಈ ದಿನಗಳಲ್ಲಿ ಅ.ನ್ನದಾನವನ್ನು ಮಾಡಿದ ವ್ಯಕ್ತಿಯು ಯಾವಜ್ಜೀವ ಅನ್ನದಾನವನ್ನು ಮಾಡಿದ ಫಲವನ್ನು ಹೊಂದುತ್ತಾನೆ.' ಎಂದು ವರಾಹ ದೇವರು ತೀರ್ಥಗಳ ಮಾಹಾತ್ಮೆಯನ್ನು ಮತ್ತು ಅವುಗಳ ಸ್ನಾನಕಾಲವನ್ನು ವರ್ಣಿಸಿದರು.

ಅತಿಗುಹ್ಯತಮಂ ದೇವಿ ಪ್ರೋಕ್ತಂ ತುಭ್ಯಂ ವಸುಂಧರೇ ||83||

ವ್ಯಾಸ ಉವಾಚ

ಶ್ರುತ್ವಾಽಥ ಪೃಥಿವೀ ದೇವೀ ಪ್ರೀತಿಪ್ರವಣಮಾನಸಾ ।
ಇಷ್ಟಾಭಿರ್ವಾಗ್ಭಿರತುಲಂ ತುಷ್ಟಾವ ಧರಣೀಧರಮ್ ||84||

ಧರಣ್ಯುವಾಚ–

'ನಮಸ್ತೇ ದೇವದೇವೇಶ ವರಾಹವದನಾಚ್ಯುತ ।
ಕ್ಷೀರಸಾಗರಸಂಕಾಶವಜ್ರಶೃಂಗ ಮಹಾಭುಜ ||85||

ಉದ್ಧೃತಾಽಸ್ಮಿ ತ್ವಯಾ ದೇವ ಕಲ್ಪಾದೌ ಸಾಗರಾಂಭಸಃ ।
ಸಹಸ್ರಬಾಹುನಾ ವಿಷ್ಣೋ ಧಾರಯಾಮಿ ಜಗಂತ್ಯಹಮ್ ||86||

ಅನೇಕದಿವ್ಯಾಭರಣಯಜ್ಞಸೂತ್ರವಿರಾಜಿತಃ ।
ಅರುಣಾರುಣಾಂಬರಧರ ದಿವ್ಯರತ್ನವಿಭೂಷಿತ ||87||

ಉದ್ಯದ್ಭಾನುಪ್ರತೀಕಾಶ ಪಾದಪದ್ಮ ನಮೋ ನಮಃ ।
ಬಾಲಚಂದ್ರಾಭ ದಂಷ್ಟ್ರಾಗ್ರ ಮಹಾಬಲ ಪರಾಕ್ರಮ ||88||

ದಿವ್ಯಚಂದನಲಿಪ್ತಾಂಗ ತಪ್ತಕಾಂಚನಕುಂಡಲ ।
ಇಂದ್ರನೀಲಮಣಿದ್ಯೋತಿಹೇಮಾಂಗದವಿಭೂಷಿತಃ ||89||

ವಜ್ರದಂಷ್ಟ್ರಾಗ್ನಿನಿರ್ಭಿನ್ನ ಹಿರಣ್ಯಾಕ್ಷ ಮಹಾಬಲ ।
ಪುಂಡರೀಕಾಭಿರಾಮಾಕ್ಷ ಸಾಮಸ್ವನಮನೋಹರ' ||90||

ಆಗ ಭೂದೇವಿಯು ಅತ್ಯಂತ ಸಂತೋಷದಿಂದ ವರಾಹದೇವರನ್ನು 'ಹೇ ಸ್ವಾಮಿಯೇ! ವರಾಹ ವದನನಾದ ಶ್ರೀಹರಿಯೇ! ಕ್ಷೀರಸಾಗರದಂತೆ ಶುಭ್ರವಾದ ಶರೀರಕಾಂತಿಯುಕ್ತನಾದ, ವಜ್ರಾಯುಧದಂತೆ ಕಠಿಣವಾದ, ಕೋರೆಹಲ್ಲುಗಳಿಂದುಪಶೋಭಿತನಾದ, ಇಂದ್ರನೀಲ ಮಣಿಗಳಿಂದ ಅಲಂಕೃತವಾದ ಭುಜಕೀರ್ತಿಗಳಿಂದ ಮಂಡಿತನಾದ ಮಹಾಬಲಶಾಲಿಯಾದ ವಿಷ್ಣುವೇ! ನಿನಗೆ ನಮಸ್ಕಾರಗಳು. ಸ್ವರ್ಣಾಲಂಕಾರ ವಿಭೂಷಿತನೂ, ಅಪ್ರಾಕೃತ ಸೌಂದರ್ಯ ನಿಧಿಯೂ, ಜ್ಞಾನಾನಂದಾದಿ ಗುಣಭರಿತನೂ, ಸೃಷ್ಟಿಯ ಆದಿಭಾಗದಲ್ಲಿ ನನ್ನನ್ನು ಉದ್ಧರಿಸಿದವನೂ, ಜಗತ್ಸ್ವಾಮಿಯೂ, ಸರ್ವವಿದ್ಯಾಭಿಮಾನಿಯೂ ವೇದಪ್ರತಿಪಾದ್ಯನೂ ಆದ ವರಾಹವದನನಾದ ಶ್ರೀಹರಿಯೇ! ನಿನ್ನನ್ನು ವಂದಿಸುವೆನು' ಎಂಬುದಾಗಿ ಸ್ತುತಿಸಿ

ಶ್ರುತಿಸೀಮಾಂತ ಭೂಷಾತ್ಮನ್ಸರ್ವಾತ್ಮಂಶ್ಚಾರುವಿಕ್ರಮ ।
ಚತುರಾನನಶಂಭುಭ್ಯಾಂ ವಂದ್ಯಾಯತವಿಲೋಚನ ॥91॥

ಸರ್ವವಿದ್ಯಾಮಯಾಕಾರ ಶಬ್ದಾತೀತ ನಮೋ ನಮಃ ।
ಆನಂದವಿಗ್ರಹಾನಂತ ಕಾಲಕಾಲ ನಮೋ ನಮಃ ॥92॥

ಇತಿ ಸ್ತುತ್ವಾಽಚಲಾ ದೇವೀ ವವಂದೇ ಪಾದಯೋರ್ವಿಭುಮ್ ।
ವಂದಮಾನಾಂ ಸಮುದ್ವೀಕ್ಷ್ಯ ದೇವಃ ಫುಲ್ಲವಿಲೋಚನಃ ॥93॥

ಉದ್ಧೃತ್ಯ ಧರಣೀದೇವೀಮಾಲಿಲಿಂಗೇಽಥ ಬಾಹುಭಿಃ ।
ಆಘ್ರಾಯ ಧರಣೀವಕ್ತ್ರಂ ವಾಮಾಂಕೇ ಸನ್ನಿವೇಶ್ಯ ಚ ॥94॥

ಆರುಹ್ಯ ಗರುಡೇಶಾನಂ ಜಗಾಮ ವೃಷಭಾಚಲಮ್ ।
ಮುನೀಂದ್ರೈರ್ನಾರದಾದ್ಯೈಶ್ಚ ಸ್ತೂಯಮಾನೋ ಮಹೀಪತಿಃ ॥95।

ಸ್ವಾಮಿಪುಷ್ಕರಿಣೀತೀರೇ ಪಶ್ಚಿಮೇ ಲೋಕಪೂಜಿತೇ ।
ಆಸ್ತೇ ವರಾಹವದನೋ ಮುನೀಂದ್ರೈಸ್ತತ್ರ ಪೂಜಿತಃ ।
ವೈಖಾನಸೈರ್ಮಹಾಭಾಗೈರ್ಬ್ರಹ್ಮತುಲ್ಯೈರ್ಮಹಾತ್ಮಭಿಃ ॥96॥

ವ್ಯಾಸ ಉವಾಚ–

ತಂ ದೃಷ್ಟ್ವಾ ನಾರದಃ ಸೂತಃ ಮುನೀನಾಮುಕ್ತವಾನ್ಪುರಾ ।

ನಮಸ್ಕರಿಸಿದಳು.

ಇದರಿಂದ ಸಂತುಷ್ಟನಾದ ಶ್ರೀಹರಿಯು ವಿನಮ್ರಳಾದ ಅವಳನ್ನು ಮೇಲಕ್ಕೆತ್ತಿ, ತನ್ನ ಬಾಹುಗಳಿಂದ ಆಲಿಂಗಿಸಿಕೊಂಡು, ಆಕೆಯ ಶಿರಸ್ಸನ್ನು ಪ್ರೀತಿಯಿಂದ ಆಘ್ರಾಣಿಸಿ, ಅವಳನ್ನು ತನ್ನ ಎಡ ತೊಡೆಯ ಮೇಲೆ ಕುಳ್ಳರಿಸಿಕೊಂಡು ಗರುಡವಾಹನನಾಗಿ ವೇಂಕಟಾಚಲಕ್ಕೆ ತೆರಳಿ, ಲೋಕಪ್ರಸಿದ್ಧವಾದ, ಪರಮಪಾವನವಾದ ಸ್ವಾಮಿಪುಷ್ಕರಿಣಿಯ ಪಶ್ಚಿಮ ತೀರದಲ್ಲಿ ಭಕ್ತರನ್ನು ಅನುಗ್ರಹಿಸುವದರಗೋಸ್ಕರವಾಗಿ, ಸರ್ವರಿಂದಲೂ ಸಂಸ್ತುತನಾಗಿ ನೆಲೆಸಿದನು.

ಹೇ ಸೂತನೇ! ಪರ್ವತದ ಮಾಹಾತ್ಮ್ಯವಿಷಯಕವಾದ ವೃತ್ತಾಂತವನ್ನು ನಾರದರಿಂದ ಕೇಳಿದ್ದನ್ನು ನಾನು ನಿನಗೆ ಯಥಾವತ್ತಾಗಿ ವಿವರಿಸಿರುವೆನು. ಪರಮಪಾವನವೂ, ಧರ್ಮವಿವರ್ಧಕವೂ ಆದ ಈ ವೃತ್ತಾಂತವನ್ನು ದೇವರ ಸನ್ನಿಧಾನದಲ್ಲಾಗಲಿ, ಬ್ರಾಹ್ಮಣರ ಸಮೂಹದಲ್ಲಾಗಲಿ ಯಾರು ಭಕ್ತಿಯುಕ್ತರಾಗಿ ಕೀರ್ತನ–ಶ್ರವಣಗಳನ್ನು ಮಾಡುವರೋ ಅವರು ಪುತ್ರ–ಪೌತ್ರಾದಿ ಸಕಲ

ತದೇತದಹಮಶ್ರೌಷಂ ತತ್ರ ವೈ ಮುನಿಸಂಸದಿ ॥97॥

ಯತ್ಪೃಷ್ಟೋಽಹಂ ತ್ವಯಾ ಸೂತ ಮಾಹಾತ್ಮ್ಯಂ ಧರಣೀಭೃತಾಮ್।
ಮಯಾ ತೂಕ್ತಂ ಯಥಾವದ್ಧಿ ನಾರದಾಚ್ಚ ಪುರಾ ಶ್ರುತಮ್ ॥98॥

ಯಂ ಇದಂ ಧರ್ಮಸಂವಾದಮಾವಯೋಃ ಸೂತ ಪಾವನಮ್ ।
ಪಠೇದ್ವಾ ದೇವಪುರತೋ ಬ್ರಾಹ್ಮಣಾನಾಂ ಪುರಸ್ತಥಾ ॥99॥

ಸರ್ವೇಷಾಮಪಿ ವರ್ಣಾನಾಂ ಶೃಣ್ವತಾಂ ಭಕ್ತಿಪೂರ್ವಕಮ್ ।
ಸ ಪ್ರತಿಷ್ಠಾಮವಾಪ್ನೋತಿ ಪುತ್ರಪೌತ್ರೈಃ ಸಮನ್ವಿತಃ ॥100॥

ಶೃಣ್ವತಾಮಪಿ ಸರ್ವೇಷಾಂ ಯದಿಷ್ಟಂ ತದ್ಭವಿಷ್ಯತಿ ॥101॥

ಸೂತ ಉವಾಚ

ಇತಿ ಮೇ ಭಗವಾನ್ವ್ಯಾಸಃ ಪ್ರೋವಾಚ ಮುನಿಸೇವಿತಃ ।
ಯಥಾಶ್ರುತಂ ಮಯಾ ಪೂರ್ವಂ ಕೃಷ್ಣದ್ವೈಪಾಯನಾದ್ಗುರೋಃ ॥102॥

ತತ್ತಥಾ ಸರ್ವಮೇವಾತ್ರ ಮಯಾಽಪ್ಯುಕ್ತಂ ಮುನೀಶ್ವರಾಃ ।
ಶ್ರುತ್ವಾ ಸೂತವಚಸ್ತ್ವಿತ್ಥಂ ತೇ ಪ್ರೀತಮನಸೋಽಭವನ್ ॥103॥

ಋಷಯಃ ಊಚುಃ

ಸೂತ ತ್ವಯೋಕ್ತಂ ಭುವಿ ಪರ್ವತೇಷು
ಪುಣ್ಯೇಷು ಪುಣ್ಯಸ್ಯ ಮಹೀಧರಸ್ಯ ।
ಮಾಹಾತ್ಮ್ಯಮಸ್ಮಾಕಮಹೀಂದ್ರನಾಮ್ನಃ
ಪಾಪಾಪಹಂ ಮೋಕ್ಷಫಲಪ್ರದಾಯಕಮ್ ॥104॥

ಸಂಪತ್ತಿಯನ್ನು ಹೊಂದಿ, ಲೋಕದಲ್ಲಿ ಉನ್ನತವಾದ ಮರ್ಯಾದೆಯನ್ನು ಹೊಂದಿ, ತಮ್ಮ ಇಷ್ಟಾರ್ಥಗಳೆಲ್ಲವನ್ನು ಪಡೆದು ಸುಖಿಗಳಾಗುವರು.' ಎಂದು ಸೂತಾಚಾರ್ಯರು ಶೌನಕಾದಿಗಳನ್ನು ಕುರಿತು ಭೂಧರಗಳ ಮಾಹಾತ್ಮೆಯನ್ನು ವರ್ಣಿಸಿದರು.

ಇದನ್ನು ಕೇಳಿದ ಶೌನಕಾದಿಗಳು 'ಹೇ ಪ್ರಾಜ್ಞರಾದ ಸೂತರೇ! ಭೂದೇವಿಗೆ ಪರಮಾತ್ಮನು ಮತ್ತೇನನ್ನು ಹೇಳಿದನು ಎಂಬುದನ್ನು ವಿವರಿಸಿರಿ' ಎಂದು ಸಂಪ್ರಾರ್ಥಿಸಿದರು.

ತತೋ ವೃಷಾದ್ರಿಂ ಸಂಪ್ರಾಪ್ಯ ವರಾಹೋ ಧರಣೀಯುತಃ ।
ಕಿಮುಕ್ತವಾನ್ ಧರಣ್ಯೈ ಸ ತನ್ನೋ ಬ್ರೂಹಿ ಮಹಾಮತೇ ॥105॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ ನಾರದಸ್ಯ ಸುಮೇರುಶಿಖರಸ್ಥಯಜ್ಞವರಾಹ ದರ್ಶನಪ್ರಾಪ್ತ್ಯಾದಿ ವರ್ಣನಂ ನಾಮ ಪ್ರಥಮೋಽಧ್ಯಾಯಃ ॥1॥

* * *

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ ನಾರದರ ಸುಮೇರು ಶಿಖರದಲ್ಲಿಯ ಯಜ್ಞವರಾಹ ದರ್ಶನ ಪ್ರಾಪ್ತಿಯೇ ಮೊದಲಾದವುಗಳ ವರ್ಣನವೆಂಬ ಮೊದಲನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

# ಅಥ ದ್ವಿತೀಯೋಧ್ಯಾಯಃ

[ಶ್ರೀವಾರಾಹಮಂತ್ರಾರಾಧನವಿಧಿವರ್ಣನಮ್]

ಶ್ರೀ ಸೂತ ಉವಾಚ–

ಶೃಣುಧ್ವಂ ಮುನಯಃ ಸರ್ವೇ ಕಥಾಂ ಪುಣ್ಯಾಂ ಪುರಾತನೀಮ್।
ವೈವಸ್ವತೇಽಂತರೇ ಪೂರ್ವಂ ಕೃತೇ ಪುಣ್ಯತಮೇ ಯುಗೇ ॥1॥

ನಾರಾಯಣಾದ್ರೌ ದೇವೇಶಂ ನಿವಸಂತಂ ಕ್ಷಮಾಪತಿಮ್ ।
ವಾರಾಹರೂಪಿಣಂ ದೇವಂ ಧರಣೀ ಸಖಿಭಿರ್ವೃತಾ ॥2॥

ಪ್ರಣಮ್ಯ ಪರಿಪ್ರಪ್ರಚ್ಛ ರಕ್ತಪದ್ಮಾಯತೇಕ್ಷಣಮ್ ॥3॥

ಧರಣ್ಯುವಾಚ–

'ಆರಾಧ್ಯಃ ಕೇನ ಮಂತ್ರೇಣ ಭವಾನ್ಪ್ರೀತೋ ಭವಿಷ್ಯತಿ ।
ತಂ ಮೇ ವದ ತ್ವಂ ದೇವೇಶ ಯಃ ಪ್ರಿಯೋ ಭವತಃ ಸದಾ ॥4॥

ಜಪತಾಂ ಸರ್ವಸಂಪತ್ತಿಕಾರಕಂ ಪುತ್ರಪೌತ್ರದಂ ।
ಸಾರ್ವಭೌಮತ್ವದಂ ಚೈವ ಕಾಮಿನಾಂ ಕಾಮದಂ ಸದಾ ॥5॥

ಅಂತೇ ಯಸ್ತತ್ಪದಪ್ರಾಪ್ತಿಂ ದದಾತಿ ನಿಯಮಾತ್ಮನಾಮ್ ।
ಏವಂಭೂತಂ ವದ ಪ್ರೀತ್ಯಾ ಮಯಿ ವಾರಾಹ ಮಾನದ' ॥6॥

ಸ್ಕಾಂದಪುರಾಣಾಂತರ್ಗತವಾದ ವೇಂಕಟೇಶ ಮಾಹಾತ್ಮೆಯಲ್ಲಿ

## ಎರಡನೆಯ ಅಧ್ಯಾಯ

ವರಾಹ ಮಂತ್ರಾರಾಧನವಿಧಿ

ಭೂದೇವಿಯು ಪರಮಾತ್ಮನನ್ನು 'ಹೇ ಸ್ವಾಮಿಯೇ! ಯಾವ ಮಂತ್ರಾರಾಧನೆಯಿಂದ ನೀನು ಪ್ರೀತನಾಗಿ ಅನುಗ್ರಹಿಸುವೆಯೋ ಅಂತಹ ಮಂತ್ರವನ್ನು ನನಗೆ ತಿಳಿಸು. ಸರ್ವಜನರಿಗೆ ಸಂಪತ್ತನ್ನುಂಟುಮಾಡುವ, ಪುತ್ರಪೌತ್ರಾದಿ ಸಂಪತ್ತಿಯನ್ನು, ಸಾರ್ವಭೌಮತ್ವಾದಿಗಳನ್ನು ಕೊಡುವ, ಅಭೀಪ್ಸಿತ ಫಲದಾಯಕವಾದ ಕೊನೆಗೆ ಮೋಕ್ಷವನ್ನೂ ಸಹ ಹೊಂದಿಸುವ ನಿನ್ನ ಮಂತ್ರಾರಾಧನ ಕ್ರಮವನ್ನು ತಿಳಿಸು' ಎಂದು ನುಡಿದಾಗ ವರಾಹ ದೇವರು ಸದ್ಯಃ ಫಲದಾಯಕವೂ, ಪರಮ

ಶ್ರೀ ಸೂತ ಉವಾಚ–

ಇತಿ ಪೃಷ್ಟಸ್ತಯಾ ಭೂಮ್ಯಾ ಪ್ರಾಹ ಪ್ರೀತಿಸ್ಮಿತಾನನಃ ॥7॥

ಶೃಣು ದೇವಿ ಪರಂ ಗುಹ್ಯಂ ಸದ್ಯಃ ಸಂಪತ್ತಿಕಾರಕಮ್ ।
ಭೂಮಿದಂ ಪುತ್ರದಂ ಗೋಪ್ಯಮಪ್ರಕಾಶ್ಯಂ ಕದಾಚನ ॥8॥

ಕಿಂ ಚ ಶುಶ್ರೂಷವೇ ವಾಚ್ಯಂ ಭಕ್ತಾಯ ನಿಯತಾತ್ಮನೇ ।
ಓಂ ನಮಃ ಶ್ರೀವರಾಹಾಯ ಧರಣ್ಯುದ್ಧರಣಾಯ ಚ ॥9॥
ವಹ್ನಿಜಾಯಾಸಮಾಯುಕ್ತಂ ಸದಾ ಜಪ್ಯೋ ಮುಮುಕ್ಷುಭಿಃ ॥10॥

ಅಯಂ ಮಂತ್ರೋ ಧರಾದೇವಿ ಸರ್ವಸಿದ್ಧಿಪ್ರದಾಯಕಃ ।
ಋಷಿಃ ಸಂಕರ್ಷಣಃ ಪ್ರೋಕ್ತೋ ದೇವತಾ ತ್ವಹಮೇವ ಹಿ ॥11॥

ಛಂದಃ ಪಂಕ್ತಿಸ್ಸಮಾಖ್ಯಾತಾ ಶ್ರೀಂ ಬೀಜಂ ಸಮುದಾಹೃತಮ್ ।
ಚತುರ್ಲಕ್ಷಂ ಜಪೇನ್ಮಂತ್ರಂ ಸದ್ಗುರೋರ್ಲಬ್ಧತನ್ಮನಾಃ ॥12॥

ಜುಹುಯಾತ್ ಪಾಯಸಾನ್ನಂ ವೈ ಕ್ಷೌದ್ರಸರ್ಪಿಸಮನ್ವಿತಮ್ ।
ಅಥ ಧ್ಯಾನಂ ಪ್ರವಕ್ಷ್ಯಾಮಿ ಮನಃಶುದ್ಧಿಪ್ರದಾಯಕಮ್ ॥13॥

ಗುಹ್ಯವೂ, ಸರ್ವ ಸಂಪತ್ತಿಕಾರಕವೂ ವಿಶೇಷವಾಗಿ ಭೂಮಿದಾಯಕವೂ ಆದ, ವರಾಹಮಂತ್ರವನ್ನು ಭೂದೇವಿಗೆ ತಿಳಿಸಿಕೊಟ್ಟರು. ಈ ಮಂತ್ರವು ಅತ್ಯಂತ ಗೋಪ್ಯವಾಗಿದ್ದು ಎಂದಿಗೂ ಕೂಡ ಬಹಿರಂಗದಲ್ಲಿ ಇದನ್ನು ತಿಳಿಸಬಾರದು. ಮನೋನಿಗ್ರಹವನ್ನು ಹೊಂದಿದ, ತಮ್ಮನ್ನು ಉಪಸತ್ತಿಪುರಸ್ಸರವಾಗಿ ಸೇವಿಸುವ ಶಿಷ್ಯಜನರಿಗೆ ಮಾತ್ರ ಇದನ್ನು ಉಪದೇಶಿಸಬೇಕು.

'ಓಂ ನಮಃ ಶ್ರೀವರಾಹಾಯ ಧರಣ್ಯುದ್ಧರಣಾಯ ಚ । ವಹ್ನಿಜಾಯಾಸಮಾಯುಕ್ತಂ ಸದಾ ಜಪ್ಯೋ ಮುಮುಕ್ಷುಭಿಃ' (ಭೂದೇವಿಯನ್ನುದ್ಧರಿಸಿದವರೂ, ಮುಮುಕ್ಷುಗಳಿಂದ ಸದಾ ಸಂಸೇವನೀಯರೂ ಆದ ವರಾಹದೇವರಿಗೆ ನಮಸ್ಕಾರಗಳು)' ಎಂಬ ಈ ನನ್ನ ಮಂತ್ರವು ಸರ್ವಸಿದ್ಧಿಪ್ರದಾಯಕವಾಗಿರುವದು. ಈ ಮಂತ್ರಕ್ಕೆ ಸಂಕರ್ಷಣನು ಋಷಿಯು. ಸಾಕ್ಷಾತ್ ಪರಮಾತ್ಮನೇ ಆದ ನಾನು ಈ ಮಂತ್ರಪ್ರತಿಪಾದ್ಯ ದೇವತೆಯಾಗಿರುವೆನು. ಪಂಕ್ತಿಛಂದಸ್ಸಿನಿಂದ ಕೂಡಿರುವ ಈ ಮಂತ್ರವು ಶ್ರೀಬೀಜಯುಕ್ತವೆಂದು ಪ್ರಸಿದ್ಧವಾಗಿರುವದು. ತಮ್ಮ ಗುರುಗಳಿಂದ ಮಂತ್ರದ ಉಪದೇಶವನ್ನು ಹೊಂದಿ ನಾಲ್ಕು ಲಕ್ಷ ಜಪವನ್ನು ಮಾಡಿ, ತುಪ್ಪ ಜೇನುತುಪ್ಪಗಳಿಂದ ಸಮೇತವಾದ ಪಾಯಸದಿಂದ ಹೋಮಮಾಡಬೇಕು. 'ಶುದ್ಧವಾದ ಸ್ಫಟಿಕದ ಪರ್ವತದಂತೆ

ಶುದ್ಧಸ್ಫಟಿಕಶೈಲಾಭಂ ರಕ್ತಪದ್ಮದಲೇಕ್ಷಣಮ್ ।
ವರಾಹವದನಂ ಸೌಮ್ಯಂ ಚತುರ್ಬಾಹುಂ ಕಿರೀಟಿನಮ್ ॥14॥

ಶ್ರೀವತ್ಸವಕ್ಷಸಂ ಚಕ್ರಶಂಖಾಭಯಕರಾಂಬುಜಮ್ ।
ವಾಮೋರುಸ್ಥಿತಯಾ ಯುಕ್ತಂ ತ್ವಯಾ ಮಾಂ ಸಾಗರಾಂಬರೇ ॥15॥

ರಕ್ತಪೀತಾಂಬರಧರಂ ರಕ್ತಾಭರಣಭೂಷಿತಮ್ ।
ಶ್ರೀಕೂರ್ಮಪೃಷ್ಠಮಧ್ಯಸ್ಥಶೇಷಮೂರ್ತ್ಯಬ್ಜಸಂಸ್ಥಿತಮ್ ॥16॥

ಏವಂ ಧ್ಯಾತ್ವಾ ಜಪೇನ್ಮಂತ್ರಂ ಸದಾ ಚಾಷ್ಟೋತ್ತರಂ ಶತಮ್ ।
ಸರ್ವಾನ್ಕಾಮಾನವಾಪ್ನೋತಿ ಮೋಕ್ಷಂ ಚಾಂತೇ ವ್ರಜೇದ್ಧುವಮ್ ॥17॥

ಪ್ರೋಕ್ತಂ ಮಯಾ ತೇ ಧರಣಿ ಯತ್ಪೃಷ್ಟೋಽಹಂ ತ್ವಯಾಮಲೇ ।
ಅತಃ ಕಿಂ ತೇ ವ್ಯವಸಿತಂ ಬ್ರೂಹಿ ತದ್ವಿಮಲಾನನೇ ॥18॥

ಏತಚ್ಛ್ರುತ್ವಾ ತತೋ ಭೂಮಿಃ ಪಪ್ರಚ್ಛ ಪುನರೇವ ತಮ್ ।
'ಕೇನ ವಾಽನುಷ್ಠಿತಂ ದೇವ ಪುರಾ ಪ್ರಾಪ್ತಂ ಫಲಂ ಚ ಕಿಮ್' ॥19।

ಇತಿ ಪೃಷ್ಟಃ ಪುನರ್ದೇವಃ ಶ್ರೀವರಾಹೋಽಬ್ರವೀದಿದಮ್ ।
ಪುರಾ ಕೃತಯೋಗೇ ದೇವಿ ಧರ್ಮೋ ನಾಮ ಮನುರ್ಮಹಾನ್ ॥20॥

ಶುಭ್ರಕಾಯನಾದ, ಕಮಲದಲನಯನನಾದ, ಚತುರ್ಭುಜನಾದ, ಕಿರೀಟವನ್ನು ಧರಿಸಿದ, ಶ್ರೀವತ್ಸಚಿಹ್ನಾಂಕಿತನಾದ, ಶಂಖ, ಚಕ್ರ, ಅಭಯ, ವರದಾಯಕವಾದ ಕರಾಂಬುಜಗಳಿಂದ ಉಪೇತನಾದ, ಎಡ ತೊಡೆಯಲ್ಲಿ ಭೂದೇವಿಯನ್ನು ಕುಳ್ಳಿರಿಸಿಕೊಂಡ, ಪೀತಾಂಬರ ಧಾರಿಯಾದ, ಆದಿಕೂರ್ಮನ ಬೆನ್ನಿನ ಮಧ್ಯದಲ್ಲಿರುವ ಆದಿಶೇಷನೆಂಬ ಪರ್ಯಂಕದಲ್ಲಿ ಪದ್ಮಾಸನನಾಗಿ ಕುಳಿತಿರುವ, ವರಾಹದೇವರನ್ನು ಧ್ಯಾನಿಸುತ್ತ ಮೇಲೆ ಹೇಳಿದ ಮಂತ್ರವನ್ನು ನೂರೆಂಟು ಬಾರಿ ಜಪಿಸಬೇಕು. ಅಂತಹ ಸಾಧಕನು ಇಹ ಲೋಕದಲ್ಲಿ ಸಕಲೇಷ್ಟಗಳನ್ನು ಪಡೆದು ಕೊನೆಗೆ ಮೋಕ್ಷವನ್ನೇ ಹೊಂದುವನು. ಇದು ನಿಶ್ಚಯವು.

ಭೂದೇವಿಯು 'ಈ ಮಂತ್ರದ ಅನುಷ್ಠಾನವನ್ನು ಯಾರು ಮಾಡಿರುವರು? ಅವರು ಹೊಂದಿರುವ ಫಲವಾದರೂ ಯಾವದು? ಎಂಬುದನ್ನು ನನಗೆ ತಿಳಿಸಿರಿ' ಎಂದು ಪ್ರಾರ್ಥಿಸಿದಳು. ಆಗ ವರಾಹ ದೇವರು 'ಹಿಂದೆ ಧರ್ಮನೆಂಬ ಮನುವು ಬ್ರಹ್ಮದೇವರಿಂದ ಈ ವರಾಹ ಮಂತ್ರದ ಉಪದೇಶವನ್ನು ಹೊಂದಿ, ಮಂತ್ರಜಪದ ಪ್ರಭಾವದಿಂದ ಭೂಮಿಯಲ್ಲಿ ಸಕಲ ಸಿದ್ಧಿಯನ್ನು

ಬ್ರಹ್ಮಣೋಽಮುಂ ಮನುರ್ಲಬ್ಧ್ವಾ ಜಪ್ತ್ವಾಽಸ್ಮಿನ್ ಧರಣೀಧರೇ ।
ಮಾಂ ಚ ದೃಷ್ಟ್ವಾ ವರಂ ಲಬ್ಧ್ವಾ ಪ್ರಾಪ್ತೋಽಭೂನ್ಮಾಮಕಂ ಪದಮ್ ॥21॥

ಇಂದ್ರೋ ದುರ್ವಾಸಸಃ ಶಾಪಾತ್ಪುರಾ ಭ್ರಷ್ಟಸ್ತ್ರಿವಿಷ್ಟಪಾತ್ ।
ಅನೇನೇಷ್ಟ್ವಾಽತ್ರ ಮಾಂ ದೇವಿ ಪುನಃ ಪ್ರಾಪ್ತಸ್ತ್ರಿವಿಷ್ಟಪಮ್ ॥22॥

ಅನ್ಯೇಽಪಿ ಮುನಯೋ ಭೂಮೇ ಜಪ್ತ್ವಾ ಪ್ರಾಪ್ತಾಃ ಪರಾಂ ಗತಿಮ್।
ಅನಂತಃ ಪನ್ನಗಾಧೀಶೋ ಹ್ಯಮುಂ ಲಬ್ಧ್ವಾಽಥ ಕಾಶ್ಯಪಾತ್ ॥23॥

ಶ್ವೇತದ್ವೀಪೇ ಜಪಂಶ್ಚೈವ ಬಭೂವ ಧರಣೀಧರಃ ।
ತಸ್ಮಾಜ್ಜಪ್ಯಃ ಸದಾ ಚೇಹ ಮನುಷ್ಯೈಶ್ಚ ಧರಾರ್ಥಿಭಿಃ ॥24॥

ಏತಚ್ಛ್ರುತ್ವಾಥ ಸುಪ್ರೀತಾ ಪುನಃ ಪ್ರಾಹ ಧರಾಧರಮ್ ॥25॥

ವೇಂಕಟಾಖ್ಯೇ ಮಹಾಶೈಲೇ ಶ್ರೀನಿವಾಸೋ ಜಗತ್ಪತಿಃ ।
ಕದಾ ಹ್ಯಾಯಾತಿ ದೇವೇಶಃ ಶ್ರೀಭೂಮಿ ಸಹಿತೋಽಮಲಃ ॥26॥

ಕಥಂ ಕಲ್ಪಾಂತರಸ್ಥಾಯೀ ಭವಿಷ್ಯತಿ ಜನಾರ್ದನಃ ।
ಏತದ್ಬ್ರೂಹಿ ವರಾಹಾತ್ಮನ್ಮಹತ್ಕೌತೂಹಲಂ ಮಮ ॥27॥

ಇತಿ ಸ್ಕಾಂದೇಪುರಾಣೇ 'ವರಾಹಮಂತ್ರಾರಾಧನವಿಧಿವರ್ಣನಂ' ನಾಮ ದ್ವಿತೀಯೋಧ್ಯಾಯಃ ॥2॥

* * *

ಹೊಂದಿ, ನನ್ನ ದರ್ಶನವನ್ನು ಪಡೆದು, ವರಗಳನ್ನು ಹೊಂದಿ, ಕೊನೆಗೆ ನನ್ನ ಸ್ಥಾನವಾದ ಮೋಕ್ಷವನ್ನೇ ಹೊಂದಿದನು. ದೂರ್ವಾಸರ ಶಾಪದಿಂದ ಸಂಪತ್ತಿನಿಂದ ವಿದೂರರಾಗಿದ್ದ ಇಂದ್ರದೇವರು ಮಂತ್ರಪ್ರಭಾವದಿಂದ ಪುನಃ ಸ್ವರ್ಗಾಧಿಪತ್ಯವನ್ನು ಪಡೆದರು. ಇನ್ನು ಅನೇಕರಾದ ಋಷಿಗಳು ಈ ಮಂತ್ರಜಪದಿಂದ ಉತ್ತಮವಾದ ಲೋಕಗಳನ್ನು ಹೊಂದಿರುವರು. ಕಾಶ್ಯಪರಿಂದ ಈ ಮಂತ್ರದ ಉಪದೇಶವನ್ನು ಹೊಂದಿದ ಶೇಷದೇವರು ಶ್ವೇತದ್ವೀಪದಲ್ಲಿ ಈ ಮಂತ್ರವನ್ನು ಜಪಿಸಿ. ಅದರ ಪ್ರಭಾವದಿಂದ ಭೂಮಿಯನ್ನು ತನ್ನ ಹೆಡೆಗಳಲ್ಲಿ ಧರಿಸಲು ಸಮರ್ಥನಾಗಿರುವನು. ಭೂಕಾಮರಾದ ಮನುಷ್ಯರಿಂದ ಈ ಮಂತ್ರವು ಅವಶ್ಯ ಜಪ್ಯವಾಗಿರುವದು' ಎಂದು ತಿಳಿಸಿದರು.

ಇದನ್ನು ಕೇಳಿದ ಧರಣೀ ದೇವಿಯು 'ಪರಮ ಪುಣ್ಯದಾಯಕವಾದ ಈ ವೇಂಕಟಾಚಲಕ್ಕೆ ಶ್ರೀನಿವಾಸನು ಯಾವಗ ಬರುವನು? ಒಂದು ಕಲ್ಪಪರ್ಯಂತರವಾಗಿ ಅವನು ಅಲ್ಲಿ ಹೇಗೆ (ಯಾವ ರೂಪದಿಂದ) ಇರುವನೋ ಅದನ್ನು ತಿಳಿಸಿರಿ' ಎಂದು ಪ್ರಾರ್ಥಿಸಿದಳು.

ಇಲ್ಲಿಗೆ ವರಾಹ ಮಂತ್ರಾರಾಧನವೆಂಬ ಎರಡನೆಯ ಅಧ್ಯಾಯವು ಪರಿಸಮಾಪ್ತವಾಯಿತು.

# ಅಥ ತೃತೀಯೋಽಧ್ಯಾಯಃ

[ಅಗಸ್ತ್ಯಪ್ರಾರ್ಥನಯಾ ಭಗವತಃ ಸರ್ವಜನ ದೃಗ್ಗೋಚರತ್ವಾದಿವರ್ಣನಮ್]

ವರಾಹ ಉವಾಚ–

ಹಂತ ತೇ ಕಥಯಿಷ್ಯಾಮಿ ಪುರಾವೃತ್ತಂ ವರಾನನೇ ।
ಶೃಣು ಪುಣ್ಯಂ ಮಹಾದೇವಿ ಸಭವಿಷ್ಯಂ ಸಹೋತ್ತರಮ್ ॥1॥

ವೈವಸ್ವತೇಽಂತರೇ ದೇವಿ ಪೂರ್ವೇ ಕೃತಯುಗೇಽಂತರೇ ।
ವಾಯೋಸ್ತಪೋ ಮಹದ್ದೃಷ್ಟ್ವಾ ಶ್ರೀಭೂಮಿಸಹಿತೋಽನಘೇ ॥2॥

ಆಗಚ್ಛಚ್ಛ್ರೀನಿವಾಸಶ್ಚ ಸ್ವಾಮಿಪುಷ್ಕರಣೀತಟೇ ।
ದಕ್ಷಿಣೇಽಸ್ಮಿನ್ಪುಣ್ಯತಮೇ ಆನಂದಾಖ್ಯವಿಮಾನಕೇ ॥3॥

ವಸಿಷ್ಯತಿ ಚ ಶ್ರೀಕಾಂತೋ ವಾಯೋಃ ಪ್ರಿಯಕರೋ ಹರಿಃ ॥4॥

ಧರಣ್ಯುವಾಚ–

'ಅದೃಶ್ಯೋ ಭಗವಾನ್ಮರ್ತ್ಯೈಃ ಕಥಂ ದೃಶ್ಯೋ ಭವಿಷ್ಯತಿ ॥5॥

ಶ್ರೀನಿವಾಸೋಽಪಿ ದೇವೇಶೋ ಭವದ್ದಕ್ಷಿಣಪಾರ್ಶ್ವಗಃ ।
ಏತದ್ವದ ಸುರಾಧೀಶ ಜನೈರಾರಾಧ್ಯತೇ ಕಥಮ್' ॥6॥

## ಮೂರನೆಯ ಅಧ್ಯಾಯವು

ಭೂಮಿಯ ಮಾತಿನಿಂದ ಸಂತುಷ್ಟರಾದ ವರಾಹ ದೇವರು ಭೂದೇವಿಗೆ ಶ್ರೀನಿವಾಸಾಗಮನ ವೃತ್ತಾಂತವನ್ನು ವರ್ಣಿಸುವರು. ವೈವಸ್ವತ ಮನ್ವಂತರದ ಹಿಂದಿನ ಕೃತಯುಗದಲ್ಲಿ ವಾಯುದೇವರು ಭಗವಂತನನ್ನುದ್ದೇಶಿಸಿ ಮಹತ್ತರವಾದ ತಪಸ್ಸನ್ನಾಚರಿಸಿದಾಗ ಸಂತುಷ್ಟನಾದ ಭಗವಂತನು ಶ್ರೀಭೂಮಿಯರಿಂದ ಸಹಿತನಾಗಿ ಸ್ವಾಮಿಪುಷ್ಕರಿಣಿಯ ದಕ್ಷಿಣ ದಡದಲ್ಲಿ ಆನಂದವೆಂಬುವ ವಿಮಾನದಲ್ಲಿ ವಾಯುದೇವರಿಗೆ ಸಂತೋಷವನ್ನುಂಟುಮಾಡುತ್ತಾ ವಾಸವಾಗಿರುವನು.

ಇದನ್ನು ಕೇಳಿದ ಭೂದೇವಿಯು 'ದೇವಾಧಿದೇವನಾದ ಶ್ರೀನಿವಾಸನು ನಿನ್ನ ಬಲ ಪಾರ್ಶ್ವದಲ್ಲಿ ಬಂದಿರಲು ಕಾರಣವೇನು? ಸ್ವಭಾವತಃ ಅದೃಶ್ಯನೇ ಆದ ಭಗವಂತನು ಹೀನರಾದ ಮಾನವರ

ವರಾಹ ಉವಾಚ–

ಆಗಸ್ತ್ಯೋಽಸ್ಮಿನ್ಸಮಾಸಾದ್ಯ ದೃಷ್ಟ್ವಾ ದೇವಂ ಸನಾತನಮ್ ।
ಆರಾಧ್ಯ ದ್ವಾದಶಾಬ್ದಂ ತಂ ಪ್ರೀಣಯಿತ್ವಾ ಪುನಃ ಪುನಃ ॥7॥

ಯಯಾಚೇ ತತ್ರ ಸಾನ್ನಿಧ್ಯಂ 'ಭವಾನ್ ದೃಶ್ಯೋ ಭವತ್ವಿ'ತಿ ।
ಏವಮುಕ್ತೋ ಹೃಷೀಕೇಶಃ ಶ್ರೀಭೂಮಿಸಹಿತೋ ಧರೇ ॥8॥

'ಅಹಂ ದೃಶ್ಯೋ ಭವಿಷ್ಯಾಮಿ ತ್ವತ್ಕೃತೇ ಸರ್ವದೇಹಿನಾಮ್ ।
ಏತದ್ವಿಮಾನಂ ದೇವರ್ಷೇ ನ ದೃಶ್ಯಂ ಸ್ಯಾತ್ಕಥಂಚನ ॥9॥

ಅಕಲ್ಪಾಂತಂ ಮುನೀಂದ್ರಾಸ್ಮಿನ್ ದೃಶ್ಯೋಽಹಂ ನಾತ್ರ ಸಂಶಯಃ' ।
ಮುನಿಸ್ತದ್ವಚನಂ ಶ್ರುತ್ವಾ ಪ್ರೀತಃ ಪ್ರಾಯತ್ಸ್ವಮಾಶ್ರಮಮ್ ॥10॥

ತತಶ್ಚತುರ್ಭುಜೋ ದೇವಸ್ಸ ದೃಶ್ಯೋಽಭೂನ್ನರಾದಿಭಿಃ ।
ವಿಮಾನೇ ಮುನಿಚಿಂತ್ಯೇಽಸ್ಮಿನ್ನಾಸೀನಶ್ಚ ತಥೋತ್ತರಮ್ ॥11॥

ಆರಾಧ್ಯಮಾನಃ ಸ್ಕಂದೇನ ವಾಯುನಾ ಸೇವಿತಃ ಸದಾ ।
ಏವಂ ಗತೇ ಮಹಾಕಾಲೇ ಚತುರ್ಯುಗಸಮನ್ವಿತಃ ॥12॥

ಕಣ್ಣುಗಳಿಗೆ ಹೇಗೆ ಗೋಚರನಾಗಿರುವನು? ಅವನು ಜನರಿಂದ ಹೇಗೆ ಸಂಪೂಜಿತನಾಗಿರುವನು? ಎಂಬುದನ್ನು ನನಗೆ ತಿಳಿಸಿರಿ' ಎಂದು ಸಂಪ್ರಾರ್ಥಿಸಿದಳು. ಆಗ ವರಾಹ ದೇವರು ಶ್ರೀನಿವಾಸಾವಿರ್ಭಾವವನ್ನು ವರ್ಣಿಸಿರುವರು.

ಹಿಂದೆ ಅಗಸ್ತ್ಯರು ಈ ವೇಂಕಟಾಚಲಕ್ಕೆ ಆಗಮಿಸಿ ಹನ್ನೆರಡು ವರ್ಷಗಳ ತಪಸ್ಸಿನಿಂದ ಭಗವಂತನನ್ನು ಪ್ರಸನ್ನೀಕರಿಸಿ, ಪ್ರತ್ಯಕ್ಷನಾದ ಭಗವಂತನನ್ನು ನೀನು ಇಲ್ಲಿ ಎಲ್ಲರಿಗೂ ಸಹ ದೃಶ್ಯನಾಗಿ ಸಾಕ್ಷಾತ್ತಾಗಿ ವಾಸಮಾಡು ಎಂದು ವರವನ್ನು ಪ್ರಾರ್ಥಿಸಿದಾಗ ಸಮ್ಮತಿಸಿದ ಭಗವಂತನು 'ನಿನಗೋಸ್ಕರವಾಗಿ ಶ್ರೀಭೂಮಿಯರಿಂದ ಸಹಿತನಾಗಿ ಸರ್ವದೃಶ್ಯನಾಗಿ ವಾಸವಾಗುವೆನೆಂದು ತಿಳಿಸಿ, ತಾನು ಆಸೀನನಾಗಿರುವ ಆನಂದವಿಮಾನವು ಮಾನವ ಚಕ್ಷುಸ್ಸುಗಳಿಗೆ ಅದೃಶ್ಯವಾಗಿರುವದಾಗಿಯೂ ಮತ್ತು ಈ ಕಲ್ಪದ ಕೊನೆಯವರೆಗೂ ಮನುಷ್ಯರಿಗೆ ದೃಶ್ಯನಾಗಿ ಈ ಕ್ಷೇತ್ರದಲ್ಲಿ ವಾಸಮಾಡಿ ಅನುಗ್ರಹಿಸುವದಾಗಿ ತಿಳಿಸಿದನು. ಅನಂತರ ಚತುರ್ಭುಜನಾಗಿ ಶ್ರೀನಿವಾಸನು ಮಾನವರಿಗೂ ಸಹ ಕಾಣಿಸುವವನಾಗಿ ಮುನಿಗಳಿಗೆ ಮಾತ್ರ ಕಾಣುವ ವಿಮಾನಾರೂಢನಾಗಿ ಆ ಪರ್ವತದಲ್ಲಿ ಸ್ಕಂದ, ವಾಯುದೇವರಿಂದ ಸರ್ವದಾ ಆರಾಧಿತನಾಗಿ ವಾಸವಾಗಿರುವನು.

ಅಷ್ಟಾವಿಂಶೇ ತು ಸಂಜಾತೇ ದ್ವಾಪರಾಂತೇ ವಸುಂಧರೇ ।
ಯುದ್ಧೇ ಚ ಭಾರತೇಽತೀತೇ ತಿಷ್ಯೇ ಸತಿ ಯುಗೇ ತಥಾ ॥13॥

ವಿಕ್ರಮಾರ್ಕಾದಯೋ ಭೂಪಾಃ ಶಕಾಃ ಶೂದ್ರಾದಯಸ್ತಥಾ ।
ಗಮಿಷ್ಯಂತಿ ಸ್ವರ್ಗಲೋಕಂ ಮಾಮಜ್ಞಾತ್ವಾ ವರಾನನೇ ॥14॥

ತತಃ ಸೋಮಕುಲೋದ್ಭೂತೋ ಮಿತ್ರವರ್ಮಾ ಮಹಾರಥಃ ।
ತುಂಡೀರಮಂಡಲೇ ರಾಜಾ ನಾರಾಯಣಪುರೇ ವಸನ್ ॥15॥

ಭವಿಷ್ಯತಿ ವರಾರೋಹೇ ಮಹಾಭಾಗ್ಯೋದಯೋ ಮಹಾನ್ ।
ತಸ್ಮಿನ್ ಶಾಸತಿ ಭೂಲೋಕಂ ಧರ್ಮೇಣ ಪೃಥಿವೀಪತೌ ॥16॥

ಅಕೃಷ್ಟಪಚ್ಯಾ ಪೃಥಿವೀ ಸರ್ವಸಸ್ಯವಿಭೂಷಣಾ ।
ನಿರೀತಿಕೋಽಭವತ್ಸರ್ವೋ ಜನೋ ಧರ್ಮಸಮನ್ವಿತಃ ॥17॥

ತಸ್ಯ ಪತ್ನೀ ಸಮಭವತ್ಪಾಂಡ್ಯಕನ್ಯಾ ಮನೋರಮಾ ।
ತಸ್ಯ ಜಜ್ಞೇ ಕುಲೋತ್ತಂಸೋ ವಿಯನ್ನಾಮಸುತೋಽಸ್ಯ ವೈ ॥18॥

ತಸ್ಯ ಪತ್ನೀ ತು ಧರಣೀ ನಾಮ್ನಾಸೀಚ್ಛಕವಂಶಜಾ ।
ತಸ್ಮಿನ್ರಾಜ್ಯಂ ವಿನಿಕ್ಷಿಪ್ಯ ಮಿತ್ರವರ್ಮಾ ನೃಪೋತ್ತಮಃ ॥20॥

ಯಯೌ ತಪೋವನಂ ಪುಣ್ಯಂ ವೇಂಕಟಾದ್ರೇಃ ಸಮೀಪತಃ ।
ಆಕಾಶನಾಮಾ ತು ಮಹಾನ್ರಾಜಾಭೂತ್ಸಾರ್ವಭೌಮಕಃ ॥21॥

ಹೀಗೆ ಬಹುಕಾಲ ಕಳೆಯುಲು ಇಪ್ಪತ್ತೆಂಟನೆಯ ದ್ವಾಪರ ಯುಗದಲ್ಲಿ ಮಹಾಭಾರತ ಯುದ್ಧಾನಂತರದಲ್ಲಿ ವಿಕ್ರಮಾರ್ಕಾದಿ ರಾಜರ ಕಾಲಾನಂತರ ಸೋಮಕುಲದಲ್ಲಿ ಮಿತ್ರವರ್ಮನೆಂಬ ರಾಜನು ತುಂಡೀರ ಮಂಡಲ ಅಧಿಪತಿಯಾಗಿ ನಾರಾಯಣ ಪುರದಲ್ಲಿ ವಾಸಮಾಡುತ್ತಾನೆ. ಅವನು ಧರ್ಮದಿಂದ ರಾಜ್ಯವನ್ನಾಳುತ್ತಿರಲು ಭೂಮಿಯೆಲ್ಲವೂ ಶಾಂತಿ-ಸಮೃದ್ಧಿಯಿಂದ ಪರಿಪೂರ್ಣವಾಗಿ ಪ್ರಜಾಜನರು ಸುಖವಾಗಿರುವರು. ಅವನಿಗೆ ಪಾಂಡ್ಯದೇಶದ ರಾಜಕುಮಾರಿಯು ಪತ್ನಿಯಾಗಿದ್ದು ಅವರಿಬ್ಬರಿಗೆ ಕುಲೋದ್ಧಾರಕನಾದ ಆಕಾಶರಾಜನೆಂಬ ಮಗನು ಜನಿಸುವನು. ಅವನಿಗೆ ಶಕವಂಶದವಳಾದ ಧರಣೀದೇವಿಯೆಂಬ ಪತ್ನಿಯು ಆಗುವಳು. ಮಗನಲ್ಲಿ ರಾಜ್ಯಭಾರ ವನ್ನಿಟ್ಟು ಮಿತ್ರವರ್ಮನು ಅರಣ್ಯಕ್ಕೆ ತೆರಳುವನು. ಅವನ ಅನಂತರದಲ್ಲಿ ರಾಜನಾಗುವ ಆಕಾಶರಾಜನು ಏಕಪತ್ನೀವ್ರತಸ್ಥನಾಗಿ, ಧರಣೀದೇವಿಯಲ್ಲಿ ಆಸಕ್ತನಾಗಿ, ರಾಜ್ಯಭಾರವನ್ನು

ಏಕದಾರವ್ರತೋ ರಾಜಾ ಧರಣೀಸಕ್ತಚೇತನಃ ।
ಯಜ್ಞಾರ್ಥಂ ಶೋಧಯಾಮಾಸ ಭುವಮರಣಿತೀರತಃ ॥21॥

ಕಾಂಚನೇನ ಹಲೇನೈವ ಕೃಷ್ಯಮಾಣೇ ಧರಾತಲೇ ।
ಬೀಜಮುಷ್ಟಿಂ ವಿಕಿರತಾ ದೃಷ್ಟಾ ಕನ್ಯಾ ಧರೋದ್ಗತಾ ॥22॥

ಪದ್ಮಶಯ್ಯಾಗತಾ ರಮ್ಯಾ ಸರ್ವಲಕ್ಷಣಲಕ್ಷಿತಾ ।
ತಪ್ತಜಾಂಬೂನದಮಯೀಂ ಪುತ್ರಿಕೇವ ವಿರಾಜತೀಮ್ ॥23॥

ತಾಂ ದೃಷ್ಟ್ವಾ ಸ ಮಹೀಪಾಲೋ ವಿಷಯೋತ್ಫುಲ್ಲಲೋಚನಃ ।
ಆದಾಯ ತನಯಾ ಚೇಯಂ ಮಮೈವೇತಿ ಪುನಃ ಪುನಃ ॥24॥

ಜಹರ್ಷ ಮಂತ್ರಿಭಿಶ್ಚೈನಂ ಪ್ರಾಹ ವಾಗಶರೀರಿಣೀ ।
ಸತ್ಯಂ ತವೈವ ತನಯಾ ವರ್ಧಯಸ್ವ ಸುಲೋಚನಾಮ್ ॥25॥

ತತಃ ಪ್ರೀತಮನಾ ರಾಜಾ ಸ್ವಪುರಂ ಪ್ರವಿವೇಶ ಹ ।
ಆವಾಭ್ಯಾಂ ತದಪುತ್ರಾಭ್ಯಾಂ ಪುತ್ರೀಯಂ ಭವಿತಾ ಧ್ರುವಮ್ ॥26॥

ಇತ್ಯುಕ್ತ್ವಾ ಪ್ರದದೌ ದೇವ್ಯಾ ಹಸ್ತೇ ಪ್ರೀತ್ಯಾ ವಿಯನ್ನೃಪಃ ।
ತಸ್ಯಾಂ ಗೃಹಂ ಪ್ರವಿಷ್ಟಾಯಾಂ ಧರಣೀ ಗರ್ಭಮಾದಧೌ ॥27॥

ವಿಯನ್ನೃಪಶ್ಚ ಸುಪ್ರೀತೋ ವೀಕ್ಷ್ಯ ಸ್ನಿಗ್ಧವಿಲೋಚನಾಮ್ ।
ಉವಾಚ ಫಲಿತಾ ಸುಭ್ರೂರ್ಲತಾ ಸಂತಾನಿಕೀ ಚ ಮೇ ॥28॥

ಅಥ ಸಾ ಧರಣೀ ದೇವೀ ಕಾಲೇ ಕಮಲಲೋಚನಾ ।
ಸುಪ್ರಶಸ್ತೇ ಮುಹೂರ್ತೇ ಚ ಸ್ವೋಚ್ಚಸಂಸ್ಥೇಷು ಪಂಚಸು ।

ಮಾಡುವನು. ಒಂದು ಬಾರಿ ಯಜ್ಞವನ್ನಾಚರಿಸುವದರಗೋಸ್ಕರವಾಗಿ ಅರಣೀ ನದಿಯ ತೀರದಲ್ಲಿ ಭೂಮಿಯನ್ನು ಸ್ವರ್ಣನಿರ್ಮಿತ ನೇಗಿಲುಗಳಿಂದ ಶೋಧಿಸುತ್ತಿರುವಾಗ ಭೂಮಿಯಲ್ಲಿ ಕಮಲದಲ್ಲಿ ಮಲಗಿದ್ದ, ಸರ್ವಲಕ್ಷಣ ಸಮನ್ವಿತಳಾದ, ಪುಟಕ್ಕಿಟ್ಟ ಚಿನ್ನದಂತೆ ಹೊ:ಳೆಯುತ್ತಿದ್ದ ಸುಂದರವಾದ ಹೆಣ್ಣು ಶಿಶುವನ್ನು ನೋಡಿದನು. ಮಕ್ಕಳಿಲ್ಲದ ಅವನು ಅತ್ಯಂತ ಸಂತುಷ್ಟನಾಗಿ, ಅಶರೀರ ವಾಣಿಯಂತೆ, ಆ ಕನ್ಯೆಯನ್ನು ತನ್ನ ಮಗಳೆಂಬುದಾಗಿ ಸ್ವೀಕರಿಸಿದನು. ಧರಣೀದೇವಿಯೂ ಸಹ ದೈವದತ್ತಳಾದ ಆ ಕನ್ಯೆಯನ್ನು ತನ್ನ ಹೊಟ್ಟೆಯಿಂದ ಹುಟ್ಟಿದ ಮಗಳಂತೆ ಸಲುಹಿದಳು. ಆ ಕನ್ಯೆಯ ಪ್ರಭಾವದಿಂದ ಧರಣೀದೇವಿಯು ಗರ್ಭವನ್ನು ಧರಿಸಿ ಎಲ್ಲರಿಗೂ ಸಂತೋಷವನ್ನು ಉಂಟುಮಾಡಿದಳು. ಮುಂದೆ ಧರಣೀದೇವಿಯು ಗ್ರಹಪಂಚಕಗಳು ಉಚ್ಚಸ್ಥಾನದಲ್ಲಿರುವಾಗ

ಗ್ರಹೇಷು ಸುಷುವೇ ಪುತ್ರಂ ಮೇಷಸ್ಥೇ ಚ ದಿವಾಕರ ॥29॥
ದೇವದುಂದುಭಯೋ ನೇದುಃ ಪುಷ್ಪವೃಷ್ಟಿರ್ಗೃಹೇಽಪತತ್ ।
ವವೌ ವಾಯುಸ್ಸುಖಸ್ಪರ್ಶಂ ತಜ್ಜನ್ಮದಿವಸೇ ತದಾ ॥30॥

ಪುತ್ರ ಪ್ರಸೂತಿವಕ್ತ್ರ್ಯಾಣಾಂ ಸುಪ್ರೀತಃ ಪುತ್ರಜನ್ಮನಿ ।
ಸರ್ವಸ್ವದಾನಮಕರೋಚ್ಛತ್ರಚಾಮರವರ್ಜಿತಮ್ ॥31॥

ಕಪಿಲಾಕೋಟಿದಾನಂ ಚ ವೃಷಭಾಣಾಂ ಶತಾಧಿಕಮ್ ।
ದಿವಸೇ ದ್ವಾದಶೇ ಪುಣ್ಯೇ ಜಾತಕರ್ಮಾದಿಕಾಃ ಕ್ರಿಯಾಃ ॥32॥

ಚಕಾರ ನಾಮಧೇಯಂ ಚ ವಸುದಾನೋ ಮನೋರಮಃ ।
ವವೃಧೇ ದಿವಸೈರ್ಬಾಲಃ ಶುಕ್ಲಪಕ್ಷ ಇವೋಡುರಾಟ್ ॥33॥

ಉಪನೀತೋ ವಿನೀತೋಽಸೌ ಗುರುಭಿರ್ಬ್ರಹ್ಮಪಾರಗೈಃ ।
ಪಿತುರಸ್ತ್ರಾಣಿ ಶಸ್ತ್ರಾಣಿ ಮಂತ್ರವಿತ್ಸೋಽಪ್ಯಶಿಕ್ಷತ ॥34॥

ಚತುಷ್ಪಾದಂ ಧನುರ್ವೇದಂ ಸಾಂಗೋಪಾಂಗಮಧೀತವಾನ್ ।
ಪಿತಾ ತೇನಾತಿಬಲಿನಾ ದುರಾಧರ್ಷಃ ಪರೈರಭೂತ್ ॥35॥

ಆಕಾಶ ಇವ ನಿಷ್ಪಂಕೋ ಗ್ರೀಷ್ಮೇ ಭಾನುಮತಾ ಯುತಃ ।
ವೈಶಾಖ ಇವ ಮಧ್ಯಾಹ್ನೇ ದುಸ್ಸಹೋ ದುರ್ನಿರೀಕ್ಷಕಃ ॥36॥

ಇತಿ ಸ್ಕಾಂದೇ ಪುರಾಣೇ ಸರ್ವಜನ ದೃಗ್ಗೋಚರತ್ವಾದಿವರ್ಣನಂ' ನಾಮ ತೃತೀಯೋಽಧ್ಯಾಯಃ

* * *

ಸೂರ್ಯನು ಮೇಷರಾಶಿಯಲ್ಲಿರುವಾಗ ಪುತ್ರರತ್ನನನ್ನು ಪ್ರಸವಿಸಿದಳು. ಆಕಾಶರಾಜನಿಗೆ ಪುತ್ರೋತ್ಪತ್ತಿಯಾದಾಗ ದೇವದುಂದುಭಿಗಳು ಮೊಳಗಿದವು. ಪುಷ್ಪವೃಷ್ಟಿಯಾಯಿತು. ತನ್ನ ಪುತ್ರಜನ್ಮವನ್ನು ತಿಳಿಸಿದ ವ್ಯಕ್ತಿಗಳಿಗೆ ತನ್ನ ಛತ್ರ ಚಾಮರಗಳನ್ನು ಬಿಟ್ಟು ಉಳಿದೆಲ್ಲವನ್ನೂ, ಅಸಂಖ್ಯ ಗೋವೃಷಭಗಳನ್ನು, ದಾನಮಾಡಿದನು. ಹನ್ನೆರಡನೆಯ ದಿನ ವಸುದಾನ ನೆಂದು ನಾಮಕರಣವನ್ನು ಮಾಡಿದನು. ಚಂದ್ರನಂತೆ ವರ್ಧಿಸುವ ಬಾಲಕನು ಕ್ರಮವಾಗಿ ಉಪನಯನ ಸಂಸ್ಕಾರಾದಿಗಳನ್ನು ಬ್ರಾಹ್ಮಣರಿಂದ ಹೊಂದಿ, ಅಸ್ತ್ರ ಶಸ್ತ್ರಗಳ ಶಿಕ್ಷಣ, ಶಾಸ್ತ್ರಾಭ್ಯಾಸ, ನಾಲ್ಕು ಪಾದಗಳಿಂದ ಉಪೇತವಾದ ಧನುರ್ವೇದದ ಸಾಂಗೋಪಾಂಗವಾದ ಶಿಕ್ಷಣವನ್ನು ಪಡೆದು, ಶತ್ರುಗಳಿಂದ ದುರ್ಧರ್ಷನೆನಿಸಿ ಜಗತ್ತಿನಲ್ಲಿ ವಿರಾಜಮಾನನಾದನು.

ಇಲ್ಲಿಗೆ ಸ್ಕಾಂದಪುರಾಣದ ಮೂರನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

# ಅಥ ಚತುರ್ಥೋಽಧ್ಯಾಯಃ

ನಾರದಾಗಮನ – ಶ್ರೀನಿವಾಸ ಮೃಗಯಾವಿಹಾರವರ್ಣನಮ್

ಧರಣ್ಯುವಾಚ–

ಉಕ್ತಂ ಭಗವತಾ ತಸ್ಯ ವಿಯತ್ಪುತ್ರಸ್ಯ ನಾಮ ಚ ।
ಅಯೋನಿಜಾಯಾಸ್ತತ್ಪುತ್ರ್ಯಾಃ ಕಿಂ ನಾಮ ಚ ತದಾಕರೋತ್ ॥1॥

ಇತಿ ಪೃಷ್ಟಃ ಪುನಃ ಪ್ರಾಹ ಶ್ರೀವರಾಹೋ ಜಗತ್ಪತಿಃ ।
ಆಕಾಶರಾಜೋ ಮತಿಮಾಂಸ್ತಾಂ ದೃಷ್ಟ್ವಾ ಕಮಲೇಶಯಾಮ್ ॥2॥

ಪದ್ಮಿನೀತಿ ಚ ನಾಮ್ನಾ ವೈ ಚಕಾರ ವಸುಧಾಸುತಾಮ್ ।
ತಾಂ ತು ಯೌವನಸಂಪನ್ನಾಂ ಸಖೀಭಿಃ ಪರಿವಾರಿತಾಮ್ ॥3॥

ಆರಾಮೇ ವಿಹರಂತೀಂ ಚ ಶುಕಕೋಕಿಲನಾದಿತೇ ।
ಯದೃಚ್ಛಯಾಗಸ್ತತ್ರ ನಾರದೋ ಮುನಿಸತ್ತಮಃ ॥4॥

ವನಲಕ್ಷ್ಮೀಮಿವಾಲಕ್ಷ್ಯ ವಿಸ್ಮಯಾದಿದಮಬ್ರವೀತ್ ॥6॥

'ಕಾಽಸಿ ಕಸ್ಯ ಸುತಾ ಭೀರು ಹಸ್ತಂ ದರ್ಶಯ ಮೇ ತವ' ।
ಇತ್ಯುಕ್ತಾ ಸಾ ಸುಚಾರ್ವಾಂಗೀ ಸ್ವಾತ್ಮಾನಂ ಮುನಯೇಽಬ್ರವೀತ್ ॥7॥

'ವಿಜಯದ್ರಾಜಸುತಾ ಬ್ರಹ್ಮನ್ ಲಕ್ಷಣಾನಿ ವದಸ್ವ ಮೇ' ॥8॥

# ನಾಲ್ಕನೆಯ ಅಧ್ಯಾಯ

ಧರ್ಮಾತ್ಮನಾದ ಆಕಾಶರಾಜನು ಯಜ್ಞಾರ್ಥವಾಗಿ ಭೂಮಿಯನ್ನು ಶೋಧಿಸುವಾಗ ಪದ್ಮಕೋಶದಲ್ಲಿ ದೊರಕಿದ್ದ ಕನ್ಯೆಗೆ ಪದ್ಮಿನಿಯೆಂಬುದಾಗಿ ನಾಮಕರಣವನ್ನು ಮಾಡಿದನು. ಯೌವನಾಢ್ಯಳಾಗಿ ಪುಷ್ಪೋದ್ಯಾನದಲ್ಲಿ ಸಖಿಯರಿಂದ ಪರಿವೃತಳಾಗಿ ವಿಹರಿಸುತ್ತಿದ್ದ ಪದ್ಮಾವತಿಯಿದ್ದಲ್ಲಿಗೆ ಯಾದೃಚ್ಛಿಕವಾಗಿ ಆಗಮಿಸಿದ ನಾರದರು ಅವಳನ್ನು ನೋಡಿ 'ನೀನಾರ ಮಗಳು? ನಿನ್ನ ಕೈಯನ್ನು ತೋರಿಸು' ಎಂದು ನುಡಿದರು. ಆಗ ಪದ್ಮಾವತಿಯು 'ನಾನು ಆಕಾಶರಾಜನ ಮಗಳು' ಎಂದು ನುಡಿದು 'ನನ್ನ ಸಾಮುದ್ರಿಕ ಲಕ್ಷಣಗಳನ್ನು

ಶೃಣು ತ್ವಂ ಚಾರುವದನೇ ಲಕ್ಷಣಾನಿ ವದಾಮಿ ತೇ ।
ಪಾದೌ ಪ್ರತಿಷ್ಠಿತಾ ಸುಭ್ರು ರಕ್ತಪದ್ಮದಲಾನ್ವಿತೌ ॥9॥

ಪಾದಾಂಗುಲ್ಯಸ್ಸಮಾ ರಕ್ತಾ ರಕ್ತತುಂಗನಖಾನ್ವಿತಾಃ ।
ಗುಲ್ಫೌ ಗೂಢೌ ಸಮಾವೇತೌ ಜಂಘೇ ಚಾರೋಮಶೇ ಶುಭೇ ॥10।

ಜಾನುನೀ ಸಮಸುಸ್ನಿಗ್ಧೇ ಸಮಾವೂರೋ ಕ್ರಮಾದುರೂ ।
ನಿತಂಬೌ ಪೃಥುಲೌ ಪೀನೌ ಜಘನಂ ಸ್ನಿಗ್ಧಮೇವ ಹಿ ॥11॥

ನಾಭಿರ್ಮಂಡಲವಾನ್ನಿಮ್ನಃ ಪಾರ್ಶ್ವೇ ತೇ ಮೇದುರಾವುಭೌ ।
ತ್ರಿವಲೀಲಲಿತಂ ಮಧ್ಯಂ ರೋಮರಾಜಿವಿರಾಜಿತಮ್ ॥12॥

ಸ್ತನೌ ಪೀನೌ ಘನೌ ಸ್ನಿಗ್ಧೌ ಉನ್ನತೌ ಮಗ್ನಚೂಚುಕೌ ।
ಕರೌ ತೇ ರಕ್ತ ಪದ್ಮಾಭೌ ಪದ್ಮರೇಖಾಸಮನ್ವಿತೌ ॥13॥

ಸುಸೂಕ್ಷ್ಮೌ ರಕ್ತಸತ್ವರ್ವನಿರಂತರಸಮಾಂಗುಲೀ ।
ಶುಕತುಂಡಸಮಾಕಾರನಖಪಂಕ್ತಿವಿರಾಜಿತೌ ।
ದೀರ್ಘೌ ಚ ಕೋಮಲೌ ಭದ್ರೇ ಭುಜೌ ತೇ ಪುಷ್ಪದಂಡವತ್ ॥14।

ಪೃಷ್ಠಂ ತೇ ವೇದಿವದ್ಭಾತಿ ವಿಲಗ್ನಂ ಋಜು ಮಧ್ಯಮಮ್ ।
ಕಂಠಸ್ತು ರಕ್ತೋ ದೀರ್ಘಶ್ಚ ಸ್ಕಂಧೌ ಚಾವನತೌ ಶುಭೇ ॥15॥

ತಿಳಿಸಿರಿ' ಎಂದು ನುಡಿದಳು. ಆಗ ನಾರದರು 'ನಿನ್ನ ಲಕ್ಷಣಗಳನ್ನು ತಿಳಿಸುವೆನು' ಎಂದು ನುಡಿದು 'ನಿನ್ನ ಅಂಗಾಲುಗಳು ನೆಲಕ್ಕೆ ಪ್ರತಿಷ್ಠಿತವಾಗಿದ್ದು (ನೆಲಕ್ಕೆ ಚನ್ನಾಗಿ ಹೊಂದುವವಾಗಿದ್ದು) ರಕ್ತವರ್ಣದಿಂದ ಕೂಡಿವೆ. ಪಾದದ ಬೆರಳುಗಳು ಸಮವಾಗಿದ್ದು ಬೆರಳಿನ ತುದಿಗಳು, ಉಗುರಿನ ಕೊನೆಗಳು ಕೆಂಪು ವರ್ಣದಿಂದ ಕೂಡಿವೆ. ಗುಲ್ಫವು ನಿಗೂಡವಾಗಿದೆ (ಪಾದದ ಬಳಿಯಿರುವ ಗಂಟುಗಳು ಕಾಣದಂತಿರುವವು) ಪಾದಗಳು ಪುಷ್ಟವಾಗಿ ಸಮಾನವಾಗಿದ್ದು ರೋಮರಹಿತವಾಗಿರುವವು. ಮೊಳಕಾಲು, ತೊಡೆಗಳು ಕ್ರಮವಾಗಿ ವೃತ್ತವಾಗಿದ್ದು ಪುಷ್ಟವಾಗಿರುವವು. ಪುಷ್ಟವಾದ ಸ್ತನ-ನಿತಂಬಗಳನ್ನು ಹೊಂದಿರುವವಳಾಗಿರುವಿ. ನಾಭಿಯು ವರ್ತುಲವಾಗಿದ್ದು ಗಂಭೀರವಾಗಿರುವದು. ಉದರದಲ್ಲಿ ತ್ರಿವಲಿ ರೇಖೆಯಿದ್ದು ರೋಮಗಳಿಂದ ಕೂಡಿರುವದು. ನಿನ್ನ ಕೈಗಳು ರಕ್ತವರ್ಣದಿಂದ ಕೂಡಿದ್ದು ಪದ್ಮರೇಖೆಯಿಂದ ಕೂಡಿರುವವು. ಬೆರಳುಗಳು ಸೂಕ್ಷ್ಮವಾಗಿದ್ದು ನೀಳವಾಗಿರುವವು. ನಿನ್ನ ಪೃಷ್ಠಭಾಗವು ವೇದಿಯಂತೆ ವಿಶಾಲವಾಗಿರುವದು. ದೀರ್ಘವಾದ ಕಂಠಪ್ರದೇಶ, ಕ್ರಮವೃತ್ತವಾದ ಪುಷ್ಟವಾದ ಬಾಹುಗಳನ್ನು ಹೊಂದಿರುವ ನೀನು

ಮುಖಂ ಪ್ರಸನ್ನಂ ಸತತಮಕಲಂಕಶಶಿಪ್ರಭಮ್ ।
ಕಪೌಲೌ ಕನಕಾದರ್ಶಸದೃಶೌ ಕುಂಡಲೋಜ್ವಲೌ ॥16॥

ತಿಲಪುಷ್ಪಸಮಾಕಾರಾ ನಾಸಿಕಾ ತೇ ಶುಭಾನನೇ ।
ಅಕಲಂಕಾಷ್ಟಮೀಚಂದ್ರಸದೃಶೋಽತಿಮನೋಹರಃ ॥17॥

ದೃಶ್ಯತೇಽಯಂ ಲಲಾಟಸ್ತೇ ನೀಲಾಲಕಸುಶೋಭಿತಃ ।
ಮೂರ್ಧಾ ತೇ ಸಮವೃತ್ತಶ್ಚ ಸ್ನಿಗ್ಧಾಯತಕಚಾನ್ವಿತಃ ॥18॥

ಸ್ಮಿತಸಂಶೋಭಿದಶನಂ ಬಿಂಬಾಧರಸಮನ್ವಿತಮ್ ।
ಮುಖಂ ತೇ ವಿಷ್ಣುಯೋಗ್ಯಂ ಸ್ಯಾದಿತಿ ಮೇ ನಿಶ್ಚಿತಾ ಮತಿಃ ॥19॥

ನಾಭಿಸ್ತೇ ದಕ್ಷಿಣಾವರ್ತಾ ಆವರ್ತ ಇವ ಗಾಂಗಜಃ ।
ತ್ವಂ ಹಿ ಕ್ಷೀರಾಬ್ಧಿಸಂಭೂತಾ ಲಕ್ಷ್ಮೀರಿವ ಹಿ ದೃಶ್ಯಸೇ ॥20॥

ಇತ್ಯುಕ್ತ್ವಾ ಪೂಜಿತಸ್ತಾಭಿಃ ನಾರದೋಽಂತರ್ದಧೇ ತದಾ ।
ಏತಚ್ಛ್ರುತ್ವಾಽಥ ತತ್ಸಖ್ಯಸ್ತಾಮೂಚುಃ ಪದ್ಮಿನೀಂ ಸಖೀಮ್ ॥21॥

ವನಂ ಗಚ್ಛಾಮ ಪುಷ್ಪಾರ್ಥಂ ವಸಂತಃ ಸಮುಪಾಗತಃ ।
ಕರ್ಣಿಕಾರಶ್ಚ ಚೂತಾಶ್ಚ ಚಂಪಕಾಃ ಪಾರಿಭದ್ರಕಾಃ ॥22॥

ಪಲಾಶಾಃ ಪಾಟಲಾಃ ಕುಂತಾಃ ರಕ್ತಾಶೋಕಾಶ್ಚ ಪುಷ್ಪಿತಾಃ ।
ಪದ್ಮಿನ್ಯಃ ಸಿಂಧುವಾರಾಶ್ಚ ಮಾಲತ್ಯೋ ಯೂಥಿಕಾಲತಾಃ ॥23॥

ಕಲ್ಹಾರಾ ಕರವೀರಾಶ್ಚ ಸಂಘರ್ಷಾದಿವ ಪುಷ್ಪಿತಾಃ ।

ನಿಷ್ಕಲಂಕ ಚಂದ್ರನಂತಿರುವ ಮುಖವನ್ನು ಹೊಂದಿರುವಿ. ಬಂಗಾರದ ಕನ್ನಡಿಯಂತೆ ಹೊಳೆಯುವ ಮೃದುವಾದ ಕಪೋಲ, ಸೂಕ್ಷ್ಮವಾದ ನಾಸಿಕ, ಹೊಳೆಯುವ ಕರ್ಣಕುಂಡಲಗಳಿಂದಲಂಕೃತವಾದ ಚಕ್ಕುಲಿಯಂತಿರುವ ಕಿವಿಗಳು, ಮಂದಹಾಸ ಯುಕ್ತವಾದ ಮುಖ, ತೊಂಡೆಹಣ್ಣಿನಂತಹ ಕೆಂಪಗಿನ ತುಟಿಗಳು ಇವುಗಳಿಂದ ಶೋಭಿಸುತ್ತಿರುವ ನೀನು ನಾರಾಯಣನ ಮಡದಿಯಾಗುವ ಎಲ್ಲ ಲಕ್ಷಣಗಳಿಂದ ಯುಕ್ತಳಾಗಿ ಲಕ್ಷ್ಮೀಯಂತೆ ಕಾಣುತ್ತಿರುವಿ' ಎಂದು ನುಡಿದರು.

ನಾರದರ ಮಾತನ್ನು ಕೇಳಿ ಪದ್ಮಿನಿಯು ಅತ್ಯಂತ ಸಂತುಷ್ಟಳಾದಳು. ಅವಳ ಸಖಿಯರು ಹೂವುಗಳನ್ನು ತರುವದಕ್ಕೋಸ್ಕರವಾಗಿ ಉಪವನಕ್ಕೆ ಹೋಗಲು ಕರೆದಾಗ ಅವರಿಂದ ಸಹಿತಳಾಗಿ ನಾನಾವಿಧವಾದ ಸಂಪಿಗೆ, ಪಾರಿಜಾತ, ಮಂದಾರವೇ ಮೊದಲಾದ ಹೂವುಗಳನ್ನು ಬಿಡಿಸಿ

ಪುಷ್ಪಾಪಚಯನಂ ಕುರ್ಮೋ ವನೇಽಸ್ಮಿನ್ಸುಮನೋಹರೇ ॥24॥

ಇತ್ಯುಕ್ತ್ವಾ ತಾ ವನಂ ಜಗ್ಮುರಾಕಾಶತನಯಾಯುತಾಃ ।
ಪುಷ್ಪಾಣ್ಯಾಹರಮಾಣಾಸ್ತು ವಿಚರಂತ್ಯಸ್ತತಸ್ತತಃ ॥25॥

ಕಂಚಿದ್ಗಜೇಂದ್ರಂ ದದೃಶುಃ ಶುಭ್ರದಂತದ್ವಯೋಜ್ವಲಮ್ ॥26॥

ಉನ್ನತಂ ಕರಿಣೀಯೂಥೈಸ್ಸಮುಪೇತಂ ರಜೋಜ್ವಲಮ್ ।
ಫೂತ್ಕಾರಿಪುಷ್ಕರಪ್ರೋದ್ಯಚ್ಛೀಕರಾಪೂರಿತಾನನಮ್ ॥27॥

ದೃಷ್ಟ್ವಾ ಚೋದ್ವಿಗ್ನಹೃದಯಾ ವನಸ್ಪತಿಮುಪಾಶ್ರಿತಾಃ ।
ಏತಸ್ಮಿನ್ನಂತರೇ ಚಾಶು ದದೃಶುರ್ಹುರ್ಯಮುತ್ತಮಮ್ ॥28॥

ಅಕಲಂಕೇಂದುಧವಲಂ ಜಾಂಬೂನದಪರಿಷ್ಕೃತಮ್ ।
ಸ್ಫುರದ್ವಿದ್ಯುಲ್ಲತಾಯುಕ್ತಶರನ್ಮೇಘಮಿವೋನ್ನತಮ್ ॥29॥

ತಸ್ಮಿಂಸ್ತು ಪುರುಷಂ ಕೃಷ್ಣಂ ಮದನಾಕಾರವರ್ಚಸಮ್ ।
ಪುಂಡರೀಕದಳಾಕಾರಕರ್ಣಾಂತಾಯುತಲೋಚನಮ್ ॥30॥

ಸುಸೂಕ್ಷ್ಮಕ್ಷೌಮಸಂವೀತನೀಲಚೂಲಿಕಯೋಜ್ವಲಮ್ ।
ಪದ್ಮರಾಗಮಣಿದ್ಯೋತಿಸ್ಫುರತ್ಕನಕಕುಂಡಲಮ್ ॥31॥

ಸುವರ್ಣರತ್ನಖಚಿತಶಾರ್ಙ್ಗದಿವ್ಯಧನುರ್ಧರಮ್ ।
ಅಪರೇಣ ಕರೇಣೈವ ವಹಂತಂ ಕಾಂಚನಂ ಶರಮ್ ॥32॥

ತರಲು ವನಕ್ಕೆ ತೆರಳಿದಳು. ಆ ವನಪ್ರದೇಶದಲ್ಲಿ ಮಿಂಚಿನಂತೆ ಹೊಳೆಯುವದಂತಗಳನ್ನು ಹೊಂದಿದ್ದ, ಮದೋದಕದಿಂದ ಯುಕ್ತವಾದ, ಗರ್ಜಿಸುತ್ತಿರುವ ಆನೆಯೊಂದನ್ನು ನೋಡಿ, ಅವರು ಭಯಾಶ್ಚರ್ಯಗಳಿಂದ ವೃಕ್ಷಮೂಲವನ್ನಾಶ್ರಯಿಸಿದರು.

ಅದೇ ಸಮಯದಲ್ಲಿ ಅಲ್ಲಿ ಚಂದ್ರಬಿಂಬದಂತೆ ಬೆಳ್ಳಗಿರುವ, ಬಂಗಾರದಿಂದಲಂಕೃತವಾದ ಕುದುರೆಯೊಂದು ಬಂದಿತು. ಅದರ ಮೇಲೆ ನೀಲಮೇಘಶ್ಯಾಮನೂ, ದೀರ್ಘನೇತ್ರನೂ, ತಲೆಯಲ್ಲಿ ರೇಷ್ಮೆಯ ರುಮಾಲನ್ನು ಧರಿಸಿದ, ಹೊಳೆಯುವ ಕರ್ಣಕುಂಡಲಗಳನ್ನು ಧರಿಸಿದ್ದ, ಶಾರ್ಙ್ಗಧನುಸ್ಸನ್ನು ಚಿನ್ನದ ಬಾಣಗಳನ್ನೂ ಹಿಡಿದಿದ್ದ ಪುರುಷೋತ್ತಮನನ್ನು ನೋಡಿದಳು. ಪೀತಾಂಬರವನ್ನು ಕಾಂಚೀದಾಮ, ಮೇಖಲಾದಿಗಳನ್ನು ಧರಿಸಿದ್ದ, ಶ್ರೀವತ್ಸವಕ್ಷಸನಾದ, ಚಿನ್ನದ

ಪೀತಕಕ್ಷೌಮಸಂವಿತೀಕಟೀದೇಶಂ ಸುಮಧ್ಯಮಮ್ ।
ರತ್ನಕಂಕಣಕೇಯೂರಕಟಸೂತ್ರವಿರಾಜಿತಮ್ ॥33॥

ವಿಶಾಲವಕ್ಷಸ್ಸಂಶೋಭಿದಕ್ಷಿಣಾವರ್ತಸಂಯುತಮ್ ।
ಸ್ವರ್ಣಯಜ್ಞೋಪವಿತೇನ ಸ್ಫುರತ್ಸ್ಕಂಧಂ ಮನೋಹರಮ್ ॥34॥

ಈಹಾಮೃಗಂ ಸಮುದ್ದಿಶ್ಯ ಮಹಾವೇಗಾದನುದ್ರುತಮ್ ।
ತಂ ದೃಷ್ಟ್ವಾ ವಿಸ್ಮಿತಾ ನಾರ್ಯಃ ಸಸ್ಮಿತಾಸ್ತಸ್ಥುರತ್ರ ವೈ ॥35॥

ತಂ ದೃಷ್ಟ್ವಾ ಹಯಮಾರೂಢಂ ಗಜೇಂದ್ರೋ ನಮ್ರಮಸ್ತಕಃ ।
ತುಂಡಮುದ್ಧೃತ್ಯ ಗರ್ಜನ್ವೈ ವಿನಿರ್ವೃತ್ಯ ಯಯೌ ವನಮ್ ॥36॥

ತಸ್ಮಿನ್ಗತೇ ಗಜೇ ತತ್ರ ಹಯಾರೂಢಃ ಸಮಾಯಯೌ ।
ಈಹಾಮೃಗಂ ವಿಚಿನ್ವಾನಃ ಪುಷ್ಪಲಾವೀಸಮೀಪತಃ ॥37॥

ತಾಂ ಸಮೇತ್ಯ ಸ ಚೋವಾಚ ತುರಗೋಪರಿ ಸಂಸ್ಥಿತಃ ।
ಅತ್ರಾಗತೋ ಮೃಗಃ ಕಶ್ಚಿದೀಹಾಮೃಗ ಇತೀರಿತಃ ॥38॥

ದೃಷ್ಟೋ ವಾ ಭವತೀಭಿಃ ಸ ಬ್ರೂತ ಮೇ ಕನ್ಯಕಾ ಇತಿ ॥39॥

ಪ್ರತ್ಯೂಚುಸ್ತಾಸ್ತು ತಂ ಕನ್ಯಾಃ ದೃಷ್ಟೋಽಸ್ಮಾಭಿರ್ನ ಕಶ್ಚನ ॥40॥

ಕಿಮರ್ಥಮಾಗತೋಽಸ್ಮಾಕಂ ವನಂ ವರಧನುರ್ಧರಃ ।
ಅತ್ರಾವಧ್ಯಾ ಮೃಗಾಸ್ಸರ್ವೇ ವರ್ತಮಾನಾ ನಿಷಾಧಪ ॥41॥

ಯಜ್ಞೋಪವೀತವನ್ನು ಧರಿಸಿದ, ಚಿತ್ತಾಕರ್ಷಕನಾದ ಪುರುಷನನ್ನು ನೋಡಿ ಸ್ತ್ರೀಸಮೂಹವೆಲ್ಲವೂ ಸಹ ಅವನ ರೂಪಕ್ಕೆ ಮರುಳಾದವರಂತೆ ಮುಗುಳ್ನಗೆ ಸೂಸುತ್ತಾ ಅಲ್ಲಿಯೇ ನಿಂತರು. ಆ ಆನೆಯು ಕುದುರೆಯ ಸವಾರನನ್ನು ನೋಡಿ ತಲೆಯನ್ನು ಬಗ್ಗಿಸಿ ಸೊಂಡಿಲನ್ನೆತ್ತಿ ನಮಸ್ಕರಿಸಿ ಗರ್ಜಿಸುತ್ತಾ ಕಾಡಿಗೆ ಹಿಂದಿರುಗಿತು. ಗಜವು ಅಲ್ಲಿಂದ ಹೊರಟಮೇಲೆ ಬೇಟೆವನ್ನು ಬೆನ್ನತ್ತಿದ್ದ ಆ ಪುರುಷನು ತೋಳವನ್ನು ಹುಡುಕುತ್ತಾ ಒಬ್ಬ ಸಖಿಯ ಬಳಿ ಬಂದು 'ಇತ್ತ ಕಡೆ ವನ್ಯಮೃಗವೇನಾದರೂ ಬಂದಿರುವದನ್ನು ನೋಡಿರುವಿರಾ? ಎಂದು ಪ್ರಶ್ನಿಸಿದರು. ಅದಕ್ಕವರು ನಾವು ಯಾವಮೃಗವನ್ನು ಇಲ್ಲಿ ನೋಡಿರುವದಿಲ್ಲ' ಎಂದು ನುಡಿದು 'ನೀನು ಈ ವನಕ್ಕೆ ಬರಲು ಕಾರಣವೇನು? ಈ ಅರಣ್ಯ ಮತ್ತು ಇಲ್ಲಿರುವ ಮೃಗಗಳೆಲ್ಲವೂ ಆಕಾಶ ರಾಜನಿಂದ ವಿಶೇಷವಾಗಿ ಸಂರಕ್ಷಿತವಾಗಿರುವವು. ಇಲ್ಲಿ ಯಾವ ಮೃಗಗಳನ್ನೂ ಬೇಟೆಯಾಡುವಂತಿಲ್ಲ.

ಆಶು ಗಚ್ಛ ವನಾದಸ್ಮಾದಾಕಾಶನೃಪಪಾಲಿತಾತ್' ।
ಇತಿ ತಾಸಾಂ ವಚಃ ಶ್ರುತ್ವಾ ಹಯಾದವರುರೋಹ ಸಃ ॥42॥

'ಕಾಶ್ಚ ಯೂಯಮಿಯಂ ಚಾಪಿ ಕನ್ಯಕಾಂಬುಜಸನ್ನಿಭಾ ।
ಸುಭಗಾ ಚಾರುಸರ್ವಾಂಗೀ ಪೀನೋನ್ನತಪಯೋಧರಾ' ॥43॥

ಇತಿ ತಸ್ಯ ವಚಃ ಶ್ರುತ್ವಾ ಧರಣ್ಯಾತ್ಮಜಯೇರಿತಾ ।
ಸಖೀ ಪದ್ಮಾವತೀ ಪ್ರಾಹ ನಿಷಾದಂ ಪರ್ವತಾಲಯಮ್ ॥44॥

'ಆಕಾಶರಾಜತನಯಾ ವಸುಧಾತಲಸಂಭವಾ ।
ಅಸ್ಮಾಕಂ ನಾಯಿಕಾ ಶೂರ ಪದ್ಮಿನೀ ನಾಮ ನಾಮತಃ ॥45॥

ಬ್ರೂಹಿ ತ್ವಂ ಸುಭಗಾಕಾರ ಕಿಂ ನಾಮ ಕಸ್ಯ ವಾ ಸುತಃ ।
ಜಾತಿಃ ಕಾ ಕುತ್ರ ತೇ ವಾಸಃ ಕಿಮರ್ಥಂ ತ್ವಮಿಹಾಗತಃ' ।

ಇತಿ ಪೃಷ್ಟಸ್ಸ ತಾಃ ಪ್ರಾಹ ಮಂದಸ್ಮಿತಮುಖಾಂಬುಜಃ ॥46॥

'ದಿವಾಕರಕುಲಂ ಪ್ರಾಹುರಸ್ಮಾಕಂ ತು ಪುರಾವಿದಃ ।
ಯಸ್ಯ ನಾಮಾನ್ಯಂತಾನಿ ಪಾವನಾನಿ ಮನೀಷಿಣಃ ॥47॥

ವರ್ಣತೋ ನಾಮತಶ್ಚಾಪಿ ಕೃಷ್ಣಂ ಪ್ರಾಹುಸ್ತಪಸ್ವಿನಃ ।
ಬ್ರಹ್ಮದ್ವಿಷಾಂ ಸುರಾರೀಣಾಂ ಯಸ್ಯ ಚಕ್ರಂ ಭಯಾವಹಮ್ ॥48॥

ಆದ್ದರಿಂದ ಇಲ್ಲಿಂದ ಶೀಘ್ರದಲ್ಲಿ ಹೊರಡು' ಎಂದು ನುಡಿದರು. ಕನ್ಯೆಯರ ಮಾತನ್ನು ಕೇಳಿದ ಶ್ರೀನಿವಾಸನು ಕುದುರೆಯಿಂದಿಳಿದು 'ನೀವುಯಾರು? ಕಮಲದಂತೆ ಹೊಳೆಯುತ್ತಿರುವ, ಸುಂದರಿಯಾದ, ಸುಲಕ್ಷಣಗಳಿಂದ ಕೂಡಿದ, ಉನ್ನತವಾದ ಸ್ತನಗಳನ್ನು ಹೊಂದಿರುವ ಈ ಸ್ತ್ರೀಯು ಯಾರು?' ಎಂದು ಪ್ರಶ್ನಿಸಿದನು. ಆಗ ಪದ್ಮಾವತಿಯಿಂದ ಪ್ರೇರಿತಳಾದ ಸಖಿಯೊಬ್ಬಳು 'ಯಜ್ಞಾರ್ಥವಾಗಿ ಭೂಮಿಯನ್ನು ಶೋಧಿಸುತ್ತಿದ್ದ ಆಕಾಶರಾಜನಿಗೆ ಭೂಮಿಯಲ್ಲಿ ದೊರೆತ ಅಯೋನಿಜೆಯಾದ ಪದ್ಮಾವತಿಯೆಂಬ ಕನ್ಯೆಯಿವಳು. ಈಕೆ ಆಕಾಶರಾಜನ ಮಗಳು. ಹೇ ಶುಭಾಂಗನೇ! ನೀನಾರು? ನಿನ್ನ ಹೆಸರೇನು? ನೀನು ಯಾರ ಮಗನು? ನಿನ್ನ ಜಾತಿಯಾವದು? ವಾಸಸ್ಥಳವೆಲ್ಲಿ? ಇಲ್ಲಿಗೇಕೆ ಬಂದಿರುವಿ? ಇಲ್ಲಿ ಬರಲು ಕಾರಣವೇನು? ಎಂದು ಪ್ರಶ್ನಿಸಿದನು. ಇದನ್ನು ಕೇಳಿದ ಶ್ರೀನಿವಾಸನು 'ಪುರಾಣವನ್ನು ಬಲ್ಲವರು ನನ್ನದು ಸೂರ್ಯವಂಶವೆಂದು ಹೇಳುವರು. ನನ್ನ ನಾಮಗಳು ಅನಂತವಾಗಿದ್ದು ಕೀರ್ತನಮಾತ್ರದಿಂದ ಪವಿತ್ರತೆಯನ್ನುಂಟು ಮಾಡುವವು. ಜನರು ನನ್ನನ್ನು ಬಣ್ಣದಿಂದಲೂ, ನಾಮದಿಂದಲೂ ಕೃಷ್ಣನೆಂದು ಕರೆಯುವರು.

ಯಸ್ಯ ಶಂಖಧ್ವನಿಂ ಶ್ರುತ್ವಾ ಮೋಹಮೀಯುರ್ಹಿ ವೈರಿಣಃ ।
ಯಸ್ಯ ವೈ ಧನುಷಸ್ತುಲ್ಯಂ ಧನುರ್ನೈವಾಮರೇಷ್ವಪಿ ॥49॥

ತಂ ಮಾಂ ವೀರಪತಿಂ ಪ್ರಾಹುರ್ವೇಂಕಟಾದ್ರಿನಿವಾಸಿನಮ್ ।
ತಸ್ಮಾದದ್ರಿತಟಾತ್ಸೋಽಹಂ ನಿಷಾದೈರನುಗೈರ್ವೃತಃ ॥50॥

ಮೃಗಯಾರ್ಥಂ ಹಯಾರೂಢೋ ಯುಷ್ಮಾಕಂ ವನಮಾಗತಃ ।
ಮಯಾಽಪ್ಯನುದ್ರುತಃ ಕಶ್ಚಿನ್ಮೃಗೋ ವಾಯುಗತಿರ್ಯಯೌ ॥51॥

ತಮದೃಷ್ಟ್ವಾ ವನಂ ಪಶ್ಯನ್ ದೃಷ್ಟವಾನ್ಸುಭಗಾಮಿಮಾಮ್ ।
ಕಾಮಾದಿಹಾಗತೋಽಹಂ ವೋ ಮಯಾ ಕಿಂ ಲಭ್ಯತೇ ಸ್ತ್ರಿಯಮ್ ॥52॥

ಇತಿ ಕೃಷ್ಣವಚಃ ಶ್ರುತ್ವಾ ಕೃದ್ಧಾಸ್ತಾಃ ಪುನರಬ್ರುವನ್ ।
ಆಕಾಶರಾಜೋ ದೃಷ್ಟ್ವಾ ತ್ವಾಂ ಕೃತ್ವಾ ನಿಗಡಬಂಧನಮ್ ।
ಯಾವನ್ನಯಾತಿ ತಾವತ್ತ್ವಂ ಗಚ್ಛಶೀಘ್ರಂ ಸ್ವಮಾಲಯಮ್ ॥53॥

ತರ್ಜಿತಸ್ತಾಭಿರೇವಂ ಸ ಹಯಾಮಾರುಹ್ಯ ಶೀಘ್ರಗಮ್ ।

ಯಾವ ನನ್ನ ಚಕ್ರಾಯುಧವು ಬ್ರಾಹ್ಮಣದ್ವೇಷಿಗಳಿಗೂ, ದೇವಶತ್ರುಗಳಾದ ರಾಕ್ಷಸರಿಗೂ ಭಯವನ್ನುಂಟುಮಾಡುವದೋ, ಪಾಂಚಜನ್ಯ ಶಂಖನಾದ ಶ್ರವಣಮಾತ್ರದಿಂದ ದೈತ್ಯರು ಮೂರ್ಛೆಯನ್ನು ಹೊಂದುವರೋ, ಅಪ್ರತಿಮವಾದ ಶಾರ್ಙ್ಗವೆಂಬ ಧನುಸ್ಸನ್ನು ಹೊಂದಿರುವೆನೋ ಅಂತಹ ಪರಾಕ್ರಮಿಯಾದ ನನ್ನನ್ನು ವೀರಾಧಿಪತಿಯೆಂದು ಕರೆಯುವರಾಗಿದ್ದು ವೇಂಕಟಾಚಲದಲ್ಲಿ ವಾಸವಾಗಿರುವೆನು. ಅಲ್ಲಿಂದಲೇ ಬೇಟೆಗಾಗಿ ಬಂದ ನಾನು ಕಾಡುಮೃಗವೊಂದನ್ನು ಬೆನ್ನಟ್ಟಿ ಇಲ್ಲಿಯವರೆಗೂ ಬಂದೆನು. ಇಲ್ಲಿ ಅದನ್ನು ಕಾಣದೇ ಸುಂದರವಾದ ವನಸೌಂದರ್ಯವನ್ನು ನೋಡುತ್ತಾ ಬರುತ್ತಿರುವಾಗ ಈ ಸ್ತ್ರೀರತ್ನವನ್ನು ಕಂಡೆನು. ಇವಳನ್ನು ಕಂಡೊಡನೆಯೇ ಕಾಮವಶನಾಗಿ ನಿಮ್ಮ ಬಳಿ ಬಂದಿರುವೆನು. ಇವಳು ಸಿಗುವ ಸಂಭವವೆಂತು?' ಎಂದು ಪ್ರಶ್ನಿಸಿದನು. ಇದನ್ನು ಕೇಳಿದ ಕನ್ಯೆಯರು ಅತ್ಯಂತ ರುಷ್ಟರಾಗಿ 'ಆಕಾಶರಾಜನು ಸ್ತ್ರೀಯರೊಂದಿಗೆ ಅನುಚಿತವಾಗಿ ವರ್ತಿಸುವ ನಿನ್ನನ್ನೇದಾರೂ ನೋಡಿದಲ್ಲಿ ನಿನಗೆ ಬೇಡಿಯನ್ನು ತೊಡಿಸಿ ಸೆರೆಮನೆಗೆ ತಳ್ಳುವನು. ಆದ್ದರಿಂದ ಆಕಾಶರಾಜನು ಇಲ್ಲಿಗೆ ಬರುವದರಲ್ಲಿ ನೀನು ನಿನ್ನ ಮಂದಿರಕ್ಕೆ ಹೊರಟುಹೋಗು' ಎಂದು ನುಡಿದರು. ಸ್ತ್ರೀಯರಿಂದ ಹೀಗೆ ಹೇಳಿಸಿಕೊಳ್ಳಲ್ಪಟ್ಟ ಶ್ರೀನಿವಾಸನು ತನ್ನ ಕುದುರೆಯನ್ನು ಏರಿ, ಅನುಚರರಿಂದ ಸಹಿತನಾಗಿ ಶೀಘ್ರದಲ್ಲಿ ಬೆಟ್ಟವನ್ನೇರಿ

ಯುಕ್ತಃ ಸ್ವಾನುಚರೈಃ ಸರ್ವೈರ್ಯಯೌ ದ್ರುತತರಮ್ ಗಿರಮ್ ॥54॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ 'ಉದ್ಯಾನವಾಸಿನ್ಯಾಃ ಪದ್ಮಾವತ್ಯಾಸ್ಸಮೀಪೇ ನಾರದಾಗಮನಂ-ಶ್ರೀನಿವಾಸ ಮೃಗಯಾವಿಹಾರವರ್ಣನಂ' ನಾಮ ಚತುರ್ಥೋಽಧ್ಯಾಯಃ ॥4॥

* * *

ತನ್ನ ಮಂದಿರಕ್ಕೆ ಹೋದನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮ್ಯೆಯಲ್ಲಿ ಧರಣೀ ವರಾಹ ಸಂವಾದದಲ್ಲಿ ನಾರದಾಗಮನ– ಶ್ರೀನಿವಾಸ ವರ್ಣನವೆಂಬ ವೆಂಬ ನಾಲ್ಕನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥ ಪಂಚಮೋಽಧ್ಯಾಯಃ

ಶ್ರೀ ವರಾಹ ಉವಾಚ–

ಸಂಪ್ರಾಪ್ಯ ಚಾಲಯಂ ದಿವ್ಯಮವತೀರ್ಯ ಹಯೋತ್ತಮಾತ್ ।
ವಿಸೃಜ್ಯ ಸಾನುಗಾನ್ಸರ್ವಾನ್ ದೇವಾನ್ಸೈರಾತರೂಪಕಾನ್ ॥1॥

'ವಿಶ್ರಮಧ್ವ'ಮಿತಿ ಪ್ರೋಚ್ಯ ವಿವೇಶ ಮಣಿಮಂಡಪಮ್ ।
ಆರುಹ್ಯ ಮಣಿಸೋಪಾನಂ ಪಂಚಕಕ್ಷಾ ಅತೀತ್ಯ ಚ ॥2॥

ಮುಕ್ತಾಗೃಹಂ ಸಮಾಸಾದ್ಯ ತಸ್ಮಿಂಲ್ಲೋಲಾಯಿತೇ ಶುಭೇ ।
ನವರತ್ನಮಯೇ ಮಂಚೇ ಸಂವಿವೇಶಾವಶೋ ಹರಿಃ ॥3॥

ಸಂಸ್ಮರನ್ಪದ್ಮಗರ್ಭಾಭಾಂ ತಾಮೇವಾಯತಲೋಚನಾಮ್ ।
ತನುಮಧ್ಯಾಂ ಪೀನಕುಚಾಂ ಮಂದಸ್ಮಿತಮುಖಾಂಬುಜಾಮ್ ॥4॥

ಕ್ಷೀರಾಬ್ಧಿತನಯಾಮೇವ ಮೇನೇ ಪದ್ಮೋದ್ಭವಾಂ ಶುಭಾಮ್ ।
ತಸ್ಯಾಂ ಗತಮನಾ ದೇವಃ ಶ್ರೀನಿವಾಸೋ ಮುಮೋಹ ಚ ॥5॥

ತತೋ ಮಧ್ಯಾಹ್ನಸಮಯೇ ಕೃತ್ವಾನ್ನಂ ದಿವ್ಯಮುತ್ತಮಮ್ ।
ಸೂಪದಂಶಂ ಸುಗಂಧಂ ಚ ದೇವಾರ್ಹಮತಿಶೋಭನಮ್ ॥6॥

## ಐದನೆಯ ಅಧ್ಯಾಯ

ಭಗವಂತನು ತನ್ನ ಮನೆಗೆ ಬಂದು ಕುದುರೆಯಿಂದಿಳಿದು, ತನ್ನ ಅನುಚರರಿಗೆ ವಿಶ್ರಮಿಸಿರಿ ಎಂದು ನುಡಿದು ಮಣಿಗಳಿಂದ ನಿರ್ಮಿತವಾದ ಸೋಪಾನಗಳನ್ನು ಏರಿಕೊಡು ಮುಂಬಾಗಿಲನ್ನು ದಾಟಿ ಮುತ್ತಿನಿಂದ ನಿರ್ಮಿತವಾದ ಮನೆಯನ್ನು ಪ್ರವೇಶಿಸಿ, ನವರತ್ನಮಯವಾದ ಮಂಚದಮೇಲೆ ಪದ್ಮಾವತಿಯನ್ನು, ಅವಳ ಸುಂದರವಾದ ಕಣ್ಣುಗಳು, ಸಣ್ಣ ನಡು, ಪುಷ್ಟವಾದ ಸ್ತನಗಳು, ಮಂದಹಾಸ ಇವುಗಳನ್ನು ನೆನೆಯುತ್ತಾ ಅವಳು ಕ್ಷೀರಸಮುದ್ರದಲ್ಲುದ್ಭವಿಸಿದ ಲಕ್ಷ್ಮೀದೇವಿಯಂತಿರುವಳೆಂದು ತಿಳಿದು ಅವಳಲ್ಲಿಯೇ ಮನಸ್ಸಿಟ್ಟು ಕಾಮವಶನಾದ ಶ್ರೀನಿವಾಸನು ಅವಳನ್ನೇ ಧ್ಯಾನಿಸುತ್ತಾ ಮೋಹವನ್ನು ಹೊಂದಿದನು. ಅನಂತರ ಮಧ್ಯಾಹ್ನಸಮಯದಲ್ಲಿ ಬಕುಲಾ ಮಾಲೆಯು ಶ್ರೇಷ್ಠರಸಗಳಿಂದ ಯುಕ್ತವಾದ, ಘಮಘಮಿಸುವ, ಪರಿಶುದ್ಧವಾದ

ಶುದ್ಧಾನ್ನಂ ಪಾಯಸಾನ್ನಂ ಚ ಗೌಡಂ ಮುದ್ಗಾನ್ನಮೇವ ಚ ।
ಕೃತ್ವಾ ಪಂಚವಿಧಾಪೂಪಾನ್ಪೂರಿಕಾವಾಟಿಕಾನಪಿ ॥7॥

ದೇವಂ ದ್ರಷ್ಟುಂ ಯಯೌ ಶೀಘ್ರಂ ಸಖೀ ಬಕುಲಮಾಲಿಕಾ ।
ಪದ್ಮಾವತೀಪದ್ಮಪತ್ರಚಿತ್ರರೇಖಾಸಮನ್ವಿತಾ ॥8॥

ನಿವೇಶ್ಯ ದ್ವಾರಿ ದೇವಸ್ಯ ತಾಃ ಸರ್ವಾಃ ಪ್ರಮದೋತ್ತಮಾಃ ।
ವಿವೇಶ ತತ್ಸಮೀಪಂ ಸಾ ಸ್ವಯಂ ಬಕುಲಮಾಲಿಕಾ ॥9॥

ಗತ್ವಾ ಸಮೀಪಂ ದೇವಸ್ಯ ವವಂದೇ ಭಕ್ತಿಭಾವತಃ ।
ದೃಷ್ಟ್ವಾಽಥ ದೇವಂ ವಿವಶಂ ಪರ್ಯಂಕೇ ರತ್ನಭೂಷಿತೇ ॥10॥

ಪಾದಸಂವಾಹನಂ ಕೃತ್ವಾ ನಿಮೀಲಿತವಿಲೋಚನಮ್ ।
ತಂ ಧ್ಯಾಯಂತಂ ಚ ಕಿಮಪಿ ವ್ಯಾಜಹಾರ ಶುಚಿಸ್ಮಿತಾ ॥11॥

'ಉತ್ತಿಷ್ಠ ದೇವದೇವೇಶ ಕಿಂ ಶೇಷೇ ಪುರುಷೋತ್ತಮ ।
ಪರಮಾನ್ನಂ ಕೃತಂ ದೇವ ಭೋಕ್ತುಮಾಗಚ್ಛ ಮಾಧವ ॥12॥

ಕಿಂ ವಾ ತ್ವಮಾರ್ತವಚ್ಛೇಷೇ ಸರ್ವಲೋಕಾರ್ತಿನಾಶನ ।
ಮೃಗಯಾಮಟಿತಾ ದೇವ ಕಿಂ ದೃಷ್ಟಂ ಭವತಾ ವನೇ ॥13॥

ಅವಸ್ಥಾ ತೇ ವಿಶಾಲಾಕ್ಷ ಕಾಮುಕಸ್ಯೇವ ಲಕ್ಷ್ಯತೇ ।

ದೇವಸೇವ್ಯವಾದ ಶುದ್ಧಾನ್ನ, ಪಾಯಸಾನ್ನ, ಬೆಲ್ಲದಿಂದ ಮಾಡಿದ ಅನ್ನ, ಹುಗ್ಗಿ, ಹಪ್ಪಳ, ಹೋಳಿಗೆ, ಪಾಯಸವೇ ಮೊದಲಾದ ಆಹಾರವನ್ನು ಸಿದ್ಧಪಡಿಸಿ ಭಗವಂತನನ್ನು ನೋಡುವದಕ್ಕಾಗಿ ತನ್ನ ಪದ್ಮಾವತೀ, ಪದ್ಮಪತ್ರಾ, ಚಿತ್ರರೇಖಾ ಎಂಬ ಸಖಿಯರಿಂದ ಕೂಡಿಕೊಂಡು, ಭಗವಂತನಿದ್ದಲ್ಲಿಗೆ ಬಂದು, ತನ್ನ ಸಖಿಯರನ್ನು ದೂರನಿಲ್ಲಿಸಿ, ದೇವನ ಸಮೀಪಕಕ್ಕೆ ಬಂದು ಅವನಿಗೆ ಭಕ್ತಿಯಿಂದ ನಮಸ್ಕರಿಸಿದಳು. ಅನಂತರ ದೇವನು ಪರವಶನಾಗಿ ರತ್ನಪರ್ಯಂಕದಲ್ಲಿ ಮಲಗಿರುವದನ್ನು ನೋಡಿ, ಯಾವದನ್ನೋ ಮನಸ್ಸಿನಿಂದ ಧ್ಯಾನಿಸುತ್ತಿರುವನೆಂದು ತಿಳಿದು, ಮೆಲ್ಲನೆ ಅವನ ಬಳಿ ಬಂದು ಕಣ್ಣುಮುಚ್ಚಿ ಮಲಗಿದ ಭಗವಂತನನ್ನು ಕುರಿತು 'ಹೇ ಭಗವಂತನೇ! ಎದ್ದೇಳು. ದೇವದೇವೇಶನಾದ ಪುರುಷೋತ್ತಮನೇ! ಎದ್ದೇಳು. ಪರಮಾನ್ನವನ್ನು ಮಾಡಿರುವೆನು. ಭೋಜನಕ್ಕೆ ಆಗಮಿಸು. ಸರ್ವದುಃಖಪ್ರಶಮನನಾದ ನೀನು ದುಃಖಿತನಂತೆ ಮಲಗಿರುವಿಯೇಕೆ? ಬೇಟೆಗೆ ಹೋದಾಗ ಅಲ್ಲೇನಾದರೂ ನೋಡಿರುವೆಯೋ ಹೇಗೆ? ನೀನು ಕಾಮಪರವಶವಾದಂತೆ

ಕಾ ದೃಷ್ಟಾ ದೇವಕನ್ಯಾ ವಾ ಮಾನುಷೀ ವಾಽಹಿಕನ್ಯಕಾ ॥14॥
ಬ್ರೂಹಿ ಮೇ ತ್ವಮಚಿಂತ್ಯಾತ್ಮನ್ಕನ್ಯಾಂ ತಾಂ ಚಿತ್ತಹಾರಿಣೀಮ್ ॥15॥

ಶ್ರೀ ವರಾಹ ಉವಾಚ–

ತಸ್ಯಾಸ್ತದ್ವಚನಂ ಶ್ರುತ್ವಾ ನಿಃಶ್ವಾಸಮಕರೋದ್ವಿಭುಃ ।
ನಿಃಶ್ವಸಂತಂ ಪುನಃ ಪ್ರಾಹ ಪ್ರೀತಾ ಬಕುಲಮಾಲಿಕಾ ॥16॥

ಏವಂ ಮನೋಹರಾ ಕಾ ಸಾ ತವಾಪಿ ಪುರುಷೋತ್ತಮ ।
ತಾಮವೋಚದ್ಧೃಷೀಕೇಶೋ ವಕ್ಷ್ಯಾಮಿ ಶೃಣು ತತ್ತ್ವತಃ ॥17॥

ಶ್ರೀಭಗವಾನುವಾಚ

ಪುರಾ ತ್ರೇತಾಯುಗೇ ಪುಣ್ಯೇ ರಾವಣಂ ಹತವಾನಹಮ್ ।
ತದಾ ವೇದವತೀ ಕನ್ಯಾ ಸಾಹಾಯ್ಯಮಕರೋಚ್ಛ್ರಿಯಃ ॥18॥

ಸೀತಾರೂಪಾಽಭವಲ್ಲಕ್ಷ್ಮೀರ್ಜನಕಸ್ಯ ಮಹೀತಲಾತ್ ।
ಗತೇ ಮಯಿ ತು ಮಾರೀಚಂ ಹಂತುಂ ಪಂಚವಟೀವನೇ ॥19॥

ಮಮಾನುಜೋಽಪಿ ಮಾಮೇವ ಸೀತಯಾ ಚೋದಿತೋಽನ್ವಯಾತ್।
ತದಂತರೇ ರಾಕ್ಷಸೇಂದ್ರೋ ಹರ್ತುಂ ಸೀತಾಮುಪಾಯಯೌ ॥20॥

ಅಗ್ನಿಹೋತ್ರಗತೋ ವಹ್ನಿಸ್ತಂ ಜ್ಞಾತ್ವಾ ರಾವಣೋದ್ಯಮಮ್ ।

ಕಾಣುತ್ತಿರುವಿ. ಅಚಿಂತ್ಯಸ್ವರೂಪನಾದ ನಿನ್ನ ಚಿತ್ತವನ್ನಪಹರಿಸಿದ ಕನ್ಯೆಯು ಯಾರು? ಮಾನುಷಸ್ತ್ರೀಯೋ, ದೇವಸ್ತ್ರೀಯೋ ಅಥವಾ ನಾಗಸ್ತ್ರೀಯೋ? ನನಗೆ ತಿಳಿಸು' ಎಂದು ಕೇಳಿದಳು. ಆಗ ಭಗವಂತನು ಅದಕ್ಕುತ್ತರಿಸದೆ ನಿಃಶ್ವಾಸವನ್ನು ಬಿಟ್ಟನು. ಪುನಃ ಪುನಃ ನಿಟ್ಟುಸಿರನ್ನು ಬಿಡುತ್ತಿರುವ ಶ್ರೀನಿವಾಸನನ್ನು ನೋಡಿ 'ಬಕುಲಾ ಮಾಲೆಯು ನಿನಗೂ ಮೋಹವನ್ನುಂಟುಮಾಡಿದ ಸುಂದರಿಯಾರು?' ಎಂದು ಪ್ರಶ್ನಿಸಿದಳು. ಆಗ ಭಗವಂತನು 'ಹಿಂದೆ ತ್ರೇತಾಯುಗದಲ್ಲಿ ರಾಮರೂಪವನ್ನು ಧರಿಸಿದ್ದ ನನ್ನನ್ನು ಅನುಸರಿಸಿ ಲಕ್ಷ್ಮೀದೇವಿಯು ಜನಕನ ಮನೆಯಲ್ಲಿ ಸೀತಾದೇವಿಯಾಗಿ ಅವತರಿಸಿದ್ದಳು. ದಂಡಕಾರಣ್ಯದ ಪಂಚವಟಿಯಲ್ಲಿ ವಂಚಕನಾದ ಮಾರೀಚನನ್ನು ಸಂಹರಿಸಲು ನಾನು ಆಶ್ರಮದಿಂದ ಹೊರಹೋದ ಸಂದರ್ಭದಲ್ಲಿ, ಸೀತೆಯಿಂದ ಪ್ರಚೋದಿತನಾದ ನನ್ನ ಅನುಜನಾದ ಲಕ್ಷ್ಮಣನೂ ನನ್ನನ್ನು ಅನುಸರಿಸಿ ಬಂದನು. ಇದೇ ಸಂದರ್ಭವನ್ನು ಬಳಸಿಕೊಂಡು ರಾವಣನು ಸೀತೆಯನ್ನು ಅಪಹರಿಸಲು ಬಂದನು. ಇದನ್ನು

ಆದಾಯ ಸೀತಾಂ ಪಾತಾಲೇ ಸ್ವಾಹಾಯಾಂ ಸನ್ನಿವೇಶ್ಯ ಚ ॥21॥

ತೇನೈವ ರಕ್ಷಸಾ ಸ್ಪೃಷ್ಟಾಂ ಪುರಾ ವೇದವತೀಂ ಶುಭಾಮ್ ।
ಅಗ್ನೌ ವಿಸೃಷ್ಟದೇಹಾಂ ತಾಂ ಸಂಹರ್ತುಂ ರಾವಣಂ ಪುನಃ ॥22॥

ಸೀತಾಯಾ ರೂಪಸದೃಶೀಂ ಕೃತ್ವಾ ಚೈವೋತ್ಸಸರ್ಜ ಹ ।
ಸಾ ರಾವಣಹೃತಾ ಭೂತ್ವಾ ಲಂಕಾಯಾಂ ಚ ನಿವೇಶಿತಾ ॥23॥

ಹತೇ ತು ರಾವಣೇ ಪಶ್ಚಾತ್ತುನರಗ್ನಿಂ ವಿವೇಶ ಸಾ ।
ಅಗ್ನಿಸ್ತು ರಕ್ಷಿತಾಂ ಲಕ್ಷ್ಮೀಂ ಸ್ವಾಹಾಯಾಂ ಮಮ ಜಾನಕೀಮ್ ॥24॥

ದತ್ವಾ ಹಸ್ತೇ ಚ ಮಾಮಾಹ ಸೀತಯಾ ಸಹಿತಾಂ ಸಖೀಮ್ ।
ಇಯಂ ವೇದವತೀ ದೇವ ಸೀತಾಯಾಃ ಪ್ರಿಯಕಾರಿಣೀ ॥25॥

ಸೀತಾರ್ಥಂ ರಾಕ್ಷಸಪುರೇ ತೇನ ಬಂದೀಕೃತಾ ಸ್ಥಿತಾ ।
ತಸ್ಮಾದೇನಾಂ ವರೇಣ್ಯೈವ ಪ್ರೀಣಯ ತ್ವಂ ಶ್ರಿಯಾ ಸಹ ॥26॥

ಇತಿ ವಹ್ನಿವಚಃ ಶ್ರುತ್ವಾ ಸೀತಾ ಮಾಮವದಚ್ಛುಭಾ ।
ಮಮ ಪ್ರೀತಿಕರೀ ನಿತ್ಯಮಿಯಂ ವೇದವತೀ ವಿಭೋ ॥27॥

ತಸ್ಮಾತ್ವರಂ ಭಾಗವತೀಂ ದೇವ್ಯೈನಾಂ ವರಯ ಪ್ರಭೋ ॥28॥

ನೋಡಿದ ಅಗ್ನಿಹೋತ್ರದಲ್ಲಿರುವ ವಹ್ನಿಯು, ರಾವಣನ ಅಪಹರಣ ಪ್ರಯತ್ನವನ್ನು ತಿಳಿದು, ಹಿಂದೆ ರಾವಣನಿಂದ ಸ್ಪೃಷ್ಟಳಾಗಿ, ಅವನ ಮರಣಕ್ಕೆ ನಿಮಿತ್ತಳಾಗುವೆನೆಂದು ಪ್ರತಿಜ್ಞೆಯನ್ನು ಮಾಡಿ, ವಹ್ನಿಪ್ರವೇಶದಿಂದ ದೇಹತ್ಯಾಗವನ್ನು ಮಾಡಿದ ವೇದವತಿ ಎಂಬ ಸ್ತ್ರೀಯನ್ನು ರಾವಣನ ಸಂಹಾರಾರ್ಥವಾಗಿ ಸೀತೆಯಂತೆ ಕಾಣುವವಳನ್ನಾಗಿಸಿ, ರಾವಣನನ್ನು ಇವಳೇ ಸೀತೆಯೆಂದು ವಂಚಿಸಿ, ಸೀತೆಯನ್ನು ಪಾತಾಲಲೋಕಕ್ಕೆ ಕರೆದೊಯ್ದು ಸ್ವಾಹಾದೇವಿಯ ಬಳಿ ಇಟ್ಟು ಪೂಜಿಸಿದನು. ಆ ವೇದವತಿಯನ್ನೇ ಸೀತೆಯೆಂದು ಭ್ರಮಿಸಿದ ರಾವಣನು ಲಂಕೆಯ ಅಶೋಕವನದಲ್ಲಿ ಅವಳನ್ನು ಬಂಧಿಸಿಟ್ಟನು. ಮುಂದೆ ನಾನು ರಾವಣನನ್ನು ಸಂಹರಿಸಿದ ಅನಂತರದಲ್ಲಿ ವೇದವತಿಯು ಅಗ್ನಿಯನ್ನು ಪ್ರವೇಶಿಸಿದಾಗ, ಅಗ್ನಿಯು ತನ್ನ ಬಳಿ ನೆಲಸಿದ್ದ ಸೀತೆಯನ್ನು ನನ್ನ ಕೈಯಲ್ಲಿಟ್ಟು 'ಇವಳೇ ನಿಜವಾದ ಸೀತೆಯು. ಈ ಮತ್ತೊಬ್ಬ ಸೀತೆಯಂತಿರುವವಳು ಸೀತೆಯ ಸೇವೆಯನ್ನು ಗೈದ ವೇದವತಿಯೆಂಬುವವಳು. ಸೀತೆಯ ಗೋಸ್ಕರವಾಗಿ ಇವಳು ರಾವಣನ ಬಂದಿಯಾಗಿದ್ದಳು. ಇವಳನ್ನು ವಿವಾಹವಾಗಿ ಅನುಗ್ರಹಿಸು' ಎಂದು ನುಡಿದನು. ಸೀತೆಯೂ ಸಹ 'ನನ್ನ

ಶ್ರೀಭಗವಾನುವಾಚ–

ತಥಾ ದೇವಿ ಕರಿಷ್ಯಾಮಿ ಹ್ಯಷ್ಟಾವಿಂಶೇ ಕಲೌ ಯುಗೇ ।
ತಾವದೇಷಾ ಬ್ರಹ್ಮಲೋಕೇ ವಸತ್ವಮರಪೂಜಿತಾ ॥29॥

ಪಶ್ಚಾತ್ತು ಭೂಮಿತನಯಾ ಭವಿಷ್ಯತಿ ವಿಯತ್ಸುತಾ ।
ಇತಿ ದತ್ತವರಾ ಪೂರ್ವಂ ಮಯಾ ಲಕ್ಷ್ಮ್ಯಾ ಚ ಸುಂದರೀ ॥30॥

ಅದ್ಯ ನಾರಾಯಣಪುರೇ ಸಂಭೂತಾ ಧರಣೀತಲಾತ್ ।
ಪದ್ಮಾಸಮಾ ಪದ್ಮನೇತ್ರೀ ಪದ್ಮಾದತ್ತವರಾ ಸತೀ ॥31॥

ಸಖೀಭಿರನುರೂಪಾಭಿರ್ವನೇ ಪುಷ್ಪಾಣಿ ಚಿನ್ವತೀ ।
ಮೃಗಯಾಮಟತಾ ತತ್ರ ಮಯಾ ದೃಷ್ಟಾ ಮನೋರಮಾ ॥32॥

ತಸ್ಯಾ ರೂಪಂ ಮಯಾ ವಕ್ತುಂ ನ ಶಕ್ಯಂ ಶತಹಾಯನೈಃ ।
ಲಕ್ಷ್ಮ್ಯೇವ ಚ ತಯಾ ಮೇಽದ್ಯ ಸಂಗಮೋ ಭವಿತಾ ಯದಿ ॥33॥

ಪ್ರಾಣಾಃ ಸ್ಥಿರಾ ಭವಿಷ್ಯಂತಿ ಸತ್ಯಮಿತ್ಯವಧಾರಯ ।
ತ್ವಂ ತತ್ರ ಗತ್ವಾ ತಾಂ ಕನ್ಯಾಂ ದೃಷ್ಟ್ವಾ ಬಕುಲಮಾಲಿಕೇ ॥34॥

ಜಾನೀಹಿ ರೂಪಲಾವಣ್ಯಾದಿಯಂ ಯೋಗ್ಯೇತಿ ಚಾಸ್ಯ ವೈ ।
ಅನವದ್ಯಾ ವಿಶಾಲಾಕ್ಷೀ ಪದ್ಮೇಂದೀವರಲೋಚನಾ ॥35॥

ಸೇವೆಯನ್ನು ಮಾಡಿದ ಈ ವೇದವತಿಯು ನನಗೆ ಅತ್ಯಂತ ಪ್ರಿಯಳಾಗಿದ್ದು ಇವಳ ಪಾಣಿಗ್ರಹಣವನ್ನು ಮಾಡಿ ಅನುಗ್ರಹಿಸು' ಎಂದು ಪ್ರಾರ್ಥಿಸಿದಳು. ಆಗ ನಾನು 'ಮುಂದೆ ಇಪ್ಪತ್ತೆಂಟನೆ ಕಲಿಯುಗದಲ್ಲಿ ಇವಳನ್ನು ವಿವಾಹ ಮಾಡಿಕೊಂಡು ಸ್ವೀಕರಿಸುವೆನು. ಅಲ್ಲಿಯ ವರೆಗೂ ಈಗೆ ಬ್ರಹ್ಮಲೋಕದಲ್ಲಿ ದೇವತೆಗಳಿಂದ ಸಮ್ಮಾನಿತಳಾಗಿ ವಾಸವಾಗಿರಲಿ' ಎಂದು ಹೇಳಿದೆನು. ಹೀಗೆ ನನ್ನಿಂದೆ ಲಕ್ಷ್ಮಿಯಿಂದ ಮತ್ತು ನನ್ನಿಂದ ಅನುಗೃಹೀತಳಾದ ವೇದವತಿಯೇ ಪದ್ಮಾವತಿಯಾಗಿ ನಾರಾಯಣಪುರದಲ್ಲಿ ಭೂಮಿಯಲ್ಲಿ ಕಮಲವೊಂದರಲ್ಲಿ ಜನಿಸಿ ಬಂದಿರುವಳು. ಕಮಲ ಸದೃಶವಾದ ಅವಯವಗಳನ್ನು ಹೊಂದಿದ ಪದ್ಮಾವತಿಯು ಹೂವುಗಳನ್ನು ಬಿಡಿಸಲು ಉಪವನಕ್ಕೆ ಬಂದಾಗ, ಬೇಟೆಗೆ ಹೋಗಿದ್ದ ನಾನು ಅವಳನ್ನು ನೋಡಿದೆನು. ಅವಳ ರೂಪವನ್ನು ವರ್ಣಿಸಲು ಅಶಕ್ಯವು. ಲಕ್ಷ್ಮೀಸದೃಶವಾದ ರೂಪವನ್ನು ಹೊಂದಿರುವ ಅವಳನ್ನು ನಾನು ವಿವಾಹವಾದಲ್ಲಿ ನನ್ನ ಪ್ರಾಣಗಳು ಉಳಿಯುವವು. ಇಲ್ಲವಾದಲ್ಲಿ ನಾನು ಬದುಕುವದಿಲ್ಲವೆಂದು ತಿಳಿ. ಹೇ ಬಕುಲಮಾಲೆಯೇ! ದೋಷರಹಿತಳಾದ ವಿಶಾಲ ನೇತ್ರೆಯಾದ ಪದ್ಮಾವತಿಯ

ಇತ್ಯುಕ್ತ್ವಾ ಮೋಹಮಾಪನ್ನಂ ತಂ ಪ್ರಾಹ ಬಕುಲಾ ಪುನಃ ।
ಇತೋ ಗಚ್ಛಾಮಿ ದೇವೇಶ ಮನೋಜ್ಞಾ ತವ ಯತ್ರ ಸಾ ॥36॥

ಮಾರ್ಗಂ ವದ ರಮಾಧೀಶ ಗಮಿಷ್ಯೇ ಯೇನ ತಾಂ ಪ್ರತಿ ।
ಏವಮುಕ್ತೋ ರಮಾಧೀಶಸ್ತಾಂ ಪ್ರಾಹ ಬಕುಲಸ್ರಜಮ್ ॥37॥

ಇತೋ ಗಚ್ಛ ಮಹಾಭಾಗೇ ಶ್ರೀನೃಸಿಂಹಗೃಹೋ ಯತಃ ।
ತನ್ಮಾರ್ಗೇಣಾವತೀರ್ಯಾಸ್ಮಾದ್ಭೂಧರೇಂದ್ರಾನ್ಮನೋರಮಾತ್ ॥38॥

ಅಗಸ್ತ್ಯಾಶ್ರಮಮಾಸಾದ್ಯ ದೃಷ್ಟ್ವಾ ಲಿಂಗಂ ತದರ್ಚಿತಮ್ ।
ಅಗಸ್ತ್ಯೇಶ ಇತಿ ಖ್ಯಾತಂ ಸುವರ್ಣಮುಖರೀತಟೇ ॥39॥

ತೀರೇಣೈವ ತತೋ ಗಚ್ಛ ಶುಕಬ್ರಹ್ಮಋಷೇರ್ವನಮ್ ।
ಪಶ್ಯಂತೀ ಸ್ವರ್ಣಮುಖರೀಂ ತತ್ರ ಕಲ್ಲೋಲಮಾಲಿನೀಮ್ ॥40॥

ತತ್ರ ಪದ್ಮಸರೋ ನಾಮ ಪಾವನಂ ಪದ್ಮಸಂಯುತಮ್ ।
ತತ್ರ ಸ್ನಾತ್ವಾಽಥ ತತ್ತೀರೇ ತಪಂತಂ ಮುನಿಸತ್ತಮಮ್ ॥41॥

ಛಾಯಾಶುಕಂ ನಮಸ್ಕೃತ್ಯ ಕೃಷ್ಣಂ ಚ ಬಲಸಂಯುತಮ್ ।
ಆರಾಧ್ಯಮಾನಂ ಮುನಿನಾ ಶುಕೇನ ಸತತಂ ಶುಭೇ ॥42॥

ಇಂದ್ರನೀಲಮಣಿಶ್ಯಾಮಂ ಪೀತನಿರ್ಮಲವಾಸಸಮ್ ।
ತೀರ್ಥಯಾತ್ರಾಂ ಗಮಿಷ್ಯಂತಂ ಬಲಭದ್ರಂ ಸಿತಾಕೃತಿಮ್ ॥43॥

ರೂಪಲಾವಣ್ಯಗಳನ್ನು ನೋಡಿ ನನಗೆ ಯೋಗ್ಯಳೆಂದು ನೀನು ತಿಳಿಯುವವಳಾಗು' ಎಂದು ನುಡಿದನು. ಶ್ರೀನಿವಾಸನ ಮನೋಭಿಪ್ರಾಯವನ್ನು ತಿಳಿದ ಬಕುಲೆಯು 'ನಾನು ನಿನ್ನ ಕಾರ್ಯಾರ್ಥವಾಗಿ ಪದ್ಮಾವತಿಯ ಬಳಿಗೆ ಹೋಗುವೆನು. ಮಾರ್ಗವನ್ನು ತಿಳಿಸು' ಎಂದು ನುಡಿದಳು. ಆಗ ಶ್ರೀನಿವಾಸನು 'ಇಲ್ಲಿಂದ ನರಸಿಂಹಾಲಯಕ್ಕೆ ಹೋಗಿ, ಪರ್ವತದಿಂದಿಳಿದು ಅಗಸ್ತ್ಯಾಶ್ರಮಕ್ಕೆ ಹೋಗಿ, ಸುವರ್ಣಮುಖರಿಯ ದಡದಲ್ಲಿ, ಅಗಸ್ತ್ಯರಿಂದ ಪೂಜಿತವಾದ ಅಗಸ್ತ್ಯೇಶ್ವರನಿಗೆ ವಂದಿಸಿ, ಮುಂದೆ ಅದೇಮಾರ್ಗವಾಗಿ ಪದ್ಮಸರೋವರದ ಬಳಿ ಬಂದು, ಆ ಸರೋವರದ ತೀರದಲ್ಲಿ ತಪಸ್ಸನ್ನಾಚರಿಸುವ ಶುಕಾಚಾರ್ಯರಿಗೂ ಮತ್ತು ಇಂದ್ರನೀಲ ಮಣಿಯಂತೆ ಶಾಮವರ್ಣೋಪೇತನಾದ, ಮುತ್ತಿನ ಸರವನ್ನು ಕೈಯಲ್ಲಿ ಹಿಡಿದು ಮಂತ್ರೋಪಾಸನೆಯನ್ನು ಮಾಡುವವನಂತೆ ಕಾಣುವ ಕೃಷ್ಣ ಪರಮಾತ್ಮನನ್ನು ಮತ್ತು ಕಾಲುಗಳಲ್ಲಿ ಪಾದುಕೆಯನ್ನು

ಉಪಾಸಯಂತಂ ಮಂತ್ರಾಣಿ ಮುಕ್ತಾನ್ವಿತಕರದ್ವಯಮ್ ।
ಉದ್ಯಂತಂ ಪಾದುಕಾಯುಕ್ತಂ ಬಲಭದ್ರಂ ಪ್ರಣಮ್ಯ ಚ ॥44॥

ಆದಾಯ ಸ್ವರ್ಣಕಮಲಂ ಸರಸೋಽಸ್ಮಾದ್ವರಾನನೇ ।
ತೀರ್ತ್ವಾ ಸುವರ್ಣಮುಖರೀಂ ವನಾನ್ಯುಪವನಾನಿ ಚ ॥45॥

ಅರಣೀತೀರಮಾಸಾದ್ಯ ವಿಶ್ರಮ್ಯ ಚ ವನಾಂತರೇ ।
ನಾರಾಯಣಪುರೀಂ ದೃಷ್ಟ್ವಾ ವಿಸ್ಮಯಂ ಚ ಗಮಿಷ್ಯಸಿ ॥46॥

ತಸ್ಯಾಶ್ಚೋಪವನೇ ವೃಕ್ಷಾನ್ಪುಷ್ಪಾಢ್ಯಾನ್ಫಲಸಂಯುತಾನ್ ।
ಪನಸಾಮ್ರಶಿರೀಷಾಂಶ್ಚ ಕುಂದತಂದುಲಪಾಟಲಾನ್ ॥47॥

ಪುನ್ನಾಗನಾಗವರಣರಸಾಲಾಂಕೋಲಚಂಪಕಾನ್ ।
ಬಕುಲಾಮಲಕಾನ್ಸಾಲಾನ್ ತಾಲಹಿಂತಾಲಪದ್ಮಕಾನ್ ॥48॥

ಜಂಬೂನಿಂಬಕದಂಬೈಲಾಪಿಪ್ಪಲೀಮಧುಕಾರ್ಜುನಾನ್ ।
ಪ್ರಿಯಂಗುಹಿಂಗುಖರ್ಜೂರಮಾಯೂರಾಶೋಕಲೋಧ್ರಕಾನ್ ॥49॥

ಅಶ್ವತ್ಥೋದುಂಬರಪ್ಲಕ್ಷಬದರೀಭೂರ್ಜಕೀಚಕಾನ್ ।
ಚಿಂಚಾಕಿಂಶುಕಮಂದಾರಶಾಲ್ಮಲೀಬೀಜಪೂರಕಾನ್ ॥50॥

ಪೂಗನಾರಂಗಲಿಕುಚನಾರಿಕೇಲವನಾಕುಲಾನ್ ।
ಮಲ್ಲಿಕಾಮಾಲತೀಕುಂದಯೂಥಿಕಾಕೇತಕೀಯುತಾನ್ ॥51॥

ಧರಿಸಿ ತೀರ್ಥಯಾತ್ರೆಗೆ ಹೊರಡಲುದ್ಯುಕ್ತನಾದ, ಶ್ವೇತವರ್ಣೋಪೇತನಾದ ಬಲರಾಮನನ್ನು ನಮಿಸಿ, ಪದ್ಮಸರೋವರದಲ್ಲಿಯ ಸ್ವರ್ಣಕಮಲಗಳಿಂದ ಅವರನ್ನು ಪೂಜಿಸು. ಮುಂದೆ ಸುವರ್ಣಮುಖಿಯ ದಡದಲ್ಲಿಯ ವನ-ಉಪವನಗಳ್ಳನ್ನು ನೋಡುತ್ತಾ ಅವುಗಳನ್ನು ದಾಟಿ ಅರಣಿ ನದಿಯ ತೀರಕ್ಕೆ ಹೋಗು. ಅಲ್ಲಿಯ ವನಗಳಲ್ಲಿ ವಿಶ್ರಮಿಸಿ ಮುಂದೆ ಹೋದಾಗ ದೊರೆಯುವದೇ ನಾರಾಯಣಪುರ. ನಾರಾಯಣಪುರವನ್ನು ನೋಡಿ ನೀನು ಆಶ್ಚರ್ಯವನ್ನು ಹೊಂದುವಿ. ಆ ಪಟ್ಟಣದ ಉಪವನದಲ್ಲಿ ಪುಷ್ಪ, ಫಲಭರಿತವಾದ ಅನೇಕ ವೃಕ್ಷಗಳಿರುವವು. ಹಲಸು, ಮಾವು, ಶಿರೀಷ, ಆಕಾಶ ಮೊಲ್ಲಿಗೆ, ತಿಂದುಲ, ಪಾಟಲ, ಪುನ್ನಾಗ, ನಾಗ, ಬಾಳೆ, ಸಂಪಿಕೆ, ವರುಣ, ಬಕುಲ, ನೆಲ್ಲಿ, ಸಾಲ, ತಾಲ, ಹಿಂತಾಲ, ಪದ್ಮಕ, ನೇರಳೆ, ಬೇವು, ಕದಂಬ, ಪಿಪ್ಪಲ, (ಹಿಪ್ಪಲಿ), ಅರ್ಜುನ, ಪ್ರಿಯಂಗು, ಹಿಂಗು, ಖರ್ಜೂರ, ಅಶೋಕ, ಲೋಧ್ರ, ಅಶ್ವತ್ಥ, ಅತ್ತಿ, ಪ್ಲಕ್ಷ, ಬದರಿ, ಭೋರ್ಜ, ಕೀಚಕ (ಬಿದಿರು), ಕಿಂಶುಕ, ಮಂದಾರ, ಶಾಲ್ಮಲ, (ಬುರುಗ)

ಕರವೀರಾಬ್ಜಸಂಪನ್ನಾನ್ರಾಜರಂಭಾವಿರಾಜಿತಾನ್ ।
ಮಯೂರಕೀರಗರುಡ ಶುಕಸಾರಸಸಂಕುಲಾನ್ ॥52॥

ಭೃಂಗಝುಂಕಾರನಿಬಿಡಾನಾರಾಮಾನ್ಸುಮನೋಹರಾನ್ ।
ಪಶ್ಯಂತೀ ಪರಮಂ ಹರ್ಷಮವಾಪ್ಯ ಚ ನದೀತಟೇ ॥53॥

ಗತ್ವಾ ಪೂರ್ವೋತ್ತರೇ ಮಾರ್ಗೇ ಪುರೀಮಿಂದ್ರಪುರೀಸಮಾಮ್ ।
ಗಂಗಯೇವಾವೃತಾಂ ನಿತ್ಯಂ ಸರಿತಾಽರಣಿನಾಮಯಾ ॥54॥

ಆಕಾಶರಾಜನಗರೀಂ ಗತ್ವಾ ತತ್ರೋಚಿತಂ ಕುರು ॥55॥

ಇತ್ಯಾದಿಶ್ಯ ಸುರಾಧೀಶೋ ಸಖೀಂ ತಾಂ ಬಕುಲಾಭಿಧಾಮ್ ।
ವಿಸೃಜ್ಯ ಶಯನೇ ಶುಭ್ರೇ ಸ ಶಿಷ್ಯೇ ಶ್ರೀಸಮನ್ವಿತಃ ॥56॥

ಪ್ರಣಮ್ಯ ದೇವದೇವೇಶಂ ಸಖೀ ಬಕುಲಮಾಲಿಕಾ ।
ಗುಂಜಾಮಣಿಸಮಾಕಾರಂ ರಕ್ತಾಶ್ವಮಧಿರುಹ್ಯ ಸಾ ॥57॥

ಯಥೋಕ್ತಮಾರ್ಗೇಣ ಯಯೌ ಪಶ್ಯಂತೀ ವಿವಿಧಾನ್ಮೃಗಾನ್ ।
ಮತ್ತೇಭಾನ್ಪರ್ವತಾಕಾರಾನ್ ಶ್ವೇತದಂತವಿಭೂಷಿತಾನ್ ॥58॥

ಬೀಜಪೂರ, ಅಡಿಕೆ, ಹೆಬ್ಬಲಸು, ನಾರಂಗ, ತೆಂಗು, ಹುಣಸೆಯೇ ಮೊದಲಾದ ವೃಕ್ಷಗಳಿಂದಲೂ, ಮಲ್ಲಿಗೆ, ಮಾಲತೀ, ಯೂಥಿಕಾ, ಜಾಜಿಮಲ್ಲಿಗೆ, ಕೇದಗಿ, ಕರವೀರ, ಕಮಲವೇ ಮೊದಲಾದ ಪುಷ್ಪಲತಾದಿಗಳಿಂದಲೂ, ಬಾಳೆಯ ತೋಟಗಳಿಂದಲೂ, ನವಿಲು, ಗಿಳಿ, ಗರುಡ, ಶುಕ, ಸಾರಸವೇ ಮುಂತಾದ ಪಕ್ಷಿಗಳಿಂದಲೂ, ದುಂಬಿಗಳ ಝೇಂಕಾರದಿಂದಲೂ ಮನೋಹರವಾದ ಉದ್ಯಾನವನ್ನು ನೋಡಿ ಆನಂದವನ್ನು ಹೊಂದಿ, ಈಶಾನ್ಯದಿಕ್ಕಿಗೆ ಪ್ರಯಾಣಮಾಡಲು ಇಂದ್ರನ ರಾಜಧಾನಿಯಾದ ಅಮರಾವತಿಗೆ ಸಮವಾದ ಪಟ್ಟಣವನ್ನು ನೋಡುವೆ. ಅದು ಅರಣೀ ನದಿಯಿಂದ ಸುತ್ತುವರೆಯಲ್ಪಟ್ಟಿರುವದು. ಅಂತಹ ಆಕಾಶರಾಜನ ಪಟ್ಟಣವಾದ ನಾರಾಯಣ ಪುರಕ್ಕೆ ಹೋಗಿ ಸಂದರ್ಭಕ್ಕುಚಿತವಾದ ಮಾತುಗಳಿಂದ ನನ್ನ ಕಾರ್ಯವನ್ನು ಪೂರೈಸು' ಎಂದು ನುಡಿದನು. ಅನಂತರ ಭಗವಂತನು ಬಕುಲೆಯನ್ನು ತನ್ನ ಕಾರ್ಯದಲ್ಲಿ ಆಜ್ಞಾಪಿಸಿ ತಾನು ಅವಳನ್ನು ಕಳುಹಿಸಿ ತನ್ನ ಮಂಚದಲ್ಲಿ ಸ್ವಸ್ಥನಾಗಿ ಲಕ್ಷ್ಮೀಸಮೇತನಾಗಿ ಮಲಗಿದನು. ಮುಂದೆ ಬಕುಲಾದೇವಿಯು ಗುಲಗಂಜಿಯ ಮಣಿಯಂತೆ ಕೆಂಪಗಿರುವ ದೇವಕುದುರೆಯನ್ನೇರಿ, ಪರಮಾತ್ಮನು ತಿಳಿಸಿದ ಮಾರ್ಗವನ್ನನುಸರಿಸಿ, ಆಕಾಶರಾಜನ ರಾಜಧಾನಿಯಾದ ನಾರಾಯಣ ಪುರಕ್ಕೆ ಬರುವವಳಾಗಿ, ಮಾರ್ಗಮಧ್ಯದಲ್ಲಿ ವಿವಿಧವಾದ ಸಿಂಹ, ಮದೋದಕವನ್ನು ಸ್ರವಿಸುವ

ಕರಿಣೀಯೂಥಸಹಿತಾನ್ಜಲದಾದಾನತತ್ಪರಾನ್ ।
ಸಿಂಹಾನ್ ಶ್ವೇತಘನಪ್ರಖ್ಯಾನ್ ಸಿಂಹೀಯೂಥೈರನುದ್ರುತಾನ್ ॥59॥

ಶಾರ್ದೂಲಾರ್ಕ್ಷಾಂಶ್ಚ ಖಡ್ಗಾಂಶ್ಚ ಶರಭಾನ್ಗವಯಾನ್ಮೃಗಾನ್ ।
ಕೃಷ್ಣಸಾರಾಂಶ್ಚ ಗೋಮಾಯೂನ್ ಶಶಾಂಶ್ಚ ಪ್ರಿಯಕಾನಪಿ ॥60॥

ಸಾರಸಾಂಶ್ಚ ಮಯೂರಾಂಶ್ಚ ಮಾರ್ಜಾರಾನ್ವನಗೋಚರಾನ್ ।
ವೃಕಾನ್ಬುಕಾನ್ಸೂಕರಾಂಶ್ಚ ಸುವಾಚಃ ಪಕ್ಷಿಣಸ್ತಥಾ ॥61॥

ಪಶ್ಯಂತೀ ವಿವಿಧಾಕಾರಾನ್ಸು‌ಷ್ಯಂತೀ ಚ ಮುಹುರ್ಮುಹುಃ ।
ಆಸಸಾದಾರಣೀತೀರಂ ಪಶ್ಚಿಮಂ ಪಾದಪಾಕುಲಮ್ ॥62॥

ಅವತೀರ್ಯಾರುಣಾದಶ್ವಾದಗಸ್ತ್ಯೇಶಸಮೀಪತಃ ।
ದೃಷ್ಟ್ವಾಗಸ್ತ್ಯೇಶ್ವರಂ ಲಿಂಗಮಗಸ್ತ್ಯೇನ ಸುಪೂಜಿತಮ್ ॥63॥

ತತ್ರ ಸ್ನಾತ್ವಾ ಚ ಪೀತ್ವಾ ಚ ವಿಶಶ್ರಾಮ ನದೀತಟೇ ॥64॥

ತತ್ರಾಗತಾ ರಾಜಗೃಹಾದ್ಯೋಷಿತೋ ದೇವಸನ್ನಿಧೌ ।
ಸಖೀಃ ಪದ್ಮಾಲಯಾಯಾಸ್ತಾ ದೃಷ್ಟ್ವಾ ಬಕುಲಮಾಲಿಕಾ ॥65॥

ಗತ್ವಾ ಸಮೀಪೇ ತಾಸಾಂ ಸಾ ಕಿಂವದಂತೀಂ ಸ್ಮ ಪೃಚ್ಛತಿ ॥66॥

ಬಕುಲಮಾಲಿಕೋವಾಚ–

ಕಾ ಯೂಯಂ ಯೋಷಿತೋ ಬ್ರೂತ ವಿಚಿತ್ರಾಭರಣಸ್ರಜಃ ।

ಆನೆಗಳು, ಹೆಬ್ಬುಲಿಗಳು, ಕರಡಿ, ಸಾರಂಗ, ಖಡ್ಗಮೃಗ, ಶರಭ, ಗವಯ, ಕೃಷ್ಣಮೃಗ, ನರಿ, ಮೊಲ, ಪ್ರಿಯಕವೆಂಬ ಜಿಂಕೆಗಳು, ಮೊದಲಾದ ನಾನಾವಿಧವಾದ ಪ್ರಾಣಿಗಳನ್ನು, ಚಕ್ರವಾಕಗಳು, ನವಿಲುಗಳು, ಗಿಳಿಗಳೇ ಮೊದಲಾದ ಪಕ್ಷಿಗಳು, ತೋಳ, ಕಾಡುಬೆಕ್ಕು, ಕಾಡುಹಂದಿಯೇ ಮೊದಲಾದ ನಾನಾವಿಧವಾದ ವನ್ಯಮೃಗಗಳು, ಇವುಗಳನ್ನು ನೋಡಿ, ಹರ್ಷಿಸುತ್ತಾ ಮರಗಳಿಂದ ನಿಬಿಡವಾದ ಅರಣೀನದಿಯ ಪಶ್ಚಿಮ ತೀರಕ್ಕೆ ಬಂದಳು. ಅಗಸ್ತ್ಯೇಶ್ವರನ ಲಿಂಗಕ್ಕೆ ನಮಸ್ಕರಿಸಿ, ನದಿಯ ನೀರನ್ನು ಕುಡಿದು, ವಿಶ್ರಮಿಸಿದ ಬಕುಲೆಯು ಅಗಸ್ತ್ಯೇಶ್ವರನ ಸನ್ನಿಧಾನದಲ್ಲಿ ಪದ್ಮಾವತಿಯ ಸಖಿಯರನ್ನು ಕಂಡಳು. ಅವಳನ್ನು ಕುರಿತು ಬಕುಲೆಯು 'ನೀವು ಯಾರು? ಎಲ್ಲಿಂದ ಬಂದಿರುವಿರಿ? ಇಲ್ಲಿ ನಿಮ್ಮ ಕಾರ್ಯವಾವುದು? ಹೇ ಸುಂದರಿಯರೇ! ನೀವು ಯಾವ ಪ್ರಯೋಜನವನ್ನಪೇಕ್ಷಿಸಿ ಇಲ್ಲಿಗೆ ಬಂದಿರುವಿರಿ? ಎಂದು ಪ್ರಶ್ನಿಸಿದರು. ಇದನ್ನು ಕೇಳಿದ ಆ

ಕುತಃ ಸಮಾಗತಾ ಹ್ಯತ್ರ ಕಿಂ ಕಾರ್ಯಂ ವೋಽಮಲಾನನಾಃ ॥67॥

ತಾಸ್ತು ತಸ್ಯಾ ವಚಃ ಶ್ರುತ್ವಾ ಸ್ಮಿತಪೂರ್ವಮಥಾಬ್ರುವನ್ ।
ಶೃಣುಷ್ವಾವಹಿತಾ ದೇವಿ ವಯಂ ವಕ್ಷ್ಯಾಮಹೇಽಧುನಾ ॥68॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ 'ಪದ್ಮಾವತೀದರ್ಶನೇನ ಶ್ರೀನಿವಾಸಸ್ಯ ಮೋಹಪ್ರಾಪ್ತ್ಯಾದಿವರ್ಣನಂ' ನಾಮ ಪಂಚಮೋಽಧ್ಯಾಯಃ ॥5॥

* * *

ಕನ್ಯೆಯರು ಮಂದಹಾಸವನ್ನು ಮಾಡುತ್ತಾ 'ಹೇ ದೇವಿಯೇ! ನಮ್ಮ ವೃತ್ತಾಂತನ್ನು ಹೇಳುವೆವು. ಕೇಳು' ಎಂದು ನುಡಿದು ತಮ್ಮ ವೃತ್ತಾಂತವನ್ನು ಹೇಳಲಾರಂಭಿಸಿದರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ ಪದ್ಮಾವತಿಯ ದರ್ಶನದಿಂದ ಶ್ರೀನಿವಾಸನಿಗೆ ಉಂಟಾದ ಮೋಹಾವಸ್ಥೆಯ ವರ್ಣನವೆಂಬ ಐದನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥ ಷಷ್ಠೋಽಧ್ಯಾಯಃ

**ಯೋಷಿತಃ ಊಚುಃ–**

'ವಯಮಾಕಾಶರಾಜಸ್ಯ ಶುದ್ಧಾಂತನಿಲಯಾಃ ಸ್ತ್ರಿಯಃ ।
ಸಖ್ಯಃ ಪದ್ಮಾಲಯಾಯಾ ವೈ ದುಹಿತುರ್ವಸುಧಾಪತೇಃ ॥1॥

ರಾಜಪುತ್ರೀಂ ಪುರಸ್ಕೃತ್ಯ ಗತಾಃ ಪೂರ್ವಂ ವನಾಂತರಮ್ ।
ಕುರ್ವಂತ್ಯಃ ಪುಷ್ಪಾಪಚಯಂ ರಾಜಪುತ್ರ್ಯರ್ಥಮಾಕುಲಾ ॥2॥

ವೃಕ್ಷಮೂಲೇ ಸಮಾಸೀನಾಸ್ತತ್ರ ಪಶ್ಯಾಮ ಪೂರುಷಮ್ ।
ಇಂದ್ರನೀಲಮಣಿಶ್ಯಾಮಮಿಂದಿರಾಮಂದಿರೋರಸಮ್ ॥3॥

ಈಷತ್ಸ್ಮಿತಮುಖಂ ಚಾರುಪೀನದೀರ್ಘಭುಜದ್ವಯಮ್ ।
ಮೃಷ್ಟಪೀತಾಂಬರಂ ಹೇಮಬಾಣಬಾಣಾಸನೋಜ್ಜ್ವಲಮ್ ॥4॥

ಸುವರ್ಣಮುಕುಟಂ ಹಾರಕೇಯೂರಾದಿವಿಭೂಷಿತಮ್ ।
ತಂ ತು ಪದ್ಮಾಲಯಾ ದೃಷ್ಟ್ವಾ ಸಖೀ ಕಮಲಲೋಚನಾ ॥5॥

ದ್ರುತಹೇಮನಿಭಾಕಾರಾ ಪಶ್ಯ ಪಶ್ಯೇತಿ ಸಾಽಬ್ರವೀತ್ ।
ಪಶ್ಯಂತೀನಾಂ ತದಾಽಸ್ಮಾಕಂ ಗತೋಽಂತರ್ಧಾನಮಾಶು ಸಃ ॥6॥

ಸಾ ಸಖೀ ಮೂರ್ಛಿತಾಽಸ್ಮಾಭಿರ್ನೀತಾ ರಾಜಗೃಹಂ ತತಃ ॥7॥

## ಆರನೆಯ ಅಧ್ಯಾಯವು

ಕನ್ಯೆಯರು ನುಡಿಯುತ್ತಾರೆ– 'ನಾವು ಆಕಾಶರಾಜನ ಅಂತಃಪುರದ ಸ್ತ್ರೀಯರಾಗಿದ್ದು ರಾಜಕುಮಾರಿಯಾದ ಪದ್ಮಾವತಿಯ ಸಖಿಯರಾಗಿರುವೆವು. ನಿನ್ನೆ ನಾವು ರಾಜಪುತ್ರಿಯೊಡನೆ ಹೂವುಗಳನ್ನು ಬಿಡಿಸಿ ತರಲು ಪುಷ್ಪವನಕ್ಕೆ ಹೋದಾಗ, ಆನೆಯನ್ನು ನೋಡಿ, ವ್ಯಾಕುಲರಾಗಿ ಗಿಡದ ಕೆಳಗೆ ಬಚ್ಚಿಟ್ಟುಕೊಂಡೆವು. ಆಗ ಅಲ್ಲಿಗೆ ಇಂದ್ರನೀಲ ಮಣಿಯಂತೆ ನೀಲವರ್ಣದವನಾಗಿದ್ದ, ಮಂದಹಾಸಯುಕ್ತನೂ, ದೀರ್ಘವೂ ಪುಷ್ಟವೂ ಸುಂದರವೂ ಆದ ಬಾಹುದ್ವಯಗಳಿಂದ ವಿರಾಜಮಾನನಾದ, ಪೀತಾಂಬರ ಧಾರಿಯಾದ, ಬಂಗಾರದ ಬಿಲ್ಲು–ಬಾಣಗಳನ್ನು ಧರಿಸಿದ್ದ,

ದೃಷ್ಟ್ವಾಽಸ್ವಸ್ಥಾಂ ನೃಪಃ ಪುತ್ರೀಮಪೃಚ್ಛದ್ದೈವಚಿಂತಕಮ್ ।
ವದ ವಿಪೇಂದ್ರ ಪುತ್ರ್ಯಾ ಮೇ ಗ್ರಹಚಾರಫಲಂ ಮುನೇ ॥8॥

ಬೃಹಸ್ಪತಿಸಮೋ ವಿಪ್ರೋ ವಿಚಾರ್ಯಾತ್ಮನಿ ಖೇಚರಾನ್ ।
ಅನುಕೂಲಾ ಗ್ರಹಾಸ್ಸರ್ವೇ ತವ ಪುತ್ರ್ಯಾ ನೃಪೋತ್ತಮ ॥9॥

ಕಿಂ ತು ನಿತ್ಯಂ ಗ್ರಹಫಲಂ ಕಿಂಚಿದ್ಭ್ರಾಂತಿಕರಂ ನೃಪ ।
ತಮುವಾಚ ಪುನರ್ಧೀಮಾನ್ಪ್ರಶ್ನಕಾಲಂ ವಿಚಾರ್ಯ ಚ ॥10॥

ಛಾಯಾಂ ಗುಣಿತ್ವಾ ಲಗ್ನಂ ಚ ತತ್ಫಲಾನಿ ವಿಚಾರ್ಯ ಚ ।
ಲಗ್ನೇ ಲಗ್ನಾಧಿಪಶ್ಚಂದ್ರಃ ಕೇಂದ್ರೇ ಚೈವ ಬೃಹಸ್ಪತಿ ॥11॥

ನಿದ್ರಾತಿ ದಿನಪಕ್ಷೇ ತು ಪ್ರಶ್ನಪಕ್ಷೇ ತು ರಾಜ್ಯಗಃ ।
ಶೃಣು ರಾಜನ್ಫಲಂ ತಸ್ಯ ಸ್ವಾಸ್ಥ್ಯಮೇವ ಭವಿಷ್ಯತಿ ॥12॥

ಉತ್ತಮಃ ಪುರುಷಃ ಕಶ್ಚಿದಾಗತಃ ಕನ್ಯಕಾಂ ಪ್ರತಿ ।
ತಂ ದೃಷ್ಟ್ವಾ ಮೂರ್ಛಿತಾ ಪುತ್ರೀ ತೇನ ಯೋಗಂ ಸಮೇಷ್ಯತಿ ॥13॥

ಬಂಗಾರದ ಕಿರೀಟ, ಹಾರ, ಕೇಯೂರಾದಿಗಳಿಂದ ವಿಭೂಷಿತನಾದ ಒಬ್ಬ ಸುಂದರ ಪುರುಷನು ಬಂದನು. ಅವನನ್ನು ನೋಡಿ ಪದ್ಮಾವತಿಯು 'ನೋಡಿರಿ, ನೋಡಿರಿ' ಎಂದು ನುಡಿದಳು. ನಾವು ನೋಡುತ್ತಿರುವಂತೆಯೇ ಆ ಪುರುಷನು ಅಲ್ಲಿಯೇ ಅದೃಶ್ಯನಾದನು. ಇದರಿಂದ ಅಸ್ವಸ್ಥಳಾದ ಪದ್ಮಾವತಿಯು ಮೂರ್ಛೆಯನ್ನು ಹೊಂದಿದಳು. ನಾವು ಅವಳನ್ನು ಅರಮನೆಗೆ ಕರೆತಂದೆವು. ಅಸ್ವಸ್ಥಳಾದ ಮಗಳನ್ನು ನೋಡಿದ ಆಕಾಶರಾಜನು 'ನನ್ನ ಮಗಳ ಗ್ರಹಚಾರ ಫಲವನ್ನು ತಿಳಿಸಿರಿ' ಎಂದು ಪ್ರಾರ್ಥಿಸಿದಾಗ ಬೃಹಸ್ಪತಿ ಸಮಾನನಾದ ಬ್ರಾಹ್ಮಣನು 'ಗ್ರಹಗಳೆಲ್ಲವೂ ನಿನ್ನ ಮಗಳಿಗೆ ಅನುಕೂಲಸ್ಥಾನದಲ್ಲಿರುವವು. ಆದರೆ ಗ್ರಹಫಲವು ಯಾವಾಗಲು ಮನುಷ್ಯನಿಗೆ ಭ್ರಾಂತಿಯನ್ನುಂಟುಮಾಡುವದು' ಎಂದು ನುಡಿದು ಪ್ರಶ್ನಕಾಲವನ್ನು ಚನ್ನಾಗಿ ವಿಚಾರಿಸಿ ಸೂರ್ಯಚ್ಛಾಯೆಯನ್ನು ಲೆಕ್ಕಮಾಡಿ, ಗ್ರಹಸ್ಥಿತಿಗಳನ್ನು ಚನ್ನಾಗಿ ವಿಮರ್ಶಿಸಿ 'ಲಗ್ನದಲ್ಲಿ ರಾಶ್ಯಧಿಪತಿಯಾದ ಚಂದ್ರನಿರುವನು. ಕೇಂದ್ರದಲ್ಲಿ ಬೃಹಸ್ಪತಿಯಿರುವನು. ಸೂರ್ಯನು ಮಂದಗಾಮಿಯಾಗಿದ್ದು ಪ್ರಶ್ನಾಧಿಪತಿಯು ರಾಜ್ಯಕಾರಕನಾಗಿರುವನು. ಇದರ ಫಲವನ್ನು ಹೇಳುವೆನು. ನಿನ್ನ ಮಗಳಿಗೆ ನಿಶ್ಚಯವಾಗಿಯೂ ಆರೋಗ್ಯವುಂಟಾಗುವದು. ನಿನ್ನ ಮಗಳ ಬಳಿ ಉತ್ತಮ ಲಕ್ಷಣಗಳನ್ನು ಹೊಂದಿರುವ ಪುರುಷನೊಬ್ಬನು ಬಂದಿರಬೇಕು. ಅವನನ್ನು ಕಂಡು ಮೋಹವನ್ನು ಹೊಂದಿರುವಳು. ನಿನ್ನ ಮಗಳು ಅವನನ್ನೇ ವಿವಾಹವಾಗುವಳು. ಆ ಪುರುಷೋತ್ತಮನಿಂದ

ತೇನೈವ ಪ್ರೇಷಿತಾ ಕಾಚಿದಾಗಮಿಷ್ಯತಿ ಕನ್ಯಕಾ ।
ಸಾ ತು ವಕ್ಷ್ಯತಿ ಯದ್ವಾಕ್ಯಂ ತದ್ಧಿತಂ ತೇ ಭವಿಷ್ಯತಿ ॥14॥

ತತ್ಕುರುಷ್ವ ಮಹಾರಾಜ ಸತ್ಯಂ ಸತ್ಯಂ ವದಾಮ್ಯಹಮ್ ।
ಕಿಂಚ ಸರ್ವಾರ್ಥದಂ ಯತ್ತು ಸರ್ವವ್ಯಾಧಿವಿನಾಶನಮ್ ॥15॥

ವಕ್ಷ್ಯಾಮಿ ತತ್ಕುರುಷ್ವಾದ್ಯ ಪುತ್ರ್ಯಾಸ್ತವ ಸುಖಾವಹಮ್ ।
ಕಾರಯಾಗಸ್ತ್ಯಲಿಂಗಸ್ಯ ಬ್ರಾಹ್ಮಣೈರಭಿಷೇಚನಮ್ ॥16॥

ಇತ್ಯುಕ್ತ್ವಾಽಥ ಗೃಹಂ ಯಾತೋ ರಾಜಾನಂ ದೈವಚಿಂತಕಃ ॥17॥

ಆಕಾಶರಾಜೋಽಪಿ ತದಾ ವಿಪ್ರಾನಾಹೂಯ ವೈದಿಕಾನ್ ।
ಅಭ್ಯರ್ಚ್ಯಾಜ್ಞಾಪಯಾಮಾಸ 'ಗತ್ವಾ ದೇವಾಲಯಂ ದ್ವಿಜಾಃ ॥18॥

ಮಹಾಭಿಷೇಕಂ ಶಂಭೋಶ್ಚ ಕುರುಧ್ವಂ ಮಂತ್ರಪೂರ್ವಕಮ್' ।
ಇತ್ಯುಕ್ತ್ವಾಽಽಜ್ಞಪ್ಯ ತಾನಸ್ಮಾನಾಹೂಯಾಭ್ಯವದಚ್ಛುಭೇ ॥19॥

ಮಹಾಭಿಷೇಕಸಂಭಾರಾನ್ಸಂಪಾದಯತ ಕನ್ಯಕಾಃ ।
ಇತ್ಯಾಜ್ಞಪ್ತಾ ನೃಪೇಣೈವ ವಯಂ ದೇವಾಲಯಂ ಗತಾಃ ॥20॥

ಬ್ರೂಹಿ ತ್ವಂ ಸುಭಗೇಽಸ್ಮಾಕಂ ತ್ವದಾಗಮನಮಂಜಸಾ ।
ಕುತೋಽಸಿ ಕಸ್ಯ ವಾಽರ್ಥೇನ ಕ್ವ ವಾ ಜಿಗಮಿಷಾ ಹಿ ತೇ ॥21॥

ಕಳುಹಿಸಲ್ಪಟ್ಟ ಸ್ತ್ರೀಯೊಬ್ಬಳು ಬರುವಳು. ಅವಳು ಏನು ಹೇಳುವಳೋ ಅದು ನಿನ್ನ ಮತ್ತು ನಿನ್ನ ಮಗಳಿಗೆ ಹಿತದಾಯಕವಾಗಿರುತ್ತದೆ. ಅವಳ ಮಾತುಗಳನ್ನು ನಡೆಸಿಕೊಡು. ಇದು ಸತ್ಯವೆಂದು ತಿಳಿ. ಅಷ್ಟಲ್ಲದೇ, ಸರ್ವವ್ಯಾಧಿನಿವಾರಕವಾದ, ಸರ್ವಪ್ರಯೋಜನವನ್ನುಂಟುಮಾಡುವ ಉಪಾಯವೊಂದನ್ನು ತಿಳಿಸುವೆನು. ನಿನ್ನ ಮಗಳ ಸುಖದ ಗೋಸ್ಕರವಾಗಿ ಅಗಸ್ತ್ಯೇಶ್ವರ ಲಿಂಗಕ್ಕೆ ಬ್ರಾಹ್ಮಣರಿಂದ ಅಭಿಷೇಕವನ್ನು ಮಾಡಿಸು' ಎಂದು ನುಡಿದು ತನ್ನ ಮನೆಗೆ ಹೋದನು. ಧರ್ಮಿಷ್ಠನಾದ ಆಕಾಶರಾಜನು ವೇದಜ್ಞರಾದ ಬ್ರಾಹ್ಮಣರನ್ನು ಆಹ್ವಾನಿಸಿ 'ಅಗಸ್ತ್ಯೇಶ್ವರ ದೇವಾಲಯಕ್ಕೆ ಹೋಗಿ, ರುದ್ರದೇವರಿಗೆ ಸಮಂತ್ರಕವಾದ ಅಭಿಷೇಕವನ್ನು ಮಾಡಿರಿ' ಎಂದು ಪ್ರಾರ್ಥಿಸಿ, ನಮಗೆ 'ಅಭಿಷೇಕಕ್ಕೆ ಅವಶ್ಯಕವಾದ ಪದಾರ್ಥಗಳನ್ನು ಸಂಗ್ರಹಿಸಿರಿ' ಎಂದು ನುಡಿದನು. ಅವನ ಆಜ್ಞೆಯಂತೆ ದೇವಾಲಯಕ್ಕೆ ಬಂದಿರುವೆವು' ಎಂದು ನುಡಿದು 'ನೀನಾರು? ಎಲ್ಲಿಂದ ಬಂದಿರುವಿ? ದಿವ್ಯಾಶ್ವವನ್ನು ಏರಿ ದೇವಲೋಕದಿಂದ ಬಂದಿರುವಂತೆ ಕಾಣುವ ನೀನು ಇಲ್ಲಿ

ದಿವ್ಯಾಶ್ವಮಧಿರುಹ್ಯೇಮಂ ದೇವಲೋಕಾದಿವಾಗತಾ ॥22॥

ಶ್ರೀವರಾಹ ಉವಾಚ–

ಇತಿ ತಾಭಿಸ್ತದಾ ಪೃಷ್ಟಾ ಹೃಷ್ಟಾ ಬಕುಲಮಾಲಿಕಾ ।
ಪ್ರೋವಾಚ ವಾಚಂ ಮಧುರಾಂ ಹರ್ಷಯಂತೀವ ಬಾಲಿಕಾಃ ॥23॥

ಬಕುಲಮಾಲಿಕೋವಾಚ–

ಶ್ರೀವೇಂಕಟಾದ್ರೇಃ ಪ್ರಾಪ್ತಾಽಹಂ ನಾಮ್ನಾ ಬಕುಲಮಾಲಿಕಾ ।
ಧರಣೀಂ ದ್ರಷ್ಟುಕಾಮಾಽಹಮಾರುಹ್ಯೇಮಂ ತುರಂಗಮಮ್ ॥24॥

ದ್ರಷ್ಟುಂ ಶಕ್ಯಾ ಭವೇದ್ದೇವೀ ಕಿಮು ತತ್ರ ನೃಪಾಲಯೇ ।
ಇತಿ ತಸ್ಯಾ ವಚಃ ಶ್ರುತ್ವಾ ತಾಃ ಪ್ರೋಚುರ್ನೃಪಕನ್ಯಕಾಃ ॥25॥

ಅಸ್ಮಾಭಿಸ್ಸಹಿತಾ ತ್ವಂ ವೈ ದ್ರಕ್ಷ್ಯಸೇ ಧರಣೀಂ ಶುಭೇ ।
ಇತ್ಯುಕ್ತಾ ಸಾ ತತಸ್ತಾಭಿರಾಗತಾ ನೃಪಮಂದಿರಮ್ ॥26॥

ಆಗಚ್ಛಂತೀಷು ತಾಸ್ವೇವಂ ಧರಣೀ ತು ಪುಲಿಂದಿನೀ ॥27॥

ಆಯಾಂತೀಂ ವೀಥಿಕಾಯಾಂ ಸಾ ಸಗುಂಜಾಶಂಖಭೂಷಿತಾಮ್ ।
ಶಿಶುಂ ಸ್ತನಂಧಯಂ ಪೃಷ್ಠೇ ಬದ್ಧ್ವಾ ವಸ್ತ್ರಾಂಚಲೇನ ವೈ ॥28॥

ವದಾಮಿ ಸತ್ಯಂ ಶೃಣುತ ಭೂತಂ ಭವ್ಯಂ ಭವಿಷ್ಯಕಮ್ ।
ವದಂತೀ ವೀಥಿವೀಥೀಷು ತಾಮಾಹೂಯ ಶುಚಿಸ್ಮಿತಾ ॥29॥

ಬರಲು ಕಾರಣವೇನು? ಎಲ್ಲಿಗೆ ಹೋಗಬಯಸಿರುವಿ? ಎಂದು ಪ್ರಶ್ನಿಸಿದರು. ಆಗ ಬಕುಲೆಯು 'ನಾನು ವೇಂಕಟಾಚಲದಿಂದ ಧರಣೀ ದೇವಿಯನ್ನು ನೋಡುವದಕ್ಕಾಗಿ ಕುದುರೆಯನ್ನೇರಿ ಬಂದಿರುವೆನು. ನನ್ನ ಹೆಸರು ಬಕುಲಮಾಲಿಕೆಯೆಂದಿರುವದು. ನಾನು ಧರಣೀದೇವಿಯನ್ನು ನೋಡಲು ಸಾಧ್ಯವೇ? ಎಂದು ಪ್ರಶ್ನಿಸಿದಳು. ಕನ್ಯೆಯರು 'ನಮ್ಮ ಜೊತೆ ಬರುವೆಯಾದರೆ ರಾಣಿಯನ್ನು ನೋಡುವಿ' ಎಂದು ತಿಳಿಸಿದಾಗ ಬಕುಲೆಯು ಅವರಿಂದ ಕೂಡಿಕೊಂಡು ರಾಜಮಂದಿರಕ್ಕೆ ಬಂದಳು.

ರಾಜಮಂದಿರಕ್ಕೆ ಬರುವ ಸಮಯದಲ್ಲಿಯೇ ಗುಲಗುಂಜಿ, ಶಂಖಗಳ ಆಭರಣಗಳನ್ನು ಧರಿಸಿ, ವಸ್ತ್ರದಿಂದ ಶಿಶುವನ್ನು ಬೆನ್ನಿಗೆ ಕಟ್ಟಿಕೊಂಡು, ನಾರಾಯಣ ಪುರದ ಬೀದಿಗಳಲ್ಲಿ 'ನಾನು ಭೂತ-ಭವಿಷ್ಯದ್ -ವರ್ತಮಾನಗಳನ್ನು ಹೇಳುವೆನು. ಇದು ಸತ್ಯವು' ಎಂದು ಗಟ್ಟಿಯಗಿ

ಸ್ವರ್ಣಶೂರ್ಪಂ ಸಮಾದಾಯ ತಸ್ಮಿನ್ಮುಕ್ತಾ ನಿಧಾಯ ಚ ।
ತ್ರಿಪ್ರಸ್ಥಮಾತ್ರಾಂಸ್ತ್ರೀನ್ರಾಶೀನ್ಕೃತ್ವಾ ತಸ್ಯೈ ನಿಧಾಯ ಚ ॥30॥

ವದ ಸತ್ಯಂ ಪುಲಿಂದೇ ತ್ವಮೇಷ್ಯದ್ವಾ ಭೂತಮೇವ ವಾ ।
ಇತ್ಯೇವಂ ಧರಣೀ ದೇವೀ ಪೃಚ್ಛಂತೀ ತಾಂ ಸ್ಥಿತಾಽಭವತ್ ॥31॥

ಪೃಷ್ಟಾ ಸಾವದದಸ್ಯಾಸ್ತು ಮನಸಾ ಯದ್ವಿಚಿಂತಿತಮ್ ।
ಮಧ್ಯರಾಶೌ ಚಿಂತಿತಂ ತೇ ವದ ಕಲ್ಯಾಣಿ ಮೇ ಋಜು ॥32॥

ಓಮಿತ್ಯಾಹಾಥ ಧರಣೀ ಪುಲಿಂದಾಂ ರಾಜವಲ್ಲಭಾಮ್ ।
ರಾಶಿರುಕ್ತಃ ಫಲಂ ಬ್ರೂಹಿ ಧನರಾಶಿಂ ದದಾಮಿ ತೇ ॥33॥

ಪುಲಿಂದೋವಾಚ–

ಸತ್ಯಂ ವದಾಮಿ ತೇ ಸುಭ್ರು ಶಿಶೋರನ್ನಂ ಪ್ರಯಚ್ಛ ಮೇ ।
ಇತ್ಯುಕ್ತಾ ಸಾ ತು ಧರಣೀ ಸ್ವರ್ಣಪಾತ್ರೇಽನ್ನಮಾದದೇ ॥34॥

ದತ್ತ್ವಾ ತಸ್ಯೈ ಪುಲಿಂದಿನ್ಯೈ ಸತ್ಯಂ ಬ್ರೂಹೀತಿ ಸಾವದತ್ ।
ಸಕ್ಷೀರಮನ್ನಮಾದಾಯ ದತ್ತ್ವಾ ಪುತ್ರಾಯ ಭಾಮಿನೀ ॥35॥

ಸಾ ಸತ್ಯಮವದತ್ಸುಭ್ರೂರ್ದುಹಿತುರ್ದೇಹಶೋಷಣಮ್ ।
ಪುರುಷಾದಾಗತಂ ಭೀರು ತದ್ರೂಪಾದರ್ಶನಾದಿಯಮ್ ॥36॥

ಕೂಗುತ್ತಾ ಬರುತ್ತಿದ್ದ ಪುಲಿಂದಿನಿ (ಕೊರವಂಜಿ) ಯೊಬ್ಬಳನ್ನು ಧರಣೀ ದೇವಿಯು ನೋಡಿದಳು. ಅವಳನ್ನು ಆದರದಿಂದ ಬರಮಾಡಿಕೊಂಡು, ಬಂಗಾರದ ಮೊರದಲ್ಲಿ ಮುತ್ತುಗಳನ್ನು ತುಂಬಿ ಮೂರು ಪ್ರಸ್ಥಗಳ ಮೂರು ರಾಶಿಗಳನ್ನು ಮಾಡಿ ಅವಳ ಮುಂದಿಟ್ಟು 'ಸತ್ಯವನ್ನೇ ನುಡಿ' ಎಂದು ನುಡಿದಳು. ಆಗ ಪುಲಿಂದಿನಿಯು (ಮುತ್ತಿನ ರಾಶಿಯಲ್ಲಿ ಒಂದನ್ನು ಮನಸ್ಸಿನಲ್ಲಿಟ್ಟುಕೊಳ್ಳಲು ನುಡಿದಾಗ ರಾಣಿಯು ಹಾಗೆಯೇ ಮಾಡಿದಳು. ಆಗ) ರಾಣಿಯೇ ನೀನು ಮಧ್ಯರಾಶಿಯನ್ನು ಚಿಂತಿಸುತ್ತಿರುವಿಯಲ್ಲವೇ? ಸತ್ಯವನ್ನು ನುಡಿ' ಎಂದಾಗ ಒಪ್ಪಿದ ಧರಣೀದೇವಿಯು 'ರಾಶಿಯನ್ನು ಸರಿಯಾಗಿ ನುಡಿದಿರುವಿ. ಇನ್ನು ಅದರ ಫಲವನ್ನು ಹೇಳು. ನಿನಗೆ ಬಹಳಷ್ಟು ಧನವನ್ನು ಕೊಡುವೆನು' ಎಂದು ತಿಳಿಸಿದಳು. ಆಗ ಪುಲಿಂದಿನಿಯು 'ಸತ್ಯವನ್ನೇ ಹೇಳುವೆನು. ಶಿಶುವಿಗೆ ಅನ್ನವನ್ನು ಕೊಡು' ಎಂದಾಗ ಧರಣೀದೇವಿಯು ಕ್ಷೀರಾನ್ನವನ್ನು ತಂದುಕೊಟ್ಟಳು. ಅದನ್ನು ಶಿಶುವಿಗೆ ತಿನ್ನಿಸಿ, ಕೊರವಂಜಿಯು ಧರಣಿದೇವಿಯ ಚಿಂತೆಯನ್ನು ಯಥಾವತ್ತಾಗಿ ತಿಳಿಸುತ್ತಾ 'ನೀನು ನಿನ್ನ ಮಗಳ ಜ್ವರದ ಬಗ್ಗೆ ತಿಳಿಯಬಯಸಿರುವಿ. ನಿನ್ನ ಮಗಳು ನಿನ್ನೆ ಬಂದಿರುವ

ಅಂಗತಾಪಂ ಸಮಾಪನ್ನಾ ಹನ್ಯನಂಗಶರಪೀಡಿತಾ ।
ಸ ತು ದೇವಾಧಿದೇವೋ ವೈ ವೈಕುಂಠಾದಗತಃ ಸ್ವಯಮ್ ॥37॥

ಶ್ರೀವೇಂಕಟಾದ್ರಿಶಿಖರೇ ಸ್ವಾಮಿಪುಷ್ಕರಿಣೀತಟೇ ।
ಮಾಯಾವೀ ಪರಮಾನಂದಃ ಶ್ರಿಯಾ ಸಹ ರಮಾಪತಿಃ ॥38॥

ಕಾಮರೂಪೀ ವಿಹರತೇ ಭಕ್ತಾಭೀಷ್ಟಪ್ರದೋ ಹರಿಃ ।
ಸ ತುರಂಗಂ ಸಮಾರುಹ್ಯ ವಿಹರನ್ಕಾನನಾಂತರೇ ॥39॥

ಆಗತ್ಯೋಪವನಂ ರಾಜನ್ಸ್ತವ ಕನ್ಯಾಂ ಸ ದೃಷ್ಟವಾನ್ ।
ರಮಾಸಮಾಮಿಮಾಂ ದೃಷ್ಟ್ವಾ ಸ್ವಯಂ ಕಾಮವಶಂ ಗತಃ ॥40॥

ಸ್ವಸಖೀಂ ಲಲಿತಾಂ ದೇವಃ ಪ್ರೇಷಯಿಷ್ಯತಿ ತೇಽಂತಿಕಮ್ ।
ರಮೇವ ತಂ ಸಮೇತ್ಯೈಷ ರಮಿಷ್ಯತಿ ಸುಖಂ ಚಿರಮ್ ॥41॥

ಏತತ್ಸತ್ಯಂ ಮಮ ವಚಃ ಪಶ್ಯಾದ್ಯೈವ ನೃಪಾತ್ಮಜೇ ।
ಪುತ್ರಸ್ಯಾನ್ನಂ ಪ್ರಯಚ್ಛೇತಿ ತೂಷ್ಣೀಮಾಸ ಪುಲಿಂದಿನೀ ॥42॥

ಅನ್ನಂ ದತ್ತ್ವಾ ಪುನರ್ಭೂರಿ ತಸ್ಯೈ ತಾಂ ವಿಸಸರ್ಜ ಹ ।
ತಸ್ಯಾಂ ವಿನಿರ್ಗತಾಯಾಂ ತು ಪುಲಿಂದಿನ್ಯಾಮನಿಂದಿತಾ ॥43॥

ಪುರುಷನೋರ್ವನನ್ನು ನೋಡಿ, ಅವನ ರೂಪದಿಂದ ಮೋಹಿತಳಾಗಿ, ಮನ್ಮಥನ ಬಾಣಗಳಿಂದ ಪೀಡಿತಳಾಗಿ, ಕಾಮಜ್ವರವನ್ನು ಹೊಂದಿರುವಳು. ದೇವಾಧಿದೇವನಾದ, ವೈಕುಂಠಾಧಿಪತಿಯಾದ ಶ್ರೀಹರಿಯೇ ನಿನ್ನ ಮಗಳಿಗೆ ಕಾಣಿಸಿಕೊಂಡಿರುವ ಪುರುಷನು. ವೇಂಕಟಾಚಲದ ಮೇಲಿರುವ ಸ್ವಾಮಿಪುಷ್ಕರಿಣಿಯ ತೀರದಲ್ಲಿ ವಾಸವಾಗಿದ್ದು, ಇಚ್ಛಾಪರಿಗೃಹೀತರೂಪನಾದ ಭಗವಂತನು ಸ್ವಯಂ ಆನಂದಪೂರ್ಣನಾಗಿದ್ದರೂ ಸಹ ಕಾಮರೂಪಿಯಾಗಿ, ಲಕ್ಷ್ಮೀದೇವಿಯೊಂದಿಗೆ ಭಕ್ತಾಭೀಷ್ಟದಾಯಕನಾಗಿ ವಿಹಾರವನ್ನು ಮಾಡುವನು. ಅವನು ಕುದುರೆಯನ್ನೇರಿ ವನದಲ್ಲಿ ಸಂಚರಿಸುತ್ತಾ ನಿನ್ನ ಮಗಳಿದ್ದ ಉಪವನಕ್ಕೆ ಬಂದು ಅಲ್ಲಿ ನಿನ್ನ ಮಗಳನ್ನು ಕಂಡನು. ಲಕ್ಷ್ಮಿಯಂತಿರುವ ಇವಳನ್ನು ನೋಡಿ ಅವನೂ ಸಹ ಕಾಮವಶನಾದನು. ಅವನೂ ಸಹ ತನ್ನ ಸಖಿಯಾದ ಲಲಿತೆಯನ್ನು ನಿಮ್ಮ ಬಳಿ ಕಳುಹಿಸುವನು. ಲಕ್ಷ್ಮೀಯಂತೆ ನಿನ್ನ ಮಗಳನ್ನು ಅವನು ಪರಿಗ್ರಹಿಸುವನು. ಅವಳೂ ಸಹ ಅವನೊಂದಿಗೆ ಬಹುಕಾಲ ಸಂತೋಷವಾಗಿರುವಳು. ನನ್ನ ಮಾತು ಸತ್ಯವೆಂದು ತಿಳಿ' ಎಂದು ನುಡಿದು 'ಮಗನಿಗೆ ಮತ್ತೆ ಅನ್ನವನ್ನು ಕೊಡು' ಎಂದು ನುಡಿದಳು. ಆಗ ಅವಳಿಗೆ ಬಹಳಷ್ಟು ಅನ್ನವನ್ನು ಕೊಟ್ಟು ಅವಳನ್ನು ಕಳುಹಿಸಿದಳು.

ಉತ್ಥಾಯ ಚಾಂಗಣಾತ್ತಸ್ಮಾದ್ವಿವೇಶಾಂತಃಪುರಂ ಶುಭಮ್ ।
ಯತ್ರ ಪದ್ಮಾಲಯಾ ಕನ್ಯಾ ಸಮಾಸ್ತೇ ಸ್ವಸಖೀವೃತಾ ॥44॥

ಗತ್ವಾ ಪುತ್ರೀಸಮೀಪಸ್ಥಾ ಕನ್ಯಾಂ ಕಾಮಾತುರಾಂ ಸುತಾಮ್ ।
'ಪುತ್ರಿ ಕಿಂ ತೇ ಕರಿಷ್ಯಾಮಿ ವಸ್ತು ಕಿಂ ವಾ ಪ್ರಿಯಂ ಶುಭೇ ॥45॥

ಇತಿ ಮಾತ್ರಾಭಿಪೃಷ್ಟಾ ಸಾ ಮಂದಮಾಹ ಮನಸ್ವಿನೀ ॥46॥

ನೇತ್ರಾಭಿರಾಮಂ ಯಲ್ಲೋಕೇ ಸತಾಮಪಿ ಮನಃಪ್ರಿಯಮ್ ।
ಯದ್ದ್ರಷ್ಟುಕಾಮಾ ಬ್ರಹ್ಮಾದ್ಯಾ ಯತ್ತು ಸರ್ವಗತಂ ಮಹತ್ ॥47॥

ತೇಜಸಾಮಪಿ ತೇಜಸ್ವೀ ದೇವಾನಾಮಪಿ ದೈವತಮ್ ।
ಭಕ್ತ್ಯೈಸ್ಸದ್ಭಿರಿಹ ಪ್ರಾಪ್ಯಮಭಕ್ತ್ಯೈರ್ನ ಕದಾಚನ ॥48॥

ತಸ್ಮಿನ್ನೇವ ಮನೋ ಮೇಽಂಬ ವಸ್ತುನೀಹ ಪ್ರವರ್ತತೇ ।
ತದೇವಾನ್ವಿಷ್ಯತಾಂ ಮಾತರ್ಭಕ್ತಾನಾಂ ಸರ್ವಕಾಮದಮ್ ॥49॥

ಶ್ರೀವರಾಹ ಉವಾಚ–

'ಏತತ್ ಶ್ರುತ್ವಾ ಧರಮಣೀ ತಾಮಪೃಚ್ಛತ್ಪುನಃ ಸುತಾಮ್ ।
ತದ್ಭಕ್ತಲಕ್ಷಣಂ ಬ್ರೂಹಿ ಯೈಃ ಪ್ರಾಪ್ಯಂ ತತ್ಸುಲೋಚನೇ ॥50॥

ಪದ್ಮಾಲಯೋವಾಚ–

ಭಕ್ತಾನಾಂ ಲಕ್ಷಣಂ ಮಾತಃ ಶೃಣು ಗುಹ್ಯಂ ಸಮಾಹಿತಾಃ ।

ಅವಳತ್ತ ಹೋಗುತ್ತಿದ್ದಂತೆಯೇ ಧರಣೀದೇವಿಯು ಎದ್ದು ತನ್ನ ಮಗಳ ಕೋಣೆಗೆ ಬಂದಳು. ಸಖಿಯರಿಂದ ಪರಿವೃತಳಾಗಿದ್ದ ಪದ್ಮಾವತಿಗೆ 'ನಿನಗೆ ಪ್ರಿಯವಾದದ್ದನ್ನು ಕೊಡುವೆನು. ನಿನಗೇನು ಬೇಕು. ಕೇಳು' ಎಂದು ನುಡಿದಳು. 'ನಯನಾನಂದಕರನಾದ, ಸಜ್ಜನರ ಮನಃಪ್ರಿಯನಾದ, ಬ್ರಹ್ಮಾದಿ ದೇವತೆಗಳೂ ಸಹ ಯಾರನ್ನು ನೋಡಲು ಬಯಸುವರೋ, ಸರ್ವಗತನೂ, ಸರ್ವಪೂಜ್ಯನೂ, ತೇಜಸ್ವಿಗಳಲ್ಲಿಯೂ ತೇಜಸ್ವಿಯೂ, ದೇವತೆಗಳಿಗೂ ದೇವನಾದ, ಭಕ್ತರಿಂದ ಪ್ರಾಪ್ಯನಾದ, ಅಭಕ್ತರಿಂದ ಹೊಂದಲಶಕ್ಯನಾದ ಆ ನಾರಾಯಣನೆಂಬ ಪರಮ ಪುರುಶದಲ್ಲಿಯೇ ನನ್ನ ಮನಸ್ಸು ಆಸಕ್ತವಗಿರುವದು. ತಾಯಿಯೇ! ಭಕ್ತಾಭೀಷ್ಟದಾಯಕನಾದ ಆ ಶ್ರೀನಿವಾಸನನ್ನೇ ನನಗೆ ಹುಡುಕಿ ಕೊಡು' ಎಂದು ನುಡಿದಳು. ಮಗಳ ಮಾತನ್ನು ಕೇಳಿದ ಧರಣೀ ದೇವಿಯು 'ಯಾರಿಂದ ಆ ಪರಮಾತ್ಮನು ಹೊಂದಲ್ಪಡುವನೋ ಅಂತಹ ಅವನ ಭಕ್ತರ ಲಕ್ಷಣವನ್ನು ಹೇಳು' ಎಂದು ಹೇಳಿದಳು. ಪದ್ಮಾವತಿಯು ಭಕ್ತರ ಲಕ್ಷಣವನ್ನು ವರ್ಣನಮಾಡುತ್ತಾ 'ಭಗವಂತನ

ಶಂಖಚಕ್ರಾಂಕಿತಾ ನಿತ್ಯಂ ಭುಜಯುಗ್ಮೇ ವಸುಂಧರೇ ॥51॥

ಊರ್ಧ್ವಪುಂಡ್ರಂ ಸಾಂತರಾಲಂ ತೇಷಾಮೇವ ವಿಶೇಷತಃ ।
ಪುಂಡ್ರಾನಿ ದ್ವಾದಶ ಪುನರ್ಧಾರಯಂತಿ ತಥಾಪರೇ ॥52॥

ಲಲಾಟೋದರಹೃತ್ಕಂಠೇ ಜಠರೇ ಪಾರ್ಶ್ವಯೋರಪಿ ।
ಕೂರ್ಪರಯೋರ್ಭುಜದ್ವಂದ್ವೇ ಪೃಷ್ಠೇ ಚ ಗಲಪೃಷ್ಠಕೇ ॥53॥

ಕೇಶವಾದೀನಿ ನಾಮಾನಿ ದ್ವಾದಶಾಂಗೇಷು ದ್ವಾದಶ ।
ವಾಸುದೇವೇತಿ ತನ್ಮೂರ್ಧ್ನಿ ಧಾರಯಂತಿ ನಮೋಽಸ್ತ್ವಿತಿ ॥54॥

ತೇಷಾಂ ತು ನಿಯಮಾನ್ವಕ್ಷ್ಯೇ ಮಾತಃ ಶೃಣು ಮನೋರಮಾನ್।
ವೇದಪಾರಾಯಣರತಾಃ ಕರ್ಮ ಕುರ್ವಂತಿ ವೈದಿಕಮ್ ॥55॥

ಸತ್ಯಂ ವದಂತಿ ಯೇ ದೇವಿ ನಾಸೂಯಂತಿ ಪರಾನ್ಕ್ವಚಿತ್ ।
ಪರನಿಂದಾಂ ನ ಕುರ್ವಂತಿ ಪರಸ್ವಂ ನ ಹರಂತಿ ಚ ॥56॥

ನ ಸ್ಮರಂತಿ ನ ಪಶ್ಯಂತಿ ನ ಸ್ಪೃಶಂತಿ ಕದಾಚನ ।
ಪರದಾರಾನ್ಸುರೂಪಾಂಶ್ಚ ಯೇ ಚ ತಾನ್ವಿದ್ಧಿ ವೈಷ್ಣವಾನ್ ॥57॥

ಸರ್ವಭೂತದಯಾವಂತಃ ಸರ್ವಭೂತಹಿತೇ ರತಾಃ ।
ಸದಾ ಗಾಯಂತಿ ದೇವೇಶಮೇತಾನ್ಭಕ್ತಾನವೇಹಿ ವೈ ॥58॥

ಯೇನ ಕೇನ ಚ ಸಂತುಷ್ಟಾಃ ಸ್ವದಾರನಿರತಾಶ್ಚ ಯೇ ।

ಭಕ್ತರು ಭುಜಗಳಲ್ಲಿ ನಿತ್ಯಶಂಖ ಚಕ್ರಸಹಿತವಾದ ಊರ್ಧ್ವಪುಂಡ್ರಗಳನ್ನು ಧರಿಸುವವರು. ಕೆಲವರು ಸಚ್ಛಿದ್ರವಾದ ನಾಮವನ್ನು ಹಣೆಯಲ್ಲಿ ಧರಿಸಿದರೆ ಮತ್ತೆ ಕೆಲವರು ಹಣೆ, ಉದರ, ಹೃದಯ, ಕಂಠ, ಕೂರ್ಪರ, (ಮೊಳಕೈ), ಪಾರ್ಶ್ವಗಳು, ಎರಡು ಬಾಹುಗಳು, ಜಠರ, ಬೆನ್ನು, ಕತ್ತಿನ ಹಿಂಭಾಗಗಳಲ್ಲಿ, ಕೇಶವಾದಿ ದ್ವಾದಶ ನಾಮ ಗಳನ್ನುಚ್ಚರಿಸುತ್ತಾ ದ್ವಾದಶಾಂಗಗಳಲ್ಲಿ ಹನ್ನೆರಡು ಪುಂಡ್ರಗಳನ್ನು ಧರಿಸುವರು. 'ವಾಸುದೇವಾಯ ನಮಃ' ಎಂದುಚ್ಚರಿಸುತ್ತಾ ಪುಂಡ್ರವನ್ನು ಶಿರಸ್ಸಿನಲ್ಲಿ ಧರಿಸುವರು. ವೇದಪಾರಾಯಣರತರಾಗಿ ವೇದೋಕ್ತಕರ್ಮಾಚರಣೆಯನ್ನು ಮಾಡುವವರು, ಸತ್ಯವನ್ನು ನುಡಿಯುವವರು, ಬೇರೆಯವರನ್ನು ಕಂಡು ಅಸೂಯೆಯನ್ನು ಹೊಂದದಿರುವವರು, ಭಗವನ್ನಿಂದೆಯನ್ನು ಮಾಡದಿರುವವರು, ಪರಧನವನ್ನು ಬಯಸದವರು, ಪರಸ್ತ್ರೀಯರನ್ನು ಕಣ್ಣೆತ್ತಿಯೂ ಸಹ ನೋಡದವರು ವೈಷ್ಣವರಾದ ಭಗವದ್ಭಕ್ತರೆನಿಸುವರು. ಇಂತಹ ವೈಷ್ಣವರು ಸರ್ವಜೀವಿಗಳಲ್ಲಿ ಅನುಕಂಪವನ್ನು ಹೊಂದಿರುವವರಾಗಿ, ಸರ್ವ ಜೀವರಾಶಿಗಳ ಹಿತವನ್ನೇ

ವೀತರಾಗಭಯಕ್ರೋಧಾಸ್ತಾನ್ಭಕ್ತಾನ್ವಿದ್ಧಿ ವೈಷ್ಣವಾನ್ ॥59॥

ಏವಂ ವಿಧೈರ್ಗುಣೈರ್ಯುಕ್ತಾಃ ಪಂಚಾಯುಧಧರಾ ಅಪಿ ।
ಪಿತ್ರಾ ಚಾಚಾರ್ಯರೂಪೇಣ ಶಿಷ್ಟೇನಾನ್ಯೇನ ವಾ ಪುನಃ ॥60॥

ಸ್ವಗೃಹ್ಯೋಕ್ತವಿಧಾನೇನ ವಹ್ನಿಮಾದಾಯ ವೈ ಬುಧಃ ।
ಚಕ್ರಾದ್ಯಾಯುಧಮಂತ್ರೇಣ ಜುಹುಯಾತ್ ಷೋಡಶಾಹುತೀಃ ॥61॥

ಮೂಲಮಂತ್ರೇಣ ಸೂಕ್ತೇನ ಪೌರುಷೇಣ ತತಃ ಪರಮ್ ।
ಜಾತವೇದಃ ಸುಮಂತ್ರೇಣ ಪಶ್ಚಾದಷ್ಟೋತ್ತರಂ ಶತಮ್ ॥62॥

ಹುತ್ವಾ ಮಹಾವ್ಯಾಹೃತಿಭಿಶ್ಚಕ್ರಾದೀಂಸ್ತತ್ರ ತಾಪಯೇತ್ ।
ಸಹ್ಯಾನ್ಸುತಪ್ತಾನ್ಗುರುಣಾ ಮಂತ್ರವದ್ಧಾರಯೇದ್ಬುಧಃ ॥63॥

ಭುಜದ್ವಯೇ ಶಂಖಚಕ್ರೇ ಮೂರ್ಧ್ನಿ ಶಾರ್ಙ್ಗಶರೌ ತಥಾ ।
ಲಲಾಟೇ ತು ಗದಾ ಧಾರ್ಯಾ ಹೃದಯೇ ಖಡ್ಗಮೇವ ಚ ॥64॥

ಏವಂ ಧಾರ್ಯಾಣಿ ಪಂಚೈವ ವಿಷ್ಣುಭಕ್ತೈರ್ಮುಮುಕ್ಷುಭಿಃ ।
ಅಥವಾ ಭುಜಯೋಶ್ಚಕ್ರಶಂಖೌ ಚೈವ ಸುಲಕ್ಷಣೌ ॥65॥

ಏವಂ ಲಾಂಛನಯುಕ್ತಾ ಯೇ ಭಕ್ತಾಸ್ತೇ ವೈಷ್ಣವಾಃ ಸ್ಮೃತಾಃ ।
ತೈರೇವ ಲಭ್ಯಂ ತದ್ಬ್ರಹ್ಮ ಸದಾಚಾರಸಮನ್ವಿತೈಃ ॥66॥

ತಸ್ಮಿನ್ನೇವ ಮಮ ಪ್ರೀತಿಸ್ತತ್ಪ್ರಾಪ್ತಿಂ ಕಾಂಕ್ಷತೇ ಮನಃ ।
ಮಾತರ್ವಿಷ್ಣುಂ ವಿನಾಽನ್ಯೇಷು ವಾಂಛಾ ಕಾಚಿನ್ನ ಜಾಯತೇ ॥67॥

ಸದಾ ಚಿಂತಿಸುವರು. ಯಾವಾಗಲೂ ಭಗವಂತನನ್ನೇ ಧ್ಯಾನಮಾಡುವರು. ಭಗವಂತನಲ್ಲಿ ಭಕ್ತಿಯನ್ನು ಮಾಡುವ ವ್ಯಕ್ತಿಗಳು ಯದೃಚ್ಛಾಲಾಭಸಂತುಷ್ಟರಾಗಿ, ತಮ್ಮ ಪತ್ನಿಯರಲ್ಲಿಯೇ ಆಸಕ್ತರಾಗಿ, ರಾಗ, ಭಯ, ಕ್ರೋಧಗಳನ್ನು ತ್ಯಾಗಮಾಡಿರುವರು. ಇಂತಹ ಸುಗುಣಿಗಳಾದ ವ್ಯಕ್ತಿಗಳು ಭಗವಂತನ ಪಂಚಾಯುಧಗಳನ್ನು ಧರಿಸುತ್ತಾರೆ. ತಮ್ಮ ಶಾಖೋಕ್ತವಾದ ವಿಧಾನದಿಂದ ಅಗ್ನಿಯನ್ನು ಪ್ರತಿಷ್ಠಾಪಿಸಿ ಚಕ್ರಾದ್ಯಾಯುಧ ಮಂತ್ರಗಳಿಂದ ಹದಿನಾರು ಆಹುತಿಗಳನ್ನು ಕೊಟ್ಟು ಅನಂತರ ನಾರಾಯಣಾಷ್ಟಾಕ್ಷರ ಮಂತ್ರ ಮತ್ತು ಪುರುಷ ಸೂಕ್ತದಿಂದ ಹೋಮಿಸಬೇಕು. ಅನಂತರ 'ಜಾತವೇದಃ' ಎಂಬ ಮಂತ್ರದಿಂದ ನೂರೆಂಟು ಬಾರಿ ಅಗ್ನಿಯಲ್ಲಿ ಆಹುತಿಯನ್ನರ್ಪಿಸಿ ಮಹಾವ್ಯಾಹೃತಿ ಮಂತ್ರದಿಂದ ಚಕ್ರ, ಶಂಖ, ಗದಾ, ಶಾರ್ಂಗ ಮತ್ತು ಬಾಣ ಮುದ್ರೆಗಳನ್ನು ಯಥಾಯೋಗ್ಯವಾಗಿ ಕಾಯಿಸಿ, ಗುರುಗಳಿಂದ, ತಂದೆಯಿಂದ ಅಥವಾ ಶಿಷ್ಟರಾದ ಮಹಜ್ಜನರಿಂದ

ಸ್ಮರಾಮಿ ಶ್ಯಾಮಲಂ ವಿಷ್ಣುಂ ವದಾಮಿ ಹರಿಮಚ್ಯುತಮ್ ।
ತೇನೈವ ಮಾತರ್ಜೀವಾಮಿ ತದ್ಯೋಗೇ ಚಿಂತ್ಯತಾಂ ವಿಧಿಃ ॥68॥

ಶ್ರೀವರಾಹ ಉವಾಚ–

ಇತ್ಯುಕ್ತ್ವಾ ಮಾತರಂ ದೀನಾ ವಿರರಾಮಾಂಬುಜಾನನಾ ।
ತಚ್ಛ್ರುತ್ವಾ ಚಿಂತಯಾಮಾಸ ವಿಷ್ಣುಃ ಪ್ರೀತಃ ಕಥಂ ಭವೇತ್ ॥69॥

ಏತಸ್ಮಿನ್ನಂತರೇ ಕನ್ಯಾ ಅಗಸ್ತ್ಯೇಶಂ ಸಮರ್ಚ್ಯ ಚ ।
ಆಗತಾ ಧರಣೀಂ ದ್ರಷ್ಟುಂ ಸಹೈವ ಬಕುಲಸ್ರಜಾ ॥70॥

ಆಗತಾನ್ಬ್ರಾಹ್ಮಣಾನ್ಸಾಽಥ ಪೂಜಯಿತ್ವಾ ಸುಭೋಜನೈಃ ।
ದತ್ತ್ವಾಽಥ ದಕ್ಷಿಣಾಃ ಪೂರ್ಣಾ ವಸ್ತ್ರಾಲಂಕಾರಸಂಯುತಾಃ ॥71॥

ಆಶಿಷೌ ವಾಚಯಿತ್ವಾಥ ವಾಂಛಿತಾರ್ಥಸ್ಯ ಸಿದ್ಧಯೇ ।
ವಿಸೃಜ್ಯ ಬ್ರಾಹ್ಮಣಾನ್ಸರ್ವಾನಥಾಪೃಚ್ಛತ್ಸ್ವಯೋಷಿತಃ ॥72॥
ಪೂಜಯಿತ್ವಾ ಹ್ಯಗಸ್ತ್ಯೇಶಮಾಗತಾಸ್ತಾ ಮನಸ್ವಿನೀಃ ॥73॥

ಇತಿ ಪದ್ಮಾವತ್ಯುದಂತ ವಿಷ್ಣುಭಕ್ತಲಕ್ಷಣಾದಿವರ್ಣನಂ' ನಾಮ ಪಂಚಮೋಽಧ್ಯಾಯಃ

ಧಾರಣಮಾಡಿಸಿಕೊಳ್ಳಬೇಕು. ಭುಜಗಳಲ್ಲಿ ಶಂಖ ಚಕ್ರಗಳನ್ನು, ಶಾರ್ಙ ಮತ್ತು ಶರಗಳನ್ನು ತಲೆಯ ಮೇಲೆಯೂ, ಹಣೆಯಲ್ಲಿ ಗದಾಮುದ್ರೆ, ಹೃದಯದಲ್ಲಿ ಖಡ್ಗಮುದ್ರೆ ಗಳನ್ನು ವಿಷ್ಣುಭಕ್ತರು ಧರಿಸಬೇಕು. ಅಥವಾ ಎರಡೂ ಭುಜಗಳಲ್ಲಿ ಶಂಖಚಕ್ರಮುದ್ರೆಗಳನ್ನು ಧರಿಸಬೇಕು. ಇಂತಹ ತಪ್ತಮುದ್ರೆಗಳನ್ನು ಧರಿಸಿದ ಭಗವಂತನ ಶಂಖ-ಚಕ್ರಗಳಿಂದ ಲಾಂಛಿತರಾದವರನ್ನು ವಿಷ್ಣುಭಕ್ತರೆಂದು ತಿಳಿ.ಅವರಿಂದಲೇ ಮುಕ್ತಿಯು ಹೊಂದಲ್ಪಡುವದು. ಅಂತಹ ಭಕ್ತಪರಾಯಣನಾದ ವಿಷ್ಣುವನ್ನೇ ನಾನು ಪ್ರೀತಿಸುತ್ತಿದ್ದು, ನನ್ನ ಮನಸ್ಸು ಅವನನ್ನೇ ಬಯಸುತ್ತಿರುವದು. ಅವನನ್ನು ಬಿಟ್ಟು ಇತರರನ್ನು ನಾನು ಬಯಸುವದಿಲ್ಲ. ನೀಲವರ್ಣೋಪೇತನಾದ ಹರಿಯಿಂದಲೇ ನಾನು ಜೀವಿತಳಾಗುವೆನು. ಅವನ ಸಂಬಂಧವನ್ನು ಹೊಂದುವದರಲ್ಲಿ ವಿಚಾರವನ್ನು ಮಾಡಿರಿ' ಎಂದು ನುಡಿದಳು. ಧರಣಿಯು ಇದನ್ನು ಕೇಳಿ 'ವಿಷ್ಣುವು ಹೇಗೆ ಪ್ರೀತನಾದಾನು?' ಎಂದು ಚಿಂತಿಸಿದಳು. ಅದೇ ಹೊತ್ತಿಗೆ ಅಗಸ್ತ್ಯೇಶನ ಅಭಿಷೇಕಾರ್ಥವಾಗಿ ಹೋಗಿದ್ದ ಕನ್ಯೆಯರು ಬ್ರಾಹ್ಮಣರಿಂದ ಮತ್ತು ಬಕುಲೆಯಿಂದ ಸಮೇತರಾಗಿ ಅಲ್ಲಿಗೆ ಬಂದರು. ಬಂದಿರುವ ಬ್ರಾಹ್ಮಣರನ್ನು ಪೂಜಿಸಿ, ಭೋಜನ, ದಕ್ಷಿಣೆ, ವಸ್ತ್ರಾಲಂಕಾರಗಳಿಂದ ಅವರನ್ನು ತೃಪ್ತಿಪಡಿಸಿ, ಅವರಿಂದ ಆಶೀರ್ವಾದಪಡೆದು, ಅವರನ್ನು ಕಳುಹಿಸಿ, ಅಗಸ್ತ್ಯೇಶನನ್ನು ಪೂಜಿಸಿ ಬಂದಿದ್ದ ಕನ್ಯೆಯರನ್ನು ಹೀಗೆ ಕೇಳಿದಳು.

ಇಲ್ಲಿಗೆ ಪದ್ಮಾವತಿಯ ವೃತ್ತಾಂತ ವರ್ಣನವೆಂಬ ಆರನೆಯ ಅಧ್ಯಾಯವು ಪರಿಸಮಾಪ್ತವಾಯಿತು.

## ಅಥ ಸಪ್ತಮೋಽಧ್ಯಾಯಃ

ಧರಣ್ಯುವಾಚ–

'ಕೈಷಾ ಬ್ರೂತ ವರಾಃ ಕನ್ಯಾ ಯುಷ್ಮಾಭಿಃ ಸಂಗತಾ ಕುತಃ ।
ಕಿಮರ್ಥಮಾಗತಾ ಚೇಹ ಪೂಜ್ಯೇಷಾ ಪ್ರತಿಭಾತಿ ಮೇ' ॥1॥

ಕನ್ಯಕಾ ಊಚುಃ–

ಏಷಾ ದಿವ್ಯಾಂಗನಾ ದೇವಿ ತ್ವಯಿ ಕಾರ್ಯಾರ್ಥಮಾಗತಾ ।
ದೇವಾಲಯೇ ಸಂಗತೇಯಮಸ್ಮಾಭಿಃ ಶಿವಸನ್ನಿಧೌ ॥2॥

ಪೃಷ್ಟ್ವಾಽವದಚ್ಚ ಭವತೀಂ ದ್ರಷ್ಟುಮೇವಾಗತೇತಿ ವೈ ।
ಶಕ್ಯಾ ದ್ರಷ್ಟುಂ ರಾಜಗೃಹೇ ಮಯಾ ರಾಜ್ಞೀ ಸುಖೇನ ವಾ ॥3॥

ಏವಂ ಪೃಷ್ಟಾಸ್ತತೋ ಬ್ರೂಮಃ ಸಹಾಸ್ಮಾಭಿಶ್ಚ ಗಮ್ಯತಾಮ್ ।
ವಯಂ ತು ಧರಣೀದಾಸ್ಯೋ ಗಮಿಷ್ಯಾಮೋ ನೃಪಾಲಯಮ್ ॥4॥

ಇತ್ಯುಕ್ತಾಸ್ಮಾಭಿರಾಯಾತಾ ತ್ವತ್ಸಮೀಪಂ ವಸುಂಧರೇ ।
ಭವತ್ಯಾ ಪೃಚ್ಛತಾಮೇಷಾ ಕಿಮಿತ್ಯಾಗಮನಂ ತವ ॥5॥

ಶ್ರೀ ವರಾಹ ಉವಾಚ–

ಇತಿ ತಾಸಾಂ ವಚಃ ಶ್ರುತ್ವಾ ತಾಮಪೃಚ್ಛದ್ವಸುಂಧರಾ ॥6॥

ಧರಣ್ಯುವಾಚ–

## ಏಳನೆಯ ಅಧ್ಯಾಯ

ಧರಣಿಯು ಬಕುಲಾಮಾಲೆಯನ್ನು ನೋಡಿ 'ನಿಮ್ಮೊಡನೆ ಬಂದಿರುವ ಇವಳಾರು? ಪೂಜ್ಯಳಂತೆ ಕಾಣುತ್ತಿರುವ ಇವಳಿಲ್ಲಿಗೆ ಏತಕ್ಕೆ ಬಂದಿರುವಳು?' ಎಂದು ಪ್ರಶ್ನಿಸಿದಾಗ ಕನ್ಯೆಯರು 'ಅಗಸ್ತ್ಯೇಶನ ಸನ್ನಿಧಿಯಲ್ಲಿ ನಮಗೆ ಭೇಟಿಮಾಡಿದ ಇವಳು, 'ಧರಣೀದೇವಿಯೊಡನೆ ಕಾರ್ಯವಿರುವದು. ಅವಳನ್ನು ಅನಾಯಾಸವಾಗಿ ಕಾಣುವ ಬಗೆಯೆಂತು? ಎಂದು ನುಡಿದಾಗ 'ಧರಣೀದೇವಿಯ ದಾಸಿಯರಾದ ನಾವು ರಾಜಮಂದಿರಕ್ಕೆ ಹೊರಟಿರುವೆವು. ನಮ್ಮೊಡನೆ ಬಾ' ಎಂದು ಕರೆದುಕೊಂಡು ಬಂದಿರುವೆವು. ಅವಳ ಕಾರ್ಯವೇನೆಂದು ನೀನೇ ಕೇಳುವವಳಾಗು' ಎಂದು ತಿಳಿಸಿದರು.

ಕುತಸ್ತ್ವಾಮಾಗತಾ ದೇವಿ ಕಿಂ ವಾ ಕಾರ್ಯಂ ಮಯಾ ತವ ।
ಬ್ರೂಹಿ ಸತ್ಯಂ ಕರಿಷ್ಯಾಮಿ ತ್ವದಾಗಮನಕಾರಣಮ್ ॥7॥

ಬಕುಲಮಾಲಿಕೋವಾಚ–

ವೇಂಕಟಾದ್ರೇಃ ಸಮಾಯಾತಾ ನಾಮ್ನಾ ಬಕುಲಮಾಲಿಕಾ ॥8॥

ಸ್ವಾಮೀ ನಾರಾಯಣೋಽಸ್ಮಾಕಮಾಸ್ತೇ ಶ್ರೀವೇಂಕಟಾಚಲೇ ।
ಕದಾಚಿದ್ಧಯಮಾರುಹ್ಯ ಹಂಸಶುಕ್ಲಂ ಮನೋಜವಮ್ ॥9॥

ಮೃಗಯಾರ್ಥಂ ಗತೋ ರಾಜ್ಞೋ ವೇಂಕಟಾದ್ರೇಃ ಸಮೀಪತಃ ।
ವನಾನಿ ವಿಚರನ್ಕಾಲೇ ಶೋಭನೇ ಕುಸುಮಾಕರೇ ॥10॥

ಪಶ್ಯನ್ ಮೃಗಾನ್ಗಜಾನ್ಸಿಂಹಾನ್ಗವಯಾನ್ ಶರಭಾನ್ರುರೂನ್ ।
ಶುಕಾನ್ಪಾರಾವತಾನ್ಹಂಸಾನ್ ಪಕ್ಷಿಣೋಽನ್ಯಾನ್ವನಾಂತರೇ ॥11॥

ಗಜರಾಜಂ ತತ್ರ ಕಿಂಚಿದ್ಯೂಥಪಂ ಮದವರ್ಷಿಣಮ್ ।
ಕರೇಣುಸಹಿತಂ ತುಂಗಮನ್ವಗಚ್ಛತ್ಪುರೋತ್ತಮಃ ॥12॥

ವನಾದ್ವನಾಂತರಂ ಗತ್ವಾ ನೃಪಂ ಶಂಖಮುಪಾಗಮತ್ ।
ತಪಸ್ಯಂತಂ ಬೃಹಚ್ಛೈಲೇ ಪ್ರತಿಷ್ಠಾಪ್ಯ ಜನಾರ್ದನಮ್ ॥13॥

ಶ್ರೀಭೂಮಿಸಹಿತಂ ನಿತ್ಯಮರ್ಚಯಂತಂ ಚ ಭಕ್ತಿತಃ ।
ಶಂಖನಾಗಬಿಲಂ ನಾಮ ಸರಃ ಪಾವನಮುತ್ತಮಮ್ ॥14॥

ಆಗ ಧರಣಿಯು 'ನೀನಾರು? ಎಲ್ಲಿಂದ ಬಂದಿರುವಿ? ನನ್ನ ಬಳಿ ನಿನ್ನ ಕಾರ್ಯವಾವದು ತಿಳಿಸು. ಅದನ್ನು ಪೂರ್ಣಗೊಳಿಸುವೆನು' ಎಂದು ನುಡಿದಳು. ಆಗ ಬಕುಲಾದೇವಿಯು 'ವೇಂಕಟಾದ್ರಿಯಿಂದ ಬಂದಿರುವ ನನ್ನ ಹೆಸರು ಬಕುಲಾಮಾಲಿಕೆ. ವೇಂಕಟಾಚಲದಲ್ಲಿರುವ ನಾರಾಯಣನೇ ನಮ್ಮ ಸ್ವಾಮಿಯಾಗಿರುವನು. ಅವನು ಒಂದು ಬಾರಿ ನಾನಾ ಪಕ್ಷಿ, ಪಶು, ಮರ ಗಿಡಗಳಿಂದಾವೃತವಾದ ವೇಂಕಟಾದ್ರಿಯ ಸಮೀಪದ ಅರಣ್ಯದಲ್ಲಿ ಬೇಟೆಗೆಂದು ಹೋದಾಗ ಆನೆಯೊಂದನ್ನು ಬೆನ್ನತ್ತಿ ವನದಿಂದ ವನಕ್ಕೆ ಹೋದನು. ಅಲ್ಲಿ ಶಂಖನಾಗ ಬಿಲವೆಂಬ ಸರೋವರದ ದಡದಲ್ಲಿ ಒಂದು ದೊಡ್ಡ ಶಿಲೆಯಲ್ಲಿ ಶ್ರೀಭೂದೇವಿಯರಿಂದ ಸಹಿತನಾದ ಪರಮಾತ್ಮನನ್ನು ಪ್ರತಿಷ್ಠಾಪಿಸಿ ಪೂಜಿಸುತ್ತಿದ್ದ ಶಂಖನೆಂಬ ರಾಜನನ್ನು ನೋಡಿ ಶ್ರೀನಿವಾಸನು ಕುರುರೆಯಿಂದಿಳಿದು, ರಾಜವೇಷವನ್ನು ಧರಿಸಿ, ತಪಸ್ಸನ್ನಾಚರಿಸುತ್ತಿದ್ದ ಅವನನ್ನು ಸಮೀಪಿಸಿ

ತತ್ಸರಸ್ತೀರಮಾಸಾದ್ಯ ತುರಂಗಾವದವರುಹ್ಯ ಚ ।
ರಾಜವೇಷಂ ಸಮಾಸಾದ್ಯ ತಮಪೃಚ್ಛನ್ನೃಪೋತ್ತಮಮ್ ॥15॥

ಕ್ರಿಯತೇ ಕಿಂ ನೃಪಶ್ರೇಷ್ಠ ಪಾದೇಽಸ್ಮಿನ್ ಶೇಷಭೂಭೃತಃ ॥16॥

ಶಂಖ ಉವಾಚ–

ಅಹಂ ಹೈಹಯದೇಶೀಯಃ ಪುತ್ರಃ ಶ್ವೇತಸ್ಯ ಭೂಭೃತಃ ।
ಮಹಾವಿಷ್ಣೋಃ ಪ್ರೀತಯೇಽತ್ರ ಕೃತವಾನಖಿಲಾನ್ಕ್ರತೂನ್ ॥17॥

ಅದರ್ಶನಾನ್ಮಹಾವಿಷ್ಣೋರ್ನಿರ್ವಿಣ್ಣೋಽಹಂ ನೃಪಾತ್ಮಜ ।
ತದಾನೀಮವದದ್ದಿವ್ಯಾ ವಾಣೀ ಸರ್ವಾರ್ತಿನಾಶಿನೀ ॥18॥

ರಾಜನ್ನಾತ್ರ ಭವಿಷ್ಯಾಮಿ ಪ್ರತ್ಯಕ್ಷಸ್ತೇ ವಚಃ ಶೃಣು ।
ಗಚ್ಛ ನಾರಾಯಣಾದ್ರಿಂ ತ್ವಂ ತಪಃ ಕುರ್ವಿತಿ ಮಾಂ ಸ್ಫುಟಮ್ ॥19॥

ತತೋ ದೇಶಮಹಂ ತ್ಯಕ್ತ್ವಾ ತಪಸಾಽಽರಾಧಯಾಮ್ಯಹಮ್ ।
ಅತ್ರ ದೇವಂ ನೃಪಾಚಿಂತ್ಯಂ ಪ್ರತಿಷ್ಠಾಪ್ಯ ಶ್ರಿಯಃ ಪತಿಮ್ ॥20॥

ಅಗಸ್ತ್ಯಾನುಗ್ರಹಾನ್ನಿತ್ಯಮರ್ಚಯಾಮಿ ವಿಧಾನತಃ ।
ಇತಿ ತಸ್ಯ ವಚಃ ಶ್ರುತ್ವಾ ಸೋತ್ಪ್ರಾಸಂ ಪ್ರಾಹ ತಂ ವಿಭುಃ ॥21॥

ಗಚ್ಛ ನಾರಾಯಣಾದ್ರಿಂ ತ್ವಮಸ್ಯ ಪಾದೇ ಕಿಮಾಸ್ಯತೇ ।
ಆರುಹ್ಯಾನೇನ ಮಾರ್ಗೇಣ ಪಶ್ಚಿಮೇ ಶಿಖರೇ ಸ್ಥಿತಮ್ ॥22॥

ಪ್ರಣಮ್ಯ ವಿಷ್ವಕ್ಸೇನಂ ತ್ವಂ ಬಾಲಂ ನ್ಯಗ್ರೋಧಮೂಲತಃ ।

'ನೀನಾರು? ಏನುಮಾಡುತ್ತಿರುವಿ? ಎಂದು ಪ್ರಶ್ನಿಸಿದನು. ಆಗ ಶಂಖನು 'ನಾನು ಹೈಹಯ ಕುಲೋತ್ಪನ್ನನಾದ ಶ್ವೇತನ ಮಗನಾದ ಶಂಖನೆಂಬ ರಾಜನು. ಭಗವಂತನ ಪ್ರೀತ್ಯರ್ಥವಾಗಿ ನಾನಾ ದಾನ, ತೀರ್ಥಯಾತ್ರೆ, ತಪಸ್ಸು, ವ್ರತ–ನಿಯಮಾದಿಗಳನ್ನು ಆಚರಿಸಿದರೂ ಭಗವಂತನನ್ನು ಕಾಣಲಿಲ್ಲ. ಇದರಿಂದ ದುಃಖಿತನಾದ ನಾನು ನಿರ್ವಿಣ್ಣನಾಗಿದ್ದಾಗ ಭಗವಂತನು 'ನಾನು ಇಲ್ಲಿ ನಿನಗೆ ಪ್ರತ್ಯಕ್ಷನಾಗುವದಿಲ್ಲ. ನಾರಾಯಣಾದ್ರಿಯನ್ನು ಕುರಿತು ಹೋಗಿ ತಪಸ್ಸನ್ನಾಚರಿಸು. ಅಲ್ಲಿ ನನ್ನ ದರ್ಶನವಾಗುವದು' ಎಂದು ನುಡಿದನು. ಅದರನುಸಾರವಾಗಿ ನಾನಿಲ್ಲಿ ಬಂದು ಶ್ರೀಭೂಮಿಯಿಂದ ಯುತನಾದ ಶ್ರೀನಿವಾಸನನ್ನು ಅಗಸ್ತ್ಯರ ಅನುಗ್ರಹದಿಂದ ಆರಾಧಿಸುತ್ತಿರುವೆನು.' ಎಂದು ತಿಳಿಸಿದನು. ಆಗ ಭಗವಂತನು 'ಪರ್ವತದ ಕೆಳಭಾಗದಲ್ಲಿದ್ದು ಏನು ಮಾಡುವೆ?

ಸ್ವಾಮಿಪುಷ್ಕರಿಣೀಂ ಗತ್ವಾ ಸ್ನಾತ್ವಾ ತೀರೇಽಥ ಪಶ್ಚಿಮೇ ॥23॥

ಅಶ್ವತ್ಥಂ ತತ್ರ ವಲ್ಮೀಕಂ ದ್ರಕ್ಷ್ಯಸೇ ನೃಪನಂದನ ।
ತಯೋರ್ಮಧ್ಯಂ ಸಮಾಸಾದ್ಯ ತಪಃ ಕುರ್ವಿತ್ಯಚೋದಯತ್ ॥24॥

ಕಶ್ಚಿಚ್ಛ್ವೇತೋ ವರಾಹೋಽಸ್ಮಿನ್ವಲ್ಮೀಕೇ ಚರತಿ ಧ್ರುವಮ್ ।
ಸ ತು ಪುಣ್ಯವತಾಮೇವ ದರ್ಶನಂ ಯಾತಿ ಭೂಪತೇ ॥25॥

ಶ್ರೀವಹಾರ ಉವಾಚ-

ಇತ್ಯಾದಿಶ್ಯ ಹಯಾರೂಢೋ ಜಗಾಮ ಮೃಗಯಾಂ ವಿಭುಃ ।
ಚರನ್ವನಾದ್ವನಂ ಸುಭ್ರೂಃ ಸಮಾಸಾದ್ಯಾರಣೀಂ ನದೀಮ್ ॥26॥

ಅವರುಹ್ಯ ಹಯಾತ್ತತ್ರ ವಿಚಚಾರ ತಟೇ ಶುಭೇ ।
ವನಾಂತಾದಾಗತೋ ವಾಯುಃ ಪದ್ಮಕಲ್ಹಾರಶೀತಲಃ ।
ಶ್ರಮಾಪನಯನೋ ಮಂದಂ ಸಿಷೇವೇ ಪುರುಷೋತ್ತಮಮ್ ॥27॥

ತರವಃ ಪುಷ್ಪವರ್ಷಾಣಿ ವಿಕಿರಂತಃ ಸಿಷೇವಿರೇ ।
ಏವಂ ಚ ವಿಚರನ್ ದೇವಃ ಪುಷ್ಪಭಾರನತಾನ್ ತರೂನ್ ॥28॥

ವಿಚಿನ್ವನ್ಗಜರಾಜಂ ತಂ ಪುಷ್ಪಲಾವೀರ್ದದರ್ಶ ಹ ।
ಕನ್ಯಾಃ ಸುವೇಷಾ ರುಚಿರಾ ಮೋಘೇಷ್ವಿವ ಶತಹ್ರದಾ ॥29॥

ತಾಸಾಂ ಮಧ್ಯಗತಾಂ ತನ್ವೀಂ ದದರ್ಶಾತಿಮನೋಹರಾಮ್ ।
ಲಕ್ಷ್ಮೀಸಮಾಂ ಹೇಮವರ್ಣಾಂ ತಸ್ಯಾಂ ಸಕ್ತಮನಾ ಅಭೂತ್ ॥30

ವೇಂಕಟಾಚಲವನ್ನೇರಿ ಮೇಲಿರುವ ಸ್ವಾಮಿ ಪುಷ್ಕರಿಣೀಯ ಪಶ್ಚಿಮ ದಡದಲ್ಲಿ ಒಂದು ಅಶ್ವತ್ಥವೃಕ್ಷವಿದ್ದು ಅದರ ಬುಡದಲ್ಲಿ ಹುತ್ತೊಂದಿರುವದು. ನೀನು ಅದರ ಬಳಿಯೇ ತಪಸ್ಸನ್ನಾಚರಿಸು. ಅಲ್ಲಿ ಒಂದು ಶ್ವೇತವರಾಹವಿದ್ದು ಪುಣ್ಯವಂತರಿಗೆ ಮಾತ್ರ ಅವನ ದರ್ಶನವಾಗುವದು' ಎಂದು ಅವನನ್ನು ಅನುಗ್ರಹಿಸಿ, ಶ್ರೀನಿವಾಸನು ಪುನಃ ಬೇಟೆಗಾಗಿ ವನಗಳಲ್ಲಿ ಸಂಚರಿಸಿದನು. ನಾನಾವಿಧವಾದ ಪುಷ್ಪಗಳ ಸುವಾಸನೆಯಿಂದ ಕೂಡಿದ ಮಂದವಾಯು, ಹಸಿರು ಕಾನನಗಳಲ್ಲಿ ಸಂತೋಷಿಸುತ್ತಾ ಬಂದ ವೇಂಕಟೇಶನು ಗಜರಾಜನನ್ನು ಬೆನ್ನುಹತ್ತಿ ಬಂದು ಅಲ್ಲಿ ಹೂವುಗಳನ್ನು ಬಿಡಿಸುತ್ತಿದ್ದ ಕನ್ಯೆಯರನ್ನು ಮತ್ತು ಅವರ ಮಧ್ಯದಲ್ಲಿ ಲಕ್ಷ್ಮೀಯಂತೆ ಕಂಗೊಳಿಸುತ್ತಿದ್ದ ಆಕಾಶರಾಜನ ಮಗಳಾದ ಪದ್ಮಾವತಿಯನ್ನು ನೋಡಿ ಅವಳಲ್ಲಿಯೇ ಅವನ ಮನಸ್ಸು ಆಸಕ್ತವಾಯಿತು.

ತತ್ಸರಸ್ತೀರಮಾಸಾದ್ಯ ತುರಂಗಾವದವರುಹ್ಯ ಚ ।
ರಾಜವೇಷಂ ಸಮಾಸಾದ್ಯ ತಮಪೃಚ್ಛನ್ನೃಪೋತ್ತಮಮ್ ॥15॥

ಕ್ರಿಯತೇ ಕಿಂ ನೃಪಶ್ರೇಷ್ಠ ಪಾದೇಽಸ್ಮಿನ್ ಶೇಷಭೂಭೃತಃ ॥16॥

ಶಂಖ ಉವಾಚ–

ಅಹಂ ಹೈಹಯದೇಶೀಯಃ ಪುತ್ರಃ ಶ್ವೇತಸ್ಯ ಭೂಭೃತಃ ।
ಮಹಾವಿಷ್ಣೋಃ ಪ್ರೀತಯೇಽತ್ರ ಕೃತವಾನಖಿಲಾನ್ಕ್ರತೂನ್ ॥17॥

ಅದರ್ಶನಾನ್ಮಹಾವಿಷ್ಣೋರ್ನಿರ್ವಿಣ್ಣೋಽಹಂ ನೃಪಾತ್ಮಜ ।
ತದಾನೀಮವದದ್ದಿವ್ಯಾ ವಾಣೀ ಸರ್ವಾರ್ತಿನಾಶಿನೀ ॥18॥

ರಾಜನ್ನಾತ್ರ ಭವಿಷ್ಯಾಮಿ ಪ್ರತ್ಯಕ್ಷಸ್ತೇ ವಚಃ ಶೃಣು ।
ಗಚ್ಛ ನಾರಾಯಣಾದ್ರಿಂ ತ್ವಂ ತಪಃ ಕುರ್ವಿತಿ ಮಾಂ ಸ್ಫುಟಮ್ ॥19।

ತತೋ ದೇಶಮಹಂ ತ್ಯಕ್ತ್ವಾ ತಪಸಾಽಽರಾಧಯಾಮ್ಯಹಮ್ ।
ಅತ್ರ ದೇವಂ ನೃಪಾಚಿಂತ್ಯಂ ಪ್ರತಿಷ್ಠಾಪ್ಯ ಶ್ರಿಯಃ ಪತಿಮ್ ॥20॥

ಅಗಸ್ತ್ಯಾನುಗ್ರಹಾನ್ನಿತ್ಯಮರ್ಚಯಾಮಿ ವಿಧಾನತಃ ।
ಇತಿ ತಸ್ಯ ವಚಃ ಶ್ರುತ್ವಾ ಸೋತ್ಪ್ರಾಸಂ ಪ್ರಾಹ ತಂ ವಿಭುಃ ॥21॥

ಗಚ್ಛ ನಾರಾಯಣಾದ್ರಿಂ ತ್ವಮಸ್ಯ ಪಾದೇ ಕಿಮಾಸ್ಯತೇ ।
ಆರುಹ್ಯಾನೇನ ಮಾರ್ಗೇಣ ಪಶ್ಚಿಮೇ ಶಿಖರೇ ಸ್ಥಿತಮ್ ॥22॥

ಪ್ರಣಮ್ಯ ವಿಷ್ವಕ್ಸೇನಂ ತ್ವಂ ಬಾಲಂ ನ್ಯಗ್ರೋಧಮೂಲತಃ ।

'ನೀನಾರು? ಏನುಮಾಡುತ್ತಿರುವಿ? ಎಂದು ಪ್ರಶ್ನಿಸಿದನು. ಆಗ ಶಂಖನು 'ನಾನು ಹೈಹಯ ಕುಲೋತ್ಪನ್ನನಾದ ಶ್ವೇತನ ಮಗನಾದ ಶಂಖನೆಂಬ ರಾಜನು. ಭಗವಂತನ ಪ್ರೀತ್ಯರ್ಥವಾಗಿ ನಾನಾ ದಾನ, ತೀರ್ಥಯಾತ್ರೆ, ತಪಸ್ಸು, ವ್ರತ–ನಿಯಮಾದಿಗಳನ್ನು ಆಚರಿಸಿದರೂ ಭಗವಂತನನ್ನು ಕಾಣಲಿಲ್ಲ. ಇದರಿಂದ ದುಃಖಿತನಾದ ನಾನು ನಿರ್ವಿಣ್ಣನಾಗಿದ್ದಾಗ ಭಗವಂತನು 'ನಾನು ಇಲ್ಲಿ ನಿನಗೆ ಪ್ರತ್ಯಕ್ಷನಾಗುವದಿಲ್ಲ. ನಾರಾಯಣಾದ್ರಿಯನ್ನು ಕುರಿತು ಹೋಗಿ ತಪಸ್ಸನ್ನಾಚರಿಸು. ಅಲ್ಲಿ ನನ್ನ ದರ್ಶನವಾಗುವದು' ಎಂದು ನುಡಿದನು. ಅದರನುಸಾರವಾಗಿ ನಾನಿಲ್ಲಿ ಬಂದು ಶ್ರೀಭೂಮಿಯಿಂದ ಯುತನಾದ ಶ್ರೀನಿವಾಸನನ್ನು ಅಗಸ್ತ್ಯರ ಅನುಗ್ರಹದಿಂದ ಆರಾಧಿಸುತ್ತಿರುವೆನು.' ಎಂದು ತಿಳಿಸಿದನು. ಆಗ ಭಗವಂತನು 'ಪರ್ವತದ ಕೆಳಭಾಗದಲ್ಲಿದ್ದು ಏನು ಮಾಡುವೆ?

ಸ್ವಾಮಿಪುಷ್ಕರಿಣೀಂ ಗತ್ವಾ ಸ್ನಾತ್ವಾ ತೀರೇಽಥ ಪಶ್ಚಿಮೇ ॥23॥

ಅಶ್ವತ್ಥಂ ತತ್ರ ವಲ್ಮೀಕಂ ದ್ರಕ್ಷ್ಯಸೇ ನೃಪನಂದನ ।
ತಯೋರ್ಮಧ್ಯಂ ಸಮಾಸಾದ್ಯ ತಪಃ ಕುರ್ವಿತ್ಯಚೋದಯತ್ ॥24॥

ಕಶ್ಚಿಚ್ಛ್ವೇತೋ ವರಾಹೋಽಸ್ಮಿನ್ವಲ್ಮೀಕೇ ಚರತಿ ಧ್ರುವಮ್ ।
ಸ ತು ಪುಣ್ಯವತಾಮೇವ ದರ್ಶನಂ ಯಾತಿ ಭೂಪತೇ ॥25॥

ಶ್ರೀವಹಾರ ಉವಾಚ–

ಇತ್ಯಾದಿಶ್ಯ ಹಯಾರೂಢೋ ಜಗಾಮ ಮೃಗಯಾಂ ವಿಭುಃ ।
ಚರನ್ವನಾದ್ವನಂ ಸುಭ್ರೂಃ ಸಮಾಸಾದ್ಯಾರಣೀಂ ನದೀಮ್ ॥26॥

ಆವರುಹ್ಯ ಹಯಾತ್ತತ್ರ ವಿಚಚಾರ ತಟೇ ಶುಭೇ ।
ವನಾಂತಾದಾಗತೋ ವಾಯುಃ ಪದ್ಮಕಲ್ಹಾರಶೀತಲಃ ।
ಶ್ರಮಾಪನಯನೋ ಮಂದಂ ಸಿಷೇವೇ ಪುರುಷೋತ್ತಮಮ್ ॥27॥

ತರವಃ ಪುಷ್ಪವರ್ಷಾಣಿ ವಿಕಿರಂತಃ ಸಿಷೇವಿರೇ ।
ಏವಂ ಚ ವಿಚರನ್ ದೇವಃ ಪುಷ್ಪಭಾರನತಾನ್ ತರೂನ್ ॥28॥

ವಿಚಿನ್ವನ್ಗಜರಾಜಂ ತಂ ಪುಷ್ಪಲಾವೀರ್ದದರ್ಶ ಹ ।
ಕನ್ಯಾಃ ಸುವೇಷಾ ರುಚಿರಾ ಮೋಘೇಷ್ವಿವ ಶತಹ್ರದಾ ॥29॥

ತಾಸಾಂ ಮಧ್ಯಗತಾಂ ತನ್ವೀಂ ದದರ್ಶಾತಿಮನೋಹರಾಮ್ ।
ಲಕ್ಷ್ಮೀಸಮಾಂ ಹೇಮವರ್ಣಾಂ ತಸ್ಯಾಂ ಸಕ್ತಮನಾ ಅಭೂತ್ ॥30

ವೇಂಕಟಾಚಲವನ್ನೇರಿ ಮೇಲಿರುವ ಸ್ವಾಮಿ ಪುಷ್ಕರಿಣೀಯ ಪಶ್ಚಿಮ ದಡದಲ್ಲಿ ಒಂದು ಅಶ್ವತ್ಥವೃಕ್ಷವಿದ್ದು ಅದರ ಬುಡದಲ್ಲಿ ಹುತ್ತೊಂದಿರುವದು. ನೀನು ಅದರ ಬಳಿಯೇ ತಪಸ್ಸನ್ನಾಚರಿಸು. ಅಲ್ಲಿ ಒಂದು ಶ್ವೇತವರಾಹವಿದ್ದು ಪುಣ್ಯವಂತರಿಗೆ ಮಾತ್ರ ಅವನ ದರ್ಶನವಾಗುವದು' ಎಂದು ಅವನನ್ನು ಅನುಗ್ರಹಿಸಿ, ಶ್ರೀನಿವಾಸನು ಪುನಃ ಬೇಟೆಗಾಗಿ ವನಗಳಲ್ಲಿ ಸಂಚರಿಸಿದನು. ನಾನಾವಿಧವಾದ ಪುಷ್ಪಗಳ ಸುವಾಸನೆಯಿಂದ ಕೂಡಿದ ಮಂದವಾಯು, ಹಸಿರು ಕಾನನಗಳಲ್ಲಿ ಸಂತೋಷಿಸುತ್ತಾ ಬಂದ ವೇಂಕಟೇಶನು ಗಜರಾಜನನ್ನು ಬೆನ್ನುಹತ್ತಿ ಬಂದು ಅಲ್ಲಿ ಹೂವುಗಳನ್ನು ಬಿಡಿಸುತ್ತಿದ್ದ ಕನ್ಯೆಯರನ್ನು ಮತ್ತು ಅವರ ಮಧ್ಯದಲ್ಲಿ ಲಕ್ಷ್ಮೀಯಂತೆ ಕಂಗೊಳಿಸುತ್ತಿದ್ದ ಆಕಾಶರಾಜನ ಮಗಳಾದ ಪದ್ಮಾವತಿಯನ್ನು ನೋಡಿ ಅವಳಲ್ಲಿಯೇ ಅವನ ಮನಸ್ಸು ಆಸಕ್ತವಾಯಿತು.

ತಾಂ ಗೃಧ್ನುರಾಹ ತಾಃ ಕನ್ಯಾಃ ಕೇಯಮಿತ್ಯೇವ ಪುರುಷಥಃ ।
ಉಕ್ತಸ್ತಾಭಿರಿಯಂ ಕನ್ಯಾ ವಿಯದ್ರಾಜ್ಞೋ ಮಹಾಬಲ ॥31॥

ಇದಂ ಶ್ರುತ್ವಾ ವಚಸ್ತಾಸಾಂ ಹಯಮಾರುಹ್ಯ ವೇಗವಾನ್ ।
ಅಜಗಾಮಾಶು ಭಗವಾನ್ಸ್ವಾಲಯಂ ರುಚಿರಂ ಗಿರಿಮ್ ॥32॥

ತತ್ರ ಸ್ವಾಲಯಮಾಸಾದ್ಯ ಸ್ವಾಮಿಪುಷ್ಕರಿಣೀತಟೇ ।
ಮಾಮಾಹೂಯಾವದದ್ದೇವೋ ಹಲಾ ಬಕುಲಮಾಲಿಕೇ ॥33॥

ವಿಯದ್ರಾಜಪುರಂ ಗತ್ವಾ ಪ್ರವಿಶ್ಯಾಂತಃಪುರಂ ಸಖಿ ।
ತತ್ಪತ್ನೀಂ ಧರಣೀಂ ಪ್ರಾಪ್ಯ ಪೃಷ್ಟ್ವಾ ಕುಶಲಮೇವ ಚ ॥34॥

ಯಾಚಸ್ವ ತನಯಾಂ ತಸ್ಯಾ ರುಚಿರಾಂ ಕಮಲಾಲಯಾಮ್ ।
ರಾಜ್ಞೋಽಭಿಮತಮಾಜ್ಞಾಯ ಶೀಘ್ರಮಾಗಚ್ಛ ಭಾಮಿನಿ ॥35॥

ಇತ್ಥಂ ದೇವೇನ ಚಾಜ್ಞಪ್ತಾ ದೇವಿ ತ್ವದ್ಗೃಹಮಾಗತಾ ।
ಯಥೋಚಿತಂ ಕುರುಷ್ವೇಹ ರಾಜ್ಞಾ ಮಂತ್ರಿಯುತೇನ ಚ ॥36॥

ಕನ್ಯಯಾ ಚ ವಿಚಾರ್ಯೈವ ಪ್ರೋಚ್ಯತಾಮುತ್ತರಂ ವಚಃ ॥37॥

ಶ್ರೀವರಾಹ ಉವಾಚ–

ಅಥ ತಸ್ಯಾ ವಚಃ ಶ್ರುತ್ವಾ ಪ್ರೀತಾ ರಾಜ್ಞಾ ಬಭೂವ ಹ ।
ಆಹೂಯಾಕಾಶರಾಜಂ ತಮುಪೇತ್ಯ ಕಮಲಾಲಯಾಮ್ ॥38॥

ಮಂತ್ರಿಮಧ್ಯೇಽವದದ್ದೇವೀ ವಚನಂ ಬಕುಲಾಸ್ರಜಃ ।

ಅವಳ ವೃತ್ತಾಂತವನ್ನು ತಿಳಿದುಕೊಂಡ ನನ್ನ ಸ್ವಾಮಿಯು ಮನೆಯಲ್ಲಿ ನನ್ನ ಬಳಿ ಬಂದು 'ನೀನು ಆಕಾಶರಾಜನ ಪಟ್ಟಣಕ್ಕೆ ಹೋಗಿ ಅಲ್ಲಿ ಧರಣೀ ದೇವಿಯನ್ನು ಹೊಂದಿ, ಅವಳ ಕುಶಲವನ್ನು ವಿಚಾರಿಸಿ, ನನಗೋಸ್ಕರವಾಗಿ ಕನ್ಯೆಯನ್ನು ಯಾಚಿಸು. ರಾಜನ ಅಭಿಮತವನ್ನು ಹೊಂದಿ ಶೀಘ್ರದಲ್ಲಿ ಹಿಂದಿರುಗಿ ಬಾ' ಎಂದಾಜ್ಞಾಪಿಸಿದನು. ಅದರಂತೆ ನಾನು ಕನ್ಯಾಯಾಚನಾರ್ಥವಾಗಿ ಬಂದಿರುವೆನು. ಶೀಘ್ರದಲ್ಲಿ ರಾಜನನ್ನು ವಿಚಾರಿಸಿ ಯಥೋಚಿತ ವಾದದ್ದನ್ನು ಮಾಡು' ಎಂದು ಹೇಳಿದಳು. ಅವಳ ಮಾತನ್ನು ಕೇಳಿದ ಧರಣೀದೇವಿಯು ಸಂತುಷ್ಟಳಾಗಿ ಆಕಾಶರಾಜನಿಗೆ ಬಕುಲೆಯ ವೃತ್ತಾಂತವನ್ನು ಮತ್ತು ಅವಳ ಆಗಮನದ ಕಾರಣವನ್ನು ತಿಳಿಸಿದಳು. ಆಗ ಮಂತ್ರಿಗಳಿಂದ ಪರಿವೃತನಾಗಿದ್ದ ಆಕಾಶರಾಜನು ಸಭೆಯಲ್ಲಿ

ಶ್ರುತ್ವಾ ಪ್ರೀತೋಽವದದ್ರಾಜಾ ಮಂತ್ರಿಣಃ ಸಪುರೋಹಿತಾನ್ ॥39॥

ಆಕಾಶರಾಜ ಉವಾಚ-

ಕನ್ಯಾ ತ್ವಯೋನಿಜಾ ದಿವ್ಯಾ ಸುಭಗಾ ಕಮಲಾಲಯಾ ।
ಅರ್ಥಿತಾ ದೇವದೇವೇನ ವೇಂಕಟಾದ್ರಿನಿವಾಸಿನಾ ॥40॥

ಪೂರ್ಣೋ ಮನೋರಥೋ ಮೇಽದ್ಯ ಬ್ರೂತ ಕಿಂ ಸಮ್ಮತಂ ತುವಃ।
ಶ್ರುತ್ವಾ ಮಂತ್ರಿಗಣಾಸ್ಸರ್ವೇ ರಾಜ್ಞೋ ವಚನಮುತ್ತಮಮ್ ॥41॥

ಪ್ರೋಚುಃ ಸುಪ್ರೀತಮನಸೋ ವಿಯದ್ರಾಜಂ ಮಹೀಪತಿಮ್ ।
ವಯಂ ಕೃತಾರ್ಥಾ ರಾಜೇಂದ್ರ ಕುಲಂ ಸರ್ವೋನ್ನತಂ ಭವೇತ್॥

ಭವತ್ಕನ್ಯೇಯಮತುಲಾ ಶ್ರಿಯಾ ಸಹ ರಮಿಷ್ಯತಿ ॥43॥

ಅಯಂ ವಸಂತಃ ಶ್ರೀಮಾಂಶ್ಚ ಶುಭಂ ಶೀಘ್ರಂ ವಿಧೀಯತಾಮ್ ॥44॥

ಆಹೂಯ ಧಿಷಣಂ ಲಗ್ನಂ ವಿವಾಹಾರ್ಥಂ ವಿಧೀಯತಾಮ್ ॥45॥

ತಥಾಸ್ತ್ವಿತ್ಯಾಹ್ವಯಾಮಾಸ ಸುರಲೋಕಾದ್ಬೃಹಸ್ಪತಿಮ್ ।
ಪಪ್ರಚ್ಛ ಕನ್ಯಾವರಯೋರ್ವಿವಾಹಾರ್ಥಂ ನರೇಶ್ವರ ॥46॥

ರಾಜೋವಾಚ-

ಕನ್ಯಯಾ ಜನ್ಮನಕ್ಷತ್ರಂ ಮೃಗಶೀರ್ಷಮಿತಿಸ್ಮೃತಮ್ ।
ದೇವಸ್ಯ ಶ್ರವಣರ್ಕ್ಷಂ ತು ತಯೋರ್ಯೋಗೋ ವಿಚಾರ್ಯತಾಮ್ ॥

ಎಲ್ಲರನ್ನುದ್ದೇಶಿಸಿ, 'ಅಯೋನಿಜೆಯಾದ ನನ್ನ ಮಗಳಾದ ಪದ್ಮಾವತಿಯನ್ನು ವೇಂಕಟಾದ್ರಿನಿವಾಸಿಯಾದ ದೇವದೇವನಾದ ಶ್ರೀನಿವಾಸನು ಬಯಸಿರುವನು. ನನ್ನ ಮನೋರಥವು ಪೂರ್ಣವಾಯಿತೆಂದು ತಿಳಿದಿರುವೆನು. ಇದು ನಿಮಗೆ ಸಮ್ಮತವೇ? ಎಂದು ಪ್ರಶ್ನಿಸಿದಾಗ ಎಲ್ಲರೂ ಸಂತೋಷದಿಂದ 'ನಾವೆಲ್ಲರೂ ಸಹ ನಿನ್ನ ಸಂಗದಿಂದಲೇ ಧನ್ಯರಾದೆವು. ನಿನ್ನ ಕುಲವು ಸರ್ವೋನ್ನತವಾಗುವದು. ನಿನ್ನ ಮಗಳು ಪರಮಾತ್ಮನ ಪಾಣಿಗ್ರಹಣವನ್ನು ಮಾಡಿ ಲಕ್ಷ್ಮಿಯಂತೆ ಕಂಗೊಳಿಸುವಳು. ಈ ವಸಂತವು ವಿವಾಹಕ್ಕೆ ಯೋಗ್ಯವಾಗಿದ್ದು, ದೇವಗುರುಗಳನ್ನು ಆಹ್ವಾನಿಸಿ, ವಿವಾಹ ಮುಹೂರ್ತವನ್ನು ನಿಶ್ಚಯಿಸು' ಎಂದು ಹೇಳಿದರು. ಆಗ ಆಕಾಶರಾಜನು ಇದಕ್ಕೆ ಸಮ್ಮತಿಸಿ ಬೃಹಸ್ಪತ್ಯಾಚಾರ್ಯರನ್ನು ಕರೆಯಿಸಿ, ವಿವಾಹ ಮೇಲನಾರ್ಥವಾಗಿ ಕನ್ಯೆಯ ವಿವರವನ್ನು ಕೊಡುತ್ತಾ 'ಕನ್ಯೆಯು ಮೃಗಶಿರಾ ನಕ್ಷತ್ರದಲ್ಲಿ ಜನಿಸಿದ್ದು, ಶ್ರೀನಿವಾಸನದ್ದು ಶ್ರವಣ ನಕ್ಷತ್ರ

ಶ್ರುತ್ವಾಽಬ್ರವೀತ್ತಧಿಷಣಸ್ತಯೋರುತ್ತರಫಲ್ಗುನೀ ।
ಸಮ್ಮತಾ ಸುಖವೃದ್ಧ್ಯರ್ಥಂ ಪ್ರೋಚ್ಯತೇ ದೈವಚಿಂತಕೈಃ ॥48॥

ತಯೋರುತ್ತರ ಫಲ್ಗುನ್ಯಾಂ ವಿವಾಹಃ ಕ್ರಿಯತಾಮಿತಿ ।
ವೈಶಾಖಮಾಸೇ ವಿಧಿವತ್ಕ್ರಿಯತಾಮಿತಿ ಸೋಽಬ್ರವೀತ್ ॥49॥

ಶ್ರೀವರಾಹ ಉವಾಚ–

ರಾಜಾ ತು ಧಿಷಣಂ ತತ್ರ ಸಂಪೂಜ್ಯಾಥ ವಿಸೃಜ್ಯ ಚ ।
ದೇವಸ್ಯ ದೂತಿಕಾಮಾಹ ಗಚ್ಛ ದೇವಾಲಯಂ ಶುಭೇ ॥50॥

ವೈಶಾಖೇ ದೇವದೇವಾಯ ಕಲ್ಯಾಣಂ ವದ ಸುವ್ರತೇ ।
ವೈವಾಹಿಕವಿಧಾನಂ ತು ಕೃತ್ವಾ ಚಾಗಮ್ಯತಾಮಿತಿ ॥51॥

ತತೋ ದೇವ್ಯಾಃ ಪ್ರಿಯಕರಂ ಶುಕಂ ದೂತಂ ತಯಾ ಸಹ ।
ವಿಸೃಜ್ಯ ವಾಯುಂ ಸ್ವಸುತಮಿಂದ್ರಾದ್ಯಾನಯನೇಽಸೃಜತ್ ॥52॥

ಆಹೂಯ ವಿಶ್ವಕರ್ಮಾಣಂ ಪುರಾಲಂಕಾರಕರ್ಮಣಿ ।
ನಿಯೋಜಯಾಮಾಸ ಸೋಽಪಿ ನಿರ್ಮಮೇ ನಿಮಿಷಾಂತರಾತ್ ॥53॥

ಇಂದ್ರೋಽಸೃಜತ್ಪುಷ್ಪವೃಷ್ಟಿಂ ನನೃತುಶ್ಚಾಪ್ಸರೋಗಣಾಃ ।
ಧನದೋ ಧನಧಾನ್ಯಾದ್ಯೈಃ ಪೂರಯಾಮಾಸ ವೇಶ್ಮ ತತ್ ॥54॥

ಅವರ ಯೋಗಾಯೋಗವನ್ನು ವಿಚಾರಿಸಿರಿ' ಎಂದು ಪ್ರಾರ್ಥಿಸಿದನು. ಆಗ ದೇವಗುರುವು ಮೇಲಿಸಿ ನೋಡಿ, ಇಬ್ಬರ ಸುಖವೃದ್ಧ್ಯರ್ಥವಾಗಿ ವಿಚಾರವನ್ನು ಮಾಡಿ 'ವೈಶಾಖ ಶುದ್ಧ ಧಶಮಿಯಂದು ಉತ್ತರಾಫಲ್ಗುನೀ ನಕ್ಷತ್ರದಲ್ಲಿ ವಿಧಿಗನುಸಾರವಾಗಿ ವಿವಾಹವನ್ನು ಮಾಡಿರಿ' ಎಂದು ನುಡಿದನು. ಇದರಿಂದ ಸಂತುಷ್ಟನಾದ ರಾಜನು ಬಕುಲಾಮಾಲೆಗೆ 'ನೀನು ಶ್ರೀನಿವಾಸನ ಬಳಿಗೆ ಹೋಗಿ ವೈಶಾಖಮಾಸದಲ್ಲಿ ವಿವಾಹವು ನಿಶ್ಚಿತವಾದದ್ದನ್ನು ತಿಳಿಸು. ವಿವಾಹ ಪೂರ್ವವಾದ ಕೃತ್ಯಗಳನ್ನಾಚರಿಸಿಕೊಂಡು ಅಂದು ವಿವಾಹಾರ್ಥವಾಗಿ ಆಗಮಿಸಬೇಕು ಎಂದು ಪ್ರಾರ್ಥಿಸು' ಎಂದು ನುಡಿದನು. ಅನಂತರದಲ್ಲಿ ದೇವಿಗೆ ಅತ್ಯಂತ ಪ್ರಿಯನಾದ ಶುಕನೆಂಬ ದೂತನೊಬ್ಬನನ್ನು ಬಕುಲೆಯೊಂದಿಗೆ ಕಳುಹಿಸಿ, ವಾಯುದೇವನೊಡನೆ ತನ್ನ ಮಗನಾದ ವಸುದಾನನನ್ನು ಇಂದ್ರಾದ್ಯಾವಾಹನಾರ್ಥವಾಗಿ ಕಳುಹಿಸಿದನು. ವಿಶ್ವಕರ್ಮನನ್ನು ಕರೆದು ಪಟ್ಟಣವನ್ನಲಂಕರಿಸುವ ಕೆಲಸದಲ್ಲಿ ನಿಯೋಜಿಸಿದನು. ಅವನೂ ಸಹ ಕ್ಷಣಮಾತ್ರದಲ್ಲಿ ನಾರಾಯಣಪುರವನ್ನು ಭವ್ಯವನ್ನಾಗಿಸಿದನು. ಆಗ ಇಂದ್ರನು ನಾರಾಯಣ ಪುರದಲ್ಲಿ ಪುಷ್ಪವೃಷ್ಟಿಯನ್ನು ಮಾಡಿದನು.

ಯಮಸ್ತು ರೋಗರಹಿತಾಂಶ್ಚಕಾರ ಮನುಜಾನ್ಭುವಿ ।
ವರುಣೋ ರತ್ನಜಾಲಾನಿ ಮೌಕ್ತಿಕಾದೀನ್ಯಪೂರಯತ್ ॥55॥

ಏವಂ ಸಂಪಾದ್ಯ ಸರ್ವಾಣಿ ಯಯುರ್ದೇವಾ ವೃಷಾಚಲಮ್ ॥56॥

ಶ್ರೀವರಾಹ ಉವಾಚ–

ತತಃ ಸಾ ಹಯಮಾರುಹ್ಯ ಶುಕೇನ ಸಹಿತಾ ಯಯೌ ।
ಶ್ರೀವೇಂಕಟಾದ್ರಿಮಾಸಾದ್ಯ ದೇವಾಲಯಸಮೀಪತಃ ॥57॥

ಅವರುಹ್ಯ ತುರಂಗಾತ್ಸಾ ಪಶುಕಾಭ್ಯಂತರಂ ಯಯೌ ।
ದೃಷ್ಟ್ವಾ ದೇವಂ ರತ್ನಪೀಠೇ ಶ್ರಿಯಾ ಸಹ ಸುಲೋಚನಮ್ ॥58॥

ಪ್ರಣಮ್ಯ ಹ್ಯವದತ್ತ್ರೀತಾ ಕೃತ್ಯಂ ತತ್ರ ಕೃತಂ ವಿಭೋ ।
ಮಾಂಗಲ್ಯವಾರ್ತಾಂ ವಕ್ತುಂ ವೈ ಶುಕ ಏಷ ಸಮಾಗತಃ ॥59॥

ವದೇತಿ ದೇವೇನಾಜ್ಞಪ್ತಃ ಶುಕೋ ನತ್ವಾ ತಮಬ್ರವೀತ್ ।

ಶುಕ ಉವಾಚ–

ತ್ವಾಂ ಪ್ರತ್ಯಾಹ ಸುತಾ ಭೂಮೇರ್ಮಾಮಂಗೀಕುರು ಮಾಧವ ॥60॥

ವದಾಮಿ ತವ ನಾಮಾನಿ ಸ್ಮರಾಮಿ ತ್ವದ್ವಪುಸ್ತದಾ ।
ಧ್ರಿಯಂತೇ ತವ ಚಿಹ್ನಾನಿ ಭುಜಾದ್ಯಂಗೈಃ ರಮಾಪತೇ ॥61॥

ಅಪ್ಸರೆಯರು ನರ್ತನವನ್ನುಮಾಡಿದರು. ಕುಬೇರನು ಕೋಶವನ್ನು ತುಂಬಿಸಿದರೆ, ಯಮನು ಎಲ್ಲರನ್ನು ರೋಗರಹಿತರನ್ನಾಗಿ ಮಾಡಿದನು. ವರುಣನು ರಾಜನ ಕೋಶವನ್ನು ರತ್ನ, ಮುತ್ತು, ಮೊದಲಾದ ದಿವ್ಯಪದಾರ್ಥಗಳಿಂದ ತುಂಬಿಸಿದನು.

ಕುದುರೆಯ ಮೇಲೆ ಶುಕನಿಂದ ಸಹಿತಳಾದ ಬಕುಲೆಯು ವೇಂಕಟೇಶನ ಬಳಿ ಬಂದು 'ನಿನ್ನ ಕಾರ್ಯವು ಪೂರ್ಣವಾಯಿತು. ನಿನ್ನ ವಿವಾಹ ವಾರ್ತೆಯನ್ನು ಹೇಳಲು ಈ ಶುಕನು ಬಂದಿರುವನು' ಎಂದು ನುಡಿದಳು. ನಂತರ ಶುಕನು ಭಗವಂತನಿಂದ ಆಜ್ಞಪ್ತನಾಗಿ 'ಭೂಮಿಯ ಮಗಳಾದ ಪದ್ಮಿನಿಯು ಹೇ ಸ್ವಾಮಿಯೇ! ನನ್ನನ್ನಂಗೀಕರಿಸು. ನಿನ್ನ ನಾಮಗಳನ್ನು ನಾನು ಉಚ್ಚರಿಸುತ್ತಾ ನಿನ್ನ ದೇಹಸಿರಿಯನ್ನು ಧ್ಯಾನಿಸುತ್ತಿರುವೆನು. ನಿನ್ನ ಆಯುಧದ ಚಿಹ್ನೆಗಳನ್ನು ನನ್ನ ಅಂಗಗಳಲ್ಲಿ ಧರಿಸಿರುವೆನು. ಊರ್ಧ್ವಪುಂಡ್ರ, ತಪ್ತ ಪುಂಡ್ರಾದಿಗಳಿಂದ ಶೋಭಿತರಾದ

ತ್ವದ್ಭಕ್ತಾನರ್ಚಯಾಮೀಹ ಪಂಚಸಂಸ್ಕಾರಸಂಯುತಾನ್ ।
ತ್ವತ್ಪ್ರೀತಯೇ ಹಿ ಕರ್ಮಾಣಿ ಕರೋಮಿ ಮಧುಸೂದನ ॥62॥

ಏವಂ ಸದೈವಾಚರಂತ್ಯಾಃ ಪಿತ್ರೋರನುಮತೇ ಮಮ ।
ಕುರು ಪ್ರಸಾದಂ ದೇವೇಶ ಮಾಮಂಗೀಕುರು ಮಾಧವ ॥63॥

ಇತಿ ವಿಜ್ಞಾಪಯಾಮಾಸ ಕಮಲಸ್ಥಾ ಧರಾಸುತಾ ।
ಶುಕಸ್ಯ ವಚನಂ ಶ್ರುತ್ವಾ ಸುಪ್ರಿಯಂ ತ್ವಾತ್ಮನೋ ಹರಿಃ ॥64॥

ಶ್ರೀ ಭಗವಾನುವಾಚ–

ಕರ್ತುಂ ಕಲ್ಯಾಣಮುದ್ವಾಹಮಾಗಮಿಷ್ಯಾಮಿ ಚಾಮರೈಃ ।
ಶುಕ ಗಚ್ಛ ವದೈವಂ ತಮಿತ್ಥಂ ದೇವೋಽಬ್ರವೀದಿತಿ ॥65॥

ಶುಕಃ ಶ್ರುತ್ವಾ ದೇವವಾಕ್ಯಮಾದಾಯ ವನಮಾಲಿಕಾಮ್ ।
ದೇವದತ್ತಾಂ ಯಯೌ ಶೀಘ್ರಂ ವಿಯದ್ರಾಜಸುತಾಂ ಪ್ರತಿ ॥66॥

ತುಲಸೀಮಾಲಿಕಾಂ ದತ್ತ್ವಾ ಮೃಗನಾಭಿಸುಗಂಧಿನೀಮ್ ।
ಪ್ರಣಮ್ಯ ದೇವೀಮವದಚ್ಚುಕೋ ದೇವವಚಃ ಶುಭಮ್ ॥67॥

ಕೃತ್ವಾ ತನ್ಮಾಲಿಕಾಂ ಗೃಹ್ಯ ಭೂಮಿಜಾ ಶಿರಸಾ ದಧೌ ।
ಚಕ್ರೇಽಲಂಕಾರಮುಚಿತಂ ದೇವಾಗಮನಕಾಂಕ್ಷಿಣೀ ॥68॥

ವಿಯದ್ರಾಜೋಽಪಿ ಸಾನಂದಮಿಂದುಮಾಹೂಯ ಸಾದರಮ್ ।

ನಿನ್ನ ಭಕ್ತಜನರನ್ನೇ ನಾನು ಆರಾಧಿಸುತ್ತಿದ್ದು ಎಲ್ಲ ಕರ್ಮಗಳನ್ನು ನಿನ್ನ ಪ್ರೀತ್ಯರ್ಥವಾಗಿ ಆಚರಿಸುತ್ತಿರುವೆನು. ದೇವತಾಸಾರ್ವಭೌಮನಾದ ಶ್ರೀಹರಿಯೇ! ತಂದೆ–ತಾಯಿಗಳ ವಶವರ್ತಿನಿಯಾದ, ನಿತ್ಯವೂ ವ್ರತಾಚರಣ ಪರಾಯಣಳಾದ ನನ್ನಲ್ಲಿ ದಯೆಮಾಡಿ ನನ್ನನ್ನು ಸ್ವೀಕರಿಸು' ಎಂದು ಪ್ರಾರ್ಥಿಸಿರುವಳು.' ಎಂದು ಶುಕನು ವಿಜ್ಞಾಪಿಸಿದನು. ಆಗ ಶ್ರೀನಿವಾಸನು 'ಕಲ್ಯಾಣಾರ್ಥವಾಗಿ ನಾನು ದೇವತೆಗಳಿಂದ ಸಹಿತನಾಗಿ ಬರುವೆನೆಂದು ರಾಜನಿಗೆ ತಿಳಿಸು' ಎಂದು ಶುಕನಿಗೆ ಆಜ್ಞಾಪಿಸಿದನು. ಸಂತುಷ್ಟನಾದ ಶುಕನು ಪರಮಾತ್ಮನು ಕೊಟ್ಟ ತುಲಸಿ ಹಾರವೊಂದನ್ನು ತೆಗೆದುಕೊಂಡು ಪದ್ಮಾವತಿಯ ಬಳಿ ಹೋಗಿ, ಕಸ್ತೂರಿಯಿಂದ ಯುಕ್ತವಾದ ತುಲಸಿಯ ಹಾರವನ್ನು ಅವಳಿಗೆ ಕೊಟ್ಟು ಪರಮಾತ್ಮನು ತಿಳಿಸಿದ ಸಂದೇಶವನ್ನು ತಿಳಿಸಿದನು. ಇದರಿಂದ ಸಂತುಷ್ಟಳಾದ ಪದ್ಮಾವತಿಯು ಆ ಹಾರವನ್ನು ತನ್ನ ತಲೆಯಲ್ಲಿ ಧರಿಸಿ, ಪರಮಾತ್ಮನ ಆಗಮನವನ್ನು ನಿರೀಕ್ಷಿಸುತ್ತಾ ಅವನಿಗೆ ಸಂತೋಷವಾಗಲು ಅಲಂಕರಿಸಿಕೊಂಡಳು. ಆಕಾಶರಾಜನೂ

ಅನ್ನಂ ವಿಧೀಯತಾಂ ರಾಜನ್ವಿವಿಧಂ ರಸಸಂಯುತಮ್ ॥69॥

ವಿಷ್ಣೋರ್ನೈವೇದ್ಯಯೋಗ್ಯಂ ಯತ್ಪರಮಾನ್ನಂ ವಿಧೀಯತಾಮ್ ।
ದೇವಾನಾಂ ಚ ಋಷೀಣಾಂ ಚ ನರಾಣಾಮಪಿ ಸಮ್ಮತಮ್ ॥70॥

ಚತುರ್ವಿಧಂ ಸುಗಂಧಾಢ್ಯಮಮೃತಾಂಶೈಃ ಸುಧಾಕರಃ ।
ಏವಂ ಕೃತ್ವಾ ಸಂವಿಧಾನಂ ಪ್ರತೀಕ್ಷ್ಯಾಗಮನಂ ವಿಭೋ ॥71॥

ಸಭಾಯಾಂ ಮಂತ್ರಿಸಹಿತಃ ಸಮಾಸ್ತ ಪ್ರೀತಮಾನಸಃ ।
ಪುತ್ರೀಮಲಂಕೃತಾಂ ಕೃತ್ವಾ ಧರಣೀಸಹಿತೋ ನೃಪ ॥72॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ 'ಬಕುಲಮಾಲಿಕಾನಿವೇದಿತಶ್ರೀನಿವಾಸೋದಂತ ಕಮಲಾಲಯಾಕಲ್ಯಾಣವಿಧ್ಯಾದಿವೃತ್ತಾಂತವರ್ಣನಂ' ನಾಮ ಸಪ್ತಮೋಽಧ್ಯಾಯಃ ॥7॥

* * *

ಈ ವೃತ್ತಾಂತವನ್ನು ಕೇಳಿ ಬಹು ಸಂತೋಷಯುಕ್ತನಾಗಿ, ಚಂದ್ರನಿಗೆ ಭಗವಂತನಿಗುಚಿತವಾದ ಆಹಾರವನ್ನು ಸಿದ್ಧಪಡಿಸಲು ತಿಳಿಸಿ, ಪತ್ನೀ ಪುತ್ರಿಯರಿಂದ ಸಹಿತನಾಗಿ ಅಲಂಕರಿಸಿಕೊಂಡ ಪರಮಾತ್ಮನ ಆಗಮನವನ್ನು ಪ್ರತೀಕ್ಷಿಸುತ್ತಾ ಸಭೆಯಲ್ಲಿ ವಿರಾಜಮಾನನಾದನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ ಬಕುಲಾನಿವೇದಿತ ಶ್ರೀನಿವಾಸಪದ್ಮಾವತಿಕಲ್ಯಾಣವಿಧಿವೃತ್ತಾಂತ ವರ್ಣನವೆಂಬ ಏಳನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥ ಅಷ್ಟಮೋಽಧ್ಯಾಯಃ ॥8॥

[ಬ್ರಹ್ಮಾದಿಭಿಃ ಸಾಕಂ ಶ್ರೀನಿವಾಸಸ್ಯ ವಿಯದ್ರಾಜಪುರುಗಮನ
ಕಮಲಾಲಯಾಪರಿಣಯಾದಿವರ್ಣನಮ್]

ಶ್ರೀ ವರಾಹ ಉವಾಚ–

ತತೋ ದೇವಾಧಿದೇವೋಽಪಿ ಲಕ್ಷ್ಮೀಮಾಹೂಯ ಭಾಮಿನೀಮ್।
ಕಿಂ ಕಾರ್ಯಂ ವದ ಕಲ್ಯಾಣಿ ವಿವಾಹಾರ್ಥಂ ಸುಲೋಚನೇ ॥1॥

ಅಜ್ಞಾಪಯಸ್ವ ಸ್ವಸಖೀಂ ರಮೇ ಕಾರ್ಯಂ ಕುರು ಪ್ರಿಯಮ್ ।
ಶ್ರೀಸ್ತು ಕೃಷ್ಣವಚಃ ಶ್ರುತ್ವಾ ಸಖೀರಾಹೂಯ ಚೋದಯತ್ ॥2॥

ಶ್ರಿಯಾಽಽಜ್ಞಪ್ತಾ ತತಃ ಪ್ರೀತಿಃ ಸುಗಂಧಂ ತೈಲಮಾದದೌ ।
ಶ್ರುತಿಃ ಕ್ಷೌಮಂ ಸಮಾದಾಯ ತಸ್ಥೌ ದೇವಸ್ಯ ಸನ್ನಿಧೌ ॥3॥

ಭೂಷಣಾನಿ ಸಮಾದಾಯ ಸ್ಮೃತಿರಪ್ಯಾಯಯೌ ಮುದಾ ।
ಧೃತಿರಾದರ್ಶಮಾಧತ್ತ ಶಾಂತಿರ್ಮೃಗಮದಂ ದಧೌ ॥4॥

ಯಕ್ಷಕರ್ದಮಮಾದಾಯ ಹ್ರೀಃ ಸ್ಥಿತಾ ಪುರುತೋ ಹರೇಃ ।
ಕೀರ್ತಿಃ ಕನಕಪಟ್ಟಂ ಚ ಸರತ್ನಂ ಮುಕುಟಂ ದಧೌ ॥5॥

## ಎಂಟನೆಯ ಅಧ್ಯಾಯ

ಅನಂತರ ದೇವಾಧಿದೇವನಾದ ಶ್ರೀನಿವಾಸನು ಸ್ವತಃ ಸಮರ್ಥನಾಗಿದ್ದರೂ ಸಹ ಲಕ್ಷ್ಮೀದೇವಿಯನ್ನು ಕರೆದು, 'ವಿಶಾಲನಯನೆಯೇ! ವಿವಾಹಾರ್ಥವಾಗಿ ನಾನು ಏನು ಮಾಡಬೇಕೆಂದು ತಿಳಿಸು. ನಿನ್ನ ಸಖಿಯರಿಗೆ ಅಪ್ಪಣೆ ಮಾಡಿ ನನ್ನ ಕಾರ್ಯವು ನೆರವೇರುವಂತೆ ಮಾಡು' ಎಂದು ಹೇಳಿದಾಗ ಲಕ್ಷ್ಮೀದೇವಿಯು ತನ್ನ ಸಖಿಯರಿಗೆ ಮಂಗಳ ಪದಾರ್ಥಗಳನ್ನು ತರಲು ಆಜ್ಞಾಪಿಸಿದಳು. ಆಗ ಪ್ರೀತಿಯು ಸುಗಂಧತೈಲವನ್ನು, ಶ್ರುತಿಯು ರೇಷ್ಮೆಯ ಪೀತಾಂಬರವನ್ನು, ಸ್ಮೃತಿಯು ಅನೇಕ ಆಭರಣಗಳನ್ನು ಧೃತಿಯು ಕನ್ನಡಿಯನ್ನು, ಶಾಂತಿಯು ಕಸ್ತೂರಿಯನ್ನು, ಯಕ್ಷಕರ್ದಮವನ್ನು ಹ್ರೀದೇವಿಯು, ಕೀರ್ತಿಯು ಉತ್ತರೀಯವನ್ನು, ನವರತ್ನಮಯವಾದ ಕಿರೀಟವನ್ನು ಹಿಡಿದು ತಂದರು. ಅದರಂತೆ ಶಚಿಯು ಶ್ವೇತಛತ್ರವನ್ನು ಹಿಡಿದು ಸೇವೆಗೈದರೆ ಸರಸ್ವತೀ–ಪಾರ್ವತಿಯರು

ಛತ್ರಂ ದಧೌ ತದೇಂದ್ರಾಣೀ ಚಾಮರಂ ತು ಸರಸ್ವತೀ ।
ದ್ವಿತೀಯಂ ಚಾಮರಂ ಗೌರೀ ವ್ಯಜನೇ ವಿಜಯಾಜಯೇ ॥6॥

ಅಗತಾಸ್ತಾಃ ಸಮಾಲೋಕ್ಯ ಶ್ರೀರುತ್ಥಾಯಾಥ ಸತ್ವರಾ ।
ಸುಗಂಧಂ ತೈಲಮಾದಾಯ ದೇವಮಭ್ಯರ್ಚ್ಯ ಶೀರ್ಷತಃ ॥7॥

ಉದ್ವರ್ತಿತಂ ಗಂಧಚೂರ್ಣೈರ್ದೇವಾಂಗಂ ಪರಿಮೃಜ್ಯ ಚ ।
ಆನೀತಾನ್ನರಿಭಿಸ್ತೋಯಕಲಶನ್ಕಾಂಚನಾನ್ಬತಮ್ ॥8॥

ವಿಯದ್ಗಂಗಾದಿತೀರ್ಥೇಭ್ಯಃ ಕರ್ಪೂರಾದಿಸುವಾಸಿತಾನ್ ।
ಏಕಮೇಕಂ ಸಮಾದಾಯ ತ್ವಭ್ಯಷಿಂಚದ್ರಮಾ ಹರಿಮ್ ॥9॥

ಸಂಧೂಪ್ಯ ಕೇಶಾನ್ ಧೂಪೇನ ತಾನಾಶ್ಯಾಮಾನ್ಬಬಂಧ ಚ ।
ಸುಗಂಧೇನಾನುಲಿಪ್ಯಾಂಗಂ ಸ್ವರ್ಣವರ್ಣೇನ ತದ್ವಿಭೋಃ ॥10॥

ಪೀತಕೌಶೇಯಕಂ ಬದ್ಧ್ವಾ ಕಟ್ಯಾಂ ಕಾಂಚನಮನ್ವಿತಮ್ ।
ಮುಕುಟಾದಿವಿಭೂಷಾಭಿರ್ಭೂಷಯಾಮಾಸ ಚೇಂದಿರಾ ॥11॥

ಅಂಗುಲೀಯಕರತ್ನಾನಿ ಸರ್ವಾಸ್ವೇವಾಂಗುಲೀಷು ಚ ।
ಆದರ್ಶಂ ದರ್ಶಯಾಮಾಸ ಧೃತಿರ್ದೇವಸ್ಯ ಸನ್ನಿಧೌ ॥12॥

ದುಷ್ಟ್ವಾಽಽದರ್ಶಂ ದೇವದೇವೋ ಹ್ಯೂರ್ಧ್ವಪುಂಡ್ರಂ ಸ್ವಯಂ ದಧೌ ।
ಆರುಹ್ಯ ಗರುಡಂ ಪಶ್ಚಾತ್ಸ್ವಯಂ ಲಕ್ಷ್ಮೀಸಮನ್ವಿತಃ ॥13॥

ಚಾಮರವನ್ನು ಇಕ್ಕೆಲೆಗಳಲ್ಲಿ ಹಿಡಿದರು. ಜಯಾ ಮತ್ತು ವಿಜಯಾ ಬೀಸಣಿಕೆಯನ್ನು ಬೀಸುತ್ತಿದ್ದರು. ಹೀಗೆ ಸಖಿಯರು ಸನ್ನದ್ಧರಾಗಿ ಬಂದಿದ್ದನ್ನು ಕಂಡು ಲಕ್ಷ್ಮೀದೇವಿಯು ಸಡಗರದಿಂದ ಎದ್ದು ಭಗವಂತನಿಗೆ ತೈಲೋದ್ವರ್ತನ ವನ್ನು ಮಾಡಿ, ತೈಲಮರ್ದಿತವಾದ ಭಗವಂತನ ಶರೀರವನ್ನು ಗಂಧಚೂರ್ಣಗಳಿಂದ ತಿಕ್ಕಿ, ಅಷ್ಟ ದಿಗ್ಗಜಗಳು ಆಕಾಶಗಂಗಾದಿ ತೀರ್ಥಗಳಿಂದ ತಂದಿದ್ದ ಸುಗಂಧಿತವಾದ ನೀರನ್ನು ರಮಾದೇವಿಯು ಚಿನ್ನದ ಕಲಶಗಳಲ್ಲಿ ತೆಗೆದುಕೊಂಡು ಪರಮಾತ್ಮನಿಗೆ ಅಭಿಷೇಕಮಾಡಿದಳು. ಹೀಗೆ ಯಥೇಚ್ಛವಾದ ಸ್ನಾನಾನಂತರದಲ್ಲಿ ಭಗವಂತನ ನಿಬಿಡವಾದ, ಕಪ್ಪಾದ ತಲೆಗೂದಲುಗಳನ್ನು ಅಗುರು, ಧೂಪಗಳಿಂದ ಒಣಗಿಸಿ ಗಂಟುಗಟ್ಟಿದರು. ಸುಗಂಧ ದ್ರವ್ಯಗಳನ್ನು ಭಗವಂತನಿಗೆ ಹಚ್ಚಿ ಲಕ್ಷ್ಮೀದೇವಿಯು ಪೀತಾಂಬರವನ್ನುಡಿಸಿದಳು. ಒಡ್ಯಾಣ, ಕಿರೀಟ, ಉಂಗುರಗಳು – ಇವೇ ಮೊದಲಾದವುಗಳಿಂದ ಅಲಂಕೃತನಾದ ಭಗವಂತನು ಧೃತಿಯಿಂದ ತೋರಿಸಲ್ಪಟ್ಟ ಕನ್ನಡಿಯಲ್ಲಿ ಮುಖವನ್ನು ನೋಡಿಕೊಂಡು ಸಂತುಷ್ಟನಾಗಿ ಸ್ವಯಂ

ಬ್ರಹ್ಮೇಶವಜ್ರಿವರುಣಯಮಯಕ್ಷೇಶಸೇವಿತಃ ।
ವಸಿಷ್ಠಾದ್ಯೈರ್ಮುನೀಂದ್ರೈಶ್ಚ ಸನಕಾದ್ಯೈಶ್ಚ ಯೋಗಿಭಿಃ ॥14॥

ಭಕ್ತೈರ್ಭಾಗವತೈರ್ಯುಕ್ತೋ ನಾರಾಯಣಪುರೀಂ ಯಯೌ ।
ಜಗುರ್ಗಂಧರ್ವಪತಯೋ ನನೃತುಶ್ಚಾಪ್ಸರೋಗಣಾ ॥15॥

ದೇವದುಂದುಭಯೋ ನೇದುಸ್ತದಾ ದೇವಸ್ಯ ಸನ್ನಿಧೌ ।
ಜಪಂತಃ ಸ್ವಸ್ತಿಸೂಕ್ತಾನಿ ಮುನಯಸ್ತಂ ಸಮನ್ವಯುಃ ॥16॥

ದೇವೋ ದೇವಗಣೈರ್ಯುಕ್ತೋ ವಿಷ್ವಕ್ಸೇನಾದಿಪಾರ್ಷದೈಃ ।
ಸಖೀಭಿಸ್ಸ್ಯಂದನಸ್ಥಾಭಿರ್ಬಕುಲಾದ್ಯಾಭಿರನ್ವಿತಃ ॥
ಆಕಾಶರಾಜಸ್ಯ ಪುರಮಾಸಸಾದ ಸ್ವಲಂಕೃತಮ್ ॥17॥

ದೇವಮಾಗತಮಾಲೋಕ್ಯ ಕನ್ಯಾಮೈರಾವತಸ್ಥಿತಾಮ್ ।
ಪುರೀಂ ಪ್ರದಕ್ಷಿಣೀಕೃತ್ಯ ಗೋಪುರದ್ವಾರಮಾಗತಾಮ್ ॥18॥

ಆಲೋಕ್ಯಾಕಾಶರಾಜೋಽಪಿ ಸಮಾನೀಯ ವಧೂವರೌ ।
ಬಂಧುಭಿಃ ಸಹಿತಸ್ತಸ್ಥೌ ದೇವಮಾಲೋಕ್ಯ ಕೇಶವಮ್ ॥19॥

ವಿಷ್ಣುರ್ಮಾಲಾಂ ಸ್ವಕಂಠಸ್ಥಾಂ ಹಸ್ತೇನಾದಾಯ ಸಸ್ಮಿತಃ ।
ಕಮಲಾಯಾಃ ಸ್ಕಂಧದೇಶೇ ಮುಮೋಚ ಸುಮನಃ ಶಿತಾಮ್ ॥20॥

ತಾನೆಯೇ ಊರ್ಧ್ವಪುಂಡ್ರಗಳನ್ನು ಧರಿಸಿದನು. ಅನಂತರ ಲಕ್ಷ್ಮೀಸಮೇತನಾಗಿ ಗರುಡನನ್ನೇರಿದ ಭಗವಂತನು ಬ್ರಹ್ಮ ರುದ್ರ ಇಂದ್ರಾದಿ ದೇವತೆಗಳಿಂದ ವಸಿಷ್ಠಾದಿ ಋಷಿಗಳಿಂದ ಸನಕಾದಿ ಯೋಗಿಗಳಿಂದ, ಯಕ್ಷ, ರಾಕ್ಷಸ, ಕಿನ್ನರ, ಸಿದ್ಧ, ಗಂಧರ್ವ, ಅಪ್ಸರೆಯರು, ಮನುಷ್ಯರೇ ಮುಂತಾದ ಭಗವದ್ಭಕ್ತ ಸಮೂಹದಿಂದ ಸಮನ್ವಿತನಾಗಿ ನಾರಾಯಣ ಪುರಕ್ಕೆ ನಡೆದನು. ಮಂಗಳವಾದ್ಯಗಳು,. ಮುನಿಗಳ ಸ್ವಸ್ತಿವಾಚನಗಳಿಂದ, ಸಂತುಷ್ಟನಾದ ಭಗವಂತನು ಬಕುಲೆಯೇ ಮೊದಲಾದ ತನ್ನ ಪರಿವಾರವನ್ನು ರಥದಲ್ಲಿ ಕುಳ್ಳರಿಸಿಕೊಂಡು ಅಲಂಕೃತವಾದ ಆಕಾಶರಾಜನ ನಾರಾಯಣ ಪುರವನ್ನು ತಲುಪಿದನು. ದೇವದೇವನಾದ ಶ್ರೀನಿವಾಸನು ಬಂದುದನ್ನು ಮತ್ತು ತನ್ನ ಮಗಳು ಐರಾವತವನ್ನೇರಿ ಪುರವನ್ನು ಪ್ರದಕ್ಷಿಣೆಹಾಕಿ ಬಂದುದನ್ನು ಕಂಡ ಆಕಾಶರಾಜನು ಪರಿವಾರಸಮೇತನಾಗಿ ವಧೂವರರ ಪರಿಚಯ ಮಾಡಿಸಿಕೊಟ್ಟು ಪರಮಾತ್ಮನ ಮುಖವನ್ನೇ ನೋಡುತ್ತಾ ನಿಂತುಕೊಂಡನು. ಆಗ ಮಂದಹಾಸವನ್ನು ಗೈಯುತ್ತಿದ್ದ ಶ್ರೀನಿವಾಸನು ತನ್ನ ಕತ್ತಿನಲ್ಲಿರುವ ಹಾರವನ್ನು ತೆಗೆದು ಪದ್ಮಾವತಿಯ ಕುತ್ತಿಗೆಗೆ ಹಾಕಿದನು. ಪದ್ಮಾವತಿಯು ಮಲ್ಲಿಗೆಯ

ಆದಾಯ ಮಲ್ಲಿಕಾಮಾಲಾಂ ಸಾಽಸ್ಯ ಕಂಠೇ ಸಮರ್ಪಯತ್ ।
ಏವಂ ತ್ರಿವಾರಂ ತೌ ಕೃತ್ವಾ ವಾಹಾನಾದವರುಹ್ಯ ಚ ॥21॥

ಸ್ಥಿತ್ವಾ ಪೀಠೇ ಕ್ಷಣಂ ಪಶ್ಚಾದ್ಗೃಹಂ ವಿವಿಶತುಃ ಶುಭಮ್ ।
ಬ್ರಹ್ಮಾದಿದೇವಯೂಥೈಶ್ಚ ಸಹಿತೌ ಭೂಮಿಜಾಹರೀ ॥22॥

ಮಾಂಗಲ್ಯಸೂತ್ರಬಂಧಾದಿ ಸಾಂಕುರಾರ್ಪಣಮಬ್ಜಜಃ ।
ವೈವಾಹಿಕಂ ಕಾರಯಿತ್ವಾ ಲಾಜಾಹೋಮಾಂತಮೇವ ಚ ॥23॥

ವ್ರತಾದೇಶಂ ಸಮಾಜ್ಞಾಯ ಶಾಯಿತೌ ಕಮಲಾಹರೀ ।
ಚತುರ್ಥೇ ದಿವಸೇ ಸರ್ವಂ ಸಮಾಪಯ್ಯ ಚತುರ್ಮುಖಃ ॥24॥

ಅನುಜ್ಞಾಪ್ಯ ವಿಯದ್ರಾಜಮಾರೋಪ್ಯ ಗರುಡೇ ಹರಿಮ್ ।
ದೇವೀಭ್ಯಾಂ ಸಹಿತಂ ದೇವಂ ದೇವೈರ್ಗಂತುಂ ಪ್ರಚಕ್ರಮೇ ॥25॥

ದಿವ್ಯದುಂದುಭಿನಿರ್ಘೋಷೈಃ ಸಂಪ್ರಾಪ್ಯ ವೃಷಭಾಚಲಮ್ ।
ತುಷ್ಟುವುರ್ದೇವದೇವೇಶಂ ಬ್ರಹ್ಮಾದ್ಯಾ ದೇವತಾಗಣಾಃ ॥26॥

ಶುಕಾದಯೋ ಮುನಿಗಣಾಸ್ತುಷ್ಟುವುಃ ಪುರುಷೋತ್ತಮಮ್ ।
ಸ್ತೂಯಮಾನೋಽಥ ದೇವೋಽಪಿ ವಿವೇಶ ಮಣಿಮಂಡಪಮ್ ॥27॥

ರಮಾಧರಣಿಜಾಭ್ಯಾಂ ಚ ತತ್ರ ಸಿಂಹಾಸನಂ ಯಯೌ ॥28॥

ಹಾರವನ್ನು ಪರಮಾತ್ಮನ ಕಂಠದಲ್ಲಿ ಅರ್ಪಿಸಿದಳು. ಹೀಗೆ ಮೂರು ಬಾರಿ ಮಾಡಿ, ಅವರಿಬ್ಬರೂ ವಾಹನದಿಂದ ಇಳಿದು ಪೀಠದಲ್ಲಿ ಕೆಲಹೊತ್ತು ಕುಳಿತಿದ್ದು ಆನಂತರ ಮನೆಯನ್ನು ಪ್ರವೇಶಿಸಿದರು. ಬ್ರಹ್ಮದೇವರೇ ಯಜಮಾನನಾಗಿ ನಿಂತು ಮಾಂಗಲ್ಯಬಂಧನದಿಂದ ಆರಂಭಗೊಂಡು ಲಾಜಾಹೋಮವೇ ಮೊದಲಾದ ಎಲ್ಲ ವೈವಾಹಿಕ ಪ್ರಕ್ರಿಯೆಗಳನ್ನು ನಡೆಯಿಸಿಕೊಟ್ಟನು. ಬಳಿಕ ವ್ರತದ ನಿಯಮವನ್ನು ಪಾಲಿಸಿ ವಧೂವರರಿಬ್ಬರೂ ಮಲಗಿಕೊಂಡರು. ನಾಲ್ಕನೆಯ ದಿವಸ ಬ್ರಹ್ಮದೇವರು ನಾಗಬಲಿಯೇ ಮೊದಲಾದ ಸಕಲ ಕಲ್ಯಾಣ ಕಾರ್ಯಗಳನ್ನು ಮುಗಿಸಿ, ಚತುರ್ಮುಖ ಬ್ರಹ್ಮದೇವರು ಆಕಾಶರಾಜನ ಅಪ್ಪಣೆಯನ್ನು ಪಡೆದುಕೊಂಡು, ದೇವಿಯರಿಬ್ಬರೊಡನೆ ಶ್ರೀನಿವಾಸನನ್ನು ಗರುಡನ ಮೇಲೆ ಕೂಡಿಸಿ ಸಮಸ್ತ ದೇವತೆಗಳೊಡನೆ ಹೊರಡಲು ಸಿದ್ಧವಾದನು. ದೇವದುಂದುಭಿಗಳು ಮೊಳಗುತ್ತಿರಲು ಬ್ರಹ್ಮಾದಿ ದೇವತಾಸಮೂಹ, ಶುಕಾದಿ ಋಷಿಸಮೂಹಗಳು ವೇಂಕಟಾಚಲದ ಬಳಿ ದೇವಾಧಿದೇವನಾದ ಶ್ರೀನಿವಾಸನನ್ನು ಸ್ತೋತ್ರಮಾಡಿದವು. ಪುರುಷೋತ್ತಮನಾದ ಶ್ರೀನಿವಾಸನು ಲಕ್ಷ್ಮೀದೇವಿ ಮತ್ತು ಪದ್ಮಾವತಿಯರಿಂದ ಸಮೇತನಾಗಿ

ಆಕಾಶರಾಜೋಽಪಿ ತದಾ ಮಹೇಂದ್ರಾದಿಸುರೈಃ ಸಹ ।
ಪುತ್ರೀ ವಿಷ್ಣೋಃ ಪ್ರಿಯಾರ್ಥಂ ತು ಪ್ರಾಭೃತಂ ಕರ್ತಮುದ್ಯತಃ ॥29॥

ಸಾವರ್ಣೇಷು ಕಟಾಹೇಷು ತಂಡುಲಾನ್ ಶಾಲಿಸಂಭವಾನ್ ।
ಮುದ್ಗಪಾತ್ರಾಣ್ಯನೇಕಾನಿ ಘೃತಕುಂಭಶತಾನಿ ಚ ॥30॥

ಪಯೋಘಟಸಸಹಸ್ರಾಣಿ ದಧಿಭಾಂಡಾನ್ಯನೇಕಶಃ ।
ದಿವ್ಯಾನಿ ಚೂತಕದಲೀ ನಾರಿಕೇಳಫಲಾನಿ ಚ ॥31॥

ಧಾತ್ರೀ ಫಲಾನಿ ಕೂಷ್ಮಾಂಡರಾಜರಂಭಾಫಲಾನಿಚ ।
ಪನಸಾನ್ಮಾತುಲುಂಗಾಂಶ್ಚ ಶರ್ಕರಾಪೂರಿತಾನ್ಘಟಾನ್ ॥32॥

ಸುವರ್ಣಮಣಿಮುಕ್ತಾಶ್ಚ ಕ್ಷೌಮಕೋಟ್ಯಂಬರಾಣಿಚ ।
ದಾಸೀ ದಾಸಸಹಸ್ರಾಣಿ ಕೋಟಿಶೋ ಗಾಸ್ತಥೈವ ಚ ॥33॥

ಹಂಸೇಂದುಶುಕ್ಲವರ್ಣಾನಾಂ ಹಯಾನಾಮಯುತಂ ದದೌ ।
ತುಂಗಾನಾಂ ನಿತ್ಯಮತ್ತಾನಾಂ ಗಜಾನಾಮಧಿಕಂ ಶತಾತ್ ॥34॥

ಅಂತಃಪುರುಚರಾ ನಾರೀರ್ನೃತ್ಯಗೀತವಿಶಾರದಾಃ ।
ದದೌ ಚತುಸ್ಸಹಸ್ರಾಣಿ ಶ್ರೀನಿವಾಸಾಯ ವಿಷ್ಣವೇ ।
ದತ್ತ್ವಾ ಚೈತಾನಿ ಸರ್ವಾಣಿ ತಸ್ಥೌ ದೇವಪುರೋ ವಿಭುಃ ॥35॥

ದೃಷ್ಟ್ವಾ ದೇವೋಽಪಿ ತತ್ಸರ್ವಂ ದೇವೀಭ್ಯಾಂ ಸಹಿತೋ ಹರಿಃ ॥36॥

ಸಿಂಹಾಸನವನ್ನೇರಿದನು. ಇಂದ್ರನಿಂದ ಸಮೇತನಾದ ಆಕಾಶರಾಜನು ಮಗಳು ಅಳಿಯರನ್ನು ಕಂಡು ಸಂತುಷ್ಟರಾಗಿ ಬಂಗಾರದ ಕೊಪ್ಪರಿಗೆಗಳಲ್ಲಿ ಭತ್ತದಿಂದ ಮಾಡಿದ ಅಕ್ಕಿಯನ್ನು, ಅನೇಕ ಪಾತ್ರೆಗಳಷ್ಟು ಹೆಸರನ್ನು, ನೂರಾರು ತುಪ್ಪದ ಕೊಡಗಳನ್ನು, ಸಾವಿರಾರು ಕೊಡಗಳ ತುಂಬ ಹಾಲನ್ನು, ಅಸಂಖ್ಯವಾದ ಮೊಸರಿನ ಪಾತ್ರೆಗಳನ್ನು ರಸಭರಿತವಾದ ಮಾವು, ಬಾಳೆ, ತೆಂಗು, ನೆಲ್ಲಿ, ಕುಂಬಳ, ಹಲಸು,ಮಾದಳ ಮೊದಲಾದ ನಾನಾ ಫಲಗಳನ್ನು ಸಕ್ಕರೆ, ಬಂಗಾರ, ನವರತ್ನಗಳನ್ನು, ಮುತ್ತುಗಳನ್ನು, ಮೃದುವಾದ ಹಗುರವಾದ ರೇಷ್ಮೆಯ ವಸ್ತ್ರಗಳನ್ನು ಸಾವಿರಾರು ದಾಸದಾಸಿಯರನ್ನು ಕೋಟಿಗಟ್ಟಲೇ ಆಕಳುಗಳನ್ನು, ಚಂದ್ರನಂತೆ ಬೆಳ್ಳಗಿನ ಹತ್ತು ಸಾವಿರ ಕುದುರೆಗಳನ್ನು, ಮದೋದಕವನ್ನು ಸುರಿಸುವ ನೂರಾರು ಆನೆಗಳನ್ನು ವಿವಾಹದ ಬಳುವಳಿಯಾಗಿ ಅವರಿಗೆ ಕೊಟ್ಟನು. ಶ್ರೀನಿವಾಸನ ಅಂತಃಪುರ ಕೃತ್ಯಗಳ ನಿರ್ವಹಣಾರ್ಥವಾಗಿ ನೃತ್ಯಗೀತ ವಿಶಾರದರಾದ ನಾಲ್ಕು ಸಾವಿರ ದಾಸಿಯರನ್ನು ಸಮರ್ಪಿಸಿ, ದೇವನ ಸನ್ನಿಧಿಯಲ್ಲಿ

ಸುಪ್ರೀತಃ ಪ್ರಾಹ ರಾಜಾನಂ ಶ್ವಶುರಂ ವೇಂಕಟೇಶ್ವರಃ ।
ವರಂ ವೃಣೀಷ್ವ ಹೇ ರಾಜನ್ಗುರೋ ಮತ್ತೋ ಯದಿಚ್ಛಸಿ ॥37॥

ಇತಿ ಶ್ರೀಶವಚಃ ಶ್ರುತ್ವಾ ವಿಯದ್ರಾಜೋऽವದದ್ವಿಭುಮ್ ।
ತ್ವತ್ಸೇವೈವೇಹ ದೇವಂ ಭೂಯಾದವ್ಯಭಿಚಾರಿಣೀ ॥38॥

ಮನಸ್ತ್ವತ್ಪಾದಕಮಲೇ ತ್ವಯಿ ಭಕ್ತಿರ್ಮಮಾಸ್ತು ವೈ ॥39॥

ಶ್ರೀಭಗವಾನುವಾಚ–

'ತ್ವಯಾ ಯದುಕ್ತಂ ರಾಜೇಂದ್ರ ಸರ್ವಮೇತದ್ಭವಿಷ್ಯತಿ ।
ಇತಿ ದತ್ತ್ವಾ ವರಂ ತಸ್ಮೈ ಸಮ್ಮಾನ್ಯೈವ ಯಥೋಚಿತಮ್ ॥40॥

ಬ್ರಹ್ಮೇಶಾದಿ ಸುರಾನ್ಸರ್ವಾನ್ಸಮಭ್ಯರ್ಚ್ಯ ಯಥೋಚಿತಮ್ ।
ಸ್ವಲೋಕಗಮನಾಯೈವಮನುಮೇನೇ ಮುದಾ ಹರಿಃ ॥41॥

ಗತೇಷು ತೇಷು ಸರ್ವೇಷು ಶ್ರಿಯಾ ಭೂಮಿಜಯಾ ಯುತಃ ।
ವಿಹರನ್ಸ ಯಥಾಪೂರ್ವಂ ಸ್ವಾಮಿಪುಷ್ಕರಿಣೀತಟೇ ।
ಆಸ್ತೇ ದಿವ್ಯಾಲಯೇ ದೇವೋऽಪ್ಯರ್ಚ್ಯಮಾನೋ ಗುಹೇನ ವೈ ॥42॥

ಇತಿ ಸ್ಕಾಂದೇ ಪುರಾಣೇ ವೇಂಕಟೇಶ ಮಾಹಾತ್ಮ್ಯೇ ಅಷ್ಟಮೋऽಧ್ಯಾಯಃ ॥8॥

ನಿಂತುಕೊಂಡನು. ಅವನನ್ನು ನೋಡಿದ ಶ್ರೀನಿವಾಸನು ಸಂತೋಷದಿಂದ ಆಕಾಶರಾಜನನ್ನು ಕುರಿತು 'ರಾಜಶ್ರೇಷ್ಠನೇ! ನೀನು ನನಗೆ ಕನ್ಯಾದಾನವನ್ನು ಮಾಡಿರುವದರಿಂದ ಗುರುವೆಂದೆನಿಸಿ ಕೊಂಡು ಪೂಜ್ಯನೆನಿಸಿರುವಿ. ನೀನೇನು ಬಯಸುವೆಯೋ ಅದನ್ನು ನಿಸ್ಸಂಕೋಚವಾಗಿ ಕೇಳು. ಕೊಡುವೆನು' ಎಂದು ನುಡಿದಾಗ ಆಕಾಶರಾಜನು 'ನನ್ನ ಮನಸ್ಸು ನಿನ್ನ ಪದಕಮಲಗಳಲ್ಲಿಯೇ ಯಾವಾಗಲೂ ಆಸಕ್ತವಾಗಿರಲಿ. ನಿನ್ನಲ್ಲಿ ಅವ್ಯಭಿಚರಿತವಾದ ಭಕ್ತಿಯು ನನಗುಂಟಾಗಲಿ' ಎಂದು ಪ್ರಾರ್ಥಿಸಿದನು. ಆಗ ಶ್ರೀನಿವಾಸನು 'ನೀನು ಬಯಸಿರುವದೆಲ್ಲವೂ ದೊರೆಯುವದು' ಎಂದು ವರದಾನವನ್ನು ಅನುಗ್ರಹಿಸಿದನು. ಮುಂದೆ ವಿವಾಹಾರ್ಥವಾಗಿ ಆಗಮಿಸಿದ ಬ್ರಹ್ಮರುದ್ರಾದಿ ದೇವತೆಗಳನ್ನು ಯಥೋಚಿತವಾಗಿ ಸಮ್ಮಾನಿಸಿ ಸ್ವರ್ಗಲೋಕಕ್ಕೆ ತೆರಳಲು ಅನುಮತಿಯನ್ನಿತ್ತನು. ಅವರೆಲ್ಲರೂ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದ ಅನಂತರದಲ್ಲಿ ಲಕ್ಷ್ಮೀ ಮತ್ತು ಭೂದೇವಿಯರಿಂದ ಸಹಿತನಾಗಿ ಸ್ವಾಮಿಪುಷ್ಕರಿಣಿಯದಡದಲ್ಲಿ ಜ್ಞಾನಾನಂದಾದಿಗುಣಭರಿತನಾದ ರಮಾಪತಿಯು ವಿಹರಿಸುತ್ತಾ, ಷಣ್ಮುಖನಿಂದ ಸಂಪೂಜಿತನಾಗಿ ದಿವ್ಯವಾದ ಮಂದಿರದಲ್ಲಿ ವಾಸಮಾಡಿರುವನು.

ಇಲ್ಲಿಗೆ ಸ್ಕಾಂದಪುರಾಣದ ಎಂಟನೆಯ ಅಧ್ಯಾಯವು ಪರಿಸಮಾಪ್ತವಾಯಿತು.

## ಅಥ ನವಮೋಽಧ್ಯಾಯಃ

[ವಸುನಾಮಕನಿಷಾದವೃತ್ತಾಂಶ ಪದ್ಮಸರೋಮಾಹಾತ್ಮ್ಯಾದಿವರ್ಣನಮ್]

ಧರಣ್ಯುವಾಚ–

ಕಲೌ ಯುಗೇ ಭೂಮಿಧರ ಕೇನ ತ್ವಂ ದ್ರಕ್ಷ್ಯಸೇ ಪ್ರಿಯ ।
ವಿಮಾನಂ ಕೇನ ತೇ ದೇವ ಕಾರ್ಯತೇಽಸ್ಮಿನ್ಮಹೀಧರೇ ॥1॥

ಶ್ರೀನಿವಾಸೋಽಪಿ ಕೇನೈವ ದ್ರಕ್ಷ್ಯತೇ ಸುಭಗಾಕೃತಿಃ ।
ಏತದ್ಬ್ರೂಹಿ ಮಮ ಪ್ರೀತ್ಯಾ ಶ್ರೋತುಂ ಕೌತೂಹಲಂ ವಿಭೋ ॥2॥

ಶ್ರೀ ವರಾಹ ಉವಾಚ–

ವಕ್ಷ್ಯಾಮಿ ಶೃಣು ಹೇ ದೇವಿ ಭವಿಷ್ಯದ್ಯದ್ವದಾಮಿ ತೇ ।
ಅಸ್ಮಿನ್ಮಹೀಧರೇ ಪುಣ್ಯೇ ನಿಷಾದೋ ವಸುನಾಮಕಃ ॥3॥

ಶ್ಯಾಮಾಕವನಪಾಲೋಽಭೂದ್ಭಕ್ತಿಮಾನ್ಪುರುಷೋತ್ತಮೇ ।
ಶ್ಯಾಮಾಕತಂಡುಲಾನ್ಪಕ್ತ್ವಾ ಮಧುನಾ ಪರಿಷಿಚ್ಯ ಚ ॥4॥

## ಒಂಬತ್ತನೆಯ ಅಧ್ಯಾಯ

ಭೂದೇವಿಯು ಧರಣೀಧರನಾದ ವರಾಹದೇವರನ್ನು ಕುರಿತು ಈ ರೀತಿಯಾಗಿ ಪ್ರಶ್ನಿಸುತ್ತಾಳೆ– 'ಭೂಮಿಯನ್ನುದ್ಧರಿಸಿದ ಮಹಾಸ್ವಾಮಿಯೇ! ಈ ಘೋರವಾದ ಕಲಿಯುಗದಲ್ಲಿ ನೀವು ಯಾರಿಗೆ ಪ್ರತ್ಯಕ್ಷ ದರ್ಶನವನ್ನು ಕೊಡುತ್ತೀರಿ? ಈ ಪರ್ವತದಲ್ಲಿ ನಿಮಗೆ ಸಂಚಾರಕ್ಕಾಗಿ ರಥವನ್ನು ಮತ್ತು ವಾಸಕ್ಕಾಗಿ ಮಂದಿರವನ್ನು ಯಾರು ನಿರ್ಮಿಸುವರು? ಶ್ರೀನಿವಾಸನ ದರ್ಶನವೂ ಸಹ ಯಾರಿಗೆ ಸಿಗುವದು? ನಾನು ಬಹಳ ಆತುರಳಾಗಿರುವದರಿಂದ ಕುತೂಹಲಳಾದ ನನಗೆ ಪ್ರೀತಿಯಿಂದ ಉತ್ತರಿಸಿರಿ'

ಅದಕ್ಕೆ ವರಾಹ ದೇವರು 'ಹೇ ಭೂದೇವಿಯೇ! ಭವಿಷ್ಯದಲ್ಲಿ ನಡೆಯುವ ವೃತ್ತಾಂತವನ್ನು ಹೇಳುತ್ತೇನೆ. ಕೇಳುವವಳಾಗು. ಪುಣ್ಯಕರವಾದ ಈ ಪರ್ವತದಲ್ಲಿ ವಸುನಾಮಕನಾದ ಬೇಡ ನೊಬ್ಬನು ಭಗವಂತನ ಭಕ್ತನಾಗಿ ಸಾವಕ್ಕಿಯನ್ನು ಬೆಳೆಯುವ ಹೊಲವನ್ನು ಕಾಯುತ್ತಿದ್ದನು. ಆ ಸಾವಕ್ಕಿಯನ್ನು ಪಾಕಮಾಡಿ, ಜೇನುತುಪ್ಪದೊಡನೆ ಮಿಶ್ರಣಮಾಡಿ ಶ್ರೀಭೂಸಮೇತನಾದ

ನಿವೇದ್ಯ ದೇವದೇವಾಯ ಶ್ರೀಭೂಮಿಸಹಿತಾಯ ಚ ।
ಏವಂ ಭಕ್ತಿಮತಸ್ತಸ್ಯ ಭಾರ್ಯಾ ಚಿತ್ರವತೀ ಶುಭಾ ॥5॥

ಅಸೂತ ತನಯಂ ಬಾಲಾ ವಿರನಾಮಾನಮುತ್ತಮಮ್ ।
ವಸುಃ ಪುತ್ರೇಣ ಸಹಿತೋ ಭಾರ್ಯಯಾ ಪತಿಭಕ್ತಯಾ ॥6॥

ಕಸ್ಮಿಂಶ್ಚಿದ್ದಿವಸೇ ಪುತ್ರಂ ಶ್ಯಾಮಾಕಂ ಪಾಲಯೇತಿ ಚ ।
ವಿಸೃಜ್ಯ ಪತ್ನ್ಯಾಸಹಿತೋ ಮಧ್ವನ್ವೇಷಣತತ್ಪರಃ ॥7॥

ಗತೋ ವನಾಂತರಂ ಶೀಘ್ರಂ ಮಧುಚ್ಛತ್ರದಿದೃಕ್ಷಯಾ ।
ಬಾಲಃ ಶ್ಯಾಮಾಕಪಕ್ವಾನಿ ಗೃಹೀತ್ವಾಽಗ್ನೌ ನಿಧಾಯ ಚ ॥8॥

ಪಿಷ್ಟ್ವಾ ನಿವೇದಯಾಮಾಸ ವೃಕ್ಷಮೂಲೇ ಶ್ರಿಯಃ ಪತೇಃ ।
ನೈವೇದ್ಯಂ ಭಕ್ಷಯಿತ್ವೈವ ವೀರಸ್ತ್ವಾಸ ಸುಖೇನ ವೈ ॥9॥

ತದಂತರೇ ವಸುಸ್ತಾಪಿ ಮಧ್ವಾದಾಯ ಸಮಾಗತಃ ।
ಶ್ಯಾಮಾಕಾನ್ಭಕ್ಷಿತಾನ್ ದೃಷ್ಟ್ವಾ ಸಂತರ್ಜ್ಯ ಸುತಮಾತ್ಮನಃ ॥10॥

ಖಡ್ಗಮಾದಾಯ ತಂ ಹಂತುಂ ತ್ವರಯಾ ಹಸ್ತಮುದ್ದಧೌ ॥11॥

ಶ್ರೀನಿವಾಸನಿಗೆ ನಿವೇದನ ಮಾಡುತ್ತಿದ್ದನು. ಇಂತಹ ಪರಮಾತ್ಮನ ಭಕ್ತನಿಗೆ ಚಿತ್ರವತಿಯೆಂಬಶುಭಕರಳಾದ ಸ್ತ್ರೀಯು ಪತ್ನಿಯಾಗಿದ್ದಳು. ಯೌವನಾವಸ್ಥೆಯಲ್ಲಿರುವ ಆಕೆಯು ವೀರನೆಂಬ ಹೆಸರಿನ ಉತ್ತಮ ಪುತ್ರನನ್ನು ಪಡೆದಳು. ವಸುನಾಮಕ ನಿಷಾದನು ಪತ್ನಿಪುತ್ರರೊಡನೆ ಸುಖವಾಗಿ ಜೀವಿಸುತ್ತಿದ್ದನು.

ಒಂದು ದಿವಸ ಶಾವಕ್ಕಿಯನ್ನು ಕಾಯುವಂತೆ ಪುತ್ರನಿಗೆ ತಿಳಿಸಿ ವಸುವು ತನ್ನ ಪತ್ನಿಯೊಡನೆ ಪರಮಾತ್ಮನ ನೈವೇದ್ಯಕ್ಕಾಗಿ ಜೇನುತುಪ್ಪವನ್ನು ತರಲು ಕಾಡಿಗೆ ಹೋಗಿ ವನದಿಂದ ವನಕ್ಕೆ ಸಂಚರಿಸಿ ಜೇನನ್ನು ಸಂಗ್ರಹಿಸಿದನು ಅವನು ಮರಳಿ ಬರುವಷ್ಟರಲ್ಲಿ ಸಾಮೆಯನ್ನು ಕಾಯಲು ನಿಯೋಜಿಸಿದ್ದ ಅವನ ಮಗನು ಸಾವೆಯಿಂದ ಅಕ್ಕಿಯನ್ನು ತೆಗೆದು ಅಗ್ನಿಯಲ್ಲಿ ಹುರಿದು ಹಿಟ್ಟನ್ನು ತಯಾರಿಸಿ, ವೃಕ್ಷಮೂಲದಲ್ಲಿರುವ ಶ್ರೀನಿವಾಸನಿಗೆ ನಿವೇದನಮಾಡಿದನು. ಅನಂತರದಲ್ಲಿ ಅದನ್ನು ತಾನೇ ಭಕ್ಷಿಸಿ ಸಂತುಷ್ಟನಾದನು. ಅವನ ತಂದೆಯಾದ ವಸುವು ಜೇನುತುಪ್ಪವನ್ನು ಸಂಗ್ರಹಿಸಿಕೊಂಡು ಬಂದನು. ಜೇನುತುಪ್ಪದಿಂದ ರಹಿತವಾದ ಕೇವಲ ಶಾಮಾಕವನ್ನು ಪರಮಾತ್ಮನಿಗೆ ನಿವೇದಿಸಿದ್ದನ್ನು ತಿಳಿದು ಮಗನನ್ನು ನಿಂದಿಸಿ, ಖಡ್ಗವನ್ನು ಹಿಡಿದು ಪುತ್ರನನ್ನ

ತದ್ವೃಕ್ಷಸ್ಥಸ್ತದಾ ವಿಷ್ಣುಃ ಖಡ್ಗಂ ಜಗ್ರಾಹ ಪಾಣಿನಾ ।
ಖಡ್ಗೋ ಗೃಹೀತಃ ಕೇನೇತಿ ಪಶ್ಯನ್ವೃಕ್ಷಂ ದದರ್ಶ ಸಃ ॥12॥

ಶಂಖಚಕ್ರಗದಾಪಾಣಿಂ ವೃಕ್ಷಾರೂಢಾರ್ಧವಿಗ್ರಹಮ್ ।
ಮುಕ್ತ್ವಾ ವಸುಶ್ಚ ತಂ ಖಡ್ಗಂ ಪ್ರಣಮ್ಯೋವಾಚ ಕೇಶವಮ್ ॥13॥

ಕಿಮಿದಂ ದೇವದೇವೇಶ ಚೇಷ್ಟಿತಂ ಕ್ರಿಯತೇ ತ್ವಯಾ ॥14॥

ಶ್ರೀ ಭಗವಾನುವಾಚ–

'ವಸೋ ಶೃಣು ವಚೋ ಮೇ ತ್ವಂ ಪುತ್ರಸ್ತೇ ಭಕ್ತಿಮಾನ್ಮಯಿ ।
ತ್ವತ್ತೋಽಪಿ ಮೇ ಪ್ರಿಯತಮಸ್ತಸ್ಮಾತ್ಪ್ರತ್ಯಕ್ಷಮಾಗತಃ ॥15॥

ಅಸ್ಯ ಸರ್ವತ್ರ ತಿಷ್ಠಾಮಿ ತವ ಸ್ವಾಮಿಸರಸ್ತಟೇ ।
ಇತಿ ದೇವವಚಃ ಶ್ರುತ್ವಾ ಪ್ರೀತಿಮಾನಭವದ್ವಸುಃ ॥16॥

ಏತಸ್ಮಿನ್ನೇವ ಕಾಲೇತು ಪಾಂಡ್ಯದೇಶಾತ್ಸಮಾಗತಃ ।
ಬಾಲ್ಯಾತ್ಪ್ರಭೃತಿ ಶೂದ್ರೋಽಪಿ ವಿಷ್ಣುಭಕ್ತಿ ಸಮನ್ವಿತಃ ॥17॥

ನಾರಾಯಣಪುರೀಂ ಪ್ರಾಪ್ಯ ಶ್ರೀವರಾಹಂ ಪ್ರಣಮ್ಯ ಚ ।
ತತ್ರ ಶ್ರುತ್ವಾ ಶ್ರೀನಿವಾಸಂ ವೇಂಕಟಾದ್ರಿನಿವಾಸಿನಮ್ ॥18॥

ಸಂಹರಿಸಲುದ್ಯುಕ್ತನಾದನು. ತಕ್ಷಣ ಆ ವೃಕ್ಷದ ಮೂಲದಲ್ಲಿರುವ ಶ್ರೀನಿವಾಸನು ಹಿಂದಿನಿಂದಾಗಮಿಸಿ ಆ ಖಡ್ಗವನ್ನು ಹಿಡಿದನು. ಖಡ್ಗವು ಯಾರಿಂದ ಹಿಡಿಯಲ್ಪಟ್ಟಿರುವದೆಂದು ಹಿಂದಿರುಗಿದಾಗ ಶಂಖಚಕ್ರಗದಾಧಾರಿಯಾದ ಪರಮಾತ್ಮನನ್ನು ನೋಡಿ, ಖಡ್ಗವನ್ನು ಅಲ್ಲಿಯೇ ಒಗೆದು, ಪರಮಾತ್ಮನನ್ನು ನಮಸ್ಕರಿಸಿದನು. ಅದರಂತೆ ಹೇಸ್ವಾಮಿಯೇ! ಇದೇನು ನಿನ್ನ ವ್ಯಾಪಾರವೆಂದು ಗದ್ಗದ ಕಂಠದಿಂದ ಪ್ರಶ್ನಿಸಿದನು. ಅದಕ್ಕೆ ಭಗವಂತನು 'ನಿನ್ನ ಪುತ್ರನು ನನ್ನಲ್ಲಿ ಅವಿಚ್ಛಿನ್ನ ಭಕ್ತಿಯನ್ನು ಮಾಡುತ್ತಿರುವನು. ನಿನಗಿಂತಲೂ ಅವನೇ ನನಗೆ ಅತಿ ಪ್ರಿಯನು. ಈ ಕಾರಣದಿಂದ ನಾನು ನಿನಗೆ ಪ್ರತ್ಯಕ್ಷನಾಗಿರುವೆನು. ಈ ದಿವಸದಿಂದ ನಾನು ನಿನಗೆ ದರ್ಶನವನ್ನು ಕೊಡುವದಕ್ಕಾಗಿ ಸ್ವಾಮಿಸರೋವರದ ದಡದಲ್ಲಿ ನಿಂತುಕೊಳ್ಳುವೆನು' ಎಂದು ನುಡಿದನು. ಭಗವಂತನ ಈ ಮಾತನ್ನು ಕೇಳಿದ ವಸುವು ಅತ್ಯಂತ ಸಂತುಷ್ಟನಾದನು. ಇದೇ ಸಂದರ್ಭದಲ್ಲಿ ಶೂದ್ರನಾಗಿದ್ದರೂ ಸಹ ಬಾಲ್ಯದಿಂದಲೇ ವಿಷ್ಣುಭಕ್ತಿಪರಾಯಣನಾದ ಪಾಂಡ್ಯದೇಶದಿಂದ ಬಂದ ಭಕ್ತನೊಬ್ಬನು ನಾರಾಯಣ ಪುರಿಗೆ ಬಂದು ವರಾಹ ದೇವರನ್ನು ನಮಸ್ಕರಿಸಿದನು. ವೇಂಕಟಾಚಲದಲ್ಲಿ

ಸ್ವಯಂಭುವಂ ದೇವದೇವ ಸೇವಿತಂ ಪ್ರಯಯೌ ತತಃ ।
ಸುವರ್ಣಮುಖರೀಂ ಪ್ರಾಪ್ಯ ಸ್ನಾತ್ವಾ ಚೋತ್ತೀರ್ಯ ತತ್ತಟೇ ॥19॥

ಕಮಲಾಖ್ಯೇ ಸರಸಿ ಚ ಸ್ನಾತ್ವಾ ಪುಣ್ಯಪ್ರದಾಯಿನಿ ।
ತತ್ತೀರವಾಸಿನಂ ದೇವಂ ಕೃಷ್ಣಂ ರಾಮೇಣ ಸಂಯುತಮ್ ॥20॥

ನಮಸ್ಕೃತ್ಯ ತತಃ ಪ್ರಾಯಾದ್ವನಂ ಗಜಘಟಾಯುತಮ್ ।
ಶನೈಃ ಸಂಪ್ರಾಪ್ಯ ಶೇಷಾದ್ರಿಂ ನಿರ್ಝರಂ ಸಂದದರ್ಶ ಹಿ ॥21॥

ತತ್ಸಮೀಪಂ ಸಮಾಸಾದ್ಯ ಕಪಿಲಾಪೂಜಿತಂ ಶಿವಮ್ ।
ತತ್ಪುರಶ್ಚಕ್ರತೀರ್ಥಂ ತದಗಾಧಂ ಪಾಪನಾಶನಮ್ ॥22॥

ತತ್ರ ಸ್ನಾತ್ವಾ ತತೋಽಗಚ್ಛದ್ವೇಂಕಟಾದ್ರಿಂ ಶನೈಃ ಶನೈಃ ।
ಆರಾದ್ಧಂ ಗಚ್ಛತಾ ಮಾರ್ಗೇ ಯುಕ್ತೋ ವೈಖಾನಸೇನ ಚ ॥23॥

ರಂಗದಾಸಸ್ತ್ವಾರುರೋಹ ಬಾಲೋ ದ್ವಾದಶವಾರ್ಷಿಕಃ ।
ಸ್ವಾಮಿಪುಷ್ಕರಿಣೀಂ ಪ್ರಾಪ್ಯ ಸ್ನಾತ್ವಾ ಭಕ್ತಿ ಸಮನ್ವಿತಃ ॥24॥

ವೈಖಾನಸೇನ ಮುನಿನಾ ಗೋಪೀನಾಥೇನ ಪೂಜಿತಮ್ ।
ವನಮಧ್ಯೇ ತರೋರ್ಮೂಲೇ ಸ್ವಾಮಿಪುಷ್ಕರಿಣೀ ತಟೇ ॥25॥

ತಿಷ್ಠಂತಂ ಪುಂಡರೀಕಾಕ್ಷಂ ಶ್ರೀಭೂಮಿಸಹಿತಂ ಹರಿಮ್ ।

ಶ್ರೀನಿವಾಸನು ನಿಂತಿರುವನೆಂಬುವದನ್ನು ಕೇಳಿ ಆ ಭಗವಂತನನ್ನು ಸಂದರ್ಶಿಸಲು ಸುವರ್ಣಮುಖರೀ ನದಿಗೆ ಹೋಗಿ, ಅಲ್ಲಿ ಸ್ನಾನವನ್ನು ಮಾಡಿ ಅದರ ಸಮೀಪದ ದಂಡೆಯಲ್ಲಿಯೇ ಇರುವ ಪದ್ಮಸರೋವರದಲ್ಲಿಯೂ ಸ್ನಾನವನ್ನು ಮಾಡಿ ಅದರ ದಡದಲ್ಲಿ ನೆಲಸಿರುವ ಬಲರಾಮನಿಂದ ಸಹಿತನಾದ ಶ್ರೀಕೃಷ್ಣನನ್ನು ನಮಿಸ್ಕರಿಸಿ, ಮಹಾ ಮಹಾ ಗಜಗಳಿಂದ ಯುಕ್ತವಾದ ನಿಬಿಡವಾದ ವನಗಳನ್ನು ದಾಟಿ ಶೇಷಾಚಲಕ್ಕೆ ಬಂದು, ಅಲ್ಲಿ ಒಂದು ನೀರಿನ ಝುರಿಯನ್ನು ಕಂಡನು. ಅದರ ಸಮೀಪದಲ್ಲಿಯೇ ಕಪಿಲ ಋಷಿಯಿಂದ ಪೂಜಿತವಾದ ಶಿವನನ್ನು ಅದರ ಮುಂಭಾಗದಲ್ಲಿರುವ ಪಾಪನಾಶಕವಾದ ಚಕ್ರತೀರ್ಥವನ್ನು ಕಂಡು ಅಲ್ಲಿ ಸ್ನಾನಮಾಡಿ ಮೆಲ್ಲಗೆ ನಡೆಯುತ್ತಾ ವೇಂಕಟಾಚಲವನ್ನು ಕುರಿತು ಪ್ರಯಾಣವನ್ನು ಬೆಳಸಿದನು. ಮಾರ್ಗಮಧ್ಯದಲ್ಲಿ ವೃದ್ಧನಾದ ವೈಖಾನಸನಿಂದ ಯುಕ್ತನಾದ ದ್ವಾದಶವರ್ಷೀಯ ಬಾಲಕನಾದ ರಂಗದಾಸನು ಪರ್ವತವನ್ನೇರಿ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡಿ ಅತ್ಯಂತ ಭಕ್ತಿಯುಕ್ತನಾಗಿ, ವೈಖಾನಸಮುನಿಯಾದ ಗೋಪೀನಾಥನಿಂದ ಪೂಜಿತನಾದ, ವನಮಧ್ಯದಲ್ಲಿದ್ದ

ಆಕಾಶಸ್ಥಂ ಸಂದದರ್ಶ ಪ್ರೀತನೀಲಾಕೃತಿಂ ಶುಭಮ್ ||26||

ಪಾರ್ಶ್ವಸ್ಥಶಂಖಚಕ್ರಾಭ್ಯಾಂ ಗದಾಽಸಿಭ್ಯಾಂ ನಿಷೇವಿತಮ್ ।
ಪಕ್ಷೌ ವಿಸ್ತಾರ್ಯ ಚಾಕಾಶೇ ದೇವಮೂರ್ಧ್ನಿ ವಿತಾನವತ್ ||27||

ಸ್ಥಿತಂ ಚ ಗರುಡೇಶಾನಂ ಪಶ್ಚಾಚ್ಛಾರ್ಙ್ಗಂ ಶರಂ ತಥಾ ||28||

ಏವಂ ದೃಷ್ಟ್ವಾ ಶ್ರೀನಿವಾಸಂ ವಿಸ್ಮಿತೋ ರಂಗದಾಸಕಃ ।
ಅಸ್ಯ ದೇವಸ್ಯ ಚಾರಾಮಂ ಕಾರಯಾಮೀತ್ಯಚಿಂತಯತ್ ||29||

ನಿಶ್ಚಿತ್ಯ ಮನಸಾ ಸರ್ವಂ ತರುಮೂಲೇಽವಸತ್ಸುಧೀಃ ।
ಕೃತ್ವಾ ವೈಖಾನಸಾದ್ವಿಷ್ಣೋರ್ನೈವೇದ್ಯಂ ಚ ದಿನೇ ದಿನೇ ||30||

ಶನೈಶ್ಚಿತ್ತ್ವಾ ವನಂ ಘೋರಂ ವೃಕ್ಷಾಂಶ್ಚಿಚ್ಛೇದ ಪಾರ್ಶ್ವಗಾನ್ ।
ಆಸ್ಥಾನಚಿಂಚಾಂ ದೇವಸ್ಯ ರಮಾಯಾಶ್ಚಂಪಕಂ ತರುಮ್ ||31||

ದೇವಾಜ್ಞಪ್ತೋ ವರ್ಜಯಿತ್ವಾ ತಾವುಭೌ ದೇವಸೇವಿತೌ ।
ದೇವಸ್ಯ ಪರಿತೋ ಭೂಮೌ ಶಿಲಾಕುಂಡಂ ತದಾಽಕರೋತ್ ||32||

ತತ್ಕುಂಡಸ್ಯೈವ ಪರಿತಃ ಪುಷ್ಪಾರಾಮಾಂಶ್ಚಕಾರ ಹ ।

ಸ್ವಾಮಿಪುಷ್ಕರಿಣಿಯ ದಡದಲ್ಲಿಯ ವೃಕ್ಷಮೂಲದಲ್ಲಿ ನಿಂತಿರುವ ಶ್ರೀಭೂಮಿಸಹಿತನಾದ ಕಮಲ ನಯನನಾದ, ಭಕ್ತರ ಅಭೀಷ್ಟದಾಯಕನಾದ, ನೀಲಮೇಘಶ್ಯಾಮನಾದ, ಭಕ್ತಮಂಗಲದಾಯಕನಾಗಿ ಶಂಖ, ಚಕ್ರ, ಗದಾ, ಖಡ್ಗಧಾರಿಯಾಗಿ ನಿಂತಿದ್ದ ಶ್ರೀನಿವಾಸನನ್ನು ಕಂಡು, ಆಶ್ಚರ್ಯಚಕಿತನಾದನು. ಭಗವಂತನ ಸೇವಾರ್ಥವಾಗಿ ಗರುಡನು ತನ್ನ ಎರಡೂ ರೆಕ್ಕೆಗಳನ್ನು ಭಗವಂತನ ಶಿರಸ್ಸಿನ ಮೇಲೆ ಹರಡಿ, ಛತ್ರದಂತೆ ಕಂಗೊಳಿಸುತ್ತಿದ್ದನು. ಭಗವಂತನ ಹಿಂಭಾಗದಲ್ಲಿ ಶಾಂರ್ಗಧನಸ್ಸು ಮತ್ತು ಬಾಣಗಳು ಕಂಗೊಳಿಸುತ್ತಿದ್ದವು. ಇಂತಹ ಭಗವಂತನ ಸೇವಾರ್ಥವಾಗಿ ಪುಷ್ಪೋದ್ಯಾನ ವನವೊಂದನ್ನು ನಿರ್ಮಿಸ ಬೇಕೆಂದು ರಂಗದಾಸನು ಸಂಕಲ್ಪಿಸಿದನು. ಆ ವೃಕ್ಷದ ಅಡಿಯಲ್ಲಿಯೇ ವಾಸವಾಗಿ ಪ್ರತಿನಿತ್ಯದಲ್ಲಿಯೂ ವೈಖಾನಸನಾದ ಗೋಪೀನಾಥನಿಂದ ಭಗವಂತನಿಗೆ ನೈವೇದ್ಯವನ್ನು ಮಾಡಿಸುತ್ತಿದ್ದನು. ಕ್ರಮೇಣ ರಂಗದಾಸನು ಸುತ್ತಮುತ್ತಲಿರುವ ಗಿಡ-ಮರಗಳನ್ನು ಕತ್ತರಿಸಿ ಪರಮಾತ್ಮನ ಅಪ್ಪಣೆಯಂತೆ ಆತನ ವಾಸಸ್ಥಾನವಾದ ಹುಣಸೆಯ ಮರವನ್ನು, ಲಕ್ಷ್ಮಿಯ ನಿವಾಸವಾದ ಸಂಪಿಗೆಯ ಮರವನ್ನು ಹೊರತು ಪಡಿಸಿ, ಅವುಗಳ ಸುತ್ತಲೂ ಯಥಾಯೋಗ್ಯವಾಗಿ ಮಲ್ಲಿಗೆ, ಕರವೀರ, ಕಮಲ, ಕುಂದ, ಮಂದಾರ, ಮಾಲತೀ, ತುಳಸೀ, ಸಂಪಿಗೆ ಮುಂತಾದ ಮರಗಳನ್ನು ಬೆಳಸಿದನು. ಒಂದು ಕೂಪವನ್ನು ನಿರ್ಮಿಸಿ ಅದರಿಂದ ಎಲ್ಲ ವೃಕ್ಷಗಳನ್ನು

ಮಲ್ಲಿಕಾಕರವೀರಾಬ್ಜಕುಂದಮಂದಾರಮಾಲತೀಃ ॥32॥

ತುಲಸೀಚಂಪಕಾನಾಂ ತು ವನಾನ್ಯೇವ ಚಕಾರ ಹ ।
ಖನಿತ್ವಾ ತತ್ರ ಕೂಪಂ ತು ವರ್ಧಯಂಸ್ತಜ್ಜಲೈರ್ವನಮ್ ॥34॥

ಆರಾಮಪುಷ್ಪಾಣ್ಯಾದಾಯ ಸ್ವಯಂ ದಾಮಾನ್ಯಥಾಕರೋತ್ ।
ವಿಚಿತ್ರಾಣಿ ತದಾ ಬದ್ಧ್ವಾ ಪೂಜಕಸ್ಯ ಕರೇ ದದೌ ॥35॥

ಆದಾಯ ಪೂಜಕಸ್ತಾನಿ ಸ್ಕಂಧೇ ಮೂರ್ಧ್ನಿ ಬಬಂಧ ಚ ।
ಶ್ರೀನಿವಾಸಸ್ಯ ದೇವಸ್ಯ ಶ್ರೀಭೂಮಿಸಹಿತಸ್ಯ ಚ ॥36॥

ಏವಂ ದೇವಸ್ಯ ಕೈಂಕರ್ಯಂ ಕುರ್ವಂಸ್ತಸ್ಥಾವುದಾರಧೀಃ ।
ತಸ್ಯೈವಂ ವರ್ತಮಾನಸ್ಯ ಸಮಾಸ್ತ್ವಾಸಪ್ತತೇರ್ಗತಾಃ ॥37॥

ಕುರ್ವಾಣೇ ಪುಷ್ಪಾಪಚಯಂ ರಂಗದಾಸೇ ಮಹಾತ್ಮನಿ ॥38॥

ಆರಾಮೇ ಸರಸಿ ಸ್ನಾತುಂ ಗಂಧರ್ವಃ ಕಶ್ಚಿದಾಯಯೌ ।
ಗಂಧರ್ವರಾಜಕನ್ಯಾಭಿಸ್ತರುಣೀಭಿಃ ಸಮನ್ವಿತಃ ॥39॥

ಜಲಕ್ರೀಡಾಂ ಕರೋತಿ ಸ್ಮ ದಿವಿ ಸ್ಥಾಪ್ಯ ವಿಮಾನಕಮ್ ।
ಸುರೂಪಾಭಿಶ್ಚ ಸಹಿತಂ ಕ್ರೀಡಂತಂ ಕಮಲಾಕರೇ ॥40॥

ಪಶ್ಯಂಚ್ಛ್ರೀರಂಗದಾಸೋಽಯಂ ವ್ಯಸ್ಮರನ್ಮಾಲ್ಯಸಂಚಯಮ್ ।
ಜಿತೇಂದ್ರಿಯೋಽಪಿ ತತ್ಕ್ರೀಡಾಂ ಪಶ್ಯನ್ನೇತಃ ಸಸರ್ಜ ಚ ॥41॥

ಬೆಳೆಸುತ್ತಿದ್ದನು. ನಿತ್ಯದಲ್ಲಿಯೂ ತನ್ನಿಂದ ನಿರ್ಮಿತವಾದ ಪುಷ್ಪಗಳನ್ನು ಶೇಖರಿಸಿ, ಮನೋಹರವಾದ ಮಾಲೆಯನ್ನು ನಿರ್ಮಾಣ ಮಾಡಿ, ಅರ್ಚಕನ ಮುಖಾಂತರವಾಗಿ ಶ್ರೀಭೂಸಹಿತನಾದ ಪರಮಾತ್ಮನ ಕಂಠದಲ್ಲಿ ಸಮರ್ಪಿಸುತ್ತಿದ್ದನು. ನಿತ್ಯದಲ್ಲಿ ಈ ರೀತಿಯಾಗಿ ಭಕ್ತಿಪುರಸ್ಸರವಾಗಿ ಪರಮಾತ್ಮನ ಕೈಂಕರ್ಯವನ್ನು ಮಾಡುತ್ತಿದ್ದ ರಂಗದಾಸನ ಎಪ್ಪತ್ತು ವರ್ಷಗಳು ಕಳೆದವು. ಒಂದು ದಿವಸ ಒಬ್ಬ ಗಂಧರ್ವನು ಯುವತಿಯರಾದ ಗಂಧರ್ವ ಸ್ತ್ರೀಯರೊಡನೆ ಸರೋವರದಲ್ಲಿ ಸ್ನಾನಮಾಡಲು ಉದ್ಯಾನವನಕ್ಕೆ ಬಂದನು. ಅಂತರಿಕ್ಷದಲ್ಲಿ ತನ್ನ ವಿಮಾನವನ್ನು ನಿಲ್ಲಿಸಿ, ಜಲಕ್ರೀಡಾರತನಾಗಿ ಸೌಂದರ್ಯವತಿಯರಾದ ಗಂಧರ್ವಸ್ತ್ರೀಯರೊಂದಿಗೆ ಸರೋವರದಲ್ಲಿ ಕ್ರೀಡಿಸುತ್ತಿದ್ದ ಆತನನ್ನು ನೋಡುತ್ತಾ ರಂಗದಾಸನು ಪರಮಾತ್ಮನಿಗೆ ಅರ್ಪಿಸುವದಕ್ಕಾಗಿ ಪ್ರತಿನಿತ್ಯದಲ್ಲಿಯೂ ಮಾಡುತ್ತಿದ್ದ ಪುಷ್ಪಮಾಲೆಯನ್ನು ಕಟ್ಟುವ ಕೆಲಸವನ್ನು ಮರೆತು ಬಿಟ್ಟನು. ಆ ಸ್ತ್ರೀಯರ ಹಾವ-ಭಾವಗಳ

ಪಶ್ಯತಸ್ತಸ್ಯ ಸರಸಃ ಸಮುತ್ತೀರ್ಯ ಮನೋಹರಮ್ ।
ದಿವ್ಯವಸ್ತ್ರಾಣಿ ಚಾಚ್ಛಾದ್ಯ ಕಾಂತಾಭಿಃ ಸಹ ಸಸ್ಮಿತಮ್ ॥42॥

ಆಧಿರುಹ್ಯ ವಿಮಾನಂ ತು ಯಯೌ ಸ ಧನದಾಲಯಮ್ ।
ಗತೇ ಗಂಧರ್ವರಾಜೇ ತು ರಂಗದಾಸೋ ವಿಮೋಹಿತಃ ॥43॥

ತ್ಯಕ್ತ್ವಾ ಚ ತಾನಿ ಮಾಲ್ಯಾನಿ ಸ್ನಾತ್ವಾ ಸರಸಿ ಲಜ್ಜಿತಃ ।
ಪುನರಾಹೃತ್ಯ ಪುಷ್ಪಾಣಿ ಶನೈರ್ದೇವಾಲಯಂ ಯಯೌ ॥44॥

ವೈಖಾನಸಸ್ತು ತಂ ದೃಷ್ಟ್ವಾ ಪೂಜಾಕಾಲಮತೀತ್ಯ ಚ ।
ಆಗತಂ ಕಿಮಿತಿ ಪ್ರಾಹ ಸಖೇऽತಿಕ್ರಮ್ಯ ಚಾಗತಃ ॥45॥

ನ ಬದ್ಧಾ ಮಾಲಿಕಾಶ್ಚಾಪಿ ತ್ವಯಾऽऽರಾಮೇ ಚ ಕಿಂ ಕೃತಮ್ ॥46॥

ಶ್ರೀ ವರಾಹ ಉವಾಚ–

ಇತ್ಥಂ ಪೃಷ್ಟೋ ರಂಗದಾಸೋ ನಾವದಲ್ಲಜ್ಜಯಾ ತತಃ ।
ಲಜ್ಜಿತಂ ರಂಗದಾಸಂ ತಂ ಪ್ರೋವಾಚ ಮಧುಸೂದನಃ ॥47॥

ಶ್ರೀಭಗವಾನುವಾಚ–

'ಲಜ್ಜಯಾ ಕಿಂ ರಂಗದಾಸ ಮಯಾ ತ್ವಂ ಮೋಹಿತೋ ಹ್ಯಸಿ ।
ತ್ವಂ ತಾವಜ್ಜಿತಕಾಮೋऽಸಿ ಧೀರೋ ಭವ ಮಹಾಮತೇ ॥48॥

ವೀಕ್ಷಣೇಯಿಂದ ಜಿತೇಂದ್ರಿಯನಾಗಿದ್ದರೂ ಸಹ ರಂಗದಾಸನಿಗೆ ರೇತಸ್ಸೇಚನವಾಯಿತು. ಸ್ವಲ್ಪ ಸಮಯದಲ್ಲಿಯೇ ಸ್ತ್ರೀಯರಿಂದ ಸಹಿತನಾದ ಗಂಧರ್ವನು ಅಲಕಾಪುರಿಗೆ ಹೊರಟುಹೋದನು. ಅನಂತರದಲ್ಲಿ ರಂಗದಾಸನಿಗೆ ವ್ಯಾಮೋಹವು ಕಳಚಿ ತನ್ನಿಂದ ಸಂಗ್ರಹೀತವಾದ ಪುಷ್ಪಗಳನ್ನು ಲಜ್ಜೆಯಿಂದ. ಮೈಲಿಗೆಯಾಯಿತೆಂದು ಬೀಸಾಡಿ ಮತ್ತೆ ಸರೋವರದಲ್ಲಿ ಸ್ನಾನವನ್ನು ಮಾಡಿ ಹೊಸ ಪುಷ್ಪಗಳನ್ನು ಸಂಗ್ರಹಿಸಿ ಮಾಲೆಯೊಂದಿಗೆ ದೇವಾಲಯವನ್ನು ಪ್ರವೇಶಿಸಿದನು. ಆ ಸಂದರ್ಭದಲ್ಲಿ ಅರ್ಚಕನು ತನ್ನ ಪೂಜೆಯನ್ನು ಸಮಾಪ್ತಿಗೊಳಿಸುತ್ತಿದ್ದನು. ನಾಚಿಕೆಯಿಂದ ಮೆಲ್ಲನೆ ಬರುತ್ತಿದ್ದ ರಂಗದಾಸನನ್ನು ತಡವಾದುದಕ್ಕೆ ಪ್ರಶ್ನಿಸಿದರು. ತೂಷ್ಣೀಭೂತನಾದ ರಂಗದಾಸನು ಏನೂ ಉತ್ತರವನ್ನು ಕೊಡದಿದ್ದಾಗ ವೃಕ್ಷಮೂಲದಲ್ಲಿರುವ ಶ್ರೀನಿವಾಸನು ಪ್ರತ್ಯಕ್ಷವಾಗಿ ಈ ರೀತಿಯಾಗಿ ಮಾತನಾಡಿದನು. 'ರಂಗದಾಸನೇ! ನೀನು ಏಕೆ ನಾಚಿಕೆ ಪಡುತ್ತಿರುವಿ. ನಾನೇ ನಿನ್ನನ್ನು ನನ್ನ ಮಾಯೆಯಿಂದ ಮೋಹಗೊಳ್ಳುವಂತೆ ಮಾಡಿರುವೆನು. ನೀನು ಕಾಮವನ್ನು ಗೆದ್ದವನು. ಮಹಾಪ್ರಾಜ್ಞನು. ಧೈರ್ಯಗೆಡದಿರು. ಗಂಧರ್ವರಾಜನನ್ನು ನೋಡಿ ಮೋಹಿತನಾಗಿ

ಗಂಧರ್ವರಾಜವದ್ರಾಜಾ ಭವಿತಾಽಸಿ ಮಹೀತಲೇ ।
ತತ್ರ ಭುಕ್ತ್ವಾ ಮಹಾಭೋಗಾನ್ಭಕ್ತಿಮಾನ್ಮಯಿ ಸರ್ವದಾ ॥49॥

ಪ್ರಾಕಾರಂ ಚ ವಿಮಾನಂ ಚ ಕಾರಯಿಷ್ಯಸಿ ಮೇ ತದಾ ।
ತತ್ರ ಮುಕ್ತಿಂ ಪ್ರದಾಸ್ಯಾಮಿ ಪ್ರೀತ್ಯಾ ಪರಮಯಾ ಯತುಃ ॥50॥

ಅತ್ರೈವ ಕುರು ಸೇವಾಂ ಸ್ವಮಾಶರೀರವಿಮೋಕ್ಷಣಾತ್ ।
ಮದ್ಭಕ್ತಾನಂ ಸಕಾಮಾನಾಮೇವಂ ಮುಕ್ತಿರ್ಭವಿಷ್ಯತಿ ॥51॥

ಇತ್ಯುಕ್ತ್ವಾ ಭಗವಾನ್ವಿಷ್ಣುಃ ಪುನರ್ನೋವಾಚ ಕಿಂಚನ ।
ಶ್ರುತ್ವಾ ತದ್ರಂಗದಾಸೋಽಪಿ ಚಕಾರಾರಾಮಮುತ್ತಮಮ್ ॥52॥

ಸಾಗ್ರಂ ಶತಾಬ್ದಂ ಸೇವಿತ್ವಾ ಗತಃ ಸ್ವರ್ಗಮಮಂದಧೀಃ ।
ಜಾತಃ ಸೋಮಕುಲೇ ತುಂಗೇ ತೋಂಡಮಾನಿತಿ ವಿಶ್ರುತಿಃ ॥53॥

ಸುವೀರತನಯೋ ವೀರೋ ನಂದಿನೀಗರ್ಭಸಂಭವಃ ।
ಸ ಪಂಚವರ್ಷಾದುದ್ಭೂತವಿಷ್ಣುಭಕ್ತಿಃ ಸ್ವಯಂ ಸುಧೀಃ ।
ಸೌಶೀಲ್ಯ ಶೌರ್ಯವೀರ್ಯಾದಿಗುಣಾನಾಮಾಕರೋ ಮಹಾನ್ ॥54॥

ಪಾಂಡ್ಯಸ್ಯ ತನಯಾಂ ಪದ್ಮಾಮುಪಯೇಮೇ ಮನೋಹರಾಮ್ ।
ತತೋ ರಾಜಾ ಶತಂ ಕನ್ಯಾ ನಾನಾದೇಶ್ಯಾಃ ಸ್ವಯಂವರಾಃ ॥55॥

ಇರುವದರಿಂದ ನೀನೂ ಸಹ ಇನ್ನು ಮುಂದೆ ಕಾಲಾಂತರದಲ್ಲಿ ಗಂಧರ್ವರಾಜನಂತೆಯೇ ರಾಜನಾಗಿ ಜನಿಸುವಿ. ಆ ಜನ್ಮದಲ್ಲಿಯೂ ಸಹ ನೀನು ನನ್ನಲ್ಲಿ ನಿರಂತರವಾದ ಭಕ್ತಿಯುಳ್ಳವನಾಗಿ ಭೋಗ ಭಾಗ್ಯಗಳನ್ನನುಭವಿಸುತ್ತಾ ನನಗೆ ಉತ್ತಮವಾದ ದೇವಸ್ಥಾನ, ಪ್ರಾಕಾರ, ಮಂಟಪಗಳನ್ನು ಮಾಡಿಸುವವನಾಗುತ್ತೀ. ಅದರಿಂದ ಪ್ರೀತನಾದ ನಾನು ನಿನಗೆ ಮೋಕ್ಷವನ್ನು ಕೊಡುವೆನು. ಅಲ್ಲಿಯವರೆಗೂ ನಿನ್ನ ಶರೀರ ಪತನವಾಗುವದರವರೆಗೂ ಇಲ್ಲಿಯೇ ನನ್ನ ಸೇವೆಯನ್ನು ಮಾಡುತ್ತಾ ವಾಸವಾಗಿರು.' ಈ ರೀತಿಯಾಗಿ ಭಗವಂತನ ಮಾತನ್ನು ಕೇಳಿದ ರಂಗದಾಸನು ಸುಮ್ಮನಾದನು. ಮುಂದೆ, ರಂಗದಾಸನು ಉತ್ತಮವಾದ ತನ್ನ ಉದ್ಯಾನವನವನ್ನು ಅತ್ಯಂತ ಎಚ್ಚರದಿಂದ ಅಭಿವೃದ್ಧಿಗೊಳಿಸಹತ್ತಿದನು. ಹೀಗೆ ಒಂದು ನೂರು ವರ್ಷಗಳು ಕಳೆದ ಮೇಲೆ ಸ್ವರ್ಗಸ್ಥನಾದನು. ಅನಂತರದಲ್ಲಿ ಪ್ರಸಿದ್ಧವಾದ ಉತ್ತಮವಾದ ಚಂದ್ರವಂಶದಲ್ಲಿ ತೋಂಡಮಾನನೆಂಬ ಹೆಸರಿನಿಂದ ಸುವೀರ ಮಹಾರಾಜ ಮತ್ತು ನಂದಿನಿಯ ಮಗನಾಗಿ ಜನಿಸಿದನು. ಐದುವರ್ಷದ ಬಾಲಕನಾಗಿದ್ದಾಗಲೇ ಅವನು ವಿಷ್ಣುಭಕ್ತಿ, ಬುದ್ಧಿಶಕ್ತಿ, ಸೌಶೀಲ್ಯ, ಔದಾರ್ಯ, ಶೌರ್ಯವೇ

ರೇಮೇ ದೇವೇಂದ್ರವದ್ಭೂಮೌ ನಾರಾಯಣಪುರೇ ವಸನ್ ।
ಅನುಜ್ಞಾಂ ಪ್ರಾಪ್ಯ ಪಿತೃತಃ ಪುತ್ರಃ ಪಂಚಾಸ್ಯವಿಕ್ರಮಃ ॥56॥

ಉದ್ದಿಶ್ಯ ಮೃಗಯಾಂ ವೀರೋ ವೇಂಕಟಾದ್ರೇಃ ಸಮಾಪತಃ ॥57॥

ಪಾದಚಾರೇಣ ವಿಚರನ್ಪರಿವಾರೈಃ ಸಮನ್ವಿತಃ ।
ಮದಧಾರಾಂ ವಿಮುಂಚಂತಂ ದದರ್ಶ ಜಗಯೂಥಪಮ್ ॥58॥

ತಂ ದೃಷ್ಟ್ವಾ ವಿಸ್ಮಿತೋ ಭೂತ್ವಾ ಗ್ರಹೀತಂ ತಮನುದ್ರುತಃ ।
ಸುವರ್ಣಮುಖರೀಂ ತೀರ್ತ್ವಾ ಬ್ರಹ್ಮರ್ಷಿಂ ಶುಕಮುತ್ತಮಮ್ ॥59॥

ನಮಸ್ಕೃತ್ಯಾಭ್ಯನುಜ್ಞಾತಃ ತತೋಽಗಚ್ಛದ್ವನಾದ್ವನಮ್ ।
ದದರ್ಶ ರೇಣುಕಾಂ ದೇವೀಂ ವಲ್ಮೀಕಾಕಾರಸಂಸ್ಥಿತಾಮ್ ॥60॥

ಇಷ್ಟದಾಮಿಷ್ಟಭಕ್ತಾನಾಂ ದಿವ್ಯಾರಾಮನಿವಾಸಿನೀಮ್ ।
ಪರಿವಾರೈಃ ಸದೋಪೇತಾಂ ಪೂಜಿತಾಂ ತ್ರಿದಶೈರಪಿ ॥61॥

ತೋಂಡಮಾನಪಿ ತಾಂ ನತ್ವಾ ತತಃ ಪಶ್ಚಾನ್ಮುಖೋ ಯಯೌ ॥62॥

ಪಂಚವರ್ಣಂ ಶುಕಂ ದೃಷ್ಟ್ವಾ ತಂ ಜಿಘೃಕ್ಷುರನುದ್ರುತಃ ।
ಸ ವದನ್ ಶ್ರೀನಿವಾಸೇತಿ ಗಿರಿಂ ಶೀಘ್ರತರಂ ಯಯೌ ॥63॥

ಮೊದಲಾದ ಸದ್ಗುಣಗಳ ನಿಧಿಯಾಗಿದ್ದನು. ಪ್ರಥಮವಾಗಿ ಆತನು ಪರಮ ಸುಂದರಿಯಾದ, ಮನೋಹರಳೂ ಆದ ಪಾಂಡ್ಯರಾಜನ ಮಗಳಾದ ಪದ್ಮಾ ಎಂಬುವವಳನ್ನು ಮದುವೆಯಾದನು. ಬಳಿಕ ಸ್ವಯಂವರಗಳ ಮುಖಾಂತರವಾಗಿ ನೂರಾರು ಕನ್ನಿಕೆಯರು ಆತನ ಪಾಣಿಗ್ರಹಣವನ್ನು ಮಾಡಿದರು. ಪರಮ ಪರಾಕ್ರಮಿಯಾದ ಆತನು ತಂದೆಯ ಅನುಜ್ಞೆಯನ್ನು ಪಡೆದು ಬೇಟೆಯಾಡುವ ಉದ್ದೇಶದಿಂದ ತನ್ನ ಸೇವಕರೊಡನೆ ವೇಂಕಟಾಚಲದ ಸಮೀಪದಲ್ಲಿ ಪಾದಚಾರಿಯಾಗಿ ಸುತ್ತುತ್ತಿರುವಾಗ ಮದೋದಕವನ್ನು ಸುರಿಸುತ್ತಿದ್ದ ಒಂದು ಆನೆಯನ್ನು ಕಂಡನು. ಅದನ್ನು ಹಿಡಿಯಬೇಕೆಂಬ ಮಹದಾಸೆಯಿಂದ ಅದನ್ನು ಹಿಂಬಾಲಿಸಿದನು. ಸುವರ್ಣಮುಖಿಯನ್ನು ದಾಟಿ ಬ್ರಹ್ಮರ್ಷಿಗಳಾದ ಶುಕಮುನಿಗಳನ್ನು ನಮಸ್ಕರಿಸಿ, ಅವರ ಅಪ್ಪಣೆಯನ್ನು ಪಡೆದು ವನದಿಂದ ವನಕ್ಕೆ ಸಂಚರಿಸುತ್ತಿದ್ದನು. ಮಧ್ಯದಲ್ಲಿ ವಲ್ಮೀಕಾಕಾರ ಸಂಸ್ಥಿತಳಾದ ಇಷ್ಟಭಕ್ತಳಿಗೆ ಇಷ್ಟಪ್ರದಳಾದ ದಿವ್ಯಾರಾಮದಲ್ಲಿ ವಿರಾಜಿತಳಾದ ರೇಣುಕಾದೇವಿಯನ್ನು ಕಂಡು ಪೂಜಿಸಿ, ಅನಂತರದಲ್ಲಿ ಪ್ರಯಾಣವನ್ನು ಬೆಳಸಿದನು. ದಾರಿಮಧ್ಯದಲ್ಲಿ ಪಂಚವರ್ಣೋಪೇತನಾದ ಗಿಳಿಯೊಂದನ್ನು ಕಂಡು ಅದನ್ನು ಪಡೆಯಬೇಕೆಂಬ ಇಚ್ಛೆಯಿಂದ ಅದನ್ನು ಹಿಂಬಾಲಿಸಿದಾಗ

ಅನುದ್ರವನ್ಸ ರಾಜಾಽಪಿ ಗಿರಿರಾಜಂ ಸಮಾರುಹತ್ ।
ದರೀಶ್ಚ ವಿವಿಧಾಃ ಪಶ್ಯನ್ ಶಿಖರಾಣಿ ಸಮಂತತಃ ॥64॥

ಶುಕಮನ್ವೇಷಮಾಣೋಽಸೌ ಶ್ಯಾಮಕವನಮೇಯಿವಾನ್ ।
ತಮದೃಷ್ಟ್ವಾ ಶುಕವರಂ ವನಪಾಲಂ ದದರ್ಶ ಹ ॥65॥

ತಂ ತು ರಾಜಾನಮಾಯಾಂತಂ ಪ್ರತ್ಯುದ್ಗಚ್ಛನ್ಸ ಸತ್ವರಃ ।
ಪ್ರಣಮ್ಯ ವಿನಯೋಪೇತಃ ಕೃತಾಂಜಲಿಪುಟಃ ಸ್ಥಿತಃ ॥66॥

ತೋಂಡಮಾನಪಿ ಸಂಪೂಜ್ಯಂ ತಂ ಪಪ್ರಚ್ಛ ವನೇಚರಮ್ ।
ಪಂಚವರ್ಣಃ ಶುಕಃ ಕಚ್ಚಿದ್ದೃಷ್ಟಶ್ಚಾತ್ರಾಗತಸ್ತ್ವಯಾ ॥67॥

ಶ್ರೀನಿವಾಸೇತಿ ಚ ವದನ್ ಕ್ವಗತೋಽಸೌ ವನೇಚರ ॥68॥

ವನೇಚರ ಉವಾಚ–

ಸ ಪಂಚವರ್ಣೋ ರಾಜೇಂದ್ರ ಶ್ರೀನಿವಾಸಪ್ರಿಯಃ ಸದಾ ।
ಪಾರ್ಶ್ವವರ್ತೀ ಸದಾ ತಸ್ಯ ಶ್ರೀಭೂಮಿಭ್ಯಾಂ ವಿವರ್ಧಿತಃ ॥69॥

ಸ್ವಾಮಿಪುಷ್ಕರಿಣೀತೀರೇ ಸದಾಽಸ್ತೇ ದೇವಸನ್ನಿಧೌ ।
ಗ್ರಹೀತುಂ ಸ ಶುಕಃ ಶ್ರೀಮಾನ್ನ ತು ಕೇನಾಪಿ ಶಕ್ಯತೇ ॥70॥

ವಿಹೃತ್ಯ ಸ್ವೇಚ್ಛಯಾ ನಿತ್ಯಮಸ್ಮಿನ್ಗಿರಿವರೇ ಶುಭೇ ।
ದಿನಾಂತೇ ದೇವಮಾಸಾದ್ಯ ತತ್ಸಮೀಪೇ ವಸತ್ಯಯಮ್ ॥71॥

ತಂ ದೇವಮಾರಾಧಯಿತುಂ ಗಮಿಷ್ಯಾಮಿ ನೃಪಾತ್ಮಜ ।

ಆ ಗಿಳಿಯು ಶ್ರೀನಿವಾಸನ ಹೆಸರನ್ನು ಕೂಗುತ್ತ ವೇಂಕಟಾದ್ರಿಯ ಕಡೆಗೆ ವೇಗವಾಗಿ ಹಾರಿಹೋಯಿತು. ಅದನ್ನು ಹಿಂಬಾಲಿಸಿದ ತೋಂಡಮಾನನೂ ಸಹ ಗಿರಿವನಗಳನ್ನು ದಾಟಿ ವೇಂಕಟಾದ್ರಿಯನ್ನು ತಲುಪಿದನು. ಅದೇ ಸಂದರ್ಭದಲ್ಲಿ ಗಿಳಿಯು ತನಗೆ ದೊರೆಯದಿದ್ದರೂ ಸಹ ದಾರಿಯಲ್ಲಿ ಸಾವಕ್ಕಿಯನ್ನು ಬೆಳೆದ ಹೊಲವನ್ನು ಕಾಯುತ್ತಿದ್ದ ಬೇಡನೊಬ್ಬನನ್ನು ಕಂಡು, ಶ್ರೀನಿವಾಸನ ಹೆಸರನ್ನು ಕೂಗುತ್ತಾ ಹಾರಿಹೋದ ಗಿಳಿಯನ್ನು ನೋಡಿದ ಬಗ್ಗೆ ಪ್ರಶ್ನಿಸಿದನು. ಆಗ ಬೇಡನು ಶ್ರೀನಿವಾಸನಿಗೆ ಪರಮಪ್ರಿಯವಾದ ಗಿಳಿಯು ಭಗವಂತನ ಪಾರ್ಶ್ವದಲ್ಲಿಯೇ ಇದ್ದುಕೊಂಡು ಶ್ರೀಭೂದೇವಿಯರಿಂದ ಸಂರಕ್ಷಿಸಲ್ಪಡುವದೆಂದು ಹೇಳಿದನು. ಸ್ವಾಮಿಪುಷ್ಕರಿಣೀ ತೀರದಲ್ಲಿ ಸರ್ವದಾ ವಾಸವಾಗಿರುವ ಆ ಗಿಳಿಯನ್ನು ಹಿಡಿಯುವದು ಯಾರಿಂದಲೂ

ವಿಶ್ರಮ್ಯತಾಂ ವೃಕ್ಷಮೂಲೇ ಯಾವದಾಗಮನಂ ಮಮ ॥72॥
ಪುತ್ರೇಣಾನೇನ ಸಹಿತೋ ವಿಹರ ತ್ವಂ ಯಥಾಸುಖಮ್ ॥73॥

ರಾಜೋವಾಚ–

ತ್ವಯಾ ಸಹಾಗಮಿಷ್ಯಾಮಿ ದ್ರಷ್ಟುಂ ದೇವಂ ಜನಾರ್ದನಮ್ ।
ತ್ವಂ ಮೇ ದರ್ಶಯ ದೇವೇಶಂ ವೇಂಕಟಾದ್ರಿನಿವಾಸಿನಮ್ ॥74॥

ತಸ್ಯ ರಾಜ್ಞೋ ವಚಃ ಶ್ರುತ್ವಾ ಶ್ಯಾಮಾಕಂ ಮಧುಮಿಶ್ರಿತಮ್ ।
ಚೂತಪತ್ರಪುಟೇ ಕ್ಷಿಪ್ತ್ವಾ ರಾಜ್ಞಾ ಸಹ ಯಯೌ ಹರಿಮ್ ॥75॥

ಗತ್ವಾ ಸುದೂರಮಧ್ವಾನಂ ಪಶ್ಯಂತೌ ತೌ ಶಿಲಾತಲಮ್ ।
ಮುಹೂರ್ತಾದೇವ ಸಂಪ್ರಾಪ್ತೌ ಸ್ವಾಮಿಪುಷ್ಕರಿಣೀಂ ಶುಭಾಮ್ ॥76॥

ಸ್ನಾತ್ವಾ ತತ್ರ ವಿಧಾನೇನ ರಾಜ್ಞಾ ಸಹ ನಿಷಾದಪಃ ।
ದರ್ಶಯಾಮಾಸ ದೇವೇಶಂ ರಾಜ್ಞಸ್ತಸ್ಯ ಮಹಾತ್ಮನಃ ॥77॥

ಸ್ವಾಮಿಪುಷ್ಕರಿಣೀತೀರೇ ಸ್ಥಿತಂ ಶ್ರೀವೃಕ್ಷಮೂಲಕೇ ।
ಅತಸೀಪುಷ್ಪಸಂಕಾಶಮಂಬುಜಾಯತಲೋಚನಮ್ ॥78॥

ಚತುರ್ಭುಜಮುದಾರಾಂಗಮೀಷತ್ಸ್ಮಿತಮುಖಾಂಬುಜಮ್ ।
ದಿವ್ಯಪೀತಾಂಬರಧರಂ ಕಿರೀಟಕಟಕೋಜ್ಜ್ವಲಮ್ ॥79॥

ಪಾರ್ಶ್ವಸ್ಥಾಭ್ಯಾಂ ಸುರೂಪಾಭ್ಯಾಂ ಶ್ರೀಭೂಮಿಭ್ಯಾಂ ಸಮನ್ವಿತಮ್ ।
ಪರಿತಃ ಶಂಖಚಕ್ರಾಸಿಗದಾಶಾರ್ಙ್ಗೇಷುಸೇವಿತಮ್ ॥80॥

ಸಾಧ್ಯವಾಗಿರುವದಿಲ್ಲವೆಂದು ಸ್ಪಷ್ಟಪಡಿಸಿದನು. ತೋಂಡಮಾನನೂ ಸಹ ಆ ಬೇಡನಿಗೆ ತಾನು ಶ್ರೀನಿವಾಸನ ದರ್ಶನಕ್ಕಾಗಿ ಬಂದ ವಿಷಯವನ್ನು ತಿಳಿಸಿ ಆ ದೇವೋತ್ತಮನ ವಾಸಸ್ಥಾನವನ್ನು ತೋರಿಸಲು ಕೇಳಿಕೊಂಡನು. ಅದರಂತೆ ಬೇಡನು ರಾಜನೊಂದಿಗೆ ಸ್ವಾಮಿಪುಷ್ಕರಿಣಿ ತೀರ್ಥದಲ್ಲಿ ಸ್ನಾನವನ್ನು ಮಾಡಿ ಪುಷ್ಕರಿಣಿಯ ತೀರಸ್ಥನಾದ ತಿಂತ್ರಿಣೀ ವೃಕ್ಷದ ಕೆಳಗಿರುವ ಚತುರ್ಭುಜನಾದ, ಕಮಲದಲನಯನನಾದ, ದೇವಾಧಿದೇವನಾದ., ಮಂದಹಾಸಯುಕ್ತನಾದ, ದಿವ್ಯಪೀತಾಂಬರ ಧಾರಿಯಾದ, ಕಿರೀಟ–ಕಡಗಗಳಿಂದ ಹೊಳೆಯುತ್ತಿದ್ದ ಎರಡೂ ಪಾರ್ಶ್ವಗಳಲ್ಲಿಯೂ ಶ್ರೀಭೂದೇವೀಯರಿಂದ ಸಹಿತನಾದ, ಶಂಖ,ಚಕ್ರ, ಧನುಸ್ಸು, ಖಡ್ಗ, ಗದೆಗಳಿಂದ ಮತ್ತು ಅನೇಕ ಆಯುಧಗಳಿಂದ ಸೇವಿತನಾದ, ಹೂಮಾಲೆಗಳನ್ನು ಧರಿಸಿದ್ದ, ಷಣ್ಮುಖನಿಂದ

ಅನ್ಯೈರ್ದಿವ್ಯಾಯುಧೈಶ್ಚಾಪಿ ದಿವ್ಯಮಾಲ್ಯೈರ್ನಿಷೇವಿತಮ್ ।
ಸ್ಕಂದೇನಾರಾಧ್ಯಮಾನಂ ತಂ ತ್ರಿಸಂಧ್ಯಂ ಪುರುಷೋತ್ತಮಮ್ ॥81॥

ವಲ್ಮೀಕಗೂಢಪಾದಾಬ್ಜಮಾಜಾನುಪುರುಷೋತ್ತಮಮ್ ।
ತತೋ ದೃಷ್ಟ್ವಾ ಮುದಾ ದೇವಂ ಪ್ರಣೇಮತುರುಭೌ ತದಾ ॥82॥

ರಾಜಾ ತು ಪ್ರಾಂಜಲಿರ್ಭೂತ್ವಾ ವಿಸ್ಮಯೋತ್ಫುಲ್ಲಲೋಚನಃ ।
ಆನಂದಲಹರೀಂ ಪ್ರಾಪ್ಯ ನ ಪ್ರಾಜ್ಞಾಯತ ಕಿಂಚನ ॥83॥

ನಿಷಾದೋಽಪಿ ನಿವೇದ್ಯೈವ ಶ್ಯಾಮಕಂ ಮಧುಮಿಶ್ರಿತಮ್ ।
ರಾಜ್ಞೇ ತದರ್ಧಂ ದತ್ತ್ವೈವ ಶಿಷ್ಟಾರ್ಧಂ ಭುಕ್ತವಾನ್ಸ್ವಯಮ್ ॥84॥

ಪೀತ್ವಾ ಪುಷ್ಕರಿಣೀತೋಯಂ ತೇನ ರಾಜ್ಞಾ ಸಮನ್ವಿತಃ ।
ಸ ಪುನಃ ಶ್ಯಾಮಕವನೇ ಪುಣ್ಯಾಂ ಪರ್ಣಕುಟೀಂ ಯಯೌ ॥85॥

ಉಷಿತ್ವಾ ಚೈಕರಾತ್ರಂ ತು ಪ್ರಾತರುತ್ಥಾಯ ಭೂಮಿಪಃ ।
ಸ್ವಸೈನ್ಯೇನ ಸಮಾಯುಕ್ತೋ ನಿವೃತ್ತಃ ಸ್ವಪುರಂ ಯಯೌ ॥86॥

ಪುನರ್ದೇವೀವನಂ ಗತ್ವಾ ಹಯಾದವತತಾರ ಹ ।
ಚೈತ್ರಶುದ್ಧನವಮ್ಯಾಂ ತು ಪೂಜಯಾಮಾಸ ರೇಣುಕಾಮ್ ॥87॥

ಹವಿಷ್ಯಂ ಪರಮಾನ್ನಂ ಚ ಸೋಪಸ್ಕರಮನೇಕಶಃ ।
ಪಶೂಪಹಾರಸಹಿತಂ ಧೂಪದೀಪಸಮನ್ವಿತಮ್ ॥88॥

ಸುರಾಘಟೀಶತಂ ದತ್ತ್ವಾ ಜಾತೀಕೇಸರವಾಸಿತಮ್ ।

ಸಮರ್ಚಿತನಾದ ಶ್ರೀನಿವಾಸನನ್ನು ಸಂದರ್ಶಿಸಿದನು. ಶ್ರೀನಿವಾಸನ ಪಾದಗಳು ಮಾತ್ರ ವಲ್ಮೀಕದಲ್ಲಿ ಹುದುಗಿಹೋಗಿದ್ದವು. ಅದರಂತೆ ಅವನ ಹಸ್ತಗಳು ಮೊಳಕಾಲುಗಳನ್ನು ಸ್ಪರ್ಶಿಸುತ್ತಿದ್ದವು. ಇಂತಹ ಸಾಕ್ಷಾತ್ ಭಗವಂತನನ್ನು ದರ್ಶಿಸಿದ ಬೇಡ ಮತ್ತು ತೋಂಡಮಾನರು ಬಾಹ್ಯಪ್ರಪಂಚವನ್ನೇ ಮರೆತು ಭಕ್ತಿಯಿಂದ ಅವನಿಗೆ ಮತ್ತೆ ಮತ್ತೆ ನಮಸ್ಕರಿಸಿದರು. ನಿವೇದಿಸಲ್ಪಟ್ಟ ಶಾವೆಯ ಅಕ್ಕಿಯ ಅನ್ನವನ್ನು ಪ್ರಸಾದವೆಂದು ಸ್ವೀಕರಿಸಿ ಸ್ವಾಮಿಪುಷ್ಕರಿಣೀ ಜಲವನ್ನು ಪ್ರಾಶನಮಾಡಿ, ಸಾಮೆಯ ಹೊಲದಲ್ಲಿದ್ದ ಪುಣ್ಯತಮವಾದ ಪರ್ಣಕುಟೀರವನ್ನು ಸೇರಿದನು. ಅವತ್ತಿನ ರಾತ್ರಿ ಅಲ್ಲಿ ಮಲಗಿಕೊಂಡು ಪ್ರಾತಃಕಾಲದಲ್ಲಿ ತನ್ನ ಸೈನ್ಯದೊಂದಿಗೆ ರಾಜಧಾನಿಗೆ ಹಿಂದುರುಗಿದನು. ಕಾಲಾಂತರದಲ್ಲಿ ತೊಂಡಮಾನನು ಪುನಃ ದೇವಿಯ ದರ್ಶನಕ್ಕೆ ಬಂದು ಪೂಜಾಕೈಂಕರ್ಯಾದಿ

ಏವಂ ಸಂಪೂಜಿತಾ ದೇವೀ ಪ್ರೀತಾ ರಾಜ್ಞೇ ವರಂ ದದೌ ॥89॥

ಆವಿಷ್ಟಃ ಪುರುಷಃ ಕಶ್ಚಿದವದನ್ನೃಪಸತ್ತಮಮ್ ।
ಶೃಣು ರಾಜನ್ಭವಿಷ್ಯಂ ತೇ ರಾಜ್ಯಂ ನಿಹತಕಂಟಕಮ್ ॥90॥

ರಾಜಂಸ್ತ್ವನ್ನೈವ ನಾಮ್ನಾಽತ್ರ ರಾಜಧಾನೀ ಭವಿಷ್ಯತಿ ।
ಮತ್ಸಮೀಪೇ ಮಹಾರಾಜ ಚಿರಂ ರಾಜ್ಯಂ ಕರಿಷ್ಯಸಿ ॥91॥

ದೇವದೇವಪ್ರಸಾದಶ್ಚ ಭವಿಷ್ಯತಿ ತವಾನಘ ।
ಇತಿ ದತ್ವಾ ವರಂ ತಸ್ಮಾ ಆವಿಷ್ಟಃ ಪ್ರಕೃತಿಂ ಯಯೌ ॥92॥

ತತೋ ಲಬ್ಧವರೋ ರಾಜಾ ಯಯೌ ಶುಕಮುನಿಂ ಪುನಃ ॥93॥

ಅಭಿವಾದ್ಯ ಮುನಿಂ ತೇನ ಪೂಜಿತೋ ಮುದಿತೋಽಭವತ್ ।
ಮಾಹಾತ್ಮ್ಯಂ ಸರಸೋ ಬ್ರೂಹಿ ಕಮಲಾಖ್ಯಸ್ಯ ಮೇ ಮುನೇ ॥94॥

ಶ್ರೀ ಶುಕ ಉವಾಚ–

ಪುರಾ ದುರ್ವಾಸಸಃ ಶಾಪಾದವತೀರ್ಣಾ ಸುರಾಲಯಾತ್ ।
ಪದ್ಮಾ ಪದ್ಮಾಕ್ಷಯದಿತಾ ವಿಷ್ಣುನಾ ಸಹಿತಾ ನೃಪ ॥95॥

ಸರಃ ಕಾಂಚನಪದ್ಮಾಢ್ಯಮಿದಂ ಪ್ರಾಪ್ಯ ಮಹೇಶ್ವರೀ ।
ತಪಶ್ಚಕಾರ ವರ್ಷಾಣಾಂ ದಿವ್ಯಾನಾಮಯುತಂ ರಮಾ ॥96॥

ಗಳನ್ನು ಸಮರ್ಪಿಸಿದಾಗ ದೇವಿಯ ಆವೇಶವನ್ನು ಹೊಂದಿದ ಪುರುಷನೊಬ್ಬನು ಭವಿಷ್ಯವನ್ನು ತಿಳಿಸುವ ವ್ಯಾಜದಲ್ಲಿ ನಿನ್ನ ರಾಜ್ಯವು ಸರ್ವಕಂಟಕಗಳಿಂದ ವರ್ಜಿತವಾಗಿರುವದು. ನಿನ್ನ ಹೆಸರಿನಿಂದಲೇ ಒಂದು ರಾಜಧಾನಿಯು ನಿರ್ಮಾಣಗೊಳ್ಳುವದು. ನನ್ನ ಸಮೀಪದಲ್ಲಿಯೇ ನೀನು ಬಹುಕಾಲ ರಾಜ್ಯವನ್ನು ಆಳುತ್ತೀ. ದೇವದೇವೋತ್ತಮನಾದ ಶ್ರೀನಿವಾಸನ ಪ್ರಸಾದವೂ ನಿನಗೆ ದೊರೆಯುತ್ತದೆ. ಎಂದು ಹೇಳಿದನು. ಈ ರೀತಿಯಾಗಿ ವರವನ್ನು ಹೊಂದಿದ ರಾಜನು ಪುನಃ ಶುಕಾಚಾರ್ಯರನ್ನು ನಮಸ್ಕರಿಸಿ ಈ ಪದ್ಮಸರೋವರದ ಮಾಹಾತ್ಮೆಯನ್ನು ತಿಳಿಸಲು ಪ್ರಾರ್ಥಿಸಿದನು. ಅದರಂತೆ ಶುಕಾಚಾರ್ಯರು ಪದ್ಮಸರೋವರದ ಮಾಹಾತ್ಮೆಯನ್ನು ವರ್ಣಿಸಿದರು.

ಪೂರ್ವದಲ್ಲಿ ದೂರ್ವಾಸರ ಶಾಪದಿಂದ ಸ್ವರ್ಗವನ್ನು ತ್ಯಜಿಸಿದ ಸಂಪದಭಿಮಾನಿಯಾದ ಲಕ್ಷ್ಮೀದೇವಿಯು ತನ್ನ ಪತಿಯಾದ ವಿಷ್ಣುವಿನಿಂದ ಕೂಡಿಕೊಂಡು ಭೂಲೋಕಕ್ಕೆ ಬಂದು

ತತೋ ದೇವಾ ವಿಚಿನ್ವಂತಃ ಶ್ರಿಯಂ ವಿಷ್ಣುಸಮನ್ವಿತಾಮ್ ।
ಪುರಂದರೇಣ ಸಂಯುಕ್ತಾ ರಾಜನ್ನಸ್ಮಿನ್ಸರೋವರೇ ॥97॥

ಸ್ಥಿತಾಂ ಸುಮರ್ಣಕಮಲೇ ಪುಂಡರೀಕಾಕ್ಷಸಂಯುತಾಮ್ ।
ದೃಷ್ಟ್ವಾ ಪ್ರೀತಿಸಮಾಯುಕ್ತಾಃ ಪ್ರಣಮ್ಯಾಂಬುಜಧಾರಿಣೀಮ್ ।
ಕೃತಾಂಲಿಪುಟಾಃ ಸೇಂದ್ರಾಸ್ತುಷ್ಟುವುರ್ಲೋಕಮಾತರಮ್ ॥98॥

ದೇವಾ ಊಚುಃ–

ನಮಃ ಶ್ರಿಯೈಃ ಲೋಕಧೃತ್ಯೈ ಬ್ರಹ್ಮಮಾತ್ರೇ ನಮೋ ನಮಃ ।
ನಮಸ್ತೇ ಪದ್ಮನೇತ್ರಾಯೈ ಪದ್ಮಮುಖ್ಯೈ ನಮೋ ನಮಃ ॥99॥

ಪ್ರಸನ್ನಮುಖಪದ್ಮಾಯೈ ಪದ್ಮಕಾಂತ್ಯೈ ನಮೋ ನಮಃ ।
ನಮೋ ಬಿಲ್ವವನಸ್ಥಾಯೈ ವಿಷ್ಣುಪತ್ನ್ಯೈ ನಮೋ ನಮಃ ॥100॥

ವಿಚಿತ್ರಕ್ಷೌಮಧಾರಿಣ್ಯೈ ಪೃಥುಶ್ರೋಣ್ಯೈ ನಮೋ ನಮಃ ।
ಪಕ್ವಬಿಲ್ವಫಲಾಪೀನತುಂಗಸ್ತನ್ಯೈ ನಮೋ ನಮಃ ॥101॥

ಸುರಕ್ತಪದ್ಮಪತ್ರಾಭಕರಪಾದತಲೇ ಶುಭೇ ।
ಸುರತ್ನಾಂಗದಕೇಯೂರಕಾಂಚೀನುಪುರಶೋಭಿತೇ ।
ಯಕ್ಷಕರ್ದಮಸಂಲಿಪ್ತಸರ್ವಾಂಗೇ ಕಟಕೋಜ್ವಲೇ ॥102॥

ಕೆಂದಾವರೆಗಳಿಂದ ಕೂಡಿದ ಈ ಪದ್ಮಸರೋವರದಲ್ಲಿ ಸಹಸ್ರವರ್ಷ ಪರ್ಯಂತರವಾಗಿ ತನಗೆ ಯಾವ ಪ್ರಯೋಜನ ವಿಲ್ಲದಿದ್ದರೂ ಸಹ ಲೋಕಶಿಕ್ಷಣಾರ್ಥವಾಗಿ ತಪಸ್ಸನ್ನಾಚರಿಸಿದಳು. ಆ ಸಂದರ್ಭದಲ್ಲಿ ಸ್ವರ್ಗಾಧಿಪತಿಯಾದ ಇಂದ್ರನಿಂದ ಸಹಿತರಾದ ಸಮಸ್ತ ದೇವತೆಗಳು ನಾರಾಯಣ ನಿಂದ ಸಹಿತಳಾದ ಲಕ್ಷ್ಮೀದೇವಿಯನ್ನು ಹುಡುಕುತ್ತಾ ಭೂಲೋಕದಲ್ಲಿ ಸಂಚರಿಸುತ್ತಿರುವಾಗ ಪದ್ಮಸರೋವರದಲ್ಲಿರುವ ಹೊಂಬಣ್ಣದ ಕಮಲಗಳಲ್ಲಿ ವಿರಾಜಮಾನರಾದ ಶ್ರೀಮನ್ನಾರಾಯಣ ಸಹಿತಳಾದ ಲಕ್ಷ್ಮೀದೇವಿಯನ್ನು ಕಂಡು ಆನಂದ ಭರಿತರಾಗಿ ಅವಳನ್ನು ಸ್ತೋತ್ರಮಾಡಿದರು. ಸಾಕ್ಷಾತ್ ಚತುರ್ಮುಖ ಬ್ರಹ್ಮದೇವರ ಮಾತೆಯಾದ ಕಮಲಗಳಂತೆ ವಿಶಾಲವಾದ ನೇತ್ರಗಳಿಂದ ಶೋಭಿತಳಾದ, ಪದ್ಮಮುಖಿಯಾದ, ಪ್ರಸನ್ನವಾದ ಮುಖಪದ್ಮದಿಂದ ವಿರಾಜಮಾನಳಾದ, ಪದ್ಮಗಳಂತೆ ಮಹಾಕಾಂತಿಯುಳ್ಳ ಬಿಲ್ವಾದಿ ವೃಕ್ಷಗಳಿಂದ ಕೂಡಿದ ವನದಲ್ಲಿರುವ ವಿಷ್ಣುಪತ್ನಿಯಾದ ಬಹುಸೂಕ್ಷ್ಮವಾದ ಸುಂದರವಾದ ವಸ್ತ್ರಧಾರಿಯಾದ, ಬಿಲ್ವಫಲಗಳಂತೆ ಸುಂದರವಾದ ಸ್ತನಗಳಿಂದ ಶೋಭಿತಳಾದ, ಕಮಲದಂತೆ ಕೋಮಲವಾದ ಕರಗಳಿಂದ ವಿರಾಜಿತಳಾದ, ಕೆಂಪಾದ ಅಂಗೈ,

ಮಾಗಲ್ಯಾಭರಣೈಶ್ಚಿತ್ರೈರ್ಮುಕ್ತಾಹಾರೈರ್ವಿಭೂಷಿತೇ ।
ತಾಟಂಕೈರವತಂಸೈಶ್ಚ ಶೋಭಮಾನಮುಖಾಂಬುಜೇ ॥103॥

ಪದ್ಮಹಸ್ತೇ ನಮಸ್ತುಭ್ಯಂ ಪ್ರಸೀದ ಹರಿವಲ್ಲಭೇ ।
ಋಗ್ಯಜುಃಸಾಮರೂಪಾಯೈ ವಿದ್ಯಾಯೈ ತೇ ನಮೋ ನಮಃ ॥104॥

ಪ್ರಸೀದಾಸ್ಮಾನ್ಕೃಪಾದೃಷ್ಟಿಪಾತೈರಾಲೋಕಯಾಬ್ಧಿಜೇ ।
ಯೇ ದೃಷ್ಟಾಸ್ತೇ ತ್ವಯಾ ಬ್ರಹ್ಮರುದ್ರೇಂದ್ರತ್ವಂ ಸಮಾಪ್ನುಯುಃ ॥105॥

ಶ್ರೀಶುಕ ಉವಾಚ–

ಇತಿ ಸ್ತುತಾ ತದಾ ದೇವೈರ್ವಿಷ್ಣುವಕ್ಷಃಸ್ಥಲಾಲಯಾ ।
ವಿಷ್ಣುನಾ ಸಹ ಸಂದೃಶ್ಯಾ ರಮಾ ಪ್ರೀತಾವದತ್ಸುರಾನ್ ॥106॥

ಶ್ರೀರುವಾಚ–

ಸುರಾರೀನ್ಸಹಸಾ ಹತ್ವಾ ಸ್ವಪದಾನಿ ಗಮಿಷ್ಯಥ ।
ಯೇ ಸ್ಥಾನಹೀನಾಃ ಸ್ವಸ್ಥಾನದ್ಭ್ರಂಶಿತಾ ಯೇ ನರಾ ಭುವಿ ॥107॥

ತೇ ಮಾಮನೇನ ಸ್ತೋತ್ರೇಣ ಸ್ತುತ್ವಾ ಸ್ಥಾನಮವಾಪ್ನುಯುಃ ।
ಅಖಂಡೈರ್ಬಿಲ್ವಪತ್ರೈರ್ಮಾಮರ್ಚಯಂತಿ ನರಾ ಭುವಿ ॥108॥

ಅಂಗಾಲುಗಳಿಂದುಪೇತಳಾದ, ಹೊಳೆಯುವ ಬಳೆ–ಕಡಗಗಳನ್ನು ಧರಿಸಿದ, ಮಾಂಗಲ್ಯ ಸಂಸೂಚಕವಾದ ಮೂಗುಬಟ್ಟು, ಮುತ್ತಿನ ಹಾರ, ಕಿವಿಯೋಲೆಗಳೆ ಮೊದಲಾದ ಆಭರಣಗಳಿಂದ ಅಲಂಕೃತವಾದ ಮುಖಕಮಲಯುಕ್ತಳಾದ, ಪದ್ಮಗಳನ್ನು ಕೈಯಲ್ಲಿ ಧರಿಸಿದ, ಲೋಕಾಧಾರಳಾದ ಲಕ್ಷ್ಮೀದೇವಿಯೇ! ನಿನಗೆ ನಮಸ್ಕಾರಗಳು. ವೇದಾಭಿಮಾನಿನಿಯಾದ ಲಕ್ಷ್ಮೀದೇವಿಯೇ! ಸಮುದ್ರಸಂಭೂತಳೇ! ಯಾವ ನಿನ್ನ ಕುಡಿನೋಟ ಮಾತ್ರದಿಂದ ಅಲ್ಪನೂ ಸಹ ಬ್ರಹ್ಮರುದ್ರೇಂದ್ರಾದಿ ದೇವತೆಗಳಂತಾಗುವನೋ ಅಂತಹ ನಿನ್ನ ಕೃಪಾದೃಷ್ಟಿಯನ್ನು ನಮ್ಮತ್ತ ಹರಿಸಿ, ನಮ್ಮನ್ನನುಗ್ರಹಿಸು' ಎಂದು ಬಹುವಿಧವಾಗಿ ಪ್ರಾರ್ಥಿಸಿದರು.

ಇದರಿಂದ ಸಂತುಷ್ಟಳಾದ ಲಕ್ಷ್ಮೀದೇವಿಯು ವಿಷ್ಣುಸಮೇತಳಾಗಿ ದೇವತೆಗಳಿಗೆ ದರ್ಶನವನ್ನಿತ್ತು 'ಹೇ ದೇವತೆಗಳೇ! ದೈತ್ಯರನ್ನು ಅನಾಯಾಸವಾಗಿ ಗೆದ್ದು ನಿಮ್ಮ ಸ್ವರ್ಗಾಧಿಪತ್ಯವನ್ನು ಪುನಃ ಹೊಂದುವಿರಿ. ಸ್ಥಾನಹೀನರೂ, ಪದಭ್ರಷ್ಟರೂ ಆದ ಮನುಷ್ಯರು ಈ ಸ್ತೋತ್ರದಿಂದ ನನ್ನನ್ನು ಸ್ತುತಿಸಿದಲ್ಲಿ ತಮ್ಮ ಸ್ವಯೋಗ್ಯಸ್ಥಾನವನ್ನು ಹೊಂದುವರು. ಈ ಸ್ತೋತ್ರವನ್ನು ಪಠಿಸುತ್ತಾ ಬಿಲ್ವಪತ್ರಗಳಿಂದ ನನ್ನನ್ನರ್ಚಿಸುವವರು ಧರ್ಮಾರ್ಥಕಾಮಮೋಕ್ಷಾದಿ ಸಕಲ ಪುರುಷಾರ್ಥಗಳನ್ನು

ಸ್ತೋತ್ರೇಣಾನೇನ ಯೇ ದೇವಾ ನರಾ ಯುಷ್ಮತ್ಕೃತೇನ ವೈ ।
ಧರ್ಮಾರ್ಥಕಾಮಮೋಕ್ಷಾಣಾಮಾಕರಾಸ್ತೇ ಭವಂತಿ ವೈ ॥109॥

ಇದಂ ಪದ್ಮಸರೋ ದೇವಾ ಯೇ ಕೇಚನ ನರಾ ಭುವಿ ।
ಪ್ರಾಪ್ಯ ಸ್ನಾಂ ಕರಿಷ್ಯಂತಿ ಮಾಂ ಸ್ತುತ್ವಾ ವಿಷ್ಣುವಲ್ಲಭಾಂ ॥110॥

ತೇಽಪಿ ಶ್ರಿಯಂ ದೀರ್ಘಮಾಯುರ್ವಿದ್ಯಾಂ ಪುತ್ರಾನ್ಸುವರ್ಚಸಃ ।
ಲಬ್ಧ್ವಾ ಭೋಗಾಂಶ್ಚ ಭುಕ್ತ್ವಾಂತೇ ನರಾ ಮೋಕ್ಷಮವಾಪ್ನುಯುಃ ॥111॥

ಇತಿ ದತ್ತ್ವಾ ವರಂ ದೇವೀ ದೇವೇನ ಸಹ ವಿಷ್ಣುನಾ ।
ಆರುಹ್ಯ ಗರುಡೇಶಾನಂ ವೈಕುಂಠಸ್ಥಾನಮಾಯಯೌ ॥112॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ 'ವಸುನಾಮಕ ನಿಷಾದವೃತ್ತಾಂತ- ಪದ್ಮಸರೋಮಾಹಾತ್ಮ್ಯಾದಿವರ್ಣನಂ' ನಾಮ ನವಮೋಽಧ್ಯಾಯಃ ॥9॥

* * *

ಹೊಂದಿ ಸುಖಿಸುವರು. ಯಾರು ಈ ಪದ್ಮಸರೋವರದಲ್ಲಿ ಸ್ನಾನವನ್ನು ಮಾಡಿ ವಿಷ್ಣುಪ್ರಿಯೆಯಾದ ನನ್ನನ್ನು ಸ್ತುತಿಸುವರೋ ಅವರು ದೀರ್ಘಾಯುಷ್ಯ, ಐಶ್ವರ್ಯ, ಪುತ್ರಪೌತ್ರಾದಿ ಸಂಪತ್ತಿಯನ್ನು ಹೊಂದಿ ಅನೇಕ ಭೋಗಗಳನ್ನನುಭವಿಸುತ್ತಾ ಸುಖವನ್ನು ಹೊಂದಿ ಕೊನೆಗೆ ಮೋಕ್ಷವನ್ನೂ ಸಹ ಹೊಂದುವರು.

ಹೀಗೆ ದೇವತೆಗಳಿಗೆ ವರವನ್ನು ಕೊಟ್ಟ ಮಹಾಲಕ್ಷ್ಮಿಯು ವಿಷ್ಣುವಿನೊಂದಿಗೆ ಗರುಡನನ್ನು ಏರಿ ವೈಕುಂಠಲೋಕಕ್ಕೆ ತೆರಳಿದಳು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ ಬ್ರಹ್ಮಾದಿಗಳಿಂದೊಡಗೂಡಿದ **ಶ್ರೀನಿವಾಸನ ಆಕಾಶರಾಜಪುರಗಮನ ವೃತ್ತಾಂತ ವರ್ಣನ- ಪದ್ಮಾವತೀಪರಿಣಯ ವರ್ಣನವೆಂಬ** ಒಂಭತ್ತನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥ ದಶಮೋऽಧ್ಯಾಯಃ

[ಭವಿಷ್ಯದ್ವರ್ಣನೇ ತೋಂಡಮಾಂಶ್ಚಕ್ರವರ್ತಿವೃತ್ತವರ್ಣನಮ್]

ಶ್ರೀ ಶುಕ ಉವಾಚ–

ಇದಂ ಪದ್ಮಸರೋ ನಾಮ ರಾಜನ್ಪಾಪಪ್ರಣಾಶನಮ್ ।
ಕೀರ್ತನಾತ್ಸ್ಮರಣಾನ್ನೃಣಾಂ ನೂನಂ ಲಕ್ಷ್ಮೀಪ್ರದಂ ಭುವಿ ।
ಕೃತ್ವಾ ಸ್ನಾನಂ ತ್ವಮಪ್ಯಸ್ಮಿನ್ವ್ರಜ ಸ್ವಪಿತುರಂತಿಕಮ್ ॥1॥

ಶ್ರೀ ವರಾಹ ಉವಾಚ–

ಏತಚ್ಛುಕವಚಃ ಶ್ರುತ್ವಾ ಸ್ನಾತ್ವಾ ಪದ್ಮಸರೋವರೇ ।
ತಂ ನತ್ವಾ ಹಯಮಾರುಹ್ಯ ತೋಂಡಮಾನ್ಸ್ವಪುರಂ ಯಯೌ ॥2॥

ತಂ ಪಿತಾ ಯುವರಾಜಾನಂ ಕೃತ್ವಾ ತ್ರೀನ್ವತ್ಸರಾನಥ ।
ರಂಜಕತ್ವಂ ಚ ಸಾಮರ್ಥ್ಯಂ ಶೌರ್ಯಂ ವೀರ್ಯಂಸುಶೀಲತಾಮ್ ॥3॥

ಭಕ್ತಿಂ ವಿಪ್ರೇಷು ಪುತ್ರಸ್ಯ ವೀಕ್ಷ್ಯ ರಾಜಾ ಸ್ವಮಂತ್ರಿಭಿಃ ।
ಸ್ವಪದೇ ಸ್ಥಾಪಯಾಮಾಸ ಸ್ವಭಿಷಿಚ್ಯ ವಿಧಾನತಃ ॥4॥

ಅನುಜ್ಞಾಪ್ಯ ಸುತಂ ಪತ್ನ್ಯಾ ಸಾರ್ಧಂ ರಾಜಾ ವನಂ ಯಯೌ ॥5॥

ತೋಂಡಮಾನಪಿ ಸಾಮ್ರಾಜ್ಯಂ ಲಬ್ಧ್ವಾ ರಾಜ್ಯಂ ಚಕಾರ ಹ ।

## ಹತ್ತನೆಯ ಅಧ್ಯಾಯ

ಶುಕಾಚಾರ್ಯರು 'ಹೇ ರಾಜನೇ! ಕೀರ್ತನ, ಸ್ಮರಣಗಳಿಂದಲೂ ಸಹ ಸರ್ವಪಾಪಪ್ರಶಮನವನ್ನು ಮಾಡಿ, ಸರ್ವಸಂಪತ್ಪ್ರದಾಯಕವಾದ ಈ ಪದ್ಮಸರೋವರದಲ್ಲಿ ಸ್ನಾನವನ್ನು ಮಾಡಿ ನಿನ್ನ ತಂದೆಯ ಬಳಿಗೆ ಹೋಗು' ಎಂದು ನುಡಿದಾಗ, ತೋಂಡಮಾನನು ಆ ಪದ್ಮಸರೋವರದಲ್ಲಿ ಸ್ನಾನವನ್ನು ಮಾಡಿ ತನ್ನ ತಂದೆಯ ಬಳಿಗೆ ಹೋದನು. ಅವನ ತಂದೆಯಾದ ಸುವೀರರಾಜನು ತೋಂಡಮಾನನನ್ನು ರಾಜನಾಗಿ ಪಟ್ಟಾಭಿಷೇಕವನ್ನು ಮಾಡಿ ಪತ್ನಿಯೊಂದಿಗೆ ವನಕ್ಕೆ ತೆರಳಿದನು. ತೋಂಡಮಾನನು ಸಹ ತಂದೆಯಿಂದ ಲಬ್ಧವಾದ ರಾಜ್ಯವನ್ನು ಧರ್ಮದಿಂದ ಪಾಲನಮಾಡುತ್ತಿದ್ದನು.

ನಿಷಾದಸ್ಯ ವನೇ ದೇವೋ ವಾರಾಹಂ ರೂಪಮಾಸ್ಥಿತಃ ॥6॥

ಶ್ಯಾಮಾಕಪಕ್ವಂ ಭಕ್ಷಿತ್ವಾ ರಾತ್ರೌ ರಾತ್ರೌ ಚಚಾರ ಹ ।
ಪದಾನಿ ಸ ವರಾಹಸ್ಯ ಚಾನ್ವಿಯೇಷ ದಿವಾ ದಿವಾ ॥7॥

ಅದೃಷ್ಟ್ವಾ ತಂ ವರಾಹಂ ಸ ರಾತ್ರೌ ಜಾಗ್ರದ್ಧನುರ್ಧರಃ ।
ಸ್ಥಿತೋಽಪಶ್ಯಚ್ಚರಂತಂ ತಂ ಚಂದ್ರಕೋಟಿಸಮಪ್ರಭಮ್ ॥8॥

ವಹಾರಂ ಸುಭಗಾಕಾರಂ ಶ್ಯಾಮಾಕವನಮಧ್ಯತಃ ।
ತಂ ದೃಷ್ಟ್ವಾ ಧನುರಾದಾಯ ಸಿಂಹನಾದಂ ಚಕಾರ ಹ ॥9॥

ವರಾಹಸ್ತದ್ಧ್ವನಿಂ ಶ್ರುತ್ವಾ ವನಾನ್ನಿಷ್ಕ್ರಮ್ಯ ಸತ್ವರಮ್ ।
ಯಯೌ ತಂ ಚಾಪ್ಯನುಯಯೌ ವರಾಹಂ ಸ ನಿಷಾದಪಃ ॥10॥

ರಾತ್ರಿಶೇಷಮನುದ್ರುತ್ಯ ವೇನೇ ಚಂದ್ರಸಮಪ್ರಭಮ್ ।
ವಲ್ಮೀಕಂ ಪ್ರವಿಶಂತಂ ಚ ದದರ್ಶ ಸ ಸನಿಷಾದಪಃ ॥11॥

ಗಚ್ಛಂತಂ ಪೂರ್ಣಿಮಾಚಂದ್ರಮಸ್ತಂ ಗಿರಿವರಂ ಯಥಾ ।
ವಿಸ್ಮಿತೋಽಖಾನಯತ್ಕೋಪಾದ್ವಲ್ಮೀಕಂ ಸ ನಿಷಾದಪಃ ॥12॥

ಧರಾವರಾಹೋ ದದೃಶೇ ಮೂರ್ಛಿತೋಽಯಂ ಪಪಾತ ಹ ।
ಪಿತರಂ ಮೂರ್ಛಿತಂ ದೃಷ್ಟ್ವಾ ತತ್ಪುತ್ರೋ ಭಕ್ತಿಮಾಂಸ್ತದಾ ॥13॥

ಹೀಗಿರಲು ನಿಷಾದನೋರ್ವನ ಹೊಲದಲ್ಲಿ ವರಾಹವೊಂದು ಬೆಳೆದಿರುವ ಸಾವಕ್ಕೆಯನ್ನು ತಿಂದುಹೋಗುತ್ತಿತ್ತು. ಬೇಡನು ಹೆಜ್ಜೆಗುರುತುಗಳಿಂದ ವರಾಹವು ತನ್ನ ಬೆಳೆಯನ್ನು ತಿಂದಿರುವದನ್ನು ತಿಳಿದು, ರಾತ್ರಿಯ ಹೊತ್ತಿನಲ್ಲಿ ಅದನ್ನೇ ಕಾಯುತ್ತಾ ಕುಳಿತನು. ರಾತ್ರಿಯ ಹೊತ್ತಿನಲ್ಲಿ ಸಾವಿರಾರು ಚಂದ್ರರನ್ನು ಧಿಕ್ಕರಿಸುವ ಕಾಂತಿಯಿಂದ ಕೂಡಿದ, ಸುಂದರವಾದ ವರಾಹವೊಂದು ಶಾಮೆಯ ಹೊಲದಲ್ಲಿ ಸಂಚರಿಸುವದನ್ನು ಕಂಡು, ಬಿಲ್ಲನ್ನು ಕೈಯಲ್ಲಿ ಹಿಡಿದು, ಬಾಣವನ್ನು ಬಿಡುವದರಗೋಸ್ಕರವಾಗಿ ಗಟ್ಟಿಯಾಗಿ ಸಿಂಹನಾದವನ್ನು ಮಾಡಿದನು. ವರಾಹವು ಅವನ ಧ್ವನಿಯನ್ನು ಕೇಳಿ ಅಲ್ಲಿಂದ ಪಲಾಯನವನ್ನು ಮಾಡಿತು. ಬೇಡನೂ ಸಹ ಅದನ್ನೇ ಹಿಂಬಾಲಿಸಿ, ವರಾಹವು ರಾತ್ರಿಯು ಮುಗಿಯುತ್ತಿರುವ ಸಮಯದಲ್ಲಿ ಚಂದ್ರನಂತೆ ಬೆಳಗುತ್ತಿರುವ ವಲ್ಮೀಕವೊಂದನ್ನು ಪ್ರವೇಶಿಸುವದನ್ನು ನೋಡಿದನು. ಕೋಪಗೊಂಡಿದ್ದ ಬೇಡನು ವರಾಹವು ಪ್ರವೇಶಮಾಡಿದ್ದ ವಲ್ಮೀಕವನ್ನು ಅಗೆದಾಗ ಒಳಗೆ ಭೂರಮಣನಾದ ವರಾಹನನ್ನು

ವರಾಹದೇವಂ ತುಷ್ಟಾವ ತೇನ ಪ್ರೀತೋಽಭವದ್ಧರಿಃ ।
ಆವಿಶ್ಯ ಪಿತರಂ ತಸ್ಯ ಪ್ರೋವಾಚ ಮಧುಸೂದನಃ ॥14॥

ಶ್ರೀಭಗವಾನುವಾಚ

ಅಹಂ ವರಾಹದೇವೇಶೋ ನಿತ್ಯಮಸ್ಮಿನ್ವಸಾಮ್ಯಹಮ್ ।
ರಾಜ್ಞೇ ತ್ವಮುಕ್ತ್ವಾ ಮಾಮತ್ರ ಪ್ರತಿಷ್ಠಾಪ್ಯೈವ ಪೂಜಯ ॥15॥

ವಲ್ಮೀಕಂ ಕೃಷ್ಣಗೋಕ್ಷೀರೈಃ ಕ್ಷಾಲಯಿತ್ವಾ ತದುತ್ಥಿತೇ ।
ಶಿಲಾತಲೇ ಚ ವಾರಾಹಮುದ್ಧೃತ್ಯ ಧರಣೀಸ್ಥಿತಮ್ ॥16॥

ಕಾರಯಿತ್ವಾ ಪ್ರತಿಷ್ಠಾಪ್ಯ ವಿಪ್ರೈರ್ವೈಖಾನಸೈಶ್ಚ ಮಾಮ್ ।
ಪೂಜಯೇದ್ವಿವಿಧೈರ್ಭೋಗೈಸ್ತೋಂಡಮಾನ್ರಾಜಸತ್ತಮಃ ॥17॥

ಇತ್ಯುಕ್ತ್ವಾ ತಂ ಜಹೌ ದೇವಃ ಸ ಚ ಸ್ವಸ್ಥೋ ಬಭೂವ ಹ ।
ಸುಖಾಸೀನಂ ತು ಪಿತರಂ ನಮಸ್ಕೃತ್ಯ ನಿಷಾದಜಃ ॥18॥

ನ್ಯವೇದಯದ್ದೇವವಚಃ ಪಿತ್ರೇ ಸರ್ವಂ ಯಥಾತಥಮ್ ।
ಸ ಶ್ರುತ್ವಾ ವಿಸ್ಮಿತೋ ಭೂಶ್ವಾ ಕೃತ್ಸ್ನಂ ಪುತ್ರವಚಃ ಶುಭಮ್ ॥19॥

ರಾಜ್ಞೇ ವಕ್ತುಂ ಯಯೌ ಶೀಘ್ರಂ ನಿಷಾದಃ ಸ್ವಾನುಗೈಃ ಸಹ ।
ವಸುರ್ನಿಷಾದಾಧಿಪತೀ ರಾಜದ್ವಾರಮುಪಾಗಮತ್ ॥20॥

ನೋಡಿ ಮೂರ್ಛೆಯನ್ನು ಹೊಂದಿದನು. ತನ್ನ ತಂದೆಯು ಮೂರ್ಛಿತನಾದದ್ದನ್ನು ನೋಡಿದ ಅವನ ಮಗನು ಅತ್ಯಂತ ಭಕ್ತಿಯಿಂದ ವರಾಹದೇವರನ್ನು ಸ್ತುತಿಸಿದನು. ಆಗ ವರಾಹದೇವನು ನಿಷಾದನನ್ನು ಪ್ರವೇಶಿಸಿ 'ನಾನು ಭೂಮಿಯನ್ನುದ್ಧರಿಸಿದ ಯಜ್ಞವರಾಹನು. ಇಲ್ಲಿಯೇ ನಾನು ಯಾವಾಗಲೂ ವಾಸಮಾಡುವೆನು. ನೀನು ರಾಜನಿಗೆ ಹೇಳಿ ಇಲ್ಲಿಯೇ ನನ್ನನ್ನು ಪ್ರತಿಷ್ಠಾಪಿಸಿ ಪೂಜಿಸು. ಈ ವಲ್ಮೀಕವನ್ನು ಕರಿಯ ಆಕಳಿನ ಹಾಲಿನಿಂದ ಅಭಿಷೇಕಮಾಡಿದಾಗ ಹುತ್ತದ ಒಳಗಿರುವ ಕಲ್ಲಿನ ಕೆಳಗಿರುವ ಭೂದೇವಿ ಸಹಿತನಾದ ವರಾಹದೇವ ಮೂರ್ತಿಯನ್ನು ವಿಧಿಗನುಸಾರವಾಗಿ ವೈಖಾನಸ ಬ್ರಾಹ್ಮಣರಿಂದ ಪ್ರತಿಷ್ಠಾಪಿಸಿ ನಾನಾ ಸೇವೆಗಳಿಂದ ನನ್ನನ್ನು ಪೂಜಿಸು' ಎಂದು ನುಡಿದು ವಸುನಾಮಕ ನಿಷಾದನನ್ನು ಬಿಟ್ಟನು. ನಂತರ ಅವನ ಮಗನು ವರಾಹನ ಮಾತುಗಳನ್ನು ತಂದೆಗೆ ತಿಳಿಸಿದಾಗ ಆಶ್ಚರ್ಯಚಕಿತನಾದ ವಸುವು ಈ ವಿಷಯವನ್ನು ರಾಜನಿಗೆ ತಿಳಿಸುವದಕ್ಕಾಗಿ ರಾಜನ ಅರಮನೆಯ ದ್ವಾರದಲ್ಲಿ ನಿಂತುಕೊಂಡನು.. ಅವನನ್ನು

ನಿಷಾದಾಧಿಪಮಾಜ್ಞಾಯ ದ್ವಾರಪಾಲೈರ್ನೃಪೋತ್ತಮಃ ।
ಆಹೂಯ ತಂ ನಿಷಾದೇಶಂ ಸಭಾಯಾಂ ಮಂತ್ರಿಭಿಸ್ಸಹ ॥21॥

ಸತ್ಕೃತ್ಯ ತಂ ವಸುಂ ರಾಜಾ ಸಪುತ್ರಂ ಸಪರಿಚ್ಛದಮ್ ।
ಪಪ್ರಚ್ಛ ಪ್ರೀತಿಮಾನ್ರಾಜಾ ವಸುಂ ತಂ ವನಗೋಚರಮ್ ।
ಕಿಮಾಗಮನಕೃತ್ಯಂ ತೇ ವದ ತ್ವಂ ವನಗೋಚರ ॥22॥

ವಸುರುವಾಚ–

ರಾಜನ್ಮಮ ವನೇ ದೃಷ್ಟಮಾಶ್ಚರ್ಯಂ ಶೃಣು ಭೂಪತೇ ।
ಕಶ್ಚಿಚ್ಛ್ವೇತವರಾಹಸ್ತು ಶ್ಯಾಮಾಕಮಚರನ್ನಿಶಿ ।

ತಂ ವರಾಹಂ ಧನುಷ್ಪಾಣಿರನ್ವಧಾವಮಹಂ ನೃಪ ॥24॥

ಅನುದ್ರುತೋ ವಾಯುವೇಗೋ ಗತ್ವಾ ವಲ್ಮೀಕಮಾವಿಶತ್ ।
ಸ್ವಾಮಿಪುಷ್ಕರಿಣೀತೀರೇ ಪಶ್ಯತೋ ಮಮ ಭೂಪತೇ ॥25॥

ವಲ್ಮೀಕಮಖನಂ ಕ್ರೋಧಾನ್ಮೂರ್ಛಿತೋ ನೃಪತಂ ಭುವಿ ।
ಮತ್ಪುತ್ರೋಽಯಂ ಸಮಾಗತ್ಯ ಮಾಂ ದೃಷ್ಟ್ವಾ ಮೂರ್ಛಿತಂ ಭುವಿ ॥26॥

ಶುಚಿರ್ಭೂತ್ವಾ ದೇವದೇವಂ ತುಷ್ಟಾವ ಮಧುಸೂದನಮ್ ।
ತತೋ ಮಯಿ ಸಮಾವಿಶ್ಯ ವರಾಹೋ ಹ್ಯವದತ್ಸುತಮ್ ॥27॥

ರಾಜ್ಞೇ ನಿವೇದಯ ಕ್ಷಿಪ್ರಂ ಮಚ್ಚರಿತ್ರಂ ನಿಷಾದಪ ।
ಕೃಷ್ಣಗೋಕ್ಷೀರಸೇಕೇನ ವಲ್ಮೀಕಂ ಕ್ಷಾಲಯೇನ್ನೃಪಃ ॥28॥

ನೋಡಿದ ರಾಜನು ಅವನನ್ನು ಒಳಗೆ ಕರೆಯಿಸಿ, ಆದರಿಸಿ, ವಿಶ್ವಾಸದಿಂದ ಮಾತನಾಡಿಸಿ, ಬಂದ ಕಾರಣವನ್ನು ವಿಚಾರಿಸಿದನು. ಆಗ ಬೇಡನು ಅಲ್ಲಿಯವರೆಗೂ ಜರುಗಿದ ಘಟನೆಗಳನ್ನು ತಿಳಿಸುತ್ತಾ, ವರಾಹನು ತನ್ನನ್ನು ಪ್ರವೇಶಿಸಿ 'ರಾಜನಿಗೆ ತಿಳಿಸಿ ಅವನ ಮೂ;ಲಕವಾಗಿ ಕಪ್ಪಾದ ಆಕಳಿನ ಹಾಲಿನಿಂದ ವಲ್ಮೀಕವನ್ನು ಕರಗಿಸಿ, ಅದರಲ್ಲಿ ದೊರೆಯುವ ಕಲ್ಲಿನಿಂದ ಭೂದೇವಿಯಿಂದ ಸಮೇತವಾದ ವರಾಹನ ಮೂರ್ತಿಯನ್ನು ಶಿಲ್ಪಿಗಳಿಂದ ಮಾಡಿಸಿ, ಬ್ರಾಹ್ಮಣರಿಂದ ಪ್ರತಿಷ್ಠಾಪಿಸಿ ಪೂಜಿಸಲಿ. ರಾಜನೂ ಸಹ ನನ್ನನ್ನು ಪೂಜಿಸಲಿ. ಅನಂತರದಲ್ಲಿ ವಲ್ಮೀಕದಿಂದಾವೃತವಾದ ಪಾದಗಳುಳ್ಳ ಶ್ರೀನಿವಾಸನ ಬಳಿ ಹೋಗಿ, ಕಪಿಲ, ಕೃಷ್ಣಗೋವುಗಳ ಹಾಲಿನಿಂದ ಅಭಿಷೇಕವನ್ನು ಮಾಡಿ, ಆಪಾದ ಪೀಠಪರ್ಯಂತವಾಗಿ ದಿನದಿನವೂ ಕ್ಷಾಲನಮಾಡಿ ಅನಂತರ ಶ್ರೀನಿವಾಸನ

ದೃಶ್ಯತೇ ಚ ಶಿಲಾ ಕಾಚಿದ್ವಲ್ಮೀಕಸ್ಥಾ ಸುಶೋಭನಾ ।
ವಾಮಾಂಕಸ್ಥಭುವಂ ಮಾಂ ಚ ವರಾಹವದನಂ ಸ್ಥಿತಮ್ ॥29॥

ಕಾರಯಿತ್ವಾ ಶಿಲ್ಪಿನಾಥ ಪ್ರತಿಷ್ಠಾಪ್ಯ ಮುನೀಶ್ವರೈಃ ।
ವೈಖಾನಸೈರ್ಮುನಿವರೈರರ್ಚಯೇತ್ತೋಂಡಮಾನಪಿ ॥30॥

ಅಥ ಗತ್ವಾ ಶ್ರೀನಿವಾಸಂ ವಲ್ಮೀಕಾವೃತಪದ್ದ್ವಯಮ್ ।
ಕಪಿಲಾಕೃಷ್ಣಗೋಕ್ಷೀರಸೇಚನೈಃ ಕ್ಷಾಲಯೇಚ್ಛನೈಃ ॥31॥

ಆಪಾದಪೀಠಪರ್ಯಂತಂ ಕ್ಷಾಲಯಿತ್ವಾ ದಿನೇ ದಿನೇ ।
ಕುರ್ಯಾತ್ಪ್ರಾಕಾರಮುಭಯೋರುತ್ತರೇ ದಕ್ಷಿಣೇ ತಥಾ ॥32॥

ಇತ್ಯುಕ್ತ್ವಾ ಚೈವ ಮಾಽಮುಂಚದ್ದೇವಃ ಸ್ವಸ್ಥೋಽಭವಂ ನೃಪ ।
ಇದಂ ತೇ ವಕ್ತುಮಾಯಾತೋ ದೇವದೇವಚಿಕೀರ್ಷಿತಮ್ ॥33॥

ಶ್ರೀ ವರಾಹ ಉವಾಚ–

ತೋಂಡಮಾನಪಿ ತಚ್ಛ್ರುತ್ವಾ ಸುಪ್ರೀತೋ ವಿಸ್ಮಿತೋಽಭವತ್ ।
ತತಃ ಕಾರ್ಯಂ ವಿನಿಶ್ಚಿತ್ಯ ಮಂತ್ರಿಭಿಃ ಪುಷ್ಕರಾದಿಭಿಃ ॥34॥

ವೇಂಕಟಾದ್ರಿಂ ಜಿಗಮಿಷುರ್ಗೋಪಾನಾಹೂಯ ಸರ್ವಶಃ ।
ಕೃಷ್ಣಾಶ್ಚ ಕಪಿಲಾ ಗಾವೋ ಯಾಃ ಕಾಶ್ಚಿತ್ಸಂತಿ ಮಾಮಿಕಾಃ ॥35॥

ತಾಃ ಸವತ್ಸಾ ಅನಯದ್ಧ್ವಂ ವೇಂಕಟಾದ್ರಿಸಮೀಪತಃ ।
ಇತ್ಯಾಜ್ಞಪ್ಯ ನೃಪೋ ಗೋಪಾನ್ ಶ್ವೋ ಯಾತ್ರೇತಿ ಚ ಮಂತ್ರಿಣಃ ॥36॥

ಉತ್ತರ ಮತ್ತು ದಕ್ಷಿಣ ದಿಕ್ಕುಗಳೆರಡರಲ್ಲಿಯೂ ಪ್ರಾಕಾರವನ್ನು ನಿರ್ಮಿಸಲು ರಾಜನಿಗೆ ತಿಳಿಸು' ಎಂದು ವರಾಹನು ನನ್ನ ಮಗನಿಗೆ ತಿಳಿಸಿರುವನು. ಅದನ್ನು ತಿಳಿಸುವದಕ್ಕಾಗಿಯೇ ನಾನು ಬಂದಿರುವೆನು' ಎಂದು ನುಡಿದನು.

ಈ ವೃತ್ತಾಂತವನ್ನು ಕೇಳಿದ ತೋಂಡಮಾನನು ಸಂತುಷ್ಟನಾಗಿ ಗೋಪಾಲಕರನ್ನು ಕರೆದು ಮರುದಿನ ಎಲ್ಲ ಕಪಿಲ ಮತ್ತು ಕೃಷ್ಣವರ್ಣದ ಗೋವುಗಳನ್ನು ಅವುಗಳ ಕರುಗಳೊಂದಿಗೆ ವೇಂಕಟಾಚಲಕ್ಕೆ ಕರೆದು ತರಲು ಆಜ್ಞಾಪಿಸಿದ್ದನು. ಅನಂತರ ಎಲ್ಲರನ್ನೂ ಕಳುಹಿಸಿ ಅಂತಃಪುರಕ್ಕೆ ಬಂದು ನಡೆದ ವೃತ್ತಾಂತವೆಲ್ಲವನ್ನು ಅವರಿಗೆ ತಿಳಿಸಿ, ಅನಂತರದಲ್ಲಿ ಮಲಗಿದನು. ನಿದ್ದೆಯಲ್ಲಿ ಸ್ವಪ್ನದಲ್ಲಿ ಶ್ರೀನಿವಾಸನಿರುವ ಹುತ್ತಿಗೆ ಹೋಗುವ ಬಿಲಮಾರ್ಗವನ್ನು ಶ್ರೀನಿವಾಸನು ರಾಜನಿಗೆ

ವಿಸೃಜ್ಯ ಪ್ರಕೃತೀಃ ಸರ್ವಾ ವಿವೇಶಾಂತಃಪುರಂ ವಶೀ ।
ಉಕ್ತ್ವಾ ಕಥಾಂ ತಾಂ ಪತ್ನೀಭ್ಯಃ ಸುಷ್ವಾಪ ನಿಶಿ ಪಾರ್ಥಿವಃ ॥37॥

ತಂ ಸ್ವಪ್ನೇ ಶ್ರೀನಿವಾಸೋಽಪಿ ಬಿಲಮಾರ್ಗಂ ಹ್ಯದರ್ಶಯತ್ ।
ಸ್ವಪುರಾದಾಬಿಲಂ ಮಾರ್ಗೇ ಪಲ್ಲವಾನಸೃಜದ್ಧರಿಃ ॥38॥

ಏವಂ ಸ್ವಪ್ನಂ ನೃಪೋ ದೃಷ್ಟ್ವಾ ಪ್ರಾತರುತ್ಥಾಯ ಸತ್ವರಃ ।
ಆಹೂಯ ಮಂತ್ರಿಣಃ ಸರ್ವಾನ್ ಪ್ರಕೃತೀರ್ಬ್ರಾಹ್ಮಣಾನಪಿ ॥39॥

ಸ್ವಪ್ನಂ ತಥಾವಿಧಂ ಚೋಕ್ತ್ವಾಽಪಶ್ಯದ್ದ್ವಾರೇಽಥ ಪಲ್ಲವಾನ್ ।
ಯುಕ್ತೇ ಮುಹೂರ್ತೇ ಪ್ರಯಯೌ ಹಯಮಾರುಹ್ಯ ತೋಂಡಮಾನ್ ॥40॥

ಪಶ್ಯನ್ಪಲ್ಲವಭಂಗಾಂಶ್ಚ ಶನೈಃ ಪ್ರೀತೋ ಯಯೌ ಬಿಲಮ್ ।
ದೃಷ್ಟ್ವಾ ವಿಸ್ಮಯಮಾಪನ್ನೋ ನಿರ್ಮಮೇ ತತ್ರ ಪತ್ತನಮ್ ॥41॥

ಬಿಲಮಂತಃಪುರೇ ಕೃತ್ವಾ ಪ್ರಾಕಾರಂ ಚಾಪ್ಯಕಾರಯತ್ ।
ವಸಂಸ್ತತ್ರ ನೃಪೇಂದ್ರೋಽಸೌ ನಿರ್ಜಿತ್ಯ ಪೃಥಿವೀಮಿಮಾಮ್ ॥42॥

ಯಥೋಕ್ತಂ ದೇವದೇವೇನ ಕ್ಷೀರಪ್ರಕ್ಷಾಲನಾದಿಕಮ್ ।
ಕೃತ್ವಾ ಪ್ರಾಕಾರನಿರ್ಮಾಣಂ ಕರ್ತುಮುದ್ಯೋಗಮಾಯಯೌ ॥43॥

ತದಾನೀಂ ದೇವದೇವೇನ ಸ್ವಯಮಾಜ್ಞಾಪಿತೋ ನೃಪಃ ।
ತಿಂತ್ರಿಣೀಂ ಚಂಪಕಂ ಚೋಭೌ ಪಾಲಯೈತೌ ನಗೋತ್ತಮೌ ॥44॥

ಮಮ ಚಾಸ್ಥಾನಿಕೀ ಚಿಂಚಾ ಲಕ್ಷ್ಮ್ಯಾಃ ಸ್ಥಾನಂ ಚ ಚಂಪಕಃ ।

ತೋರಿಸುತ್ತಾ, ಅವನ ಅರಮನೆಯಿಂದ ಹಿಡಿದು ಬಿಲದವರೆಗೂ ಚಿಗುರುಗಳನ್ನು ಸೃಷ್ಟಿಸಿ ತೋರಿಸಿದನು. ಮುಂಜಾನೆಯೆದ್ದ ರಾಜನು ಸ್ವಪ್ನದಿಂದ ಆಶ್ಚರ್ಯವನ್ನು ಹೊಂದಿ ಬ್ರಾಹ್ಮಣರನ್ನು ಮತ್ತು ಮಂತ್ರಿಗಳನ್ನು ಕರೆದು ಸ್ವಪ್ನವಿಚಾರವನ್ನು ಅವರಿಗೆ ತಿಳಿಸಿದನು. ಅರಮನೆಯ ಮುಂದಿನ ಬಾಗಿಲಲ್ಲಿ ಸ್ವಪ್ನದಲ್ಲಿ ಕಂಡಂತೆ ಚಿಗುರುಗಳನ್ನು ನೋಡಿ ವಿಸ್ಮಿತನಾಗಿ ಯೋಗ್ಯಮುಹೂರ್ತದಲ್ಲಿ ವಲ್ಮೀಕದ ಬಳಿ ಹೋಗಿ, ಬಿಲವನ್ನು ಮಧ್ಯಮಾಡಿಕೊಂಡು ಪಟ್ಟಣವೊಂದನ್ನು ಮಾಡಿಕೊಂಡು, ಸಕಲ ಭೂಮಿಯನ್ನು ಗೆದ್ದು ಅಲ್ಲಿಯೇ ವಾಸವನ್ನು ಮಾಡಿದನು. ಅನಂತರ ಭಗವಂತನ ಆಜ್ಞೆಯಂತೆ ವೇಂಕಟಾಚಲದ ಮೇಲೆ ತೆರಳಿ ಕ್ಷೀರಪ್ರಕ್ಷಾಲನಾದಿಗಳಿಂದ ಭಗವಂತನನ್ನು ಆರಾಧಿಸಿ, ಅವನು ತಿಳಿಸಿದಂತೆಯೇ ಮಾಡಿದನು. ಆಗ ದೇವದೇವನಾದ ಶ್ರೀನಿವಾಸನು ಸ್ವತಃ

ನಮಸ್ಕಾರ್ಯೌ ನೃಪೈಸ್ತೌ ಹಿ ಋಷಿದೇವನರೈಃ ಸದಾ ॥45॥

ಸಂಸ್ಥಾಪ್ಯೈತೌ ನೃಪಶ್ರೇಷ್ಠ ಛೇದಯಾನ್ಯಾನ್ನಗೋತ್ತಮಾನ್ ।
ಪ್ರಾಕಾರಮಾತ್ರಂ ಕುರು ಮೇ ದ್ವಾರಗೋಪುರಸಂಯುತಮ್ ॥46॥

ವಿಮಾನಂ ತು ಭವದ್ವಂಶ್ಯೋ ನಾಮ್ನಾ ನಾರಾಯಣೋ ನೃಪಃ।
ಕಾರಯಿಷ್ಯತಿ ಮದ್ಭಕ್ತಃ ಸ್ವರ್ಣೇನಾಲಂಕರಿಷ್ಯತಿ ॥47॥

ಶ್ರೀ ವರಾಹ ಉವಾಚ

ಏವಮುಕ್ತ್ವಾ ತೋಂಡಮಾನಂ ವಿರರಾಮ ಶ್ರಿಯಃಪತಿಃ ॥48॥

ಏವಂ ದೇವವಚಃ ಶ್ರುತ್ವಾ ಕೃತ್ವಾ ಪ್ರಾಕಾರಮೇವ ಚ ।
ಪೂಜಯಾಮಾಸ ಮುನಿಭಿರ್ವೈಖಾನಸಕುಲೋದ್ಭವೈಃ ॥49॥

ನಿತ್ಯಂ ಬಿಲೇನ ಚಾಗತ್ಯ ದೇವಂ ನತ್ವಾ ನೃಪೋತ್ತಮಃ ।
ರಾಜ್ಯಂ ಚಕಾರ ಧರ್ಮೇಣ ಭುಂಜಾನೋ ಭೋಗಮುತ್ತಮಮ್ ॥50

ಏತಸ್ಮಿನ್ನೇವ ಕಾಲೇ ತು ದಾಕ್ಷಿಣಾತ್ಯೋ ದ್ವಿಜೋತ್ತಮಃ ।
ಗಂಗಾಸ್ನಾನಾಯ ಗಚ್ಛನ್ವೈ ಸದಾರಃ ಪ್ರಯಯೌ ಪುರಾತ್ ॥51॥

ತೋಂಡಮಾನನಿಗೆ ಆಜ್ಞಾಪಿಸುತ್ತಾ 'ಹುತ್ತದ ಬಳಿಯಿರುವ ನನ್ನ ಆವಾಸವಾದ ಹುಣಸೇ ಮರ ಮತ್ತು ಲಕ್ಷ್ಮೀದೇವಿಯ ನಿವಾಸವೆನಿಸಿದ ಸಂಪಿಗೆಯ ಮರಗಳನ್ನು ಬಿಟ್ಟು ಉಳಿದ ಮರಗಳನ್ನು ಕತ್ತರಿಸಿ ದಿವ್ಯವಾದ ಮಂದಿರವೊಂದನ್ನು ಮಾತ್ರ ನಿರ್ಮಿಸು. ನಿನ್ನ ವಂಶದಲ್ಲಿ ಬರುವ ನನ್ನ ಭಕ್ತನಾದ ನಾರಾಯಣನೆಂಬುವವನು ನನಗೆ ದಿವ್ಯವಾದ ಬಂಗಾರದಿಂದ ಅಲಂಕೃತವಾದ ವಿಮಾನವೊಂದನ್ನು (ಗೋಪುರವನ್ನು) ನಿರ್ಮಿಸಿ ನನ್ನನ್ನಾರಾಧಿಸುವನು. ನನ್ನ ಮತ್ತು ಲಕ್ಷ್ಮಿಯ ಆಶ್ರಯಗಳಾದ ಈ ಹುಣಸೆ ಮತ್ತು ಸಂಪಿಗೆಯ ಮರಗಳು ಎಲ್ಲರಿಂದಲೂ ನಮಸ್ಕರಿಸಲ್ಪಡಲಿ' ಎಂದು ನುಡಿದನು.

ತೋಂಡಮಾನನು ಭಗವಂತನ ಮಾತನ್ನು ಕೇಳಿ ಬಿಲದ ಮಾರ್ಗದಿಂದ ನಿತ್ಯದಲ್ಲಿಯೂ ಶ್ರೀನಿವಾಸನ ಬಳಿ ಬಂದು, ಅವನನ್ನು ನಮಸ್ಕರಿಸಿ, ವೈಖಾನಸ ಬ್ರಾಹ್ಮಣರಿಂದ ಪೂಜಿಸುತ್ತಾ ಬಹುವಿಧ ಭೋಗಗಳನ್ನನುಭವಿಸುತ್ತಾ ಸುಖವಾಗಿ ವಾಸವಾಗಿದ್ದನು.

ಅದೇ ಕಾಲದಲ್ಲಿಯೇ ದಕ್ಷಿಣ ದೇಶದಲ್ಲಿ ಜನಿಸಿದ ವೀರಶರ್ಮನೆಂಬ ಬ್ರಾಹ್ಮಣನು ಗಂಗಾಸ್ನಾನಕ್ಕಾಗಿ ಪತ್ನೀಸಮೇತನಾಗಿ ತೆರಳುತ್ತಿದ್ದಾಗ ಮಾರ್ಗಮಧ್ಯದಲ್ಲಿ ಅವನ ಪತ್ನಿಯು ಗರ್ಭಿಣಿಯಾದಳು.

ಮಾರ್ಗೇಽಥ ಗರ್ಭಿಣೀ ಜಾತಾ ಬ್ರಾಹ್ಮಣೀ ಬ್ರಾಹ್ಮಣಃ ಸ ಚ ॥52॥

ತಾಂ ತು ಗರ್ಭವತೀಂ ದೃಷ್ಟ್ವಾ ಸ್ವಾತ್ಮಾನುಗಮನೇಽಕ್ಷಮಾಮ್ ।
ರಾಜಾನಂ ದ್ರಷ್ಟುಕಾಮೋಽಸೌ ರಾಜದ್ವಾರಮುಪಾಗಮತ್ ॥53॥

ದ್ವಾಃಸ್ಥೇನಾಜ್ಞಾಪಿತೋ ರಾಜಾ ತಮಾಹೂಯ ದ್ವಿಜೋತ್ತಮಮ್ ।
ಪೂಜಯಿತ್ವಾ ತು ವಿಧಿವತ್ಪ್ರಪ್ರಚ್ಛ ಕುಶಲಂ ದ್ವಿಜಂ ॥54॥

ರಾಜೋವಾಚ–

ಕಿಮಾಗಮನಕೃತ್ಯಂ ತೇ ಕಿಂ ಕರಿಷ್ಯಾಮ್ಯಹಂ ದ್ವಿಜ ।

ಬ್ರಾಹ್ಮಣ ಉವಾಚ–

ವಾಸಿಷ್ಠೋ ವೀರಶರ್ಮಾಽಹಂ ಸಾಮವೇದೀ ನೃಪೋತ್ತಮ ॥55॥

ಸದಾರೋ ನಿರ್ಗತೋ ರಾಜನ್ಗಂಗಾಸ್ನಾನಾಯ ಸಾದರಃ ।
ಮಾರ್ಗೇಽಥ ಗರ್ಭಿಣೀ ಚೇಯಂ ಕೌಶಿಕೀ ಪುಣ್ಯಶಾಲಿನೀ ॥56॥

ನಾಮ್ನಾ ಲಕ್ಷ್ಮೀರಿತಿ ಖ್ಯಾತಾ ಸುಶೀಲಾ ಚ ಪತಿವ್ರತಾ ।
ಸಂಸ್ಥಾಪ್ಯೈನಾಂ ತವ ಗೃಹೇ ವ್ರತಂ ನಿರ್ವರ್ತಯಾಮ್ಯಹಮ್ ॥57॥

ತಸ್ಮಾದ್ರಾಜನ್ಪ್ರಯಚ್ಛಾಸ್ಯೈ ಯಥೇಷ್ಟಂ ಭುಕ್ತಿವೇತನೇ ।
ತಾವಚ್ಚ ರಕ್ಷ್ಯತಾಂ ಲಕ್ಷ್ಮೀರ್ಯಾವದಾಗಮನಂ ಮಮ ॥58॥

ಶ್ರೀ ವರಾಹ ಉವಾಚ–

ಇದರಿಂದ ಚಿಂತಿತನಾದ ಬ್ರಾಹ್ಮಣನು ರಾಜನನ್ನು ನೋಡಲು ಬಂದನು. ದ್ವಾರಪಾಲಕನಿಂದ ಬ್ರಾಹ್ಮಣನನ್ನು ಒಳಕರೆಯಿಸಿ ಅವನನ್ನು ಸತ್ಕರಿಸಿ, ಬಂದಕಾರಣವನ್ನು ವಿಚಾರಿಸಿದಾಗ ಬ್ರಾಹ್ಮಣನು 'ನಾನು ವಸಿಷ್ಠಕುಲೋದ್ಭೂತನಾದ ವೀರಶರ್ಮನೆಂಬ ಬ್ರಾಹ್ಮಣನು. ಇವಳು ಕೌಶಿಕಕುಲೋದ್ಭೂತಳಾದ ಲಕ್ಷ್ಮೀಯೆಂದು ಖ್ಯಾತಳಾದ ಸುಶೀಲೆಯೂ, ಪತಿವ್ರತೆಯೂ ಆದ ಸ್ತ್ರೀಯು ನನ್ನ ಮಡದಿಯು. ಗಂಗಾಸ್ನಾನಕ್ಕಾಗಿ ಹೋಗುತ್ತಿದ್ದಾಗ ಗರ್ಭಿಣಿಯಾದ ಇವಳನ್ನು ಇಲ್ಲಿಯೇ ನಿನ್ನ ಮನೆಯಲ್ಲಿ ಬಿಟ್ಟುಹೋಗುವೆನು. ಗಂಗಾಸ್ನಾನಾನಂತರದಲ್ಲಿ ಹಿಂತಿರುಗಿ ಕರೆದುಕೊಂಡು ಹೋಗುವೆನು. ಆದ್ದರಿಂದ ರಾಜನೇ! ಇವಳಿಗೆ ಯಥಾಯೋಗ್ಯವಾಗಿ ಆಹಾರ–ವೇತನಗಳನ್ನು ನೀಡು ನಾನು ಬರುವವರೆಗೂ ಇವಳನ್ನು ರಕ್ಷಿಸು' ಎಂದು ನುಡಿದನು. ಇದಕ್ಕೆ ಸಮ್ಮತಿಸಿದ ರಾಜನು ಅವಳಿಗೆ ಆರು ತಿಂಗಳಿಗಾಗುವಷ್ಟು ದವಸ ಧಾನ್ಯಗಳನ್ನು ಕೊಟ್ಟು ತನ್ನ ಅಂತಃಪುರದಲ್ಲಿಯೇ

ರಾಜಾ ತಸ್ಯ ವಚಃ ಶ್ರುತ್ವಾ ತುಂಡಲಾನಿ ಧನಾನ್ಯಪಿ ।
ದತ್ತ್ವಾ ಷಣ್ಮಾಸಪರ್ಯಂತಂ ಗೃಹಮಂತಃಪುರೇ ದದೌ ॥59॥

ತಾಂ ನ್ಯಸ್ಯ ಬ್ರಾಹ್ಮಣಃ ಪ್ರೀತೋ ಗಂಗಾಸ್ನಾನಾಯ ನಿರ್ಯಯೌ ।
ಗತ್ವಾ ಭಾಗೀರಥೀಂ ಗಂಗಾಂ ಪ್ರಯಾಗೇ ಕ್ಷೇತ್ರ ಉತ್ತಮೇ ॥60॥

ಸ್ನಾತ್ವಾ ಕಾಶೀಂ ತತೋ ಗತ್ವಾ ತತ್ರೋಷಿತ್ವಾ ದಿನತ್ರಯಮ್ ।
ಗಯಾಂ ಪ್ರಾಪ್ಯ ಪಿತೃಶ್ರಾದ್ಧಮಕರೋದ್ಬ್ರಾಹ್ಮಣೋತ್ತಮಃ ॥61॥

ಗತ್ವಾಽಯೋಧ್ಯಾಮಪಿ ಪುರೀಂ ಪ್ರಯಯೌ ಬದರೀವನಮ್ ।
ಸಾಲಗ್ರಾಮಂ ತತೋ ಗತ್ವಾ ಸ್ವದೇಶಂ ಪ್ರತಿ ನಿರ್ಯಯೌ ॥62॥

ಸಂವತ್ಸರದ್ವಯೇಽತೀತೇ ಚೈತ್ರೇ ಮಾಸಿ ಶುಭೇ ದಿನೇ ।
ನಿವೃತ್ತೋಽಸೌ ದ್ವಿಜಶ್ರೇಷ್ಠಃ ಶನೈರಾಗತ್ಯ ಮಾಧವೇ ॥63॥

ಏಕಾದಶ್ಯಾಂ ಶುಕ್ಲಪಕ್ಷೇ ಪುನಾ ರಾಜಾನಮಾಯಯೌ ।
ರಾಜಾ ತು ವಿಸ್ಮೃತ್ಯ ತದಾ ಬ್ರಾಹ್ಮಣೀಂ ನ ಸ್ಮರನ್ನೃಪಃ ॥64॥

ಬ್ರಾಹ್ಮಣೀ ಮಾನಿನೀ ಗೇಹೇ ಮೃತಾ ಶುಷ್ಕಾ ಬಭೂವ ಹ ।
ವೀರಶರ್ಮಾ ತತೋ ವಿಪ್ರೋ ಗಂಗಾತೋಯಕರಂಡಕಮ್ ॥65॥

ವಿಮುಚ್ಯ ಬಂಧನಂ ತ್ವೇಕಂ ಗಂಗಾಂಭಃಕರಕಂ ಶುಭಮ್ ।
ಪ್ರಾದಾಯ ರಾಜ್ಞೇ ಪಪ್ರಚ್ಛ ಪತ್ನೀ ಕುಶಲಿನೀತಿ ಮೇ ॥66॥

ಸ್ಮೃತ್ವಾಽಥ ರಾಜಾ ವಿಪ್ರಂ ತಂ ಸ್ಥೀಯತಾಮಿತಿ ಚಾಬ್ರವೀತ್ ।

ಮನೆಯೊಂದನ್ನು ಕೊಟ್ಟು ವಾಸವನ್ನು ಕಲ್ಪಿಸಿದನು. ಸಂತುಷ್ಟನಾದ ವೀರಶರ್ಮನು ಅವಳನ್ನು ಅಲ್ಲಿ ಬಿಟ್ಟು ನಿಶ್ಚಿಂತೆಯಿಂದ ಪ್ರಯಾಗಕ್ಕೆ ತೆರಳಿ ಗಂಗಾಸ್ನಾನವನ್ನಾಚರಿಸಿ, ಮುಂದೆ ಕಾಶೀಕ್ಷೇತ್ರದಲ್ಲಿ ಮೂರುದಿನವಿದ್ದು, ಗಯಾಕ್ಷೇತ್ರಕ್ಕೆ ತೆರಳಿ ಪಿತೃಶ್ರಾದ್ಧಾದಿಗಳನ್ನಾಚರಿಸುತ್ತಾ ತೀರ್ಥಯಾತ್ರೆಯನ್ನು ಮಾಡುತ್ತಾ ಅಯೋಧ್ಯಾ, ಪುರೀ, ಸಾಲಿಗ್ರಾಮ ಕ್ಷೇತ್ರವೇ ಮೊದಲಾದ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸುತ್ತಾ, ಎರಡು ವರ್ಷದ ಅನಂತರ ಚೈತ್ರಮಾಸದ ಶುಕ್ಲ ಪಕ್ಷದ ಏಕಾದಶಿಯಂದು ಹಿಂದಿರುಗಿ ಬಂದನು. ಬಹುದಿನಗಳಿಂದ ದೂರವಿದ್ದ ಬ್ರಾಹ್ಮಣನನ್ನು ರಾಜನು ಮರೆತುಬಿಟ್ಟಿದ್ದನು. ಅವನ ಹೆಂಡತಿಯು ಆಹಾರವಿಲ್ಲದೇ ಸತ್ತು ಒಣಗಿಹೋಗಿದ್ದಳು. ವೀರಶರ್ಮನು ರಾಜನಿಗೆ ಮತ್ತು ಅವನ ಮಡದಿಗೆ ಗಂಗೆಯ ತಂಬಿಗೆಯೊಂದನ್ನು ಕೊಟ್ಟು ತನ್ನ ಪತ್ನಿಯ ಯೋಗಕ್ಷೇಮವನ್ನು

ಅಂತಃಪುರಂ ತತೋ ಗತ್ವಾ ತಾಮಪಶ್ಯನ್ಮೃತಾಂ ಗೃಹೇ ॥67॥

ಅನುಜ್ಞಾಪ್ಯ ಬ್ರಹ್ಮಣೇ ತಸ್ಮೈ ಪ್ರವಿಶ್ಯ ಬಿಲಮುತ್ತಮಮ್ ।
ಶ್ರೀನೃಸಿಂಹಂ ನಮಸ್ಕೃತ್ಯ ಪುನಃ ಪ್ರಾಪ್ಯ ಬಿಲೋತ್ತಮಮ್ ॥68॥

ಶ್ರೀನಿವಾಸಂ ಯಯೌ ದ್ರಷ್ಟುಂ ಶ್ರೀಭೂಮಿಸಹಿತಂ ಪರಮ್ ।
ತಂ ದೃಷ್ಟ್ವಾ ಸಹಸಾಽಽಯಾಂತಂ ಜಗೂಹಾತೇ ಧರಾರಮೇ ॥69॥

ಪ್ರಣಮಂತಮವೋಚತ್ತಂ ಕಿಮಕಾಲೇ ನೃಪಾಗತಃ ।
ನೃಪೋಽವದತ್ಪ್ರಣಮ್ಯೇಶಂ ಭೀತೋಽಥ ಬ್ರಾಹ್ಮಣೀಂ ಮೃತಾಮ್ ॥70॥

ತಚ್ಛ್ರುತ್ವಾ ದೇವದೇವೋಽಪಿ ಮಾ ಭೈಃ ರಾಜನ್ ದ್ವಿಜೋತ್ತಮಾತ್।
ಅಂದೋಲಿಕಾಂ ತಾಮಾರೋಪ್ಯ ಸ್ತ್ರೀಭಿಃ ಸ್ವಾಭಿಃ ಸಮನ್ವಿತಾಮ್ ॥71॥

ಮದಾಲಯಾತ್ಪೂರ್ವಭಾಗೇ ದ್ವಾದಶ್ಯಾಂ ಸ್ನಾಪಯ ಪ್ರಭೋ ।
ಅಸ್ಥಿನಾಮ್ನೀ ಸರಸ್ಯಸ್ಮಿನ್ಸರ್ವಮೃತ್ಯುನಿವಾರಣೇ ॥72॥

ಪ್ರಾಪ್ತಜೀವಾ ಸಮಂ ಸ್ತ್ರೀಭಿರ್ಬ್ರಾಹ್ಮಣೇನ ಚ ಯೋಕ್ಷ್ಯತೇ ।
ಶೀಘ್ರಂ ಯಾಹಿ ನೃಪಶ್ರೇಷ್ಠ ಯಥೋಕ್ತಂ ವಚನಂ ಕುರು ॥73॥

ಇತಿ ದೇವವಚಃ ಶ್ರುತ್ವಾ ಪ್ರಯಯೌ ಸ್ವಪುರಂ ನೃಪಃ ।
ಅಂದೋಲಿಕಾಸು ರಮ್ಯಾಸು ಸ್ತ್ರಿಯ ಆರೋಪ್ಯ ತಾಮಪಿ ॥74॥

ವಿಚಾರಿಸಿದನು. ಆಗ ಎಲ್ಲವನ್ನೂ ನೆನಪಿಸಿಕೊಂಡ ರಾಜನು ಭಯಗ್ರಸ್ತನಾಗಿ ಬ್ರಾಹ್ಮಣನಿಗೆ ತಡೆಯಲು ತಿಳಿಸಿ, ಅಂತಃಪುರಕ್ಕೆ ಬಂದು, ಮೃತಳಾದ ಬ್ರಾಹ್ಮಣ ಸ್ತ್ರೀಯನ್ನು ಕಂಡು ದುಃಖಿತನಾಗಿ ಯಾರಿಗೂ ತಿಳಿಸದೇ ಬಿಲಮಾರ್ಗದಿಂದ ಶ್ರೀನಿವಾಸನನ್ನು ನೋಡುವದಕ್ಕಾಗಿ ಬಂದನು. ತನಗೆ ನಮಿಸುತ್ತಿರುವ ರಾಜನನ್ನು ಶ್ರೀನಿವಾಸನು 'ಪುನಃ ತಿರುಗಿ ಬರಲು ಕಾರಣವೇನು? ಎಂದು ಪ್ರಶ್ನಿಸಿದನು. ಆಗ ರಾಜನು ನಡೆದ ವೃತ್ತಾಂತವನ್ನು ತಿಳಿಸಿದಾಗ ಭಗವಂತನು 'ಹೇ ರಾಜನೇ! ನೀನು ಹೆದರದಿರು. ಪಲ್ಲಕ್ಕಿಯೊಂದರಲ್ಲಿ ಆ ಸ್ತ್ರೀಯನ್ನು ಹೊತ್ತುಕೊಂಡು ಬಂದು ನನ್ನ ಆಲಯದ ಮುಂದಿರುವ ಅಸ್ಥಿಸರೋವರವೆಂಬ ಸರ್ವಮೃತ್ಯುವಿನಾಶಕವಾದ ತೀರ್ಥದಲ್ಲಿ ದ್ವಾದಶಿಯಂದು ಸ್ನಾನವನ್ನು ಮಾಡಿಸು. ಇದರಿಂದ ಅವಳು ಬದುಕಿ ಪುನಃ ಬ್ರಾಹ್ಮಣನನ್ನು ಹೊಂದುವಳು. ಆದ್ದರಿಂದ ಹೆಚ್ಚುವಿಚಾರಿಸದೇ ನಾನು ಹೇಳಿದಂತೆ ಶೀಘ್ರದಲ್ಲಿಯೇ ಮಾಡುವವನಾಗು' ಎಂದಾಜ್ಞಾಪಿಸಿದನು. ಭಗವಂತನ ಮಾತನ್ನು ಕೇಳಿದ ತೋಂಡಮಾನನು

ಬ್ರಾಹ್ಮಣಂ ಚ ಪುರಸ್ಕೃತ್ಯ ದ್ರಷ್ಟುಂ ದೇವಂ ಯಯೌ ನೃಪಃ ।
ಅಸ್ಥಿಕೂಟಸರಃ ಪ್ರಾಪ್ಯ ಸ್ನಾಪಯಾಮಾಸ ತಾಃ ಸ್ತ್ರಿಯಃ ॥75॥

ತ್ವಗಸ್ಥಿರೂಪಾ ಸಾ ಚಾಪಿ ತಾಭಿಃ ಕ್ಷಿಪ್ತಾ ಸರೋವರೇ ।
ಪ್ರಾಪ್ತಜೀವಾ ಯಥಾಪೂರ್ವಂ ಸುವ್ಯಂಜಿತಶರೀರಜಾ ॥76॥

ಉತ್ಥಿತಾ ಸರಸಃ ಸ್ನಾತ್ವಾ ರಾಜ್ಞೀಭಿಃ ಸಹ ಮಂಗಲಾ ।
ಪ್ರಾಪ್ತಾ ಚ ಬ್ರಾಹ್ಮಣಂ ಪ್ರೀತಾ ಭರ್ತಾರಂ ಪುನರಾಗತಮ್ ॥77॥

ರಾಜಾ ಹರಿಂ ಪೂಜಯಿತ್ವಾ ಬ್ರಾಹ್ಮಣಾಯ ಧನಂ ದದೌ ।
ಸಹಸ್ರನಿಷ್ಕಪರ್ಯಂತಂ ವಸ್ತ್ರಾಣಿ ವಿವಿಧಾನಿ ಚ ॥78॥

ಸ್ವದೇಶಗಮನಾಯೈವ ಸಾದರಂ ವಿಸಸರ್ಜ ಹ ।
ವಿಪ್ರಃ ಶ್ರುತ್ವಾ ಸ್ತ್ರಿಯೋ ವೃತ್ತಂ ಪ್ರಭಾವಂ ವೇಂಕಟೇಶಿತುಃ ॥79॥

ಆಶೀಃ ಪ್ರಯುಜ್ಯ ರಾಜ್ಞೇಽಥ ಸ್ವದೇಶಂ ಪ್ರಯಯೌ ದ್ವಿಜಃ ।
ವಿಪ್ರೇ ಗತೇ ಶ್ರೀನಿವಾಸೋ ರಾಜಾನಂ ಪುನರಬ್ರವೀತ್ ॥80॥

ದಿನೇ ದಿನೇ ಚ ಮಧ್ಯಾಹ್ನೇ ನೈವೇದ್ಯಾನಂತರಂ ನೃಪ ।
ಆಗತ್ಯ ಮಾಮರ್ಚಯಿತ್ವಾ ಯಥೇಷ್ಟಂ ಸ್ವರ್ಣಪಂಕಜೈಃ ॥81॥

ಸುಂದರವಾದ ಆಂದೋಲಿಕೆಗಳಲ್ಲಿ ಅಂತಃಪುರ ಸ್ತ್ರೀಯರನ್ನು ಮತ್ತು ಮರಣ ಹೊಂದಿದ್ದ ಬ್ರಾಹ್ಮಣ ಸ್ತ್ರೀಯನ್ನು ಕೂಡಿಸಿಕೊಂಡು ವೇಂಕಟಾಚಲಕ್ಕೆ ಬಂದ, ಬ್ರಾಹ್ಮಣರ ಮೂಲಕವಾಗಿ ದೇವರ ದರ್ಶನವನ್ನು ಹೊಂದಿ, ಎಲ್ಲರಿಗೂ ಸಹ ಅಸ್ಥಿಕೂಟಸರೋವರದಲ್ಲಿ ಸ್ನಾನವನ್ನು ಮಾಡಿಸಿದನು. ಅದೇ ಸಂದರ್ಭದಲ್ಲಿ ಕೇವಲ ಚರ್ಮ-ಅಸ್ಥಿಗಳನ್ನು ಮಾತ್ರ ಹೊಂದಿದ್ದ ಬ್ರಾಹ್ಮಣಿಯನ್ನು ಆ ಸರೋವರದಲ್ಲಿ ಹಾಕಲು ಅವಳು ಜೀವವನ್ನು ಹೊಂದಿ ಹಿಂದಿನಂತಾಗಿ ರಾಣಿಯರೊಡನೆ ಎದ್ದುಬಂದಳು. ಅನಂತರ ಅವಳು ರಾಜನ ಮೂಲಕವಾಗಿ ತನ್ನ ಪತಿಯಾದ ವೀರಶರ್ಮನನ್ನು ಹೊಂದಿದಳು. ರಾಜನು ಅತ್ಯಂತ ಸಂತೋಷದಿಂದ ಭಗವಂತನನ್ನು ಸಂಪೂಜಿಸಿ, ಬ್ರಾಹ್ಮಣರಿಗೆ ಸಾವಿರಾರು ನಿಷ್ಕಗಳಷ್ಟು ದಕ್ಷಿಣೆಯನ್ನು ಕೊಟ್ಟನು. ವೀರಶರ್ಮನು ತನ್ನ ಮಡದಿಯ ವೃತ್ತಾಂತವನ್ನು ಕೇಳಿ ವೇಂಕಟೇಶನ ಮಾಹಾತ್ಮ್ಯವನ್ನು ತಿಳಿದು ರಾಜನಿಗೆ ಆಶೀರ್ವದಿಸಿ ಪತ್ನಿಯೊಂದಿಗೆ ತನ್ನ ನಗರಕ್ಕೆ ನಡೆದನು.

ಬ್ರಾಹ್ಮಣನು ಹೊರಟ ಅನಂತರದಲ್ಲಿ ಶ್ರೀನಿವಾಸನ, ಬಳಿ ಹೋಗಿದ್ದ ರಾಜನಿಗೆ ದೇವನು 'ದಿನವೂ ಸಹ ಮಧ್ಯಾಹ್ನದ ನೈವೇದ್ಯಾನಂತರದಲ್ಲಿ ಬಂದು ನನ್ನರ್ಚಿಸಿ, ನನ್ನನುಗ್ರಹವನ್ನು

ಗತ್ವಾ ಪುರೀಂ ಸ್ವಧರ್ಮೇಣ ರಾಜ್ಯಂ ಕುರು ನರಾಧಿಪ ।
ಯದ್ಯದಿಷ್ಟಂ ತವ ನೃಪ ಭವಿಷ್ಯತಿ ನ ಸಂಶಯಃ ॥82॥

ನಾಗಂತವ್ಯಮಕಾಲೇ ತು ತ್ವಯಾ ನೃಪ ಕದಾಚನ ।
ಏವಂ ಕಾಲಾರ್ಚನಂ ಕೃತ್ವಾ ಗತ್ವಾ ತ್ವಂ ಸ್ವಪುರೇ ವಸ ॥83॥

ರಾಜೋವಾಚ–

ತಥಾ ಕರಿಷ್ಯೇ ದೇವೇಶ ಮಧ್ಯಾಹ್ನೇ ಚಾರ್ಚಯಾಮ್ಯಹಮ್ ।
ಇತಿ ದೇವಾಜ್ಞಯಾ ನಿತ್ಯಮರ್ಚಯನ್ಸ್ವರ್ಣಪಂಕಜೈಃ ॥84॥

ತದೂರ್ಧ್ವಂ ತುಲಸೀಪುಷ್ಪಂ ಜಾತ್ವಪಶ್ಯತ್ಸಮೃಣ್ಮಯಮ್ ।
ವಿಸ್ಮಿತೋ ದೇವದೇವೇಶಮಪೃಚ್ಛನ್ನೃಪಸತ್ತಮಃ ॥85॥

ರಾಜೋವಾಚ–

ಕೇನಾರ್ಚ್ಯಸೇ ಮೃನ್ಮಯೈಶ್ಚ ಕಮಲೈಸ್ತುಲಸೀಸಮೈಃ ।
ರಾಜ್ಞಾ ಪೃಷ್ಟೋ ದೇವದೇವಃ ಸ್ಮೃತ್ವಾ ರಾಜಾನಮಬ್ರವೀತ್ ॥86॥

ಕಶ್ಚಿತ್ಕುಲಾಲೋ ಮದ್ಭಕ್ತಃ ಕುರ್ವಗ್ರಾಮೇ ವಸತ್ಯಸೌ ।
ಸ್ವಗೃಹೇಽರ್ಚಯತೇ ರಾಜಂಸ್ತದಂಗೀಕ್ರಿಯತೇ ಮಯಾ ॥87॥

ಹೊಂದಿ, ರಾಜ್ಯವನ್ನು ಪರಿಪಾಲಿಸು. ನೀನೇನು ಬಯಸುವಿಯೋ ಅದೆಲ್ಲವೂ ಸಹ ಈಡೇರುವದು. ಇನ್ನುಮುಂದೆ ಎಂದಿಗೂ ಅಕಾಲದಲ್ಲಿ (ನಿಯತ ಕಾಲವನ್ನು ಬಿಟ್ಟು ಬೇರೆಕಾಲದಲ್ಲಿ) ಇಲ್ಲಿಗೆ ಬರಬೇಡ. ದಿನವೂ ಸಹ ನಿಯತಕಾಲದಲ್ಲಿ ನನ್ನನ್ನಾರಾಧಿಸಿ ನಿನ್ನ ಪುರಕ್ಕೆ ತೆರಳಿ ವಾಸವನ್ನು ಮಾಡು' ಎಂದು ನುಡಿದನು. ತೋಂಡಮಾನನು ಸಮ್ಮತಿಸಿ 'ಮಧ್ಯಾಹ್ನ ನೈವೇದ್ಯಾನಂತರದಲ್ಲಿ ನಾನು ನಿನ್ನನ್ನು ಅರ್ಚಿಸುವೆನು' ಎಂದು ನುಡಿದು ದೇವನನ್ನು ದಿನವೂ ಬಂಗಾರದ ಕಮಲಗಳಿಂದ ಪೂಜಿಸಿದನು. ಒಂದು ಬಾರಿ ತನ್ನ ಸ್ವರ್ಣಕಮಲಗಳ ಮೇಲೆ ಮಣ್ಣಿನಿಂದ ಮಾಡಿರುವ ತುಳಸೀ ದಳಗಳಿರುವದನ್ನು ಕಂಡು ಆಶ್ಚರ್ಯವನ್ನು ಹೊಂದಿದ ರಾಜನು 'ಮೃಣ್ಮಯವಾದ ತುಳಸೀ ಮತ್ತು ಪುಷ್ಪಗಳಿಂದ ನಿನ್ನನ್ನು ಯಾರು ಅರ್ಚಿಸುತ್ತಿರುವರು? ಎಂದು ಕೇಳಿದಾಗ ಶ್ರೀನಿವಾಸನು ತನ್ನ ಭಕ್ತನಾದ ಕುಂಬಾರನೊಬ್ಬನು ಕುರ್ವವೆಂಬ ಗ್ರಾಮದಲ್ಲಿ ವಾಸಿಸುತ್ತಿರುವವನಾಗಿ ತನ್ನ ಮನೆಯಲ್ಲಿ ನಿತ್ಯದಲ್ಲಿಯೂ ನನ್ನನ್ನು ಭಕ್ತಿಯಿಂದ ಅರ್ಚಿಸುತ್ತಿರುವನು. ಅವನ ನಿರಾಡಂಬರ ಭಕ್ತಿಗೆ ಮೆಚ್ಚಿ ಅವನ ಅರ್ಚನೆಯನ್ನು ನಾನು ಸ್ವೀಕರಿಸುತ್ತಿರುವೆನು' ಎಂದು ನುಡಿದನು. ರಾಜನು ಆ ಭಕ್ತನ ದರ್ಶನಾರ್ಥವಾಗಿ ಕುರ್ವಗ್ರಾಮಕ್ಕೆ ಹೋಗಿ ಕುಂಬಾರನನ್ನು ಭೆಟ್ಟಿಮಾಡಿದನು.

ಇತಿ ದೇವವಚಃ ಶ್ರುತ್ವಾ ತಂ ದ್ರಷ್ಟುಂ ಪ್ರಯಯೌ ನೃಪಃ ॥88॥

ಗತ್ವಾ ಕುರ್ವಪುರಂ ತಸ್ಯ ಕುಲಾಲಸ್ಯ ಗೃಹಂ ಯಯೌ ।
ರಾಜಾನಮಾಗತಂ ದೃಷ್ಟ್ವಾ ಪ್ರಣಮ್ಯೈವಾಗ್ರತಃ ಸ್ಥಿತಃ ॥89॥

ಸ್ಥಿತಂ ತಂ ಭೀಮನಾಮಾನಂ ಪಪ್ರಚ್ಛ ನೃಪಸತ್ತಮಃ ।

ತೋಂಡಮಾನೋವಾಚ–

ಭೀಮ ಪೂಜಯಸೇ ದೇವಂ ಕಥಂ ವದ ಕುಲೋತ್ತಮ ॥90॥

ಶ್ರೀವರಾಹ ಉವಾಚ–

ಪೃಷ್ಟಃ ಪ್ರಾಹ ಕುಲಾಲೋಽಪಿ ಜಾತು ಜಾನೇ ನ ಚಾರ್ಚನಮ್ ।
ಕೇನೋಕ್ತಂ ನೃಪತಿಶ್ರೇಷ್ಠಃ ಕಲಾಲೋಽರ್ಚಯತೀತಿ ಹಿ ॥91॥

ತೋಂಡಮಾನೋವಾಚ–

ಯದಾ ಪ್ರಕಾಶಿತಾ ಪೂಜಾ ಯದಾ ರಾಜಾ ಸಮಾಗತಃ ।
ತೋಂಡಮಾಂಸ್ತೇನ ಸಂವಾದಸ್ತದಾ ಮೋಕ್ಷಂ ಗಮಿಷ್ಯಸಿ ॥93॥

ಇತಿ ಪೂರ್ವಂ ವರಂ ದೇವೋ ದತ್ತವಾನ್ವೇಂಕಟೇಶ್ವರಃ ॥94॥

ಇತ್ಯುಕ್ತ್ವಾಥ ಕುಲಾಲೋಽಪಿ ಪತ್ನ್ಯಾ ಸಾರ್ಧಂ ತಥೈವ ಚ ।
ವಿಮಾನಮಾಗತಂ ದೃಷ್ಟ್ವಾ ದೇವಂ ದೃಷ್ಟ್ವಾ ಜನಾರ್ದನಮ್ ॥95॥

ಅವನಿಂದ ನಮಸ್ಕೃತನಾದ ತೋಂಡಮಾನನು ಪೂಜಾವಿಧಾನವನ್ನು ತಿಳಿಸಲು ಕುಂಬಾರನನ್ನು ಕೇಳಿಕೊಂಡನು. 'ಯಾವ ಪೂಜೆಯನ್ನೂ ಅರಿಯಲಾರದ ನಾನು ಭಗವಂತನನ್ನು ಪೂಜಿಸುತ್ತಿರುವೆನೆಂಬ ವಿಷಯವನ್ನು ನಿಮಗೆ ಯಾರು ತಿಳಿಸಿದರು?' ಎಂದು ತೋಂಡಮಾನನನ್ನು ಕೇಳಿದಾಗ ಶ್ರೀನಿವಾಸನೇ ಈ ವಿಷಯವನ್ನು ತಿಳಿಸಿರುವನೆಂದು ರಾಜನು ಉತ್ತರಿಸಿದನು. ಆಗ ಚಕಿತನಾದ ಕುಂಬಾರನು ಭಗವಂತನು ಕೊಟ್ಟಿದ್ದ ವರವನ್ನು ತೋಂಡಮಾನ ರಾಜನಿಗೆ 'ನಿನ್ನ ಪೂಜೆಯು ಯಾರಿಗೂ ಬಹಿರಂಗವಾಗಿ ತಿಳಿಯಕೂಡದು. ನಿನ್ನ ಪೂಜೆಯು ಬಹಿರಂಗವಾಗಿ ತಿಳಿದು ತೋಂಡಮಾನ ರಾಜನು ನಿನ್ನಲ್ಲಿಗೆ ಬಂದು ಸಂಭಾಷಣಮಾಡಿದ ಸಮಯದಲ್ಲಿಯೇ ನಿನಗೆ ಮೋಕ್ಷಪ್ರಾಪ್ತಿಯಾಗುವದು' ಎಂಬುದಾಗಿ ತಿಳಿಸಿದನು.

ಅದೇ ಸಂದರ್ಭದಲ್ಲಿ ಶ್ರೀಮನ್ನಾರಾಯಣನು ಪ್ರತ್ಯಕ್ಷನಾದುದನ್ನು ಕಂಡು ಆತನಿಗೆ ಭಕ್ತಿಪುರಸ್ಸರವಾಗಿ ನಮಸ್ಕರಿಸಿ ತನ್ನ ಪತ್ನಿಯೊಡನೆ ದೇಹತ್ಯಾಗವನ್ನು ಮಾಡಿ, ದೇವಲೋಕದಿಂದ ಆಗಮಿಸಿದ

ಪ್ರಣಮನ್ಪ್ರಜಹೌ ಪ್ರಾಣಾನ್ಸದಾರೋ ಭಕ್ತಸತ್ತಮಃ ॥96॥

ಪಶ್ಯತೋ ರಾಜರಾಜಸ್ಯ ವಿಮಾನಮಧಿರುಹ್ಯ ಚ ।
ದಿವ್ಯರೂಪಧರೋ ದೇವ್ಯಾ ಸಾರ್ಧಂ ವಿಷ್ಣುಪದಂ ಯಯೌ ॥97॥

ದೃಷ್ಟ್ವಾ ರಾಜಾದ್ಭುತಂ ತತ್ರ ಸ್ವಪುರಂ ಪ್ರಾಪ್ಯ ಹರ್ಷಿತಃ ।
ಸ್ವಪುತ್ರಂ ಶ್ರೀನಿವಾಸಾಖ್ಯಮಭಿಷಿಚ್ಯ ವಿಧಾನತಃ ॥98॥

ಪರಿಪಾಲಯ ಧರ್ಮೇಣ ಮಾನವಾಂಶ್ಚ ವಸುಂಧರಾಮ್ ।
ಇತ್ಯಾಜ್ಞಪ್ಯ ಸುತಂ ಧೀಮಾಂಸ್ತತಾಪ ಪರಮಂ ತಪಃ ॥99॥

ತಪ್ಯತಸ್ತಸ್ಯ ದೇವೋಽಪಿ ಪ್ರತ್ಯಕ್ಷಮಭವದ್ಧರಿಃ ।
ಆರುಹ್ಯ ಗರುಡಂ ದೇವೋ ರಮಾಭೂಮಿಸಮನ್ವಿತಃ ॥100॥

ಕಿಂ ಕರೋಮಿ ನೃಪಶ್ರೇಷ್ಠ ತಪಸಾ ತೋಷಿತಸ್ತವ ।
ಇತ್ಯುಕ್ತೋ ದೇವದೇವೇನ ತೋಂಡಮಾನಪಿ ರಾಜರಾಟ್ ॥101॥

ಪ್ರೀತಿಮಾನ್ ಪ್ರಾಂಜಲಿರ್ಭೂತ್ವಾ ಸಗದ್ಗದಮುವಾಚ ಹ ।
ತ್ವಲ್ಲೋಕೇ ವಸ್ತುಮಿಚ್ಛಾಮಿ ಜರಾಮರಣವರ್ಜಿತೇ ॥102॥

ಇದಮೇವ ವರಂ ದೇಹಿ ಮಾಧವೈತನ್ಮಮೇಪ್ಸಿತಮ್ ॥103॥

ವಿಮಾನಾರೂಢನಾಗಿ ದಿವ್ಯವಾದ ರೂಪವನ್ನು ಹೊಂದಿ ವೈಕುಂಠಲೋಕವನ್ನು ಕುರಿತು ತೋಂಡಮಾನನು ಪ್ರತ್ಯಕ್ಷವಾಗಿ ನೋಡುತ್ತಿರುವಂತೆಯೇ ಪ್ರಯಾಣಮಾಡಿದನು. ಈ ಆಶ್ಚರ್ಯವಾದ ಭಗವಂತನ ಮಹಿಮೆಯನ್ನು ಪ್ರತ್ಯಕ್ಷವಾಗಿ ಕಂಡ ತೋಂಡಮಾನನು ರಾಜಧಾನಿಗೆ ಹಿಂದಿರುಗಿ ತನ್ನ ಮಗನಾದ ಶ್ರೀನಿವಾಸನಿಗೆ ಪಟ್ಟಾಭಿಷೇಕವನ್ನು ಮಾಡಿ 'ಧರ್ಮದಿಂದ ರಾಜ್ಯವನ್ನು ಪರಿಪಾಲಿಸಲು ತಿಳಿಸಿ ಭಗವಂತನನ್ನುದ್ದೇಶಿಸಿ ತೀವ್ರವಾದ ತಪಸ್ಸನ್ನಾಚರಿಸಿದನು.

ತಪಸ್ಸನ್ನಾಚರಿಸುತ್ತಿದ್ದ ತೋಂಡಮಾನನಿಗೆ ಗರುಡಾರೂಢನಾದ ರಮಾಸಹಿತನಾದ ಶ್ರೀನಿವಾಸನು ಪ್ರತ್ಯಕ್ಷನಾಗಿ ನಿನ್ನ ತಪಸ್ಸಿನಿಂದ ಸಂತುಷ್ಟನಾಗಿರುವೆನು. ನಿನಗೇನು ಬೇಕು. ಕೇಳಿಕೋ' ಎಂದು ನುಡಿದನು. ಆಗ ಭಗವಂತನ ದರ್ಶನದಿಂದ ಗದ್ಗದ ಕಂಠನಾದ ತೋಂಡಮಾನನು ಕೈಗಳನ್ನು ಮುಗಿದು 'ಜರಾಮರಣರಹಿತವಾದ ನಿನ್ನ ಲೋಕದಲ್ಲಿ ನಾನು ವಾಸಮಾಡಬಯಸುವೆನು. ಇದನ್ನೇ ನಾನು ಬಯಸಿರುವೆನು. ಅನುಗ್ರಹಿಸು' ಎಂದು ಪ್ರಾರ್ಥಿಸಿ ಭಗವಂತನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು. ಅನಂತರ ದೇಹತ್ಯಾಗವನ್ನು ಮಾಡಿ ವಿಮಾನವನ್ನೇರಿ

ಶ್ರೀವರಾಹ ಉವಾಚ–

ಇತ್ಯುಕ್ತ್ವಾ ನಿಪಪಾತೋರ್ವ್ಯಾಂ ಸಾಷ್ಟಾಂಗಂ ದೇವಸನ್ನಿಧೌ ।
ತದಾ ಕಲೇವರಂ ಮುಕ್ತ್ವಾ ವಿಮಾನಂ ತ್ವಾರುರೋಹ ಚ ॥104॥

ಗಂಧರ್ವೈಃ ಸ್ತೂಯಮಾನೋಽಸೌ ಸಾರೂಪ್ಯಂ ಪ್ರಾಪ್ಯ ಶಾರ್ಙ್ಗಿಣಃ।
ಯಚ್ಛೋಕಮೋಹರಹಿತಂ ಜರಾಮರಣವರ್ಜಿತಮ್ ॥105॥

ಪುನರಾವೃತ್ತಿರಹಿತಂ ತದ್ವಿಷ್ಣೋಃ ಪದಮಾಯಯೌ ॥106॥

ಏತದ್ಭವಿಷ್ಯಂ ದೇವೇಶಿ ಮಯೋಕ್ತಂ ವರವರ್ಣಿನಿ ।
ಯಃ ಶ್ರಾವಯೇದ್ಯಃ ಶ್ರುಣುಯಾದ್ವಿಷ್ಣುಲೋಕಂ ಸ ಗಚ್ಛತಿ ॥107॥

ಶ್ರೀ ಸೂತ ಉವಾಚ

ಇತ್ಯುಕ್ತಂ ದೇವದೇವೇನ ಸಭವಿಷ್ಯಂ ಸಹೋತ್ತರಮ್ ।
ಶೃಣುಯಾದ್ಯಃ ಪಠೇದ್ಭಕ್ತ್ಯಾ ಕಥಾಂ ಪುಣ್ಯಾಂ ಪುರಾತನೀಮ್ ॥

ಸ ತು ಭುಕ್ತ್ವಾಽಖಿಲಾನ್ಕಾಮಾನಂತೇ ವಿಷ್ಣುಪದಂ ವ್ರಜೇತ್ ॥109॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ 'ಭವಿಷ್ಯದ್ವರ್ಣನೇ ತೋಂಡಮಾಂಶ್ಚಕ್ರವರ್ತಿವೃತ್ತವರ್ಣನಂ' ನಾಮ ದಶಮೋಽಧ್ಯಾಯಃ ॥10॥

* * *

ಗಂಧರ್ವಾದಿಗಳಿಂದ ಸಂಸ್ತೂಯಮಾನನಾಗಿ ಶೋಕಮೋಹ, ಜರಾಮರಣರಹಿತವಾದ ಪುನರಾವೃತ್ತಿ ವರ್ಜಿತವಾದ ವಿಷ್ಣುವಿನ ಲೋಕವನ್ನು ಹೊಂದಿದನು.

ಹೇ ಭೂಮಿಯೇ! ನಿನಗೆ ನಾನು ಮುಂದಾಗುವ ವೃತ್ತಾಂತವನ್ನು ತಿಳಿಸಿರುವೆನು. ಇದನ್ನು ಯಾರು ಕೇಳುವರೋ, ಹೇಳುವರೋ ಅವರು ವಿಷ್ಣುಲೋಕವನ್ನು ಹೊಂದಿ ಸುಖವನ್ನು ಅನುಭವಿಸುವರು' ಎಂದು ವರಾಹನು ಭೂಮಿಗೆ ತಿಳಿಸಿದನು.

ಸೂತರು ನುಡಿಯುತ್ತಾರೆ – ಈ ರೀತಿಯಾಗಿ ದೇವದೇವೇಶನಿಂದ ಉಕ್ತವಾದ ಉತ್ತರಕಾಲದಲ್ಲಿ ಜರುಗುವ ಭಗವಂತನ ಪುಣ್ಯಕರವಾದ ಪುರಾತನಕಥೆಗಳನ್ನು ಯಾರು ಭಕ್ತಿಪುರಸ್ಸರವಾಗಿ ಕೇಳುವರೋ, ಹೇಳುವರೋ ಅವರು ಸರ್ವಕಾಮನೆಗಳನ್ನು ಭೋಗಮಾಡಿ ವಿಷ್ಣುಪದವಾದ ವೈಕುಂಠವನ್ನು ಹೊಂದುವರು.

ಇಲ್ಲಿಗೆ ಸ್ಕಾಂದಪುರಾಣದಲ್ಲಿಯ ಹತ್ತನೆಯ ಅಧ್ಯಾಯವು ಸಮಾಪ್ತವಾಯಿತು

# ಅಥ ಏಕಾದಶೋಽಧ್ಯಾಯಃ

[ಸ್ವಾಮಿಪುಷ್ಕರಿಣೀ ಕಾಶ್ಯಪದೋಷನಿವೃತ್ತಿವರ್ಣನಮ್]

ಶ್ರೀಸೂತ ಉವಾಚ–

ಅಥಾತಃ ಸಂಪ್ರವಕ್ಷ್ಯಾಮಿ ಸ್ವಾಮಿಪುಷ್ಕರಿಣೀಂ ಶುಭಾಮ್ ।
ಲಕ್ಷೀಕೃತ್ಯಕಥಾಮೇಕಾಂ ಪವಿತ್ರಾಂ ದ್ವಿಜಸತ್ತಮಾಃ ॥1॥

ಕಾಶ್ಯಪಾಖ್ಯೋ ದ್ವಿಜಃ ಪೂರ್ವಮಸ್ಮಿನ್ ತೀರ್ಥವರೇ ಶುಭೇ ।
ಸ್ನಾತ್ವಾತಿಮಹತಃ ಪಾಪಾದ್ವಿಮುಕ್ತೋ ನರಕಪ್ರದಾತ್ ॥2॥

ಋಷಯ ಊಚುಃ–

ಮುನೇ ಕಾಶ್ಯಪನಾಮಾಸಾವಕರೋತ್ಕಿಂ ಹಿ ಪಾತಕಮ್ ।
ಸ್ನಾತ್ವಾ ತೀರ್ಥವರೇ ಹ್ಯತ್ರ ಯಸ್ಮಾನ್ಮುಕ್ತೋಽಭವತ್ಕ್ಷಣಾತ್ ॥3॥

ಏತನ್ನಃ ಶ್ರದ್ದಧಾನಾನಾಂ ಬ್ರೂಹಿ ಸೂತ ಕೃಪಾಬಲಾತ್ ।
ತ್ವದ್ವಚೋಽಮೃತತೃಪ್ತಾನಾಂ ನ ಪಿಪಾಸಾಪಿ ವಿದ್ಯತೇ ॥4॥

ಶ್ರೀಸೂತ ಉವಾಚ–

ಶ್ರೀಸ್ವಾಮಿಪುಷ್ಕರಿಣ್ಯಾಶ್ಚ ಮಾಹಾತ್ಮ್ಯಪ್ರತಿಪಾದಕಮ್ ।
ಇತಿಹಾಸಂ ಪ್ರವಕ್ಷ್ಯಾಮಿ ಪಠತಾಂ ಪಾಪನಾಶನಮ್ ॥5॥

ಅಭಿಮನ್ಯುಸುತೋ ರಾಜಾ ಪರೀಕ್ಷಿನ್ನಾಮ ನಾಮತಃ ।

# ಹನ್ನೊಂದನೆಯ ಅಧ್ಯಾಯ

ಸ್ವಾಮಿಪುಷ್ಕರಿಣಿಯ ಮಾಹಾತ್ಮ್ಯವನ್ನು ತಿಳಿಸಹೊರಟ ಸೂತಾಚಾರ್ಯರು ಶೌನಕಾದಿಗಳ ಪ್ರಾರ್ಥನೆಯಂತೆ ಕಶ್ಯಪನ ಬ್ರಾಹ್ಮಣನು ಸ್ವಾಮಿಪುಷ್ಕರಿಣಿಯ ಸ್ನಾನಮಾತ್ರದಿಂದ ನರಕಪ್ರದವಾದ ಪಾಪದಿಂದ ವಿಮುಕ್ತನಾದ ಬಗೆಯನ್ನು ವರ್ಣಿಸುತ್ತಾರೆ.

ಪೂರ್ವದಲ್ಲಿ ಪಾಂಡವರ ಪೌತ್ರನಾದ ಪರೀಕ್ಷಿತ್ ಎಂಬರಾಜನು ಅತ್ಯಂತ ಧರ್ಮದಿಂದ ರಾಜ್ಯವನ್ನಾಳುತ್ತಿದ್ದನು. ಒಂದು ಬಾರಿ ಬೇಟೆಗೆ ಹೋದ ಪರೀಕ್ಷಿತನು ಜಿಂಕೆಯೊಂದನ್ನು

ಅಥ್ಯಾಸ್ತ ಹಸ್ತಿನಪುರಂ ಪಾಲಯನ್ ಧರ್ಮತೋ ಮಹೀಮ್ ॥6॥

ಸ ರಾಜಾ ಜಾತು ವಿಪಿನೇ ಚಚಾರ ಮೃಗಯಾರತಃ ।
ಷಷ್ಟಿವರ್ಷವಯಾ ಭೂಪಃ ಕ್ಷುತ್ತೃಷ್ಣಾಪರಿಪೀಡಿತಃ ॥7॥

ನಷ್ಟಮೇಕಂ ಸ ವಿಪಿನೇ ಮಾರ್ಗಯನ್ಮೃಗಮಾದರಾತ್ ।
ಧ್ಯಾನಾರೂಢಂ ಮುನಿಂ ದೃಷ್ಟ್ವಾ ಪ್ರಾಹ ಭೂಪಾಲಕೋತ್ತಮಃ ॥8॥

ಮಯಾ ಬಾಣೇನ ವಿಪಿನೇ ಮೃಗೋ ವಿದ್ಧೋಽಧುನಾ ಮುನೇ ।
ದೃಷ್ಟಃ ಸ ಕಿಂ ತ್ವಯಾ ವಿದ್ವನ್ವಿದ್ರುತೋ ಭಯಕಾತರಃ ॥9॥

ಸಮಾಧಿನಿಷ್ಠೋ ಮೌನಿತ್ವಾನ್ನ ಕಿಂಚಿದಪಿ ಸೋಽಬ್ರವೀತ್ ।
ತತೋ ಧನುರಟನ್ಯಾ ಸ ಸ್ಕಂಧೇ ತಸ್ಯ ಮಹಾಮುನೇ ॥10॥

ನಿಧಾಯ ಮೃತಸರ್ಪಂ ತು ಕುಪಿತಃ ಸ್ವಪುರಂ ಯಯೌ ।
ಮುನೇಸ್ತಸ್ಯ ಸುತಃ ಕಶ್ಚಿಚ್ಛೃಂಗೀ ನಾಮ ಬಭೂವ ವೈ ॥11॥

ಸಖಾ ತಸ್ಯ ಕೃಶಾಖ್ಯೋಽಭೂಚ್ಛೃಂಗಿಣೋ ದ್ವಿಜಸತ್ತಮಃ ।
ಸಖಾಯಂ ಶೃಂಗಿಣಂ ಪ್ರಾಹ ಕೃಶಾಖ್ಯಃ ಸ ಸಖಾ ತತಃ ॥12॥

ಪಿತಾ ತವ ಮೃತಂ ಸರ್ಪಂ ಸ್ಕಂಧೇನ ವಹತೇಽಧುನಾ ।
ಮಾ ಭೂದ್ದರ್ಪಸ್ತವ ಸಖೇ ಮಾ ಕೃಥ್ಯಸ್ತ್ವಮಿದಂ ವೃಥಾ ॥13॥

ಸೋಽಭವತ್ಕುಪಿತಃ ಶೃಂಗೀ ದಿತ್ಸುಃ ಶಾಪಂ ನೃಪಾಯ ವೈ ।
'ಮತ್ತಾತೇ ಶವಸರ್ಪಂ ಯೋ ನ್ಯಸ್ತವಾನ್ಮೂಢಚೇತನಃ ।

ಬೆನ್ನತ್ತಿ ಹೋಗಿ ಅದನ್ನು ಕಾಣದೇ ಹುಡುಕುತ್ತಿರುವಾಗ ಸಮೀಪದಲ್ಲಿಯೇ ಇದ್ದ ಆಶ್ರಮಕ್ಕೆ ಹೋದನು. ಹಸಿವು ನೀರಡಿಕೆಗಳಿಂದ ಬಾಧಿತನಾಗಿದ್ದ ಅರವತ್ತು ವರ್ಷ ವಯಸ್ಸಿನವನಾಗಿದ್ದ ರಾಜನು ಆಶ್ರಮದಲ್ಲಿರುವ ಋಷಿಗಳನ್ನು ಕುರಿತು ಜಿಂಕೆಯ ಬಗ್ಗೆ ವಿಚಾರಿಸಿದನು. ಮೌನವಾಗಿ ಸಮಾಧ್ಯವಸ್ಥೆಯಲ್ಲಿದ್ದ ಋಷಿಗಳು ಪರೀಕ್ಷಿತನಿಗೆ ಉತ್ತರಿಸದಿದ್ದಾಗ ಅಲ್ಲಿಯೇ ಬಿದ್ದಿದ್ದ ಮೃತಸರ್ಪವೊಂದನ್ನು ಬಿಲ್ಲಿನಿಂದ ಎತ್ತಿ ಅವರ ಕೊರಳಿಗೆ ಹಾಕಿ ಹೊರಟು ಹೋದನು.

ಶಮೀಕ ಋಷಿಯ ಪುತ್ರನಾದ ಶೃಂಗಿಯು ತನ್ನ ಸ್ನೇಹಿತರಿಂದ, ತನ್ನ ತಂದೆಗೆ ರಾಜನು ಮಾಡಿದ ಅಪಮಾನವನ್ನು ತಿಳಿದು, ತಕ್ಷಕ ಹಾವಿನ ಕಡಿತದಿಂದಲೇ ಪರೀಕ್ಷಿತರಾಜನು ಇನ್ನು ಏಳುದಿನಗಳಲ್ಲಿ ಮರಣ ಹೊಂದಲಿ' ಎಂದು ಶಪಿಸಿದನು. ಸಮಾಧ್ಯವಸ್ಥೆಯಿಂದ ಹೊರಬಂದ

ಸ ಸಪ್ತರಾತ್ರಾನ್ಮ್ರಿಯತಾಂ ಸಂದಷ್ಟಸ್ತಕ್ಷಕಾಹಿನಾ' ॥14॥

ಶಶಾಪೈವಂ ಮುನಿಸುತಃ ಸೌಭದ್ರೇಯಂ ಪರೀಕ್ಷಿತಮ್ ।
ಶಮೀಕಾಖ್ಯಃ ಪಿತಾ ತಸ್ಯ ಶಪ್ತಂ ಶ್ರುತ್ವಾ ಸುತೇನ ತಮ್ ॥15॥

ನೃಪಂ ಪ್ರೋವಾಚ ತನಯಂ ಶೃಂಗಿಣಂ ಮುನಿಪುಂಗವಃ ।
'ರಕ್ಷಕಂ ಸರ್ವಲೋಕಾನಾಂ ನೃಪಂ ಕಿಂ ಶಕ್ತವಾನಸಿ ॥16॥

ಅರಾಜಕೇ ವಯಂ ಲೋಕೇ ಸ್ಥಾಸ್ಯಾಮಃ ಕಥಮಂಜಸಾ ।
ಕ್ರೋಧೇನ ಪಾತಕಂ ಭೂಯಾದ್ದಯಯಾ ಪ್ರಾಪ್ಯತೇ ಸುಖಮ್ ॥17॥

ಯಃ ಸಮುತ್ಪತಿತಂ ಕೋಪಂ ಕ್ಷಮಯೈವ ನಿರಸ್ಯತಿ ।
ಇಹ ಲೋಕೇ ಪರತ್ರಾಸಾವತ್ಯಂತಂ ಸುಖಮಶ್ನುತೇ ॥18॥

ಕ್ಷಮಾಯುಕ್ತಾ ಹಿ ಪುರುಷಾ ಲಭಂತೇ ಶ್ರೇಯಃ ಉತ್ತಮಮ್ ॥19॥

ತತಃ ಶಮೀಕಃ ಸ್ವಂ ಶಿಷ್ಯಂ ಪ್ರಾಹ ಗೌರಮುಖಾಭಿಧಮ್ ।
'ಭೋ ಗೌರಮುಖ ಗತ್ವಾ ತ್ವಂ ವದ ಭೂಪಂ ಪರೀಕ್ಷಿತಮ್ ॥20॥

ಇಮಂ ಶಾಪಂ ಮತ್ಸುತೋಕ್ತಂ ತಕ್ಷಕಾಧಿಪದಂಶನಮ್ ।
ಪುನರಾಯಾಹಿ ಶೀಘ್ರಂ ತ್ವಂ ಮತ್ಸಮೀಪಂ ಮಹಾಮತೇ' ॥21॥

ಏವಮುಕ್ತಃ ಶಮೀಕೇನ ಯಯೌ ಗೌರಮುಖೋ ನೃಪಮ್ ।
ಸಮೇತ್ಯ ಚಾಬ್ರವೀದ್ಭೂಪಂ ಸೌಭದ್ರೇಯಂ ಪರೀಕ್ಷಿತಮ್ ॥22॥

ದೃಷ್ಟ್ವಾ ಸರ್ಪಂ ಪಿತುಃ ಸ್ಕಂಧೇ ತ್ವಯಾ ವಿನಿಹಿತಂ ಮೃತಮ್ ।
ಶಮೀಕಸ್ಯ ಸುತಃ ಶೃಂಗೀ ಶಶಾಪ ತ್ವಾ ರುಷಾನ್ವಿತಃ ॥23॥

ಏತದ್ದಿನಾತ್ಸಪ್ತಮೇಽಹ್ನಿ ತಕ್ಷಕೇಣ ಮಹಾಹಿನಾ ।
ದಷ್ಟೋ ವಿಷಾಗ್ನಿನಾ ದಗ್ಧೋ ಭೂಯಾದಾಶ್ವಭಿಮನ್ಯುಜಃ ॥24॥

ಶಮೀಕರು ಶೃಂಗಿಯು ಪರೀಕ್ಷಿತನಿಗೆ ಶಾಪವಿತ್ತುದನ್ನು ತಿಳಿದು ದುಃಖಿತರಾಗಿ ಧರ್ಮರಕ್ಷಕನಾದ ರಾಜನಿಗೆ ಶಾಪಕೊಟ್ಟಿದ್ದು ಅಪರಾಧವೆಂದು, ಕ್ಷಮೆಯೇ ಬ್ರಾಹ್ಮಣರಿಗೆ ಭೂಷಣವೆಂದು ತಿಳಿಸುತ್ತಾ ತಮ್ಮ ಗೌರಮುಖನೆಂಬ ಶಿಷ್ಯನ ಮೂಲಕವಾಗಿ ಪರೀಕ್ಷಿತನಿಗೆ ಶಾಪದ ವೃತ್ತಾಂತವನ್ನು ತಿಳಿಸಿದರು.

ಪರೀಕ್ಷಿತನು ತನಗೊದಗಿದ ಶಾಪವನ್ನು ತಿಳಿದು ಗಂಗೆಯ ಮಧ್ಯಭಾಗದಲ್ಲಿ ಏಕಸ್ತಂಬಯುಕ್ತವಾದ

ಏವಂ ಶಶಾಪ ತ್ವಾಂ ರಾಜನ್ಶೃಂಗೀ ತಸ್ಯ ಮುನೇಃ ಸುತಃ ।
ಏತದ್ವಕ್ತುಂ ಪಿತಾ ತಸ್ಯ ಪ್ರಾಹಿಣೋನ್ಮಾಂ ತ್ವದಂತಿಕಮ್ ॥25॥

ಇತೀರಯಿತ್ವಾ ತಂ ಭೂಪಮಾಶು ಗೌರಮುಖೋ ಯಯೌ ।
ಗತೇ ಗೌರಮುಖೇ ಪಶ್ಚಾದ್ರಾಜಾ ಶೋಕಪರಾಯಣಾ ॥26॥

ಅಭ್ರಂಲಿಹಮಥೋತ್ತುಂಗಮೇಕಸ್ತಂಭಂ ಸುವಿಸ್ತೃತಮ್ ।
ಮಧ್ಯೇಗಂಗಂ ವ್ಯತನುತ ಮಂಡಪಂ ನೃಪಪುಂಗವಃ ॥27॥

ಮಹಾಗಾರುಡಮಂತ್ರಜ್ಞೈರೋಷಧಿಜ್ಞೈಶ್ಚಿಕಿತ್ಸಕೈಃ ।
ತಕ್ಷಕಸ್ಯ ವಿಷಂ ಹಂತುಂ ಯತ್ನಂ ಕುರ್ವನ್ಸಮಹಾಹಿತಃ ॥28॥

ಅನೇಕದೇವಬ್ರಹ್ಮರ್ಷಿರಾಜರ್ಷಿಪ್ರವರಾನ್ವಿತಃ ।
ಆಸ್ತೇ ತಸ್ಮಿನ್ನೃಪಸ್ತುಂಗೇ ಮಂಡಪೇ ವಿಷ್ಣುಭಕ್ತಿಮಾನ್ ॥29॥

ತಸ್ಮಿನ್ನವಸರೇ ವಿಪ್ರಃ ಕಾಶ್ಯಪೋ ಮಾಂತ್ರಿಕೋತ್ತಮಃ ।
ರಾಜಾನಂ ರಕ್ಷಿತುಂ ಪ್ರಾಯಾತ್ ತಕ್ಷಕಸ್ಯ ಮಹಾವಿಷಾತ್ ॥30॥

ಸಪ್ತಮೇಽಹನಿ ವಿಪ್ರೇಂದ್ರೋ ದರಿದ್ರೋ ಧನಕಾಮುಕಃ ।
ಅತ್ರಾಂತರೇ ತಕ್ಷಕೋಽಪಿ ವಿಪ್ರರೂಪೀ ಸಮಾಯಯೌ ॥31॥

ಮಧ್ಯೇಮಾರ್ಗಂ ವಿಲೋಕ್ಯಾಥ ಕಾಶ್ಯಪಂ ಪ್ರತ್ಯಭಾಷತ ।
ಬ್ರಾಹ್ಮಣಂ 'ತ್ವಂ ಕುತ್ರ ಯಾಸಿ ವದ ಮೇಽದ್ಯ ಮಹಾಮುನೇ' ॥32॥

ಇತಿ ಪೃಷ್ಟಸ್ತದಾವಾದೀತ್ಕಾಶ್ಯಪಸ್ತಕ್ಷಕಂ ದ್ವಿಜಃ ।
ಪರೀಕ್ಷಿತಂ ಮಹಾರಾಜಂ ತಕ್ಷಕೋಽದ್ಯ ವಿಷಾಗ್ನಿನಾ ॥33॥

ಭವನವನ್ನು ನಿರ್ಮಿಸಿ ವಿಷಹರ ಮಾಂತ್ರಿಕರಿಂದ ಗರುಡ ಮಂತ್ರವನ್ನು ಜಪಿಸುವ ಬ್ರಾಹ್ಮಣರಿಂದ, ಸಮಾವೃತನಾಗಿ ವಿಷ್ಣುಭಕ್ತಿ ಪರಾಯಣನಾಗಿ, ಆ ಅರಮನೆಯಲ್ಲಿ ವಾಸಮಾಡಿದನು.

ಏಳನೆಯ ದಿನದಂದು ಪರೀಕ್ಷಿತನ ಶಾಪವೃತ್ತಾಂತವನ್ನು ಕೇಳಿದ ಕಶ್ಯಪನೆಂಬ ಸರ್ಪವಿದ್ಯಾವಿಶಾರದನಾದ ಧನಕಾಮುಕನಾದ ಬ್ರಾಹ್ಮಣನು ತನ್ನ ಮಂತ್ರಶಕ್ತಿಯಿಂದ ತಕ್ಷಕನ ವಿಷವನ್ನೂ ಸಹ ನಿವಾರಿಸಿ ರಾಜನನ್ನು ಬದುಕಿಸಿ ವಿಪುಲವಾದ ಧನವನ್ನು ಪಡೆಯಬಯಸಿ ರಾಜನಿದ್ದೆಡೆಗೆ ಹೊರಟನು.

ಮಾರ್ಗಮಧ್ಯದಲ್ಲಿ ತಕ್ಷಕನು ಬ್ರಾಹ್ಮಣ ರೂಪದಿಂದ ಕಶ್ಯಪನ ಮುಂದೆ ಬಂದು, 'ನೀನು

ಧಕ್ಷ್ಯತೇ ತಂ ಶಮಯಿತುಂ ತತ್ಸಮೀಪಮುಪೈಮ್ಯಹಮ್ ।
ಇತ್ಯುಕ್ತಃ ಸ ಚ ತಂ ವಿಪ್ರಂ ತಕ್ಷಕಃ ಪುನರಬ್ರವೀತ್ ॥34॥

ತಕ್ಷಕೋಽಹಂ ದ್ವಿಜಶ್ರೇಷ್ಠ ಮಯಾ ದಷ್ಟಶ್ಚಿಕಿತ್ಸಿತುಮ್ ।
ನ ಶಕ್ಯೋಽಬ್ದಶತೇನಾಪಿ ಮಹಾಮಂತ್ರಾಯುತೈರಪಿ ॥35॥

ಚಿಕಿತ್ಸಿತುಂ ಚೇನ್ಮದ್ದಷ್ಟಂ ಶಕ್ತಿರಸ್ತಿ ತವಾಧುನಾ ।
ಅನೇಕಯೋಜನೋಚ್ಛ್ರಾಯಂ ದಶಾಮ್ಯುಜ್ಜೀವಯ ದ್ರುಮಮ್ ॥36॥

ತತೋಽಭವನ್ನಸಮರ್ಥೋ ಹೀತ್ಯೇವಂ ಮೇ ಭಾತಿ ಹೇ ದ್ವಿಜ ।
ಇತೀರಯಿತ್ವಾ ತಂ ವೃಕ್ಷಮದಶತ್ತಕ್ಷಕಸ್ತದಾ ॥37॥

ಅಭವದ್ಭಸ್ಮಸಾತ್ಸೋಽಪಿ ವೃಕ್ಷೋಽತ್ಯಂತಸಮುಚ್ಛ್ರಿತಃ ।
ಪೂರ್ವಮೇವ ನರಃ ಕಶ್ಚಿತ್ತಂ ವೃಕ್ಷಮಧಿರೂಢವಾನ್ ॥38॥

ತಕ್ಷಕಸ್ಯ ವಿಷೋಲ್ಕಾಭಿಃ ಸೋಽಪಿ ದಗ್ಧೋಽಭವತ್ತದಾ ।
ತನ್ನರಂ ನ ವಿಜಜ್ಞಾತೇ ತೌ ಚ ಕಾಶ್ಯಪತಕ್ಷಕೌ ॥39॥

ಕಾಶ್ಯಪಃ ಪ್ರತಿಜಜ್ಞೇಽಥ ತಕ್ಷಕಸ್ಯಾಪಿ ಶೃಣ್ವತಃ ।
ಮನ್ಮಂತ್ರಶಕ್ತಿಂ ಪಶ್ಯಂತು ಸರ್ವೇ ವಿಪ್ರಾದಯೋಽಧುನಾ ॥40॥

ಇತೀರಯಿತ್ವಾ ತಂ ವೃಕ್ಷಂ ಭಸ್ಮೀಭೂತಂ ವಿಷಾಗ್ನಿನಾ ।
ಆಜೀವಯನ್ಮಂತ್ರಶಕ್ತ್ಯಾ ಕಾಶ್ಯಪೋ ಮಾಂತ್ರಿಕೋತ್ತಮಃ ॥41॥

ಯಾರು? ಎಲ್ಲಿಗೆ ಹೊರಟಿರುವಿ? ಎಂದು ಪ್ರಶ್ನಿಸಿದಾಗ ಕಾಶ್ಯಪನು 'ರಾಜನನ್ನು ತಕ್ಷಕನ ವಿಷದಿಂದ ಬದುಕಿಸಲು ಹೊರಟಿರುವನೆಂದೂ, ಸರ್ಪವಿದ್ಯಾವಿಶಾರದನಾದ ತನ್ನ ಹೆಸರು ಕಾಶ್ಯಪನೆಂದೂ ತಿಳಿಸಿದನು. ಇದನ್ನು ಕೇಳಿದ ತಕ್ಷಕನು ತಾನೇ ತಕ್ಷಕನೆಂದೂ, ತನ್ನ ವಿಷವಿ ನೂರಾರು ವರ್ಷಗಳಷ್ಟು ಮಂತ್ರವನ್ನು ಜಪಿಸಿದರೂ ಸಹ ನಿವಾರಿಸಲು ಅಶಕ್ಯವೆಂದು ತಿಳಿಸಿ ತಾನೇ ಮರವೊಂದನ್ನು ಕಚ್ಚುವೆನೆಂದು, ಸಾಮರ್ಥ್ಯವಿದ್ದಲ್ಲಿ ನಿನ್ನ ಮಂತ್ರಶಕ್ತಿಯಿಂದ ಅದನ್ನು ಪುನಃ ಬದುಕಿಸೆಂದೂ ನುಡಿದು ತಕ್ಷಕನು ಅಲ್ಲಿಯೇ ಇದ್ದ ಮರವೊಂದನ್ನು ಕಚ್ಚಿದನು. ಆ ಮರವು ತಕ್ಷಕನ ವಿಷಾಗ್ನಿಯಿಂದ ಭಸ್ಮೀಭೂತವಾಯಿತು. ಆ ಮರದಲ್ಲಿ ತಕ್ಷಕ-ಕಾಶ್ಯಪರಿಗೆ ತಿಳಿಯದಂತೆ ಕುಳಿತಿದ್ದ ಬ್ರಾಹ್ಮಣನೋರ್ವನೂ ಸಹ ಭಸ್ಮೀಭೂತನಾದನು. ಅನಂತರದಲ್ಲಿ ತಕ್ಷಕನು ಕಾಶ್ಯಪ ಬ್ರಾಹ್ಮಣನಿಗೆ ಅವನ ಶಕ್ತಿಯನ್ನು ತೋರಿಸಲು ನುಡಿದಾಗ ಕಾಶ್ಯಪನು

ಸ ನರಸ್ತೇನ ವೃಕ್ಷೇಣ ಸಾಕಮುಜ್ಜೀವಿತೋಽಭವತ್ ।
ಅಥಾಬ್ರವೀತ್ತಕ್ಷಕಸ್ತಂ ಕಾಶ್ಯಪಂ ಮಂತ್ರಕೋವಿದಮ್ ॥42॥

ಯಥಾ ನ ಮನಿವಾಕ್ ಮಿಥ್ಯಾ ಭವೇದೇವಂ ಕುರು ದ್ವಿಜ ।
ಯತ್ತೇ ರಾಜಾ ಧನಂ ದದ್ಯಾತ್ತತೋಽಪಿ ದ್ವಿಗುಣಂ ಧನಮ್ ॥43॥

ದದಾಮ್ಯಹಂ ನಿವರ್ತಸ್ವ ಶೀಘ್ರಮೇವ ದ್ವಿಜೋತ್ತಮ ।
ಇತ್ಯುಕ್ತ್ವಾನರ್ಘರತ್ನಾನಿ ತಸ್ಮೈ ದತ್ತ್ವಾ ಸ ತಕ್ಷಕಃ ॥44॥

ನ್ಯವರ್ತಯತ್ಕಾಶ್ಯಪಂ ತಂ ಬ್ರಾಹ್ಮಣಂ ಮಂತ್ರಕೋವಿದಂ ।
ಅಲ್ಪಾಯುಷಂ ನೃಪಂ ದೃಷ್ಟ್ವಾ ಜ್ಞಾನದೃಷ್ಟ್ಯಾ ನ ಕಾಶ್ಯಪಃ ।
ಸ್ವಾಶ್ರಮಂ ಪ್ರಯಯೌ ತೂಷ್ಣೀಂ ಲಬ್ಧರತ್ನಶ್ಚ ತಕ್ಷಕಾತ್ ॥45॥

ಸೋಽಬ್ರವೀತ್ತಕ್ಷಕಸ್ಸರ್ವಾನ್ಸರ್ಪಾನಾಹೂಯ ತತ್ಕ್ಷಣೇ ।
ಯೂಯಂ ತಂ ನೃಪತಿಂ ಪ್ರಾಪ್ಯ ಮುನೀನಾಂ ವೇಷಧಾರಿಣಃ ॥46॥

ಉಪಹಾರಫಲಾನ್ಯಾಶು ಪ್ರಯಚ್ಛತ ಪರೀಕ್ಷಿತೇ ।
ತಥೇತ್ಯುಕ್ತ್ವಾ ಸರ್ವಸರ್ಪಾ ದದೂ ರಾಜ್ಞೇ ಫಲಾನ್ಯಮೀ ॥47॥

ತಕ್ಷಕೋಽಪಿ ತಥಾ ತತ್ರ ಕಸ್ಮಿಂಶ್ಚಿದ್ಬದರೀಫಲೇ ।
ಕೃಮಿವೇಷಧರೋ ಭೂತ್ವಾ ವ್ಯತಿಷ್ಠದ್ದಂಶಿತುಂ ನೃಪಮ್ ॥48॥

ಆಚಮನವನ್ನು ಮಾಡಿ, ತನ್ನ ವಿಷಹರ ಮಂತ್ರದ ಶಕ್ತಿಯಿಂದ ತಕ್ಷಕನ ವಿಷವನ್ನು ನಿವಾರಿಸಿ, ಮರವನ್ನು ಬದುಕಿಸಿದನು ಮತ್ತು ಅದರಲ್ಲಿದ್ದ ಬ್ರಾಹ್ಮಣನೂ ಸಹ ಪುನಃ ಬದುಕಿ ಬಂದನು.

ಇದನ್ನು ನೋಡಿದ ತಕ್ಷಕನು ಆಶ್ಚರ್ಯವನ್ನು ಹೊಂದಿ ಕಾಶ್ಯಪನ ಶಕ್ತಿಯನ್ನು ಪ್ರಶಂಸಿಸಿ ಬ್ರಾಹ್ಮಣನ ಶಾಪವು ಸುಳ್ಳಾಗ ಬಾರದೆಂದು ನುಡಿಯುತ್ತಾ ರಾಜ ನು ಕೊಡುವಷ್ಟು ಧನವನ್ನು ತಾನೇ ಕೊಡುವದಾಗಿ ನುಡಿದು, ಆ ಧನವನ್ನು ಸ್ವೀಕರಿಸಿ ನಿನ್ನ ಆಶ್ರಮಕ್ಕೆ ಹಿಂದಿರುಗು ಎಂದು ನುಡಿದು ತನ್ನಲ್ಲಿರುವ ಅನರ್ಘ್ಯರತ್ನಗಳನ್ನು ಕಶ್ಯಪನಿಗೆ ಕೊಟ್ಟನು. ಕಾಶ್ಯಪನೂ ಸಹ ಅದನ್ನು ಸ್ವೀಕರಿಸಿ ಸಂತೋಷದಿಂದ ತನ್ನ ಆಶ್ರಮಕ್ಕೆ ಹಿಂದಿರುಗಿದನು.

ತಕ್ಷಕನು ತನ್ನ ಅನುಚರರಾದ ಸರ್ಪಗಳಿಗೆ ಮುನಿರೂಪದಿಂದ ರಾಜನ ಬಳಿ ಹೋಗುವಂತೆ ತಿಳಿಸಿ ತಾನು ಬದರೀಫಲವೊಂದರಲ್ಲಿ ಕ್ರಿಮಿರೂಪದಿಂದ ಸೇರಿಕೊಂಡನು. ಬ್ರಾಹ್ಮಣ ರೂಪದಲ್ಲಿದ್ದ

ಅಥ ರಾಜಾ ಪ್ರದತ್ತಾನಿ ಸರ್ವೈರ್ಬ್ರಾಹ್ಮಣರೂಪಕೈಃ ।
ಪರೀಕ್ಷಿನ್ಮಂತ್ರಿವೃದ್ಧೇಭ್ಯೋ ದತ್ತ್ವಾ ಸರ್ವಫಲಾನ್ಯಪಿ ॥49॥

ಕೌತೂಹಲೇನ ಜಗ್ರಾಹ ಸ್ಥೂಲಮೇಕಂ ಕರೇ ಫಲಮ್ ।
ತಸ್ಮಿನ್ನವಸರೇ ಸೂರ್ಯೋಽಪ್ಯಸ್ತಾಚಲಮಗಾಹತ ॥50॥

ಮಿಥ್ಯಾ ಋಷಿವಚೋ ಮಾ ಭೂದಿತಿ ತತ್ರತ್ಯಮಾನವಾಃ ।
ಅನ್ಯೋನ್ಯಮವದನ್ಸರ್ವೇ ಬ್ರಾಹ್ಮಣಾಶ್ಚ ನೃಪಾಸ್ತದಾ ॥51॥

ಏವಂ ವದತ್ಸು ಸರ್ವೇಷು ಫಲೇ ತಸ್ಮಿನ್ನದೃಶ್ಯತ ।
ಸಾಧು ರಕ್ತಃ ಕೃಮೀ ಸರ್ವೈ ರಾಜ್ಞಾ ಚಾಪಿ ಪರೀಕ್ಷಿತಾ ॥52॥

ಅಯಂ ಕಿಂ ಮಾಂ ದಶೇದದ್ಯ ಕೃಮಿರಿತ್ಯುಕ್ತವಾನ್ನೃಪಃ ।
ನಿದಧೇ ತತ್ಫಲಂ ಕಂಠೇ ಸ ಕೃಮಿಃ ದ್ವಿಜಸತ್ತಮಾಃ ॥53॥

ತಕ್ಷಕೋಽಸ್ಮಿನ್ಸ್ಥಿತಃ ಕಂಠೇ ಕೃಮಿರೂಪೀ ಫಲೇ ತದಾ ।
ನಿರ್ಗತ್ಯ ತತ್ಫಲಾದಾಶು ನೃಪದೇಹಮವೇಷ್ಟಯತ್ ॥54॥

ತಕ್ಷಕಾವೇಷ್ಟಿತೇ ಭೂಪೇ ಪಾರ್ಶ್ವಸ್ಥಾ ದುದ್ರುವರ್ಭಯಾತ್ ।
ಅನಂತರಂ ನೃಪೋ ವಿಪ್ರಾಸ್ತಕ್ಷಕಸ್ಯ ವಿಷಾಗ್ನಿನಾ ॥55॥

ದಗ್ಧೋಽಭೂದ್ಭಸ್ಮಸಾದಾಶು ಸುಪ್ರಸಾದೋ ಬಲೀಯಸಾ ।

ಸರ್ಪಗಳು ಫಲಗಳನ್ನು ರಾಜನಿಗೆ ಕೊಡಲು, ಬ್ರಾಹ್ಮಣರಿಂದ ಕೊಡಲ್ಪಟ್ಟ ಹಣ್ಣುಗಳನ್ನು ಮಂತ್ರಿಗಳಿಗೊಪ್ಪಿಸಿ, ಒಂದು ದಪ್ಪಗಿನ ಹಣ್ಣನ್ನು ನೋಡಿ ರಾಜನು ಕುತೂಹಲದಿಂದ ಅದನ್ನು ಕೈಯ್ಯಲ್ಲಿ ಹಿಡಿದುಕೊಂಡನು. ಅದೇ ಹೊತ್ತಿಗೆ ಸೂರ್ಯನು ಅಸ್ತಂಗತನಾಗುತ್ತಿರಲು ಅಲ್ಲಿರುವ ಬ್ರಾಹ್ಮಣರು ಪರಸ್ಪರವಾಗಿ ಮಾತನಾಡುತ್ತಾ 'ಋಷಿಕುಮಾರನ ಮಾತು ಸುಳ್ಳಾಗಕೂಡದು. ಈಗಲೇ ಸೂರ್ಯಾಸ್ತವಾಗುತ್ತಿರುವದು' ಎಂದು ನುಡಿಯುತ್ತಿರಲು ಹಣ್ಣಿನಿಂದ ಕೆಂಪನೆಯ ಕ್ರಿಮಿಯೊಂದು ಹೊರಬಂದಿತು.

ಅದನ್ನು ಕಂಡ ರಾಜನು ಆ ಕ್ರಿಮಿಯನ್ನು ತನ್ನ ಕೈಯಲ್ಲಿ ಹಿಡಿದು, ಅದರ ಕುತ್ತಿಗೆಯ ಬಳಿ ಕೈಯ್ಯನ್ನಿಟ್ಟು ಈ ಕ್ರಿಮಿಯೇ ನನ್ನನ್ನು ಕಚ್ಚಿ ಕೊಂದು ಬ್ರಾಹ್ಮಣನಾದ ಶೃಂಗಿಯ ಮಾತನ್ನು ಸತ್ಯವನ್ನಾಗಿಸಬಾರದೇಕೆ? ಎಂದು ನುಡಿದನು. ಆಗ ಕ್ರಿಮಿರೂಪದಲ್ಲಿದ್ದ ತಕ್ಷಕನು ತನ್ನ ನಿಜರೂಪದಿಂದ ಪರೀಕ್ಷಿತನನ್ನು ಕಚ್ಚಿದನು. ತತ್ಕ್ಷಣದಲ್ಲಿಯೇ ತಕ್ಷಕನ ವಿಷಾಗ್ನಿಯಿಂದ ರಾಜನಿಂದ

ಕೃತ್ವೌರ್ಧ್ವದೇಹಿಕಂ ತಸ್ಯ ನೃಪಸ್ಯ ಸಪುರೋಹಿತಾಃ ॥56॥

ಮಂತ್ರಿಣಸ್ತತ್ಸುತಂ ರಾಜ್ಯೇ ಜನಮೇಜಯನಾಮಕಮ್ ।
ರಾಜಾನಮಭ್ಯಷಿಂಚನ್ವೈ ಜಗದ್ರಕ್ಷಣವಾಂಛಯಾ ॥57॥

ತಕ್ಷಕಾದ್ರಕ್ಷಿತುಂ ಭೂಪಮಾಯಾತಃ ಕಾಶ್ಯಪಾಭಿಧಃ ।
ಯೋ ಬ್ರಾಹ್ಮಣೋ ಮುನಿಶ್ರೇಷ್ಠಃ ಸರ್ವೈರ್ನಿಂದಿತೋ ಜನೈಃ ॥58॥

ಅವಸ್ಥಾನಂ ನ ಲೇಭೇ ಸ ಗ್ರಾಮೇ ವಾಽಪ್ಯಾಶ್ರಮೇಽಪಿ ವಾ ॥59॥

ಯಾನ್ಯಾನ್ ದೇಶಾನಸೌ ಯಾತಸ್ತತ್ರ ತತ್ರ ಮಹಾಜನೈಃ ।
ತತ್ತದ್ದೇಶಾನ್ನಿರಸ್ತಃ ಸನ್ ಶಾಕಲ್ಯಂ ಶರಣಂ ಯಯೌ ॥60॥

ಪ್ರಣಮ್ಯ ಶಾಕಲ್ಯಮುನಿಂ ಕಾಶ್ಯಪೋ ನಿಂದಿತೋ ಜನೈಃ ।
ಇದಂ ವಿಜ್ಞಾಪಯಾಮಾಸ ಶಾಕಲ್ಯಾಯ ಮಹಾತ್ಮನೇ ॥61॥

ಕಾಶ್ಯಪ ಉವಾಚ–

ಭಗವನ್ಸರ್ವಧರ್ಮಜ್ಞ ಶಾಕಲ್ಯ ಹರಿವಲ್ಲಭ ।
ಮುನಯೋ ಬ್ರಾಹ್ಮಣಾಶ್ಚಾನ್ಯೇ ಮಾಂ ನಿಂದಂತಿ ಸುಹೃಜ್ಜನಾಃ ॥62।

ನಾಸ್ಯಾಹಂ ಕಾರಣಂ ಜಾನೇ ಕಿಂ ಮಾಂ ನಿಂದಂತಿ ಮಾನವಾಃ ॥63॥

ಬ್ರಹ್ಮಹತ್ಯಾ ಸುರಾಪಾನಂ ಗುರಸ್ತ್ರೀಗಮನಂ ತಥಾ ।
ಸ್ತೇಯಂ ಸಂಸರ್ಗದೋಷೋ ವಾ ಮಯಾ ನಾಚರಿತಂ ಕ್ವಚಿತ್ ॥64॥

ಅನ್ಯಾನ್ಯಪಿ ಚ ಪಾಪಾನಿ ನ ಕೃತಾನಿ ಮಯಾ ಮುನೇ ।

ಸಹಿತವಾದ ಸಂಪೂರ್ಣಮಂದಿರವು ಸುಟ್ಟು ರಾಜನು ಮರಣವನ್ನು ಹೊಂದಿದನು. ಮುಂದೆ ಮಂತ್ರಿಗಳು ಪರೀಕ್ಷಿತನ ಅಂತ್ಯಸಂಸ್ಕಾರಗಳನ್ನು ಮಾಡಿ ಅವನ ಮಗನಾದ ಜನಮೇಜಯನಿಗೆ ಪಟ್ಟವನ್ನು ಕಟ್ಟಿ ರಾಜನನ್ನಾಗಿಸಿದರು.

ಮಂತ್ರವಿದ್ಯೆಯಿಂದ ವಿಷವನ್ನು ಪರಿಹರಿಸಲು ಸಮರ್ಥನಾಗಿದ್ದ ಕಾಶ್ಯಪನು ಧನದಾಸೆಯಿಂದ ರಾಜನನ್ನು ಬದುಕಿಸದೇ ಹಿಂದಿರುಗಿ ಬಂದಿದ್ದನ್ನು ತಿಳಿದ ಜನರು ಅವನನ್ನು ನಾನಾ ರೀತಿಯಾಗಿ ನಿಂದಿಸಿ ಪರಿತ್ಯಜಿಸಿದರು. ಸರ್ವರಿಂದ ಪರಿತ್ಯಕ್ತನಾದ ದುಃಖಿತನಾದ ಕಾಶ್ಯಪನು ಅಲ್ಲಲ್ಲಿ ಸಂಚರಿಸುತ್ತಾ ಶಾಕಲ್ಯ ಋಷಿಗಳನ್ನು ಸಂದರ್ಶಿಸಿ ಅವರಿಗೆ ನಮಸ್ಕರಿಸಿ, ಜನರು ನನ್ನನ್ನು

ತಥಾಪಿ ನಿಂದಂತಿ ಜನಾ ವೃಥಾ ಮಾಂ ಬಾಂಧವಾದಯಃ ॥65॥

ಜಾನಾಸಿ ಚೇತ್ತ್ವಂ ಶಾಕಲ್ಯ ಮಯಾ ದೋಷಂ ಕೃತಂ ವದ ॥66॥

ಉಕ್ತೋಽಥ ಕಾಶ್ಯಪೇನೈವಂ ಶಾಕಲ್ಯಾಖ್ಯೋ ಮಹಾಮುನಿಃ ।
ಕ್ಷಣಂ ಧ್ಯಾತ್ವಾ ಬಭಾಷೇ ತಂ ಕಾಶ್ಯಪಂ ದ್ವಿಜಸತ್ತಮಾಃ ॥67॥

ಶಾಕಲ್ಯ ಉವಾಚ-

ಪರೀಕ್ಷಿತಂ ಮಹಾರಾಜಂ ತಕ್ಷಕಾದ್ರಕ್ಷಿತುಂ ಭವಾನ್ ।
ಅಯಾಸೀದರ್ಧಮಾರ್ಗೇ ತು ತಕ್ಷಕೇನ ನಿವಾರಿತಃ ॥68॥

ಚಿಕಿತ್ಸಿತುಂ ಸಮರ್ಥೋಽಪಿ ವಿಷರೋಗಾದಿಪೀಡಿತಮ್ ।
ಯೋ ನ ರಕ್ಷತಿ ಲೋಕೇಽಸ್ಮಿನ್ ತಮಾಹುರ್ಬ್ರಹ್ಮಘಾತಕಮ್ ॥69॥

ಕ್ರೋಧಾತ್ಕಾಮಾದ್ಭಯಾಲ್ಲೋಭಾನ್ಮಾತ್ಸರ್ಯಾನ್ಮೋಹತೋಽಪಿ ವಾ।
ಯೋ ನ ರಕ್ಷತಿ ವಿಪ್ರೇಂದ್ರ ವಿಷರೋಗಾತುರಂ ನರಮ್ ॥70॥

ಬ್ರಹ್ಮಹಾ ಚ ಸುರಾಪೀ ಚ ಸ್ತೇಯಾ ಚ ಗುರುತಲ್ಪಗಃ ।
ಸಂಸರ್ಗದೋಷದುಷ್ಟಶ್ಚ ನಾಪಿ ತಸ್ಯ ವಿನಿಷ್ಕೃತಿಃ ॥71॥

ಕನ್ಯಾವಿಕ್ರಯಿಣಶ್ಚಾಪಿ ಹಯವಿಕ್ರಯಿಣಸ್ತಥಾ ।
ಕೃತಘ್ನಸ್ಯಾಪಿ ಶಾಸ್ತ್ರೇಷು ಪ್ರಾಯಶ್ಚಿತ್ತಂ ತು ವಿದ್ಯತೇ ॥72॥

ವಿಷರೋಗಾತುರಂ ಯಸ್ತು ಸಮರ್ಥೋಽಪಿ ನ ರಕ್ಷತಿ ।

ನಿಂದಿಸುತ್ತಿರುವರು. ನಾನು ಮಾಡಿರುವ ದೋಷವಾದರೂ ಏನು? ಎಂದು ಪ್ರಶ್ನಿಸಿದನು.

ಆಗ ಶಾಕಲ್ಯರು ಕಾಶ್ಯಪನನ್ನು ಕುರಿತು ರೋಗನಿದಾನವನ್ನು ತಿಳಿದಿದ್ದರೂ ಸಹ ಯಾರು ಕಾಮ. ಕ್ರೋಧ, ಮೋಹ, ಮಾತ್ಸರ್ಯ ಭಯ, ಅಜ್ಞಾನ, ಧನದಾಶೆಗಳಿಗೆ ಒಳಗಾಗಿ ವಿಷಪೀಡಿತರನ್ನು ರಕ್ಷಿಸುವದಿಲ್ಲವೋ ಅವರು ಅತ್ಯಂತ ದೋಷಿಗಳೆನಿಸುವರು. ಕನ್ಯಾವಿಕ್ರಯಣ, ಬ್ರಹ್ಮದ್ರೋಹಿ, ಗೋವುಗಳನ್ನು ಹಣದಾಸೆಗೆ ಮಾರುವವನು, ಕೃತಘ್ನಾದಿಗಳಿಗೆ ಲೋಕದಲ್ಲಿ ಪ್ರಾಯಶ್ಚಿತ್ತವಿದೆ. ಆದರೆ ಯಾರು ಸಮರ್ಥರಾಗಿದ್ದರೂ ಸಹ ವಿಷರೋಗಾತುರನನ್ನು (ವಿಷದಿಂದ ಬಾಧಿತರಾದವರನ್ನು) ರಕ್ಷಿಸುವದಿಲ್ಲವೇ ಅವರಿಗೆ ಪ್ರಾಯಶ್ಚಿತ್ತವೇ ಇರುವದಿಲ್ಲ. ಅವರು ಮಹಾ ದೋಷಿಗಳೆನಿಸುವರು. ಅಂತಹ ವ್ಯಕ್ತಿಗಳೊಂದಿಗೆ ಸಹ ಭೋಜನ, ಶಯನ, ಮಾತುಕತೆಗಳೂ ಸಹ ನಿಷಿದ್ಧವಾಗಿರುವವು. 'ಪ್ರಾಣಗಳು ಕುತ್ತಿಗೆಯಲ್ಲಿರುವವರೆಗೂ ಸಹ (ಕೊನೆಯ ಉಸಿರಿನ

ನ ತಸ್ಯ ನಿಷ್ಕೃತಿಃ ಪ್ರೋಕ್ತಾ ಪ್ರಾಯಶ್ಚಿತ್ತಾಯುತೈರಪಿ ॥73॥

ನ ತೇನ ಸಹ ಪಂಕ್ತೌ ಚ ಭುಂಜೀತ ಸುಕೃತೀ ಜನಃ ।
ನ ತೇನ ಸಹ ಭಾಷೇತ ನ ಪಶ್ಯೇತ್ತಂ ನರಂ ಕ್ವಚಿತ್ ॥74॥

ತತ್ಸಂಭಾಷಣಮಾತ್ರೇಣ ಮಹಾಪಾತಕಭಾಗ್ಭವೇತ್ ।
ಪರೀಕ್ಷಿತ್ಸ ಮಹಾರಾಜಃ ಪುಣ್ಯಶ್ಲೋಕಶ್ಚ ಧಾರ್ಮಿಕಃ ॥75॥

ವಿಷ್ಣುಭಕ್ತೋ ಮಹಾಯೋಗೀ ಚಾತುರ್ವರ್ಣ್ಯಸ್ಯ ರಕ್ಷಿತಾ ।
ವ್ಯಾಸಪುತ್ರಾದ್ಧರಿಕಥಾಂ ಶ್ರುತವಾನ್ಭಕ್ತಿಪೂರ್ವಕಮ್ ॥76॥

ಅರಕ್ಷಿತ್ವಾ ನೃಪಂ ತಂ ತು ವಚನಾತ್ತಕ್ಷಕಸ್ಯ ಯತ್ ।
ನಿವೃತ್ತಸ್ತೇನ ವಿಪ್ರೇಂದ್ರೈರ್ಬಾಂಧವೈರಪಿ ದೂಷ್ಯಸೇ ॥77॥

ಸ ಪರೀಕ್ಷಿನ್ಮಹಾರಾಜೋ ಯದ್ಯಪಿ ಕ್ಷಣಜೀವಿತಃ ।
ತಥಾಪಿ ಯಾವನ್ಮರಣಂ ಬುಧೈಃ ಕಾರ್ಯಂ ಚಿಕಿತ್ಸಿತಮ್ ॥78॥

ಯಾವತ್ಕಂಠಗತಾಃ ಪ್ರಾಣಾಃ ಮುಮೂರ್ಷೋರ್ಮಾನವಸ್ಯ ಹಿ ।
ತಾವಚ್ಚಿಕಿತ್ಸಾ ಕರ್ತವ್ಯಾ ಕಾಲಸ್ಯ ಕುಟಿಲಾ ಗತಿಃ ॥79॥

ಇತಿ ಪ್ರಾಹುಃ ಪುರಾ ಶ್ಲೋಕಂ ಭಿಷಗ್ವಿದ್ಯಾಬ್ಧಿಪಾರಗಾಃ ।
ತತಶ್ಚಿಕಿತ್ಸಾಶಕ್ತೋಽಪಿ ಯಸ್ಮಾದಪ್ಯಕೃತಭೇಷಜಃ ॥80॥

ಅರ್ಥಮಾರ್ಗನಿವೃತ್ತಶ್ಚ ತೇನ ತ್ವಂ ಗರ್ಹಿತೋ ಹ್ಯಸಿ ।
ಶಾಕಲ್ಯೇನೈವಮುದಿತಃ ಕಾಶ್ಯಪಃ ಪ್ರತ್ಯಭಾಷತ ॥81॥

ಕಾಶ್ಯಪ ಉವಾಚ–

ಮಮೈತದ್ದೋಷಶಾಂತ್ಯರ್ಥಮುಪಾಯಂ ವದ ಸುವ್ರತ ।

ವರೆಗೂ) ವಿಷವೈದ್ಯನು ಚಿಕಿತ್ಸೆಯನ್ನು ಮಾಡಬೇಕು ಎಂಬುದಾಗಿ ಶಾಸ್ತ್ರಗಳು ಸಾರುತ್ತಿರುವವು. ನೀನಾದರೋ ತಕ್ಷಕನ ವಿಷವನ್ನು ಪರಿಹರಿಸಲು ಸಮರ್ಥನಾಗಿದ್ದರೂ ಸಹ ಧನದಾಶೆಗೆ ಒಳಗಾಗಿ ಮಹಾ ಧರ್ಮಿಷ್ಠನಾದ ವಿಷ್ಣುಭಕ್ತನಾದ ಪರೀಕ್ಷಿತನನ್ನು ತಕ್ಷಕನ ವಿಷದಿಂದ ರಕ್ಷಿಸದೇ ಬಂದಿರುವದರಿಂದ ಬ್ರಹ್ಮಘಾತಕನೆನಿಸಿರುವಿ. ಆದ್ದರಿಂದಲೇ ನೀನು ಜನರಿಂದ ಪರಿತ್ಯಕ್ತನಾಗಿರುವಿ' ಎಂದು ನುಡಿದರು. ಇದನ್ನು ಕೇಳಿದ ಕಾಶ್ಯಪನು ತನ್ನ ಪಾಪಕ್ಕೆ ಪರಿಹಾರೋಪಾಯವನ್ನು ತಿಳಿಸಲು ಪ್ರಾರ್ಥಿಸಿದಾಗ ಶಾಕಲ್ಯ ಮುನಿಗಳು 'ಸುವರ್ಣ ಮುಖರೀ ನದಿಯ ದಡದಲ್ಲಿರುವ

ಯೇನ ಮಾಂ ಪ್ರತಿಗೃಹ್ಣೀಯುರ್ಬಾಂಧವಾಃ ಸಸುಹೃಜ್ಜನಾಃ ॥82॥

ಕೃಪಾಂ ಮಯಿ ಕುರುಷ್ವ ತ್ವಂ ಶಾಕಲ್ಯ ಹರಿವಲ್ಲಭಃ ॥83॥

ಕಾಶ್ಯಪೇನೈವಮುಕ್ತಸ್ತು ಶಾಕಲ್ಯೋಽಪಿ ಮುನೀಶ್ವರಃ ।
ಕ್ಷಣಂ ಧ್ಯಾತ್ವಾ ಜಗಾದೈವಂ ಕಾಶ್ಯಪಂ ಕೃಪಯಾ ತದಾ ॥84॥

ಶಾಕಲ್ಯ ಉವಾಚ–

ಅಸ್ಯ ಪಾಪಸ್ಯ ಶಾಂತ್ಯರ್ಥಮುಪಾಯಂ ಪ್ರವದಾಮಿ ತೇ ।
ತತ್ಕರ್ತವ್ಯಂ ತ್ವಯಾ ಶೀಘ್ರಂ ವಿಲಂಬಂ ಮಾ ಕೃಥಾ ದ್ವಿಜ ॥85॥

ಸುವರ್ಣಮುಖರೀತೀರೇ ಲಕ್ಷ್ಮೀಪತಿನಿವಾಸಭೂಃ ।
ವೇಂಕಟಾದ್ರಿರಿತಿ ಖ್ಯಾತಃ ಸರ್ವಲೋಕೇಷು ಪೂಜಿತಃ ॥86॥

ತಸ್ಮಿನ್ ಶೇಷಗಿರೌ ಪುಣ್ಯೇ ಸುರಾಸುರನಮಸ್ಕೃತೇ ।
ಬ್ರಹ್ಮಹತ್ಯಾಸುರಾಪಾನಸ್ವರ್ಣಸ್ತೇಯಾದಿನಾಶಕೇ ॥87॥

ಸ್ವಾಮಿಪುಷ್ಕರಿಣೀ ಚೇತಿ ಸರ್ವಪಾಪಾಪನೋದಿನೀ ।
ಉತ್ತರೇ ಶ್ರೀನಿವಾಸಸ್ಯ ವರ್ತತೇ ಮಂಗಲಪ್ರದಾ ॥88॥

ತಂ ಗತ್ವಾ ವೇಂಕಟಂ ಶೈಲಂ ಸ್ವಾಮಿಪುಷ್ಕರಿಣೀಂ ಶುಭಾಮ್ ।
ಸ್ನಾತ್ವಾ ಸಂಕಲ್ಪಪೂರ್ವಂ ತು ವರಾಹಸ್ವಾಮಿನಂ ಹರಿಮ್ ॥89॥

ಸೇವಿತ್ವಾ ಪಶ್ಚಿಮೇ ತೀರೇ ನಿರ್ಗತ್ಯ ಹರಿಮಂದಿರಮ್ ।
ಗತ್ವಾ ತತ್ರ ವಿಧಾನೇನ ಸ್ವರ್ಣಾಚಲನಿವಾಸಿನಮ್ ॥90॥

ಶ್ರೀನಿವಾಸಂ ಪರಂ ದೇವಂ ಭಕ್ತಾನಾಮಭಯಪ್ರದಮ್ ।
ಶಂಖಚಕ್ರಧರಂ ದೇವಂ ವನಮಾಲಾವಿಭೂಷಿತಮ್ ॥91॥

ವೇಂಕಟಾಚಲವೆಂಬ ಪರ್ವತದ ಮೇಲ್ಭಾಗದಲ್ಲಿರುವ ಸ್ವಾಮಿಪುಷ್ಕರಿಣಿಯೆಂಬ ಪುಣ್ಯಸರೋವರದಲ್ಲಿ ಸ್ನಾನವನ್ನು ಮಾಡಿಅದರ ದಡದಲ್ಲಿರುವ ವರಾಹದೇವರಿಗೆ ನಮಿಸಿ, ಅಲ್ಲಿಯೇ ದಕ್ಷಿಣ ಭಾಗದಲ್ಲಿರುವ ಭಕ್ತಾಭೀಷ್ಟಪ್ರದಾಯಕನೂ, ಅಭಯ ಪ್ರದನೂ ಆದ ಶಂಖ, ಚಕ್ರ, ಗದಾ, ಪದ್ಮ ಧಾರಕನಾದ ಶ್ರೀನಿವಾಸನಿಗೆ ನಮಸ್ಕರಿಸಿ ಅವನನ್ನು ಸೇವಿಸು. ಆಗ ನಿನ್ನ ಪಾಪವೆಲ್ಲವೂ ನಾಶವಾಗಿ ಅತ್ಯಂತ ಪರಿಶುದ್ಧನಾಗುವಿ' ಎಂದು ನುಡಿದರು.

ನಂತರ ಕಶ್ಯಪನೂ ಸಹ ಶಾಕಲ್ಯರ ವಚನದಂತೆ ಸುರಾಸುರ ನಮಸ್ಕೃತವಾದ ವೇಂಕಟಾಚಲಕ್ಕೆ

ದೃಷ್ಟ್ವಾ ನಿರ್ಧೂತಪಾಪೋऽಸಿ ಸಂಶಯಂ ಮಾ ಕೃಥಾ ದ್ವಿಜ ॥92॥

ಶಾಕಲ್ಯೇನೈವಮುಕ್ತಸ್ತು ಕಾಶ್ಯಪೋ ಮುನಿಪುಂಗವಃ ।
ಗತ್ವಾ ವೇಂಕಟಶೈಲೇಂದ್ರಂ ಸುರಾಸುರನಮಸ್ಕೃತಮ್ ॥93॥

ಪುಷ್ಕರಿಣ್ಯಾಂ ಶುಭಾಯಾಂ ತು ಸ್ನಾತೋ ನಿಯಮಪೂರ್ವಕಮ್।
ಸ್ವಸ್ಥೋऽಭೂತ್ಕಾಶ್ಯಪೇ ವಿಪ್ರೋ ಭಿಷಗ್ವಿದ್ಯಾಬ್ಧಿಪಾರಗಃ ॥94॥

ಸರ್ವೇ ಬಂಧುಜನಾ ವಿಪ್ರಾಃ ಕಾಶ್ಯಪಂ ಬ್ರಾಹ್ಮಣೋತ್ತಮಮ್ ।
ಅಪೂಜಯನ್ವಿಧಾನೇನ ಪೂಜ್ಯೋऽಸಿ ನ ಚ ಸಂಶಯಃ ॥95॥

ಏವಂ ವಃ ಕಥಿತಂ ವಿಪ್ರಾ ವೇಂಕಟಾಚಲವೈಭವಮ್ ।
ಯಃ ಶೃಣೋತಿ ನರೋ ಭಕ್ತ್ಯಾವಿಷ್ಣುಲೋಕೇಮಹೀಯತೇ ॥97॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ
ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ
'ಸ್ವಾಮಿಪುಷ್ಕರಿಣೀಕಾಶ್ಯಪದೋಷನಿವೃತ್ತಿವರ್ಣನಂ' ನಾಮ ಏಕಾದಶೋऽಧ್ಯಾಯಃ ॥11॥

* * *

ಬಂದು ಸಂಕಲ್ಪಪೂರ್ವಕವಾಗಿ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡಿ ತನ್ನೆಲ್ಲ ದೋಷಗಳಿಂದ ಮುಕ್ತನಾಗಿ ಸರ್ವರಿಂದಲೂ ಸಹ ಪೂಜಿತನಾದನು.

ಇಂತಹ ಸ್ವಾಮಿಪುಷ್ಕರಿಣಿಯ ಮಾಹಾತ್ಮೆಯನ್ನು ಕೇಳುವವರೂ ಸಹ ನಿರ್ಧೂತಕಲ್ಮಷರಾಗಿ ವಿಷ್ಣುಲೋಕವನ್ನು ಹೊಂದುವರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ
ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ
ಸಂವಾದದಲ್ಲಿ ಸ್ವಾಮಿಪುಷ್ಕರಿಣೀಸ್ನಾನದಿಂದ ಕಶ್ಯಪನ ದೋಷನಿವೃತ್ತಿಯ ವರ್ಣನವೆಂಬ
ಹನ್ನೊಂದನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥ ದ್ವಾದಶೋऽಧ್ಯಾಯಃ

[ಶ್ರೀ ಸ್ವಾಮಿಪುಷ್ಕರಿಣೀತೀರ್ಥಮಹಿಮಾನುವರ್ಣನಮ್]

**ಋಷಯಃ ಊಚುಃ**

**ಸೂತ ಸರ್ವಾರ್ಥತತ್ತ್ವಜ್ಞ ವೇದವೇದಾಂಗಪಾರಗ ।**
**ಶ್ರೀ ಸ್ವಾಮಿಪುಷ್ಕರಿಣ್ಯಾಶ್ಚ ವೈಭವಂ ವದ ನಃ ಪ್ರಭೋ ॥1॥**

**ಯಸ್ಯಾಃ ಸ್ಮರಣಮಾತ್ರೇಣ ಮುಕ್ತಃ ಸ್ಯಾನ್ಮಾನವೋ ಭುವಿ ॥2॥**

**ಶ್ರೀ ಸೂತ ಉವಾಚ**

**ಸ್ವಾಮಿತೀರ್ಥಂ ಪ್ರಶಂಸಂತಿ ಸ್ನಾಂತಿ ವಾ ಕಥಯಂತಿ ಯೇ ।**
**ಅಷ್ಟಾವಿಂಶತಿಭೇದಾಂಸ್ತೇ ನರಕಾನ್ನೋಪಭುಂಜತೇ ॥3॥**

**ತಾಮಿಸ್ರಮಂಧತಾಮಿಸ್ರಂ ಮಹಾರೌರವರೌರವೌ ।**
**ಕುಂಭೀಪಾಕಂ ಕಾಲಸೂತ್ರಮಸಿಪತ್ರವನಂ ತಥಾ ॥4॥**

**ಕೃಮಿಭಕ್ಷೋऽಂಧಕೂಪಶ್ಚ ಸಂದಂಶಃ ಶಾಲ್ಮಲೀ ತಥಾ ।**
**ಲಾಲಾಭಕ್ಷೋ ಹ್ಯವೀಚಿಶ್ಚ ಸಾರಮೇಯಾದನಂ ತಥಾ ॥5॥**

**ತಥೈವ ವಜ್ರಕಣಕಃ ಕ್ಷಾರಕರ್ದಮಪಾತನಮ್ ।**
**ರಕ್ಷೋಗಣಾಶನಂ ಚಾಪಿ ಶೂಲಪ್ರೋತನಿರೋಧನಮ್ ॥6॥**

**ತಿರೋಧಾನಾಭಿಧಂ ವಿಪ್ರಾಸ್ತಥಾ ಸೂಚೀಮುಖಾಭಿಧಮ್ ।**

## ಹನ್ನೆರಡನೆಯ ಅಧ್ಯಾಯ

ಯಾರು ಸ್ವಾಮಿಪುಷ್ಕರಿಣಿ ತೀರ್ಥದಲ್ಲಿ ಸ್ನಾನವನ್ನು ಮಾಡುವರೋ, ಯಾರು ಸ್ವಾಮಿಪುಷ್ಕರಿಣಿಯ ಮಾಹಾತ್ಮ್ಯವನ್ನು ಪ್ರಶಂಸನ ಮಾಡುವರೋ, ತಾಮಿಸ್ರ, ಅಂಧತಾಮಿಸ್ರ, ಮಹಾರೌರವ, ರೌರವ, ಕುಂಭೀಪಾಕ, ಕಾಲಸೂತ್ರ, ಅಸಿಪತ್ರವನ, ಕೃಮಿಭಕ್ಷ, ಅಂಧಕೂಪ, ಸಂದಂಶ, ಶಾಲ್ಮಲೀ, ಲಾಲಾಭಕ್ಷ, ಅವೀಚಿ, ಸಾರಮೇಯಾದನ, ವಜ್ರಕಣಕ, ಕ್ಷಾರಕರ್ದಮಪಾತನ, ರಕ್ಷೋಗಣಾಶನ, ಶೂಲಪ್ರೋತನಿರೋಧನ, ತಿರೋಧಾನ, ಸೂಚೀಮುಖ, ಪೂಯಶೋಣಿತಭಕ್ಷ, ವಿಷಾಗ್ನಿಪರಿಪೀಡನ

ಪೂಯಶೋಣಿತಭಕ್ಷಂ ಚ ವಿಷಾಗ್ನಿಪರಿಪೀಡನಮ್ ॥7॥

ಅಷ್ಟಾವಿಂಶತಿಸಂಖ್ಯಾತಮೇತನ್ನರಕಸಂಚಯಮ್ ।
ನ ಯಾತಿ ಮನುಜೋ ವಿಪ್ರಾಃ ಸ್ವಾಮಿತೀರ್ಥನಿಮಜ್ಜನಾತ್ ॥8॥

ವಿತ್ತಾಪತ್ಯಕಲತ್ರಾಣಾಂ ಯೋಽನ್ಯೇಷಾಮಪಹಾರಕಃ ।
ಸ ಕಾಲಪಾಶಬದ್ಧೋಽಯಂ ಯಮದೂತೈರ್ಭಯಾನಕೈಃ ॥9॥

ತಾಮಿಸ್ರೇ ನರಕೇ ಘೋರೋ ಪಾತ್ಯತೇ ಬಹುವತ್ಸರಮ್ ।
ಸ್ನಾತಿ ಚೇತ್ಸ್ವಾಮಿತೀರ್ಥೇ ಸ ತಸ್ಮಿನ್ನಾಸೌ ನಿಪಾತ್ಯತೇ ॥10॥

ಮಾತರಂ ಪಿತರಂ ವಿಪ್ರಾನ್ಯೋ ದ್ವೇಷ್ಟಿ ಪುರುಷಾಧಮಃ ।
ಸ ಕಾಲಸೂತ್ರನರಕೇ ವಿಸ್ತೃತಾಯುತಯೋಜನೇ ॥11॥

ಅಧಸ್ತಾದಗ್ನಿಸಂತಪ್ತೇ ಉಪರ್ಯರ್ಕಮರೀಚಿಭಿಃ ।
ಖಲೇ ತಾಮ್ರಮಯೇ ವಿಪ್ರಾಃ ಪಾತ್ಯತೇ ಕ್ಷುಧಯಾರ್ದಿತಃ ॥12॥

ಸ್ನಾತಿ ಚೇತ್ಪುಷ್ಕರಿಣ್ಯಾಂ ವೈ ತಸ್ಮಿನ್ನಾಸೌ ನಿಪಾತ್ಯತೇ ।
ಯೋ ವೇದಮಾರ್ಗಮುಲ್ಲಂಘ್ಯ ವರ್ತತೇ ಕುಪಥೇ ನರಃ ॥13॥

– ಇವೇ ಮೊದಲಾದ ಇಪ್ಪತ್ತೆಂಟು ವಿಧವಾದ ನರಕಗಳನ್ನು ಅವರು ಹೊಂದುವದಿಲ್ಲ.

ಪರದ್ರವ್ಯ, ಪುತ್ರ, ಮಡದಿಯರನ್ನು ಅಪಹರಿಸುವದು, ಪರರನ್ನು ಹಿಂಸಿಸುವದೇ ಮೊದಲಾದ ದುಷ್ಕರ್ಮಗಳನ್ನು ಮಾಡುವವರನ್ನು ಯಮಭಟರು ಕಾಲಪಾಶಗಳಲ್ಲಿ ಬಿಗಿದು ಘೋರವೆಂಬ ತಾಮಿಸ್ರ ವೆಂಬ ನರಕದಲ್ಲಿ ತಳ್ಳುವರು. ಸ್ವಾಮಿಪುಷ್ಕರಿಣಿಯ ಏಕವಾರ ಸ್ನಾನಮಾತ್ರದಿಂದ ಈ ನರಕಪ್ರಾಪ್ತಿಯು ದೂರವಾಗುವದು.

ತಂದೆ ತಾಯಿಯರನ್ನು, ಬ್ರಾಹ್ಮಣರನ್ನು ದ್ವೇಷಿಸುವ ನರಾಧಮನು ಹತ್ತುಸಾವಿರ ಯೋಜನ ವಿಸ್ತೀರ್ಣವಾದ ಕಾಲಸೂತ್ರವೆಂಬ ನರಕದಲ್ಲಿ ಬೀಳುವನು. ಅಲ್ಲಿ ತಾಮ್ರಮಯವಾದ ಪಾತ್ರೆಯಲ್ಲಿ ಅವನನ್ನು ಹಾಕಿ ಕೆಳಗಿನಿಂದ ಬೆಂಕಿಯನ್ನಿಟ್ಟು ಪಾತ್ರೆಯನ್ನು ಕಾಯಿಸುವರು. ಮೇಲೆ ತೀಕ್ಷ್ಣತರವಾದ ಸೂರ್ಯನ ಬಿಸಿಲು, ಕೆಳಗೆ ಕಾದ ತಾಮ್ರಪಾತ್ರೆ, ಹೊಟ್ಟೆಯಲ್ಲಿಯ ಹಸಿವು ಇವುಗಳಿಂದ ಪಾಪಿಯು ಬಹುವಾಗಿ ಒದ್ದಾಡುವನು. ಸ್ವಾಮಿಪುಷ್ಕರಿಣಿಯ ಸ್ನಾನದಿಂದ ಇಂತಹ ನರಕಪ್ರಾಪ್ತಿಯು ಇಲ್ಲವಾಗುವದು.

ವೇದಮಾರ್ಗವನ್ನುಲ್ಲಂಘಿಸಿ ಅಧರ್ಮಾಚರಣರತನಾದ ವ್ಯಕ್ತಿಯು ಹೊಂದುವ ಅಸಿಪತ್ರವನ

ಸೋಽಸಿಪತ್ರವನೇ ಘೋರೇ ಪಾತ್ಯತೇ ಯಮಕಿಂಕರೈಃ ।
ಸ್ನಾತಿ ಚೇತ್ಸ್ವಾಮಿತೀರ್ಥೇ ತು ತಸ್ಮಿನ್ನಾಸೌ ನಿಪಾತ್ಯತೇ ॥14॥

ಯೋಽಶ್ನಾತಿ ಪಂಕ್ತಿಭೇದೇನ ಪಕ್ವಂ ಸೂಪಾದಿಕಂ ನರಃ ।
ಅಕೃತ್ವಾ ಪಂಚಯಜ್ಞಾನ್ವಾ ಭುಂಕ್ತೇ ಮೋಹೇನ ಸ ದ್ವಿಜಾಃ ॥15॥

ಪಾತ್ಯತೇಽಯಂ ಯಮಭಟೈರ್ನರಕೇ ಕೃಮಿಭೋಜನೇ ।
ಭಕ್ಷ್ಯಮಾಣಃ ಕೃಮಿಶತೈರ್ಭಕ್ಷಯನ್ಕೃಮಿಸಂಚಯಾನ್ ॥16॥

ಸ್ವಯಂ ಚ ಕೃಮಿಭೂತಃ ಸಂಸ್ತಿಷ್ಠೇದ್ಯಾವದಘಕ್ಷಯಮ್ ।
ಸ್ನಾತಿ ಚೇತ್ಸ್ವಾಮಿತೀರ್ಥೇ ವೈ ತಸ್ಮಿನ್ನಾಸೌ ನಿಪಾತ್ಯತೇ ॥17॥

ಯೋ ಹರೇದ್ವಿಪ್ರವಿತ್ತಾನಿ ಸ್ನೇಹೇನ ಬಲತೋಽಪಿ ವಾ ।
ಅನ್ಯೇಷಾಮಪಿ ವಿತ್ತಾನಿ ರಾಜಾ ತತ್ಪುರುಷೋಽಪಿ ವಾ ॥18॥

ಅಯೋಮಯಾಗ್ನಿಕುಂಡೇಷು ಸಂದಂಶೈಃ ಸೋಽಪಿ ಪೀಡಿತಃ ।
ಸಂದಂಶೇ ನರಕೇ ಘೋರೇ ಪಾತ್ಯತೇ ಯಮಪೂರುಷೈಃ ॥19॥

ಸ್ನಾತಿ ಚೇತ್ಸ್ವಾಮಿತೀರ್ಥೇ ತು ತಸ್ಮಿನ್ನಾಸೌ ನಿಪಾತ್ಯತೇ ।
ಆಗಮ್ಯಾಂ ಯೋಽಭಿಗಚ್ಛೇತ ಸ್ತ್ರಿಯಂ ವೈ ಪುರುಷಾಧಮಃ ॥20॥

ಅಗಮ್ಯಂ ಪುರುಷಂ ಯೋಷಿದಭಿಗಚ್ಛೇತ ವಾ ದ್ವಿಜಾಃ ।
ತಾವಯೋಮಯನಾರೀಂ ಚ ಪುರುಷಂ ಚಾಪ್ಯಯೋಮಯಮ್ ॥21

ತಪ್ತಾವಾಲಿಂಗ್ಯ ತಿಷ್ಠಂತೌ ಯಾವಚ್ಚಂದ್ರದಿವಾಕರೌ ।

(ಖಡ್ಗದಂತಿರುವ ಎಲೆಗಳನ್ನು ಹೊಂದಿರುವ ವೃಕ್ಷಗಳಿಂದ ಕೂಡಿದ ನರಕ)ವೆಂಬ ನರಕ ವಿಶೇಷವನ್ನಾಗಲಿ, ಪಂಕ್ತಿಯಲ್ಲಿ ಭೇದವನ್ನಾಚರಿಸುವ ವ್ಯಕ್ತಿಯು, ವೈಶ್ವದೇವಾದಿ ರಹಿತವಾದ ಅನ್ನವನ್ನು ಭಕ್ಷಿಸುವ ವ್ಯಕ್ತಿಯು ಹೊಂದಬಹುದಾದ ಕೃಮಿಭೋಜನವೆಂಬ ನರಕವನ್ನಾಗಲಿ, ಬಲದಿಂದ ಅಥವಾ ಸ್ನೇಹದಿಂದಾಗಲೀ ಬ್ರಾಹ್ಮಣನ ಧನವನ್ನಪಹರಿಸುವ ವ್ಯಕ್ತಿಯು ಹೊಂದುವ ಸಂದಂಶವೆಂಬ ನರಕವನ್ನಾಗಲಿ, ಅಗಮ್ಯಗಮನವನ್ನು ಮಾಡುವ ಸ್ತ್ರೀ ಅಥವಾ ಪುರುಷರೇ ಆಗಲಿ ಹೊಂದುವ ಸೂಚೀ (ಕೆಂಪಗೆ ಕಾದ ಪುರುಷ ಅಥವಾ ಸ್ತ್ರೀಯ ಕಬ್ಬಿಣದ ಮೂರ್ತಿಯನ್ನು ಅಪ್ಪಿಕೊಂಡು ಬಹುಕಾಲವಿರುವ ನರಕವಿಶೇಷ) ಎಂಬ ನರಕವನ್ನಾಗಲೀ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡುವ ವ್ಯಕ್ತಿಯು ಹೊಂದಲಾರನು. ಸರ್ವಜಂತುಗಳಿಗೆ ಬಾಧಕನಾದ ವ್ಯಕ್ತಿಯು

ಸೂಚ್ಯಾಖ್ಯೇ ನರಕೇ ಘೋರೇ ಪಾತ್ಯೇತೇ ಯಮಕಿಂಕರೈಃ ॥22॥

ಸ್ನಾತಿ ಚೇತ್ಸ್ವಾಮಿತೀರ್ಥೇ ಚ ತಸ್ಮಿನ್ನಾಸೌ ನಿಪಾತ್ಯತೇ ।
ಬಾಧತೇ ಸರ್ವಜಂತೂನ್ಯೋ ನಾನೋಪಾಯೈರುಪದ್ರವೈಃ ॥23॥

ಶಾಲ್ಮಲೀನರಕೇ ಘೋರೇ ಪಾತ್ಯತೇ ಬಹುಕಂಟಕೇ ।
ಸ್ನಾತಿ ಚೇತ್ಸ್ವಾಮಿತೀರ್ಥೇ ತು ತಸ್ಮಿನ್ನಾಸೌ ನಿಪಾತ್ಯತೇ ॥24॥

ರಾಜಾ ವಾ ರಾಜಭೃತ್ಯೋ ವಾ ಯಃ ಪಾಷಂಡಮನುದ್ರುತಃ ।
ಭೇದಕೋ ಧರ್ಮಸೇತೂನಾಂ ವೈತರಣ್ಯಾಂ ನಿಪಾತ್ಯತೇ ॥25॥

ಸ್ನಾತಿ ಚೇತ್ಸ್ವಾಮಿತೀರ್ಥೇ ತು ತಸ್ಮಿನ್ನಾಸೌ ನಿಪಾತ್ಯತೇ ।
ವೃಷಲೀಸಂಗದುಷ್ಟೋ ವಾ ಶೌಚಾದ್ಯಾಚಾರವರ್ಜಿತಃ ॥26॥

ತ್ಯಕ್ತಲಜ್ಜಸ್ತ್ಯಕ್ತವೇದಃ ಪಶುಚರ್ಯಾರತಃ ಸದಾ ।
ಸ ಪೂಯವಿಷ್ಠಾಮೂತ್ರಾಸೃಕ್ ಶ್ಲೇಷ್ಮಪಿತ್ತಾದಿಪೂರಿತೇ ॥27॥

ಅತಿಭೀಭತ್ಸನರಕೇ ಪಾತ್ಯತೇ ಯಮಕಿಂಕರೈಃ ।
ಸ್ನಾತಿ ಚೇತ್ಸ್ವಾಮಿತೀರ್ಥೇ ತು ತಸ್ಮಿನ್ನಾಸೌ ನಿಪಾತ್ಯತೇ ॥28॥

ಯಃ ಶ್ವಭಿರ್ಮೃಗಯುರ್ವನ್ಯಾನ್ ಬಾಣೈರ್ವಾ ಬಾಧತೇ ಮೃಗಾನ್।

ಮುಳ್ಳುಗಳಿಂದ ಕೂಡಿದ ಶಾಲ್ಮಲೀ ಎಂಬ ನರಕವನ್ನು ಹೊಂದುವನು. ಆದರೆ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನಮಾಡಿದಲ್ಲಿ ಅವನು ಆ ನರಕವನ್ನು ಎಂದಿಗೂ ಹೊಂದುವದಿಲ್ಲ. ಪಾಷಂಡರನ್ನು (ವೇದಪಥವನ್ನು ಧಿಕ್ಕರಿಸುವ ವ್ಯಕ್ತಿಗಳು) ಆದರಿಸುವ ರಾಜನಾಗಲೀ, ಅಥವಾ ರಾಜಭೃತ್ಯನಾಗಲೀ, ಧರ್ಮದ ಕಟ್ಟಳೆಗಳನ್ನು ಮುರಿಯುವವನು, ವೈತರಣೀ ಎಂಬ ನರಕವನ್ನು ಹೊಂದುವನು. ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡಿದರೆ ಅಂತಹ ಪಾಪವನ್ನು ಮಾಡಿದವನೂ ಸಹ ಶುದ್ಧನಾಗಿ ನರಕವನ್ನು ಹೊಂದುವದಿಲ್ಲ. ವೃಷಲೀ (ಶೂದ್ರಸ್ತ್ರೀ) ಸಂಗವನ್ನು ಮಾಡುವವನು, ಶೌಚಾಚಾರ ರಹಿತನು, ನಾಚಿಕೆಯನ್ನು ಬಿಟ್ಟವನು, ವೇದದೂಷಕನು, ಪಶುಚರ್ಯಾರತನು ಮೂತ್ರ, ಕೀವು, ಮಲ, ರಕ್ತ, ಕಫ, ಪಿತ್ತವೇ ಮೊದಲಾದ ಅಸಹ್ಯ ಪದಾರ್ಥಗಳಿಂದ ತುಂಬಿದ ಭಯಂಕರವಾದ ನರಕದಲ್ಲಿ ಬೀಳುವರು. ಅವರು ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡಿದಲ್ಲಿ ಎಲ್ಲ ಪಾಪಗಳನ್ನು ಕಳೆದುಕೊಳ್ಳುವನು.

ಬಾಣಗಳಿಂದ, ನಾಯಿಗಳಿಂದ ಯಾರು ವನಪ್ರಾಣಿಗಳನ್ನು ಹಿಂಸಿಸುವರೋ ಅವರು

ಸ ವಿಧ್ಯಮಾನೋ ಬಾಣೌಘೈಃ ಪರತ್ರ ಯಮಕಿಂಕರೈಃ ॥29॥

ಪ್ರಾಣರೋಧಾಖ್ಯನರಕೇ ಪಾತ್ಯತೇ ಯಮಕಿಂಕರೈಃ ।
ಸ್ನಾತಿ ಚೇತ್ಸ್ವಾಮಿತೀರ್ಥೇ ತು ತಸ್ಮಿನ್ನಾಸೌ ನಿಪಾತ್ಯತೇ ॥30॥

ದಂಭಕೋ ಯಃ ಪಶೂನ್ಯಜ್ಞೇ ವಿಧ್ಯನುಷ್ಠಾನವರ್ಜಿತಃ ।
ಹಂತ್ಯಸೌ ಪರಲೋಕೇಷು ವೈಶಸೇ ನರಕೇ ದ್ವಿಜಾಃ ॥31॥

ಕರ್ತ್ಯಮಾನೋ ಯಮಭಟೈಃ ಪಾತ್ಯತೇ ಯಮಕಿಂಕರೈಃ ।
ಸ್ನಾತಿ ಚೇತ್ಪುಷ್ಕರಿಣ್ಯಾಂ ವೈ ತಸ್ಮಿನ್ನಾಸೌ ನಿಪಾತ್ಯತೇ ॥32॥

ಆತ್ಮಭಾರ್ಯಾಂ ಸವರ್ಣಾಂ ಯೋ ರೇತಃ ಪಾಯಯತೇ ಯದಿ।
ಪರತ್ರ ರೇತಃಪಾಯೀ ಸ ರೇತಃಕುಂದೇ ನಿಪಾತ್ಯತೇ ॥33॥

ಸ್ನಾತಿ ಚೇತ್ಪುಷ್ಕರಿಣ್ಯಾಂ ವೈ ತಸ್ಮಿನ್ನಾಸೌ ನಿಪಾತ್ಯತೇ ।
ಯೋ ದಸ್ಯುಮಾರ್ಗಮಾಶ್ರಿತ್ಯ ಗರದೋ ಗ್ರಾಮದಾಹಕಃ ॥34॥

ವಣಿಗ್ದ್ರವ್ಯಾಪಹಾರೀ ಚ ಸ ಪರತ್ರ ದ್ವಿಜೋತ್ತಮಾಃ ।
ವಜ್ರದಂಷ್ಟ್ರಾಭಿಧೇ ಘೋರೇ ಪಾತ್ಯತೇ ನರಕೇ ಚಿರಮ್ ॥35॥

ಸ್ನಾತಿ ಚೇತ್ಸ್ವಾಮಿತೀರ್ಥೇ ತು ತಸ್ಮಿನ್ನಾಸೌ ನಿಪಾತ್ಯತೇ ।
ವಿದ್ಯಂತೇ ಯಾನಿ ಚಾನ್ಯಾನಿ ನರಕಾಣಿ ಪರತ್ರ ವೈ ॥36॥

ಪ್ರಾಣರೋಧವೆಂಬ (ಉಸಿರು ಗಟ್ಟಿಸುವದು) ಎಂಬ ನರಕದಲ್ಲಿ ಬೀಳುವರು. ಯಜ್ಞದಲ್ಲಿ ಪಶುಗಳನ್ನು ಬಲಿಕೊಡುವವನು, ದಂಭಾಚಾರ ರತನಾದವನು, ವೇದೋಕ್ತಾನುಷ್ಠಾನರಹಿತನು ವೈಶಸವೆಂಬ ನರಕವನ್ನು ಹೊಂದುವನು. ರೇತಃಪಾನವನ್ನು ಮಾಡುವ, ಮಾಡಿಸುವ ವ್ಯಕ್ತಿಯು ರೇತಃಕುಂದವೆಂಬ ರೇತಸ್ಸಿನಿಂದ ತುಂಬಿದ ನರಕದಲ್ಲಿ ಬೀಳುವನು. ಇಂತಹ ನರಕ ಪ್ರಾಪಕ ಪಾಪಗಳನ್ನು ಮಾಡಿದವರೂ ಸಹ ಸ್ವಾಮಿಪುಷ್ಕರಿಣಿಯ ಸ್ನಾನದಿಂದ ಶುದ್ಧರಾಗುವರು. ಕಳ್ಳತನವನ್ನಾಶ್ರಯಿಸಿ ಪರರಿಗೆ ವಿಷವನ್ನುಣಿಸುವವನು, ಗ್ರಾಮವನ್ನು ದಹಿಸುವವನು, ವ್ಯಾಪಾರಿಗಳ ದ್ರವ್ಯವನ್ನಪಹರಿಸುವವನು, ಮರಣಾನಂತರದಲ್ಲಿ ವಜ್ರದಂಷ್ಟ್ರವೆಂಬ ನರಕವನ್ನು ಹೊಂದಿ ವಜ್ರಸಮಾನವಾದ ಕ್ರಿಮಿಗಳಿಂದ ಬಹುವಾಗಿ ಪೀಡಿತನಾಗುವನು. ವ್ಯಕ್ತಿಯು ಸ್ವಾಮಿತೀರ್ಥದಲ್ಲಿ ಸ್ನಾನವನ್ನು ಮಾಡುವರೋ ಅವರು ಎಲ್ಲ ಪಾಪಗಳಿಂದ ರಹಿತರಾಗಿ ಶುದ್ಧರಾಗುವರು. ಇಷ್ಟೇ ಅಲ್ಲದೇ ಇಲ್ಲಿ ಹೇಳದೇ ಇರುವ ಅನೇಕ ವಿಧವಾದ ನರಕಕಾರಣಗಳಾದ ಪಾಪಗಳನ್ನು

ತಾನಿ ನಾಪ್ನೋತಿ ಮನುಜಃ ಸ್ವಾಮಿತೀರ್ಥನಿಮಜ್ಜನಾತ್ ।
ಪುಷ್ಕರಿಣ್ಯಾಂ ಸಕೃತ್ಸ್ನಾನಾದಶ್ವಮೇಧಫಲಂ ಲಭೇತ್ ॥37॥

ಆತ್ಮವಿದ್ಯಾ ಭವೇತ್ತಾಕ್ಷಾನ್ಮುಕ್ತಿಶ್ಚಾಪಿ ಚತುರ್ವಿಧಾ ।
ನ ಪಾಪೇ ರಮತೇ ಬುದ್ಧಿರ್ನ ಭವೇದ್ದುಃಖಮೇವ ವಾ ॥38॥

ತುಲಾಪುರುಷದಾನೇನ ಯತ್ಫಲಂ ಲಭ್ಯತೇ ನರೈಃ ।
ತತ್ಫಲಂ ಲಭ್ಯತೇ ಪುಂಭಿಃ ಸ್ವಾಮಿತೀರ್ಥನಿಮಜ್ಜನಾತ್ ॥39॥

ಗೋಸಹಸ್ರಪ್ರದಾನೇನ ಯತ್ಪುಣ್ಯಂ ಹಿ ಭವೇನ್ನೃಣಾಮ್ ।
ತತ್ಪುಣ್ಯಂ ಲಭತೇ ಮರ್ತ್ಯಃ ಸ್ವಾಮಿತೀರ್ಥನಿಮಜ್ಜನಾತ್ ॥40॥

ಧರ್ಮಾರ್ಥಕಾಮಮೋಕ್ಷಾಣಾಂ ಯಂ ಯಮಿಚ್ಛತಿ ಪೂರುಷಃ ।
ತಂ ತಂ ಸದ್ಯಃ ಸಮಾಪ್ನೋತಿ ಸ್ವಾಮಿತೀರ್ಥನಿಮಜ್ಜನಾತ್ ॥41॥

ಮಹಾಪಾತಕಯುಕ್ತೋ ವಾ ಯುಕ್ತೋ ವಾ ಸರ್ವಪಾತಕೈಃ ।
ಸದ್ಯಃ ಪೂತೋ ಭವೇದ್ವಿಪ್ರಾಃ ಸ್ವಾಮಿತೀರ್ಥನಿಮಜ್ಜನಾತ್ ॥42॥

ಪ್ರಜ್ಞಾ ಲಕ್ಷ್ಮೀರ್ಯಶಃ ಸಂಪಜ್ಜ್ಞಾನಂ ಧರ್ಮೇ ವಿರಕ್ತತಾ ।
ಮನಃಶುದ್ಧಿರ್ಭವೇನ್ನೄಣಾಂ ಸ್ವಾಮಿತೀರ್ಥನಿಷೇವಣಾತ್ ॥43॥

ಬ್ರಹ್ಮಹತ್ಯಾಯುತಂ ಚಾಪಿ ಸುರಾಪಾನಾಯುತಂ ತಥಾ ।
ಆಯುತಂ ಗುರುದಾರಾಣಾಂ ಗಮನಂ ಪಾಪಕಾರಿಣಾಮ್ ॥44॥

ಸ್ತೇಯಾಯುತಂ ಸುವರ್ಣಾನಾಂ ತತ್ಸಂಸರ್ಗಾಶ್ಚ ಕೋಟಿಶಃ ।
ಶೀಘ್ರಂ ವಿಲಯಮಾಯಾಂತಿ ಸ್ವಾಮಿತೀರ್ಥನಿಮಜ್ಜನಾತ್ ॥45॥

ಅವರೆಂದೂ ಹೊಂದುವದಿಲ್ಲ. ಆದ್ದರಿಂದ ಸ್ವಾಮಿಪುಷ್ಕರಿಣಿಯ ಸ್ನಾನವು ಅತ್ಯಂತ ಪುಣ್ಯದಾಯಕವಾಗಿರುವದು.

ಒಂದು ಬಾರಿ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡಿದರೂ ಸಹ ಮನುಷ್ಯನು ಅಶ್ವಮೇಧ ಯಾಗಾನುಷ್ಠಾನದ ಫಲವನ್ನು ಹೊಂದುವನು. ಸ್ವಾಮಿಪುಷ್ಕರಿಣಿಯ ಸ್ನಾನವು ಬ್ರಹ್ಮಜ್ಞಾನವನ್ನುಂಟು ಮಾಡಿ ಚತುರ್ವಿಧ ಮೋಕ್ಷಕ್ಕೆ ಕಾರಣವಾಗಿರುವದು. ತುಲಾ ಪುರುಷ ದಾನ, ಸಾವಿರಾರು ಗೋದಾನಗಳ ಫಲವು ಸ್ವಾಮಿಪುಷ್ಕರಿಣಿಯ ಸ್ನಾನಮಾತ್ರದಿಂದ ದೊರೆಯುವದು. ಸ್ವಾಮಿಪುಷ್ಕರಿಣಿಯಲ್ಲಿಯ ಸಕೃತ್ ಸ್ನಾನವು ಅಸಂಖ್ಯ ಬ್ರಹ್ಮಹತ್ಯಾ, ಗುರುತಲ್ಪಗಮನ,

ಬ್ರಹ್ಮಹತ್ಯಾಸಮಾನಾನಿ ಸುರಾಪಾನಸಮಾನಿ ಚ ।
ಗುರುಸ್ತ್ರೀಗಮನೇನಾಪಿ ಯಾನಿ ತುಲ್ಯಾನಿ ಚಾಸ್ತಿಕಾ ॥46॥

ಸುವರ್ಣಸ್ತೇಯತುಲ್ಯಾನಿ ತತ್ಸಂಸರ್ಗಸಮಾನಿ ಚ ।
ತಾನಿ ಸರ್ವಾಣಿ ನಶ್ಯಂತಿ ಸ್ವಾಮಿತೀರ್ಥನಿಮಜ್ಜನಾತ್ ॥47॥

ಉಕ್ತೇಷ್ವೇತೇಷು ಸಂದೇಹೋ ನ ಕರ್ತವ್ಯಃ ಕದಾಚನ ।
ಜಿಹ್ವಾಗ್ರೇ ಪರಶುಂ ತಪ್ತಂ ಪ್ರಕ್ಷಿಪಂತಿ ಚ ಕಿಂಕರಾಃ ॥48॥

ಅರ್ಥವಾದಮಿಮಂ ಸರ್ವಂ ಬ್ರುವನ್ವೈ ನರಕಂ ವ್ರಜೇತ್ ।
ಸೂಕರಃ ಸ ಹಿ ವಿಜ್ಞೇಯಃ ಸರ್ವಕರ್ಮಬಹಿಷ್ಕೃತಃ ॥49॥

ಅಹೋಮೌರ್ಖ್ಯಮಹೋಮೌರ್ಖ್ಯಮಹೋಮೌರ್ಖ್ಯಂದ್ವಿಜೋತ್ತಮಾಃ
ಸ್ವಾಮಿತೀರ್ಥಾಭಿಧೇ ತೀರ್ಥೇ ಸರ್ವಪಾತಕನಾಶನೇ ॥50॥

ಅದ್ವೈತಜ್ಞಾನದೇ ಪುಂಸಾಂ ಭಕ್ತಿಮುಕ್ತಿಪ್ರದಾಯಿನಿ ।
ಇಷ್ಟಕಾಮಪ್ರದೇ ನಿತ್ಯಂ ತಥೈವಾಜ್ಞಾನನಾಶನೇ ॥51॥

ಸ್ಥಿತೇಽಪಿ ತದ್ವಿಹಾಯಾಯಂ ರಮತೇಽನ್ಯತ್ರ ವೈ ಜನಃ ।
ಅಹೋ ಮೋಹಸ್ಯ ಮಾಹಾತ್ಮ್ಯಂ ಮಯಾ ವಕ್ತುಂ ನ ಶಕ್ಯತೇ ॥52॥

ಸ್ನಾತಸ್ಯ ಸ್ವಾಮಿತೀರ್ಥೇ ತು ನಾಂತಕಾದ್ಭಯಮಸ್ತಿ ವೈ ।
ಸ್ವಾಮಿತೀರ್ಥಂ ಚ ಪಶ್ಯಂತಿ ತತ್ರ ಸ್ನಾಂತಿ ಚ ಯೇ ನರಾಃ ॥53॥

ಸ್ತುವಂತಿ ಚ ಪ್ರಶಂಸಂತಿ ಸ್ಪೃಶಂತಿ ಚ ನಮಂತಿ ಚ ।
ನ ಪಿಬಂತಿ ಹಿ ತೇ ಸ್ತನ್ಯಂ ಮಾತೃಣಾಂ ದ್ವಿಜಪುಂಗವಾಃ ॥54॥

ಸ್ವರ್ಣಸ್ತೇಯಾದಿ ಸಮಸ್ತ ಪಾಪಗಳನ್ನು ಸಮೂಲವಾಗಿ ವಿನಾಶಗೊಳಿಸುವದು.

ಯಾರು ಇಂತಹ ಸ್ವಾಮಿತೀರ್ಥದ ವಿಷಯದಲ್ಲಿ ಸಂದೇಹ ವನ್ನು ಹೊಂದುವರೋ ಅರ್ಥವಾದ ಪರವೆಂದು ಅದರ ಮಾಹಾತ್ಮ್ಯವನ್ನು ಸಂದೇಹಿಸುವರೋ ಅವರು ನರಕವನ್ನು ಹೊಂದುವರು. ಸ್ವಾಮಿಪುಷ್ಕರಿಣಿಯಂತಹ ಸಕಲ ಪಾಪ ಪರಿಹಾರಕವಾದ ತೀರ್ಥವಿರುವಾಗಲೂ ಸಹ ಅದನ್ನು ಬಿಟ್ಟು ಅನ್ಯತೀರ್ಥಗಳ ಯಾತ್ರೆಯನ್ನು ಮಾಡುವವರ ಮೂರ್ಖತನಕ್ಕೆ ಏನೆನ್ನಬೇಕು? ಯಾರು ಇಂತಹ ಸ್ವಾಮಿಪುಷ್ಕರಿಣಿ ತೀರ್ಥದಲ್ಲಿ ಶ್ರದ್ಧಾಭಕ್ತ್ಯುಪೇತರಾಗಿ ಸ್ನಾನವನ್ನು ಮಾಡುವರೋ ಆ ತೀರ್ಥವನ್ನು ಸೇವಿಸುವರೋ, ಸಂದರ್ಶಿಸುವರೋ ಅಂತಹ ವ್ಯಕ್ತಿಗಳ ಇಹ –ಪರಗಳಲ್ಲಿ

ಏವಂ ವಃ ಕಥಿತಂ ವಿಪ್ರಾಃ ಸ್ವಾಮಿತೀರ್ಥಸ್ಯ ವೈಭವಮ್ ।
ಭುಕ್ತಿಮುಕ್ತಿಪ್ರದಂ ನೃಣಾಂ ಸರ್ವಪಾಪನಿಬರ್ಹಣಮ್ ॥55॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ ಶ್ರೀ ಸ್ವಾಮಿಪುಷ್ಕರಿಣೀತೀರ್ಥಮಹಿಮಾನುವರ್ಣನಂ' ನಾಮ ದ್ವಾದಶೋಽಧ್ಯಾಯಃ ॥12॥

* * *

ಸಕಲಾಭೀಷ್ಟಗಳನ್ನು ಹೊಂದಿ ಪುನರ್ಜನ್ಮವನ್ನು ಹೊಂದದೇ ಮುಕ್ತಿಯನ್ನೇ ಹೊಂದುವರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ ಸ್ವಾಮಿಪುಷ್ಕರಿಣೀತೀರ್ಥಮಹಿಮಾನುವರ್ಣನವೆಂಬ ಹನ್ನೆರಡನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥ ತ್ರಯೋದಶೋऽಧ್ಯಾಯಃ

[ಸ್ವಾಮಿಪುಷ್ಕರಿಣೀ ತೀರ್ಥ ಮಹಿಮಾನುವರ್ಣನನಮ್]

ಶ್ರೀ ಸೂತ ಉವಾಚ

ಭೂಯೋऽಪಿ ಸಂಪ್ರವಕ್ಷ್ಯಾಮಿ ಸ್ವಾಮಿತೀರ್ಥಸ್ಯ ವೈಭವಮ್ ।
ಯುಷ್ಮಾಕಮಾದರೇಣಾಹಂ ನೈಮಿಷಾರಣ್ಯವಾಸಿನಃ ॥1॥

ನಂದೋ ನಾಮ ಮಹಾರಾಜಃ ಸೋಮವಂಶಸಮುದ್ಭವಃ ।
ಧರ್ಮೇಣ ಪಾಲಯಾಮಾಸ ಸಾಗರಾಂತಾಂ ಧರಾಮಿಮಾಮ್ ॥2

ತಸ್ಯ ಪುತ್ರಸ್ಸಮಭವದ್ಧರ್ಮಗುಪ್ತ ಇತಿ ಸ್ಮೃತಃ ।
ರಾಜ್ಯರಕ್ಷಾಧುರಂ ನಂದೋ ನಿಜಪುತ್ರೇ ನಿಧಾಯ ಸಃ ।
ಜಿತೇಂದ್ರಿಯೋ ಜಿತಾಹಾರಃ ಪ್ರವಿವೇಶ ತಪೋವನಮ್ ॥3॥

ತಾತೇ ತಪೋವನಂ ಯಾತೇ ಧರ್ಮಗುಪ್ತಾಭಿಧೋ ನೃಪಃ ।
ಮೇದಿನೀಂ ಪಾಲಯಾಮಾಸ ಧರ್ಮಜ್ಞೋ ನೀತಿತತ್ಪರಃ ॥4॥

ಈಜೇ ಬಹುವಿಧೈರ್ಯಜ್ಞೈರ್ದೇವಾನಿಂದ್ರಪುರೋಗಮಾನ್ ।
ಬ್ರಾಹ್ಮಣಾನಾಂ ದದೌ ವಿತ್ತಂ ಕ್ಷೇತ್ರಾಣಿ ಚ ಬಹೂನಿ ಚ ॥5॥

ಸರ್ವೇ ಸ್ವಧರ್ಮನಿರತಾಸ್ತಸ್ಮಿನ್ರಾಜನಿ ಶಾಸತಿ ।
ಕದಾಚಿನ್ನಾಭವನ್ಪೀಡಾಸ್ತಸ್ಮಿನ್ ಚೋರಾದಿಸಂಭವಾಃ ॥6॥

## ಹದಿಮೂರನೆಯ ಅಧ್ಯಾಯ

ಪೂರ್ವದಲ್ಲಿ ಸೋಮಕುಲೋತ್ಪನ್ನನಾದ ನಂದರಾಜನೆಂಬ ರಾಜನಿದ್ದು ಪ್ರಜೆಗಳನ್ನು ಅತ್ಯಂತ ಧರ್ಮದಿಂದ ಪರಿಪಾಲಿಸುತ್ತಾ ಮಕ್ಕಳಂತೆ ಅವರನ್ನು ಆದರಿಸುತ್ತಾ ರಾಜ್ಯಭಾರವನ್ನು ಮಾಡುತ್ತಿದ್ದನು. ಅವನ ಆಳ್ವಿಕೆಯಲ್ಲಿ ಪ್ರಜೆಗಳು ಸ್ವಧರ್ಮರತರಾಗಿ ಚೋರಾದಿಗಳ ಭಯವಿಲ್ಲದೇ ನಿರಾತಂಕರಾಗಿ ಸುಖವಾಗಿದ್ದರು. ಅವನಿಗೆ ಧರ್ಮಗುಪ್ತನೆಂಬ ಮಗನಿದ್ದನು. ಮಗನಾದ ಧರ್ಮಗುಪ್ತನು ಬೇಟೆಯನ್ನಾಡುವದಕ್ಕಾಗಿ ಅರಣ್ಯಕ್ಕೆ ಹೋದನು. ವನದಲ್ಲಿ ನಾನಾ ಜಂತುಗಳನ್ನು ಸಂಹರಿಸುತ್ತಾ

ಕದಾಚಿದ್ಧರ್ಮಗುಪ್ತೋಽಯಮಾರುಹ್ಯ ತುರಗೋತ್ತಮಮ್ ।
ವನಂ ವಿವೇಶ ವಿಪ್ರೇಂದ್ರಾ ಮೃಗಯಾರಸಕೌತುಕೀ ॥7॥

ತಮಾಲತಾಲಹಿಂತಾಲಕುರಬಾಕುಲದಿಂಗ್ಮುಖೇ ।
ವಿಚಚಾರ ವನೇ ತಸ್ಮಿನ್ಸಿಂಹವ್ಯಾಘ್ರಭಯಾನಕೇ ॥8॥

ಮತ್ತಾಲಿಕುಲಸನ್ನಾದಸಮ್ಮೂರ್ಛಿತದಿಗಂತರೇ ।
ಪದ್ಮಕಹ್ಲಾರಕುಮುದನೀಲೋತ್ಪಲವನಾಕುಲೇ ॥9॥

ತಟಾಕೇ ರಸಸಂಪೂರ್ಣೇ ತಪಸ್ವಿಜನಮಂಡಿತೇ ॥10॥

ತಸ್ಮಿನ್ವನೇ ಸಂಚರತೋ ಧರ್ಮಗುಪ್ತಸ್ಯ ಭೂಪತೇಃ ।
ಅಭೂದ್ವಿಭಾವರೀ ವಿಪ್ರಾಸ್ತಮಸಾಽಽವೃತದಿಂಗ್ಮುಖಾ ॥11॥

ರಾಜಾಪಿ ಪಶ್ಚಿಮಾಂ ಸಂಧ್ಯಾಮುಪಾಸ್ಯ ವಿನಯಾನ್ವಿತಃ ।
ಜಜಾಪ ಚ ವನೇ ತತ್ರ ಗಾಯತ್ರೀಂ ವೇದಮಾತರಮ್ ॥12॥

ಸಿಂಹವ್ಯಾಘ್ರಾದಿಭೀತ್ಯಾಸ್ಮಿನ್ವೃಕ್ಷಮೇಕಂ ಸಮಾಶ್ರಿತೇ ।
ರಾಜಪುತ್ರೇ ತದಭ್ಯಾಶಮೃಕ್ಷಃ ಸಿಂಹಭಯಾರ್ದಿತಃ ॥13॥

ಅನ್ವಧಾವತ ವೃಕ್ಷಂ ತಮೇಕಃ ಸಿಂಹೋ ವನೇಚರಃ ।
ಅನುದ್ರುತಃ ಸ ಸಿಂಹೇನ ಋಕ್ಷೋ ವೃಕ್ಷಮುಪಾರುಹತ್ ॥14॥

ಆರುಹ್ಯ ಋಕ್ಷೋ ವೃಕ್ಷಂ ತಂ ದದರ್ಶ ಜಗತೀಪತಿಮ್ ।
ವೃಕ್ಷಸ್ಥಿತಂ ಮಹಾತ್ಮಾನಂ ಮಹಾಬಲಪರಾಕ್ರಮಮ್ ॥15॥

ಉವಾಚ ಭೂಪತಿಂ ದೃಷ್ಟ್ವಾ ಋಕ್ಷೋಽಯಂ ವನಗೋಚರಃ ।
ಮಾ ಭೀತಿಂ ಕುರು ರಾಜೇಂದ್ರ ವತ್ಸ್ಯಾವೋ ರಜನೀಮಿಹ ॥16॥

ಸಂಚರಿಸುತ್ತಿರಲು ಸೂರ್ಯನು ಅಸ್ತಂಗತನಾದನು. ವನ್ಯಮೃಗಗಳ ಭೀತಿಯಿಂದ ರಾಜಕುಮಾರನು ಆ ರಾತ್ರಿಯನ್ನು ವೃಕ್ಷವೊಂದರಲ್ಲಿ ಕಳೆಯ ಬಯಸಿ ಮರವನ್ನೇರಿದನು. ಅದೇ ಸಮಯದಲ್ಲಿ ಸಿಂಹದಿಂದ ಹಿಂಬಾಲಿಸಲ್ಪಟ್ಟ ಕರಡಿಯೊಂದು ಆ ಮರವನ್ನೇರಿತು.

ರಾಜನನ್ನು ನೋಡಿದ ಕರಡಿಯು ರಾಜನಿಗೆ 'ನೀನು ನಿರ್ಭಯವಾಗಿ ಈ ರಾತ್ರಿಯನ್ನು ಇಲ್ಲಿಯೇ ಕಳೆಯಬಹುದು. ನೀನು ನಿದ್ರಿಸಿದಾಗ ನಾನು ನಿನಗೆ ರಕ್ಷಕನಾಗಿರುವೆನು. ಮುಂದೆ

ಮಹಾಸತ್ತ್ವೋ ಮಹಾಕಾಯೋ ಮಹಾದಂಷ್ಟ್ರಸಮಾಕುಲಃ ।
ವೃಕ್ಷಮೂಲಂ ಸಮಾಯಾತಃ ಸಿಂಹೋಽಯಮತಿಭೀಷಣಃ ॥17॥

ರಾತ್ರ್ಯರ್ಧಂ ಭಜ ನಿದ್ರಾಂ ತ್ವಂ ರಕ್ಷ್ಯಮಾಣೋ ಮಯೋದ್ಯತಃ।
ತತಃ ಪ್ರಸುಪ್ತಂ ಮಾಂ ರಕ್ಷ ಶರ್ವರ್ಯರ್ಧಂ ಮಹಾಮತೇ ॥18॥

ಇತಿ ತದ್ವಾಕ್ಯಮಾಕರ್ಣ್ಯ ಸುಪ್ತೇ ನಂದಸುತೇ ಹರಿಃ ।
ಪ್ರೋವಾಚ ಋಕ್ಷಂ ಸುಪ್ತೋಽಯಂ ನೃಪೋ ಮೇ ತ್ಯಜ್ಯತಾಮಿತಿ ॥19॥

ತಂ ಸಿಂಹಮಬ್ರವೀದೃಕ್ಷೋ ಧರ್ಮಜ್ಞೋ ದ್ವಿಜಸತ್ತಮಾಃ ।
ಭವಾನ್ ಧರ್ಮಂ ನ ಜಾನೀತೇ ಮೃಗರಾಜ ವನೇಚರ ॥20॥

ವಿಶ್ವಾಸಘಾತಿನಾಂ ಲೋಕೇ ಮಹಾಕಷ್ಟಂ ಭವತ್ಯಹೋ ।
ನ ಹಿ ಮಿತ್ರದ್ರುಹಾಂ ಪಾಪಂ ನಶ್ಯೇದ್ಯಜ್ಞಾಯುತೈರಪಿ ॥21॥

ಬ್ರಹ್ಮಹತ್ಯಾದಿಪಾಪಾನಾಂ ಕಥಂಚಿನ್ನಿಷ್ಕೃತಿರ್ಭವೇತ್ ।
ವಿಶ್ವಸಘಾತಿನಾಂ ಪಾಪಂ ನ ನಶ್ಯೇಜ್ಜನ್ಮಕೋಟಿಭಿಃ ॥22॥

ನಾಹಂ ಮೇರುಂ ಮಹಾಭಾರಂ ಮನ್ಯೇ ಪಂಚಾಸ್ಯ ಭೂತಲೇ ।
ಮಹಾಭಾರಮಿಮಂ ಮನ್ಯೇ ಲೋಕೇ ವಿಶ್ವಸಘಾತಕಮ್ ॥23 ।

ಏವಮುಕ್ತೋಽಥ ಋಕ್ಷೇಣ ಸಿಂಹಸ್ತೂಷ್ಣೀಂ ಬಭೂವ ಹ ।
ಧರ್ಮಗುಪ್ತೇ ಪ್ರಬುದ್ಧೇ ತು ಋಕ್ಷಃ ಸುಷ್ವಾಪ ಭೂರುಹೇ ।

ನೀನು ನನಗೆ ಕಾವಲಿರು. ಆಗ ನಾನು ಮಲಗುವೆನು. ಎಂದು ನುಡಿಯಿತು. ಆಗ ರಾಜ ಕುಮಾರನು ಕರಡಿಯ ಬಳಿ ನಿರ್ಭಯವಾಗಿ ಮಲಗಿದನು.

ರಾತ್ರಿಯ ಸಮಯದಲ್ಲಿ ಮಹಾಬಲಿಷ್ಠವಾದ ಸಿಂಹವೊಂದು ವೃಕ್ಷದ ಬಳಿ ಬಂದು ಮಲಗಿರುವ ರಾಜಕುಮಾರನನ್ನು ತನಗೊಪ್ಪಿಸುವಂತೆ ನಾನಾ ರೀತಿಯಾಗಿ ಕರಡಿಗೆ ಹೇಳಿತು. ಇದಕ್ಕೊಪ್ಪದ ಕರಡಿಯು ವಿಶ್ವಾಸಘಾತದಿಂದ ಹುಟ್ಟಿದ ಪಾಪವು ಕೋಟಿ ಜನ್ಮಗಳಿಂದಲೂ ಸಹ ಕರಗದು. ಮೇರುವಿನ ಭಾರವನ್ನು ಸಹಿಸಬಹುದು. ಆದರೆ ವಿಶ್ವಾಸಘಾತದಿಂದ ಹುಟ್ಟಿದ ಪಾಪದ ಭಾರವನ್ನು ಸಹಿಸಲಸಾಧ್ಯ. ಆದ್ದರಿಂದ ನನ್ನಲ್ಲಿ ವಿಶ್ವಾಸವನ್ನಿಟ್ಟು ಮೈಮರೆತು ಮಲಗಿದ ರಾಜಕುಮಾರನನ್ನು ನಿನಗೊಪ್ಪಿಸೆನು' ಎಂದು ನುಡಿಯಿತು. ಆಗ ಸಿಂಹವು ಮೌನವನ್ನಾಶ್ರಯಿಸಿ ಅಲ್ಲಿಂದ ಹೊರಟು ಹೋಯಿತು.

ತತಃ ಸಿಂಹೋಽಬ್ರವೀದ್ಭೂಪಮೇನಮೃಕ್ಷಂ ತ್ಯಜಸ್ವ ಮೇ ॥24॥

ಏವಮುಕ್ತೋಽಥ ಸಿಂಹೇನ ರಾಜಾ ಸುಪ್ತಮಶಂಕಿತಃ ।
ಸ್ವಾಂಕನ್ಯಸ್ತಶಿರಸ್ಕಂ ತಮೃಕ್ಷಂ ತತ್ಯಾಜ ಭೂತಲೇ ॥25॥

ಪಾತ್ಯಮಾನಸ್ತತೋ ರಾಜ್ಞಾ ಸಮಾಲಂಬಿತಪಾದಪಃ ।
ಋಕ್ಷಃ ಪುಣ್ಯವಶಾದ್ವೃಕ್ಷಾನ್ನ ಪಪಾತ ಮಹೀತಲೇ ॥26॥

ಸ ಋಕ್ಷೋ ನೃಪುಮಭ್ಯೇತ್ಯ ಕೋಪಾದ್ವಾಕ್ಯಮಭಾಷತ ॥27॥

ಕಾಮರೂಪಧರೋ ರಾಜನ್ನಹಂ ಭೃಗುಕುಲೋದ್ಭವಃ ।
ಧ್ಯಾನಕಾಷ್ಠಾಭಿಧೋ ನಾಮ್ನಾ ಋಕ್ಷರೂಪಮಧಾಯಮ್ ॥28॥

ಕಸ್ಮಾದನಾಗಸಂ ಸುಪ್ತಮತ್ಯಾಕ್ಷೀನ್ಮಾಂ ಭವಾನ್ನೃಪ ।
ಮಚ್ಛಾಪಾದತಿಶೀಘ್ರಂ ತ್ವಮುನ್ಮತ್ತಶ್ಚರ ಭೂತಲೇ ॥29॥

ಇತಿ ಶಪ್ತ್ವಾ ಮುನಿರ್ಭೂಪಂ ತತಃ ಸಿಂಹಮಭಾಷತ ।
ನ ಸಿಂಹಸ್ತ್ವಂ ಮಹಾಯಕ್ಷಃ ಕುಬೇರಸಚಿವಃ ಪುರಾ ॥30॥

ಹಿಮವದ್ಗಿರಮಾಸಾದ್ಯ ಕದಾಚಿತ್ತ್ವಂ ವಧೂಸಖಃ ।
ಅಜ್ಞಾನಾದ್ಗೌತಮಾಭ್ಯಾಶೇ ವಿಹಾರಮತನೋರ್ಮುದಾ ॥31॥

ರಾತ್ರಿಯ ಮುಂದಿನ ಭಾಗದಲ್ಲಿ ಧರ್ಮಗುಪ್ತನು ಎಚ್ಚರವನ್ನು ಹೊಂದಿದಾಗ ಕರಡಿಯು ಅವನ ಕಾವಲಿನಲ್ಲಿ ಮಲಗಿತು. ಸಿಂಹವು ಪುನಃ ಬಂದು ರಾಜಕುಮಾರನಿಗೆ ಕರಡಿಯನ್ನು ತನಗೆ ಆಹಾರವಾಗಿ ಕೊಡಲು ಪ್ರಲೋಭನೆಗೊಳಿಸಿತು. ಆಗ ರಾಜಕುಮಾರನು ಒಂದಿಷ್ಟೂ ಸಂದೇಹಿಸದೇ ತನ್ನ ತೊಡೆಯ ಮೇಲೆ ಮಲಗಿದ್ದ ಕರಡಿಯನ್ನು ಗಿಡದಿಂದ ಕೆಳಗೆ ನೂಕಿದನು.

ರಾಜಕುಮಾರನಿಂದ ಕೆಳಗೆ ದಬ್ಬಲ್ಪಟ್ಟರೂ ಕರಡಿಯು ದೈವವಶಾತ್ ಮರದ ಕೊಂಬೆಯೊಂದನ್ನು ಹಿಡಿದು ಕೊಂಡದ್ದರಿಂದ ಕೆಳಗೆ ಬೀಳಲಿಲ್ಲ. ಆಗ ಕರಡಿಯು ಅತ್ಯಂತ ಕೋಪದಿಂದ ಧರ್ಮಗುಪ್ತನಿಗೆ ನೀನು ಮಹದನ್ಯಾಯವನ್ನು ಎಸಗಿರುವಿ. ನಾನು ಧಾನಾಕಾಷ್ಠನೆಂಬ ಕಾಮರೂಪಿಯಾದ ಭೃಗುಕುಲೋದ್ಭವನಾದ ಋಷಿಯ. ವಾಸ್ತವದಲ್ಲಿ ನಾನು ನಿಜವಾದ ಕರಡಿಯಲ್ಲ. ನನಗೆ ವಿಶ್ವಾಸ ದ್ರೋಹವನ್ನಾಚರಿಸಿದ ನೀನು ಉನ್ಮತ್ತನಾಗಿ ಭೂಮಿಯಲ್ಲಿ ಸಂಚರಿಸು' ಎಂದು ಶಪಿಸಿ ಸಿಂಹಕ್ಕೆ 'ನೀನು ಸ್ವಭಾವತಃ ಕುಬೇರನ ಸಚಿವನಾದ ಭದ್ರನೆಂಬ ಯಕ್ಷನು. ಗೌತಮರ ಆಶ್ರಮದ ಬಳಿ ನಿನ್ನ ಪ್ರಿಯತಮೆಯೊಂದಿಗೆ ವಿವಸ್ತ್ರನಾಗಿ ವಿಹಾರವನ್ನು ಮಾಡುವದನ್ನು ಕಂಡು ನಿನ್ನನ್ನು

ಗೌತಮೋಽಪ್ಯುಟಜಾದ್ವೈವಾತ್ಸಮಿದಾಹರಣಾಯ ವೈ ।
ನಿರ್ಗತಸ್ತ್ವಾಂ ವಿವಸನಂ ದೃಷ್ಟ್ವಾಶಾಪಮುದಾಹರತ್ ॥32॥

ಯಸ್ಮಾನ್ಮಮಾಶ್ರಮೇಽದ್ಯ ತ್ವಂ ವಿವಸ್ತ್ರಃ ಸ್ಥಿತವಾನಸಿ ।
ಅತಃ ಸಿಂಹತ್ವಮದ್ಯೈವ ಭವಿತಾ ತೇ ನ ಸಂಶಯಃ ॥33॥

ಇತಿ ಗೌತಮಶಾಪೇನ ಸಿಂಹತ್ವಮಗಮತ್ಪುರಾ ।
ಕುಬೇರಸಚಿವೋ ಯಕ್ಷೋ ಭದ್ರನಾಮಾಭವಾನ್ಪುರಾ ॥34॥

ಕುಬೇರೋ ಧರ್ಮಶೀಲೋ ಹಿ ತದ್ಭೃತ್ಯಾಶ್ಚ ತಥೈವ ಹಿ ।
ಅತಃ ಕಿಮರ್ಥಂ ತ್ವಂ ಹಂಸಿ ಮಾಮೃಷಿಂ ವನಗೋಚರಮ್ ॥35॥

ಏತತ್ಸರ್ವಮಹಂ ಧ್ಯಾನಾಜ್ಜಾನಾಮಿ ಹಿ ಮೃಗಾಧಿಪ ।
ಇತ್ಯುಕ್ತೋ ಧ್ಯಾನಕಾಷ್ಠೇನ ತ್ಯಕ್ತ್ವಾ ಸಿಂಹತ್ವಮಾಶು ಸ ॥36॥

ಯಕ್ಷರೂಪಂ ಗತೋ ದಿವ್ಯಂ ಕುಬೇರಸಚಿವಾತ್ಮಕಮ್ ।
ಧ್ಯಾನಕಾಷ್ಠಮಸಾವಾಹ ಪ್ರಾಂಜಲಿಃ ಪ್ರಣತೋ ಮುನಿಮ್ ॥37॥

ಅದ್ಯ ಜ್ಞಾತಂ ಮಯಾ ಸರ್ವಂ ಪೂರ್ವವೃತ್ತಂ ಮಹಾಮುನೇ ।
ಗೌತಮಃ ಶಾಪಕಾಲೇ ಮೇ ಶಾಪಾಂತಮಪಿ ಚೋಕ್ತವಾನ್ ॥38॥

ಧ್ಯಾನಕಾಷ್ಠೇನ ಸಂವಾದೋ ಋಕ್ಷರೂಪೇಣ ತೇ ಯದಾ ।
ತದಾ ನಿರ್ಧೂಯ ಸಿಂಹತ್ವಂ ಯಕ್ಷರೂಪಮವಾಪ್ಸ್ಯತಿ ॥39॥

ಇತಿ ಮಾಮಬ್ರವೀದ್ಬ್ರಹ್ಮನ್ಗೌತಮೋ ಮುನಿಪುಂಗವಃ ।
ಅದ್ಯ ಸಿಂಹತ್ವನಾಶಾನ್ಮೇ ಜಾನಾಮಿ ತ್ವಾಂ ಮಹಾಮುನೇ ॥40॥

ಧ್ಯಾನಕಾಷ್ಠಾಭಿಧಂ ಶುದ್ಧಂ ಕಾಮರೂಪಧರಂ ಸದಾ ।
ಇತ್ಯುಕ್ತ್ವಾ ತಂ ಪ್ರಣಮ್ಯಾಥ ಧ್ಯಾನಕಾಷ್ಠಂ ಸ ಯಕ್ಷರಾಟ್ ॥41॥

ಸಿಂಹನಾಗು ಎಂದು ಶಪಿಸಿ 'ಯಾವಾಗ ಧಾನಾಕಾಷ್ಠನೊಂದಿಗೆ ನಿನ್ನ ಸಂವಾದವು ಜರುಗುವದೋ ಆಗ ಸಿಂಹದೇಹದಿಂದ ವಿಮುಕ್ತಿಯನ್ನು ಹೊಂದುವಿ' ಎಂದು ಶಾಪಕಾಲವನ್ನು ತಿಳಿಸಿದರು. ಅವರ ಶಾಪದಿಂದ ನೀನು ಸಿಂಹನಾಗಿರುವಿ' ಎಂದು ನುಡಿಯಿತು. ನಂತರ ಸಿಂಹರೂಪದಲ್ಲಿದ್ದ ಯಕ್ಷನು ತನ್ನ ಶಾಪದಿಂದ ವಿಮೋಚಿತನಾಗಿ, ಧ್ಯಾನಕಾಷ್ಠನನ್ನು ಸ್ತುತಿಸಿ, ಯಕ್ಷರೂಪವನ್ನು ಹೊಂದಿ ತನ್ನ ಪಟ್ಟಣಕ್ಕೆ ಮರಳಿದನು. ವಿಶ್ವಾಸಘಾತವನ್ನೆಸಗಿದ ಧರ್ಮಗುಪ್ತನು ಋಕ್ಷರೂಪದಲ್ಲಿದ್ದ

ವಿಮಾನವರಮಾರುಹ್ಯ ಪ್ರಯಯಾವಲಕಾಪುರೀಮ್ ।
ಉನ್ಮತ್ತರೂಪಂ ದೃಷ್ಟ್ವಾ ತಂ ಮಂತ್ರಿಣಸ್ತು ನೃಪೋತ್ತಮಮ್ ॥42॥

ಪಿತುಃ ಸಕಾಶಮಾನಿನ್ಯೋ ರೇವಾತೀರೇ ನೃಪೋತ್ತಮಮ್ ।
ತಸ್ಮೈ ನಿವೇದಯಾಮಾಸುರ್ಮತಿಭ್ರಂಶಂ ಸುತಸ್ಯ ಚ ॥43॥

ಜ್ಞಾತ್ವಾ ತು ಪುತ್ರವೃತ್ತಾಂತಂ ಪಿತಾ ವೈ ನಂದನಸ್ತದಾ ।
ಪುತ್ರಮಾದಾಯ ಸಹಸಾ ಜೈಮಿನೇರಂತಿಕಂ ಯಯೌ ॥44॥

ತಸ್ಮೈ ನಿವೇದಯಾಮಾಸ ಪುತ್ರವೃತ್ತಾಂತಮಾದಿತಃ ॥45॥

ಭಗವನ್ಜೈಮಿನೇ ಪುತ್ರೋ ಮಮಾದ್ಯೋನ್ಮತ್ತತಾಂ ಗತಃ ।
ಅಸ್ಯೋನ್ಮಾದವಿನಾಶಾಯ ಬ್ರೂಹ್ಯುಪಾಯಂ ಮಹಾಮುನೇ ॥44॥

ಇತಿ ಪೃಷ್ಟಶ್ಚಿರಂ ದಧ್ಯೌ ಜೈಮಿನಿರ್ಮುನಿಪುಂಗವಃ ।
ಧ್ಯಾತ್ವಾ ತು ಸುಚಿರಂ ಕಾಲಂ ನೃಪನಂದನಮಬ್ರವೀತ್ ॥47॥

ಧ್ಯಾನಕಾಷ್ಠಸ್ಯ ಶಾಪೇನ ಹ್ಯುನ್ಮತ್ತಸ್ತೇ ಸುತೋಽಭವತ್ ।
ತಸ್ಯ ಶಾಪಸ್ಯ ಮೋಕ್ಷಾರ್ಥಮುಪಾಯಂ ಪ್ರಬ್ರವೀಮಿ ತೇ ॥48॥

ಸುವರ್ಣಮುಖರೀತೀರೇ ವೇಂಕಟೇ ನಾಮ್ನಿ ಪರ್ವತೇ ।
ಸರ್ವಪಾಪಹರೇ ಪುಣ್ಯೇ ನಾನಾಧಾತುವಿನಿರ್ಮಿತೇ ॥49॥

ಸ್ವಾಮಿಪುಷ್ಕರಿಣೀ ಚೇತಿ ತೀರ್ಥಮಸ್ತಿ ಮಹತ್ತರಮ್ ।
ಪವಿತ್ರಾಣಾಂ ಪವಿತ್ರಂ ಹಿ ಮಂಗಲಾನಾಂ ಚ ಮಂಗಲಮ್ ॥50॥

ಶ್ರುತಿಸಿದ್ಧಂ ಮಹಾಪುಣ್ಯಂ ಬ್ರಹ್ಮಹತ್ಯಾದಿಶೋಧಕಮ್ ।

ಋಷಿಯ ಶಾಪದಿಂದ ಉನ್ಮಾದಾವಸ್ಥೆಯನ್ನು ಹೊಂದಿ ಉನ್ಮತ್ತನಂತೆ ಅಲ್ಲಲ್ಲಿ ಸಂಚರಿಸ ತೊಡಗಿದನು. ಇದನ್ನು ಕಂಡ ಅವನ ಮಂತ್ರಿಗಳು ನಂದ ರಾಜನ ಬಳಿಗೆ ಧರ್ಮಗುಪ್ತನನ್ನು ಕರೆತಂದರು. ನಂದನು ತನ್ನ ಮಗನಿಗೊದಗಿದ ದುರವಸ್ಥೆಯನ್ನು ಕಂಡು ಅತ್ಯಂತ ದುಃಖವನ್ನು ಹೊಂದಿ ಅವನನ್ನು ಕರೆದುಕೊಂಡು ಜೈಮಿನಿ ಮಹರ್ಷಿಗಳ ಬಳಿಗೆ ಹೋಗಿ ಶಾಪಮೋಚನೆಯ ಉಪಾಯವನ್ನು ಕೇಳಿದರು.

ಆಗ ಜೈಮಿನಿ ಮಹರ್ಷಿಗಳು ಸುವರ್ಣ ಮುಖರೀ ನದಿಯ ದಡದಲ್ಲಿರುವ ವೇಂಕಟಾಚಲದಲ್ಲಿರುವ ಅತ್ಯಂತ ಪವಿತ್ರವಾದ, ಮಂಗಲ ಕರವಾದ ಸ್ವಾಮಿಪುಷ್ಕರಿಣಿ ಸರೋವರದಲ್ಲಿ ಸ್ನಾನವನ್ನು

ನೀತ್ವಾ ತತ್ರ ಸುತಂ ತೇಽದ್ಯ ಸ್ನಾಪಯಸ್ವ ಮಹಾಮತೇ ॥51॥

ಉನ್ಮಾದಸ್ತತ್ ಕ್ಷಣಾದೇವ ತಸ್ಯ ನಶ್ಯೇನ್ನ ಸಂಶಯಃ ।
ಇತ್ಯುಕ್ತಸ್ತಂ ಪ್ರಣಮ್ಯಾಸೌ ಜೈಮಿನಿಂ ಮುನಿಪುಂಗವಮ್ ॥52॥

ನಂದಃ ಪುತ್ರಂ ಸಮಾದಾಯ ಸ್ವಾಮಿಪುಷ್ಕರಿಣೀಂ ಯಯೌ ।
ತತ್ರ ಚ ಸ್ನಾಪಯಾಮಾಸ ಪುತ್ರಂ ನಿಯಮಪೂರ್ವಕಮ್ ॥53॥

ಸ್ನಾನಮಾತ್ರಾತ್ತತಃ ಸದ್ಯೋ ನಷ್ಟೋನ್ಮಾದೋಽಭವತ್ಸುತಃ ।
ಸ್ವಯಂ ಸಸ್ನೌ ಸ ನಂದೋಽಪಿ ಸ್ವಾಮಿಪುಷ್ಕರಿಣೀಜಲೇ ॥64॥

ಉಷಿತ್ವಾ ದಿನಮೇಕಂ ತು ಸಹಪುತ್ರಃ ಪಿತಾ ತದಾ ।
ಸೇವಿತ್ವಾ ವೇಂಕಟೇಶಂ ಚ ಶ್ರೀನಿವಾಸಂ ಕೃಪಾನಿಧಿಮ್ ॥55॥

ಪುತ್ರಮಾಪೃಚ್ಛ್ಯ ನಂದಸ್ತಂ ಪ್ರಯಯೌ ತಪಸೇ ವನಮ್ ।
ಗತೇ ಪಿತರಿ ಪುತ್ರೋಽಪಿ ಧರ್ಮಗುಪ್ತೋ ನೃಪೋ ದ್ವಿಜಾ ॥56॥

ಪ್ರದದೌ ವೇಂಕಟೇಶಸ್ಯ ಬಹುವಿತ್ತಾನಿ ಭಕ್ತಿತಃ ।
ಬ್ರಾಹ್ಮಣೇಭ್ಯೋ ಧನಂ ಧಾನ್ಯಂ ಕ್ಷೇತ್ರಾಣಿ ಚ ದದೌ ತದಾ ॥57॥

ಪ್ರಯಯೌ ಮಂತ್ರಿಭಿಃ ಸಾರ್ಧಂ ಸ್ವಾಂ ಪುರೀಂ ತದನಂತರಮ್ ।
ಧರ್ಮೇಣ ಪಾಲಾಮಾಸ ರಾಜ್ಯಂ ನಿಹತಕಂಟಕಮ್ ॥58॥

ಪಿತೃಪೈತಾಮಹಂ ವಿಪ್ರಾ ಧರ್ಮಗುಪ್ತೋಽತಿಧಾರ್ಮಿಕಃ ।
ಉನ್ಮಾದೈರಪ್ಯಪಸ್ಮಾರೈರ್ಗ್ರಹೈರ್ದುಷ್ಟೈಶ್ಚ ಯೇ ನರಾಃ ॥59॥

ಮಾಡಿದಲ್ಲಿ ಸರ್ವದೋಷಗಳೂ ಸಹ ನಿವೃತ್ತಿಯನ್ನು ಹೊಂದಿ ನಿನ್ನ ಪುತ್ರನು ಪೂರ್ವದಂತೆ ಆಗುವನೆಂದು ತಿಳಿಸಿದರು.

ಅದರಂತೆ ಧರ್ಮಗುಪ್ತನೂ ಸಹ ತಂದೆಯಾದ ನಂದನಿಂದ ಸಹಿತನಾಗಿ ಪರಮ ಪಾವನವಾದ ವೇಂಕಟಾಚಲಕ್ಕೆ ತೆರಳಿ ವೇಂಕಟೇಶನನ್ನು ಭಕ್ತಿಯಿಂದ ಪೂಜಿಸಿ, ಬ್ರಾಹ್ಮಣರಿಗೆ ನಾನಾ ದಾನಗಳನ್ನು ಕೊಟ್ಟು, ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡಿ ತನ್ನ ಉನ್ಮಾದಾವಸ್ಥೆಯನ್ನು ಕಳೆದುಕೊಂಡು ಅತ್ಯಂತ ತೇಜಸ್ವಿಯಾಗಿ ಕಂಗೊಳಿಸಿದನು.

ಆದ್ದರಿಂದ ಯಾರು ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡುವರೋ, ಭಕ್ತಿಯಿಂದ

ಗ್ರಸ್ತಾ ಭವಂತಿ ವಿಪ್ರೇಂದ್ರಾಸ್ತೇऽಪಿ ಚಾತ್ರ ನಿಮಜ್ಜನಾತ್ ।
ಪುಷ್ಕರಿಣ್ಯಾಂ ವಿಮುಕ್ತಾಸ್ಸ್ಯುಃ ಸತ್ಯ ಸತ್ಯಂ ವದಾಮ್ಯಹಮ್ ॥60॥

ಸ್ವಾಮಿಪುಷ್ಕರಿಣೀಂ ತ್ಯಕ್ತ್ವಾ ತೀರ್ಥಮನ್ಯದ್ವ್ರಜೇತ್ತು ಯಃ ।
ಸ್ನಿಗ್ಧಂ ಸ ಗೋಪಯಸ್ತ್ಯಕ್ತ್ವಾ ಸ್ನುಹೀಕ್ಷೀರಂ ಪ್ರಯಾಚತೇ ॥61॥

ಸ್ವಾಮಿತೀರ್ಥಂ ಸ್ವಾಮಿತೀರ್ಥಂ ಸ್ವಾಮಿತೀರ್ಥಮಿತಿ ದ್ವಿಜಾಃ ।
ತ್ರಿಃ ಪಠಂತೋ ನರಾ ಏವಂ ಯತ್ರ ಕ್ವಾಪಿ ಜಲಾಶಯೇ ॥62॥

ಸ್ನಾಂತಿ ಸರ್ವೇ ನರಾಸ್ತೇ ವೈ ಯಾಸ್ಯಂತಿ ಬ್ರಹ್ಮಣಃ ಪದಮ್ ॥63॥

ಏವಂ ವಃ ಕಥಿತಾ ವಿಪ್ರಾ ಧರ್ಮಗುಪ್ತಕಥಾ ಶುಭಾ ।
ಯಸ್ಯಾಃ ಶ್ರವಣಮಾತ್ರೇಣ ಬ್ರಹ್ಮಹತ್ಯಾ ವಿನಶ್ಯತಿ ॥64॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ ಶ್ರೀ ಸ್ವಾಮಿಪುಷ್ಕರಿಣೀತೀರ್ಥಮಹಿಮಾನುವರ್ಣನಂ' ನಾಮ ತ್ರಯೋದಶೋऽಧ್ಯಾಯಃ ॥13॥

* * *

ಭಗವಂತನನ್ನು ಆರಾಧಿಸುವರೋ ಅವರು ಉನ್ಮಾದ, ಭೂತಪ್ರೇತಪಿಶಾಚವೇತಾಲಾದಿಗ್ರಹಣವೇ ತಮ್ಮೆಲ್ಲ ದೋಷಗಳಿಂದ ವಿನಿರ್ಮುಕ್ತರಾಗಿ ಐಹಿಕಾಮುಷ್ಮಿಕ ಕಾಮನೆಗಳನ್ನು ಹೊಂದಿ ಸುಖಿಗಳಾಗಿ ವಿರಾಜಿಸುವರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ ಸ್ವಾಮಿಪುಷ್ಕರಿಣೀತೀರ್ಥಮಹಿಮಾವರ್ಣನವೆಂಬ ಹದಿಮೂರನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥ ಚತುರ್ದಶೋऽಧ್ಯಾಯಃ

[ಸ್ವಾಮಿಪುಷ್ಕರಿಣೀ ತೀರ್ಥ ಮಹಿಮಾನುವರ್ಣನನಮ್]

ಶ್ರೀ ಸೂತ ಉವಾಚ-

ಭೋ ಭೋ ತಪೋಧನಾಸ್ಸರ್ವೇ ನೈಮಿಷಾರಣ್ಯವಾಸಿನಃ ।
ಸ್ವಾಮಿತೀರ್ಥಸ್ಯ ಮಾಹಾತ್ಮ್ಯಂ ಭೂಯೋऽಪಿ ಪ್ರವದಾಮ್ಯಹಮ್ ॥1॥

ಪುರಾ ಕಿರಾತೀಸಂಸರ್ಗಾತ್ಸುಮತಿರ್ಬ್ರಾಹ್ಮಣಃ ಸುರಾಮ್ ।
ಪೀತವಾನ್ಪುಷ್ಕರಿಣ್ಯಾಂ ಸ ಸ್ನಾತ್ವಾ ಪಾಪಾದ್ವಿಮೋಚಿತಃ ॥2॥

ಋಷಯಃ ಊಚುಃ-

ಸುಮತಿಃ ಕಸ್ಯ ಪುತ್ರೋऽಸೌ ಕಥಂ ಸ ಚ ಸುರಾಂ ಪಪೌ ।
ಕಥಂ ಕಿರಾತ್ಯಾಸಕ್ತೋऽಭೂತ್ಸೂತ ಪೌರಾಣಿಕೋತ್ತಮ ॥3॥

ಸರ್ವೇಷಾಂ ವಿಸ್ತರಾದೇತದ್ವದ ತ್ವಂ ಕೃಪಯಾऽಧುನಾ ॥4॥

ಶ್ರೀಸೂತ ಉವಾಚ-

ಮಹಾರಾಷ್ಟ್ರಾಭಿಧೇ ದೇಶೇ ಬ್ರಾಹ್ಮಣಃ ಕಶ್ಚಿದಾಸ್ತಿಕಃ ।
ಯಜ್ಞದೇವ ಇತಿ ಖ್ಯಾತೋ ವೇದವೇದಾಂಗಪಾರಗಃ ॥5॥

ದಯಾಲುರಾತಿಥೇಯಶ್ಚ ಶಿವನಾರಾಯಣಾರ್ಚಕಃ ।
ಸುಮತಿರ್ನಾಮ ಪುತ್ರೋऽಭೂದ್ಯಜ್ಞದೇವಸ್ಯ ತಸ್ಯ ವೈ ॥6॥

ಪಿತರಂ ಸ ಪರಿತ್ಯಜ್ಯ ಭಾರ್ಯಾಮಪಿ ಪತಿವ್ರತಾಮ್ ।

## ಹದಿನಾಲ್ಕನೆಯ ಅಧ್ಯಾಯ

ಪೂರ್ವದಲ್ಲಿ ಮಹಾರಾಷ್ಟ್ರದಲ್ಲಿ ಯಜ್ಞದೇವನೆಂಬ ಅಸ್ತಿಕನೂ, ಅತಿಥಿ ಪೂಜಕನೂ, ಧರ್ಮಿಷ್ಠನೂ ಆದ ಬ್ರಾಹ್ಮಣನೊಬ್ಬನಿದ್ದನು. ಅವನಿಗೆ ಸುಮತಿಯೆಂಬ ಉತ್ತಮ ಗುಣಗಳಿಂದುಪೇತನಾದ ಮಗನಿದ್ದನು. ದೈವಯೋಗದಿಂದ ಸುಮತಿಯು ತನ್ನ ಗ್ರಾಮದಲ್ಲಿಯೇ ಇದ್ದ ಕಿರಾತ ಸ್ತ್ರೀಯ ಸಂಗವನ್ನು ಮಾಡಿ. ತನ್ನ ತಂದೆ-ತಾಯಿ-ಹೆಂಡತಿಯನ್ನು ತೊರೆದು ಕಿರಾತೀಸಂಗ

ಪ್ರಯಯಾವುತ್ಕಲೇ ದೇಶೇ ವಿಟಗೋಷ್ಠೀಪರಾಯಣಃ ॥7॥

ಕಾಚಿತ್ಕಿರಾತೀ ತದ್ದೇಶೇ ವಸಂತೀ ಯುವಮೋಹಿನೀ ।
ಯೂನಾಂ ಸಮಸ್ತದ್ರವ್ಯಾಣಿ ಪ್ರಲೋಭ್ಯ ಜಗೃಹೇ ಚಿರಮ್ ॥8॥

ತಸ್ಯಾ ಗೃಹಂ ಸ ಪ್ರಯಯೌ ಸುಮತಿರ್ಬ್ರಾಹ್ಮಣಾಧಮಃ ।
ಸುಮತಿಂ ಸಾ ಚ ಜಗ್ರಾಹ ಕಿರಾತೀ ನಿರ್ಧನಂ ದ್ವಿಜಮ್ ॥9॥

ತಯಾ ಯುಕ್ತೋಽಥ ಸುಮತಿಸ್ತತ್ಸಂಯೋಗೈಕತತ್ಪರಃ ।
ಇತಸ್ತತಶ್ಚೋರಯಿತ್ವಾ ಬಹುದ್ರವ್ಯಾಣಿ ಸಂತತಮ್ ॥10॥

ದತ್ವಾ ತಯಾ ಚಿರಂ ರೇಮೇ ತದ್ಗೃಹೇ ಬುಭುಜೇ ಚ ಸಃ ।
ಏಕೇನ ಚಷಕೇಣಾಸೌ ತಯಾ ಸಹ ಸುರಾಂ ಪಪೌ ॥11॥

ಏವಂ ಸ ಬಹುಕಾಲಂ ವೈ ರಮಮಾಣಸ್ತಯಾ ಸಹ ।
ಪಿತರೌ ನಿಜಪತ್ನೀಂ ಚ ನಾಸ್ಮರದ್ವಿಷಯಾತುರಃ ॥12॥

ಸ ಕದಾಚಿತ್ಕಿರಾತೈಸ್ತು ಚೌರ್ಯಂ ಕರ್ತುಂ ಯಯೌ ಸಹ ।
ವಿಪ್ರಸ್ಯ ಕಸ್ಯಚಿದ್ಗೇಹೇ ಸೋಽಪಿ ಕೈರಾತವೇಷಭೃತ್ ।
ಯಯೌ ಚೋರಯಿತುಂ ದ್ರವ್ಯಂ ಸಾಹಸೀ ಖಡ್ಗಹಸ್ತವಾನ್ ॥13॥

ತದ್ಗೃಹಸ್ವಾಮಿನಂ ವಿಪ್ರಂ ಹತ್ವಾ ಖಡ್ಗೇನ ಸಾಹಸಾತ್ ।
ಸಮಾದಾಯ ಬಹುದ್ರವ್ಯಂ ಕಿರಾತೀಭವನಂ ಯಯೌ ॥14॥

ತಂ ಯಾಂತಮನುಯಾತಿ ಸ್ಮ ಬ್ರಹ್ಮಹತ್ಯಾ ಭಯಂಕರೀ ।
ನೀಲವಸ್ತ್ರಧರಾ ಭೀಮಾ ಭೃಶಂ ರಕ್ತಶಿರೋರುಹಾ ॥15॥

ಗರ್ಜಂತಿ ಸಾಟ್ಟಹಾಸಂ ಸಾ ಕಂಪಯಂತೀ ಚ ರೋದಸೀ ।

ಪರಿಮೋಹಿತನಾಗಿ ಅವಳ ಮನೆಯಲ್ಲಿಯೇ ವಾಸಮಾಡಿದನು.

ಸುಮತಿಯು ದುಷ್ಟಸ್ತ್ರೀಗೆ ಸಂತೋಷವನ್ನುಂಟುಮಾಡಲು ಧನವನ್ನು ತರಲು ಕಳ್ಳತನವೇ ಮೊದಲಾದ ದುಷ್ಟಕೆಲಸಗಳನ್ನು ಮಾಡುತ್ತಿದ್ದನು. ಒಂದು ಬಾರಿ ಬ್ರಾಹ್ಮಣೋರ್ವನ ಮನೆಗೆ ಹೋಗಿ ಧನದಾಸೆಯಿಂದ ಬ್ರಾಹ್ಮಣನನ್ನು ಕೊಂದು ಹಾಕಿದನು. ಅಗಮ್ಯ ಗಮನ, ಅಭಕ್ಷ್ಯ ಭಕ್ಷಣಗಳಿಂದ ದೋಷಯುಕ್ತನಾಗಿದ್ದ ಸುಮತಿಯು ಬ್ರಾಹ್ಮಣ ವಧವನ್ನು ಮಾಡಿದ್ದರಿಂದ ಬ್ರಹ್ಮಹತ್ಯಾದೋಷವುಂಟಾಗಿ ಆ ಎಲ್ಲ ದೋಷಗಳೂ ಕೆದರಿದ ಕೂದುಲು, ಕೆಂಪುಬಟ್ಟೆಗಳನ್ನು

ಅನುದ್ರುತಸ್ತಯಾ ಸೋऽಯಂ ಬಭ್ರಾಮ ಜಗತೀತಲೇ ॥16॥

ಏವಂ ಭ್ರಮನ್ಬುವಂ ಸರ್ವಾಂ ಕದಾಚಿತ್ಸುಮತಿಃ ಸ್ವಯಮ್ ।
ಸ್ವಗ್ರಾಮಂ ಪ್ರಯಯೌ ಭೀತ್ಯಾ ವಿಪ್ರಬಂಧುರ್ದುರಾತ್ಮವಾನ್ ॥17॥

ಅನುದ್ರುತಸ್ತಯಾ ಭೀತಃ ಪ್ರಯಯೌ ಸ್ವಗೃಹಂ ಪ್ರತಿ ।
ಬ್ರಹ್ಮಹತ್ಯಾऽಪ್ಯನುದ್ರುತ್ಯ ತೇನ ಸಾಕಂ ಗೃಹಂ ಯಯೌ ॥18॥

ಪಿತರಂ ರಕ್ಷ ರಕ್ಷೇತಿ ಸುಮತಿಃ ಶರಣಂ ಯಯೌ ।
ಮಾ ಭೈಷೀರಿತಿ ತಂ ಪ್ರೋಚ್ಯ ಪಿತಾ ರಕ್ಷಿತುಮುದ್ಯತ ॥19॥

ತದಾನೀಂ ಬ್ರಹ್ಮಹತ್ಯೇಯಂ ತತ್ತಾತಂ ಪ್ರತ್ಯಭಾಷತ ॥20॥

ಬ್ರಹ್ಮಹತ್ಯೋವಾಚ–

ಮೈವ ತ್ವಂ ಪ್ರತಿಗೃಹ್ಣೀಷ್ವ ಯಜ್ಞದೇವ ದ್ವಿಜೋತ್ತಮ ।
ಅಸೌ ಸುರಾಪೀ ಸ್ತೇಯೀ ಚ ಬ್ರಹ್ಮಹಾ ಚಾತಿಪಾತಕೀ ॥21॥

ಮಾತೃದ್ರೋಹೀ ಪಿತೃದ್ರೋಹೀ ಭಾರ್ಯಾತ್ಯಾಗೀ ಚ ಪಾತಕೀ ।
ಕಿರಾತೀಸಂಗದುಷ್ಟಶ್ಚ ಹ್ಯೇನಂ ಮುಂಚ ದುರಾತ್ಮಕಮ್ ॥22॥

ಗೃಹ್ಣಾಸಿ ಚೇದಿಮಂ ವಿಪ್ರ ಮಹಾಪಾತಕಿನಂ ಸುತಮ್ ।
ತ್ವದ್ಭಾರ್ಯಾಮಸ್ಯ ಭಾರ್ಯಾಂ ಚ ತ್ವಾಂ ಚ ಪುತ್ರಮಿಮಂ ದ್ವಿಜ ॥23॥

ಭಕ್ಷಯಿಷ್ಯಾಮಿ ವಂಶಂ ಚ ತಸ್ಮಾನ್ಮುಂಚ ಸುತಂ ತ್ವಿಮಮ್ ।
ಇಮಂ ತ್ಯಜಸಿ ಚೇತ್ಪುತ್ರಂ ಯುಷ್ಮಾನ್ಮುಂಚಾಮಿ ಸಾಂಪ್ರತಮ್ ॥24॥

ಧರಿಸಿದ ಭಯಂಕರವಾದ ಸ್ತ್ರೀರೂಪದಿಂದ ಸುಮತಿಯನ್ನು ಬೆನ್ನು ಹತ್ತಿ ಬರತೊಡಗಿದವು.

ಸುಮತಿಯು ತನ್ನ ಬೆನ್ನ ಹಿಂದಿರುವ ಬ್ರಹ್ಮಹತ್ಯೆಯನ್ನು ತಪ್ಪಿಸಿಕೊಳ್ಳಲು ನಾನಾ ರೀತಿಯಾಗಿ ಪ್ರಯತ್ನಿಸಿ ಅಲ್ಲಿಂದ ಓಡಿ ಹೋದನು. ಎಲ್ಲಿಗೆ ಹೋದರೂ ಸಹ ಆ ದೋಷವು ಅವನನ್ನು ಬಿಡದೇ ಹಿಂಬಾಲಿಸಿತು. ಸುಮತಿಯು ಅವನ ತಂದೆಯ ಬಳಿಗೆ ಹೋದನು. ಇವನ ಅವಸ್ಥೆಯನ್ನು ಕಂಡು ಕನಿಕರಿಸಿ; ಬ್ರಹ್ಮಹತ್ಯೆಯು 'ಕಿರಾತ ಸ್ತ್ರೀಯ ಸಂಗ ಬ್ರಹ್ಮಹತ್ಯಾದಿ ದೋಷಗಳಿಂದ ದುಷ್ಟನಾದ, ಮಾತಾ ಪಿತೃ ಭಾರ್ಯಾದಿ ದ್ರೋಹವನ್ನೆಸಗಿದ, ಪಾಪಿಯಾದ ನಿನ್ನ ಮಗನನ್ನು ನೀನು ಸ್ವೀಕರಿಸಿದಲ್ಲಿ ನಿನ್ನ ಕುಟುಂಬವೆಲ್ಲವೂ ಸಹ ನಾಶವಾಗುವದು' ಎಂದು ನಾನಾ

ನೈಕಸ್ಯಾರ್ಥೇ ಕುಲಂ ಹಂತುಮರ್ಹಸಿ ತ್ವಂ ಮಹಾಮತೇ ।
ಇತ್ಯುಕ್ತಸ್ಸ ತಯಾ ತತ್ರ ಯಜ್ಞದೇವೋಽಬ್ರವೀಚ್ಚ ತಾಮ್ ॥25॥

ಯಜ್ಞದೇವ ಉವಾಚ–

ಬಾಧತೇ ಮಾಂ ಸುತಸ್ನೇಹಃ ಕಥಮೇನಂ ಪರಿತ್ಯಜೇ ।
ಬ್ರಹ್ಮಹತ್ಯಾ ತದಾಕರ್ಣ್ಯ ದ್ವಿಜೋಕ್ತಂ ತಮಭಾಷತ ॥26॥

ಬ್ರಹ್ಮಹತ್ಯೋವಾಚ–

ಅಯಂ ಹಿ ಪತಿತೋ ಭೂತ್ವಾ ವರ್ಣಾಶ್ರಮಬಹಿಷ್ಕೃತಃ ।
ಪುತ್ರೇಽಸ್ಮಿನ್ಮಾ ಕುರು ಸ್ನೇಹಂ ನಿಂದಿತಂ ಚಾಸ್ಯ ದರ್ಶನಮ್ ॥27॥

ಇತ್ಯುಕ್ತ್ವಾ ಬ್ರಹ್ಮಹತ್ಯಾ ಸಾ ಯಜ್ಞದೇವಸ್ಯ ಪಶ್ಯತಃ ।
ತಲೇನ ಪ್ರಜಹಾರಸ್ಯ ಪುತ್ರಂ ಸುಮತಿನಾಮಕಮ್ ॥28॥

ರುರೋದ ತಾತತಾತೇತಿ ಪಿತರಂ ಪ್ರಬ್ರುವನ್ಮುಹುಃ ।
ರುರುದುರ್ಜನಕೋ ಮಾತಾ ಭಾರ್ಯಾಪಿ ಸುಮತೇಸ್ತದಾ ॥29॥

ಏತಸ್ಮಿನ್ನಂತರೇ ತತ್ರ ದೂರ್ವಾಸಾಃ ಶಂಕರಾಂಶಕಃ ।
ದಿಷ್ಟ್ಯಾ ಸಮಾಯಯೌ ಯೋಗೀ ಧಾರ್ಮಿಕೋ ಮುನಿಸತ್ತಮ ॥30

ಯಜ್ಞದೇವೋಽಥ ತಂ ದೃಷ್ಟ್ವಾ ಮುನಿಂ ರುದ್ರಾವತಾರಕಮ್ ।
ಸ್ತುತ್ವಾ ಪ್ರಣಮ್ಯ ಶರಣಂ ಯಯಾಚೇ ಪುತ್ರಕಾರಣಾತ್ ॥31॥

ದುರ್ವಾಸಸ್ತ್ವಂ ಮಹಾಯೋಗಿನ್ಸಾಕ್ಷಾದ್ವೈ ಶಂಕರಾಂಶಕಃ ।
ತ್ವದ್ದರ್ಶನಮಪುಣ್ಯಾನಾಂ ಭವಿತಾ ನ ಕದಾಚನ ॥32॥

ಬ್ರಹ್ಮಹಾ ಚ ಸುರಾಪೀ ಚ ಸ್ತೇಯೀ ಚಾಭೂತ್ಸುತೋ ಮಮ ।
ಏನಂ ಪ್ರಹರ್ತುಮಾಯಾತಾ ಬ್ರಹ್ಮಹತ್ಯಾಽಪಿ ವರ್ತತೇ ॥33॥

ರೀತಿಯಾಗಿ ಪ್ರತಿರೋಧಿಸುತ್ತಿದ್ದರೂ ಸಹ, ತನ್ನ ಮಗನನ್ನು ಪ್ರತಿಗ್ರಹಿಸಿ, ದುರ್ವಾಸರ ಬಳಿಗೆ ಕರೆದುಕೊಂಡು ಹೋಗಿ ಸುಮತಿಯು ದೋಷವು ಪರಿಹಾರವಾಗುವ ರೀತಿಯನ್ನು ವಿಚಾರಿಸಿದನು.

ಆಗ ದೂರ್ವಾಸರು ನಿನ್ನ ಮಗನು ಮಾಡಿರುವ ಪಾಪಗಳಿಗೆ ಪ್ರಾಯಶ್ಚಿತ್ತವೇ ಇಲ್ಲವೆಂದು ನುಡಿದು ಆದರೂ ಸಹ ಸ್ವಾಮಿಪುಷ್ಕರಿಣಿಯ ಸ್ನಾನವು ನಿನ್ನ ಮಗನ ಪಾಪವೆಲ್ಲವನ್ನೂ ಸಹ

ಭೂಯಾದ್ಯಥಾ ಮೇ ಪುತ್ರೋಽಯಂ ಮಹಾಪಾತಕಮೋಚಿತಃ ।
ಘೋರಾ ಚ ಬ್ರಹ್ಮಹತ್ಯೇಯಂ ಯಥಾ ಶೀಘ್ರಂ ಲಯಂ ವ್ರಜೇತ್ ॥34॥

ತಮುಪಾಯಂ ವದಸ್ವಾದ್ಯ ಮಮಪುತ್ರೇ ದಯಾಂ ಕುರು ।
ಆಯಮೇವ ಹಿ ಪುತ್ರೋ ಮೇ ನಾನ್ಯೋಽಸ್ತಿ ತನಯೋ ಮುನೇ ॥35॥

ಅಸ್ಮಿನ್ಮೃತೇ ತು ವಂಶೋ ಮೇ ಸಮುಚ್ಛಿದ್ಯೇತ ಮೂಲತಃ ।
ತತಃ ಪಿತೃಭ್ಯಃ ಪಿಂಡಾನಾಂ ದಾತಾಪಿ ನ ಭವೇಧ್ರುವಮ್ ॥36॥

ತತಃ ಕೃಪಾಂ ಕುರುಷ್ವ ತ್ವಮಸ್ಮಾಸು ಭಗವನ್ಮುನೇ ॥37॥

ಇತ್ಯುಕ್ತಃ ಸ ತದೋವಾಚ ದುರ್ವಾಸಾಃ ಶಂಕರಾಂಶಕಃ ।
ಧ್ಯಾತ್ವಾಥ ಸುಚಿರಂ ಕಾಲಂ ಯಜ್ಞದೇವಂ ದ್ವಿಜೋತ್ತಮಮ್ ॥38॥

ದುರ್ವಾಸಾ ಉವಾಚ–

ಯಜ್ಞದೇವ ಕೃತಂ ಪಾಪಮತಿಕ್ರೂರಂ ಸುತೇನ ತೇ ।
ನಾಸ್ಯ ಪಾಪಸ್ಯ ಶಾಂತಿಃ ಸ್ಯಾತ್ಪ್ರಾಯಾಶ್ಚಿತ್ತಾಯುತೈರಪಿ ॥39॥

ತಥಾಪಿ ತೇ ಸುತಸ್ಯಾಹಂ ತಸ್ಯ ಪಾಪಸ್ಯ ಶಾಂತಯೇ ।
ಪ್ರಾಯಶ್ಚಿತ್ತಂ ವದಿಷ್ಯಾಮಿ ಶೃಣು ನಾನ್ಯಮನಾ ದ್ವಿಜ ॥40॥

ವೇಂಕಟಾದ್ರೌ ಮಹಾಪುಣ್ಯೇ ಸರ್ವಪಾತಕನಾಶನೇ ।
ಸ್ವಾಮಿಪುಷ್ಕರಿಣೀ ಚೇತಿ ವರ್ತತೇ ಮಂಗಲಪ್ರದಾ ॥41॥

ಸ್ನಾತಿ ಚೇತ್ತವ ಪುತ್ರೋಽಯಂ ಪಾತಕಾನ್ಮುಚ್ಯತೇ ಕ್ಷಣಾತ್ ॥42॥

ಏವಂ ಶ್ರುತ್ವಾ ಮುನೇರ್ವಾಕ್ಯಂ ಯಜ್ಞದೇವೋ ಮಹಾಮತಿಃ ।
ಪುತ್ರಮಾದಾಯ ಸುಮತಿಂ ಸ್ವಾಮಿಪುಷ್ಕರಿಣೀಂ ಗತಃ ॥43॥

ಕಳೆದು, ಅವನನ್ನು ಶುದ್ಧಗೊಳಿಸಲು ಸಮರ್ಥವಾಗಿರುವದು ಎಂದು ನುಡಿದು ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನಮಾಡಲು ತಿಳಿಸಿದರು.

ಅದರಂತೆ ಯಜ್ಞದೇವನು ತನ್ನ ಮಗನಾದ ಸುಮತಿಯಿಂದ ಕೂಡಿಕೊಂಡು ಸ್ವಾಮಿಪುಷ್ಕರಿಣಿಯ ಬಳಿ ಬಂದು ಶ್ರೀನಿವಾಸನಿಗೆ ನಮಸ್ಕರಿಸಿ ಸ್ವಾಮಿಪುಷ್ಕರಿಣಿಯಲ್ಲಿ ಮಗನೊಂದಿಗೆ ತಾನೂ ಸ್ನಾನವನ್ನು ಮಾಡಿದನು. ಸ್ವಾಮಿಪುಷ್ಕರಿಣಿಯ ಸ್ನಾನಮಾತ್ರದಿಂದ ಸುಮತಿಯು ಪರಿಶುದ್ಧನಾದನು.

ಸ್ನಾಪಯಾಮಾಸ ಸುಮತಿಂ ಹತ್ಯಯಾ ಪೀಡಿತಂ ಸುತಮ್ ।
ಆಕಾಶವಾಣೀ ತಂ ವಿಪ್ರಮುವಾಚ ಮಧುರಸ್ವರಾ ॥44॥

ಯಜ್ಞದೇವ ಮಹಾಭಾಗ ಸ್ನಾನೇನಾನೇನ ಸುವ್ರತಃ ।
ಪೂತೋಽಭವತ್ತವ ಸುತಃ ಸಂಶಯಂ ಮಾ ಕೃಥಾ ದ್ವಿಜ ।
ಏವಂ ಪ್ರಭಾವಂ ತತ್ತೀರ್ಥಂ ಪಾಪವೃಕ್ಷಕುಠಾರಕಮ್ ॥45॥

ಏವಂ ವಃ ಕಥಿತಂ ವಿಪ್ರಾ ಇತಿಹಾಸಂ ಪುರಾತನಮ್ ।
ಶೃಣ್ವತಾಂ ಪಠತಾಂ ಚಾಪಿ ವಾಜಪೇಯಫಲಂ ಲಭೇತ್ ॥46॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ
ವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ
ಶ್ರೀಸ್ವಾಮಿಪುಷ್ಕರಿಣೀತೀರ್ಥಮಹಿಮಾನುವರ್ಣನಂ' ನಾಮ ಚತುರ್ದಶೋಽಧ್ಯಾಯಃ ॥14॥

* * *

ಆಗ ಆಕಾಶವಾಣಿಯು 'ಸುಮತಿಯು ಅತ್ಯಂತ ಶುದ್ಧನಾಗಿ ತನ್ನೆಲ್ಲ ಪಾಪಗಳನ್ನು ಕಳೆದುಕೊಂಡಿರುವನೆಂದು ನುಡಿಯಿತು. ಹೀಗೆ ಸ್ವಾಮಿಪುಷ್ಕರಿಣಿಯು ಸ್ನಾನವು ಪ್ರಾಯಶ್ಚಿತ್ತರಹಿತವಾದ ಪಾಪಗಳಿಗೂ ಸಹ ವಿನಾಶಕವಾಗಿರುವದು.

ಈ ಇತಿಹಾಸವನ್ನು ಕೇಳುವವರು ವಾಜಪೇಯ ಯಾಗದ ಫಲವನ್ನು ಹೊಂದುವರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ ಸ್ವಾಮಿಪುಷ್ಕರಿಣೀಮಹಿಮಾನುವರ್ಣನವೆಂಬ ಹದಿನಾಲ್ಕನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥಪಂಚದಶೋऽಧ್ಯಾಯಃ ||15||

[ರಾಮಕೃಷ್ಣತೀರ್ಥಮಹಿಮಾನುವರ್ಣನಮ್]

ಶ್ರೀ ಸೂತ ಉವಾಚ-

ವೇಂಕಟಾಖ್ಯೇ ಮಹಾಪುಣ್ಯೇ ಸರ್ವಪಾತಕನಾಶನೇ ।
ಕೃಷ್ಣತೀರ್ಥಸ್ಯ ಮಾಹಾತ್ಮ್ಯಂ ಶೃಣುಧ್ವಂ ಸುಸಮಾಹಿತಾಃ ||1||

ಯತ್ರ ಮಜ್ಜನಮಾತ್ರೇಣ ಕೃತಘ್ನೋऽಪಿ ವಿಮುಚ್ಯತೇ ।
ಪುತ್ರ್ಯಾನ್ಮಾತೃರ್ಗುರೂಂಶ್ಚಾವಮನ್ಯಂತೇ ಮೋಹವೇಷ್ಟಿತಾಃ ||2||

ಯೇ ಚಾಪ್ಯನ್ಯೇ ದುರಾತ್ಮಾನಃ ಕೃತಘ್ನಾ ನಿರಪತ್ರಪಾಃ ।
ತೇ ಸರ್ವೇ ಕೃಷ್ಣತೀರ್ಥೇऽಸ್ಮಿನ್ ಶುದ್ಧ್ಯಂತಿ ಸ್ನಾನಮಾತ್ರತಃ ||3||

ಕೃಷ್ಣನಾಮಾ ಮುನಿಃ ಪೂರ್ವಂ ವೇಂಕಟಾಹ್ವಯಭೂಧರೇ ।
ಆವರ್ತತ ತಪಃ ಕುರ್ವನ್ವಿಷ್ಣುಂ ಧ್ಯಾಯನ್ಸಮಾಹಿತಃ ||4||

ಸ ತತ್ರ ಕಲ್ಪಯಾಮಾಸ ಸ್ನಾನಾರ್ಥಂ ತೀರ್ಥಮುತ್ತಮಮ್ ।
ತತ್ರ ಸ್ನಾತ್ವಾ ಸಕೃನ್ಮರ್ತ್ಯಃ ಕೃತಘ್ನೋऽಪಿ ವಿಮುಚ್ಯತೇ ||5||

ಅತ್ರೇತಿಹಾಸಂ ವಕ್ಷ್ಯಾಮಿ ಪುರಾಣಂ ಪಾಪನಾಶನಮ್ ।
ಯಸ್ಯ ಶ್ರವಣಮಾತ್ರೇಣ ನರೋ ಮುಕ್ತಿಮವಾಪ್ನುಯಾತ್ ||6||

## ಹದಿನೈದನೆಯ ಅಧ್ಯಾಯ

[ರಾಮಕೃಷ್ಣತೀರ್ಥಮಾಹಾತ್ಮ್ಯವರ್ಣನ]

ಸೂತಾಚಾರ್ಯರು ನುಡಿಯುತ್ತಾರೆ- ಕೃತಘ್ನರು, ತಂದೆ-ತಾಯಿ-ಗುರು-ಬಂಧುಜನರನ್ನು ಅವಮಾನಮಾಡುವವರು, ನಿರ್ಲಜ್ಜರು, ಮೊದಲಾದವರೆಲ್ಲರೂ ಸಹ ಒಂದು ಬಾರಿ ಯಾವ ತೀರ್ಥದಲ್ಲಿ ಸ್ನಾನ ಮಾಡುವುದರಿಂದ ಶುದ್ಧರಾಗುವರೋ, ಅಂತಹ ಕೃಷ್ಣನಾಮಕ ಋಷಿಯಿಂದ ಉಪಕಲ್ಪಿತವಾದ ರಾಮಕೃಷ್ಣ ತೀರ್ಥದ ಮಾಹಾತ್ಮೆಯನ್ನು ನಾನು ನಿಮಗೆ ಹೇಳುವೆನು ಕೇಳಿರಿ.

ಪುರಾ ಬಭೂವ ವಿಪ್ರೇಂದ್ರೋ ರಾಮಕೃಷ್ಣೋ ಮಹಾಮುನಿಃ ।
ಸತ್ಯವಾನ್ ಶೀಲವಾನ್ವಾಗ್ಮೀ ಸರ್ವಭೂತದಯಾನ್ವಿತಃ ॥7॥

ಶತ್ರುಮಿತ್ರಸಮೋ ದಾಂತಸ್ತಪಸ್ವೀ ವಿಜಿತೇಂದ್ರಿಯಃ ।
ಪರೇ ಬ್ರಹ್ಮಣಿ ನಿಷ್ಣಾತೋ ಬ್ರಹ್ಮತತ್ತ್ವೈಕಸಂಶ್ರಯಃ ॥8॥

ಏವಂ ಪ್ರಭಾವಃ ಸ ಮುನಿಃ ತಪಸ್ತೇಪೇ ಸುದಾರುಣಮ್ ।
ಸ ವೈ ನಿಶ್ಚಲಸರ್ವಾಂಗಸ್ತಿಷ್ಠನ್ಸರ್ವತ್ರ ಭೂತಲೇ ॥9॥

ಪರಮಾಣ್ವಂತರಂ ವಾಪಿ ನ ಸ್ವಸ್ಥಾನಾಚ್ಚಚಾಲ ಸಃ ।
ಸ್ಥಿತ್ವಾ ತತ್ರ ತಪಸ್ಯಂತಮನೇಕಶತವತ್ಸರಾನ್ ॥10॥

ತಂ ಚಾಕ್ರಮತ ವಲ್ಮೀಕಂ ಛಾದಿತಾಂಗಂ ಚಕಾರ ವೈ ।
ವಲ್ಮೀಕಾಕ್ರಾಂತದೇಹೋಽಪಿ ರಾಮಕೃಷ್ಣೋ ಮಹಾಮುನಿಃ ॥11॥

ಅಕರೋತ್ತಪ ಏವಾಸೌ ವಲ್ಮೀಕಂ ನ ತ್ವಬುಧ್ಯತ ।
ತಸ್ಮಿಂಶ್ಚ ತಪ್ಯತಿ ತಪೋ ವಾಸವೋ ಮುನಿಪುಂಗವೇ ॥12॥

ವಿಸೃಜ್ಯ ಮೇಘಜಾಲಾನಿ ವರ್ಷಯಾಮಾಸ ವೇಗವಾನ್ ।
ಏವಂ ದಿನಾನಿ ಸಪ್ತಾಯಂ ವವರ್ಷ ಚ ನಿರಂತರಮ್ ॥13॥

ಧಾರಾವರ್ಷೇಣ ಮಹತಾ ವೃಷ್ಯಮಾಣೋಽಪಿ ವೈ ಮುನಿಃ ।
ತದ್ವರ್ಷಂ ಪ್ರತಿಜಗ್ರಾಹ ನಿಮೀಲತವಿಲೋಚನಃ ॥14॥

ಮಹತಾ ಸ್ತನಿತೇನಾಶು ತದಾ ಬಧಿರಯನ್ ಶ್ರುತೀಃ ।
ವಲ್ಮೀಕಸ್ಯೋಪರಿಷ್ಟಾದ್ವೈ ನಿಪಪಾತ ಮಹಾಶನಿಃ ॥15॥

ಪೂರ್ವದಲ್ಲಿ ಸತ್ಯವಂತನೂ, ಭಗವದ್ಭಕ್ತನೂ, ಸರ್ವ ಭೂತಗಳಲ್ಲಿ ದಯೆಯನ್ನು ಹೊಂದಿದವನೂ ಆದ ರಾಮಕೃಷ್ಣನೆಂಬ ಬ್ರಾಹ್ಮಣನು ಪರಮಾತ್ಮನನ್ನು ಕುರಿತು ಅತ್ಯಂತ ಘೋರವಾದ ವೇಂಕಟಾಚಲದಲ್ಲಿ ತಪಸ್ಸನ್ನು ಆಚರಿಸುತ್ತಿದ್ದನು. ಮಳೆ-ಗಾಳಿಗಳ ಬಾಧೆಗೆ ವಿಚಲಿನಾಗದೆ ಪರಮಾತ್ಮೈಕಮನಸ್ಕನಾಗಿ, ತಾನು ನಿಂತ ಸ್ಥಲದಿಂದ ಒಂದಿಷ್ಟೂ ವಿಚಲಿತನಾಗದೇ ಪರಮಾತ್ಮನನ್ನೇ ಧ್ಯಾನಿಸುತ್ತಾ ತಪಸ್ಸನ್ನಾಚರಿಸುತ್ತಿದ್ದ ಆ ಋಷಿಯ ಸುತ್ತಲೂ ಹುತ್ತು ಬೆಳೆದುಬಿಟ್ಟಿತ್ತು. ಇವನ ತಪಸ್ಸನ್ನು ಪರೀಕ್ಷಿಸಲು ಇಂದ್ರನು ಭಯಾನಕವಾದ ಮೇಘಗಳ ಗರ್ಜನೆ ಸಹಿತವಾದ ಕುಂಭವೃಷ್ಟಿಯನ್ನು

ತಸ್ಮಿನ್ವರ್ಷತಿ ಪರ್ಜನ್ಯೇ ಶೀತವಾತಾದಿದುಃಸಹೇ ।
ವಲ್ಮೀಕಶಿಖರಂ ಧ್ವಸ್ತಂ ಬಭೂವಾಶನಿತಾಡಿತಮ್ ॥16॥

ತದಾ ಪ್ರಾದುರಭೂದ್ದೇವಃ ಶಂಖಚಕ್ರಗಧಾಧರಃ ।
ವಿನತಾನಂದನಾರೂಢೋ ವನಮಾಲಾವಿಭೂಷಿತಃ ॥17॥

ರಾಮಕೃಷ್ಣಸ್ಯ ತಪಸಾ ತೋಷಿತೋ ವಾಕ್ಯಮಬ್ರವೀತ್ ॥18॥

ತಪೋನಿಧೇ ರಾಮಕೃಷ್ಣ ವೇದಶಾಸ್ತ್ರಾರ್ಥಪಾರಗ ।
ಮದಾವಿರ್ಭಾವದಿವಸೇ ಯಃ ಸ್ನಾತಿ ಮನುಜೋತ್ತಮಃ ॥19॥

ತಸ್ಯ ಪುಣ್ಯಫಲಂ ವಕ್ತುಂ ಶೇಷೇಣಾಪಿ ನ ಶಕ್ಯತೇ ।
ಮಕರಸ್ಥೇ ರವೌ ವಿಪ್ರ ಪೌರ್ಣಮಾಸ್ಯಾಂ ಮಹಾತಿಥೌ ।
ಪುಷ್ಯನಕ್ಷತ್ರಯುಕ್ತಾಯಾಂ ಸ್ನಾನಕಾಲೋ ವಿಧೀಯತೇ ॥20॥

ತದ್ದಿನೇ ಸ್ನಾತಿ ಯೋ ಮರ್ತ್ಯಃ ಕೃಷ್ಣತೀರ್ಥೇ ಮಹಾಮತಿಃ ।
ಸರ್ವಪಾಪವಿನಿರ್ಮುಕ್ತಃ ಸರ್ವಾನ್ ಕಾಮಾಂಲ್ಲಭೇತ ಸಃ ॥21॥

ಮದಾವಿರ್ಭಾವದಿವಸೇ ಕೃಷ್ಣತೀರ್ಥಜಲೇ ಶುಭೇ ।
ಸ್ನಾತುಂ ತತ್ರ ಸಮಾಯಾಂತಿ ಸ್ವಪಾಪಪರಿಶುದ್ಧಯೇ ॥22॥

ದೇವಾ ಮನುಷ್ಯಾಃ ಸರ್ವೇ ಚ ದಿಕ್ಪಾಲಾಶ್ಚ ಮಹೌಜಸಃ ।
ಏತೇ ಸರ್ವೇ ಮಹಾತ್ಮಾನಃ ಕೋಟಿಸೂರ್ಯಸಮಪ್ರಭಾಃ ॥23॥

ತೇ ಸರ್ವೇ ಕೃಷ್ಣತೀರ್ಥೇಽಸ್ಮಿನ್ಸ್ನಾನಾತ್ಪೂತಾ ಭವಂತಿ ಹಿ ॥24॥

ಸುರಿಸಿದರೂ ಸಹ ಶೀತಾತಪಗಳಿಗೆ ಬೆದರದೇ ಪರಮಾತ್ಮನನ್ನೇ ಧ್ಯಾನಿಸುತ್ತಿದ್ದನು. ಇದರಿಂದ ಪ್ರೀತನಾದ ಪರಮಾತ್ಮನು ಗರುಡಾರೂಢನಾಗಿ ಪ್ರತ್ಯಕ್ಷನಾಗಿ 'ಹೇ ಮುನಿಯೇ ! ನಿನ್ನ ತಪಸ್ಸಿನಿಂದ ಸಂತುಷ್ಟನಾಗಿರುವೆನು. ನಿನ್ನಿಂದ ಉಪಕಲ್ಪಿತವಾದ ಈ ತೀರ್ಥದಲ್ಲಿ ನನ್ನ ಆವಿರ್ಭಾವದ ದಿನವಾದ ಸೂರ್ಯನು ಮಕರ ರಾಶಿಯಲ್ಲಿರುವಾಗ ಹುಣ್ಣಿಮೆಯ ದಿನ ಪುಷ್ಯನಕ್ಷತ್ರ ವಿರುವಾಗ ಯಾರು ಸ್ನಾನ ಮಾಡುವರೋ ಅವರ ಪಾಪಗಳೆಲ್ಲವೂ ಸಹ ನಾಶವಾಗಿ ಎಲ್ಲ ಕಾಮನೆಗಳನ್ನು ಹೊಂದುವರು. ಅಂದು ದೇವತೆಗಳು, ದಿಗ್ದೇವತೆಗಳು, ಸಹ ತಮ್ಮ ಪಾಪ ಪರಿಶುದ್ಧಿಯ ಗೋಸ್ಕರವಾಗಿ ಆ ತೀರ್ಥದಲ್ಲಿ ಸ್ನಾನಮಾಡುವದಕ್ಕೋಸ್ಕರವಾಗಿ ಆಗಮಿಸುವರು. ಈ ತೀರ್ಥದಲ್ಲಿ ಸ್ನಾನಮಾಡುವವರ ಪುಣ್ಯವನ್ನು ವರ್ಣಿಸಲು ಶೇಷದೇವರೂ ಸಹ ಸಮರ್ಥರಲ್ಲ. ಇನ್ನು

ತ್ವನ್ನಾಮ್ನೇದಂ ಮಹಾತೀರ್ಥಂ ಲೋಕೇ ಪ್ರಖ್ಯಾತಿಮೇಷ್ಯತಿ ।
ಇತ್ಯುಕ್ತ್ವಾ ಶ್ರೀನಿವಾಸಶ್ಚ ತತ್ರೈವಾಂತರಧೀಯತ ॥25॥

ಏವಂ ಪ್ರಭಾವಂ ತತ್ತೀರ್ಥಂ ಮಹಾಪಾಪವಿಶೋಧನಮ್ ।
ಬುದ್ಧಿಶುದ್ಧಿಪ್ರದಂ ಪುಂಸಾಂ ಸರ್ವೈಶ್ವರ್ಯಪ್ರದಾಯಕಮ್ ॥26॥

ಏವಂ ವಃ ಕಥಿತಂ ವಿಪ್ರಾಃ ಕೃಷ್ಣತೀರ್ಥಸ್ಯ ವೈಭವಮ್ ।
ಶೃಣ್ವತಾಂ ಪಠತಾಂ ಚೈವ ವಿಷ್ಣುಲೋಕಪ್ರದಾಯಕಮ್ ॥27॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ
ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ ಶ್ರೀ
'ರಾಮಕೃಷ್ಣತೀರ್ಥಮಹಿಮಾನುವರ್ಣನಂ' ನಾಮ ಪಂಚದಶೋಽಧ್ಯಾಯಃ ॥15॥

* * *

ಮುಂದೆ ಈ ಸರೋವರವು ನಿನ್ನ ಹೆಸರಿನಿಂದಲೇ 'ರಾಮಕೃಷ್ಣತೀರ್ಥ' ವೆಂಬುದಾಗಿ ಪ್ರಸಿದ್ಧಿಯನ್ನು ಹೊಂದಲಿ' ಎಂದು ನುಡಿದು ಶ್ರೀನಿವಾಸನು ಅಲ್ಲಿಯೇ ಅಂತರ್ಧಾನನಾದನು.

ಮನುಷ್ಯರಿಗೆ ಶುದ್ಧಿ-ಬುದ್ಧಿಪ್ರದವಾದ, ಮಹಾಪಾಪಹಾರಕವಾದ, ಸರ್ವೈಶ್ವರ್ಯ ಪ್ರದಾಯಕವಾದ ರಾಮಕೃಷ್ಣತೀರ್ಥದ ವೈಭವವನ್ನು ನಾನು ನಿಮಗೆ ಹೇಳಿರುವೆನು. ಇದು ಹೇಳುವವರಿಗೂ ಕೇಳುವವರಿಗೂ ಸಹ ವಿಷ್ಣುಲೋಕಪ್ರದಾಯಕವಾಗಿರುವದು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ
ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ
ಸಂವಾದದಲ್ಲಿ ರಾಮಕೃಷ್ಣತೀರ್ಥಮಹಿಮಾನುವರ್ಣನವೆಂಬ ಹದಿನೈದನೆಯ ಅಧ್ಯಾಯವು
ಪರಿಸಮಾಪ್ತವಾಯಿತು.

* * *

## ಅಥ ಷೋಡಶೋऽಧ್ಯಾಯಃ ॥16॥

[ಜಲದಾನವೈಭವವರ್ಣನಮ್]

ಶ್ರೀ ಸೂತ ಉವಾಚ–

ವೇಂಕಟಾಖ್ಯೇ ಮಹಾಪುಣ್ಯೇ ತೃಷಾರ್ತಾನಾಂ ವಿಶೇಷತಃ ।
ಜಲದಾನಮಕುರ್ವಾಣಸ್ತಿರ್ಯಗ್ಯೋನಿಮವಾಪ್ನುಯಾತ್ ॥1॥

ತಸ್ಮಾದ್ವೇಂಕಟಶೈಲೇಂದ್ರೇ ಯಥಾಶಕ್ತ್ಯನುಸಾರತಃ ।
ಜಲದಾನಂ ಹಿ ಕರ್ತವ್ಯಂ ಸರ್ವೇಷಾಂ ಜೀವನಂ ಮಹತ್ ॥2॥

ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ ।
ವಿಪ್ರಸ್ಯ ಗೃಹಗೋಧಾಯಾಃ ಸಂವಾದಂ ಪರಮಾದ್ಭುತಮ್ ॥3॥

ಪುರಾ ಚೇಕ್ಷ್ವಾಕುವಂಶೇऽಭೂದ್ಧೇಮಾಂಗ ಇತಿ ಭೂಮಿಪಃ ।
ಬ್ರಹ್ಮಜ್ಞೋ ಬ್ರಹ್ಮಭೂಯಿಷ್ಠೋ ಜಿತಾಮಿತ್ರೋ ಜಿತೇಂದ್ರಿಯಃ ॥4॥

ಯಾವಂತೋ ಭೂಮಿಕಣಿಕಾ ಯಾವಂತಸ್ತೋಯಬಿಂದವಃ ।
ಯಾವಂತ್ಯುಡೂನಿ ಗಗನೇ ತಾವತೀರ್ವಾ ದದತ್ಯಸೌ ॥5॥

ಯೇನೇಷ್ಟಯಜ್ಞದರ್ಭೈಶ್ಚ ಭೂಮಿರ್ಬರ್ಹಿಷ್ಮತೀ ಸ್ಮೃತಾ ।

## ಹದಿನಾರನೆಯ ಅಧ್ಯಾಯ

[ಜಲದಾನವೈಭವ]

ವೇಂಕಟಾಚಲವೆಂಬ ಮಹಾಪುಣ್ಯಕರವಾದ ಪ್ರದೇಶದಲ್ಲಿ ಜಲದಾನವನ್ನು ಮಾಡದಿದ್ದಲ್ಲಿ ತಿರ್ಯಗ್ಯೋನಿಯನ್ನು ಹೊಂದುವನು. ಆದ್ದರಿಂದ ಈ ಪರ್ವತದಲ್ಲಿ ಶಕ್ತಿಗನುಸಾರವಾಗಿ ಜಲದಾನವನ್ನು ಮಾಡಲೇ ಬೇಕು. ಎಲ್ಲರ ಜೀವನವಲ್ಲವೇ ಜಲವು?

ಹಿಂದೆ ಇಕ್ಷ್ವಾಕುವಂಶದಲ್ಲಿ ಹೇಮಾಂಗನೆಂಬ ಬ್ರಾಹ್ಮಣ ಪ್ರಿಯನಾದ ಶತ್ರುಸಂಹಾರಕನಾದ ಜಿತೇಂದ್ರಿಯನಾದ ರಾಜನಿದ್ದನು. ಮಹಾದಾನಶೀಲನಾಗಿದ್ದ ಅವನು ಭೂಮಿಯಲ್ಲಿ ಎಷ್ಟು ಭೂಮಿಕಣಗಳಿವೆಯೋ, ಜಲಬಿಂದುಗಳಿವೆಯೋ, ಆಕಾಶದಲ್ಲಿ ಎಷ್ಟು ತಾರೆಗಳಿರುವವೋ

ಗೋಭೂತಿಲಹಿರಣ್ಯಾದ್ಯೈಸ್ತೋಷಿತಾ ಬಹವೋ ದ್ವಿಜಾಃ ॥6॥

ತೇನಾದತ್ತಾನಿ ದಾನಾನಿ ನ ವಿದ್ಯಂತ ಇತಿ ಶ್ರುತಮ್ ।
ತೇನಾದತ್ತಂ ಜಲಂ ಚೈಕಂ ಸುಖಲಭ್ಯಧಿಯಾ ದ್ವಿಜಾಃ ॥7॥

ಬೋಧಿತೋ ಬ್ರಹ್ಮಪುತ್ರೇಣ ವಸಿಷ್ಠೇನ ಮಹಾತ್ಮನಾ ।
ಅಮೂಲ್ಯಂ ಸರ್ವತೋ ಲಭ್ಯಂ ತದ್ದಾತುಃ ಕಿಂ ಫಲಂ ಲಭೇತ್ ॥8

ಇತಿ ದುರ್ಧೀರ್ಹೇತುವಾದೈರ್ನ ಜಲಂ ದತ್ತವಾನ್ವಿಭುಃ ।
ಅಲಭ್ಯದಾನೇ ಪುಣ್ಯಂ ಸ್ಯಾದಿತ್ಯವಾದೀತ್ಸಯುಕ್ತಿಕಮ್ ॥9॥

ಸ ಆನರ್ಚ ದ್ವಿಜಾನ್ವ್ಯಂಗಾಂದರಿದ್ರಾನ್ವೃತ್ತಿಕರ್ಶಿತಾನ್ ।
ನಾನರ್ಚ ಶ್ರೋತ್ರಿಯಾನ್ವಿಪ್ರಾನ್ಬ್ರಹ್ಮಜ್ಞಾನ್ಬ್ರಹ್ಮವಾದಿನಃ ॥10॥

ಪ್ರಖ್ಯಾತಾನ್ಪೂಜಯಿಷ್ಯಂತಿ ಸರ್ವಲೋಕಾಃ ಸಹಾರ್ಹಣೈಃ ।
ಅನಾಥಾನಾಮವಿದ್ಯಾನಾಂ ವ್ಯಂಗಾನಾಂ ಚ ಕುಟುಂಬಿನಾಮ್ ॥11

ದರಿದ್ರಾಣಾಂ ಗತಿಃ ಕಾ ವಾ ತಸ್ಮಾತ್ತೇ ಮದ್ದಯಾಸ್ಪದಾಃ ।
ಇತಿ ದುಷ್ಟೇಷು ಪಾತ್ರೇಷು ದತ್ತವಾನ್ಕಿಮಪಿ ಸ್ವಕಮ್ ॥12॥

ತೇನ ದೋಷೇಣ ಮಹತಾ ಚಾತಕತ್ವಂ ತ್ರಿಜನ್ಮಸು ।
ಏಕಜನ್ಮನಿ ಗೃಧ್ರತ್ವಂ ಶ್ವತ್ವಂ ವಾ ಸಪ್ತಜನ್ಮಸು ॥13॥

ಅಷ್ಟು ದಾನವನ್ನು ಮಾಡುತ್ತಿದ್ದನು. ಅನೇಕ ಯಜ್ಞಗಳನ್ನಾಚರಿಸಿ ಗೋದಾನ, ಭೂದಾನ, ತಿಲದಾನ, ಹಿರಣ್ಯಾದಿ ದಾನಗಳನ್ನು ಮಾಡುತ್ತಿದ್ದನಾದರೂ ಸಹ ಅವನು ಸುಲಭವಾಗಿ ಲಭ್ಯವೆಂಬ ಕಾರಣದಿಂದ ಜಲದಾನವನ್ನು ಮಾಡಲಿಲ್ಲ. ಅವನು ವೃತ್ತಿಕರ್ಶಿತರಾದ, ದರಿದ್ರರಾದ, ಅಂಗಾಂಗವಿಹೀನರಾದ ಜನರನ್ನು ಹುಡುಕಿ ದಾನವನ್ನು ಮಾಡುತ್ತಿದ್ದನೇ ಹೊರತು ವೇದಪಾರಗರಾದ ಬ್ರಾಹ್ಮಣರಿಗೆ ದಾನವನ್ನು ಮಾಡಲಿಲ್ಲ. ಎಲ್ಲರೂ ಉತ್ತಮರಾದ ಬ್ರಹ್ಮಜ್ಞರಿಗೆ ಪೂಜೆಯನ್ನು ಮಾಡುವವರಾದ್ದರಿಂದ ಕೃಪಣರಾದ ವಿಕಲಾಂಗ, ಮೂಢ ಬ್ರಾಹ್ಮಣರು ನನ್ನ ದಯಾಸ್ಪದರಾಗಿರುವದರಿಂದ ಅವರನ್ನೇ ನಾನು ಪೂಜಿಸುವೆನು ಎಂದು ನಿಶ್ಚಯಿಸಿ ಅನಾಥರು ವಿದ್ಯಾವಿಹೀನರು ಇವರಿಗೆ ಮಾತ್ರ ದಾನವನ್ನು ಮಾಡಿದನು. ಹೀಗೆ ಕುಪಾತ್ರರಾದ ವ್ಯಕ್ತಿಗಳಿಗೆ ದಾನವನ್ನು ಮಾಡಿದ ದೋಷದಿಂದ ಅವನು ಮರಣಾನಂತರದಲ್ಲಿ ಮೂರು ಜನ್ಮ ಚಾತಕಪಕ್ಷಿಯಾಗಿ ಹುಟ್ಟಿ ಅನಂತರದಲ್ಲಿ ಮಿಥಿಲಾರಾಜನಾದ ಶ್ರುತಕೀರ್ತಿಯೆಂಬ ರಾಜನ ಮನೆಯಲ್ಲಿ ಹಲ್ಲಿಯಾಗಿ

ಪ್ರಾಪ್ಯ ಪಶ್ಚಾದ್ಗೃಹೇ ಜಾತೋ ಭೂಪೋಽಯಂ ಗೃಹಗೋಧಿಕಾ ।
ಶ್ರುತಕೀರ್ತೇಸ್ತು ಭೂಪಸ್ಯ ಮಿಥಿಲಾಧಿಪತೇರ್ದ್ವಿಜಾಃ ॥14॥

ಗೃಹದ್ವಾರಪ್ರತೋಲ್ಯಾಂ ಸ್ಮ ವರ್ತತೇ ಕೀಟಕಾಶನಃ ।
ಅಷ್ಟಾಶೀತಿಷು ಸರ್ವೇಷು ಸ್ಥಿತಂ ತೇನ ದುರಾತ್ಮನಾ ॥15॥

ವಿದೇಹಾಧಿಪತೇರ್ಗೇಹಂ ಕದಾಚಿದ್ ಋಷಿಸತ್ತಮಃ ।
ಶ್ರುತದೇವ ಇತಿ ಖ್ಯಾತಃ ಶ್ರಾಂತೋ ಮಧ್ಯಾಹ್ನ ಆಗಮತ್ ॥16॥

ತಂ ದೃಷ್ಟ್ವಾ ಸಹಸೋತ್ಥಾಯ ಜಾತಹರ್ಷೋ ನರಾಧಿಪಃ ।
ಮಧುಪರ್ಕೈಃ ಸುಸಂಪೂಜ್ಯ ತಸ್ಯ ಪಾದಾವನೇಜನೀಃ ॥17॥

ಅಪೋ ಮೂರ್ಧ್ನಾವಹತ್ಕ್ಷಿಪ್ರಂ ತದೋತ್ಕ್ಷಿಪ್ತೈಶ್ಚ ಬಿಂದುಭಿಃ ।
ದೈವೋಪದಿಷ್ಟಕಾಲೇನ ಪ್ರೋಕ್ಷಿತಾ ಗೃಹಗೋಧಿಕಾ ॥18॥

ಸದ್ಯೋ ಜಾತಿಸ್ಮೃತಿರಭೂತ್ಕೃತಕರ್ಮಾತಿದುಃಖಿತಾ ।
ತ್ರಾಹಿ ತ್ರಾಹೀತಿ ಚುಕ್ರೋಶ ಬ್ರಾಹ್ಮಣಂ ಗೃಹಮಾಗತಮ್ ॥19॥

ತಿರ್ಯಗ್ಜಂತುರವಂ ಶ್ರುತ್ವಾ ಬ್ರಾಹ್ಮಣೋ ವಿಸ್ಮಿತೋಽಭವತ್ ।
ಕುತಃ ಕ್ರೋಶಸಿ ಗೋಧೇ ತ್ವಂ ದಶೇಯಂ ಕೇನ ಕರ್ಮಣಾ ॥20॥

ಉಪದೇವೋಽಥ ದೇವೋ ವಾ ತ್ವಂ ನೃಪೋಽಥ ದ್ವಿಜೋತ್ತಮಃ ।
ಕಸ್ತ್ವಂ ಬ್ರೂಹಿ ಮಹಾಭಾಗ ತ್ವಾಮದ್ಯಾಹಂ ಸಮುದ್ಧರೇ ॥21॥

ಇತ್ಯುಕ್ತಃ ಸ ನೃಪಃ ಪ್ರಾಹ ಶ್ರುತದೇವಂ ಮಹಾಪ್ರಭುಃ ।

ಹುಟ್ಟಿ ಬಾಗಿಲಿನ ಹಿಂದಿನ ತೊಲೆಯಲ್ಲಿ ವಾಸವಾದನು.

ಒಂದು ಬಾರಿ ಮಿಥಿಲಾದೇಶದ ರಾಜನ ಬಳಿಗೆ ಶ್ರುತದೇವನೆಂಬ ಋಷಿಯು ಮಧ್ಯಾಹ್ನದ ಹೊತ್ತಿನಲ್ಲಿ ಬಂದನು. ಆಗ ಅವನನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದ ರಾಜನು ಅವನ ಪಾದೋದಕವನ್ನು ಶಿರಸಾ ಧರಿಸಿದನು. ಆ ಸಂದರ್ಭದಲ್ಲಿ ವಿಪ್ರಪಾದೋದಕದ ಬಿಂದುವೊಂದು ಹಲ್ಲಿಯ ರೂಪದಲ್ಲಿದ್ದ ಹೇಮಾಂಗನಿಗೆ ತಾಕಿ, ಆ ಪುಣ್ಯದಿಂದ ಅವನಿಗೆ ತನ್ನ ಪೂರ್ವಜಾತಿ ಸ್ಮೃತಿಯು ಉಂಟಾಗಿ ಬ್ರಾಹ್ಮಣನನ್ನು 'ತ್ರಾಹಿ ತ್ರಾಹಿ– ಕಾಪಾಡು, ಸಲಹು' ಎಂದು ಕೂಗಿಕೊಂಡನು.

ಹಲ್ಲಿಯ ಈ ಧ್ವನಿಯನ್ನು ಕೇಳಿದ ಶ್ರುತದೇವನು 'ನೀನಾರು? ನಾನು ನಿನ್ನನ್ನುದ್ಧರಿಸುವೆನು. ನಿನ್ನ ಪೂರ್ವವೃತ್ತಾಂತವೇನು? ಎಂದು ಪ್ರಶ್ನಿಸಿದಾಗ ಹೇಮಾಂಗನು ತನ್ನ ಪೂರ್ವವೃತ್ತಾಂತವನ್ನು

ಅಹಮಿಕ್ಷ್ವಾಕುಕುಲಜಃ ಶಾಸ್ತ್ರವಿದ್ಯಾವಿಶಾರದಃ ॥22॥

ಯಾವಂತೋ ಭೂಮಿಕಣಿಕಾ ಯಾವಂತಸ್ತೋಯಬಿಂದವಃ ।
ಯಾವಂತ್ಯುಡೂನಿ ಗಗನೇ ತಾವತೀರ್ಗಾ ಅಗಾಮಹಮ್ ॥23॥

ಸರ್ವೈರ್ಯಜ್ಞೈರ್ಮಯಾ ಚೇಷ್ಟಂ ಪೂರ್ತಾನ್ಯಾಚರಿತಾನಿ ಮೇ ।
ದಾನಾನ್ಯಪಿ ಚ ದತ್ತಾನಿ ಧರ್ಮಜಾತಂ ಸ್ವನುಷ್ಠಿತಮ್ ॥24॥

ತಥಾಪಿ ದುರ್ಗತಿರ್ಜಾತಾ ನ ಮೇ ಚೋರ್ಧ್ವಗತಿರ್ವಿಭೋ ।
ತ್ರಿವಾರಂ ಚಾತಕತ್ವಂ ಮೇ ಗೃಧ್ರತ್ವಂ ಚೈಕಜನ್ಮನಿ ॥25॥

ಸಪ್ತಜನ್ಮಸು ಚ ಶ್ವತ್ತ್ವಂ ಪ್ರಾಪ್ತಂ ಪೂರ್ವಂ ಮಯಾ ದ್ವಿಜ ।
ಧರತಾನೇನ ಭೂಪೇನ ಚಾಪಃ ಪಾದಾವನೇಜನೀಃ ॥26॥

ಬಿಂದವೋ ದೂರಮುತ್ಕ್ಷಿಪ್ತಾಸ್ತೈಃ ಸಿಕ್ತೋಽಹಂ ಕಥಂಚನ ।
ತದಾ ಜನ್ಮಸ್ಮೃತಿರಭೂತ್ತೇನ ಮೇ ಹತಪಾಪ್ಮನಃ ॥27॥

ಗೋಧಾಜನ್ಮಾನಿ ಭಾವ್ಯಾನೀತ್ಯಷ್ಟಾವಿಂಶತಿ ಮೇ ದ್ವಿಜ ।
ದೃಶ್ಯಂತೇ ದೈವದಿಷ್ಟಾನಿ ಭಿಭ್ಯತೇ ಜನ್ಮಭಿರ್ಭೃಶಮ್ ॥28॥

ನ ಕಾರಣಂ ಪ್ರಪಶ್ಯಾಮಿ ತನ್ಮೇ ವಿಸ್ತರತೋ ವದ ।
ಇತ್ಯುಕ್ತಃ ಸ ದ್ವಿಜಃ ಪ್ರಾಹ ಜ್ಞಾತ್ವಂ ವಿಜ್ಞಾನಚಕ್ಷುಷಾ ॥29॥

ಶೃಣು ಭೂಪ ಪ್ರವಕ್ಷ್ಯಾಮಿ ತವ ದುರ್ಗತಿಕಾರಣಮ್ ।

ತಿಳಿಸುತ್ತಾ 'ಅನೇಕದಾನಗಳನ್ನು ಕುಪಾತ್ರರಿಗೆ ಮಾಡಿದ, ಜಲದಾನಾದಿಗಳನ್ನು ಮಾಡದ ನಾನು ಇಕ್ಷ್ವಾಕುಕುಲದ ಹೇಮಾಂಗನೆಂಬ ರಾಜನು. ನನ್ನ ಪಾಪದ ಫಲವಾಗಿ ಮೂರು ಜನ್ಮ ಜಾತಕ ಪಕ್ಷಿಯಾಗಿ, ಒಂದು ಜನ್ಮ ಹದ್ದಾಗಿ, ಏಳು ಜನ್ಮಗಳಲ್ಲಿ ನಾಯಿಯಾಗಿ ಹುಟ್ಟಿ ಕೊನೆಗೆ ಈಗ ಹಲ್ಲಿಯಾಗಿ ಹುಟ್ಟಿರುವೆನು. ಇನ್ನು ಇಪ್ಪತ್ತೆಂಟು ಜನ್ಮಗಳಲ್ಲಿ ನಾನು ಹಲ್ಲಿಯಾಗಿಯೆ ಹುಟ್ಟುವೆನು. ನಿಮ್ಮ ಪಾದೋದಕದ ಬಿಂದು ಪತನಮಾತ್ರದಿಂದ ನನಗೆ ಜಾತಿಸ್ಮೃತಿ ಯುಂಟಾಗಿರುವದು. ನನಗೆ ತಿರ್ಯಗ್ಯೋನಿಯು ಬರಲು ಮತ್ತು ಈ ಯೋನಿಗಳಿಂದ ಹೊರಬರುವ ಉಪಾಯವಾವುದೆಂಬುದನ್ನು ತಿಳಿಸಿರಿ ಎಂದು ಪ್ರಾರ್ಥಿಸಿದನು.

ಆಗ ಶ್ರುತದೇವನು ತನ್ನ ವಿಜ್ಞಾನದೃಷ್ಟಿಯಿಂದ ಅವನ ಪೂರ್ವವೃತ್ತಾಂತವನ್ನು ತಿಳಿದು 'ಹೇ ರಾಜನೇ! ನೀನು ಉತ್ತಮರಾದ ಬ್ರಾಹ್ಮಣರಿಗೆ ದಾನವನ್ನು ಮಾಡದೇ ಅನಾಥರಾದ ನಿರ್ಧನರಾದ

ನ ಜಲಂ ತು ತ್ವಯಾ ದತ್ತಂ ವೇಂಕಟಾಹ್ವಯ ಭೂಧರೇ ॥30॥

ತಜ್ಜಲಂ ಸುಲಭಂ ಮತ್ವಾ ನ ಮೌಲ್ಯಮಿತಿ ನಿಶ್ಚಿತಃ ।
ನಾಧ್ವಗಾನಾಂ ದ್ವಿಜಾದೀನಾಂ ಘರ್ಮಕಾಲೇಽಪ್ಯಜಾನತಾ ॥31॥

ತಥಾ ಪಾತ್ರಂ ಸಮುತ್ಸೃಜ್ಯ ಹ್ಯಪಾತ್ರೇ ಪ್ರತಿಪಾದಿತಮ್ ।
ಜಲ್ವಂತಮಗ್ನಿಮುತ್ಸೃಜ್ಯ ನ ಹಿ ಭಸ್ಮನಿ ಹೂಯತೇ ॥32॥

ತುಲಸೀಂ ತು ಸಮುತ್ಸೃಜ್ಯ ಬೃಹತೀ ಪೂಜ್ಯತೇ ನು ಕಿಮ್ ।
ಅನಾಥ ವ್ಯಂಗಪಂಗುತ್ವಂ ನ ಪ್ರಯೋಜಕತಾಮಿಯಾತ್ ॥33॥

ಪಂಗ್ವಾದ್ಯಾ ಯೇಽಪ್ಯನಾಥಾ ಹಿ ದಯಾಪಾತ್ರಂ ಹಿ ಕೇವಲಮ್ ।
ತಪೋನಿಷ್ಠಾ ಜ್ಞಾನನಿಷ್ಠಾಃ ಶ್ರುತಿಶಾಸ್ತ್ರಪರಾಯಣಾಃ ॥34॥

ವಿಷ್ಣುರೂಪಾಃ ಸದಾ ಪೂಜ್ಯಾ ನೇತರೇ ತು ಕದಾಚನ ।
ತತ್ರಾಪಿ ಜ್ಞಾನಿನೋಽತ್ಯರ್ಥಂ ಪ್ರಿಯಾ ವಿಷ್ಣೋಃ ಸದೈವ ಹಿ ॥35॥

ಜ್ಞಾನಿನಾಮಪಿ ಭೂಪಾಲ ವಿಷ್ಣುರೇವ ಸದಾ ಪ್ರಿಯಃ ।
ತಸ್ಮಾತ್ ಜ್ಞಾನೀ ಸದಾ ಪೂಜ್ಯಃ ಪೂಜ್ಯಾತ್ಪೂಜ್ಯತರಃ ಸ್ಮೃತಃ ॥36॥

ನ ಜಲಂ ತು ತ್ವಯಾ ದತ್ತಂ ಸಾಧವೋ ವಾ ನ ಸೇವಿತಾಃ ।
ತೇನ ತೇ ದುರ್ಗತಿಶ್ಚೇಯಂ ಪ್ರಾಪ್ತಾ ಚೇಕ್ಷ್ವಾಕುನಂದನ ॥37॥

ವೇಂಕಟಾದ್ರೌ ಕೃತಂ ಪುಣ್ಯಂ ತುಭ್ಯಂ ದಾಸ್ಯಾಮಿ ಶಾಂತಯೇ ।
ಭೂತಂ ಭವ್ಯಂ ಭವತ್ತೇನ ಕರ್ಮಜಾತಂ ವಿಜೇಷ್ಯಸಿ ॥38॥

ಇತ್ಯುಕ್ತ್ವಾಪ ಉಪಸ್ಪೃಶ್ಯ ದದೌ ಪುಣ್ಯಮನುತ್ತಮಮ್ ।
ಯದ್ದತ್ತಂ ಬ್ರಾಹ್ಮಣೇನಾಪಿ ಸ್ನಾನಂ ಚೈಕದಿನೇ ಕೃತಮ್ ॥39॥

ಜ್ಞಾನಿಗಳಲ್ಲದ ವ್ಯಕ್ತಿಗಳಿಗೆ ದಾನವನ್ನು ಮಾಡಿರುವಿ. ಅವರು ದಯಾಪಾತ್ರರಾಗುವರೇ ಹೊರತು ಶ್ರೋತ್ರಿಯರಾದ ಬ್ರಾಹ್ಮಣರಂತೆ ದಾನಪಾತ್ರರಾಗುವದಿಲ್ಲ. ಸುಲಭಲಭ್ಯವೆಂಬ ಕಾರಣದಿಂದ ನೀನು ಜಲದಾನವನ್ನು ಮಾಡಿರುವದಿಲ್ಲ. ಆದ್ದರಿಂದ ನಿನಗೆ ಈ ದುರ್ಗತಿಯುಂಟಾಗಿರುವದು. ನಿನ್ನ ದೋಷಪರಿಹಾರಾರ್ಥವಾಗಿ ನಾನು ವೇಂಕಟಾದ್ರಿಯಲ್ಲಿ ನಾನು ಮಾಡಿರುವ ಪುಣ್ಯವೆಲ್ಲವನ್ನು ನಿನಗೆ ಕೊಡುವೆನು. ಇದರಿಂದ ನಿನ್ನ ದುಷ್ಕರ್ಮವೆಲ್ಲವೂ ದೂರವಾಗಿ ಸದ್ಗತಿಯುಂಟಾಗುವದೆಂದು ನುಡಿದು ಜಲಧಾರಾಪುರಸ್ಸರವಾಗಿ ತನ್ನೆಲ್ಲ ಪುಣ್ಯವನ್ನು ಹೇಮಾಂಗನಿಗೆ ದಾನಮಾಡಿದನು.ಆ

ತೇನ ಧ್ವಸ್ತಾಖಿಲಾಗಾಸ್ತು ತ್ಯಕ್ತ್ವಾ ಚ ಗೃಹಗೋಧಿಕಾ ।
ರೂಪಂ ಕರ್ಮೋಚಿತಂ ಘೋರಂ ಸದ್ಯೋಽದೃಶ್ಯತ ಪೂರುಷಃ ॥40॥

ದಿವ್ಯಂ ವಿಮಾನಮಾರೂಢೋ ದಿವ್ಯಸ್ರಗ್ವಸ್ತ್ರಭೂಷಣಃ ।
ಪಶ್ಯತಾಮೇವ ಸಾಧೂನಾಂ ಮಿಥಿಲಸ್ಯ ಗೃಹಾಂತರೇ ॥41॥

ಬದ್ಧಾಂಜಲಿಪುಟೋ ಭೂತ್ವಾ ಪರಿಕ್ರಮ್ಯ ಪ್ರಣಮ್ಯ ಚ ।
ಅನುಜ್ಞಾತೋ ಯಯೌ ರಾಜಾ ಸ್ತೂಯಮಾನೋಽಮರೈರ್ದಿವಮ್ ॥42॥

ತತ್ರ ಭುಕ್ತ್ವಾ ಮಹಾಭೋಗಾನ್ವರ್ಷಾಯುತಮತಂದ್ರಿತಃ ।
ಸ ಏವ ಚೇಕ್ಷ್ವಾಕುಕುಲೇ ಕಕುತ್ಸ್ಥೋಽಭೂನ್ಮಹಾರಥಃ ॥43॥

ಸಪ್ತದ್ವೀಪಪ್ರತೀಪಾಲೋ ಬ್ರಹ್ಮಣ್ಯಃ ಸಾಧುಸಮ್ಮತಃ ।
ದೇವೇಂದ್ರಸ್ಯ ಸಮೋ ವಿಷ್ಣೋರಂಶ ಏವಂ ಮಹಾಪ್ರಭುಃ ॥44॥

ಬೋಧಿತಸ್ತು ವಸಿಷ್ಠೇನ ಸರ್ವಾನ್ ಧರ್ಮಾನ್ಮನೋಹರಾನ್ ।
ಅನುಷ್ಠಾಯಾಖಿಲಾನ್ರಾಜಾ ತೇನ ಧ್ವಸ್ತಾಶುಭಾಧಿಕಃ ॥45॥

ದಿವ್ಯಂ ಜ್ಞಾನಂ ಸಮಾಸಾದ್ಯ ವಿಷ್ಣೋಃ ಸಾಯುಜ್ಯಮಾಪ್ತವಾನ್ ।
ತಸ್ಮಾದ್ವೇಂಕಟಶೈಲೇಂದ್ರಃ ಪುಣ್ಯಃ ಪಾಪವಿನಾಶನಃ ॥46॥

ತಸ್ಮಿಂಶ್ಚ ಜನದಾನಂ ತು ವಿಷ್ಣುಲೋಕಪ್ರದಾಯಕಮ್ ।
ಏವಂ ವಃ ಕಥಿತಂ ವಿಪ್ರಾ ಜಲದಾನಸ್ಯ ವೈಭವಮ್ ।
ವೇಂಕಟಾದ್ರೌ ಮಹಾಪುಣ್ಯೇ ಸರ್ವಪಾತಕನಾಶನೇ ॥47॥

ಪುಣ್ಯದ ಪ್ರಭಾವದಿಂದ ಹಲ್ಲಿಯ ಜನ್ಮವನ್ನು ಕಳೆದು ಕೊಂಡು ತತ್ಕ್ಷಣದಲ್ಲಿಯೇ ದಿವ್ಯರೂಪವನ್ನು ಧರಿಸಿದ ಹೇಮಾಂಗನು ಶ್ರುತದೇವನಿಗೆ ನಮಸ್ಕರಿಸಿ, ದೇವತೆಗಳಿಂದಲೂ ಸಹ ಸಮ್ಮಾನಿತನಾಗಿ ದಿವ್ಯವಾದ ವಿಮಾನವನ್ನು ಏರಿ ಸ್ವರ್ಗವನ್ನು ಸಾವಿರಾರು ವರ್ಷಗಳಷ್ಟು ಮಹಾಭೋಗಗಳನ್ನನು ಭವಿಸಿ ಮುಂದೆ ಇಕ್ಷ್ವಾಕುವಿನ ಕುಲದಲ್ಲಿಯೇ ಕಕುತ್ಸ್ಥನೆಂಬ ಹೆಸರಿನ ರಾಜನಾಗಿ ವಿಷ್ಣ್ವಂಶದಿಂದು ಪೇತನಾಗಿ ಬಹುಕಾಲ ರಾಜ್ಯವನ್ನಾಳಿ, ವಸಿಷ್ಠರಿಂದ ಮಾರ್ಗದರ್ಶನವನ್ನು ಪಡೆದು, ಕೊನೆಗೆ ವಿಷ್ಣುವಿನ ಸಾಯುಜ್ಯವನ್ನು ಹೊಂದಿದನು. ಆದ್ದರಿಂದ ವೇಂಕಟಾಚಲವು ಅತ್ಯಂತ ಪುಣ್ಯದಾಯಕವಾಗಿದ್ದು ಸಕಲ ಪಾಪಪರಿಹಾರಕವಾಗಿರುವದು. ಅದರಲ್ಲಿಯೂ ಆ ಪರ್ವತದಲ್ಲಿ

ಇತಿ ಸ್ಕಾಂದೇ 'ಜಲದಾನವೈಭವವರ್ಣನಮ್' ನಾಮ ಷೋಡಶೋಽಧ್ಯಾಯಃ ॥16॥

ಜಲದಾನವು ಶ್ರೇಷ್ಠಾವಾಗಿರುವದು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ ಜಲದಾನವೈಭವವರ್ಣನವೆಂಬ ಹದಿನಾರನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

# ಅಥ ಸಪ್ತದಶೋಽಧ್ಯಾಯಃ

[ಕ್ಷೇತ್ರಮಹಿಮಾನುವರ್ಣನಮ್]

ಶ್ರೀ ಸೂತ ಉವಾಚ–

ವೇಂಕಟಾದ್ರೇಸ್ತು ಮಾಹಾತ್ಮ್ಯಂ ಭೂಯೋಽಪಿ ಪ್ರವದಾಮ್ಯಹಮ್।
ಯುಷ್ಮಾಕಂ ಸಾವಧಾನೇನ ಶ್ರುಣುಧ್ವಂ ಸುಸಮಾಹಿತಾಃ ॥1॥

ಪೃಥಿವ್ಯಾಂ ಯಾನಿ ತೀರ್ಥಾನಿ ಬ್ರಹ್ಮಾಂಡಾಂತರ್ಗತಾನಿ ಚ ।
ತಾನಿ ಸರ್ವಾಣಿ ವರ್ತಂತೇ ವೇಂಕಟಾಹ್ವಯಭೂಧರೇ ॥2॥

ತಸ್ಮಿನ್ನಗೋತ್ತಮೇ ಪುಣ್ಯೇ ವಸಂತಂ ಪುರುಷೋತ್ತಮಮ್ ।
ಶಂಖಚಕ್ರಧರಂ ದೇವಂ ಪೀತಾಂಬರಧರಂ ಶುಭಮ್ ॥3॥

ಕೌಸ್ತುಭಾಲಂಕೃತೋರಸ್ಕಂ ಭಕ್ತಾನಾಮಭಯಪ್ರದಮ್ ।
ದೇವದೇವಂ ವಿಶಾಲಾಕ್ಷಂ ವೇದವೇದ್ಯಂ ಸನಾತನಮ್ ॥4॥

ಅಂಗಕೋಸಲಕರ್ಣಾಟಕಾಶೀಗುರ್ಜರದೇಶಗಾಃ ।
ಚೋಲಕೇರಲಪಾಂಡ್ಯಾದಿಸರ್ವದೇಶಸಮುದ್ಭವಾಃ ॥5॥

ಸಕುಟುಂಬಾಶ್ಚ ಸೇವಾರ್ಥಮಾಯಾಂತಿ ಪ್ರತಿವತ್ಸರಮ್ ।
ದೇವಾಶ್ಚ ಋಷಯಃ ಸಿದ್ಧಾ ಯೋಗಿನಃ ಸನಕಾದಯಃ ॥6॥

# ಹದಿನೇಳನೆಯ ಅಧ್ಯಾಯ

[ಕ್ಷೇತ್ರಮಹಿಮಾನುವರ್ಣನ]

ವೇಂಕಟಾದ್ರಿಯ ಮಾಹಾತ್ಮ್ಯವು ಅತ್ಯಂತ ಶ್ರೇಷ್ಠವಾಗಿರುವದು. ಪೃಥಿವಿಯಲ್ಲಿರುವ ಎಲ್ಲ ತೀರ್ಥಗಳೂ ಸಹ ವೇಂಕಟಾಚಲದಲ್ಲಿರುವವು. ಆ ಪರ್ವತದಲ್ಲಿ ಸರ್ವದೃಶ್ಯನಾಗಿ ವಾಸವಾಗಿರುವ, ಕೌಸ್ತುಭಾಲಂಕೃತನಾದ ಪೀತಾಂಬರ ಧಾರಿಯಾದ ಶ್ರೀನಿವಾಸನ ದರ್ಶನಾರ್ಥವಾಗಿ ಸೇವಾರ್ಥವಾಗಿ ನಾನಾದೇಶಗಳಿಂದ ಜನರು, ದೇವತೆಗಳು, ಋಷಿಗಳು, ಸಿದ್ಧರು, ಮನುಷ್ಯರು ಸಕುಟುಂಬರಾಗಿ ಆಗಮಿಸುವರು. ಭಾದ್ರಪದಮಾಸದಲ್ಲಿ ಶ್ರೀನಿವಾಸನ ಸೇವೆಯನ್ನು ಮಾಡುವ

ಯೇ ಭಾದ್ರಪದಮಾಸೇ ತು ವೇಂಕಟೇಶಮಹೋತ್ಸವೇ ।
ಸೇವಾಂ ಕುರ್ವಂತಿ ತೇ ಸರ್ವೇ ನಿಷ್ಪಾಪಾ ಉತ್ತಮೋತ್ತಮಾಃ ॥7॥

ತತ್ರ ಶ್ರೀವೇಂಕಟೇಶಸ್ಯ ಬ್ರಹ್ಮಾ ಲೋಕಪಿತಾಮಹಃ ।
ಚಕಾರ ಕನ್ಯಾಮಾಸೇ ತು ಧ್ವಜಾರೋಪಮಹೋತ್ಸವಮ್ ॥8॥

ಪ್ರತಿವರ್ಷಂ ಚ ತತ್ಸೇವಾನಿಮಿತ್ತಂ ಸರ್ವಮಾನವಾಃ ।
ಸರ್ವ ದೇವಾಶ್ಚ ಗಂಧರ್ವಾಃ ಸಿದ್ಧಾಃ ಸಾಧ್ಯಾ ಮಹೌಜಸಃ ॥9॥

ಬ್ರಹ್ಮೋತ್ಸವೇ ಭಗವತಃ ಸಮಾಯಾಂತಿ ದ್ವಿಜೋತ್ತಮಾಃ ।
ವಿದ್ಯಾನಾಂ ವೇದವಿದ್ಯೇವ ಮಂತ್ರಾಣಾಂ ಪ್ರಣವೋ ಯಥಾ ॥10॥

ಪ್ರಾಣವತ್ಪ್ರಿಯವಸ್ತೂನಾಂ ಧೇನೂನಾಂ ಕಾಮಧೇನುವತ್ ।
ತಥಾ ವೇಂಕಟಶೈಲೇಂದ್ರಃ ಕ್ಷೇತ್ರಾಣಾಮುತ್ತಮೋತ್ತಮಃ ॥11॥

ಶೇಷವತ್ಸರ್ವನಾಗಾನಾಂ ಪಕ್ಷಿಣಾಂ ಗರುಡೋ ಯಥಾ ।
ದೇವಾನಾಂ ತು ಯಥಾ ವಿಷ್ಣುರ್ವರ್ಣಾನಾಂಬ್ರಾಹ್ಮಣೋಯಥಾ ॥12॥

ತಥಾ ವೇಂಕಟಶೈಲೇಂದ್ರಃ ಕ್ಷೇತ್ರಾಣಾಮುತ್ತಮೋತ್ತಮಃ ।
ಭೂರುಹಾಣಾಂ ಸುರತರುರ್ಭಾರ್ಯೇವ ಸುಹೃದಾಂ ಯಥಾ ॥13॥

ಜನರು ನಿಷ್ಪಾಪರಾಗಿ ಸಕಲ ಇಷ್ಟಾರ್ಥಗಳನ್ನು ಹೊಂದುವರು.

ಸೂರ್ಯನು ಕನ್ಯಾರಾಶಿಯಲ್ಲಿರುವಾಗ ಸರ್ವಲೋಕಪಿತಾಮಹನಾದ ಚತುರ್ಮುಖ ಬ್ರಹ್ಮದೇವರು ಪ್ರತಿವರ್ಷವೂ ಸಹ ಪರಮಾತ್ಮನ ಉತ್ಸವವನ್ನು (ಬ್ರಹ್ಮೋತ್ಸವವನ್ನು) ಆಚರಿಸುವದರಗೋಸ್ಕರವಾಗಿ ಧ್ವಜಾರೋಹಣವನ್ನು ಮಾಡುವನು. ದೇವತೆಗಳೂ ಸಹ ಈ ಉತ್ಸವಾರ್ಥವಾಗಿ ವೇಂಕಟಾಚಲಕ್ಕೆ ಆಗಮಿಸಿ ಕೃತಾರ್ಥರಾಗುವರು.

ವಿದ್ಯೆಗಳಲ್ಲಿ ವೇದವಿದ್ಯೆಯಂತೆ, ಮಂತ್ರಗಳಲ್ಲಿ ಪ್ರಣವ ಮಂತ್ರದಂತೆ, ವೃಕ್ಷಗಳಲ್ಲಿ ಕಲ್ಪತರುವಿನಂತೆ ವೇಂಕಟಾಚಲವು ಕ್ಷೇತ್ರಗಳಲ್ಲಿ ಅತ್ಯಂತ ಶ್ರೇಷ್ಠವಾಗಿರುವದು. ವೈಶಾಖಮಾಸಕ್ಕೆ ಸಮಾನಮಾಸವೂ, ಕೃತಯುಗಕ್ಕೆ ಸಮಾನ ಯುಗವೂ, ವೇದಸಮವಾದ ಶಾಸ್ತ್ರವು ಗಂಗೆಗೆ ಸಮನಾದ ತೀರ್ಥವಿರುವದಿಲ್ಲವೋ ಹಾಗೆ ಭಗವಂತನ ಸ್ಥಾನವಾದ ವೇಂಕಟಾಚಲಕ್ಕೆ ಸಮಾನವಾದ ಕ್ಷೇತ್ರವು ಬೇರೊಂದಿರುವದಿಲ್ಲ. ಯಾವ ಕ್ಷೇತ್ರದ ಸಂಕೀರ್ತನಮಾತ್ರದಿಂದ ಸಕಲ ಪಾಪಗಳು

ತೀರ್ಥಾನಾಂ ತು ಯಥಾ ಗಂಗಾ ತೇಜಸಾಂ ತು ರವಿರ್ಯಥಾ ।
ತಥಾ ವೇಂಕಟಶೈಲೇಂದ್ರಃ ಕ್ಷೇತ್ರಾಣಾಮುತ್ತಮೋತ್ತಮಃ ॥14॥

ಆಯುಧಾನಾಂ ಯಥಾ ವಜ್ರಂ ಲೋಹಾನಾಂ ಕಾಂಚನಂ ಯಥಾ।
ವೈಷ್ಣವಾನಾಂ ಯಥಾ ರುದ್ರೋ ರತ್ನಾನಾಂ ಕೌಸ್ತುಭೋ ಯಥಾ ॥15॥

ತಥಾ ವೇಂಕಟಶೈಲೇಂದ್ರಃ ಕ್ಷೇತ್ರಾಣಾಮುತ್ತಮೋತ್ತಮಃ ।
ನಾನೇನ ಸದೃಶೋ ಲೋಕೇ ವಿಷ್ಣುಪ್ರೀತಿವಿವರ್ಧನಃ ॥16॥

ನ ಮಾಧವಸಮೋ ಮಾಸೋ ನ ಕೃತೇನ ಸಮಂ ಯುಗಮ್ ।
ನ ಚ ವೇದಸಮಾ ಶಾಸ್ತ್ರಂ ನ ತೀರ್ಥಂ ಗಂಗಯಾ ಸಮಮ್ ॥17॥

ನ ಜಲೇನ ಸಮಂ ದಾನಂ ನ ಸುಖಂ ಭಾರ್ಯಯಾ ಸಮಮ್।
ನ ಕೃಷೇಸ್ತು ಸಮಂ ವಿತ್ತಂ ನ ಲಾಭೋ ಜೀವಿತಾತ್ಪರಃ ॥18॥

ನ ತಪೋಽನಶನಾದನ್ಯನ್ನ ದಾನಾತ್ಪರಂ ಸುಖಮ್ ।
ನ ಧರ್ಮಸ್ತು ದಯಾತುಲ್ಯೋ ನ ಜ್ಯೋತಿಶ್ಚಕ್ಷುಷಾ ಸಮಮ್ ॥19॥

ನ ಚ ತೃಪ್ತಿರಶನಾ ತುಲ್ಯಾ ನ ವಾಣಿಜ್ಯಂ ಕೃಷೇಃ ಸಮಮ್ ।
ನ ಧರ್ಮೇಣ ಸಮಂ ಮಿತ್ರಂ ನ ಸತ್ಯೇನ ಸಮಂ ಯಶಃ ॥20॥

ಯಥಾ ತಥಾ ಭಗವತಃ ಸ್ಥಾನೇನ ಸದೃಶಂ ನ ಹಿ ॥21॥

ಯತ್ಕೀರ್ತನಂ ಸಕಲಪಾಪಹರಂ ಮುನೀಂದ್ರಾ
ಯದ್ವಂದನಂ ಸಕಲಸೌಖ್ಯದಮೇವ ಲೋಕೇ ।
ಯತ್ರಾಪಿ ಯಂ ಪ್ರತಿ ಸುರೈರಪಿ ಪೂಜನೀಯಾ
ತಾದೃಗ್ ಮಹಾನ್ಭವತಿ ವೇಂಕಟಶೈಲಮುಖ್ಯಃ ॥22॥

ತಸ್ಯಾನುಭಾವಂ ಪ್ರವದಾಮಿ ಭೂಯಃ ಸಮಸ್ತತೀರ್ಥಾನಿ ವಸಂತಿ ತತ್ರ ।
ಏವಂ ಸಮಸ್ತೇಷು ಚ ಮುಖ್ಯತೀರ್ಥಂ ಶ್ರೀಸ್ವಾಮಿನಾಮಾಽಸ್ತಿ ಸರೋವರಂ ತತ್॥23॥

ನಾಶವಾಗುವವೋ, ಯಾವ ಕ್ಷೇತ್ರ-ಸ್ವಾಮಿಯ ವಂದನದಿಂದ ಸಕಲಸೌಖ್ಯಗಳು ದೊರೆಯುವವೋ ಯಾವ ಕ್ಷೇತ್ರದ ಯಾತ್ರೆಯನ್ನು ಮಾಡಿದ ವ್ಯಕ್ತಿಗಳನ್ನು ದೇವತೆಗಳೂ ಸಹ ಗೌರವಿಸುವರೋ ಅಂತಹ ವೇಂಕಟಾಚಲವಾದದ್ದು ಅತ್ಯಂತ ಶ್ರೇಷ್ಠವಾಗಿರುವದು.

ಮಾಹಾತ್ಮ್ಯಮೇತಸ್ಯ ಮಯೋಚ್ಯತೇ ಕಥಂ
ಯತ್ಪಶ್ಚಿಮೇ ರೋಧಸಿ ಭೂವರಾಹಃ ।
ಆಲಿಂಗ್ಯ ಕಾಂತಾಮತಿಸೌಮ್ಯಮೂರ್ತಿ-
ರ್ವಿರಾಜತೇ ವಿಶ್ವಜನೋಪಕಾರೀ ॥24॥

ಶ್ರೀಸ್ವಾಮಿಪುಷ್ಕರಿಣ್ಯಾಂ ಚ ದಕ್ಷಿಣೇ ವೇಂಕಟೇಶ್ವರಃ ।
ಆಲಿಂಗಿತವಪುರ್ಲಕ್ಷ್ಮ್ಯಾ ವರದೋ ವರ್ತತೇ ಚಿರಮ್ ॥25॥

ಏವಂ ವಃ ಕಥಿತಂ ವಿಪ್ರಾಃ ಕ್ಷೇತ್ರಮಾಹಾತ್ಮ್ಯಮುತ್ತಮಮ್ ।
ಯಃ ಶೃಣೋತಿ ಸದಾ ಭಕ್ತ್ಯಾ ವಿಷ್ಣುಲೋಕೇ ಮಹೀಯತೇ ॥26॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ ಶ್ರೀ 'ಕ್ಷೇತ್ರಮಹಿಮಾನುವರ್ಣನಮ್' ನಾಮ ಸಪ್ತದಶೋಽಧ್ಯಾಯಃ ॥17॥

* * *

ಈ ಪರ್ವತದಲ್ಲಿ ಎಲ್ಲ ತೀರ್ಥಗಳೂ ಸಹ ವಾಸವಾಗಿದ್ದು ಅವುಗಳಲ್ಲಿ ಅಧಿಕತಮವಾದದ್ದು ಸ್ವಾಮಿಪುಷ್ಕರಿಣಿಯು. ಯಾವ ಸ್ವಾಮಿಪುಷ್ಕರಿಣಿಯ ಪಶ್ಚಿಮ ದಡದಲ್ಲಿ ವೈಕುಂಠಾಧಿಪತಿಯಾದ ಪರಮಾತ್ಮನೇ ಆದ ವರಾಹದೇವನು ಭೂದೇವಿಯನ್ನಾಲಿಂಗಿಸಿಕೊಂಡಿರುವನೋ, ದಕ್ಷಿಣ ದಡದಲ್ಲಿ ಲಕ್ಷ್ಮೀಸಮಾಲಿಂಗಿತನಾದ ಶ್ರೀನಿವಾಸನು ವಾಸವಾಗಿರುವನೋ ಅಂತಹ ಸ್ವಾಮಿಪುಷ್ಕರಿಣಿಯ ಮಾಹಾತ್ಮ್ಯವನ್ನು ನಾವು ಹೇಗೆ ತಾನೆ ವರ್ಣನಮಾಡೇವು?

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮ್ಯೆಯಲ್ಲಿ ಧರಣೀ ವರಾಹ ಸಂವಾದದಲ್ಲಿ ಕ್ಷೇತ್ರಮಹಿಮಾನುವರ್ಣನವೆಂಬ ಹದಿನೇಳನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥ ಅಷ್ಟಾದಶೋಽಧ್ಯಾಯಃ ॥18॥

[ವೇಂಕಟೇಶ್ವರವೈಭವಾನುವರ್ಣನಮ್]

ಶ್ರೀ ಸೂತ ಉವಾಚ–

ಅಥೇದಾನೀಂ ಪ್ರವಕ್ಷ್ಯಾಮಿ ವೇಂಕಟೇಶ್ವರವೈಭವಮ್ ।
ಯಚ್ಛೃತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥1॥

ಶ್ರೀವೇಂಕಟೇಶ್ವರಂ ದೇವಂ ಯಃ ಪಶ್ಯತಿ ಸಕೃನ್ನರಃ ।
ಸ ನರೋ ಮುಕ್ತಿಮಾಪ್ನೋತಿ ವಿಷ್ಣುಸಾಯುಜ್ಯಮಾಪ್ನುಯಾತ್ ॥2॥

ದಶವರ್ಷೈಸ್ತು ಯತ್ಪುಣ್ಯಂ ಕ್ರಿಯತೇ ತು ಕೃತೇ ಯುಗೇ ।
ತ್ರೇತಾಯಾಮೇಕವರ್ಷೇಣ ತತ್ಪುಣ್ಯಂ ಸಾಧ್ಯತೇ ನೃಭಿಃ ॥3॥

ದ್ವಾಪರೇ ಪಂಚಮಾಸೇನ ತದ್ದಿನೇನ ಕೃತೌ ಯುಗೇ ।
ತತ್ಫಲಂ ಕೋಟಿಗುಣಿತಂ ನಿಮಿಷೇ ನಿಮಿಷೇ ನೃಣಾಮ್ ॥4॥

ನಿಃಸಂದೇಹಂ ಭವೇದೇವಂ ಶ್ರೀನಿವಾಸವಿಲೋಕಿನಾಮ್ ।
ಶ್ರೀವೇಂಕಟೇಶ್ವರೇ ದೇವೇ ತೀರ್ಥಾನಿ ಸಕಲಾನ್ಯಪಿ ॥5॥

## ಹದಿನೆಂಟನೆಯ ಅಧ್ಯಾಯ

[ವೇಂಕಟೇಶ್ವರ ವೈಭವವರ್ಣನಮ್]

ಇನ್ನು ಮುಂದೆ ಸ್ಮರಣ ಮಾತ್ರದಿಂದ ಸರ್ವ ಪಾಪಗಳನ್ನು ಹರಣಮಾಡುವ ವೇಂಕಟೇಶನ ಮಹಿಮೆಯನ್ನು ನಿಮಗೆ ವರ್ಣನ ಮಾಡುವೆನು.

ಒಂದು ಬಾರಿ ವೇಂಕಟೇಶನನ್ನು ಸಂದರ್ಶಿಸಿ ನಮಿಸುವ ಜನರು ತಮ್ಮೆಲ್ಲ ಪಾಪಗಳನ್ನು ಕಳೆದುಕೊಂಡು ವಿಷ್ಣುಸಾಯುಜ್ಯವನ್ನೇ ಹೊಂದುವರು. ಕೃತಯುಗದಲ್ಲಿ ಹತ್ತುವರ್ಷಗಳ ಸದ್ಧರ್ಮಾನುಷ್ಠಾನದಿಂದ ಬರುವ ಪುಣ್ಯವು ತ್ರೇತಾಯುಗದಲ್ಲಿ ಒಂದು ವರ್ಷದಲ್ಲಿ ದೊರೆಯುವದು. ಅದೇ ಪುಣ್ಯವು ದ್ವಾಪರ ಯುಗದಲ್ಲಿ ಐದು ಮಾಸಗಳ ಸದ್ಧರ್ಮಾನುಷ್ಠಾನದಿಂದ, ಕಲಿಯುಗದಲ್ಲಿ ಒಂದು ದಿನದಲ್ಲಿ ಆ ಪುಣ್ಯವು ದೊರೆಯುವದು. ಈ ಶ್ರೀನಿವಾಸನನ್ನು ಒಂದು ಕ್ಷಣ

ವಿದ್ಯಂತೇ ಸರ್ವದೇವಾಶ್ಚ ಮುನಯಃ ಪಿತರಸ್ತದಾ ।
ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ಸರ್ವದೈವ ವಾ ॥6॥

ಯೇ ಸ್ಮರಂತಿ ಮಹಾದೇವಂ ಶ್ರೀನಿವಾಸಂ ವಿಮುಕ್ತಿದಮ್ ।
ಕೀರ್ತಯಂತ್ಯಥವಾ ವಿಪ್ರಾಸ್ತೇ ಮುಕ್ತಾಃ ಪಾಪಪಂಜರಾತ್ ॥7॥

ನಾರಾಯಣಂ ಪರಂ ದೇವಂ ವೇಂಕಟೇಶಂ ಪ್ರಯಾಂತಿ ವೈ
ಪೂಜಿತಂ ಶಂಖರಾಜೇನ ಸಚ್ಚಿದಾನಂದವಿಗ್ರಹಮ್ ॥8॥

ತಸ್ಯ ಸ್ಮರಣಮಾತ್ರೇಣ ಯಮಪೀಡಾಽಪಿ ನೋ ಭವೇತ್ ।
ಶ್ರೀನಿವಾಸಂ ಮಹಾದೇವಂ ಯೋಽರ್ಚಯಂತಿ ಸಕೃನ್ನರಾಃ ॥9॥

ಕಿಂ ದಾನೈಃ ಕಿಂ ವ್ರತೈಸ್ತೇಷಾಂ ಕಿಂ ತಪೋಭಿಃ ಕಿಮಧ್ವರೈಃ ।
ವೇಂಕಟೇಶಂ ಪರಂ ದೇವಂ ಯೋ ನ ಚಿಂತಯತಿ ಕ್ಷಣಮ್ ॥10॥

ಅಜ್ಞಾನೀ ಸ ಚ ಪಾಪೀ ಸ್ಯಾತ್ಸ ಮೂಕೋ ಬಧಿರಸ್ತಥಾ ।
ಸ ಜಡೋಽಂಧಶ್ಚ ವಿಜ್ಞೇಯಶ್ಛಿದ್ರಂ ತಸ್ಯ ಸದಾ ಭವೇತ್ ॥11॥

ಶ್ರೀನಿವಾಸೇ ಮಹಾದೇವೇ ಸಕೃದ್ದೃಷ್ಟೇ ಮುನೀಶ್ವರಾಃ ।
ಕಿಂ ಕಾಶ್ಯಾ ಗಯಯಾ ಚೈವ ಪ್ರಯಾಗೇನಾಪಿ ಕಿಂ ಫಲಮ್ ॥12॥

ದುರ್ಲಭಂ ಪ್ರಾಪ್ಯ ಮಾನುಷ್ಯಂ ಮಾನವಾ ಇಹ ಭೂತಲೇ ।
ವೇಂಕಟೇಶಂ ಪರಂ ದೇವಂ ಯೇ ಪಶ್ಯಂತ್ಯರ್ಚಯಂತಿ ವಾ ॥13॥

ಸಂದರ್ಶಿಸಿದರೂ ಸಹ ಈ ಪುಣ್ಯದ ಕೋಟಿ ಪಟ್ಟು ಪುಣ್ಯವು ಭಕ್ತರಿಗೆ ದೊರೆಯುವದು.

ಸರ್ವತೀರ್ಥಗಳಿಗೆ ಆಧಾರವಾದ ವೇಂಕಟಾದ್ರಿಗೆ ಅಧಿಪತಿಯಾದ ಶ್ರೀನಿವಾಸನನ್ನು ಸ್ಮರಿಸಿದರೂ ಸಹ ಎಲ್ಲ ತೀರ್ಥಯಾತ್ರೆಯನ್ನಾಚರಿಸಿದ ಪುಣ್ಯವುಂಟಾಗಿ ಸಜ್ಜನರು ಪಾಪಪಂಜರದಿಂದ ವಿಮುಕ್ತರಾಗುವರು. ಶಂಖರಾಜನಿಂದ ಸುಪೂಜಿತವಾದ ಸಚ್ಚಿದಾನಂದ ವಿಗ್ರಹನಾದ ಶ್ರೀನಿವಾಸನನ್ನು ಶರಣುಹೊಂದುವ, ಸ್ಮರಿಸುವ, ಅವನನ್ನು ಪೂಜಿಸುವ ವ್ಯಕ್ತಿಗಳಿಗೆ ಯಮಬಾಧೆಯು ಇರುವದಿಲ್ಲ. ಭಗವಂತನನ್ನು ಅರ್ಚಿಸುವ ವ್ಯಕ್ತಿಗಳಿಗೆ ದಾನ, ತಪಸ್ಸು, ವ್ರತಗಳಿಂದಾಗುವ ಪ್ರಯೋಜನವಾದರೂ ಯಾವದು? ಯಾರು ವೇಂಕಟೇಶನನ್ನು ಸ್ಮರಿಸುವದಿಲ್ಲವೋ ಅವನು ಅಜ್ಞಾನಿಯೂ ಪಾಪಿಯೂ, ಮೂಢನೂ, ಕುರುಡನೂ, ಜಡನೂ, ದೋಷಿಯೂ ಆಗಿದ್ದು ಮಹಾಪಾಪಿಯೆನಿಸುವನು.

ಒಂದು ಬಾರಿ ಶ್ರೀನಿವಾಸನನ್ನು ಸಂದರ್ಶಿಸಿದರೆ ಸಾಕು ಕಾಶೀ, ಗಯಾ, ಪ್ರಯಾಗಾದಿಗಳ

ಜನ್ಮ ತೇಷಾಂ ಹಿ ಸಫಲಂ ತೇ ಕೃತಾರ್ಥಾಶ್ಚ ನೇತರೇ ।
ವೇಂಕಟೇಶೇ ಪರೇ ದೇವೇ ದೃಷ್ಟೇ ವಾ ಪೂಜಿತೇಽಪಿ ವಾ ॥14॥

ಶಂಭುನಾ ಬ್ರಹ್ಮಣಾ ಕಿಂ ವಾ ಶಕ್ರೇಣಾಪ್ಯಖಿಲಾಮರೈಃ ।
ವೇಂಕಟೇಶೇ ಮಹಾದೇವೇ ಭಕ್ತಿಯುಕ್ತಾಶ್ಚ ಯೇ ನರಾಃ ॥15॥

ತೇಷಾಂ ಪ್ರಣಾಮಸ್ಮರಣಪೂಜಾಯುಕ್ತಾಸ್ತು ಯೇ ನರಾಃ ।
ನ ತೇ ಪಶ್ಯಂತಿ ದುಃಖಾನಿ ನೈವ ಯಾಂತಿ ಯಮಾಲಯಮ್ ॥16॥

ಬ್ರಹ್ಮಹತ್ಯಾಸಹಸ್ರಾಣಿ ಸುರಾಪಾನಾಯುತಾನಿ ಚ ।
ದೃಷ್ಟೇ ನಾರಾಯಣೇ ದೇವೇ ವಿಲಯಂ ಯಾಂತಿ ಕೃತ್ಸ್ನಶಃ ॥17॥

ಯೇ ವಾಂಛಂತಿ ಸದಾ ಭೋಗಂ ರಾಜ್ಯಂ ಚ ತ್ರಿದಶಾಲಯೇ ।
ವೇಂಕಟಾದ್ರಿನಿವಾಸಂ ತೇ ಪ್ರಣಮಂತು ಸಕೃನ್ಮುದಾ ॥18॥

ಯಾನಿ ಕಾನಿ ಚ ಪಾಪಾನಿ ಜನ್ಮಕೋಟಿಕೃತಾನಿ ಚ ।
ತಾನಿ ಸರ್ವಾಣಿ ನಶ್ಯಂತಿ ವೇಂಕಟೇಶ್ವರದರ್ಶನಾತ್ ॥19॥

ಸಂಪರ್ಕಾತ್ಕೌತುಕಾಲ್ಲೋಭಾದ್ಭಯಾದ್ವಾಪಿ ಚ ಸಂಸ್ಮರನ್ ।
ವೇಂಕಟೇಶಂ ಮಹಾದೇವಂ ನೇಹಾಮುತ್ರ ಚ ದುಃಖಭಾಕ್ ॥20॥

ವೇಂಕಟಾಚಲದೇವೇಶಂ ಕೀರ್ತಯನ್ನರ್ಚಯನ್ನಪಿ ।
ಅವಶ್ಯಂ ವಿಷ್ಣುಸಾರೂಪ್ಯಂ ಲಭತೇ ನಾತ್ರ ಸಂಶಯಃ ॥21॥

ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇ ಕ್ಷಣಾತ್ ।

ಯಾತ್ರೆಯಾದರೂ ಏಕೆ? ವೇಂಕಟೇಶನನ್ನಾರಾಧಿಸುವವರ ಜನ್ಮವು ಸಫಲವೆನಿಸುವದು. ಬ್ರಹ್ಮರುದ್ರಾದಿಗಳಿಗಿಂತಲೂ ಶ್ರೇಷ್ಠನಾದ ಸರ್ವೋತ್ತಮನಾದ ವೇಂಕಟೇಶನ ಪ್ರಣಾಮ-ಸ್ಮರಣಪೂರ್ವಕವಾಗಿ ಯಾರು ಆರಾಧಿಸುವರೋ ಅವರು ಸಾವಿರಾರು ಬ್ರಹ್ಮಹತ್ಯೆಗಳಿಗೆ ಸಮಾನ ಪಾಪಗಳನ್ನು, ಸುರಾಪಾನಾದಿ ಜನ್ಯದೋಷಗಳನ್ನು ಕಳೆದುಕೊಳ್ಳುವರು. ಯಾವಾಗಲೂ ಸ್ವರ್ಗವನ್ನು ಬಯಸುವ ವ್ಯಕ್ತಿಗಳು ಒಂದು ಬಾರಿ ಶ್ರೀನಿವಾಸನಿಗೆ ನಮಸ್ಕರಿಸಿದರೆ ಸಾಕು ತಮ್ಮ ಇಷ್ಟಾರ್ಥವನ್ನು ಹೊಂದುವರು. ಕೋಟಿ ಕೋಟಿ ಜನ್ಮಗಳಲ್ಲಿ ಮಾಡಿದ ಪಾಪವೂ ಸಹ ವೇಂಕಟೇಶ್ವರನ ದರ್ಶನದಿಂದ ನಾಶವಾಗುವದು. ಸ್ನೇಹದಿಂದ, ಭಯದಿಂದ, ಲೋಭದಿಂದ, ಭಕ್ತಿಯಿಂದಲಾದರೂ ಸಹ ಯಾರು ವೇಂಕಟೇಶನನ್ನು ಸ್ಮರಿಸುವರೋ ಅವರು ಇಹಲೋಕ ಪರಲೋಕಗಳಲ್ಲಿ

ತಥಾ ಪಾಪಾನಿ ಸರ್ವಾಣಿ ವೇಂಕಟೇಶ್ವರದರ್ಶನಾತ್ ॥22॥

ವೇಂಕಟೇಶ್ವರದೇವಸ್ಯ ಭಕ್ತಿರಷ್ಟವಿಧಾ ಸ್ಮೃತಾ ।
ತದ್ಭಕ್ತಜನವಾತ್ಸಲ್ಯಂ ತತ್ಪೂಜಾಪರಿತೋಷಣಮ್ ॥23॥

ಸ್ವಯಂ ತತ್ಪೂಜನಂ ಭಕ್ತ್ಯಾ ತದರ್ಥೇ ದೇಹಚೇಷ್ಟಿತಮ್ ।
ತನ್ಮಾಹಾತ್ಮ್ಯಕಥಾವಾಂಛಾಶ್ರವಣೇಷ್ವಾದರಸ್ತಥಾ ॥24॥

ಸ್ವರನೇತ್ರಶರೀರೇಷು ವಿಕಾರಸ್ಫುರಣಂ ತಥಾ ।
ಶ್ರೀನಿವಾಸಸ್ಯ ದೇವಸ್ಯ ಸ್ಮರಣಂ ಸಂತತಂ ತಥಾ ॥25॥

ವೇಂಕಟಾದ್ರಿನಿವಾಸಂ ತಮಾಶ್ರಿತ್ಯೈವೋಪಜೀವನಮ್ ।
ಏವಮಷ್ಟವಿಧಾ ಭಕ್ತಿರ್ಯಸ್ಮಿನ್ ಮ್ಲೇಂಛೇಽಪಿ ವರ್ತತೇ ॥26॥

ಸ ಏವ ಮುಕ್ತಿಮಾಪ್ನೋತಿ ಶೌನಕಾದ್ಯಾ ಮಹೌಜಸಃ ।
ಭಕ್ತ್ಯಾ ತ್ವನನ್ಯಯಾ ಮುಕ್ತಿರ್ಬ್ರಹ್ಮಜ್ಞಾನೇನ ನಿಶ್ಚಿತಾ ॥27॥

ವೇದಾಂತಶಾಸ್ತ್ರಶ್ರವಣಾದ್ಯತೀನಾಮೂರ್ಧ್ವರೇತಸಾಮ್ ।
ಸಾ ಚ ಮುಕ್ತಿರ್ವಿನಾ ಜ್ಞಾನಂ ವೇದಾಂತಶ್ರವಣೋದ್ಭವಮ್ ।
ಯತ್ಯಾಶ್ರಮಂ ವಿನಾ ವಿಪ್ರಾ ವಿರಕ್ತಿಂ ಚ ವಿನಾ ತಥಾ ॥28॥

ದುಃಖವನ್ನೆಂದೂ ಅನುಭವಿಸುವದಿಲ್ಲ. ವೇಂಕಟೇಶನನ್ನು ಅರ್ಚಿಸುವ ಭಗವದ್ಭಕ್ತನು ವಿಷ್ಣುಸಾರೂಪ್ಯವನ್ನು ಹೊಂದುವನು. ಪ್ರಜ್ವಲಿಸಿದ ಬೆಂಕಿಯು ಇಂಧನವನ್ನು ಸುಡುವಂತೆ ವೇಂಕಟೇಶ್ವರನ ದರ್ಶನವು ಎಲ್ಲ ಪಾಪಗಳನ್ನು ಸುಟ್ಟುಹಾಕುವದು.

ವೇಂಕಟೇಶನ ಭಕ್ತಿಯು ಎಂಟುವಿಧವಾಗಿರುವದು. ವೇಂಕಟೇಶ್ವರನ ಭಕ್ತಜನರಲ್ಲಿ ವಾತ್ಸಲ್ಯವನ್ನು ಹೊಂದುವದು, ಭಗವದ್ಭಕ್ತರನ್ನು ಆರಾಧಿಸಿ, ಅವರನ್ನು ಸಂತೋಷಗೊಳಿಸುವದು., ಭಗವಂತನ ಪೂಜೆಯನ್ನು ಆದರದಿಂದ ವೀಕ್ಷಿಸುವದು, ಧರ್ಮಮಾರ್ಗದಿಂದ ಭಗವಂತನ ಪೂಜಾ ಸಾಮಗ್ರಿಗಳನ್ನು ಸಂಪಾದಿಸಿ ಸ್ವಯಂ ವೇಂಕಟೇಶನನ್ನಾರಾಧಿಸುವದು, ಪರಮಾತ್ಮನ ದಿವ್ಯವಾದ ಮಾಹಾತ್ಮ್ಯಪ್ರತಿಪಾದಕವಾದ ಕಥೆಗಳನ್ನು ಆದರದಿಂದ ಶ್ರವಣಮಾಡುವದು, ಸತತವಾಗಿ ಶ್ರೀನಿವಾಸನ ಸ್ಮರಣವನ್ನು ಮಾಡುವದು, ಭಕ್ತಿಯಿಂದ ಧ್ವನಿ-ನೇತ್ರಗಳಲ್ಲಿ, ಶರೀರದಲ್ಲಿ ಆಗುವ ವಿಕಾರಗಳು, ವೇಂಕಟಾದ್ರಿ ನಿವಾಸನಾದ ಶ್ರೀನಿವಾಸನನ್ನಾಶ್ರಯಿಸಿಯೇ ಜೀವನವನ್ನು ನಡೆಸುವದು. ಹೀಗೆ ಎಂಟುವಿಧವಾದ ಭಕ್ತಿಯನ್ನಾಚರಿಸುವ ವ್ಯಕ್ತಿಯು ಯಾವದೇ ಜಾತಿ-ಯೋನಿಗಳಲ್ಲಿ

ಜನ್ಮ ತೇಷಾಂ ಹಿ ಸಫಲಂ ತೇ ಕೃತಾರ್ಥಾಶ್ಚ ನೇತರೇ ।
ವೇಂಕಟೇಶೇ ಪರೇ ದೇವೇ ದೃಷ್ಟೇ ವಾ ಪೂಜಿತೇಽಪಿ ವಾ ॥14॥

ಶಂಭುನಾ ಬ್ರಹ್ಮಣಾ ಕಿಂ ವಾ ಶಕ್ರೇಣಾಪ್ಯಖಿಲಾಮರೈಃ ।
ವೇಂಕಟೇಶೇ ಮಹಾದೇವೇ ಭಕ್ತಿಯುಕ್ತಾಶ್ಚ ಯೇ ನರಾಃ ॥15॥

ತೇಷಾಂ ಪ್ರಣಾಮಸ್ಮರಣಪೂಜಾಯುಕ್ತಾಸ್ತು ಯೇ ನರಾಃ ।
ನ ತೇ ಪಶ್ಯಂತಿ ದುಃಖಾನಿ ನೈವ ಯಾಂತಿ ಯಮಾಲಯಮ್ ॥16॥

ಬ್ರಹ್ಮಹತ್ಯಾಸಹಸ್ರಾಣಿ ಸುರಾಪಾನಾಯುತಾನಿ ಚ ।
ದೃಷ್ಟೇ ನಾರಾಯಣೇ ದೇವೇ ವಿಲಯಂ ಯಾಂತಿ ಕೃತ್ಸ್ನಶಃ ॥17॥

ಯೇ ವಾಂಛಂತಿ ಸದಾ ಭೋಗಂ ರಾಜ್ಯಂ ಚ ತ್ರಿದಶಾಲಯೇ ।
ವೇಂಕಟಾದ್ರಿನಿವಾಸಂ ತೇ ಪ್ರಣಮಂತು ಸಕೃನ್ಮುದಾ ॥18॥

ಯಾನಿ ಕಾನಿ ಚ ಪಾಪಾನಿ ಜನ್ಮಕೋಟಿಕೃತಾನಿ ಚ ।
ತಾನಿ ಸರ್ವಾಣಿ ನಶ್ಯಂತಿ ವೇಂಕಟೇಶ್ವರದರ್ಶನಾತ್ ॥19॥

ಸಂಪರ್ಕಾತ್ಕೌತುಕಾಲ್ಲೋಭಾದ್ಭಯಾದ್ವಾಪಿ ಚ ಸಂಸ್ಮರನ್ ।
ವೇಂಕಟೇಶಂ ಮಹಾದೇವಂ ನೇಹಾಮುತ್ರ ಚ ದುಃಖಭಾಕ್ ॥20॥

ವೇಂಕಟಾಚಲದೇವೇಶಂ ಕೀರ್ತಯನ್ನರ್ಚಯನ್ನಪಿ ।
ಅವಶ್ಯಂ ವಿಷ್ಣುಸಾರೂಪ್ಯಂ ಲಭತೇ ನಾತ್ರ ಸಂಶಯಃ ॥21॥

ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇ ಕ್ಷಣಾತ್ ।

ಯಾತ್ರೆಯಾದರೂ ಏಕೆ? ವೇಂಕಟೇಶನನ್ನಾರಾಧಿಸುವವರ ಜನ್ಮವು ಸಫಲವೆನಿಸುವದು. ಬ್ರಹ್ಮರುದ್ರಾದಿಗಳಿಗಿಂತಲೂ ಶ್ರೇಷ್ಠನಾದ ಸರ್ವೋತ್ತಮನಾದ ವೇಂಕಟೇಶನ ಪ್ರಣಾಮ-ಸ್ಮರಣಪೂರ್ವಕವಾಗಿ ಯಾರು ಆರಾಧಿಸುವರೋ ಅವರು ಸಾವಿರಾರು ಬ್ರಹ್ಮಹತ್ಯೆಗಳಿಗೆ ಸಮಾನ ಪಾಪಗಳನ್ನು, ಸುರಾಪಾನಾದಿ ಜನ್ಯದೋಷಗಳನ್ನು ಕಳೆದುಕೊಳ್ಳುವರು. ಯಾವಾಗಲೂ ಸ್ವರ್ಗವನ್ನು ಬಯಸುವ ವ್ಯಕ್ತಿಗಳು ಒಂದು ಬಾರಿ ಶ್ರೀನಿವಾಸನಿಗೆ ನಮಸ್ಕರಿಸಿದರೆ ಸಾಕು ತಮ್ಮ ಇಷ್ಟಾರ್ಥವನ್ನು ಹೊಂದುವರು. ಕೋಟಿ ಕೋಟಿ ಜನ್ಮಗಳಲ್ಲಿ ಮಾಡಿದ ಪಾಪವೂ ಸಹ ವೇಂಕಟೇಶ್ವರನ ದರ್ಶನದಿಂದ ನಾಶವಾಗುವದು. ಸ್ನೇಹದಿಂದ, ಭಯದಿಂದ, ಲೋಭದಿಂದ, ಭಕ್ತಿಯಿಂದಲಾದರೂ ಸಹ ಯಾರು ವೇಂಕಟೇಶನನ್ನು ಸ್ಮರಿಸುವರೋ ಅವರು ಇಹಲೋಕ ಪರಲೋಕಗಳಲ್ಲಿ

ತಥಾ ಪಾಪಾನಿ ಸರ್ವಾಣಿ ವೇಂಕಟೇಶ್ವರದರ್ಶನಾತ್ ॥22॥

ವೇಂಕಟೇಶ್ವರದೇವಸ್ಯ ಭಕ್ತಿರಷ್ಟವಿಧಾ ಸ್ಮೃತಾ ।
ತದ್ಭಕ್ತಜನವಾತ್ಸಲ್ಯಂ ತತ್ಪೂಜಾಪರಿತೋಷಣಮ್ ॥23॥

ಸ್ವಯಂ ತತ್ಪೂಜನಂ ಭಕ್ತ್ಯಾ ತದರ್ಥೇ ದೇಹಚೇಷ್ಟಿತಮ್ ।
ತನ್ಮಾಹಾತ್ಮ್ಯಕಥಾವಾಂಛಾಶ್ರವಣೇಷ್ವಾದರಸ್ತಥಾ ॥24॥

ಸ್ವರನೇತ್ರಶರೀರೇಷು ವಿಕಾರಸ್ಫುರಣಂ ತಥಾ ।
ಶ್ರೀನಿವಾಸಸ್ಯ ದೇವಸ್ಯ ಸ್ಮರಣಂ ಸಂತತಂ ತಥಾ ॥25॥

ವೇಂಕಟಾದ್ರಿನಿವಾಸಂ ತಮಾಶ್ರಿತ್ಯೈವೋಪಜೀವನಮ್ ।
ಏವಮಷ್ಟವಿಧಾ ಭಕ್ತಿರ್ಯಸ್ಮಿನ್ ಮ್ಲೇಂಛೇಽಪಿ ವರ್ತತೇ ॥26॥

ಸ ಏವ ಮುಕ್ತಿಮಾಪ್ನೋತಿ ಶೌನಕಾದ್ಯಾ ಮಹೌಜಸಃ ।
ಭಕ್ತ್ಯಾ ತ್ವನನ್ಯಯಾ ಮುಕ್ತಿರ್ಬ್ರಹ್ಮಜ್ಞಾನೇನ ನಿಶ್ಚಿತಾ ॥27॥

ವೇದಾಂತಶಾಸ್ತ್ರಶ್ರವಣಾದ್ಯತೀನಾಮೂರ್ಧ್ವರೇತಸಾಮ್ ।
ಸಾ ಚ ಮುಕ್ತಿರ್ವಿನಾ ಜ್ಞಾನಂ ವೇದಾಂತಶ್ರವಣೋದ್ಭವಮ್ ।
ಯತ್ಯಾಶ್ರಮಂ ವಿನಾ ವಿಪ್ರಾ ವಿರಕ್ತಿಂ ಚ ವಿನಾ ತಥಾ ॥28॥

ದುಃಖವನ್ನೆಂದೂ ಅನುಭವಿಸುವದಿಲ್ಲ. ವೇಂಕಟೇಶನನ್ನು ಅರ್ಚಿಸುವ ಭಗವದ್ಭಕ್ತನು ವಿಷ್ಣುಸಾರೂಪ್ಯವನ್ನು ಹೊಂದುವನು. ಪ್ರಜ್ವಲಿಸಿದ ಬೆಂಕಿಯು ಇಂಧನವನ್ನು ಸುಡುವಂತೆ ವೇಂಕಟೇಶ್ವರನ ದರ್ಶನವು ಎಲ್ಲ ಪಾಪಗಳನ್ನು ಸುಟ್ಟುಹಾಕುವದು.

ವೇಂಕಟೇಶನ ಭಕ್ತಿಯು ಎಂಟುವಿಧವಾಗಿರುವದು. ವೇಂಕಟೇಶ್ವರನ ಭಕ್ತಜನರಲ್ಲಿ ವಾತ್ಸಲ್ಯವನ್ನು ಹೊಂದುವದು, ಭಗವದ್ಭಕ್ತರನ್ನು ಆರಾಧಿಸಿ, ಅವರನ್ನು ಸಂತೋಷಗೊಳಿಸುವದು., ಭಗವಂತನ ಪೂಜೆಯನ್ನು ಆದರದಿಂದ ವೀಕ್ಷಿಸುವದು, ಧರ್ಮಮಾರ್ಗದಿಂದ ಭಗವಂತನ ಪೂಜಾ ಸಾಮಗ್ರಿಗಳನ್ನು ಸಂಪಾದಿಸಿ ಸ್ವಯಂ ವೇಂಕಟೇಶನನ್ನಾರಾಧಿಸುವದು, ಪರಮಾತ್ಮನ ದಿವ್ಯವಾದ ಮಾಹಾತ್ಮ್ಯಪ್ರತಿಪಾದಕವಾದ ಕಥೆಗಳನ್ನು ಆದರದಿಂದ ಶ್ರವಣಮಾಡುವದು, ಸತತವಾಗಿ ಶ್ರೀನಿವಾಸನ ಸ್ಮರಣವನ್ನು ಮಾಡುವದು, ಭಕ್ತಿಯಿಂದ ಧ್ವನಿ–ನೇತ್ರಗಳಲ್ಲಿ, ಶರೀರದಲ್ಲಿ ಆಗುವ ವಿಕಾರಗಳು, ವೇಂಕಟಾದ್ರಿ ನಿವಾಸನಾದ ಶ್ರೀನಿವಾಸನನ್ನಾಶ್ರಯಿಸಿಯೇ ಜೀವನವನ್ನು ನಡೆಸುವದು. ಹೀಗೆ ಎಂಟುವಿಧವಾದ ಭಕ್ತಿಯನ್ನಾಚರಿಸುವ ವ್ಯಕ್ತಿಯು ಯಾವದೇ ಜಾತಿ–ಯೋನಿಗಳಲ್ಲಿ

ಸರ್ವೇಷಾಂ ಚೈವ ವರ್ಣಾನಾಮಖಿಲಾಶ್ರಮಿಣಾಮಪಿ ।
ವೇಂಕಟೇಶ್ವರದೇವಸ್ಯ ದರ್ಶನಾದೇವ ಕೇವಲಮ್ ॥29॥

ಕ್ರಿಮಿಕೀಟಾಶ್ಚ ದೇವಾಶ್ಚ ಮುನಯಶ್ಚ ತಪೋಧನಾಃ ।
ತುಲ್ಯಾ ವೇಂಕಟಶೈಲೇಂದ್ರೇ ಶ್ರೀನಿವಾಸಪ್ರಸಾದತಃ ॥30॥

ಪಾಪಂ ಕೃತಂ ಮಯಾಽನೇಕಮಿತಿ ಮಾ ಕ್ರಿಯತಾಂ ಭಯಮ್ ।
ಮಾ ಗರ್ವಃ ಕ್ರಿಯತಾಂ ಪುಣ್ಯಂ ಮಯಾಽಽಕಾರೀತಿ ವಾ ಜನೈಃ ॥31॥

ವೇಂಕಟೇಶೇ ಮಹಾದೇವೇ ಶ್ರೀನಿವಾಸೇ ವಿಲೋಕಿತೇ ।
ನ ನ್ಯೂನಾ ನಾಧಿಕಾಶ್ಚ ಸ್ಯುಃ ಕಿಂ ತು ಸರ್ವೇ ಮಹಾಜನಾಃ ॥32॥

ವೇಂಕಟಾಖ್ಯೇ ಮಹಾಪುಣ್ಯೇ ಸರ್ವಪಾತಕನಾಶನೇ ।
ಶ್ರೀನಿವಾಸಂ ಪರಂ ದೇವಂ ಯಃ ಪಶ್ಯತಿ ಸಭಕ್ತಿಕಮ್ ॥33॥

ನ ತೇನ ತುಲ್ಯತಾಮೇತಿ ಚತುರ್ವೇದ್ಯಪಿ ಭೂತಲೇ ॥34॥

ವೇಂಕಟೇಶ್ವರದೇವೇಶಂ ಯಃ ಪೂಜಯತಿ ಭಕ್ತಿತಃ ।

ಜನಿಸಿದ್ದರೂ ಸಹ ಮುಕ್ತಿಯನ್ನು ಹೊಂದುವನು.

ಅನನ್ಯವಾದ ಭಕ್ತಿಯಿಂದ, ಯಥಾಯೋಗ್ಯವಾದ ಬ್ರಹ್ಮಜ್ಞಾನದಿಂದಲೇ ಮುಕ್ತಿಯು ದೊರಕುವದು. ಆ ಮುಕ್ತಿಯಾದರೋ ವೇದಾಂತ ಶ್ರವಣ ಜನ್ಯವಾದ ಜ್ಞಾನವಿಲ್ಲದೇನೇ. ವಿಷಯವೈರಾಗ್ಯವಿಲ್ಲದೇನೆ ದೊರೆಯುವದಿಲ್ಲ. ಭಗವಂತನಾದ ವೇಂಕಟೇಶನ ದರ್ಶನ ಮಾತ್ರದಿಂದ ನಿಖಿಲ ಪಾಪಗಳು ನಾಶವನ್ನು ಹೊಂದಿ ಮುಕ್ತಿಸಾಧನವಾದ ಜ್ಞಾನ, ವಿಷಯವೈರಾಗ್ಯಗಳು ಅನಾಯಾಸವಾಗಿ ದೊರೆತು ಕೊನೆಗೆ ಮುಕ್ತಿಯೇ ಉಂಟಾಗುವದು. ಕ್ರಿಮಿಕೀಟಗಳೂ, ದೇವತೆಗಳೂ, ಮಹರ್ಷಿಗಳೂ, ತಪಸ್ಸಂಪನ್ನರೂ, ವೇಂಕಟಾಚಲದಲ್ಲಿ ಶ್ರೀನಿವಾಸನ ಪ್ರಸಾದ ಬಲದಿಂದ ಅವರವರ ಯೋಗ್ಯತೆ–ತಾರತಮ್ಯಾನುಸಾರವಾಗಿ ವೇಂಕಟೇಶ್ವರನ ಭಕ್ತರೆಂಬ ವಿಷಯದಲ್ಲಿ ಸಮಾನರೆನಿಸುವರು. ಪರದೈವನಾದ ವೇಂಕಟಾಚಲ ನಿವಾಸಿಯಾದ ಶ್ರೀನಿವಾಸನನ್ನು ಒಮ್ಮೆಯಾದರೂ ನೋಡಿದವರಲ್ಲಿ ಹೆಚ್ಚು–ಕಡಿಮೆಯುಂಬ ಭೇದವಿರುವದಿಲ್ಲ. ಅವರೆಲ್ಲರೂ ಮಹಾಪುರುಷರೇ ಸರಿ. ಮಹಾಪುಣ್ಯಪ್ರದವಾದ ಕಲ್ಮಷಾಪಹಾರಕವಾದ ವೇಂಕಟ ಶೈಲದಲ್ಲಿ ಯಾರು ಭಕ್ತಿಯುಕ್ತನಾಗಿ ಶ್ರೀನಿವಾಸನನ್ನು ನೋಡುವನೋ ಅವನಿಗೆ ನಾಲ್ಕು ವೇದಗಳನ್ನು ಅಧ್ಯಯನ ಮಾಡಿದವನೂ ಸಹ ಸಮನೆನಿಸುವದಿಲ್ಲ. ಸರ್ವೋತ್ತಮನಾದ ವೇಂಕಟೇಶ್ವರನನ್ನು ಯಾರು ಭಕ್ತಿಯಿಂದ ಪೂಜಿಸುವರೋ ಅವರು ಕುಲಕೋಟಿಗಳಿಂದ ಸಹಿತರಾಗಿ ವಿಷ್ಣುಲೋಕವನ್ನು ಹೊಂದುವರು.

ಸ ಕೋಟಿಕುಲಸಂಯುಕ್ತಃ ಪ್ರಯಾತಿ ಹರಿಮಂದಿರಮ್ ॥35॥

ಶ್ರೀನಿವಾಸಾಚ್ಚ ನ ಸಮಂ ನಾಧಿಕಂ ಪುಣ್ಯಮಸ್ತಿ ವೈ ।
ವೇಂಕಟಾದ್ರಿನಿವಾಸಂ ತಂ ದ್ವೇಷ್ಟಿ ಯೋ ಮೋಹಮಾಸ್ಥಿತಃ ॥36॥

ಬ್ರಹ್ಮಹತ್ಯಾಯುತಂ ತೇನ ಕೃತಂ ನರಕಕಾರಣಮ್ ।
ತತ್ಸಂಭಾಷಣಮಾತ್ರೇಣ ಮಾನವೋ ನರಕಂ ವ್ರಜೇತ್ ॥37॥

ಶ್ರೀನಿವಾಸಪರಾ ವೇದಾಃ ಶ್ರೀನಿವಾಸಪರಾ ಮಖಾಃ ।
ಶ್ರೀನಿವಾಸಪರಾಃ ಸರ್ವೇ ತಸ್ಮಾದನ್ಯನ್ನ ವಿದ್ಯತೇ ॥38॥

ಅನ್ಯತ್ಸರ್ವಂ ಪರಿತ್ಯಜ್ಯ ಶ್ರೀನಿವಾಸಂ ಸಮಾಶ್ರಯೇತ್ ।
ಸರ್ವಯಜ್ಞತಪೋದಾನತೀರ್ಥಸ್ನಾನೇ ತು ಯತ್ಫಲಮ್ ।
ತತ್ಫಲಂ ಕೋಟಿಗುಣಿತಂ ಶ್ರೀನಿವಾಸಸ್ಯ ಸೇವಯಾ ॥39॥

ವೇಂಕಟಾದ್ರಿನಿವಾಸಂ ತಂ ಚಿಂತಯನ್ಘಟಿಕಾದ್ವಯಮ್ ।
ಕುಲೈಕವಿಂಶತಿಂ ಧೃತ್ವಾ ವಿಷ್ಣುಲೋಕೇ ಮಹೀಯತೇ ॥40॥

ಸ್ವಾಮಿಪುಷ್ಕರಿಣೀತೀರ್ಥೇ ಸ್ನಾನಂ ದೇವಸ್ಯ ದರ್ಶನಮ್ ।
ಯದಿ ಲಭ್ಯೇತ ವೈ ಪುಂಸಾಂ ಕಿಂ ಗಂಗಾಜಲಸೇವಯಾ ॥41॥

ಶ್ರೀನಿವಾಸನ ಕೃಪೆಗೆ ಸಮಾನವೂ ಅಧಿಕವೂ ಆದ ಪುಣ್ಯವು ಇಲ್ಲವೇ ಇಲ್ಲ. ಯಾವ ಮನುಷ್ಯನು ಮೋಹಕ್ಕೊಳಗಾಗಿ ವೇಂಕಟಾಚಲ ನಿವಾಸಿಯಾದ ಸ್ವಾಮಿಯನ್ನು ದ್ವೇಷಿಸುವನೋ ಅತನು ಹತ್ತು ಸಾವಿರ ಬ್ರಹ್ಮಹತ್ಯೆಗಳನ್ನು ಮಾಡಿದವನಂತೆ ಘೋರವಾದ ನರಕ ಭಾಜನನಾಗುವನು. ಅಂತಹವನೊಂದಿಗೆ ಮಾತನಾಡುವವನೂ ಸಹ ನರಕವನ್ನು ಹೊಂದುವನು.

ಸಕಲ ವೇದಗಳೂ ಸಹ ಶ್ರೀನಿವಾಸನನ್ನೇ ಸ್ತುತಿಸುವವು. ಸಕಲ ಯಜ್ಞಗಳೂ ಶ್ರೀನಿವಾಸನ ಪ್ರೀತಿಗಾಗಿ ಮಾಡಲ್ಪಟ್ಟಿದ್ದು ಸಕಲ ಸತ್ಕರ್ಮಗಳೂ ಶ್ರೀನಿವಾಸನಿಗಾಗಿಯೇ ಅರ್ಪಿಸಲ್ಪಡುತ್ತವೆ. ಆತನಿಗಿಂತ ಮಿಗಿಲಾದ ವಸ್ತುವು ಮತ್ತೊಂದಿರುವದಿಲ್ಲ. ಇತರ ಸಕಲ ಕರ್ಮಗಳನ್ನು ಬಿಟ್ಟು ಶ್ರೀನಿವಾಸನನ್ನೇ ಆಶ್ರಯಿಸಬೇಕು. ಸಕಲ ಯಜ್ಞ, ತಪಸ್ಸು, ದಾನ, ತೀರ್ಥಸ್ನಾನಗಳು ಇವುಗಳಿಂದ ಯಾವ ಫಲವು ದೊರಕುವದೋ ಅದರ ಕೋಟಿಪಟ್ಟು ಪುಣ್ಯವು ಶ್ರೀನಿವಾಸನ ಸೇವೆಯಿಂದ ಲಭಿಸುವದು.

ವೇಂಕಟಾಚಲಾಧೀಶನಾದ ಶ್ರೀನಿವಾಸನನ್ನು ಎರಡು ಘಳಿಗೆಗಳಷ್ಟು ಕಾಲವಾದರೂ ಚಿಂತಿಸಿದರೆ ಮನುಷ್ಯನು ಇಪ್ಪತ್ತೊಂದು ಕುಲಗಳನ್ನುದ್ಧರಿಸಿ ವಿಷ್ಣುಲೋಕದಲ್ಲಿ ಮರ್ಯಾದೆಯನ್ನು

ವೇಂಕಟೇಶಂ ಪರಂ ದೇವಂ ಯಃ ಕದಾಪಿ ನ ಪಶ್ಯತಿ ।
ಸಂಕರಃ ಸ ತು ವಿಜ್ಞೇಯೋ ನ ಪಿತುರ್ಬೀಜಸಂಭವಃ ॥42॥

ತಸ್ಮಾತ್ಸರ್ವಪ್ರಯತ್ನೇನ ವೇಂಕಟೇಶೋ ದಯಾನಿಧಿಃ ।
ದ್ರಷ್ಟವ್ಯೋಽತಿಪ್ರಯತ್ನೇನ ಪರಲೋಕೇಚ್ಛಯಾ ದ್ವಿಜಾಃ ॥43॥

ಏವಂ ವಃ ಕಥಿತಂ ವಿಪ್ರಾ ವೇಂಕಟೇಶಸ್ಯ ವೈಭವಮ್ ॥44॥

ಯಸ್ತ್ವೇಚ್ಛೃಣುಯಾನ್ನಿತ್ಯಂ ಪಠತೇ ಚ ಸಭಕ್ತಿಕಮ್ ।
ಸ ವೈ ವೇಂಕಟನಾಥಸ್ಯ ಸೇವಾಫಲಮವಾಪ್ನುಯಾತ್ ॥45॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ
ವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ
'ಶ್ರೀವೇಂಕಟೇಶ್ವರವೈಭವಾನುವರ್ಣನಮ್'ನಾಮ ಅಷ್ಟಾದಶೋಽಧ್ಯಾಯಃ ॥18॥

* * *

ಹೊಂದುವನು. ಸ್ವಾಮಿಪುಷ್ಕರಿಣಿಯ ಸ್ನಾನ, ಶ್ರೀನಿವಾಸನ ದರ್ಶನವನ್ನು ಹೊಂದಿದ ಜನರಿಗೆ ಗಂಗಾದಿ ತೀರ್ಥಗಳ ಸೇವೆಯಿಂದೇನಾಗಬೇಕಾಗಿದೆ. ಪರದೈವನೆನಿಸಿದ ವೇಂಕಟೇಶ್ವರನನ್ನು ಯಾವನು ಒಮ್ಮೆಯಾದರೂ ನೋಡುವದಿಲ್ಲವೋ ಅವನನ್ನು ತಂದೆಯ ಮಗನಲ್ಲವೆಂದೂ ಸಂಕರಜಾತಿಯವನೆಂದು ಭಾವಿಸಬೇಕಾಗುವದು. ಆದ್ದರಿಂದ ಪರಲೋಕದ ಸೌಖ್ಯವನ್ನು ಬಯಸುವವರು ಸರ್ವಪ್ರಯತ್ನಗಳಿಂದಲೂ ದಯಾಸಮುದ್ರನಾದನಾದ ಶ್ರೀನಿವಾಸನನ್ನು ಸಂದರ್ಶಿಸಲೇ ಬೇಕು.

ಯಾರು ಈ ಅಧ್ಯಾಯವನ್ನು ಭಕ್ತಿಯಿಂದ ಶ್ರವಣಮಾಡುವರೋ ಪಠಿಸುವರೋ ಅವರು ವೇಂಕಟೇಶ್ವರನನ್ನು ಸೇವಿಸಿದ ಫಲವನ್ನು ಪಡೆಯುವರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ ವೇಂಕಟೇಶವೈಭವಾನುವರ್ಣನವೆಂಬ ಹದಿನೆಂಟನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥ ಏಕೋನವಿಂಶತಿತಮೋಽಧ್ಯಾಯಃ

[ಪಾಪವಿನಾಶತೀರ್ಥಮಹಿಮಾನುವರ್ಣನಮ್]

ಶ್ರೀ ಸೂತ ಉವಾಚ–

ಅಥಾತಃ ಸಂಪ್ರವಕ್ಷ್ಯಾಮಿ ವೇಂಕಟಾಚಲವೈಭವಮ್ ।
ಯುಷ್ಮಾಕಂ ಸಾವಧಾನೇನ ಶೃಣುಧ್ವಂ ಸುಸಮಾಹಿತಾಃ ॥1॥

ಲಕ್ಷಕೋಟಿಸಹಸ್ರಾಣಿ ಸರಾಂಸಿ ಸರಿತಸ್ತಥಾ ।
ಸಮುದ್ರಾಶ್ಚ ಮಹಾಪುಣ್ಯಾ ವನಾನ್ಯಪ್ಯಾಶ್ರಮಾ ಅಪಿ ॥2॥

ಪುಣ್ಯಾನಿ ಕ್ಷೇತ್ರಜಾತಾನಿ ವೇದಾರಣ್ಯಾದಿಕಾನಿ ಚ ।
ಮುನಯಶ್ಚ ವಸಿಷ್ಠಾದ್ಯಾಃ ಸಿದ್ಧಚಾರಣಕಿನ್ನರಾಃ ॥3॥

ಲಕ್ಷ್ಮ್ಯಾ ಸಹ ಧರಣ್ಯಾ ಚ ಭಗವಾನ್ಮಧುಸೂದನಃ ।
ಸಾವಿತ್ರ್ಯಾ ಚ ಸರಸ್ವತ್ಯಾ ಸಹೈವ ಚತುರಾನನಃ ॥4॥

ಪಾರ್ವತ್ಯಾ ಸಹ ದೇವೇಶಸ್ತ್ರ್ಯಂಬಕಸ್ತ್ರಿಪುರಾಂತಕಃ ।
ಹೇರಂಬಷಣ್ಮುಖಾದ್ಯಾಶ್ಚ ದೇವಾಃ ಸೇಂದ್ರಪುರೋಗಮಾಃ ॥5॥

## ಹತ್ತೊಂಬತ್ತನೆಯ ಅಧ್ಯಾಯ

[ಪಾಪವಿನಾಶನ ತೀರ್ಥಮಹಿಮಾ]

ಸೂತರು ನುಡಿಯುತ್ತಾರೆ– ಇನ್ನು ಮುಂದೆ ನಾನು ನಿಮಗೆ ಸ್ವಾಮಿಪುಷ್ಕರಿಣಿಯ ಮಾಹಾತ್ಮೆಯನ್ನು ತಿಳಿಸುವೆನು. ಏಕಾಗ್ರ ಚಿತ್ತದಿಂದ ಕೇಳಿರಿ.

ಪುಣ್ಯಕರವಾದ ಅಸಂಖ್ಯತೀರ್ಥಗಳು, ನದಿ–ಸಮುದ್ರ–ಕ್ಷೇತ್ರಾದಿಗಳಿಗೆ ಅಭಿಮಾನಿಗಳಾದ ದೇವತೆಗಳು, ವಸಿಷ್ಠಾದಿ ಮಹರ್ಷಿಗಳು, ಪಾರ್ವತೀ, ಸಹಿತನಾದ ಶಿವ, ಷಣ್ಮುಖ, ವಿನಾಯಕ, ದೇವೇಂದ್ರಾದಿ ದೇವತೆಗಳ ಸಮೂಹದಿಂದ ಸಹಿತನಾದ, ಪಾರ್ವತ್ಯಾದಿಗಳಿಂದ ಸಂಸೇವಿತನಾದ ರುದ್ರದೇವರು, ಇಂದ್ರನೇ ಮೊದಲಾದ ದೇವತೆಗಳು, ಸೂರ್ಯಾದಿ ನವಗ್ರಹಗಳು, ಅಷ್ಟವಸುಗಳು, ಪಿತೃದೇವತೆಗಳು

ಆದಿತ್ಯಾದಿ ಗ್ರಹಾಶ್ಚೈವ ತಥಾಷ್ಟವಸವೋ ದ್ವಿಜಾಃ ।
ಪಿತರೋ ಲೋಕಪಾಲಾಶ್ಚ ತಥಾನ್ಯೇ ದೇವತಾಗಣಾಃ ॥6॥

ಮಹಾಪಾತಕಸಂಘಾನಾಂ ನಾಶನೇ ಲೋಕಪಾವನೇ ।
ದಿವಾನಿಶಂ ವಸಂತ್ಯಂತರ್ವೇಂಕಟಾಚಲಮೂರ್ಧನಿ ॥7॥

ತಸ್ಯ ದರ್ಶನಮಾತ್ರೇಣ ಬುದ್ಧಿಸೌಖ್ಯಂ ನೃಣಾಂ ಭವೇತ್ ।
ತನ್ಮೂರ್ಧನಿ ಕೃತಾವಾಸಾಃ ಸಿದ್ಧಚಾರಣಯೋಷಿತಃ ॥8॥

ಪೂಜಯಂತಿ ಸದಾಕಾಲಂ ವೇಂಕಟೇಶಂ ಕೃಪಾನಿಧಿಮ್ ।
ಕೋಟಯೋ ಬ್ರಹ್ಮಹತ್ಯಾನಾಮಗಮ್ಯಾಗಮ್ಯ ಕೋಟಯಃ ॥9॥

ಅಂಗಲಗ್ನಾ ವಿನಶ್ಯಂತಿ ವೇಂಕಟಾಚಲಮಾರುತೈಃ ॥10॥

ವೇಂಕಟಾದ್ರಿಂ ಗಿರಿಂ ತಂ ತು ಪ್ರಾರ್ಥಯೇತ್ಪುಣ್ಯವರ್ಧನಮ್ ।
ಸ್ವರ್ಣಾಚಲ ಮಹಾಪುಣ್ಯ ಸರ್ವದೇವ ನಿಷೇವಿತ ॥11॥

ಬ್ರಹ್ಮಾದಯೋऽಪಿ ಯಾಂ ದೇವಾಃ ಸೇವಂತೇ ಶ್ರದ್ಧಯಾ ಸಹ ।
ತಂ ಭವಂತಮಹಂ ಪದ್ಭ್ಯಾಮಾಕ್ರಮೇಯಂ ನಗೋತ್ತಮ ॥12॥

ಕ್ಷಮಸ್ವ ತದಘಂ ಮೇऽದ್ಯ ದಯಯಾ ಪಾಪಚೇತಸಃ ।
ತ್ವನ್ಮೂರ್ಧನಿ ಕೃತಾವಾಸಂ ಮಾಧವಂ ದರ್ಶಯಸ್ವ ಮೇ ॥13॥

ಇತರ ದೇವತಾಸಮೂಹಗಗಳು ಈ ಪರ್ವತ ಪ್ರದೇಶದಲ್ಲಿ ಭಕ್ತರ ಪಾಪಗಳನ್ನು ಕಳೆಯುತ್ತಾ, ಸಜ್ಜನರನ್ನುದ್ಧರಿಸುತ್ತಾ ಭಗವಂತನನ್ನು ಸೇವಿಸುತ್ತಾ ವಿರಾಜಿಸುತ್ತಿರುವರು. ವೇಂಕಟಾಚಲದ ದರ್ಶನ ಮಾತ್ರದಿಂದ ಮನುಷ್ಯರಿಗೆ ಸದ್ಬುದ್ಧಿಯುಂಟಾಗುವದು. ಪರ್ವತದ ಮೇಲಿರುವ ಸಿದ್ಧಚಾರಣಸ್ತ್ರೀಯರು ವೇಂಕಟೇಶನನ್ನು ಯಾವಗಲೂ ಪೂಜಿಸುತ್ತಿರುವರು. ಅಸಂಖ್ಯ ಬ್ರಹ್ಮಹತ್ಯಾ ಅಗಮ್ಯಗಮನ, ಅಭಕ್ಷ್ಯಭಕ್ಷಣಾದಿ ಪಾಪಗಳೆಲ್ಲವೂ ವೇಂಕಟಾಚಲದಿಂದ ಬರುವ ಗಾಳಿಯ ಸಂಪರ್ಕದಿಂದಲೇ ನಾಶವನ್ನು ಹೊಂದುವವು.

ವೇಂಕಟಾಚಲವನ್ನು ಏರುವ ಮೊದಲು ವೇಂಕಟಾಚಲವನ್ನು ಹೀಗೆಂದು ಪ್ರಾರ್ಥಿಸಬೇಕು. 'ಸರ್ವದೇವರಿಂದ ಸಂಸೇವಿತನಾದ ಸ್ವರ್ಣಾಚಲವೇ! ಬ್ರಹ್ಮಾದಿ ದೇವತೆಗಳೂ ಸಹ ಯಾರನ್ನು ಭಕ್ತಿಯಿಂದ ಸಂಸೇವಿರೋ ಅಂತಹ ಭಗವಂತನಿಗೆ ಆಧಾರನಾದ್ದರಿಂದ ಸರ್ವದೇವತೆಗಳಿಂದ ಸ್ತುತ್ಯನಾದ ನಿನ್ನನ್ನು ನನ್ನ ಕಾಲುಗಳಿಂದ ತುಳಿದು ಮೇಲೇರುತ್ತಿರುವೆನು. ನನ್ನ ಈ ಅಪರಾಧವನ್ನು ಕ್ಷಮಿಸು. ನಿನ್ನ ಮೇಲೆ ವಾಸವಾಗಿರುವ ಮಾಧವನ ದರ್ಶನವನ್ನು ಮಾಡಿಸು ಎಂದು ಪ್ರಾರ್ಥಿಸಿ

ಪ್ರಾರ್ಥಯಿತ್ವಾ ನರಸ್ತ್ವೇವಂ ವೇಂಕಟಾದ್ರಿಂ ನಗೋತ್ತಮಮ್ ।
ತತೋ ಮೃದುಪದಂ ಗಚ್ಛೇತ್ಪಾವನಂ ವೇಂಕಟಾಚಲಮ್ ॥14॥

ವೇಂಕಟಾದ್ರೌ ಮಹಾಪುಣ್ಯೇ ಸರ್ವಪಾತಕನಾಶನೇ ।
ಸ್ವಾಮಿಪುಷ್ಕರಿಣೀತೀರ್ಥೇ ಸ್ನಾತ್ವಾ ನಿಯಮಪೂರ್ವಕಮ್ ॥15॥

ಪಿಂಡದಾನಂ ತತಃ ಕುರ್ಯಾದಪಿ ಸರ್ಷಪಮಾತ್ರಕಮ್ ।
ಶಮೀದಲಸಮಾನಾನ್ವಾ ದದ್ಯಾತ್ಪಿಂಡಾನ್ಪಿತೄನ್ಪ್ರತಿ ॥16॥

ಸ್ವರ್ಗಸ್ಥಾ ಮೋಕ್ಷಮಾಯಾಂತಿ ಸ್ವರ್ಗಂ ನರಕವಾಸಿನಃ ॥17॥

ತತಸ್ತಸ್ಯೋಪರಿ ಮಹತ್ಸರ್ವಲೋಕೇಷು ವಿಶ್ರುತಮ್
ಸರ್ವತೀರ್ಥೋತ್ತಮಂ ಪುಣ್ಯಂ ನಾಮ್ನಾ ಪಾಪವಿನಾಶನಮ್ ॥18॥

ಅಸ್ತಿ ಪುಣ್ಯತಮೇ ವಿಪ್ರಾಃ ಪವಿತ್ರೇ ವೇಂಕಟಾಚಲೇ ।
ಯಸ್ಯ ಸಂಸ್ಮರಣಾದೇವ ಗರ್ಭವಾಸೋ ನ ವಿದ್ಯತೇ ॥19॥

ತತ್ಪ್ರಾಪ್ಯ ತು ನರಃ ಸ್ನಾಯಾತ್ಸ್ವಾಮಿತೀರ್ಥಸ್ಯ ಚೋತ್ತರೇ ।
ತತ್ರ ಸ್ನಾನಾನ್ನರಾ ಯಾಂತಿ ವೈಕುಂಠಂ ನಾತ್ರ ಸಂಶಯಃ ॥20॥

ಋಷಯ ಊಚುಃ–

ಸೂತ ಪಾಪವಿನಾಶಾಖ್ಯತೀರ್ಥಸ್ಯ ಬ್ರೂಹಿ ವೈಭವಮ್ ।

ಪರ್ವತವನ್ನು ನಿಧಾನವಾಗಿ ಏರಬೇಕು.

ಪರ್ವತದ ಮೇಲ್ಭಾಗದಲ್ಲಿರುವ ಮಹಾಪುಣ್ಯಕರವಾದ ಸ್ವಾಮಿಪುಷ್ಕರಿಣಿಯಲ್ಲಿ ನಿಯಮ ಪೂರ್ವಕವಾಗಿ ಸ್ನಾನವನ್ನು ಮಾಡಿ, ತಮ್ಮ ಪಿತೃಗಳನ್ನು ಉದ್ದೇಶಿಸಿ ಒಂದು ಸಾಸಿವೆಯ ಕಾಳಿನಷ್ಟು, ಅಥವಾ ಶಮೀಪತ್ರದಷ್ಟಾದರೂ ಪಿಂಡವನ್ನರ್ಪಿಸಿದಲ್ಲಿ ಪಿತೃಗಳು ಸ್ವರ್ಗವನ್ನು ಮೋಕ್ಷವನ್ನು ಹೊಂದುವರು. ಇಂತಹ ಸ್ವಾಮಿಪುಷ್ಕರಿಣಿಯ ಮೇಲ್ಭಾಗದಲ್ಲಿ ಶ್ರೇಷ್ಠವಾದ, ಪುಣ್ಯಕರವಾದ, ತೀರ್ಥೋತ್ತಮವೊಂದಿರುವದು. ಯಾವ ತೀರ್ಥದ ಸಂಸ್ಮರಣ ಮಾತ್ರದಿಂದ ಗರ್ಭವಾಸವಿರುವದಿಲ್ಲವೋ ಅಂತಹ ಸ್ವಾಮಿತೀರ್ಥದ ಉತ್ತರ ದಿಕ್ಕಿನಲ್ಲಿರುವ ಪಾಪವಿನಾಶನ ತೀರ್ಥದಲ್ಲಿ ಮನುಷ್ಯನು ಸ್ನಾನವನ್ನು ಮಾಡಿದಲ್ಲಿ ಅವನು ಮುಕ್ತಿಯನ್ನೇ ಹೊಂದುವನು. ಇದರಲ್ಲಿ ಯಾವ ಸಂಶಯವೂ ಇರುವದಿಲ್ಲ.

ಋಷಿಗಳು ಸೂತರನ್ನು ಪಾಪವಿನಾಶನ ತೀರ್ಥದ ಮಾಹಾತ್ಮ್ಯವನ್ನು ಹೇಳಲು ಪ್ರಾರ್ಥಿಸಿದಾಗ

ವ್ಯಾಸೇನ ಬೋಧಿತಸ್ತ್ವಂ ಹಿ ವೇತ್ಸಿ ಸರ್ವಂ ಮಹಾಮುನೇ ॥21॥

ಶ್ರೀ ಸೂತ ಉವಾಚ–

ಬ್ರಹ್ಮಾಶ್ರಮಪದೇ ವೃತ್ತಾಂ ಪಾರ್ಶ್ವೇ ಹಿಮವತಃ ಶುಭೇ ।
ವಕ್ಷ್ಯಾಮಿ ಬ್ರಾಹ್ಮಣಶ್ರೇಷ್ಠಾ ಯುಷ್ಮಾಕಂ ತು ಕಥಾಂ ಶುಭಾಮ್ ॥22॥

ತದಾಶ್ರಮಪದಂ ಪುಣ್ಯಂ ಬ್ರಹ್ಮಾಶ್ರಮಪದಂ ಶುಭಮ್ ।
ನಾನಾವೃಕ್ಷಸಮಾಕೀರ್ಣಂ ಪಾರ್ಶ್ವೇ ಹಿಮವತಃ ಶುಭೇ ॥23॥

ಬಹುಗುಲ್ಮಲತಾಕೀರ್ಣಂ ಮೃಗದ್ವಿಪನಿಷೇವಿತಮ್ ।
ಸಿದ್ಧಚಾರಣಸಂಘುಷ್ಟಂ ರಮ್ಯಂ ಪುಷ್ಪಿತಕಾನನಮ್ ॥24॥

ಯತಿಭಿರ್ಬಹುಭಿಃ ಕೀರ್ಣಂ ತಾಪಸೈರುಪಶೋಭಿತಮ್ ।
ಬ್ರಾಹ್ಮಣೈಶ್ಚ ಮಹಾಭಾಗೈಃ ಸೂರ್ಯಜ್ವಲನಸನ್ನಿಭೈಃ ॥25॥

ನಿಯಮವ್ರತಸಂಪನ್ನೈಃ ಸಮಾಕೀರ್ಣಂ ತಪಸ್ವಿಭಿಃ ।
ದೀಕ್ಷಿತೈರ್ಯಾಗಶೀಲೈಶ್ಚ ಯತಾಹಾರೈಃ ಕೃತಾತ್ಮಭಿಃ ॥26॥

ವೇದಾಧ್ಯಯನಸಂಪನ್ನೈರ್ವೈದಿಕೈಃ ಪರಿವೇಷ್ಟಿತಮ್ ।
ವರ್ಣಿಭಿಶ್ಚ ಗೃಹಸ್ಥೈಶ್ಚ ವಾನಪ್ರಸ್ಥೈಶ್ಚ ಭಿಕ್ಷುಭಿಃ ॥27॥

ಸ್ವಾಶ್ರಮಾಚಾರನಿರತೈಃ ಸ್ವವರ್ಣೋಕ್ತವಿಧಾಯಿಭಿಃ ।
ವಾಲಖಿಲ್ಯೈಶ್ಚ ಋಷಿಭಿಃ ಸಮಂತಾತ್ಪರಿವೇಷ್ಟಿತಮ್ ॥28॥

ತತ್ರಾಶ್ರಮೇ ಪುರಾ ಕಶ್ಚಿಚ್ಛೂದ್ರೋ ದೃಢಮತಿರ್ದ್ವಿಜಾಃ ।

ಸೂತರು ಅವರಿಗೆ ಹಿಮವತ್ಪರ್ವತದ ಬ್ರಹ್ಮಾಶ್ರಮದಲ್ಲಿ ನಡೆದ ವೃತ್ತಾಂತವನ್ನು ಹೇಳುವದರ ಮೂಲಕ ಪಾಪವಿನಾಶನ ತೀರ್ಥದ ಮಾಹಾತ್ಮ್ಯವನ್ನು ತಿಳಿಸುವರು.

ಹಿಮವತ್ಪರ್ವತದ ಬಳಿ ಶುಭಕರವಾದ, ನಾನಾವೃಕ್ಷಗಳಿಂದ ಯುಕ್ತವಾದ, ದೇವಾನುದೇವತೆಗಳಿಂದಲೂ ಸಂಸೇವಿತವಾದ, ನಿಬಿಡಾರಣ್ಯದಿಂದುಪೇತವಾದ, ನಿಯಮವ್ರತಗಳಿಂದ ಸಂಪನ್ನರಾದ ಬ್ರಾಹ್ಮಣರಿಂದಲೂ, ವಿರಕ್ತರಾದ ಸನ್ನ್ಯಾಸಿಶ್ರೇಷ್ಠರಿಂದಲೂ ಉಪೇತವಾದ ಬ್ರಹ್ಮಾಶ್ರಮವೆಂಬ ಸ್ಥಾನವೊಂದಿದ್ದಿತು. ಸ್ವವರ್ಣಾಶ್ರಮೋಚಿತವಾದ ಧರ್ಮಾನುಷ್ಠಾನ.ರತರಾದ, ವೇದಾಧ್ಯಯನ ಸಂಪನ್ನರಾದ, ಬ್ರಾಹ್ಮಣರು ವಾಲಖಿಲ್ಯಾದಿ ಋಷಿಗಳಿಂದ ಮಂಡಿತವಾಗಿದ್ದ ಆ ಆಶ್ರಮದ ಬಳಿ ಒಂದು ಬಾರಿ ದೃಢಮತಿಯೆಂಬ ಶೂದ್ರನೋರ್ವನು ಬಂದನು. ಅವನನ್ನು ನೋಡಿ

ಸಾಹಸೀ ಬ್ರಾಹ್ಮಣಾಭ್ಯಾಶಮಾಜಗಾಮ ಮುದಾನ್ವಿತಃ ॥29॥

ಆಗತೋ ಹ್ಯಾಶ್ರಮಪದಂ ಪೂಜಿತಶ್ಚ ತಪಸ್ವಿಭಿಃ ।
ನಾಮ್ನಾ ದೃಢಮತಿಃ ಶೂದ್ರಃ ಸಾಷ್ಟಾಂಗಂ ಪ್ರಣನಾಮ ವೈ ॥30॥

ತಾನ್ಸ ದೃಷ್ಟ್ವಾ ಮುನಿಗಣಾನ್ ದೇವಕಲ್ಪಾನ್ಮಹೌಜಸಃ ।
ಕುರ್ವತೋ ವಿವಿಧಾನ್ಯಜ್ಞಾನ್ಸಂಪ್ರಹೃಷ್ಯತ ಶೂದ್ರಕಃ ॥31॥

ಅಥಾಸ್ಯ ಬುದ್ಧಿರಭವತ್ತಪಃ ಕರ್ತುಮನುತ್ತಮಮ್ ।
ತತೋಽಬ್ರವೀತ್ಕುಲಪತಿಂ ಮುನಿಮಾಗತ್ಯ ತಾಪಸಮ್ ॥32॥

ದೃಢಮತಿರುವಾಚ–

ತಪೋಧನ ನಮಸ್ತೇಽಸ್ತು ರಕ್ಷ ಮಾಂ ಕರುಣಾನಿಧೇ ।
ತವ ಪ್ರಸಾದಾದಿಚ್ಛಾಮಿ ಯಾಗಂ ಕರ್ತುಂ ಪ್ರಸೀದ ಮೇ ॥33॥

ಏವಮುಕ್ತಸ್ತು ಶೂದ್ರೇಣ ತಮಾಹ ಬ್ರಾಹ್ಮಣಸ್ತದಾ ॥34॥

ಕುಲಪತಿರುವಾಚ–

ಯಾಗೇ ದೀಕ್ಷಯಿತುಂ ಶಕ್ಯೋ ನ ಶೂದ್ರೋ ಹೀನಜನ್ಮಭಾಕ್ ।
ಶ್ರೂಯತೇ ಯದಿ ತೇ ಬುದ್ಧಿಃ ಶುಶ್ರೂಷಾನಿರತೋ ಭವ ॥35॥

ಉಪದೇಶೋ ನ ಕರ್ತವ್ಯೋ ಜಾತಿಹೀನಸ್ಯ ಕರ್ಹಿಚಿತ್ ।
ಉಪದೇಶೇ ಮಹಾನ್ ದೋಷ ಉಪಾಧ್ಯಾಯಸ್ಯ ವಿದ್ಯತೇ ॥36॥

ಋಷಿಗಳು ಸ್ವಾಗತಿಸಿದರು. ಅವನೂ ಸಹ ಯಜ್ಞಾದಿ ಸ್ವೋಚಿತ ಕರ್ಮ ರತರಾದ ಬ್ರಾಹ್ಮಣರನ್ನು ನೋಡಿ ಸಂತುಷ್ಟನಾದನು.

ಹೀಗಿರಲು ಒಂದು ಬಾರಿ ದೃಢಮತಿಯು ತಪಸ್ಸನ್ನು ಮಾಡಬೇಕೆಂದು ಬಯಸಿ ಬ್ರಹ್ಮಾಶ್ರಮದ ಕುಲಪತಿಗಳ ಬಳಿಗೆ ಬಂದು 'ನಿಮ್ಮ ಅನುಗ್ರಹದಿಂದ ಯಾಗವನ್ನು ಮಾಡಬೇಕೆಂದು ಬಯಸುವೆನು. ನನ್ನ ಮೇಲೆ ಅನುಗ್ರಹಿಸಿ' ಎಂದು ನುಡಿದನು. ಇದನ್ನು ಕೇಳಿದ ಕುಲಪತಿಯು ಶೂದ್ರಯೋನಿಯಲ್ಲಿ ಜನಿಸಿದ ನಿನಗೆ ಯಜ್ಞದಲ್ಲಿ ಅಧಿಕಾರವಿರುವದಿಲ್ಲ. ಶೂದ್ರರಿಗೆ ಯಜ್ಞವನ್ನು ಮಾಡಿಸುವದು, ಅಧ್ಯಾಪನವನ್ನು ಮಾಡುವದು, ಕಾವ್ಯ, ನಾಟಕ, ಅಲಂಕಾರ, ಪುರಾಣ, ಇತಿಹಾಸಗಳನ್ನೇ ಆಗಲಿ ವ್ಯಾಕರಣವನ್ನೇ ಆಗಲಿ ಪಾಠಹೇಳುವದು ನಿಷಿದ್ಧವಾಗಿದ್ದು ಇಂತಹ ಕಾರ್ಯಗಳನ್ನು ಮಾಡುವ ಬ್ರಾಹ್ಮಣನು ಬಹಿಷ್ಕಾರ್ಯನಾಗಿರುತ್ತಾನೆ. ಶೂದ್ರನಿಗೆ ಉಪದೇಶವನ್ನೀಯುವ

ನಾಧ್ಯಾಪಯೋದ್ಬುಧಃ ಶೂದ್ರಂ ತಥಾ ನೈವ ಚ ಯಾಜಯೇತ್ ।
ನ ಪಾಠಯೇತ್ತಥಾ ಶೂದ್ರಂ ಶಾಸ್ತ್ರಂ ವ್ಯಾಕರಣಾದಿಕಮ್ ॥37॥

ಕಾವ್ಯಂ ವಾ ನಾಟಕಂ ವಾಪಿ ತಥಾಲಂಕಾರಮೇವ ವಾ ।
ಪುರಾಣಮಿತಿಹಾಸಂ ಚ ಶೂದ್ರಂ ನೈವ ತು ಪಾಠಯೇತ್ ॥38॥

ಯದಿ ಚೋಪದಿಶೇದ್ವಿಪ್ರಃ ಶೂದ್ರಸ್ಯೈತಾನಿ ಕರ್ಹಿಚಿತ್ ।
ತ್ಯಜೇಯುರ್ಬ್ರಾಹ್ಮಣಾ ವಿಪ್ರಂ ತಂ ಗ್ರಾಮಾದ್ಬ್ರಹ್ಮಸಂಕುಲಾತ್ ॥39॥

ಶೂದ್ರಾಯ ಚೋಪದೇಷ್ಟಾರಂ ದ್ವಿಜಂ ಚಂಡಾಲವತ್ ತ್ಯಜೇತ್ ।
ಶೂದ್ರಂ ಚಾಕ್ಷರಸಂಯುಕ್ತಂ ದೂರತಃ ಪರಿವರ್ಜಯೇತ್ ॥40॥

ತಚ್ಛುಶ್ರೂಷಸ್ವ ಭದ್ರಂ ತೇ ಬ್ರಾಹ್ಮಣಾನ್ಶ್ರದ್ಧಯಾ ಸಹ ।
ಶೂದ್ರಸ್ಯ ದ್ವಿಜಶುಶ್ರೂಷಾ ಮನ್ವಾದಿಭಿರುದೀರಿತಾ ॥41॥

ನ ಹಿ ನೈಸರ್ಗಿಕಂ ಕರ್ಮ ಪರಿತ್ಯಕ್ತುಂ ತ್ವಮರ್ಹಸಿ ।
ಏವಮುಕ್ತಃ ಸ ಮುನಿನಾ ಸ ಶೂದ್ರೋಽಚಿಂತಯತ್ತದಾ ॥42॥

ಕಿಂ ಕರ್ತವ್ಯಂ ಮಯಾ ತ್ವದ್ಯ ವ್ರತೇ ಶ್ರದ್ಧಾ ಹಿ ಮೇ ಪರಾ ।
ಯಥಾಸ್ಯಾನ್ಮಮ ಸುಜ್ಞಾನಂ ಯತಿಷ್ಯೇಽಹಂ ತಥಾದ್ಯ ವೈ ॥43॥

ಇತಿ ನಿಶ್ಚಿತ್ಯ ಮನಸಾ ಶೂದ್ರೋ ದೃಢಮತಿಸ್ತದಾ ।
ಗತ್ವಾಽಽಶ್ರಮಪದಾದ್ದೂರಂ ಕೃತವಾನುಟಜಂ ಶುಭಮ್ ॥44॥

ತತ್ರ ವೈ ದೇವತಾಗಾರಂ ಪುಣ್ಯಾನ್ಯಾಯತನಾನಿ ಚ ।

ಬ್ರಾಹ್ಮಣನನ್ನು ಸಹ ಚಂಡಾಲರಂತೆ ತ್ಯಾಗಮಾಡಬೇಕೆಂದು ಧರ್ಮಶಾಸ್ತ್ರಗಳು ತಿಳಿಸುತ್ತವೆ. ಶೂದ್ರರಿಗೆ ದ್ವಿಜಶುಶ್ರೂಷೆಯು ಪರಮ ಧರ್ಮವೆಂಬುದಾಗಿ ಮನ್ವಾದಿ ಸ್ಮೃತಿಗಳು ಸಾರಿ ಹೇಳುವವು. ಆದ್ದರಿಂದ ನಿನಗೆ ಉಚಿತವಾದ ಪರಿಚರ್ಯಾದಿ ಕರ್ಮವನ್ನು ತ್ಯಾಗಮಾಡುವದು ಉಚಿತವಾಗಿರುವದಿಲ್ಲ. ಯಜ್ಞವನ್ನು ಮಾಡುವ ವಿಷಯದಲ್ಲಿ ಮನಸ್ಸನ್ನಿಡಬೇಡ' ಎಂದು ನುಡಿದರು.

ಇದನ್ನು ಕೇಳಿದ ದೃಢಮತಿಯು ಯಜ್ಞವನ್ನು ಮಾಡಿಯೇ ತೀರಬೇಕೆಂಬ ಹಟವನ್ನು ಹೊಂದಿ ನನಗೆ ಜ್ಞಾನವಾಗುವವರೆಗೂ ಪ್ರಯತ್ನಿಸುವೆನು ಎಂದು ನಿಶ್ಚಯಿಸಿ ಬ್ರಹ್ಮಾಶ್ರಮದಿಂದ ಸ್ವಲ್ಪ ದೂರದಲ್ಲಿ ಒಂದು ಆಶ್ರಮವನ್ನು ಕಟ್ಟಿ, ಅದರಲ್ಲಿ ವಿಶೇಷವಾಗಿ ದೇವರ ಮನೆ,

ಪುಷ್ಪಾರಾಮಾದಿಕಂ ಚಾಪಿ ತಟಾಕಖನನಾದಿಕಮ್ ॥45॥

ಶ್ರದ್ಧಯಾ ಕಾರಾಯಾಮಾಸ ತಪಃಸಿದ್ಧ್ಯರ್ಥಮಾತ್ಮನಃ ।
ಅಭಿಷೇಕಾಂಶ್ಚ ನಿಯಮಾನುಪವಾಸಾದಿಕಾನಪಿ ॥46॥

ಬಲಿಂ ಕೃತ್ವಾ ಚ ಹುತ್ವಾ ಚ ದೈವತಾನ್ಯಭ್ಯಪೂಜಯತ್ ।
ಸಂಕಲ್ಪನಿಯಮೋಪೇತಃ ಫಲಾಹಾರೋ ಜಿತೇಂದ್ರಿಯಃ ॥47॥

ನಿತ್ಯಂ ಕಂದೈಶ್ಚ ಮೂಲೈಶ್ಚ ಪುಷ್ಪೈರಪಿ ತಥಾ ಫಲೈಃ ।
ಅತಿಥೀನ್ಪೂಜಯಾಮಾಸ ಯಥಾವತ್ಸಮುಪಾಗತಾನ್ ॥48॥

ಏವಂ ಹಿ ಸುಮಹಾನ್ಕಾಲೋ ವ್ಯತಿಚಕ್ರಾಮ ತಸ್ಯ ವೈ ॥49॥

ಅಥಾಶ್ರಮಮಗಾತ್ತಸ್ಯ ಸುಮತಿರ್ನಾಮ ನಾಮತಃ ।
ದ್ವಿಜೋ ಗರ್ಗಕುಲೋದ್ಭೂತಃ ಸತ್ಯವಾದೀ ಜಿತೇಂದ್ರಿಯಃ ॥50॥

ಸ್ವಾಗತೈರ್ಮುನಿಮಾರಾಧ್ಯ ತೋಷಯಿತ್ವಾ ಫಲಾದಿಕೈಃ ।
ಕಥಯನ್ವೈ ಕಥಾಃ ಪುಣ್ಯಾಃ ಕುಶಲಂ ಪರ್ಯಪೃಚ್ಛತ ॥51॥

ಇತ್ಥಂ ವಿಪ್ರಃ ಸ ಪಾದ್ಯಾದ್ಯೈರುಪಚಾರೈಸ್ತು ಪೂಜಿತಃ ।
ಆಶೀರ್ಭಿರಭಿನಂದ್ಯೈನಂ ಪ್ರತಿಗೃಹ್ಯ ಚ ಸತ್ಕ್ರಿಯಾಮ್ ॥52॥

ತಮಾಪೃಚ್ಛತ್ಪ್ರಹೃಷ್ಟಾತ್ಮಾ ಸ್ವಾಶ್ರಮಂ ಪುನರಾಯಯೌ ।

ಹೂತೋಟಗಳನ್ನು, ಕೆರೆ ಬಾವಿಗಳನ್ನು ತನ್ನ ತಪಸ್ಸಿದ್ಧಿಯ ಗೋಸ್ಕರವಾಗಿ ರಚಿಸಿಕೊಂಡು ಅಲ್ಲಿ ವಾಸಮಾಡಿದನು. ನಿತ್ಯದಲ್ಲಿಯೂ ಭಗವಂತನನ್ನು ಶ್ರದ್ಧೆಯಿಂದ ಆರಾಧಿಸುವವನಾಗಿ ನಿಯಮಾನುಸಾರವಾಗಿ ಉಪವಾಸಾದಿ ವ್ರತಗಳನ್ನಾಚರಿಸುತ್ತಾ ದೇವರಿಗೆ ನೈವೇದ್ಯಾದಿಗಳನ್ನು ಅರ್ಪಿಸಿ, ಕೇವಲ ಫಲಾಹಾರಾದಿ ನಿಯಮಗಳಿಂದ, ಹೋಮಾದಿಗಳಿಂದ ದೇವರನ್ನು ಆರಾಧಿಸಿದನು. ನಿತ್ಯದಲ್ಲಿಯೂ ಕಂದಮೂಲಫಲಗಳಿಂದ ಅತಿಥಿಗಳನ್ನು ಪೂಜಿಸುತ್ತಿದ್ದನು. ಹೀಗೆ ಬಹುಕಾಲ ತನ್ನ ಆಶ್ರಮದಲ್ಲಿ ವೇದೋಕ್ತವಾದ ಕರ್ಮಗಳನ್ನಾಚರಿಸುತ್ತಾ ಆ ಶೂದ್ರನು ವಾಸವಾಗಿದ್ದನು.

ಒಂದು ಬಾರಿ ಅಲ್ಲಿಗೆ ಗರ್ಗವಂಶಸಮುದ್ಭೂತನಾದ ಸುಮತಿಯೆಂಬ ಸತ್ಯಶೀಲನೂ, ಭಗವದ್ಭಕ್ತನೂ, ಜಿತೇಂದ್ರಿಯನೂ ಆದ ಬ್ರಾಹ್ಮಣನು ಆಗಮಿಸಿದನು. ಅವನನ್ನು ಸಂತೋಷದಿಂದ ಬರಮಾಡಿಕೊಂಡ ದೃಢಮತಿಯು ಅರ್ಘ್ಯಪಾದ್ಯಾದಿಗಳಿಂದ ಸುಮತಿಯನ್ನು ಪೂಜಿಸಿ ಒಳ್ಳೆಯ

ಏವಂ ದಿನೇ ದಿನೇ ವಿಪ್ರಃ ಶೂದ್ರೇಽಸ್ಮಿನ್ ಪಕ್ಷಪಾತವಾನ್ ||53||

ಆಗಚ್ಛದಾಶ್ರಮಂ ತಸ್ಯ ದ್ರಷ್ಟುಂ ತಂ ಶೂದ್ರಯೋನಿಜಮ್ ।
ಬಹುಕಾಲಂ ದ್ವಿಜಸ್ಯಾಭೂತ್ಸಂಸರ್ಗಃ ಶೂದ್ರಯೋನಿನಾ ||54||

ಸ್ನೇಹಸ್ಯ ವಶಮಾಪನ್ನಃ ಶೂದ್ರೋಕ್ತಂ ನಾತಿಚಕ್ರಮೇ ।
ಅಥಾಗತಂ ದ್ವಿಜಂ ಶೂದ್ರಃ ಪ್ರಾಹ ಸ್ನೇಹವಶೀಕೃತಮ್ ||55||

ಹವ್ಯಕವ್ಯವಿಧಾನಂ ಮೇ ಬ್ರೂಹಿ ತ್ವಂ ತು ಗುರುರ್ಮತಃ ।
ಏವಮುಕ್ತಃ ಸ ಶೂದ್ರೇಣ ಸರ್ವಮೇತದುಪಾದಿಶತ್ ||56||

ಕಾರಾಯಾಮಾಸ ಶೂದ್ರಸ್ಯ ಪಿತೃಕಾರ್ಯಾದಿಕಂ ತದಾ ।
ಪಿತೃಕಾರ್ಯೇ ಕೃತೇ ತೇನ ವಿಸೃಷ್ಟಃ ಸ ದ್ವಿಜೋತ್ತಮಃ ||57||

ಅಥ ದೀರ್ಘೇಣ ಕಾಲೇನ ಪ್ರೋಷಿತಃ ಶೂದ್ರಯೋನಿನಾ ।
ತ್ಯಕ್ತೋ ವಿಪ್ರಗಣೈಃ ಸೋಽಯಂ ಪಂಚತ್ವಮಗಮದ್ದ್ವಿಜಃ ||58||

ವೈವಸ್ವತಭಟೈರ್ನೀತ್ವಾ ಪಾತಿತೋ ನರಕೇಷ್ವಪಿ ।
ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ||59||

ಭುಕ್ತ್ವಾ ಕ್ರಮೇಣ ನರಕಾಂಸ್ತದಂತೇ ಸ್ಥಾವರೋಽಭವತ್ ।
ಗರ್ದಭಸ್ತು ತತೋ ಜಜ್ಞೇ ವಿಡ್ವರಾಹಸ್ತತಃ ಪರಮ್ ||60||

ಮಾತುಗಳಿಂದ ಕುಶಲವನ್ನು ವಿಚಾರಿಸಿದನು. ಸುಮತಿಯು ದೃಢಮತಿಯ ಉಪಚಾರದಿಂದ ಸಂತುಷ್ಟನಾಗಿ, ಅವನನ್ನು ಆಶೀರ್ವದಿಸಿ, ತನ್ನ ಆಶ್ರಮಕ್ಕೆ ಮರಳಿ ಬಂದನು. ಅವನಲ್ಲಿ ವಿಶೇಷಸ್ನೇಹವನ್ನು, ಪಕ್ಷಪಾತವನ್ನು ಹೊಂದಿದ ಸುಮತಿಯು ದೃಢಮತಿಯ ಆಶ್ರಮಕ್ಕೆ ಮೇಲಿಂದ ಮೇಲೆ ಬರುತ್ತಿದ್ದನು. ಹೀಗಾಗಿ ಅವರೀರ್ವರಲ್ಲಿ ಸ್ನೇಹಬಂಧವೇರ್ಪಟ್ಟು ಸುಮತಿಯು ದೃಢಮತಿಯ ಮಾತನ್ನು ಮೀರುತ್ತಿರಲಿಲ್ಲ.

ಒಂದು ಬಾರಿ ದೃಢಮತಿಯು ಸುಮತಿಯನ್ನು 'ನೀನು ನನಗೆ ಗುರುವಾಗಿ ಹವ್ಯಕವ್ಯವಿಧಾನ (ದೇವ-ಪಿತೃಗಳನ್ನು ಆರಾಧಿಸುವ ವಿಧಾನ) ವನ್ನು ತಿಳಿಸಿಕೊಡು' ಎಂದು ಪ್ರಾರ್ಥಿಸಿದನು. ಆಗ ಸುಮತಿಯು ಅವನಿಗೆ ಹವ್ಯಕವ್ಯ ವಿಧಾನಗಳನ್ನು ತಿಳಿಸುತ್ತಾ ಶೂದ್ರನಾದ ದೃಢಮತಿಯ ಪಿತೃಕಾರ್ಯಾದಿಗಳನ್ನು ಸಹ ಮಾಡಿಸಿದನು. ಹೀಗೆ ಶೂದ್ರರಿಗೆ ಪಿತೃಕಾರ್ಯಗಳನ್ನು ಸುಮತಿಯು ಮಾಡಿಸಿದ್ದರಿಂದ ಬ್ರಾಹ್ಮಣರು ಅವನನ್ನು ಬಹಿಷ್ಕರಿಸಿದರು.

ಜಜ್ಞೇಽಥ ಸಾರಮೇಯೋಽಸೌ ಪಶ್ಚಾದ್ವಾಯಸತಾಂ ಗತಃ ।
ಅಥ ಚಂಡಾಲತಾಂ ಪ್ರಾಪ್ಯ ಶೂದ್ರಯೋನಿಮಗಾತ್ತತಃ ॥61॥

ಗತವಾನ್ವೈಶ್ಯತಾಂ ಪಶ್ಚಾತ್ಕ್ಷತ್ರಿಯಸ್ತದನಂತರಮ್ ।
ಪ್ರಬಲೈರ್ಬಾಧ್ಯಮಾನೋಽಸೌ ಬ್ರಾಹ್ಮಣೋ ವೈ ತದಾಭವತ್ ॥62॥

ಉಪನೀತಃ ಸ ಪಿತ್ರಾ ತು ವರ್ಷೇ ಗರ್ಭಾಷ್ಟಮೇ ದ್ವಿಜಃ ।
ವರ್ತಮಾನಃ ಪಿತುರ್ಗೃಹೇ ಸ್ವಾಚಾರಾಭ್ಯಾಸತತ್ಪರಃ ॥63॥

ಗಚ್ಛನ್ಕದಾಚಿದ್ಗಹನೇ ಗೃಹೀತೋ ಬ್ರಹ್ಮರಕ್ಷಸಾ ।
ರುದನ್ ಭ್ರಮನ್ ಸ್ಖಲನ್ಮೂಢಃ ಪ್ರಲಪನಪ್ರಹಸನ್ನಸೌ ॥64॥

ಶಶ್ವದ್ಧಾಹೇತಿ ಚ ವದನ್ವೈದಿಕಂ ಕರ್ಮ ಸೋಽತ್ಯಜತ್ ।
ದೃಷ್ಟ್ವಾ ಸುತಂ ತಥಾಭೂತಂ ಪಿತಾ ದುಃಖೇನ ಪೀಡಿತಃ ॥65॥

ಸುತಮಾದಾಯ ಚ ಸ್ನೇಹಾದಗಸ್ತ್ಯಂ ಶರಣಂ ಯಯೌ ।
ಸುವರ್ಣಮುಖರೀತೀರೇ ತಪಸ್ಯಂತಂ ಶಿವಾಗ್ರತಃ ॥66॥

ಭಕ್ತ್ಯಾ ಮುನಿಂ ಪ್ರಣಮ್ಯಾಸೌ ಪಿತಾ ತಸ್ಯ ಸುತಸ್ಯ ವೈ ।
ತಸ್ಮೈನಿವೇದಯಾಮಾಸ ಸ್ವಪುತ್ರಸ್ಯ ವಿಚೇಷ್ಟಿತಮ್ ॥67॥

ಅಬ್ರವೀಚ್ಚ ತದಾ ವಿಪ್ರಃ ಕುಂಭಜಂ ಮುನಿಪುಂಗವಮ್ ।
ಏಷ ಮೇ ತನಯೋ ಬ್ರಹ್ಮನ್ಗೃಹೀತೋ ಬ್ರಹ್ಮರಕ್ಷಸಾ ॥68॥

ಸುಖಂ ನ ಲಭತೇ ಬ್ರಹ್ಮನ್ರಕ್ಷ ತ್ವಂ ಕರುಣಾದೃಶಾ ।

ಕಾಲಾನಂತರದಲ್ಲಿ ಸುಮತಿಯು ಮರಣವನ್ನು ಹೊಂದಿದಾಗ, ಶೂದ್ರೋಪದೇಶ, ಶೂದ್ರಪೌರೋಹಿತ್ಯಾದಿ ಜನಿತವಾದ ತನ್ನ ಪಾಪಕ್ಕನುಗುಣವಾಗಿ ಅಸಂಖ್ಯಕಲ್ಪಗಳಷ್ಟು ಕಾಲ ನರಕದಲ್ಲಿ ಶಿಕ್ಷೆಯನ್ನನುಭವಿಸಿ ಕ್ರಮವಾಗಿ ಗಿಡವಾಗಿ ಜನಿಸಿದನು. ಅನಂತರ ಕತ್ತೆ, ಮಲದಲ್ಲಿಯ ಕ್ರಿಮಿ, ವರಾಹ, ನಾಯಿ, ಕಾಗೆ, ಚಂಡಾಲ ಪುರುಷ, ಶೂದ್ರ, ವೈಶ್ಯ, ಕ್ಷತ್ರಿಯ ಯೋನಿಗಳಲ್ಲಿ ಜನಿಸಿ, ಬಹುಕಷ್ಟವನ್ನನುಭವಿಸಿ ಕೊನೆಗೆ ಬ್ರಾಹ್ಮಣನಾಗಿ ಜನಿಸಿದನು. ತಂದೆಯಿಂದ ಎಂಟನೆಯ ವಯಸ್ಸಿನಲ್ಲಿ ಉಪನಯನ ಸಂಸ್ಕಾರವನ್ನು ವೇದಶಿಕ್ಷಣವನ್ನು ಪಡೆದು ತನಗುಚಿತವಾದ ಧರ್ಮಗಳನ್ನಾಚರಿಸುತ್ತಿರುವ ಇವನನ್ನು ಗಹನ ವಾದ ವನಪ್ರದೇಶದಲ್ಲಿ ಸಂಚರಿಸುತ್ತಿರುವಾಗ ಬ್ರಹ್ಮರಾಕ್ಷಸವು ಹಿಡಿದುಕೊಂಡಿತು. ಅದರ ಪ್ರಭಾವದಿಂದ ಉನ್ಮಾದವನ್ನು ಹೊಂದಿದ ಬ್ರಾಹ್ಮಣನು

ನಾಸ್ತಿ ಮೇ ತನಯೋಽಪ್ಯನ್ಯಃ ಪಿತೄಣಾಮೃಣಮುಕ್ತಯೇ ॥69॥

ತಸ್ಯ ಪೀಡಾವಿನಾಶಾರ್ಥಮುಪಾಯಂ ಬ್ರೂಹಿ ಕುಂಭಜ ।
ತ್ವತ್ಸಮಸ್ತ್ರಿಷು ಲೋಕೇಷು ತಪಃಶೀಲೋ ನ ವಿದ್ಯದೇ ॥70॥

ತ್ವಾಂ ವಿನಾಸ್ಯ ಪರಿತ್ರಾತಾ ನ ಮೇ ಪುತ್ರಸ್ಯ ವಿದ್ಯತೇ ।
ಪುತ್ರೇ ದಯಾಂ ಕುರು ಗುರೋ ದಯಾಶೀಲಾ ಹಿ ಸಾಧವಃ ॥71॥

ಶ್ರೀ ಸೂತ ಉವಾಚ–

ಏವಮುಕ್ತಸ್ತದಾ ತೇನ ಕುಂಭಜೋ ಧ್ಯಾನಮಾಸ್ಥಿತಃ ।
ಧ್ಯಾತ್ವಾ ತು ಸುಚಿರಂ ಕಾಲಮಬ್ರವೀದ್ಬ್ರಾಹ್ಮಣಂ ತತಃ ॥72॥

ಅಗಸ್ತ್ಯ ಉವಾಚ–

ಪೂರ್ವಜನ್ಮನಿ ತೇ ಪುತ್ರೋ ಬ್ರಾಹ್ಮಣೋಽಯಂ ಮಹಾಮತೇ ।
ಸುಮತಿರ್ನಾಮ ವಿಪ್ರೋಽಯಂ ಮತಿಂ ಶೂದ್ರಾಯ ವೈ ದದೌ ॥73॥

ಕರ್ಮಾಣಿ ವೈದಿಕಾನ್ಯೇಷ ಸರ್ವಾಣ್ಯುಪದಿದೇಶ ವೈ ।
ಅತೋಽಯಂ ನರಕಾನ್ಭುಂಕ್ತ್ವಾ ಕಲ್ಪಕೋಟಿಸಹಸ್ರಕಮ್ ॥74॥

ಜಾತೋ ಭುವಿ ತದಂತೇಷು ಸ್ಥಾವರಾದಿಷು ಯೋನಿಷು ।

ಅಳುವದು, ನಗುವದು, ಓಡುವದೇ ಮೊದಲಾದ ವಿಲಕ್ಷಣ ಚರ್ಯೆಯನ್ನು ಮಾಡುವವನಾಗಿ ವೈದಿಕಮಾರ್ಗವನ್ನು ವೇದೋಕ್ತಕರ್ಮಗಳನ್ನು ತ್ಯಾಗಮಾಡಿದನು.

ಮಗನ ಅವಸ್ಥೆಯನ್ನು ನೋಡಿ ದುಃಖಿತನಾದ ಬ್ರಾಹ್ಮಣನ ತಂದೆಯು ಸುವರ್ಣ ಮುಖರೀ ನದಿಯ ತೀರದಲ್ಲಿ ರುದ್ರದೇವರನ್ನು ಆರಾಧಿಸುತ್ತಿದ್ದ ಅಗಸ್ತ್ಯ ಮಹರ್ಷಿಗಳ ಬಳಿ ತನ್ನ ಮಗನನ್ನು ಕರೆದುಕೊಂಡು ಬಂದು 'ಬ್ರಹ್ಮರಾಕ್ಷಸನಿಂದ ಗೃಹೀತನಾದ ನನ್ನ ಮಗನು ಬಹುವಾಗಿ ಕಷ್ಟಗಳನ್ನನುಭವಿಸುತ್ತಿರುವನು. ಇವನನ್ನು ಬಿಟ್ಟರೆ ನನಗೆ ಬೇರಾರೂ ಮಕ್ಕಳಿರುವದಿಲ್ಲ. ಇವನ ದುಃಖವನ್ನು ನನಗೆ ಕಣ್ಣುಗಳಿಂದ ನೋಡಲಾಗುತ್ತಿಲ್ಲ. ಅವನ ಬ್ರಹ್ಮರಾಕ್ಷಸ ಪೀಡೆಯು ನಾಶವಾಗುವದರಗೋಸ್ಕರವಾಗಿ ಉಪಾಯವನ್ನು ತಿಳಿಸಿರಿ' ಎಂದು ಸಂಪ್ರಾರ್ಥಿಸಿದನು.

ಆಗ ಅಗಸ್ತ್ಯರು ಧ್ಯಾನಾವಸ್ಥೆಯನ್ನು ಹೊಂದಿ ಅವನ ಪೂರ್ವಜನ್ಮವೃತ್ತಾಂತವನ್ನು ಮಾಡಿದ ಅಪರಾಧವನ್ನು ತಿಳಿದು 'ಹೇ ಬ್ರಾಹ್ಮಣನೇ! ಪೂರ್ವಜನ್ಮದಲ್ಲಿ ಸುಮತಿಯೆಂಬ ಹೆಸರಿನಿಂದ

ಇದಾನೀಂ ಬ್ರಾಹ್ಮಣೋ ಜಾತಃ ಕರ್ಮಶೇಷೇಣ ತೇ ಸುತಃ ॥75॥

ಯಮೇನ ಪ್ರೇಷಿತೇನಾತ್ರ ಗೃಹೀತೋ ಬ್ರಹ್ಮರಕ್ಷಸಾ ।
ಕ್ರೂರೇಣ ಪಾತಕೇನಾದ್ಯ ಪೂರ್ವಜನ್ಮಕೃತೇನ ವೈ ॥76॥

ಉಪಾಯಂ ತೇ ಪ್ರವಕ್ಷ್ಯಾಮಿ ಬ್ರಹ್ಮರಕ್ಷೋವಿನಾಶನೇ ।
ಶೃಣುಷ್ವ ಶ್ರದ್ಧಯಾ ಯುಕ್ತಃ ಸಮಾಧಾಯ ಚ ಮಾನಸಮ್ ॥77॥

ಸುವರ್ಣಮುಖರೀತೀರೇ ಋಷಿಸಂಘನಿಷೇವಿತೇ ।
ವರ್ತತೇ ದೈವತೈಃ ಸೇವ್ಯಃ ಪಾವನೋ ವೇಂಕಟಾಚಲಃ ॥78॥

ತಸ್ಯೋಪರಿ ಮಹಾತೀರ್ಥಂ ನಾಮ್ನಾ ಪಾಪವಿನಾಶನಮ್ ।
ಅಸ್ತಿ ಪುಣ್ಯಂ ಪ್ರಸಿದ್ಧಂ ಚ ಮಹಾತಾತಕನಾಶನಮ್ ॥79॥

ಭೂತಪ್ರೇತಪಿಶಾಚಾನಾಂ ವೇತಾಲಬ್ರಹ್ಮರಕ್ಷಸಾಮ್ ।
ಮಹತಾಂ ಚೈವ ರೋಗಾಣಾಂ ತೀರ್ಥಂ ತನ್ನಾಶಕಂ ಸ್ಮೃತಮ್ ॥80॥

ಸುತಮಾದಾಯ ಗಚ್ಛ ತ್ವಂ ತತ್ತೀರ್ಥಂ ಗಿರಿಮಧ್ಯಗಮ್ ।
ಪ್ರಯತಃ ಸ್ನಾಪಯ ಸುತಂ ತೀರ್ಥೇ ಪಾಪವಿನಾಶನೇ ॥81॥

ಸ್ನಾನೇನ ತ್ರಿದಿನಂ ತತ್ರ ಬ್ರಹ್ಮರಕ್ಷೋ ವಿನಶ್ಯತಿ ।
ನೈವೋಪಾಯಾಂತರಂ ತಸ್ಯ ವಿನಾಶೇ ವಿದ್ಯತೇ ಭುವಿ ॥82॥

ತಸ್ಮಾಚ್ಛೀಘ್ರಂ ಪ್ರಯಾಹಿ ತ್ವಂ ವೇಂಕಟಾಹ್ವಯಪರ್ವತಮ್ ।
ತತ್ರ ಪಾಪವಿನಾಶಾಖ್ಯತೀರ್ಥೇ ಸ್ನಾಪಯ ತೇ ಸುತಮ್ ॥83॥

ಬ್ರಾಹ್ಮಣನಾಗಿ ಜನಿಸಿದ ಇವನು ಬ್ರಾಹ್ಮಣನಾಗಿದ್ದೂ ಶೂದ್ರರಿಗೆ ವೈದಿಕ ಕರ್ಮಗಳನ್ನು ಉಪದೇಶ ಮಾಡಿರುವದರಿಂದ ಮಹಾ ಪಾಪಿಷ್ಠನಾಗಿ ಬಹುಕಾಲ ನರಕದಲ್ಲಿ ಶಿಕ್ಷೆಯನ್ನನುಭವಿಸಿ ಈಗ ಬಹುಕಷ್ಟದಿಂದ ನಾನಾಯೋನಿಗಳನ್ನನುಭವಿಸಿ ಕೊನೆಗೆ ಕರ್ಮಶೇಷದಿಂದ ಬ್ರಾಹ್ಮಣನಾಗಿ ಜನಿಸಿರುವನು. ಇವನ ಪೂರ್ವಜನ್ಮದ ಪಾಪದ ಪ್ರಭಾವದಿಂದ ಯಮನು ಇವನನ್ನು ಬಾಧಿಸಲು ಕ್ರೂರವಾದ ಬ್ರಹ್ಮರಾಕ್ಷಸನನ್ನು ಕಳುಹಿಸಿರುವನು. ಇವನಿಗೊದಗಿರುವ ಬ್ರಹ್ಮರಾಕ್ಷಸ ಪೀಡೆಯು ನಾಶವಾಗುವ ಉಪಾಯವನ್ನು ಹೇಳುವೆನು ಕೇಳು. ಸುವರ್ಣಮುಖರೀ ನದಿಯ ತೀರದಲ್ಲಿ ಇರುವ ವೇಂಕಟಾಚಲವೆಂಬ ಪರ್ವತದ ಮೇಲೆ ಪಾಪವಿನಾಶನ ವೆಂಬ ಶ್ರೇಷ್ಠವಾದ, ಪುಣ್ಯದಾಯಕವಾದ ಮಹಾತೀರ್ಥವಿರುವದು. ಭೂತಪ್ರೇತಪಿಶಾಚವೇತಾಲಾದಿಗಳನ್ನು,

ಮಾ ವಿಲಂಬಂ ಕುರುಷ್ವಾತ್ರ ತ್ವರಯಾ ಯಾದಿ ವೈ ದ್ವಿಜ ।
ಇತ್ಯುಕ್ತಃ ಸ ದ್ವಿಜೋऽಗಸ್ತ್ಯಂ ಪ್ರಣಮ್ಯ ಭುವಿ ದಂಡವತ್ ॥84॥

ಅನುಜ್ಞಾತಶ್ಚ ತೇನಾಸೌ ಪ್ರಯಯೌ ವೇಂಕಟಾಚಲಮ್ ।
ಸುತೇನ ಸಾಕಂ ವಿಪ್ರೋऽಸೌ ಗತ್ವಾ ಪಾಪವಿನಾಶನಮ್ ॥85॥

ಸಂಕಲ್ಪಪೂರ್ವಂ ಸಂಸ್ನಾಪ್ಯ ದಿನತ್ರಯಮಸೌ ಸುತಮ್ ।
ಸಸ್ನೌ ಸ್ವಯಂ ಚ ವಿಪ್ರೇಂದ್ರಃ ಪಿತಾ ಪಾಪವಿನಾಶನೇ ॥86॥

ಸಮಾಗತಃ ಪಪೌ ತೋಯಂ ಕೃತ್ವಾ ಚಾಪ್ಯಾಹ್ನಿಕಕ್ರಮಮ್ ।
ಅಥ ತಸ್ಯ ಸುತಸ್ತತ್ರ ವಿಮುಕ್ತೋ ಬ್ರಹ್ಮರಕ್ಷಸಾ ॥87॥

ಸಮಜಾಯತ ನೀರೋಗಃ ಸ್ವಸ್ಥಃ ಸುಂದರರೂಪಧೃಕ್ ।
ಸರ್ವಸಂಪತ್ಸಮೃದ್ಧೋऽಸೌ ಭುಕ್ತ್ವಾ ಭೋಗಾನನೇಕಶಃ ॥88॥

ದೇಹಾಂತೇ ಪ್ರಯಯೌ ಮುಕ್ತಿಂ ಸ್ನಾನಾತ್ಪಾಪವಿನಾಶನೇ ।
ಪಿತಾಪಿ ತತ್ರ ಸ್ನಾನೇನ ದೇಹಾಂತೇ ಮುಕ್ತಿಮಾಪ್ತವಾನ್ ॥89॥

ತೇನೋಪದಿಷ್ಟೋऽಯಂ ಶೂದ್ರಃ ಸ ಭುಕ್ತ್ವಾ ನರಕಾನ್ಕ್ರಮಾತ್ ।
ಅನೇಕಾಸು ಜನಿತ್ವಾ ಚ ಕುತ್ಸಿತಾಸ್ವಪಿ ಯೋನಿಷು ॥90॥

ಮಹಾಮಹಾರೋಗಗಳನ್ನು ಈ ಪಾಪವಿನಾಶನವು ಕಳೆಯುವದೆಂದು ಪ್ರಸಿದ್ಧವಾಗಿರುವದು. ನೀನು ಸಹ ನಿನ್ನ ಮಗನನ್ನು ಕರೆದುಕೊಂಡು ಹೋಗಿ ಶೀಘ್ರದಲ್ಲಿ ಅವನಿಗೆ ಪಾಪವಿನಾಶನ ತೀರ್ಥದಲ್ಲಿ ಸ್ನಾನವನ್ನು ಮಾಡಿಸು. ಇದರಲ್ಲಿ ಯಾವದೇ ಸಂಶಯ-ವಿಲಂಬವನ್ನು ಮಾಡಬೇಡ. ಇದರಿಂದ ನಿನ್ನ ಮಗನ ಪ್ರೇತಬಾಧೆಯು ದೂರವಾಗುವದು' ಎಂದು ನುಡಿದರು. ಅಗಸ್ತ್ಯರಿಂದ ಆಜ್ಞಪ್ತನಾದ ಬ್ರಾಹ್ಮಣನು ತನ್ನ ಮಗನನ್ನು ಕರೆದುಕೊಂಡು ವೇಂಕಟಾಚಲಕ್ಕೆ ಹೋಗಿ ಅಲ್ಲಿ ಪಾಪವಿನಾಶನ ತೀರ್ಥದಲ್ಲಿ ಸಂಕಲ್ಪ ಪೂರ್ವಕವಾಗಿ ಮೂರು ದಿನ ತಾನೂ ಸ್ನಾನವನ್ನು ಮಾಡಿ ತನ್ನ ಮಗನಿಗೂ ಸಹ ಮಾಡಿಸಿದನು. ಪಾಪವಿನಾಶನತೀರ್ಥದ ಸ್ನಾನಮಾತ್ರದಿಂದ ಬ್ರಾಹ್ಮಣ ಬಾಲಕನು ತನ್ನೆಲ್ಲ ಪಾಪಗಳಾನ್ನು ಕಳೆದುಕೊಂಡು, ಬ್ರಹ್ಮರಾಕ್ಷಸನಿಂದ ವಿಮೋಚಿತನಾಗಿ, ದೃಢಾರೋಗ್ಯವನ್ನು ಹೊಂದಿ ಸುಂದರ ಪುರುಷನಾಗಿ ಕಂಗೊಳಿಸಿದನು. ಆ ಜನ್ಮದಲ್ಲಿ ಸರ್ವಸಂಪತ್ಸಮೃದ್ಧನಾಗಿ ಅನೇಕ ಭೋಗಗಳನ್ನು ಮಾಡಿ ಕೊನೆಗೆ ಮುಕ್ತಿಯನ್ನು ಹೊಂದಿದನು. ಅವನ ತಂದೆಯೂ ಸಹ ಪಾಪವಿನಾಶನ ತೀರ್ಥದ ಸ್ನಾನಮಾತ್ರದಿಂದ ಮುಕ್ತಿಯನ್ನು ಹೊಂದಿದನು.

ಗೃಧ್ರಜನ್ಮಾಭವತ್ಪಶ್ಚಾದವೇಂಕಟಾಚಲಭೂಧರೇ ।
ಸ ಕದಾಚಿತ್ ಜಲಂ ಪಾತುಂ ತೀರ್ಥೇ ಪಾಪವಿನಾಶನೇ ॥91॥

ಸಮಾಗತಃ ಪಪೌ ತೋಯಂ ಸಿಷಿಚೇ ಚಾತ್ಮನಸ್ತನುಮ್ ।
ತದೈವ ದಿವ್ಯದೇಹಃ ಸನ್ಸರ್ವಾಭರಣಭೂಷಿತಃ ॥92॥
ದಿವ್ಯಂ ವಿಮಾನಮಾರುಹ್ಯ ಪ್ರಯಯಾವಮರಾಲಯಮ್ ॥93॥

ಶ್ರೀ ಸೂತ ಉವಾಚ–

ಏವಂ ಪ್ರಭಾವಮೇತದ್ಧೈತೀರ್ಥಂ ಪಾಪವಿನಾಶನಮ್ ।
ಪಾಪಾನಾಂ ನಾಶನಾದ್ವಿಪ್ರಾ ಪಾಪನಾಶಾಭಿಧಂ ಹಿ ತತ್ ॥94॥

ಇತ್ಥಂ ರಹಸ್ಯಂ ಕಥಿತಂ ಮುನೀಂದ್ರಾ–
ಸ್ತದ್ವೈಭವಂ ಪಾಪವಿನಾಶನಸ್ಯ ।
ಯತ್ರಾಭಿಷೇಕಾತ್ಸಹಸಾ ವಿಮುಕ್ತೌ
ದ್ವಿಜಶ್ಚ ಶೂದ್ರಶ್ಚ ವಿನಿಂದ್ಯಕೃತ್ಯೌ ॥95॥

ಇತಿ ಸ್ಕಾಂದೇ ಮಹಾಪುರಾಣೇ ವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ ಶ್ರೀ 'ಪಾಪವಿನಾಶನತೀರ್ಥಮಹಿಮಾನುವರ್ಣನಮ್' ನಾಮ ಏಕೋನವಿಂಶತಿತಮೋಽಧ್ಯಾಯಃ ॥19॥

* * *

ಸುಮತಿಯಿಂದ ಉಪದೇಶವನ್ನು ಹೊಂದಿದ ದೃಢಮತಿಯೂ ಸಹ ತನ್ನ ಪಾಪಾನುಗುಣವಾಗಿ ಅನೇಕ ಅಸಂಖ್ಯ ಕಲ್ಪಗಳಷ್ಟು ಕಾಲ ನರಕದಲ್ಲಿ ಶಿಕ್ಷೆಯನ್ನನುಭವಿಸಿ, ನಾನಾವಿಧವಾದ ಹೀನಯೋನಿಗಳಲ್ಲಿ ಜನಿಸಿ, ಕೊನೆಗೆ ವೇಂಕಟಾಚಲದಲ್ಲಿ ಹದ್ದಾಗಿ ಜನಿಸಿದನು. ನೀರನ್ನು ಕುಡಿಯಲು ಒಂದು ಬಾರಿ ಪಾಪವಿನಾಶನ ತೀರ್ಥದ ಬಳಿ ಹೋದಾಗ ಆ ಪುಣ್ಯಕರವಾದ ನೀರಿನ ಸಿಂಚನ ಮಾತ್ರದಿಂದ ತನ್ನ ಹೀನಯೋನಿಯನ್ನು ಕಳೆದುಕೊಂಡು ದಿವ್ಯದೇಹವನ್ನು ಧರಿಸಿ, ಸರ್ವಾಭರಣ ವಿಭೂಷಿತನಾಗಿ ವಿಮಾನವನ್ನೇರಿ ಸ್ವರ್ಗವನ್ನೇ ಹೊಂದಿದನು. ಪಾಪಗಳನ್ನು ನಾಶಮಾಡುವದರಿಂದ ಈ ತೀರ್ಥವು ಪಾಪವಿನಾಶನ ತೀರ್ಥವೆಂಬುದಾಗಿ ಪ್ರಸಿದ್ಧವಾಗಿರುವದು. ಇದಕ್ಕೆ ವಿನಿಂದ್ಯ ಕರ್ಮಗಳನ್ನಾಚರಿಸಿ ಪತಿತರಾದ ಬ್ರಾಹ್ಮಣ– ಶೂದ್ರರು ಇಲ್ಲಿಯ ಸ್ನಾನಮಾತ್ರದಿಂದ ವಿಮುಕ್ತರಾಗಿರುವದು ಪಾಪಾವಿನಾಶನ ತೀರ್ಥದ ಮಹತ್ತ್ವಕ್ಕೆ ಸಾಕ್ಷಿಯಾಗಿರುವದು.

ಇಲ್ಲಿಗೆ ಸ್ಕಾಂದಪುರಾಣದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ ಪಾಪವಿನಾಶತೀರ್ಥಮಹಿಮಾನುವರ್ಣನವೆಂಬ ಹತ್ತೊಂಭತ್ತನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥ ವಿಂಶತಿತಮೋಽಧ್ಯಾಯಃ

[ಪಾಪವಿನಾಶತೀರ್ಥಭೂದಾನಫಲಾನುವರ್ಣನಮ್]

ಶ್ರೀ ಸೂತ ಉವಾಚ–

ಪುನಶ್ಚಾಹಂ ಪ್ರವಕ್ಷ್ಯಾಮಿ ಪಾಪನಾಶನವೈಭವಮ್ ।
ಭಗವದ್ಭಕ್ತಿಭಾವೇನ ಶೃಣುಧ್ವಂ ಸುಸಮಾಹಿತಾಃ ॥1॥

ಇತಿಹಾಸಂ ಪ್ರವಕ್ಷ್ಯಾಮಿ ಸರ್ವಪಾಪವಿನಾಶನಮ್ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥

ಆಸೀತ್ ದ್ವಿಜವರೋ ವೇದವೇದಾಂಗಪಾರಗಃ ॥2॥

ದರಿದ್ರೋ ವೃತ್ತಿಹೀನಶ್ಚ ನಾಮ್ನಾ ಭದ್ರಮತಿರ್ದ್ವಿಜಃ ॥3॥

ಶ್ರುತಾಣಿ ಸರ್ವಶಾಸ್ತ್ರಾಣಿ ತೇನ ವಿಪ್ರೇಣ ಧೀಮತಾ ।
ಶ್ರುತಾನಿ ಚ ಪುರಾಣಾನಿ ಧರ್ಮಶಾಸ್ತ್ರಾಣಿ ಸರ್ವಶಃ ॥4॥

ಅಭವಂಸ್ತಸ್ಯ ಷಟ್ಪತ್ನ್ಯಃ ಕೃತಾ ಸಿಂಧುರ್ಯಶೋವತೀ ।
ಕಾಮಿನೀ ಮಾಲಿನೀ ಚೈವ ಶೋಭಾ ಚೈವ ಪ್ರಕೀರ್ತಿತಾಃ ॥5॥

ತಾಸು ಪತ್ನೀಷು ತಸ್ಯಾಸೀತ್ಪುತ್ರಾಣಾಂ ಚ ಶತದ್ವಯಮ್ ।

## ಇಪ್ಪತ್ತನೆಯ ಅಧ್ಯಾಯ

[ಪಾಪವಿನಾಶನತೀರ್ಥ–ಭೂದಾನ ಫಲಾನುವರ್ಣನ]

'ನಾನು ನಿಮಗೆ ಪಾಪವಿನಾಶನ ತೀರ್ಥದ ಮಾಹಾತ್ಮ್ಯವನ್ನು ಮತ್ತಷ್ಟು ವರ್ಣನ ಮಾಡುವೆನು' ಎಂದು ತಿಳಿಸಿದ ಸೂತರು ಶ್ರವಣ ಮಾತ್ರದಿಂದ ಎಲ್ಲ ಪಾಪವನ್ನು ಕಳೆಯುವ ಪಾಪ ವಿನಾಶನ ತೀರ್ಥದ ಮಾಹಾತ್ಮ್ಯ ಪ್ರತಿಪಾದಕವಾದ ಇತಿಹಾಸವೊಂದನ್ನು ತಿಳಿಸಿದರು.

ಪೂರ್ವದಲ್ಲಿ ಭದ್ರಮತಿಯೆಂಬ ವೇದವೇದಾಂಗಪಾರಗನೂ, ಬಡವನೂ ವೃತ್ತಿಹೀನನೂ ಆಗಿದ್ದ ಬ್ರಾಹ್ಮಣನೊಬ್ಬನಿದ್ದನು. ಬಹಳಷ್ಟು ಶಾಸ್ತ್ರ–ಪುರಾಣಗಳ ಅಧ್ಯಯನವನ್ನು ಮಾಡಿದ್ದ ಭದ್ರಮತಿಗೆ ಕೃತಾ, ಸಿಂಧು, ಯಶೋವತಿ, ಕಾಮಿನೀ, ಮಾಲಿನೀ, ಮತ್ತು ಶೋಭಾ ಎಂಬ ಆರು ಜನ

ತೇ ಸರ್ವೇ ತಸ್ಯ ಪುತ್ರಾದ್ಯಾಃ ಕ್ಷುಧಯಾ ಪರಿಪೀಡಿತಾಃ ॥6॥

ಅಕಿಂಚನೋ ಭದ್ರಮತಿಃ ಕ್ಷುಧಾರ್ತಾನಾತ್ಮಜಾನ್ಪ್ರಿಯಾನ್ ।
ಪಶ್ಯನ್ಪ್ರಿಯಾಃ ಕ್ಷುಧಾರ್ತಾಶ್ಚ ವಿಲಲಾಪಾಕುಲೇಂದ್ರಿಯಃ ॥7॥

ಧಿಗ್ಜನ್ಮ ಭಾಗ್ಯರಹಿತಂ ಧಿಗ್ಜನ್ಮ ಧನವರ್ಜಿತಮ್ ।
ಧಿಗ್ಜನ್ಮ ಕೀರ್ತಿರಹಿತಂ ಧಿಗ್ಜನ್ಮಾತಿಥ್ಯವರ್ಜಿತಮ್ ॥8॥

ಧಿಗ್ಜನ್ಮಾಚಾರರಹಿತಂ ಧಿಗ್ಜನ್ಮ ಜ್ಞಾನವರ್ಜಿತಮ್ ।
ಧಿಗ್ಜನ್ಮ ಯತ್ನರಹಿತಂ ಧಿಗ್ಜನ್ಮ ಸುಖವರ್ಜಿತಮ್ ॥9॥

ಧಿಗ್ಜನ್ಮ ಬಂಧುರಹಿತಂ ಧಿಗ್ಜನ್ಮ ಖ್ಯಾತಿವರ್ಜಿತಮ್ ।
ನರಸ್ಯ ಬಹ್ವಪತ್ಯಸ್ಯ ಧಿಗ್ಜನ್ಮೈಶ್ವರ್ಯವರ್ಜಿತಮ್ ॥10॥

ಅಹೋ ಗುಣಾಃ ಸೌಮ್ಯತಾ ಚ ವಿದ್ವತ್ತಾ ಜನ್ಮ ಸತ್ಕುಲೇ ।
ದಾರಿದ್ರ್ಯಾಂಬುಧಿಮಗ್ನಸ್ಯ ಸರ್ವಮೇತನ್ನ ಶೋಭತೇ ॥11॥

ವಿಪ್ರಾಃ ಪುತ್ರಾಶ್ಚ ಪೌತ್ರಾಶ್ಚ ಬಾಂಧವಾ ಭ್ರಾತರಸ್ತಥಾ ।
ಶಿಷ್ಯಾಶ್ಚ ಸರ್ವೇ ಮನುಜಾಸ್ತ್ಯಕ್ಷ್ಯಂತ್ಯೈಶ್ವರ್ಯವರ್ಜಿತಮ್ ॥12॥

ಇತಿ ನಿಶ್ಚಿತ್ಯ ಮತಿಮಾನ್ ಧೀರೋ ಭದ್ರಮತಿರ್ದ್ವಿಜಃ ।
ಚಂಡಾಲೋ ವಾ ದ್ವಿಜಾ ವಾಽಪಿ ಭಾಗ್ಯವಾನೇವ ಪೂಜ್ಯತೇ ॥13॥

ದರಿದ್ರಃ ಪುರುಷೋ ಲೋಕೇ ಶವವಲ್ಲೋಕನಿಂದಿತಃ ।
ಅಹೋ ಸಂಪತ್ಸಮಾಯುಕ್ತೇ ನಿಷ್ಠುರೋ ವಾಽಪ್ಯನಿಷ್ಠುರಃ ॥14॥

ಪತ್ನಿಯರಿದ್ದರು. ಅವರಿಂದ ಎರಡು ನೂರು ಜನ ಮಕ್ಕಳು ಜನಿಸಿದರು. ದಾರಿದ್ರ್ಯದಿಂದ ಬಾಧಿತರಾದ ಮಕ್ಕಳು ಹಸಿವೆಯಿಂದ ಅಳುವದನ್ನು ಕಂಡ ಭದ್ರಮತಿಯು ಬಹು ದುಃಖವನ್ನನುಭವಿಸಿ ಹೀಗೆ ವಿಚಾರವನ್ನು ಮಾಡಿದನು. 'ಧನವಿಲ್ಲದವರ ಜೀವನಕ್ಕೆ ಧಿಕ್ಕಾರವಿರಲಿ. ಕೀರ್ತಿರಹಿತರಾದವರ, ಆಚಾರ ರಹಿತರಾದವರ, ಸುಖವಿಹೀನರಾದವರ, ಪ್ರಯತ್ನರಹಿತರಾದವರ, ಐಶ್ವರ್ಯ ರಹಿತರಾದವರ ಜನ್ಮವು ವ್ಯರ್ಥವಾಗಿರುವದು. ಸೌಮ್ಯತಾ, ವಿದ್ವತ್ತಾ ಮೊದಲಾದ ಅನೇಕ ಸದ್ಗುಣಗಳಾವವೂ ಸಹ ಧನವಿಹೀನ ಪುರುಷನಲ್ಲಿ ಶೋಭೆಯನ್ನುಂಟುಮಾಡುವದಿಲ್ಲ. ಸಮಗ್ರ ಬಾಂಧವರು, ಗುರು-ಹಿರಿಯರು, ಶಿಷ್ಯರು ಎಲ್ಲರೂ ಸಹ ಧನವಿಲ್ಲದ ವ್ಯಕ್ತಿಯನ್ನು ತಿರಸ್ಕಾರದಿಂದ ನೋಡುವರು. ದರಿದ್ರಪುರುಷನು ಹೆಣದಂತೆ ಲೋಕದಲ್ಲಿ ನಿಂದಿತನಾಗಿರುವನು.

ಗುಣಹೀನೋಽಪಿ ಗುಣವಾನ್ಮೂರ್ಖೋ ವಾಽಪಿ ಸ ಪಂಡಿತಃ ।
ನಿಷ್ಠುರೋ ವಾ ಗುಣೀ ವಾಪಿ ಧರ್ಮಹೀನೋಽಥವಾ ನರಃ ॥15॥

ಐಶ್ವರ್ಯಗುಣಯುಕ್ತಶ್ಚೇತ್ಪೂಜ್ಯ ಏವ ನ ಸಂಶಯಃ ।
ಅಹೋ ದರಿದ್ರತಾ ದುಃಖಂ ತತ್ರಾಪ್ಯಾಶಾಽತಿದುಃಖದಾ ॥16॥

ಆಶಾಭಿಭೂತಾಃ ಪುರುಷಾ ದುಃಖಮಶ್ನುವತೇ ಕ್ಷಣಾತ್ ॥17॥

ಆಶಾಯಾ ಯೇ ದಾಸಾ ದಾಸಾಸ್ತೇ ಸರ್ವಲೋಕಸ್ಯ ।
ಆಶಾ ಯೇಷಾಂ ದಾಸೀ ತೇಷಾಂ ದಾಸಾಯತೇ ಲೋಕಃ ॥18॥

ಸರ್ವಶಾಸ್ತ್ರಾರ್ಥವೇತ್ತಾಽಪಿ ದರಿದ್ರೋ ಭಾತಿ ಮೂರ್ಖವತ್ ।
ಅಕಿಂಚನ್ಯಮಹಾಗ್ರಾಹಗ್ರಸ್ತಾನಾಂ ನಾಸ್ತಿ ಮೋಚಕಃ ॥19॥

ಅಹೋ ದುಃಖಮಹೋ ದುಃಖಮಹೋ ದುಃಖಂ ದರಿದ್ರತಾ ।
ತತ್ರಾಪಿ ಪುತ್ರದಾರಾಣಾಂ ಬಾಹುಲ್ಯಮತಿದುಃಖದಮ್ ॥20॥

ಏವಮುಕ್ತ್ವಾ ಭದ್ರಮತಿಃ ಸರ್ವಶಾಸ್ತ್ರಾರ್ಥಪಾರಗಃ ।
ಅತ್ಯೈಶ್ವರ್ಯಪ್ರದಂ ಧರ್ಮಂ ಮನಸಾ ಚಿಂತಯಂಸ್ತದಾ ।
ತೂಷ್ಣೀಂ ಸ್ಥಿತೋ ಭದ್ರಮತಿರ್ಮಹಾಕ್ಲೇಶಮಸಮನ್ವಿತಃ ॥21॥

ತದಾನೀಂ ತಾಸು ಭಾರ್ಯಾಸು ಕಾಮಿನೀ ಪತಿದೇವತಾ ॥22॥

ಭಾರ್ಯಾ ಸಾಧುಗುಣೈರ್ಯುಕ್ತಾ ಪತಿಂ ತಂ ಪ್ರತ್ಯಭಾಷತ ॥23॥

ಗುಣವಿಲ್ಲದವನು, ಪಂಡಿತನಲ್ಲದವನು, ಧರ್ಮವಿಹೀನನಾದವನು ಸಹ ಧನವನ್ನು ಹೊಂದಿ ಶ್ರೀಮಂತನಾದಲ್ಲಿ ಅವನು ಸದ್ಗುಣಿಯೂ, ಪಂಡಿತನೂ ಮತ್ತು ಧರ್ಮಿಷ್ಠನೂ ಎನಿಸುವನು. ಆಶೆಯು ಎಲ್ಲ ದುಃಖಗಳಿಗೂ ಮೂಲವೆನಿಸಿರುವದು. ಯಾರು ಆಶೆಗೆ ದಾಸರಾಗಿರುವರೋ ಅವರೂ ಸಮಗ್ರ ಲೋಕಕ್ಕೂ ಸಹ ದಾಸರಾದಂತೆಯೇ ಸರಿ. ಯಾರ ದಾಸಿಯಾಗಿ ಆಶೆಯಿರುವದೋ ಎಲ್ಲ ಲೋಕಗಳೂ ಸಹ ಅವರ ಅಧೀನದಲ್ಲಿರುವವು. ಸರ್ವಶಾಸ್ತ್ರಗಳಾನ್ನು ತಿಳಿದವನಾದವನೂ ಸಹ ಬಡತನವಿದ್ದಲ್ಲಿ ಮೂರ್ಖನೆನಿಸುವನು. ದಾರಿದ್ರ್ಯವೇ ಅತ್ಯಂತ ದುಃಖದಾಯಕವಾಗಿದ್ದು ಅದರಲ್ಲಿಯೂ ಹೆಂಡತಿ-ಮಕ್ಕಳ ಬಾಹುಲ್ಯವು ಮತ್ತಷ್ಟು ದುಃಖದಾಯಕವಾಗಿರುವದು' ಹೀಗೆಂದು ಭದ್ರಮತಿಯು ವಿಚಾರಮಾಡುತ್ತಾ ಐಶ್ವರ್ಯಪ್ರದವಾದ ಉಪಾಯವನ್ನು ಮನಸ್ಸಿನಲ್ಲಿ ಆಲೋಚಿಸ ತೊಡಗಿದನು.

ಮಹಾದುಃಖಿತನಾಗಿ ಮೌನದಿಂದಿರುವ ಪತಿಯನ್ನು ನೋಡಿದ ಭದ್ರಮತಿಯ ಪತಿವ್ರತೆಯಾದ

ಕಾಮಿನ್ಯುವಾಚ–

ಭಗವನ್ಸರ್ವಧರ್ಮಜ್ಞ ಸರ್ವಶಾಸ್ತ್ರಾರ್ಥಪಾರಗ ।
ಮಮ ನಾಥ ಮಹಾಭಾಗ ವಾಕ್ಯಂ ಶೃಣು ಮಹಾಮತೇ ॥24॥

ಸುವರ್ಣಮುಖರೀತೀರೇ ಋಷಿಸಂಘನಿಷೇವಿತೇ ।
ವರ್ತತೇ ದೈವತೈಃ ಸೇವ್ಯಃ ಪಾವನೋ ವೇಂಕಟಾಚಲಃ ॥25॥

ತಸ್ಮಿನ್ವೇಂಕಟಶೈಲೇಂದ್ರೇ ಸುರಾಸುರನಮಸ್ಕೃತೇ ।
ವರ್ತತೇ ಪಾವನಂ ತೀರ್ಥಂ ಪಾಪಾನಾಂ ದಾಹಕಂ ಶುಭಮ್ ॥26॥

ತತ್ರ ಗತ್ವಾ ಮಹಾಭಾಗ ಪಾಪನಾಶೇ ಮಹಾಮತೇ ।
ಕುರು ಸ್ನಾನಂ ಪ್ರಯತ್ನೇನ ಭಾರ್ಯಾಪುತ್ರಸಮನ್ವಿತಃ ॥27॥

ತಸ್ಯ ತೀರ್ಥಸ್ಯ ಮಾಹಾತ್ಮ್ಯಂ ನಾರಾದಾಚ್ಚ ಶ್ರುತಂ ಮಯಾ ।
ಬಾಲಭಾವೇ ಮಮ ಪಿತುರಂತಿಕೇ ಪ್ರೋಕ್ತವಾನ್ಮುನಿಃ ॥28॥

ವೇಂಕಟಾದ್ರೌ ಮಹಾಪುಣ್ಯೇ ಸರ್ವಪಾತಕನಾಶನೇ ।
ಸರ್ವದುಃಖಪ್ರಶಮನೇ ಸರ್ವಸಂಪತ್ಪ್ರದಾಯಕೇ ॥29॥

ಪಾಪನಾಶೇ ಮಹಾತೀರ್ಥೇ ಸ್ನಾತ್ವಾ ಸಂಕಲ್ಪಪೂರ್ವಕಮ್ ।
ಅತ್ಯೈಶ್ವರ್ಯಪ್ರದಂ ಧರ್ಮಂ ಮನಸಾ ಚಿಂತಯಂಸ್ತದಾ ॥30॥

ಭೂಮಿದಾನಂ ವಿನಿಶ್ಚಿತ್ಯ ಸರ್ವದಾನೋತ್ತಮೋತ್ತಮಮ್ ।
ಪ್ರಾಪಕಂ ಪರಲೋಕಸ್ಯ ಸರ್ವಕಾಮಫಲಪ್ರದಮ್ ॥31॥

ಕಾಮಿನಿಯೆಂಬ ಮಡದಿಯು 'ಹೇ ಸರ್ವಧರ್ಮಪರಾಯಣನಾದ ಭದ್ರಮತಿಯೇ! ಪತಿಯೇ! ನನ್ನ ಮಾತನ್ನು ಕೇಳಿರಿ. ಸುವರ್ಣಮುಖರೀ ನದಿಯ ತೀರದಲ್ಲಿರುವ, ಋಷಿಸಮೂಹದಿಂದ ಸೇವಿತವಾದ. ದೇವತೆಗಳಿಂದಲೂ ಸಂಸೇವಿತವಾದ ವೇಂಕಟಾಚಲವೆಂಬ ಪರ್ವತವಿದ್ದು ಅದರಲ್ಲಿ ಸರ್ವಪಾಪದಾಹಕವಾದ ಪಾಪವಿನಾಶನವೆಂಬ ತೀರ್ಥಶ್ರೇಷ್ಠವಿರುವದು. ಅಲ್ಲಿಗೆ ಪತ್ನಿಯರಿಂದ, ಪುತ್ರರಿಂದ ಸಮೇತನಾಗಿ ಸ್ನಾನವನ್ನು ಮಾಡು. ಹಿಂದೆ ನಾನು ಬಾಲ್ಯಾವಸ್ಥೆಯಲ್ಲಿ ನನ್ನ ತಂದೆಯ ಮನೆಯಲ್ಲಿದ್ದಾಗ ನಾರದರು ಈ ತೀರ್ಥದ ಮಹಾತ್ಮೆಯನ್ನು ವಿವರಿಸುತ್ತಾ 'ಸರ್ವಪಾಪಪ್ರಣಾಶಕವಾದ, ಸರ್ವಪುಣ್ಯವಿವರ್ಧಕವಾದ, ಸರ್ವದುಃಖವಿನಾಶಕವಾದ, ಸರ್ವಸಂಪತ್ಪ್ರದಾಯಕವಾದ ಪಾಪನಾಶತೀರ್ಥದಲ್ಲಿ ಸ್ನಾನವನ್ನು ಮಾಡಿ ಅತ್ಯೈಶ್ವರ್ಯಪ್ರದವಾದ

ದಾನಾನಾಮುತ್ತಮಂ ದಾನಂ ಭೂದಾನಂ ಪರಿಕೀರ್ತಿತಮ್ ।
ತದ್ದತ್ತ್ವಾ ಸಮವಾಪ್ನೋತಿ ಯದ್ಯದಿಷ್ಟತಮಂ ನರಃ ॥32॥

ಇತ್ಯೇವಂ ನಾರದೇನೋಕ್ತಂ ಶ್ರುತ್ವಾ ಮೇ ಜನಕೋ ದ್ವಿಜಃ ।
ಸಂಪ್ರಹೃಷ್ಟಮನಾ ಭೂತ್ವಾ ಶೇಷಾದ್ರಿಂ ಪ್ರಾಪ್ತವಾಂಸ್ತದಾ ॥33॥

ತತ್ರ ಗತ್ವಾ ಮಹಾಭಾಗಃ ಸರ್ವಸಂಪತ್ಪ್ರದಾಯಕಮ್ ।
ಭೂದಾನಂ ವಿಪ್ರವರ್ಯಾಯ ಶ್ರೋತ್ರಿಯಾಯ ಪ್ರದತ್ತವಾನ್ ॥34॥

ತತೋ ಮೇ ಜನಕೋ ವಿದ್ವಾನ್ಸರ್ವಭಾಗ್ಯಸಮನ್ವಿತಃ ।
ಇಹಲೋಕೇ ಸುಖಂ ಪ್ರಾಪ್ಯ ಚಾಂತೇ ವಿಷ್ಣುಪರಂ ಯಯೌ ॥35॥

ತ್ವಂ ಚ ಗತ್ವಾ ಮಹಾಭಾಗ ವೇಂಕಟಾದ್ರಿಂ ನಗೋತ್ತಮಮ್ ।
ಕುರು ದಾನಂ ಪ್ರಯತ್ನೇನ ಭೂದಾನಂ ಸರ್ವಕಾಮದಮ್ ॥36॥

ಭೂಮಿದಾನಸ್ಯ ಮಾಹಾತ್ಮ್ಯಂ ಶೃಣುಷ್ವ ಸುಸಮಾಹಿತಃ ।
ನ ಕೋಽಪಿ ಗದಿತುಂ ಶಕ್ತೋ ಲೋಕೇಽಸ್ಮಿನ್ಭಗವನ್ಪ್ರಭೋ ॥37॥

ಭೂಮಿದಾನಾತ್ಪರಂ ದಾನಂ ನ ಭೂತಂ ನ ಭವಿಷ್ಯತಿ ।
ಪರಂ ನಿರ್ವಾಣಮಾಪ್ನೋತಿ ಭೂಮಿದೋ ನಾತ್ರ ಸಂಶಯಃ ॥38॥

ಸ್ವಲ್ಪಾಮಪಿ ಮಹೀಂ ದತ್ತ್ವಾ ಶ್ರೋತ್ರಿಯಾಯಾಹಿತಾಗ್ನಯೇ ।
ಬ್ರಹ್ಮಲೋಕಮವಾಪ್ನೋತಿ ವುನರಾವೃತ್ತಿವರ್ಜಿತಮ್ ॥39॥

ಭೂಮಿದಃ ಸರ್ವದಃ ಪ್ರೋಕ್ತೋ ಭೂಮಿದೋ ಮೋಕ್ಷಭಾಗ್ಭವೇತ್।
ಭೂಮಿದಾನಂ ವೃಷಾದ್ರೌ ಚ ಸರ್ವಪಾಪಪ್ರಣಾಶನಮ್ ॥40॥

ಧರ್ಮವಾವುದೆಂಬುದನ್ನು ವಿಚಾರಿಸುತ್ತಾ, ಭೂದಾನವು ಸರ್ವದಾನಗಳಲ್ಲಿ ಶ್ರೇಷ್ಠವಾಗಿರುವದೆಂದು ನಿಶ್ಚಯಿಸಿ, ಸರ್ವಕಾಮಪ್ರದಾಯಕವಾದ ಭೂದಾನವನ್ನು ಮಾಡಿದಲ್ಲಿ ಏನನ್ನು ಬಯಸಿರುವರೋ ಅದೆಲ್ಲವೂ ದೊರಕುವದು' ಎಂದು ನುಡಿದಿರುವರು. ಅದರಂತೆ ನನ್ನ ತಂದೆಯೂ ಸಹ ಪಾಪನಾಶನ ತೀರ್ಥದಲ್ಲಿ ಭೂದಾನವನ್ನು ಮಾಡಿ ಸರ್ವ ಸಂಪತ್ತುಗಳನ್ನು ಹೊಂದಿ ಕೊನೆಗೆ ವಿಷ್ಣುವಿನ ವೈಕುಂಠ ಸ್ಥಾನವನ್ನೇ ಹೊಂದಿರುವನು. ಭೂದಾನದ ಮಹತ್ತ್ವವನ್ನು ಯಾರೂ ಸಹ ವರ್ಣಿಸಲು ಸಾಧ್ಯವಿಲ್ಲ. ಅದಕ್ಕೆ ಸದೃಶವಾದ ದಾನವು ಮತ್ತೊಂದಿರುವದಿಲ್ಲ. ಶ್ರೋತ್ರಿಯ ಬ್ರಾಹ್ಮಣನಿಗೆ ಸ್ವಲ್ಪ ಭೂಮಿಯನ್ನು ಕೊಟ್ಟರೂ ಸಹ ಅದು ಬ್ರಹ್ಮಲೋಕಪ್ರಾಪ್ತಿಗೆ ಕಾರಣವೆನಿಸಿರುವದು.

ಮಹಾಪಾತಕಯುಕ್ತೋ ವಾ ಯುಕ್ತೋ ವಾ ಸರ್ವಪಾತಕೈಃ ।
ದಶಹಸ್ತಾಂ ಮಹೀಂ ದತ್ತ್ವಾ ಸರ್ವಪಾಪೈಃ ಪ್ರಮುಚ್ಯತೇ ॥41॥

ಸತ್ಪಾತ್ರೇ ಭೂಮಿದಾತಾ ಯಃ ಸರ್ವದಾನಫಲಂ ಲಭೇತ್ ।
ಭೂಮಿದಸ್ಯ ಸಮೋ ನಾನ್ಯಸ್ತ್ರಿಷು ಲೋಕೇಷು ವಿದ್ಯತೇ ॥42॥

ದ್ವಿಜಸ್ಯ ವೃತ್ತಿಹೀನಸ್ಯ ಯಃ ಪ್ರದದ್ಯಾನ್ಮಹೀಂ ಶುಭಾಮ್ ।
ತಸ್ಯ ಪುಣ್ಯಫಲಂ ವಕ್ತುಂ ಶೇಷೋ ನಾರ್ಹಃ ಕದಾಚನ ॥43॥

ವಿಪ್ರಸ್ಯ ವೃತ್ತಿಹೀನಸ್ಯ ಸದಾಚಾರಸ್ಯ ಕಸ್ಯಚಿತ್ ।
ಯೋಽಲ್ಪಾಮಪಿ ಮಹೀಂ ದದ್ಯಾತ್ಸ ವಿಷ್ಣುರ್ನಾತ್ರ ಸಂಶಯಃ ॥44॥

ಇಕ್ಷುಗೋಧೂಮಕೇದಾರಪೂಗವೃಕ್ಷಾದಿಸಂಯುತಾ ।
ಪೃಥ್ವೀ ಪ್ರದೀಯತೇ ಯೇನ ಸ ವಿಷ್ಣುರ್ನಾತ್ರ ಸಂಶಯಃ ॥45॥

ವೃತ್ತಿಹೀನಸ್ಯ ವಿಪ್ರಸ್ಯ ದರಿದ್ರಸ್ಯ ಕುಟುಂಬಿನಃ ।
ಸ್ವಲ್ಪಾಮಪಿ ಮಹೀಂ ದತ್ತ್ವಾ ವಿಷ್ಣುಸಾಯುಜ್ಯಮಶ್ನುತೇ ॥46॥

ಸಕ್ತಸ್ಯ ದೇವಪೂಜಾಸು ವಿಪ್ರಸ್ಯಾಟವಿಕಾ ಮಹೀ ।
ದತ್ತಾ ದದಾತಿ ಗಂಗಾಯಾಂ ತ್ರಿರಾತ್ರಸ್ನಾನಜಂ ಫಲಮ್ ॥47॥

ವಿಪ್ರಸ್ಯ ವೃತ್ತಿಹೀನಸ್ಯ ಸದಾಚಾರರತಸ್ಯ ಚ ।
ದ್ರೋಣಿಕಾಂ ಪೃಥಿವೀಂ ದತ್ತ್ವಾ ಯತ್ಫಲಂ ಲಭತೇ ಶೃಣು ॥48॥

ಗಂಗಾತೀರೇಽಶ್ವಮೇಧಾನಾಂ ಶತಾನಿ ವಿಧಿವನ್ನರಃ ।

ಮಹಾಪಾತಕಯುಕ್ತನಾಗಿದ್ದರೂ, ಎಲ್ಲ ಪಾಪಕೃತ್ಯಗಳನ್ನಾಚರಿಸುವವನೂ ಸಹ ಹತ್ತು ಅಂಗೈಗಳಷ್ಟು ಭೂಮಿಯನ್ನು ಸತ್ಪಾತ್ರನಿಗೆ ದಾನಮಾಡುವದರಿಂದ ಸರ್ವಪಾಪಗಳನ್ನು ಕಳೆದುಕೊಳ್ಳುವನು. ವೃತ್ತಿಕರ್ಷಿತನಾದ, ದಾರಿದ್ರ್ಯದಿಂದ ಬಳಲುವ ಸತ್ಪಾತ್ರನಾದ ಬ್ರಾಹ್ಮಣನಿಗೆ ಭೂಮಿದಾನವನ್ನು ಮಾಡಿದಲ್ಲಿ ಬರುವ ಪುಣ್ಯವನ್ನು ವರ್ಣಿಸಲು ಶೇಷನೂ ಸಮರ್ಥನಾಗಿರುವದಿಲ್ಲ. ಗೋಧಿ, ಕಬ್ಬು, ಮೊದಲಾದ ಬೆಳೆಗಳಿಂದ ಯುಕ್ತವಾದ, ಫಲವೃಕ್ಷಗಳಿಂದ ಸಹಿತವಾದ ಭೂಮಿಯನ್ನು ಬ್ರಾಹ್ಮಣನಿಗೆ ದಾನಮಾಡುವವನು ವಿಷ್ಣುಸದೃಶನಾಗುವನು. ದೇವಪೂಜಾದಿಗಳಲ್ಲಿ ಆಸಕ್ತನಾದ ವ್ಯಕ್ತಿಗೆ, ಕುಟುಂಬಿಯಾದ ವ್ಯಕ್ತಿಗೆ ಭೂದಾನವನ್ನು ಮಾಡಿದವನು ವಿಷ್ಣುಸಾಯುಜ್ಯವನ್ನು ಹೊಂದುವನು. ವೃತ್ತಿಹೀನನಾದ ಸದಾಚಾರರತನಾದ ಬ್ರಾಹ್ಮಣನಿಗೆ ಒಂದು ದೊನ್ನೆಯಷ್ಟು

ಕೃತ್ವಾ ಯತ್ಫಲಮಾಪ್ನೋತಿ ತದಾಪ್ನೋತಿ ಮಹತ್ಫಲಮ್ ॥49॥

ದದಾತಿ ಭಾರಿಕಾಂ ಭೂಮಿಂ ದರಿದ್ರಾಯ ದ್ವಿಜಾತಯೇ ।
ತಸ್ಯ ಪುಣ್ಯಂ ಪ್ರವಕ್ಷ್ಯಾಮಿ ಮನ್ನಾಥ ಭಗವನ್ಪ್ರಭೋ ॥50॥

ಅಶ್ವಮೇಧಸಹಸ್ರಾಣಿ ವಾಜಪೇಯಶತಾನಿ ಚ ।
ವಿಧಾಯ ಜಾಹ್ನವೀತೀರೇ ಯತ್ಫಲಂ ತಲ್ಲಭೇತ ಸಃ ॥51॥

ಭೂಮಿದಾನಂ ಮಹಾದಾನಮಿತಿದಾನಂ ಪ್ರಕೀರ್ತಿತಮ್ ।
ಸರ್ವಪಾಪಪ್ರಶಮನಮಪವರ್ಗಫಲಪ್ರದಮ್ ॥52॥

ಯಚ್ಛ್ರುತ್ವಾ ಶ್ರದ್ಧಯಾ ಯುಕ್ತೋ ಭೂಮಿದಾನಫಲಂ ಲಭೇತ್ ।
ಭಾರ್ಯಾಯಾ ವಚನಂ ಶ್ರುತ್ವಾ ತ್ವಿತಿಹಾಸಸಮನ್ವಿತಮ್ ॥53॥

ಸಂತುಷ್ಟೋ ಮನಸಿ ಧ್ಯಾತ್ವಾ ಶೇಷಾಚಲನಿವಾಸಿನಮ್ ।
ಗಂತುಂ ಪ್ರಚಕ್ರಮೇ ಬುದ್ಧ್ಯಾ ಕ್ರೀಡಾಚಲಮನುತ್ತಮಮ್ ॥54॥

ತತೋ ಭದ್ರಮತಿಃ ಸೌಮ್ಯಃ ಸರ್ವಧರ್ಮಪರಾಯಣಃ ।
ಸುಶಾಲಿಂ ನಾಮ ನಗರೀಂ ಕಲತ್ರಸಹಿತೋ ಯಯೌ ॥55॥

ಸುಘೋಷಂ ನಾಮ ವಿಪ್ರೇಂದ್ರಂ ಸರ್ವೈಶ್ವರ್ಯಸಮನ್ವಿತಮ್ ।
ಗತ್ವಾ ಯಾಚಿತವಾನ್ಭೂಮಿಂ ಪಂಚಹಸ್ತಾಯತಾಂ ದ್ವಿಜಃ ॥56॥

ಭೂಮಿಯನ್ನು ಕೊಟ್ಟರೂ ಸಹ ಗಂಗಾನದಿಯಲ್ಲಿ ಸಾವಿರಾರು ಅಶ್ವಮೇಧಗಳನ್ನಾಚರಿಸಿದ ಫಲವನ್ನು ಹೊಂದುವನು. ಒಂದು ಕೊಳಗ (ದೊನ್ನೆ) ಪರಿಮಿತವಾದ ಭೂಮಿಯನ್ನು ದಾನಮಾಡಿದಲ್ಲಿ ಅಸಂಖ್ಯ ಅಶ್ವಮೇಧ, ವಾಜಪೇಯ ಯಾಗಗಳನ್ನು ಗಂಗಾನದಿಯ ದಡದಲ್ಲಿ ಆಚರಿಸಿದಾಗ ಬರುವ ಫಲವನ್ನು ಹೊಂದುವನು. ಆದ್ದರಿಂದ ಭೂಮಿದಾನವು ಮಹಾದಾನವೆನಿಸಿ ಸರ್ವ ಪಾಪ ಪ್ರಣಾಶಕವಾಗಿ, ಸರ್ವೈಶ್ವರ್ಯಪ್ರದಾಯಕವಾಗಿರುವದು. ಆದ್ದರಿಂದ ಹೇ ಸ್ವಾಮಿಯೇ! ನೀವೂ ಸಹ ಅಲ್ಲಿ ಹೋಗಿ ಪುತ್ರಕಳತ್ರರಿಂದ ಸಹಿತರಾಗಿ ಪಾಪವಿನಾಶತೀರ್ಥದಲ್ಲಿ ಸ್ನಾನವನ್ನು ಮಾಡಿ ಭೂದಾನವನ್ನು ಮಾಡಿದಲ್ಲಿ ಎಲ್ಲ ಅಭೀಷ್ಟಗಳೂ ಸಹ ಕೈಗೂಡುವವು' ಎಂದು ನುಡಿದಳು.

ಮಡದಿಯ ಮಾತನ್ನು ಕೇಳಿದ ಭದ್ರಮತಿಯು ಸಂತುಷ್ಟನಾಗಿ ಮನಸ್ಸಿನಲ್ಲಿಯೇ ವೇಂಕಟಾಚಲ-ಶ್ರೀನಿವಾಸರನ್ನು ಸ್ಮರಿಸಿ ಸಪರಿವಾರನಾಗಿ ಶೇಷಾಚಲಕ್ಕೆ ಹೊರಟನು. ಮಾರ್ಗದಲ್ಲಿ ಭದ್ರಮತಿಯು

ಸುಘೋಷೋ ಧರ್ಮನಿರತಸ್ತಂ ನಿರೀಕ್ಷ್ಯ ಕುಟುಂಬಿನಮ್ ।
ಮನಸಾ ಪ್ರೀತಿಮಾಪನ್ನಃ ಸಮಭ್ಯರ್ಚ್ಯೈನಮಬ್ರವೀತ್ ॥57॥

ಕೃತಾರ್ಥೋಽಹಂ ಭದ್ರಮತೇ ಸಫಲಂ ಮಮ ಜನ್ಮ ಚ ।
ಮತ್ಕುಲಂ ಚಾನಘಂ ಜಾತಂ ತ್ವಂ ಹಿ ಗ್ರಾಹ್ಯೋಽಸಿ ಮೇ ಯತಃ ॥58॥

ಇತ್ಯುಕ್ತ್ವಾ ತಂ ಸಮಭ್ಯರ್ಚ್ಯ ಸುಘೋಷೋ ಧರ್ಮತತ್ಪರಃ ।
ಪಂಚಹಸ್ತಪ್ರಮಾಣಾಂ ತಾಂ ದದೌ ತಸ್ಮೈ ಮಹಾಮತಿಃ ॥59॥

ಪೃಥಿವೀ ವೈಷ್ಣವೀ ಪುಣ್ಯಾ ಪೃಥಿವೀ ವಿಷ್ಣುಪಾಲಿತಾ ।
ಪೃಥಿವ್ಯಾಸ್ತು ಪ್ರದಾನೇನ ಪ್ರೀಯತಾಂ ಮೇ ಜನಾರ್ದನಃ ॥60॥

ಮಂತ್ರೇಣಾನೇನ ವಿಪ್ರೇಂದ್ರಾಃ ಸುಘೋಷಸ್ತಂ ದ್ವಿಜೇಶ್ವರಮ್ ।
ವಿಷ್ಣುಬುದ್ಧ್ಯಾ ಸಮಭ್ಯರ್ಚ್ಯ ತಾವತೀಂ ಪೃಥಿವೀಂ ದದೌ ॥61॥

ಸ ಭದ್ರಮತಯೇ ವಿಪ್ರಾ ಧೀಮಾಂಸ್ತಾಂ ಯಾಚಿತಾಂ ಭುವಮ್।
ದತ್ತವಾನ್ಹರಿಭಕ್ತಾಯ ಶ್ರೋತ್ರಿಯಾಯ ಕುಟುಂಬಿನೇ ॥62॥

ಸುಘೋಷೋ ಭೂಮಿದಾನೇನ ಕೋಟಿವಂಶಸಮನ್ವಿತಃ ।
ಪ್ರಪೇದೇ ವಿಷ್ಣುಭವನಂ ಯತ್ರ ಗತ್ವಾ ನ ಶೋಚತಿ ॥63॥

ವಿಪ್ರೋ ಭದ್ರಮತಿಶ್ಚಾಪಿ ಪುತ್ರದಾರಸಮನ್ವಿತಃ ।
ಗತೋ ವೇಂಕಟಶೈಲೇಂದ್ರಂ ಸುರಾಸುರನಮಸ್ಕೃತಮ್ ॥64॥

ಸುಶಾಲಿಯೆಂಬ ನಗರಕ್ಕೆ ಹೋಗಿ ಅಲ್ಲಿ ಸುಘೋಷನೆಂಬ ಧರ್ಮನಿರತನಾದ ಬ್ರಾಹ್ಮಣನಲ್ಲಿ ಐದು ಹಸ್ತ ಪರಿಮಿತವಾದ ಭೂಮಿಯನ್ನು ಯಾಚಿಸಿದನು. ಸತ್ಪಾತ್ರನೂ, ಕುಟುಂಬಿಯೂ ಆದ ಭದ್ರಮತಿಯನ್ನು ನೋಡಿ ಅತ್ಯಂತ ಸಂತುಷ್ಟನಾದ ಸುಘೋಷನು ತಾನು ಧನ್ಯನಾದೆನೆಂದು ಭಾವಿಸುತ್ತಾ ಶ್ರದ್ಧೆಯಿಂದ ಸಂಕಲ್ಪ ಪುರಸ್ಸರವಾಗಿ ಬ್ರಾಹ್ಮಣನನ್ನು ಪೂಜಿಸಿ, 'ವಿಷ್ಣುವಿನಿಂದ ಅಭಿರಕ್ಷಿತಳಾದ ಭೂಮಿಯು ವಿಷ್ಣುಸಂಬಂಧಿನಿಯೇ ಆಗಿರುವಳು. ಅಂತಹ ಪೃಥಿಯನ್ನು ಬ್ರಾಹ್ಮಣನಿಗೆ ಕೊಡುವದರಿಂದ ಪೃಥಿವೀಪತಿಯಾದ ಜನಾರ್ದನನು ನನ್ನಲ್ಲಿ ಪ್ರೀತನಾಗಲಿ' ಎಂದು ಭಗವಂತನನ್ನು ಅವನಿಗೆ ಐದು ಹಸ್ತ ಪರಿಮಿತ ಭೂಮಿಯನ್ನು ದಾನಮಾಡಿದನು. ಹರಿಭಕ್ತನೂ, ಶ್ರೋತ್ರಿಯನೂ ಆದ ಭದ್ರಮತಿಗೆ ಭೂದಾನವನ್ನು ಮಾಡಿದ್ದರಿಂದ ಸುಘೋಷನು ದುಃಖರಹಿತವಾದ ವಿಷ್ಣುಮಂದಿರವನ್ನೇ ಹೊಂದಿದನು.

ಗಂಧರ್ವಯಕ್ಷಶೈಲಾದಿಸೇವಿತಂ ಮೇರುಪುತ್ರಕಮ್ ।
ವೈಕುಂಠಾದಾಗತಂ ದಿವ್ಯಂ ಕ್ರೀಡಾಚಲಮನುತ್ತಮಮ್ ॥65॥

ತತ್ರ ಸ್ವಾಮಿಸರಸ್ತೋಯೇ ನಿರ್ಮಲೇ ಪಾವನೇ ಶುಭೇ ।
ದಾರಪುತ್ರಾದಿಸಂಯುಕ್ತಂ ಸ್ನಾತ್ವಾ ಸಂಕಲ್ಪಪೂರ್ವಕಮ್ ॥66॥

ತತ್ಪಶ್ಚಿಮತಟೇ ತ್ವೇಕಸೂಕರಂ ವಸುಧಾಧರಮ್ ।
ನತ್ವಾ ತತ್ರ ವಿಧಾನೇನ ಶ್ರೀನಿವಾಸಾಲಯಂ ಗತಃ ॥67॥

ತತ್ರ ಬ್ರಹ್ಮಾದಿದೇವೈಶ್ಚ ಸೇವಿತಂ ವೇಂಕಟೇಶ್ವರಮ್ ।
ದೃಷ್ಟವಾನ್ಸಹ ಪುತ್ರಾದ್ಯೈರ್ವಿಷ್ಣುಭಕ್ತೋ ಮಹಾಮತಿಃ ॥68॥

ಭಕ್ತ್ಯಾ ಪ್ರಣಮ್ಯ ದೇವೇಶಂ ಶ್ರೀನಿವಾಸಂ ಕೃಪಾನಿಧಿಮ್ ।
ಪುತ್ರದಾರಾದಿಸಂಯುಕ್ತಃ ಪಾಪನಾಶನಮಾಯಯೌ ॥69॥

ತತ್ರ ಸ್ನಾತ್ವಾ ವಿಧಾನೇನ ಕೃತಧರ್ಮಾದಿಸತ್ಕ್ರಿಯಃ ।
ಕಸ್ಮೈಚಿದ್ವಿಷ್ಣುಭಕ್ತಾಯ ಶ್ರೋತ್ರಿಯಾಯ ಮಹಾಮತಿಃ ॥70॥

ವಿಷ್ಣುಬುದ್ಧ್ಯಾ ಸ ಪ್ರದದೌ ಭೂದಾನಂ ಮೋಕ್ಷದಂ ಶುಭಮ್ ॥71॥

ತದಾ ಪ್ರಾದುರಭೂದ್ದೇವಃ ಶಂಖಚಕ್ರಗದಾಧರಃ ॥72॥

ವಿನತಾನಂದನಾರೂಢೋ ವನಮಾಲಾವಿಭೂಷಿತಃ ।
ಪಾಪನಾಶಸ್ಯ ತೀರೇ ತು ಭೂದಾನಸ್ಯ ಪ್ರಭಾವತಃ ॥73॥

ಭದ್ರಮತಿಯು ತನ್ನ ಪರಿವಾರದಿಂದ ಸಮೇತನಾಗಿ ದೇವಾನುದೇವತೆಗಳಿಂದ ಸಂಸೇವಿತವಾದ ಶೇಷಾಚಲಕ್ಕೆ ಹೋಗಿ, ಅಲ್ಲಿ ಸ್ವಾಮಿಪುಷ್ಕರಿಣಿಯಲ್ಲಿ ಸಂಕಲ್ಪ ಪೂರ್ವಕವಾಗಿ ಸ್ನಾನವನ್ನು ಮಾಡಿ, ಪೃಥಿವಿಯಾನ್ನು ಉದ್ಧರಿಸಿದ ವರಾಹ ದೇವರನ್ನು ಭಕ್ತಿಯಿಂದ ನಮಸ್ಕರಿಸಿ, ಸುರಾಸುರ ಸಂಸೇವಿತನಾದ, ಸ್ವಾಮಿಪುಷ್ಕರಿಣಿಯ ದಕ್ಷಿಣ ದಿಕ್ಕಿನಲ್ಲಿರುವ ವೇಂಕಟೇಶ್ವರನನ್ನು ಅತ್ಯಾದರ ಭಕ್ತಿಗಳಿಂದ ವಂದಿಸಿ ಸ್ತುತಿಸಿ, ನಂತರ ಪಾಪವಿನಾಶನ ತೀರ್ಥಕ್ಕೆ ಬಂದು, ನಿಯಮಾನುಸಾರವಾಗಿ ಸ್ನಾನವನ್ನು ಮಾಡಿ, ಅಲ್ಲಿ ಶ್ರೋತ್ರಿಯನಾದ ಬ್ರಾಹ್ಮಣನಿಗೆ ವಿಷ್ಣುಬುದ್ಧಿಯಿಂದ ಭೂದಾನವನ್ನು ಮಾಡಿದನು.

ಭದ್ರಮತಿಯ ಈ ದಾನದಿಂದ ಸಂತುಷ್ಟನಾದ ಶಂಖಚಕ್ರಗದಾಧರನಾದ ಶ್ರೀನಿವಾಸನು

ತದಾ ಭದ್ರಮತಿಃ ಸೌಮ್ಯಃ ಸ್ತೋತುಂ ಸಮುಪಚಕ್ರಮೇ ॥74॥

ನಮೋ ನಮಸ್ತೇಽಖಿಲಕಾರಣಾಯ
ನಮೋ ನಮಸ್ತೇಖಿಲಪಾಲಕಾಯ ।
ನಮೋ ನಮಸ್ತೇಽಮರನಾಯಕಾಯ
ನಮೋ ನಮೋ ದೈತ್ಯವಿಮರ್ದನಾಯ ॥75॥

ನಮೋ ನಮೋ ಭಕ್ತಜನಪ್ರಿಯಾಯ
ನಮೋ ನಮೋ ಪಾಪವಿದಾರಣಾಯ ।
ನಮೋ ನಮೋ ದುರ್ಜನನಾಶಕಾಯ
ನಮೋಽಸ್ತು ತಸ್ಮೈ ಜಗದೀಶ್ವರಾಯ ॥76॥

ನಮೋ ನಮಃ ಕಾರಣವಾಮನಾಯ
ನಾರಾಯಣಾಯಾಮಿತವಿಕ್ರಮಾಯ ।
ಶ್ರೀಶಾರ್ಙ್ಗಚಕ್ರಾಸಿಗದಾಧರಾಯ
ನಮೋಽಸ್ತು ತಸ್ಮೈ ಪುರುಷೋತ್ತಮಾಯ ॥77॥

ನಮಃ ಪಯೋರಾಶಿನಿವಾಸಕಾಯ
ನಮೋಽಸ್ತು ಲಕ್ಷ್ಮೀಪತಯೇಽವ್ಯಯಾಯ ।
ನಮೋಽಸ್ತು ಸೂರ್ಯಾದ್ಯಮಿತಪ್ರಭಾಯ
ನಮೋ ನಮಃ ಪುಣ್ಯಗತಾಗತಾಯ ॥78॥

ನಮೋ ನಮೋಽರ್ಕೇಂದುವಿಲೋಚನಾಯ
ನಮೋಽಸ್ತು ತೇ ಯಜ್ಞಫಲಪ್ರದಾಯ ।

ಪ್ರತ್ಯಕ್ಷನಾದನು. ಭಗವಂತನನ್ನು ನೋಡಿದ ಭದ್ರಮತಿಯು ಅತ್ಯಂತ ಭಕ್ತಿ ಸಂತೋಷಗಳಿಂದ 'ಸಮಸ್ತ ಪ್ರಪಂಚದ ಉತ್ಪತ್ತಿ-ಸ್ಥಿತಿ-ಸಂಹಾರಾದಿ ಕಾರಣನಾದ, ದೈತ್ಯ ಸಂಹಾರಿಯಾದ, ಭಕ್ತಜನ ಪ್ರಿಯನಾದ, ದುರ್ಜನನಾಶಕನಾದ ಶ್ರೀನಿವಾಸನಿಗೆ ನಮಸ್ಕಾರಗಳು. ತನ್ನ ಭಕ್ತಜನರಿಗೋಸ್ಕರವಾಗಿ ವಾಮನ ನಾರಾಯಣಾದಿ ನಾನಾ ರೂಪಗಳನ್ನು ಧರಿಸಿದ ಶಂಖಚಕ್ರಗದಾಪಾಣಿಯಾದ, ಲಕ್ಷ್ಮೀಪತಿಯಾದ ನಾರಾಯಣನಿಗೆ ನಮಸ್ಕಾರಗಳು. ಕ್ಷೀರಾಬ್ಧಿಶಾಯಿಯೂ, ಪುಣ್ಯಜನ ಸಂಸೇವಿತನೂ, ಯಜ್ಞಫಲದಾತಾರನೂ, ಯಜ್ಞಾಂಗನೂ ಆದ ಪರಮಾತ್ಮನಿಗೆ ನಮಸ್ಕಾರಗಳು. ಅದ್ಭುತಾಕಾರನಾದ ಮತ್ಸ್ಯರೂಪಿಯಾದ, ಮಂದರ ಧಾರಿಯಾದ ಕೂರ್ಮರೂಪಿಯಾದ,

ನಮೋಽಸ್ತು ಯಜ್ಞಾಂಗವಿರಾಜಿತಾಯ
ನಮೋಽಸ್ತು ತೇ ಸಜ್ಜನವಲ್ಲಭಾಯ ॥79॥

ನಮೋ ನಮೋ ಕಾರಣಕಾರಣಾಯ
ನಮೋಽಸ್ತು ಶಬ್ದಾದಿವಿವರ್ಜಿತಾಯ ।
ನಮೋಽಸ್ತು ತೇಽಭೀಷ್ಟಸುಖಪ್ರದಾಯ
ನಮೋ ನಮೋ ಭಕ್ತಮನೋರಮಾಯ ॥80॥

ನಮೋ ನಮಸ್ತೇಽದ್ಭುತಕಾರಣಾಯ
ನಮೋಽಸ್ತು ತೇ ಮಂದರಧಾರಕಾಯ ।
ನಮೋಽಸ್ತು ತೇ ಯಜ್ಞವರಾಹನಾಮ್ನೇ
ನಮೋ ಹಿರಣ್ಯಾಕ್ಷವಿದಾರಕಾಯ ॥81॥

ನಮೋಽಸ್ತು ತೇ ವಾಮನರೂಪಭಾಜೇ
ನಮೋಽಸ್ತು ತೇ ಕ್ಷೇತ್ರಕುಲಾಂತಕಾಯ ।
ನಮೋಽಸ್ತು ತೇ ರಾವಣಮರ್ದನಾಯ
ನಮೋಽಸ್ತು ತೇ ನಂದಸುತಾಗ್ರಜಾಯ ॥82॥

ನಮಸ್ತೇ ಕಮಲಾಕಾಂತ ನಮಸ್ತೇ ಸುಖದಾಯಿನೇ ।
ಶ್ರಿತಾರ್ತಿನಾಶಿನೇ ತುಭ್ಯಂ ಭೂಯೋ ಭೂಯೋ ನಮೋನಮಃ ॥83॥

ವಿಪ್ರೇಣ ಸಂಸ್ತುತೋ ದೇವೋ ಭಗವಾನ್ಭಕ್ತವತ್ಸಲಃ ।
ವಾತ್ಸಲ್ಯೇನಾಬ್ರವೀದ್ವಾಕ್ಯಂ ಶ್ರೀನಿವಾಸೋ ದಯಾನಿಧಿಃ ॥84॥

ಯಜ್ಞವರಾಹ ರೂಪಿಯಾದ, ಹಿರಣ್ಯಕಶಿವುವಿನ ವಿನಾಶವನ್ನು ಮಾಡಿದ ನರಸಿಂಹ ರೂಪನಾದ, ಕ್ಷತ್ರಕುಲನಾಸಕನಾದ ಪರಶುರಾಮ, ರಾವಣಮರ್ದಕನಾಗಿ ರಾಮರೂಪವನ್ನು ಧರಿಸಿದ, ನಂದನ ನಂದನನೆನಿಸಿದ ಶ್ರೀಕೃಷ್ಣ ರೂಪಿಯಾದ ಹೇ ಶ್ರೀನಿವಾಸನೇ! ನಿನಗೆ ನಮಸ್ಕಾರಗಳು. ಲಕ್ಷ್ಮೀಪತಿಯೂ, ಸರ್ವಸುಖದಾಯಕನೂ, ಪ್ರಪನ್ನಾರ್ತಿಹರನೂ ಆದ ಶ್ರೀನಿವಾಸನಿಗೆ ಮೇಲಿಂದ ಮೇಲೆ ಬಹಳಷ್ಟು ನಮಸ್ಕಾರಗಳಿರಲಿ' ಎಂದು ಅವನನ್ನು ಸ್ತುತಿಸಿದನು.

ಬ್ರಾಹ್ಮಣನ ಸ್ತುತಿಯಿಂದ ಸಂತುಷ್ಟನಾದ ದಯಾನಿಧಿಯಾದ ಶ್ರೀನಿವಾಸನು 'ಹೇ ಭದ್ರಮತಿಯೇ! ನಿನ್ನ ಸ್ತೋತ್ರದಿಂದ ಸಂತುಷ್ಟನಾಗಿರುವೆನು. ನೀನು ಪುತ್ರಪೌತ್ರಾದಿಗಳಿಂದ ಸಮೇತನಾಗಿ

ತಾತ ತುಷ್ಟೋऽಸ್ಮಿ ಭದ್ರಂ ತೇ ಸ್ತೋತ್ರೇಣ ಮಹತಾ ದ್ವಿಜ ।
ಸರ್ವಭೋಗಸಮಾಯುಕ್ತಃ ಪುತ್ರ ಪೌತ್ರಾದಿಭಿರ್ಯುತಃ ॥85॥

ಇಹಲೋಕೇ ಸುಖಂ ಪ್ರಾಪ್ಯ ದೇಹಾಂತೇ ಮುಕ್ತಿಮಾಪ್ನುಹಿ ।
ಇತ್ಯುಕ್ತ್ವಾ ಭಗವಾನ್ವಿಷ್ಣುಸ್ತತ್ರೈವಾಂತರಧೀಯತೇ ॥86॥

ಏವಂ ವಃ ಕಥಿತಂ ವಿಪ್ರಾಃ ಪಾಪನಾಶನವೈಭವಮ್ ।
ತತ್ತೀರೇ ಭೂಪ್ರದಾನಸ್ಯ ಮಾಹಾತ್ಮ್ಯಂ ಚಾಪಿ ವರ್ಣಿತಮ್ ॥87॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ **'ಶ್ರೀಪಾಪವಿನಾಶಿನಿತೀರ್ಥೇ-ಭೂದಾನಫಲಾನುವರ್ಣನಮ್'** ನಾಮ ವಿಂಶತಿತಮೋऽಧ್ಯಾಯಃ ॥20॥

* * *

ಸರ್ವಸುಖಭೋಗಗಳನ್ನು ಈ ಭೂಲೋಕದಲ್ಲಿ ಬಹುಕಾಲ ಅನುಭವಿಸಿ, ಅನಂತರದಲ್ಲಿ ಮುಕ್ತಿಯನ್ನೇ ಹೊಂದುವಿ' ಎಂದು ಅನುಗ್ರಹಿಸಿ ಅಂತರ್ಧಾನನಾದನು.

ಇಲ್ಲಿಯವರೆಗೂ ಪಾಪವಿನಾಶನ ತೀರ್ಥದ ವೈಭವವೂ ಮತ್ತು ಪಾಪನಾಶನ ತೀರ್ಥದ ದಡದಲ್ಲಿ ಮಾಡುವ ಭೂದಾನದ ಪ್ರಶಂಸೆಯು ವರ್ಣಿಸಲ್ಪಟ್ಟಿರುವದು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ **ಶ್ರೀಪಾಪವಿನಾಶನತೀರ್ಥದಲ್ಲಿಯ ಭೂದಾನಫಲಾನುವರ್ಣನವೆಂಬ** ಇಪ್ಪತ್ತನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥೈಕವಿಂಶತಿತಮೋಽಧ್ಯಾಯಃ

[ಆಕಾಶಗಂಗಾಮಾಹಾತ್ಮ್ಯ – ರಾಮಾನುಜವಿಪ್ರವ್ರತಚರ್ಯಾದಿವರ್ಣನಮ್]

**ಶ್ರೀ ಸೂತ ಉವಾಚ–**

ಭೋ ಭೋಸ್ತಪೋಧನಾಃ ಸರ್ವೇ ನೈಮಿಷಾರಣ್ಯವಾಸಿನಃ ।
ಆಕಾಶಗಂಗಾತೀರ್ಥಸ್ಯ ಮಾಹಾತ್ಮ್ಯಂ ಪ್ರವದಾಮ್ಯಹಮ್ ॥1॥

ಆಕಾಶಗಂಗಾನಿಕಟೇ ಸರ್ವಶಾಸ್ತ್ರಾರ್ಥಪಾರಗಃ ।
ರಾಮಾನುಜ ಇತಿ ಖ್ಯಾತೋ ವಿಷ್ಣುಭಕ್ತೋ ಜಿತೇಂದ್ರಿಯಃ ॥2॥

ತಪಶ್ಚಕಾರ ಧರ್ಮಾತ್ಮಾ ವೈಖಾನಸಮತೇ ಸ್ಥಿತಃ ।
ಗ್ರೀಷ್ಮೇ ಪಂಚಾಗ್ನಿಮಧ್ಯಸ್ಥೋ ವಿಷ್ಣುಧ್ಯಾನಪರಾಯಣಃ ॥3॥

ಜಪನ್ನಷ್ಟಾಕ್ಷರಂ ಮಂತ್ರಂ ಧ್ಯಾಯನ್ಹೃದಿ ಜನಾರ್ದನಮ್ ।
ವರ್ಷಾಸ್ವಾಕಾಶಗೋ ನಿತ್ಯಂ ಹೇಮಂತೇಷು ಜಲಾಶಯಃ ॥4॥

ಸರ್ವಭೂತಹಿತೋ ದಾಂತಃ ಸರ್ವದ್ವಂದ್ವವಿವರ್ಜಿತಃ ।
ವರ್ಷಾಣಿ ಕತಿಚಿತ್ಸೋಽಯಂ ಜೀರ್ಣಪರ್ಣಾಶನೋಭವತ್ ॥5॥

ಕಿಂಚಿತ್ಕಾಲಂ ಜಲಾಹಾರೋ ವಾಯುಭಕ್ಷಃ ಕಿಯತ್ಸಮಾಃ ॥6॥

## ಇಪ್ಪತ್ತೊಂದನೆಯ ಅಧ್ಯಾಯ

[ಆಕಾಶಗಂಗಾಮಾಹಾತ್ಮ್ಯ–ರಾಮಾನುಜವಿಪ್ರವ್ರತಚರ್ಯಾದಿವರ್ಣನ]

ಇನ್ನು ಮುಂದೆ ಹೇ ಋಷಿಗಳೇ! ಆಕಾಶಗಂಗಾ ತೀರ್ಥದ ಮಾಹಾತ್ಮೆಯು ಹೇಳಲ್ಪಡುವದು.

ಆಕಾಶಗಂಗೆಯ ಬಳಿ ಸರ್ವಶಾಸ್ತ್ರವಿಶಾರದನಾದ ರಾಮಾನುಜನೆಂಬ ಜಿತೇಂದ್ರಿಯನೂ, ವಿಷ್ಣುಭಕ್ತನೂ ಆದ ಬ್ರಾಹ್ಮಣನಿದ್ದನು. ಅವನು ಪರಮಾತ್ಮನನ್ನುದ್ದೇಶಿಸಿ ಪಂಚಾಗ್ನಿಮಧ್ಯದಲ್ಲಿ, ಗ್ರೀಷ್ಮಋತುವಿನಲ್ಲಿ ವಿಷ್ಣುವನ್ನು ಅಷ್ಟಾಕ್ಷರ ಮಂತ್ರವನ್ನು ಜಪಿಸುವದು, ವರ್ಷಾಕಾಲದಲ್ಲಿ ಆಕಾಶಕ್ಕೆ ತಲೆಮಾಡಿ ನಿಲ್ಲುವದೇ ಮೊದಲಾದ ಕಠಿಣ ದೇಹದಂಡನವನ್ನು ಮಾಡುವ ತಪಸ್ಸಿನಿಂದ ಭಗವಂತನನ್ನು ಆರಾಧಿಸಿದನು. ಕೆಲ ಕಾಲ ಎಲೆಗಳನ್ನು ತಿಂದು ತಪಸ್ಸನ್ನಾಚರಿಸಿದರೆ ಕೆಲ

ಅಥ ತತ್ತಪಸಾ ತುಷ್ಟೋ ಭಗವಾನ್ಭಕ್ತವತ್ಸಲಃ ।
ಪ್ರತ್ಯಕ್ಷತಾಮಗಾತ್ತಸ್ಯ ಶಂಖಚಕ್ರಗದಾಧರಃ ॥7॥

ವಿಕಚಾಂಬುಜಪತ್ರಾಕ್ಷಃ ಸೂರ್ಯಕೋಟಿಸಮಪ್ರಭಃ ।
ವಿನತಾನಂದನಾರೂಢಶ್ಛತ್ರಚಾಮರಶೋಭಿತಃ ॥8॥

ಹಾರಕೇಯೂರಮುಕುಟಕಟಕಾದಿವಿಭೂಷಿತಃ ।
ವಿಷ್ವಕ್ಸೇನಸುನಂದಾದಿಕಿಂಕರೈಃ ಪರಿವಾರಿತಃ ॥9॥

ವೀಣಾವೇಣುಮೃದಂಗಾದಿವಾದಕೈರ್ನಾರದಾದಿಭಿಃ ।
ಗೀಯಮಾನಃ ಸುವಿಭವಃ ಪೀತಾಂಬರವಿರಾಜಿತಃ ॥10॥ ।

ಲಕ್ಷ್ಮೀವಿರಾಜಿತೋರಸ್ಕೋ ನೀಮಲೇಘನಿಭಚ್ಛವಿಃ ।
ಸನಕಾದಿಮಹಾಯೋಗಿಸೇವಿತಃ ಪಾರ್ಶ್ವಯೋರ್ದ್ವಯೋಃ ॥11॥

ಮಂದಸ್ಮಿತೇನ ಸಕಲಂ ಮೋಹಯನ್ಭುವನತ್ರಯಮ್ ।
ಸ್ವಭಾಸಾ ಮಾನಯನ್ಸರ್ವಾನ್ ದಿಶೋ ದಶ ವಿರಾಜಯನ್ ॥12॥

ಸುಭಕ್ತಸುಲಭೋ ದೇವೋ ವೇಂಕಟೇಶೋ ದಯಾನಿಧಿಃ ।
ಪುರಃ ಸನ್ನಿದಧೇ ತಸ್ಯ ರಾಮಾನುಜಮಹಾಮುನೇಃ ॥13॥

ಆವಿರ್ಭೂತಂ ತದಾ ದೃಷ್ಟ್ವಾ ಶ್ರೀನಿವಾಸಂ ಕೃಪಾನಿಧಿಮ್ ।
ಪೀತಾಂಬರಧರಂ ದೇವಂ ತುಷ್ಟಿಂ ಪ್ರಾಪ ಮಹಾಮುನಿಃ ॥14॥

ಭಕ್ತ್ಯಾ ಪರಮಯಾ ಯುಕ್ತಸ್ತುಷ್ಟಾವ ಜಗದೀಶ್ವರಮ್ ॥15॥

ರಾಮಾನುಜ ಉವಾಚ–

ನಮೋ ದೇವೇಧಿದೇವಾಯ ಶಂಖಚಕ್ರದಗಾಭೃತೇ ।
ನಮೋ ನಿತ್ಯಾಯ ಶುದ್ಧಾಯ ವೇಂಕಟೇಶಾಯ ತೇ ನಮಃ ॥16॥

ಕಾಲ ಜಲಭಕ್ಷ್ಯ–ವಾಯು ಭಕ್ಷ್ಯನಾಗಿ ತಪಸ್ಸನ್ನಾಚರಿಸಿದನು. ರಾಮಾನುಜನ ತಪಸ್ಸಿನಿಂದ ಸಂತುಷ್ಟನಾದ ಕಮಲಲೋಚನನಾದ ಶಂಖಚಕ್ರಗದಾಧಾರಿಯಾದ ಲಕ್ಷ್ಮೀಸಮಾಲಿಂಗಿತನಾದ ಪೀತಾಂಬರಧಾರಿಯಾದ ಗರುಡಾರೂಢನಾದ ಶ್ರೀನಿವಾಸನು ಪ್ರತ್ಯಕ್ಷನಾದನು. ಅವನನ್ನು ನೋಡಿದ ರಾಮಾನುಜನು ಅತ್ಯಂತ ಭಕ್ತಿಯಿಂದ 'ದೇವಾಧಿದೇವನೂ, ಶಂಖಚಕ್ರಗದಾಧಾರಿಯೂ ಆದ ವೇಂಕಟೇಶ್ವರನಿಗೆ ನಮಸ್ಕಾರಗಳು. ಭಕ್ತಸಂತಾಪಹಾರಕನೂ, ಹವ್ಯಕವ್ಯಗಳಿಂದ ಅರ್ಚ್ಯನೂ,

ನಮೋ ಭಕ್ತಾರ್ತಿಹಂತ್ರೇ ತೇ ಹವ್ಯಕವ್ಯಸ್ವರೂಪಿಣೇ ।
ನಮಸ್ತ್ರಿಮೂರ್ತಯೇ ತುಭ್ಯಂ ಸೃಷ್ಟಿಸ್ಥಿತ್ಯಂತಕಾರಿಣೇ ॥17॥

ನಮಃ ಪರೇಶಾಯ ನಮೋಽತಿಭೂಮ್ನೇ
ನಮೋಽಸ್ತು ಲಕ್ಷ್ಮೀಪತಯೇ ವಿಧಾತ್ರೇ ।
ನಮೋಽಸ್ತು ಸೂರ್ಯೇಂದುವಿಲೋಚನಾಯ
ನಮೋ ವಿರಿಂಚಾದ್ಯಭಿವಂದಿತಾಯ ॥18॥

ಯೋ ನಾಮಜಾತ್ಯಾದಿವಿಕಲ್ಪಹೀನಃ
ಸಮಸ್ತದೋಷೈರಪಿ ವರ್ಜಿತೋ ಯಃ ।
ಸಮಸ್ತಸಂಸಾರಭಯಾಪಹಾರಿಣೇ
ತಸ್ಮೈ ನಮೋ ದೈತ್ಯವಿನಾಶಕಾಯ ॥19॥

ವೇದಾಂತವೇದ್ಯಾಯ ರಮೇಶ್ವರಾಯ
ವೃಷಾದ್ರಿವಾಸಾಯ ವಿಧಾತೃಪಿತ್ರೇ ।
ನಮೋ ನಮಸ್ಸರ್ವಜನಾರ್ತಿಹಾರಿಣೇ
ನಾರಾಯಣಾಯಾಮಿತವಿಕ್ರಮಾಯ ॥20॥

ನಮಸ್ತುಭ್ಯಂ ಭಗವತೇ ವಾಸುದೇವಾಯ ಶಾರ್ಙ್ಗಿಣೇ ।
ಭೂಯೋ ಭೂಯೋ ನಮಸ್ತುಭ್ಯಂ ವೇಂಕಟಾದ್ರಿನಿವಾಸಿನೇ ॥21॥

ಇತಿ ಸ್ತುತ್ವಾ ವೇಂಕಟೇಶಂ ಶ್ರೀನಿವಾಸಂ ಜಗದ್ಗುರುಮ್ ।
ರಾಮಾನುಜೋ ಮುನಿಸ್ತೂಷ್ಣೀಮಾಸ್ತೇ ವಿಪ್ರವರೋತ್ತಮಃ ॥22॥

ಶ್ರುತ್ವಾ ಸ್ತುತಿಂ ಶ್ರುತಿಸುಖಾಂ ಸ್ತುತಸ್ತಸ್ಯ ಮಹಾತ್ಮನಃ ।

ಸೃಷ್ಟಿಸ್ಥಿತಿಸಂಹಾರ ಕಾರಣನೂ, ಸರ್ವೋತ್ತಮನೂ, ಗುಣಪರಿಪೂರ್ಣನೂ, ಸೂರ್ಯಚಂದ್ರರನ್ನು ಕಣ್ಣಿನಲ್ಲಿ ಧರಿಸಿದನೂ, ದೇವತಾವೃಂದವಂದ್ಯನೂ, ಅಜನೂ, ಪ್ರಾಕೃತವಾದ ನಾಮಜಾತ್ಯಾದಿವಿಕಲ್ಪವಿಹೀನನೂ, ದೋಷವರ್ಜಿತನೂ, ಗುಣಾಕರನೂ ಆದ ಸಂಸಾರ ಭಯ ಸಂತಾರಕನಾದ ಶ್ರೀನಿವಾಸನಿಗೆ ನಮಸ್ಕಾರಗಳು. ಬ್ರಹ್ಮಾದಿ ಜನಕನೂ, ದುಃಖಶಮನೋಪಾಯನೂ, ಅಮಿತವಿಕ್ರಮನೂ ಆದ ವಾಸುದೇವಸ್ವರೂಪನಾದ ವೇಂಕಟೇಶ್ವರನಿಗೆ ನಮಸ್ಕಾರಗಳು' ಎಂದು ನಾನಾರೀತಿಯಾಗಿ ಸ್ತುತಿಸಿದನು.

ಭಕ್ತನ ಸ್ತುತಿಯಿಂದ ಪರಮ ಸಂತುಷ್ಟನಾದ ವೇಂಕಟೇಶ್ವರನು ತನ್ನ ಭಕ್ತನನ್ನು ಪ್ರೀತಿಯಿಂದ

ಅವಾಪ ಪರಮಂ ತೋಷಂ ವೇಂಕಟಾಚಲನಾಯಕಃ ॥23॥

ಅಥಾಲಿಂಗ್ಯ ಮುನಿಂ ಶೌರಿಶ್ಚತುರ್ಭಿರ್ಬಾಹುಭಿಸ್ತದಾ ।
ಬಭಾಷೇ ಪ್ರೀತಿಸಂಯುಕ್ತೋ ವರಂ ವೈ ವ್ರಿಯತಾಮಿತಿ ॥24॥

ತುಷ್ಟೋಽಸ್ಮಿ ತಪಸಾ ತೇಽದ್ಯ ಸ್ತೋತ್ರೇಣಾಪಿ ಮಹಾಮುನೇ ।
ನಮಸ್ಕಾರೇಣ ಚ ಪ್ರೀತೋ ವರದೋಽಹಂ ತವಾಗತಃ ॥25॥

ರಾಮಾನುಜ ಉವಾಚ–

ನಾರಾಯಣ ರಮಾನಾಥ ಶ್ರೀನಿವಾಸ ಜಗನ್ಮಯ ।
ಜನಾರ್ದನ ಜಗದ್ಧಾಮ ಗೋವಿಂದ ನರಕಾಂತಕ ॥26॥

ತ್ವದ್ದರ್ಶನಾತ್ಕೃತಾರ್ಥೋಽಸ್ಮಿ ವೇಂಕಟಾದ್ರಿಶಿರೋಮಣೇ ।
ತ್ವಾಂ ನಮಸ್ಯಂತಿ ಧರ್ಮಿಷ್ಠಾ ಯತಸ್ತ್ವಂ ಧರ್ಮಪಾಲಕಃ ॥27॥

ಯಂ ನ ವೇತ್ತಿ ಭವೋ ಬ್ರಹ್ಮಾ ಯಂ ನ ವೇತ್ತಿ ತ್ರಯೀ ತಥಾ ।
ತ್ವಾಂ ವೇದ್ಮಿ ಪರಮಾತ್ಮಾನಂ ಕಿಮಸ್ಮಾದಧಿಕಂ ಪರಮ್ ॥28॥

ಯೋಗಿನೋ ಯಂ ನ ಪಶ್ಯಂತಿ ಯಂ ನ ಪಶ್ಯಂತಿ ಕರ್ಮಠಾಃ।
ಪಶ್ಯಾಮಿ ಪರಮಾತ್ಮಾನಂ ಕಿಮಸ್ಮಾದಧಿಕಂ ಪರಮ್ ॥29॥

ಏತೇನ ಚ ಕೃತಾರ್ಥೋಽಸ್ಮಿ ವೇಂಕಟೇಶ ಜಗತ್ಪತೇ ।
ಯನ್ನಾಮಸ್ಮೃತಿಮಾತ್ರೇಣ ಮಹಾಪಾತಕಿನೋಽಪಿ ಚ ॥30॥

ಮುಕ್ತಿಂ ಪ್ರಯಾಂತಿ ಮನುಜಾಸ್ತಂ ಪಶ್ಯಾಮಿ ಜನಾರ್ದನಮ್ ।
ತ್ವತ್ಪಾದಪದ್ಮಯುಗಲೇ ನಿಶ್ಚಲಾ ಭಕ್ತಿರಸ್ತು ಮೇ ॥31॥

ಶ್ರೀ ಭಗವಾನುವಾಚ–

ಆಲಿಂಗಿಸಿಕೊಂಡು 'ನಿನಗೆ ಅಭಿಮತವಾದ ವರವನ್ನು ಕೇಳಿಕೊ' ಎಂದು ನುಡಿದನು.

ಆಗ ರಾಮಾನುಜ ಬ್ರಾಹ್ಮಣನು 'ಹೇ ಸುರನಾಯಕನಾದ ವೇದಪ್ರತಿಪಾದ್ಯನಾದ ಗೋವಿಂದನೇ! ನಿನ್ನ ದರ್ಶನದಿಂದ ನಾನು ಕೃತಾರ್ಥನಾಗಿರುವೆನು. ಯೋಗಿಗಳ ಮನಸ್ಸಿನಿಂದಲೂ ಅಚಿಂತ್ಯನಾದ, ಬ್ರಹ್ಮಾದಿದೇವತೆಗಳಿಂದಲೂ ಸಾಕಲ್ಯೇನ ಅಜ್ಞೇಯನಾದ ನಿನ್ನನ್ನು ನಾನು ನನ್ನ ಕಣ್ಣುಗಳಿಂದ ನೋಡುತ್ತಿರುವೆನೆಂದ ಮೇಲೆ ಇದಕ್ಕಿಂತ ಅಪೇಕ್ಷಣೀಯವಾದದ್ದು ಬೇರೇನಿದೆ? ಸ್ವಾಮಿಯಾದ ಶ್ರೀನಿವಾಸನೇ! ನಿನ್ನ ಪಾದಾರವಿಂದಗಳಲ್ಲಿ ಅಚಲವಾದ ಭಕ್ತಿಯನ್ನು ಕೊಟ್ಟು ಅನುಗ್ರಹಿಸು'

ಮಯಿ ಭಕ್ತಿರ್ದೃಢಾ ತೇಽಸ್ತು ರಾಮಾನುಜ ಮಹಾಮತೇ ।
ಶೃಣು ಚಾಪ್ಯಪರಂ ವಾಕ್ಯಮುಚ್ಯತೇ ತೇ ಮಯಾ ದ್ವಿಜ ॥32॥

ಮೇಷಸಂಕ್ರಮಣೇ ಭಾನೋಶ್ಚಿತ್ತಾನಕ್ಷತ್ರಸಂಯುತೇ ।
ಪೌರ್ಣಮಸ್ಯಾಂ ಚ ಗಂಗಾಯಾಂ ಸ್ನಾನಂ ಕುರ್ವಂತಿ ಯೇಜನಾಃ ॥33॥

ತೇ ಯಾಂತಿ ಪರಮಂ ಧಾಮ ಪುನರಾವೃತ್ತಿವರ್ಜಿತಮ್ ॥34॥

ವಿಯದ್ಗಂಗಾಸಮೀಪೇ ತ್ವಂ ವಸ ರಾಮಾನುಜ ದ್ವಿಜ ।
ಏತತ್ಪ್ರಾರಬ್ಧದೇಹಾಂತೇ ಮತ್ಸ್ವರೂಪಮವಾಪ್ಸ್ಯಸಿ ॥35॥

ಬಹುನಾ ಕಿಮಿಹೋಕ್ತೇನ ವಿಯದ್ಗಂಗಾಜಲೇ ಶುಭೇ ।
ಸ್ನಾಂತಿ ಯೇ ವೈ ನರಾಃ ಸರ್ವೇ ತೇ ವೈ ಭಾಗವತೋತ್ತಮಾಃ ।

ಭವಂತಿ ಮುನಿಶಾರ್ದೂಲ ನಾತ್ರ ಕಾರ್ಯಾ ವಿಚಾರಣಾ ॥36॥

ರಾಮಾನುಜ ಉವಾಚ–

ಕಿಂ ಲಕ್ಷಣಾ ಭಾಗವತಾ ಜ್ಞಾಯಂತೇ ಕೇನ ಕರ್ಮಣಾ ।
ಏತದಿಚ್ಛಾಮ್ಯಹಂ ಶ್ರೋತುಂ ಕೌತೂಹಲಪರೋ ಯತಃ ॥37॥

ಶ್ರೀ ವೇಂಕಟೇಶ ಉವಾಚ–

ವಚ್ಮಿ ಭಾಗವತಾನಾಂ ತು ಶೃಣುಷ್ವ ಮುನಿಸತ್ತಮ ॥38॥

ವಕ್ತುಂ ತೇಷಾಂ ಪ್ರಭಾವಂ ತು ಶಕ್ಯತೇ ನಾಬ್ದಕೋಟಿಭಿಃ ॥39॥

ಎಂದು ಸಂಪ್ರಾರ್ಥಿಸಿದನು. ಆಗ ಶ್ರೀನಿವಾಸನು 'ಹಾಗೆಯೇ ಆಗಲಿ' ಎಂದು ಅನುಗ್ರಹಿಸಿ, 'ಯಾರು ಮೇಷಸಂಕ್ರಮಣದ ಹುಣ್ಣಿಮೆಯಂದು ಚಿತ್ರಾನಕ್ಷತ್ರವಿರುವಾಗ ಯಾರು ಆಕಾಶಗಂಗಾತೀರ್ಥದಲ್ಲಿ ಸ್ನಾನವನ್ನು ಮಾಡುವರೋ ಅವರು ಮಹಾಭಾಗ್ಯಶಾಲಿಗಳಾಗಿ ಪುನರಾವೃತ್ತಿ ವರ್ಜಿತವಾದ ನನ್ನ ಮಂದಿರವಾದ ವೈಕುಂಠವನ್ನು ಹೊಂದುವರು. ಹೇ ರಾಮಾನುಜನೇ! ನೀನು ಈ ಆಕಾಶ ಗಂಗೆಯ ಬಳಿಯೇ ವಾಸವನ್ನು ಮಾಡು. ಪ್ರಾರಬ್ಧಕರ್ಮನಾಶಾನಂತರದಲ್ಲಿ ನನ್ನಲೋಕವನ್ನು ಹೊಂದುವಿ. ಹೆಚ್ಚೇನು ಹೇಳುವದಿದೆ? ಆಕಾಶಗಂಗೆಯಲ್ಲಿ ಸ್ನಾನವನ್ನು ಮಾಡುವ ಮನುಜರು ಮಹಾಭಾಗವತೋತ್ತಮರೆನಿಸುವರು' ಎಂದು ಅನುಗ್ರಹಿಸಿದನು.

ಇದನ್ನು ಕೇಳಿದ ರಾಮಾನುಜನು ಭಾಗವತರ ಲಕ್ಷಣವನ್ನು ತಿಳಿಸಲು ಕೇಳಿದಾಗ ಭಗವಂತನು

ಯೇ ಹಿತಾಃ ಸರ್ವಜಂತೂನಾಂ ಗತಾಸೂಯಾ ವಿಮತ್ಸರಾಃ ।
ಜ್ಞಾನಿನೋ ನಿಃಸ್ಪೃಹಾಃ ಶಾಂತಾಸ್ತೇ ವೈ ಭಾಗವತೋತ್ತಮಾಃ ॥40॥

ಕರ್ಮಣಾ ಮನಸಾ ವಾಚಾ ಪರಪೀಡಾಂ ನ ಕುರ್ವತೇ ।
ಅಪರಿಗ್ರಹಶೀಲಾಶ್ಚ ತೇ ವೈ ಭಾಗವತೋತ್ತಮಾಃ ॥41॥

ಸತ್ಕಥಾಶ್ರವಣೇ ಯೇಷಾಂ ವರ್ತತೇ ಸಾತ್ವಿಕೀ ಮತಿಃ ।
ಮತ್ಪಾದಾಂಬುಜಭಕ್ತಾ ಯೇ ತೇ ವೈ ಭಾಗವತೋತ್ತಮಾಃ ॥42॥

ಮಾತಾಪಿತ್ರೋಶ್ಚ ಶುಶ್ರೂಷಾಂ ಕುರ್ವತೇ ಯೇ ನರೋತ್ತಮಾಃ ।
ಯೇ ತು ದೇವಾರ್ಚನರತಾ ಯೇ ತು ತತ್ಸಾಧಕಾ ನರಾಃ ।
ಪೂಜಾಂ ದೃಷ್ಟ್ವಾ ತು ಮೋದಂತೇ ತೇ ವೈ ಭಾಗವತೋತ್ತಮಾ ॥43॥

ವರ್ಣಿನಾಂ ಚ ಯತೀನಾಂ ಚ ಪರಿಚರ್ಯಾಪರಾಶ್ಚ ಯೇ ।
ಪರನಿಂದಾಮಕುರ್ವಾಣಾಸ್ತೇ ವೈ ಭಾಗವತೋತ್ತಮಾಃ ॥44॥

ಸರ್ವೇಷಾಂ ಹಿತವಾಕ್ಯಾನಿ ಯೇ ವದಂತಿ ನರೋತ್ತಮಾಃ ।
ಯೇ ಗುಣಾಗ್ರಾಹಿಣೋ ಲೋಕೇ ತೇ ವೈ ಭಾಗವತೋತ್ತಮಾಃ ॥45॥

ಆತ್ಮವತ್ಸರ್ವಭೂತಾನಿ ಯೇ ಪಶ್ಯಂತಿ ನರೋತ್ತಮಾಃ ।
ತುಲ್ಯಾಃ ಶತ್ರುಷು ಮಿತ್ರೇಷು ತೇ ವೈ ಭಾಗವತಾಃ ಸ್ಮೃತಾಃ ॥46॥

ಧರ್ಮಶಾಸ್ತ್ರಪ್ರವಕ್ತಾರಃ ಸತ್ಯವಾಕ್ಯರತಾಶ್ಚ ಯೇ ।
ತೇಷಾಂ ಶುಶ್ರೂಷವೋ ಯೇ ಚ ತೇವೈ ಭಾಗವತೋತ್ತಮಾಃ ॥47॥

ವ್ಯಾಕುರ್ವಂತಿ ಪುರಾಣಾನಿ ತಾನಿ ಶೃಣ್ವಂತಿ ಯೇ ತಥಾ ।
ತದ್ವಕ್ತರಿ ಚ ಭಕ್ತ್ಯಾ ಯೇ ತೇ ವೈ ಭಾಗವತೋತ್ತಮಾಃ ॥48॥

ಭಾಗವತರ ಲಕ್ಷಣವನ್ನು ಬಹುಕಾಲದಿಂದಲೂ ವರ್ಣಿಸಲು ಅಶಕ್ಯವೆಂದು ತಿಳಿಸುತ್ತಾ ಭಗವದ್ಭಕ್ತರ ಲಕ್ಷಣವನ್ನು ತಿಳಿಸಿದನು. ಸರ್ವಜಂತುಹಿತರತರೂ, ಅಸೂಯಾ, ಮಾತ್ಸರ್ಯಾದಿ ದೋಷರಹಿತರೂ, ಭಗವಜ್ಜ್ಞಾನಸಂಪನ್ನರೂ, ನಿಃಸ್ಪೃಹರೂ, ಸುಖದುಃಖಸಮರೂ ಭಾಗವತೋತ್ತಮರೆನಿಸುವರು. ಕಾಯಾವಾಚಾ ಮನಸಾ ಪರರ ಹಿಂಸೆಯನ್ನಾಚರಿಸದವರೂ, ಅಪರಿಗ್ರಹ ವೃತ್ತಿಯಿಂದ ಇರುವವರು, ಭಗವಂತನ ಕಥೆಯಲ್ಲಿ ಆಸಕ್ತರೂ, ಭಗವಂತನಲ್ಲಿ ನಿರ್ವ್ಯಾಜಭಕ್ತಿಯನ್ನು ಮಾಡುವವರು, ತಂದೆ ತಾಯಿಗಳ ಶುಶ್ರೂಷಣದಲ್ಲಿ ನಿರತರಾದವರು,

ಯೋ ಗೋಬ್ರಾಹ್ಮಣಶುಶ್ರೂಷಾಂ ಕುರ್ವಂತಿ ಸತತಂ ನರಾಃ ।
ತೀರ್ಥಯಾತ್ರಾಪರಾ ಯೇ ಚ ತೇ ವೈ ಭಾಗವತೋತ್ತಮಾಃ ॥49॥

ಅನ್ಯೇಷಾಮುದಯಂ ದೃಷ್ಟ್ವಾ ಯೇಽಭಿನಂದಂತಿ ಮಾನವಾಃ ।
ಆರಾಮಾರೋಪಣರತಾಸ್ತಟಾಕಪರಿರಕ್ಷಕಾಃ ॥

ಕಾಸಾರಕೂಪರ್ಕಕರ್ತಾರಸ್ತೇ ವೈ ಭಾಗವತೋತ್ತಮಾಃ ॥51॥

ಯೇ ವೈ ತಟಾಕಕರ್ತಾರೋ ದೇವಸದ್ಮಾನಿ ಕುರ್ವತೇ ।
ಗಾಯತ್ರೀ ನಿರತಾ ಯೇ ಚ ತೇ ವೈ ಭಾಗವತೋತ್ತಮಾಃ ॥52॥

ಯೇಽಭಿನಂದಂತಿ ನಾಮಾನಿ ಹರೇಃ ಶ್ರುತ್ವಾತಿಹರ್ಷಿತಾಃ ।
ರೋಮಾಂಚಿತಶರೀರಾಶ್ಚ ತೇ ವೈ ಭಾಗವತೋತ್ತಮಾಃ ॥53॥

ತಲುಸೀಕಾನನಂ ದೃಷ್ಟ್ವಾ ಯೇ ನಮಸ್ಕುರ್ವತೇ ನರಾಃ ।
ತತ್ಕಾಷ್ಠಾಂಕಿತಕರ್ಣಾ ಯೇ ತೇವೈ ಭಾಗವತೋತ್ತಮಾಃ ॥54॥

ತುಲಸೀಗಂಧಮಾಘ್ರಾಯ ಸಂತೋಷಂ ಕುರ್ವತೇ ತು ಯೇ ।
ತನ್ಮೂಲಮೃದ್ಧರಾ ಯೇ ಚ ತೇ ವೈ ಭಾಗವತೋತ್ತಮಾಃ ॥55॥

ಸ್ವಾಶ್ರಮಾಚಾರನಿರತಾಸ್ತಥೈವಾತಿಥಿಪೂಜಕಾಃ ।
ಯೇ ಚ ವೇದಾರ್ಥವಕ್ತಾರಸ್ತೇ ವೈ ಭಾಗವತೋತ್ತಮಾಃ ॥56॥

ವಿದಿತಾನಿ ಚ ಶಾಸ್ತ್ರಾಣಿ ಪರಾರ್ಥಂ ಪ್ರವದಂತಿ ಯೇ ।
ಸರ್ವತ್ರ ಗುಣಭಾಜೋ ಯೇ ತೇ ವೈ ಭಾಗವತೋತ್ತಮಾಃ ॥57॥

ಭಗವದಾರಾಧನೆಯಲ್ಲಿ ಆಸಕ್ತರೂ, ಭಗವಂತನ ಪೂಜೆಯಿಂದ ಸಂತೋಷವನ್ನು ಹೊಂದುವವರೂ, ಬ್ರಹ್ಮಚಾರಿ-ಯತಿಗಳನ್ನು ಭಿಕ್ಷಾನ್ನದಿಂದ ಪೂಜಿಸುವವರೂ, ಪ್ರಿಯ-ಹಿತವಾದಿಗಳು, ಗುಣಗ್ರಾಹಕರೂ ಮಹಾಭಾಗವತೋತ್ತಮರೆನಿಸಿ ಭೂಮಿಯಲ್ಲಿ ಪೂಜಿತರಾಗಿರುವರು. ಧರ್ಮಶಾಸ್ತ್ರಗಳನ್ನು ತಿಳಿದು ಆಚರಿಸುವವರು, ಸತ್ಯವಾದಿಗಳು, ಪುರಾಣಗಳನ್ನು ತಿಳಿದು ವ್ಯಾಖ್ಯಾನಮಾಡುವವರು, ಪುರಾಣಾದಿಗಳ ಶ್ರವಣವನ್ನು ಮಾಡುವವರು, ಗೋಬ್ರಾಹ್ಮಣರ ಶುಶ್ರೂಷೆಯನ್ನು ಮಾಡುವವರು, ತೀರ್ಥಯಾತ್ರೆಯನ್ನಾಚರಿಸುವವರು, ವಿಶಾಲವಾದ ಮನಸ್ಸನ್ನು ಹೊಂದಿದವರು, ದೇವಸ್ಥಾನ, ಬಾವಿ, ಕೆರೆ, ಪುಷ್ಕರಿಣಿಗಳನ್ನು ಕಟ್ಟಿಸುವವರು- ಅವುಗಳನ್ನು ಸಂರಕ್ಷಿಸುವವರು, ತುಲಸಿಯಿಂದ ನನ್ನನ್ನು ಅರ್ಚಿಸುವವರು, ನಿರ್ಮಾಲ್ಯ ತುಲಸಿ-ಗಂಧಗಳನ್ನು ಆಘ್ರಾಣಿಸುವವರು,

ಪಾನೀಯದಾನನಿರತಾ ಹ್ಯನ್ನದಾನರತಾಶ್ಚ ಯೇ ।
ಏಕಾದಶೀವ್ರತಪರಾಸ್ತೇ ವೈ ಭಾಗವತೋತ್ತಮಾಃ ॥58॥

ಗೋದಾನನಿರತಾ ಯೇ ಚ ಕನ್ಯಾದಾನರತಾಶ್ಚ ಯೇ ।
ಮದರ್ಥಂ ಕರ್ಮಕರ್ತಾರಸ್ತೇ ವೈ ಭಾಗವತೋತ್ತಮಾಃ ॥59॥

ಮನ್ಮಾನಸಾಶ್ಚ ಮದ್ಭಕ್ತಾ ಯೇ ಮದ್ಭಜನಲೋಲುಪಾಃ ।
ಮನ್ನಾಮಸ್ಮರಣಾಸಕ್ತಾಸ್ತೇ ವೈ ಭಾಗವತೋತ್ತಮಾಃ ॥60॥

ಬಹುನಾತ್ರ ಕಿಮುಕ್ತೇನ ಸಂಕ್ಷೇಪಾತ್ತೇ ಬ್ರವೀಮ್ಯಹಮ್ ।
ಸದ್ಗುಣಾಯ ಪ್ರವರ್ತಂತೇ ತೇ ವೈ ಭಾಗವತೋತ್ತಮಾಃ ॥61॥

ಏತೇ ಭಾಗವತಾ ವಿಪ್ರಾಃ ಕೇಚಿದತ್ರ ಪ್ರಕೀರ್ತಿತಾಃ ।
ಮಮಾಪಿ ಗದಿತುಂ ಶಕ್ಯಂ ನಾಬ್ದಕೋಟಿಶತೈರಪಿ ॥62॥

ರಾಮಾನುಜ ಮಹಾಭಾಗ ಮದ್ಭಕ್ತಾನಂ ಚ ಲಕ್ಷಣಮ್ ।
ಮಯಿ ಭಕ್ತೇ ತ್ವಯಿ ಪ್ರೀತ್ಯಾ ಯುಕ್ತಂ ಕಿಲ ಮಹಾಮತೇ ॥63॥

ಶ್ರೀ ಸೂತ ಉವಾಚ–

ಏವಂ ವಃ ಕಥಿತಂ ವಿಪ್ರಾಃ ಶೌನಕಾದ್ಯಾ ಮಹೌಜಸಃ ।
ವೃಷಾದ್ರೌ ಚ ವಿಯದ್ಗಂಗಾತೀರ್ಥಮಾಹಾತ್ಮ್ಯಮುತ್ತಮಮ್ ॥64॥

ಇತಿ ಸ್ಕಾಂದೇ ಶ್ರೀಆಕಾಶಗಂಗಾಮಾಹಾತ್ಮ್ಯವರ್ಣನಮ್' ನಾಮ ಏಕವಿಂಶತಿತಮೋಽಧ್ಯಾಯಃ

ತುಲಸಿಕಾಷ್ಠಗಳನ್ನು ಧರಿಸುವವರು, ತುಲಸಿಮೃತ್ತಿಕೆಯನ್ನು ಧಾರಣಮಾಡುವವರು, ಸ್ವವರ್ಣಾಶ್ರಮೋಚಿತ ಕರ್ಮಗಳನ್ನು ಆಚರಿಸುವವರು ಶ್ರವಣ ಪಾವನವಾದ ಹರಿಯ ನಾಮಗಳನ್ನು ಕೇಳಿ ಆನಂದಿಸುವವರು, ಅನ್ನದಾನ-ಜಲದಾನಗಳಲ್ಲಿ ನಿರತರಾದವರು, ಗೋದಾನ, ಕನ್ಯಾದಾನಗಳನ್ನು ಮಾಡುವವರು, ಏಕಾದಶೀ ವ್ರತಾಚರಣೆ ಯನ್ನು ಮಾಡುವವರು, (ವಿಷ್ಣುಪ್ರೀತ್ಯರ್ಥವಗಿ) ಕರ್ಮಗಳನ್ನು ಮಾಡುವವರು, ಭಗವಂತನಲ್ಲಿಯೇ ಮನಸ್ಸನ್ನಿಟ್ಟಿರುವವರು, ನನ್ನ ಭಕ್ತರು, ನನ್ನ ಭಕ್ತರನ್ನು ಅನುಸರಿಸಿರುವವರು ಇವರು ಭಾಗವತೋತ್ತಮರೆನಿಸುವವರು. ಸಂಕ್ಷೇಪವಾಗಿ ಹೇಳುವದಾದಲ್ಲಿ, ಯಾವ ಯಾವ ಸದ್ಗುಣಗಳಿವೆಯೋ ಅವುಗಳೆಲ್ಲವೂ ಸಹ ಭಾಗವತರಲ್ಲಿರುವವು' ಎಂಬುದಾಗಿ ಭಗವಂತನು ಭಾಗವತರ ಲಕ್ಷಣವನ್ನು ವಿವರಿಸಿದನು. ಹೀಗೆ ಆಕಾಶಗಂಗೆಯ ಮಾಹಾತ್ಮ್ಯೆಯು ಶೌನಕಾದಿಗಳಿಗೆ ಸೂತರಿಂದ ವಿವೃತವಾಗಿರುವವು.

## ಅಥ ದ್ವಾವಿಂಶತಿತಮೋಽಧ್ಯಾಯಃ ॥22॥

[ಆಕಾಶಗಂಗಾಮಾಹಾತ್ಮ್ಯ ವರ್ಣನಮ್]

ಋಷಯ ಊಚುಃ–

ಭಗವನ್ಸೂತ ಸರ್ವಜ್ಞ ವೇದವೇದಾಂತಕೋವಿದ ।
ದಾನಾನಿ ಕಸ್ಮೈ ದೇಯಾನಿ ದಾನಕಾಲಶ್ಚ ಕೀದೃಶಃ ॥1॥

ಕಶ್ಚ ತತ್ರಪ್ರತಿಗೃಹ್ಣೀಯಾತ್ಸರ್ವಂ ನೋ ವಕ್ತುಮರ್ಹಸಿ ॥2॥

ಶ್ರೀ ಸೂತ ಉವಾಚ–

ಮಹಾಪುಣ್ಯಪ್ರದೇ ಕ್ಷೇತ್ರೇ ವೇಂಕಟಾಖ್ಯೇ ದ್ವಿಜೋತ್ತಮಾ ।
ಸರ್ವೇಷಾಮೇವ ವರ್ಣಾನಾಂ ಬ್ರಾಹ್ಮಣಃ ಪರಮೋ ಗುರುಃ ॥3॥

ತಸ್ಮೈ ದಾನಾನಿ ದೇಯಾನಿ ಸ ತಾರಯತಿ ಪಂಡಿತಃ ।
ಬ್ರಾಹ್ಮಣಃ ಪ್ರತಿಗೃಹ್ಣೀಯಾದ್ವರ್ಜಯಿತ್ವಾ ತ್ವವರ್ಣಕಮ್ ॥4॥

ಷಂಡಸ್ಯ ಪುತ್ರಹೀನಸ್ಯ ದಂಭಾಚಾರರತಸ್ಯ ಚ ।
ವೇದವಿದ್ವೇಷಿಣಶ್ಚೈವ ದ್ವಿಜವಿದ್ವೇಷಿಣಸ್ತಥಾ ॥5॥

## ಇಪ್ಪತ್ತೆರಡನೆಯ ಅಧ್ಯಾಯ

[ಆಕಾಶಗಂಗಾಮಾಹಾತ್ಮ್ಯ]

ವೇಂಕಟಾಚಲದಲ್ಲಿ ಮಾಡಬಹುದಾದ ದಾನಗಳ ವಿವರಗಳನ್ನು ಶೌನಕರು ಸೂತರಿಂದ ತಿಳಿಯಬಯಸಿದಾಗ ಸೂತರು ವೇಂಕಟಾಚಲದಲ್ಲಿ ಅವಶ್ಯವಾಗಿ ಮಾಡಬೇಕಾದ ದಾನಗಳನ್ನು ಮತ್ತು ಅದರ ವಿಧಾನವನ್ನು ವರ್ಣಿಸುತ್ತಾರೆ.

ಎಲ್ಲ ವರ್ಣಗಳಿಗೆ ಗುರುವೆನಿಸಿದ ಬ್ರಾಹ್ಮಣನಿಗೆ ದಾನವನ್ನು ಮಾಡಿದಲ್ಲಿ ಅವನು ದಾತಾರನನ್ನು ಉದ್ಧರಿಸುವನು. ಬ್ರಾಹ್ಮಣನು ಬ್ರಾಹ್ಮಣನಿಂದ ದಾನವನ್ನು ಸ್ವೀಕರಿಸಬೇಕು. ಅವರ್ಣಕರಿಂದ (ವರ್ಣಬಾಹ್ಯರಿಂದ) ದಾನವನ್ನು ಸ್ವೀಕರಿಸಬಾರದು.

ದಂಭಾಚಾರದಲ್ಲಿ ಆಸಕ್ತನಾದವನು, ಷಂಡ, ಪುತ್ರರಹಿತ, ವೇದ–ಬ್ರಾಹ್ಮಣರ ದ್ವೇಷವನ್ನು

ಸ್ವಕರ್ಮತ್ಯಾಗಿನಶ್ಚಾಪಿ ದತ್ತಂ ಭವತಿ ನಿಷ್ಫಲಮ್ ।
ಪರದಾರರತಸ್ಯಾಪಿ ಪರದ್ರವ್ಯರತಸ್ಯ ಚ ।
ಗಾಯಕಸ್ಯಾಪಿ ವಿಪ್ರಸ್ಯ ದತ್ತಂ ಭವತಿ ನಿಷ್ಫಲಮ್ ॥6॥
ಅಸೂಯಾವಿಷ್ಟಮನಸಃ ಕೃತಘ್ನಸ್ಯ ಚ ಮಾಯಿನಃ ।
ಜ್ಞಾನಶೂನ್ಯಸ್ಯ ವಿಪ್ರಸ್ಯ ದತ್ತಂ ಭವತಿ ನಿಷ್ಫಲಮ್ ॥7॥
ನಿತ್ಯಂ ಯಾಂಚಾಪರಸ್ಯಾಪಿ ಹಿಂಸಕಸ್ಯಾಬಲಸ್ಯ ಚ ॥8॥
ನಾಮವಿಕ್ರಯಿಣಶ್ಚೈವ ವೇದವಿಕ್ರಯಿಣಸ್ತಥಾ ।
ಸ್ಮೃತಿವಿಕ್ರಯಿಣಶ್ಚೈವ ಧರ್ಮವಿಕ್ರಯಿಣಸ್ತಥಾ ॥9॥
ಪರೋಪತಾಪಶೀಲಸ್ಯ ದತ್ತಂ ಭವತಿ ನಿಷ್ಫಲಮ್ ।
ಯೇ ಕೇಚಿತ್ಪಾಪನಿರತಾ ನಿಂದಿತಾಃ ಸುಕೃತೈಸ್ತಥಾ ॥10॥
ನ ತೇಭ್ಯಃ ಪ್ರತಿಗೃಹ್ಣೀಯಾನ್ನ ದೇಯಂ ವಾಽಪಿ ಕಿಂಚನ ।
ಸ್ವಕರ್ಮನಿರತಾಯೈವ ಶ್ರೋತ್ರಿಯಾಯಾಹಿತಾಗ್ನಯೇ ॥11॥
ವೃತ್ತಿಹೀನಾಯ ವೈ ದೇಯಂ ದರಿದ್ರಾಯ ಕುಟುಂಬಿನೇ ।
ದೇವಪೂಜಾಸು ಸಕ್ತಾಯ ಪುರಾಣಕಥಕಾಯ ಚ ॥12॥
ದೇಯಂ ಪ್ರಯತ್ನತೋ ವಿಪ್ರಾ ದರಿದ್ರಸ್ಯ ವಿಶೇಷತಃ ।
ಬಹುನಾ ಕಿಮಿಹೋಕ್ತೇನ ಶೃಣುಧ್ವಂ ದ್ವಿಜಸತ್ತಮಾಃ ॥13॥

ಮಾಡುವವನು, ಸ್ವವರ್ಣಾಶ್ರಮೋಚಿತ ಕರ್ಮಗಳನ್ನು ತ್ಯಜಿಸಿರುವವನು, ಪರಸ್ತ್ರೀಸಂಗವನ್ನು ಮಾಡಿದವನು, ಅಸೂಯೆನ್ನು ಹೊಂದಿರುವವನು, ಕೃತಘ್ನ, ಮೂಢ, ವಂಚಕ, ಮಾಯಾವಿ, ಗಾಯಕ, ನಟ, ನರ್ತಕ, ವೇದವಿಕ್ರಯಿ, ಪುರಾಣ ಗಳನ್ನು ಮಾಱುವವನು, ಧರ್ಮವನ್ನು ಮಾರುವವನು, ಸ್ಮೃತಿಗ್ರಂಥಗಳನ್ನು ಮಾರುವವನು, ದುರ್ಬಲರನ್ನು ಹಿಂಸಿಸುವವನು, ನಾಮವಿಕ್ರಯಿ (ಕೂಟ ಸಾಕ್ಷಿಗಳನ್ನು ನುಡಿಯುವವನು) – ಇವರೆಲ್ಲರೂ ದಾನವನ್ನು ಸ್ವೀಕರಿಸಲು ಅನರ್ಹರಾಗಿರುವರು. ಇವರಿಗೆ ಮಾಡಿದ ದಾನವು ನಿಷ್ಫಲವೆನಿಸುವದು.

ಪಾಪಕೃತ್ಯಗಳಲ್ಲಿ ರತರಾದ ವ್ಯಕ್ತಿಗಳಿಂದ ದಾನವನ್ನು ಸ್ವೀಕರಿಸಬಾರದು ಹಾಗೆಯೇ ದಾನವನ್ನು ಕೊಡಲೂ ಬಾರದು. ಸ್ವವರ್ಣಾಶ್ರಮೋಚಿತ ಕರ್ಮಗಳ ಆಚರಣೆಯಲ್ಲಿ ನಿರತನಾದ, ಶ್ರೋತ್ರಿಯನಾದ, ಆಹಿತಾಗ್ನಿ ವ್ರತಸ್ಥನಾದ, ದೇವಪೂಜಾದಿ ಸತ್ಕಾರ್ಯಗಳಲ್ಲಿ ಆಸಕ್ತನಾದ, ಪುರಾಣಕಥೆಗಳನ್ನು

ಸರ್ವೇಷಾಂ ಬ್ರಾಹ್ಮಣಾನಾಂ ಚ ಪ್ರದಾತುಂ ಶಕ್ಯತೇ ಸದಾ ।
ವಂಧ್ಯಾಭರ್ತ್ರೇ ಪ್ರದತ್ತಂ ಚೇದ್ರಾಸಭೋ ಜಾಯತೇ ನರಃ ॥14॥

ನಾಸ್ತಿಕಂ ಭಿನ್ನಮರ್ಯಾದಂ ಪುತ್ರಹೀನಂ ಜಡಂ ಖಲಮ್ ।
ಸ್ತೇಯಿನಂ ಕಿತವಂ ಚೈವ ಕದಾಚಿನ್ನಾಭಿವಾದಯೇತ್ ॥15॥

ಪಾಷಂಡಂ ಪತಿತಂ ವ್ರಾತ್ಯಂ ವೇದವಿಕ್ರಯಿಣಂ ತಥಾ ।
ಕೃತಘ್ನಂ ಪಾಪನಿರತಂ ಕದಾಚಿನ್ನಾಭಿವಾದಯೇತ್ ॥16॥

ತಥಾ ಸ್ನಾನಂ ಪ್ರಕುರ್ವಂತುಂ ಸಮಿತ್ಪುಷ್ಪಕರಂ ತಥಾ ।
ಉದಪಾತ್ರಧರಂ ಚೈವ ಭುಂಜಂತಂ ನಾಭಿವಾದಯೇತ್ ॥17॥

ವಿವಾದಶಾಲಿನಂ ಚಂಡಂ ವಮಂತಂ ಜನಮಧ್ಯಗಮ್ ।
ಭಿಕ್ಷಾನ್ನಧಾರಿಣಂ ಚೈವ ಶಯಾನಂ ನಾಭಿವಾದಯೇತ್ ॥18॥

ವಂಧ್ಯಾಂ ಚ ಪುಷ್ಪಿಣೀಂ ಜಾರಾಂ ಸೂತಿಕಾಂ ಗರ್ಭಪಾತಿನೀಮ್।
ವ್ರತಘ್ನೀಂ ಚ ತಥಾ ಚಂಡೀಂ ಕದಾಚಿನ್ನಾಭಿವಾದಯೇತ್ ॥19॥

ಸಭಾಯಾಂ ಯಜ್ಞಶಾಲಾಯಾಂ ದೇವತಾಯಾತನೇಷ್ವಪಿ ।
ಪ್ರತ್ಯೇಕಂ ತು ನಮಸ್ಕಾರೋ ಹಂತಿ ಪುಣ್ಯಂ ಪುರಾತನಮ್ ॥20॥

ಶ್ರಾದ್ಧವ್ರತೇ ನಿಯುಕ್ತಂ ಚ ದೇವತಾಭ್ಯರ್ಚಕಂ ತಥಾ ।

ಭಗವತ್ಪ್ರೀತ್ಯರ್ಥವಾಗಿ ಕೀರ್ತನಮಾಡುವ ಬ್ರಾಹ್ಮಣನಿಗೆ, ಅದರಲ್ಲಿಯೂ ವೃತ್ತಿಹೀನನಾದ, ಬಡತನದಲ್ಲಿರುವ ಬ್ರಾಹ್ಮಣನಿಗೆ ವಿಶೇಷವಾಗಿ ದಾನವನ್ನು ಮಾಡಬೇಕು.

ಯಾವ ಬ್ರಾಹ್ಮಣನಿಗೆ ದಾನವನ್ನು ಮಾಡಿದರೂ ಸಹ ವಂಧ್ಯಾಪತಿಗೆ ದಾನವನ್ನು ಮಾಡಬಾರದು. ವಂಧ್ಯಾಪತಿಗೆ ದಾನವನ್ನು ಮಾಡಿದಲ್ಲಿ ಕತ್ತೆಯಾಗಿ ಹುಟ್ಟುವನು.

ನಾಸ್ತಿಕ, ಲೋಕನೀತಿಯನ್ನು ಮೀರಿದವನು, ವ್ರಾತ್ಯ, ಧನಕ್ಕಾಗಿ ವೇದವನ್ನು ಮಾರುವವನು, ಕೃತಘ್ನ, ಪಾಪಕರ್ಮಾಸಕ್ತ, ಇವರನ್ನು ಎಂದಿಗೂ ನಮಸ್ಕರಿಸಬಾರದು. ಹಾಗೆಯೇ ಸ್ನಾನಮಾಡುತ್ತಿರುವವನನ್ನು, ಕೈಯಲ್ಲಿ ಸಮಿತ್ತು, ಪುಷ್ಪಗಳನ್ನು ಹಿಡಿದಿರುವವನನ್ನು , ತುಂಬಿದ ಕೊಡವನ್ನು ಹೊತ್ತಿರುವವನನ್ನು, ಊಟಮಾಡುತ್ತಿರುವವನನ್ನು, ಓಕರಿಸುತ್ತಿರುವವನನ್ನು ಹಟವಾದಿ, ಕ್ರೂರರನ್ನು, ಭಿಕ್ಷಾನ್ನಾವನ್ನು ಹಿಡಿದಿರುವವನನ್ನು, ಮಲಗಿರುವವನನ್ನು ಎಂದಿಗೂ ನಮಸ್ಕರಿಸಬಾರದು. ಬಂಜೆಯನ್ನು, ರಜಸ್ವಲೆಯನ್ನು, ವ್ಯಭಿಚಾರಿಣಿ ಸ್ತ್ರಿಯನ್ನು, ಬಾಣಂತಿಯನ್ನು,

ಯಜ್ಞಂ ಚ ತರ್ಪಣಂ ಚೈವ ಕುರ್ವಂತಂ ನಾಭಿವಾದಯೇತ್ ॥21॥

ಕುರ್ವತೇ ವಂದನಂ ಯಸ್ತು ನ ಕುರ್ಯಾತ್ಪ್ರತಿವಂದನಮ್ ।
ನಾಭಿವಾದ್ಯಃ ಸ ವಿಜ್ಞೇಯೋ ಯಥಾ ಶೂದ್ರಸ್ತಥೈವ ಚ ॥22॥

ತಸ್ಮಾತ್ಸರ್ವೇಷು ಕಾಲೇಷು ಬುದ್ಧಿಮಾನ್ಬ್ರಾಹ್ಮಣೋತ್ತಮಃ ।
ವಂಧ್ಯಾಪತಿಂ ದ್ವಿಜಂ ಕ್ರೂರಂ ಕದಾಚನ್ನಾಭಿವಾದಯೇತ್ ॥23॥

ಶ್ರೀ ಸೂತ ಉವಾಚ–

ಅತ್ರೇತಿಹಾಸಂ ವಕ್ಷ್ಯಾಮಿ ಪುಣ್ಯಶೀಲಸ್ಯ ಧೀಮತಃ ।
ಸನತ್ಕುಮಾರಮುನಯೇ ನಾರದೇನ ಪ್ರಭಾಷಿತಮ್ ॥24॥

ತದ್ವಕ್ಷ್ಯಾಮಿ ಮುನಿಶ್ರೇಷ್ಠಾಃ ಶೃಣುಧ್ವಂ ಸುಸಮಾಹಿತಾಃ ।
ಪುರಾ ಗೋದಾವರೀತೀರೇ ಸರ್ವಧರ್ಮಪರಾಯಣಃ ॥25॥

ಪುಣ್ಯಶೀಲೋ ದ್ವಿಜವರಃ ಸತ್ಯವಾದೀ ಜೀತೇಂದ್ರಿಯಃ ।
ದಯಾವಾನ್ಸರ್ವಭೂತೇಷು ದೇವಾಗ್ನಿದ್ವಿಜಪೂಜಕಃ ॥26॥

ಮೇಲಿಂದ ಮೇಲೆ ಗರ್ಭಪಾತವಾಗುತ್ತಿರುವವಳನ್ನು, ಸೂಲಗಿತ್ತಿಯನ್ನು, ಗರ್ಭಪಾತ ಮಾಡಿಸುವವಳನ್ನು, ನಿಯಮ–ವ್ರತಗಳನ್ನು ತ್ಯಜಿಸಿರುವವಳನ್ನು, ಕ್ರೂರಿಯಾದವಳನ್ನು, ಚಂಡಿಯಂತಿರುವವಳನ್ನು ನಮಿಸಬಾರದು. ಸಭೆಯಲ್ಲಿ, ಯಜ್ಞಶಾಲೆಗಳಲ್ಲಿ ದೇವಾಲಯಗಳಲ್ಲಿ ಒಬ್ಬನೇ ವ್ಯಕ್ತಿಗೆ ನಮಸ್ಕರಿಸಿದರೆ ಅವನ ಪುಣ್ಯವೆಲ್ಲವೂ ನಷ್ಟವಾಗುವದು. ಶ್ರಾದ್ಧವನ್ನು ಮಾಡುತ್ತಿರುವವನನ್ನು, ದೇವರನ್ನು ಪೂಜಿಸುತ್ತಿರುವವನನ್ನು, ಯಜ್ಞ ತರ್ಪಣಾದಿಗಳನ್ನಾಚರಿಸು–ವವನನ್ನು ಆಯಾ ಸಂದರ್ಭಗಳಲ್ಲಿ ನಮಿಸಬಾರದು.

ವಂದನವನ್ನು ಮಾಡಿದಾಗ ಯಾರು ಪ್ರತಿವಂದನ, ಆಶೀರ್ವಾದಗಳನ್ನು ಮಾಡುವದಿಲ್ಲವೂ ಅವನು ಶೂದ್ರನಂತೆ ಇರುವವನಾಗಿ ಅವನು ನಮಸ್ಕಾರ್ಯನಾಗಿರುವದಿಲ್ಲ. ಆದ್ದರಿಂದ ಬುದ್ಧಿವಂತನಾದ ಬ್ರಾಹ್ಮಣನು ವಂಧ್ಯಾಪತಿಯನ್ನು ಎಂದಿಗೂ ನಮಸ್ಕರಿಸಬಾರದು. ವಂಧ್ಯಾಪತಿಯನ್ನು ಶ್ರಾದ್ಧಾದಿಗಳಿಗೆ ನಿಮಂತ್ರಿಸಬಾರದೆಂಬ ವಿಷಯದಲ್ಲಿ ಪೂರ್ವತನೀಯವಾದ ಸನತ್ಕುಮಾರ ನಾರದ ಸಂವಾದರೂಪವ ವೃತ್ತಂತವೊಂದಿರುವದು. ಅದನ್ನು ನಾನು ನಿಮಗೆ ತಿಳಿಸುವೆನು ಎಂದು ನುಡಿದ ಸೂತರು ವೃತ್ತಾಂತವನ್ನು ತಿಳಿಸುವರು.

ಪೂರ್ವದಲ್ಲಿ ಗೋದಾವರಿಯ ದಡದಲ್ಲಿ ಸತ್ಯವಾದಿಯೂ, ಜಿತೇಂದ್ರಿಯನೂ, ದಯಾವಂತನೂ,

ಕರ್ಮಣಾ ಜನ್ಮಶುದ್ಧಶ್ಚ ಮತಾಪಿತೃಹಿತೇ ರತಃ ।
ಗುರುಭಕ್ತಃ ಸದಾಕ್ಷಿಣ್ಯೋ ಬ್ರಹ್ಮಣ್ಯಃ ಸಾಧುಸಮ್ಮತಃ ॥27॥

ಏತಾದೃಶಗುಣೈರ್ಯುಕ್ತಃ ಪುಣ್ಯಶೀಲಸ್ಯ ಧೀಮತಃ ॥28

ಗೃಹಂ ಸಂಪ್ರಾಪ್ತವಾನ್ವಿಪ್ರೋ ವೇದವೇದಾಂಗಪಾರಗಃ ।
ಪ್ರಾರ್ಥಿತಃ ಪುಣ್ಯಶೀಲೇನ ಪಿತೃಶ್ರಾದ್ಧೇऽತಿವೇಗತಃ ॥29॥

ತಂ ವಿಪ್ರಂ ಶ್ರೋತ್ರಿಯಂ ಶಾಂತಂ ಪಿತೃಶ್ರಾದ್ಧೇ ನಿಯೋಜ್ಯ ವೈ ।
ಶ್ರಾದ್ಧಂ ಚಕಾರ ಧರ್ಮಾತ್ಮಾ ಪ್ರತ್ಯಾಬ್ದಿಕಮನುತ್ತಮಮ್ ॥30॥

ತತಃ ಕಾಲಾಂತರೇ ತಸ್ಯ ಪುಣ್ಯಶೀಲಸ್ಯ ಚಾನನೇ ।
ವೈರೂಪ್ಯಂ ಪ್ರಾಪ್ತಮತ್ಯುಗ್ರಂ ರಾಸಭಾನನವತ್ತದಾ ॥31॥

ತತಃ ಖಿನ್ನಮನಾ ಭೂತ್ವಾ ಪುಣ್ಯಶೀಲೋऽತಿಧಾರ್ಮಿಕಃ ।
ನಿಃಶ್ವಸ್ಯ ಬಹುಧಾಖಿನ್ನಃ ಪ್ರಪೇದೇऽಗಸ್ತ್ಯಯೋಗಿನಃ ॥32॥

ಸುವರ್ಣಮುಖರೀತೀರೇ ಋಷಿಸಂಘನಿಷೇವಿತೇ ।
ಆಶ್ರಮಂ ಪರಮಂ ದಿವ್ಯಂ ಸರ್ವಕಾಮಫಲಪ್ರದಮ್ ॥33॥

ತತ್ರಾಶ್ರಮೇ ಮುನಿವರ್ಯೈಃ ಸೇವ್ಯಮಾನಮಹರ್ನಿಶಮ್ ।
ದೃಷ್ಟ್ವಾऽಗಸ್ತ್ಯಂ ಮಹಾತ್ಮಾನಂ ಸರ್ವಲೋಕಹಿತೈಷಿಣಮ್ ॥34॥

ಪ್ರಣಾಮಮಕರೋತ್ತಸ್ಮೈ ಗರ್ದಭಾಸ್ಯೋऽತಿದುಃಖಿತಃ ॥35॥

ಪುಣ್ಯಶೀಲ ಉವಾಚ–

ದೇವರು,ಬ್ರಾಹ್ಮಣರನ್ನು ಪೂಜಿಸುವವನೂ, ಗುರುಭಕ್ತನೂ, ತಂದೆ ತಾಯ್ಗಳ ಹಿತದಲ್ಲಿ ಆಸಕ್ತನಾದವನೂ ಆದ ಪುಣ್ಯಶೀಲನೆಂಬ ಬ್ರಾಹ್ಮಣನಿದ್ದನು. ಹೀಗಿರಲು ಒಂದು ಬಾರಿ ಪುಣ್ಯಶೀಲನ ತಂದೆಯ ಪ್ರತ್ಯಬ್ದಿಕ ಶ್ರಾದ್ಧವಿರುತ್ತಿರಲು ಅವನ ಮನೆಗೆ ವೇದವೇದಾಂಗ ಪಾರಗನಾದ, ಶಾಂತನೂ, ಶ್ರೋತ್ರಿಯನೂ ಆದ ಬ್ರಾಹ್ಮಣನು ಬಂದನು. ಹೆಚ್ಚು ವಿಚಾರ ಮಾಡದ ಪುಣ್ಯಶೀಲನು ಆ ಬ್ರಾಹ್ಮಣನನ್ನು ಶ್ರಾದ್ಧಕ್ಕೆ ನಿಮಂತ್ರಿಸಿ ಶ್ರಾದ್ಧವನ್ನು ಮಾಡಿದನು.

ಕೆಲವು ದಿನಗಳ ಅನಂತರ ಪುಣ್ಯಶೀಲನ ಮುಖವು ವಿರೂಪತೆಯನ್ನು ಹೊಂದಿ ಅತ್ಯಂತ ಉಗ್ರವಾದ ಕತ್ತೆಯ ಮುಖದಂತೆ ಕಾಣತೊಡಗಿತು. ಇದರಿಂದ ಖಿನ್ನನಾದ ಅತ್ಯಂತ ಧರ್ಮಿಷ್ಠನಾದ ಪುಣ್ಯಶೀಲನು ಅಗಸ್ತ್ಯರ ಆಶ್ರಮಕ್ಕೆ ಹೋದನು. ಆಶ್ರಮದಲ್ಲಿ ಮುನಿಮಂಡಲದಿಂದ ಸೇವಿತನಾದ

ತಪೋನಿಧೇ ನಮಸ್ತುಭ್ಯಮಗಸ್ತ್ಯ ಮುನಿಸೇವಿತ ।
ಕುತ್ಸಿತಾಸ್ಯಂ ಮಹಾಪಾಪಂ ರಕ್ಷರಕ್ಷ ದಯಾನಿಧೇ ॥36॥
ಕೇನ ದೋಷೇಣ ಮೇ ಚಾತ್ರ ಮುಖಸ್ಯಾಸೀತ್ಕುರೂಪತಾ ॥37॥
ಮಯಿ ಪ್ರೀತ್ಯಾ ಮಹಾಭಾಗ ವದಸ್ವ ಮುನಿಸತ್ತಮ ॥38॥

ಅಗಸ್ತ್ಯ ಉವಾಚ–

ವಿಪ್ರವರ್ಯ ಮಹಾಭಾಗ ಪುಣ್ಯಶೀಲ ಮಹಾಮತೇ ।
ಅನನಸ್ಯ ವಿರೂಪಂ ವೈ ಶೃಣು ನಾನ್ಯಮನಾ ದ್ವಿಜ ॥39॥
ಕಿಂಚಿದ್ವಿಪ್ರಂ ಗುಣನಿಧಿಂ ವೇದವೇದಾಂಗಪಾರಗಮ್ ।
ಶ್ರೋತ್ರಿಯಂ ಪುತ್ರರಹಿತಂ ಶ್ರಾದ್ಧೇ ತ್ವಂ ವಿನಿಯುಕ್ತವಾನ್ ।
ತೇನ ದೋಷೇಣ ಮಹತಾ ಮುಖೇ ತವ ವಿರೂಪತಾ ॥40॥
ಯೇ ಲೋಕೇ ಹವ್ಯಕವ್ಯಾದೌ ವಂಧ್ಯಾಯಾಃ ಸ್ವಾಮಿನಂ ದ್ವಿಜಂ ।
ನಿಯೋಜಯಂತಿ ತೇ ಯಾಂತಿ ಮುಖೇ ಗರ್ದಭರೂಪತಾಮ್ ॥41॥
ಶುಭ್ರಕರ್ಮಣಿ ವಾ ಮಿತ್ರ ಪೈತೃಕೇ ವಾಪಿ ಕರ್ಮಣಿ ।
ವಂಧ್ಯಾಪತಿಂ ಮಹಾಪಾಪಂ ಕದಾಚಿನ್ನ ನಿಮಂತ್ರಯೇತ್ ॥42॥
ವಂಧ್ಯಾಪತಿಂ ಮಹಾಕ್ರೂರಂ ವೃಷಲೀಪತಿಮೇವ ವಾ ।
ಶ್ರೇಯಸ್ಕಾಮೀ ಹಿ ವಿಪ್ರೇಂದ್ರ ಶ್ರಾದ್ಧೇ ತು ನ ನಿಮಂತ್ರಯೇತ್ ॥43॥

ಮಹಾತ್ಮರಾದ ಅಗಸ್ತ್ಯರನ್ನು ನೋಡಿ ಅವರಿಗೆ ನಮಸ್ಕರಿಸಿ 'ಹೇ ತಪೋನಿಧಿಗಳಾದ ಅಗಸ್ತ್ಯರೇ! ನಿಮಗೆ ನಮಸ್ಕಾರಗಳು. ಯಾವ ಪಾಪದಿಂದಾಗಿ ನನ್ನ ಮುಖವು ಹೀಗೆ ಕುತ್ಸಿತಾಕಾರವನ್ನು ಹೊಂದಿರುವದು? ಎಂಬುದನ್ನು ತಿಳಿಸಿರಿ. ಹಾಗೆಯೇ ಆ ದೋಷವು ದೂರವಾಗುವ ಮಾರ್ಗವನ್ನೂ ಸಹ ನನಗೆ ತಿಳಿಸಿರಿ' ಎಂದು ಪ್ರಾರ್ಥಿಸಿದನು.

ಅಗಸ್ತ್ಯರು ತಮ್ಮ ದಿವ್ಯದೃಷ್ಟಿಯಿಂದ ಪುಣ್ಯಶೀಲನ ಪೂರ್ವವೃತ್ತಾಂತವನ್ನು ತಿಳಿದು ಪುಣ್ಯಶೀಲನನ್ನು ಕುರಿತು 'ಹೇ ಬ್ರಾಹ್ಮಣನೇ! ಹಿಂದೆ ನೀನು ಕರ್ಮಠನೂ, ವೇದವೇದಾಂಗ ಪಾರಗನೂ, ಕುಲೀನನೂ ಆಗಿದ್ದಿ. ಆದರೆ ಪುತ್ರರಹಿತನಾದ ವ್ಯಕ್ತಿಯನ್ನು ನೀನು ಶ್ರಾದ್ಧಕ್ಕೆ ಆಹ್ವಾನಿಸಿರುವಿ. ಆ ದೋಷದಿಂದ ನಿನಗೆ ಕತ್ತೆಯಂತೆ ವಿರೂಪವಾದ ಮುಖವುಂಟಾಗಿರುವದು. ಯಾರು ಹವ್ಯಕವ್ಯಾದಿ ಕಾರ್ಯಗಳಲ್ಲಿ ವಂಧ್ಯಾಪತಿಯನ್ನು ನಿಯೋಜಿಸುವರೋ ಅವರು

ವೇದಶಾಸ್ತ್ರಾದಿಯುಕ್ತೋऽಪಿ ಕುಲೀನಃ ಕರ್ಮಠೋऽಪಿ ವಾ ।
ವಂಧ್ಯಾಭರ್ತಾ ದಿಜಶ್ರೇಷ್ಠ ಶ್ರಾದ್ಧೇ ತ್ಯಾಜ್ಯಃ ಕಥಂಚನ ॥44॥

ಜ್ಯೋತಿಷ್ಟೋಮಾದಿಯಜ್ಞೇಷು ವ್ರತೇಷು ಚ ತಪಃ ಸು ಚ ।
ಸಮರ್ಥೋऽಪಿ ದ್ವಿಜಶ್ರೇಷ್ಠಃ ಶ್ರಾದ್ಧೇ ವಂಧ್ಯಾಪತಿಂ ತ್ಯಜೇತ್ ॥45॥

ಅಲಭ್ಯೇ ತು ದ್ವಿಜೇ ಪಾತ್ರೇ ತಂತುಮಾತ್ರೋಪಜೀವಿನಮ್ ।
ಪುತ್ರವಂತಂ ಸದಾಚಾರಂ ಶ್ರಾದ್ಧಾರ್ಥಂ ತು ನಿಮಂತ್ರಯೇತ್ ॥46॥

ತದಭಾವೇ ದ್ವಿಜಶ್ರೇಷ್ಠ ಪುತ್ರಂ ವಾನುಜಮೇವ ವಾ ।
ಆತ್ಮಾನಂ ವಾ ನಿಯುಂಜೀತ ಶ್ರಾದ್ಧೇ ವಂಧ್ಯಾಪತಿಂ ತ್ಯಜೇತ್ ॥47॥

ಪುಣ್ಯಶೀಲ ಮಹಾಭಾಗ ಚೋದ್ಧೃತ್ಯ ಭುಜಮುಚ್ಯತೇ ।
ಸರ್ವಥಾ ಪುತ್ರಹೀನಂ ತು ಶ್ರಾದ್ಧಾರ್ಥಂ ತು ನ ನಿಯೋಜಯೇತ್ ॥48॥

ವಂಧ್ಯಾಪತಿಂ ದ್ವಿಜಂ ಯಸ್ತು ಶ್ರಾದ್ಧಕರ್ತಾ ನಿಯೋಕ್ಷ್ಯತಿ ॥49॥

ತಚ್ಛ್ರಾದ್ಧಮಾಸುರಂ ಜ್ಞೇಯಂ ಕರ್ತಾ ಚ ನರಕಂ ವ್ರಜೇತ್ ॥50॥

ಬಹುನಾತ್ರ ಕಿಮುಕ್ತೇನ ತದ್ದೋಷವಿನಿವೃತ್ತಯೇ ।
ಉಪಾಯಂ ತೇ ಪ್ರವಕ್ಷ್ಯಾಮಿ ಸ್ವರ್ಣಮುಖ್ಯಾಸ್ತಟೇ ಶುಭೇ ॥51॥

ಕತ್ತೆಯ ರೂಪವನ್ನು ಪಡೆಯುವರು. ದೇವ ಅಥವಾ ಪಿತೃಕಾರ್ಯಗಳಲ್ಲಿ ವಂಧ್ಯಾಪತಿಯನ್ನೆಂದಿಗೂ ನಿಯೋಜಿಸಬಾರದು. ಸತ್ಕುಲ ಪ್ರಸೂತರಾಗಿದ್ದರೂ ಸಹ ಸದಾಚಾರಿಗಳಾಗಿದ್ದರೂ ಸಹ ಮಕ್ಕಳಿಲ್ಲದವರು, ವೃಷಲೀಪತಿ, ಇವರನ್ನು ಶ್ರೇಯಸ್ಸನ್ನು ಬಯಸುವವನು ಎಂದೆಂದಿಗೂ ಶ್ರಾದ್ಧದಲ್ಲಿ ನಿಯೋಜಿಸಬಾರದು. ವೇದಶಾಸ್ತ್ರಾದಿಗಳನ್ನು ತಿಳಿದವನಾಗಿದ್ದರೂ, ಕುಲೀನನಾಗಿದ್ದರೂ, ಸಕಲ ಶಾಸ್ತ್ರ ಪಾರಂಗತನಾಗಿದ್ದರೂ ಸಹ ಜ್ಯೋತಿಷ್ಟೋಮಾದಿ ಯಜ್ಞಗಳಲ್ಲಿ, ತಪಸ್ಸುಗಳಲ್ಲಿ, ಶ್ರಾದ್ಧದಲ್ಲಿ, ವ್ರತಾಚರಣೆಯಲ್ಲಿ ಮಕ್ಕಳಿಲ್ಲದ ವ್ಯಕ್ತಿಯನ್ನೆಂದಿಗೂ ನಿಯೋಜಿಸಬಾರದು. (ಆಹ್ವಾನಿಸಬಾರದು). ಪಾತ್ರನಾದ ಬ್ರಾಹ್ಮಣನು ದೊರೆಯದಿದ್ದಲ್ಲಿ ಒಬ್ಬನೇ ಮಗನಿರುವ ಬ್ರಾಹ್ಮಣನನ್ನು ಆಹ್ವಾನಿಸಬೇಕು. ಅವನೂ ದೊರೆಯದಿದ್ದಲ್ಲಿ ತನ್ನ ತಮ್ಮ, ಮಗ ಇವರನ್ನು ಮುಂದಿಟ್ಟುಕೊಂಡು ಶ್ರಾದ್ಧವನ್ನು ಮಾಡಬೇಕೆ ಹೊರತು ವಂಧ್ಯಾಪತಿ (ಮಕ್ಕಳಿಲ್ಲದವರ ಗಂಡನನ್ನು) ಯನ್ನು ಆಹ್ವಾನಿಸಬಾರದು. ಯಾವ ಶ್ರಾದ್ಧದಲ್ಲಿ ವಂಧ್ಯಾಪತಿಯನ್ನು ಶ್ರಾದ್ಧಕ್ಕೆ ಆಹ್ವಾನಿಸುವನೋ ಅಂತಹ ಶ್ರಾದ್ಧವು ಆಸುರವೆಂಬುದಾಗಿ ಪರಿಗಣಿಸಲ್ಪಟ್ಟು ಆ ಶ್ರಾದ್ಧದ ಕರ್ತಾರನು ನರಕವನ್ನೇ ಹೊಂದುವನು. ಹೇ ಪುಣ್ಯಶೀಲನೇ! ನಿನ್ನ ದೋಷನಿವೃತ್ತ್ಯರ್ಥವಾಗಿ

ವರ್ತತೇ ದೇವಸಂಘೈಶ್ಚ ಸೇವಿತೋ ವೇಂಕಟಾಚಲಃ ।
ಮೇರುಪುತ್ರೋ ಮಹಾಪುಣ್ಯಃ ಸರ್ವಕಾಮಫಲಪ್ರದಃ ॥52॥

ತಸ್ಮಿನ್ವೇಂಕಟಶೈಲೇಂದ್ರೇ ಸುರಾಸುರನಮಸ್ಕೃತೇ ।
ವಿಯದ್ಗೇಂಗೇತಿ ನಾಮ್ನಾ ವೈ ತೀರ್ಥಮಸ್ತಿ ಮಹತ್ತರಮ್ ॥53॥

ಸರ್ವಪಾಪಪ್ರಶಮನಮಾಯುರಾರೋಗ್ಯವರ್ಧನಮ್ ।
ತ್ವಂ ಗತ್ವಾ ವೇಂಕಟಂ ಶೈಲಂ ಸ್ವಾಮಿಪುಷ್ಕರಿಣೀಜಲೇ ॥54॥

ಸ್ನಾತ್ವಾ ಸಂಕಲ್ಪಪೂರ್ವಂ ತು ಗಂಗಾತೀರ್ಥಮನಂತರಮ್ ।
ಗತ್ವಾ ತೀರ್ಥವಿಧಾನೇನ ಸ್ನಾನಂ ಕುರು ಮಹಾಮತೇ ॥55॥

ಸ್ನಾನಮಾತ್ರಾತ್ತತಃ ಸದ್ಯೋ ಮುಖಸ್ಯಾಸ್ಯ ಮಹಾಮತೇ ।
ವೈರೂಪ್ಯಂ ತತ್ಕ್ಷಣಾದೇವ ನಂಕ್ಷ್ಯತ್ಯೇವ ನ ಸಂಶಯಃ ॥56॥

ಏವಮುಕ್ತಃ ಪುಣ್ಯಶೀಲೋ ಹ್ಯಗಸ್ತ್ಯೇನ ಮಹಾತ್ಮನಾ ।
ತಂ ಪ್ರಣಮ್ಯ ಮಹಾತ್ಮಾನಂ ವೇಂಕಟಾದ್ರಿಂ ತತೋ ಯಯೌ ॥57॥

ತತ್ರ ಗತ್ವಾ ಮಹಾಭಾಗಃ ಸ್ವಾಮಿಪುಷ್ಕರಿಣೀಜಲೇ ।
ಸ್ನಾತ್ವಾ ನಿಯಮಪೂರ್ವಂ ತು ವಿಯದ್ಗಂಗಾಸಮೀಪಗಃ ॥58॥

ತತ್ರ ಸ್ನಾನೇನ ಧರ್ಮಾತ್ಮಾ ಕಾಮವಕ್ತ್ರೋಪಮಂ ಮುಖಮ್ ।

ನಾನು ನಿನಗೆ ಉಪಾಯವೊಂದನ್ನು ತಿಳಿಸುವೆನು. ಸ್ವರ್ಣಮುಖೀ ನದಿಯ ದಡದಲ್ಲಿ ಮೇರುಪುತ್ರನಾದ, ಸರ್ವಕಾಮಫಲಪ್ರದವಾದ ವೇಂಕಟಾಚಲವೆಂಬ ಪರ್ವತವಿರುವದು. ಆ ಪರ್ವತದ ಮೇಲಭಾಗದಲ್ಲಿ ಶ್ರೇಷ್ಠವಾದ ಸರ್ವಪಾಪಹರವಾದ ಆಕಾಶಗಂಗೆಯಂಬ ಶ್ರೇಷ್ಠತೀರ್ಥವಿರುವದಾಗಿದ್ದು ಸರ್ವಪಾಪಗಳನ್ನು ಕಳೆದು ಆಯುರಾರೋಗ್ಯದಾಯಕವಾಗಿರುವದು. ನೀನು ವೇಂಕಟಾಚಲಕ್ಕೆ ಹೋಗಿ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡಿ ಅನಂತರದಲ್ಲಿ ಆಕಾಶಗಂಗೆಗೆ ಬಂದು ಸಂಕಲ್ಪಪುರಸ್ಸರವಾಗಿ ಸ್ನಾನವನ್ನಾಚರಿಸು. ಆಕಾಶಗಂಗಾ ಸ್ನಾನಮಾತ್ರದಿಂದ ನಿನ್ನ ಮುಖದ ವೈರೂಪ್ಯವು ಹೊರಟು ಹೋಗುವದು' ಎಂದು ನುಡಿದರು. ಅವರಿಗೆ ನಮಸ್ಕರಿಸಿ ಪುಣ್ಯಶೀಲನು ಮುಂದೆ ವೇಂಕಟಾಚಲಕ್ಕೆ ಬಂದು ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡಿ ಅನಂತರ ವಿಧಿಗಳಿಗನುಗುಣವಾಗಿ ಆಕಾಶಗಂಗೆಯಲ್ಲಿ ಸ್ನಾನವನ್ನು ಮಾಡಿ ಮನ್ಮಥನ ಮುಖವನ್ನು ಹೋಲುವಂತಹ ಸುಂದರವಾದ ಮುಖವನ್ನು ಹೊಂದಿದನು.

**ಪ್ರಾಪ್ತವಾನ್ಪುಣ್ಯಶೀಲಸ್ತು ಅಹೋ ತೀರ್ಥಸ್ಯ ವೈಭವಮ್ ॥59॥**

**ಶ್ರೀ ಸೂತ ಉವಾಚ–**

**ಏವಂ ವಃ ಕಥಿತಂ ವಿಪ್ರಾ ನಾರದೇನ ಪ್ರಭಾಷಿತಮ್ ।**
**ಸನತ್ಕುಮಾರಮನಯೇ ಶೌನಕಾದ್ಯಾ ಮಹೌಜಸಃ ॥60॥**

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ '**ಶ್ರೀಆಕಾಶಗಂಗಾಮಾಹಾತ್ಮ್ಯವರ್ಣನಮ್**' ನಾಮ ದ್ವಾವಿಂಶತಿತಮೋಽಧ್ಯಾಯಃ ॥22॥

* * *

ಹೇ ಶೌನಕಾದಿಗಳೇ ! ನಾನು ಇಲ್ಲಿಯವರೆಗೂ ನಾರದ ಮತ್ತು ಸನತ್ಕುಮಾರ ಸಂವಾದ ರೂಪವಾದ ಆಕಾಶಗಂಗೆಯ ಮಾಹಾತ್ಮ್ಯವನ್ನು ತಿಳಿಸಿರುವೆನು ಎಂದು ಸೂತಾಚಾರ್ಯರು ನುಡಿದರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ **ಆಕಾಶಗಂಗಾಮಾಹಾತ್ಮ್ಯ** ವರ್ಣನವೆಂಬ ಇಪ್ಪತ್ತೆರಡನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥ ತ್ರಯೋವಿಂಶತಿತಮೋಽಧ್ಯಾಯಃ

[ಚಕ್ರತೀರ್ಥಮಹಿಮಾವರ್ಣನಮ್]

ಸೂತ ಉವಾಚ-

ಅಥಾಹಂ ಸಂಪ್ರವಕ್ಷ್ಯಾಮಿ ದ್ವಿಜೇಂದ್ರಾಃ ಸತ್ಯವಾದಿನಃ ।
ಚಕ್ರತೀರ್ಥಸ್ಯ ಮಾಹಾತ್ಮ್ಯಂ ಸರ್ವಪಾಪಪ್ರಣಾಶನಮ್ ॥1॥

ಯೇ ಶೃಣ್ವಂತಿ ಮಹಾಪುಣ್ಯಂ ಚಕ್ರತೀರ್ಥಸ್ಯ ವೈಭವಮ್ ।
ತೇ ಯಾಂತಿ ವಿಷ್ಣುಭವನಮಂ ಪುನರಾವೃತ್ತಿವರ್ಜಿತಮ್ ॥2॥

ಅನ್ನದಾನೇ ಚ ವಿಮುಖಾ ಜಲದಾನೇ ತಥೈವ ಚ ।
ಗೋದಾನವಿಮುಖಾ ಯೇ ಚ ಶುದ್ಧಾಸ್ತೇಽತ್ರ ನಿಮಜ್ಜನಾತ್ ॥3॥

ತಸ್ಮಾತ್ಪುಣ್ಯತಮಂ ತೀರ್ಥಂ ಚಕ್ರತೀರ್ಥಮನುತ್ತಮಮ್ ॥4॥

ಶ್ರೀಸೂತ ಉವಾಚ-

ಪುರಾ ಶ್ರೀವತ್ಸಗೋತ್ರೀಯಃ ಪದ್ಮನಾಭೋ ಜಿತೇಂದ್ರಿಯಃ ।
ಚಕ್ರಪುಷ್ಕರಿಣೀತೀರೇ ಸೋಽತಪ್ಯತ ಮಹತ್ತಪಃ ॥5॥

ದಯಾಯುಕ್ತೋ ನಿರಾಹಾರಃ ಸತ್ಯವಾದೀ ಜಿತೇಂದ್ರಿಯಃ ।
ಆತ್ಮವತ್ಸರ್ವಭೂತಾನಿ ಪಶ್ಯನ್ವಿಷಯನಿಃಸ್ಪೃಹಃ ॥6॥

## ಇಪ್ಪತ್ಮೂರನೆಯ ಅಧ್ಯಾಯ

[ಚಕ್ರತೀರ್ಥದ ಮಹಿಮಾನುವರ್ಣನೆ]

ಸೂತರು ಮುಂದೆ ಸರ್ವಪಾಪಪ್ರಣಾಶಕವಾದ ಚಕ್ರತೀರ್ಥದ ಮಾಹಾತ್ಮ್ಯವನ್ನುತಿಳಿಸುತ್ತಾರೆ. ಯಾರು ಚಕ್ರತೀರ್ಥದ ವೈಭವವನ್ನು ಕೇಳುತ್ತಾರೆಯೋ ಅವರು ವಿಷ್ಣುಲೋಕವನ್ನು ಹೊಂದಿಸುಖಿಸುವರು. ಅನ್ನದಾನ ಗೋದಾನಗಳನ್ನು ಮಾಡದಿರುವವರೂ ಸಹ ಇಲ್ಲಿ ಸ್ನಾನವನ್ನು ಮಾಡುವದರಿಂದ ಶುದ್ಧರಾಗುವರು. ಆದ್ದರಿಂದ ಇದು ಅತ್ಯಂತ ಪುಣ್ಯತರವಾದ ತೀರ್ಥವಾಗಿರುವದು.

ಪೂರ್ವದಲ್ಲಿ ಜಿತೇಂದ್ರಿಯನೂ, ದ್ವಂದ್ವಸಹಿಷ್ಣುವೂ ಆದ ಶ್ರೀವತ್ಸ ಗೋತ್ರೋದ್ಭವನಾದ

ಸರ್ವಭೂತಹಿತೋ ದಾಂತಃ ಸರ್ವದ್ವಂದ್ವವಿವರ್ಜಿತಃ ।
ವರ್ಷಾಣಿ ಕತಿಚಿತ್ತೋಽಯಂ ಜೀರ್ಣಪರ್ಣಾಶನೋಽಭವತ್ ॥7॥

ಕಂಚಿತ್ಕಾಲಂ ಜಲಾಹಾರೋ ವಾಯುಭಕ್ಷಃ ಕಿಯತ್ಸಮಾಃ ।
ಏವಂ ದ್ವಾದಶವರ್ಷಾಣಿ ಪದ್ಮನಾಭೋ ಮಹಾಮುನಿಃ ।
ಅತಪ್ಯತ ತಪೋ ಘೋರಂ ದೇವೈರಪಿ ಸುದುಷ್ಕರಮ್ ॥8॥

ಅಥ ತತ್ತಪಸಾ ತುಷ್ಟೋ ಭಗವಾನ್ಕಮಲಾಪತಿಃ ।
ಪ್ರತ್ಯಕ್ಷತಾಮಗಾತ್ತಸ್ಯ ಶಂಖಚಕ್ರಗದಾಧರಃ ॥9॥

ವಿಕಚಾಂಬುಜಪತ್ರಾಕ್ಷಃ ಸೂರ್ಯಕೋಟಿಸಮಪ್ರಭಃ ।
ಉನ್ಮೀಲ್ಯ ಚಕ್ಷುಷೀ ತತ್ರ ದೃಷ್ಟವಾನ್ವೇಂಕಟೇಶ್ವರಮ್ ॥10॥

ಶಂಖಚಕ್ರಧರಂ ಶಾಂತಂ ಶ್ರೀನಿವಾಸಂ ಕೃಪಾನಿಧಿಮ್ ।
ದೃಷ್ಟ್ವಾ ದೇವಂ ಮಹಾತ್ಮಾನಂ ಸ್ತೋತುಂ ಸಮುಪಚಕ್ರಮತ್ ॥11॥

ನಮೋ ದೇವಾಧಿದೇವಾಯ ವೇಂಕಟೇಶಾಯ ಶಾರ್ಙ್ಗಿಣೇ ।
ನಾರಾಯಣಾದ್ರಿವಾಸಾಯ ಶ್ರೀನಿವಾಸಾಯ ತೇ ನಮಃ ॥12॥

ನಮಃ ಕಲ್ಮಷನಾಶಾಯ ವಾಸುದೇವಾಯ ವಿಷ್ಣವೇ ।
ಶೇಷಾಚಲನಿವಾಸಾಯ ಶ್ರೀನಿವಾಸಾಯ ತೇ ನಮಃ ॥13॥

ನಮಸ್ತ್ರೈಲೋಕ್ಯನಾಥಾಯ ವಿಶ್ವರೂಪಾಯ ಸಾಕ್ಷಿಣೇ ।

ಪದ್ಮನಾಭನೆಂಬುವ ಭಗವದ್ಭಕ್ತನಾದ ಬ್ರಾಹ್ಮಣನು ಚಕ್ರತೀರ್ಥದ ಬಳಿಯಲ್ಲಿ ಭಗವಂತನನ್ನು ಆರಾಧಿಸುತ್ತಾ, ಕ್ರಮವಾಗಿ ಅನ್ನಾಹಾರಜಲಪಾನಾದಿಗಳನ್ನು ವರ್ಜಿಸಿ, ವಾಯುಭಕ್ಷನಾಗಿ ಹನ್ನೆರಡು ವರ್ಷ ಕಾಲ ತೀವ್ರವಾದ ತಪಸ್ಸನ್ನಾಚರಿಸಿದನು. ಇವನ ತಪಸ್ಸಿಗೆ ಮೆಚ್ಚಿದ ಪ್ರಸನ್ನವದನನೂ, ಕಮಲದಲನಯನನೂ, ಭಕ್ತಾನುಗ್ರಾಹಕನೂ ಆದ ವೇಂಕಟೇಶ್ವರನು ಪ್ರತ್ಯಕ್ಷನಾದನು.

ತನ್ನೆದುರು ಬಂದುನಿಂತ, ಶಂಖಚಕ್ರಧಾರಿಯಾದ ಶ್ರೀನಿವಾಸನನ್ನು ನೋಡಿ 'ನಾರಾಯಣಾದ್ರಿ ನಿವಾಸಿಯಾದ, ದೇವಾಧಿದೇವನಾದ, ಭಕ್ತಕಲ್ಮಷನಾಶಕನಾದ, ವಾಸುದೇವನಾದ, ಬ್ರಹ್ಮಾಂಡಾಂತರ್ಬಹಿ ಪ್ರದೇಶಗಳಲ್ಲಿ ವ್ಯಾಪ್ತನಾದ್ದರಿಂದ ವಿಷ್ಣುವೆನಿಸಿದ, ಆದರೂ ಸಹ ಶೇಷಾಚಲ ನಿವಾಸನೆಂದು ಪ್ರಸಿದ್ಧನಾದ ಶ್ರೀನಿವಾಸನಿಗೆ ನಮಸ್ಕಾರಗಳು. ತ್ರಿಲೋಕಾಧಿಪತಿಯೂ, ಶ್ರೀಬ್ರಹ್ಮರುದ್ರೇಂದ್ರಾದಿ ದೇವತಾವೃಂದವಂದ್ಯನೂ, ಕ್ಷೀರಾಬ್ಧಿಶಾಯಿಯೂ ದುಷ್ಟಶಿಕ್ಷಕ-

ಶಿವಬ್ರಹ್ಮಾದಿವಂದ್ಯಾಯ ಶ್ರೀನಿವಾಸಾಯ ತೇ ನಮಃ ॥14॥

ನಮಃ ಕಮಲನೇತ್ರಾಯ ಕ್ಷೀರಾಬ್ಧಿಶಯನಾಯ ತೇ ।
ದುಷ್ಟರಾಕ್ಷಸಸಂಹರ್ತ್ರೇ ಶ್ರೀನಿವಾಸಾಯ ತೇ ನಮಃ ॥15॥

ಭಕ್ತಪ್ರಿಯಾಯ ದೇವಾಯ ದೇವಾನಾಂ ಪತಯೇ ನಮಃ ॥16॥

ಪ್ರಣತಾರ್ತಿವಿನಾಶಾಯ ಶ್ರೀನಿವಾಸಾಯ ತೇ ನಮಃ ॥17॥

ಯೋಗಿನಾಂ ಪತಯೇ ನಿತ್ಯಂ ವೇದವೇದ್ಯಾಯ ವಿಷ್ಣವೇ ।
ಭಕ್ತಾನಾಂ ಪಾಪಸಂಹರ್ತ್ರೇ ಶ್ರೀನಿವಾಸಾಯ ತೇ ನಮಃ ॥18॥

ಏವಂ ಸ್ತುತೋ ಮಹಾಭಾಗಃ ಶ್ರೀನಿವಾಸೋ ಜಗನ್ಮಯಃ ।
ಪದ್ಮನಾಭಾಖ್ಯಋಷಿಣಾ ಚಕ್ರತೀರ್ಥನಿವಾಸಿನಾ ॥19॥

ಸಂತೋಷಂ ಪರಮಂ ಪ್ರಾಪ್ಯ ವೇಂಕಟೇಶೋ ದಯಾನಿಧಿಃ ॥20॥

ಪದ್ಮನಾಭಂ ದ್ವಿಜವರಂ ಶಾಂತಂ ಧರ್ಮಪರಾಯಣಮ್ ।
ಸುಧಾಧಾರೋಪಮಂ ವಾಕ್ಯಮಬ್ರವೀತ್ಪುರುಷೋತ್ತಮಃ ॥21॥

ಶ್ರೀನಿವಾಸ ಉವಾಚ–

ದ್ವಿಜವರ್ಯ ಮಹಾಭಾಗ ಮತ್ಪಾದಕಮಲಾರ್ಚಕಃ ।
ಚಕ್ರತೀರ್ಥಸ್ಯ ತೀರೇ ತ್ವಮಾಕಲ್ಪಂ ಪೂಜಯನ್ವಸ ॥22॥

ಇತ್ಯುಕ್ತ್ವಾ ಭಗವಾನ್ವಿಷ್ಣುಸ್ತತ್ರೈವಾಂತರಧೀಯತ ।
ಅಂತರ್ಧಾನಂ ಗತೇ ದೇವೇ ಶ್ರೀನವಾಸೇ ಜಗದ್ಗುರೌ ॥23॥

ಚಕ್ರತೀರ್ಥಸ್ಯ ತೀರೇ ತು ವಾಸಂ ಚಕ್ರೇ ಮಹಾಮತಿಃ ।

ಶಿಷ್ಟಜನಪರಿಪಾಲಕನೂ, ತನ್ನ ಭಕ್ತರ ದುಃಖನಾಶಕನೂ ಆದ ವೇಂಕಟೇಶ್ವರನಿಗೆ ನಮಸ್ಕಾರಗಳು. ವೇದವೇದ್ಯನಾದ, ಭಕ್ತರ ಪಾಪಪರಿಹಾರಕನಾದ ಶ್ರೀನಿವಾಸನಿಗೆ ನಮಸ್ಕಾರಗಳು' ಎಂದು ಅವನನ್ನು ಸ್ತುತಿಸಿ ಪುನಃ ಪುನಃ ನಮಸ್ಕಾರವನ್ನು ಮಾಡಿದನು. ಪದ್ಮನಾಭನ ಸ್ತುತಿಯಿಂದ ಪ್ರಸನ್ನನಾದ ಭಗವಂತನು ಪದ್ಮನಾಭನಿಗೆ ಆ ಕಲ್ಪದ ಪರಿಸಮಾಪ್ತಿಯ ವರೆಗೂ ಚಕ್ರತೀರ್ಥದ ದಡದಲ್ಲಿಯೇ ತನ್ನನ್ನಾರಾಧಿಸುತ್ತಾ ವಾಸಮಾಡಲು ಆಜ್ಞಾಪಿಸಿದನು. ಪದ್ಮನಾಭನು ಭಗವಂತನನ್ನು ಧ್ಯಾನಿಸುತ್ತ ಅಲ್ಲಿಯೇ ವಾಸವನ್ನು ಮಾಡಿದನು.

ತತಃ ಕಾಲಾಂತರೇ ಕಶ್ಚಿದ್ರಾಕ್ಷಸೋ ಭೀಮದರ್ಶನಃ ॥24॥

ಮುನಿಂ ತಂ ಪದ್ಮನಾಭಾಖ್ಯಂ ನಾರಾಯಣಪರಾಯಣಮ್ ।
ಆಯಯೌ ಭಕ್ಷಿತುಂ ಕ್ರೂರಃ ಕ್ಷುಧಯಾ ಪರಿಪೀಡಿತಃ ॥25॥

ಬ್ರಾಹ್ಮಣಂ ತರಸಾ ಸೋಽಯಂ ರಾಕ್ಷಸೋ ಜಗೃಹೇ ತದಾ ।
ಗೃಹೀತಸ್ತರಸಾ ತೇನ ವಿಪ್ರೋ ವೇದಾಂಗಪಾರಗಃ ॥26॥

ಪ್ರಚುಕ್ರೋಶ ದಯಾಂಭೋಧಿಮಾಪನ್ನಾನಾನಾಂ ಪರಾಯಣಮ್।
ನಾರಾಯಣಂ ಚಕ್ರಪಾಣಿಂ ರಕ್ಷ ರಕ್ಷೇತಿ ವೈ ಮುಹುಃ ॥27॥

ವೇಂಕಟೇಶ ದಯಾಸಿಂಧೋ ಶರಣಾಗತಪಾಲಕ ।
ತ್ರಾಹಿ ಮಾಂ ಪುರುಷವ್ಯಾಘ್ರ ರಕ್ಷೋವಶಮುಪಾಗತಮ್ ॥28॥

ಲಕ್ಷ್ಮೀಕಾಂತ ಹರೇ ವಿಷ್ಣೋ ವೈಕುಂಠ ಗರುಡಧ್ವಜ ।
ಮಾಂ ರಕ್ಷ ರಾಕ್ಷಸಾಕ್ರಾಂತಂ ನಕ್ರಾಕ್ರಾಂತಂ ಗಜಂ ಯಥಾ ॥29॥

ದಾಮೋದರ ಜಗನ್ನಾಥ ಹಿರಣ್ಯಾಸುರಮರ್ದನ ।
ಪ್ರಹ್ಲಾದಮಿವ ಮಾಂ ರಕ್ಷ ರಾಕ್ಷಸೇನಾತಿಪೀಡಿತಮ್ ॥30॥

ಇತ್ಯೇವಂ ಸ್ತುವತಸ್ತಸ್ಯ ಪದ್ಮನಾಭಸ್ಯ ಹೇ ದ್ವಿಜಾಃ ।
ಸ್ವಭಕ್ತಸ್ಯ ಭಯಂ ಜ್ಞಾತ್ವಾ ಚಕ್ರಪಾಣಿರ್ದಯಾನಿಧಿಃ ॥31॥

ಸ್ವಚಕ್ರಂ ಪ್ರೇಷಯಾಮಾಸ ಭಕ್ತರಕ್ಷಣಕಾರಣಾತ್ ।
ಪ್ರೇರಿತಂ ವಿಷ್ಣುಚಕ್ರಂ ತದ್ವಿಷ್ಣುನಾ ಪ್ರಭವಿಷ್ಣುನಾ ॥32॥

ಹೀಗೆ ಕೆಲ ಕಾಲವು ಕಳೆಯುತ್ತಿರಲು ಒಂದು ಬಾರಿ ಭಯಂಕರವಾದ ಬ್ರಹ್ಮರಾಕ್ಷಸವೊಂದು ಪದ್ಮನಾಭ ಮುನಿಯನ್ನು ತಿನ್ನಲು ವೇಗವಾಗಿ ಅವನ ಬಳಿ ಬಂದು ಅವನನ್ನು ಹಿಡಿದುಕೊಂಡಿತು. ಇದರಿಂದ ಅತ್ಯಂತ ಭಯಗ್ರಸ್ತಮಾದ ಪದ್ಮನಾಭನು ಭಗವಂತನನ್ನೇ ಶರಣು ಹೊಂದುವವನಾಗಿ 'ದಯಾಸಮುದ್ರನಾದ ಶ್ರೀನಿವಾಸನೇ! ಶರಣಾಗತಪಾಲಕನೇ! ಬ್ರಹ್ಮಾದಿ ದೇವತೆಗಳಿಗೆ ನಿಯಾಮಕನೇ! ಲಕ್ಷ್ಮೀಪತಿಯೇ! ಈ ಪಿಶಾಚಿಯಿಂದ ನನ್ನನ್ನು ಕಾಪಾಡು. ಮುಕ್ತಾಧಿಪತಿಯೇ! ಹಿರಣ್ಯಕಶಿಪುವನ್ನು ಸಂಹರಿಸಿದ ಹೇ ಭಗವಂತನೇ! ಹಿಂದೆ ಮೊಸಳೆಯಿಂದ ಆಕ್ರಮಿತವಾದ ಗಜವನ್ನು ಹೇಗೆ ರಕ್ಷಿಸಿದೆಯೋ ಹಾಗೆ ರಾಕ್ಷಸಾಕ್ರಾಂತನಾದ ನನ್ನನ್ನು ರಕ್ಷಿಸು' ಎಂದು ಮೇಲಿಂದ ಮೇಲೆ ಪ್ರಾರ್ಥಿಸಿದನು. ಭಕ್ತನ ಭಯವನ್ನು ತಿಳಿದ ದಯಾನಿಧಿಯಾದ ವೇಂಕಟೇಶನು

ಅಜಗಾಮಾಥ ವೇಗೇನ ಚಕ್ರಪುಷ್ಕರಿಣೀ ತಟಮ್ ।
ಅನಂತಾದಿತ್ಯಸಂಕಾಶಮನಂತಾಗ್ನಿಸಮಪ್ರಭಮ್ ॥33॥

ಮಹಾಜ್ವಾಲಂ ಮಹಾನಾದಂ ಮಹಾಸುರವಿಮರ್ದನಮ್ ।
ದೃಷ್ಟ್ವಾ ಸುದರ್ಶನಂ ವಿಷ್ಣೋಃ ರಾಕ್ಷಸೋಽತ ಪ್ರದುದ್ರುವೇ ॥34॥

ದ್ರವಮಾಣಸ್ಯ ತಸ್ಯಾಶು ರಾಕ್ಷಸಸ್ಯ ಸುದರ್ಶನಮ್ ।
ಶಿರಶ್ಚಕರ್ತ ಸಹಸಾ ಜ್ವಾಲಾಮಾಲಾದುರಾಸದಮ್ ॥35॥

ತತೋ ವಿಪ್ರವರೋ ದೃಷ್ಟ್ವಾ ರಾಕ್ಷಸಂ ಪತಿತಂ ಭುವಿ ।
ಮುದಾ ಪರಮಯಾ ಯುಕ್ತಸ್ತುಷ್ಟಾವ ಚ ಸುದರ್ಶನಮ್ ॥36॥

ಪದ್ಮನಾಭ ಉವಾಚ–

ವಿಷ್ಣುಚಕ್ರ ನಮಸ್ತೇಽಸ್ತು ವಿಶ್ವರಕ್ಷಣದೀಕ್ಷಿತ ।
ನಾರಾಯಣಕರಾಂಭೋಜ ಭೂಷಣಾಯ ನಮೋಽಸ್ತುತೇ ॥37॥

ಯುದ್ಧೇಷ್ವಸುರಸಂಹಾರಕುಶಲಾಯ ಮಹಾರವ ।
ಸುದರ್ಶನ ನಮಸ್ತುಭ್ಯಂ ಭಕ್ತಾನಾಮಾರ್ತಿನಾಶನ ॥38॥

ರಕ್ಷ ಮಾಂ ಭಯವಸಂವಿಗ್ನಂ ಸರ್ವಸ್ಮಾದಪಿ ಕಲ್ಮಷಾತ್ ।
ಸ್ವಾಮಿನ್ಸುದರ್ಶನ ವಿಭೋ ಚಕ್ರತೀರ್ಥೇ ಸದಾ ಭವಾನ್ ॥39॥

ಸನ್ನಿಧೇಹಿ ಹಿತಾಯ ತ್ವಂ ಜಗತೋ ಮುಕ್ತಿಕಾಂಕ್ಷಿಣಃ ।
ಬ್ರಾಹ್ಮಣೇನೈವಮುಕ್ತಂ ತದ್ವಿಷ್ಣುಚಕ್ರಂ ಮುನೀಶ್ವರಾಃ ॥40॥

ತಂ ಪ್ರಾಹ ಪದ್ಮನಾಭಾಖ್ಯಂ ಪ್ರೀಣಯನ್ನಿವ ಸೌಹೃದಾತ್ ॥41॥

ಪದ್ಮನಾಭನ ರಕ್ಷಣಾರ್ಥವಾಗಿ ತನ್ನ ಸುದರ್ಶನ ಚಕ್ರವನ್ನು ಕಳುಹಿಸಿದನು. ಸಹಸ್ರಾದಿತ್ಯರಂತೆ ಹೊಳೆಯುತ್ತಿದ್ದ, ಮಹಾಜ್ವಾಲೆಗಳನ್ನು ಹೊರಸೂಸುತ್ತಿದ್ದ, ಭಯಂಕರವಾದ ಧ್ವನಿಯಿಂದ ಕೂಡಿದ ಸುದರ್ಶನ ಚಕ್ರವು ಬ್ರಹ್ಮರಾಕ್ಷಸನ ತಲೆಯನ್ನು ಕತ್ತರಿಸುವದರ ಮೂಲಕವಾಗಿ ಅವನನ್ನು ಕೊಂದು ಪದ್ಮನಾಭ ಮುನಿಯನ್ನು ಸಂರಕ್ಷಿಸಿತು. ಚಕ್ರದಿಂದ ಬದುಕಿದ ಮುನಿಯು 'ಭಗವಂತನ ಹಸ್ತಭೂಷಣನಾದ, ಯುದ್ಧಗಳಲ್ಲಿ ಅಸುರರನ್ನು ಮರ್ದಿಸುವಚಕ್ರವೇ! ನಿನಗೆ ನಮಸ್ಕಾರಗಳಿರಲಿ. ಭಯಸಂವಿಗ್ನನಾದ ನನ್ನನ್ನು ನೀನು ರಕ್ಷಿಸು. ಇನ್ನು ಮುಂದೆ ಜಗತ್ತಿನ ಹಿತಾರ್ಥವಾಗಿ ಈ ಚಕ್ರತೀರ್ಥದಲ್ಲಿ ಸನ್ನಿಹಿತನಾಗಿ ನಿಲ್ಲು' ಎಂದು ಸಂಪ್ರಾರ್ಥಿಸಿದನು. ಆಗ ಸುದರ್ಶನವು 'ಭಕ್ತನಾದ

ಸುದರ್ಶನ ಉವಾಚ–

ಪದ್ಮನಾಭ ಮಹಾತೀರ್ಥಂ ಚಕ್ರತೀರ್ಥಮನುತ್ತಮಮ್ ।
ಅಸ್ಮಿನ್ವಸಾಮಿ ಸತತಂ ಲೋಕಾನಾಂ ಹಿತಕಾಮ್ಯಯಾ ॥42॥

ತ್ವತ್ಪೀಡಾಂ ಪರಿಚಿಂತ್ಯಾಹಂ ರಾಕ್ಷಸೇನ ದುರಾತ್ಮನಾ ।
ಪ್ರೇರಿತೋ ವಿಷ್ಣುನಾ ವಿಪ್ರ ತ್ವರಯಾ ಸಮುಪಾಗತಃ । ।43॥

ತ್ವತ್ಪೀಡಕೋಽಪಿ ನಿಹತೋ ಮಯಾಯಂ ರಾಕ್ಷಸಾಧಮಃ ।
ಮೋಚಿತಸ್ತ್ವಂ ಭಯಾದಸ್ಮಾತ್ತ್ವಂ ಹಿ ಭಕ್ತೋ ಹರೇಃ ಸದಾ ॥44॥

ಚಕ್ರತೀರ್ಥೇ ಮಹಾಪುಣ್ಯೇ ಸರ್ವಪಾಪಹರೇ ದ್ವಿಜ ।
ಸತತಂ ಲೋಕರಕ್ಷಾರ್ಥಂ ಸನ್ನಿಧಾನಂ ಕರೋಮಿ ತೇ ॥45॥

ಅಸ್ಮಿನ್ಮತ್ಸನ್ನಿಧಾನಾತ್ತೇ ತಥಾನ್ಯೇಷಾಮಪಿ ದ್ವಿಜಃ ।
ಇತಃಪರಂ ನ ಪೀಡಾ ಸ್ಯಾದ್ಭೂತರಾಕ್ಷಸಸಂಭವಾ ।

ಅಸ್ಮಿನ್ಮತ್ಸನ್ನಿಧಾನಾತ್ಸ್ಯಾಚ್ಚಕ್ರತೀರ್ಥಮಿತಿ ಪ್ರಥಾ ॥47 ।

ಸ್ನಾನಂ ಯೇಽತ್ರ ಪ್ರಕುರ್ವಂತಿ ಚಕ್ರತೀರ್ಥೇ ವಿಮುಕ್ತಿದೇ ।
ತೇಷಾಂ ಪುತ್ರಾಶ್ಚ ಪೌತ್ರಾಶ್ಚ ವಂಶಜಾಃ ಸರ್ವ ಏವ ಹಿ ॥48॥

ವಿಧೂತಪಾಪಾ ಯಾಸ್ಯಂತಿ ತದ್ವಿಷ್ಣೋಃ ಪರಮಂ ಪದಮ್ ।
ಇತ್ಯುಕ್ತ್ವಾ ವಿಷ್ಣುಚಕ್ರಂ ತತ್ಪದ್ಮನಾಭಸ್ಯ ಪಶ್ಯತಃ ॥49॥

ಅನ್ಯೇಷಾಮಪಿ ವಿಪ್ರಾಣಾಂ ಪಶ್ಯತಾಂ ಸಹಸಾ ದ್ವಿಜಾಃ ।

ನಿನ್ನ ದುಃಖನಾಶಾರ್ಥವಾಗಿ ವಿಷ್ಣುವಿನಿಂದ ಪ್ರೇರಿತನಾದ ನಾನು ನಿನ್ನ ಬಳಿಗೆ ಬಂದು ನಿನಗೆ ಬಾಧಕನಾದ ರಾಕ್ಷಸನ ವಧೆಯನ್ನು ಮಾಡಿರುವೆನು. ತನ್ಮೂಲಕವಾಗಿ ನಿನ್ನ ಭಯವನ್ನು ಪರಿಹರಿಸಿರುವೆನು. ಭಕ್ತರ ಹಿತದ ಗೋಸ್ಕರವಾಗಿ ನೀನು ಪ್ರಾರ್ಥಿಸಿದಂತೆ ಇನ್ನು ಮುಂದ ಸರ್ವ ಪಾಪ ಹರವಾದ ಈ ತೀರ್ಥದಲ್ಲಿ ವಾಸವಾಗಿರುವೆನು. ನನ್ನ ಸನ್ನಿಧಾನ ಇರುವದರಿಂದ ಈ ತೀರ್ಥಕ್ಕೆ ಚಕ್ರತೀರ್ಥವೆಂಬ ಅನ್ವರ್ಥನಾಮಪ್ರಸಿದ್ಧಿಯು ಲೋಕದಲ್ಲಿ ಬರುವದು. ಯಾರು ಈ ಚಕ್ರತೀರ್ಥದಲ್ಲಿ ಸ್ನಾನಾದಿಗಳನ್ನು ಮಾಡುತ್ತಾರೆಯೋ ಅವರ ಪುತ್ರಪೌತ್ರಾದಿಗಳೂ ಸಹ ವೈಕುಂಠವನ್ನು ಹೊಂದುವರು' ಎಂದು ನುಡಿದು ಎಲ್ಲರೂ ನೋಡುತ್ತಿರುವಂತೆಯೇ ಸುದರ್ಶನ ಚಕ್ರವು ಆ ತೀರ್ಥವನ್ನು ಪ್ರವೇಶಮಾಡಿತು.

ಚಕ್ರಪುಷ್ಕರಿಣೀಂ ತಾಂ ತು ಪ್ರಾವಿಶತ್ಪಾಪನಾಶಿನೀಮ್ ॥50॥

ಶ್ರೀ ಸೂತ ಉವಾಚ–

ಚಕ್ರತೀರ್ಥಸ್ಯ ಮಾಹಾತ್ಮ್ಯಂ ವಿಪ್ರೇಂದ್ರಾಃ ಪಾಪನಾಶನಮ್ ।
ಯುಷ್ಮಾಕಂ ಕಥಿತಂ ಸರ್ವಂ ಶೌನಕಾದ್ಯಾ ಮಹೌಜಸಃ ॥51॥

ಚಕ್ರತೀರ್ಥಸಮಂ ತೀರ್ಥಂ ನ ಭೂತಂ ನ ಭವಿಷ್ಯತಿ ।
ಅತ್ರ ಸ್ನಾತ್ವಾ ನರಾ ವಿಪ್ರಾ ಮೋಕ್ಷಭಾಜೋ ನ ಸಂಶಯಃ ॥52॥

ಕೀರ್ತಯೇದಿಮಮಧ್ಯಾಯಂ ಶೃಣುಯಾದ್ವಾ ಸಮಾಹಿತಃ ।
ಚಕ್ರತೀರ್ಥಾಭಿಷೇಕಸ್ಯ ಪ್ರಾಪ್ನೋತಿ ಫಲಮುತ್ತಮಮ್ ॥53॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ 'ಶ್ರೀಚಕ್ರತೀರ್ಥಮಹಿಮಾನುವರ್ಣನಂ' ನಾಮ ತ್ರಯೋವಿಂಶತಿತಮೋಽಧ್ಯಾಯಃ ॥22॥

* * *

ಹೇ ಶೌನಕಾದಿಗಳೇ! ಚಕ್ರತೀರ್ಥಕ್ಕೆ ಸಮವಾದುದಾವುದೂ ಇಲ್ಲ; ಮುಂದೆಯೂ ಇರುವದಿಲ್ಲ. ಇಲ್ಲಿಯ ಸ್ನಾನಮಾತ್ರದಿಂದ ಮನುಷ್ಯರಿ ಮುಕ್ತಿಭಾಗಿಗಳಾಗುವರು. ಈ ಅಧ್ಯಾಯವನ್ನು ಕೇಳುವ ವ್ಯಕ್ತಿಯೂ, ಹೇಳುವ ವ್ಯಕ್ತಿಯೂ ಸಹ ಚಕ್ರತೀರ್ಥಸ್ನಾನವನ್ನು ಮಾಡುವ ಫಲವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ ಚಕ್ರತೀರ್ಥಮಹಿಮಾನುವರ್ಣನವೆಂಬ ಇಪ್ಪತ್ಮೂರನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥ ಚತುರ್ವಿಂಶತಿತಮೋಽಧ್ಯಾಯಃ ॥24॥

[ಚಕ್ರತೀರ್ಥಮಹಿಮಾವರ್ಣನಮ್]

ಋಷಯಃ ಊಚುಃ–

ಭಗವನ್ರಾಕ್ಷಸಃ ಕೋಽಸೌ ಸೂತ ಪೌರಾಣಿಕೋತ್ತಮ ।
ವಿಷ್ಣುಭಕ್ತಂ ಮಹಾತ್ಮಾನಂ ಯೋ ಬ್ರಾಹ್ಮಣಮಬಾಧತ ॥1॥

ಸೂತ ಉವಾಚ–

ವಕ್ಷ್ಯಾಮಿ ರಾಕ್ಷಸಂ ಕ್ರೂರಂ ತಂ ವಿಪ್ರಾಃ ಶೃಣುತಾದರಾತ್ ।
ಯಥಾ ಚ ರಾಕ್ಷಸೋ ಜಾತೋ ಮುನೀನಾಂ ಶಾಪವೈಭವಾತ್ ॥2॥

ಪುರಾ ವೈಕುಂಠಸದೃಶೇ ಶ್ರೀರಂಗೇ ವಿಷ್ಣುಮಂದಿರೇ ।
ವಸಿಷ್ಠಾತ್ರಿಮುಖಾಃ ಸರ್ವೇ ವಿಷ್ಣು ಭಕ್ತಾ ಮಹೌಜಸಃ ॥3॥

ಶ್ರೀರಂಗನಾಥಂ ದೇವೇಶಂ ಭಕ್ತಾನಾಮಭಯಪ್ರದಮ್ ।
ಉಪಾಸಾಂಚಕ್ರಿರೇ ಮುಕ್ತ್ಯೈ ಶ್ರೀರಂಗಪುರವಾಸಿನಃ ॥4॥

ಕದಾಚಿತ್ ತತ್ರ ಗಂಧರ್ವೋ ವಿರಬಾಹುಸುತೋ ಬಲೀ ।
ಸಂದರೋ ನಾಮ ವಿಪ್ರೇಂದ್ರಾ ವಿಟಗೋಷ್ಠೀಪರಾಯಣಃ ॥5॥

ಲಲನಾಶತಸಂಯುಕ್ತೋ ವಿವಸ್ತ್ರಃ ಸಲಿಲಾಶಯೇ ।
ಚಿಕ್ರೀಡ ಸ ವಿವಸ್ತ್ರಾಭಿಃ ಸಾಕಂ ಯುವತಿಭಿರ್ಮುದಾ ॥6॥

## ಇಪ್ಪತ್ನಾಲ್ಕನೆಯ ಅಧ್ಯಾಯ

[ಚಕ್ರತೀರ್ಥಮಹಿಮಾನುವರ್ಣನ]

ಸೂತರು ಶೌನಕರ ಪ್ರಾರ್ಥನೆಯಂತೆ ಪದ್ಮನಾಭ ಮುನಿಯನ್ನು ಹಿಡಿದು ಬಾಧಿಸಿದ ರಾಕ್ಷಸನ ಪೂರ್ವವೃತ್ತಾಂತವನ್ನು ತಿಳಿಸುತ್ತಾರೆ. ಪೂರ್ವದಲ್ಲಿ ವಸಿಷ್ಠ, ಅತ್ರಿಯೇ ಮೊದಲಾದ ವಿಷ್ಣುಭಕ್ತರು ವೈಕುಂಠಸದೃಶವಾದ ಶ್ರೀರಂಗಕ್ಷೇತ್ರದಲ್ಲಿ ಭಗವಂತನಾದ ರಂಗನಾಥನನ್ನು ಸಂದರ್ಶಿಸಿ, ಶ್ರೀರಂಗದಲ್ಲಿಯೇ ಭಗವಂತನ ಉಪಾಸನೆಯನ್ನು ಮಾಡುತ್ತಾ ಅಲ್ಲಿಯೇ ವಾಸವನ್ನು ಮಾಡಿದರು.

ಕವೇರಜಾಯಾಸ್ತೀರ್ಥೇ ತು ವಸಿಷ್ಠೋ ಮುನಿಭಿಃ ಸಹ ।
ಮಧ್ಯಾಹ್ನಿಕಂ ಕರ್ತುಮನಾ ಯಯೌ ಶ್ರೀರಂಗಮಂದಿರಾತ್ ॥7॥

ತಾನೃಷೀನವಲೋಕ್ಯಾಥ ರಾಮಾಸ್ತಾ ಭಯಕಾತರಾಃ ।
ವಾಸಾಂಸ್ಯಾಚ್ಛಾದಯಾಮಸುಃ ಸುಂದರೋ ನ ತು ಸಾಹಸೀ ॥8॥

ತತೋ ವಸಿಷ್ಠಃ ಕುಪಿತಃ ಶಶಾಪೈನಂ ಗತತ್ರಪಮ್ ॥9॥

ವಸಿಷ್ಠ ಉವಾಚ–

ಯಸ್ಮಾತ್ಸುಂದರ ಗಂಧರ್ವ ದೃಷ್ಟ್ವಾಸ್ಮಾನ್ಲಜ್ಜಯಾ ತ್ವಯಾ ।
ವಾಸೋ ನಾಚ್ಛಾದಿತಂ ಶೀಘ್ರಂ ಯಾಹಿ ರಾಕ್ಷಸತಾಂ ತತಃ ॥10॥

ಏವಮುಕ್ತೇ ವಸಿಷ್ಠೇನ ರಾಮಾಃ ಪ್ರಾಂಜಲಯಸ್ತದಾ ।
ಪ್ರಣಿಪತ್ಯ ವಸಿಷ್ಠಂ ತಂ ಭಕ್ತಿನಮ್ರೇಣ ಚೇತಸಾ ॥11॥

ಮುನಿಮಂಡಲಮಧ್ಯೇ ತು ವಸಿಷ್ಠಮಿದಮಬ್ರುವನ್ ॥12॥

ರಾಮಾ ಊಚುಃ–

ಭಗವನ್ಸರ್ವಧರ್ಮಜ್ಞ ಚತುರಾನನನಂದನ ।
ದಯಾಸಿಂಧೋಽವಲೋಕಯಾಸ್ಮಾನ್ನ ಕೋಪಂ ಕರ್ತುಮರ್ಹಸಿ ॥13।

ಪತಿರೇವ ಹಿ ನಾರೀಣಾಂ ಭೂಷಣಂ ಪರಮುಚ್ಯತೇ ।
ಪತಿಹೀನಾ ತು ಯಾ ನಾರೀ ಶತಪುತ್ರಾಽಪಿ ಸಾ ಮುನೇ ॥14॥

ವಿಧವೇತ್ಯುಚ್ಯತೇ ಲೋಕೇ ತಾಸಾಂ ಜನ್ಮ ನಿರರ್ಥಕಮ್ ।
ತತ್ಪ್ರಸಾದಂ ಕುರು ಮುನೇ ಪತ್ಯಾಮಸ್ಮಾಕಮಾದರಾತ್ ॥15॥

ಒಂದು ಬಾರಿ ವೀರಬಾಹುವೆಂಬ ಗಂಧರ್ವನ ಮಗನಾದ ಸುಂದರನೆಂಬುವ ಗಂಧರ್ವನು ಸ್ತ್ರೀಲೋಲುಪನಾಗಿ, ನೂರಾರು ಸ್ತ್ರೀಯರಿಂದ ಸಹಿತನಾಗಿ ವಿವಸ್ತ್ರನಾಗಿ, ಕಾವೇರಿ ನದಿಯಲ್ಲಿ ವಿಹಾರವನ್ನು ಮಾಡುತ್ತಿದ್ದನು. ಮಾಧ್ಯಾಹ್ನಿಕಗಳನ್ನು ಮಾಡುವದಕ್ಕಾಗಿ ನದಿಗೆ ಆಗಮಿಸಿದರು. ಇದನ್ನು ನೋಡಿದ ಸ್ತ್ರೀಯರು ತಮ್ಮ ಬಟ್ಟೆಗಳನ್ನು ತೊಟ್ಟುಕೊಂಡರು. ಆದರೆ ಸುಂದರನು ಹಾಗೆಯೆ ನಿಂತನು. ಇದರಿಂದ ಕುಪಿತರಾದ ವಸಿಷ್ಠ ಋಷಿಗಳು 'ನೀನು ನಿರ್ಲಜ್ಜನಾಗಿ ವಿವಸ್ತ್ರನಾಗಿ ಹಾಗೆಯೇ ನಿಂತಿರುವವನಾದ್ದರಿಂದ ರಾಕ್ಷಸನಾಗಿ ಹುಟ್ಟು' ಎಂದು ಶಪಿಸಿದರು. ಇದನ್ನು ಕೇಳಿದ ಸುಂದರನ ಪತ್ನಿಯರು ಪತಿಯೇ ನಾರಿಯರಿಗೆ ಗತಿಯೆನಿಸಿರುವದರಿಂದ

ಏಕೋಽಪರಾಧಃ ಕ್ಷಂತವ್ಯೋ ಮುಭಿಸ್ತತ್ತ್ವದರ್ಶಿಭಿಃ ।
ಕ್ಷಮಾಂ ಕುರು ದಯಾಸಿಂಧೋ ಯುಷ್ಮಚ್ಛಿಷ್ಯೇಽತ್ರ ಸುಂದರೇ ॥16॥

ಸೂತ ಉವಾಚ–

ವಸಿಷ್ಠಃ ಪ್ರಾರ್ಥಿತಸ್ತ್ವೇವಂ ಸುಂದರಸ್ಯಾಂಗನಾಜನ್ಯೈಃ ।
ಪ್ರೋವಾಚ ವಚನಂ ಭೂಯಃ ಪ್ರಸನ್ನಃ ಸ ದ್ವಿಜೋತ್ತಮಃ ॥17॥

ವಸಿಷ್ಠ ಉವಾಚ–

ನ ಮೇ ಸ್ಯಾದ್ವಚನಂ ಮಿಥ್ಯಾ ಕದಾಚಿದಪಿ ಸುಭ್ರುವಃ ।
ಉಪಾಯಂ ವಃ ಪ್ರವಕ್ಷ್ಯಾಮಿ ಶೃಣುಧ್ವಂ ಶ್ರದ್ಧಯಾ ಸಹ ॥18॥

ಷೋಡಶಾಬ್ದಾವಧಿಃ ಶಾಪೋ ಭರ್ತುರ್ವೈ ಭವಿತಾ ಧ್ರುವಮ್ ।
ಷೋಡಶಾಬ್ದಾವಧೌ ಚೈವ ಸುಂದರೋ ರಾಕ್ಷಸಾಕೃತಿಃ ॥19॥

ಯದೃಚ್ಛಯಾ ವೇಂಕಟಾದ್ರಿಂ ಸರ್ವಪಾಪಹರಂ ಶುಭಮ್ ।
ಗತ್ವಾಽಸೌ ಚಕ್ರತೀರ್ಥಂ ತದ್ಗಮಿಷ್ಯತಿ ಸುರಾಂಗನಾಃ ॥20॥

ಅಸ್ತೇ ತತ್ರ ಮಹಾಯೋಗೀ ಪದ್ಮನಾಭೋ ಮುನೀಶ್ವರಃ ।
ಭಕ್ಷಾರ್ಥಂ ತು ಮುನಿಂ ಸೋಽಯಂ ರಾಕ್ಷಸೋಽಭಿಗಮಿಷ್ಯತಿ ॥21॥

ತತೋ ಬ್ರಾಹ್ಮಣರಕ್ಷಾರ್ಥಂ ಪ್ರೇರಿತಂ ಚಕ್ರಮುತ್ತಮಮ್ ।
ವಿಷ್ಣುನಾಸ್ಯ ಶಿರಃ ಕಾಯಾದ್ಧರಿಷ್ಯತಿ ನ ಸಂಶಯಃ ॥22॥

ತತಃ ಸ್ವಂ ರೂಪಮಾಸಾದ್ಯ ಶಾಪಾನ್ಮುಕ್ತಃ ಸ ಸುಂದರಃ ।
ಪತಿರ್ವಸ್ತ್ರಿದಿವಂ ಭೂಯೋ ಗಂತಾ ನಾಸ್ತ್ಯತ್ರ ಸಂಶಯಃ ॥23॥

ನಮ್ಮಗೋಸ್ಕರವಾಗಿ ನಮ್ಮ ಪತಿಯ ಅಪರಾಧವನ್ನು ಕ್ಷಮಿಸಿ ತಮ್ಮನ್ನನುಗ್ರಹಿಸಲು ಬೇಡಿಕೊಂಡರು. ಆಗ ವಸಿಷ್ಠರು 'ನನ್ನ ವಚನವೆಂದೂ ಸುಳ್ಳಾಗದು. ಆದರೂ ಸಹ ಹದಿನಾರು ವರ್ಷಗಳಷ್ಟು ನನ್ನ ಶಾಪವು ನಿಮ್ಮ ಪತಿಗೆ ಇದ್ದೇ ಇರುವದು. (ಅವನು ಪಿಶಾಚಿಯಾಗಿಯೇ ಇರುವನು). ಹದಿನಾರು ವರ್ಷಗಳು ಪರಿಸಮಾಪ್ತ ವಾಗುತ್ತಿರಲು ಯಾದೃಚ್ಛಿಕವಾಗಿ ವೇಂಕಟಾದ್ರಿಗೆ ಬಂದು ಅಲ್ಲಿಯ ಚಕ್ರತೀರ್ಥದ ಸಮೀಪದಲ್ಲಿ ವಾಸವಾಗಿದ್ದ ಪದ್ಮನಾಭಮುನಿಯನ್ನು ಭಕ್ಷಿಸಲು ಪ್ರಯತ್ನಿಸಿ, ಮುನಿಯನ್ನು ರಕ್ಷಿಸಲು ಪ್ರಯುಕ್ತವಾದ ಚಕ್ರದಿಂದ ಮರಣವನ್ನು ಹೊಂದಿ, ತನ್ನ ಶಾಪದಿಂದ ಮುಕ್ತನಾಗಿ. ತನ್ನ ನಿಜಸ್ಥಾನವನ್ನು ಹೊಂದುವನು. ಇದರಲ್ಲಿ ಯಾವ ಸಂದೇಹವೂ ಬೇಡ'

ತತಸ್ತ್ರಿದಿವಮಾಸಾದ್ಯ ಸುಂದರೋಽಯಂ ಪತಿರ್ಹಿ ವಃ ।
ರಮಯಿಷ್ಯತಿ ಸುಂದರ್ಯೋರ್ ಯುಷ್ಮಾನ್ಸುಂದರವೇಷಧೃಕ್ ॥24॥

ಶ್ರೀ ಸೂತ ಉವಾಚ–

ಇತ್ಯುಕ್ತ್ವಾ ವಸಿಷ್ಠಸ್ತಾಃ ಸುಂದರಸ್ಯ ವರಾಂಗನಾ ।
ಸ್ವಾಶ್ರಮಂ ಪ್ರಯಯೌ ತೂರ್ಣಂ ಶ್ರೀರಂಗೇಶ್ವರಭಕ್ತಿಮಾನ್ ॥25॥

ಅಥ ರಾಮಾಸ್ತಮಾಲಿಂಗ್ಯ ಸುಂದರಂ ಪತಿಮಾತ್ಮನಃ ।
ರುರುದುಃ ಶೋಕಸಂತಪ್ತಾ ದುಃಧಖಸಾಗರಮಧ್ಯಗಾಃ ॥26॥

ದೃಶ್ಯಮಾನಾಸು ತಾಸ್ವೇವಂ ಸುಂದರೋ ರಾಕ್ಷಸೋಽಭವತ್ ।
ಮಹಾದಂಷ್ಟ್ರೋ ಮಹಾಕಾಯೋ ರಕ್ತಶ್ಮಶ್ರುಶಿರೋರುಹಃ ॥27॥

ತಂ ದೃಷ್ಟ್ವಾ ಭಯಸಂವಿಗ್ನಾ ಜಗ್ಮುಮಾಸ್ತ್ರಿವಿಷ್ಟಪಮ್ ।
ತತೋ ರಾಕ್ಷಸವೇಷೋಽಯಂ ಸುಂದರೋ ಭೈರವಾಕೃತಿಃ ॥28॥

ಭಕ್ಷಯನ್ಪ್ರಾಣಿನಃ ಸರ್ವಾನ್ ದೇಶಾದ್ದೇಶಂ ವನಾದ್ವನಮ್ ।
ಭ್ರಮನ್ನನಿಲವೇಗೋಽಯಂ ವೇಂಕಟಾದ್ರಿಂ ನಗೋತ್ತಮಮ್ ॥29॥

ಪ್ರವಿಶ್ಯಾಸೌ ಮಹಾಪಾಪೀ ಚಕ್ರತೀರ್ಥಂ ತತೋ ಯಯೌ ।
ಏವಂ ಷೋಡಶವರ್ಷಾಣಿ ಭ್ರಮತೋಽಸ್ಯ ಯಯುಸ್ತದಾ ॥30॥

ತತಸ್ತು ಷೋಡಶಾಬ್ದಾಂತೇ ರಾಕ್ಷಸೋಽಯಂ ಮುನೀಶ್ವರಾಃ ।
ಭಕ್ಷಿತುಂ ಪದ್ಮನಾಭಂ ತಂ ಚಕ್ರತೀರ್ಥನಿವಾಸಿನಮ್ ॥31॥

ಎಂದು ನುಡಿದು ತಮ್ಮ ಆಶ್ರಮವನ್ನು ಕುರಿತು ಹೋದರು.

ಶೋಕತಪ್ತರಾಗಿ ಅಳುತ್ತಿದ್ದ ಆ ಸ್ತ್ರೀಯರೆಲ್ಲರೂ ನೋಡುತ್ತಿರುವಂತೆಯೇ ಸುಂದರನು ದೊಡ್ಡ ಕೋರೆಹಲ್ಲುಗಳುಳ್ಳವನಾಗಿ, ದೊಡ್ಡ ಶರೀರ, ಕೆಂಪಾದ ಮೀಸೆ ಇವುಗಳಿಂದ ಅತ್ಯಂತ ಭಯಂಕರವಾಗಿ ಕಾಣುವ ರಾಕ್ಷಸನಾಗಿ ಪರಿಣಾಮವನ್ನು ಹೊಂದಿ, ಕೈಗೆ ಸಿಕ್ಕ ಪ್ರಾಣಿಗಳೆಲ್ಲವನ್ನು ಭಕ್ಷಿಸುತ್ತಾ, ನಾನಾ ಭೂಪ್ರದೇಶಗಳು, ಅರಣ್ಯ ಪರ್ವತಗಳು ಇವುಗಳಲ್ಲಿ ಸಂಚರಿಸುತ್ತಾ ಹದಿನಾರು ವರ್ಷಗಳು ಪೂರ್ತಿಯಾಗುವ ಹೊತ್ತಿಗೆ ವೇಂಕಟಾಚಲಕ್ಕೆ ಆಗಮಿಸಿದನು. ವಸಿಷ್ಠಶಾಪವು ಕಳೆಯುವ ಸಮಯವು ಪ್ರಾಪ್ತವಾದಾಗ ಚಕ್ರತೀರ್ಥದ ಬಳಿಗೆ ಬಂದ ಸುಂದರನು ಅಲ್ಲಿಯೇ ತಪೋನಿರತನಾಗಿದ್ದ ಪದ್ಮನಾಭಮುನಿಯನ್ನು ಭಕ್ಷಿಸಲುದ್ಯುಕ್ತನಾದಾಗ ಪರಮಾತ್ಮ ಪ್ರೇಷಿತವಾದ

ಉಪಾದ್ರವದ್ವಾಯುವೇಗಃ ಸ ಚಾಸ್ತೌಷೀಜ್ಜನಾರ್ದನಮ್ ।
ಯೋಗಿನಾ ಚ ಸ್ತುತೋ ವಿಷ್ಣುಸ್ತದಾ ಚಕ್ರಮಚೋದಯತ್ ॥32॥

ರಕ್ಷಿತುಂ ಪದ್ಮನಾಭಂ ತಂ ರಾಕ್ಷಸೇನ ಪ್ರಪೀಡಿತಮ್ ।
ಅಥಾಗತ್ಯ ಹರೇಶ್ಚಕ್ರಂ ರಾಕ್ಷಸಸ್ಯ ಶಿರೋಽಹರತ್ ॥33॥

ತತೋಽಯಂ ರಾಕ್ಷಸಂ ದೇಹಂ ತ್ಯಕ್ತ್ವಾ ದಿವ್ಯಕಲೇವರಃ ।
ವಿಮಾನವರಮಾರುಹ್ಯ ಸುಂದರಃ ಪುಷ್ಪವರ್ಷಿತಃ ॥34॥

ಪ್ರಾಂಜಲಿಃ ಪ್ರಣತೋ ಭೂತ್ವಾ ವವಂದೇ ತತ್ಸುದರ್ಶನಮ್ ।
ತುಷ್ಟಾವ ಶ್ರುತಿರಮ್ಯಾಭಿರ್ವಾಗ್ಭಿರಗ್ರ್ಯಾಭಿರಾದರಾತ್ ॥35॥

ಸುಂದರ ಉವಾಚ–

ಸುದರ್ಶನ ನಮಸ್ತೇಽಸ್ತು ವಿಷ್ಣುಹಸ್ತೈಕಭೂಷಣ ।
ನಮಸ್ತೇಽಸುರಸಂಹರ್ತ್ರೇ ಸಹಸ್ರಾದಿತ್ಯತೇಜಸೇ ॥36॥

ಕೃಪಾವಶೇನ ಭವತಸ್ತ್ಯಕ್ತ್ವಾಽಹಂ ರಾಕ್ಷಸೀಂ ತನುಮ್ ।
ಸ್ವಂ ರೂಪಮಭಜಂ ವಿಷ್ಣೋಶ್ಚಕ್ರಾಯುಧ ನಮೋಸ್ತು ತೇ ॥37॥

ಅನುಜಾನೀಹಿ ಮಾಂ ಗಂತುಂ ತ್ರಿದಿವಂ ವಿಷ್ಣುವಲ್ಲಭ ।
ಭಾರ್ಯಾ ಮೇ ಪರಿಶೋಚಂತಿ ವಿರಹಾತುರಚೇತಸಃ ॥38॥

ತ್ವನ್ಮನಸ್ಕೋ ಭವಿಷ್ಯಾಮಿ ಯಾವಜ್ಜೀವಂ ಯಥಾ ಹ್ಯಹಮ್ ।
ತಥಾ ರೂಪಂ ಕುರುಷ್ವ ತ್ವಂ ಮಯಿ ಚಕ್ರ ನಮೋಽಸ್ತು ತೇ ॥39॥

ಚಕ್ರದಿಂದ ಮರಣವನ್ನು ಹೊಂದಿ ವಸಿಷ್ಠರು ನುಡಿದಂತೆ ತನ್ನ ಶಾಪಮೋಚನೆಯನ್ನು ಹೊಂದಿದನು. ಶಾಪವಿಮುಕ್ತನಾದ ಸುಂದರನು ದಿವ್ಯವಾದ ರೂಪವನ್ನು ಧರಿಸಿ ಸುದರ್ಶನ ಚಕ್ರವನ್ನು ಸ್ತುತಿಸುತ್ತಾ 'ಹೇ ಭಗವಂತನ ಪ್ರಿಯಕರವಾದ ಆಯುಧವಾದ, ಅವನ ಕೈಯ್ಯನ್ನಲಂಕರಿಸಿದ ಸುದರ್ಶನ ಚಕ್ರವೇ! ನಿನಗೆ ನಮಸ್ಕಾರಗಳು. ನಿನ್ನಿಂದಲೇ ನಾನಿಂದ ರಾಕ್ಷಸ ದೇಹವನ್ನು ಬಿಟ್ಟು ನನ್ನ ಮೂಲರೂಪವನ್ನು ಹೊಂದುವವನಾಗಿದ್ದೇನೆ. ನಾನು ಇಲ್ಲಿಂದ ಸ್ವರ್ಗಕ್ಕೆ ಹೋಗಿ ಮಡದಿಯರನ್ನು ಹೊಂದುವೆನು. ನನಗೆ ಅಪ್ಪಣೆಯನ್ನು ಕೊಡು. ನಿನ್ನಲ್ಲಿಯೇ ನಾನು ಯಾವಾಗಲೂ ನನ್ನ ಮನಸ್ಸನ್ನು ಇಡುವೆನು. (ನಿನ್ನ ಭಕ್ತನಾಗಿರುವೆನು) ನನಗೆ ಕಾಮರೂಪವರವನ್ನು ಕೊಟ್ಟು ಅನುಗ್ರಹಿಸು. ನನ್ನ ಮಡದಿಯರೆಲ್ಲರೂ ನನ್ನನ್ನೇ ಕಾಯುತ್ತಿರುವರು. ಅನುಗ್ರಹಿಸಿ ಅಪ್ಪಣೆಯನ್ನು ಕೊಡು' ಎಂದು ಪ್ರಾರ್ಥಿಸಿದನು. ಆಗ ಸುದರ್ಶನವು ಹಾಗೆಯೇ

ಏವಂ ಸ್ತುತಂ ವಿಷ್ಣುಚಕ್ರಂ ಸುಂದರೇಣ ಸಭಕ್ತಿಕಮ್ ।
ಅನುಜಗ್ರಾಹ ಸಹಸಾ ತಥಾಸ್ತ್ವಿತಿ ಮುನೀಶ್ವರಾಃ ॥40॥

ಚಕ್ರಾಯುಧಾಭ್ಯನುಜ್ಞಾತಃ ಸುಂದರೋ ಬ್ರಾಹ್ಮಣೋತ್ತಮಮ್ ।
ಪ್ರಣಮ್ಯ ತೇನಾನುಜ್ಞಾತೋ ಗಂಧರ್ವಸ್ತ್ರಿದಿವಂ ಯಯೌ ॥41॥

ಸುಂದರೇ ತು ಗತೇ ಸ್ವರ್ಗಂ ಪದ್ಮನಾಭೋ ಮುನೀಶ್ವರಃ ।
ತಚ್ಚಕ್ರಂ ಪ್ರಾರ್ಥಯಾಮಾಸ ವಿಷ್ಣ್ವಾಯುಧ ನಮೋಽಸ್ತು ತೇ ॥42॥

ಚಕ್ರಾಯುಧ ನಮಾಮಿ ತ್ವಾಂ ಮಹಾಸುರವಿಮರ್ದನ ।
ಸನ್ನಿಧಾನಂ ಕುರುಷ್ವ ತ್ವಂ ಚಕ್ರತೀರ್ಥೇಽಮಲೇ ಶುಭೇ ॥43॥

ತ್ವತ್ಸನ್ನಿಧಾನಾತ್ಸರ್ವೇಷಾಂ ಸ್ನಾತಾನಾಂ ಪಾಪಿನಾಮಿಹ ।
ಪಾಪನಾಶಂ ಕುರುಷ್ವ ತ್ವಂ ಮೋಕ್ಷಂ ಚ ಕುರು ಶಾಶ್ವತಮ್ ॥44॥

ಚಕ್ರತೀರ್ಥಮಿತಿ ಖ್ಯಾತಿಂ ಲೋಕೇಽಸ್ಯ ಪರಿಕಲ್ಪಯ ।
ತ್ವತ್ಸನ್ನಿಧಾನಾದತ್ರತ್ಯಮುನೀನಾಂ ಭಯನಾಶನಮ್ ॥45॥

ಇತಃ ಪರಂ ಭವತ್ವಾರ್ಯ ಚಕ್ರಾಯುಧ ನಮೋಽಸ್ತು ತೇ ।
ಭೂತಪ್ರೇತಪಿಶಾಚೇಭ್ಯೋ ಭಯಂ ಮಾ ಭವತು ಪ್ರಭೋ ॥46॥

ಇತಿ ಸಂಪ್ರಾರ್ಥಿತಂ ಚಕ್ರಂ ಪದ್ಮನಾಭೇನ ಯೋಗಿನಾ ।
ತಥೈವಾಸ್ತ್ವಿತಿ ಸಂಭಾಷ್ಯ ತಸ್ಮಿಂಸ್ತೀರ್ಥೇ ತಿರೋಹಿತಮ್ ॥47॥

ಆಗಲಿ ಎಂದು ನುಡಿದಾಗ ಸುಂದರನು ಬ್ರಾಹ್ಮಣನಾದ ಅಲ್ಲಿಂದ ಸ್ವರ್ಗವನ್ನು ಕುರಿತು ಹೊರಟು ಹೋದನು.

ಅನಂತರ ಪದ್ಮನಾಭ ಮುನಿಯೂ ಸಹ ಚಕ್ರವನ್ನು ಕುರಿತು 'ನನ್ನನನುಗ್ರಹಿಸಲು ಆಗಮಿಸಿದ ಹೇ ಚಕ್ರವೇ ! ನೀನು ಇಲ್ಲಿಯೇ ಕಾಣುವ ಈ ತೀರ್ಥದಲ್ಲಿ ವಾಸವಾಗಿರು. ನಿನ್ನ ಸನ್ನಿಧಾನ ವಿಶೇಷವಿರುವ ಈ ಚಕ್ರತೀರ್ಥದಲ್ಲಿ ಸ್ನಾನ ಮಾಡುವವರ ಎಲ್ಲ ಪಾಪಗಳು ಸಹ ನಾಶವನ್ನು ಹೊಂದಲಿ. ಇನ್ನು ಮುಂದೆ ಈ ತೀರ್ಥವು ಚಕ್ರತೀರ್ಥವೆಂದು ಪ್ರಸಿದ್ಧವಾಗಲಿ. ಇಲ್ಲಿ ಸ್ನಾನಮಾಡಿದ ವ್ಯಕ್ತಿಗಳಿಗೆ ಭೂತಪ್ರೇತಪಿಶಾಚಿಗಳ ಭಯವಿರದಿರಲಿ' ಎಂದು ಪ್ರಾರ್ಥಿಸಿದನು. ಸುದರ್ಶನನು ಇದನ್ನಂಗೀಕರಿಸಿ 'ಹಾಗೆಯೇ ಆಗಲಿ' ಎಂದು ನುಡಿದು ಆ ತೀರ್ಥದಲ್ಲಿ ಅಂತರ್ಧಾನನಾದನು.

ಶ್ರೀ ಸೂತ ಉವಾಚ–

ಏವಂ ವಃ ಕಥಿತೋ ವಿಪ್ರಾ ರಾಕ್ಷಸಸ್ಯೋದ್ಭವೋ ಮಯಾ ।
ಮಾಹಾತ್ಮ್ಯಂ ಚಕ್ರತೀರ್ಥಸ್ಯ ಕಥಿತಂ ಚ ಮಲಾಪಹಮ್ ॥48॥

ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ಮಾನವೋ ಭುವಿ ॥49॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ 'ಶ್ರೀಚಕ್ರತೀರ್ಥಮಹಿಮಾನುವರ್ಣನಂ' ನಾಮ ಚತುರ್ವಿಂಶತಿತಮೋಽಧ್ಯಾಯಃ ॥24॥

* * *

ಹೇ ಶೌನಕರೇ! ಇಲ್ಲಿಯವರೆಗೂ ಚಕ್ರತೀರ್ಥದ ಮಾಹಾತ್ಮ್ಯವನ್ನು ರಾಕ್ಷಸನ ಪೂರ್ವವೃತ್ತಾಂತನ್ನು ತಿಳಿಸಿರುವೆನು. ಇದರ ಮಾಹಾತ್ಮ್ಯೆಯನ್ನು ಕೇಳಿದವನೂ ಸಹ ಮುಕ್ತಿಯನ್ನು ಹೊಂದುವರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ ಚಕ್ರತೀರ್ಥಮಹಿಮಾನುವರ್ಣನವೆಂಬ ಇಪ್ಪತ್ನಾಲ್ಕನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥ ಪಂಚವಿಂಶತಿತಮೋಽಧ್ಯಾಯಃ

[ಜಾಬಾಲೀತೀರ್ಥಮಹಿಮಾವರ್ಣನಮ್]

ಶ್ರೀ ಸೂತ ಉವಾಚ–

ಭೋ ಭೋಸ್ತಪೋಧನಾಸ್ಸರ್ವೇ ನೈಮಿಷಾರಣ್ಯವಾಸಿನಃ ।
ವೇಂಕಟಾದ್ರೌ ಮಹಾಪುಣ್ಯೇ ಸರ್ವಪಾತಕನಾಶನೇ ॥1॥

ತತೋ ಜಾಬಾಲಿತೀರ್ಥಸ್ಯ ಮಾಹಾತ್ಮ್ಯಂ ವರ್ಣಯಾಮ್ಯಹಮ್।
ದುರಾಚಾರಾಭಿಧೋ ಯತ್ರ ಸ್ನಾತ್ವಾ ಮುಕ್ತೋಽಭವದ್ದ್ವಿಜಾಃ ॥2॥

ಮುನಯಃ ಊಚುಃ–

ದುರಾಚಾರಾಭಿಧಃ ಕೋಽಸೌ ಸೂತ ತತ್ತ್ವಾರ್ಥಕೋವಿದ ।
ಕಿಂಚ ಪಾಪಂ ಕೃತಂ ತೇನ ದುರಾಚಾರೇಣ ವೈ ಮುನೇ ॥3॥

ಕಥಂ ವಾ ಪಾತಕಾನ್ಮುಕ್ತಸ್ತೀರ್ಥೇಽಸ್ಮಿನ್ಸ್ನಾನವೈಭವಾತ್ ।
ಏತಚ್ಛುಶ್ರೂಷಮಾಣಾನಾಂ ವಿಸ್ತರಾದ್ವದ ನೋ ಮುನೇ ॥4॥

ಶ್ರೀ ಸೂತ ಉವಾಚ–

ಮುನಯಃ ಶ್ರೂಯತಾಂ ತಸ್ಯ ದುರಾಚಾರಸ್ಯ ಪಾತಕಮ್ ।
ಜಾಬಾಲಿತೀರ್ಥಸ್ನಾನೇನ ಯಥಾ ಮುಕ್ತಶ್ಚ ಪಾತಕಾತ್ ॥5॥

## ಇಪ್ಪತ್ತೈದನೆಯ ಅಧ್ಯಾಯ

[ಜಾಬಾಲಿತೀರ್ಥಮಾಹಾತ್ಮ್ಯವರ್ಣನಮ್]

ಸೂತಾಚಾರ್ಯರು ಜಾಬಾಲಿ ತೀರ್ಥದ ಮಾಹಾತ್ಮ್ಯವನ್ನು ವರ್ಣನಮಾಡಲುದ್ಯುಕ್ತರಾಗಿ ದುರಾಚಾರನೆಂಬ ಬ್ರಾಹ್ಮಣನು ಜಾಬಾಲಿತೀರ್ಥಸ್ನಾನದಿಂದ ವೇತಾಲದ ಬಾಧೆಯಿಂದ ಮುಕ್ತನಾದನೆಂದು ತಿಳಿಸಿದಾಗ, ಶೌನಕಾದಿಗಳು ದುರಾಚಾರನು ಯಾರು? ಅವನ ಪೂರ್ವವೃತ್ತಾಂತವೇನು? ಎಂದು ಪ್ರಶ್ನಿಸಿದಾಗ ಅವನ ಪೂರ್ವವೃತ್ತಾಂತವನ್ನು ವರ್ಣಿಸುತ್ತಾರೆ.

ದುರಾಚಾರಾಭಿಧೋ ವಿಪ್ರಾಃ ಕಾವೇರೀತೀರಮಾಶ್ರಿತಃ ।
ಕಂಚಿದಾಸ್ತೇ ದ್ವಿಜಃ ಪಾಪೀ ಕ್ರೂರಕರ್ಮರತಃ ಸದಾ ॥6॥

ಬ್ರಹ್ಮಘ್ನೈಶ್ಚ ಸುರಾಪೈಶ್ಚ ಸ್ತೇಯಿಭಿರ್ಗುರುತಲ್ಪಗೈಃ ।
ಸದಾ ಸಂಸರ್ಗದುಷ್ಟೋಽಸೌ ತೈಃ ಸಾಕಂ ನ್ಯವಸದ್ದ್ವಿಜಾಃ ॥7॥

ಮಹಾಪಾತಕಸಂಸರ್ಗದೋಷೇಣಾಸ್ಯ ದ್ವಿಜಸ್ಯ ವೈ ।
ಬ್ರಾಹ್ಮಣ್ಯಂ ಸಕಲಂ ನಷ್ಟಂ ನಿಃಶೇಷೇಣ ದ್ವಿಜೋತ್ತಮಾಃ ॥8॥

ಮಹಾಪಾತಕಿಭಿಸ್ಸಾರ್ಧಂ ದಿನಮೇಕಂ ತು ಯೋ ದ್ವಿಜಃ ।
ನಿವಸೇತ್ಸಾದರಂ ತಸ್ಯ ತಕ್ಷಣಾದ್ವೈದ್ವಿಜನ್ಮನಃ ॥9॥

ಬ್ರಾಹ್ಮಣಸ್ಯ ತು ಚೈಕಾಂಶೋ ನಶ್ಯತ್ಯೇವ ನ ಸಂಶಯಃ ।
ದ್ವಿದಿನಂ ಸೇವನಾತ್ ಸ್ಪರ್ಶಾದ್ದರ್ಶನಾತ್ ಶಯನಾತ್ತಥಾ ॥10॥

ಭೋಜನಾತ್ಸಹಪಂಕ್ತೌ ಚ ಮಹಾಪಾತಕಿಭಿರ್ದ್ವಿಜಾಃ ।
ದ್ವಿತೀಯಭಾಗೋ ನಶ್ಯೇತ ಬ್ರಾಹ್ಮಣಸ್ಯ ನ ಸಂಶಯಃ ॥11॥

ತ್ರಿದಿನಾಚ್ಚ ತೃತೀಯಾಂಶೋ ನಶ್ಯತ್ಯೇವ ನ ಸಂಶಯಃ ।
ಚತುರ್ದಿನಾಚ್ಚತುರ್ಥಾಂಶೋ ವಿಲಯಂ ಯಾತಿ ಹಿ ಧ್ರುವಮ್ ॥

ಅತಃ ಪರಂ ಚ ತೈಃ ಸಾಕಂ ಶಯನಾಸನಭೋಜನೈಃ ।
ತತ್ತುಲ್ಯಪಾತಕೀ ಭೂಯಾನ್ಮಹಾಪಾತಕಿಸಂಗವಾನ್ ॥13॥

ತೇನ ಬ್ರಾಹ್ಮಣ್ಯಹೀನೋಽಯಂ ದುರಾಚಾರಾಭಿಧೋ ದ್ವಿಜಃ ।

ಪೂರ್ವದಲ್ಲಿ ಕಾವೇರಿನದಿಯ ತೀರದಲ್ಲಿ ಕ್ರೂರಕರ್ಮನಿರತನೂ ಪಾಪಿಯೂ ಆದ ದುರಾಚಾರನೆಂಬ ಬ್ರಾಹ್ಮಣನು ವಾಸವಾಗಿದ್ದು ಯಾವಾಗಲೂ ಬ್ರಹ್ಮಘಾತಕರು, ಸುರಾಪಾನಾಸಕ್ತರು, ಕಳ್ಳರು, ಗುರುತಲ್ಪ ಗಾಮಿಗಳೇ ಮೊದಲಾದ ಮಹಾಪಾಪಿಗಳ ಸಂಗದಲ್ಲಿಯೇ ಇರುತ್ತಿದ್ದನು. ಯಾವ ಬ್ರಾಹ್ಮಣನು ಮಾಹಾಪಾತಕಿಗಳೊಡನೆ ಒಂದು ದಿನ ಸೇವೆ, ಸಂಸ್ಪರ್ಶ, ದರ್ಶನ, ಸಹಶಯನ ಭೋಜನಾದಿಗಳ ಮೂಲಕವಾಗಿ ಸಂಗವನ್ನು ಮಾಡುವನೋ ಅವನ ಬ್ರಾಹ್ಮಣ್ಯವು ಕಾಲು ಭಾಗನಷ್ಟವಾಗುವದು. ಹಾಗೆ ನಾಲ್ಕುದಿನ ಅವರ ಸಹವಾಸದಲ್ಲಿದ್ದಲ್ಲಿ ಬ್ರಾಹ್ಮಣ್ಯವು ಸಂಪೂರ್ಣವಾಗಿ ನಷ್ಟವಾಗುವದು. ದುರಾಚಾರಿಯು ಬಹು ಕಾಲ ಪರ್ಯಂತರವಾಗಿ ದುಷ್ಟಸಹವಾಸದಲ್ಲಿದ್ದನಾದ್ದರಿಂದ ಅವನ ಬ್ರಾಹ್ಮಣ್ಯವೆಲ್ಲವೂ ನಿಶ್ಶೇಷವಾಗಿ ನಾಶವಾಯಿತು.

ಗ್ರಸ್ತೋಽಭವದ್ಧೀಷಣೇನ ವ್ಯಾಲೇನೇವ ಬಲೀಯಸಾ ॥14॥

ಅಸೌ ಪರವಶಸ್ತೇನ ವೇತಾಲೇನಾತಿಪೀಡಿತಃ ।
ದೇಶಾದ್ದೇಶಂ ಭ್ರಮನ್ವಿಪ್ರೋ ವನಾಚ್ಚೈವ ವನಾಂತರಮ್ ॥15॥

ಪೂರ್ವಪುಣ್ಯವಿಪಾಕೇನ ದೈವಯೋಗೇನ ಸ ದ್ವಿಜಃ ।
ವೇಂಕಟಾದ್ರಿಂ ಮಹಾಪುಣ್ಯಂ ಸರ್ವಪಾತಕನಾಶನಮ್ ॥16॥

ಅನುದ್ರುತಃ ಪಿಶಾಚೇನ ವೇತಾಲೇನ ದ್ವಿಜೋ ಯಯೌ ।
ನ್ಯಮಜ್ಜಯತ್ಸವೇತಾಲೋ ಮಹಾಪಾತಕನಾಶನೇ ॥17॥

ಜಾಬಾಲಿತೀರ್ಥೇ ವಿಪ್ರೇಂದ್ರಾ ಮಹಾಪಾತಕಿಸಂಗಿನಮ್ ।
ಉದತಿಷ್ಠತ್ಕ್ಷಣಾದೇವ ವೇತಾಲೇನ ವಿಮೋಚಿತಃ ॥18॥

ಉತ್ಥಿತೋಽಸೌ ದ್ವಿಜೋ ವಿಪ್ರಾಸ್ತಸ್ಮಾತ್ತೀರ್ಥಾತ್ತು ಪಾವನಾತ್ ।
ಸ್ವಸ್ಥೋ ವ್ಯಚಿಂತಯತ್ಕೋಽಯಂ ಸ್ವರ್ಣಮುಖ್ಯಾಃ ಸಮೀಪತಃ ॥19॥

ಕಥಂ ಮಯಾಗತಮಹೋ ಕಾವೇರೀತೀರವಾಸಿನಾ ।
ಇತಿ ಚಿಂತಾಕುಲಃಸೋಽಯಂಜಾಬಾಲೇಸ್ತೀರ್ಥಮುತ್ತಮಮ್ ॥20॥

ಜಾಬಾಲಿಂ ಚ ಮಹಾತ್ಮಾನಂ ಯೋಗೀಂದ್ರವರಮುತ್ತಮಮ್ ।
ಸಮಾಗಮ್ಯ ಪ್ರಣಮ್ಯಾಸೌ ದುರಾಚಾರೋಽಭ್ಯಭಾಷತ ॥21॥

ನ ಜಾನೇ ಭಗವನ್ವಿಪ್ರ ಪರ್ವತೋಽಯಂ ವದಾಧುನಾ ।

ಸತ್ಕರ್ಮ ಶೂನ್ಯನಾಗಿ ದುಷ್ಕರ್ಮ ರತನಾದ್ದರಿಂದ ಬ್ರಾಹ್ಮಣ್ಯವಿಹೀನವಾದ ಇವನನ್ನು ವೇತಾಲವೊಂದು ಹಿಡಿದುಕೊಂಡಿತು. ವೇತಾಲಗ್ರಸ್ತನಾದ ದುರಾಚಾರನು ವನದಿಂದ ವನಕ್ಕೆ ಸಂಚರಿಸುತ್ತಾ ದೈವಯೋಗದಿಂದ ವೇಂಕಟಾಚಲಕ್ಕೆ ಬಂದು, ಪೂರ್ವಪುಣ್ಯವಿಪಾಕದಿಂದ ಜಾಬಾಲಿತೀರ್ಥದಲ್ಲಿ ಸ್ನಾನವನ್ನು ಮಾಡಿದನು. ಸ್ನಾನಮಾತ್ರದಿಂದ ಇವನ ಪಾಪಗಳೆಲ್ಲವೂ ನಾಶವಾಗಿ, ಇವನನ್ನು ಹಿಡಿದುಕೊಂಡಿರುವ ವೇತಾಲವು ಇವನನ್ನು ಬಿಟ್ಟು ದೂರಹೋಯಿತು.

ಜಾಬಾಲಿತೀರ್ಥದ ಸ್ನಾನದಿಂದ ಸ್ವಸ್ಥಮನಸ್ಕನಾದ ದುರಾಚಾರಿಯು,ತಾನು ವೇತಾಲ ಗ್ರಸ್ತನಾಗಿದ್ದನ್ನು ಅರಿಯದೇ ಕಾವೇರಿತೀರನಿವಾಸಿಯಾದ ತಾನು ಹೇಗೆ ವೇಂಕಟಾಚಲದಲ್ಲಿರುವ ಜಾಬಾಲಿ ತೀರ್ಥದ ಬಳಿ ಬಂದಿರುವೆನು ಎಂದು ತಿಳಿಯದೇ ಅಲ್ಲಿಯೇ ಇರುವ ಜಾಬಾಲಿ ಮಹರ್ಷಿಗಳನ್ನು ನೋಡಿ, ನಮಸ್ಕರಿಸಿ ಕಾವೇರೀತೀರ ನಿವಾಸಿಯಾದ ತಾನು ಇಲ್ಲಿಗೆ ಹೇಗೆ

ಕಾವೇರೀತೀರನಿಲಯೋ ದುರಾಚಾರಾಭಿಧೋ ಹ್ಯಹಮ್ ॥22॥

ಕೃಪಯಾ ಬ್ರೂಹಿ ಮೇ ಬ್ರಹ್ಮನ್ಮಯಾತ್ರ ಕಥಮಾಗತಮ್ ।
ಇತಿ ಪೃಷ್ಟೋ ಮುನಿಸ್ತೇನ ದುರಾಚಾರೇಣ ಸುವ್ರತಃ ॥23॥

ಧ್ಯಾತ್ವಾ ಮುಹೂರ್ತಮವದದ್ದುರಾಚಾರಂ ಕೃಪಾನಿಧಿಃ ॥24॥

ಜಾಬಾಲಿರುವಾಚ–

ಮಹಾಪಾತಕಿಸಂಸರ್ಗಾದ್ದುರಾಚಾರಸ್ಯ ತೇ ಪುರಾ ।
ಬ್ರಾಹ್ಮಣ್ಯಂ ನಷ್ಟಮಭವದ್ವೇತಾಲಸ್ತ್ವಾಂ ತತೋಽಗ್ರಹೀತ್ ॥25॥

ತೇನಾವಿಷ್ಟಸ್ತ್ವಮಾಯಾತೋ ವಿವಶೋಽತ್ರ ವಿಮೂಢಧೀಃ ।
ನ್ಯಮಜ್ಜಯತ್ತ್ವಾಂ ವೇತಾಲಸ್ತೀರ್ಥೇಽಸ್ಮಿನ್ನತಿಪಾವನೇ ॥26॥

ಅತ್ರ ಮಜ್ಜನಮಾತ್ರೇಣ ವಿಮುಕ್ತಃ ಪಾತಕಾದ್ಭವಾನ್ ।
ಜಾಬಾಲಿತೀರ್ಥೇ ಯೇ ಸ್ನಾನಂ ಪುಣ್ಯಂ ಕುರ್ವಂತಿ ಮಾನವಾಃ ॥27॥

ತೇಷಾಂ ನಶ್ಯಂತಿ ವೈ ಸತ್ಯಂ ಪಂಚಪಾತಕಸಂಚಯಾಃ ।
ಸತ್ಕರ್ಮಸಾಧನೇ ಪುಣ್ಯತೀರ್ಥೇಽಸ್ಮಿನ್ಸ್ನಾನಮಾತ್ರತಃ ॥28॥

ಮಹಾಪಾತಕಿಸಂಸರ್ಗದೋಷಸ್ತೇ ವಿಲಯಂ ಗತಃ ।
ತ್ವಾಮಗ್ರಹೀದ್ಯೋ ವೇತಾಲಃ ಪುರಾಽಯಂ ಬ್ರಾಹ್ಮಣೋಽಭವತ್ ॥29॥

ಮತ್ತು ಏಕೆ ಬಂದೆನು ಎಂಬುದನ್ನು ತಿಳಿಸಿರಿ' ಎಂದು ಪ್ರಾರ್ಥಿಸಿದನು.

ಆಗ ಜಾಬಾಲಿಮಹರ್ಷಿಗಳು 'ಮಹಾಪಾತಕಿಗಳ ಸಂಪರ್ಕದಿಂದ ಬ್ರಾಹ್ಮಣ್ಯವನ್ನು ಕಳೆದುಕೊಂಡ ನೀನು ವೇತಾಲವೊಂದರಿಂದ ಗ್ರಸ್ತನಾಗಿ ವಿವಶನಾಗಿ, ದೇಶ ದೇಶಗಳನ್ನು ಸಂಚರಿಸಿ, ಕೊನೆಗೆ ವೇಂಕಟಾಚಲಕ್ಕೆ ಬಂದು ಈ ಜಾಬಾಲಿತೀರ್ಥದಲ್ಲಿ ಸ್ನಾನವನ್ನು ಮಾಡಿ ನಿನ್ನ ಪಾತಕಗಳಿಂದ ವಿಮುಕ್ತನಾಗಿರುವಿ. ಯಾರು ಜಾಬಾಲಿ ತೀರ್ಥದಲ್ಲಿ ಸ್ನಾನವನ್ನು ಮಾಡುವರೋ ಅವರ ಪಂಚವಿಧವಾದ ಪಾತಕಗಳು (ಬ್ರಹ್ಮಹತ್ಯಾ, ಸ್ವರ್ಣಸ್ತೇಯ, ಸುರಾಪಾನ, ಗುರುತಲ್ಪಗಮನ–ಸಂಗಮ)ನಾಶವನ್ನು ಹೊಂದಿ ಪುಣ್ಯಪ್ರಾಪ್ತಿಯುಂಟಾಗುವದು. ಈ ತೀರ್ಥದ ಸ್ನಾನಮಾತ್ರದಿಂದ ಸತ್ಕರ್ಮಾಸಕ್ತಿಯುಂಟಾಗಿ ಸಾಧನೆಯು ಹೆಚ್ಚುವದು. ನಿನ್ನನ್ನು ಹಿಡಿದಿದ್ದ ಬೇತಾಲವೂ ಸಹ ಪೂರ್ವದಲ್ಲಿ ಬ್ರಾಹ್ಮಣನಾಗಿದ್ದು, ತನ್ನ ತಂದೆಯ ಮೃತತಿಥಿಯಂದು ಪಿಂಡಪ್ರದಾನಪೂರ್ವಕವಾಗಿ ಶ್ರಾದ್ಧವನ್ನು ಮಾಡದಿರುವದರಿಂದ ಪಿತೃದೇವತೆಗಳಿಂದ ಅಭಿಶಪ್ತನಾಗಿ ಬೇತಾಲನಾಗಿದ್ದನು.

ಮೃತೇಽಹನಿ ಪಿತೃಶ್ರಾದ್ಧಂ ನಾಕರೋತ್ತ್ವಾರ್ವಣೇನ ವೈ ।
ತೇನ ಸ್ವಪಿತೃಭಿಶ್ಶಪ್ತೋ ವೇತಾಲತ್ವಮಗಾದಯಮ್ ॥30॥

ಸೋಽಪಿ ಜಾಬಾಲಿತೀರ್ಥಸ್ಯ ಜಲೇ ಸ್ನಾನಪ್ರಭಾವತಃ ।
ವೇತಾಲತ್ವಂ ವಿಹಾಯ್ಯೈವ ವಿಷ್ಣುಲೋಕಮವಾಪ್ತವಾನ್ ॥31॥

ನ ಕುರ್ಯಾದ್ಯೋ ನರಃ ಶ್ರಾದ್ಧಂ ಮಾತಾಪಿತ್ರೋರ್ಮೃತೇಽಹನಿ ।
ವೇತಾಲತ್ವಮವಾಪ್ಯಾಶು ಪಶ್ಚಾನ್ನರಕಮಶ್ನುತೇ ॥32॥

ಶ್ರೀಸೂತ ಉವಾಚ–

ದುರಾಚಾರೋ ಮಹಾಪಾಪೀ ತೀರ್ಥೇಽಸ್ಮಿನ್ಸ್ನಾನಮಾತ್ರತಃ ।
ಪ್ರಾಪ್ತವಾನ್ವಿಷ್ಣುಲೋಕಂ ವೈ ಪುನರಾವೃತ್ತಿವರ್ಜಿತಮ್ ॥33॥

ಏವಂ ವಃ ಕಥಿತಂ ಪುಣ್ಯಂ ದುರಾಚಾರವಿಮೋಕ್ಷಣಮ್ ।
ತಸ್ಮಾತ್ಪುಣ್ಯತಮಂ ತೀರ್ಥಂ ಸರ್ವಪಾಪಹರಂ ಶುಭಮ್ ॥34॥

ಯತ್ರ ಹಿ ಸ್ನಾನಮಾತ್ರೇಣ ದುರಾಚಾರೋ ವಿಮೋಚಿತಃ ।
ಯಾನಿ ನಿಷ್ಕೃತಿಹೀನಾನಿ ಪಾಪಾನ್ಯಪಿ ವಿನಾಶಯೇತ್ ॥35॥

ಶೂದ್ರೇಣ ಪೂಜಿತಂ ಲಿಂಗಂ ವಿಷ್ಣುಂ ವಾ ಯೋ ನಮೇದ್ದ್ವಿಜಃ।
ಪ್ರಾಯಶ್ಚಿತ್ತಂ ನ ಸ್ಮೃತಿಷು ತಸ್ಯೋಕ್ತಂ ಪರಮರ್ಷಿಭಿಃ ॥36॥

ನಶ್ಯೇತ್ತಸ್ಯಾಪಿ ತತ್ಪಾಪಂ ತೀರ್ಥೇ ಜಾಬಾಲಿಸಂಜ್ಞಕೇ ।

ಯಾರು ತಮ್ಮ ತಂದೆ ತಾಯಿಗಳ ಶ್ರಾದ್ಧವನ್ನು ಮಾಡುವದಿಲ್ಲವೋ ಅವರು ಬೇತಾಳರಾಗಿ ಜನಿಸಿ ಕೊನೆಗೆ ನರಕವನ್ನೇ ಹೊಂದುವರು. ಆದರೂ ಸಹ ಅವನು ಈ ತೀರ್ಥದ ಸ್ನಾನದ ಪ್ರಭಾವದಿಂದ ವೇತಾಲರೂಪವನ್ನು ಕಳೆದುಕೊಂಡು ವಿಷ್ಣುಲೋಕವನ್ನು ಹೊಂದಿರುವನು' ಎಂದು ನುಡಿದರು.

ದುರಾಚಾರನಂತಹ ಪಾಪಿಯೂ ಸಹ ಜಾಬಾಲಿತೀರ್ಥದ ಸ್ನಾನಮಾತ್ರದಿಂದ ತನ್ನ ಎಲ್ಲ ಪಾಪಗಳನ್ನು ಕಳೆದುಕೊಂಡು ವಿಷ್ಣುಲೋಕವನ್ನು ಹೊಂದಿದನೆಂದ ಮೇಲೆ ಈ ತೀರ್ಥವು ಅತ್ಯಂತ ಪುಣ್ಯಕರವೆಂದೂ ಮತ್ತು ಸರ್ವಪಾಪಹರವೆಂದು ಸಿದ್ಧವಾಗುವದು. ಪ್ರಾಯಶ್ಚಿತ್ತರಹಿತವಾದ ಪಾಪಗಳೂ ಸಹ ಜಾಬಾಲಿತೀರ್ಥದ ಸ್ನಾನದಿಂದ ನಾಶವಾಗುವವು. ಶೂದ್ರಾರ್ಚಿತಲಿಂಗವನ್ನು, ವಿಷ್ಣುಪ್ರತಿಮೆಯನ್ನು ಆಗಲಿ ನಮಿಸಿದ ದ್ವಿಜನಿಗೆ ಪ್ರಾಯಶ್ಚಿತ್ತವು ಶಾಸ್ತ್ರಗಳಲ್ಲಿ ಹೇಳಿರುವದಿಲ್ಲ.

ವಿಪ್ರನಿಂದಾಕೃತಾಂ ಚೈವ ಪ್ರಾಯಶ್ಚಿತ್ತಂ ನ ವಿದ್ಯತೇ ॥37॥

ವಿಶ್ವಾಸಘಾತುಕಾನಾಂ ಚ ಕೃತಘ್ನಾನಾಂ ಚ ನಿಷ್ಕೃತಿಃ ।
ಭ್ರಾತೃಭಾರ್ಯಾರತಾನಾಂ ಚ ಪ್ರಾಯಶ್ಚಿತ್ತಂ ನ ವಿದ್ಯತೇ ॥38॥

ತೇಷಾಂ ಜಾಬಾಲಿತೀರ್ಥೇ ವೈ ಸ್ನಾನಾಚ್ಛುದ್ಧಿರ್ಭವಿಷ್ಯತಿ ।
ಏವಂ ವಃ ಕಥಿತಂ ವಿಪ್ರಾಃ ಜಾಬಾಲೇಸ್ತೀರ್ಥವೈಭವಮ್ ॥39॥

ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ಮಾನವೋ ಭುವಿ ॥40॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ 'ಶ್ರೀಜಾಬಾಲೀತೀರ್ಥವರ್ಣನಮ್' ನಾಮ ಪಂಚವಿಂಶತಿತಮೋಽಧ್ಯಾಯಃ ॥25॥

* * *

ಆ ಪಾಪವು ಜಾಬಾಲಿ ತೀರ್ಥದ ಸ್ನಾನದಿಂದ ಹೊರಟುಹೋಗುವದು. ವಿಪ್ರರನ್ನು ನಿಂದಿಸುವವರಿಗೆ, ವಿಶ್ವಾಸಘಾತಕರಿಗೆ, ಕೃತಘ್ನರಿಗೆ, ಸಹೋದರರ ಮಡದಿಯಲ್ಲಿ ಆಸಕ್ತರಾದ ಪಾಪಿಗಳಿಗೆ ಶಾಸ್ತ್ರಗಳಲ್ಲಿ ಪ್ರಾಯಶ್ಚಿತ್ತವು ಉಕ್ತವಾಗಿಲ್ಲ. ಆದರೆ ಈ ಪಾಪಗಳೆಲ್ಲವೂ ಜಾಬಾಲಿ ತೀರ್ಥದ ಸ್ನಾನದಿಂದ ನಾಶವಾಗಿ ಅವರೆಲ್ಲರೂ ಶುದ್ಧರಾಗುವರು. ಇಂತಹ ಜಾಬಾಲಿ ತೀರ್ಥದ ಮಾಹಾತ್ಮೆಯು ಈ ವರೆಗೂ ಹೇಳಲ್ಪಟ್ಟಿರುವದು. ಇದನ್ನು ಕೇಳಿದ ಮಾನವನು ಎಲ್ಲ ಪಾಪಗಳಿಂದ ವಿಮೋಚನೆಯನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ ಜಾಬಾಲಿತೀರ್ಥ ವರ್ಣನವೆಂಬ ಇಪ್ಪತ್ತೈದನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥ ಷಡ್ವಿಂಶೋಽಧ್ಯಾಯಃ

[ತುಂಬುರುತೀರ್ಥಮಾಹಾತ್ಮ್ಯಮ್]

ಶ್ರೀ ಸೂತ ಉವಾಚ–

ಅತ್ರಾಹಂ ಸಂಪ್ರವಕ್ಷ್ಯಾಮಿ ಶೌನಕಾದ್ಯಾ ಮಹೌಜಸಃ ।
ಘೋಣತೀರ್ಥಸ್ಯ ಮಾಹಾತ್ಮ್ಯಂ ಸರ್ವಪಾತಕನಾಶನಮ್ ॥1॥

ತತ್ರ ಸ್ನಾನಂ ಜನಾನಾಂ ತು ಜನ್ಮಾಂತರತಪಃಫಲಮ್ ।
ಉತ್ತರಾಫಲ್ಗುನೀಯುಕ್ತ ಶುಕ್ಲ ಪಕ್ಷೀಯಪರ್ವಣಿ ॥2॥

ತುಂಬೋಸ್ತೀರ್ಥಂ ಮೀನಸಂಸ್ಥೇ ರವೌ ತೀರ್ಥಾನಿ ಸರ್ವಶಃ ।
ಅಪರಾಹ್ಣೇ ಸಮಾಯಾಂತಿ ಗಂಗಾದೀನಿ ಜಗತ್ತ್ರಯೇ ॥3॥

ಋಷಯಃ ಊಚುಃ–

ಭಗವನ್ಸೂತ ಸರ್ವಜ್ಞ ಸರ್ವಶಾಸ್ತ್ರಾರ್ಥಪಾರಗ ।
ಗಂಗಾದ್ಯಾಃ ಸರಿತಃ ಸರ್ವಾ ಘೋಣತೀರ್ಥೇಽತಿಪಾವನೇ ॥4॥

ಕಿಮರ್ಥಂ ಸ್ನಾಂತಿ ವೈ ತತ್ರ ಮೀನಸಂಸ್ಥೇ ಪ್ರಭಾಕರೇ ।

ಶ್ರೀ ಸೂತ ಉವಾಚ–

## ಇಪ್ಪತ್ತಾರನೆಯ ಅಧ್ಯಾಯ

[ತುಂಬುರು ತೀರ್ಥ ಮಾಹಾತ್ಮ್ಯ]

ಸರ್ವಪಾಪಪ್ರಣಾಶಕವಾದ ಘೋಣತೀರ್ಥದ ಮಾಹಾತ್ಮ್ಯವನ್ನು ನಾನು ಇನ್ನುಮುಂದೆ ನಿಮಗೆ ವರ್ಣಿಸುವೆನು. ಈ ಘೋಣತೀರ್ಥದ ಸ್ನಾನವು ಪೂರ್ವಜನ್ಮದ ಪುಣ್ಯಮಾತ್ರದಿಂದ ಲಭಿಸುವದು. ಸೂರ್ಯನು ಮೀನ ರಾಶಿಯಲ್ಲಿರುವಾಗ ಶುಕ್ಲ ಪಕ್ಷದ ಹುಣ್ಣಿಮೆಯಂದು ಉತ್ತರಾ ಫಲ್ಗುನೀ ನಕ್ಷತ್ರವಿದ್ದಲ್ಲಿ ಅಪರಾಹ್ನ ಸಮಯದಲ್ಲಿ ಸರಿಯಾಗಿ ಮೂರು ಲೋಕಗಳಲ್ಲಿರುವ ಗಂಗಾದಿ ತೀರ್ಥಗಳೆಲ್ಲವೂ ಸಹ ಘೋಣ ಅಥವಾ ತುಂಬುತೀರ್ಥದಲ್ಲಿ ಸನ್ನಿಹಿತವಾಗಿರುವವು' ಎಂದು ಸೂತರು ನುಡಿದಾಗ ಋಷಿಗಳು ಘೋಣತೀರ್ಥದ ಮಾಹಾತ್ಮ್ಯವನ್ನು ವಿಸ್ತಾರವಾಗಿ ವಿವರಿಸಲು ಪ್ರಾರ್ಥಿಸುತ್ತಾರೆ. ಆಗ ಸೂತರು ಅದರ ಮಾಹಾತ್ಮ್ಯವನ್ನು ವರ್ಣಿಸುತ್ತಾರೆ.

ಪಾಪಿನೋ ಮನುಜಾಃ ಸರ್ವೇ ಹ್ಯಸ್ಮಾಸು ಸ್ನಾಂತಿ ಯತ್ನತಃ ॥5॥

ವಿಸೃಜ್ಯ ಪಾಪಾಜಾಲಾನಿ ಕೃತಾರ್ಥಾ ಯಾಂತಿ ವೈ ಜನಾಃ ।
ಅಸ್ಮಾಕಂ ಪಾಪಜಾಲಂ ತತ್ಕಥಂ ನಶ್ಯತಿ ಸರ್ವತಃ ॥6॥

ಏವಮಾಲೋಚ್ಯ ತೀರ್ಥಾನಿ ಗಂಗಾದೀನಿ ಪ್ರಯತ್ನತಃ ।
ಸಂಸ್ಮೃತ್ಯ ಬ್ರಹ್ಮಪುತ್ರಸ್ಯ ನಾರದಸ್ಯ ಮಹಾತ್ಮನಃ ॥7॥

ವಾಕ್ಯಂ ಮನೋಹರಂ ದಿವ್ಯಂ ಸರ್ವಪಾಪನಿಷೂದನಮ್ ।
ಗತ್ವಾ ಶ್ರೀವೇಂಕಟಂ ಶೈಲಂ ಬ್ರಹ್ಮಹತ್ಯಾದಿ ಶೋಧಕಮ್ ॥8॥

ತತ್ರ ಸ್ನಾತ್ವಾ ತೀರ್ಥವರ್ಯೇ ಸ್ವಾಮಿಪುಷ್ಕರಿಣೀಜಲೇ ।
ಅನಂತರಂ ತತೋ ವಿಪ್ರಾ ಘೋಣತೀರ್ಥೇಽತಿಪಾವನೇ ॥9॥

ಉತ್ತರಾಫಲ್ಗುನೀಯುಕ್ತಶುಕ್ಲಪಕ್ಷೀಯಪರ್ವಣಿ ।
ಸ್ನಾಂತಿ ತೀರ್ಥಾನಿ ಸರ್ವಾಣಿ ಮೀನಸಂಸ್ಥೇ ಪ್ರಭಾಕರೇ ॥10॥

ತಸ್ಯ ತೀರ್ಥಸ್ಯ ಮಾಹಾತ್ಮ್ಯಂ ಕೋ ವೇತ್ತಿ ಭುವನತ್ರಯೇ ।
ತಸ್ಮಾತ್ಪುಣ್ಯತಮಂ ತೀರ್ಥಂ ಘೋಣತೀರ್ಥಂ ದ್ವಿಜೋತ್ತಮಾಃ ॥11॥

ಆರಾಮೋಚ್ಛೇದಕಂ ಕ್ರೂರಂ ಕನ್ಯಾತುರಗವಿಕ್ರಯಮ್ ।
ಘೋಣಸ್ನಾನಪರಿತ್ಯಕ್ತಂ ತಮಾಹುರ್ಬ್ರಹ್ಮಘಾತುಕಮ್ ॥12॥

ದೇವದ್ರವ್ಯಾಪಹಂತಾರಂ ತಥಾ ದತ್ತಾಪಹಾರಕಮ್ ।

ಜಗತ್ತಿನಲ್ಲಿಯ ಗಂಗಾದಿ ತೀರ್ಥಗಳೆಲ್ಲವೂ ಸಹ 'ಪಾಪಿಗಳೆಲ್ಲರೂ ನಮ್ಮಲ್ಲಿ ಸ್ನಾನವನ್ನು ಮಾಡಿ ತಮ್ಮ ಪಾಪವನ್ನು ನಮ್ಮಲ್ಲಿ ತ್ಯಾಗಮಾಡಿ ಪುಣ್ಯವಂತರಾಗಿ ಹೋಗುವರು. ನಮ್ಮ ಪಾಪಗಳ ನಾಶವು ಹೇಗೆ ಉಂಟಾಗುವದು?' ಎಂಬುದಾಗಿ ವಿಚಾರಿಸಿ ಕೊನೆಗೆ ನಾರದರ ಮಾತಿನಂತೆ ವೇಂಕಟಾಚಲಕ್ಕೆ ಬಂದು ಅಲ್ಲಿ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡಿ, ಪೂತರಾಗಿ, ಅನಂತರ ಉತ್ತರ ಫಲ್ಗುನಿಯುಕ್ತವಾದ ಪೂರ್ಣಿಮೆಯು ಮೀನರಾಶಿಯಲ್ಲಿ ಸೂರ್ಯನಿರುವಾಗ (ಫಾಲ್ಗುನ ಶುದ್ಧ ಪೂರ್ಣಿಮೆ), ಅಪರಾಹ್ಣದಲ್ಲಿ ಸ್ನಾನವನ್ನು ಮಾಡುವರೆಂದ ಮೇಲೆ ಈ ತೀರ್ಥದ ಮಾಹಾತ್ಮ್ಯವನ್ನು ಮೂರು ಲೋಕಗಳಲ್ಲಿ ತಿಳಿದವರಾರು?

ಉದ್ಯಾನವನಗಳನ್ನು ನಾಶಮಾಡುವವರನ್ನು, ಕ್ರೂರನನ್ನು, ಕನ್ಯೆಯರನ್ನು ಮಾರುವವನನ್ನು, ಕುದುರೆಗಳನ್ನು ಮಾರುವವನನ್ನು, ತುಂಬುತೀರ್ಥದಲ್ಲಿ ಸ್ನಾನಮಾಡದವನ್ನು ಬ್ರಹ್ಮಘಾತಕನೆಂದು

ತಟಾಕಸೇತುಭೇತ್ತಾರಂ ಪರಸ್ತ್ರೀಸಂಗಲೋಲುಪಮ್ ॥13॥

ಘೋಣಸ್ನಾನಪರಿತ್ಯಕ್ತಂ ತಮಾಹುಃ ಸ್ತೇಯಿನಾಂ ಬುಧಾಃ ।
ದದಾಮೀತಿ ದ್ವಿಜಾಯೋಕ್ತ್ವಾ ಪಶ್ಚಾದ್ಯೋ ನಾಸ್ತಿ ಕೋಽಧಮಃ ॥14॥

ಘೋಣಸ್ನಾನಪರಿತ್ಯಕ್ತಂ ಸುರಾಪಂ ತಂ ವಿದುರ್ಬುಧಾಃ ॥15॥
ಗುರುವಿಪ್ರಜನದ್ವೇಷ್ಯಮಾತ್ಮಸ್ತುತಿಪರಾಯಣಮ್ ॥
ಘೋಣಸ್ನಾನಪರಿತ್ಯಕ್ತಂ ತಮಾಹುಃ ಸ್ತೇಯಿನಂ ಬುಧಾಃ ॥17॥

ಅಸಂಸ್ಕೃತಾನ್ನಭೋಕ್ತಾರಂ ಪಿತೃಶೇಷಾನ್ನಭೋಜನಮ್ ।
ಘೋಣಸ್ನಾನಪರಿತ್ಯಕ್ತಂ ತಮಾಹುಃ ಸ್ತೇಯಿನಂ ದ್ವಿಜಾಃ ॥18॥

ಪಿತೃಶೇಷಾನ್ನದಾತಾರಂ ಮಾತಾಪಿತೃವಿರೋಧಿನಮ್ ।
ಘೋಣಸ್ನಾನಪರಿತ್ಯಕ್ತಂ ತಮಾಹುಃ ಸ್ತೇಯಿನಂ ಬುಧಾಃ ॥19॥

ಪರಸ್ತ್ರೀಸಂಗನಿರತಂ ಭ್ರಾತೃಭಾರ್ಯಾರತಿಪ್ರಿಯಮ್ ।
ಘೋಣಸ್ನಾನಪರಿತ್ಯಕ್ತಂ ತಮಾಹುರ್ಗುರುತಲ್ಪಗಮ್ ॥20॥

ಚಂಡಾಲಭಾಷಿಣಂ ವಿಪ್ರಂ ಸದೈವಾದರ್ಭಪಾಣಿಕಮ್ ।
ಘೋಣಸ್ನಾನಪರಿತ್ಯಕ್ತಂ ತತ್ಸಂಸರ್ಗಂ ತು ಪಂಚಮಮ್ ॥21॥

ಶಾಸ್ತ್ರಗಳಲ್ಲಿ ಹೇಳುವರು. ದೇವಸ್ವವನ್ನು ಅಪಹರಿಸುವವನು, ದಾನಮಾಡಿದ್ದನ್ನು ಹಿಂದಕ್ಕೆ ಕಸಿದುಕೊಳ್ಳುವವನು, ಘೋಣ ತೀರ್ಥದಲ್ಲಿ ಸ್ನಾನವನ್ನು ಮಾಡದವನನ್ನು ಬ್ರಹ್ಮಘಾತಕನೆಂದು ಕರೆಯುವರು. ಕೆರೆ ಸೇತುವೆಗಳನ್ನು ನಾಶಮಾಡುವವನನ್ನು, ಪರಸ್ತ್ರೀಯರಲ್ಲಿ ಆಸಕ್ತನಾದವನು, ಬ್ರಾಹ್ಮಣರು, ಗುರುಗಳು ಇವರನ್ನು ದ್ವೇಷಿಸುವವನು, ತನ್ನ ಸ್ತುತಿಯನ್ನೇ ತಾನು ಮಾಡಿಕೊಳ್ಳುವವನು, ನೈವೇದ್ಯ ವೈಶ್ವದೇವಾದಿ ಸಂಸ್ಕಾರ ರಹಿತವಾದ ಆಹಾರವನ್ನು ಭೋಜನ ಮಾಡುವವರು, ಇತರರ ಪಿತೃಶೇಷವನ್ನು ಭೋಜಿಸುವವರು, ಪಿತೃಶೇಷದ ಅನ್ನವನ್ನು ಇತರರಿಗೆ ಕೊಡುವವರು, ತಂದೆ ತಾಯಿಗಳನ್ನು ದ್ವೇಷಿಸುವವರು, ಘೋಣತೀರ್ಥದಲ್ಲಿ ಸ್ನಾನವನ್ನು ಮಾಡದವರು– ಇವರು ಸ್ತೇಯಿಯೆಂದು (ಕಳ್ಳರೆಂದು) ಕರೆಯಲ್ಪಡುವರು. ಬ್ರಾಹ್ಮಣನಿಗೆ ಕೊಡುತ್ತೇನೆಂದು ವಾಗ್ದಾನಮಾಡಿ ನಂತರ ಇಲ್ಲವೆಂದು ಹೇಳುವ ನೀಚನನ್ನು, ತುಂಬುರು ತೀರ್ಥದಲ್ಲಿ ಸ್ನಾನವನ್ನು ಮಾಡದವನನ್ನು ಬುಧರು ಸುರಾಪಾನಮಾಡಿದವನೆಂದು ಹೇಳುವರು.

ಗುರುತಲ್ಪಗಮನ ಸಮಾನವಾದ ಪರಸ್ತ್ರೀಯರಲ್ಲಿ ಆಸಕ್ತಿ, ಸಹೋದರನ ಮಡದಿಯನ್ನು ಕೆಟ್ಟ ದೃಷ್ಟಿಯಿಂದ ನೋಡುವದು ಮೊದಲಾದ ಪಾಪಗಳು, ಚಂಡಾಲರೊಡನೆ ಮಾತನಾಡುವ

ರಜಸ್ವಲಾಶ್ವಚಂಡಾಲಧ್ವನಿಂ ಶ್ರುತ್ವಾನ್ನಭೋಜನಮ್ ।
ಘೋಣಸ್ನಾನಪರಿತ್ಯಕ್ತಂ ತತ್ಸಂಸರ್ಗಂ ತು ಪಂಚಮಮ್ ॥22॥

ಪುರಾಣೋದ್ವಾಹಮೌಂಜ್ಯಾದಿಧರ್ಮಾಣಾಂ ವಿಘ್ನಕಾರಕಮ್ ।
ಘೋಣಸ್ನಾನಪರಿತ್ಯಕ್ತಂ ತಮಾಹುಃ ಪಶುಘಾತಕಮ್ ॥23॥

ಶರಣಾಗತಹಂತಾರಂ ಸರ್ವತೀರ್ಥಪರಾಂಗ್ಮುಖಮ್ ।
ಘೋಣಸ್ನಾನಪರಿತ್ಯಕ್ತಂ ತಮಾಹುರ್ಭ್ರೂಣಹಂ ಬುಧಾಃ ॥24॥

ಪಿತೃಯಜ್ಞಪರಿತ್ಯಕ್ತಂ ತ್ಯಕ್ತಭಾರ್ಯಂ ಕುಲಾಧಮಮ್ ।
ಘೋಣಸ್ನಾನಪರಿತ್ಯಕ್ತಂ ತಮಾಹುರ್ಗೋವಿಘಾತುಕಮ್ ॥25॥

ಮಹಾಪಾಪಸಮಾನಾನಿ ಕ್ಷುದ್ರಪಾಪಾನಿ ಯಾನಿ ಚ ।
ಘೋಣಸ್ನಾನಪರಿತ್ಯಕ್ತಮಾಶ್ರಯಂತಿ ದ್ವಿಜೋತ್ತಮಾಃ ॥26॥

ಮಹಾಪಾಪರತಂ ವಿಪ್ರಾಃ ಶ್ವಪಚಂ ವಾ ಕುಲಾಧಮಮ್ ।
ಕ್ರೂರಂ ಕುಲಾಂತಕಂ ಕಷ್ಟಮದತ್ತಂ ಕರ್ಮವರ್ಜಿತಮ್ ॥27॥

ಪಶುಘ್ನಂ ಚ ಪರದ್ರೋಹಮಾಶ್ರಿತಂ ಪಿಶುನಂ ತಥಾ ।
ಅಸತ್ಯಭಾಷಿಣಂ ದಂಭಂ ಪರದಾರರತಂ ತಥಾ ॥28॥

ಮಿತ್ರದ್ರೋಹಂ ಕೃತಘ್ನಂ ಚ ಭ್ರೂಣಹಂ ಚಾತಿಪಾತಕಮ್ ।

ಬ್ರಾಹ್ಮಣ, ದರ್ಭೆಯನ್ನು ಧರಿಸದೇ ಇರುವ ಬ್ರಾಹ್ಮಣ, ರಜಸ್ವಲೆ, ನಾಯಿ, ಚಂಡಾಲರ ಧ್ವನಿಯನ್ನು ಕೇಳಿಯೂ ಸಹ ಭೋಜನವನ್ನು ಮಾಡುವವನು ಇವರನ್ನು ಪಂಚಮರೆಂದು ಕರೆಯುರು. ಪುರಾಣಶ್ರವಣ, ವಿವಾಹ ಮುಂಜಿವೆ ಮೊದಲಾದ ಶುಭಕಾರ್ಯಗಳಿಗೆ ವಿಘ್ನವನ್ನುಂಟು ಮಾಡುವವರನ್ನು ಶಾಸ್ತ್ರಗಳಲ್ಲಿ ಪಶುಘಾತಕರೆಂದು ಕರೆದಿರುವರು. ಶರಣು ಬಂದವರನ್ನು ಕೊಲ್ಲುವವರು, ತೀರ್ಥಯಾತ್ರೆಗಳನ್ನು ಮಾಡದಿರುವವರು,. ಭ್ರೂಣಹತ್ಯೆಯನ್ನೆಸ ಗಿದವರೆಂತೆ ಅಧಮರೆಂದು ಶಾಸ್ತ್ರಗಳಲ್ಲಿ ಹೇಳಿರುವರು. ಘೋಣತೀರ್ಥದಲ್ಲಿ ಸ್ನಾನಮಾಡದವನು ಈ ಎಲ್ಲ ದೋಷಿಗಳೊಂದಿಗೆ ಸಮನೆನಿಸುವನು.ಶ್ರಾದ್ಧಾದಿಗಳನ್ನಾಚರಿಸದವನು, ಪತಿವ್ರತೆಯಾದ ಹೆಂಡತಿಯನ್ನು ತ್ಯಾಗಮಾಡಿದವನು, ಗೋವಿಘಾತಕನೆನಿಸಿದ್ದು ಘೋಣತೀರ್ಥದಲ್ಲಿ ಸ್ನಾನವನ್ನು ಮಾಡದವನು ಇವರಿಗೆ ಸಮನೆನಿಸುವನು. ಮಹಾಪಾಪಗಳು, ಕ್ಷುದ್ರಪಾಪಗಳು, ಘೋಣತೀರ್ಥದಲ್ಲಿ ಸ್ನಾನವನ್ನು ಮಾಡದವನನ್ನು ಆಶ್ರಯಿಸಿರುತ್ತವೆ.

ಪರದಾರರತಂ ಪಾಪಂ ಪರಾಣಾಮರ್ಥಸೂಚಕಮ್ ॥29॥

ಅನೃತಂ ಕೃಷಿಕರ್ಮಾಣಂ ಸ್ವಾಮಿದ್ರೋಹಂ ಚ ವಂಚಕಮ್ ।
ಸಲೋಭಂ ಪಿತೃಹಂತಾರಂ ಸರ್ವದೇವಪರಾಂಙ್ಮುಖಮ್ ॥30॥

ಆತ್ಮಪ್ರಶಂಸಾಂ ಕುರ್ವಾಣಂ ಧರ್ಮವಿಘ್ನಕರಂ ನರಮ್ ।
ಅಪಾತ್ರವ್ಯಯಕರ್ತಾರಂ ಸಾನುಕೂಲ್ಯವಿಭೇದಕಮ್ ॥31॥

ಸುಪಲ್ಲವಫಲೋಪೇತವೃಕ್ಷವಿಚ್ಛೇದಕಾರಕಮ್ ।
ವಿಶ್ವಾಸಘಾತುಕಂ ಚೈವ ವೀರಹತ್ಯಾಪರಾಯಣಮ್ ॥32॥

ಅನಗ್ನಿಕಮಪುತ್ರಂ ಚ ವಿಷಕರ್ಮಪ್ರಯೋಗಿಣಮ್ ।
ಗುರುದ್ವೇಷಕರಂ ಪಾಪಂ ದಂಪತ್ಯೋರ್ವಿರಸಾವಹಮ್ ॥33॥

ಗ್ರಾಮಾಧಿಪತ್ಯಂ ಕುರ್ವಾಣಂ ತಥಾ ದೇವಾಲಯಸ್ಯ ಚ ।
ಭೃತಕಾಧ್ಯಾಪಕಂ ವಿಪ್ರಂ ಕ್ರೂರಕರ್ಮಪರಾಯಣಮ್ ॥34॥

ಪ್ರಕೃತೀಕೃತಪಾಪೌಘಂ ಮಹಾಘೌಘಪರಾಯಣಮ್ ।
ಅಜ್ಞಾನಾದಘಕರ್ತಾರಂ ಜ್ಞಾನಾದ್ದುಷ್ಕರ್ಮಕಾರಕಮ್ ॥35॥

ಏತಾನ್ಸರ್ವಾಂಶ್ಚ ವಿಪ್ರೇಂದ್ರಾ ಘೋಣತೀರ್ಥಂ ಮನೋಹರಮ್ ।

ಮಹಾಪಾಪಗಳನ್ನು ಮಾಡುವವನು, ಶ್ವಪಚ, ಕುಲಧರ್ಮಗಳನ್ನು ನಾಶಗೊಳಿಸಿದವನು, ಕ್ರೂರ, ಕುಲನಾಶಕ, ದಾನವನ್ನು ಮಾಡದವನು, ಶ್ರೌತ ಸ್ಮಾರ್ತ ಕ್ರಿಯಾಶೂನ್ಯ, ಪಶುಗಳಾನ್ನು ಕೊಲ್ಲುವವನು, ಪರದ್ರೋಹವನ್ನಾಚರಿಸುವವನು, ಚಾಡಿಕೋರ, ಸುಳ್ಳು ಹೇಳುವವನು, ಡಂಭಾಚಾರವನ್ನು ಮಾಡುವವನು, ಪರರ ಹೆಂಡತಿಯನ್ನು ಕೂಡುವವನು, ಸುಳ್ಳು ಹೇಳುವವನು, ಸ್ವಾಮಿದ್ರೋಹವನ್ನು ಎಸಗುವವನು, ವಂಚಕ, ದೇವತೆಗಳನ್ನು ಆರಾಧಿಸದವನು, ತಂದೆ–ತಾಯಿಯರನ್ನು ಧಿಕ್ಕರಿಸುವವನು, ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುವವನು, ಧರ್ಮವಿಘ್ನವನ್ನು ಉಂಟುಮಾಡುವವನು, ಅಪಾತ್ರರಿಗೆ ದಾನವನ್ನು ಮಾಡುವವನು, ಪರರ ಹಿತವನ್ನು ನಾಶಮಾಡಿ ಸಂತೋಷವನ್ನು ಹೊಂದುವವನು, ಫಲ, ಚಿಗುರುಗಳಿಂದ ಕಂಗೊಳಿಸುವ ವೃಕ್ಷವನ್ನು ನಾಶಗೊಳಿಸುವವನು, ವಿಶ್ವಾಸ ಘಾತಕ, ವೈಶ್ವದೇವ–ಔಪಾಸನಾದಿ ಹೋಮಗಳನ್ನಾಚರಿಸದವನು, ವಿಷವಿದ್ಯೆಯಿಂದ ವಿಷಪ್ರಯೋಗವನ್ನು ಮಾಡುವವನು, ಗುರುದ್ವೇಷವನ್ನು ಮಾಡುವವನು, ದಂಪತಿಗಳ ಮಧ್ಯದಲ್ಲಿ ವಿರಸವನ್ನುಂಟುಮಾಡುವವನು, ಗ್ರಾಮಾಧಿಪತ್ಯವನ್ನು ಮಾಡುವವನು, ದೇವಾಲಯದ ಅಧಿಪತಿ, ವೇತನವನ್ನು ಸ್ವೀಕರಿಸಿ ವೇದವನ್ನು ಹೇಳುವವನು, ಪಾಪಗಳೇ

ಪುನಾತಿ ಸ್ನಾನಪಾನಾದ್ಯೈರಹೋ ತೀರ್ಥಸ್ಯ ವೈಭವಮ್ ॥36॥

ಶ್ರೀ ಸೂತ ಉವಾಚ–

ಅತ್ರೇತಿಹಾಸಂ ವಕ್ಷ್ಯಾಮಿ ಪುರಾಣಂ ಪಾಪನಾಶನಮ್ ।
ಸರ್ವಪಾಪಪ್ರಶಮನಮಪವರ್ಗಫಲಪ್ರದಮ್ ॥37॥

ಪುರಾ ಗಾರ್ಗ್ಯೋ ಮಹಾತೇಜಾಃ ಸರ್ವವಿದ್ಯಾವಿಶಾರದಃ ।
ಸರ್ವಜ್ಞೋ ನೀತಿಮಾನ್ವಿಪ್ರಃ ಪ್ರಾಹ ಚೇತ್ಥಂ ಜಿತೇಂದ್ರಿಯಃ ॥38॥

ದೇವಲಂ ಚ ಮಹಾತ್ಮಾನಾಂ ನಮಸ್ಕೃತ್ಯ ಪ್ರಸನ್ನಧೀಃ ।
ಕಥಯಸ್ವ ಮಹಾಭಾಗ ಮಯಿ ಕಾರುಣಿಕೋ ಭವ ॥39॥

ದೇವಲ ಉವಾಚ–

ತುಂಬುರುರ್ನಾಮ ಗಂಧರ್ವೋ ಭಾರ್ಯಾಂ ಶಪ್ತ್ವಾ ಪತಿವ್ರತಾಮ್।
ಅತ್ರ ಸ್ನಾತ್ವಾ ಸಮಭ್ಯರ್ಚ್ಯ ವೇಂಕಟೇಶಂ ದಯಾನಿಧಿಮ್ ॥40॥

ಪ್ರಾಪ್ತವಾನ್ವಿಷ್ಣುಲೋಕಂ ವೈ ಪುನರಾವೃತ್ತಿವರ್ಜಿತಮ್ ॥41॥

ಗಾರ್ಗ್ಯ ಉವಾಚ–

'ಕಿಮರ್ಥಂ ದೇವಲ ಋಷೇ ಭಾರ್ಯಾಂ ರೂಪವತೀಂ ಸ್ತ್ರಿಯಮ್ ।
ತುಂಬುರುರ್ನಾಮ ಗಂಧರ್ವಃ ಸರ್ವವಿದ್ಯಾವಿಶಾರದಃ ॥42॥

ಶಪ್ತವಾನ್ಕೇನ ದೋಷೇಣ ಭಾರ್ಯಾಂ ಸರ್ವಗುಣಾನ್ವಿತಾಮ್ ।

ಮೂರ್ತಿಯಾಗಿ ಉಳ್ಳವನು, ತಿಳಿದೋ ತಿಳಿಯದೆಯೋ ಪಾಪಗಳನ್ನಾಚರಿಸಿದವನು– ಇವರೆಲ್ಲರೂ ಸಹ ಘೋಣತೀರ್ಥದ ಸ್ನಾನಮಾತ್ರದಿಂದ ಶುದ್ಧರೆನಿಸಿ, ಇವರ ಪಾಪಗಳೆಲ್ಲವೂ ನಾಶವಾಗಿ ಹೋಗುವವು.

ಈ ವಿಷಯಕ್ಕೆ ಸಾಕ್ಷಿಯಾಗಿ ಶ್ರವಣಮಾತ್ರದಿಂದ ಸರ್ವಪಾಪನಾಶಕವಾದ ಇತಿಹಾಸ ವೊಂದಿರುವರು. ಪೂರ್ವದಲ್ಲಿ ಗಾರ್ಗ್ಯರು ದೇವಲರಿಂದ ತುಂಬುರು ತೀರ್ಥದ ಮಾಹಾತ್ಮ್ಯವನ್ನು ತಿಳಿಯ ಬಯಸಿ ಅವರನ್ನು ಪ್ರಶ್ನಿಸಿದಾಗ ದೇವಲರು ತುಂಬುರು ತನ್ನ ಪತಿವ್ರತೆಯಾದ ಪತ್ನಿಯನ್ನು ಶಪಿಸಿದಾಗ ಅವಳು ಘೋಣತೀರ್ಥದಲ್ಲಿ ಸ್ನಾನವನ್ನು ಮಾಡಿ, ಈ ಕ್ಷೇತ್ರದಲ್ಲಿ ವೇಂಕಟೇಶನನ್ನು ಆರಾಧಿಸಿ, ವಿಷ್ಣುಲೋಕವನ್ನು ಹೊಂದಿದ ವೃತ್ತಾಂತವನ್ನು ವಿವರಿಸಿದರು.

ತದ್ವದಸ್ವ ಮಹಾಭಾಗ ಶ್ರೋತುಂ ಕೌತೂಹಲಂ ಹಿ ಮೇ ||43||

ತುಂಬುರುರ್ನಾಮ ಗಂಧರ್ವೋ ಭಾರ್ಯಾಂ ಪ್ರೀತ್ಯಾ ಹ್ಯುವಾಚ ಹ ।
'ಮಾಘತ್ರಯೇ ಮಯಾ ಸಾಕಂ ಸ್ನಾನಂ ಕುರು ಮಲಾಪಹಮ್ ||44||

ಮಾಘಮಾಸ್ಯುದಿತೇ ಸೂರ್ಯೇ ಸರ್ವಕಲ್ಮಷನಾಶನೇ ।
ತೀರೇऽಸ್ಮಿನ್ವಿಷ್ಣುಪೂಜಾರ್ಥಂ ಗೋಮಯಾಲೇಪನಂ ಕುರು ||45||

ರಂಗವಲ್ಲ್ಯಾದಿಭಿಃ ಶುಭ್ರಪದ್ಮಸ್ವಸ್ತಿಕಧಾತುಭಿಃ ।
ಶುಶ್ರೂಷಾಂ ಕುರು ಮೇ ವಿಷ್ಣೋರ್ಮಾಸೇऽಸ್ಮಿನ್ಮಂಗಳಪ್ರದೇ ||46||

ಮಾಘೇऽಸ್ಮಿನ್ಮಾಧವಸ್ಯಾಸ್ಯ ಕುರು ತ್ವಂ ದೀಪವರ್ತಿಕಾಮ್ ।
ಸಧೂಪಂ ಪಾವಕಂ ಭಕ್ತ್ಯಾ ಸಮರ್ಪಯ ಹರೇಃ ಪುರಃ ||47||

ಕುರು ಪಾಕಂ ಶುಚಿರ್ಭೂತ್ವಾ ಮಾಧವಾಯ ಮಹಾತ್ಮನೇ ।
ಪ್ರದಕ್ಷಿಣನಮಸ್ಕಾರೈರ್ಭಕ್ತ್ಯಾ ಮಾಘೇ ಮಯಾ ಸಹ ||48||

ಕುರುಷ್ವ ದೇವದೇವಸ್ಯ ಸಪರ್ಯಾಂ ವಿಷ್ಣವೇऽನ್ವಹಮ್ ।
ಪುರಾಣಶ್ರವಣಂ ವಿಷ್ಣೋಃ ಕುರು ನಿತ್ಯಮತಂದ್ರಿತಃ ||49||

ನಿತ್ಯಂ ಸ್ನಾತ್ವಾ ಪ್ರಯತ್ನೇನ ಪಿಬ ಪಾದೋದಕಂ ಹರೇಃ ।
ಕೃಷ್ಣ ವಿಷ್ಣೋ ಮುಕುಂದೇತಿ ನಾರಾಯಣ ಜನಾರ್ದನ ||50||

ಹಿಂದೆ ತುಂಬುರುವೆಂಬ ಗಂಧರ್ವನು ತನ್ನ ಹೆಂಡತಿಯನ್ನು ಕುರಿತು ಮಾಘಮಾಸದ ಧರ್ಮಗಳನ್ನು ತಿಳಿಸಿ, 'ಮಾಘಾದಿ ಮೂರು ತಿಂಗಳುಗಳಲ್ಲಿ ನನ್ನೊಡನೆ ಸ್ನಾನವನ್ನು ಮಾಡಿದಲ್ಲಿ ನಿನ್ನೆಲ್ಲ ಕಲ್ಮಷಗಳು ಕಳೆದುಹೋಗುವವು. ಸೂರ್ಯನು ಉದಯಿಸುತ್ತಿರಲು ವಿಷ್ಣುಪೂಜಾರ್ಥವಾಗಿ ಸ್ಥಲವನ್ನು ಶುದ್ಧಗಳಿಂದ ಗೋಮಯಾದಿಗಳಿಂದ ಸಾರಿಸಿ, ರಂಗವಲ್ಲಿಯಿಂದ ಪದ್ಮ, ಸ್ವಸ್ತಿಕವೇ ಮೊದಲಾದ ಆಕೃತಿಗಳನ್ನು ಬರೆಯಬೇಕು. ಮಾಘಮಾಸದಲ್ಲಿ ಪರಮಾತ್ಮನಿಗೋಸ್ಕರವಾಗಿ ದೀಪದ ಬತ್ತಿಗಳನ್ನು ಮಾಡಬೇಕು. ವಿಷ್ಣುವಿಗೆ ಧೂಪ-ದೀಪಗಳನ್ನು ಭಕ್ತಿಯಿಂದ ಸಮರ್ಪಿಸಬೇಕು. ಭಗವಂತನ ನೈವೇದ್ಯಕ್ಕಾಗಿ ಶುಚಿರ್ಭೂತಳಾಗಿ ಪಾಕವನ್ನು ಸಿದ್ಧಪಡಿಸಬೇಕು. ಪ್ರತಿದಿನವೂ ಭಕ್ತಿಯಿಂದ ದೇವರಿಗೆ ನನ್ನೊಂದಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಬೇಕು. ಆಲಸ್ಯವನ್ನು ಮಾಡದೇ ಭಗವಂತನ ಮಾಹಾತ್ಮ್ಯವನ್ನು ಪ್ರತಿಪಾದಿಸುವ ಪುರಾಣಗಳ ಶ್ರವಣವನ್ನು ಮಾಡಬೇಕು. ನಿತ್ಯದಲ್ಲಿಯೂ ಸಹ ಪ್ರಯತ್ನಪೂರ್ವಕವಾಗಿ ಹರಿಯ ಪಾದೋದಕ (ತೀರ್ಥ)ವನ್ನು ಸೇವಿಸಬೇಕು.

ಅಚ್ಯುತಾನಂತ ವಿಶ್ವಾತ್ಮನ್ನಿತಿ ಕೀರ್ತಯ ಸಂತತಮ್ ।
ಕ್ರೋಧಮಾತ್ಸರ್ಯಲೋಭಾದೀಂಸ್ತ್ಯಕ್ತ್ವಾ ತ್ವಂ ವ್ರತಮಾಚರ ॥51॥

ತೇನ ತೇ ಜಾಯತೇ ಮುಕ್ತಿರ್ವಿಷ್ಣುಲೋಕಶ್ಚ ಶಾಶ್ವತಃ ।
ಇತ್ಥಂ ಸಾ ಭರ್ತೃಗದಿತಂ ಶ್ರುತ್ವಾ ಗಂಧರ್ವವಲ್ಲಭಾ ।
ಭರ್ತಾರಮಬ್ರವೀತ್ಕೋಪಾದಸಹ್ಯಂ ದುರ್ಗತಿಪ್ರದಮ್ ॥52॥

'ಮಾಘೇ ಚೋದ್ಭೂತಶೀತೇ ತು ಪ್ರಾತರ್ಮಂದೋದಿತೇ ರವೌ ।
ಕಥಂ ನಿಮಜ್ಜಯೇದಸ್ಮಿನ್ಮಾಘೇ ಶೀತಾರ್ತಿದೇಽನಘ ॥53॥

ಯತ್ತ್ವಯೋಕ್ತಾನಿ ಕರ್ಮಾಣಿ ನ ಶಕ್ಯಾನಿ ಮಯಾ ಸಕೃತ್ ।
ನ ಕರೋಮಿ ಪತೇ ಸ್ನಾನಂ ಪ್ರಾತಃಕಾಲೇ ತ್ವಯಾ ಸಹ ॥54॥

ಮೃತೌ ಶೀತಾತಿಪಾತೇನ ನ ಚ ಮೇ ರಕ್ಷಕೋ ಭವಾನ್' ।
ಇತ್ಯೇವಮುದಿತಂ ಶ್ರುತ್ವಾ ಪತಿರ್ಗಂಧರ್ವವಲ್ಲಭಃ ॥55॥

ಸ ಶಾಂತೋಽಪಿ ಶಶಾಪಾಥ ಭಾರ್ಯಾಂ ಚಾಪ್ರಿಯವಾದಿನೀಮ್ ।
ಪುತ್ರಂ ಚ ಧರ್ಮವಿಮುಖಂ ಭಾರ್ಯಾಂ ಚಾಪ್ರಿಯಭಾಷಿಣೀಮ್ ॥56॥

ಅಬ್ರಹ್ಮಣ್ಯಂ ಚ ರಾಜಾನಂ ಸದ್ಯಃ ಶಾಪೇನ ದಂಡಯೇತ್ ।
ಇತಿ ನ್ಯಾಯಂ ವಿಚಿಂತ್ಯಾಸೌ ಶಶಾಪೇತ್ಥಂ ಸತೀಂ ತದಾ ॥57॥

ಕೃಷ್ಣ, ವಿಷ್ಣು, ಮುಕುಂದ, ನಾರಾಯಣ, ಜನಾರ್ದನ, ಅಚ್ಯುತ, ಅನಂತ, ವಿಶ್ವಾತ್ಮ ಇವೇ ಮೊದಲಾದ ಮಂಗಲಕರವಾದ ಹರಿನಾಮಗಳನ್ನು ನಿರಂತರವೂ ಪಠಿಸುತ್ತಿರಬೇಕು. ಕ್ರೋಧ, ಮಾತ್ಸರ್ಯ, ಲೋಭವೇ ಮೊದಲಾದ ದುರ್ಗುಣಗಳನ್ನು ತ್ಯಜಿಸಿ ಮಾಘಮಾಸದ ಧರ್ಮಗಳನ್ನಾಚರಿಸಿದಲ್ಲಿ ಸುಖವೂ, ಶಾಶ್ವತವಾದ ವಿಷ್ಣುಲೋಕಪ್ರಾಪ್ತಿಯೂ ಉಂಟಾಗುವದು' ಎಂದು ನುಡಿದನು. ಇದನ್ನು ಕೇಳಿದ ತುಂಬುರುವಿನ ಪತ್ನಿಯು ಸಿಟ್ಟಿನಿಂದ ದುರ್ಗತಿದಾಯಕವಾದ ಮಾತುಗಳನ್ನು ಹೇಳಿದಳು. 'ವಿಪರೀತವಾದ ಶೀತದಿಂದ ಕೂಡಿದ ಮಾಘಮಾಸದ ಪ್ರಾತಃಕಾಲದಲ್ಲಿ ನಾನು ನೆಗಡಿಯೇ ಮೊದಲಾದ ಶೀತರೋಗಗಳಿಗೆ ಕಾರಣವಾದ ತಣ್ಣೀರೀನಲ್ಲಿ ಸ್ನಾನವನ್ನು ಮಾಡುವದೆಂತು? ನೀನು ಹೇಳಿದ ಕಾರ್ಯಗಳಾವವೂ ನನ್ನಿಂದ ಮಾಡಲು ಸಾಧ್ಯವಾಗುವದಿಲ್ಲ. ಅತಿಯಾದ ತಂಪಿನಿಂದ ನಾನು ಸಾಯುವಂತಾದರೆ ನೀನು ರಕ್ಷಿಸಲೂ ಸಮರ್ಥನಾಗುವದಿಲ್ಲ' ಎಂದು ನುಡಿದಳು. ಸ್ವಭಾವತಃ ಶಾಂತನಾದ ತುಂಬುರುವು ಅಪ್ರಿಯವಾದ ಕಠಿನ ವಾಕ್ಯಗಳನ್ನಾಡಿದ ಪತ್ನಿಯ ವಿಷಯದಲ್ಲಿ ಕೋಪಗೊಂಡು 'ಧರ್ಮವಿಮುಖನಾದ ಮಗ, ಅಪ್ರಿಯವನ್ನು ನುಡಿಯುವ

ವೇಂಕಟಾದ್ರೌ ಮಹಾಪುಣ್ಯೇ ಸರ್ವಪಾತಕನಾಶನೇ ।
ಘೋಣತೀರ್ಥಸಮೀಪೇ ಚ ಪಿಪ್ಪಲದ್ರುಮಕೋಟರೇ ॥58॥

ತತ್ರಾಂಬುರಹಿತೇ ಮೂಢೇ ಮಂಡೂಕಾ ಭವ ಕೇವಲಮ್' ।
ಇತ್ಯೇವಂ ಭರ್ತೃವಾಕ್ಯಂ ತಚ್ಛ್ರುತ್ವಾ ಗಂಧರ್ವವಲ್ಲಭಾ ॥59॥

ಪತಿತ್ವಾ ಪಾದಯೋಸ್ತಸ್ಯ ತುಂಬುರುಂ ಪ್ರಾರ್ಥಯತ್ಸತೀ ।
ವಿಶಾಪಮವದತ್ಪಶ್ಚಾದ್ಭರ್ತಾ ವೈ ತುಂಬುರುಸ್ತದಾ ॥60॥

'ಅಗಸ್ತ್ಯೋ ವೈ ಮಹಾಭಾಗಸ್ತಪಸ್ವೀ ವಿಜಿತೇಂದ್ರಿಯಃ ।
ಘೋಣತೀರ್ಥವರೇ ಸ್ನಾತ್ವಾ ಪೌರ್ಣಮಸ್ಯಾಂ ಮಹಾತಿಥೌ ॥61॥

ಶಿಷ್ಯೇಭ್ಯೋ ವೈ ಯದಾ ತಸ್ಮಿನ್ನಶ್ವತ್ಥದ್ರುಮಸನ್ನಿಧೌ ।
ಘೋಣತೀರ್ಥಸ್ಯ ಮಾಹಾತ್ಮ್ಯಂ ವಕ್ತಿ ವೈ ಬ್ರಾಹ್ಮಣೋತ್ತಮಃ ॥62॥

ತದಾ ಪಿಪ್ಪಲವೃಕ್ಷಸ್ಯ ಕೋಟರೇ ತ್ವಂ ಸಮಾಹಿತಾ ।
ಶ್ರುತ್ವಾ ವೈ ಘೋಣತೀರ್ಥಸ್ಯ ಮಾಹಾತ್ಮ್ಯಂ ಮೋಕ್ಷದಾಯಕಮ್ ॥63॥

ವಿಧೂಯ ಸರ್ವಪಾಪಾನಿ ಮಯಾ ಸಾಕಂ ರಮಿಷ್ಯಸಿ' ।
ಇತ್ಯುಕ್ತ್ವಾ ವಿರರಾಮಾಥ ಧರ್ಮಪತ್ನೀ ಪತಿವ್ರತಾ ॥64॥

ಭರ್ತೃಶಾಪಾನ್ಮಹಾಘೋರಾಂ ಮಂಡೂಕತನುಮಾಶ್ರಿತಾ ।
ಶೇಷಾದ್ರಿಶಿಖರೇ ತಸ್ಮಿನ್ಘೋಣತೀರ್ಥಸ್ಯ ದಕ್ಷಿಣೇ ॥65॥

ಮಡದಿ, ಮತ್ತು ಬ್ರಾಹ್ಮಣರನ್ನು ಮರ್ಯಾದೆಯಿಂದ ನಡೆಸಿಕೊಳ್ಳದ ರಾಜ– ಇವರನ್ನು ತತ್ಕ್ಷಣದಲ್ಲಿಯೇ ಶಾಪದಿಂದ ದಂಡಿಸಬೇಕು' ಎಂಬ ನ್ಯಾಯವನ್ನು ಸ್ಮರಿಸಿ ತನ್ನ ಹೆಂಡತಿಗೆ 'ಪುಣ್ಯಕರವಾದ ವೇಂಕಟಾಚಲದಲ್ಲಿರುವ ಘೋಣತೀರ್ಥದ ಸಮೀಪದಲ್ಲಿರುವ ಅಶ್ವತ್ಥ ವೃಕ್ಷದ ಪೊಟರೆಯೊಂದರಲ್ಲಿ ನೀರಿಲ್ಲದ ಸ್ಥಳದಲ್ಲಿ ಕಪ್ಪೆಯಾಗಿ ಜನಿಸು' ಎಂದು ಶಪಿಸಿದನು.

ಇದನ್ನು ಕೇಳಿದ ಗಂಧರ್ವನ ಮಡದಿಯು ತುಂಬುರುವಿನ ಕಾಲುಗಳಲ್ಲಿ ಬಿದ್ದು ಅವನನ್ನು ಬಹುವಾಗಿ ಬೇಡಿಕೊಂಡಾಗ 'ಸಶಿಷ್ಯರಾಗಿ ಬಂದ ಅಗಸ್ತ್ಯರು ನೀನು ವಾಸವಾಗಿರುವ ವೃಕ್ಷದ ಕೆಳಗೆ ಕುಳಿತು ಆ ಘೋಣತೀರ್ಥದ ಮಹಾತ್ಮೆಯನ್ನು ಹುಣ್ಣಿಮೆಯಂದು ತಿಳಿಸುವರು. ಅದನ್ನು ಕೇಳಿದಲ್ಲಿ ನಿನಗೆ ಕಪ್ಪೆಯ ಜನ್ಮದಿಂದ ವಿಮುಕ್ತಿಯು ಎಂದು ನುಡಿದನು. ತುಂಬುರುವಿನ ಮಡದಿಯು ಭರ್ತೃವಿನ ಶಾಪದಂತೆ ಕಪ್ಪೆಯ ರೂಪವನ್ನು ಹೊಂದಿ ಘೋಣತೀರ್ಥದ ದಕ್ಷಿಣದಿಕ್ಕಿನಲ್ಲಿರುವ ಅಶ್ವತ್ಥ ವೃಕ್ಷದ ಕೋಟರೆಯಲ್ಲಿ ವಾಸವಾದಳು. ಹೀಗೆ ಅನೇಕ ಸಾವಿರ

ಶನೈಃ ಶನೈರ್ಗತಾ ನಾರೀ ಪಿಪ್ಪಲದ್ರುಮಕೋಟರಮ್ ।
ಅಬ್ದಾಯುತಂ ಗತಂ ತಸ್ಯಾ ಅಶ್ವತ್ಥದ್ರುಮಕೋಟರೇ ॥66॥

ತತಃ ಕಾಲಾಂತರೇಽಗಸ್ತ್ಯೋ ವೇಂಕಟಾದ್ರಿಂ ಮನೋಹರಮ್ ।
ಗತ್ವಾ ಶ್ರೀಸ್ವಾಮಿತೀರ್ಥೇ ಚ ಸ್ನಾತ್ವಾ ನಿಯಮಪೂರ್ವಕಮ್ ॥67॥

ವರಾಹಸ್ವಾಮಿನಂ ದೇವಂ ನತ್ವಾ ತೀರ್ಥಸ್ಯ ದಕ್ಷಿಣೇ ।
ವೇಂಕಟೇಶಾಲಯಂ ಗತ್ವಾ ಶ್ರೀನಿವಾಸಂ ಕೃಪಾನಿಧಿಮ್ ॥68॥

ವೇದವೇದ್ಯಂ ವಿಶಾಲಾಕ್ಷಂ ದೇವದೇವಂ ಸನಾತನಮ್ ।
ನತ್ವಾಽಗಸ್ತ್ಯೋ ಮಹಾಭಾಗೋ ಘೋಣತೀರ್ಥಂ ತತೋ ಯಯೌ ॥69॥

ತತ್ರ ಸ್ನಾತ್ವಾ ತೀರ್ಥವರ್ಯೇ ಸ್ವಶಿಷ್ಯೈರ್ಯೋಗಿನಾಂ ವರಃ ।
ಪಿಪ್ಪಲದ್ರುಮಚ್ಛಾಯಾಯಾಂ ಶಿಷ್ಯೇಭ್ಯೋ ಭಕ್ತಿಪೂರ್ವಕಮ್ ॥70॥

ಘೋಣತೀರ್ಥಸ್ಯ ಮಾಹಾತ್ಮ್ಯಂ ಬ್ರಹ್ಮಹತ್ಯಾವಿನಾಶಕಮ್ ।
ಸರ್ವಮಂಗಲದಂ ಪುಣ್ಯಂ ಸರ್ವಸಂಪತ್ಪ್ರದಾಯಕಮ್ ॥71॥

ಉಕ್ತವಾನ್ಯೋಗಿನಾಂ ಶ್ರೇಷ್ಠೋ ಹ್ಯಗಸ್ತ್ಯೋ ಭಗವನಾನೃಷಿಃ ॥72॥

ತದಾ ಶ್ರುತ್ವಾ ತು ವರ್ಷಾಭೂಃ ಪಾದಯೋಸ್ತಸ್ಯ ಯೋಗಿನಃ ।
ಪತಿತ್ವಾ ಜ್ಞಾನದೀಪೇನ ವಿದಿತ್ವಾ ವೈಭವಂ ಮುನೇಃ ॥73॥

ಪೂರ್ವರೂಪಂ ಸಮಾಸಾದ್ಯ ನಾರೀರೂಪಂ ಮನೋಹರಮ್ ।
ಅಗಸ್ತ್ಯ ಯೋಗಿನಾಂ ಶ್ರೇಷ್ಠ ರಕ್ಷರಕ್ಷ ದಯಾನಿಧೇ ॥74॥

ವರ್ಷಗಳು ಕಳೆದ ಅನಂತರದಲ್ಲಿ ಒಂದು ಬಾರಿ ಅಗಸ್ತ್ಯರು ವೇಂಕಟಾಚಲಕ್ಕೆ ಬಂದು ಸ್ವಾಮಿಪುಷ್ಕರಿಣಿಯಲ್ಲಿ ನಿಯಮಪೂರ್ವಕವಾಗಿ ಸ್ನಾನವನ್ನು ಮಾಡಿ, ವೇದಗಳಿಂದ ಪ್ರತಿಪಾದ್ಯನೂ, ದೇವದೇವನೂ, ಸನಾತನನೂ ಆದ ಭಗವಂತನಾದ ಶ್ರೀನಿವಾಸನನ್ನು ನಮಸ್ಕರಿಸಿ, ಅಲ್ಲಿಂದ ಘೋಣ ತೀರ್ಥಕ್ಕೆ ಬಂದರು. ಅಲ್ಲಿಯೂ ಶಿಷ್ಯರಿಂದ ಸಮೇತರಾಗಿ ಘೋಣತೀರ್ಥದಲ್ಲಿ ಸ್ನಾನವನ್ನು ಮಾಡಿ, ಅಶ್ವತ್ಥವೃಕ್ಷದ ನೆರಳಿನಲ್ಲಿ ಕುಳಿತು, ಬ್ರಹ್ಮಹತ್ಯಾದಿ ವಿನಾಶಕವಾದ, ಸರ್ವಮಂಗಲಪ್ರದವೂ, ಪುಣ್ಯದಾಯಕವೂ, ಸಕಲ ಸಂಪತ್ಪ್ರದಾಯಕವೂ ಆದ ಘೋಣತೀರ್ಥದ ಮಾಹಾತ್ಮ್ಯವನ್ನು ಭಕ್ತಿಯಿಂದ ಹೇಳಿದನು. ಇದನ್ನು ಕೇಳಿದ ಪತಿವ್ರತೆಯಾದ ಗಂಧರ್ವಸ್ತ್ರೀಯು ತನ್ನ ಪತಿಯ ಶಾಪದಿಂದ ವಿಮೋಚಿತಳಾಗಿ, ತನ್ನ ಮೊದಲಿನ ಸುಂದರ ನಾರಿಯ ರೂಪವನ್ನು

ಮಾಂ ರಕ್ಷ ದಯಯಾ ಬ್ರಹ್ಮನ್ಪತಿವಾಕ್ಯವಿರೋಧಿನೀಮ್' ।
ಇತ್ಯುಕ್ತ್ವಾ ತಂ ವಿಶಾಲಾಕ್ಷೀ ವಿರರಾಮ ತತಃ ಪರಮ್ ॥75॥

ಅಗಸ್ತ್ಯ ಉವಾಚ–

'ಕಾ ತ್ವಂ ಸುಶ್ರೋಣಿ ಭದ್ರಂ ತೇ ಭೇಕಜನ್ಮಪ್ರದಾಯಕಮ್ ।
ಪಾಪಂ ಪೂರ್ವಭವೇ ಚಾಸೀತ್ತದ್ವದಸ್ವ ಚ ಮಾ ಚಿರಮ್' ॥76॥

ನಾರ್ಯುವಾಚ–

'ತುಂಬುರುರ್ನಾಮ ಗಂಧರ್ವಃ ಸರ್ವವಿದ್ಯಾವಿಶಾರದಃ ।
ತಸ್ಯ ಭಾರ್ಯಾಸ್ಮ್ಯಹಂ ವಿಪ್ರ ಹ್ಯಗಸ್ತ್ಯ ಮುನಿಸೇವಿತ ॥77॥

ಭರ್ತಾ ಮೇ ಸರ್ವಧರ್ಮಜ್ಞಸ್ತುಂಬುರುರ್ಮುನಿಸತ್ತಮಃ ।
ಸರ್ವಧರ್ಮಾನ್ಮನೋಜ್ಞಾತ್ವಂ ಕುರು ನಿತ್ಯಂ ಮಯಾ ಸಹ ॥78॥

ಪತಿವಾಕ್ಯಂ ತದಾ ಶ್ರುತ್ವಾ ಪರಲೋಕೋಪಕಾರಕಮ್ ।
ಅಸಹ್ಯಂ ವಾಕ್ಯಮತ್ಯುಗ್ರಂ ದುರ್ಗತಿಪ್ರದಮೇವ ಹಿ ॥79॥

ಮಯಾ ಚೋಕ್ತಂ ಹಿ ದುರ್ಬುದ್ಧ್ಯಾ ಹೇ ತಾತಮುನಿಸತ್ತಮ ॥80॥

ಅಗಸ್ತ್ಯ ಉವಾಚ–

'ಕುಶಾಗ್ರಬುದ್ಧಿಸ್ತೇ ಭರ್ತಾ ಶಶಾಪ ತ್ವಾಂ ರುಷಾನ್ವಿತಃ ।
ಏವಂ ಶಾಪೋ ಯುಕ್ತ ಏವ ಪತಿವಾಕ್ಯವಿರೋಧಿನೀಮ್ ॥81॥

ಪತಿವಾಕ್ಯಮನಾದೃತ್ಯ ಸ್ವೇಚ್ಛಯಾ ವರ್ತತೇ ತು ಯಾ ।

ಹೊಂದಿ, ಭಕ್ತಿಯಿಂದ ಅಗಸ್ತ್ಯರಿಗೆ ನಮಸ್ಕರಿಸಿ 'ಗಂಡನ ಮಾತನ್ನು ಕೇಳದ ನನ್ನನ್ನು ರಕ್ಷಿಸಿ' ಎಂದು ಪ್ರಾರ್ಥಿಸಿದಳು. ಆಗ ಅಗಸ್ತ್ಯರು 'ನೀನು ಯಾರು ? ನಿನ್ನ ಕಪ್ಪೆ ಜನ್ಮಕ್ಕೆ ಕಾರಣವಾದ ಪಾಪವಾದರೂ ಯಾವದು?' ಎಂದು ನುಡಿದರು. ಆಗ ಆಕೆಯು 'ನಾನು ತುಂಬುರುವಿನ ಮಡದಿಯು. ನನ್ನ ಪತಿಯ ಧರ್ಮಯುಕ್ತವಾದ ಮಾತುಗಳನ್ನು ನಾನು ತಿರಸ್ಕರಿಸಿದ್ದರಿಂದ ನನ್ನ ಪತಿಯಿಂದ ಶಪ್ತಳಾಗಿ ಕಪ್ಪೆಯಾಗಿ ಹುಟ್ಟಿದ್ದೆನು.' ಎಂದು ನುಡಿದಳು.

ಆಗ ಅಗಸ್ತ್ಯರು 'ಕುಶಾಗ್ರಮತಿಯಾದ ನಿನ್ನ ಪತಿಯು ನಿನ್ನನ್ನು ಶಪಿಸಿರುವದು ಯುಕ್ತವೆನಿಸುವದು. ಗಂಡನ ಮಾತನ್ನು ಮೀರಿ ಸ್ವೇಚ್ಛಾಚಾರಿಗಳಾಗಿ ವರ್ತಿಸುವ ಸ್ತ್ರೀಯರು ಚಂದ್ರನಕ್ಷತ್ರಗಳಿರುವವರೆಗೆ ನರಕದಲ್ಲಿ ಬೀಳುತ್ತಾಳೆ. ಸ್ತ್ರೀಯರಿಗೆ ಸ್ವಾತಂತ್ರ್ಯವಿರುವದಿಲ್ಲ. ಗಂಡನ ಮಾತನ್ನೆಂದಿಗೂ ಮೀರದೇ,

ನಾ ಸಾರೀ ನಿರಯೇ ಘೋರೇ ಪತತ್ಯಾಚಂದ್ರತಾರಕಮ್ ॥82॥

ನ ಸ್ವಾತಂತ್ರ್ಯಂ ತು ನಾರೀಣಾಂ ನೋಲ್ಲಂಘ್ಯಂ ಪತಿಭಾಷಣಮ್ ।
ಪಾತಿವ್ರತ್ಯೇನ ಪುಣ್ಯೇನ ಪತಿಶುಶ್ರೂಷಣೇನ ಚ ॥83॥

ಸ್ತ್ರಿಯೋ ವಿಷ್ಣುಪದಂ ಯಾಂತಿ ನ ಚಾನ್ಯೈರಪಿ ಸುವ್ರತೈಃ ।
ಪತಿರ್ಮಾತಾ ಪತಿರ್ವಿಷ್ಣುಃ ಪತಿರ್ಬ್ರಹ್ಮಾ ಪತಿಃ ಶಿವಃ ॥84॥

ಪತಿರ್ಗುರುಃ ಪತಿಸ್ತೀರ್ಥಮಿತಿ ಸ್ತ್ರೀಣಾಂ ವಿದುರ್ಬುಧಾಃ ।
ಪತಿವಾಕ್ಯಮಪಾಕೃತ್ಯ ಯಾ ನಾರೀ ಸುಕೃತೈಃ ಪರೈಃ ॥85॥

ಸದೈವ ಯುಜ್ಯತೇ ಸಾಪಿ ನೈವ ಶುದ್ಧಾ ಭವೇತ್ಸಕೃತ್ ।
ಪತಿಹೀನಾ ತು ಯಾ ನಾರೀ ಗುರುಭಿರ್ಧರ್ಮವಿತ್ತಮೈಃ ॥86॥

ಸಾ ಕೃತಜ್ಞಾ ವಿದಧ್ಯಾತ್ತು ವ್ರತಂ ಧರ್ಮಫಲಪ್ರದಮ್ ।
ಪತಿನಾ ಪ್ರೇರಿತಾ ಸೈವ ಪತಿಬುದ್ಧಿಪರಾಯಣಾ ॥87॥

ಪತಿಪಾದಾಬ್ಜತೀರ್ಥೇನ ಯಾ ಸ್ನಾತ್ವಾ ಸಾ ಹರಿಪ್ರಿಯಾ ।
ಸಾ ಸ್ನಾತ್ವಾ ಸರ್ವತೀರ್ಥೇಷು ಗಂಗಾದಿಷು ನ ಸಂಶಯಃ ॥88॥

ತಸ್ಮಾತ್ತ್ವತ್ಕೃತದೋಷಸ್ತು ತ್ವಾಮಾಯಾತೀತಿ ತತ್ಫಲಮ್ ।
ಭುಂಜಂತ್ಯಾಸ್ತೇಽತ್ರ ಶೃಣ್ವಂತ್ಯಾ ಘೋಣತೀರ್ಥಸ್ಯ ವೈಭವಮ್ ॥89॥

ಮುಕ್ತಿರಾಸೀಚ್ಚುಭಾಂಗಂ ತನ್ನಾರೀರೂಪಂ ಪುನರ್ಯಥಾ ।
ತಸ್ಮಾದ್ಘೋಣಸ್ಯ ತೀರ್ಥಸ್ಯ ತುಂಬುತೀರ್ಥಮಿತೀಹ ವೈ ॥90॥

ಪತಿಶುಶ್ರೂಷಣ ರೂಪವಾದ ಪಾತಿವ್ರತ್ಯದಿಂದ ಸ್ತ್ರೀಯರೂ ವಿಷ್ಣುಲೋಕವನ್ನು ಹೊಂದುವರು. ಆದ್ದರಿಂದ ಸ್ತ್ರೀಯರಿಗೆ ಬ್ರಹ್ಮ, ವಿಷ್ಣು, ಶಿವ, ತಂದೆ, ತಾಯಿ, ಗುರು ಎಲ್ಲವೂ ಸಹ ಗಂಡನೇ ಆಗಿರುವನು. ಗಂಡನ ಮಾತನ್ನು ಮೀರಿ ಸ್ತ್ರೀಯು ಎಷ್ಟು ಪುಣ್ಯಕಾರ್ಯಗಳನ್ನಾಚರಿಸಿದರೂ ಅವಳು ಶುದ್ಧಳಾಗುವದಿಲ್ಲ. ಪತಿಯನ್ನು ಆರಾಧಿಸಿದ ಸ್ತ್ರೀಯು ಗಂಗಾದಿ ಸರ್ವತೀರ್ಥಗಳಲ್ಲಿ ಸ್ನಾತಳಾದವಳೇ ಸರಿ. ನಿನ್ನ ದೋಷಕ್ಕನುಗುಣವಾಗಿ ನಿನಗೆ ಘೋರವಾದ ಕಪ್ಪೆಯ ಜನ್ಮವೊದಗಿತ್ತು. ಘೋಣತೀರ್ಥದ ಮಾಹಾತ್ಮ್ಯಶ್ರವಣ ಮಾತ್ರದಿಂದ ಕಪ್ಪೆಯ ಜನ್ಮವು ಹೋಗಿ ಸುಂದರವಾದ ಹೆಣ್ಣಿನ ರೂಪವು ನಿನಗೆ ಬಂದಿರುವದು. ಆದ್ದರಿಂದ ಇಂದಿನಿಂದ ಈ ತೀರ್ಥವು (ಘೋಣತೀರ್ಥವು) ಲೋಕದಲ್ಲಿ ತುಂಬು ತೀರ್ಥ (ತುಂಬುರುತೀರ್ಥ)ವೆಂಬುದಾಗಿ ಪ್ರಸಿದ್ಧವಾಗಲಿ'

ಲೋಕೇ ಪ್ರಸಿದ್ಧಿರಭವದಹೋ ತೀರ್ಥಸ್ಯ ವೈಭವಮ್ ॥91॥

ಶ್ರೀ ಸೂತ ಉವಾಚ–

ಘೋಣತೀರ್ಥೇ ಮಹಾಪುಣ್ಯೇ ಸರ್ವಪಾಪವಿನಾಶಿನಿ ।
ಸ್ನಾಂತಿ ಯೇ ಪೌರ್ಣಮಾಸ್ಯಾಂ ವೈ ಶೌನಕಾದ್ಯಾ ಮಹೌಜಸಃ ॥92॥

ತೇಷಾಂ ಕ್ರತುಫಲಂ ಪುಣ್ಯಂ ತೀರ್ಥಾಯುತಫಲಂ ಭವೇತ್ ।
ಕಪಿಲಾಗೋಸಹಸ್ರಂ ತು ಯೋ ದದಾತಿ ದಿನೇ ದಿನೇ ॥93॥

ತತ್ಫಲಂ ಸಮವಾಪ್ನೋತಿ ಸ್ನಾನಾತ್ ತುಂಬುರುತೀರ್ಥಕೇ ।
ರತ್ನಕೋಟಿಸಹಸ್ರಾಣಿ ಯೋ ದದಾತಿ ದಿನೇ ದಿನೇ ॥94॥

ಮತ್ತೇಭಾನಾಂ ಸಹಸ್ರಾಣಿ ತಥೈವಾಶ್ವಾಯುತಾನ್ಯಪಿ ।
ತತ್ಫಲಂ ಸಮವಾಪ್ನೋತಿ ಘೋಣತೀರ್ಥಾವಗಾಹನಾತ್ ॥95॥

ಕನ್ಯಾಕೋಟಿಪ್ರದಾನೇನ ಯತ್ಫಲಂ ಚರ್ಷಿಭಿಃ ಸ್ಮೃತಮ್ ।
ತತ್ಫಲಂ ಸಮವಾಪ್ನೋತಿ ಘೋಣತೀರ್ಥಾಚ್ಚ ಪಾವನಾತ್ ॥96॥

ಹೇಮಾಂಬರಸಹಸ್ರಂ ಯಃ ಕುರುಕ್ಷೇತ್ರೇ ಪ್ರಯಚ್ಛತಿ ।
ತತ್ಫಲಂ ಸಮವಾಪ್ನೋತಿ ಘೋಣತೀರ್ಥಸ್ಯ ವೈಭವಾತ್ ॥97॥

ಗುರ್ವರ್ಥೇ ಬ್ರಾಹ್ಮಣಾರ್ಥೇ ಚ ಸ್ವಾಮ್ಯರ್ಥೇ ಯಸ್ತ್ಯಜೇತ್ತನುಮ್ ।
ತತ್ಫಲಂ ಸಮವಾಪ್ನೋತಿ ಘೋಣತೀರ್ಥಸ್ಯ ವೈಭವಾತ್ ॥98॥

ಎಂದು ನುಡಿದರು.

ಘೋಣತೀರ್ಥದಲ್ಲಿ ಯಾರು ಹುಣ್ಣಿಮೆಯ ದಿನ (ಉತ್ತರಾಫ್ಗಾಲ್ಗುಣೀ ಯುಕ್ತವಾದ ಫಾಲ್ಗುನ ಹುಣ್ಣಿಮೆಯ ದಿನ ಮಧ್ಯಾಹ್ನ) ಯಾರು ಸ್ನಾನವನ್ನು ಮಾಡುವರೋ ಅವರು ಸಾವಿರಾರು ಯಜ್ಞಗಳನ್ನು, ತೀರ್ಥಯಾತ್ರೆಗಳನ್ನು ಮಾಡಿದ ಫಲವನ್ನು ಹೊಂದುವರು. ಸಾವಿರಾರು ಕಪಿಲಾಗೋದಾನ, ಸಾವಿರಾರು ಆನೆ, ಕುದುರೆ ಇವುಗಳ ದಾನ, ಅಸಂಖ್ಯ ಕನ್ಯಾದಾನ, ಕುರುಕ್ಷೇತ್ರದಲ್ಲಿ ಸಾವಿರಾರು ಪೀತಾಂಬರಗಳ ದಾನ, ಸತ್ಪಾತ್ರ ದಾನ, ಗುರು, ಗೋ, ಬ್ರಾಹ್ಮಣರ ಗೋಸ್ಕರವಾಗಿ ಮಾಡಿರು ಜೀವದಾನ, – ಇವುಗಳೆಲ್ಲದರಿಂದ ಬರುವ ಪುಣ್ಯವು ತುಂಬುರುತೀರ್ಥದ ಸ್ನಾನಮಾತ್ರದಿಂದ ಲಭಿಸುವದು. ಶರಣಾಗತರಕ್ಷಕರು, ತೀರ್ಥಗಳ ಸೇವೆಯನ್ನು ಮಾಡುವವರು, ಸತ್ಯವ್ರತರಾದವರ ಪುಣ್ಯ, ಚಂದ್ರಗ್ರಹಣದಲ್ಲಿ ಪಿತೃಶ್ರಾದ್ಧವನ್ನಾಚರಿಸುವದು, ಗಂಗಾ, ನರ್ಮದಾ,

ಆಪನ್ನಾರ್ತಿಹರಾಣಾಂ ಚ ತೀರ್ಥಸೇವಾಪರಾತ್ಮನಾಮ್ ।
ಸತ್ಯವ್ರತಾನಾಂ ಯತ್ಪುಣ್ಯಂ ಘೋಣತೀರ್ಥಾಚ್ಚ ತದ್ಭವೇತ್ ॥99॥

ಯತ್ಫಲಂ ಶ್ರಾದ್ಧಕರ್ತೄಣಾಂ ಪಿತೄಣಾಮಿಂದುಸಂಕ್ಷಯೇ ।
ತತ್ಫಲಂ ಸಮವಾಪ್ನೋತಿ ಘೋಣತೀರ್ಥಾದ್ಧಿ ಪಾವನಾತ್ ॥100॥

ಗಂಗಾಯಾಂ ನರ್ಮಾದಾಯಾಂ ಚ ಸರಯೂಚಂದ್ರಭಾಗಯೋಃ ।
ಸರ್ವೇಷು ಪುಣ್ಯತೀರ್ಥೇಷು ಯಃ ಸ್ನಾನಂ ಕುರುತೇ ನರ ॥101॥

ತಸ್ಮಾತ್ಪುಣ್ಯತಮಂ ತೀರ್ಥಂ ಘೋಣತೀರ್ಥಂ ವಿದುರ್ಬುಧಾಃ ॥102॥

ಯ ಇಮಂ ಶೃಣುತೇಽಧ್ಯಾಯಂ ಸರ್ವಪಾಪನಿಬರ್ಹಣಮ್ ।
ವಾಜಪೇಯಫಲಂ ತಸ್ಯ ವಿಷ್ಣುಲೋಕಶ್ಚ ಶಾಶ್ವತಃ ॥103॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ **'ಶ್ರೀತುಂಬುರುತೀರ್ಥವರ್ಣನಮ್'** ನಾಮ ಷಡ್ವಿಂಶೋಽಧ್ಯಾಯಃ ॥26॥

* * *

ಸರಯೂ, ಚಂದ್ರಭಾಗವೇ ಮೊದಲಾದ ತೀರ್ಥಗಳಲ್ಲಿ ಸ್ನಾನ ಮಾಡುವದು– ಇವುಗಳೆಲ್ಲದರಿಂದ ಲಭಿಸುವ ಪುಣ್ಯವು ಘೋಣಾತೀರ್ಥದ ಸ್ನಾನದಿಂದ ದೊರಕುತ್ತದೆ. ಆದ್ದರಿಂದ ಘೋಣತೀರ್ಥವು ಅತ್ಯಂತ ಪುಣ್ಯಕರವಾದ ತೀರ್ಥವೆಂದು ಪಂಡಿತರು ತಿಳಿದಿರುವರು. ಯಾರು ಈ ಅಧ್ಯಾಯವನ್ನು ಶ್ರವಣಮಾಡುವರೋ ಅವರಿಗೆ ವಾಜಪೇಯಗದ ಫಲ ಮತ್ತು ವಿಷ್ಣುಲೋಕಗಳ ಪ್ರಾಪ್ತಿಯು ನಿಶ್ಚಯವು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ **ತುಂಬುರುತೀರ್ಥಮಾಹಾತ್ಮ್ಯ** ವರ್ಣನವೆಂಬ ಇಪ್ಪತ್ತಾರನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥ ಸಪ್ತವಿಂಶೋಽಧ್ಯಾಯಃ

[ಸರ್ವತೀರ್ಥಮಹಿಮೋಪಸಂಹಾರಪೂರ್ವಕ ಪುರಾಣಶ್ರವಣಪ್ರಕ್ರಿಯಾದ್ಯನುವರ್ಣನಮ್]

**ಋಷಯಃ ಊಚುಃ-**

ವೇಂಕಟಾದ್ರೌ ಮಹಾಪುಣ್ಯೇ ಸರ್ವಸಂಕಟನಾಶನೇ ।
ಸಂತಿ ವೈ ಕತಿ ತೀರ್ಥಾನಿ ಸೂತ ಪೌರಾಣಿಕೋತ್ತಮ ॥1॥

ತೇಷಾಂ ಸಂಖ್ಯಾಂ ಚ ನೋ ಬ್ರೂಹಿ ಕತಿ ಮುಖ್ಯಾನಿ ತತ್ರ ವೈ ।
ತತ್ರಾಪ್ಯತ್ಯಂತಮುಖ್ಯಾನಿ ವದ ನೋ ಮುನಿಸತ್ತಮ ॥2॥

ಸದ್ಧರ್ಮರತಿದಾನ್ಯತ್ರ ಕತಿ ಮುಖ್ಯಾನಿ ತಾನಿ ಚ ।
ಕಾನಿ ಜ್ಞಾನಪ್ರದಾನ್ಯತ್ರ ಭಕ್ತಿವೈರಾಗ್ಯದಾನಿ ಚ ॥3॥

ಮುಕ್ತಿಪ್ರದಾನಿ ಕಾನ್ಯತ್ರ ತಾನಿ ನೋ ವದ ಸುವ್ರತ ॥4॥

**ಶ್ರೀ ಸೂತ ಉವಾಚ-**

ಷಟ್ಷಷ್ಟಿಕೋಟಿತೀರ್ಥಾನಿ ಪುಣ್ಯಾನ್ಯತ್ರ ನಗೋತ್ತಮೇ ।
ಅಷ್ಟೋತ್ತರಸಹಸ್ರಾಣಿ ತೇಷು ಮುಖ್ಯಾನಿ ಸುವ್ರತ ॥5॥

ಸದ್ಧರ್ಮರತಿದಾನ್ಯತ್ರ ಸಂತಿ ಚಾಷ್ಟೋತ್ತರಂ ಶತಮ್ ।

## ಇಪ್ಪತ್ತೇಳನೆಯ ಅಧ್ಯಾಯ

[ಸರ್ವತೀರ್ಥಮಹಿಮೋಪಸಂಹಾರಪೂರ್ವಕ ಪುರಾಣಶ್ರವಣಪ್ರಕ್ರಿಯಾದ್ಯನುವರ್ಣನ]

ಶೌನಕರು ಸೂತರನ್ನು ಕುರಿತು ಸರ್ವಸಂಕಟವಿನಾಶಕವಾದ ವೇಂಕಟಾದ್ರಿಯಲ್ಲಿ ಎಷ್ಟು ತೀರ್ಥಗಳಿರುವವು? ಅವುಗಳಲ್ಲಿ ಮುಖ್ಯತೀರ್ಥಗಳಾವವು? ಧರ್ಮಾದಿಗಳಲ್ಲಿ ಆಸಕ್ತಿದಾಯಕ ತೀರ್ಥಗಳು, ಜ್ಞಾನವೈರಾಗ್ಯಗಳನ್ನುಂಟುಮಾಡುವ ತೀರ್ಥಗಳಾವವು? ಮುಕ್ತಿಯನ್ನು ಉಂಟುಮಾಡುವ ತೀರ್ಥಗಳಾವವು ಎಂಬುದನ್ನು ತಿಳಿಸಿರಿ' ಎಂದು ಪ್ರಾರ್ಥಿಸಿದಾಗ ಸೂತರು ಅವುಗಳ ಸಂಖ್ಯೆಯನ್ನು ತಿಳಿಸುತ್ತಾ ವರ್ಣಿಸುತ್ತಾರೆ.

ವೇಂಕಟಾದ್ರಿಯಲ್ಲಿ 66 ಕೋಟಿ ಪುಣ್ಯತೀರ್ಥಗಳಿದ್ದು ಅವುಗಳಲ್ಲಿ 1008 ತೀರ್ಥಗಳು

ಸಹಸ್ರೇಭ್ಯಶ್ಚ ಮುಖ್ಯಾನಿ ಪೃಥಕ್ತೇಭ್ಯಶ್ಚ ತಾನಿ ಚ ||6||

ಭಕ್ತಿವೈರಾಗ್ಯದಾನ್ಯತ್ರ ಷಷ್ಠಿರಷ್ಟೋತ್ತರೇ ಶತೇ ||7||

ಮುಕ್ತಿದಾನ್ಯತ್ರ ಷಟ್ಚೈವ ವೇಂಕಟಾಚಲಮೂರ್ಧನಿ ।
ಸ್ವಾಮಿಪುಷ್ಕರಿಣೀ ಚೈವ ವಿಯದ್ಗಂಗಾ ತತಃ ಪರಮ್ ||8||

ಪಶ್ಚಾತ್ಪಾಪವಿನಾಶಂ ಚ ಪಾಂಡುತೀರ್ಥಮತಃ ಪರಮ್ ।
ಕುಮಾರಧಾರಿಕಾತೀರ್ಥಂ ತುಂಬೋಸ್ತೀರ್ಥಮತಃ ಪರಮ್ ||9||

ಕುಂಭಮಾಸೇ ಪೌರ್ಣಮಾಸ್ಯಾಂ ಮಘಾಯೋಗೋ ಯದಾಭವೇತ್।
ಕುಮಾರಧಾರಿಕಾಂ ಯಾಂತಿ ಸರ್ವತೀರ್ಥಾನಿ ಹೇ ದ್ವಿಜಾಃ ||10||

ತತ್ರ ಯಃ ಸ್ನಾತಿ ವಿಪ್ರೇಂದ್ರ ರಾಜಸೂಯಫಲಂ ಲಭೇತ್ ।
ಮುಕ್ತಿಶ್ಚ ಭವಿತಾ ತತ್ರ ನಾತ್ರ ಕಾರ್ಯಾ ವಿಚಾರಣಾ ||11||

ಅನ್ನದಾನವಿಧಿಸ್ತತ್ರ ಸಾರ್ಧಂ ದಕ್ಷಿಣಯಾ ದ್ವಿಜಾಃ ।
ಉತ್ತರಾಫಲ್ಗುನೀಯುಕ್ತಶುಕ್ಲಪಕ್ಷೀಯಪರ್ವಣಿ ||12||

ತುಂಬೋಸ್ತೀರ್ಥಂ ಮೀನಸಂಸ್ಥೇ ರವೌ ತೀರ್ಥಾನಿ ಸರ್ವಶಃ ।
ಅಪರಾಹ್ಣೇ ಸಮಾಯನಾತಿ ತತ್ರ ಸ್ನಾತೋ ನ ಜಾಯತೇ ||13||

ಮುಖ್ಯವಾಗಿದ್ದರೆ ಪುನಃ ಅವುಗಳಲ್ಲಿ 108 ತೀರ್ಥಗಳು ಧರ್ಮಾಸಕ್ತಿಯನ್ನುಂಟುಮಾಡುವವು. ಆ 108 ತೀರ್ಥಗಳಲ್ಲಿಯೇ 60 ತೀರ್ಥಗಳು ಭಕ್ತಿದಾಯಕವಾಗಿರುವವು. ಅವುಗಳಲ್ಲಿಯೂ ಸ್ವಾಮಿಪುಷ್ಕರಿಣಿ, ಆಕಾಶಗಂಗಾ, ಪಾಪವಿನಾಶನ, ಪಾಂಡುತೀರ್ಥ, ಕುಮಾರಧಾರಾ ಮತ್ತು ತುಂಬುತೀರ್ಥಗಳೆಂಬ ಆರು ತೀರ್ಥಗಳು ಮುಕ್ತಿದಾಯಕವಾಗಿರುವವು.

ಕುಂಭಮಾಸದ ಹುಣ್ಣಿಮೆಯು ಮಘಾನಕ್ಷತ್ರಯುಕ್ತವಾದಾಗ ಪ್ರಪಂಚದಲ್ಲಿರುವ ಎಲ್ಲ ತೀರ್ಥಗಳೂ ಕುಮಾರಧಾರಾ ತೀರ್ಥದಲ್ಲಿ ಸನ್ನಿಹಿತವಾಗುವವು. ಆ ಸಮಯದಲ್ಲಿ ಯಾರು ಕುಮಾರಧಾರಾ ತೀರ್ಥದಲ್ಲಿ ಸ್ನಾನವನ್ನು ಮಾಡುತ್ತಾರೆಯೋ ಅವರು ರಾಜಸೂಯಯಾಗದ ಫಲವನ್ನು ಹೊಂದುವನು. ಸದಕ್ಷಿಣಾಕವಾದ ಅನ್ನದಾನವು ಅತ್ಯಂತ ಶ್ರೇಷ್ಠವಾಗಿರುವದು.

ಸೂರ್ಯನು ಮೀನರಾಶಿಯಲ್ಲಿರುವಾಗ ಉತ್ತರಾಫಲ್ಗುನೀಯುಕ್ತವಾದ ಪೂರ್ಣಿಮೆಯಂದು ಅಪರಾಹ್ನ ಸಮಯಕ್ಕೆ ಪ್ರಪಂಚದ ಎಲ್ಲ ತೀರ್ಥಗಳೂ ತುಂಬುತೀರ್ಥದಲ್ಲಿ ವಾಸಿಸಲು ಬರುವವು. ಆಗ ಅದರಲ್ಲಿ ಸ್ನಾನಮಾಡಿದವನಿಗೆ ಮರುಜನ್ಮವಿರುವದಿಲ್ಲ. ಇಲ್ಲಿ ದ್ರವ್ಯದಾನವನ್ನು ಮಾಡಬೇಕು.

ಮೌಂಜೀಬಂಧಂ ವಿವಾಹಂ ಚ ಕಾರಯೇದ್ದ್ರವ್ಯದಾನತಃ ।
ಮೇಷಸಂಕ್ರಮಣೇ ಭಾನೌ ಚಿತ್ರಾನಕ್ಷತ್ರಸಂಯುತೇ ॥14॥

ಸುವರ್ಣಂ ತತ್ರ ದಾತವ್ಯಂ ಕನ್ಯಾದಾನಂ ವಿಶೇಷತಃ ।
ವೃಷಭಸ್ಥೇ ರವೌ ವಿಪ್ರಾ ದ್ವಾದಶ್ಯಾಂ ಹರಿವಾಸರೇ ॥16॥

ಶುಕ್ಲೇ ವಾಪ್ಯಥ ಕೃಷ್ಣೇ ವಾ ಭೌಮೇನಾಪಿ ಸಮನ್ವಿತೇ ।
ಪಾಂಡುತೀರ್ಥಂ ಸಮಾಯಾಂತಿ ಗಂಗಾದೀನಿ ಜಗತ್ತ್ರಯೇ ॥17॥

ತತ್ರ ಸ್ನಾತ್ವಾ ಚ ಗಾಂ ದತ್ತ್ವಾ ಮುಚ್ಯತೇ ಪ್ರತಿಬಂಧಕಾತ್ ।
ಅಶ್ವಯುಕ್ಶುಕ್ಲಪಕ್ಷೇ ಚ ಸಪ್ತಮ್ಯಾಂ ಭಾನುವಾಸರೇ ॥18॥

ಉತ್ತರಾಷಾಢಯುಕ್ತಾಯಾಂ ತಥಾ ಪಾಪವಿನಾಶನಮ್ ।
ಉತ್ತರಾಭಾದ್ರಯುಕ್ತಾಯಾಂ ದ್ವಾದಶ್ಯಾಂ ವಾ ಸಮಾಗತಾಃ ॥19॥

ಶಾಲಗ್ರಾಮಶಿಲಾಂ ದತ್ತ್ವಾ ಸ್ನಾತ್ವಾ ಚ ವಿಧಿಪೂರ್ವಕಮ್ ।
ಮುಚ್ಯತೇ ಸರ್ವಪಾಪೈಶ್ಚ ಜನ್ಮಕೋಟಿಶತೋದ್ಭವೈಃ ॥20॥

ಧನುರ್ಮಾಸೇ ಸಿತೇ ಪಕ್ಷೇ ದ್ವಾದಶ್ಯಾಮರುಣೋದಯೇ ।

ಉಪನಯನ ವಿವಾಹಗಳನ್ನು ಸಹ ಮಾಡಿಸಬೇಕು.

ಸೂರ್ಯನು ಮೇಷರಾಶಿಯಲ್ಲಿರುವಾಗ ಹುಣ್ಣಿಮೆಯಂದು ಚಿತ್ರಾನಕ್ಷತ್ರವು ಪ್ರಾಪ್ತವಾದಾಗ ಎಲ್ಲ ತೀರ್ಥಗಳೂ ಆಕಾಶಗಂಗೆಯಲ್ಲಿರುವವು. ಆಗ ಸುವರ್ಣದಾನ ಮತ್ತು ಕನ್ಯಾದಾನಗಳು ಪ್ರಶಸ್ತವೆನಿಸಿರುವವು.

ಸೂರ್ಯನು ವೃಷಭಲಗ್ನಕ್ಕೆ ಶುಕ್ಲ ಅಥವಾ ಕೃಷ್ಣಪಕ್ಷದ ದ್ವಾದಶಿಯ ತಿಥಿಯು ಮಂಗಳವಾರ ಬರುತ್ತಿರಲು, ಆ ಹರಿವಾಸರದ ಮೂರುದಿನ ಜಗತ್ತಿನ ತೀರ್ಥಗಳೆಲ್ಲವೂ ಪಾಂಡುತೀರ್ಥದಲ್ಲಿ ನೆಲಸಿರುವವು. ಆ ತೀರ್ಥದಲ್ಲಿ ಗೋದಾನವು ಶ್ರೇಷ್ಠವಾಗಿದ್ದು ಸಂಸಾರಬಂಧವಿಮೋಚಕವಾಗಿದೆ.

ಆಶ್ವಯುಜ ಮಾಸದ ಶುಕ್ಲಪಕ್ಷದ ಸಪ್ತಮಿ ಭಾನುವಾರ ಉತ್ತರಾನಕ್ಷತ್ರ ಯುಕ್ತವಾಗಿದ್ದಲ್ಲಿ, ಅಥವಾ ದ್ವಾದಶೀ ಉತ್ತರಾಭಾದ್ರಪದ ಯುಕ್ತವಾಗಿದ್ದರೂ ಸಹ ಸಕಲ ತೀರ್ಥಗಳು ಪಾಪವಿನಾಶನ ತೀರ್ಥದಲ್ಲಿ ಸನ್ನಿಹಿತವಾಗುವವು. ಅಂದು ಸಾಲಗ್ರಾಮ ದಾನವು ಅತ್ಯಂತ ಪ್ರಶಸ್ತವಗಿದ್ದು, ಅಸಂಖ್ಯ ಜನ್ಮಗಳ ಪಾಪವನ್ನು ಮೋಚನಗೊಳಿಸುವದು.

ಧನುರ್ಮಾಸದ ಶುಕ್ಲಪಕ್ಷದ ದ್ವಾದಶಿಯ ಅರುಣೋದಯ ವೇಳೆಯಲ್ಲಿ ಎಲ್ಲ ತೀರ್ಥಗಳೂ

ಆಯಾಂತಿ ಸರ್ವತೀರ್ಥಾನಿ ಸ್ವಾಮಿಪುಷ್ಕರಿಣೀಜಲೇ ॥231॥

ತತ್ರ ಸ್ನಾತ್ವಾ ನರಃ ಸದ್ಯೋ ಮುಕ್ತಿಮೇತಿ ನ ಸಂಶಯಃ ।
ಯಸ್ಯ ಜನ್ಮಸಹಸ್ರೇಷು ಪುಣ್ಯಮೇವಾರ್ಜಿತಂ ಪುರಾ ॥22॥

ತಸ್ಯ ಸ್ನಾನಂ ಭವೇದ್ವಿಪ್ರಾ ನಾನ್ಯಸ್ಯ ತ್ವಕೃತಾತ್ಮನಃ ।
ವಿಭವಾನುಗುಣಂ ದಾನಂ ಕಾರ್ಯಂ ತತ್ರ ಯಥಾವಿಧಿ ॥23॥

ಶಾಲಗ್ರಾಮಶಿಲಾದಾನಂ ಗಾಂ ದದ್ಯಾಚ್ಚ ವಿಶೇಷತಃ ॥24॥

ಯೇ ಶೃಣ್ವಂತಿ ಕಥಾಂ ವಿಷ್ಣೋಃ ಸದಾ ಭುವನಪಾವನೀಮ್ ।
ತೇ ವೈ ಮನುಷ್ಯಲೋಕೇಽಸ್ಮಿನ್ವಿಷ್ಣುಭಕ್ತಾ ಭವಂತಿ ಹಿ ॥25॥

ಯದ್ಯಶಕ್ತಃ ಸದಾ ಶ್ರೋತುಂ ಕಥಾಂ ಭುವನಪಾವನೀಮ್ ।
ಮುಹೂರ್ತಂ ವಾ ತದರ್ಧಂ ವಾ ಕ್ಷಣಂ ವಾ ವಿಷ್ಣುಸತ್ಕಥಾಮ್।
ಯಃ ಶೃಣೋತಿ ನರೋ ಭಕ್ತ್ಯಾ ದುರ್ಗತಿರ್ನಾಸ್ತಿ ತಸ್ಯ ಹಿ ॥26॥

ಯತ್ಫಲಂ ಸರ್ವಯಜ್ಞೇಷು ಸರ್ವದಾನೇಷು ಯತ್ಫಲಮ್ ।
ಸಕೃತ್ಪುರಾಣಶ್ರವಣಾತ್ತತ್ಫಲಂ ವಿಂದತೇ ನರಃ ॥27॥

ಕಲೌ ಯುಗೇ ವಿಶೇಷೇಣ ಪುರಾಣಶ್ರವಣಾದೃತೇ ।
ನಾಸ್ತಿ ಧರ್ಮಃ ಪರಂ ಪುಂಸಾಂ ನಾಸ್ತಿ ಮುಕ್ತಿಪ್ರದಂ ಪರಮ್ ॥28॥

ಸ್ವಾಮಿಪುಷ್ಕರಿಣಿಯಲ್ಲಿ ಸನ್ನಿಹಿತವಾಗಿದ್ದು ಅಂದು ಅಲ್ಲಿ ಸ್ನಾನಮಾಡುವ ಮನುಷ್ಯನು ತನ್ನ ಪಾಪಗಳನ್ನು ಕಳೆದುಕೊಂಡು ಮುಕ್ತಿಯನ್ನೇ ಹೊಂದುವನು. ಸಾವಿರಾರು ಜನ್ಮಗಳಲ್ಲಿ ಮಾಡಿದ ಪುಣ್ಯಪ್ರಭಾವದಿಂದ ಈ ತೀರ್ಥಗಳಲ್ಲಿ ವಿಧಿಯುಕ್ತವಾದ ಸ್ನಾನವನ್ನು ಮಾಡಲು ಸಾಧ್ಯವಾಗುವದು. ಪಾಪಿಗಳು ಈ ತೀರ್ಥಗಳಲ್ಲಿ ಸ್ನಾನವನ್ನು ಮಾಡಲು ಸಮರ್ಥರಾಗಿರುವದಿಲ್ಲ. ಐಶ್ವರ್ಯಾನುಸಾರುವಾಗಿ ದಾನವನ್ನು ಈ ತೀರ್ಥಗಳ ಬಳಿ ಮಾಡಬೇಕು. ವಿಶೇಷವಾಗಿ ಸಾಲಿಗ್ರಾಮ ದಾನ ಮತ್ತು ಗೋದಾನಗಳು ಹೆಚ್ಚು ಪ್ರಶಸ್ತವಾಗಿರುವವು.

ಯಾರು ಭುವನ ಪಾವನವಾದ ಭಗವಂತನ ಕಥೆಯನ್ನು ಯಾವಾಗಲೂ ಕೇಳುವರೋ ಅವರೇ ಭೂಮಿಯಲ್ಲಿ ವಿಷ್ಣುಭಕ್ತರೆನಿಸುವರು. ಯಾವಾಗಲೂ ಭಗವಂತನ ಕಥೆಯನ್ನು ಕೇಳಲು ಅಶಕ್ತನಾದಲ್ಲಿ ಮಂಗಲಕರವಾದ ಭಗವಂತನ ದಿವ್ಯವಾದ ಕಥೆಯನ್ನು ಒಂದು ಮುಹೂರ್ತ, ಅಥವಾ ಅರ್ಧ ಮುಹೂರ್ತ ಅಥವಾ ಒಂದು ಕ್ಷಣವಾದರೂ ಸಹ ಭಕ್ತಿಯಿಂದ ಕೇಳುವರೋ ಅವರಿಗೆ ದುರ್ಗತಿಯಿರುವದಿಲ್ಲ. ಅಷ್ಟೇ ಅಲ್ಲದೇ ಸರ್ವಯಜ್ಞಗಳನ್ನು ಆಚರಿಸಿದಲ್ಲಿ,

ಪುರಾಣಶ್ರವಣಂ ವಿಷ್ಣೋರ್ನಾಮಸಂಕೀರ್ತನಂ ಪರಮ್ ।
ಉಭೇ ಏವ ಮನುಷ್ಯಾಣಾಂ ಪುಣ್ಯದ್ರುಮಮಹಾಫಲೇ ॥29॥

ಪಿಬನ್ನೇವಾಮೃತಂ ಯತ್ನಾದೇಕಃ ಸ್ಯಾದಜರಾಮರಃ ।
ವಿಷ್ಣೋಃ ಕಥಾಮೃತಂ ಕುರ್ಯಾತ್ಕುಲಮೇವಾಜರಾಮರಮ್ ॥30॥

ಬಾಲೋ ಯುವಾಽಥ ವೃದ್ಧೋ ವಾ ದರಿದ್ರೋ ದುರ್ಭಗೋಽಪಿ ವಾ ।
ಪುರಾಣಜ್ಞಃ ಸದಾ ವಂದ್ಯಃ ಸ ಪೂಜ್ಯಃ ಸ ಕೃತಾತ್ಮಭಿಃ ॥31॥

ನೀಚಬುದ್ಧಿಂ ನ ಕುರ್ವೀತ ಪುರಾಣಜ್ಞೇ ಕದಾಚನ ।
ಯಸ್ಯ ವಕ್ತ್ರೋದ್ಗತಾ ವಾಣೀ ಕಾಮಧೇನುಃ ಶರೀರಿಣಾಮ್ ॥32॥

ಭವಕೋಟಿಸಹಸ್ರೇಷು ಭೂತ್ವಾ ಭೂತ್ವಾಽವಸೀದತಾಮ್ ।
ಯೋ ದದಾತ್ಯಪುನರ್ವೃತ್ತಿಂ ಕೋಽನ್ಯಸ್ತಸ್ಮಾತ್ಪರೋ ಗುರುಃ ॥33॥

ವ್ಯಾಸಾಸನಸಮಾರೂಢೋ ಯದಾ ಪೌರಾಣಿಕೋ ದ್ವಿಜಃ ।
ಆಸಮಾಪ್ತೇಃ ಪ್ರಸಂಗಸ್ಯ ನಮಸ್ಕುರ್ಯಾನ್ನ ಕಸ್ಯಚಿತ್ ॥34॥

ಸರ್ವದಾನಗಳನ್ನು ಮಾಡಿದಲ್ಲಿ ಯಾವ ಫಲವು ದೊರೆಯುವದೋ ಆ ಫಲವು ಒಂದು ಬಾರಿ ಪುರಾಣಕಥೆಯ ಶ್ರವಣದಿಂದ ಬರುವದು. ಕಲಿಯುಗದಲ್ಲಿ ಪುರಾಣಶ್ರವಣಕ್ಕಿಂತ ಶ್ರೇಷ್ಠವಾದ ಮೋಕ್ಷಪ್ರದವಾದ ಧರ್ಮವಾವದೂ ಇರುವದಿಲ್ಲ. ಮನುಷ್ಯನ ಪುಣ್ಯದ ಫಲವೇ ಪುರಾಣ ಶ್ರವಣ ಮತ್ತು ವಿಷ್ಣುವಿನ ನಾಮಸಂಕೀರ್ತನಗಳು. ವಿಷ್ಣುವಿನ ಕಥಾಶ್ರವಣವು ಕುಲಸಂತಾರಕ ವಾಗಿರುವದು.

ಸಂಸಾರ ಸಾಗರದಲ್ಲಿ ಕೋಟಿ ಕೋಟಿ ಜನ್ಮಗಳನ್ನೆತ್ತಿ ಬಳಲುವ, ದುಃಖತಪ್ತರಾದ ಜೀವರಾಶಿಗಳಿಗೆ ಸಂಸಾರ ಸಂತಾಪ ಪರಿಹಾರಕವಾದ ಮುಕ್ತಿದಾಯಕವಾದ ಭಗವತ್ಕಥೆಯನ್ನು ಉಪದೇಶಿಸಿ, ಅಪುನರ್ಭವವೆನಿಸಿದ ವೈಕುಂಠವನ್ನು ಕೊಡಿಸುವನೋ ಅಂತಹ ಪುರಾಣ ವಕ್ತಾರಗಿಂತಲೂ ಮಿಗಿಲಾದ ಸ್ನೇಹಿತರು ಯಾರೂ ಇರುವದಿಲ್ಲ. ಪುರಾಣಜ್ಞನು ಬಾಲಕ, ಯುವಕ, ವೃದ್ಧ, ಬಡವ, ದುರ್ಭಗ (ವಿಕಲಾಂಗ)ನಾಗಿದ್ದರೂ ಸಹ ಅವನು ವಂದ್ಯನೇ ಆಗಿರುವನು. ಅವನ ಬಾಯಿಂದ ಬರುವ ಮಾತು ಜೀವಿಗಳಿಗೆ ಕಾಮಧೇನುವೆನಿಸಿರುವದು. ವ್ಯಾಸಪೀಠದ ಮುಂದೆ ಕುಳಿತ ಪುರಾಣವಕ್ತಾರನು ಪುರಾಣದ ಸಮಾಪ್ತಿಯ ವರೆಗೆ ಯಾರಿಗೂ ಸಹ ನಮಸ್ಕರಿಸಬಾರದು.

ದುರ್ಜನಾವೃತ ಪ್ರದೇಶದಲ್ಲಿ, ನಾಯಿ, ಶೂದ್ರರು, ಇವರಿಂದಾವೃತವಾದ ಸ್ಥಳಗಳಲ್ಲಿ, ದ್ಯೂತಾದಿ

ನ ದುರ್ಜನಸಮಾಕೀರ್ಣೇ ನ ಶೂದ್ರಶ್ವಾಪದಾವೃತೇ ।
ದೇಶೇ ನ ದ್ಯೂತಸದನೇ ವದೇತ್ಪುಣ್ಯಕಥಾಂ ಸುಧೀಃ ॥35॥

ಸುಗ್ರಾಮೇ ಸುಜನಾಕೀರ್ಣೇ ಸುಕ್ಷೇತ್ರೇ ದೇವತಾಲಯೇ ।
ಪುಣ್ಯೇ ವಾಥ ನದೀತೀರೇ ವದೇತ್ಪುಣ್ಯಕಥಾಂ ಸುಧೀಃ ॥36॥

ಶ್ರದ್ಧಾಭಕ್ತಿಸಮಾಯುಕ್ತಾ ನಾನ್ಯಕಾರ್ಯೇಷು ಲಾಲಸಾಃ ।
ವಾಗ್ಯತಾ ಶುಚಯೋಽವ್ಯಗ್ರಾಃ ಶ್ರೋತಾರಃ ಪುಣ್ಯಭಾಗಿನಃ ॥37॥

ಅಭಕ್ತ್ಯಾ ಯೇ ಕಥಾಂ ಪುಣ್ಯಾಂ ಶೃಣ್ವಂತಿ ಮನುಜಾಧಮಾಃ ।
ತೇಷಾಂ ಪುಣ್ಯಫಲಂ ನಾಸ್ತಿ ದುಃಖಂ ಜನ್ಮನಿ ಜನ್ಮನಿ ॥38॥

ಪುರಾಣಂ ಯೇ ತು ಸಂಪೂಜ್ಯ ತಾಂಬೂಲಾದ್ಯೈರುಪಾಯನೈಃ ।
ಶೃಣ್ವಂತಿ ಚ ಕಥಾಂ ಪುಣ್ಯಾಂ ನ ದರಿದ್ರಾ ನ ಪಾಪಿನಃ ॥39॥

ಕಥಾಯಾಂ ಕಥ್ಯಮಾನಾಯಾಂ ಯೇ ಗಚ್ಛಂತ್ಯನ್ಯತೋ ನರಾಃ ।
ಭೋಗಾಂತರೇ ಪ್ರಣಶ್ಯಂತಿ ತೇಷಾಂ ದಾರಾಶ್ಚ ಸಂಪದಃ ॥40॥

ಸೋಷ್ಣೀಷಮಸ್ತಕಾ ಯೇ ಚ ಕಥಾಂ ಶೃಣ್ವಂತಿ ಪಾವನೀಮ್ ।
ತೇ ಬಾಲಿಶಾಃ ಪ್ರಜಾಯಂತೇ ಪಾಪಿನೋ ಮನುಜಾಧಮಾಃ ॥41॥

ಕ್ರೀಡಾಗೃಹಗಳಲ್ಲಿ ಭಗವಂತನ ಮಂಗಲ ಮಯ ಚರಿತ್ರೆಯನ್ನು ಕೀರ್ತನ ಮಾಡದೇ ಸಜ್ಜನರಿಂದ ಸಮಾಕೀರ್ಣವಾದ ಸ್ಥಳಗಳಲ್ಲಿ, ದೇವತಾ ಮಂದಿರಗಳಲ್ಲಿ, ಪುಣ್ಯಕರ ನದೀತೀರಗಳಲ್ಲಿ ಭಗವಂತನ ಕಥೆಯನ್ನು ಹೇಳಬೇಕು. ಶ್ರೋತೃಗಳು ಶ್ರದ್ಧಾಭಕ್ತಿ ಸಮನ್ವಿತರಾಗಿ, ಅನ್ಯಾಸಕ್ತರಾಗದೇ, ವಾಙ್ನಿಯಮವನ್ನು ಪಾಲಿಸುತ್ತಾ, ಲೌಕಿಕ ಚಿಂತನೆಯಲ್ಲಿ ಆಸಕ್ತರಾಗದೇ ಭಗವಂತನಲ್ಲಿ ಮನಸ್ಸಿಟ್ಟು ಅವನ ಮಂಗಳ ಚರಿತೆಯನ್ನು ಶ್ರವಣಮಾಡುವವರು ಪುಣ್ಯಶಾಲಿಗಳಾಗುವರು.

ಭಗವಂತನ ಭಕ್ತಿಯಿಲ್ಲದವರು ಭಗವಂತನ ಕಥೆಯನ್ನು ಕೇಳುವ ಮನುಜಾಧಮರು ಯಾವದೇ ಪುಣ್ಯವನ್ನು ಹೊಂದದೇ ಯಾವಾಗಲೂ ದುಃಖವನ್ನೇ ಅನುಭವಿಸುವರು.

ಪುರಾಣಕಥೆಯು ನಡೆಯುವ ಸಂದರ್ಭದಲ್ಲಿ ಕಥೆಯನ್ನು ಬಿಟ್ಟು ಬೇರೆಡೆ ಹೋಗುವ ಮನುಷ್ಯರ ಮಡದಿ-ಮಕ್ಕಳು, ಭೋಗಸಾಧನಗಳೆಲ್ಲವೂ ನಾಶವನ್ನು ಹೊಂದುವವು. ತಲೆಗೆ ರುಮಾಲು ಮೊದಲಾದ ಐಶ್ವರ್ಯ ದ್ಯೋತಕ ಪದಾರ್ಥಗಳನ್ನು ಧರಿಸಿ ಪುರಾಣವನ್ನು ಕೇಳುವವರು ಮೂಢರಾಗಿ ಹುಟ್ಟುವರು. ತಾಂಬೂಲವನ್ನು ತಿನ್ನುತ್ತಾ ಪುರಾಣವನ್ನು ಕೇಳುವವರು ನರಕದಲ್ಲಿ

ತಾಂಬೂಲಂ ಭಕ್ಷಯಂತೋ ಯೇ ಕಥಾಂ ಶೃಣ್ವಂತಿ ಪಾವನೀಮ್।
ಶ್ವವಿಷ್ಠಾಂ ಭಕ್ಷಯಂತ್ಯೇತೇ ನರಕೇ ಚ ಪತಂತಿ ಹಿ ॥42॥

ಯೇ ಚ ತುಂಗಾಸನಾರೂಢಾಃ ಕಥಾಂ ಶೃಣ್ವಂತಿ ದಾಮ್ಭಿಕಾಃ ।
ಅಕ್ಷಯ್ಯಾನ್ನರಕಾನ್ಭುಕ್ತ್ವಾ ತೇ ಭವಂತ್ಯೇವ ವಾಯಸಾಃ ॥43॥

ಯೇ ಚ ವೀರಾಸನಾರೂಢಾಃ ಯೇ ಚ ಸಿಂಹಾಸನಸ್ಥಿತಾಃ ।
ಶೃಣ್ವಂತಿ ಸತ್ಕಥಾಂ ತೇ ವೈ ಭವಂತ್ಯರ್ಜುನಪಾದಪಾಃ ॥44॥

ಅಸಂಪ್ರಣಮ್ಯ ಶೃಣ್ವಂತೋ ವಿಷವೃಕ್ಷಾ ಭವಂತಿ ಹಿ ।
ತಥಾ ಶಯಾನಾಃ ಶೃಣ್ವಂತೋ ಭವಂತ್ಯಜಗರಾ ಹಿ ತೇ ॥45॥

ಯಃ ಶೃಣೋತಿ ಕಥಾಂ ವಕ್ತುಃ ಸಮಾನಾಸನಸಂಸ್ಥಿತಃ ।
ಗುರುತಲ್ಪಸಮಂ ಪಾಪಂ ಸಂಪ್ರಾಪ್ಯ ನರಕಂ ವ್ರಜೇತ್ ॥46॥

ಯೇ ನಿಂದಂತಿ ಪುರಾಣಜ್ಞಂ ಸತ್ಕಥಾಂ ಪಾಪಹಾರಿಣೀಮ್ ।
ತೇ ವೈ ಜನ್ಮಶತಂ ಮರ್ತ್ಯಾಃ ಶುನಕಾಶ್ಚ ಭವಂತಿ ಹಿ ॥47॥

ಕಥಾಯಾಂ ಕೀರ್ತ್ಯಮಾನಾಯಾಂ ಯೇ ವದಂತಿ ದುರುತ್ತರಮ್ ।
ತೇ ಗರ್ದಭಾಃ ಪ್ರಜಾಯಂತೇ ಕೃಕಲಾಸಾಸ್ತತಃ ಪರಮ್ ॥48॥

ಕದಾಚಿದಪಿ ಯೇ ಪುಣ್ಯಾಂ ನ ಶೃಣ್ವಂತಿ ಕಥಾಂ ನರಾಃ ।
ತೇ ಭುಕ್ತ್ವಾ ನರಕಾನ್ಘೋರಾನ್ಭವಂತಿ ವನಸೂಕರಾಃ ॥49॥

ಬಿದ್ದು ನಾಯಿಯ ಮಲವನ್ನು ಭಕ್ಷಿಸುವರು. ಉನ್ನತಾಸನದಲ್ಲಿ ಕುಳಿತು ಪುರಾಣವನ್ನು ಕೇಳುವವರು ಮರಣಾನಂತರದಲ್ಲಿ ಅನೇಕ ನರಕಗಳನ್ನನುಭವಿಸಿ ಕೊನೆಗೆ ಕಾಗೆಯಾಗಿ ಹುಟ್ಟುವರು. ಸಿಂಹಾಸನವನ್ನೇರಿ ವೀರಾಸನದಿಂದ ಭಗವತ್ಕಥೆಯನ್ನು ಕೇಳುವವರು ಅರ್ಜುನ ವೃಕ್ಷವಾಗಿ ಜನಿಸುವರು. ಪುರಾಣವಕ್ತಾರನಿಗೆ ನಮಸ್ಕರಿಸದೇ ಪುರಾಣವನ್ನು ಕೇಳುವವರು ವಿಷವೃಕ್ಷವಾಗಿ ಹುಟ್ಟುವರು. ಪುರಾಣ ವಕ್ತೃವಿಗೆ ಸಮಾಸನದಲ್ಲಿ ಕುಳಿತು ಕಥೆಯನ್ನು ಕೇಳುವವನು ಗುರುತಲ್ಪ ಗಮನ ಸಮಾನವಾದ ಪಾಪವನ್ನು ಹೊಂದಿ ನರಕವನ್ನು ಹೊಂದುವನು. ಪುರಾಣಜ್ಞನನ್ನು, ಪಾಪಹಾರಕವಾದ ಭಗವತ್ಕಥೆಯನ್ನು ನಿಂದಿಸುವ ಜನರು ನೂರಾರು ಜನ್ಮ ನಾಯಿಯಾಗಿ ಹುಟ್ಟುವರು. ಕಥೆಯು ನಡೆದಾಗ ದುಷ್ಟ ವಾಕ್ಯಗಳನ್ನು ನುಡಿಯುವವರು ಕತ್ತೆಯಾಗಿ ಹುಟ್ಟುವರು. ಯಾವಾಗೋ ಒಮ್ಮೆ ಭಗವತ್ಕಥೆಯನ್ನು ಕೇಳುವವರು ಕಾಡುಹಂದಿಯಾಗಿ ಜನಿಸುವರು. ಪುರಾಣವು ನಡೆದಾಗ ವಿಘ್ನವನ್ನು ಮಾಡುವ ವ್ಯಕ್ತಿಗಳು ಬಹುಕಾಲ ನರಕವಾಸವನ್ನು ಮಾಡಿ

ಕಥಾಯಾಂ ಕೀರ್ತ್ಯಮಾನಾಯಾಂ ವಿಘ್ನಂ ಕುರ್ವಂತಿ ಯೇ ನರಾಃ।
ಕೋಟ್ಯಬ್ದಂ ನರಕಾನ್ಭುಕ್ತ್ವಾ ಭವಂತಿ ಗ್ರಾಮಸೂಕರಾಃ ॥50॥

ಯೇ ಕಥಾಮನುಮೋದಂತೇ ಕೀರ್ತ್ಯಮಾನಂ ನರೋತ್ತಮಾಃ ।
ಅಶೃಣ್ವಂತೋಽಪಿ ತೇ ಯಾಂತಿ ಶಾಶ್ವತಂ ಪದಮವ್ಯಯಮ್ ॥51॥

ಯೇ ಶ್ರಾವಯಂತಿ ಮನುಜಾಃ ಪುಣ್ಯಾಂ ಪೌರಾಣಿಕೀಂ ಕಥಾಮ್ ।
ಕಲ್ಪಕೋಟಿಶತಂ ಸಾಗ್ರಂ ತಿಷ್ಠಂತಿ ಬ್ರಹ್ಮಣಃ ಪದೇ ॥52॥

ಆಸನಾರ್ಥಂ ಪ್ರಯಚ್ಛಂತಿ ಪುರಾಣಜ್ಞಸ್ಯ ಯೇ ನರಾಃ ।
ಕಂಬಲಾಜಿನವಾಸಾಂಸಿ ತಥಾ ಮಂಚಕಮೇವ ಚ ॥53॥

ಸ್ವರ್ಗಲೋಕಂ ಸಮಾಸಾದ್ಯ ಭುಕ್ತ್ವಾ ಭೋಗಾನ್ಯಥೇಪ್ಸಿತಾನ್ ।
ಸ್ಥಿತ್ವಾ ಬ್ರಹ್ಮಾದಿಲೋಕೇಷು ಪದಂ ಯಾಂತಿ ನಿರಾಮಯಮ್ ॥54॥

ಪುರಾಣಸ್ಯಪ್ರಯಚ್ಛಂತಿ ಯೇ ಚ ಸೂತ್ರಂ ನವಂ ವರಮ್ ।
ಭೋಗಿನೋ ಜ್ಞಾನಸಂಪನ್ನಾಸ್ತೇ ಭವಂತಿ ಭವೇ ಭವೇ ॥55॥

ಯೇ ಮಹಾಪಾತಕೈರ್ಯುಕ್ತಾ ಹ್ಯುಪಪಾತಕಿನಶ್ಚ ಯೇ ।
ಪುರಾಣಶ್ರವಣಾದೇವ ತೇ ಯಾಂತಿ ಪರಮಂ ಪದಮ್ ॥56॥

ವೇಂಕಟಾದ್ರೇಸ್ತು ಮಾಹಾತ್ಮ್ಯಂ ಶ್ರುತ್ವಾ ತೇ ಋಷಯಸ್ತತಃ ।

ಅನಂತದಲ್ಲಿ ಊರಹಂದಿಯಾಗಿ ಹುಟ್ಟಿ ತಮ್ಮ ಕರ್ಮಶೇಷವನ್ನು ಭೋಗಿಸುವರು.

ಪುರಾಣವನ್ನು ಕೇಳಿ ಆನಂದಿಸುವ ವ್ಯಕ್ತಿಗಳು ಭಗವಂತನ ಶಾಶ್ವತ ವಾದ ಸ್ಥಾನವನ್ನು ಹೊಂದುತ್ತಾರೆ. ಯಾರು ಪುಣ್ಯಕಥೆಗಳನ್ನು ಕೀರ್ತನ ಮಾಡುವರೋ ಅವರು ಬ್ರಹ್ಮಲೋಕವನ್ನು ಹೊಂದುವರು. ಕಂಬಳಿ, ಕೃಷ್ಣಾಜಿನ, ಮಂಚ ಮೊದಲಾದವುಗಳನ್ನು ಆಸನಾರ್ಥವಾಗಿ ಪುರಾಣಜ್ಞನಿಗೆ ಕೊಡುವವರು ಸ್ವರ್ಗಲೋಕವನ್ನು ಹೊಂದಿ, ಬಹು ಭೋಗಗಳನ್ನು ಪಡೆದು ಕೊನೆಗೆ ಕ್ಷಯರಹಿತವಾದ ಸ್ಥಾನವನ್ನು ಹೊಂದುವರು. ಪುರಾಣಗ್ರಂಥದ ಗೋಸ್ಕರವಾಗಿ ಯಾರು ಹೊಸದಾದ ಸೂತ್ರ (ದಾರ) ವನ್ನು ದಾನಮಾಡುವರೋ ಅವರು ಜನ್ಮಜನ್ಮಗಳಲ್ಲಿ ಜ್ಞಾನಿಗಳಾಗಿ ಜನಿಸುವರು. ಪುರಾಣಶ್ರವಣವನ್ನು ಮಾಡುವವರು ತಮ್ಮೆಲ್ಲ ಮಹಾಪಾತಕ ಉಪಪಾತಕಗಳನ್ನು ಕಳೇದುಕೊಂಡು ಮೋಕ್ಷವನ್ನು ಹೊಂದುವರು.

ವ್ಯಾಸಪ್ರಸಾದಸಂಪನ್ನಂ ಸೂತಂ ಪೌರಾಣಿಕೋತ್ತಮಮ್ ।
ಪೂಜಯಿತ್ವಾ ಯಥಾನ್ಯಾಯಂ ಪ್ರಹರ್ಷಮತುಲಂ ಗತಾಃ ॥57॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ **'ಶ್ರೀಸರ್ವತೀರ್ಥಮಹಿಮೋಪಸಂಹಾರಪೂರ್ವಕ ಪುರಾಣಶ್ರವಣಕ್ರಿಯಾದ್ಯನುವರ್ಣನಮ್'** ನಾಮ ಸಪ್ತವಿಂಶೋಽಧ್ಯಾಯಃ ॥27॥

* * *

ಹೀಗೆ ವೇಂಕಟಾದ್ರಿಯ ಮಹಿಮೆಯನ್ನು ಕೇಳಿದ ಶೌನಕಾದಿಗಳು ಪುರಾಣ ವಕ್ತಾರನಾದ ವ್ಯಾಸಾನುಗ್ರಹ ಪಾತ್ರನಾದ ಸೂತಾಚಾರ್ಯರನ್ನು ಯಥಾಯೋಗ್ಯವಾಗಿ ಪೂಜಿಸಿ ಬಹುಸಂತುಷ್ಟರಾದರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ **ಸರ್ವತೀರ್ಥಮಹಿಮೋಪಸಂಹಾರಪೂರ್ವಕ ಪುರಾಣಶ್ರವಣಕ್ರಿಯಾದ್ಯನು ವರ್ಣನವೆಂಬ** ಇಪ್ಪತ್ತೇಳನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥಾಷ್ಟಾವಿಂಶೋಽಧ್ಯಾಯಃ

[ಸೂತಶೌನಕಸಂವಾದೇ ಕಟಾಹತೀರ್ಥಪ್ರಶಂಸನಮ್]

ಋಷಯಃ ಊಚುಃ–

ಸೂತ ಸರ್ವಾರ್ಥತತ್ತ್ವಜ್ಞ ವೇದವೇದಾಂಗಪಾರಗ ।
ಶ್ರೀವೇಂಕಟಾಚಲೇ ತೀರ್ಥಂ ಕಟಾಹಾಖ್ಯಂ ಸುಪಾವನಮ್ ॥1॥

ಶ್ರೂಯತೇ ತಸ್ಯ ಮಾಹಾತ್ಮ್ಯಂ ಘುಷ್ಯತೇ ಚ ಜಗತ್ತ್ರಯೇ ।
ಅಸ್ಮಾಕಮೇತದ್ಬ್ರೂಹಿ ತ್ವಂ ಕೃಪಯಾ ವ್ಯಾಸಶಾಸಿತಃ ॥2॥

ಶ್ರೀ ಸೂತ ಉವಾಚ–

ಪುರಾ ವೈ ನಾರದಃ ಶ್ರೀಮಾನ್ ಬ್ರಹ್ಮಪುತ್ರೋ ಮಹಾನೃಷಿಃ ।
ದೃಷ್ಟ್ವಾ ವೈ ನೈಮಿಷಾರಣ್ಯಂ ಸಂಪ್ರಾಪ್ತೋ ದ್ವಿಜಸತ್ತಮಃ ॥3॥

ತದಾನೀಂ ಬ್ರಹ್ಮಪುತ್ರಂ ತಮರ್ಘ್ಯಪಾದ್ಯಾದಿಭಿಃ ಶುಭೈಃ ।
ಪೂಜಾಯಿತ್ವಾ ಯಥಾನ್ಯಾಯಂ ಪವಿತ್ರೇ ಚ ಕುಶಾಸನೇ ॥4॥

ಸನ್ನಿವೇಶ್ಯ ಮಹಾಭಕ್ತ್ಯಾ ವಿನಯಾನತಕಂಧರಾಃ ।
ಪ್ರಣಮ್ಯ ಪ್ರಾರ್ಥಯಾಮಾಸುರಿಮೇ ಸರ್ವೇ ಮಹರ್ಷಯಃ ॥5॥

## ಇಪ್ಪತ್ತೆಂಟನೆಯ ಅಧ್ಯಾಯ

[ಕಟಾಹ ತೀರ್ಥಮಾಹಾತ್ಮ್ಯವರ್ಣನ.]

ನೈಮಿಷಾರಣ್ಯದಲ್ಲಿ ಋಷಿಗಳು ಸೂತಾಚಾರ್ಯರನ್ನು ಕುರಿತು ವೇಂಕಟಾಚಲದಲ್ಲಿಯ ಪಾವನವಾದ ಕಟಾಹ ತೀರ್ಥದ ಮಾಹಾತ್ಮ್ಯವನ್ನು ತಿಳಿಸಲು ಬೇಡಿಜೊಂಡು, ಬ್ರಹ್ಮದೇವರ ಮಾನಸ ಪುತ್ರರಾದ ನಾರದರಿಂದ ವರ್ಣಿತವಾದ ಕಟಾಹತೀರ್ಥದ ಶ್ರೇಷ್ಠವಾದ ಚರಿತೆಯನ್ನು ಅನುವಾದಿಸಿಕೊಂಡು ಮತ್ತಷ್ಟು ಚರಿತೆಯನ್ನು ತಿಳಿಸಲು ಸೂತರನ್ನು ಬೇಡಿದರು. ಆಗ ಸೂತರಿ ಋಷಿಗಳು ನೈಮಿಷಾರಣ್ಯಕ್ಕೆ ಆಗಮಿಸಿದ ನಾರದರನ್ನು ಸತ್ಕರಿಸಿ, ಯಥಾಯೋಗ್ಯವಾಗಿ ಫಲಮೂಲಗಳಿಂದ, ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ, ದರ್ಭಾಸನದಲ್ಲಿ ಅವರನ್ನು ಕುಳ್ಳರಿಸಿ,

ತ್ವಾಂ ವಿನಾ ನಾರದ ಶ್ರೀಮನ್ನಸ್ಮಾಕಂ ಭುವನತ್ರಯೇ ।
ಧರ್ಮೋಪದೇಶಕಃ ಕಶ್ಚಿನ್ನಾಸ್ತಿ ನಾಸ್ತಿ ಮಹರ್ಷಿಷು ॥6॥

ವೇಂಕಟಾದ್ರೌ ಮಹಾಪುಣ್ಯೇ ಸರ್ವದೇವನಿಷೇವಿತೇ ।
ವೈಕುಂಠಾದಾಗತೇ ದಿವ್ಯೇ ಸಿದ್ಧಗಂಧರ್ವಸೇವಿತೇ ॥7॥

ಕಟಾಹತೀರ್ಥಮಾಹಾತ್ಮ್ಯಂ ವರ್ಣಯಾದ್ಯ ವನೌಕಸಾಮ್ ॥8॥

ಶ್ರೀನಾರದ ಉವಾಚ–

'ಶೃಣುಧ್ವಮೃಷಯಃ ಸರ್ವೇ ಶೌನಕಾದ್ಯಾ ಮಹೌಜಸಃ ।
ಕಟಾಹತೀರ್ಥಮಾಹಾತ್ಮ್ಯಂ ಕೋ ವೇತ್ತಿ ಭುವನತ್ರಯೇ ॥9॥

ಮಹಾದೇವೋ ವಿಜಾನಾತಿ ತಸ್ಯ ತೀರ್ಥಸ್ಯ ವೈಭವಮ್ ।
ಯಾನಿ ಕಾನಿ ಚ ಪುಣ್ಯಾನಿ ಬ್ರಹ್ಮಾಂಡಾಂತರ್ಗತಾನಿ ವೈ ॥10॥

ತಾನಿ ಗಂಗಾದಿತೀರ್ಥಾನಿ ಸ್ವಪಾಪಪರಿಶುದ್ಧಯೇ ।
ಕಟಾಹತೀರ್ಥಸೇವಾಂ ಚ ಕುರ್ವಂತಿ ದ್ವಿಜಸತ್ತಮಾಃ ॥11॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚೇತರಜಾತಯಃ ।
ಸ್ಪೃಶಂತಿ ತಜ್ಜಲಮಿತಿ ನ ಪಿಬೇದ್ಯೋ ವಿಮೂಢಧೀಃ ॥12॥

ಸ ಹಿ ಚಂಡಾಲತಾಂ ಪ್ರಾಪ್ಯ ಕುಂಭೀಪಾಕೇ ಪತಿಷ್ಯತಿ ।
ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತೀಶ್ವರಃ ।

'ಕಟಾಹತೀರ್ಥದ ಮಾಹಾತ್ಮ್ಯವನ್ನು ತಿಳಿಸಿರಿ' ಎಂದು ಸಂಪ್ರಾರ್ಥಿಸಿದಾಗ ನಾರದರು ಅವರನ್ನು ಪ್ರಶಂಸಿಸಿ, ಕಟಾಹ ತೀರ್ಥದ ಮಾಹಾತ್ಮ್ಯವನ್ನು ಹೇಳಲುಪಕ್ರಮಿಸುತ್ತಾರೆ.

ನಾರದರು ನುಡಿಯುತ್ತಾರ– ಕಟಾಹತೀರ್ಥವು ಭೂಮಿಯಲ್ಲಿ ಅತ್ಯಂತಶ್ರೇಷ್ಠವಾಗಿದ್ದು ಅದರ ಮಾಹಾತ್ಮ್ಯವನ್ನು ಯಾರು ತಿಳಿದಿರುವರು? ಮಹಾದೇವನು ಆ ತೀರ್ಥದ ಮಾಹಾತ್ಮ್ಯವನ್ನು ತಿಳಿದಿರಬಹುದು. ಲೋಕಪಾವಕಗಳಾದ ಗಂಗಾದಿತೀರ್ಥಗಳೂ ಸಹ ತಮ್ಮ ಪಾಪದ ಪರಿಹಾರಕ್ಕೆ ಅಲ್ಲಿಯೇ ಆಗಮಿಸಿ ಕಟಾಹತೀರ್ಥದ ಸ್ನಾನದಿಂದ ತಮ್ಮಪಾಪಗಳನ್ನು ಕಳೆದುಕೊಳ್ಳುವರು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು ಇವರೆಲ್ಲರೂ ಸಹ ಕಟಾಹತೀರ್ಥದ ಸೇವನೆಯಿಂದ ಪುಣ್ಯವನ್ನು ಹೊಂದುವರು. ಇದರಲ್ಲಿ ಔದಾಸೀನ್ಯವನ್ನು ಮಾಡಿದಲ್ಲಿ ಪಾಪವನ್ನೇ ಪಡೆಯುವರು. ಸ್ಮೃತೀತಿಹಾಸಪುರಾಣಗಳಲ್ಲಿ ಈ ತೀರ್ಥವು ಮಹಾಪಾತಕ ನಾಶಕವೆಂದು ಬಹು ಪ್ರಕಾರದಿಂದ

ಸೇವಯಾ ತಸ್ಯ ತೀರ್ಥಸ್ಯ ಪ್ರಾಪ್ನೋತಿ ಪರಮಂ ಪದಮ್ ॥13॥

ಶ್ರುತಿಸ್ಮೃತಿಪುರಾಣೇಷು ತತ್ತೀರ್ಥಸ್ಯ ಪ್ರಶಂಸನಮ್ ।
ಬಹುಧಾ ವರ್ಣ್ಯತೇ ಪಂಚಮಹಾಪಾತಕನಾಶನಮ್ ॥14॥

ಅತ್ಯದ್ಭುತತರಂ ವಿಪ್ರಾಃ ಸರ್ವಲೋಕೈಕಪಾವನಮ್ ।
ಬ್ರಹ್ಮಹತ್ಯಾಯುತಂ ಚಾಪಿ ಸುರಾಪಾನಾಯುತಂ ತಥಾ ॥15॥

ಆಯುತಂ ಗುರುದಾರಾಣಾಂ ಗಮನಂ ಪಾಪಕಾರಣಮ್ ।
ಸ್ತೇಯಾಯುತಂ ಸುವರ್ಣಾನಾಂ ತತ್ಸಂಸರ್ಗಾಶ್ಚ ಕೋಟಯಃ ॥16॥

ಶೀಘ್ರಂ ವಿಲಯಮಾಯಾಂತಿ ತಸ್ಯ ತೀರ್ಥಸ್ಯ ಸೇವಯಾ ॥17॥

ಯಾನಿ ನಿಷ್ಕೃತಿಹೀನಾನಿ ಪಾಪಾನಿ ವಿವಿಧಾನಿ ಚ ।
ತಾನಿ ಸರ್ವಾಣಿ ನಶ್ಯಂತಿ ತೀರ್ಥಸ್ಯಾಸ್ಯ ನಿಷೇವಣಾತ್ ॥18॥

ಇದಂ ತೀರ್ಥಂ ಮಹಾಪುಣ್ಯಂ ಭಗವತ್ಪಾದನಿಸ್ಸೃತಮ್ ।
ಕುಷ್ಠಾದಿರೋಗಯುಕ್ತೋ ಯಃ ಪ್ರತ್ಯಹಂ ಚ ಪಿಬೇದಿದಮ್ ।

ಸೋಽಪಿ ರೋಗವಿಹೀನಃ ಸನ್ವಿಷ್ಣುಲೋಕಂ ಚ ಗಚ್ಛತಿ ॥19॥

ಭಗವಾನ್ ಶಂಕರೋ ದೇವೋ ರಹಸ್ಯಾನುಭವೇ ಪುರಾ ।
ಪಾರ್ವತ್ಯೈ ಕಥಯಾಮಾಸ ತಸ್ಯ ತೀರ್ಥಸ್ಯ ವೈಭವಮ್ ॥20॥

ಉಕ್ತೇಷ್ವೇತೇಷು ಸಂದೇಹೋ ನ ಕರ್ತವ್ಯಃ ಕದಾಚನ ।
ಅರ್ಥವಾದೋಽಯಮಿತಿ ಚ ನ ವಕ್ತವ್ಯಂ ಕದಾಚನ ॥21॥

ವರ್ಣಿಸಲ್ಪಟ್ಟಿದ್ದು ಅಸಂಖ್ಯವಾದ ಬ್ರಹ್ಮಹತ್ಯೆ, ಸುರಾಪಾನ, ಗುರುಪತ್ನೀಗಮನ, ಬಂಗಾರದ ಕಳ್ಳತನವೇ ಮೊದಲಾದ ಪ್ರಾಯಶ್ಚಿತ್ತ ರಹಿತವಾದ ಪಾಪಗಳಿಗೆ ವಿನಾಶಕವಾಗಿರುವದು. ಭಗವಂತನ ಪಾದದಿಂದ ನಿಸ್ಸೃತವಾದ ಈ ತೀರ್ಥವನ್ನು ನಿತ್ಯದಲ್ಲಿ ಸೇವಿಸಿದಲ್ಲಿ ಕುಷ್ಠಾದಿ ರೋಗಗಳೂ ಸಹ ನಾಶವಾಗುವವು. ಪೂಜ್ಯರಾದ ರುದ್ರದೇವರು ಹಿಂದೆ ಪಾರ್ವತಿಗೆ ಏಕಾಂತದಲ್ಲಿ ಈ ತೀರ್ಥದ ಮಾಹಾತ್ಮೆಯನ್ನು ಹೇಳಿ, 'ಇದರ ಮಾಹಾತ್ಮ್ಯ ವಿಷಯದಲ್ಲಿ ಯಾವ ಸಂದೇಹವನ್ನು ಮಾಡಬಾರದು. ಇದು ಸ್ತುತಿರೂಪ ಅರ್ಥವಾದ ಪರವೆಂದು ತಿಳಿಯದೇ ಕಟಾಹತೀರ್ಥದ ಮಾಹಾತ್ಮ್ಯವೆಲ್ಲವೂ ಅತ್ಯಂತ ಸತ್ಯವೆಂದು ತಿಳಿಯಬೇಕು. ಯಾರು ಈ ತೀರ್ಥದ ಮಾಹಾತ್ಮ್ಯವರ್ಣನೆಯನ್ನು ಅರ್ಥವಾದವೆಂದು ನುಡಿಯುವರೋ ಅವರ ನಾಲಿಗೆಯ ಮೇಲೆ

ಯೇಽರ್ಥವಾದಮಿದಂ ಬ್ರೂಯುಸ್ತೇಷಾಂ ವೈ ನಾಸ್ತಿಕಾತ್ಮನಾಮ್ ।
ಜಿಹ್ವಾಗ್ರೇ ಪರಶುಂ ತಪ್ತಂ ಕ್ಷಿಪಂತಿ ಯಮಕಿಂಕರಾಃ ॥22॥

ತಸ್ಮಾತ್ಕಟಾಹತೀರ್ಥಂ ತು ಸೇವನೀಯಂ ಪ್ರಯತ್ನತಃ ।
ಸರ್ವದುಃಖಪ್ರಶಮನಮಪವರ್ಗಫಲಪ್ರದಮ್ ॥23॥

ಯತ್ರ ಪೀತ್ವಾ ನರೋ ಭಕ್ತ್ಯಾ ಸರ್ವಾನ್ಕಾಮಾನವಾಪ್ನುಯಾತ್ ।
ಏವಮುಕ್ತ್ವಾ ಮಹಾಭಾಗಃ ಕಾಶೀಂ ತ್ರೈಲೋಕ್ಯಪಾವನೀಮ್ ॥24॥

ಸಂಪ್ರಾಪ್ತೋ ನಾರದಃ ಶ್ರೀಮಾನ್ಸೂತ ಪೌರಾಣಿಕೋತ್ತಮ ।
ಸಂಕ್ಷೇಪತಶ್ಚ ಭಗವಾನ್ನೈಮಿಷೇ ಹ್ಯುಕ್ತವಾನ್ಖಲು ॥25॥

ಇದಾನೀಂ ಶ್ರೋತುಮಿಚ್ಛಾಮಃ ಕಟಾಹಸ್ಯ ಚ ವೈಭವಮ್ ।
ಸುವಿಸ್ತರೇಣ ಚಾಸ್ಮಾಕಂ ವದ ಸೂತ ಕೃಪಾವಶಾತ್ ॥26॥

ಶ್ರೀ ಸೂತ ಉವಾಚ–

ಭೋ ಭೋಸ್ತಪೋಧನಾಃ ಸರ್ವೇ ನೈಮಿಷಾರಣ್ಯವಾಸಿನಃ ।
ಕಟಾಹತೀರ್ಥಮಾಹಾತ್ಮ್ಯಂ ಶೃಣುಧ್ವಂ ದ್ವಿಜಸತ್ತಮಾಃ ॥27॥

ಕಟಾಹತೀರ್ಥಂ ಭೋ ವಿಪ್ರಾಃ ಸರ್ವಲೋಕೇಷು ವಿಶ್ರುತಮ್ ।
ಸರ್ವಸಂಪತ್ಕರಂ ಶುದ್ಧಂ ಸರ್ವಪಾಪಪ್ರಣಾಶನಮ್ ॥28॥

ಕಾಸಿದ ಕೊಡಲಿಯನ್ನು ಇಟ್ಟಿ ಯಮಕಿಂಕರರು ಶಿಕ್ಷೆಯನ್ನು ಕೊಡುತ್ತಾರೆ. ಆದ್ದರಿಂದ ಕಟಾಹತೀರ್ಥವು ಅತ್ಯಂತ ಸೇವನೀಯವಾಗಿದ್ದು ದುಃಖನಾಶಕವಾಗಿ ಮೋಕ್ಷಾದಿ ಪುರುಷಾರ್ಥ ಸಾಧನವಾಗಿರುವದು. ಇದರ ಪಾನಮಾತ್ರದಿಂದ ಮನುಷ್ಯನು ತನ್ನೆಲ್ಲ ಬಯಕೆಗಳನ್ನು ಪೂರ್ಣಗೊಳಿಸಿಕೊಳ್ಳುವನು' ಎಂದು ನುಡಿದು ಪಾರ್ವತೀ ಸಮೇತನಾಗಿ ಕಾಶೀ ಪಟ್ಟಣಕ್ಕೆ ಹೋದರೆಂದು ನಾರದರು ಸಂಕ್ಷೇಪವಾಗಿ ಕಟಾಹತೀರ್ಥದ ಮಾಹಾತ್ಮ್ಯವನ್ನು ತಿಳಿಸಿರುವರು. ಹೇ ಸೂತರೇ! ನೀವು ನಮಗೆ ಅದನ್ನು ಮತ್ತಷ್ಟು ವಿಸ್ತಾರವಾಗಿ ತಿಳಿಸಿರಿ' ಎಂದು ಸಂಪ್ರಾರ್ಥಿಸಿದರು. ಆಗ ಸೂತಾಚಾರ್ಯರು ಶೌನಕಾದಿಗಳನ್ನು ಕುರಿತು ಕಟಾಹ ತೀರ್ಥದ ಮಾಹಾತ್ಮ್ಯವನ್ನು ವರ್ಣನ ಮಾಡುವರು.

ಕಟಾಹ ತೀರ್ಥವು ಜಗತ್ತಿನಲ್ಲಿ ಅತ್ಯಂತ ಪವಿತ್ರವೆಂದು ಪ್ರಸಿದ್ಧವಾಗಿರುವದು. ಸರ್ವಸಂಪತ್ಪ್ರದಾ–ಯಕವೂ, ಸರ್ವಪಾಪಪ್ರಶಾಮಕವೂ, ಶುದ್ಧವೂ, ದುಃಸ್ವಪ್ನನಾಶಕವೂ, ಮಹಾವಿಘ್ನವಿಘಾತಕವೂ

ದುಃಸ್ವಪ್ನನಾಶನಂ ಹ್ಯೇತನ್ಮಹಾಪಾತಕನಾಶನಮ್ ।
ಮಹಾವಿಘ್ನಪ್ರಶಮನಂ ಮಹಾಶಾಂತಿಕರಂ ನೃಣಾಮ್ ॥29॥

ಸ್ಮೃತಿಮಾತ್ರೇಣ ಯತ್ಪುಂಸಾಂ ಸರ್ವಪಾಪನಿಷೂದನಮ್ ।
ಮಂತ್ರೇಣಾಷ್ಟಾಕ್ಷರೇಣೈವ ಪಿಬೇತ್ತೀರ್ಥಂ ಮನೋಹರಮ್ ॥30॥

ಅಥವಾ ಕೇಶವಾದ್ಯೈಶ್ಚ ನಾಮಭಿರ್ವಾ ಪಿಬೇಜ್ಜಲಮ್ ।
ಯದ್ವಾ ನಾಮತ್ರಯೇಣಾಪಿ ಪಿಬೇತ್ತೀರ್ಥಂ ಶುಭಪ್ರದಮ್ ॥31॥

ಅಹೋಸ್ವಿದ್ವೇಂಕಟೇಶಸ್ಯ ಮಂತ್ರೇಣಾಷ್ಟಾಕ್ಷರೇಣ ವೈ ।
ಪಿಬೇತ್ಕಟಾಹತೀರ್ಥಂ ತದ್ಭುಕ್ತಿಮುಕ್ತಿಪ್ರದಾಯಕಮ್ ॥32॥

ವಿನಾ ಮಂತ್ರೇಣ ಯೋ ವಿಪ್ರಃ ಸಂಪಿಬೇತ್ತೀರ್ಥಮುತ್ತಮಮ್ ।
'ಪಾಪಂ ಮೇ ನಾಶಯ ಕ್ಷಿಪ್ರಂ ಜನ್ಮಾಂತರಕೃತಂ ಮಹತ್' ॥33॥

ಇತ್ಯುಕ್ತ್ವಾ ಸ ಪಿಬೇನ್ನಿತ್ಯಂ ಮೋಕ್ಷಮಾರ್ಗೈಕಸಾಧನಮ್ ।
ಸ್ವಾಮಿಪುಷ್ಕರಿಣೀಸ್ನಾನಂ ವರಾಹಶ್ರೀಶದರ್ಶನಮ್ ॥34॥

ಕಟಾಹತೀರ್ಥಪಾನಂ ಚ ತ್ರಯಂ ತ್ರೈಲೋಕ್ಯದುರ್ಲಭಮ್ ।
ಬಹುನಾ ಕಿಮಿಹೋಕ್ತೇನ ಬ್ರಹ್ಮಹತ್ಯಾದಿನಾಶನಮ್ ॥35॥

ಪುರಾ ಕಶ್ಚಿದ್ ದ್ವಿಜೋ ಮೋಹಾತ್ಕೇಶವಾಖ್ಯೋ ಬಹುಶ್ರುತಮ್ ।

ಆದ ಈ ತೀರ್ಥವು ಸ್ಮರಣಮಾತ್ರದಿಂದ ಮನುಷ್ಯರ ಎಲ್ಲ ದೋಷಗಳನ್ನು ದೂರಮಾಡಿ ಸರ್ವವಿಧ ಶಾಂತಿಯನ್ನುಂಟುಮಾಡುವದು. ಅಷ್ಟಾಕ್ಷರ ಮಂತ್ರದಿಂದ, ಅಥವಾ ಕೇಶವಾದಿ ಇಪ್ಪತ್ನಾಲ್ಕು ನಾಮಗಳಿಂದ, ಅಥವಾ ಭಗವಂತನ ಯಾವದಾದರೊಂದು ನಾಮದಿಂದ ಅಥವಾ ವೇಂಕಟೇಶಾಷ್ಟಾಕ್ಷರ ಮಂತ್ರದಿಂದ ಕಟಾಹತೀರ್ಥದ ಜಲವನ್ನು ಅಭಿಮಂತ್ರಿಸಿ ಯಾರು ಕುಡಿದಲ್ಲಿ ಅದು ಅವರಿಗೆ ಭುಕ್ತಿ-ಮುಕ್ತಿಪ್ರದಾಯಕವಾಗಿರುವದು. ಮಂತ್ರವನ್ನು ಉಚ್ಚರಿಸದೇ ಕೇವಲ 'ನನ್ನ ಜನ್ಮ-ಜನ್ಮಾಂತರಗಳ ಪಾಪವನ್ನು ನಾಶಮಾಡು' ಎಂದು ತೀರ್ಥವನ್ನು ಸಂಪ್ರಾರ್ಥಿಸಿ, ಜಲವನ್ನು ಪಾನಮಾಡಿದರೂ ಸಹ ಅದು ಮುಕ್ತಿಗೆ ಸಾಧನವೆನಿಸುವದು. ಜಗತ್ತಿನಲ್ಲಿ ಸ್ವಾಮಿಪುಷ್ಕರಿಣಿಯ ಸ್ನಾನ, ವರಾಹ ದೇವರ ದರ್ಶನ ಮತ್ತು ಕಟಾಹ ತೀರ್ಥದ ಪಾನ- ಇವು ಅತ್ಯಂತ ದುರ್ಲಭವಾಗಿರುವವು. ಹೆಚ್ಚೇನು ಹೇಳುವದಿದೆ? ಬ್ರಹ್ಮಹತ್ಯಾದಿ ಪಾಪಗಳೂ ಸಹ ಈ ತೀರ್ಥದ ಪಾನಮಾತ್ರದಿಂದ ದೂರಹೋಗುವವು. ಹಿಂದೆ ಕೇಶವನೆಂಬ ಬ್ರಾಹ್ಮಣನು ಮೋಹದಿಂದ ವೇದ-ವೇದಾಂಗಗಳನ್ನು ಅರಿತಿದ್ದ ಬ್ರಾಹ್ಮಣನನ್ನು ಖಡ್ಗದಿಂದ ಕೊಂದು ಬ್ರಹ್ಮಹತ್ಯಾ

ಹತ್ವಾ ಖಡ್ಗೇನ ದುರ್ಬುದ್ಧ್ಯಾ ಬ್ರಹ್ಮಹತ್ಯಾಮವಾಪ್ತವಾನ್ ||36||

ಸೋಽಪಿ ತಸ್ಮಿನ್ಮಹಾತೀರ್ಥೇ ಪೀತ್ವಾ ಜಲಮನುತ್ತಮಮ್ ।
ಕೇಶವಾಖ್ಯೋ ಮಹಾಪಾಪೀ ವಿಮುಕ್ತೋ ಬ್ರಹ್ಮಹತ್ಯಯಾ ||37||

ಋಷಯಃ ಊಚುಃ–

'ಕಸ್ಯ ಪುತ್ರಃ ಕೇಶವಾಖ್ಯಃ ಕಥಂ ಪ್ರಾಪ್ತೋ ಭಯಂಕರೀಮ್ ।
ಬ್ರಹ್ಮಹತ್ಯಾಮತಿಕ್ರೂರಾಮಸ್ಮಾಕಂ ವಕ್ತುಮರ್ಹಸಿ' ||38||

ಶ್ರೀ ಸೂತ ಉವಾಚ–

ತುಂಗಭದ್ರಾತಟೇ ರಮ್ಯೇ ಗಂಧರ್ವೈರುಪಸೇವಿತೇ ।
ಅಗ್ರಹಾರೋ ಮಹಾನಾಸೀದ್ವೇದಾಢ್ಯ ಇತಿ ನಾಮತಃ ||39||

ತಸ್ಮಿನ್ವೇದಪುರೇ ರಮ್ಯೇ ಬ್ರಾಹ್ಮಣಾ ವೇದಪಾರಗಾಃ ।
ಶಬ್ದಶಾಸ್ತ್ರಪರಾಃ ಸರ್ವೇ ಜ್ಯೋತಿಃಶಾಸ್ತ್ರಪ್ರವರ್ತಕಾಃ ||40||

ಮೀಮಾಂಸಾತರ್ಕಶಾಸ್ತ್ರಜ್ಞಾಃ ಸರ್ವೇ ವೇದಾಂತವಾದಿನಃ ।
ಧರ್ಮಶಾಸ್ತ್ರೇಷು ನಿರತಾ ಅನ್ನದಾನಪರಾಃ ಸದಾ ||41||

ಪುತ್ರವಂತಶ್ಚ ತೇ ಸರ್ವೇ ಹ್ಯಗ್ರಹಾರೇ ಮಹಾಜನಾಃ ।
ವೇದಾಢ್ಯೇಽಪ್ಯಗ್ರಹಾರೇ ವೈ ಪದ್ಮನಾಭೋ ಇತಿ ಶ್ರುತಃ ||42||

ತಸ್ಯ ಪುತ್ರ ಕೇಶವಾಖ್ಯಃ ಸರ್ವಕರ್ಮಬಹಿಷ್ಕೃತಃ ।

ಪಾಪವನ್ನು ಹೊಂದಿ ಕೊನೆಗೆ ಕಟಾಹತೀರ್ಥದ ಪಾನದಿಂದ ಶುದ್ಧನಾದನು' ಎಂದು ತಿಳಿಸಿದರು. ಇದನ್ನು ಕೇಳಿದ ಶೌನಕಾದಿಗಳು ಆ ವೃತ್ತಾಂತವನ್ನು ವಿವರಿಸಲು ಪ್ರಾರ್ಥಿಸಿಕೊಂಡಾಗ ಸೂತಾಚಾರ್ಯರು ವಿಸ್ತಾರವಾಗಿ ಕಟಾಹತೀರ್ಥದ ಮಾಹಾತ್ಮ್ಯವನ್ನು ಹೇಳಲಾರಂಭಿಸಿದರು.

ಪೂರ್ವದಲ್ಲಿ ತುಂಗಭದ್ರಾ ನದಿಯ ದಡದಲ್ಲಿ ವೇದಾಢ್ಯವೆಂಬ ಅಗ್ರಹಾರವಿದ್ದು, ವೇದವೇದಾಂಗ ಪಾರಂಗತರೂ, ಶಬ್ದಶಾಸ್ತ್ರ ನಿಪುಣರೂ, ಜ್ಯೋತಿಃಶಾಸ್ತ್ರವನ್ನು ತಿಳಿದವರೂ, ನ್ಯಾಯ ಮೀಮಾಂಸಾ ಶಾಸ್ತ್ರಗಳಲ್ಲಿ ನಿಪುಣರಾದ ಧರ್ಮಶಾಸ್ತ್ರದಲ್ಲಿ ಆಸಕ್ತರಾದ ಅನ್ನದಾನ ನಿರತರಾದ ಬ್ರಾಹ್ಮಣರಿಂದ ತುಂಬಿಕೊಂಡಿತ್ತು. ಅಂತಹ ಬ್ರಾಹ್ಮಣರಲ್ಲಿ ಪದ್ಮನಾಭನೆಂಬ ಬ್ರಾಹ್ಮಣನೊಬ್ಬನಿಗೆ ಕೇಶವನೆಂಬ ಮಗನಿದ್ದನು. ಸದಾ ದುಷ್ಕರ್ಮ ರತನಾಗಿದ್ದ ಅವನು ಸರ್ವಕರ್ಮಬಹಿಷ್ಕೃತನಾಗಿ, ತನ್ನ ತಂದೆ ತಾಯಿಗಳನ್ನು, ಪತಿವ್ರತೆಯಾದ ಮಡದಿಯನ್ನು ಬಿಟ್ಟು ವೇಶ್ಯಾಸ್ತ್ರೀಯರ ಸಂಗವನ್ನು

ಮಾತರಂ ಪಿತರಂ ತ್ಯಕ್ತ್ವಾ ಭಾರ್ಯಾಮಪಿ ಪತಿವ್ರತಾಮ್ ॥43॥

ಸರ್ವದಾ ಗಣಿಕಾಸಕ್ತೋ ವೇಶ್ಯಾಗಾರಂ ವಿವೇಶ ಹ ।
ದಿನದ್ವಯೇ ಚ ತಾಂ ವೇಶ್ಯಾಮನುಭೂಯ ದ್ವಿಜಸ್ತತಃ ॥44॥

ನಿಷ್ಕದ್ವಯಂ ಪ್ರದಾತವ್ಯಂ ಹಸ್ತೇ ದತ್ತ್ವಾ ಗತಃ ಸುಖಮ್ ।
ವೇಶ್ಯಯಾ ಚಾಧನಸ್ತ್ಯಕ್ತಸ್ತತ್ಸಂಯೋಗೈಕತತ್ಪರಃ ॥45॥

ಇತಸ್ತತಶ್ಚೋರಯಿತ್ವಾ ಬಹುದ್ರವ್ಯಾಣಿ ಸಂತತಮ್ ।
ದತ್ತ್ವಾ ತಯಾ ಚಿರಂ ರೇಮೇ ತದ್ಗೃಹೇ ಬುಭುಜೇ ಚ ಸಃ ॥46॥

ಏಕೇನ ಚಷಕೇನಾಸೌ ತಯಾ ಸಹ ಸುರಾಂ ಪಪೌ ।
ಸ ಕದಾಚಿತ್ಕಿರಾತೈಸ್ತು ದ್ರವ್ಯಂ ಹರ್ತುಂ ಯಯೌ ದ್ವಿಜಃ ॥47॥

ವಿಪ್ರಸ್ಯ ಕಸ್ಯಚಿದ್ಗೇಹೇ ಸೋಽಪಿ ಕೈರಾತವೇಷಧೃಕ್ ।
ಕೇಶವೋ ವಿಪ್ರಬಂಧುರ್ವೈ ಸಾಹಸೀ ಖಡ್ಗಹಸ್ತವಾನ್ ॥48॥

ತದ್ಗೃಹಸ್ವಾಮಿನಂ ವಿಪ್ರಂ ಹತ್ವಾ ಖಡ್ಗೇನ ಸಾಹಸಾತ್ ।
ಸಮಾದಾಯ ಬಹುದ್ರವ್ಯಂ ವೇಶ್ಯಾಗಾರಂ ವಿವೇಶ ಹ ॥49॥

ತಂ ಯಾಂತಮನುಯಾತಿ ಸ್ಮ ಬ್ರಹ್ಮಹತ್ಯಾ ಭಯಂಕರೀ ।
ನಿಲವಸ್ತ್ರಧರಾ ಭೀಮಾ ಭೃಶಂ ರಕ್ತಶಿರೋರುಹಾ ॥50॥

ಗರ್ಜಂತೀ ಸಾಟ್ಟಹಾಸಂ ಸಾ ಕಂಪಯಂತೀ ಚ ರೋದಸೀ ।

ಮಾಡಿದನು. ವೇಶ್ಯೆಯರಿಗೆ ಹಣವನ್ನು ಕೊಡುವದರಗೋಸ್ಕರವಾಗಿ ಕೈಯಲ್ಲಿದ್ದ ಧನವು ಖಾಲಿಯಾದಾಗ, ಅಲ್ಲಲ್ಲಿ ಕಳ್ಳತನವನ್ನು ಮಾಡಿ, ಧನವನ್ನು ಸಂಪಾದಿಸಿಕೊಂಡು ವೇಶ್ಯೆಯರೊಡನೆ ಬಹುಕಾಲ ಕ್ರೀಡಿಸಿದನು. ವೇಶ್ಯೆಯರೊಂದಿಗೆ ಏಕಪಾತ್ರದಲ್ಲಿ ಮದಿರೆಯನ್ನು ಪಾನಮಾಡಿ ಸುಖಿಸಿದನು.

ಒಂದು ಬಾರಿ ಕೇಶವನು ಕಳ್ಳತನಕ್ಕಾಗಿ ಕಿರಾತ ವೇಷವನ್ನು ಧರಿಸಿ ವೇದಾಂತ ಕೋವಿದನಾದ ಬ್ರಾಹ್ಮಣನ ಮನೆಗೆ ಹೋಗಿ, ಖಡ್ಗದಿಂದ ಮನೆಯ ಯಜಮಾನನಾದ ವೃದ್ಧನಾದ ಪಂಡಿತನಾದ ಬ್ರಾಹ್ಮಣನನ್ನು ಸಂಹರಿಸಿ ಬಹಳಷ್ಟು ಧನವನ್ನು ತೆಗೆದುಕೊಂಡು ವೇಶ್ಯೆಯ ಮನೆಗೆ ಹೋದನು. ಬ್ರಾಹ್ಮಣನನ್ನು ಸಂಹರಿಸಿದುದರಿಂದ ಉಂಟಾದ ಬ್ರಹ್ಮಹತ್ಯಾದೋಷವು ಕಪ್ಪುಬಟ್ಟೆಯನ್ನು ಧರಿಸಿದ, ಭಯಂಕರಳಾದ ಸ್ತ್ರೀರೂಪವನ್ನು ಧರಿಸಿ, ಗಟ್ಟಿಯಾಗಿ ಕೂಗುತ್ತಾ, ನಗುತ್ತಾ, ಅಳುತ್ತಾ ಅವನನ್ನು

ಅನುದ್ರುತಸ್ತಯಾ ವಿಪ್ರೋ ಬಭ್ರಾಮ ಜಗತೀತಲೇ ॥51॥

ಏವಂ ಭ್ರಮನ್ ಧರಾಂ ಸರ್ವಾಂ ವಿಪ್ರಬಂಧುರ್ದುರಾತ್ಮವಾನ್ ।
ಸ್ವಗ್ರಾಮಂ ಪ್ರಯಯೌ ಭೀತ್ಯಾ ಶೌನಕಾದ್ಯಾ ಮಹೌಜಸಃ ॥52॥

ಅನುದ್ರುತಸ್ತಯಾ ಭೀತಃ ಪ್ರಯಯೌ ಸ್ವನಿಕೇತನಮ್ ।
ಬ್ರಹ್ಮಹತ್ಯಾಽಪ್ಯನುದ್ರುತ್ಯ ತೇನ ಸಾಕಂ ಗೃಹಂ ಯಯೌ ॥53॥

ಜನಕಂ 'ರಕ್ಷರಕ್ಷೇ'ತಿ ಕೇಶವಃ ಶರಣಂ ಯಯೌ ।
'ಮಾ ಭೈಷೀ'ರಿತಿ ಸ ಪ್ರೋಚ್ಯ ಪಿತಾ ರಕ್ಷಿತುಮುದ್ಯತಃ ॥54॥

ಕ್ರೂರೈನೋ ಬ್ರಹ್ಮಹತ್ಯಾ ಸಾ ಜನಕಂ ಪ್ರತ್ಯಭಾಷತ ॥55॥

ಬ್ರಹ್ಮಹತ್ಯೋವಾಚ–

'ಮೈನಂ ತ್ವಂ ಪ್ರತಿಗೃಹ್ಣೀಷ್ವ ಪದ್ಮನಾಭ ದ್ವಿಜೋತ್ತಮ ।
ಅಯಂ ಸುರಾಪೀ ಸ್ತೇಯೀ ಚ ಬ್ರಹ್ಮಹಾ ಚಾತಿಪಾತಕೀ ॥56॥

ಮಾತೃದ್ರೋಹೀ ಪಿತೃದ್ರೋಹೀ ಭಾರ್ಯಾತ್ಯಾಗೀ ಚ ದುಷ್ಟಧೀಃ ।
ಗಣಿಕಾಸಕ್ತಚಿತ್ತಶ್ಚ ಹ್ಯೇನಂ ಮುಂಚ ದುರಾತ್ಮಕಮ್ ॥58॥

ಗೃಹ್ಣಾಸಿ ಚೇತ್ಸುತಂ ವಿಪ್ರ ಮಹಾಪಾತಕಿನಂ ವೃಥಾ ।
ತ್ವದ್ಭಾರ್ಯಾಮಸ್ಯ ಭಾರ್ಯಾಂ ಚ ತ್ವಾಂ ಚ ಪುತ್ರಮಿಮಂ ದ್ವಿಜ ॥59॥

ಭಕ್ಷಯಿಷ್ಯಾಮಿ ವಂಶಂ ಚ ತಸ್ಮಾನ್ಮುಂಚ ದುರಾತ್ಮಕಮ್ ।
ಇಮಂ ತ್ಯಜಸಿ ಚೇತ್ಪುತ್ರಂ ಯುಷ್ಮಾನ್ಮುಂಚಾಮಿ ಸಾಂಪ್ರತಮ್ ॥60॥

ಭಯಗೊಳಿಸುವವಳಾಗಿ ಕೇಶವನನ್ನು ಹಿಂಬಾಲಿಸಿದಳು. ಅವಳಿಂದ ಹಿಂಬಾಲಿಸಲ್ಪಟ್ಟ ಕೇಶವನು ಅವಳಿಂದ ತಪ್ಪಿಸಿಕೊಳ್ಳಲು ಜಗತ್ತಿನೆಲ್ಲೆಡೆ ಸಂಚರಿಸಿದನು. ಬ್ರಹ್ಮಹತ್ಯೆಯೂ ಸಹ ಅವನನ್ನು ಹಿಂಬಾಲಿಸಿದಳು.

ನಾನಾಕ್ಷೇತ್ರಗಳನ್ನು ಸಂಚರಿಸಿದ ಕೇಶವನು ತನ್ನ ಹುಟ್ಟೂರಿಗೆ ಬಂದನು. ಭಯಗ್ರಸ್ತನಾದ ಕೇಶವನು ತನ್ನ ತಂದೆಯ ಮನೆಗೆ ಹೋಗಿ ತಂದೆಯನ್ನು 'ರಕ್ಷಿಸು, ರಕ್ಷಿಸು' ಎಂದು ಪ್ರಾರ್ಥಿಸಿದನು. ಅವನ ತಂದೆಯು 'ಹೆದರದಿರು' ಎಂದು ನುಡಿದು ಅವನನ್ನು ರಕ್ಷಿಸಲುದ್ಯುಕ್ತನಾದನು. ಆಗ ಅವನನ್ನು ಹಿಂಬಾಲಿಸುತ್ತಿದ್ದ ಬ್ರಹ್ಮಹತ್ಯೆಯು 'ಮಾತಾಪಿತೃದ್ರೋಹಿಯೂ, ಗುರುದ್ರೋಹಿಯೂ, ಭಾರ್ಯಾದ್ರೋಹಿಯೂ ಆದ ಇವನು ಬ್ರಹ್ಮಹತ್ಯಾದೋಷಯುಕ್ತನಾಗಿರುವನು. ಸುರಾಪಾನವನ್ನು

ಏಕಸ್ಯಾರ್ಥೇ ಕುಲಂ ಹಂತುಮರ್ಹಸಿ ತ್ವಂ ಮಹಾಮತೇ' ।
ಇತ್ಯುಕ್ತಃ ಸ ತಯಾ ತತ್ರ ಪದ್ಮನಾಭೋಽಭ್ರವೀಚ್ಚ ತಾಮ್ ॥61॥

ಪದ್ಮನಾಭ ಉವಾಚ–

'ಬಾಧತೇ ಮಾಂ ಸುತಸ್ನೇಹಃ ಕಥಂ ಪುತ್ರಂ ಪರಿತ್ಯಜೇ' ।
ಬ್ರಹ್ಮಹತ್ಯಾ ತದಾಕರ್ಣ್ಯ ಪದ್ಮನಾಭಂ ತಮಬ್ರವೀತ್ ॥62॥

ಬ್ರಹ್ಮಹತ್ಯೋವಾಚ–

'ಪುತ್ರೋಽಯಂ ಪತಿತೋಽಭೂತ್ತೇ ವರ್ಣಾಶ್ರಮಬಹಿಷ್ಕೃತಃ ।
ಪುತ್ರೇಽಸ್ಮಿನ್ ಮಾ ಕುರು ಸ್ನೇಹಂ ನಿಂದಿತಂ ತಸ್ಯ ದರ್ಶನಮ್' ॥63॥

ಇತ್ಯುಕ್ತ್ವಾ ಬ್ರಹ್ಮಹತ್ಯಾ ಸಾ ಪದ್ಮನಾಭಸ್ಯ ಪಶ್ಯತಃ ।
ಹಸ್ತೇನ ಪ್ರಜಹಾರಾಸ್ಯ ಸುತಂ ಕೇಶವನಾಮಕಮ್ ॥64॥

ರುರೋದ 'ತಾತ ತಾತೇ'ತಿ ಜನಕಂ ಪ್ರಬ್ರುವನ್ಮುಹುಃ ।
ರುರುದುರ್ಜನಕೋ ಮಾತಾ ಭಾರ್ಯಾ ತಸ್ಯ ದುರಾತ್ಮನಃ ॥65॥

ತಸ್ಮಿನ್ಕಾಲೇ ಮಹಾಭಾಗೋ ಭರದ್ವಾಜೋ ಮಹಾಮುನಿಃ ।
ದಿಷ್ಟ್ಯಾ ಸಮಾಯಯೌ ಯೋಗೀ ಶೌನಕಾದ್ಯಾ ಮಹೌಜಸಃ ॥66॥

ಪದ್ಮನಾಭೋಽಥ ತಂ ದೃಷ್ಟ್ವಾ ಭರದ್ವಾಜಂ ಮಹಾಮುನಿಮ್ ।

ಮಾಡುವ, ವೇಶ್ಯೆಯರಲ್ಲಿ ಆಸಕ್ತನಾದ ಅತ್ಯಂತ ಪಾಪಿಯಾದ ಇವನನ್ನು ತ್ಯಾಗಮಾಡು. ನೀನೇನಾದರೂ ಇವನನ್ನು ಸ್ವೀಕರಿಸಿದಲ್ಲಿ ನಾನು ನಿನ್ನ ಕುಟುಂಬವೆಲ್ಲವನ್ನು ಭಕ್ಷಿಸುವೆನು' ಎಂದು ನುಡಿದಳು. ಆಗ ಪದ್ಮನಾಭನು 'ನನ್ನ ಮಗನೆಂಬ ಕಾರಣದಿಂದ ಇವನನ್ನು ರಕ್ಷಿಸುವೆನು' ಎಂದಾಗ 'ವರ್ಣಾಶ್ರಮ ಕರ್ಮಗಳನ್ನಾಚರಿಸದೇ ಸರ್ವರಿಂದಲೂ ಬಹಿಷ್ಕೃತನಾದ ಇವನ ಮುಖವನ್ನೂ ನೋಡುವದೂ ಸಹ ನಿಂದ್ಯವೇ ಆಗಿರುವದು. ಆದ್ದರಿಂದ ಅವನಲ್ಲಿರುವ ಮಮಕಾರವನ್ನು ತ್ಯಾಗಮಾಡು' ಎಂದು ನುಡಿದು ಆ ಕೇಶವನನ್ನು ಹಿಡಿದು ಗಟ್ಟಿಯಾಗಿ ಹೊಡೆದಳು. ಅದರಿಂದ ತತ್ತರಿಸಿದ ಕೇಶವನು ಗಟ್ಟಿಯಾಗಿ ಅಳುತ್ತಾ 'ತಂದೆಯೇ ರಕ್ಷಿಸು' ಎಂದು ಗಟ್ಟಿಯಾಗಿ ಚೀರಿದನು. ಇದನ್ನು ಕಂಡ ಕೇಶವನ ತಂದೆ, ತಾಯಿ, ಮಡದಿಯರು ಬಹುವಾಗಿ ದುಃಖಿಸಿದರು.

ಆ ಸಮಯದಲ್ಲಿ ಅಲ್ಲಿಗೆ ದೈವವಶಾತ್ ಭರದ್ವಾಜ ಮುನಿಗಳು ಅಲ್ಲಿಗೆ ಆಗಮಿಸಿದರು. ಅವರನ್ನು ನೋಡಿ ಪದ್ಮನಾಭವನು ತನ್ನ ಮಗನೊಂದಿಗೆ ಅವರ ಬಳಿ ಹೋಗಿ 'ಭರದ್ವಾಜನೇ! ನಿನ್ನ

ಸ್ತುತ್ವಾ ಪ್ರಣಮ್ಯ ಶರಣಂ ಯಯಾಚೇ ಪುತ್ರಕಾರಣಾತ್ ॥67॥

ಭರದ್ವಾಜ ಮಹಾಭಾಗ ಸಾಕ್ಷಾದ್ವಿಷ್ಣ್ವಂಶಕೋ ಭವಾನ್ ।
ತ್ವದ್ದರ್ಶನಮಪುಣ್ಯಾನಾಂ ಭವಿತಾ ನ ಕದಾಚನ ॥68॥

ಬ್ರಹ್ಮಹಾ ಚ ಸುರಾಪೀ ಚ ಸ್ತೇಯೀ ಚಾಭೂತ್ಸುತೋ ಮಮ ।
ಪುತ್ರಂ ಪ್ರಹರ್ತುಮಾಯಾತಾ ಬ್ರಹ್ಮಹತ್ಯಾ ಭಯಂಕರೀ ॥69॥

ಭೂಯಾದ್ಯಥಾ ಮೇ ಪುತ್ರೋಽಯಂ ಮಹಾಪಾತಕಮೋಚಿತಃ ।
ಘೋರೇಯಂ ಬ್ರಹ್ಮಹತ್ಯಾ ಚ ಯಥಾ ಶೀಘ್ರಂ ಲಯಂ ವ್ರಜೇತ್ ॥70॥

ತಮುಪಾಯಂ ವದಸ್ವಾದ್ಯ ಮಮ ಪುತ್ರೇ ದಯಾಂ ಕುರು ।
ಏಕ ಏವ ಹಿ ಪುತ್ರೋ ಮೇ ನಾನ್ಯೋಽಸ್ತಿ ತನಯೋ ಮುನೇ ॥71॥

ಸುತೇ ಮೃತೇ ತು ವಂಶೋ ಮೇ ಸಮುಚ್ಛಿದ್ಯೇತ ಮೂಲತಃ ।
ತತಃ ಪಿತೃಭ್ಯಃ ಪಿಂಡಾನಾಂ ದಾತಾಪಿ ನ ಭವೇದ್ಧ್ರುವಮ್ ॥72॥

ತತಃ ಕೃಪಾಂ ಕುರುಷ್ವ ತ್ವಮಸ್ಮಾಸು ಭಗವನ್ಮುನೇ ।
ಇತ್ಯುಕ್ತಃ ಸ ಭರದ್ವಾಜಃ ಸಾಕ್ಷಾನ್ನಾರಾಯಣಾಂತಕಃ ॥73॥

ಧ್ಯಾತ್ವಾ ತು ಸುಚಿರಂ ಕಾಲಂ ಪದ್ಮನಾಭಂ ವಚೋಽಬ್ರವೀತ್ ॥74॥

ಭರದ್ವಾಜ ಉವಾಚ–

'ಪದ್ಮನಾಭ ಕೃತಂ ಪಾಪಮತಿಕ್ರೂರಂ ಸುತೇನ ತೇ ।

ದರ್ಶನದಿಂದ ನಮ್ಮೆಲ್ಲರಿಗೂ ಪುಣ್ಯವುಂಟಾಗಿ ಸುಖವೇ ಆಗುವದು. ಸುರಾಪಾನ, ಸ್ವರ್ಣಸ್ತೇಯ, ಬ್ರಹ್ಮಹತ್ಯಾದಿ ಮಹಾಪಾತಕಗಳನ್ನು ಮಾಡಿರುವ ನನ್ನ ಪುತ್ರನನ್ನು ಹಿಂಸಿಸಲು ಅವನ ಪಾಪವು ಸ್ತ್ರೀರೂಪವನ್ನು ಧರಿಸಿ ಅವನನ್ನು ಹಿಂಬಾಲಿಸಿ ಹಿಂಸಿಸುತ್ತಿರುವದು. ಆ ಬ್ರಹ್ಮಹತ್ಯೆಯು ಶೀಘ್ರದಲ್ಲಿ ನಾಶವಾಗುವ ಬಗೆಯನ್ನು ತಿಳಿಸಿರಿ. ನನಗಿರುವವನು ಇವನೊಬ್ಬನೇ ಮಗನು. ಇವನಿಲ್ಲದಿದ್ದಲ್ಲಿ ನನ್ನ ವಂಶವು ನಿಂತುಹೋಗುವದು. ಆಗ ನನ್ನ ಪಿತೃಗಳಿಗೆ ಪಿಂಡಾದಿಗಳಿಲ್ಲದಂತಾಗಿ ದುಃಖವೊದಗುವದು. ಆದ್ದರಿಂದ ನಮ್ಮಲ್ಲಿ ದಯವನ್ನಿಟ್ಟು ನನ್ನ ಮಗನನ್ನು ರಕ್ಷಿಸು' ಎಂದು ನುಡಿದನು.

ಪದ್ಮನಾಭನ ಮಾತುಗಳನ್ನು ಕೇಳಿದ ನಾರಾಯಣನ ವಿಶೇಷವಾದ ಅನುಗ್ರಹಕ್ಕೆ ಪಾತ್ರರಾದ ಭರದ್ವಾಜ ಮಹರ್ಷಿಗಳು ಸ್ವಲ್ಪ ಹೊತ್ತು ಧ್ಯಾನವನ್ನು ಮಾಡಿ 'ನಿನ್ನ ಮಗನೆಸಗಿರುವ ಅತಿ ಕ್ರೂರವಾದ ಪಾಪಕೃತ್ಯಗಳಿಗೆ ಪ್ರಾಯಶ್ಚಿತ್ತವೇ ಇರುವದಿಲ್ಲ. ಆದರೂ ಸಹ ಅವನ

ನಾಸ್ಯ ಪಾಪಸ್ಯ ಶಾಂತಿಃ ಸ್ಯಾತ್ಪ್ರಾಯಶ್ಚಿತ್ತಾಯುತೈರಪಿ ॥75॥

ತಥಾಪಿ ತೇ ಸುತಸ್ಯಾಹಮಸ್ಯ ಪಾಪಸ್ಯ ಶಾಂತಯೇ ।
ಪ್ರಾಯಶ್ಚಿತ್ತಂ ವದಿಷ್ಯಾಮಿ ಪದ್ಮನಾಭ ಶೃಣು ದ್ವಿಜ ॥76॥

ಗಂಗಾಯಾ ದಕ್ಷಿಣೇ ಭಾಗೇ ದ್ವಿಶತೀಯೋಜನೇ ದ್ವಿಜ ।
ಪೂರ್ವಾಂಭೋಧೇಃ ಪಶ್ಚಿಮೇ ತು ಪಂಚಭಿರ್ಯೋಜನೈರ್ಮಿತೇ ॥77॥

ಸುವರ್ಣಮುಖರೀ ತೀರೇ ಚೋತ್ತರೇ ಕ್ರೋಶಮಾತ್ರಕೇ ।
ವೇಂಕಟಾದ್ರಿರಿತಿ ಖ್ಯಾತಃ ಸರ್ವಲೋಕನಮಸ್ಕೃತಃ ॥78॥

ಮೇರುಪುತ್ರೋ ಮಹಾಪುಣ್ಯಃ ಸರ್ವದೇವಾಭಿವಂದಿತಃ ।
ವೈಕುಂಠಲೋಕಾದಾನೀತೋ ವಿಷ್ಣೋಃ ಕ್ರಿಡಾಚಲೋ ಮಹಾನ್ ॥79॥

ಗರುತ್ಮತಾ ವೇಗವತಾ ಸ್ವರ್ಣಮುಖ್ಯಾಸ್ತಟೇ ಶುಭೇ ।
ವರ್ತತೇ ದೇವಸಂಘೈಶ್ಚ ಋಷಿಸಂಘೈಶ್ಚ ಪೂಜಿತಃ ॥80॥

ತಸ್ಮಿನ್ವೇಂಕಟಶೈಲೇಂದ್ರೇ ಸಾಕ್ಷಾನ್ನಾರಾಯಣಃ ಸ್ವಯಮ್ ।
ಲಕ್ಷ್ಮೀದೇವ್ಯಾ ಚ ಭೂದೇವ್ಯಾ ನೀಲಾದೇವ್ಯಾ ಸಮಾಗತಃ ॥81॥

ವರ್ತತೇ ವೇಂಕಟನಾಥಸ್ಯ ಹ್ಯಾಲಯಸ್ಯ ತಥೋತ್ತರೇ ॥82॥

ಕಟಾಹತೀರ್ಥಂ ವಿಪ್ರೇಂದ್ರ ವರ್ತತೇ ಮಂಗಲಪ್ರದಮ್ ।
ಬ್ರಹ್ಮಹತ್ಯಾದಿಪಾಪಘ್ನಂ ವಾಂಛಿತಾರ್ಥಪ್ರದಾಯಕಮ್ ॥83॥

ಪಾಪಶಮನೋಪಾಯವನ್ನು ತಿಳಿಸುವೆನು. ಹೇಳು. ಗಂಗಾನದಿಯ ದಕ್ಷಿಣ ದಿಕ್ಕಿನಲ್ಲಿ ಪೂರ್ವಸಮುದ್ರದಿಂದ ಎರಡು ನೂರು ಯೋಜನ ದೂರದಲ್ಲಿರುವ ಸುವರ್ಣ ಮುಖರೀ ನದಿಯಿಂದ ಕ್ರೋಶ ದೂರದಲ್ಲಿರುವ ವೇಂಕಟಾದ್ರಿಯೆಂಬ ಸರ್ವದೇವತೆಗಳಿಂದ ಪೂಜಿತವಾದ ಪಾಪಹಾರಕವಾದ ಪರ್ವತವಿರುವದು. ಗರುಡನಿಂದ ತರಲ್ಪಟ್ಟ ವೈಕುಂಠದಲ್ಲಿದ್ದ ಭಗವಂತನ ಕ್ರೀಡಾದ್ರಿಯೇ ಈ ವೇಂಕಟಾಚಲವು. ದೇವತೆಗಳು, ಋಷಿಗಳು ಇವರಿಂದ ಪೂಜಿತವಾದ ಈ ವೇಂಕಟಾಚಲದಲ್ಲಿ ಲಕ್ಷ್ಮೀದೇವಿ, ಭೂದೇವಿ, ನೀಲಾದೇವಿಯರಿಂದ ಸಮಾಯುಕ್ತನಾಗಿ ಭಗವಂತನು ವಾಸವಾಗಿರುವನು. ಆ ಪರಮಾತ್ಮನ ಮಂದಿರದಿಂದ ಉತ್ತರ ಭಾಗದಲ್ಲಿ ಮಂಗಲ ಪ್ರದವಾದ, ಬ್ರಹ್ಮಹತ್ಯಾದಿ ಪಾಪಗಳನ್ನು ಕಳೆಯುವ, ಅಭೀಪ್ಸಿತ ಫಲ ದಾಯಕವಾದ ಕಟಾಹತೀರ್ಥ ವಿರುವದು. ನೀನು ಮಗನಿಂದ ಸಮೇತನಾಗಿ ಅಲ್ಲಿಗೆ ಹೋಗಿ ಕಟಾಹತೀರ್ಥದ ಜಲವನ್ನು ಭಕ್ತಿಯಿಂದ ಪಾನಮಾಡು' ಎಂದು ನುಡಿದರು.

ಸುತೇನ ಸಾಕಂ ವಿಪ್ರೇಂದ್ರ ಪಿಬ ತೀರ್ಥಂ ಮನೋಹರಮ್ ।
ಭರದ್ವಾಜಸ್ಯ ವಾಕ್ಯಂ ತಚ್ಛೃತ್ವಾ ವೈ ವೇದಸಮ್ಮತಮ್ ॥84॥
ಶಿರಸಾ ತಂ ಪ್ರಣಮ್ಯಾಥ ಯಯೌ ವೇಂಕಟಪರ್ವತಮ್ ॥85॥

ತಂ ಗತ್ವಾ ವೇಂಕಟಂ ಶೈಲಂ ಸ್ವಾಮಿಪುಷ್ಕರಿಣೀಜಲೇ ।
ಸುತೇನ ಸಾಕಂ ವಿಪ್ರೇಂದ್ರಃ ಸಸ್ನೌ ನಿಯಮಪೂರ್ವಕಮ್ ॥86॥

ವರಾಹಸ್ವಾಮಿನಂ ನತ್ವಾ ಶ್ರೀನಿವಾಸಾಲಯಂ ಗತಃ ।
ಪ್ರದಕ್ಷಿಣಂ ತತಃ ಕೃತ್ವಾ ವಿಮಾನಂ ಸಂಪ್ರಣಮ್ಯ ಚ ॥87॥

ಪದ್ಮನಾಭೋಽಥ ಪುತ್ರೇಣ ಕೇಶವೇನ ದುರಾತ್ಮನಾ ।
ಪಪೌ ಕಟಾಹತೀರ್ಥಂ ತದ್ಬ್ರಹ್ಮಹತ್ಯಾವಿನಾಶಕಮ್ ॥88॥

ತದಾನೀಂ ಬ್ರಹ್ಮಹತ್ಯಾ ಸಾ ಶೀಘ್ರಮೇವ ಲಯಂ ಗತಾ ।
ಅನಂತರಂ ತತೋ ಗತ್ವಾ ವೇಂಕಟೇಶಂ ಕೃಪಾನಿಧಿಮ್ ॥89॥

ಪುತ್ರೇಣ ಸಹ ವಿಪ್ರೇಂದ್ರಃ ಪದ್ಮನಾಭೋ ದದರ್ಶ ಸಃ ।
ತದಾ ಪ್ರಾದುರಭೂದ್ದೇವೋ ವೇಂಕಟೇಶೋ ದಯಾನಿಧಿಃ ॥90॥

ಕಟಾಹತೀರ್ಥಪಾನೇನ ತೋಷಿತೋ ವಾಕ್ಯಮಬ್ರವೀತ್ ॥91॥

ಶ್ರೀಭಗವಾನುವಾಚ–

'ಪದ್ಮನಾಭ ಮಹಾಬುದ್ಧೇ ವೇದವೇದಾಂತಪಾರಗ ।

ಭರದ್ವಾಜರ ಮಾತನ್ನು ಕೇಳಿದ ಪದ್ಮನಾಭನು ಭರದ್ವಾಜರನ್ನು ನಮಸ್ಕರಿಸಿ ವೇಂಕಟಾಚಲಕ್ಕೆ ಬಂದು ಅಲ್ಲಿ ಸ್ವಾಮಿಪುಷ್ಕರಿಣಿಯ ದಿವ್ಯವಾದ ಜಲದಲ್ಲಿ ನಿಯಮಪೂರ್ವಕವಾಗಿ ಮಗನಿಂದ ಕೂಡಿಕೊಂಡು ಸ್ನಾನವನ್ನು ಮಾಡಿ, ವರಾಹದೇವರಿಗೆ ನಮಸ್ಕರಿಸಿದನು. ಅಲ್ಲಿಂದ ಶ್ರೀನಿವಾಸನ ಮಂದಿರಕ್ಕೆ ಹೋಗಿ, ಅವನಿಗೆ ಪ್ರದಕ್ಷಿಣೆಯನ್ನು ಮಾಡಿ, ವಿಮಾನಕ್ಕೆ ನಮಸ್ಕರಿಸಿ ಪದ್ಮನಾಭನು ಮಗನಾದ ಕೇಶವನಿಂದ ಸಮೇತನಾಗಿ ಕಟಾಹತೀರ್ಥಕ್ಕೆ ಹೋಗಿ, ಬ್ರಹ್ಮಹತ್ಯಾವಿನಾಶಕವಾದ ಕಟಾಹತೀರ್ಥದ ಪವಿತ್ರವಾದ ನೀರನ್ನು ಪಾನಮಾಡಿದನು. ಕಟಾಹತೀರ್ಥದ ಜಲದ ಪಾನಮಾತ್ರದಿಂದ ಅವನ ಬ್ರಹ್ಮಹತ್ಯಾದೋಷವು ಶೀಘ್ರದಲ್ಲಿ ನಾಶವಾಗಿಹೋಯಿತು. ಅನಂತರದಲ್ಲಿ ಪದ್ಮನಾಭನು ಮಗನನ್ನು ಕರೆದುಕೊಂಡು ವೇಂಕಟೇಶನ ದರ್ಶನಾರ್ಥವಾಗಿ ಹೋದನು. ಆಗ ದಯಾನಿಧಿಯಾದ ವೇಂಕಟೇಶನು 'ಭರದ್ವಾಜನ ಮಾತಿನಂತೆ ವೇಂಕಟ ಪರ್ವತಕ್ಕೆ

ಭರದ್ವಾಜಸ್ಯ ವಾಕ್ಯೇನ ಪ್ರಾಪ್ಯ ವೇಂಕಟಪರ್ವತಮ್ ॥92॥

ಕಟಾಹತೀರ್ಥಂ ತ್ವಂ ಪೀತ್ವಾ ಕೃತಾರ್ಥೋಽಸಿ ನ ಸಂಶಯಃ ।
ತವ ಪುತ್ರಃ ಕೇಶವಾಖ್ಯೋ ವಿಮುಕ್ತೋ ಬ್ರಹ್ಮಹತ್ಯಯಾ ॥93॥

ತಸ್ಮಾತ್ಕಟಾಹತೀರ್ಥಂ ತು ಸೇವನೀಯಂ ಪ್ರಯತ್ನತಃ ।
ತಸ್ಮಿಂಸ್ತೀರ್ಥೇ ಮಹಾಭಾಗ ಪೀತ್ವಾ ಜಲಮನುತ್ತಮಮ್ ॥94॥

ಪಾಪಿನೋಽಪಿ ಕೃತಾರ್ಥಾಃ ಸ್ಯುಃ ಸತ್ಯಂ ಸತ್ಯಂ ನ ಸಂಶಯಃ ।
ಮಾಮಕಂ ಲೋಕಮಾಗತ್ಯ ಸುಖೀ ಭವ ಮಹಾಮತೇ ॥95॥

ಇತ್ಯುಕ್ತ್ವಾ ವೇಂಕಟೇಶೋಽಸಾವಂತರ್ಧಾನಂ ಗತಸ್ತತಃ ॥96॥

ಶ್ರೀ ಸೂತ ಉವಾಚ–

ತಸ್ಮಾತ್ತಪೋಧನಾಃ ಸರ್ವೇ ಶೌನಕಾದ್ಯಾ ಮಹೌಜಸಃ ।
ಕಟಾಹತೀರ್ಥಮಾಹಾತ್ಮ್ಯಮಿತಿಹಾಸಸಮನ್ವಿತಮ್ ॥97॥
ಯಥಾ ಶ್ರುತಂ ಮಯಾ ಸಮ್ಯಕ್ಕಥೋಕ್ತಂ ಭವತಾಂ ದ್ವಿಜಾ ॥98॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ
ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ ಶ್ರೀಸೂತಶೌನಕಸಂವಾದೇ
'ಕಟಾಹತೀರ್ಥಪ್ರಶಂಸನಂ' ನಾಮ ಅಷ್ಟಾವಿಂಶೋಽಧ್ಯಾಯಃ ॥28॥

* * *

ಬಂದು ಕಟಾಹ ತೀರ್ಥದ ಪಾನವನ್ನು ಮಾಡಿ ನೀನು ಕೃತಾರ್ಥನಾಗಿರುವಿ. ನಿನ್ನ ಮಗನಾದ ಕೇಶವನೂ ಸಹ ಬ್ರಹ್ಮಹತ್ಯಾದೋಷದಿಂದ ವಿಮುಕ್ತನಾಗಿರುವನು. ಆದ್ದರಿಂದ ಕಟಾಹತೀರ್ಥವು ಅತ್ಯಂತ ಸೇವನೀಯವಾಗಿರುವದು. ಆ ತೀರ್ಥದಲ್ಲಿಯ ನೀರಿನ ಪಾನದಿಂದ ಪಾಪಿಗಳೂ ಸಹ ಕೃತಕೃತ್ಯರಾಗುವರು. ಇದರಲ್ಲಿ ಯಾವ ಸಂಶಯವೂ ಬೇಡ. ನೀನು ಸಹ ಅನಂತರ ನನ್ನ ಲೋಕವನ್ನು ಹೊಂದಿ ಸುಖಿಯಾಗು' ಎಂದು ಅನುಗ್ರಹಿಸಿ ಅಂತರ್ಧಾನನಾದನು. ಕಟಾಹತೀರ್ಥದ ಮಾಹಾತ್ಮ್ಯವು ಹೇಗೆ ಶ್ರುತವಾಗಿರುವದೋ ಹಾಗೆಯೇ ವರ್ಣಿತವಾಗಿರುವದು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ
ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮ್ಯೆಯಲ್ಲಿ ಧರಣೀ ವರಾಹ
ಸಂವಾದದಲ್ಲಿ ಕಟಾಹತೀರ್ಥಪ್ರಶಂಸನವೆಂಬ ಇಪ್ಪತ್ತೆಂಟನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

# ಅಥೈಕೋನತ್ರಿಂಶೋಽಧ್ಯಾಯಃ ॥29॥

[ಸುವರ್ಣಮುಖರೀಮಾಹಾತ್ಮ್ಯೇ ಅರ್ಜುನತೀರ್ಥಯಾತ್ರಾಗಮನವರ್ಣನಮ್]

ಋಷಯಃ ಊಚುಃ-

ತೀರ್ಥಾನಾಮಿಹ ಸರ್ವೇಷಾಂ ಪ್ರಭಾವಃ ಕಥಿತಸ್ತ್ವಯಾ ।
ನದೀನಾಂ ಪರ್ವತಾನಾಂ ಚ ಕ್ಷೇತ್ರಾಣಾಂ ಸರಸಾಮಪಿ ॥1॥

ನಿದೇಶಾತ್ಪದ್ಮಗರ್ಭಸ್ಯ ಸುವರ್ಣಮುಖರೀ ನದೀ ।
ನೀತಾ ಭುವಮಗಸ್ತ್ಯೇನ ವ್ಯಾಖ್ಯಾತಾ ಭವತಾನಘ ॥2॥

ತದುತ್ಪತ್ತಿಪ್ರಭಾವಂ ಚ ತೀರ್ಥೌಘಾನ್ ತತ್ಸಮಾಶ್ರಿತಾನ್ ।
ಶ್ರೋತುಂ ಸಂಪ್ರೀತಿರುತ್ಪನ್ನಾ ತನ್ನೋ ವಕ್ತುಂ ತ್ವಮರ್ಹಸಿ ॥3॥

ಪ್ರಣಮ್ಯ ಶಂಭುಂ ನಂದೀಶಂ ಷಡಾಸ್ಯಂ ವ್ಯಾಸಮೇವ ಚ ।
ಮುನಿಭಿಃ ಪ್ರಾರ್ಥಿತಸ್ಸೂತಃ ತದಾ ವಕ್ತುಂ ಪ್ರಚಕ್ರಮೇ ॥4॥

ಶ್ರೀ ಸೂತ ಉವಾಚ-

ಸಾಧು ಪೃಷ್ಟಂ ಮಹಾಭಾಗ ಭವದ್ಭಿರ್ಮಂಗಲಾವಹಮ್ ।
ಆಖ್ಯಾನಮೇತದಾಮ್ನಾಯಶ್ರವಣೋದ್ಭೂತಸಿದ್ಧಿದಮ್ ॥5॥

ಶೃಣುತಾವಹಿತಾ ದಿವ್ಯಾಂ ಕಥಾಂ ಕಲ್ಮಶನಾಶಿನೀಮ್ ।

## ಇಪ್ಪತ್ತೊಂಭತ್ತನೆಯ ಅಧ್ಯಾಯ

[ಸುವರ್ಣಮುಖರೀಮಾಹಾತ್ಮ್ಯವರ್ಣನ- ಅರ್ಜುನ ತೀರ್ಥಯಾತ್ರಾಗಮನ ವರ್ಣನ]

ಋಷಿಗಳು ಸೂತಾಚಾರ್ಯರನ್ನು ಕುರಿತು 'ಹೇ ಸೂತಾಚಾರ್ಯರೇ! ಎಲ್ಲ ತೀರ್ಥಗಳು, ನದಿಗಳು, ಪರ್ವತಗಳು, ಕ್ಷೇತ್ರಗಳು, ಸರೋವರಗಳ ಮಹಾತ್ಮೆಯನ್ನು ವರ್ಣಿಸಿರುವ ನೀವು ಬ್ರಹ್ಮದೇವರ ನಿರ್ದೇಶನದಂತೆ ಸುವರ್ಣಮುಖರೀ ನದಿಯು ಅಗಸ್ತ್ಯರಿಂದ ಭೂಮಿಗೆ ತರಲ್ಪಟ್ಟಿತೆಂದು ತಿಳಿಸಿರುವಿರಿ. ಆ ಸುವರ್ಣಮುಖರಿಯ ಉತ್ಪತ್ತಿ, ಅದರ ಪ್ರಭಾವ, ಅದನ್ನಾಶ್ರಯಿಸಿರುವ ತೀರ್ಥಗಳ ಮಹಾತ್ಮ್ಯೆ- ಇವುಗಳನ್ನು ಕೇಳಬಯಸಿರುವೆವು. ದಯವಿಟ್ಟು ತಿಳಿಸಿರಿ' ಎಂದು ಪ್ರಾರ್ಥಿಸಿದಾಗ ಸೂತರು ಶಿವ, ಸುಬ್ರಹ್ಮಣ್ಯ, ನಂದಿ, ವೇದವ್ಯಾಸ ದೇವರು

ಭರದ್ವಾಜೇನ ಕಥಿತಾಂ ಪಾರ್ಥಾಯ ಕಥಯಾಮಿ ವಃ ॥6॥

ಅವಾಪ್ಯ ದ್ರುಪದಾತ್ ಪ್ರಾಜ್ಞಾತ್ ಯಜ್ಞಸೇನೀಂ ಪೃಥಾಸುತಾಃ ।
ಧೃತರಾಷ್ಟ್ರನಿದೇಶೇನ ಜಗ್ಮುಃ ಕರಿಪುರಂ ಶುಭಮ್ ॥7॥

ಭೀಷ್ಮೇಣ ಚಾಂಬಿಕೇಯೇನ ತತ್ರ ಸಮ್ಮಾನಿತಾಸ್ತದಾ ।
ದುರ್ಯೋಧನಾದಿಭಿಸ್ಸಾರ್ಧಂ ನ್ಯವಸನ್ಪಂಚವತ್ಸರಾನ್ ॥8॥

ತತೋಽನುಶಿಷ್ಟೋ ಭೀಷ್ಮಾದ್ಯೈರ್ಧೃತರಾಷ್ಟ್ರೋ ಮಹಾಯಶಾಃ ।
ಸರ್ವೇಷಾಂ ಕುಲವೃದ್ಧಾನಾಂ ವಾಸುದೇವಸ್ಯ ಚಾಗ್ರತಃ ॥9॥

ಪ್ರದದೌ ಪಾಂಡುಪುತ್ರೇಭ್ಯಸ್ತೇಽವಾಹೃಷ್ಟಮಾನಸಃ ।
ಸಾರ್ಧರಾಜ್ಯಂ ಪುರವರಂ ಖಾಂಡವಪ್ರಸ್ಥಸಂಜ್ಞಿಕಮ್ ॥10॥

ಆಮಂತ್ರ್ಯ ಪಾಂಡುತನಯಾ ಧೃತಾರಾಷ್ಟ್ರಾದಿಕಾನ್ಕುರೂನ್ ।
ಜಗ್ಮುಸ್ತತ್ಖಾಂಡವಪ್ರಸ್ಥಂ ಪುರಂ ಕೃಷ್ಣಸಮನ್ವಿತಾಃ ॥11॥

ಇಂದ್ರಪ್ರಸ್ಥಾಹ್ವಯೇ ತತ್ರ ರಕ್ಷಿತೇ ವಿಶ್ವಕರ್ಮಣಾ ।
ವಸನ್ಪುರೇಽಶಿಷತ್ಪೃಥ್ವೀಂ ಸಾನುಜೋ ಧರ್ಮನಂದನಃ ॥12॥

ಗತೇ ಕೃಷ್ಣೇ ನಿಜಪುರಂ ನಾರದಸ್ಯಾನುಶಾಸನಾತ್ ।

ಇವರನ್ನು ನಮಸ್ಕರಿಸಿ, 'ಹೇ ಶೌನಕರೇ! ನೀವು ಬಹು ಉತ್ತಮವಾದ ವಿಷಯವನ್ನು ತಿಳಿಯ ಬಯಸಿರುವಿರಿ. ಭರದ್ವಾಜರಿಂದ ಅರ್ಜುನನಿಗೆ ಹೇಳಲ್ಪಟ್ಟ, ಕಲ್ಮನಾಶನವಾದ ಸುವರ್ಣ ಮುಖರಿಯ ಮಾಹಾತ್ಮ್ಯವನ್ನು ನಾನು ನಿಮಗೆ ತಿಳಿಸುವೆನು. ಸಾವಧಾನ ಮನಸ್ಸಿನಿಂದ ಆಲಿಸಿರಿ' ಎಂದು ನುಡಿದು ಸುವರ್ಣಮುಖರೀನದಿಯ ಮಹಾತ್ಮೆಯನ್ನು ವರ್ಣಿಸಲಾರಂಭಿಸಿದರು.

ಹಿಂದೆ ಪಾಂಡವರು ದ್ರೌಪದೀದೇವಿಯನ್ನು ವಿವಾಹವಾಗಿ ಹಸ್ತಿನಾವತಿಗೆ ಹೋಗಿ ಅಲ್ಲಿ ದುರ್ಯೋಧನಾದಿಗಳಿಂದ ಸಹಿತರಾಗಿ ಐದು ವರ್ಷ ವಾಸವನ್ನು ಮಾಡಿದರು. ಅನಂತರದಲ್ಲಿ ಭೀಷ್ಮಾದಿಗಳಿಂದ ಬೋಧಿತನಾದ ಧೃತರಾಷ್ಟ್ರನು ಪಾಂಡವರಿಗೆ ಖಾಂಡವಪ್ರಸ್ಥವೆಂಬ ಸ್ಥಲವನ್ನು ಕೊಟ್ಟು ಅಲ್ಲಿ ರಾಜ್ಯಭಾರವನ್ನು ಮಾಡಲು ತಿಳಿಸಿದನು. ಕೃಷ್ಣನಿಂದ ಸಹಿತರಾದ ಪಾಂಡವರು ಖಾಂಡವಪ್ರಸ್ಥಕ್ಕೆ ತೆರಳಿ ಅಲ್ಲಿ ವಿಶ್ವಕರ್ಮನಿಂದ ರಕ್ಷಿತವಾದ ಇಂದ್ರಪ್ರಸ್ಥವೆಂಬ ಪಟ್ಟಣದಲ್ಲಿ ಯುಧಿಷ್ಠಿರನಿಂದ ಸಹಿತರಾಗಿ ವಾಸವನ್ನು ಮಾಡಿದರು.

ಕೃಷ್ಣನು ಕೆಲ ಸಮಯಾನಂತರ ದ್ವಾರಾವತೀ ಪಟ್ಟಣಕ್ಕೆ ತೆರಳುತ್ತಿರಲು ನಾರದರ ಮಾತಿನಂತೆ

ಪ್ರತಿಜ್ಞಾಂ ಚಕ್ರಿರೇ ಪಾರ್ಥಾ ಧರ್ಮಜ್ಞಾ ದ್ರೌಪದೀಂ ಪ್ರತಿ ॥13॥

ಯಥಾಕ್ರಮೇಣ ಸಾ ಕೃಷ್ಣಾ ವರ್ಷಮೇಕೈಕಮಾದರಾತ್ ।
ಏಕೈಕಸ್ಯ ಗೃಹೇ ತಿಷ್ಠೇತ್ತ್ವತಿನಿರ್ಣಯಪೂರ್ವಕಮ್ ॥14॥

ಯಃ ಪಶ್ಯೇತ್ತಾಂ ಪರಗೃಹೇ ಸ್ಥಿತಾಂ ಪಾಂಚಾಲನಂದಿನೀಮ್ ।
ತೇನೈಕಹಾಯನಮಿತಂ ವಿಧೇಯಂ ತೀರ್ಥಸೇವನಮ್ ॥15॥

ಏವಂ ಕೃತಪ್ರತಿಜ್ಞಾಸ್ತೇ ಪಾಂಡುಭೂಪಾಲನಂದನಾಃ ।
ವ್ಯಾಪಾರೈರ್ಲೋಕಸಾಮಾನ್ಯೈರ್ನಿನ್ಯುಃ ಕಾಲಮತಂದ್ರಿತಾಃ ॥16॥

ಅಥ ಜಾನಪದೋ ವಿಪ್ರೋ ರಾಜಗೇಹಾಂಗಣೇ ಸ್ಥಿತಃ ।
ಚುಕ್ರೋಶ ಬಹುಧಾಧೇನುರ್ಹೃತಾ ಮೇ ತಸ್ಕರೈರಿತಿ ॥17॥

ಸಮಾಶ್ವಾಸ್ಯ ಚ ತಂ ವಿಪ್ರಂ ಪ್ರವಿವೇಶ ಧನಂಜಯಃ ।
ಆಯುಧಾನಿ ಸಮಾನೇತುಂ ತ್ವರಯಾ ಶಸ್ತ್ರಮಂದಿರಮ್ ॥18॥

ತತ್ರಾಪಶ್ಯತ್ಸಮಾಸೀನೌ ಪಾಂಚಾಲೀಧರ್ಮನಂದನೌ ।
ಜಾನನ್ನಪಿ ಪ್ರತಿಜ್ಞಾಂ ಸಃ ಧನುರ್ಜಗ್ರಾಹ ಸೇಪುಧಿಃ ॥19॥

ಸ ಗತ್ವಾ ತಸ್ಕರಾನಾಜೌ ನಿಹತ್ಯ ನೃಪನಂದನಃ ।
ನಿವರ್ತ್ಯ ಧೇನುಂ ತಾಂ ತಸ್ಮೈ ದದೌ ವಿಪ್ರಾಯ ಸಾದರಮ್ ॥20॥

ದ್ರೌಪದಿಯ ವಿಷಯದಲ್ಲಿ ಪ್ರತಿಜ್ಞೆಯೊಂದನ್ನು ಮಾಡಿ 'ದ್ರೌಪದಿಯು ಕ್ರಮವಾಗಿ ಒಬ್ಬೊಬ್ಬರ ಅರಮನೆಯಲ್ಲಿ ಒಂದೊಂದು ವರ್ಷವಿರಬೇಕೆಂದು ನಿರ್ಣಯಿಸಿ, ಯರು ಮತ್ತೊಬ್ಬರ ಮನೆಯಲ್ಲಿ ದ್ರೌಪದಿಯನ್ನು ಏಕಾಂತದಲ್ಲಿ ನೋಡುವರೋ ಅವರು ಒಂದು ವರ್ಷ ತೀರ್ಥಯಾತ್ರೆಗೆ ತೆರಳಬೇಕೆಂದು ನಿಶ್ಚಯಿಸಿ, ಲೋಕಸಮ್ಮತವಾದ ಕಾರ್ಯಗಳನ್ನು ಮಾಡುತ್ತಾ, ದೇವತೆಗಳೇ ಆಗಿದ್ದರೂ ಸಹ ಲೋಕಸಾಮಾನ್ಯವಾದ ಕರ್ಮಗಳಿಂದ ಜನರನ್ನು ರಂಜಿಸುತ್ತಾ ಇಂದ್ರಪ್ರಸ್ಥದಲ್ಲಿ ವಾಸವನ್ನು ಮಾಡಿದರು.

ಒಂದು ಬಾರಿ ಬ್ರಾಹ್ಮಣನೋರ್ವನು 'ನನ್ನ ಗೋವುಗಳೆಲ್ಲವನ್ನೂ ಕಳ್ಳರು ಕದ್ದೊಯ್ದಿರುವರು' ಎಂದು ನುಡಿಯುತ್ತಾ ಬಹುವಾಗಿ ದುಃಖಿಸಿದನು. ಆಗ ಅವನನ್ನು ಸಮಾಧಾನ ಪಡಿಸಿ ಆಯುಧಗಳನ್ನು ತೆಗದುಕೊಳ್ಳಲು ಶಸ್ತ್ರಮಂದಿರಕ್ಕೆ ಧಾವಿಸಿ ಹೋದನು. ಅಲ್ಲಿ ಅವನು ಏಕಾಂತದಲ್ಲಿದ್ದ ದ್ರೌಪದೀ-ಧರ್ಮರಾಜರನ್ನು ನೋಡಿದನು. ಬಿಲ್ಲು ಬಾಣಗಳನ್ನು ಹಿಡಿದು ಹೊರಬಂದ ಅರ್ಜುನನು ಕಳ್ಳರನ್ನು ನಿಗ್ರಹಿಸಿ ಬ್ರಾಹ್ಮಣನ ಗೋವುಗಳನ್ನು ಅವನಿಗೆ

ಅಥ ವಿಜ್ಞಾಪಯಾಮಾಸ ಫಲ್ಗುನೋ ಧರ್ಮನಂದನಮ್ ।
ತೀರ್ಥಯಾತ್ರಾ ಮಯಾ ಕಾರ್ಯಾ ಸಮಯೋಲ್ಲಂಘನಾದಿತಿ ॥21॥

ಅರ್ಜುನಸ್ಯ ವಚಃ ಶ್ರುತ್ವಾ ಸರ್ವಧರ್ಮವಿದಾಂ ವರಃ ।
ಉವಾಚ ವಚನಂ ಧೀರಃ ಸಾದರಂ ಧರ್ಮನಂದನಃ ॥22॥

ಯುಧಿಷ್ಠಿರ ಉವಾಚ-

'ಗವಾರ್ಥಂ ಬ್ರಹ್ಮಣಾರ್ಥಂ ಚ ಯದ್ವದೇದನೃತಂ ವಚಃ ।
ಯದಾಚರೇದಸತ್ಕರ್ಮ ತತ್ಸತ್ಯಂ ತತ್ಸಮಂಜಸಮ್ ॥23॥

ಬ್ರಾಹ್ಮಣಾರ್ಥಂ ಗವಾರ್ಥಂ ಚ ತ್ವಯಾ ಕರ್ಮೇದೃಶಂ ಕೃತಮ್ ।
ತದಸದ್ಭಾವಮಾಪ್ನೋತಿ ಕಥಂ ಕಥಯ ಸುವ್ರತ ॥24॥

ಪ್ರಜಾಪಾಲನಕೃತ್ಯಸ್ಯ ಚೋರೋಪೇಕ್ಷಣಶಿಕ್ಷಣೈಃ ।
ನೂನಂ ಫಲಂ ಭವೇದ್ರಾಜ್ಞೋ ಬ್ರಹ್ಮಹತ್ಯಾಶ್ವಮೇಧಜಮ್ ॥25॥

ಅಸಾಧ್ಯಾನ್ವೈರಿಣೋ ಜ್ಞಾತ್ವಾಪ್ಯವನೀಶೋ ನ ಭದ್ರಭಾಕ್ ।
ಸ್ವದೇಶೋಪಪ್ಲವಕರಾಸ್ತಸ್ಕರಾ ನಾದ್ಯ ಶಿಕ್ಷಿತಾಃ ॥26॥

ಅಸ್ಮಾಕಂ ಭೂಭುಜಾಂ ಲೋಕಜಾಲಸ್ಯ ಚ ಹಿತಂ ಹಿ ಯತ್ ।
ತ್ವಯೇದೃಶಂ ಕೃತಂ ಕರ್ಮ ನಾಸ್ತಿ ದೋಷೋ ಹ್ಯತಸ್ತವ ॥27॥

ಶ್ರೀ ಸೂತ ಉವಾಚ-

ಧರ್ಮಪುತ್ರಸ್ಯ ವಚನಮಾಕರ್ಣ್ಯ ರಚಿತಾಂಜಲಿಃ ।

ಹಿಂದಿರುಗಿಸಿದನು. ಆನಂತರದಲ್ಲಿ ಅರ್ಜುನನು ಏಕಾಂತದಲ್ಲಿರುವ ದ್ರೌಪದಿ-ಯುಧಿಷ್ಠಿರರನ್ನು ವರ್ಷಮಧ್ಯದಲ್ಲಿ ನೋಡಿದ್ದರಿಂದ ಪ್ರತಿಜ್ಞೆಮಾಡಿದಂತೆ ಒಂದು ವರ್ಷ ತೀರ್ಥಯಾತ್ರೆಗೆ ಹೋಗುವದಾಗಿ ತಿಳಿಸಿದನು. ಆಗ ಧರ್ಮರಾಜನು 'ಗೋಬ್ರಾಹ್ಮಣರ ಹಿತಾರ್ಥವಾಗಿ ಸುಳ್ಳು ನುಡಿದರೂ, ದುಷ್ಕರ್ಮಗಳನ್ನಾಚರಿಸಿದರೂ ಸಹ ದೋಷವೆನಿಸುವದಿಲ್ಲ. ಬ್ರಾಹ್ಮಣನಿಗೋಸ್ಕರವಾಗಿ ನೀನು ನಮ್ಮನ್ನು ನೋಡುವವನಾಗಿದ್ದಿ. ಅದು ಹೇಗೆ ದೋಷವೆನಿಸುವದು? ಪ್ರಜಾಪಾಲಕನಾದ ರಾಜನು ಮಾಡುವ ಚೋರನಿಗ್ರಹಾದಿಕರ್ಮಗಳು ಅಶ್ವಮೇಧಾದಿಗಳ ಫಲವನ್ನು ತಂದುಕೊಡುವವು. ನಿಗ್ರಹಿಸಲಶಕ್ಯರಾದ ಚೋರರನ್ನು ನೀನು ನಿಗ್ರಹಿಸಿ ಗೋಬ್ರಾಹ್ಮಣರಿಗೆ ಪ್ರಿಯವನ್ನಾಚರಿಸಿರುವಿ. ಆದ್ದರಿಂದ ಇಲ್ಲಿ ನಿನ್ನ ದೋಷವಾವದೂ ಇರುವದಿಲ್ಲ ಎಂದು ಸಮಾಧಾನ ಪಡಿಸಿದರೂ ಸಹ

ಪುನರ್ವಿಜ್ಞಾಪಯಾಮಾಸ ಧರ್ಮನಿತ್ಯೋ ಧನಂಜಯಃ ॥28॥

ಮೈವಂ ಭೂಪಾಲ ವಾದೀಸ್ತ್ವಂ ಸ್ವಪ್ರತಿಜ್ಞಾತಿಲಂಘನಮ್ ।
ಜಾನತಾ ಧರ್ಮಸರ್ವಸ್ವಮುಲ್ಲಸದ್ಧರ್ಮಮೂರ್ತಿನಾ ॥29 ।

ಕೃತ್ಯಾಕೃತ್ಯವಿದಾ ದಕ್ಷೇಣಾತ್ಮನಾ ಪ್ರಾಕ್ಸಮೀರಿತಾ ।
ನೋಲ್ಲಂಘನೀಯಾ ಸತತಂ ಪ್ರತಿಜ್ಞಾ ಪುರುಷೇಣ ಹಿ ॥30॥

ಆಶಕ್ತಾನಾಂ ಗತಿಸ್ಸೇಯಂ ಯದ್ಬಂಧುಗುರುವಾಕ್ಯತಃ ।
ಧರ್ಮಂ ತ್ಯಜಂತಿ ಸಮಯಂ ತ್ಯಕ್ತ್ವಾ ಪ್ರಾಕ್ತ್ವಂ ಸಮೀರಿತಮ್ ॥31

ಕೃಪಯಾ ತೀರ್ಥಗಮನಾದಾರ್ಯೋ ಯದಿ ನಿವರ್ತಯೇತ್ ।
ಹತಪ್ರತಿಜ್ಞಂ ಮಾಂ ಲೋಕಾನ್ ಜಲ್ಪತಃ ಕೋ ನಿವಾರಯೇತ್ ॥32॥

ಮಮಾಪಿ ತೀರ್ಥಯಾತ್ರಾಯಾಂ ಕೌತುಕೋತ್ತರಲಂ ಮನಃ ।
ಕರ್ತವ್ಯಂ ಚ ಸ್ಮೃತಂ ರಾಜನ್ನಾರದಾದಿಷ್ಟಶಾಸನಾತ್ ॥33॥

ತತ್ಪ್ರಸೀದ ಮಹಾರಾಜ ಯತ್ತೀರ್ಥಗಮನೋದ್ಯಮೇ ।
ಸಮ್ಮಾನನೀಯಃ ಪ್ರಭುಭಿಃ ಸಮಯೋ ಹ್ಯನುಜೀವಿನಾಮ್ ॥34॥

ತಥೇತಿ ಭ್ರಾತೃಭಿಃ ಸಾರ್ಧಂ ಕೃತಾನುಮತಿರರ್ಜುನಃ ।
ಅಗ್ರಜಂ ತೋಷಯಾಮಾಸ ಪ್ರಣಾಮಪ್ರಶ್ರಯಾದಿಭಿಃ ॥35॥

ಅರ್ಜುನನು ಸಮಾಧಾನ ಹೊಂದದೇ ತೀರ್ಥಯಾತ್ರೆಗೆ ಹೋಗಲು ಪುನಃ ಪುನಃ ಪ್ರಾರ್ಥಿಸಿದನು. 'ಪ್ರತಿಜ್ಞೆಯನ್ನು ಮಾಡಿದ ನಾನು ಪ್ರತಿಜ್ಞೆಯನ್ನು ಉಲ್ಲಂಘಿಸಬೇಕೆಂಬ ನಿನ್ನ ಮಾತು ಧರ್ಮಸ್ವರೂಪವನ್ನು ತಿಳಿದಿರುವ ನಿನಗೆ ಉಚಿತವಲ್ಲ. ಬಂಧುಗಳ ಮತ್ತು ಹಿರಿಯರ ಮಾತುಗಳನ್ನು ಕೇಳಿಕೊಂಡು ಹಿಂದೆ ಮಾಡಿದ ಪ್ರತಿಜ್ಞೆಯನ್ನುಲ್ಲಂಘಿಸುವದು, ಧರ್ಮವನ್ನು ಬಿಡುವದು ಕೇವಲ ಅಶಕ್ತರಿಗೆ ಕಲ್ಪಿಸಿದ ಅನುಕೂಲವಾಗಿರುವದೇ ಹೊರತು ಸಶಕ್ತವಿಷಯವಲ್ಲ. ನೀನು ಅನುಕಂಪದಿಂದ ನನ್ನನ್ನು ತಡೆಯದಿರು. ನಾನು ತೀರ್ಥಯಾತ್ರೆಗೆ ಹೊರಡದಿದ್ದಲ್ಲಿ ಪ್ರತಿಜ್ಞೆಯನ್ನು ನೆರವೇರಿಸಲಾಗದವನೆಂದು ಜನರು ನನ್ನನ್ನು ಜರಿಯುವರು. ನನ್ನ ಮನಸ್ಸೂ ಸಹ ತೀರ್ಥಯಾತ್ರೆಯಲ್ಲಿ ಉತ್ಸುಕವಾಗಿರುವದು. ಪ್ರಸನ್ನ ಮನಸ್ಕನಾಗಿ ಅಪ್ಪಣೆಯನ್ನು ಕೊಡು' ಎಂದು ನುಡಿದನು.

ಆಗ ಯುಧಿಷ್ಠಿರನು ಹಾಗೆಯೇ ಆಗಲಿ ಎಂದು ಸಮ್ಮತಿಸಿದಾಗ ಅರ್ಜುನನು ಧರ್ಮರಾಜ,

ಯಥಾರ್ಹಂ ಭೀಮಸೇನಾದೀನ್ಭ್ರಾತೄನಾಮಂತ್ರ್ಯ ಪಾಂಡವಃ ।
ಕೃತಸ್ವಸ್ತ್ಯಯನೋ ಭವ್ಯೈರ್ನಿರ್ಯಯೌ ಧರಣೀಸುರೈಃ ॥36॥

ಪೌರಾಣಿಕಾ ಜ್ಯೋತಿಷಿಕಾ ಭಿಷಜೋ ಧರಣೀಸುರಾಃ ।
ಅನುಜಗ್ಮುರ್ಭೃತ್ಯಗಣಾಃ ಶಿಲ್ಪಿನಃ ಸೂತಮಾಗಧಾಃ ॥37॥

ಯುಧಿಷ್ಠಿರಾಜ್ಞಯಾ ತಸ್ಯ ಭೋಗತ್ಯಾಗಕ್ಷಮಂ ಧನಮ್ ।
ಗೃಹೀತ್ವಾಽನುಯಯುಃ ಸ್ನಿಗ್ಧಾಃ ಸಭ್ಯಾಃ ಕೋಶಾಧಿಕಾರಿಣಃ ॥38॥

ಸ ರಾಜಪುತ್ರಃ ಪ್ರಥಮಂ ಪ್ರಾಪ್ಯ ಭಾಗೀರಥೀಂ ನದೀಮ್ ।
ಗಂಗಾದ್ವಾರಂ ಪ್ರಯಾಗಂ ಚ ಸಿಷೇವೇ ಕಾಶಿಕಾಮಪಿ ॥39॥

ಪಶ್ಯಂಸ್ತೀರ್ಥಾನಿ ಜಾಹ್ನವ್ಯಾಸ್ತತ್ತೀರೋಪಾಂತವರ್ತ್ಮನಾ ।
ಆಸಸಾದ ಸಮುತ್ತುಂಗಕಲ್ಲೋಲಂ ದಕ್ಷಿಣೋದಧಿಮ್ ॥40॥

ಮಹಾನದೀಂ ಮಹಾಪುಣ್ಯಾಂ ಪ್ರಸಿದ್ಧಂ ಪುರುಷೋತ್ತಮಮ್ ।
ಸಿಂಹಾಚಲಂ ಚ ಸಂವಿಕ್ಷ್ಯ ಪ್ರಾಪ್ತವನ್ಕೃತಕೃತ್ಯತಾಮ್ ॥41॥

ತತೋ ದದರ್ಶ ಕೌಂತೇಯಃ ಪುಣ್ಯಾಂ ಗೋದಾವರೀಂ ನದೀಮ್ ।
ಸಮಸ್ತದುರಿತವ್ರಾತಶಾತನೋತ್ತೀರ್ಣಗೌರವಾಮ್ ॥42॥

ಕೃತಾಭಿಷೇಕಸ್ತತ್ತೋಯೈರ್ವಿಧಿವತ್ಪಾಂಡುನಂದನಃ ।

ಭೀಮಾದಿಗಳಿಗೆ ನಮಸ್ಕರಿಸಿ, ವಯೋವೃದ್ಧರೂ ಜ್ಞಾನವೃದ್ಧರೂ ಆದ ಬ್ರಾಹ್ಮಣರಿಂದ ಆಶೀರ್ವಾದವನ್ನು ಪಡೆದು, ಬ್ರಾಹ್ಮಣೋತ್ತಮರು, ಸೇವಕರು, ಸೂತರು ಇವರಿಂದ ಪರಿವಾರಿತನಾಗಿ ತೀರ್ಥಯಾತ್ರೆಗೆ ಹೊರಟನು.

ರಾಜಪುತ್ರನಾದ ಅರ್ಜುನನು ಪ್ರಥಮದಲ್ಲಿ ಗಂಗಾನದಿಯನ್ನು ಹೊಂದಿ, ಗಂಗಾದ್ವಾರ (ಹರಿದ್ವಾರ) ಪ್ರಯಾಗ, ಕಾಶಿಯೇ ಮೊದಲಾದ ಗಂಗೆಯ ದಡಗಳನ್ನು ಸಂಚರಿಸುತ್ತಾ, ಗಂಗೆಯ ಪುಣ್ಯತೀರದಲ್ಲಿಯ ಕ್ಷೇತ್ರಗಳನ್ನು ಸಂದರ್ಶಿಸುತ್ತಾ ದಕ್ಷಿಣ ಸಮುದ್ರದೆಡೆಗೆ ಬಂದನು. ಪುರಾಣ ಪ್ರಸಿದ್ಧವಾದ ಮಹಾನದಿ, ಪುರುಷೋತ್ತಮ ಕ್ಷೇತ್ರ (ಜಗನ್ನಾಥ ಪುರೀ), ಸಿಂಹಾಚಲ ಇವುಗಳನ್ನು ನೋಡುತ್ತಾ ಗೋದಾವರೀ ನದಿಯನ್ನು ದರ್ಶಿಸಿ, ಪುಣ್ಯಕರವಾದ ಆ ನದಿಯಲ್ಲಿ ಸ್ನಾನವನ್ನು ಮಾಡಿ ಬ್ರಾಹ್ಮಣರಿಗೆ ಭೂದಾನ, ಸುವರ್ಣದಾನಾದಿಗಳನ್ನು ಮಾಡಿದನು. ಅನಂತರ ಮಲಾಪಹಾ– ಕೃಷ್ಣವೇಣೀ ನದಿಗಳನ್ನು ಸಂದರ್ಶಿಸಿ ಮುಂದೆ ನಾಲ್ಕು ದ್ವಾರಗಳಿಂದ ರುದ್ರದೇವರ ಆವಾಸದಂತಿದ್ದ

ಪ್ರಮೋದಂ ವಿವಿಧೈರ್ದಾನೈರಕರೋದ್ಭೂಸುವರ್ಣಕೈಃ ॥43॥

ನದೀಂ ಮಲಾಪಹಾಖ್ಯಾಂ ಚ ದೃಷ್ಟ್ವಾ ಮೋದಂ ಯಯೌ ಶುಭಮ್ ।
ತತಃ ಸಮಾಸಸಾದಾಸೌ ಕೃಷ್ಣವೇಣೀಂ ಸರಿದ್ವರಾಮ್ ॥44॥

ಶಿವಸ್ಯ ನಿಯತಾವಾಸಂ ಚತುರ್ದ್ವಾರಸಮನ್ವಿತಮ್ ।
ನಾನಾತೀರ್ಥಗಣಾಕೀರ್ಣಂ ಶ್ರೀಪರ್ವತಮವೈಕ್ಷತ ॥45॥

ನದೀಂ ಪಿನಾಕಿನೀಂ ತೀರ್ತ್ವಾ ಗತ್ವಾ ದೇವರ್ಷಿಸೇವಿತಮ್ ।
ನಾರಾಯಣಪ್ರಿಯಾವಾಸಮಪಶ್ಯದ್ವೇಂಕಟಾಚಲಮ್ ॥46॥

ಶೃಂಗೇಽಸ್ಯ ಭೂಭೃತಸ್ತುಂಗೇ ಸ್ಥಿತಂ ಲೋಕೈಕನಾಯಕಮ್ ।
ಅಪೂಜಯದ್ಧರಿಂ ಭಕ್ತ್ಯಾ ಪ್ರಸಿದ್ಧಂ ಶುಭಸಿದ್ಧಯೇ ॥47॥

ಅವರುಹ್ಯ ವೇಂಕಟಮಹಾದ್ರಿಶೃಂಗತಃ
ಸ ದದರ್ಶ ಸಿದ್ಧಮುನಿಸಂಘಸೇವಿತಾಮ್ ।
ಕಲಶೋದ್ಭವೇನ ಮುನಿನಾ ಸಮಾಹೃತಾಂ
ತಟಿನೀಂ ಸುವರ್ಣಮುಖರೀಸಮಾಹ್ವಯಾಮ್ ॥48॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ ಶ್ರೀ 'ಸುವರ್ಣಮುಖರೀಮಾಹಾತ್ಮ್ಯೇ ಅರ್ಜುನತೀರ್ಥಯಾತ್ರಾಗಮನವರ್ಣನಮ್' ನಾಮ ಏಕೋನತ್ರಿಂಶೋಽಧ್ಯಾಯಃ ॥29॥

* * *

ಶ್ರೀಶೈಲವನ್ನು ಸಂದರ್ಶಿಸಿದನು. ಮುಂದೆ ಪಿನಾಕಿನೀ ನದಿಯನ್ನು ದಾಟಿ ನಾರಾಯಣನ ಪ್ರಿಯನಿವಾಸವೆನಿಸಿದ ವೇಂಕಟಗಿರಿಗೆ ಬಂದು, ಅಲ್ಲಿ ಉನ್ನತವಾದ ಸ್ಥಾನದಲ್ಲಿ ನೆಲೆಸಿರುವ ಶ್ರೀನಿವಾಸನನ್ನು ಶುಭಪ್ರಾಪ್ತ್ಯರ್ಥವಾಗಿ ಭಕ್ತಿಯಿಂದ ಪೂಜಿಸಿದನು. ಅನಂತರ ಅರ್ಜುನನು ವೇಂಕಟಾಚಲದಿಂದ ಕೆಳಗಿಳಿದು ಅಗಸ್ತ್ಯರಿಂದ ಭೂಮಿಗೆ ತರಲ್ಪಟ್ಟ, ಸಿದ್ಧಮುನಿಗಳಿಂದ ಸೇವಿತವಾದ, ಸುವರ್ಣಮುಖರೀ ಎಂಬ ನದಿಯನ್ನು ನೋಡಿದನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀವರಾಹ ಸಂವಾದದಲ್ಲಿ ಅರ್ಜುನತೀರ್ಥಯಾತ್ರಾವರ್ಣನವೆಂಬ ಇಪ್ಪತ್ತೊಂಬತ್ತನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥ ತ್ರಿಂಶೋಽಧ್ಯಾಯಃ

[ಸುವರ್ಣಮುಖರೀ ಮಾಹಾತ್ಮ್ಯಪ್ರಶಂಸಾಯಾಂ ಭರದ್ವಾಜಾಶ್ರಮವರ್ಣನಮ್]

**ಸೂತ ಉವಾಚ–**

ತಥಾ ಸರ್ವಾಣಿ ತೀರ್ಥಾನಿ ಸಮಾಲೋಕ್ಯಾಗತಸ್ಯ ಚ ।
ಮುದಂ ಪ್ರಗುಣಯಾಂಚಕ್ರೇ ಸಾ ಪಾರ್ಥಸ್ಯ ಮಹಾಪಗಾ ॥1॥

ಯಸ್ಯಾಸ್ತಟನಿ ಕುಂಜೇಷು ಮೋದಂತೇ ವನಿತಾಃ ಸುಖಾಃ ।
ಸಿದ್ಧಾಃ ಸಂಸೇವಿತಾ ವಾತೈಃ ಶೀಕರಾಸಾರಶೀತಲೈಃ ॥2॥

ಯಾ ಸಮುದ್ಯತಹಸ್ತೇವ ಗಂಗಾಮಾಕಾಶವಾಹಿನೀಮ್ ।
ಆಲಿಂಗಿತಂ ಸಮುತ್ತುಂಗೈಃ ಕಲ್ಲೋಲೈರಭ್ರಸಂಗಿಭಿಃ ॥3॥

ಧೂಮ್ರೈರಾಹುತಿಸಂಭೂತೈಸ್ತರುಶಾಖೋಪಲಂಬಿಭಿಃ ।
ವಲ್ಕಲೈಶ್ಚ ವಿರಾಜಂತೇ ಯತ್ತಟಾಶ್ರಮಭೂಮಯಃ ॥4॥

ಮುನೀಂದ್ರೈಃ ಸುರವರ್ಯೈಶ್ಚ ಸ್ಥಾಪಿತಾನಿ ಸಮಂತತಃ ।
ಯತ್ತಟದ್ವಿತಯೇ ಭಾಂತಿ ದಿವ್ಯಲಿಂಗಾನಿ ಶೂಲಿನಃ ॥5॥

## ಮೂವತ್ತನೆಯ ಅಧ್ಯಾಯ

[ಸುವರ್ಣಮುಖರೀಪ್ರಶಂಸನ–ಭಾರದ್ವಾಜಾಶ್ರಮವರ್ಣನ]

ನಾನಾ ತೀರ್ಥಕ್ಷೇತ್ರಗಳ ಸಂದರ್ಶನವನ್ನು ಮಾಡಿ ಬಂದಿದ್ದ ಅರ್ಜುನನ ಸಂತೋಷವನ್ನು ಸುವರ್ಣಮುಖರೀನದಿಯು ದ್ವಿಗುಣಗೊಳಿಸಿತು. ಆ ಸುವರ್ಣಮುಖೀ ನದಿಯ ದಡಗಳಲ್ಲಿರುವ ಪುಷ್ಪ ವಾಟಿಕೆಯಲ್ಲಿ ಸ್ತ್ರೀಯರು ನೀರಿನ ತುಂತುರುಗಳಿಂದ ಕೂಡಿದ ತಣ್ಣಗೆ ಬೀಸುವ ಗಾಳಿಯಿಂದ ಬಹು ಸುಖವನ್ನನುಭವಿಸುತ್ತಿದ್ದರು. ಉನ್ನತ ವಾದ ತೆರೆಗಳಿಂದ ಕೂಡಿದ ಸುವರ್ಣಮುಖರೀ ನದಿಯು ತರಂಗಗಳೆಂಬ ತನ್ನೆರಡು ಕೈಗಳಿಂದ ಆಕಾಶವಾಹಿನಿಯಾದ ಗಂಗೆಯನ್ನು ಆಲಿಂಗನಮಾಡಿಕೊಳ್ಳುವದೇನೋ ಎಂಬಂತೆ ಕಾಣುತ್ತಿತ್ತು. ಅದರ ದಡವು ಹೋಮಾಗ್ನಿಗಳಿಂದ, ಕೂಡಿದ್ದ ಋಷಿಗಳ ಆಶ್ರಮಗಳಿಂದಲೂ, ನಾರುಮಡೆಗಳನ್ನು ಒಣಗು ಹಾಕಿದ್ದ ಗಿಡಗಳಿಂದಲೂ

ಯದೀಯಸೈಕತಾವಾಸವಿಶ್ರಾಂತಾ ಮಾನಸಂ ಸರಃ ।
ನ ಸ್ಮರಂತಿ ನಿಜಾವಾಸಂ ಮರಾಲಾ ವಿಹಗೋತ್ತಮಾಃ ॥6॥

ಶಮಿತಾವಗ್ರಹಾತಂಕೈಃ ಕುಲ್ಯಾಮುಖವಿನಿರ್ಗತೈಃ ।
ಪುಷ್ಣಾತಿ ತೋಯೈಃ ಸಸ್ಯಾನಿ ಲೋಕರಕ್ಷಾಕ್ಷಮಾಣಿ ಯಾ ॥7॥

ಚಕ್ರವಾಕಕುಚೋತ್ತುಂಗವೀಚಿವಲ್ಲೀವಿಭೂಷಿತಾ ।
ಆವರ್ತನಾಭಿವಿಲಸತ್ಸೈಕತಶ್ರೋಣಿಮಂಡಲಾ ॥8॥

ಪ್ರಫುಲ್ಲಪದ್ಮವದನಾ ಚಲನ್ಮೀನಯುಗೇಕ್ಷಣಾ ।
ವಿಲಸತ್ಫೇನವಸನಾ ಹಂಸಯಾನಮನೋಹರಾ ॥9॥

ಜಲಪಕ್ಷಿರವಾಲಾಪಾ ನಯನಾನಂದಕಾರಿಣೀ ।
ಅಪೂರ್ವಕಾಮಿನೀರೂಪಾ ಯಾ ವಿಭಾತ್ಯಂಬುಧಿಪ್ರಿಯಾ ॥10॥

ರೋಧಸ್ಯಂತರವಾಹಿನ್ಯಾ ನದ್ಯಾಃ ಪ್ರಾಚ್ಯಾಂ ಧನಂಜಯಃ ।
ದದರ್ಶ ಶೈಲಮುತ್ತುಂಗಂ ಕಾಲಹಸ್ತಿಸಮಾಹ್ವಯಮ್ ॥11॥

ಉದಗ್ರಶಿಖರಾಭೋಗೋಲ್ಲಿಖಿತಾಕಾಶಮಂಡಲಮ್ ।
ಸಪ್ತಪಾತಾಲಮೂಲಾಧೋರೂಢಮಾಲೋಪಲಾಂಚಿತಮ್ ॥12॥

ಶೋಭಿತವಾಗಿರುವದು. ನದಿಯ ಎರಡೂ ತೀರಗಳಲ್ಲಿ ದೇವತೆಗಳು-ಋಷಿಗಳಿಂದ ಪ್ರತಿಷ್ಠಾಪಿಸಲ್ಪಟ್ಟ ಶಿವಲಿಂಗಗಳಿಂದ ವಿರಾಜಮಾನವಾಗಿದ್ದಿತು. ಸುವರ್ಣಮುಖರಿಯ ಮರಳಿನಲ್ಲಿ ಮನೆ ಮಾಡಿಕೊಂಡು ವಿಶ್ರಮಿಸುತ್ತಿದ್ದ ಹಂಸಪಕ್ಷಿಗಳು ಮಾನಸ ಸರೋವರನ್ನೂ ಸಹ ಸ್ಮರಿಸುತ್ತಿರಲಿಲ್ಲ. ಇದರ ನೀರು ಬೆಳೆಗಳನ್ನು ಪೋಷಿಸುತ್ತಿತ್ತು. ಚಕ್ರವಾಕಗಳೆಂಬ ಪುಷ್ಪಕುಚಗಳಿಂದಲೂ, ಅಲೆಗಳ ಸಮೂಹವೆಂಬ ಭೂಷಣ (ಆಭರಣ)ಗಳಿಂದಲೂ, ಆಳವಾದ ಸುಳಿಗಳೆಂಬ ನಾಭಿಯಿಂದಲೂ, ಮರಳಿನ ದಿನ್ನೆಗಳೆಂಬ ನಿತಂಬಗಳಿಂದಲೂ, ವಿಕಾಸವನ್ನು ಹೊಂದಿದ ಕಮಲಗಳೆಂಬ ಕಣ್ಣುಗಳಿಂದ ನೊರೆಗಳೆಂಬ ವಸ್ತ್ರದಿಂದಲೂ, ಹಂಸಗಳ ನಡಿಗೆಯೆಂಬ ರಮಣೀಯತ್ವ ದಿಂದಲೂ, ಜಲಪಕ್ಷಿಗಳ ಕಲಕಲ ಧ್ವನಿಯೆಂಬ ಮಾತಿನಿಂದಲೂ, ನೋಡುವವರ ಕಣ್ಣುಗಳಿಗೆ ಆನಂದವನ್ನುಂಟುಮಾಡುತ್ತಾ ಸಮುದ್ರರಾಜನ ಪ್ರೀತಿಪಾತ್ರಳಾದ ಅಪೂರ್ವಸ್ತ್ರೀಯಂತೆ ಆ ನದಿಯು ರಂಜಿಸುತ್ತಿತ್ತು.

ಆ ನದಿಯ ದಡದಲ್ಲಿ ಶಿಖರಗಳಿಂದ ಆಕಾಶವನ್ನು ಮತ್ತು ಪಾತಲವನ್ನು ವ್ಯಾಪಿಸಿರುವ ಪರ್ವತವನ್ನು ಮತ್ತು ಆ ಪರ್ವತದಲ್ಲಿ ದೇವತೆಗಳಿಂದ ಸಂಪೂಜಿತನಾದ ಕಾಲಹಸ್ತೀಶ್ವರನೆಂಬ ರುದ್ರದೇವರನ್ನು ನೋಡಿ, ಪಾರ್ವತಿಪ್ರಿಯನಾದ ರುದ್ರದೇವರನ್ನು ಭಕ್ತಿಯಿಂದ ನಮಿಸಿ, ಪೂಜಿಸಿ,

ಸ್ನಾತ್ವಾ ತಸ್ಯಾಂ ಮಹಾನದ್ಯಾಂ ಕಸ್ಮಿಂಶ್ಚಿಚ್ಛೈಲೇ ಸುರಾರ್ಚಿತಮ್ ।
ಅಪಶ್ಯದರ್ಜುನೋ ದೇವಂ ಕಾಲಹಸ್ತೀಶನಾಮಕಮ್ ॥13॥

ಸಂಪೂಜ್ಯ ಚ ಮಹಾದೇವಂ ನಗೇಂದ್ರತನಯಾಸಖಮ್ ।
ಮನಸಾ ಭಕ್ತಿಯುಕ್ತೇನ ಕೃತಾರ್ಥತ್ವಮುಪೇಯಿವಾನ್ ॥14॥

ತತೋ ಮಹಾಗಿರೌ ತಸ್ಮಿನ್ನದ್ಭುತೈಕನಿಕೇತನೇ ।
ಚಚಾರಾಭೂತಪೂರ್ವಾಣಾಂ ವಿಶೇಷಾಣಾಂ ದಿದೃಕ್ಷಯಾ ॥15॥

ಸಿದ್ಧಾನಾಲೋಕಯಾಮಾಸ ವಸತೋ ಗಿರಿಸಾನುಷು ।
ಗಾಯತೋ ದೇವದೇವಸ್ಯ ಚರಿತ್ರಾಣ್ಯಬಲಾಯುತಾನ್ ॥16॥

ಅಪ್ಸರೋಲಲನಾಜುಷ್ಟಾನ್ಪುಷ್ಪಾಸವಮದಾಕುಲಾನ್ ।
ನಿಕುಂಜೇಷು ಸಮಾಸೀನಾನ್ಗಂಧರ್ವಾನ್ನೈಕ್ಷತಾದರಾತ್ ॥17॥

ವಿವಿಕ್ತೇಷು ಪ್ರದೇಶೇಷು ಶಿವಧ್ಯಾನಪರಾಯಣಾನ್ ।
ಅಪಶ್ಯದ್ಯೋಗಿನೋ ದಿವ್ಯಾನಾದರಾನಂದಶಾಲಿನಃ ॥18॥

ಪ್ರಶಾಂತಾನ್ಯಾಶ್ರಮಪದಾನ್ಯವೈಕ್ಷತ ಸಮಂತತಃ ।
ಬಲಿನೀವಾರವಿಲಸದ್ದ್ವಾರಭೂಮೀಶ್ಚ ಪಾಂಡವಃ ॥19॥

ನಿರಾಹಾರಾನ್ವಾಯುಭುಜಃ ಪರ್ಣಾದಾನಾತಪಾಶನಾನ್ ।
ಶಾಂತಾನಾಲೋಕಯಾಮಾಸ ಮುನೀನ್ನಿಯಮಿತೇಂದ್ರಿಯಾನ್ ॥20॥

ಮುದಂ ವಿತೇನಿರೇ ತಸ್ಯ ನೇತ್ರಯೋಃ ಕಮಲಾಕರಾಃ ।
ಫುಲ್ಲಸೌಗಂಧಿಕಾಮೋದಸಂವಾಸಿತದಿಗಂತರಾಃ ॥21॥

ಕೃತಕೃತ್ಯನಾದನು.

ಸ್ವೇಚ್ಛೆಯಿಂದ ಸಂಚರಿಸುತ್ತಿದ್ದ ಅರ್ಜುನನು ಆ ಪರ್ವತದಲ್ಲಿ ವಾಸವಾಗಿರುವ ಸಿದ್ಧಜನರು, ಅಪ್ಸರೆಯಿಂದ ಕೋಡಿಕೊಂಡು ಪುಷ್ಪಮಕರಂದವನ್ನಾಸ್ವಾದಿಸುತ್ತಿದ್ದ ಗಂಧರ್ವರನ್ನು, ಶಿವಧ್ಯಾನ ಪರಾಯಣರಾದ ಮಹಾಯೋಗಿಗಳನ್ನು, ನಿರಾಹಾರರಾದ, ವಾಯುಭಕ್ಷಕರಾದ, ಎಲೆಗಳನ್ನು ತಿಂದು ಬದುಕುವ, ಪ್ರಶಾಂತಮನಸ್ಕರಾದ ಅನೇಕ ಮುನಿಗಳನ್ನು, ಅರಳಿದ ಕಮಲಗಳ ಪರಿಮಳದಿಂದ ವ್ಯಾಪ್ತವಾದ ಸರೋವರಗಳನ್ನು, ಬೇಟೆಯಲ್ಲಿ ಆಸಕ್ತರಾದ ಬೇಡಜನರನ್ನು, ನೋಡಿದನು.

ಮೃಗಯಾಸಂಭೃತಧಿಯಶ್ಚರತೋಽಧಿಜ್ಯಕಾರ್ಮುಕಾನ್ ।
ದದರ್ಶಾನ್ವೇಷಿತಮೃಗಾನ್ ಕಿರಾತಾನ್ ವನಿತಾಯುತಾನ್ ॥22॥

ತತೋ ದಕ್ಷಿಣದಿಗ್ಭಾಗೇ ಚರನ್ನದ್ರೇರ್ಮನೋಹರೇ ।
ಪುಣ್ಯಮಾಶ್ರಮಮದ್ರಾಕ್ಷೀದ್ಭರದ್ವಾಜಸ್ಯ ಕೌರವಃ ॥23॥

ಕದಲೀನಾರಿಕೇಲಾಮ್ರಕೋಲಚಂಪಕಚಂದನೈಃ ॥24॥

ತಕ್ಕೋಲಾಶೋಕಹಿಂತಾಲತಾಲಕೇತಕಿದಾಡಿಮಾಃ ।
ಜಂಬೂಕದಂಬಕತಕಖದಿರಾರ್ಜುನಪಾಟಲೈಃ ॥25॥

ನಾಗಪುನ್ನಾಗಸರಲದೇವದಾರುಕರಂಜಕೈಃ ।
ಲವಂಗಲುಂಗಲವಲೀಪ್ರಿಯಂಗೂತಿಲಕೈರಪಿ ॥26॥

ವಿಭೀತಶ್ರೀಫಲಾಶ್ವತ್ಥಮಧೂಕಪ್ಲಕ್ಷಕೇಸರೈಃ ।
ಪೂಗಜಂಬೀರನಾರಂಗನಿಂಬಾಮಲಕಕೌಶಿಕೈಃ ॥27॥

ಅನ್ಯೈಶ್ಚ ಫಲಪುಷ್ಪಾಢ್ಯೈಃ ಶೋಭಿತಂ ಧರಣೀರುಹೈಃ ।
ವಾಸಂತೀಕುಂದಜಾತ್ಯಾದಿಲತಾಭಿಃ ಪರಿವೇಷ್ಟಿತಮ್ ॥28॥

ಅಪೂರ್ವಸೌರಭಾಕೃಷ್ಟಭ್ರಮರೀಭಿಃ ಸಮಂತತಃ ।
ಚಕ್ರವಾಕಬಕಕ್ರೌಂಚಹಂಸಕಾರಂಡವಾಶ್ರಯೈಃ ॥29॥

ಅನಂತರ ಆ ಪರ್ವತದ ದಕ್ಷಿಣಭಾಗದಲ್ಲಿ ಅರ್ಜುನನು ಸಂಚರಿಸುತ್ತಾ ಭರದ್ವಾಜ ಮಹರ್ಷಿಗಳ ಪವಿತ್ರವಾದ ಆಶ್ರಮವನ್ನು ನೋಡಿದನು. ಅವರ ಆಶ್ರಮವು ತೆಂಗು, ಬಾಳೆ, ಮಾವು, ಸಂಪಿಗೆ, ಶ್ರೀಗಂಧ, ಅಶೋಕ ಹಿಂತಾಲ, ತಾಲ ಕೇತಕೀ, ದಾಳಿಂಬ, ನೇರಳೆ, ಕಡಬ, ಕತಕ, ಖರಿದ, ಅರ್ಜುನ, ಸರಳ, ಸುರಹೊನ್ನೆ, ದೇವದಾರು, ಪಾಟಲ, ಕರಂಜಕ, ಲವಂಗ, ಲವಲೀಲತೆ, ಪ್ರಿಯಂಗು, ತಿಲಕ, ವಿಭೀತಕ, ಬಿಲ್ವ, ಅಶ್ವತ್ಥ, ಇಪ್ಪೆ, ಪ್ಲಕ್ಷ, ನಾಗಕೇಸರ, ಅಡಿಕೆ, ಗಜನಿಂಬೆ, ಕಿತ್ತಳೆ, ನಿಂಬೆ, ನೆಲ್ಲಿ ಮೊದಲಾದ ಅನೇಕ ಪುಷ್ಪಭರಿತವಾದ ಮರಗಿಡಬಳ್ಳಿಗಳಿಂದ ಸುತ್ತುವರೆಯಲ್ಪಟ್ಟಿದ್ದಿತು. ಪುಷ್ಪಗಳಿಂದ ಹೊರಸೂಸುವ ಸುವಾಸನೆಯಿಂದ ಆಕರ್ಷಿತವಾಗಿ ದುಂಭಿಗಳು ಝೇಂಕಾರವನ್ನು ಮಾಡುತ್ತಾ ಆಶ್ರಮವನ್ನು ಸುತ್ತುವರೆದಿದ್ದವು. ವಿವಿಧವಾದ ಪಕ್ಷಿಗಳು. ಜಲಪಕ್ಷಿಗಳು ಆಶ್ರಮದ ಸೌಂದರ್ಯವನ್ನು ಹೆಚ್ಚಿಸಿದ್ದವು. ಸಕಲೈಶ್ವರ್ಯಗಳನ್ನು ಹೊಂದಿದಂತಿದ್ದ ಆ ಆಶ್ರಮವು ಸರ್ವಕೌತುಕಗಳಿಗೆ ಆಶ್ರಯವಾಗಿದ್ದಿತು. ಸಿಂಹ, ಹುಲಿ,

ಸೌಗಂಧಿಕೋತ್ಪಲಾಂಭೋಜಕೈರವೌಘವಿರಾಜಿತೈಃ ।
ಸರೋಭಿರಮೃತಸ್ಯಂದಿಮಧುರಸ್ಫಾರವಾರಿಭಿಃ ॥30॥

ಸಮಾಪಾದಿತಲಕ್ಷ್ಮೀಕಂ ಕೌತುಕೈಕನಿಕೇತನಮ್ ।
ಸಿಂಹದಂತಾವಲವ್ಯಾಘ್ರತರಕ್ಷುರುರುರಂಕುಭಿಃ ॥31॥

ಮೃಗೈರನ್ಯೈಃ ಸಮಾಕೀರ್ಣಮನ್ಯೋನ್ಯಹಿತಕಾರಿಭಿಃ ।
ಜಿತಚೈತ್ರರಥೋದ್ಯಾನಮಧರೀಕೃತನಂದನಮ್ ॥32॥

ಅತಿವಾಙ್ಮನಸೋದಾರಂ ಪರಮಾನಂದಕಾರಣಮ್ ।
ಶಿವಾಗಮಾನಾಂ ದಿವ್ಯಾನಾಮರ್ಥಜಾತಮನುತ್ತಮಮ್ ॥33॥

ಪ್ರಕಾಶಯಂತಿ ಶಾವಾನಾಂ ಯತ್ರ ಮಂಜುಗಿರಃ ಶುಕಾಃ ।
ಯಸ್ಮಿನ್ ಹುತಾಶನೋದಾರಧೂಮಶ್ಯಾಮಲಿತಂ ನಭಃ ॥34॥

ಅಕಾಲಜಲದಭ್ರಾಂತಿಮಾತನೋತಿ ಶಿಖಂಡಿನಾಮ್ ॥35॥

ಯಸ್ಮಿನ್ವಿಹಾರಶ್ರಾಂತಾನಾಂ ಸಿಹಾನಾಂ ಸ್ವೇಚ್ಛಯಾ ಗತಾಃ ।
ನಿರ್ವಾಪಯಂತಿ ಗಾತ್ರಾಣಿ ಕರಿಣಃ ಕರಶೀಕರೈಃ ॥36॥

ತದಾಶ್ರಮಪದಂ ಪಶ್ಯನ್ವಿಸ್ಮಯಾಕ್ರಾಂತಮಾನಸಃ ।
ಪ್ರಭಾವಂ ಪಾಂಡುತನಯಃ ಪ್ರಶಶಂಸ ತಪಸ್ವಿನಾಮ್ ॥37॥

ನಿವಾರ್ಯ ತತ್ರ ತತ್ರೈವ ಸಕಲಾನನುಜೀವಿನಃ ।
ಮಿತ್ರೈರ್ವಿಪ್ರವರ್ಯೈಃ ಸಾರ್ಧಂ ಪ್ರವಿವೇಶ ತಮಾಶ್ರಮಮ್ ॥38॥

ಅಗ್ರೇ ದದರ್ಶ ಕೌಂತೇಯ ಸ್ಫುರತ್ಪಾವಕತೇಜಸಮ್ ।

ಕರಡಿ, ಜಿಂಕೆ, ಸ್ವಭಾವವೈರವನ್ನು ಮರೆತ ಇತರ ಮೃಗಗಳಿಂದಲೂ ಭೂಷಿತವಾಗಿದ್ದ ಆಶ್ರಮವು ಕುಬೇರನ ಚೈತ್ರರಥವನ್ನು, ದೇವೇಂದ್ರನ ನಂದನವನವನ್ನು ತಿರಸ್ಕರಿಸುವಂತಿದ್ದಿತು. ಮಧುರ ವಾಣಿಯಿಂದುಪೇತವಾದ ಗಿಳಿಗಳು, ಹೋಮಾಗ್ನಿಯನ್ನು ಮೇಘವೆಂದು ಭ್ರಮಿಸಿ ನರ್ತಿಸುತ್ತಿದ್ದ ನವಿಲುಗಳು, ನೀರನ್ನು ಸಿಂಚಿಸುತ್ತಿದ್ದ ಆನೆಗಳು, ಇವುಗಳಿಂದ ಕೂಡಿದ್ದ ಆಶ್ರಮವನ್ನು ನೋಡಿದ ಅರ್ಜುನನು ತನ್ನ ಪರಿವಾರವನ್ನು ದೂರದಲ್ಲಿಯೇ ನಿಲ್ಲಿಸಿ, ಬ್ರಾಹ್ಮಣೋತ್ತಮರನ್ನು ಜೊತೆಯಲ್ಲಿಟ್ಟುಕೊಂಡು ಅರ್ಜುನನು ಆ ಆಶ್ರಮವನ್ನು ಪ್ರವೇಶಿಸಿ, ಋಷಿಸಂಘದ ಮಧ್ಯದಲ್ಲಿ ತೇಜಸ್ಸಿನಿಂದ ಹೊಳೆಯುತ್ತಿದ್ದ, ಜಿಂಕೆಯ ಚರ್ಮವನ್ನು ಧರಿಸಿದ್ದ, ಕೆಂಗೂದಲಿನಿಂದ ಉಪೇತವಾದ

ಭರದ್ವಾಜಂ ಮುನಿವರ್ಯೈರನೇಕೈಃ ಪರಿವಾರಿತಮ್ ॥39॥

ಭಸ್ಮಾನುಲಿಪ್ತಸರ್ವಾಂಗಂ ಮೃಗಚರ್ಮೋತ್ತರೀಯಕಮ್ ।
ನವವಾರಿದಸಂವೀತಂ ಕೈಲಾಸಮಿವ ಭಾಸ್ವರಮ್ ॥40॥

ಜಟಾಭಿರ್ಲಂಬಮಾನಾಭಿರ್ಭಾಸ್ವಂತಂ ಸ್ವರ್ಣಕಾಂತಿಭಿಃ ।
ಸ್ಥಿರವಿದ್ಯುಲ್ಲತಾಕೀರ್ಣಮಿವ ಶಾರದನೀರದಮ್ ॥41॥

ಶ್ರುತಿಸ್ಮೃತಿಪುರಾಣಾರ್ಥೈರೇಕೀಭೂಯ ಸಮಾಗತೈಃ ।
ಅಂಗೀಕೃತಮಿವಾಕಾರಂ ದಿವ್ಯಜ್ಞಾನಶುಭಾಸ್ಪದಮ್ ॥42॥

ಧೃತಿಕ್ಷಾಂತಿದಯಾತುಷ್ಟಿಶಾಂತಿಭಿರ್ನಿತ್ಯಸೇವಿತಮ್ ।
ಪ್ರಿಯಾಭಿರಿವ ರಕ್ತಾಭಿರಖಂಡಬ್ರಹ್ಮವರ್ಚಸಮ್ ॥43॥

ಉಪಗಮ್ಯ ಶನೈಃ ಪಾರ್ಥಸ್ತತ್ಪಾದಾಂಬುಜಯೋಃ ಪುರಃ ।
ಚಕ್ರೇ ಪ್ರಣಾಮಂ ಸಾಷ್ಟಾಂಗಂ ಸಮಾಲಿಂಗಿತಭೂತಲಮ್ ॥44॥

ತಮಾಗತಂ ಪೃಥಾಪುತ್ರಮುತ್ಥಾಪ್ಯ ಮುನಿಪುಂಗವಃ ।
ಆಶೀರ್ಭಿರೇಧಯಾಂಚಕ್ರೇ ಪ್ರಹರ್ಷೋತ್ಫುಲ್ಲಮಾನಸಃ ॥45॥

ಸಂಪೂಜ್ಯ ಚ ಯಥಾನ್ಯಾಯಂ ತಮರ್ಘ್ಯಾದ್ಯೈಃ ಪ್ರಿಯಾತಿಥಿಮ್ ।
ವಿನಿರ್ದಿಷ್ಟಾಸನಾಸೀನಂ ತಮಪೃಚ್ಛದನಾಮಯಮ್ ॥46॥

ಸಮ್ಮಾನನಮವಾಪ್ಯಾಸ್ಮಾನ್ಮುನೇಃ ಪಾಂಡವಮಧ್ಯಮಃ ।
ಪ್ರಿಯೈರ್ವಾಕ್ಯೈರ್ಮುನಿಪತೇರಕರೋನ್ಮನಸೇ ಮುದಮ್ ॥47॥

ಸಸ್ಮಾರಾಽಥ ಭರದ್ವಾಜಃ ಸ್ವರ್ಧೇನುಂ ಕಾಮದೋಹಿನೀಮ್ ।

ಜಟೆಯಿಂದ ಅಲಂಕೃತರಾಗಿದ್ದ, ಶ್ರುತಿ, ಸ್ಮೃತಿ, ಪುರಾಣಗಳ ಅರ್ಥವೆಲ್ಲವನ್ನು ತಿಳಿದು ಆತ್ಮಜ್ಞಾನದ ಮೂರ್ತಿಯಂತಿದ್ದ, ದಯಾ, ದಾಕ್ಷಿಣ್ಯ, ಕ್ಷಮೆ, ಸಂತೋಷ, ಶಾಂತಿ ಮೊದಲಾದ ಸದ್ಗುಣಗಳಿಂದ ಜಾಜ್ವಲ್ಯಮಾನರಾಗಿದ್ದ ಭರದ್ವಾಜರನ್ನು ನೋಡಿ, ಅವರ ಸಮೀಪಕ್ಕೆ ಹೋಗಿ ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿದನು. ತನ್ನನ್ನು ನಮಸ್ಕರಿಸಿದ ಅತಿಥಿಯಾದ ಅರ್ಜುನನನ್ನು ಎಬ್ಬಿಸಿ, ಆಶೀರ್ವಚನಗಳಿಂದ ಆಶೀರ್ವದಿಸಿ, ಅರ್ಘ್ಯಪಾದ್ಯಾದಿಗಳಿಂದುಪಚರಿಸಿ ಅವನ ಕುಶಲವನ್ನು ವಿಚಾರಿಸಿದರು. ಅನಂತರ ಭರದ್ವಾಜರು ನಂದಿನಿಯೆಂಬ ಕಾಮಧೇನು ವನ್ನು ಸ್ಮರಿಸಿ ಯಥೇಷ್ಟವಾದ ಭಕ್ಷ್ಯಭೋಜ್ಯಗಳಿಂದ ಅರ್ಜುನನಿಗೆ ಅನುಪಮವಾದ ಉಪಚಾರವನ್ನು ಮಾಡಿದರು. ಅರ್ಜುನನೂ

ಸಾ ವಿತೇನೇऽತಿಮಹತೀಂ ಭಕ್ಷ್ಯಭೋಜ್ಯಾದಿಕಲ್ಪನಾಮ್ ॥48॥

ಭುಕ್ತ್ವಾ ಪಾರ್ಥಃ ಸಾನುಚರಸ್ತಮುಪಾಸ್ಯ ತಪೋನಿಧಿಮ್ ।
ದಿನಶೇಷಂ ಕಥಾಲಾಪಕೌತುಕೇನಾತ್ಯವಾಹಯತ್ ॥49॥

ವಿಪ್ರೈರಮಾತ್ಯೈಃ ಸಹಿತೋ ಯಯೌ ತಸ್ಯ ಕುಟೀಗೃಹಾನ್ । ।50॥

ತತ್ರಾಸೀನೋ ಮುನಿಪತೇರಾಶೀರ್ಭಿರಭಿನಂದಿತಃ ।
ಆನಂದ್ಯಮಾನೋ ಮುಮುದೇ ತನ್ನದೀಶೀತಲಾನಿಲೈಃ ॥51॥
ಸಂಪ್ರಾಪಿತಾ ಕೇನ ಭುವಃ ಪ್ರಭೂತಾ
ಕಸ್ಮಾನ್ಮಹೀಧ್ರಾದಧಿಕಪ್ರಭಾವಾ ।
ಇತಿಪ್ರಭಾವಂ ಪರಿಪೃಚ್ಛ್ಯ ನದ್ಯಾಃ
ಶ್ರೋತುಂ ಮುನೀಂದ್ರಾನ್ಮತಿರಸ್ಯ ಜಜ್ಞೇ ॥52॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ 'ಶ್ರೀಸುವರ್ಣಮುಖರೀ ಮಾಹಾತ್ಮ್ಯಪ್ರಶಂಸಾಯಾಂ ಭರದ್ವಾಜಾಶ್ರಮವರ್ಣನಂ' ನಾಮ ತ್ರಿಂಶೋऽಧ್ಯಾಯಃ ॥30॥

* * *

ಸಹ ತನ್ನ ಸಹಚರರೊಂದಿಗೆ ಯಥೇಚ್ಛವಾಗಿ ಭೋಜನವನ್ನು ಮಾಡಿ, ಮಹರ್ಷಿಗಳನ್ನು ನಮಿಸಿ, ಅವರ ಸಮೀಪದಲ್ಲಿಯೇ ಅಂದಿನ ಹಗಲಿನ ಶೇಷವನ್ನು ಕಳೆದನು. ಸಂಜೆಯಾಗುತ್ತಿದ್ದಂತೆ ಸಾಯಾಹ್ನಿಕಗಳನ್ನು ಮುಗಿಸಿ ಸುವರ್ಣ ಮುಖರಿಯ ಶೀತಲೋದಕದ ಸಂಪರ್ಕದಿಂದ ಪವಿತ್ರವಾಗಿ ಸುಖಕರವಾಗಿದ್ದ ಗಾಳಿಯಿಂದ ಆನಂದವನ್ನನುಭಿಸುತ್ತಿದ್ದ ಭರದ್ವಾಜ ಮಹರ್ಷಿಗಳ ಬಳಿ 'ಅಮಿತ ಪ್ರಭಾವವುಳ್ಳ ಈ ನದಿಯು ಯರಿಂದ ಭೂಮಿಗೆ ತರಲ್ಪಟ್ಟಿರುವದು? ಯಾವ ಪರ್ವತದಲ್ಲಿ ಈ ನದಿಯು ಹುಟ್ಟುವದು? ಎಂಬುದನ್ನು ತಿಳಿಯುವ ಕುತೂಹಲದಿಂದ ಬಂದನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ ಭರದ್ವಾಜಾಶ್ರಮವರ್ಣನವೆಂಬ ಮೂವತ್ತನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥೈಕತ್ರಿಂಶೋಽಧ್ಯಾಯಃ ॥31॥

[ಶಂಕರವಿವಾಹಾಗಸ್ತ್ಯದಕ್ಷಿಣದಿಗ್ಗಮನವರ್ಣನಮ್]

ಸೂತ ಉವಾಚ-

ಕೃತಸಾಯಂತನವಿಧಿಂ ಹುತಾಶನಸಮದ್ಯುತಿಮ್ ।
ಸುಖಾಸೀಂ ಮುನಿಪತಿಂ ಪ್ರಣಮ್ಯ ಭರತರ್ಷಭಃ ॥1॥

ತದೀಯಶೀತಲಾಮೋದಸುಧಾಪೂರಾನುಮೋದಿತಃ ।
ಗಂಭೀರಂ ಪ್ರಶ್ರಯೋಪೇತಮಿದಂ ವಚನಮಬ್ರವೀತ್ ॥2॥

ಅರ್ಜುನ ಉವಾಚ-

'ಮುನಿಪುಂಗವ ಲೋಕೇಽಸ್ಮಿನ್ ಧನ್ಯ ಏಕೋಽಹಮೇವ ಹಿ ।
ಪುತ್ರಾವಶೇಷಂ ಭವತಾ ಯದೇವಂ ಸಮ್ಯಗಾದೃತಮ್ ॥3॥

ಭವದಾದರಸಂಜಾತಕೌತುಕಂ ಮಮ ಮಾಸನಮ್ ।
ಭವದ್ವಾಕ್ಯಾಮೃತಂ ದಿವ್ಯಂ ಪಾತುಂ ತ್ವರಯತೀವ ಮಾಮ್ ॥4॥

ಕಸ್ಮಾಚ್ಛೈಲಾದಿಯಂ ಜಾತಾ ಕೇನಾನೀತಾ ಮಹಾನದೀ ।
ಕಿಂ ಪುಣ್ಯಂ ಸ್ನಾನದಾನಾದ್ಯೈಃ ಕೃತೈಸ್ತತ್ರೋಪಲಭ್ಯತೇ ॥5॥

ಅಸ್ಯಾಃ ಪ್ರಭಾವಂ ಪ್ರಭವಂ ಪ್ರಹ್ವಸ್ಯ ಮಮ ಸನ್ಮನೇ ।

## ಮೂವತ್ತೊಂದನೆಯ ಅಧ್ಯಾಯ

[ಶಂಕರ ವಿವಾಹ- ಅಗಸ್ತ್ಯರ ದಕ್ಷಿಣದಿಗ್ಗಮನವರ್ಣನ]

ಸಾಯಾಹ್ನಿಕಗಳನ್ನು ಮುಗಿಸಿ ಸುಖಾಸೀನನಾದ ಹುತಾಶನನಂತೆ ಹೊಳೆಯುತ್ತಿದ್ದ ಭರದ್ವಾಜರನ್ನು ಕುರಿತು 'ಹೇ ಮುನಿಶ್ರೇಷ್ಠರೇ! ನಿಮ್ಮಿಂದ ಮಗನಂತೆ ಆದರಿಸಲ್ಪಟ್ಟು ಉಪಚಾರವನ್ನು ಹೊಂದಿದ, ನಿಮ್ಮ ಅನುಗ್ರಹಕ್ಕೆ ಪಾತ್ರನಾದ ನಾನು ಭಾಗ್ಯವಂತನೇ ಸರಿ. ಆದರೂ ಸಹ ಈ ನದಿಯ ವಿಷಯದಲ್ಲಿ ನಿಮ್ಮಿಂದ ತಿಳಿಯಬಯಸಿರುವೆನು. ಈ ಸುವರ್ಣಮುಖರೀ ನದಿಯು ಯಾವ ಪರ್ವತದಲ್ಲಿ ಹುಟ್ಟುವದು? ಸ್ನಾನದಾನಾದಿಗಳಿಂದ ಬರುವ ಫಲವಾವುದು? ದಯವಿಟ್ಟು

ವಕ್ತುಮರ್ಹಸಿ ಕಾರ್ಯೋರ್ ಹಿ ಭಕ್ತಾನುಗ್ರಹ ಏವ ತೇ ॥6॥

ಅರ್ಜುನಸ್ಯ ವಚಃ ಶ್ರುತ್ವಾ ಭರದ್ವಾಜೋ ದ್ವಿಜೋತ್ತಮಃ ।
ತದಾನನಂ ಸಮಾಲೋಕ್ಯ ವಾಕ್ಯಂ ವಾಕ್ಯವಿದಬ್ರವೀತ್ ॥7॥

ಭರದ್ವಾಜ ಉವಾಚ–

'ತ್ವಮರ್ಜುನ ಮಹಾಬಾಹೋ ಕೌರವಾನ್ವಯಪಾವನಃ ।
ವಿಶೇಷಾನ್ಮಮ ಮಾನ್ಯೋऽಸಿ ಧರ್ಮಪುತ್ರಾನುಜೋ ಯತಃ ॥8॥

ಅನೇಕೇ ಭೂಮಿಪಾ ದೃಷ್ಟಾ ನ ತೇ ತ್ವಮಿವ ಫಾಲ್ಗುನ ।
ಲೀಲಾರ್ಜವದಯೌದಾರ್ಯಧೈರ್ಯಗಾಂಭೀರ್ಯಶಾಲಿನಃ ॥9॥

ಕುಲಂ ವಿದ್ಯಾ ಧನಂ ಚೈವ ಬಲಿನಾಂ ಮದಕಾರಣಮ್ ।
ಭವಾದೃಶಾನಾಂ ಭವ್ಯಾನಾಂ ತಾನಿ ಪ್ರಶ್ರಯಕಾರಣಮ್ ॥10॥

ಪ್ರಾಜ್ಯೇಷು ರಾಜ್ಯಭೋಗೇಷು ವಿದ್ಯಮಾನೇಷು ಕೌರವ ।
ಋತೇ ಭವಂತಂ ಕೋ ವಾऽನ್ಯೋ ನೋಪೈತಿ ವಿಕೃತೇರ್ವಶಮ್ ॥11॥

ಪರವಾನಸ್ಮಿ ಕೌಂತೇಯ ಗೌಣೈರ್ಲೋಕೋತ್ತರೈಸ್ತವ ।
ಕಿಮಸ್ಯ ಕಥನೀಯಂ ತೇ ಕೌತುಕೋಪೇತಮಾನಸಃ ॥12॥

ಶ್ರುಣು ರಾಜನ್ಕಥಾಂ ದಿವ್ಯಾಂ ಮಯಾ ಮುನಿಮುಖಾಚ್ಛ್ರುತಾಮ್।
ಯಾಂ ಶ್ರುತ್ವಾ ಪಾತಕಾತಂಕಾನ್ಮುಚ್ಯಂತೇ ಸರ್ವಜಂತವಃ ॥13॥

ಪೂರ್ವಂ ದಾಕ್ಷಾಯಣೀ ದೇವೀ ಜನಕೇನಾವಮಾನಿತಾ ।
ತ್ಯಕ್ತ್ವಾ ತನುಂ ತಾಂ ನೀಹಾರಗಿರೇರಭವದಾತ್ಮಜಾ ॥14॥

ನನಗೆ ತಿಳಿಸಿರಿ' ಎಂದು ಪ್ರಾರ್ಥಿಸಿದನು. ಆಗ ಭರದ್ವಾಜರು ಅರ್ಜುನನನ್ನು ತಮಗೆ ಪ್ರಿಯನಾದವನೆಂದೂ, ಸತ್ವ, ಔದಾರ್ಯ, ಧೈರ್ಯ, ಗಾಂಭೀರ್ಯ, ದಯಾ, ಮಾರ್ದವತಾ, ಇವೇ ಮೊದಲಾದ ಗುಣಗಳಿಂದುಪೇತನಾಗಿ ಕುಲ, ವಿದ್ಯಾ, ಧನ, ಬಲಗಳಿದ್ದರೂ ಅವುಗಳ ಮದವಿಲ್ಲದಿರುವವನಾದ್ದರಿಂದ ಎಲ್ಲ ರಾಜರನ್ನು ಮೀರೀಸಿರುವೆಯೆಂದು ಅವನನ್ನು ನಾನಾ ರೀತಿಯಾಗಿ ಪ್ರಶಂಸಿಸಿ, ನಿನ್ನ ಲೋಕೋತ್ತರ ಗುಣಗಳಿಗೆ ವಶವಾಗಿರುವೆನೆಂದು ತಿಳಿಸುತ್ತಾ ಸರ್ವಪಾಪಾಪಹಾರಿಯಾದ ಮುನಿಗಳಿಂದ ಕೇಳಲ್ಪಟ್ಟ ಕಥೆಯನ್ನು ಹೇಳುವೆನು. ಕೇಳು ಎಂದು ನುಡಿದು ಸುವರ್ಣಮುಖರೀ ನದಿಯ ಪ್ರಾದುರ್ಭಾವದ ಹಿನ್ನೆಲೆಯನ್ನು ವಿವರಿಸುವರು.

ಸಪ್ತರ್ಷಿಭಿರುಪಾಗಮ್ಯ ಪ್ರಾರ್ಥಿತೋ ಧರಣೀಧರಃ ।
ಮೃತ್ಯುಂಜಯಾಯ ಸ್ವಾಂ ಪುತ್ರೀಂ ವಿವಾಹೇ ಹಾತುಮುದ್ಯತಃ ॥15॥

ವೃಷಭಾಂಕೋ ಜಗತ್ಸ್ವಾಮೀ ವಿವೋಢುಂ ಸರ್ವಮಂಗಳಾಮ್ ।
ಪ್ರಾಪ್ತೋ ಹಿಮವದಾವಾಸಮೋಷಧಿಪ್ರಸ್ಥನಾಮಕಮ್ ॥16॥

ತಚ್ಛ್ರಾಸನಾತ್ಸಮಾಜಗ್ಮುಃ ಸ್ಥಾವರಾಣಿ ಚರಾಣಿ ಚ ।
ಭೂತಾನಿ ಭೂತನಾಥಸ್ಯ ಕಲ್ಯಾಣಮಭಿನಂದಿತುಮ್ ॥17॥

ತದ್ಭೂರಿಭಾರಸಂಭಗ್ನಾ ಭೂಮಿರುತ್ತರಸಂಶ್ರಯಾ ।
ನಿಮ್ನತಾಮಾಯಯೌ ತಾವದ್ಯಾವತ್ಪಾತಾಲಮಾಸ್ಥಿತಾ ॥18॥

ನಿರ್ಭಾರಲಾಘವಾದಸ್ಮಾದ್ಭೃಶಂ ದಕ್ಷಿಣಗಾಮಿನೀ ।
ಊರ್ಧ್ವಂ ಗತಾ ಚ ತಂ ದೃಷ್ಟ್ವಾ ಸರ್ವೇಷಾಮಭವದ್ಭಯಮ್ ॥19॥

ಜ್ಞಾತ್ವಾ ತಾಂ ವಿಕೃತಿಂ ಭೂರ್ಮೇರ್ದ್ಯಷ್ಟ್ವಾಽಗಸ್ತ್ಯಂ ಮಹೇಶ್ವರಮ್ ।
'ಇತ ಏಹಿ ಮಹಾಪ್ರಾಜ್ಞೇ'ತ್ಯುಕ್ತ್ವಾ ವಚನಮಬ್ರವೀತ್ ॥20॥

'ಆಗತೇಷು ಸಮಸ್ತೇಷು ಭೂತೇಷ್ವತ್ರ ವಸುಂಧರಾ ।
ತದ್ಭಾರೇಣ ಸಮಾಕ್ರಾಂತಾ ವಿಕೃತಿಂ ಸಮುಪಾಗತಾ ॥21॥

ತದ್ಭುವಃ ಸಾಮ್ಯಕರಣೇ ತ್ವಮರ್ಹಸಿ ಮಹಾಮತೇ ।
ಋತೇ ತ್ವಾಮತ್ರ ಹಿ ತ್ವತ್ತಃ ಪರೇಣೈತತ್ಕಥಂ ಭವೇತ್? ॥22॥

ಹಿಂದೆ ದಕ್ಷಪ್ರಜಾಪತಿಯ ಮಗಳಾದ ದಾಕ್ಷಾಯಿಣೀ ಎಂದು ಪ್ರಸಿದ್ಧಳಾದ ಸತೀದೇವಿಯು ತನ್ನ ತಂದೆಯಿಂದಲೇ ಅಪಮಾನಿತಳಾಗಿ, ತನ್ನ ದೇಹವನ್ನು ತ್ಯಾಗಮಾಡಿ, ಹಿಮಗಿರಿಯ ಮಗಳಾಗಿ ಜನಿಸಿದಳು. ಸಪ್ತರ್ಷಿಗಳು ಬಂದು ಮಹಾದೇವನಿಗಾಗಿ ಕನ್ಯೆಯನ್ನು ಯಾಚಿಸಿದಾಗ ಅವರ ಪ್ರಾರ್ಥನೆಯಂತೆ ಪಾರ್ವತಿಯನ್ನು ಕೊಡಲು ಸಮ್ಮತಿಸಿದನು. ಆಗ ವೃಷಭಧ್ವಜನಾದ ಶಂಕರನು ಪರ್ವತರಾಜನ ಮಗಳನ್ನು ವಿವಾಹವಾಗಲು ಹಿಮವತ್ಪರ್ವತಕ್ಕೆ ಬಂದನು. ಅಷ್ಟೇ ಅಲ್ಲದೇ ಎಲ್ಲ ಸ್ಥಾವರ-ಚರರಾದ ಜೀವರಾಶಿಗಳು ರುದ್ರದೇವರ ಕಲ್ಯಾಣವನ್ನು ನೋಡಿ ಆನಂದಿಸಲು ಹಿಮವತ್ಪರ್ವತಕ್ಕೆ ಬಂದವು. ಸಮಸ್ತ ಜೀವರಾಶಿಗಳ ಅಪಾರವಾದ ಭಾರದಿಂದಾಗಿ ಭೂಮಿಯ ಉತ್ತರದಿಗ್ಭಾಗವು ಪಾತಾಲದ ವರೆಗೂ ಹುಗಿದುಹೋಗಿ ದಕ್ಷಿಣದಿಕ್ಕಿನ ಭೂಭಾಗವೆಲ್ಲವೂ ಹಗುರವಾಗಿ ಬಹಳ ಎತ್ತರಕ್ಕೆ ಏರಿತು. ಇದನ್ನು ನೋಡಿ ಎಲ್ಲರೂ ಭಯಗ್ರಸ್ತರಾದಾಗ ರುದ್ರದೇವರು ಅಗಸ್ತ್ಯರನ್ನು ತನ್ನ ಬಳಿ ಕರೆದು 'ಸಕಲ ಸ್ಥಾವರ ಜಂಗಮ ಪ್ರಾಣಿಗಳ ಭಾರದಿಂದ ಕೆಳಗೆ

ಮತ್ತೇಜಃಸಂಭವೋ ಹಿ ತ್ವಂ ಲೋಕಸಂರಕ್ಷಣೋದ್ಯತಃ ।
ತಸ್ಮಾನ್ಮದ್ವಚನಾದ್ವತ್ಸ ಭುವಮೇತಾಂ ಸಮೀಕುರು ॥23॥

ಮತ್ಪಾಣಿಗ್ರಹಣಾಲೋಕಕೌತುಕಾಯತ್ತಬುದ್ಧಿಷು ।
ಆಗತೇಷು ಸಮಸ್ತೇಷು ಸ್ಥಾತವ್ಯಂ ಭವತಾಽಪಿ ಚ ॥24॥

ತ್ವಂ ನ ತಿಷ್ಠಸಿ ಚೇದತ್ರ ನ ಕಶ್ಚಿದ್ವಿಕೃತಿಂ ಭುವಃ ।
ಅಪೇನೇತುಂ ಹಿ ಶಕ್ನೋತಿ ತದ್ಗಂತವ್ಯಂ ತ್ವಯಾಽನಘ ॥25॥

ಇಮಾಂ ಗಿರಿಸುತಾಪಾಣಿಗ್ರಹಕಲ್ಯಾಣಭಾಸುರಾಮ್ ।
ಮೂರ್ತಿಂ ಪ್ರದರ್ಶಯಿಷ್ಯಾಮಿ ಯತ್ರ ತಿಷ್ಠಸಿ ತತ್ರ ತೇ' ॥26॥

ಇತ್ಯುಕ್ತ್ವಾ ತಂ ಪರಿಷ್ವಜ್ಯ ವಿಸಸರ್ಜ ಮಹೇಶ್ವರಃ ।
'ತಥೇ'ತಿ ತಂ ಪ್ರಣಮ್ಯಾಸೌ ಯಯೌ ಯಾಮ್ಯಾಂ ದಿಶಂ ಮುನಿಃ ॥27॥

ವಿಂಧ್ಯಾದ್ರಿಂ ಸಮತಿಕ್ರಮ್ಯ ದಕ್ಷಿಣಾಮಗತೇ ದಿಶಮ್ ।
ಅಗಸ್ತ್ಯೇ ಮುನಿಶಾರ್ದೂಲೇ ಮಹೀ ಸಾಮ್ಯಮುಪಾಯಯೌ ॥28॥

ಭುವೋಽಪನೀಯ ವಿಕೃತಿಂ ಸ್ಥಿತಂ ಕಲಶಜಂ ಮುನಿಮ್ ।
ತುಷ್ಟುವುರ್ಹರ್ಷತರಲಾಃ ಸುರಗಂಧರ್ವಕಿನ್ನರಾಃ ॥29॥

ಸ ದದರ್ಶ ತತೋ ಗತ್ವಾ ಕಂಚಿಚ್ಛೈಲಂ ಸಮುನ್ನತಮ್ ।

ಕುಸಿದಿರುವ ಭೂಮಿಯನ್ನು ಪುನಃ ಸಮಗೊಳಿಸಲು ನೀನೊಬ್ಬನೆ ಸಮರ್ಥನಾಗಿರುವಿ. ನನ್ನ ತೇಜೋಂಶಸಂಭೂತನಾದ ನೀನು ಭೂಮಿಯ ಜನರನ್ನು ರಕ್ಷಿಸುವದರ ಗೋಸ್ಕರವಾಗಿ ದಕ್ಷಿಣ ದಿಕ್ಕಿಗೆ ಹೋಗಿ ನಿಲ್ಲು. ನಿನ್ನ ತೇಜಸ್ಸಿನ ಗುರುತ್ವದಿಂದಾಗಿ ಎತ್ತರಕ್ಕೆ ಏರಲ್ಪಟ್ಟ ದಕ್ಷಿಣ ದಿಕ್ಕು ಕೆಳಕ್ಕಿಳಿದು ಭೂಮಿಯು ಪುನಃ ಸಮವಾಗುವದು. ನೀನಿರುವಲ್ಲಿಯೇ ನನ್ನ-ಗಿರಿಜೆಯ ಕಲ್ಯಾಣವು ಕಾಣುವಂತೆ ಮಾಡುವೆನು' ಎಂದು ನುಡಿದರು.

ಆಗ ಅಗಸ್ತ್ಯರು 'ಹಾಗೆಯೇ ಆಗಲಿ ಎಂದು ಸಮ್ಮತಿಸಿ, ಮಹೇಶ್ವರನಿಗೆ ನಮಸ್ಕರಿಸಿ ದಕ್ಷಿಣ ದಿಕ್ಕಿನೆಡೆಗೆ ತೆರಳಿದರು. ವಿಂಧ್ಯಪರ್ವತವನ್ನು ದಾಟಿ ಅಗಸ್ತ್ಯರು ದಕ್ಷಿಣ ದಿಕ್ಕಿಗೆ ಬರಲು ಭೂಮಿಯು ಪುನಃ ಸಮತ್ವವನ್ನು ಪಡೆಯಿತು. ಅಗಸ್ತ್ಯರ ಕಾರ್ಯವನ್ನು ಕಂಡು ಸಂತುಷ್ಟರಾದ ದೇವತೆಗಳು, ಗಂಧರ್ವರು, ಕಿನ್ನರರು ಅವರನ್ನು ನಾನಾವಿಧವಾಗಿ ಹೊಗಳಿದರು.

ದಕ್ಷಿಣದಿಕ್ಕಿನ ದೇಶಗಳಲ್ಲಿ ಓಡಾಡುತ್ತಾ ಅಗಸ್ತ್ಯರು ವಿಶಾಲವಾದ ಪಾದಗಳಿಂದ ಭೂಮಿಯನ್ನು

ವಿತತೈರ್ಧರಣೀಂ ಪಾದೈರ್ಧೃತ್ವಾ ಸಂಸ್ಥಿತಮಗ್ರತಃ ॥30॥

ಮಹೌಷಧೀನಾಂ ರತ್ನಾನಾಮಶೇಷಾಣಾಂ ಸ್ವಯಂಭುವಾ ।
ಅಖಂಡತೇಜೋದೀಪ್ತಾನಾಂ ವಿನಿರ್ಮಿತಮಿವಾಕರಮ್ ॥31॥

ಸಮುನ್ನತೈರ್ಯಃ ಶಿಖರೈರ್ನಿಪತದ್ವ್ಯೋಮಭೂತಲೇ ।
ಉದಾರಧಾರಾಸಂಪನ್ನೈರ್ದಧತೀವ ನಿರಂತರಮ್ ॥32

ಶನೈರಾರುಹ್ಯ ತಂ ಶೈಲಮಗಸ್ತ್ಯೋ ಮುನಿಪುಂಗವಃ ।
ನಿವಾಸಾಯ ಮತಿಂ ಚಕ್ರೇ ರಮ್ಯೇ ತಚ್ಛಿಖರಸ್ಥಲೇ ॥33॥

ತಸ್ಯಾಮೃತೋಪಮೇಯಸ್ಯ ಪದ್ಮೋತ್ಪಲಕುಲಶ್ರಿಯಃ ।
ನಾನಾದ್ರುಮಪರೀತಸ್ಯ ಕಾಸಾರಸ್ಯೋತ್ತರೇ ತಟೇ ॥34॥

ಮನೋಹರೇ ಮಹೀಭಾಗೇ ವಿಧಾಯಾಶ್ರಮಮುತ್ತಮಮ್ ।
ಆರಾಧ್ಯ ಪಿತೃದೇವರ್ಷೀನ್ ವಿಧಿವದ್ವಾಸ್ತುದೇವತಾಮ್ ॥35॥

ಉವಾಸ ಸುಚಿರಂ ತತ್ರ ಮುನಿಸಂಗಸಮನ್ವಿತಃ ।
ದೇವತಾಸಿದ್ಧಗಂಧರ್ವಾಪ್ಸರೋಜುಷ್ಟಮಹೀಧರೇ ॥36॥

ತಪಸ್ಸಮಾವೇಶಿತಚಿತ್ತವೃತ್ತೌ ತಪೋವನೇ ತಿಷ್ಠತಿ ಕುಂಭಜಾತೇ ।
ಪ್ರಶಸ್ತಸೌಭಾಗ್ಯಸಮನ್ವಿತೋಽದ್ರಿರಗಸ್ತ್ಯಶೈಲಾಹ್ವಯಮಾಸಸಾದ ॥37॥

ಇತಿ ಸ್ಕಾಂದೇ ಮಹಾಪುರಾಣೇ ಶಂಕರವಿವಾಹ ವರ್ಣನಮ್' ನಾಮ ಏಕತ್ರಿಂಶೋಽಧ್ಯಾಯಃ ॥31॥

* * *

ಧರಿಸಿ ನಿಂತ ಅತ್ಯುನ್ನತವಾದ ತೇಜಸ್ಸಿನಿಂದ ಬೆಳಗುತ್ತಿದ್ದ, ಔಷಧಗಳು, ನವರತ್ನಗಳು ಇವುಗಳಿಂದ ಉಪೇತವಾಗಿದ್ದ, ಪರ್ವತವನ್ನು ನೋಡಿ ಅಗಸ್ತ್ಯರು ಮೆಲ್ಲಮೆಲ್ಲನೇ ಆ ಪರ್ವತವನ್ನೇರಿ ಅಲ್ಲಿಯೇ ವಾಸವನ್ನು ಮಾಡಬೇಕೆಂದು ಇಚ್ಛಿಸಿದರು. ಅಮೃತಸಮಾನವಾದ ಸಿಹಿನೀರಿನಿಂದ ಕೂಡಿದ, ಕಮಲ ಕುಮುದಗಳಿಗೆ ಆಶ್ರಯವಾದ ಒಂದು ಸರೋವರದ ಉತ್ತರ ಭಾಗದಲ್ಲಿ ಸಮಪ್ರದೇಶವೊಂದರಲ್ಲಿ ಆಶ್ರಮವನ್ನು ಕಟ್ಟಿಕೊಂಡು ತನ್ನೊಡನಿದ್ದ ಮುನಿಜನರೊಡನೆ ಬಹುಕಾಲ ಅಲ್ಲಿಯೇ ವಾಸವಾಗಿದ್ದನು.

ಇಲ್ಲಿಗೆ ಸ್ಕಾಂದಪುರಾಣದಲ್ಲಿಯ ಶಂಕರವಿವಾಹವೆಂಬ ಮೂವತ್ತೊಂದನೆಯ ಅಧ್ಯಾಯವು ಪರಿಸಮಾಪ್ತವಾಯಿತು.

# ಅಥ ದ್ವಾತ್ರಿಂಶೋಽಧ್ಯಾಯಃ ॥32॥

[ಶ್ರೀಸುವರ್ಣಮುಖರೀಮಾಹಾತ್ಮ್ಯಪ್ರಶಂಸಾಯಾಂ ಸುವರ್ಣಮುಖರ್ಯಾವಿರ್ಭಾವವರ್ಣನಮ್]

ಭರದ್ವಾಜ ಉವಾಚ–

ಸ ಕದಾಚಿನ್ಮುನಿವರಃ ಕೃತಪೌರ್ವಾಹ್ಣಿಕಕ್ರಿಯಃ ।
ವಿವೇಶ ದೇವತಾಗಾರಂ ಸಮಾರಾಧಯಿತುಂ ಶಿವಮ್ ॥1॥

ಅದೃಶ್ಯರೂಪಾ ವಾಗ್ದೇವೀ ತತ್ರಾಶ್ರಾವಿ ಮಹಾತ್ಮನಾ ।
ತೇನಾದ್ಭುತೋಪಪನ್ನೇನ ವ್ಯಕ್ತವರ್ಣಸಮುಜ್ಜ್ವಲಾ ॥2॥

ಆಕಾಶವಾಣ್ಯುವಾಚೈನಮಗಸ್ತ್ಯಂ ಜಪತಾಂ ವರಮ್ ।
ನದೀಹೀನೋ ಹ್ಯಯಂ ದೇಶಃ ಪ್ರಸಿದ್ಧೋಽಪಿ ನ ಶೋಭತೇ ॥3॥

ಜ್ಞಾನವಿಜ್ಞಾನವಿಮುಖಃ ಸಾಕಾರ ಇವ ಭೂಸುರ ।
ದೀಕ್ಷೇವ ದಕ್ಷಿಣಾಹೀನಾ ಜ್ಯೋತ್ಸ್ನಾಹೀನೇನ ಶರ್ವರೀ ॥4॥

ನ ವಿಭಾತಿ ನದೀಹೀನಾ ಪೃಥ್ವೀಯಂ ಭೂಸುರೋತ್ತಮ್ ।
ಪ್ರವರ್ತಯ ನದೀಂ ಕಾಂಚಿಲ್ಲೋಕಾನಾಂ ಹಿತಕಾಮ್ಯಯಾ ॥5॥

ಅಗಾಧದುರಿತೋದ್ಭೂತಭೀತಿಮೋಚನಶಾಲಿನಮ್ ।
ಹಿತಮೇತತ್ಸುರೌಘಾನಾಮೇತನ್ಮುನಿವರಾರ್ಥಿತಮ್ ॥6॥

# ಮೂವತ್ತೆರಡನೆಯ ಅಧ್ಯಾಯ

[ಸುವರ್ಣಮುಖರ್ಯಾವಿರ್ಭಾವ ವರ್ಣನ]

ಒಂದು ಬಾರಿ ಅಗಸ್ತ್ಯರು ತಮ್ಮ ಪ್ರಾತರಾಹ್ನಿಕಗಳನ್ನು ಮುಗಿಸಿ ಮಹೇಶ್ವರನನ್ನು ಪೂಜಿಸಲು ದೇವಾಲಯಕ್ಕೆ ಹೋದಾಗ ಅವನಿಗೆ ಆಕಾಶವಾಣಿಯೊಂದು 'ಹೇ ಮುನಿಯೇ! ಈ ಪ್ರದೇಶವು ಪ್ರಸಿದ್ಧವಾಗಿದ್ದರೂ ನದಿಯಿಲ್ಲದಿರುವದರಿಂದ ಶೋಭಿಸುತ್ತಿಲ್ಲ. ಜ್ಞಾನವಿಲ್ಲದ ಬ್ರಾಹ್ಮಣನಂತೆ, ದಕ್ಷಿಣೆಯಿಲ್ಲದ ದೀಕ್ಷಾವಿಧಿಯಂತೆ, ಬೆಳದಿಂಗಳಿಲ್ಲದ ರಾತ್ರಿಯಂತೆ ಈ ನದಿಯಿಲ್ಲದ ಈ ಭೂಪ್ರದೇಶವು ಕಳಾವಿಹೀನವಾಗಿರುವದು. ಆದ್ದರಿಂದ ಪ್ರಪಂಚಕ್ಕೆ ಹಿತವನ್ನುಂಟುಮಾಡುವದಕ್ಕಾಗಿ

ಭದ್ರಮೇತನ್ಮನುಷ್ಯಾಣಾಮೇತದಾಚರ ಸುವ್ರತ ।
ದೇವಾನಾಮೃಷಿವರ್ಯಾಣಾಂ ಭೂಜನಾನಾಂ ಹಿತಾವಹಾಮ್ ॥7॥
ಪಾಪಪಂಕಪ್ರಶಮನೀಂ ಪ್ರವರ್ತಯ ಮಹಾನದೀಮ್ ।

ಶ್ರೀ ಭರದ್ವಾಜ ಉವಾಚ–

ತದಾಕರ್ಣ್ಯ ವಚೋ ವಿಪ್ರಃ ಕ್ಷಣಂ ಚಿಂತಾಪರಾಯಣಃ ॥8॥
ಸಮಾಪ್ಯ ದೇವತಾಪೂಜಾಂ ಬಹಿರ್ವೇದ್ಯಾಮುಪಾವಿಶತ್ ।
ಆನಾಯಯಾಮಾಸ ತದಾ ತದಾಶ್ರಮಗತಾನ್ಮುನೀನ್ ॥9॥
ತೇಷಾಮಕಥಯಚ್ಚಾಸೌ ದೇವವಾಣೀರಿತಂ ವಚಃ ।
ತದದ್ಭುತಮುಪಶ್ರುತ್ಯ ಮುನಯೋ ಹೃಷ್ಟಮಾನಸಾಃ ॥11॥
ಅಭಿವಂದ್ಯ ಮುನಿಶ್ರೇಷ್ಠಂ ಮೈತ್ರಾವರುಣಿಮಬ್ರುವನ್ ॥12॥

ಮುನಯ ಊಚುಃ–

'ಆಶ್ಚರ್ಯಾಣಾಂ ಮಹಾಶ್ಚರ್ಯಂ ಮಂಗಲಾನಾಂ ಚ ಮಂಗಲಮ್।
ತವೈವ ಶೋಭತೇ ದಿವ್ಯಂ ತ್ವಚ್ಚರಿತ್ರಂ ಕೃಪಾನಿಧೇ ॥13॥
ತವ ಹುಂಕಾರಮಾತ್ರೇಣ ಭ್ರಷ್ಟೋ ದೇವಾಧಿರಾಜ್ಯತಃ ।
ನಹುಷಃ ಕೀಟತಾಂ ಪ್ರಾಪ ತತಶ್ಚಿತ್ರಂ ನ ವಿದ್ಯತೇ ॥14॥

ಸರ್ವಭಯಾಪಹಾರಿಯೂ ಮಂಗಲದಾಯಕವೂ ಆದ ಒಂದು ನದಿಯು ಇಲ್ಲಿ ಪ್ರವಹಿಸುವಂತೆ ಪ್ರಯತ್ನಿಸು. ದೇವತೆಗಳ ಮಹರ್ಷಿಗಳ ಪಾಪವನ್ನು ಪರಿಹರಿಸುವ ನದಿಯೊಂದನ್ನು ನಿರ್ಮಿಸು' ಎಂದು ನುಡಿಯಿತು. ಇದನ್ನು ಕೇಳಿದ ಅಗಸ್ತ್ಯರು ಪೂಜೆಯನ್ನು ಮುಗಿಸಿ ಹೊರಬಂದು ಚಿಂತಾಕ್ರಾಂತರಾಗಿ ಜಗುಲಿಯ ಮೇಲೆ ಕುಳಿತುಕೊಂಡು ತನ್ನ ಆಶ್ರಮದ ಜನರನ್ನು ಕರೆದು ಅವರಿಗೆ ಅಶರೀರ ವಾಣಿಯ ವೃತ್ತಾಂತವನ್ನು ಹೇಳಿದರು. ಇದನ್ನು ಕೇಳಿದ ಋಷಿಗಳು 'ಹೇ ಅಗಸ್ತ್ಯರೇ! ಯಾವ ಹುಂಕಾರಮಾತ್ರದಿಂದ ನಹುಷ ಚಕ್ರವರ್ತಿಯನ್ನು ಪಾತಾಲಕ್ಕೆ ಕೆಡುಹಿದಿರೋ, ಕಾಲಕೇಯರನ್ನು ಸಂಹರಿಸುವದಕ್ಕಾಗಿ ಉಕ್ಕುವ ಸಮುದ್ರವನ್ನು ಆಪೋಶನದಂತೆ ಪಾನಮಾಡಿರುವಿರೋ, ಸೂರ್ಯಸಂಚಾರವನ್ನು ಪ್ರತಿಬಂಧಿಸಿದ ವಿಂಧ್ಯಪರ್ವತವು ತಗ್ಗುವಂತೆ (ಪ್ರಶಮನವನ್ನು ಹೊಂದುವಂತೆ) ಮಾಡಿದಿರೋ ಅಂತಹ ನಿಮ್ಮನ್ನು ನಾವು ಹೇಗೆ ತಾನೇ ಕೊಂಡಾಡೇವು? ಹೇ ಮಹಾಮುನಿಯೇ! ನಿಮ್ಮಾಶ್ರಮದಲ್ಲಿರುವೆವಾದ್ದರಿಂದ ನಾವು ಮೂರು

ಸಮಾವೃತಧರಾಚಕ್ರಃ ಕಲ್ಲೋಲಾತಾಡಿತಾಂಬರಃ ।
ಕಿಂ ನ್ವತೋ ವಿದ್ಯತೇ ಚಿತ್ರಂ ಯದಬ್ಧಿಶ್ಚುಲಕೀಕೃತಃ ॥15॥

ಸೂರ್ಯಮಾರ್ಗನಿರೋಧಾರ್ಥಂ ಪ್ರವೃತ್ತೋ ವಿಂಧ್ಯಭೂಧರಃ ।
ತ್ವಯಾ ಪ್ರಶಾಂತಿಂ ಗಮಿತಃ ಕಿಂ ನ್ವತೋ ವಿದ್ಯತೇ ಪರಮ್ ॥16॥

ತವಾದ್ಭುತಾನಿ ಕರ್ಮಾಣಿ ಕಃ ಸ್ತೋತುಂ ಪ್ರಭವೇದ್ಭುವಿ ।
ಅಸ್ಮಿನ್ಮಹಾಭಾಗ್ಯಯೋಗಾತ್ ಪ್ರಾಪ್ತೋಽಸೀತಿ ಶರೀರಿತಾಮ್ ॥17॥

ವಯಂ ಕೃತಾರ್ಥಾಃ ಸಂಜಾತಾಸ್ತ್ರೈಲೋಕ್ಯೇ ಯನ್ಮಹಾಮುನೇ ।
ನಿವಸಾಮೋಽತ್ರ ಭವತಾ ಸನಾಥಾ ಹ್ಯಾಶ್ರಮಸ್ಥಲೀ ॥18॥

ವರ್ಣ್ಯೋ ಹಿ ಯಾಮ್ಯತೋ ದೂರೇ ವಿಷಯೋಽಯಂ ದ್ವಿಜೋತ್ತಮ ।
ಸಮಸ್ತವಸ್ತುಪೂರ್ಣೋಽಪಿ ನದೀಹೀನೋ ನ ರಾಜತೇ ॥19॥

ಕಿಮಲಬ್ಧನದೀಸ್ನಾನೇನಾಮುನಾ ಹತಜನ್ಮನಾ ।
ಅನದೀಕೇ ಜನಪದೇ ವಾಸಾದಜನನಂ ವರಮ್ ॥20॥

ಪರಿಪಾಕಸ್ತು ಭಾಗ್ಯಾನಾಮಸ್ಮಾಕಂ ಸಮುಪಸ್ಥಿತಃ ।
ಯದಾದಿಷ್ಟೋಽಸಿ ವಿಬುಧೈಃ ಪ್ರವರ್ತಯ ಮಹಾನದೀಮ್ ॥21॥

ಪ್ರವರ್ತಿತಾಯಾಂ ದೇಶೇಽಸ್ಮಿನ್ಮಹಾನದ್ಯಾಂ ತವಾನಘ ।
ಕದಾ ನ ಖಲು ಯಾಸ್ಯಾಮಃ ಕೃತಸ್ನಾನಾಃ ಕೃತಾರ್ಥತಾಮ್ ॥22॥

ಕಿಂ ವಿತರ್ಕೇಣ ಬಹುನಾ ಪ್ರಯತ್ನಃ ಕ್ರಿಯತಾಂ ಧ್ರುವಮ್ ।
ಸಮಾನೇತುಂ ಜಗದ್ವಂದ್ಯಾಂ ಶರಣ್ಯಾಂ ಸರಿದುತ್ತಮಾಮ್ ॥23॥

ಲೋಕಗಳಲ್ಲಿಯೂ ಸಹ ಧನ್ಯರೆನಿಸಿರುವೆವು. ಅಗಸ್ತ್ಯರೇ! ಈ ಪ್ರದೇಶವು ದಕ್ಷಿಣ ಸಮುದ್ರದಿಂದ ಬಹು ದೂರದಲ್ಲಿದ್ದು, ಸಮಸ್ತ ವಸ್ತುಗಳಿಂದ ಪರಿಪೂರ್ಣವಾಗಿದ್ದರೂ ಸಹ ಪುಣ್ಯಕರವಾದ ನದಿಯೊಂದಿರುವದಿಲ್ಲ. ನದಿಯಿಲ್ಲದ ದೇಶದಲ್ಲಿ ವಾಸಿಸುವದಕ್ಕಿಂತ ಹುಟ್ಟದಿರುವದೇ ಲೇಸಲ್ಲವೇ? ದೇವತೆಗಳಿಂದ ಅಶರೀರವಾಣಿಯ ಮೂಲಕವಾಗಿ ಆದೇಶವನ್ನು ಪಡೆದಿರುವ ನೀವು ಇಲ್ಲಿ ಒಂದು ಮಹಾನದಿಯೆಂದು ಪ್ರವಹಿಸುವಂತೆ ಮಾಡಿರಿ. ಅದರಲ್ಲಿ ನಾವು ಸ್ನಾನವನ್ನು ಮಾಡಿ ಕೃತಾರ್ಥರಾಗುವೆವು. ಆದ್ದರಿಂದ ಲೋಕವಂದಿತಳಾದ ಗಂಗೆಯನ್ನೇ ಇಲ್ಲಿಗೆ ಕರೆತರಲು ದೃಢತರಪ್ರಯತ್ನವನ್ನು ಮಾಡಿರಿ' ಎಂದು ಪ್ರಾರ್ಥಿಸಿದರು.

ಶ್ರೀ ಭರದ್ವಾಜ ಉವಾಚ–

'ಸ ತೇಷಾಂ ವಚನಂ ಹೃದ್ಯಂ ಮಾನಯಿತ್ವಾ ಮಹಾದ್ವಿಜಃ ।
ಸಮಾನೇಷ್ಯಾಮಿ ಸರಿತಮಿತಿ ಚಕ್ರೇ ವಿನಿಶ್ಚಯಮ್ ॥24॥

ಮುನೀಶ್ವರೈರನುಜ್ಞಾತಸ್ತಾನಭ್ಯರ್ಚ್ಯ ಸುರಾನಪಿ ।
ವಿಶೇಷಪೂಜಾಂ ವಿಧಿವದ್ವಿಧಾಯ ಪುರವಿದ್ವಿಷಃ ॥25॥

ಅಂಗೀಕೃತ್ಯ ವ್ರತಂ ಗಾಢಂ ಬಹುಲಕ್ಲೇಶದುಸ್ಸಹಮ್ ।
ಅನನ್ಯಸುಲಭಂ ಯತ್ನಾತ್ಸ ಚಕಾರ ಮಹತ್ತಪಃ ॥26॥

ಘೋರೇಷು ಘರ್ಮದಿವಸೇಷ್ವಂತರಸ್ಥೋ ಹವಿರ್ಭುಜಾಮ್ ।
ಚತುರ್ಣಾಂ ಸವಿತ್ರನ್ಯಸ್ತ ತೃಷ್ಣಿರ್ನಾಪೇಯಯೌ ಕ್ಲಮಮ್ ॥27॥

ವಾರ್ಷಿಕೇಷು ದಿನೇಷೂಗ್ರವಾಯುಸನ್ವಾತದುಸ್ಸಹೈಃ ।
ಆಸಾರೈಸ್ತಾಡ್ಯಮಾನೋಽಪಿ ನೋದ್ವೇಗಮಗಮದ್ಧೃದಿ ॥28॥

ಹೇಮಂತೇ ಸಮಯೇ ತಿಷ್ಠನ್ ಕಂಠದಘ್ನೇಷು ವಾರಿಷು ।
ಜಪಧ್ಯಾನಪರೋ ಭೂತ್ವಾ ನ ಕಿಂಚಿದ್ವಿಕೃತಿಂ ಯಯೌ ॥29॥

ತತಃ ಸಮೀಹಿತಾರ್ಥಸ್ಯ ವಿಲಂಬಮವಲೋಕ್ಯ ಸಃ ।
ಪುನರ್ಗಾಢತರಾಂ ನಿಷ್ಠಾಂ ಪ್ರಪೇದೇ ಲೋಕಭೀಷಣಾಮ್ ॥30॥

ನಿಗೃಹ್ಯ ಮಾನಸೀಂ ವೃತ್ತಿಂ ನಿರಾಹಾರೋ ಜಿತೇಂದ್ರಿಯಃ ।
ಅವಿಜ್ಞಾತಬಹಿರ್ವೃತ್ತಿಸ್ತಸ್ಥೌ ಪಾಷಾಣವತ್ತದಾ ॥31॥

ಏವಂ ತಪಸ್ಯತಸ್ತಸ್ಯ ಸರ್ವಾಂಗೇಷು ಹುತಾಶನಃ ।

ಋಷಿಗಳಿಂದ ಪ್ರಾರ್ಥಿತರಾದ ಅಗಸ್ತ್ಯರು ಮುನೀಶ್ವರರ ಆಜ್ಞೆಯನ್ನು ಪಡೆದು. ಅವರಿಗೂ ದೇವತೆಗಳಿಗೂ ಮಹಾದೇವನಿಗೂ ವಿಧ್ಯುಕ್ತವಾದ ವಿಶೇಷವಾದ ಪೂಜೆಯನ್ನು ಮಾಡಿ ಉಗ್ರವಾದ ವ್ರತವನ್ನು ಕೈಗೊಂಡು ಇತರರಿಂದ ಮಾಡಲಸಾಧ್ಯವಾದ ಬಹುಕ್ಲೇಶ ಸಮಾಯುಕ್ತವೂ ದುಸ್ಸಾಧ್ಯವೂ ಆದ ತೀವ್ರವಾದ ತಪಸ್ಸನ್ನಾಚರಿಸಹತ್ತಿದರು. ಋತುಗಳಲ್ಲಿ ಬಾಧಕವಾದ ಅಂಶಗಳಿಂದಲೇ ದೇಹವನ್ನು ದಂಡಿಸಿ, ನಿರ್ವಿಕಾರರಾಗಿ, ಮನಸ್ಸಿನ ಸಕಲ ಬಾಹ್ಯವೃತ್ತಿಗಳನ್ನು ನಿರೋಧಿಸಿ, ನಿರಾಹಾರನಾಗಿ, ಜಿತೇಂದ್ರಿಯನಾಗಿ ಬಾಹ್ಯ ಪ್ರಪಂಚದ ಅರಿವಿಲ್ಲದೆಯೇ ತಪಸ್ಸನ್ನು ಆಚರಿಸುತ್ತಿದ್ದರು. ಇವರ ಘೋರವಾದ ತಪಸ್ಸಿನ ಫಲವಾಗಿ ಇವರ ಶರೀರದಿಂದ ಬೆಂಕಿಯ ಜ್ವಾಲೆಗಳು

ಅಭ್ರಂಲಿಹೋ ಜ್ವಲಜ್ಜ್ಯೋತಿರ್ನಿಶ್ಚಕ್ರಾಮ ಭಯಂಕರಃ ॥32॥

ತತೋಽದ್ಭುತಶಿಖಾಜಾಲೈರಾವೃತಾಃ ಸರ್ವತೋ ದಿಶಃ ।
ಸಮುದಗ್ರಭಯೋದ್ವಿಗ್ನಾ ಜನೌಘಾಃ ಪರಿಚುಕ್ರುಶೈ ॥33॥

ತಥಾ ತಥಾವಿಧಂ ಘೋರಂ ಜಗತ್ಸಂಕ್ಷೋಭಮಾಗತಮ್ ।
ದೇವಾ ವಿಜ್ಞಾಪಯಾಮಾಸುರ್ನಮಸ್ಕೃತ್ಯಾಬ್ಜಜನ್ಮನೇ ॥34॥

ತಾನಾಶ್ವಾಸ್ಯ ತತೋ ಬ್ರಹ್ಮಾ ಸಿದ್ಧಗಂಧರ್ವಸೇವಿತಃ ।
ಪ್ರಾದುರಾಸೀತ್ ಕುಂಭಭವಃ ಪುರೋಭಾಗೇ ತಪಸ್ಯಥಃ ॥35॥

ತಮಾಗತಂ ಸಮಾಲೋಕ್ಯ ಬ್ರಹ್ಮಾಣಂ ಪರಮಂ ದ್ವಿಜಃ ।
ಪ್ರಣಮ್ಯ ವಿವಿಧೈಃ ಸ್ತೋತ್ರೈಸ್ತೋಷಯಾಮಾಸ ತನ್ಮನಾಃ ॥36॥

ತತಸ್ತಂ ವಿನಯಾನಮ್ರಮಗಸ್ತ್ಯಂ ವೀಕ್ಷ್ಯ ಪದ್ಮಭೂಃ ।
ಪ್ರಸಾದಸುಮುಖೋ ಭೂತ್ವಾ ಪೂತಾಂ ಗಿರಿಮುಪಾದದೇ ॥37॥

ಬ್ರಹ್ಮೋವಾಚ–

'ಪರಿತುಷ್ಟೋಽಸ್ಮಿ ತಪಸಾ ದುಶ್ಚರೇಣ ತವಾನಘ ।
ವೃಣೀಷ್ವ ಯದ್ಯದಿಷ್ಟಂ ತೇ ತತ್ತದ್ದಾಸ್ಯಾಮಿ ಸುವ್ರತ' ॥38॥

ಅಗಸ್ತ್ಯ ಉವಾಚ–

'ತವ ಪ್ರಸಾದಾತ್ಸಕಲಮುಪಪನ್ನಂ ಮಮ ಪ್ರಭೋ ।
ಸಂಪ್ರಯಚ್ಛಸಿ ಚೇತ್ಕಾಮಂ ಯಾಚೇ ನಿಶ್ಶಂಕಯಾ ಧಿಯಾ ॥39॥

ಹತ್ತುದಿಕ್ಕುಗಳಿಗೂ ವ್ಯಾಪಿಸಿ, ಜನರನ್ನು ದಹಿಸತೊಡಗಿತು. ಇದನ್ನು ಕಂಡ ದೇವತೆಗಳು ಬ್ರಹ್ಮದೇವರ ಬಳಿ ತೆರಳಿ ಅವನಿಗೆ ನಮಸ್ಕರಿಸಿ ಅಗಸ್ತ್ಯರ ವೃತ್ತಾಂತವನ್ನು ತಿಳಿಸಿದರು. ಆಗ ಚತುರ್ಮುಖ ಬ್ರಹ್ಮದೇವರು ದೇವತೆಗಳಿಂದ ಪರಿವಾರಿತನಾಗಿ ಅಗಸ್ತ್ಯರೆದುರು ಪ್ರತ್ಯಕ್ಷರಾದರು. ತಮ್ಮೆದುರು ನಿಂತಿದ್ದ ಬ್ರಹ್ಮದೇವರನ್ನು ಕಂಡ ಅಗಸ್ತ್ಯರು ಭಕ್ತಿಯಿಂದ ಅವರಿಗೆ ನಮಸ್ಕರಿಸಿ ವಿವಿಧ ಸ್ತೋತ್ರಗಳಿಂದ ಚತುರ್ಮುಖನನ್ನು ಸಂತೋಷಗೊಳಿಸಿ, ನಮ್ರನಾಗಿ ಅವರ ಮುಂದೆ ನಿಂತುಕೊಂಡರು. ಆಗ ಬ್ರಹ್ಮದೇವರು 'ನಿರ್ದುಷ್ಟನಾದ ಮುನಿಯೇ! ನಿನ್ನ ತಪಸ್ಸಿನಿಂದ ಸಂತುಷ್ಟನಾಗಿರುವೆನು. ನಿನಗಭಿಮತವಾದುದನ್ನು ಕೇಳಿಕೊ. ನೆರವೇರಿಸುವೆನು' ಎಂದು ನುಡಿದರು.

ಆಗ ಅಗಸ್ತ್ಯರು 'ಹೇ ಚತುರ್ಮುಖ ಬ್ರಹ್ಮದೇವರೇ! ನೀನು ನನಗೆ ಅಭಿಮತವಾದ ವರಗಳನ್ನು

ನದೀಹೀನಮಿಮಂ ದೇಶಂ ದೃಷ್ಟ್ವಾ ಖಿದ್ಯತಿ ಮೇ ಮನಃ ।
ಅರ್ಥಾವಬೋಧರಹಿತಂ ಶ್ರುತಿಪಾಠಮಿವಾಧಿಕಮ್ ॥40॥

ಉರ್ವೀಂ ಪಾವಯಿತುಂ ದಕ್ಷಾಂ ರಕ್ಷಿತುಂ ಚ ಮಹಾನದೀಮ್ ।
ಪ್ರಸಾದಂ ಕುರು ದೇವೇಶ ಮಮೇಷ್ಟಮಿದಮೇವ ಹಿ' ॥41॥

ಶ್ರೀಭರದ್ವಾಜ ಉವಾಚ–

ಅಗಸ್ತ್ಯಸ್ಯ ವಚಃ ಶ್ರುತ್ವಾ 'ಭೂಯಾದೇವ'ಮಿತಿ ಬ್ರುವನ್ ।
ಸಸ್ಮಾರ ಮನಸಾ ಬ್ರಹ್ಮಾ ಸುರವರ್ತ್ಮಾಶ್ರಯಾಂ ನದೀಮ್ ॥42॥

ಅಥೋಪೇತ್ಯ ವಿಯದ್ಗಂಗಾ ಪುರಸ್ತಾತ್ಪರಮೇಷ್ಠಿನಃ ।
ಅತಿಷ್ಠನ್ಮುಕುಟನ್ಯಸ್ತಪ್ರಶಸ್ತಾಂಜಲಿಭಾಸುರಾ ॥43॥

ಸ್ವಶಾಸನಾತ್ಸಮಾಯಾತಾಂ ವಿನಯಾನತಮಸ್ತಕಾಮ್ ।
ತಾಂ ಸರ್ವಜಗತಾಂ ಧಾತ್ರೀಮಿದಂ ವಚನಮಬ್ರವೀತ್ ॥44॥

ಬ್ರಹ್ಮೋವಾಚ–

'ಗಂಗೇ ಮಯಾಽನುಶಾಸ್ಯಾಽಸಿ ಕಾರ್ಯೇ ಲೋಕೋಪಕಾರಕೇ ।
ತವಾಪಿ ಲೋಕರಕ್ಷಾಯಾಂ ಮಮೇವ ನಿಯತಾ ಸ್ಥಿತಿಃ ॥45॥

ದೇಶೇ ನದೀವಿಹೀನೇಽತ್ರ ಪ್ರವರ್ತಯಿತುಮಾಪಗಾಮ್ ।

ದಯಪಾಲಿಸುವವನಾಗಿದ್ದಲ್ಲಿ ನನ್ನ ಮನಸ್ಸಿನ ಬಯಕೆಯನ್ನು ಕೇಳುವೆನು. ನದಿಯಿಂದ ರಹಿತವಾದ ಈ ಪ್ರದೇಶವನ್ನು ನೋಡಿ ನನ್ನ ಮನಸ್ಸು ದುಃಖಿಗೊಂಡಿರುವದು. ಆದ್ದರಿಂದ ಈ ಭಾಗದ ಭೂಪ್ರದೇಶವನ್ನು ಪವಿತ್ರಗೊಳಿಸುವ, ಶ್ರೇಷ್ಠವಾದ ಮಹಾನದಿಯೊಂದನ್ನು ಅನುಗ್ರಹಿಸು. ಇದೇ ನನ್ನ ಬಯಕೆಯು' ಎಂದು ನುಡಿದರು.

ಆಗ ಚತುರ್ಮುಖ ಬ್ರಹ್ಮದೇವರು 'ಹಾಗೆಯೇ ಆಗಲಿ' ಎಂದು ನುಡಿದು ಮನಸ್ಸಿನಿಂದ ಆಕಾಶ ಗಂಗೆಯನ್ನು ಸ್ಮರಿಸಿದನು. ತಕ್ಷಣದಲ್ಲಿಯೇ ಬಂದ ಗಂಗೆಯು ಕೈಮುಗಿದುಕೊಂಡು ನಿಂತಳು. ಅವಳನ್ನು ಕುರಿತು ಬ್ರಹ್ಮದೇವರು 'ನದಿವಿಹೀನವಾದ ಈ ಕ್ಷೇತ್ರದಲ್ಲಿ ಲೋಕಹಿತಾರ್ಥವಾಗಿ ನದಿಯನ್ನು ಹರಿಸುವದರಗೋಸ್ಕರವಾಗಿ ಕುಂಭಸಂಭವರಾದ ಅಗಸ್ತ್ಯರು ಬಯಸಿರುವರು. ಆದ್ದರಿಂದ ನೀನು ಭೂಮಿಯಲ್ಲಿ ಒಂದಂಶದಿಂದ ಹೋಗಿ ಈತನು ತೋರಿದ ಮಾರ್ಗದಲ್ಲಿ

ಹಿತಾರ್ಥಂ ಸರ್ವಲೋಕಾನಾಂ ಕುಮ್ಭಜನ್ಮಾ ಸಮೀಹತೇ ॥46॥

ತಸ್ಮಾತ್ ತ್ವಮವತೀರ್ಯೋರ್ವೀಂ ಸ್ವಾಂಶೇನೈಕೇನ ಭೂಜನಾನ್।
ಪುನೀಹಿ ಗಚ್ಛ ವಸುಧಾಮೇತದ್ದರ್ಶಿವರ್ತ್ಮನಾ ॥47॥

ಭೂಲೋಕೇ ಸಂಪ್ರವೃತ್ತೇ ತು ಪ್ರವಾಹೇ ಸಿದ್ಧಿಕಾಂಕ್ಷಿಣಃ ।
ಸೇವಿಷ್ಯಂತೇ ಸುರವರಾ ಮುನಿವರ್ಯಾಶ್ಚ ಸಂತತಮ್ ॥48॥

ನದೀಷೂತ್ತಮತಾಂ ಯಾಹಿ ತ್ರಾಹಿ ತ್ವತ್ಸಂಶ್ರಯಾನ್ಜನಾನ್ ।
ಕುರುಪ್ರಿಯಮಗಸ್ತ್ಯಸ್ಯ ಕಚ್ಛ ಭದ್ರೇ ಯಥಾಸುಖಮ್ ॥49॥

ಭರದ್ವಾಜ ಉವಾಚ-

ಇತ್ಯುಕ್ತ್ವಾಂತರ್ದಧೇ ಬ್ರಹ್ಮಾ ತಯಾ ನದ್ಯಾ ಚ ತೇನ ಚ ।
ಪ್ರಣಾಮಪೂಜನಸ್ತೋತ್ರೈರ್ವಿಶೇಷೈರಭಿನಂದಿತಃ ॥50॥

ಅಥ ಗಂಗಾ ಮುನಿಪತೇಃ ಪರಸ್ತಾತ್ಸ್ವಾಂಶಸಂಭವಾಮ್ ।
ದಿವ್ಯತೇಜೋಮಯೀಂ ಮೂರ್ತಿಂ ದರ್ಶಯಿತ್ವಾ ವಚೋಽಬ್ರವೀತ್ ॥51॥

ಗಂಗೋವಾಚ-

ಮದೀಯಾಂಶೋಽಯಮವನಿಂ ಸಂಪ್ರಾಪ್ಯ ಮುನಿವಲ್ಲಭ ।
ಪೂರಯಿಷ್ಯತಿ ತೇಽಭೀಷ್ಟಂ ನದೀರೂಪಂ ಸಮಾಶ್ರಿತಃ ॥52॥

ಭರದ್ವಾಜ ಉವಾಚ-

ಇತ್ಯುಕ್ತ್ವಾ ಸಿದ್ಧವಾಹಿನ್ಯಾಂ ಗತಾಯಾಂ ತತ್ಪ್ರಯುಕ್ತಯಾ ।

ಹರಿಯುತ್ತಾ ಭೂಮಿಯನ್ನು ಭೂಲೋಕದ ಜನರನ್ನು ಪವಿತ್ರಗೊಳಿಸು. ನೀನು ಭೂಲೋಕದಲ್ಲಿ ಪ್ರವಹಿಸುತ್ತಿರಲು ನಿನ್ನ ನೀರಿನಲ್ಲಿ ಕಾರ್ಯಸಿದ್ಧಿಗಳನ್ನು ಅಪೇಕ್ಷಿಸುವ ಸಕಲ ಜೀವೋತ್ತಮರು ಮುನಿಶ್ರೇಷ್ಠರೂ ನಿರಂತರವಾಗಿ ಸೇವಿಸುವರು. ನೀನು ನದಿಗಳಲ್ಲಿ ಅತ್ಯಂತ ಶ್ರೇಷ್ಠಳೆನಿಸುವಿ. ಅಗಸ್ತ್ಯರಿಗೆ ಪ್ರಿಯವನ್ನುಂಟು ಮಾಡು' ಎಂದು ನುಡಿದರು. ಆಗ ಗಂಗೆಯು ತನ್ನ ಒಂದಂಶದಿಂದುದ್ಭವಿಸಿದ ತೇಜಸ್ವಿನಿಯಾದ ಸ್ತ್ರೀಯನ್ನು ಸೃಷ್ಟಿಸಿ 'ಇವಳು ನನ್ನ ಅಂಶರೂಪಳು. ಇವಳು ನದೀರೂಪವನ್ನು ಧರಿಸಿ ಭೂಲೋಕಕ್ಕೆ ಬಂದು ನಿನ್ನ ಇಷ್ಟಾರ್ಥಗಳನ್ನು ನೆರವೇರಿಸುವಳು' ಎಂದು ಅಗಸ್ತ್ಯರಿಗೆ ನುಡಿದು ಆಕಾಶಗಂಗೆಯು ಹೊರಟುಹೋದಳು. ನಂತರ ಗಂಗೆಯ ಅಂಶಸಂಭೂತಳಾದ ನದಿಯು ಅಗಸ್ತ್ಯರನ್ನು 'ನಾನು ಯಾವ ದಾರಿಯಲ್ಲಿ ಪ್ರವಹಿಸಲಿ'

ಗಂತವ್ಯಂ ವರ್ತ್ಮನಾ ಕೇನೇತ್ಯುಕ್ತೇ ಮುನಿರುವಾಚ ತಾಮ್ ॥53॥

ಅಗಸ್ತ್ಯ ಉವಾಚ-

ಗಚ್ಛನ್ಪುರಸ್ತಾತ್ಕಲ್ಯಾಣಿ ತ್ವದೀಯಾಗಮನೋಚಿತಮ್ ।
ಅಹಂ ಪ್ರದರ್ಶಯಿಷ್ಯಾಮಿ ಮಾರ್ಗಂ ತ್ವಂ ಮಾಮನುವ್ರಜ ॥54॥

ಇತ್ಯುಕ್ತಾ ಮುನಿನಾ ತೇನ 'ಸಂಪ್ರಹೃಷ್ಟಾ ತವಾನಘ ।
ಯದಿಷ್ಟಂ ತತ್ಕರಿಷ್ಯೇಽಹ'ಮಿತಿ ಪ್ರೋವಾಚ ಸಾ ಶುಭಾ ॥55॥

ಅಥ ಮುನಿರವತೀರ್ಯ ತಾಂ ನಗೇಂದ್ರಾದ್
ಧೃತತಟನೀತನುಮಭ್ರಸಂಗಿಶೃಂಗಾತ್ ।
ಮುದಿತತರಮನಾ ಯಯೌ ಪರಸ್ತಾತ್
ತದಭಿಮತಾಂ ಪದವೀಂ ಪ್ರದರ್ಶಯನ್ ಸಃ ॥56॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ
ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ
'ಶ್ರೀಸುವರ್ಣಮುಖರೀಮಾಹಾತ್ಮ್ಯಪ್ರಶಂಸಾಯಾಂ ಸುವರ್ಣಮುಖರ್ಯಾವಿರ್ಭಾವವರ್ಣನಮ್'
ನಾಮ ದ್ವಾತ್ರಿಂಶೋಽಧ್ಯಾಯಃ ॥32॥

* * *

ಎಂದು ಕೇಳಿದಾಗ ಅಗಸ್ತ್ಯರು 'ಮಂಗಳಾಂಗಿಯೇ! ನಾನು ನಿನ್ನ ಪ್ರವಾಹಕ್ಕೆ ಅನುಕೂಲವಾದ ಮಾರ್ಗವನ್ನು ತೋರಿಸುತ್ತಾ ಹೋಗುವೆನು. ನನ್ನನ್ನು ಹಿಂಬಾಲಿಸು' ಎಂದು ನುಡಿದು ಮುಂದೆ ಮುಂದೆ ಹೊರಟಾಗ ಗಂಗೆಯ ಅಂಶಳಾದ ಸ್ತ್ರೀಯು ನದೀರೂಪವನ್ನು ಧರಿಸಿ ಅವರ ಹಿಂದೆ ಹಿಂದೆ ಹೊರಟಳು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ ಸುವರ್ಣಮುಖರೀ ಮಾಹಾತ್ಮ್ಯವರ್ಣನದಲ್ಲಿ ಸುವರ್ಣಮುಖರೀ ಆವಿರ್ಭಾವ ವರ್ಣನವೆಂಬ ಮೂವತ್ತೆರಡನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥ ತ್ರಯಸ್ತ್ರಿಂಶೋಽಧ್ಯಾಯಃ ॥33॥

[ಶ್ರೀಸುವರ್ಣಮುಖರೀ ಪ್ರಭಾವ ಪ್ರಶಂಸಾವರ್ಣನಮ್]

ಭರದ್ವಾಜ ಉವಾಚ–

ತದಾ ದಿವ್ಯವಿಮಾನಸ್ಥಾಃ ಶಕ್ರಮುಖ್ಯಾಃ ದಿವೌಕಸಃ ।
ಅಗಸ್ತ್ಯಮನುಯಾಂತೀಂ ತಾಮನುಜಗ್ಮುರ್ಮಹಾಪದಾಮ್ ॥1॥

ನವಾವತಾರಾಂ ತಾಂ ದಿವ್ಯಾಂ ಸರ್ವೇ ಚ ಮುನಿಪುಂಗವಾಃ ।
ಕೃತಾಂಜಲಿಪುಟಾಃ ಸ್ತೋತ್ರೈರನುಯಾತಾಃ ಸಿಷೇವಿರೇ ॥2॥

ಸಿದ್ಧಚಾರಣಗಂಧರ್ವಾಃ ಸಂಭೂತಾ ಚ ಸಹಸ್ರಶಃ ।
ತಾಂ ನದೀಂ ತಂ ಮುನೀಂದ್ರಂ ಚ ಪ್ರಶಶಂಸುಃ ಶುಭೈಃ ಸ್ತವೈಃ ॥3॥

ಸುಧೋಪಮಾನಮಮಲಂ ದಿಷ್ಟ್ಯಾ ಲಬ್ಧಮಿದಂ ಜಲಮ್ ।
ಇತ್ಯೌತ್ಸುಕ್ಯರಸಾಯತ್ತಾ ನನಂದುರ್ಧರಣೀಜನಾಃ ॥4॥

ತದಾ ನಿದೇಶಾದ್ದೇವಸ್ಯ ಪದ್ಮಯೋನೇಃ ಸಮೀರಣಃ ।
ಶೃಣ್ವತಾಂ ಸರ್ವದೇವಾನಾಮಿದಂ ವಚನಮಬ್ರವೀತ್ ॥5॥

ವಾಯುರುವಾಚ–

'ಸುವರ್ಣಮಿವ ಲೋಕಾನಾಂ ಭಾಗಧೇಯಾದಿಯಂ ನದೀ ।
ನೀತಾ ಭುವಮಗಸ್ತ್ಯೇನ ಮುಖರೀಕಕೃತದಿಙ್ಮುಖಾ ॥6॥

## ಮೂವತ್ಮೂರನೆಯ ಅಧ್ಯಾಯ

[ಸುವರ್ಣಮುಖರೀ ಪ್ರಶಂಸಾವರ್ಣನ]

ಅಗಸ್ತ್ಯರನ್ನು ಹಿಂಬಾಲಿಸಿ ನದಿಯು ಹೊರಟಂತೆ ಇಂದ್ರನೇ ಮೊದಲಾದ ದೇವತೆಗಳ ಸಮೂಹ, ಋಷಿಗಳು, ಸಿದ್ಧರು, ಚಾರಣರು, ಗಂಧರ್ವರು ಸಹಸ್ರಾರು ಸಂಖೆಯಲ್ಲಿ ನೆರೆದು ಆ ನದಿಯನ್ನು ಅಗಸ್ತ್ಯಮುನಿಯನ್ನು ಪ್ರಶಂಸಿಸಿದರು. ಭೂಲೋಕದ ಜನರಂತೂ ಅಮೃತ ತುಲ್ಯವಾದ ನದಿಯ ನೀರು ದೊರೆತಿರುವದು ತಮ್ಮ ಪೂರ್ವಜನ್ಮದ ಸುಕೃತವೆಂದು ಭಾವಿಸಿ ಅಗಸ್ತ್ಯರನ್ನು ಪ್ರಶಂಸಿಸಿದರು.

ತಸ್ಮಾದ್ವಾಸ್ಯತಿ ವಿಖ್ಯಾತಂ ಸರ್ವಲೋಕಾಭಿನಂದಿತಾಮ್ ।
ಸುವರ್ಣಮುಖರೀನಾಮ್ನಾ ಧಾಮ್ನೀ ಕೈವಲ್ಯಸಂಪದಃ ॥7॥

ಏಷಾ ಸುವರ್ಣಮುಖರೀ ಸರಿತ್ಸು ಸಕಲಾಸ್ವಪಿ ।
ವಿಶಿಷ್ಟಾ ಸೇವನೀಯಾ ಚ ಬ್ರಹ್ಮಣೋ ವಚನಂ ತ್ವಿದಮ್ ॥8॥

ಭರದ್ವಾಜ ಉವಾಚ–

ಶ್ರುತ್ವೇತ್ಥಂ ಪವನೇನೋಕ್ತಂ ವಚನಂ ಕುಂಭಸಂಭವಃ ।
ತುತೋಷ ವಿಸ್ಮಯಾಕ್ರಾಂತಃ ಸ್ವಾಂತಃ ಪುಲಕಿತಾಂಗಕಃ ॥9॥

ಏವಮೇಷಾ ದಿವ್ಯನದೀ ಸ್ನಾನಪಾನಾದಿಕಲ್ಪನೈಃ ।
ಸೌಖ್ಯಾವಹಾ ಮನುಷ್ಯಾಣಾಂ ಪ್ರತಿಷ್ಠಾಮಗಮದ್ಭುವಿ ॥10॥

ಆಜ್ಞಯಾ ಪದ್ಮಗರ್ಭಸ್ಯ ತಟನ್ಯಾಕಾಶವಾಹಿನೀ ।
ಸುವರ್ಣಮುಖರೀ ನಾಮ್ನಾ ಪುನಾತ್ಯಾತ್ಮೈಕಸಂಶ್ರಯಾನ್ ॥11॥

ಬಹೂನ್ಗಿರೀಂದ್ರಾನ್ವನಮಂಡಲಂ ಚ
ದಶಾನನೇಕಾನ್ಸರಿದುತ್ತಮೇಯಮ್ ।
ಕ್ರಮಾದತಿಕ್ರಮ್ಯ ನಿಷೇವ್ಯಮಾಣಾ
ಮಹಾನಧೀಭಿರ್ಗಿರಿಸಂಭವಾಭಿಃ ॥12॥

ಅನಂತರ ವಾಯುದೇವರು ಬ್ರಹ್ಮನ ಆಜ್ಞೆಯನ್ನು ತಿಳಿಸುತ್ತಾ 'ಸುವರ್ಣದಂತೆ ಸಕಲ ಲೋಕಗಳ ಪುಣ್ಯದಿಂದ, ಈ ನದಿಯು, ಅಗಸ್ತ್ಯರಿಂದ ಭೂಲೋಕಕ್ಕೆ ತರಲ್ಪಟ್ಟಿದ್ದರಿಂದ, ತನ್ನ ಘೋಷದಿಂದ ಎಲ್ಲ ದಿಕ್ಕುಗಳನ್ನು ವ್ಯಾಪಿಸಿರುವ ಈ ನದಿಗೆ ಸುವರ್ಣಖರಿಯೆಂಬ ಅನ್ವರ್ಥಕವನ್ನು ಹೊಂದಿ ಲೋಕದಲ್ಲಿ 'ಸುವರ್ಣಮುಖರೀ' ಎಂಬ ಹೆಸರಿನಿಂದ ಪ್ರಸಿದ್ಧಿಯನ್ನು ಪಡೆಯುವದು.' ಎಂದು ತಿಳಿಸಿ 'ಎಲ್ಲರಿಂದಲೂ ಸುವರ್ಣಮುಖರೀ ನದಿಯು ಸ್ನಾನಾದಿಗಳಿಂದ ಸಂಸೇವಿತಳಾಗಿರಲಿ' ಎಂದು ನುಡಿದರು. ಈ ನದಿಯು ತನ್ನಲ್ಲಿ ಸ್ನಾನವನ್ನು ಮಾಡಿದ ವ್ಯಕ್ತಿಗಳಿಗೆ ಸೌಖ್ಯವನ್ನು ಉಂಟುಮಾಡುತ್ತಾ, ಭಕ್ತರನ್ನನುಗ್ರಹಿಸುತ್ತಾ ಭೂಲೋಕದಲ್ಲಿ ಪ್ರಖ್ಯಾತಿಯನ್ನು ಹೊಂದಿತು.

ಸುವರ್ಣಮುಖರೀ ನದಿಯು ಅನೇಕ ಉನ್ನತ ಪರ್ವತಗಳನ್ನು, ಅರಣ್ಯಗಳನ್ನು, ದೇಶಗಳನ್ನು ಕ್ರಮವಾಗಿ ದಾಟಿಕೊಂಡು ಹರಿಯುತ್ತಾ, ರೋಗಪೀಡಿತರಾದವರಿಗೂ, ಕಾತರತೆಯನ್ನು ಹೊಂದಿದ ವ್ಯಕ್ತಿಗಳಿಗೂ ಸುಖವನ್ನುಂಟುಮಾಡುತ್ತಾ, ಸಕಲರ ಪಾಪಗಳನ್ನು ನಿವಾರಿಸುತ್ತಾ ಎಲ್ಲರ ಪ್ರೀತಿಗೆ

ರೋಗಾಹತಾನಾಮಧಿಕಾತುರಾಣಾಂ
ಮಹಾಮಯೈಕಪ್ರತಿಪಾದಕಾನಿ ।
ಅಂತರ್ಬಹಿಸ್ಸಂಭೃತಭೂರಿತಾಪ
ನಿವಾರಣಾನಿ ಪ್ರಿಯಕಾರಣಾನಿ ॥13॥

ವಿಹಾರಲೋಲದ್ವಿರದಪ್ರಕಾಂಡ–
ಶುಂಡಾಮಹಾಘಾತರಯೋತ್ಥಿತೇನ ।
ಪುಷ್ಪೋಪಹಾರಂ ಪೃಷತೋತ್ಕರೇಣ
ಹರ್ಷಾದ್ದದಾತೀವ ದಿವಾಕರಸ್ಯ ॥14॥

ಸೌಗಂಧಿಕಾಂಭೋರುಹಕೈರವಾಣಾಂ
ಸೌರಭ್ಯಸಂವಾಸಿತದಿಙ್ಮುಖಾನಾಮ್ ।
ದ್ವಿರೇಫಭಾಗ್ಯೈಕ ನಿಕೇತನಾನಾ–
ಮಾಧಾರಭೂತಾನ್ಯತಿನಿರ್ಮಲಾನಿ ॥15॥

ಲೀಲಾವಗಾಹೋತ್ಸುಕನಾಕನಾರೀ
ಸೀಮಂತಸಿಂದೂರರಜೋಽರುಣಾನಿ ।
ತತ್ಕೇಶಪಾಶಚ್ಯುತಪಾರಿಜಾತ–
ಪ್ರಸೂನಗಂಧೈರಧಿವಾಸಿತಾನಿ ॥16॥

ಸಾ ಬಿಭ್ರತೀ ಸಂಭೃತಮಂಗಳಾನಿ
ಸಾನೂನ್ಯಪಂಕಾನ್ಯತಿನಿರ್ಮಲಾನಿ ।

ಪಾತ್ರವಾಗಿರುವದು. ಜಲಕ್ರೀಡೆಯಲ್ಲಿ ನಿರತರಾದ ಆನೆಗಳ ಸೊಂಡಿಲಿನ ಹೊಡೆತದ ರಭಸದಿಂದ ಮೇಲಕ್ಕೆದ್ದ ನೀರಿನ ಹನಿಗಳು ನದ್ಯಭಿಮಾನಿ ದೇವತೆಯು ಸೂರ್ಯನಿಗೆ ಸಂತೋಷದಿಂದ ಪುಷ್ಪಗಳನ್ನರ್ಪಿಸುವಂತೆ ಕಾಣುತ್ತಿದ್ದವು. ಸುವಾಸನೆಯನ್ನು ಬೀರುವ, ದುಂಬಿಗಳಿಗೆ ಆಶ್ರಯವನ್ನಿತ್ತ ಕುಮುದ–ಕಮಲಗಳು ಈ ನದಿಯಲ್ಲಿ ಆಶ್ರಯವನ್ನು ಹೊಂದಿರುವವು. ಕ್ರೀಡಾಸ್ನಾನದಲ್ಲಿ ಆಸಕ್ತರಾಗಿದ್ದ ದೇವಕನ್ಯೆಯರ ಕುಂಕುಮ–ಸಿಂಧೂರಗಳಿಂದ ನೀರು ಕೆಂಪಾಗಿ ಕಾಣುತ್ತಿತ್ತು. ಅವರ ತಲೆಯಿಂದುದಿರಿದ ಪಾರಿಜಾತ ಕುಸುಮಗಳ ವಾಸನೆಯಿಂದ ನೀರು ಸುಗಂಧಯುಕ್ತ ವಾಗಿದ್ದಿತು. ಸಮಸ್ತಮಂಗಲಪ್ರದವೂ, ರುಚಿಕರವೂ, ಪಂಕರಹಿತವೂ, ನಿರ್ಮಲವೂ ಪಾಪನಾಶಕವೂ ಆದ ನೀರಿನಿಂದ ನದಿಯು ತುಂಬಿಹರಿಯುತ್ತಿತ್ತು. ಹೀಗೆ ಅಗಸ್ತ್ಯ ಪರ್ವತದಲ್ಲಿ ಜನ್ಮವನ್ನು

ಸುಧೋಪಮಾನಾನಿ ಸುರೇಂದ್ರಸೂನೋ
ಪಯಾಂಸಿ ಪಾಪಪ್ರತಿಘಾತುಕಾನಿ ॥17॥

ಅಗಸ್ತ್ಯೈಶೈಲಾತ್ಸಮವಾಪ್ತಜನ್ಮಾ
ನೀತಾ ಭವವಂ ಕುಮ್ಭಸಮುದ್ಭವೇನ ।
ಪ್ರಶಸ್ತತೀರ್ಥೌಘವಿರಾಜಮಾನಾ
ಸಮಾಯಯೌ ದಕ್ಷಿಣವಾರಿರಾಶಿಮ್ ॥18॥

ಶೀಕರಾಕ್ಷತವಿನ್ಯಾಸೈ ರತ್ನದೀಪಾರ್ಪಣೈರಪಿ ।
ಪ್ರತ್ಯುದ್ಯಯುಸ್ತಾಮಂಭೋಧೇರ್ವೀಚಯೋಽಭಿಮುಖಾಗತಾಃ ॥19॥

ತರಂಗಹಸ್ತೈರಾಲಿಂಗ್ಯ ಸಂಭಾವ್ಯೈನಾಂ ಸಮಾಗತಾಮ್ ।
ಚಕಾರ ಸರಿತಾಂ ನಾಥಃ ಪ್ರಿಯಮಾಘೋಷಭಾಷಣೈಃ ॥20॥

ಪ್ರಾಪ್ತಾಯಾಮನುಕೂಲಾಯಾಂ ತದಾ ತಸ್ಯಾಮಪಾಂನಿಧೇಃ ।
ಪ್ರಹೃಷ್ಟೇನ ತರಂಗೇಣ ಜೀವನಂ ವವೃಧೇ ತರಾಮ್ ॥21॥

ಇತ್ಥಂ ಸಂಸೃಜ್ಯ ಸರಿತಮಗಸ್ತ್ಯಸ್ತಾಮುದನ್ವತಾ ।
ಸ್ತುತ್ವಾ ಯಯೌ ಸಮಾಮಂತ್ರ್ಯ ಕೃತಕೃತ್ಯೋ ಯದೃಚ್ಛಯಾ ॥22॥

ಅರ್ಜುನ ಉವಾಚ–

ತ್ವಯೈಷ ಕಥಿತೋ ಬ್ರಹ್ಮನ್ಮಹಾನದ್ಯಾಃ ಸಮುದ್ಭವಃ ।
ಅಸ್ಯಾಃ ಪ್ರಭಾವಂ ಭಗವನ್ನಿದಾನೀಂ ಶ್ರೋತುಮುತ್ಸಹೇ ॥23॥

ಪಡೆದು ಅಗಸ್ತ್ಯರಿಂದ ಭೂಲೋಕಕ್ಕೆ ತರಲ್ಪಟ್ಟ ನದಿ ಅನೇಕ ಪ್ರಶಸ್ತತೀರ್ಥಗಳನ್ನು ಹುಟ್ಟಿಸುತ್ತಾ ಹರಿಯುತ್ತಾ ಕೊನೆಗೆ ದಕ್ಷಿಣ ಸಮುದ್ರವನ್ನು ಸೇರಿತು. ಸಮುದ್ರರಾಜನು ತರಂಗಗಳೆಂಬ ಬಾಹುಗಳಿಂದ ನದೀದೇವತೆಯನ್ನಾಲಂಗಿಸಿ ತನ್ನಲ್ಲಿಗೆ ಬಂದು ಸೇರುವದಕ್ಕಾಗಿ ಸಂಭಾವನವನ್ನಿತ್ತು ಘೋಷವೆಂಬ ಮಧುರವಾಕ್ಯಗಳಿಂದ ಪ್ರಿಯವನ್ನುಂಟು ಮಾಡುತ್ತಿದ್ದನು. ಇಂತಹ ಸುವರ್ಣ ಮುಖರೀ ನದಿಯನ್ನು ನೋಡಿದ ಅಗಸ್ತ್ಯರು ಅತ್ಯಂತ ಸಂತುಷ್ಟರಾಗಿ ಕೃತಾರ್ಥರಾದರೆಂದು ಭಾವಿಸಿದರು.

ಇದನ್ನು ಕೇಳಿದ ಅರ್ಜುನನು ಆ ಅನದಿಯ ಮಹತ್ತ್ವವನ್ನು ತಿಳಿಸಲು ಕೇಳಿಕೊಂಡಾಗ ಭರದ್ವಾಜರು ಅವನಿಗೆ ಸುವರ್ಣಮುಖರೀ ನದಿಯ ಮಹತ್ತ್ವವನ್ನು ಹೇಳಲಾರಂಭಿಸಿದರು.

ಭರದ್ವಾಜ ಉವಾಚ–

ಅಂಹೋನಿಬರ್ಹಣಂ ಸರ್ವಶ್ರೇಯಸಾಮೇಕಕಾರಣಮ್ ।
ಶೃಣು ಮಾಹಾತ್ಮ್ಯಮಸ್ಯಾಸ್ತೇ ಕಥಯಿಷ್ಯಾಮಿ ಪಾಂಡವ ॥24॥

ಪಾಶ್ಚಾತ್ಯಂ ಜನ್ಮ ಸಂಪ್ರಾಪ್ಯ ಜ್ಞಾನಿನಾಂ ಕರ್ಮಣಃ ಕ್ಷಯೇ ।
ಸುವರ್ಣಮುಖರೀಸ್ನಾನಂ ಸಿದ್ಧ್ಯೇದ್ಬ್ರಹ್ಮತ್ವಕಾರಣಮ್ ॥25॥

ಏತಾಂ ಸುವರ್ಣಮುಖರೀಂ ಯೋಜನಾನಾಂ ಶತೈರಪಿ ।
ಸ್ಮೃತ್ವಾ ಮನುಷ್ಯಃ ಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥26॥

ನಿಃಕ್ಷಿಪ್ತಮಸ್ಥಿಜಂತೂನಾಂ ಸುವರ್ಣಮುಖರೀಜಲೇ ।
ಸೋಪಾನತಾಂ ಸಮಾಯಾತಿ ಬ್ರಹ್ಮಲೋಕಾಧಿರೋಹಣೇ ॥27॥

ಸ್ಮರಂತಃ ಸ್ವರ್ಣಮುಖರೀಂ ಯತ್ರ ಕುತ್ರಾಪಿ ಮಾನವಃ ।
ತೋಯಾಂತರೇಷು ಸ್ನಾತ್ವಾಽಪಿ ಲಭಂತೇ ಫಲಮುತ್ತಮಮ್ ॥28॥

ತಾವದೇವಾಭಿಭೂಯಂತೇ ನರಾಃ ಪಾತಕಕೋಟಿಭಿಃ ।
ಸುವರ್ಣಮುಖರೀಸ್ನಾನಂ ಯಾವತ್ತಲ್ಲಭ್ಯತೇ ಶುಭಮ್ ॥29॥

ದಿವ್ಯಂತರಿಕ್ಷಭೌಮಾನಿ ತೀರ್ಥಾನಿ ನಿಜಸಿದ್ಧಯೇ ।
ಸ್ಮರಂತ್ಯಹರಹಃ ಪ್ರಾತಃ ಸುವರ್ಣಮುಖರೀಂ ನದೀಮ್ ॥30

ಅಗಸ್ತ್ಯಾಚಲಸಂಭೂತಾ ದಕ್ಷಿಣೋದಧಿಗಾಮಿನೀ ।
ಪಾಪಾನಿ ಸ್ವರ್ಣಮುಖರೀ ಸ್ಮರಣಾದೇವ ನಾಶಯೇತ್ ॥31॥

ಸರ್ವಪಾಪಗಳನ್ನು ನಿವಾರಿಸಿ ಸರ್ವ ಶ್ರೇಯಸ್ಸನ್ನು ಉಂಟುಮಾಡುವ ಸುವರ್ಣಮುಖರಿಯ ಮಾಹಾತ್ಮ್ಯವನ್ನು ಹೇಳುವೆನು. ಶ್ರದ್ಧೆಯಿಂದ ಕೇಳು. ಜ್ಞಾನಿಗಳಿಗೂ ಮೋಕ್ಷಪ್ರದವಾದ ಸುವರ್ಣ ಮುಖರೀ ನದಿಯ ಸ್ನಾನವು ಸರ್ವಕರ್ಮಕ್ಷಯಾನಂತರದ ಕಡೆಯ ಜನ್ಮದಲ್ಲಿಯೇ ದೊರೆಯುತ್ತದೆ. ಈ ನದಿಯನ್ನು ಸ್ಮರಿಸುವ ನೂರಾರು ಯೋಜನ ದೂರದಲ್ಲಿರುವ ಜನರನ್ನು ಸಹ ಶುದ್ಧಗೊಳಿಸುವರಲ್ಲಿ ಯಾವ ಸಂದೇಹವೂ ಇರುವದಿಲ್ಲ. ಇದರಲ್ಲಿ ಬಿದ್ದ ಮನುಷ್ಯನ ಮೂಳೆಗಳೂ ಆ ಮೃತ ಮನುಷ್ಯನನ್ನು ಸ್ವರ್ಗಾದಿ ಲೋಕಗಳನ್ನು ಹೊಂದಿಸುವವು. ಸುವರ್ಣ ಮುಖರಿಯನ್ನು ಸ್ಮರಿಸುತ್ತಾ ಯಾವ ನೀರಿನಲ್ಲಿ ಸ್ನಾನವನ್ನು ಮಾಡಿದರೂ ಸಹ ಉತ್ತಮವಾದ ಫಲವು ದೊರೆಯುವದು. ಅಗಸ್ತ್ಯಪರ್ವತದಿಂದ ಹುಟ್ಟಿ ದಕ್ಷಿಣ ಸಮುದ್ರವನ್ನು ಸೇರುವ ಸುವರ್ಣಮುಖರೀ ನದಿಯು ಸ್ಮರಣಮಾತ್ರದಿಂದ ಎಲ್ಲರ ಪಾಪಗಳನ್ನು ಕಳೆಯುವದು. ಸ್ವರ್ಗಾಂತರಿಕ್ಷ

ಸುವರ್ಣಮುಖರೀ ಸ್ನಾನಲೋಲುಪೇನಾಂತರಾತ್ಮನಾ ।
ವಾಂಛಂತಿ ಮರ್ತ್ಯತಾಮೇವ ದೇವಾಃ ಶಕ್ರಪುರೋಗಮಾಃ ॥32॥

ಸುವರ್ಣಮುಖರೀತೋಯಪುಷ್ಟಸಸ್ಯಾನ್ನಭೋಜಿನಃ ।
ನ ಲಿಪ್ಯಂತೇ ಮಹಾಪಾಪೈರ್ದುರ್ಭೋಜನಶತೋದ್ಭವೈಃ ॥33॥

ಅಪಿ ನಿಷ್ಕಮಿತಂ ಪೀತಂ ಸುವರ್ಣಮುಖರೀಜಲಮ್ ।
ನಾಶಯೇದದ್ರಿತುಲ್ಯಾನಿ ಹ್ಯಾಶು ಪಾಪಾನಿ ದೇಹಿನಾಮ್ ॥34॥

ಪ್ರಾಪ್ಯಾಪಿ ಮಾನುಷಂ ಜನ್ಮ ಸುವರ್ಣಮುಖರೀಜಲೇ ।
ಯೇ ವಾ ಸ್ನಾನಂ ನ ಕುರ್ವಂತಿ ತೇಷಾಂ ಜನ್ಮ ನಿರರ್ಥಕಮ್ ॥35॥

ಸುವರ್ಣಮುಖರೀಸ್ನಾನಂ ಯದೇಕಂ ವಿಧಿನಾ ಕೃತಮ್ ।
ಜಾಹ್ನವೀಸ್ನಾನಕೋಟೀನಾಂ ಸಮಂ ಭವತಿ ಪರ್ವಸು ॥36॥

ಗೋವಿಂದ ಇವ ದೇವೇಷು ನಕ್ಷತ್ರೇಷ್ವಿವ ಚಂದ್ರಮಾಃ ।
ನರೇಷ್ವಿವ ಮಹೀಪಾಲೋ ಭೂರುಹೇಷ್ವಿವ ಕಲ್ಪಕಃ ॥37॥

ಮಹಾಭೂತೇಷ್ವಿವ ವಿಯನ್ಮಾಯೇವಾಖಿಲಶಕ್ತಿಷು ।

ಭೂಲೋಕಗಳಲ್ಲಿರುವ ತೀರ್ಥಗಳೆಲ್ಲವೂ ತಮ್ಮ ಪವಿತ್ರತೆಯ ಗೋಸ್ಕರವಾಗಿ ಪ್ರಾತಃಕಾಲದಲ್ಲಿ ಪ್ರತಿದಿನವೂ ಸುವರ್ಣಮುಖರೀನದಿಯನ್ನು ಸ್ಮರಿಸುತ್ತಿರುವವು. ಸುವರ್ಣ ಮುಖರಿಯ ಸ್ಮರಣವು ಸರ್ವಪಾಪಹಾರಕವಾಗಿರುವದು. ಸುವರ್ಣಮುಖರಿಯ ನೀರಿನಿಂದ ಬೆಳೆದ ಧಾನ್ಯಗಳನ್ನು ಭೋಜನವಮಾಡುವವರು ದುಷ್ಟಾನ್ನಭೋಜನಜನಿತವಾದ ಮಹಾ ಅನರ್ಥಗಳನ್ನು ಕಳೆದುಕೊಳ್ಳುವನು. ಒಂದು ನಿಷ್ಕ ಮುಳುಗುವಷ್ಟು ಸುವರ್ಣಮುಖರೀ ಜಲವನ್ನು ಕುಡಿದರೂ ಸಹ ಅದು ಅವರ ಬೆಟ್ಟದಷ್ಟು ಪಾಪಗಳನ್ನು ಸುಟ್ಟುಹಾಕುವದು. ಈ ನದಿಯಲ್ಲಿ ಸ್ನಾನಮಾಡದವರ ಜೀವನವು ವ್ಯರ್ಥವಾಗಿರುವದು. ಪರ್ವಗಳಲ್ಲಿ ನಿಯಮಬದ್ಧರಾಗಿ ಸುವರ್ಣಮುಖೀ ಸ್ನಾನವನ್ನು ಮಾಡಿದಲ್ಲಿ ಅಸಂಖ್ಯ ಗಂಗಾಸ್ನಾನಗಳ ಫಲವನ್ನು ಹೊಂದುವನು. ದೇವತೆಗಳಲ್ಲಿ ವಿಷ್ಣುವೂ, ನಕ್ಷತ್ರಗಳಲ್ಲಿ ಚಂದ್ರನೂ, ಮನುಷ್ಯರಲ್ಲಿ ಚಕ್ರವರ್ತಿಯು, ವೃಕ್ಷಗಳಲ್ಲಿ ಕಲ್ಪವೃಕ್ಷವೂ, ಮಹಾ ಭೂತಗಳಲ್ಲಿ ಆಕಾಶವೂ, ಸಕಲ ಶಕ್ತಿಗಳಲ್ಲಿ ಮಾಯಾಶಕ್ತಿಯು, ಮಂತ್ರಗಳಲ್ಲಿ ಗಾಯತ್ರಿಯೂ, ದೇವತೆಗಳ ಆಯುಧದಲ್ಲಿ ವಜ್ರಾಯುಧವೂ, ತತ್ತ್ವಗಳಲ್ಲಿ ಆತ್ಮತಮವೂ ಯಜುರ್ವೇದದದಲ್ಲಿ ರುದ್ರಾಧ್ಯಾಯವು, ಪರ್ವತಗಳಲ್ಲಿ ಹಿಮವಂತನೂ, ಕ್ಷೇತ್ರಗಳಲ್ಲಿ ಶ್ರೀವರಾಹ ಕ್ಷೇತ್ರವು, ಇಂದ್ರಿಯಗಳಲ್ಲಿ ಮನಸ್ಸು ಶ್ರೇಷ್ಠವಾಗಿರುವಂತೆ ನದಿಗಳಲ್ಲಿ ಸುವರ್ಣಮುಖರಿಯು ಅತ್ಯಂತ ಶ್ರೇಷ್ಠವಾಗಿರುವದು.

ಗಾಯತ್ರೀವ ಚ ಮಂತ್ರೇಷು ವಜ್ರಂ ದೇವಾಯುಧೇಷ್ವಿವ ॥38॥

ತತ್ತ್ವೇಷ್ವಿವಾತ್ಮನಸ್ತತ್ತ್ವಂ ರುದ್ರಾಧ್ಯಾಯೋ ಯಜುಷ್ವಿವ ।
ಅನಂತ ಇವ ನಾಗೇಷು ಹಿಮಾಚಲ ಇವಾದ್ರಿಷು ॥39॥

ಪ್ರೋತಿಕ್ಷೇತ್ರಮಿವ ಕ್ಷೇತ್ರೇಷ್ವಿಂದ್ರಿಯೇಷ್ವಿವ ಮಾನಸಮ್ ।
ನದೀಷ್ವಿವ ಚ ಸರ್ವಾಸು ಸುವರ್ಣಮುಖರೀ ವರಾ ॥40॥

ನಿತ್ಯಂ ಸ್ಮರನ್ನಮಸ್ಕುರ್ಯಾತ್ಕೀರ್ತಯೋನ್ಮನಸಾऽರ್ಚಯೇತ್ ।
ಶುದ್ಧಿಕ್ಷೇಮಶಿವಾಪೇಕ್ಷೀ ಸುವರ್ಣಮುಖರೀಂ ಶುಭಾಮ್ ॥41॥

'ಆಗಸ್ತ್ಯಾಚಲಸಂಭೂತಾಂ ದಕ್ಷಿಣೋದಧಿಗಾಮಿನೀಂ ।
ಸಮಸ್ತಪಾಪಹಂತ್ರೀಂ ತ್ವಾಂ ಸುವರ್ಣಮುಖರೀಂ ಶ್ರಯೇ ॥42॥

ಮಹಾಪಾತಕವಿಪ್ಲುಷ್ಟಂ ಗಾತ್ರಂ ಮಮ ತವೋದಕೈಃ ।
ಕ್ಷಾಲಯಾಮಿ ಜಗದ್ಧಾತ್ರಿ ಶ್ರೇಯಸಾ ಯೋಜಯಸ್ವ ಮಾಮ್' ॥43॥

ಇತಿ ಸೂಕ್ತದ್ವಯಂ ಸಮ್ಯಗುಚ್ಚಾರ್ಯ ನಿಯತೋ ನರಃ ।
ಸುವರ್ಣಮುಖರೀತೋಯೇ ಸ್ನಾತ್ವಾ ಶುದ್ಧಃ ಪ್ರಮೋದತೇ ॥44॥

ಬ್ರಹ್ಮಣಾ ನಿರ್ಮಿತಾ ಪೂರ್ವಮಗಸ್ತ್ಯೇನ ಸಮಾಹೃತೌ ।
ಸ್ವಯಂ ಮಂದಾಕಿನೀ ಮೂರ್ತಾ ಸುವರ್ಣಮುಖರೀ ವರಾ ॥45॥

ಏವಂ ಪ್ರಭಾವಾ ದಿವ್ಯೇಯಂ ಕೀರ್ತನೀಯಾ ಶುಭಾರ್ಥಿಭಿಃ ।
ಮನಸಾ ಭಕ್ತಿಯುಕ್ತೇನ ಸ್ನಾತವ್ಯಾ ಶಭಕಾಂಕ್ಷಿಭಿಃ ॥46॥

ಕ್ಷೇಮ ಆರೋಗ್ಯಗಳನ್ನು ಬಯಸುವವನು ನಿತ್ಯದಲ್ಲಿ ಈ ನದಿಯನ್ನು ಸ್ಮರಿಸಬೇಕು. ಸ್ತೋತ್ರಮಾಡಬೇಕು, ಪೂಜಿಸಬೇಕು. 'ಅಗಸ್ತ್ಯಾಚಲದಲ್ಲಿ ಹುಟ್ಟಿ ದಕ್ಷಿಣ ಸಮುದ್ರವನ್ನು ಸೇರುವ, ಸಕಲ ಪಾಪಗಳನ್ನು ವಿನಾಶಗೊಳಿಸುವ ಹೇ ಸುವರ್ಣಮುಖರಿಯೇ! ನಾನು ನಿನ್ನನ್ನಾಶ್ರಯಿಸಿರುವೆನು. ಲೋಕಮಾತೆಯೇ! ಅನೇಕ ಮಹಾಪಾತಕಗಳಿಂದ ಕೂಡಿದ ನನ್ನ ಶರೀರವನ್ನು ನಿನ್ನ ನೀರಿನಲ್ಲಿ ತೊಳೆದು ನಿಷ್ಪಾಪನೆನಿಸುವೆನು. ನನಗೆ ಶ್ರೇಯಸ್ಸನ್ನು ಉಂಟುಮಾಡು' ಎಂದು ಪ್ರಾರ್ಥಿಸುತ್ತಾ ಸುವರ್ಣಮುಖಿ ನದಿಯಲ್ಲಿ ಸ್ನಾನವನ್ನು ಮಾಡುವವರು ಯಾವಾಗಲೂ ಸಂತೋಷವನ್ನು ಅನುಭವಿಸುವರು. ಇಂತಹ ಸುವರ್ಣ ಮುಖರಿಯ ಮಾಹಾತ್ಮ್ಯವು ನಿತ್ಯದಲ್ಲಿಯೂ ಸ್ತೋತ್ರಾರ್ಹವಾಗಿರುವದು. ಭಕ್ತಿಯುಕ್ತವಾದ ಮನಸ್ಸಿನಂದ ಈನದಿಯಲ್ಲಿ ಸ್ನಾನವನ್ನು

ಸೋಮಸೂರ್ಯೋಽಪರಾಗೇಷು ಸ್ನಾನದಾನಾದಿಕಂ ಕೃತಮ್ ।
ಸ್ಯಾದಮೇಯಫಲಂ ಪಾರ್ಥ ಸುವರ್ಣಮುಖರೀತಟೇ ॥47॥

ಸಂಕ್ರಾಂತಾವಯನೇ ಪುಣ್ಯೇ ವ್ಯತೀಪಾತೇಽಥ ವಾಸರೇ ।
ಸುವರ್ಣಮುಖರೀಸ್ನಾನಂ ಕುಲಕೋಟಿಂ ಸಮುದ್ಧರೇತ್ ॥48॥

ಜನ್ಮರ್ಕ್ಷೇ ಜನ್ಮದಿವಸೇ ಸುವರ್ಣಮುಖರೀಜಲೇ ।
ಸ್ನಾತ್ವಾ ವಿಧಿವದಾಪ್ನೋತಿ ಕ್ಷೇಮಾರೋಗ್ಯಸುಖಶ್ರಿಯಃ ॥49॥

ದುಸ್ವಪ್ನವಿಘ್ನಜಂ ಭೂತಗ್ರಹದುಸ್ಥಾನಜಂ ತಥಾ ।
ಸುವರ್ಣಮುಖರೀತೋಯೇ ಸ್ನಾತ್ವಾ ತರತಿ ಕಿಲ್ಬಿಷಮ್ ॥50॥

ಸುವರ್ಣಮುಖರೀತೀರೇ ಗೋಪಾದಪ್ರಮಿತಾಂ ಭುವಮ್ ।
ದತ್ವಾ ಸರ್ವಮಹೀದಾನಾದ್ಯತ್ಫಲಂ ತದವಾಪ್ನುಯಾತ್ ॥51॥

ಧೇನುಂ ಸವಸ್ತ್ರಾಲಂಕಾರಾಂ ಸುವರ್ಣಮುಖರೀತಟೇ ।
ದತ್ವಾ ವಿಪ್ರಾಯ ವಿಧಿವದ್ಯಾತಿ ಬ್ರಹ್ಮ ಸನಾತನಮ್ ॥52॥

ಪುಣ್ಯಕಾಲೇಷು ದಾನಾದಿ ವಿಧೇಯಾನ್ಯಖಿಲಾನ್ಯಪಿ ।
ಇಹಾಮುತ್ರ ಫಲಪ್ರಾಪ್ತ್ಯೈ ಸುವರ್ಣಮುಖರೀತಟೇ ॥53॥

ಮಾಡಬೇಕು. ಸೂರ್ಯ-ಚಂದ್ರರ ಗ್ರಹಣ, ಸಂಕ್ರಮಣ, ಪುಣ್ಯತಿಥಿಗಳು, ವ್ಯತೀಪಾತಾದಿ ದಿವಸಗಳು, ಹರಿವಾಸರ, ಇವೇ ಮೊದಲಾದ ದಿನಗಳಲ್ಲಿ ಸುವರ್ಣಮುಖರಿಯಲ್ಲಿ ಮಾಡಿದ ಸ್ನಾನವು ಕುಲಕೋಟಿಗಳನ್ನು ಉದ್ಧರಿಸುವವು. ಜನ್ಮನಕ್ಷತ್ರ, ಜನ್ಮದಿವಸಗಳಲ್ಲಿಯಾಗಲಿ ಸುವರ್ಣ ಮುಖರಿಯಲ್ಲಿ ಸ್ನಾನವನ್ನು ಮಾಡಿದರೆ ಅವನು ಸಕಲ ಕ್ಷೇಮ, ಆರೋಗ್ಯ, ಸೌಖ್ಯ, ಐಶ್ವರ್ಯಗಳನ್ನು ಹೊಂದುತ್ತಾನೆ. ದುಃಸ್ವಪ್ನಗಳಿಂದಲೂ, ವಿಘ್ನಗಳಿಂದಲೂ, ಭೂತಪ್ರೇತ ಪಿಶಾಚಾದಿಗಳಿಂದಲೂ, ಜನನಕಾಲದಲ್ಲಿ ದುಃಸ್ಥಾನಗಳಲ್ಲಿರುವ ಕ್ರೂರಗ್ರಹಗಳಿಂದಲೂ ಉಂಟಾಗುವ ತಾಪ-ಪಾಪಗಳೆಲ್ಲವೂ ಸುವರ್ಣಮುಖಿಯ ನೀರಿನ ಸ್ನಾನದಿಂದ ಮಾಯವಾಗುವವು. ಗೋಷ್ಪಾದದಷ್ಟು ಭೂದಾನವನ್ನು ಮಾಡಿದರೂ ಸಹ ಸಕಲ ಪೃಥ್ವಿಯನ್ನೇ ದಾನಮಾಡಿದ ಫಲವು ದೊರೆಯುತ್ತದೆ. ಈ ನದಿಯ ದಡದಲ್ಲಿ ಸಾಲಂಕೃತವಾದ ಗೋದಾನವನ್ನು ಬ್ರಾಹ್ಮಣನಿಗೆ ಮಾಡಿದಲ್ಲಿ ಮುಂದೆ ಅವನಿಗೆ ಬ್ರಹ್ಮಲೋಕವು ದೊರಕುವದು. ಈ ನದಿಯ ದಡಲ್ಲಿ ಮಾಡಿದ ಶ್ರಾದ್ಧ, ದಾನ ಜಪ ಹೋಮ ತಪಸ್ಸು, ದೇವತಾರ್ಚನೆ ಮೊದಲಾದ ಶುಭಕರ್ಮಗಳು ಬೇರೆ ಕಡೆ ಕೊಡುವ ಫಲದ ನೂರು ಪಟ್ಟು ಪುಣ್ಯಫಲವನ್ನು ಕೊಡುತ್ತವೆ. ವರ್ಷಋತುವಿನಲ್ಲಿ

ಜಪೋ ಹೋಮಸ್ತಪೋ ದಾನಂ ಪಿತೃಕರ್ಮ ಸುರಾರ್ಚನಮ್ ।
ಕೃತಂ ಭವೇಚ್ಛತಗುಣಂ ಸುವರ್ಣಮುಖರೀತಟೇ ॥54॥

ಅನ್ಯತ್ತೇ ಕಥಯಿಷ್ಯಾಮಿ ವಿಧೇಯಂ ವ್ರತಮುತ್ತಮಮ್ ।
ಸುವರ್ಣಮುಖರೀತೀರೇ ಪ್ರತಿವರ್ಷಂ ಸುಖಾರ್ಥಿಭಿಃ ॥55॥

ಮೇಘಕಾಲೇ ರವಿಕರೈಸ್ತಿರೋಧಾನಮುಪಾಗತಃ ।
ಯದೋದೇತಿ ಮುನಿಃ ಶ್ರೀಮಾನ್ಮಿತ್ರಾವರುಣನಂದನಃ ॥56॥

ತಸ್ಮಿನ್ ದಿನೇ ಯೇ ನಿಯತಾಃ ಸ್ನಾನಮಸ್ಯಾಂ ಪ್ರಕುರ್ವತೇ ।
ತೈಃ ಕಲ್ಪಂ ಚ ಸುರಾವಾಸೇ ಸ್ಥೀಯತೇ ಕುರುನಂದನ ॥57॥

ತದಾಗಸ್ತ್ಯಸ್ಯ ಯದ್ರೂಪಂ ಸುವರ್ಣೇನ ವಿನಿರ್ಮಿತಮ್ ।
ವಿಧಿನಾ ದಧತೇ ಪಾರ್ಥ ತೇ ಯಾಂತಿ ಬ್ರಹ್ಮ ಶಾಶ್ವತಮ್ ॥58॥

ವಿಧಿನಾ ಕೇನ ಕರ್ತವ್ಯಂ ವ್ರತಮೇತನ್ಮಹಾಮುನೇ ।
ತಸ್ಮಮಾಚಕ್ಷ್ವ ಸಕಲಂ ಜಿಜ್ಞಾಸೋಽಸ್ತು ಮಹಾತ್ಮನಃ ॥59॥

ಭರದ್ವಾಜ ಉವಾಚ–

ಅಗಸ್ತ್ಯೋದಯದಿನಂ ಜ್ಞಾತ್ವಾ ನಿಯತಮಾನಸಃ ।
ಸ್ವಶಕ್ತ್ಯಾ ಕಾರಯೇದ್ರೂಪಂ ತಸ್ಯ ಹೇಮ್ನಾ ಮಹಾಮುನೇ ॥60॥

ಸುವರ್ಣಭಾಸ್ವರಚ್ಛಾಯಂ ಜಟಾಬಂಧಮನೋಹರಮ್ ।
ದಧಾನಂ ಕರಪದ್ಮಾಭ್ಯಾಮಕ್ಷಮಾಲಾಂ ಕಮಂಡಲುಮ್ ॥61॥

ಅಗಸ್ತ್ಯವೆಂಬ ನಕ್ಷತ್ರವು ಉದಯಿಸುವ ದಿನದಲ್ಲಿ ನಿಯಮದಿಂದ ಯಾರು ಈ ನದಿಯಲ್ಲಿ ಸ್ನಾನವನ್ನು ಮಾಡುವರೋ ಅವರು ಕಲ್ಪಾಂತದವರೆಗೂ ಸ್ವರ್ಗಲೋಕದಲ್ಲಿ ಸುಖದಿಂದ ವಾಸಮಾಡುವರು. ಆ ಸಮಯದಲ್ಲಿ ಅಗಸ್ತ್ಯಮಹಾಮುನಿಯ ಬಂಗಾರದ ಪ್ರತಿಮೆಯನ್ನು ಬ್ರಾಹ್ಮಣನಿಗೆ ದಾನಮಾಡಿದಲ್ಲಿ ಶಾಶ್ವತವಾದ ಬ್ರಹ್ಮಪ್ರಾಪ್ತಿಯೇ ಉಂಟಾಗುವದು.

ಅಗಸ್ತ್ಯ ನಕ್ಷತ್ರವು ಉದಯಿಸುವ ದಿನವನ್ನು ತಿಳಿದುಕೊಂಡು ನಿಷ್ಠೆಯಿಂದ ಮನಸ್ಸನ್ನು ನಿಗ್ರಹಿಸಿ ಶಕ್ತಿಗೆ ತಕ್ಕಂತೆ, ಕರಕಮಲದಲ್ಲಿ ಜಪಮಾಲೆಯನ್ನು ಧರಿಸಿದ, ಜಟಾಧಾರಿಯಾದ, ಮೃದುವಾದ ನಾರುಡುಗೆಯನ್ನುಟ್ಟು ಕೈಯಲ್ಲಿ ಜಪಮಾಲೆಯನ್ನು ಕಮಂಡಲುವನ್ನು ಹಿಡಿದ ರುದ್ರಾಕ್ಷಿಗಳಿಂದಲಂಕೃತವಾದ ಮಹಾಮುನಿಯಾದ ಅಗಸ್ತ್ಯರ ಪ್ರತಿಮೆಯನ್ನು ಮಾಡಿಸಬೇಕು.

ವಸಾನಂ ಮೃದುಲಂ ವಲ್ಕಂ ಮೃಗಚರ್ಮೋತ್ತರೀಯಕಮ್ ।
ಸೌಮ್ಯಂ ಛರ್ಮಾಂಕರುಚಿರಂ ರುದ್ರಾಕ್ಷಕೃತಭೂಷಣಮ್ ॥62॥

ಏವಂ ವಿಧಾಯ ತದ್ರೂಪಂ ಸ್ನಾತ್ವಾ ನಿಯತಮಾನಸಃ ।
ಆಚಾರ್ಯಂ ಗಂಧಪುಷ್ಪಾದ್ಯೈರಲಂಕೃತ್ಯ ಯಥಾವಿಧಿ ॥63॥

ಶಾಲೇಯತಂಡುಲಾನಾಂ ವಾ ಮಾಢಕಸ್ಯೋಪರಿ ಸ್ಥಿತಾಮ್ ।
ವಸ್ತ್ರದ್ವಯಸಮಾಯುಕ್ತಾಂ ಪ್ರತಿಮಾಂ ಪ್ರತಿಪೂಜಯೇತ್ ॥64॥

ವಿಂಧ್ಯಸಂಸ್ತಂಭನೋ ವಾರ್ಧಿಚುಲಕೀಕೃತಪೇಶಲಃ ।
ಬ್ರಹ್ಮಾದಿಸರ್ವದೇವಾನಾಂ ತೇಜಸಾ ಸುಪ್ರಕಾಶಿತಃ ॥65॥

ಅಗಸ್ತ್ಯ ಕುಂಭಸಂಭೂತೋ ದೇವಾಸುರನಮಸ್ಕೃತಃ ।
ಪ್ರೀತಿಮಾಪ್ನೋತು ಮಹತೀಂ ದಾನೇನಾನೇನ ಮೇ ಪ್ರಭುಃ ॥66॥

ಇಮಂ ಮಂತ್ರಂ ಸಮುಚ್ಚಾರ್ಯ ಧಾರಾಪೂರ್ವಂ ಸದಕ್ಷಿಣಮ್ ।
ದತ್ತ್ವಾ ವಿಮುಕ್ತಃ ಪಾಪೇಭ್ಯೋ ಯಾತಿ ಬ್ರಹ್ಮ ಸನಾತನಮ್ ॥67॥

ಜನ್ಮಾಂತರಕೃತೈರ್ನೂನಮಿಹ ಜನ್ಮಕೃತೈರಪಿ ।
ಮಹಾಪಾಪೋಪಪಾಪೌಘೈರ್ಮುಚ್ಯತೇ ನಾತ್ರ ಸಂಶಯ ॥68॥

ಬ್ರಹ್ಮಾದ್ಯಾಃ ಸಕಲಾ ದೇವಾಃ ಸನಕಾದ್ಯಾ ಮಹರ್ಷಯಃ ।
ಚರಾಚರಾಣಿ ಭೂತಾನಿ ಪ್ರೀತಿಂ ಯಾಂತಿ ನ ಸಂಶಯಃ ॥69॥

ಅದಕ್ಕೆ ಸ್ನಾನವನ್ನು ಮಾಡಿಸಿ, ಆಚಾರ್ಯೋತ್ತಮನನ್ನು ಗಂಧಾಕ್ಷತಪುಷ್ಪಗಳಿಂದ ಅವನನ್ನು ಪೂಜಿಸಿ, ಆಮೇಲೆ 32 ಸೇರು ಅಕ್ಕಿಯ ರಾಶಿಯ ಮೇಲೆ ಪ್ರತಿಮೆಯನ್ನಿರಿಸಿ ಅದಕ್ಕೆ ವಸ್ತ್ರಗಳನ್ನು ಅರ್ಪಿಸಿ 'ವಿಂಧ್ಯಪರ್ವತದ ಬೆಳವಣಿಗೆಯನ್ನು ನಿಲ್ಲಿಸಿದವನೂ, ಸಮುದ್ರವನ್ನು ಏಕಾಪೂಶನದಲ್ಲಿ ಸ್ವೀಕರಿಸಿದವನೂ, ಮಹಾತ್ಮನೂ, ಕುಂಭಸಂಭವನೂ, ದೇವತೆಗಳು, ದಾನವರಿಂದ ಸ್ತುತ್ಯನೂ ಆದ ಲೋಕನಾಯಕನಾದ ಅಗಸ್ತ್ಯರು ನನ್ನ ಈ ಪ್ರತಿಮಾ ದಾನದಿಂದ ಪ್ರೀತನಾಗಲಿ' ಎಂದು ಪ್ರಾರ್ಥನೆಯನ್ನು ಮಾಡಿ ದಕ್ಷಿಣಾಪುರಸ್ಸರವಾಗಿ ಪ್ರತಿಮಾದಾನವನ್ನು ಮಾಡಬೇಕು. ಇದರಿಂದ ಶಾಶ್ವತವಾದ ಬ್ರಹ್ಮಲೋಕವನ್ನೇ ಹೊಂದುವನು. ಅವರ ಜನ್ಮಜನ್ಮಕೃತ ಪಾಪಗಳೂ ಸಹ ನಾಶವನ್ನು ಹೊಂದುವವು. ಅಗಸ್ತ್ಯೇಶನ ಹೆಸರಿನಲ್ಲಿ ಈ ವ್ರತವನ್ನಾಚರಿಸಿದವನು ಬಳಿಕ ಅಗಸ್ತ್ಯರ ಪ್ರೀತಿಯನ್ನು ಹೊಂದಲು ಯಥಾಶಕ್ತಿ ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು. ಆ ಅಗಸ್ತ್ಯನಕ್ಷತ್ರವು ಕಾಣುವ ದಿನವನ್ನು ವ್ಯರ್ಥಗೊಳಿಸದೇ ಪ್ರಯತ್ನಪೂರ್ವಕವಾಗಿ ಈ

ಕೃತ್ವಾ ವ್ರತಮಿದಂ ಪುಣ್ಯಮಗಸ್ತ್ಯಸ್ಯ ಚ ಸನ್ಮುನೇಃ ।
ಪ್ರೀತ್ಯರ್ಥಂ ಭೋಜಯೇದ್ವಿಪ್ರಾನ್ ಯಥಾಶಕ್ತಿ ಸದಕ್ಷಿಣಮ್ ॥70॥

ತಸ್ಮಿನ್ ಕರ್ಮಣಿ ಚಾಶಕ್ತೋ ಯಥಾಶಕ್ತಿ ಮಹೀಸುರಾನ್ ।
ಸ್ವರ್ಣಧಾನ್ಯಾದಿದಾನೇನ ತೋಷಯೇದ್ಭಕ್ತಿಸಂಯುತಃ ॥71॥

ತಿಥಿಂ ನ ವಿತಥೀಕುರ್ಯಾತ್ ತಾಂ ಯತ್ನೇನ ಸಮಾಚರೇತ್ ।
ಯತ್ಕಿಂಚಿದಪಿ ಚಾವಶ್ಯಂ ಕರ್ಮ ಕುರ್ಯಾಚ್ಚ ಪೂರುಷಃ ॥72॥

ಮಹಾಮುನೇರಗಸ್ತ್ಯಸ್ಯ ಪರಿಪಕ್ವಂ ತಪಃಫಲಮ್ ।
ನದೀ ಸುವರ್ಣಮುಖರೀ ಕೀರ್ತನೀಯಾ ಸುರಾಸುರೈಃ ॥73॥

ಏವಂ ತೇ ಕಥಿತಃ ಸಮ್ಯಕ್ ಮಹಾನದ್ಯಾಃ ಸಮುದ್ಭವಃ ।
ಪ್ರಭಾವಶ್ಚ ಸದಾಚಕ್ಷ್ವ ಯದ್ಭೂಯಃ ಶ್ರೋತುಮಿಚ್ಛಸಿ ॥74॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ
ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ
**'ಸುವರ್ಣಮುಖರೀಪ್ರಭಾವಪ್ರಶಂಸಾವರ್ಣನಮ್'** ನಾಮ ತ್ರಯಸ್ತ್ರಿಂಶೋಽಧ್ಯಾಯಃ ॥33॥

* * *

ವ್ರತವನ್ನಾಚರಿಸಲೇ ಬೇಕು. ಅಗಸ್ತ್ಯರ ಅತ್ಯಲ್ಪವಾದ ಪೂಜೆಯನ್ನಾದರೂ ಅಂದು ಮಾಡಲೇಬೇಕು.

ಹೀಗೆ ಇಲ್ಲಿಯವರೆಗೂ ವರ್ಣಿಸಿದ ಸುವರ್ಣಮುಖರೀ ನದಿಯು ಎಲ್ಲರ ಗೌರವಕ್ಕೂ ಸಹ ಪಾತ್ರವಾಗಿರುವದು. ಹೇ ಅರ್ಜುನನೇ! ನಾನು ನಿನಗೆ ಸುವರ್ಣಮುಖಿಯ ಉದ್ಭೋದವನ್ನು ತಿಳಿಸಿರುವೆನು. ಮುಂದೇನು ಬೇಕು? ಎಂದು ತಿಳಿಸಿದರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ
ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ
ಸಂವಾದದಲ್ಲಿ **ಸುವರ್ಣಮುಖರೀ ಪ್ರಭಾವಪ್ರಶಂಸಾ ವರ್ಣನವೆಂಬ** ಮೂವತ್ಮೂರನೆಯ
ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥ ಚತುಸ್ತ್ರಿಂಶೋऽಧ್ಯಾಯಃ

[ಅಗಸ್ತ್ಯತೀರ್ಥಾದಿ ವಿವಿಧತೀರ್ಥಮಾಹಾತ್ಮ್ಯವರ್ಣನಮ್]

ಅರ್ಜುನ ಉವಾಚ–

ಶ್ರೋತ್ರಾಂಜಲಿಭ್ಯಾಂ ಪೀತ್ವಾಪಿ ಭವದ್ವಾಕ್ಯಾಮೃತಂ ಮುಹುಃ ।
ಮನೋ ನೋಪೈತಿ ಮೇ ತೃಪ್ತಿಂ ಭೂಯಃ ಶ್ರವಣಕಾಂಕ್ಷಯಾ ॥1॥

ಕ್ರಿಯಾಸಮಭಿಹಾರೋ ಮೇ ತ್ವದ್ವಾಕ್ಯಾಕರ್ಣನೈಷಿಣಃ ।
ಮನಃಖೇದಾಯ ಮಾ ಭೂತ್ತೇ ಕರುಣಾಭರಿತಾತ್ಮನಃ ॥2॥

ಇದಾನೀಂ ಶ್ರೋತುಮಿಚ್ಛಾಮಿ ನದ್ಯಾಮಸ್ಯಾಂ ಮಹಾಮುನೇ ।
ಕುತ್ರ ಕುತ್ರ ಸಮರ್ಥಾನಿ ತೀರ್ಥ್ಯಾನ್ಯಘನಿಬರ್ಹಣೇ ॥3॥

ಕಾಃ ಕಾಃ ಪುಣ್ಯತರಂಗಿಣ್ಯಃ ಸಂಗತಾ ಅನಯಾ ಮುನೇ ।
ಕುತ್ರ ಸ್ನಾನೇನ ಕೃತಾಘಾ ನೋಪಯಾಂತಿ ಯಮಾದ್ಭಯಮ್ ॥4॥

ಹರಾಚ್ಯುತಾದಿದೇವಾನಾಂ ಪುಣ್ಯಾನ್ಯಾಯಾತನಾನಿ ಚ ।
ಯಾನಿ ಯಾನಿ ಚ ಪುಣ್ಯಾನಿ ತಿಷ್ಠಂತ್ಯಸ್ಯಾಸ್ತಟದ್ವಯೇ ॥5॥

ತೇಷು ಕ್ಷೇತ್ರೇಷು ಮನುಜೈರ್ಯತ್ಫಲಂ ಸಮವಾಪ್ಯತೇ ।
ಏಹಿತೈರಿವಿಧಿವತ್ಸ್ನಾನದಾನಾದಿ ಶುಭಕರ್ಮಭಿಃ ॥6॥

ಸೋಪಾಖ್ಯಾನಮಿದಂ ಸರ್ವಂ ವೇದಿತುಂ ವೇದವಿತ್ತಮ ।

## ಮೂವತ್ನಾಲ್ಕನೆಯ ಅಧ್ಯಾಯ

[ಅಗಸ್ತ್ಯತೀರ್ಥಾದಿಗಳ ವರ್ಣನೆ]

ಸುವರ್ಣಮುಖಿಯ ಪ್ರಾದುರ್ಭಾವ–ಮಹತ್ವವನ್ನು ಭರದ್ವಾಜರ ಮುಖದಿಂದ ಕೇಳಿದ ಅರ್ಜುನನು ಅವರನ್ನು ಮತ್ತೆ ಬಹುವಾಗಿ ಸ್ತುತಿಸುತ್ತಾ 'ಆ ನದಿಯ ತೀರದಲ್ಲಿಯ ತೀರ್ಥಗಳು ಯಾವವು ? ಯಾವ ನದಿಗಳು ಇದರೊಂದಿಗೆ ಸಂಧಿಸುವವು? ಇವೇ ಮೊದಲಾದವುಗಳನ್ನು ಮತ್ತಷ್ಟು ವಿವರವಾಗಿ ತಿಳಿಸಿರಿ' ಎಂದು ಪ್ರಾರ್ಥಿಸಿದನು. ಆಗ ಭರದ್ವಾಜರು ಅಗಸ್ತ್ಯತೀರ್ಥವನ್ನಾರಂಭಿಸಿ

ಸಂಜಾತಾ ಮಹತೀ ಪ್ರೀತಿರ್ವಿಸ್ತಾರ್ಯಾಚಕ್ಷ್ವ ಮೇ ಕ್ರಮಾತ್ ॥7॥

ಭರದ್ವಾಜ ಉವಾಚ–

ಯತ್ಪೃಷ್ಟಂ ಭವತಾ ಪಾರ್ಥ ಕ್ರಮಾದ್ವಿಸ್ತಾರ್ಯ ಕಥ್ಯತೇ ।
ಆರಭ್ಯಾಗಸ್ತ್ಯತೀರ್ಥೇಂದ್ರಾದಸ್ಯಾಸ್ತೀರ್ಥೌಘವೈಭವಮ್ ॥8॥

ಅಖಂಡಜ್ಞಾನರೂಪೇಣ ಸರ್ವಲೋಕಹಿತೈಷಿಣಾ ।
ಸುರಾಸುರಾಣಾಂ ಸಂಭಾವ್ಯೇನಾಗಸ್ತ್ಯೇನ ಮಹಾತ್ಮನಾ ॥9॥

ವಸುಧಾಮವತೀರ್ಣಾಯಾಂ ಪ್ರಥಮಂ ತದ್ಧರಾಧರಾತ್ ।
ಸ್ನಾತ್ವಾ ಯತ್ರ ಮಹಾನದ್ಯಾಂ ಸಂಪ್ರಾಪ್ನೋತಿ ಕೃತಾರ್ಥತಾಮ್ ॥10॥

ಅಗಸ್ತ್ಯತೀರ್ಥಮಿತ್ಯುಕ್ತಂ ಪಾವನಂ ತಜ್ಜಗತ್ತ್ರಯೇ ।
ತತ್ರ ಸ್ನಾನೇನ ಶುದ್ಧಿಃ ಸ್ಯಾನ್ಮಹಾಪಾತಕಿನಾಮಪಿ ॥11॥

ಅನೇಕಜನ್ಮಾಚರಿತಮಹಾಪಾತಕಸಂಹತಿಮ್ ।
ನಿರಸ್ಯ ದಿವಿ ಮೋದಂತೇ ತತ್ರ ಸ್ನಾನರತಾ ನರಾಃ ॥12॥

ಯೇ ತತ್ರ ತೀರ್ಥೇ ಯತಯಃ ಕೃತಸ್ನಾನಾ ಯತೇಂದ್ರಿಯಾಃ ।
ಗೋಭೂತಿಲಹಿರಣ್ಯಾದಿ ಮಹಾದಾನಾನಿ ಕುರ್ವತೇ ॥13॥

ತೇ ಪ್ರಾಪ್ನುವಂತಿ ಸಂಪೂರ್ಣಂ ಗಂಗಾದ್ವಾರೇ ಸಮಾಹಿತೈಃ ।
ವಿಹಿತಾನಾಂ ಶತಗುಣಂ ದಾನಾನಾಂ ಫಲಮರ್ಜುನ ॥14॥

ಸುವರ್ಣಮುಖಿಯ ವೈಭವವನ್ನು ತಿಳಿಸುವದಾಗಿ ನುಡಿದು ತೀರ್ಥಗಳನ್ನುವರ್ಣಿಸಲಾರಂಭಿಸಿದರು.

ಅಖಂಡಜ್ಞಾನವನ್ನು ಹೊಂದಿದ ಲೋಕೋಪಕಾರಕಾಲದ ಮಹಾತ್ಮನಾದ ಅಗಸ್ತ್ಯಮುನಿಯಿಂದ ಭೂಲೋಕಕ್ಕೆ ತರಲ್ಪಟ್ಟ ಸುವರ್ಣಮುಖಿಯು ಪರ್ವತದಿಂದ ಕೆಳಗಿಳಿಯುವ ಸ್ಥಳದಲ್ಲಿ ಸ್ನಾನಮಾಡುವದರಿಂದ ಮನುಷ್ಯನು ಕೃತಾರ್ಥನಾಗುವನು. ಇದು ಅಗಸ್ತ್ಯತೀರ್ಥವೆಂದು ಪ್ರಸಿದ್ಧವಾಗಿದ್ದು ಇಲ್ಲಿ ಸ್ನಾನಮಾಡುವವನು ಮಹಾಪಾತಕಿಯಾಗಿದ್ದರೂ ಸಹ ವಿಶುದ್ಧಿಯನ್ನು ಹೊಂದುವನು. ಜಿತೇಂದ್ರಿಯರಾದ ಯತಿಗಳು ಈ ತೀರ್ಥದಲ್ಲಿ ಸ್ನಾನವನ್ನು ಮಾಡಿ ಗೋ-ಭೂಮಿ-ತಿಲ-ಹಿರಣ್ಯಾದಿ ಮಹಾದಾನಗಳನ್ನು ಮಾಡುವರೋ, ಅವರು ಗಂಗಾದ್ವಾರದಲ್ಲಿ ದಾನಮಾಡಿದರ ನೂರರಷ್ಟು ಪುಣ್ಯವನ್ನು ಹೊಂದುವರು. ಇಲ್ಲಿಯೇ ಲೋಕಹಿತಾರ್ಥವಾಗಿ ಅಗಸ್ತ್ಯಮಹರ್ಷಿಗಳಿಂದ ಸ್ಥಾಪಿತವಾದ ಮಾಹೇಶ್ವರನ ಲಿಂಗವು ಅಗಸ್ತ್ಯೇಶ್ವರಲಿಂಗವೆಂದು

ಅತ್ರಾಸ್ತಿ ಭಗವಾನೀಶಃ ಖ್ಯಾತೋಽಗಸ್ತ್ಯೇಶಸಂಜ್ಞಯಾ ।
ಸ್ಥಾಪಿತೋಽಗಸ್ತ್ಯಮುನಿನಾ ಲೋಕಾನಂದವಿಧಾಯಿನಾ ॥15॥

ಸ್ನಾತ್ವಾ ತಸ್ಯಾಂ ಮಹಾನದ್ಯಾಂ ತಲ್ಲಿಂಗಂ ಪೂಜಯಂತಿ ಯೇ ।
ದಶಾನಾಮಶ್ವಮೇಧಾನಾಂ ಫಲಂ ಸಪ್ರಾಪ್ನುವಂತಿ ತೇ ॥16॥

ಧನೂರಾಶಿಂ ಪರಿತ್ಯಜ್ಯ ಯದಾ ಮಕರಮಂಶುಮಾನ್ ।
ವಿಶೇತ್ತದಯನಂ ಪುಣ್ಯಮುತ್ತರಂ ಪರಿಕೀರ್ತಿತಮ್ ॥17॥

ತಸ್ಮಿನ್ ದಿನೇ ಯೇ ನಿಯತಾ ನದ್ಯಾಂ ಸ್ನಾತ್ವಾ ಸಮಾಹಿತಾಮ್ ।
ಪಶ್ಯಂತಿ ಪಾರ್ವತೀನಾಥಮಗಸ್ತ್ಯೇಶಂ ಸುರಾರ್ಚಿತಮ್ ॥18॥

ಅಗ್ನಿಷ್ಟೋಮಸಹಸ್ರಸ್ಯ ವಾಜಪೇಯಶತಸ್ಯ ಚ ।
ಫಲಂ ಸಂಪ್ರಾಪ್ಯ ಮೋದಂತೇ ದಿವಿ ದೇವಗಣಾರ್ಚಿತಾಃ ॥19॥

ಮೃಗಸಂಕ್ರಮವೇಲಾಯಾಂ ಪುರುಷೈರ್ಮಂಗಲಾರ್ಥಿಭಿಃ ।
ಅವಶ್ಯಮೇವ ಕರ್ತವ್ಯಮಗಸ್ತ್ಯೇಶಸ್ಯ ದರ್ಶನಮ್ ॥20॥

ಐಶಾನ್ಯಾಂ ತಸ್ಯ ತೀರ್ಥಸ್ಯ ದೇಶೇ ಕ್ರೋಶಮಿತೇಽರ್ಜುನ ।
ಅಸ್ತಿ ತೀರ್ಥತ್ರಯಂ ಖ್ಯಾತಂ ದೇವರ್ಷಿಪಿತೃನಾಮಭಿಃ ॥21॥

ದೇವರ್ಷಿಪಿತರಸ್ತತ್ರ ಮುನಿನಾ ತೇನ ಪೂಜಿತಾಃ ।

ಪ್ರಸಿದ್ಧವಾಗಿದ್ದು, ನದಿಯಲ್ಲಿ ಸ್ನಾನವನ್ನು ಮಾಡಿ ಲಿಂಗವನ್ನು ಪೂಜಿಸುವವನು ಹತ್ತು ಅಶ್ವಮೇಧ ಯಾಗದ ಫಲವನ್ನು ಹೊಂದುವನು. ಧನುರಾಶಿಯನ್ನು ಬಿಟ್ಟು ಮಕರರಾಶಿಯನ್ನು ಸೂರ್ಯನು ಪ್ರವೇಶಿಸುವ ಸಮಯದಲ್ಲಿ (ಉತ್ತರಾಯಣ ಪರ್ವಕಾಲದಲ್ಲಿ) ಇಂದ್ರಿಯನಿಗ್ರಹವನ್ನು ಹೊಂದಿದ ವ್ಯಕ್ತಿಗಳು ಸುವರ್ಣಮುಖಿಯಲ್ಲಿ ಸ್ನಾನವನ್ನು ಮಾಡಿ ದೇವಪೂಜೆಯನ್ನು ಮಾಡಿ ಅಗಸ್ತ್ಯೇಶ್ವರನನ್ನು ಸಂದರ್ಶಿಸುವ ವ್ಯಕ್ತಿಗಳು ಸಾವಿರ ಅಗ್ನಿಷ್ಟೋಮ ಮತ್ತು ನೂರು ವಾಜಪೇಯ ಯಾಗಾನುಷ್ಠಾನದ ಫಲವನ್ನು ಹೊಂದಿ ದೇವತೆಗಳಿಂದಲೂ ಸಹ ಸ್ತುತ್ಯರಾಗುವರು. ಮಾರ್ಗಶಿರ ಮಾಸದ ಸಂಕ್ರಮಣದ ಸಮಯದಲ್ಲಿ ಮಂಗಲಕಾಮರಾದ ಪುರುಷರು ಅಗಸ್ತ್ಯೇಶನ ದರ್ಶನವನ್ನು ಅವಶ್ಯವಾಗಿ ಪಡೆಯಬೇಕು.

ಈ ಅಗಸ್ತ್ಯತೀರ್ಥದ ಈಶಾನ್ಯದಿಕ್ಕಿನಲ್ಲಿ ಒಂದು ಕ್ರೋಶದೂರದಲ್ಲಿ ದೇವತೀರ್ಥ, ಋಷಿತೀರ್ಥ ಮತ್ತು ಪಿತೃತೀರ್ಥವೆಂದು ಪ್ರಸಿದ್ಧವಾದ ಮೂರುತೀರ್ಥಗಳಿರುವವು. ಹಿಂದೆ ಅಗಸ್ತ್ಯಮುನಿಯೇ ಅವುಗಳಲ್ಲಿ ಕ್ರಮವಾಗಿ ದೇವತೆಗಳು, ಪಿತೃದೇವತೆಗಳು ಮತ್ತು ಮಹರ್ಷಿಗಳನ್ನಾರಾಧಿಸಿದಾಗ

ಪ್ರದದುರ್ಹೃಷ್ಟಮನಸಃ ಸರ್ವಾನ್ಸಮಭಿವಾಂಛಿತಾನ್ ॥22॥

ತದಾ ದೇವರ್ಷಿಪಿತೃಭಿರಿದಂ ತೀರ್ಥತ್ರಯಂ ಕ್ರಮಾತ್ ।
ಅಸ್ಮನ್ನಾಮಭಿರೀಡ್ಯಂ ಸ್ಯಾದಿತ್ಯುಕ್ತಂ ತಸ್ಯ ಸನ್ನಿಧೌ ॥23॥

ತಸ್ಮಿನ್ ತೀರ್ಥತ್ರಯೇ ಯೇ ತು ಸ್ನಾತ್ವಾ ವಿಹಿತತರ್ಪಣಾಃ ।
ಋಣತ್ರಯವಿನಿರ್ಮುಕ್ತಾಸ್ತೇ ಯಾಂತಿ ದಿವಮಕ್ಷಯಾಮ್ ॥24॥

ತತಃ ಪ್ರಾಗುತ್ತರಕ್ಷೋಣ್ಯಾಂ ಯೋಜನದ್ವಯಸೀಮನಿ ।
ಪ್ರಾಪ್ತಾ ಸುವರ್ಣಮುಖರೀಂ ವೇಣಾನಾಮ ಮಹಾನದೀ ॥25॥

ಸಮುದಗ್ರರಯಾಽಽಘಾತನಿಪಾತಿತತಟದ್ರುಮಾ ।
ಕುಲ್ಯಾನಿರ್ಗತವಾಃಪೂರಸಮಾಪ್ಲಾವಿತಕಾನನಾ ॥26॥

ಉತ್ತುಂಗಪಿಲಿನೋತ್ಸಂಗಖೇಲತ್ಕೋಕಕುಲಾಕುಲಾ ।
ಅಂಬುಜಾಮೋದಲೋಲಾಲಿಮಾಲಾಲೀಲಾರವಾನ್ವಿತಾ ॥27॥

ಅತಿಕ್ರಮ್ಯ ಸಮುತ್ತುಂಗಾನನೇಕಾನ್ ಧರಣೀಧರಾನ್ ।
ಪ್ರಭೂತತೋಯರುಚಿರಾ ಸುವರ್ಣಮುಖರೀಂ ಗತಾ ॥28॥

ನದೀದ್ವಯವ್ಯತಿಕರೇ ಕೃತಸ್ನಾನಾ ಯಥಾವಿಧಿ ।
ದಶಾನಾಮಶ್ವಮೇಧಾನಾಮಖಂಡಂ ಪ್ರಾಪ್ನುಯುಃ ಫಲಮ್ ॥29॥

ಸಂಗತಾ ವೇಣಯಾ ಪುಣ್ಯಾ ಸುವರ್ಣಮುಖರೀ ನದೀ ।
ಗಿರಿದುರ್ಗಮಮಾರ್ಗೇಣ ಯಯಾವುತ್ತರವಾಹಿನೀ ॥30॥

ಸಂತುಷ್ಟರಾದ ಅವರು ಅಗಸ್ತ್ಯರ ಸಕಲಾಭೀಷ್ಟಗಳನ್ನು ಪೂರ್ತಿಗೊಳಿಸಿ 'ಇಂದಿನಿಂದ ಈ ಮೂರು ತೀರ್ಥಗಳೂ ಕ್ರಮವಾಗಿ ನಮ್ಮ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದಲಿ' ಎಂಬುದಾಗಿ ನುಡಿದರು. ಈ ಮೂರುತೀರ್ಥಗಳಲ್ಲಿ ವಿಧಿಗನುಸಾರವಾಗಿ ಸ್ನಾವವನ್ನು ಮಾಡಿ ತರ್ಪಣಾದಿಗಳಿಂದ ದೇವ, ಋಷಿ, ಪಿತೃಗಳನ್ನು ಸಂತೋಷಗೊಳಿಸಿದಲ್ಲಿ ಅವನು ದೇವ, ಋಷಿ, ಪಿತೃಋಣಗಳಿಂದ ವಿಮುಕ್ತನಾಗಿ ಸ್ವರ್ಗಲೋಕವನ್ನು ಹೊಂದುವನು.

ಈ ಕ್ಷೇತ್ರದ ಈಶಾನ್ಯದಿಕ್ಕಿನಲ್ಲಿ ಎರಡು ಯೋಜನಗಳ ದೂರದಲ್ಲಿ, ತನ್ನ ಪ್ರವಾಹದಿಂದ ತೀರಸ್ಥ ವೃಕ್ಷಗಳನ್ನು ಕೆಡವುತ್ತಾ ಕಾಲುವೆಗಳಿಂದ ಅರಣ್ಯಪ್ರದೇಶವನ್ನು ಮುಣುಗಿಸುವ, ರಭಸವಾಗಿ ಹರಿಯುವ ವೇಣಾ ಎಂಬ ನದಿಯೊಡನೆ ಸುವರ್ಣಮುಖಿಯೊಡನೆ ಸಂಗಮವಾಗುವದು.

ಮಧ್ಯಗೇನ ಮಹೀಧ್ರಾಣಾಂ ಮಾರ್ಗೇಣ ವಿಷಮೇಣ ಸಾ ।
ಗತ್ವಾ ವಿರೇಜೇ ತಟನೀ ಯೋಜನಾನಾಂ ಚತುಷ್ಟಯಮ್ ॥31॥

ಪೂರ್ವತಸ್ತಸ್ಯ ದೇಶಸ್ಯ ವಿಷಯೇ ಸಾರ್ಧಯೋಜನೇ ।
ಉದಕ್ಕೂಲೇ ಮಹಾನದ್ಯಾಃ ಪ್ರಾಗ್ವಾಹಿನ್ಯಾ ಮನೋಹರೇ ॥32॥

ಅಗಸ್ತ್ಯೇಶ್ವರನಾಮಾಸ್ತೇ ಖ್ಯಾತಂ ಲಿಂಗಂ ಪುರದ್ವಿಷಃ ।
ಸ್ಮರಣಂ ದೇವಮರ್ತ್ಯಾನಾಂ ಸಮಸ್ತಾಘನಿವಾರಣಮ್ ॥33॥

ತತ್ರ ಸ್ನಾತ್ವಾ ಮಹಾನದ್ಯಾಂ ಯೇ ನರಾ ನಿಯತೇಂದ್ರಿಯಾಃ ।
ಪಶ್ಯಂತಿ ಪಾರ್ವತೀನಾಥಮಗಸ್ತ್ಯೇನ ಪ್ರತಿಷ್ಠಿತಮ್ ॥34॥

ಅನೇಕೈಃ ಪೂರ್ವಜನನೈರಾರ್ಜಿತಂ ಪಾಪಸಂಚಯಮ್ ।
ತೇ ನಿರಸ್ಯ ಸುರಾವಾಸೇ ಮೋದಂತೇ ಕಾಲಮಕ್ಷಯಮ್ ॥35॥

ತತಃ ಸೋದಂಗ್ಮುಖೀ ಭೂತ್ವಾ ಸುವರ್ಣಮುಖರೀ ಯಯೌ ।
ಯೋಜನಾರ್ಧಮಿದಂ ದೇಶಂ ತೀರ್ಥಸಂಗಸಮನ್ವಿತಾ ॥36॥

ತಸ್ಮಿನ್ ದೇಶೇ ತು ಹಿಂತಾಲತಾಲಲಾಸಮನೋರಮೇ ।
ಗತಾ ಸುವರ್ಣಮುಖರೀಂ ನದೀ ವ್ಯಾಘ್ರಪದಾಹ್ವಯೇ ॥37॥

ಆ ಸಂಗಮಸ್ಥಲದಲ್ಲಿ ಸ್ನಾನವನ್ನು ಮಾಡುವವನು ಹತ್ತು ಅಶ್ವಮೇಧಗಳನ್ನು ಮಾಡಿದ ಪುಣ್ಯವನ್ನು ಹೊಂದುವನು.

ಅಲ್ಲಿಂದ ಮುಂದೆ ವೇಣಾನದಿಯಿಂದ ಕೂಡಿದ ಸುವರ್ಣಮುಖರಿಯು ಉತ್ತರ ದಿಕ್ಕಿನೆಡೆಗೆ ಅನೇಕ ಪರ್ವತಗಳ ನಡುವೆ ಕಠಿನವಾದ ಮಾರ್ಗದಿಂದ ನಾಲ್ಕುಯೋಜನಗಳಷ್ಟು ದೂರ ಪ್ರವಹಿಸುವದು. ಅಲ್ಲಿಂದ ಪೂರ್ವದಲ್ಲಿ ಒಂದೂವರೆ ಯೋಜನಗಳ ದೂರದಲ್ಲಿ ಪೂರ್ವಕ್ಕೆ ಪ್ರವಹಿಸುವ ನದಿಯ ಉತ್ತರ ತೀರದಲ್ಲಿ ಅಗಸ್ತ್ಯಋಷಿಗಳಿಂದ ಪ್ರತಿಷ್ಠಾಪಿಸಲ್ಪಟ್ಟ ಅಗಸ್ತ್ಯೇಶ್ವರವೆಂಬ ಮಾಹೇಶ್ವರ ಲಿಂಗವೊಂದಿದ್ದು ಸ್ಮರಣಮಾತ್ರದಿಂದ ಸಮಸ್ತ ಪಾಪ ವಿನಾಶಕವಾಗಿರುವದು. ಆ ಲಿಂಗದ ದರ್ಶನ ಮಾತ್ರದಿಂದ ಅನೇಕ ಜನ್ಮಗಳಿಂದ ಆರ್ಜಿತವಾದ ಪಾಪರಾಶಿಯನ್ನು ಕಳೆದುಕೊಂಡು ಸ್ವರ್ಗದಲ್ಲಿ ಸಂತೋಷವನ್ನು ಅನುಭವಿಸುವರು.

ಅಲ್ಲಿಂದ ಮುಂದೆ ಸುವರ್ಣ ಮುಖರಿಯು ಉತ್ತರವಾಹಿನಿಯಾಗಿ ಅರ್ಧ ಯೋಜನೆಗಳಷ್ಟು ದೂರ ಹರಿದು ತಾಲ, ಹಿಂತಾಲ, ಸಾಲವೇ ಮೊದಲಾದ ವೃಕ್ಷಗಳಿಂದ ಮನೋಹರವಾದ

ದುರ್ವಾರಭೂರಿದುರಿತವಿನಿವಾರಣಪೇಶಲಾ ।
ನೀರಂಧ್ರತೀರವಾನೀರವನಮಂಡಲಮಂಡಿತಾ ॥38॥

ಸಿದ್ಧಗಂಧರ್ವಲಲನಾಸಲಿಲಾಗಾಹನಶಾಲಿನೀ ।
ತಪಸ್ವಿಕನ್ಯಾನಿಕ್ಷಿಪ್ತಬಲಿಪುಷ್ಪವಿರಾಜಿತಾ ॥39॥

ಹಂಸಕಾರಂಡವಕ್ರೌಂಚಕುಲಕೋಲಾಹಲಾಕುಲಾ ।
ಪ್ರಾಕ್ಪ್ರವಾಹಾ ಸಮಾಗತ್ಯ ಶೈಲಾಂತರಗತಾಧ್ವನಾ ॥40॥

ಸಂಗಮೇ ಸರಿತೋಸ್ತತ್ರ ಕೃತಸ್ನಾನಾ ನರೋತ್ತಮಾಃ ।
ಸಮಗ್ರಮಶ್ವಮೇಧಾನಾಂ ದರ್ಶನಂ ಪ್ರಾಪ್ನುಯುಃ ಫಲಮ್ ॥41॥

ತತ್ರ ವ್ಯಾಘ್ರಪದಾಖ್ಯಾಯಾಸ್ತಟೇ ಲೋಕಮಲಾಪಹೇ ।
ಅನಘಂ ಸರ್ವಪಾಪಘ್ನಂ ಶಂಖತೀರ್ಥಂ ವಿರಾಜಿತೇ ॥42॥

ಬ್ರಹ್ಮರ್ಷಿನಿಯತಾವಾಸಂ ಸುರಗಂಧರ್ವಸೇವಿತಮ್ ।
ದರ್ಶನಸ್ನಾನಪಾನಾದ್ಯೈರಮಿತಾನಂದದಾಯಕಮ್ ॥43॥

ತತ್ರಾಸ್ತೇ ಭಗವಾನೀಶಃ ಶಂಖೇಶೋ ನಾಮ ಫಾಲ್ಗುನ ।
ಶಂಖನಾಮ್ನಾ ಮುನೀಂದ್ರೇಣ ಲಿಂಗರೂಪಂ ಪ್ರತಿಷ್ಠಿತಮ್ ॥44॥

ಯೇ ತತ್ರ ತೀರ್ಥೇ ಸುಸ್ನಾತಾಃ ಪಶ್ಯಂತಿ ವೃಷವಾಹನಮ್ ।
ದಶಾಶ್ವಮೇಧಜಂ ಪುಣ್ಯಂ ಲಭ್ಧ್ವಾ ಯಾಂತಿ ಸುರಾಲಯಮ್ ॥45॥

ಪ್ರದೇಶದಲ್ಲಿ ವ್ಯಾಘ್ರಪದಾ ಎಂಬ ಹೆಸರಿನ ನದಿಯು ಸುವರ್ಣಮುಖರಿಯನ್ನು ಸೇರುವದು. ಸಕಲಪಾಪ ನಿವಾರಕವಾದ ವ್ಯಾಘ್ರಪದಾ ನದಿಯು ಪೂರ್ವವಾಹಿನಿಯಾಗಿ ಸುವರ್ಣಮುಖಿಯನ್ನು ಸೇರುವದು. ಇವೆರಡು ನದಿಗಳ ಸಂಗಮ ಸ್ಥಳದಲ್ಲಿ ಸ್ನಾನವನ್ನು ಮಾಡಿದ ವ್ಯಕ್ತಿಯು ಹತ್ತು ಅಶ್ವಮೇಧವನ್ನಾಚರಿಸಿದ ಪುಣ್ಯವನ್ನು ಹೊಂದುವನು.

ಆ ವ್ಯಾಘ್ರಪದಾ ನದಿಯ ದಡದಲ್ಲಿಯೆ ಬ್ರಹ್ಮದೇವರಿಗೆ ಪ್ರಿಯಕರವೂ, ದೇವತೆಗಳು–ಗಂಧರ್ವರಿಂದ ಸಂಸೇವಿತವಾದ ಲೋಕಪಾವನವಾದ ಶಂಖತೀರ್ಥವೆಂಬ ತೀರ್ಥವಿರುವದು. ಆ ತೀರ್ಥದ ದರ್ಶನ, ಸ್ನಾನ ಪಾನಾದಿಗಳಿಂದ ಅಪರಿಮಿತಾನಂದವುಂಟಾಗುವದು. ಶಂಖನೆಂಬ ಮಹರ್ಷಿಯಿಂದ ಪ್ರತಿಷ್ಠಾಪಿಸಲ್ಪಟ್ಟ ಶಂಖೇಶ್ವರನೆಂಬ ಲಿಂಗವು ಅಲ್ಲಿಯೇ ಇರುವದಾಗಿದ್ದು ಶಂಖತೀರ್ಥದಲ್ಲಿ ಸ್ನಾನವನ್ನು ಮಾಡಿ ವೃಷಧ್ವಜನಾದ ಶಂಖೇಶ್ವರನ ದರ್ಶನವನ್ನು ಪಡೆಯುವರೋ

ಯುಕ್ತಾ ತಯಾ ವ್ಯಾಘ್ರಪದಾಭಿಧಾನಯಾ
ಗತ್ವಾ ತತೋ ಯೋಜನಸಮ್ಮಿತಾಂ ಭುವಮ್ ।
ಯಯೌ ಮುನೀಂದ್ರೈರ್ವೃಷಭಾಚಲಾಂತಿಕಮ್
ಸಂಸೇವ್ಯಮಾನಾ ಶುಭನಿರ್ಮಲೋದಕಾ ॥46॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ 'ಅಗಸ್ತ್ಯತೀರ್ಥಾದಿ ವಿವಿಧತೀರ್ಥಮಾಹಾತ್ಮ್ಯವರ್ಣನಂ' ನಾಮ ಚತುಸ್ತ್ರಿಂಶೋಽಧ್ಯಾಯಃ ॥34॥

* * *

ಅವರು ಹತ್ತು ಅಶ್ವಮೇಧದ ಫಲವನ್ನು ಹೊಂದಿ ಸ್ವರ್ಗಕ್ಕೆ ತೆರಳುವರು. ಮುಂದೆ ಸುವರ್ಣಮುಖಿಯು ವ್ಯಾಘ್ರಪದಾ ನದಿಯಿಂದ ಯುಕ್ತವಾಗಿ ಒಂದು ಯೋಜನ ಪ್ರವಹಿಸಿ, ವೃಷಭಾದ್ರಿಯ ಬಳಿ ಬರುವದು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ ಅಗಸ್ತ್ಯಾದಿ ವಿವಿಧ ತೀರ್ಥಗಳ ವರ್ಣನವೆಂಬ ಮೂವತ್ನಾಲ್ಕನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

# ಅಥ ಪಂಚತ್ರಿಂಶೋಽಧ್ಯಾಯಃ

[ಸುವರ್ಣಮುಖರೀಮಾಹಾತ್ಮ್ಯೇ ಶ್ರೀ ವಿಷ್ಣುಮಾಹಾತ್ಮ್ಯಪ್ರಸ್ತಾವೇ ಸೃಷ್ಟ್ಯಾದಿವರ್ಣನಮ್]

ಭರದ್ವಾಜ ಉವಾಚ–

ಸುವರ್ಣಮುಖರೀಂ ತತ್ರ ಸಂಗತಾ ಮಂಗಲಪ್ರದಾ ।
ಕಲ್ಯಾ ನಾಮ ನದೀ ಪುಣ್ಯಾ ಕಾಲಿಂದೀ ಜಾಹ್ನವೀಮಿವ ॥1॥

ವೃಷಭಾಚಲಸಂಭೂತಾ ತೀರ್ಥರಾಜವಿರಾಜಿತಾ ।
ನದೀನಾಮುತ್ತಮಾ ಕಲ್ಯಾ ಕಲುಷೌಘವಿನಾಶಿನೀ ॥2॥

ನಾನಾತರುಲತಾವ್ರಾತವಿಭೂಷಿತತಟದ್ವಯಾ ।
ಮುನಿಸಂಘಸುಖಾವಾಸಾ ಪುಣ್ಯಾಶ್ರಮಸಮುತ್ಕಟಾ ॥3॥

ದ್ವಿಜದತ್ತಾರ್ಘ್ಯವಿಲಸತ್ಕುಶಾಕ್ಷತಲಸತ್ತಟಾ ।
ಅಪ್ಸರಃ ಕುಚಕಸ್ತೂರೀ ಪಂಕಕ್ಷಾಲನಪಂಕಿಲಾ ॥4॥

ದಂತಾವಲಕಟಚ್ಯೋತನ್ಮದಾಂಬುಸುರಭೀಕೃತಾ ।
ವಿಪ್ರಭೂಪಾಲವಿತತಮಖಯೂಪಶತಾವೃತಾ ॥5॥

ಅನಾವಿಲಜಲಾಪೂರತೋಷಿತಾಶೇಷಮಾನವಾ ।
ಏಕೈವಾಲಂ ಪರಾ ಕರ್ತುಂ ಮಹಾನದ್ಯೋಽಸ್ತು ಪಾತಕಮ್ ॥6॥

# ಮೂವತ್ತೈದನೆಯ ಅಧ್ಯಾಯ

[ಸೃಷ್ಟ್ಯಾದಿ ವರ್ಣನ]

ಸುವರ್ಣಮುಖರೀ ನದಿಯು ವೃಷಭಾದ್ರಿಯ ಬಳಿ, ಅದೇ ವೃಷಭಾದ್ರಿಯಲ್ಲಿ ಹುಟ್ಟಿ ಉತ್ತಮ ತೀರ್ಥಗಳಿಂದ ವಿರಾಜಿಸುತ್ತಿದ್ದ ಪಾಪಕೋಟಿಗಳನ್ನು ನಾಶಮಾಡುವ ಕುಲ್ಯಾ ಎಂಬ ನದಿಯೊಡನೆ ಸಂಗಮಿಸಿರುವದು. ನಾನಾ ವೃಕ್ಷಸಮೂಹಗಳು, ಮುನಿಗಳ ದಿವ್ಯವಾದ ಆಶ್ರಮಗಳು, ಅಪ್ಸರೆಯರ ಕುಚ ಕುಂಕುಮವನ್ನು ತೊಳೆದುಕೊಂಡಿರುವದರಿಂದುಂಟಾದ ಕುಂಕುಮದ ಕೆಸರಿನಿಂದ ಶೋಭೆಯಿಂದ ಕೂಡಿದ ದಡಗಳನ್ನು ಹೊಂದಿರುವ, ಬಹಳಷ್ಟು ನೀರಿನಿಂದ ಕೂಡಿದ ಈ

ತಯೋಃ ಸಂಗತಯೋಃ ಸ್ತೋತುಂ ಮಹಿಮಾನಂ ಕ ಈಶತೇ ।
ಯತ್ರ ಬ್ರಹ್ಮಶಿಲಾ ನಾಮ ಸರಿನ್ಮಧ್ಯೇ ಚ ವರ್ತತೇ ॥7॥

ಅಗಸ್ತ್ಯ ತಪಸಾ ಪಶ್ಚಾದ್ಗಯಾ ಸಾನ್ನಿಧ್ಯಮೇತಿ ಚ ।
ನದೀದ್ವಯಜಲೇ ತತ್ರ ಸ್ನಾತಾಃ ಪುಣ್ಯೇ ಕುರೂದ್ವಹ ॥8॥

ಮಖಾನಾಂ ಪೌಂಡರೀಕಾಣಾಂ ಶತಸ್ಯ ಫಲಮಾಪ್ನುಯುಃ ।
ಬ್ರಹ್ಮಹತ್ಯಾದಿಪಾಪಾನಿ ಸಮಾಯಾಂತಿ ಪರಿಕ್ಷಯಮ್ ॥9॥

ತತ್ರಾಭಿಷೇಕಪೂತಾನಾಂ ನದೀದ್ವಿತಯಸಂಗಮೇ ।
ಸಂಗತಾ ಭವನಾಶಿನ್ಯಾಃ ಕೃಷ್ಣವೇಣೀವ ಪಾವನೀ ॥10॥

ರಾಜತೇ ಸ್ವರ್ಣಮುಖರೀ ಕಲ್ಯಯಾ ಸಂಗತಾ ತದಾ ।
ಅಥೋದೀಚ್ಯಾಂ ಮಹಾನದ್ಯಾ ಯೋಜನಾರ್ಧೇ ವಿರಾಜತೇ ॥11॥

ಯೋಜನೋತ್ಸೇಧಸಹಿತೋ ವಿಖ್ಯಾತೋ ವೇಂಕಟಾಚಲಃ ।
ಸರ್ವೇಷಾಮೇವ ತೀರ್ಥಾನಾಮಾಶ್ರಯೋಽಯಂ ನಗೋತ್ತಮಃ ॥12॥

ಅಂಜನಾನಂತವೃಷಭನೀಲಕೇಸರಿಪೋತ್ರಿಣಃ ।
ಏತಾನ್ಯುಪಾವನಾನ್ಯದ್ರೇಃ ಸ್ಯುರ್ನಾರಾಯಣವೇಂಕಟೌ ॥13॥

ವರಾಹವಪುಷಾ ಪೂರ್ವಂ ಸ್ವೀಕೃತತ್ವಾನ್ಮಧುದ್ವಿಷಾ ।

ಸಂಗಮಸ್ಥಾನವನ್ನು ವರ್ಣಿಸುವವರಾರು? ಈ ನದಿಗಳ ಮಧ್ಯದಲ್ಲಿಯೇ ಬ್ರಹ್ಮ ಶಿಲೆಯೆಂಬ ಶಿಲೆಯಿದ್ದು ಅಗಸ್ತ್ಯರ ತಪಃ ಪ್ರಭಾವದಿಂದ ಅದು ಗಯೆಯ ಸಾನ್ನಿಧ್ಯವನ್ನು ಹೊಂದಿರುವದು. ಸಂಗಮಸ್ಥಳದಲ್ಲಿ ಸ್ನಾನವನ್ನು ಮಾಡುವ ವ್ಯಕ್ತಿಯು ನೂರು ಪೌಂಡರೀಕ ಯಜ್ಞಗಳನ್ನು ಮಾಡಿದ ಫಲವನ್ನು ಹೊಂದುವನು. ನದೀಸಂಗಮ ಪ್ರದೇಶದಲ್ಲಿ ಸ್ನಾನಮಾಡುವ ಪುರುಷರು ಬ್ರಹ್ಮಹತ್ಯೆಯೇ ಮೊದಲಾದ ಮಹಾಪಾತಕಗಳನ್ನು ಸಹ ಕಳೆದುಕೊಳ್ಳುವರು.

ಆ ಮಹಾನದಿಗೆ ಉತ್ತರ ದಿಕ್ಕಿನಲ್ಲಿ ಅರ್ಧಯೋಜನದೂರದಲ್ಲಿ ಇರುವ ಒಂದು ಯೋಜನ ಎತ್ತರವಾದ ವೇಂಕಟಾಚಲವೆಂಬ ಪರ್ವತವು ಶೋಭಿಸುತ್ತಿರುವದು. ಎಲ್ಲ ತೀರ್ಥಗಳಿಗೆ ಆಧಾರವೆನಿಸಿರುವದು. ಈ ಪರ್ವತದಲ್ಲಿ ಅಂಜನ, ಅನಂತ, ವೃಷಭ, ನೀಲ. ಕೇಸರಿ, ವರಾಹ, ನಾರಾಯಣ, ವೇಂಕಟವೇ ಮೊದಲಾದ ಉಪವನಗಳಿರುವವು. ಧರಣ್ಯುದ್ಧಾರಕನಾದ ವರಾಹನು ಈ ಪರ್ವತದ ಮೇಲೆ ನೆಲೆಸಿದ್ದರಿಂದ ಈ ಕ್ಷೇತ್ರವು ವರಾಹ ಕ್ಷೇತ್ರವೆಂದೂ ಪ್ರಾಜ್ಞರಲ್ಲಿ

ವರಾಹಕ್ಷೇತ್ರಮಿತ್ಯಾರ್ಯೈಃ ಕೀರ್ತಿತೋಽಯಂ ಮಹೀಧರಃ ॥14॥

ಸುವರ್ಣಾಮುಖರೀತೀರೇ ವಿಖ್ಯಾತೇ ವೇಂಕಟಾಚಲೇ ।
ನಿವಸತ್ಯಚ್ಯುತೋ ನಿತ್ಯಮಬ್ಧೀಂದ್ರತನಯಾನ್ವಿತಃ ॥15॥

ತಸ್ಮಿನ್ಗತಾ ಶ್ರೀಯಾ ಸಾರ್ಧಂ ವಸಂತಂ ವೇಂಕಟಾಧಿಪಮ್ ।
ಸೇವಂತೇ ಸಿದ್ಧಗಂಧರ್ವಮುನಿಮಾನವದಾನವಾಃ ॥16॥

ತಸ್ಮಿನ್ನಿನ್ಯಸ್ತಚಿತ್ತಾನಾಂ ಭಕ್ತಾನಾಂ ಪುರುಷೋತ್ತಮೇ ।
ವಾಂಛಿತಾನ್ಯಾಶು ಸಿದ್ಧ್ಯಂತಿ ನಶ್ಯಂತಿ ವಿಪದೋಽರ್ಜುನ ॥17॥

ಯೇ ಸ್ಮರಂತಿ ಜಗನ್ನಾಥಂ ವೇಂಕಟೇಶನಿವಾಸಿನಮ್ ।
ನಿರಸ್ತದೋಷಾಸ್ತೇ ಯಾಂತಿ ಶಾಶ್ವತಂ ಪದಮವ್ಯಯಮ್ ॥18॥

ಅರ್ಜುನ ಉವಾಚ–

'ವೇಂಕಟಾದ್ರೌ ಮಹಾಪುಣ್ಯೇ ಸುರಾಸುರನಮಸ್ಕೃತಃ ।
ಕಥಂ ಪ್ರಾದುರಭೂದ್ದೇವೋ ಭಗವಾನ್ಕಮಲಾಪತಿಃ ॥19॥

ಕಸ್ಯ ವಾ ಕೃತಿನಸ್ತತ್ರ ಪ್ರಸನ್ನೋ ನಿಜಮದ್ಭುತಮ್ ।
ರೂಪಂ ಪ್ರಕಾಶಯಾಂಚಕ್ರೇ ಭಕ್ತಿಮುಕ್ತಿಫಲಪ್ರದಮ್ ॥20॥

ವಿಷ್ಣೋರ್ದೇವಾಧಿದೇವಸ್ಯ ಮಹಿಮಾನಂ ಮಹಾಮುನೇ ।
ಶ್ರೋತುಮಿಚ್ಛಾಮಿ ತತ್ತ್ವೇನ ತನ್ಮೇ ಕಥಯ ವಿಸ್ತರಾತ್ ॥21॥

ಭರದ್ವಾಜ ಉವಾಚ–

ಪ್ರಸಿದ್ಧಿಯಿರುವದು. ಇದೇ ವೇಂಕಟಾಚಲದಲ್ಲಿಯೇ ಸಿದ್ಧ, ಗಂಧರ್ವರಿಂದ, ಮಹಾಲಕ್ಷ್ಮೀಯಿಂದ ಸಮೇತನಾದ ನಾರಾಯಣನು ಯಾವಾಗಲೂ ವಾಸವಾಗಿರುವನು. ಪುರುಷೋತ್ತಮನಲ್ಲಿ ಮನಸ್ಸಿಟ್ಟ ವ್ಯಕ್ತಿಗಳಿಗೆ ಸಕಲಾಭೀಷ್ಟಗಳನ್ನು ತಂದುಕೊಡುವದು. ವೇಂಕಟಾಚಲನಿವಾಸಿಯಾದ ಸ್ವಾಮಿಯನ್ನಾರು ಸ್ಮರಿಸುವರೋ ಅವರು ಸಮಸ್ತ ದೋಷವಿಮುಕ್ತರಾಗಿ ಶಾಶ್ವತವಾದ ಲೋಕವನ್ನು ಹೊಂದುವರು.

ಇದನ್ನು ಕೇಳಿದ ಅರ್ಜುನನು 'ದೇವಾಧಿದೇವನಾದ ವೇಂಕಟೇಶ್ವರನು ಆ ಪುಣ್ಯಕ್ಷೇತ್ರದಲ್ಲಿ ಹೇಗೆ ಅವತಾರವನ್ನು ಮಾಡಿರುವನು? ಯಾರಿಗೆ ಅನುಗ್ರಹವನ್ನು ಮಾಡಲು ಅಲ್ಲಿ ಬಂದು ವಾಸವಾಗಿರುವನು? ಎಂಬುದನ್ನು ತಿಳಿಯಲಿಚ್ಛಿಸುವೆ. ದಯವಿಟ್ಟು ತಿಳಿಸಿರಿ' ಎಂದು

ಶೃಣು ವೇಂಕಟನಾಥಸ್ಯ ಮಹಿಮಾನಂ ಸಮಾಹಿತಃ ।
ವಿಸ್ತರೇಣ ಸಮಾಖ್ಯಾತುಂ ಬ್ರಹ್ಮಣಾಽಪಿ ನ ಶಕ್ಯತೇ ॥22॥

ಧನ್ಯೋಽಸಿ ದೇವದೇವಸ್ಯ ಮಾಹಾತ್ಮ್ಯಂ ಮಧುವಿದ್ವಿಷಃ ।
ಯದ್ಭಕ್ತಿಯುಕ್ತಾಽಭೂತ್ತಾತ ಶ್ರೋತುಂ ಮತಿರರಿಂದಮ ॥23॥

ಕೃತಪುಣ್ಯೋಽಸ್ಮ್ಯಹಂ ಪಾರ್ಥ ಸರ್ವಭೂತಪತೇರ್ಹರೇಃ ।
ಪವಿತ್ರಾಣಿ ಚರಿತ್ರಾಣಿ ಸ್ತೋಷ್ಯಂತೇ ಯನ್ಮಯಾಧುನಾ ॥24॥

ಪುರಾ ಭಾಗೀರಥೀತೀರೇ ಜನಕಾಯ ಮಹಾತ್ಮನೇ ।
ಕ್ರತುದೀಕ್ಷಾಪ್ರಸಕ್ತಾಯ ವಿಶುದ್ಧಜ್ಞಾನಶಾಲಿನೇ ॥25॥

ವಾಮದೇವೇನ ಕಥಿತಾಂ ಕಥಾಂ ಪಾಪಪ್ರಣಾಶಿನೀಮ್ ।
ಕಥಯಿಷ್ಯಾಮಿ ತೇ ಪಾರ್ಥ ವಿಷ್ಣುಕೀರ್ತನಪಾವನೀಮ್ ॥26॥

ಸರ್ವೇಷಾಮೇವ ಭೂತಾನಾಮಾದ್ಯೋ ನಾರಾಯಣಃ ಪ್ರಭುಃ ।
ಜಗನ್ಮಯೋ ಜಗತ್ಕರ್ತಾ ಚಿತ್ಸ್ವರೂಪೀ ನಿರಂಜನಃ ॥27॥

ಸಹಸ್ರಶೀರ್ಷಾ ಭಗವಾನ್ಸಹಸ್ರಾಕ್ಷಃ ಸಹಸ್ರಪಾತ್ ।
ಯಸ್ಯ ಭಾಸಾ ಜಗದಿದಂ ವಿಭಾತಿ ಸಚರಾಚರಮ್ ॥28॥

ತಸ್ಮಾತ್ಪರತರಂ ತೇಜಸ್ತಸ್ಮಾತ್ಪರತರಂ ತಪಃ ।

ಸಂಪ್ರಾರ್ಥಿಸಿದಾಗ ಭರದ್ವಾಜರು ವೇಂಕಟಾಚಲದ ಮಾಹಾತ್ಮ್ಯವನ್ನು ಆಮೂಲಾಗ್ರ್ಯವಾಗಿ ವರ್ಣಿಸುವೆನೆಂದು ನುಡಿದು ಸಕಲ ಪ್ರಾಣಿಗಳ ಸ್ವಾಮಿಯಾದ ಶ್ರೀಹರಿಯ ಪುಣ್ಯಚರಿತ್ರೆಯನ್ನು ಅನುವಾದ ಮಾಡುವ ಸದವಕಾಶವು ಇಂದು ಲಭಿಸಿರುವದರಿಂದ ನಾನು ಕೃತಾರ್ಥನಾದೆನು' ಎಂದು ನುಡಿಯುತ್ತಾ ವೇಂಕಟಾಚಲದ ಮಹತ್ವವನ್ನು ತಿಳಿಸುವರು. ಹಿಂದೆ ಗಂಗಾತೀರದಲ್ಲಿ ಯಜ್ಞವೊಂದನ್ನು ಮಾಡಲುದ್ಯುಕ್ತನಾದ ಜನಕ ಮಹಾರಾಜನಿಗೆ ವಾಮದೇವನು ಉಪದೇಶಿಸಿರುವದನ್ನೇ ನಾನು ನಿನಗೆ ಹೇಳುವೆನು. ಕೇಳು ಎಂದು ನುಡಿದು ಇತಿಹಾಸವನ್ನು ಪ್ರಚುರಪಡಿಸುವರು.

ಸಕಲ ಜೀವರಾಶಿಗಳಿಗೆ ನಾರಾಯಣನೇ ಪ್ರಭುವಾಗಿದ್ದು ಲೋಕವಿಧಾರಕನೂ, ಜಗತ್ತಿನ ಕರ್ತಾರನೂ, ಜ್ಞಾನಾನಂದ ಸ್ವರೂಪನೂ, ನಿರ್ದುಷ್ಟನೂ ಆಗಿರುವನು. ಆ ಪರಮಾತ್ಮನು ಅನಂತವಾದ ಬಾಹು, ಪಾದ, ಮುಖ, ಶಿರಗಳಿಂದ ಯುಕ್ತನಾಗಿ ಸ್ಥಾವರ ಜಂಗಮಾತ್ಮಕವಾದ ಜಗತ್ತನ್ನು ಅಂತರ್ಯಾಮಿಯಾಗಿ ವ್ಯಾಪಿಸಿರುವನು. ಜಗನ್ನಿಯಾಮಕನಾದ ಭಗವಂತನು ಜಗತ್ತನ್ನು

ತಸ್ಮಾತ್ಪರತರಂ ಜ್ಞಾನಂ ಯೋಗಸ್ತಸ್ಮಾತ್ಪರೋ ನ ಚ ॥29॥

ವಿದ್ಯಾ ತಸ್ಮಾದಪಿ ಪರಾ ನಾಸ್ತಿ ಪಾರ್ಥ ನರರ್ಷಭ ।
ಸರ್ವೇಷ್ವಪಿ ಚ ಭೂತೇಷು ಸದಾ ಸನ್ನಿಹಿತಃ ಪ್ರಭುಃ ॥30॥

ಸರ್ವಾಣ್ಯಪಿ ಚ ಭೂತಾನಿ ತಸ್ಮಿನ್ನವಾಸತೇ ಸುಖಮ್ ।
ಸ ಏವ ಯಜ್ಞೋ ಯಷ್ಟಾ ಚ ಸಾಧನಂ ಸ್ರುಕ್ಸ್ರುವಾದಿಕಮ್ ॥31॥

ಫಲಂ ಫಲಪ್ರದಾತಾ ಚ ತತ್ಸಂಪ್ರಾಪ್ಯಾ ಗತಿಸ್ತಥಾ ।
ವಹ್ನೌ ಪ್ರಣೀತೇ ಪಶುನಾ ಪ್ರೋಕ್ಷಿತೇನ ಪ್ರಜುಹ್ವತಿ ॥32॥

ಯೇ ತಂ ಪ್ರಯಾಂತಿ ತೇ ಯಾಂತಿ ಗತಿಂ ತತ್ಪ್ರತಿಪಾದಿತಾಮ್ ।
ಕರ್ಮಬಂಧಂ ಪಶುಂ ಕತ್ವಾ ಜ್ಞಾನಾಗ್ನೌ ಸಂಪ್ರಕೀರ್ತಿತೇ ॥33॥

ಯೇ ಜುಹ್ವತೇ ತಮುದ್ದಿಶ್ಯ ತೇ ತತ್ಸಾಯುಜ್ಯಭಾಗಿನಃ ।
ಹರಿಃ ಸದಾಶಿವೇ ಬ್ರಹ್ಮಾ ಮಹೇಂದ್ರಃ ಪರಮಃ ಸ್ವರಾಟ್ ॥34॥

ಸರ್ವೇಶ್ವರಸ್ಯ ತಸ್ಯೈತೇ ಪರ್ಯಾಯಾಃ ಪರಿಕೀರ್ತಿತಾಃ ।
ಸಮಾಹಿತೋಽನುಸಂಧತ್ತೇ ಯ ಇದಂ ಪರಮಾತ್ಮನಃ ॥35॥

ನಾರಾಯಣಸ್ಯ ಮಾಹಾತ್ಮ್ಯಂ ಸ ನ ಯಾತಿ ಪುನರ್ಭವಮ್ ।
ಚಿದಾನಂದಮಯಃ ಸಾಕ್ಷೀ ನಿರ್ಗುಣೋ ನಿರುಪಾಧಿಕಃ ॥36॥

ನಿತ್ಯೋಽಪಿ ಭಜತೇ ತಾಂ ತಾಮವಸ್ಥಾಂ ಸ ಯದೃಚ್ಛಯಾ ।

ಪ್ರವೇಶಿಸಿ, ತತ್ತಚ್ಛಕ್ತಿಪ್ರದನಾಗಿ, ಸರ್ವತ್ರ ವ್ಯಾಪ್ತನಾಗಿರುವನೆಂಬುದೇ ಸರ್ವಶಾಸ್ತ್ರಗಳ ಸಾರವಾಗಿರುವದು. ಅವನಲ್ಲಿ ಎಲ್ಲ ಜೀವರಾಶಿಗಳೂ ಸುಖದಿಂದಿರುವವು. ಯಜ್ಞಪ್ರತಿಪಾದ್ಯನೂ, ಯಜ್ಞಗಳಿಗೆ ಬೇಕಾದ ಶಕ್ತಿಯನ್ನು ಕೊಟ್ಟು ಯಜ್ಞವನ್ನು ಮಾಡಿಸುವವನು, ಸ್ರಕ್ ಸ್ರುವಾದಿ ಯಜ್ಞಸಾಧನನೂ, ಕೊನೆಗೆ ಯಜ್ಞಫಲವನ್ನು ಜೀವಿಗೆ ತಂದುಕೊಡುವವನೂ ಅವನೇ ಆಗಿರುವನು. ಕರ್ಮಬಂಧವೆಂಬ ಪಶುವನ್ನು ಜ್ಞಾನಾಗ್ನಿಯಲ್ಲಿ ಯಾರು ಹೋಮಿಸುವರೋ ಅವರು ಭಗವಂತನ ಸಾಯುಜ್ಯವನ್ನು ಹೊಂದುತ್ತಾರೆ. ಜಗತ್ಸ್ವಾಮಿಯಾದ ಹರಿಯೇ ಬ್ರಹ್ಮರುದ್ರಾದಿದೇವತೆಗಳಲ್ಲಿ ಅಂತರ್ಯಾಮಿಯಾಗಿ ತತ್ತಚ್ಛಬ್ದವಾಚ್ಯನಾಗಿ ಇರುವನು. ಯಾರು ಇಂತಹ ನಾರಾಯಣನ ಮಹಾತ್ಮೆಯನ್ನು ತಿಳಿಯುವರೋ ಅವರು ಪುನಃ ಹುಟ್ಟದೇ ಮೋಕ್ಷವನ್ನೇ ಹೊಂದುವರು. ನಾರಾಯಣನು ಜ್ಞಾನಾನಂದಸ್ವರೂಪನಾಗಿದ್ದು, ಎಲ್ಲವನ್ನು ಸಹ ಸಾಕ್ಷಾತ್ತಾಗಿ ನೋಡುವದರಿಂದ ಸಾಕ್ಷಿಯೆನಿಸಿರುವನು. ಪ್ರಾಕೃತಗುಣಶೂನ್ಯನು; ಸ್ವಾಭಾವಿಕವಾದ ಜ್ಞಾನಬಲಕ್ರಿಯಾದಿಶಕ್ತಿಮಂತನು.

ಪವಿತ್ರಾಣಾಂ ಪವಿತ್ರಂ ಯೋ ಹ್ಯಗತೀನಾಂ ಪರಾ ಗತಿಃ ॥37॥

ದೈವತಂ ದೇವತಾನಾಂ ಚ ಶ್ರೇಯಸಾಂ ಶ್ರೇಯ ಉತ್ತಮಮ್ ।
ಬೋಧ್ಯಾನಾಂ ಬೋಧ್ಯ ಏಕೋಽಸೌ ಧ್ಯೇಯಾನಾಂ ಧ್ಯೇಯ ಉತ್ತಮಃ ॥38॥

ವಿನಯಾನಾಂ ಸಮಧಿಕೋ ವಿನಯೋ ನಯಸಂಯುತ ।
ತೇಜಸಾಂ ಜನಕಂ ತೇಜಃ ಪ್ರಕೃಷ್ಟಂ ತಪಸಾಂ ತಪಃ ॥39॥

ಆಧಾರಃ ಸರ್ವಭೂತಾನಾಮನಾದ್ಯಂತೇ ಜನಾರ್ದನಃ ।
ತಸ್ಯೇದಂ ಭಾವವಿಜ್ಞಾನೇ ಮೂಢಾ ಬ್ರಹ್ಮಾದಯೋಽಪಿ ಚ ॥40॥

ಸೋಽಪಿ ಗೃಹ್ಣಾತಿ ಜನನಂ ಸರ್ವಾತ್ಮಾ ಹಂತಿ ವಿದ್ವಿಷಃ ।
ಸ್ವತಂತ್ರೋಽಪಿ ಸ್ವಭಕ್ತಾನಂ ಪರತಂತ್ರ್ಯಃ ಪ್ರವರ್ತತೇ ॥41॥

ಸ ಸಾಕ್ಷೀ ಕರ್ಮಣಾಂ ದೇವಃ ಸರ್ವಜ್ಞೋ ಗರಡಧ್ವಜಃ ।
ತಸ್ಯ ಸ್ವರೂಪಂ ಮುನಯೋ ಮೃಗಯಂತೇ ಸಮಾಹಿತಾಃ ॥42॥

ಸಂಕರ್ಷಣೋ ವಾಸುದೇವಃ ಪ್ರದ್ಯುಮ್ನಶ್ಚ ತಥಾ ಪುನಃ ।
ಅನಿರುದ್ಧ ಇತಿ ಖ್ಯಾತಂ ತನ್ಮೂರ್ತೀನಾಂ ಚತುಷ್ಟಯಮ್ ॥43॥

ಕೀರ್ತಿತಃ ಪ್ರಣವಃ ಪಶ್ಚಾದ್ಧೃದಯಂ ತಸ್ಯ ಭಾಸ್ವರಮ್ ।

ನಿತ್ಯನಾಗಿದ್ದರೂ ಸಹ ಭಗವಂತನು ತನಗೆ ಬೇಕಾದ ಅವಸ್ಥೆಯನ್ನು ಸ್ವೀಕರಿಸಿದವನಂತೆ ಕಾಣಿಸಿಕೊಳ್ಳುವನು. ಪವಿತ್ರರಲ್ಲಿ ಪವಿತ್ರನೂ, ಗತಿಯಿಲ್ಲದವರಿಗೆ ಪರಮ ಗತಿಯೂ, ದೇವತೆಗಳಲ್ಲಿ ಉತ್ತಮ ದೇವತೆಯೂ, ಶ್ರೇಯಸ್ಸುಗಳಲ್ಲಿ ಪರಮ ಶ್ರೇಯಸ್ಕರನೂ ಸಹ ಅವನೇ ಆಗಿರುವನು. ತಿಳಿಯಲು ಯೋಗ್ಯವಾದ ಪದಾರ್ಥಗಳಲ್ಲಿ ಇವನೇ ಬೋಧ್ಯನಾಗಿರುವನು. ಧ್ಯಾನಾರ್ಹರಲ್ಲಿ ಇವನೇ ಉತ್ತಮ ಧ್ಯೇಯನಾಗಿರುವನು. ವಿನಯವಂತರಲ್ಲಿ ಶಾಸ್ತ್ರಗಳಲ್ಲಿ ಇವನೇ ನಯಸಹಿತವಾದ ವಿನಯಿಯೆನಿಸುವನು. ತೇಜಃಪದಾರ್ಥಗಳಲ್ಲಿ ಅತ್ಯಂತ ತೇಜಸ್ವಿಯೂ, ದಾಹಕ ಪದಾರ್ಥಗಳಲ್ಲಿ ಪರಮ ದಾಹಕನೂ ನಾರಾಯಣನೇ ಆಗಿರುವನು. ಸರ್ವಜನರಿಗೆ ಆಧಾರನೂ ಜೀವರಾಶಿಗಳಿಗೆ ಆದ್ಯಂತನೂ ಅವನೇ ಆಗಿರುವನು. ಸ್ವತಂತ್ರನಾಗಿದ್ದರೂ ಸಹ ಭಗವಂತನು ಪರತಂತ್ರನಂತೆ ಭಕ್ತರ ವಶವಾಗಿರುವನು. ಎಲ್ಲ ಕರ್ಮಗಳಿಗೂ ಅವನೇ ಸಾಕ್ಷಿಯಾಗಿದ್ದು ಸರ್ವಜ್ಞನಾಗಿರುವನು. ಇಂತಹ ಭಗವಂತನಾದ ಗರುಡಧ್ವಜನ ಸ್ವರೂಪವನ್ನು ಮುನಿಗಳು ಶಾಸ್ತ್ರಗಳಲ್ಲಿ ಅರಸುತ್ತಾರೆ. ವಾಸುದೇವ, ಪ್ರದ್ಯುಮ್ನ, ಸಂಕರ್ಷಣ, ಅನಿರುದ್ಧ ಎಂಬ ನಾಲ್ಕು ರೂಪಗಳು ಇರುವವು. ಓಂಕಾರವೇ ಅವನ ತೇಜೋಮಯ ಹೃದಯವೆಂದು ಶಾಸ್ತ್ರಗಳಲ್ಲಿ ಪರಿಕೀರ್ತಿತವಾಗಿರುವದು.

ಭಗವಾನ್ವಾಸುದೇವಶ್ಚ ಮಂತ್ರೋऽಯಂ ತತ್ಪ್ರಕಾಶಕಃ ॥44॥

ಮಂತ್ರರಾಜಮಿವಂ ನಿತ್ಯಂ ಪ್ರಜಪೇದ್ಯಃ ಸಮಾಹಿತಃ ।
ಸ ವಿಷ್ಣೋಃ ಕರುಣಾಯೋಗಾತ್ಸಿದ್ಧೀನಾಂ ಭಾಜನಂ ಭವೇತ್ ॥45॥

ಆಪನ್ನಿವಾರಕಃ ಸಂಪತ್ಪ್ರಾಪಕೋ ಭುಕ್ತಿಮುಕ್ತಿದಃ ।
ಯಥಾ ಸಸರ್ಜ ಭೂತಾನಿ ಕಲ್ಪಾದಾವೇಷ ಮಾಧವಃ ॥46॥
ತತ್ಸರ್ವಂ ಕಥಯಿಷ್ಯಾಮಿ ಸಮಾಹಿತಮನಾಃ ಶೃಣು ॥47॥

ತಸ್ಯ ಚಿಂತಯತಃ ಸರ್ಗಂ ತೇಜೋರೂಪಂ ಪರಂ ಹರೇಃ ।
ವಿರಿಂಚ ಇತಿ ವಿಖ್ಯಾತಂ ರಾಜಸಂ ಗುಣಮಾಶ್ರಿತಮ್ ॥48॥

ತಸ್ಯ ದೇವಸ್ಯ ವದನಾಚ್ಛಕ್ರೋ ದೇವಃ ಸಪಾವಕಃ ।
ಜಜ್ಞೇ ಯಶ್ಚ ತ್ರಿಲೋಕೇಶಃ ಪಾಕಕರ್ಮಣಿ ಯಃ ಪ್ರಭುಃ ॥49॥

ಮನಸಶ್ಚಾಭವಚ್ಚಂದ್ರಃ ಕರುಣಾನಿತ್ಯಶೀತಲಾತ್ ।
ಅಪಾಂ ಸರ್ವೌಷಧೀನಾಂ ಚ ವಿಪ್ರಾಣಾಂ ರಕ್ಷಕಃ ಸದಾ ॥50॥

ನೇತ್ರಾಭ್ಯಾಮುದಭೂತ್ಸೂರ್ಯಸ್ತಸ್ಯ ವಿಶ್ವಪ್ರಕಾಶಕಃ ।
ಶೀತೋಷ್ಣವರ್ಷಕೃತ್ಕಾಲಕಾರಣಂ ತೇಜಸಾಂ ನಿಧಿಃ ॥51॥

ವಾಸುದೇವ ದ್ವಾದಶಾಕ್ಷರ ಮಂತ್ರವು ಭಗವಂತನನ್ನು ಪ್ರಕಾಶಿಸುವ ಮಂತ್ರವಾಗಿರುವದು. ಯಾರು ಈ ಮಂತ್ರವನ್ನು ಸಮಾಹಿತ ಮನಸ್ಕರಾಗಿ ಜಪಿಸುವರೋ ಅವರು ಭಗವಂತನಾದ ವಿಷ್ಣುವಿನ ಅನುಗ್ರಹಕ್ಕೆ ಪಾತ್ರರಾಗಿ ಸಕಲ ಸಿದ್ಧಿಗಳನ್ನು ಹೊಂದುವರು. ಆ ಮಂತ್ರವು ಆಪತ್ಪರಿಹಾರಕವಾಗಿದ್ದು ಸರ್ವಸಂಪತ್ಪ್ರದಾಯಕವಾಗಿರುವದು. ಭುಕ್ತಿ ಮುಕ್ತಿ ಪ್ರದಾಯಕವಾಗಿರುವದು.

ಹೇಗೆ ಭಗವಂತನು ಕಲ್ಪದ ಆದಿಭಾಗದಲ್ಲಿ ಜೀವರಾಶಿಗಳನ್ನು ಸೃಷ್ಟಿಮಾಡುವನೋ ಅದೆಲ್ಲವನ್ನೂ ನಾನು ನಿನಗೆ ಹೇಳುವೆನು ಕೇಳು. ಸೃಷ್ಟಿಯನ್ನು ಮಾಡಬೇಕೆಂದು ವಿಚಾರಮಾಡುತ್ತಿದ್ದ ಭಗವಂತನಿಂದ ತೇಜಸ್ಸೊಂದು ಹೊರಬಂದಿತು. ಅದೇ ಚತುರ್ಮುಖ ಬ್ರಹ್ಮದೇವರು ವಿರಿಂಚರೆಂದು ಪ್ರಸಿದ್ಧವಾದರು. ಭಗವಂತನ ಮುಖದಿಂದ ಇಂದ್ರದೇವರು, ಅಗ್ನಿದೇವರು ಜನಿಸಿದರು. ಕರುಣೆಯಿಂದ ಯಾವಾಗಲೂ ಆರ್ದ್ರವಾದ ಭಗವಂತನ ಮನಸ್ಸಿಂದ ನೀರು, ಔಷಧಿ, ಸಸ್ಯಗಳು, ಬ್ರಾಹ್ಮಣರ ರಕ್ಷಕನಾದ ಚಂದ್ರನು ಉದಯಿಸಿದನು. ಶೀತೋಷ್ಣಾದಿ ಕಾಲಕಾರಣನಾದ ತೇಜಸ್ಸಿನ ನಿಧಿಯಾದ ಸೂರ್ಯನು ವರಾಹನ ಕಣ್ಣುಗಳಿಂದ ಜನಿಸಿದನು. ಅವನ ನಾಭಿಯಿಂದ ಅಂತರಿಕ್ಷವೂ, ಶಿರಸ್ಸಿನಿಂದ ಭೂತೋತ್ಪತ್ತಿಗೆ ಕಾರಣವಾದ ಭೂತಾಕಾಶವು

ಪ್ರಾಣೇಭ್ಯೋऽಸ್ಯ ಜಗತ್ಪ್ರಾಣಃ ಸಮೀರಃ ಸಮಜಾಯತೇ ।
ಧರ್ತಾ ಗ್ರಹರ್ಕ್ಷಸ್ವರ್ಗಂಗಾ ವಿಮಾನಾನಾಂ ಮಹಾಬಲಃ ॥52॥

ನಾಭಿದೇಶಾತ್ಸಮುತ್ಪನ್ನಮಂತರಿಕ್ಷಂ ಮಹಾತ್ಮನಃ ।
ತಸ್ಯಾಸೀಚ್ಛಿರಸೋ ವ್ಯೋಮ ಭೂತಸಂಭವಕಾರಣಮ್ ॥53॥

ಪಾದಾಂಬುಜಾಭ್ಯಾಮುದಭೂದ್ಭೂಮಿರ್ಭೂತಗಣಾಶ್ರಯಾ ।
ವಿನಿಸ್ಸೃತಾ ದಿಶಃ ಸರ್ವಾಃ ಶ್ರೋತ್ರಾಭ್ಯಾಂ ಪರಮಾತ್ಮನಃ ॥54॥

ಭೂರ್ಭುವಾದ್ಯಾಸ್ತಥಾ ಲೋಕಾಃ ಸ್ಮರಣಾತ್ತಸ್ಯ ಜಜ್ಞಿರೇ ।
ರಸಾತಲಾದಿಲೋಕಾಶ್ಚ ಯಕ್ಷರಕ್ಷೋಗಣಾದಯಃ ॥55॥

ಮುಖಬಾಹೂರುಪಾದೇಭ್ಯೋ ಜನಯಾಮಾಸ ಸ ಕ್ರಮಾತ್ ।
ಬ್ರಾಹ್ಮಣಾನ್ ಕ್ಷತ್ರಿಯನ್ವೈಶ್ಯಾನ್ ಶೂದ್ರಾದೀಂಶ್ಚ ಕುರೂದ್ವಹ ॥56॥

ಛಂದಾಂಸಿ ಯಜ್ಞಸ್ತುರಗಾ ಗಾವೋ ಮೇಷಾವಿಕಾದಯಃ ।
ಅತರ್ಕ್ಯಪ್ರಭಾವಂ ತಸ್ಮಾದುತ್ಪತ್ತಿಂ ಪ್ರತಿಪೇದಿರೇ ॥57॥

ಸಂಕಲ್ಪಾದ್ದೇವದೇವಸ್ಯ ತಸ್ಯ ಸ್ಥಾವರಜಂಗಮಮ್ ।
ಭೂತಜಾತಮಭೂತ್ಕಾಲೋ ಭೂತೋ ಭಾವೀ ಭವಂಸ್ತಥಾ ॥58॥

ಪಿಬತ್ಯಂಬು ಸಮುದ್ರಾಣಾಂ ವಡವಾನಲರೂಪಧೃಕ್ ।

ಜನಿಸಿತು. ಪಾದಕಮಲದಿಂದ ಸರ್ವಜೀವಿಗೆ ಆಧಾರವಾದ ಭೂಮಿಯು ಹುಟ್ಟಿತು. ದಿಕ್ಕುಗಳು ಪರಮಾತ್ಮನ ಕಿವಿಗಳಿಂದ ಹುಟ್ಟಿದವು. ಭೂಃ, ಭುವಃ, ಸ್ವಃ, ಮೊದಲಾದ ಊರ್ಧ್ವಲೋಕಗಳು, ಅತಲ ವಿತಲ ಪಾತಾಲಾದಿ ಸಪ್ತಾಧೋಲೋಕಗಳು ಅವನ ಸ್ಮೃತಿಯಿಂದ ಜನಿಸಿದವು. ಅನುಕ್ರಮವಾಗಿ ಭಗವಂತನು ತನ್ನ ಮುಖ, ಬಾಹು, ಊರು, ಮತ್ತು ಪಾದಗಳಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರನ್ನು ಸೃಷ್ಟಿಮಾಡಿದನು. ವೇದಗಳು, ಯಜ್ಞಗಳು, ಕುದುರೆ, ಆಕಳು, ಕುರಿ, ಆಡು ಮೊದಲಾದವುಗಳು ಭಗವಂತನಿಂದಲೇ ಉತ್ಪತ್ತಿಯನ್ನು ಪಡೆದವು. ಭಗವಂತನ ಸಂಕಲ್ಪಮಾತ್ರದಿಂದ ಪಂಚಮಹಾಭೂತಗಳು, ಜೀವರಾಶಿಗಳ ಸಮೂಹ, ಭೂತ ಭವಿಷ್ಯದ್ವರ್ತಮಾನಾತ್ಮಕವಾದ ಕಾಲ ಇವುಗಳು ಜನಿಸುದವು. ಸಮುದ್ರದಲ್ಲಿ ವಡವಾನಲ ರೂಪದಿಂದ ಸಮುದ್ರದ ನೀರನ್ನು ಹೀರುವನು. ಕಲ್ಪಾಂತಕಾಲದಲ್ಲಿ ತನ್ನಲ್ಲಿರುವ ನೀರನ್ನೆಲ್ಲವನ್ನು ವರ್ಷಿಸುವನು. ಸೂರ್ಯಚಂದ್ರರಲ್ಲಿ ತತ್ತದ್ರೂಪನಾಗಿ ನಿಂತು ಜೀವಗಳ ವ್ಯಾಪಾರವನ್ನು ನಡೆಸುವನಲ್ಲದೆ ತಮಸ್ಸನ್ನು ದೂರಮಾಡಿ, ಹಗಲು ರಾತ್ರಿಗಳೆಂಬ ಕಾಲಧರ್ಮವನ್ನು ಪ್ರವರ್ತಿಸುವನು. ಕಲ್ಪಾವಸಾನ

ಕಲ್ಪಾಂತಕಾಲೇ ತತ್ಸರ್ವಂ ವಿಸೃಜ್ಯಾತ್ಮನಿ ಸ್ಥಿತಮ್ ॥59॥

ಸಂಚಾರಯತಿ ಭೂತಾನಾಂ ವೃತ್ತಿಂ ಸೂರ್ಯೇಂದುರೂಪಧೃಕ್ ।
ತಮೋನಿಶಸಾನಾಚ್ಚಾಪಿ ಕಾಲಧರ್ಮಪ್ರವರ್ತನಾತ್ ॥60॥

ಜಗಂತಿ ಕಲ್ಪವಿರಮೇ ವಿನ್ಯಸ್ಯ ಸ್ವೋದಾರಾಂತರೇ ।
ಲೀಲಾಬಾಲಾಕೃತಿಃ ಶೇತೇ ವಟಪತ್ರೇ ಮಹಾಂಬುಧೌ ॥61॥

ಅಥ ಚೋದಗ್ರಭೋಗೀಂದ್ರಭೋಗತಲ್ಪೇ ಸುಖೋಚಿತೇ ।
ಯೋಗನಿದ್ರಾಮವಾಪ್ನೋತಿ ಸದ್ವಿತೀಯೋಬ್ಜವಾಸಯಾ ॥62॥

ನಾಭಿಕಾಸಾರಸಂಭೂತಾಜ್ಜನಯಾಮಾಸ ಪಂಕಜಾತ್ ।
ಸರ್ವೇಷಾಂ ಜಗತಾಂ ನಾಥೋ ವಿಧಾತಾರಂ ಚತುರ್ಮುಖಮ್ ॥63॥

ಲೀಲಾ ಹ್ಯೇಷಾ ಮುಕುಂದಸ್ಯ ಸ್ವೇಚ್ಛಾಯೋಗಪ್ರವರ್ತಿನಃ ।
ವಿಜ್ಞಾಯತೇ ನ ಕೇನಾಪಿ ಯಥಾರ್ಥ್ಯೇನ ಸ ಈಶ್ವರಃ ॥64॥

ಯದಾ ಧರ್ಮಸ್ಯ ಹಾನಿಃ ಸ್ಯಾದಧರ್ಮೋ ವರ್ಧತೇ ಯದಾ ।
ಯದಾ ವಾ ಮಹತೀಂ ಪೀಡಾಂ ಭಜಂತೇ ದೇವತಾಗಣಾಃ ॥65॥

ಯದಾವಲೇಪದುರ್ವಾರಾ ಯಾಂತಿ ವೃದ್ಧಿಂ ಸುರದ್ವಿಷಃ ।

ಸಮಯದಲ್ಲಿ ಹದಿನಾಲ್ಕು ಲೋಕಗಳನ್ನು ತನ್ನ ಹೊಟ್ಟೆಯಲ್ಲಿ ಇಟ್ಟುಕೊಂಡು, ಶಿಶುರೂಪವನ್ನು ತಾಳಿ, ಪ್ರಳಯ ಸಮುದ್ರದ ಮಧ್ಯದಲ್ಲಿ ಆಲದೆಲೆಯ ಮೇಲೆ ಮಲಗಿರುವನು. ಅನಂತರ ಆದಿಶೇಷನ ವಿಶಾಲವಾದ ಶರೀರವೆಂಬ ಹಾಸಿಗೆಯ ಮೇಲೆ ಲಕ್ಷ್ಮೀಸಮೇತನಾಗಿ ಯೋಗನಿದ್ರೆಯನ್ನು ಹೊಂದುವನು. ಸಕಲಲೋಕಗಳಿಗೂ ಮೂಲಕಾರಣನಾದ ನಾರಾಯಣನು ತನ್ನ ನಾಭಿಯಿಂದುದ್ಭೂತವಾದ ಕಮಲದಿಂದ ಚತುರ್ಮುಖ ಬ್ರಹ್ಮದೇವರನ್ನು ಸೃಷ್ಟಿಯ ಆದಿಭಾಗದಲ್ಲಿ ಸೃಷ್ಟಿಸುವನು. ಅಂತಹ ಸ್ವತಂತ್ರನಾದ ಭಗವಂತನ ಲೀಲೆಯಿಂದಲೇ ಈ ಬ್ರಹ್ಮಾಂಡವು ಸೃಷ್ಟವಾಗಿರುವದು. ಇಂತಹ ಭಗವಂತನನ್ನು ಸಾಕಲ್ಯೇನ ತಿಳಿಯಲು ಯಾರೂ ಸಮರ್ಥರಲ್ಲ.

ಯಾವಾಗ ಧರ್ಮಕ್ಕೆ ಚ್ಯುತಿಯಾಗುವದೋ, ಅಧರ್ಮವು ಹೆಚ್ಚಾಗುವದೋ, ದೇವತೆಗಳಿಗೆ ಬಹಳ ತೊಂದರೆಯುಂಟಾಗುವದೋ, ರಾಕ್ಷಸರು ದೇವತೆಗಳನ್ನು ದ್ವೇಷಿಸುತ್ತಾ ಅವ್ಯಾಹತವಾದ ಹಿಂಸೆಯನ್ನು ಮಾಡುತ್ತಾ ಪ್ರವರ್ಧಮಾನವನ್ನು ಹೊಂದುವರೋ, ಭೂಮಿಗೂ, ಭೂಲೋಕ ನಿವಾಸಿಗಳಿಗೂ ಯಾವಾಗ ಭಯವುಂಟಾಗುವದೋ, ತನ್ನ ಭಕ್ತರಿಗೆ ಸಹಿಸಲಸಾಧ್ಯವಾದ

ಭೂಮೇರ್ಭೂಮಿಜನಾನಾಂ ಚ ಯದೋದೇತಿ ಮಹದ್ಭಯಮ್ ॥66॥

ಯದಾ ವಾ ನಿಜಭಕ್ತಾನಾಂ ಸಾಧೂನಾಮನಿವಾರಿತಾ ।
ದುರಂತಾತಂಕಜನನೀ ವಿಪತ್ಸಮುಪಜಾಯತೇ ॥67॥

ತದಾ ತದನುರೂಪಾಣಿ ರೂಪಾಣ್ಯಾಸ್ಥಾಯ ಕೌತುಕಾತ್ ।
ಅಧರ್ಮಮವಧೂಯಾಶು ಕುರುತೇ ಜಗತೋ ಹಿತಮ್ ॥68॥

ಸೃಜತಿ ವಿವಿಧಸಮಾಖ್ಯೋ ರಾಜಸೇನಾತ್ಮನಾಸೌ
ವಹತಿ ಹರಿಸಮಾಖ್ಯಃ ಸತ್ತ್ವನಿಷ್ಠಃ ಪ್ರಪಂಚಮ್ ।
ಹರತಿ ಹರಸಮಾಖ್ಯಾಸ್ತಾಮಸೀಮೇತ್ಯ ವೃತ್ತಿಂ
ಮಧುಮಥನಮಹಿಮ್ನಾಮಸ್ತಿ ವೇತ್ತಾ ನ ಕೋಽಪಿ ॥69॥

ಯಜ್ಞಾಂಗೈಃ ಕೃತಸಕಲಾಂಗಸಂಧಿಬಂಧಂ
ವಾರಾಹಂ ವಪುರಧಿಗಮ್ಯ ಲೋಕನಾಥಃ ।
ಶೈಲೇಽಸ್ಮಿನ್ನಭಜದಸೌ ಯಥಾನಿವಾಸಂ
ತದ್ವಕ್ಷ್ಯೇ ಶೃಣು ವಿಬುಧಾಧಿನಾಥಸೂನೋ ॥70॥

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ 'ಸುವರ್ಣಮುಖರೀಮಾಹಾತ್ಮ್ಯೇ ವಿಷ್ಣುಮಾಹಾತ್ಮ್ಯಪ್ರಸ್ತಾವೇ ಸೃಷ್ಟ್ಯಾದಿ ವರ್ಣನಮ್' ನಾಮ ಪಂಚತ್ರಿಂಶೋಽಧ್ಯಾಯಃ ॥35॥

* * *

ಕಷ್ಟವುಂಟಾಗುವದೋ, ಆ ಸಮಯದಲ್ಲಿ ಆಯಾ ಸನ್ನಿವೇಶಕ್ಕೆ ಸಮವಾದ ರೂಪಗಳನ್ನು ತನ್ನ ಇಚ್ಛೆಯಿಂದ ಭಗವಂತನಾದ ನಾರಾಯಣನು ಸ್ವೀಕರಿಸಿ ಅಧರ್ಮವನ್ನು ಮತ್ತು ಧರ್ಮದ್ವೇಷಿಗಳನ್ನು ನಿರ್ಮೂಲನಗೊಳಿಸಿ ಪುನಃ ಧರ್ಮವನ್ನು ಸಂಸ್ಥಾಪಿಸಿ ಜಗತ್ತಿಗೆ ಕಲ್ಯಾಣವನ್ನುಂಟುಮಾಡುವನು. ಇಂತಹ ಮಧುಸೂದನನ ಮಹಿಮೆಯನ್ನು ಸರಿಯಾಗಿ ಸಂಪೂರ್ಣವಾಗಿ ತಿಳಿದವರಾರು? ಭಗವಂತನು ಇನ್ನು ಮುಂದೆ ಯಜ್ಞವರಾಹರೂಪನಾಗಿ ಭಗವಂತನು ವೇಂಕಟಾಚಲದಲ್ಲಿ ನಿವಾಸಗೊಂಡ ಬಗೆಯನ್ನು ತಿಳಿಸುವೆನು. ಕೇಳು..

ಇಲ್ಲಿಗೆ ಸ್ಕಾಂದಪುರಾಣದಲ್ಲಿಯ ಮೂವತ್ತೈದನೆಯ ಅಧ್ಯಾಯವು ಸಮಾಪ್ತವಾಯಿತು

* * *

## ಅಥ ಷಟ್ತ್ರಿಂಶೋಽಧ್ಯಾಯಃ

[ಸುವರ್ಣಮುಖರೀಮಾಹಾತ್ಮ್ಯಪ್ರಶಂಸಾಯಾಂ ವರಾಹಾವತಾರವರ್ಣನಮ್]

ಭರದ್ವಾಜ ಉವಾಚ–

ಪುರಾ ನಿಶಾತ್ಯಯೇ ಧಾತುಃ ಪ್ರಬುದ್ಧೋ ಮಧುಸೂದನಃ ।
ಪುನಃ ಪ್ರವೃತ್ತಿಂ ಭೂತಾನಾಮನ್ವಿಯೇಷ ಧಿಯಾ ಭೃಶಮ್ ॥1॥

ವಿನಾ ವಸುಮತೀಮನ್ಯೇ ಭೂತೌಘಧರಣಕ್ಷಮಾಮ್ ।
ನ ಭವಂತೀತಿ ಹೃದಯೇ ತರ್ಕಸ್ತಸ್ಯಾಜನಿಷ್ಟ ಚ ॥2॥

ಅಪಶ್ಯತ್ಪ್ರಣಿಧಾನೇನ ಮಹೀಂ ಪಾತಾಲಗೋಚರಾಮ್ ।
ಅತಿಮಂತ್ರಭಯೋದ್ವಿಗ್ನಾಂ ಪರೀತಾಂ ಮಹತಾಽಂಬುನಾ ॥3॥

ಪ್ರತಿಪೇದೇ ತದಾ ರೂಪಂ ಭೂಸಮುದ್ಧರಣೋಚಿತಮ್ ।
ಉಪವರ್ಯೋರ್ಷಮನಲಜಿಹ್ವಂ ಪ್ರಣವಘೋಷಣಮ್ ॥4॥

ಚತುರಾಮ್ನಾಯಚರಣಂ ಪ್ರಾಯಶ್ಚಿತ್ತಖುರಾಂಚಿತಮ್ ।
ಪ್ರಾಗ್ವಂಶಕಾಯಂ ವಿಲಸದ್ದರ್ಭರೋಮಾವಲೀಯುತಮ್ ॥5॥

## ಮೂವತ್ತಾರನೆಯ ಅಧ್ಯಾಯ

[ವರಾಹಾವತಾರವರ್ಣನ]

ಬ್ರಹ್ಮದೇವರ ರಾತ್ರಿಯು ಕಳೆಯುತ್ತಿರಲು ಪ್ರಬುದ್ಧನಾದ ನಾರಾಯಣನು ಮತ್ತೆ ಭೂತಗಳನ್ನು ಸೃಷ್ಟಿಸಬೇಕೆಂದು ವಿಚಾರಿಸಿ, ಭೂಮಿಯಲ್ಲದೇ ಮತ್ತಾರೂ ಸಹ ಜೀವಿಗಳನ್ನು ಧಾರಣಮಾಡಲು ಸಮರ್ಥರಲ್ಲವೆಂದು ನಿಶ್ಚಯಿಸಿ ತನ್ನ ಜ್ಞಾನದೃಷ್ಟಿಯಿಂದ ಭೂಮಿಯು ಪಾತಾಲದಲ್ಲಿ ನಿಮಗ್ನವಾಗಿದ್ದನ್ನು ಅರಿತು, ಭೂಮಿಯನ್ನು ಮೇಲಕ್ಕೆತ್ತ ಬಯಸಿ, ವರಾಹ ರೂಪವನ್ನು ಧರಿಸಿದನು.

ವರಾಹ ಮೂರ್ತಿಯು ಉಪಕರ್ಮಗಳನ್ನು ತುಟಿಗಳನ್ನಾಗಿಯೂ, ಬೆಂಕಿಯನ್ನು ನಾಲಿಗೆಯನ್ನು, ಪ್ರಣವವನ್ನು ಧ್ವನಿಯನ್ನಾಗಿಯೂ, ಹೊಂದಿದ್ದಿತು. ನಾಲ್ಕು ವೇದಗಳು ವರಾಹನ ನಾಲ್ಕು ಚರಣಗಳಾದವು. ಪ್ರಾಯಶ್ಚಿತ್ತವು ಖುರವಾಯಿತು. ದರ್ಭೆಗಳು ರೋಮವಾದವು. ಪ್ರವರ್ಗ್ಯವು

ಪ್ರವರ್ಗ್ಯಾವರ್ತಸಂಪನ್ನಂ ದಕ್ಷಿಣಾಗ್ನ್ಯುದರಾನ್ವಿತಮ್ ।
ಸ್ರುಕ್ತುಂಡಮಖಿಲೈಃ ಸರ್ವೈಃ ಸಂವಿಭಕ್ತಾಂಗಸಂಧಿಕಮ್ ॥6॥

ದಿವ್ಯಸೂಕ್ತಸಟಾಜಾಲಂ ಪರಬ್ರಹ್ಮಶಿರಸ್ತಥಾ ।
ಹವ್ಯಕವ್ಯರಯೋಪೇತಂ ವಿಶುದ್ಧಪಶುಜಾನುಕಮ್ ॥7॥

ಉಕ್ತಾತ್ಯುಕ್ತಾದಿಕಚ್ಛಂದೋಮಾರ್ಗಮಂತ್ರಬಲಾನ್ವಿತಮ್ ।
ಸರ್ವಯಜ್ಞಮಯಂ ದಿವ್ಯಂ ವಾರಾಹಂ ರೂಪಮಾಸ್ಥಿತಃ ॥8॥

ಅನ್ವೇಷ್ಟುಂ ಧರಣೀಮಬ್ಧೇರ್ವಿವೇಶ ಸಲಿಲಾಂತರಮ್ ।
ದಂಷ್ಟ್ರಾಬಾಲಶಶಾಂಕೋತ್ಥಲಸತ್ಕಾಂತಿಚಯೈರ್ಹಠಾತ್ ॥9॥

ಕಲ್ಪಾಂತಸಮಯಸ್ಫೀತಂ ತಮಿಸ್ರಮಪಸಾರಯನ್ ।
ಅಭಿಭೂತಾಂಬುಭೃದ್ಘೋಷೈರ್ಮುಹುರ್ಬ್ರಹ್ಮಾಂಡಕಂದರಾಮ್ ॥10॥

ನಿನಾದಮುಖರಾಂ ಕುರ್ವನ್ಘಾಢೈರ್ಘುರುಘುರುಸ್ವನೈಃ ।
ಖುರಪ್ರಖರವಿನ್ಯಾಸೈರ್ಜರ್ಝರೀಕೃತವಿಗ್ರಹಮ್ ॥11॥

ಇತಸ್ತತೋ ವಿಲುಠಯನ್ನುರಗಾಣಾಮಧೀಶ್ವರಮ್ ।
ತೀವ್ರೈರ್ನಿಃಶ್ವಾಸಪವನೈರಾಪಾತಾಲಂ ಸರಿತ್ಪತೇಃ ।
ಪ್ರಾಪಯನ್ನತಲಸ್ಪರ್ಶಮಂತರಂ ದರ್ಶನೀಯತಾಮ್ ॥12॥

ಅತಿದೀರ್ಘೇಣ ಪೋತ್ರೇಣ ಮಗ್ನೋನ್ಮಗ್ನೇನ ವಾರಿಧೇಃ ।

ಕೂದಲಿನ ಸುಳಿ, ದಕ್ಷಿಣಾಗ್ನಿಯನ್ನು ಉದರದಲ್ಲಿ ಧರಿಸಿ, ಸ್ರಕ್ ತುಂಡ (ಸೊಂಡಿ)ಯಾಗಿದ್ದು ಸಕಲ ಯಜ್ಞೋಪಕರಣಗಳು ವರಾಹನ ಶರೀರದಲ್ಲಿ ಆಶ್ರಯವನ್ನು ಪಡೆದಿದ್ದವು.

ದಿವ್ಯಸೂಕ್ತಗಳೆಂಬ ಮುಳ್ಳುಗಳಿಂದಲೂ, ಪರಬ್ರಹ್ಮನೆಂಬ ತಲೆಯಿಂದಲೂ, ಹವ್ಯಕವ್ಯಗಳೆಂಬ ಉಪಹಾರಗಳಿಂದಲೂ, ಪರಿಶುದ್ಧವಾದ ಪಶುಗಳೆಂಬ ಮೊಳಕಾಲುಗಳಿಂದಲೂ, ಉಕ್ತ ಮತ್ತು ಅತ್ಯುಕ್ತವೆಂಬ ಛಂದೋ ಭೇದಗಳಿಂದ ಒಡಗೂಡಿದ ಮಂತ್ರಗಳೆಂಬ ಶರೀರ ದಾರ್ಢ್ಯದಿಂದಲೂ ಪರಮಾತ್ಮನು ಸಕಲ ಯಜ್ಞಾತ್ಮಕವಾದ ಸೂಕರ ಶರೀರವನ್ನು ಸ್ವೀಕರಿಸಿದನು.

ಅನಂತರ ವರಾಹ ದೇವರು ಭೂಮಿಯನ್ನು ಹುಡುಕುವದಕ್ಕಾಗಿ ತನ್ನ ಕೋರೆದಾಡೆಗಳೆಂಬ ಚಂದ್ರಮಂಡಲಗಳಿಂದ ಬೆಳದಿಂಗಳುಗಳಿಂದ ಪ್ರಳಯ ಕಾಲದ ಅಂಧಂತಮಸ್ಸನ್ನು ನಾಶಮಾಡುತ್ತಾ ವೇಗವಾಗಿ ಸಾಗರೋದಕದಲ್ಲಿ ಮುಳುಗಿದನು. ತನ್ನ ನಿಶ್ವಾಸದಿಂದ ಬ್ರಹ್ಮಾಂಡದ ಮೂಲೆಗಳನ್ನು

ಸಂಕ್ಷೋಭಿತಾನಿ ಪಾಥಾಂಸಿ ಕುರ್ವನ್ನಂತರ್ಯಯೌ ತದಾ ॥13॥

ಸ ಪ್ರಪಾತಾಲಮೂಲಾಧಃಸ್ಥಿತಾಂ ತೋಯೇ ಭಯಾಕುಲಾಮ್ ।
ವೇಪಮಾನಾಂ ಸಮಾಲೋಕ್ಯ ಧರಣೀಂ ಹೃಷ್ಟಮಾನಸಃ ॥14॥

ತಾಮಾರೋಪ್ಯ ಸ್ವದಂಷ್ಟ್ರಾಗ್ರಮುನ್ಮಮಜ್ಜ ಸರಿತ್ಪತೇಃ ।
ಸಂಸ್ತೂಯಮಾನೋ ಮುನಿಭಿರ್ಜನಲೋಕನಿವಾಸಿಭಿಃ ॥15॥

ತಸ್ಮಿನ್ನುದ್ವಹತಿ ಪ್ರೇಮ್ಣಾ ದೇವೇ ವಸುಮತೀಂ ಕ್ಷಣಮ್ ।
ಪ್ರತಿಸಾರಾ ಬಭೂವಾಧೋ ವಾರಿಧೇರ್ಮಂಗಲೋಚಿತಾ ॥16॥

ತದುತ್ತಾರಣವೇಲಾಯಾಂ ವರಾಹವಪುಷೋಽರ್ಜುನ ।
ಗಂಭೀರಘೋಷೈರಂಭೋಧಿಃ ಪ್ರಾಪ ಮಂಗಲತೂರ್ಯತಾಮ್ ॥17॥

ಉದ್ವೃತ್ತವೀಚಿವಿಕ್ಷಿಪ್ತಶೀಕರಾಸಾರಸಂಗತಃ ।
ಭೇಜೇ ಮುಕ್ತಾಫಲಚಯೋ ಮಂಗಲಾಕ್ಷತವಿಭ್ರಮಮ್ ॥18॥

ಉದೂಢಾ ತೇನ ದೇವೇನ ಸಾ ಬಭೌ ಸಲಿಲಾಪ್ಲುತಾ ।
ಗಾಢರಾಗಸಮುತ್ಪನ್ನಸ್ವೇದಕ್ಲಿನ್ನತನೂರಿವ ॥19॥

ಇತ್ಥಮುದ್ಧೃತ್ಯ ಭಗವಾನ್ಮಹೀಂ ಪಾತಾಲಮೂಲತಃ ।
ಸದೃಢಂ ಸ್ಥಾಪಯಾಮಾಸ ಮಧ್ಯೇಽಂಬುನಿಧಿಪಾಥಸಾಮ್ ॥20॥

ತೇನೋದ್ಧೃತಾಯಾಂ ಮೇದಿನ್ಯಾಂ ಪೂರ್ಣಂ ತದ್ಭೂನಭೋತ್ತರೇ।
ಜಲಂ ತತ್ಕೃತಮರ್ಯಾದಾವ್ಯವಚ್ಛಿನ್ನಮಭೂತ್ತದಾ ॥21॥

ಪ್ರತಿಧ್ವನಿಸುತ್ತಾ ಗೊರಸುಗಳ ಹೊಡೆತದಿಂದ ಆದಿಶೇಷನ ಶರೀರವನ್ನು ಶಿಥಿಲಗೊಳಿಸಿ ಅಲ್ಲಾಡಿಸುತ್ತಾ, ಬೃಹತ್ಪ್ರಮಾಣದ ತನ್ನ ಶರೀರದ ಮಜ್ಜನ-ಉನ್ಮಜ್ಜನಗಳಿಂದ ಸಮುದ್ರದ ನೀರೆಲ್ಲವನ್ನೂ ಅಲ್ಲೋಲ ಕಲ್ಲೋಲ ಮಾಡುತ್ತಾ ಸಮುದ್ರದ ತಳವನ್ನು ಪ್ರವೇಶಿಸಿದನು. ಅಲ್ಲಿ ಪಾತಾಳದ ಕೆಳಗೆ ಭಯದಿಂದ ನಡಗುತ್ತಿರುವ ಭೂಮಿಯನ್ನು ಕಂಡು ಸಂತುಷ್ಟನಾಗಿ ಅವಳನ್ನು ತನ್ನ ಕೋರೆದಾಡೆಗಳಿಂದ ಹಿಡಿದು ಸಮುದ್ರದ ಮೇಲಕ್ಕೆತ್ತಿ ತಂದನು. ಸಮುದ್ರದ ಮೇಲೆ ಭೂಮಿಯು ಲೋಹದ ಗುಂಡಿನಂತೆ ಕಾಣುತ್ತಿತ್ತು. ಸಮುದ್ರದ ಘೋಷವು ಭೂಮಿಯ ಉದ್ಧರಣಕ್ಕೆ ಮಂಗಳ ವಾದ್ಯದಂತೆ ತೋರುತ್ತಿತ್ತು. ತೆರೆಗಳ ತುಂತುರು ಹನಿಗಳು, ಮುತ್ತುಗಳ ರಾಶಿಯು ಲಾಜಾಕ್ಷತೆಗಳಂತೆ ತೋರುತ್ತಿತ್ತು. ಪಾತಾಳ ಲೋಕದಿಂದ ಭೂಮಿಯನ್ನು ಮೇಲಕ್ಕೆತ್ತಿ ತಂದು ಸಮುದ್ರದ ಮಧ್ಯಭಾಗದಲ್ಲಿ

ಸಂಸ್ಥಾಪ್ಯ ಪೃಥಿವೀಮಿತ್ಥಂ ತದೀಯಾಧಾರಸಿದ್ಧಯೇ ।
ದಿಗ್ಗಜಾನಹಿರಾಜಂ ಚ ಕಮಠಂ ಚ ನ್ಯವೇಶಯತ್ ॥22॥

ತೇಷಾಮಪಿ ಚ ಸರ್ವೇಷಾಮಾಧಾರತ್ವೇನ ಸಾದರಮ್ ।
ಅವ್ಯಕ್ತರೂಪಾಂ ಸ್ವಾಂ ಶಕ್ತಿಂ ಯುಯೋಜ ಚ ದಯಾನಿಧಿಃ ॥23॥

ತತೋ ಧರಾಂ ಸಮುದ್ಧೃತ್ಯ ಸ್ಥಿತಂ ಕಿಟತನುಂ ಹರಿಮ್ ।
ತುಷ್ಟುವುಃ ಸನಕಾದ್ಯಾಸ್ತಂ ಜನೋಲೋಕನಿವಾಸಿನಃ ॥24॥

ತದಾ ವರಾಹವಪುಷಮಾರಾಧ್ಯ ಪುರುಷೋತ್ತಮಮ್ ॥25॥

ತದಾಜ್ಞಯಾ ಜಗದ್ಬ್ರಹ್ಮಾ ಯಥಾಪೂರ್ವಮಕಲ್ಪಯತ್ ॥26॥

ಅರ್ಜುನ ಉವಾಚ–

'ಕಲ್ಪಾಂತಸಲಿಲೇ ಮಗ್ನಾ ಕಥಂ ತಿಷ್ಠತಿ ಭೂರಿಯಮ್ ।
ಸಪ್ತಪಾತಾಲಲೋಕಾಧಃ ಕಿಮಾಧಾರಾ ಮಹಾಮುನೇ ॥27॥

ಕಲ್ಪಕಾಲಃ ಕಿಯಾನೇಷ ಸ್ಯಾತ್ತದ್ವೃತ್ತಿಶ್ಚ ಕೀದೃಶೀ ॥28॥

ಏತದ್ವಿಸ್ತಾರ್ಯ ಸಕಲಂ ಮಮ ಬ್ರಹ್ಮನ್ಮುನೇ ವದ' ॥29॥

ಭರದ್ವಾಜ ಉವಾಚ–

ಸ್ಥಿರವಾಗಿ ಪ್ರತಿಷ್ಠಾಪಿಸಿದನು. ಭೂಮಿಗೆ ಆಧಾರವಾಗಿ ದಿಗ್ಗಜಗಳನ್ನು, ಕೂರ್ಮವನ್ನು ಮತ್ತು ಶೇಷದೇವರನ್ನು ನಿಯೋಜಿಸಿದನು. ಅವುಗಳಿಗೆ ಶಕ್ತಿಪ್ರದನಾಗಿ ಅವುಗಳಲ್ಲಿ ಪ್ರವೇಶಿಸಿ ಸಾಕ್ಷಾತ್ ವರಾಹನೇ ನಿಂತುಕೊಂಡನು. ಹೀಗೆ ಭೂಮಿಯನ್ನುದ್ಧರಿಸಿ ನಿಂತ ವರಾಹದೇವರನ್ನು ನೋಡಿ ಸಂತುಷ್ಟರಾದ ಜನೋಲೋಕನಿವಾಸಿಗಳು ಅವನನ್ನು ಬಹುವಾಗಿ ಸ್ತುತಿಸಿದರು. ನಂತರ ವರಾಹ ವದನನಾದ ನಾರಾಯಣನನ್ನಾರಾಧಿಸಿ ಲೋಕಪಿತಾಮಹನಾದ ಬ್ರಹ್ಮದೇವರು ಪೂರ್ವದಂತೆ ಜಗತ್ತನ್ನು ಸೃಷ್ಟಿಮಾಡಿದನು.

ಇದನ್ನು ಕೇಳಿದ ಅರ್ಜುನನು 'ಭೂಮಿಗೆ ಆಧಾರವಾಗಿರುವದಾವದು? ಕಲ್ಪದ ಪರಿಮಾಣವೆಷ್ಟು?' ಎಂಬುದನ್ನು ತಿಳಿಸಲು ಪ್ರಾರ್ಥಿಸಿದಾಗ ಭರದ್ವಾಜರು ಕಲ್ಪದ ಪರಿಮಾಣವನ್ನು ನಿರೂಪಿಸುವರು.

ಅರವತ್ತು ವಿನಾಡಿಕೆಗಳಿಗೆ (ಪಳಗಳಿಗೆ) ಒಂದು ನಾಡಿ (ಘಳಿಗೆ) ಎಂದು ಕರೆಯುವರು. ಅರವತ್ತು ಘಳಿಗೆಗಳಿಗೆ ಒಂದು ದಿನ, ಮೂವತ್ತು ದಿನಗಳಿಗೆ ಪಕ್ಷದ್ವಯಾತ್ಮಕವಾದ ಮಾಸವಾಗುವದು.

ವಿನಾಡಿಕಾನಾಂ ಷಷ್ಟ್ಯಾ ಸ್ಯಾನ್ನಾಡಿಕೈಕಾ ದಿನಂ ಭವೇತ್ ।
ತಚ್ಛಷ್ಟ್ಯಾ ದಿವಸಾಸ್ತ್ರಿಂಶನ್ಮಾಸಃ ಪಕ್ಷದ್ವಯಾತ್ಮಕಃ ॥30॥

ಮಾಸೌ ದ್ವಾವೃತುರಿತ್ಯುಕ್ತಸ್ತೈಃ ಷಡ್ಭಿರ್ವತ್ಸರೋ ಭವೇತ್ ।
ಅಯನದ್ವಿತಯಾಕಾರಃ ಶೀತವರ್ಷೋಷ್ಣಸಂಶ್ರಯಃ ॥31॥

ದೇವಾಸುರಾಣಾಮನ್ಯೋನ್ಯಮಹಾರಾತ್ರಂ ವಿಪರ್ಯಯಾತ್ ।
ಉತ್ತರಂ ದಕ್ಷಿಣಂ ಭಾನೋರಯನೇ ದ್ವೇ ಯಥಾಕ್ರಮಮ್ ॥32॥

ಮಾನುಷಾಬ್ದೈಃ ಖಖವ್ಯೋಮಖಾಕ್ಷಿಪಾವಕಸಾಗರೈಃ ।
ಮಹಾಯುಗಂ ಭವೇತ್ಪಾರ್ಥ ಕೃತದ್ವಾಪರಸಂಯುತಮ್ ॥33॥

ಸಪ್ತತ್ಯಾ ಸೈಕಯಾ ಕಾಲೋ ಯುಗಾನಾಮಂತರಂ ಮನೋಃ ।
ಅಸ್ಮಿನ್ ಶ್ವೇತವರಾಹಾಖ್ಯೇ ಕಲ್ಪೇ ಜಾತಾನ್ಮನೂನ್ಶೃಣು ॥34॥

ಸ್ವಾಯಂಭುವಃ ಸ್ಯಾತ್ಪ್ರಥಮಸ್ತತಃ ಸ್ವಾರೋಚಿಷೋ ಮನುಃ ।
ಉತ್ತಮಸ್ತಾಮಸಾಖ್ಯಶ್ಚ ರೈವತಶ್ಚಾಕ್ಷುಷಾಹ್ವಯಃ ॥35॥

ಏತೇ ಗತಾಃ ಪ್ರಾಂಗ್ಮನವಃ ಷಟ್ಸೇಂದ್ರಾಸುರತಾಪಸಾಃ ।
ವೈವಸ್ವತೋ ವರ್ತತೇಽದ್ಯ ಸಪ್ತಮೋ ಮನುರರ್ಜುನ ॥36॥

ಆದಿತ್ಯವಸುರುದ್ರಾದ್ಯಾಸ್ತತ್ಕಾಲೇ ದೇವತಾಗಣಾಃ ।
ಇಷ್ಟ್ವಾಶ್ವಮೇಧಶತಕಂ ತೇಜಸ್ವೀ ಪ್ರಾಪ ಶಕ್ರತಾಮ್ ॥37॥

ಎರಡು ಮಾಸಗಳಿಗೆ ಒಂದು ಋತುವಾಗುವದು. ಆರು ಋತುಗಳಿಗೆ ಒಂದು ವರ್ಷವಾಗುವದು. ಆ ವರ್ಷವು ಉತ್ತರಾಯಣ ಮತ್ತು ದಕ್ಷಿಣಾಯನ ಎಂಬ ಶೀತ ಮತ್ತು ಉಷ್ಣ ಚರ್ಯೆಯಿಂದ ಕೂಡಿದ ಕಾಲಗಳಿಂದ ಯುಕ್ತವಾಗಿರುವದು. ಅಯನಗಳು ಕ್ರಮವಾಗಿ ದೇವ ದಾನವರಿಗೆ ಹಗಲು ರಾತ್ರಿಗಳೆನಿಸುವವು. ಹೀಗೆ ಮನುಷ್ಯ ಮಾನದಿಂದ 43, 20, 000 ವರ್ಷಗಳಾದಾಗ ಕೃತ. ತ್ರೇತಾ, ದ್ವಾಪರ ಮತ್ತು ಕಲಿಯುಗವೆಂಬ ನಾಲ್ಕು ಯುಗಗಳು ಜರುಗಿ ಹೋಗುವವು. ಅದನ್ನು ಮಹಾಯುಗವೆಂದು ಕರೆಯುವರು. ಎಪ್ಪತ್ತೊಂದು ಮಹಾಯುಗಗಳು ಕಳೆದಲ್ಲಿ ಒಂದು ಮನ್ವಂತರವೆಂದು ಕರೆಯುವರು. ಈಗ ನಡೆಯುತ್ತಿರುವದು ಶ್ವೇತವರಾಹ ಕಲ್ಪವು. ಈ ಕಲ್ಪದಲ್ಲಿ ಪ್ರಥಮದಲ್ಲಿ ಸ್ವಾಯಂಭುವ ಮನುವು, ಅನಂತರ ಕ್ರಮವಾಗಿ ಸ್ವಾರೋಚಿಷ, ಉತ್ತಮ, ತಾಪಸ, ರೈವತ ಮತ್ತು ಚಾಕ್ಷುಷರೆಂಬ ಮನುಗಳು ಆಗಿ ಹೋಗಿರುವರು. ಈಗ ಪ್ರಕೃತದಲ್ಲಿ ಸೂರ್ಯನ ಮಗನಾದ ವೈವಸ್ವತನು ಮನುವಾಗಿದ್ದು ವೈವಸ್ವತ ಮನ್ವಂತರವು

ವಿಶ್ವಾಮಿತ್ರೋऽಹಮತ್ರಿಶ್ಚ ಜಮದಗ್ನಿಶ್ಚ ಕಶ್ಯಪಃ ।
ವಸಿಷ್ಠೋ ಗೌತಮಶ್ಚೈವ ತೇ ವೈ ಸಪ್ತರ್ಷಯೋऽರ್ಜುನ ॥38॥

ಇಕ್ಷ್ವಾಕುಪ್ರಮುಖಾಃ ಶೂರಾಃ ಮನುಪುತ್ರಾ ಮಹಾಬಲಾಃ ।
ಅವನಿಂ ಪಾಲಯಾಮಾಸುರ್ನಿತ್ಯಂ ಧರ್ಮಪರಾಯಣಾಃ ॥39॥

ಸೂರ್ಯದಕ್ಷಬ್ರಹ್ಮಧರ್ಮರುದ್ರಾಣಾಂ ಪಂಚ ಸೂನವಃ ।
ಸಾವರ್ಣಿರೌಚ್ಯೌ ಭೌಮಾದ್ಯಾ ಭವಿಷ್ಯನ್ಮನುಸಪ್ತಕಮ್ ॥40॥

ಚತುರ್ದಶ ವಿಧಾತುಸ್ತೇ ಭವಂತಿ ಮನವೋऽಹನಿ ।
ತತ್ಕಲ್ಪಸಂಜ್ಞಂ ತಸ್ಯಾಂತೇ ನಿಶಾ ಸ್ಯಾತ್ತತ್ಸಮಾ ಶೃಣು ॥41॥

ದಿನಾವಸಾನಸಮಯೇ ಬ್ರಹ್ಮಣಃ ಪಾಂಡುನಂದನ ।
ಜಾಯತೇऽವಗ್ರಹೋ ಘೋರಃ ಪೃಥಿವ್ಯಾಂ ಶತವಾರ್ಷಿಕಃ ॥42॥

ತಸ್ಮಿನ್ನವಗ್ರಹೇ ಪೃಥ್ವ್ಯಾಂ ನೀರಸಾಯಾಂ ಧನಂಜಯ ।
ಚತುರ್ವಿಧಾನಿ ಭೂತಾನಿ ಸಮಾಯಾಂತಿ ಪರಿಕ್ಷಯಮ್ ॥43॥

ತದಾ ತಪ್ತಶಿಖಾಕಾರೈರುಪೇತೋ ಘರ್ಮದೀಧಿತಿಃ ।
ಮಯೂಖೈರಗ್ನಿಸದೃಶೈರ್ವಮದ್ಭಿಃ ಪಾವಕಚ್ಛಟಾಃ ॥44॥

ಪ್ರಚಲಿತದಲ್ಲಿದೆ. ಈ ಮನ್ವಂತರದಲ್ಲಿ ಆದಿತ್ಯವಸುರುದ್ರರು ದೇವತೆಗಳೆನಿಸುವರು. ನೂರು ಅಶ್ವಮೇಧ ಯಾಗಗಳನ್ನು ಮಾಡಿದ ಪುರಂದರನು ಇಂದ್ರನಾಗಿರುವನು. ವಿಶ್ವಾಮಿತ್ರ, ನಾನು (ಭರದ್ವಾಜ), ಅತ್ರಿ, ಜಮದಗ್ನಿ, ಕಶ್ಯಪ, ಗೌತಮ ಮತ್ತು ವಸಿಷ್ಠರು ಈ ಮನ್ವಂತರದಲ್ಲಿ ಸಪ್ತರ್ಷಿಗಳಾಗಿರುವರು. ಶೂರರೂ, ಬಲಿಷ್ಠರೂ, ಆದ ಇಕ್ಷ್ವಾಕುವಿನ ವಂಶದವರು ಭೂಮಿಯನ್ನು ಧರ್ಮದಿಂದ ಪಾಲನಮಾಡುವರು. ಸೂರ್ಯಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ಮತ್ತು ರುದ್ರಸಾವರ್ಣಿ ಎಂಬ ಸೂರ್ಯನ ಐದು ಮಕ್ಕಳು, ರೌಚ್ಯ ಮತ್ತು ಭೌಮರೆಂಬ ಇಬ್ಬರು ಹೀಗೆ ಇನ್ನು ಏಳು ಮನುಗಳು ಮುಂದ ಭೂಮಿಯಲ್ಲಿ ಆಗುವರು. ಹದಿನಾಲ್ಕು ಮನ್ವಂತರಗಳು ಒಟ್ಟಾಗಿ ಸೇರಿ ಬ್ರಹ್ಮದೇವರ ಒಂದು ಹಗಲಾಗುವದು. ಇದನ್ನೇ ಕಲ್ಪವೆಂದು ಕರೆಯುವರು. ಆ ಕಲ್ಪಾಂತದಲ್ಲಿ ಅಷ್ಟೇ ಪ್ರಮಾಣದ ರಾತ್ರಿಯೂ ಆಗುವದು. ಬ್ರಹ್ಮದೇವರ ಒಂದು ಹಗಲು ಮುಗಿಯುತ್ತಿರಲು (ದೈನಂದಿನ ಕಲ್ಪವು) ಸಮಾಪ್ತವಾಗುತ್ತಿರಲು ಒಂದು ನೂರು ವರ್ಷ ಕಾಲ ಭೂಮಿಯಲ್ಲಿ ಭಯಂಕಾರವಾದ ಕ್ಷಾಮವುಂಟಾಗುವದು. ಆಗ ಮಳೆಯಿರದೆ ಭೂಮಿಯು ರಸವಿಹೀನವಾಗಲು, ಅಂಡಜ (ಮೊಟ್ಟೆಯಿಂದ ಜನಿಸುವ ಪಕ್ಷಿಯೇ

ವಿನಷ್ಟಗ್ರಾಮನಗರಶೈಲವೃಕ್ಷಾದಿಕಾನನಾ ।
ಕೂರ್ಮಪೃಷ್ಠೋಪಮೋರ್ವೀ ಸ್ಯಾತ್ತಪ್ತಾಯಃಪಿಂಡಸನ್ನಿಧೌ ॥45॥

ತತೋ ವಿಧಾತುರ್ಗಾತ್ರೇಭ್ಯಃ ಸಮುತ್ಪನ್ನಾ ಮಹಾಘನಾಃ ।
ಆಚ್ಛಾದಯಂತೋ ಗಗನಂ ಗರ್ಜತಧ್ವಾನಬಂಧುರಾಃ ॥46॥

ಸಿತಪೀತಾರುಣಶ್ಯಾಮಾಶ್ಚಿತ್ರವರ್ಣಾಶ್ಚ ಭೀಷಣಾಃ ।
ಶೈಲೇಭಸೌಧವೃಕ್ಷಾದಿನಾನಾರೂಪಸಮನ್ವಿತಾಃ ॥47॥

ತೇ ಶತಾಬ್ದಮಿತಂ ಕಾಲಂ ಮಹಾವೃಷ್ಟಿಂ ವಿತನ್ವತೇ ।
ತೇನಾಂಭಸಾ ಶಮಂ ಯಾತಿ ಸೂರ್ಯೋದ್ಭೂತೋ ಮಹಾನಲಃ ॥48॥

ಭೂಯಶ್ಚ ಶತವರ್ಷಾಣಿ ವರ್ಷಂತ್ಯುಗ್ರಂ ಮಹಾಘನಾಃ ।
ತದಂಭಸಾ ಸಮುದ್ವೇಲಾ ವಿಕೃತಿಂ ಯಾತಿ ವಾರ್ಧಯಃ ॥49॥

ಕಲ್ಪಾಂತಾಂಬುದನಿರ್ಮುಕ್ತಂ ಲೋಕಾನ್ವ್ಯಾಪ್ನೋತಿ ತಜ್ಜಲಮ್ ।
ಭೂರ್ಭುವಃ ಸ್ವರ್ಮಹರ್ಲೋಕಾನಾವೃಣೋತಿ ತಮೋಮಹತ್ ॥50॥

ತದಾ ನಿಮಗ್ನಾ ಸಲಿಲೇ ಮಹೀ ಪಾತಾಲಮೂಲಗಾ ।
ಅನಷ್ಟಾ ಕಥಮಪ್ಯಾಸ್ತೇ ಬ್ರಹ್ಮಶಕ್ತ್ಯವಲಂಬಿತಾ ॥51॥

ಮೊದಲಾದವುಗಳು). ಸ್ವೇದಜ (ಬೆವರಿನಿಂದ ಜನಿಸುವ ಸೊಳ್ಳೆಯೇ ಮೊದಲಾದವುಗಳು), ಜರಾಯುಜ (ಗರ್ಭಚೀಲದಿಂದ ಹೊರಬರುವ ಪ್ರಾಣಿಗಳು). ಉದ್ಭಿಜ್ಜ (ಬೆನ್ನನ್ನು ಹರಿದು ಬರುವ ಚೇಳು, ಸಸ್ಯವೇ ಮೊದಲಾದವುಗಳು) ಎಂಬ ಚತುರ್ವಿಧ ಜೀವರಾಶಿಗಳು ನಾಶವಾಗುವವು. ಸೂರ್ಯನು ಕೆಂಡದಂತೆ ಸುಡುತ್ತಾ ಬೆಂಕಿಯನ್ನು ಕಾರುವ ಕಿರಣಗಳಿಂದ ಭೂಮಿಯನ್ನು ಸುಡುವನು. ಗ್ರಾಮ, ಪುರ, ಪಟ್ಟಣ, ಪರ್ವತ ಮರ, ಕಾಡು ಮೊದಲಾದವುಗಳನ್ನು ಕಳೆದುಕೊಂಡು ಭೂಮಿಯು ಆಮೆಯ ಚಿಪ್ಪಿನಂತೆ ಕಠಿಣವೂ ಕಾದ ಕಬ್ಬಿಣದ ಗೋಲದಂತೆ ದುಸ್ಸಹನೀಯವೂ ಆಗುವದು. ಅನಂತರ ಬ್ರಹ್ಮದೇವರ ಶರೀರದಿಂದ ಹೊರಟ ಬಿಳಿ, ಹಳದಿ, ಕೆಂಪು, ಕಪ್ಪು- ಹೀಗೆ ನಾನಾ ಬಣ್ಣದಿಂದ ಕೂಡಿದ, ಪರ್ವತ, ಆನೆಯೇ ಮೊದಲಾದ ವಿಚಿತ್ರ ಆಕಾರವನ್ನು ಧರಿಸಿದ ಮೇಘಗಳು ಆಕಾಶವನ್ನು ವ್ಯಾಪಿಸಿ, ಒಂದು ನೂರು ವರ್ಷಕಾಲ ಮಳೆಯನ್ನು ಕರೆಯುವವು. ಅವುಗಳಿಂದ ಸೂರ್ಯನ ಬೇಗೆಯು ಉಪಶಮನವನ್ನು ಹೊಂದುವದು. ಅವು ಒಂದು ನೂರು ವರ್ಷಕಾಲ ಮತ್ತೆ ಮಳೆಯನ್ನು ಕರೆಯುತ್ತಿರಲು ಸಮುದ್ರದ ನೀರು ಉಕ್ಕೇರಿ ಅವು ತಮ್ಮ ಎಲ್ಲೆಯನ್ನು ಮೀರಿ ಹರಿಯುವವು. ಹೀಗೆ ಕಲ್ಪಾಂತಕಾಲದಲ್ಲಿ ಜಲವು

ಅಥ ನಿಃಶ್ವಾಸಸಂಭೂತೋ ಮಾರುತೋ ಬ್ರಹ್ಮಣೋಽರ್ಜುನ ।
ಉತ್ಸಾರಯತಿ ತಾನ್ಸರ್ವಾನ್ಕಲ್ಪಾಂತೋತ್ಥಾನ್ಮಹಾಘನಾನ್ ॥52॥

ಏವಂ ಪ್ರವೃದ್ಧಃ ಪವನಃ ಶತಸಂವತ್ಸರಾತ್ಮಕಮ್ ।
ಕಾಲಂ ನಿರಂತರಂ ವಾತಿ ದುರ್ನಿವಾರರಯೋತ್ಥಿತಃ ॥53॥

ತಮುಗ್ರಮನಿಲಂ ಹಿತ್ವಾ ಹರೇರ್ನಾಭಿಸರೋಹುಹೇ ।
ಯೋಗನಿದ್ರಾಮವಾಪ್ನೋತಿ ತಸ್ಮಿನ್ನಾಥಸಿ ಪದ್ಮಭೂಃ ॥54॥

ಯೋಗನಿದ್ರಾನುಷಕ್ತಸ್ಯ ಯಾತಿ ತಸ್ಯ ಜಗದ್ವಿಭೋಃ ।
ತಾವತೀ ಶರ್ವರೀ ಪಾರ್ಥ ದಿವಂ ಯಾವತ್ಪ್ರಮಾಣಕಮ್ ॥55॥

ನಿಶಾಯಾಂ ಸಮತೀತಾಯಾಮುತ್ಥಿತೋ ವೇಗವಾನ್ಪುನಃ ।
ಸೃಜತ್ಯಖಿಲಜಂತೂನ್ ವೈ ಪೂರ್ವವಚ್ಛಾಸನಾದ್ಧರೇಃ ॥56॥

ಕಲ್ಪೇ ಕಲ್ಪೇ ಸಮುಚಿತೈ ರೂಪೈಃ ಪಾತಿ ಜಗದ್ಧರಿಃ ।
ಅಸ್ಮಿನ್ಕಲ್ಪೇ ಶ್ವೇತವರ್ಣಾಂ ಪ್ರಾಪ್ತವಾನ್ಯಜ್ಞಪೋತ್ರಿತಾಮ್ ॥57॥

ವರಾಹವಪುಷಾ ದೇವೋ ವಿಹರನ್ನವನೀತಲೇ ।
ಸ್ವಪೂರ್ವನಿಯತಾವಾಸಂ ಪ್ರಪೇದೇ ವೇಂಕಟಾಚಲಮ್ ॥58॥

ಎಲ್ಲ ಲೋಕವನ್ನು ವ್ಯಾಪಿಸಿ, ಸೂರ್ಯನ ಬೆಳಕೇ ಕಾಣದಂತಾಗಿ ಭೂಲೋಕ, ಭುವರ್ಲೋಕ, ಸುವರ್ಲೋಕ. ಮತ್ತು ಮಹರ್ಲೋಕಗಳನ್ನು ಅಂಧಕಾರವು ವ್ಯಾಪಿಸುವದು. ಆಗ ಭೂಮಿಯು ಪಾತಾಲಲೋಕವನ್ನು ಸೇರಿ ಬ್ರಹ್ಮಶಕ್ತಿಯ ಆಧಾರದಿಂದ ಸಂಪೂರ್ಣನಾಶವನ್ನು ಹೊಂದದೇ ಉಳಿಯುವದು. ಅನಂತರ ಬ್ರಹ್ಮದೇವರ ನಿಃಶ್ವಾಸದಿಂದ ಹುಟ್ಟಿದ ಪ್ರಲಯಮಾರುತಗಳು ಕಲ್ಪಾಂತಸಮಯದಲ್ಲಿ ಆಕಾಶವನ್ನು ವ್ಯಾಪಿಸಿದ ಮೇಘಗಳನ್ನು ದೂರ ಓಡಿಸಿ ಒಂದು ನೂರು ವರ್ಷಕಾಲ ನಿರಂತರವಾಗಿ ತಡೆಯಲಸಾಧ್ಯವಾದ ಮಹಾವೇಗದಿಂದ ಬೀಸುವವು. ನಂತರ ಚತುರ್ಮುಖ ಬ್ರಹ್ಮನು ಆ ಅನಿಲವನ್ನು ಉಪಸಂಹರಿಸಿ ಶೇಷಶಯನನಾದ ಪರಮಾತ್ಮನ ನಾಭಿಕಮಲದಲ್ಲಿ ಯೋಗನಿದ್ರೆಯನ್ನು ಮಾಡುತ್ತಾನೆ. ಬ್ರಹ್ಮದೇವನು ಯೋಗನಿದ್ರಾಸಕ್ತನಾದ ಹಗಲಿನಷ್ಟೇ ಪ್ರಮಾಣ ಕಾಲದ ರಾತ್ರಿಯು ಕಳೆದು ಹೋಗುವದು. ರಾತ್ರಿಯು ಕಳೆಯಲು ಮತ್ತೆ ಅ ಬ್ರಹ್ಮದೇವರು ಬೇಗನೆ ಎಚ್ಚೆತ್ತು ಪರಮಾತ್ಮನ ಆಜ್ಞೆಯಂತೆ ಪೂರ್ವಕಲ್ಪದ ಸೃಷ್ಟಿಕ್ರಮವನ್ನನುಸರಿಸಿ ಸಕಲ ಜೀವರಾಶಿಗಳನ್ನು ಸೃಷ್ಟಿಮಾಡುವನು.

ಪ್ರತಿಯೊಂದು ಕಲ್ಪದಲ್ಲಿಯೂ ಸಹ ಜಗದುದ್ಧಾರಾರ್ಥವಾಗಿ ಶ್ರೀಹರಿಯು ನಾನಾ ರೂಪಗಳನ್ನು

ಸ್ವಾಮಿಪುಷ್ಕರಿಣೀ ತೀರೇ ಚರಂಶ್ಚಿರಮಧೋಕ್ಷಜಃ ।
ಭಕ್ತ್ಯಾ ಪರಮಯಾ ಯುಕ್ತಮಪಶ್ಯಜ್ಜಲಜಾಲನಮ್ ॥59॥

ಸಂಪೂಜ್ಯ ಪ್ರಾರ್ಥಯಾಮಾಸ ಬ್ರಹ್ಮಾ ತಂ ಭೂತಭಾವನಮ್ ।
'ಪುರಾತನೀಂ ನಿಜಾಂ ಸ್ವಾಮಿನ್ಭಜ ದಿವ್ಯಾಂ ತನೂಮಿತಿ ॥60॥

ಗೃಹೀತ್ವಾಽನುನಯಂ ತಸ್ಯ ತ್ಯಕ್ತ್ವಾ ತಾಂ ಸೂಕರಾಕೃತಿಮ್ ।
ಅನನ್ಯಭಜನೀಯಾಂ ಸ್ವಾಂ ಪ್ರಾಪ ವಿಶ್ವಾತ್ಮಿಕಾಂ ತನುಮ್ ॥61॥

ತಥಾ ಸ್ಥಿತಂ ಗಿರೌ ತತ್ರ ಕೃತ್ವಾಽಪ್ಯುತ್ಸಾಹಮೂರ್ಜಿತಮ್ ।
ದ್ರಷ್ಟುಂ ನ ಶೇಕುಃ ಸರ್ವೇಽಪಿ ಕಾಲೇನ ಬಹುನಾಪಿ ಚ ॥62॥

ದರ್ಶನಸ್ಮರಣಾದೀನಾಂ ಬಹಿರಿತ್ಥಮಗೋಚರಃ ।
ಕಥಂ ಪ್ರತ್ಯಕ್ಷತಾಂ ಪ್ರಾಪ ಮಾನುಷಾಣಾಂ ಮಹಾಮುನೇ ॥63॥

ಭಾಗ್ಯಭೂತೋಽಥ ಜಗತಾಂ ಯಃ ಕೋ ವಾಽಽರಾಧ್ಯ ತಂ ವಿಭುಮ್ ।
ಇಹ ಪ್ರಕಾಶಯಾಮಾಸ ಕಥಾಮೇತಾಂ ನಿವೇದಯ ॥64॥

ಹರಿಕಥಾಶ್ರವಣಂ ದುರಿತಾಪಹಂ
ಕಥಯತಾಂ ಸಕಲಾಗಮವಿದ್ಭವಾನ್ ।

ಸ್ವೀಕರಿಸಿ ಜಗತ್ತನ್ನು ರಕ್ಷಿಸುವನು. ಈ ಕಲ್ಪದಲ್ಲಿ ಭಗವಂತನು ಶ್ವೇತರೂಪದ ಯಜ್ಞವರಾಹ ಮೂರ್ತಿಯಾಗಿ ಭೂಮಿಯನ್ನು ಸ್‌ಉದ್ಧರಿಸಿ, ತನ್ನ ಹಿಂದಿನ ನಿಯತಾವಾಸಸ್ಥಾನವಾದ ವೇಂಕಟಾಚಲವನ್ನು ಹೊಂದಿದನು. ಅಲ್ಲಿಯ ಸ್ವಾಮಿಪುಷ್ಕರಿಣೀ ತೀರದಲ್ಲಿ ಸಂಚರಿಸುತ್ತಿದ್ದ, ಭಯಂಕರ ಕೋರೆದಾಡೆಗಳಿಂದ ಉಗ್ರವಾಗಿ ಕಾಣುತ್ತಿದ್ದ ವರಾಹ ದೇವರನ್ನು ನೋಡಿದ ಚತುರ್ಮುಖ ಬ್ರಹ್ಮದೇವರು ಭಕ್ತಿಯಿಂದ ಪೂಜಿಸಿ 'ಹೇ ಸ್ವಾಮಿಯೇ! ನಿನ್ನ ಮೊದಲಿನ ದಿವ್ಯವಾದ ಸೌಮ್ಯಸ್ವರೂಪವನ್ನು ಹೊಂದು' ಎಂದು ಪ್ರಾರ್ಥಿಸಿದನು. ಅವನ ಪ್ರಾರ್ಥನೆಯನ್ನು ಅಂಗೀಕರಿಸಿದ ವರಾಹನು ಭಯದಾಯಕವಾದ ಉಗ್ರರೂಪವನ್ನು ಬಿಟ್ಟು ಇತರರಿಂದ ಭಜಿಸಲು ಅಸಾಧ್ಯವಾದ ಸರ್ವತ್ರ ವ್ಯಾಪ್ತವಾದ ವಿಶ್ವರೂಪವನ್ನು ಸ್ವೀಕರಿಸಿದನು. ಇಂತಹ ವೇಂಕಟಾಚಲದಲ್ಲಿ ವಾಸಿಸಿದ ಪರಮಾತ್ಮನನ್ನು ಎಲ್ಲರೂ ಉತ್ಸಾಹಭರಿತರಾಗಿ ಬಹುಕಾಲ ಸೇವಿಸಿದರೂ ಸಹ ಅವನನ್ನು ನೋಡಲು ಶಕ್ತರಾಗಲಿಲ್ಲ.

ಇದನ್ನು ಕೇಳಿದ ಅರ್ಜುನನು 'ಇಂದ್ರಿಯಗಳಿಗೂ ಮನಸ್ಸಿಗೂ ಅಗೋಚರನಾದ ಪರಮಾತ್ಮನು ಮನುಷ್ಯರಿಗೆ ಹೇಗೆ ದೃಗ್ಗೋಚರನಾದನು? ಯಾವ ಪುಣ್ಯಾತ್ಮನು ಅವನನ್ನಾರಾಧಿಸಿ ಇಲ್ಲಿ

ಸುಕೃತಿನಾಂ ನನು ಸಂಪ್ರತಿ ಧುರ್ಯತಾ
ಮುನಿವರೇಣ್ಯ ಮಮಾದ್ಯ ಸಮಾಗತಾ ||65||

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ 'ಸುವರ್ಣಮುಖರೀಮಾಹಾತ್ಮ್ಯಪ್ರಶಂಸಾಯಾಂ ವರಾಹಾವತಾರವರ್ಣನಮ್' ನಾಮ ಷಟ್ತ್ರಿಂಶೋಽಧ್ಯಾಯಃ ||36||

* * *

ಪ್ರಕಾಶಪಡಿಸಿರುವನು? ಈ ಚರಿತ್ರೆಯೆಲ್ಲವನ್ನು ನನಗೆ ನೀವು ವರ್ಣಿಸಿರಿ. ಹೇ ಭರದ್ವಾಜರೇ! ಹರಿಕಥೆಯ ಶ್ರವಣವೇ ನಮ್ಮೆಲ್ಲ ದುರಿತಗಳನ್ನು ಕಳೆಯುವದು. ಅಂತಹ ಕಥೆಗಳನ್ನು ವರ್ಣಿಸುವದರಲ್ಲಿ ನೀವೇ ಸಕಲ ಶಾಸ್ತ್ರಗಳನ್ನು ತಿಳಿದಿರುವಿರಿ. ನಿಮ್ಮ ದರ್ಶನದಿಂದ ನಾನು ಪುಣ್ಯವಂತರಲ್ಲಿ ಶ್ರೇಷ್ಠನೆನಿಸಿರುವೆ. ನನಗೆ ಭಗವಂತನ ಕಥೆಯನ್ನು ತಿಳಿಸಿರಿ' ಎಂದು ಸಂಪ್ರಾರ್ಥಿಸಿದನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮ್ಯೆಯಲ್ಲಿ ಧರಣೀ ವರಾಹ ಸಂವಾದದಲ್ಲಿ ವರಾಹಾವತಾರ ವರ್ಣನವೆಂಬ ಮೂವತ್ತಾರನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥ ಸಪ್ತತ್ರಿಂಶೋಽಧ್ಯಾಯಃ

[ಸುವರ್ಣಮುಖರೀಮಾಹಾತ್ಮ್ಯ ಪ್ರಶಂಸಾಯಾಂ ಶ್ರೀವೇಂಕಟಾಚಲಂ ಪ್ರತಿ ಶಂಖಾಗಸ್ತ್ಯಾದ್ಯಾಗಮನವರ್ಣನಮ್]

ಭರದ್ವಾಜ ಉವಾಚ–

ಶೃಣು ಪಾರ್ಥ ಪ್ರವಕ್ಷ್ಯಾಮಿ ಕಥಾಮಾಶ್ಚರ್ಯಕಾರಿಣೀಮ್ ।
ಯಥಾಽಸೌ ಭಗವನಸ್ಮಿನ್ಶೈಲೇ ಪ್ರಾಪ ಪ್ರಕಾಶತಾಮ್ ॥1॥

ಶ್ರುತಾಭಿಧಾನೋ ನೃಪತಿರಸ್ತಿ ಹೈಹಯವಂಶಜಃ ।
ಯಃ ಪ್ರಜಾಃ ಸ್ವಾ ಇವ ಚಿರಂ ಶಶಾಸ ಧರಣೀಂ ಶುಭಾಮ್ ॥2॥

ತಸ್ಯ ಪುತ್ರೋ ಗುಣನಿಧಿಃ ಶಂಖೋ ನಾಮ ಮಹೀಪತಿಃ ।
ಪಾಲಯಾಮಾಸ ವಸುಧಾಂ ಸರ್ವಶಾಸ್ತ್ರವಿಶಾರದಃ ॥3॥

ತಸ್ಯ ವಿಷ್ಣೌ ಜಗನ್ನಾಥೇ ಪುಂಡರೀಕಾಯತೇಕ್ಷಣೇ ।
ಬಭೂವ ನಿಶ್ಚಲಾ ಭಕ್ತಿಃ ಪರಿತ್ಯಕ್ತಾನ್ಯಸಂಶ್ರಯಾ ॥4॥

ದೇವದೇವಂ ಜಗನ್ನಾಥಮನಂತಂ ಪುರುಷೋತ್ತಮಮ್ ।
ಪ್ರಗಾಢನಿಶ್ಚಯೋ ನಿತ್ಯಂ ಧ್ಯಾಯನ್ನದ್ಭುತವೈಭವಮ್ ॥5॥

## ಮೂವತ್ತೇಳನೆಯ ಅಧ್ಯಾಯ

ಹೇ ಅರ್ಜುನನೇ! ಇನ್ನು ಮುಂದೆ ಭಗವಂತನು ಈ ವೇಂಕಟಾಚಲಕ್ಕೆ ಹೇಗೆ ಬಂದೆನೆಂಬ ಆಶ್ಚರ್ಯಕರವಾದ ವೃತ್ತಾಂತವನ್ನು ಹೇಳುವೆನು. ಕೇಳು.

ಹಿಂದೆ ಶ್ರುತ ನೆಂಬ ಹೈಹಯ ಕುಲೋದ್ಭೂತನಾದ ರಾಜನಿದ್ದು ಅವನಿಗೆ ಗುಣನಿಧಿಯಾದ ಶಂಖನೆಂಬ ಸರ್ವಶಾಸ್ತ್ರ ವಿಶಾರದ ಮಗನಿದ್ದು ಜಗನ್ನಾಥನಾದ ನಾರಾಯಣನ ಪರಮ ಭಕ್ತನಾಗಿದ್ದನು. ಪುರುಷೋತ್ತಮನಾದ ಭಗವಂತನನ್ನು ನಿತ್ಯದಲ್ಲಿಯೂ ನಿಶ್ಚಲಬುದ್ಧಿಯಂದ ಧ್ಯಾನಮಾಡುತ್ತಾ ಭಗವಂತನ ಪ್ರೀತ್ಯರ್ಥವಾಗಿ ನಾನಾ ವಿಧವಾದ ಪುಣ್ಯಕರವಾದ ವ್ರತಗಳನ್ನು, ವಿವಿಧದಾನಗಳನ್ನು ಆಚರಿಸುತ್ತಾ ಭಗವಂತನನ್ನಾರಾಧಿಸುತ್ತಿದ್ದನು. ನಾನಾವಿಧವಾದ ವಾಜಪೇಯಾದಿ ಯಾಗಗಳಿಂದ, ಇಷ್ಟಾಪೂರ್ತಾದಿಗಳಿಂದ ಭಗವಂತನನ್ನು ಕರ್ಮಗಳ ಮೂಲಕ ಆರಾಧಿಸಿದ

ಚಕ್ರೇ ವ್ರತಾನಿ ದಾನಾನಿ ಪುಣ್ಯಾನಿ ವಿವಿಧಾನಿ ಚ ।
ವೇದವೇದ್ಯಸ್ಯ ನಿಯತಂ ಪ್ರೀತ್ಯರ್ಥಂ ಮಧುವಿದ್ವಿಷಃ ॥6॥

ತಮುದ್ದಿಶ್ಯೈವ ವಿದಧೇ ವಾಜಿಮೇಧಾದಿಕಾನ್ ಕ್ರತೂನ್ ।
ಯಥೋಕ್ತದಿಕ್ಷಿಣಾಯಾಗಾತ್ಪ್ರೀಣಿತಾಶೇಷಭೂಸುರ ॥7॥

ಇಷ್ಟಾಪೂರ್ತಾತ್ಮಕಂ ಚಕ್ರೇ ಕರ್ಮಜಾತಮತಂದ್ರಿತಃ ।
ವಿನ್ಯಸ್ತಹೃದಯೋ ನಿತ್ಯಂ ಕೇಶವೇ ಭಕ್ತವತ್ಸಲೇ ॥8॥

ಸ್ಮರತ್ಯಜಸ್ರಂ ಗೋವಿಂದಂ ಜಗತ್ಯಚ್ಯುತಮವ್ಯಯಮ್ ।
ಪೂಜಯತ್ಯಬ್ಜನಯನಂ ಸಂಕೀರ್ತಯತಿ ಶಾಂರ್ಜ್ಗಿಣಮ್ ॥9॥

ಶೃಣೋತಿ ಸತತಂ ರಾಜಾ ಸಂಸಾರಾರ್ಣವತಾರಿಣೀಃ ।
ಪೌರಾಣಿಕೈಃ ಸಮಾಖ್ಯಾತಾಃ ಪವಿತ್ರಾ ವೈಷ್ಣವೀಃ ಕಥಾಃ ॥10॥

ಬ್ರಾಹ್ಮಣಾನರ್ಚತಿ ಸ್ಮಾಯಂ ಹರಿಪ್ರೀತ್ಯರ್ಥಮೇವ ಚ ।
ಇತ್ಥಂ ಸರ್ವಾತ್ಮನಾ ಯುಕ್ತೋಽಪ್ಯಶ್ರಾಂತಃ ಪೃಥಿವೀಪತಿಃ ॥11॥

ನಾಪಶ್ಯಚ್ಛಾಶ್ವತೈಶ್ವರ್ಯಂ ಸ್ವತಂತ್ರಂ ಪುರುಷೋತ್ತಮಮ್ ।
ಸಶೋಕಾಕ್ರಾಂತಹೃದಯಃ ಪರಾಂ ಚಿಂತಾಮುಪಾಗಮತ್ ॥12॥

ಶಂಖ ಉವಾಚ–

ಪರಃ ಸಹಸ್ರೈರ್ಜನನೈರತೀತೈರ್ದುಷ್ಕೃತಿಂ ಬಹು ।
ಕೃತಂ ಮಯಾ ಯದಪ್ರಾಪ್ತಂ ಹೃಷೀಕೇಶಸ್ಯ ದರ್ಶನಮ್ ॥13॥

ಉಪಾರ್ಜಿತಾನಾಂ ತಪಸಾಮನೇಕೈಃ ಪೂರ್ವಜನ್ಮಭಿಃ ।

ಶಂಖನು ಮನಸ್ಸಿನಲ್ಲಿ ಯಾವಾಗಲೂ ಕಮಲ ನಯನನಾದ ಅಚ್ಯುತನನ್ನು ಪೂಜಿಸುತ್ತಾ, ಅವನನ್ನೇ ಸ್ಮರಿಸುತ್ತಾ, ಅವನ ಕಥೆಯನ್ನು ಸತತವಾಗಿ ಶ್ರವಣಮಾಡುತ್ತಾ, ಬ್ರಾಹ್ಮಣರನ್ನು ಪೂಜಿಸುತ್ತಾ ಕಾಲವನ್ನು ಕಳೆಯುತ್ತಿದ್ದನು.

ಹೀಗೆ ಮಹಾರಾಜನಾದ ಶಂಖನು ನಿತ್ಯಧಲ್ಲಿ ನಿರಂತರವಾಗಿ ವಿಷ್ಣುಸೇವೆಯಲ್ಲಿ ತೊಡಗಿದ್ದರೂ ಸಹ ಅವನಿಗೆ ಸ್ವತಂತ್ರನಾದ ಪುರುಷೋತ್ತಮನಾದ ಹರಿಯ ದರ್ಶನವಾಗಲಿಲ್ಲ. ಇದರಿಂದ ಖಿನ್ನಮನಸ್ಕನಾದ ಶಂಖನು 'ನನ್ನ ಪೂರ್ವಜನ್ಮಗಳಲ್ಲಿ ನಾನು ಬಹುಪಾಪವನ್ನೆಸಗಿರಬೇಕು. ಆದ್ದರಿಂದ ಪುಣ್ಯಫಲರೂಪನಾದ ಮಧುಸೂದನನ ದರ್ಶನವು ನನಗಾಗುತ್ತಿಲ್ಲ. ಆ ಭಗವಂತನನ್ನು

ಅಖಂಡಂ ಹಿ ಫಲಂ ವಿಷ್ಣೋರ್ದರ್ಶನಂ ಮಧುಘಾತಿನಃ ||14||

ಕಥಂ ನು ಯಾಯಾದ್ಭಗವಾನ್ವಿಷಯಂ ಮಮ ನೇತ್ರಯೋಃ ।
ಕದಾ ವಾ ಲಭ್ಯತೇ ಶ್ರೇಯಸ್ತದ್ವಾಕ್ಯಾಕರ್ಣನಾತ್ಮಕಮ್ ||15||

ಹಾ ಧಿಗ್ ಮಾಂ ವಿಹಿತಾಗಸ್ಕಂ ಕ್ರಿಯಾಸಾಫಲ್ಯವರ್ಜಿತಮ್ ।
ನಾರಾಯಣಕೃಪಾದೂರಂ ಸಂಸಾರಕ್ಲೇಶಗೋಚರಮ್' ||16||

ಭರದ್ವಾಜ ಉವಾಚ–

ಇತಿ ಚಿಂತಾಕುಲೇ ತಸ್ಮಿನ್ರಾಜ್ಞಿ ಜೀವಿತನಿಃಸ್ಪೃಹೇ ।
ಅದೃಶ್ಯಮೂರ್ತಿಸ್ಸರ್ವೇಷಾಂ ಶೃಣ್ವತಾಮಾಹ ಕೇಶವಃ ||17||

ಶ್ರೀ ಭಗವಾನುವಾಚ–

'ಮಾ ಶೋಕಸ್ಯ ವಶಂ ಯಾಯಾಃ ಶೃಣು ವಕ್ಷ್ಯಾಮಿ ತೇ ಹಿತಮ್ ।
ಮದೇಕಶರಣಂ ಸಾಧುಂ ತ್ವಾಂ ತ್ಯಕ್ಷ್ಯಾಮಿ ಕಥಂ ನೃಪ ||18||

ಅಯಂ ವೇಂಕಟನಾಮಾದ್ರಿಸ್ತ್ರಿಷು ಲೋಕೇಷು ವಿಶ್ರುತಃ ।
ವೈಕುಂಠಾದಪಿ ಮೇ ರಾಜನ್ನಾವಾಸೋಽತಿಪ್ರಿಯಾವಹಃ ||19||

ತಂ ಗತ್ವಾ ಭೂಧರವರಂ ತವ ಭಕ್ತ್ಯಾ ತಪಸ್ಯತಃ ।
ಗತೇ ಸಹಸ್ರೇ ವರ್ಷಾಣಾಂ ಯಾಸ್ಯಾಮ್ಯಾಲೋಕನೀಯತಾಮ್ ||20||

ಭವಾನಿವೋದ್ಯತೋಽಗಸ್ತ್ಯೋ ಮಮ ದರ್ಶನಮಂಜಸಾ ।

ನಾನು ಹೇಗೆ, ಯಾವಾಗ ನೋಡೇನು? ಅವನ ವಾಕ್ಯವನ್ನು ಕೇಳುವ ಭಾಗ್ಯ ನನಗೆಂತು ದೊರೆಯುವದು? ಸತ್ಕ್ರಿಯಾಶೂನ್ಯನಾದ ಸಂಸಾರ ದಲ್ಲಿ ಸಿಕ್ಕಿಬಿದ್ದಿರುವ, ನಾರಾಯಣ ಪರಾಂಗ್ಮುಖನಾದ ನನ್ನ ಜನ್ಮಕ್ಕೆ ಧಿಕ್ಕಾರವಿರಲಿ' ಎಂದು ಚಿಂತಿಸಿದನು. ಆಗ ಭಗವಂತನೇ ಅದೃಶ್ಯರೂಪನಾಗಿ ನಿಂತು 'ಹೇ ಶಂಖನೇ! ನೀನು ದುಃಖಿಸಬೇಡ. ನಿನಗೆ ಮುಂದೆಯೂ ಹಿತವುಂಟಾಗುವ ಉಪಾಯವೊಂದನ್ನು ಹೇಳುವೆನು, ಕೇಳು. ನನ್ನ ಅನನ್ಯಭಕ್ತನಾದ ನಿನ್ನನ್ನು ನಾನು ಹೇಗೆ ತಾನೆ ತ್ಯಜಿಸೇನು? ವೇಂಕಟಾಚಲವೆಂದು ತ್ರಿಲೋಕಗಳಲ್ಲಿಯೂ ಖ್ಯಾತವಾದ, ನನಗೆ ಅತ್ಯಂತ ಪ್ರಿಯಕರವಾದ ಪರ್ವತವೊಂದಿದ್ದು ನೀನು ಅಲ್ಲಿ ಹೋಗಿ ಭಕ್ತಿಯಿಂದ ಒಂದು ಸಾವಿರ ವರ್ಷ ತಪಸ್ಸನ್ನಾಚರಿಸು. ನಾನು ಅನಂತರದಲ್ಲಿ ನಿನಗೆ ದರ್ಶನವನ್ನು ಕೊಡುವೆನು. ನಿನ್ನಂತೆಯೇ ನನ್ನ ಭಕ್ತನಾದ ಅಗಸ್ತ್ಯಮಹರ್ಷಿಯು ಈ ಪೂರ್ವದಲ್ಲಿಯೇ

ಕ್ವ ವಾ ಸಂದೃಶ್ಯತೇ ವಿಷ್ಣುರೇವಮಾಹ ಚತುರ್ಮುಖಮ್ ॥21॥

ವೃಷಭಾದ್ರೌ ಹರಿರ್ದ್ರಷ್ಟುಂ ಲಭ್ಯತೇ ನಿಯತಾತ್ಮಭಿಃ ।
ಗಚ್ಛ ತತ್ರೇತಿ ಮುನಯೇ ಕಥಯಾಮಾಸ ಪದ್ಮಭೂಃ ॥22॥

ಅಂಭೋಜಸಂಭವೇನೇತ್ಥಮಾದಿಷ್ಟಃ ಕುಂಭಸಂಭವಃ ।
ಅಂಜನಾದ್ರೌ ಮಹಾವಾಸೇ ತಪಸ್ತಪ್ತುಂ ಸಮೇಷ್ಯತಿ ॥23॥

ತಸ್ಮಿನ್ಮಹೀಧರೇ ಪುಣ್ಯೇ ಕೃತಾವಾಸೋ ಭವಾನಪಿ ।
ಆರಾಧ್ಯ ಮಾಂ ತಪೋನಿಷ್ಠೋ ಮಮ ದರ್ಶನಮಾಪ್ಸ್ಯತಿ ॥24॥

ಭರದ್ವಾಜ ಉವಾಚ-

ಇತ್ಯಾಜ್ಞಪ್ತೋ ಭಗವತಾ ಶಂಖೋ ದಾನವವೈರಿಣಾ ।
ಜಗಾಮ ಪ್ರತಿಮತುಲಾಂ ಧನ್ಯೋಽಸ್ಮೀತಿ ಸ್ವಚೇತಸಿ ॥25॥

ವಿನ್ಯಸ್ಯ ತನಯಂ ವಜ್ರಂ ಪ್ರಜಾಪಾಲನಕರ್ಮಣಿ ।
ಗೋವಿಂದದರ್ಶನಾಪೇಕ್ಷೀ ನಾರಾಯಣಗಿರಿಂ ಯಯೌ ॥26॥

ತಸ್ಯ ಶೃಂಗೇ ಸಮುತ್ತುಂಗೇ ಸ್ವಾಮಿಪುಷ್ಕರಿಣೀಂ ಶುಭಾಮ್ ।
ದಿವ್ಯೈಃ ಪಯೋಭಿರಾಪೂರ್ಣಾಮಪಶ್ಯದಮೃತೋಪಮೈಃ ॥27॥

ಅನೇಕಸಿದ್ಧಗಂಧರ್ವದೇವರ್ಷಿಗಣಸೇವಿತಾಮ್ ।
ಭವತಾಪಪ್ರಶಮನೀಂ ಸರ್ವತೀರ್ಥಸಮಾಶ್ರಯಾಮ್ ॥28॥

ನನ್ನ ದರ್ಶನಕ್ಕಾಗಿ ಹಂಬಲಿಸುತ್ತಾ ಬ್ರಹ್ಮದೇವರನ್ನು 'ವಿಷ್ಣುವು ಎಲ್ಲಿ ದೃಗ್ಗೋಚರನಾಗುವನು' ಎಂದು ಪ್ರಶ್ನಿಸಿದಾಗ 'ಇಂದ್ರಿಯನಿಗ್ರಹವನ್ನು ಹೊಂದಿದವರಿಗೆ ವೇಂಕಟಾಚಲದಲ್ಲಿ ಶ್ರೀಹರಿಯ ದರ್ಶನವು ದೊರೆಯುವದು. ನೀನು ಅಲ್ಲಿಗೆ ಹೊರಡು' ಎಂದು ನುಡಿದಿದ್ದನು. ಅದರಂತೆ ಅಗಸ್ತ್ಯನೂ ಸಹ ನನ್ನ ದರ್ಶನಾರ್ಥವಾಗಿ ತಪಸ್ಸನ್ನಾಚರಿಸಲು ಅಂಜನಾಚಲಕ್ಕೆ ಬಂದು ಸೇರಿರುವನು. ನೀನು ಸಹ ಅಲ್ಲಿ ಹೋಗಿ ನನ್ನನ್ನಾರಾಧಿಸುತ್ತಾ ತಪವನ್ನಾಚರಿಸು' ಎಂದು ಸೂಚಿಸಿದನು.

ಇದರಿಂದ ಬಹು ಆನಂದವನ್ನು ಹೊಂದಿದ ಶಂಖರಾಜನು ತಾನು ಕೃತಕೃತ್ಯನೆಂದು ಭಾವಿಸಿ ವಜ್ರನೆಂಬ ತನ್ನ ಮಗನನ್ನು ಸಿಂಹಾಸನದಲ್ಲಿ ಕೂಡಿಸಿ ಭಗವಂತನನ್ನು ನೋಡಬೇಕೆಂಬ ಆತುರವನ್ನು ಹೊಂದಿ ವೇಂಕಟಾಚಲಕ್ಕೆ ಪ್ರಯಾಣವನ್ನು ಬೆಳಸಿದನು. ನಾರಾಯಣಗಿರಿಯ

ಜಲಕಾಕಬಕಕ್ರೌಂಚಹಂಸಕಾರಂಡವಾಕುಲಾಮ್ ।
ಕುಮುದೋತ್ಪಲರಾಜೀವಸೌಗಂಧಿಕಮನೋಹರಾಮ್ ॥29॥

ತಾಂ ದೃಷ್ಟ್ವಾ ಪದ್ಮಿನೀಂ ದಿವ್ಯಾಂ ತತ್ತೀರೇ ವಿಹಿತೋಟಜಃ ।
ತೋಷಿತಃ ಸ್ನಾನಪಾನಾದ್ಯೈರ್ನಿರ್ವಿಕಲ್ಪಮನೋಗತಿಃ ॥30॥

ಸರ್ವಕರ್ಮಾಣಿ ವಿನ್ಯಸ್ಯ ಜಗದೀಶೇ ಜನಾರ್ದನೇ ।
ಜಪಧ್ಯಾನಪರೋ ನಿತ್ಯಂ ತಪಸ್ತೇಪೇ ಸುದಾರುಣಮ್ ॥31॥

ತಸ್ಮಿನ್ನೇವ ಮುನಿಃ ಕಾಲೇ ಶಾಸನಾತ್ಪರಮೇಷ್ಠಿನಃ ।
ಅಗಸ್ತ್ಯೋಽಪ್ಯಾಸಸಾದಾದ್ಯಂ ಶೈಲಂ ಮುನಿಶತಾವೃತಃ ॥32॥

ಪ್ರತೀಚೀಂ ದಿಶಮಾರಭ್ಯ ಕೃತಯತ್ನಃ ಪ್ರದಕ್ಷಿಣೇ ।
ಪಶ್ಯಂಸ್ತೀರ್ಥಾನಿ ಪುಣ್ಯಾನಿ ಬಭ್ರಾಮ ಸುಚಿರಂ ಗಿರೌ ॥33॥

ತತ್ರ ತತ್ರ ದದರ್ಶಾಸೌ ಹರಿದರ್ಶನಲಾಲಸಾನ್ ।
ವಿರಿಂಚಿಗುರಶಕ್ರೇಶವಿಷ್ವಕ್ಸೇನಾದಿಕಾನ್ಕ್ರಮಾತ್ ॥34॥

ಸನಕಾದ್ಯಾಂಶ್ಚಯೋಗೀಂದ್ರಾನ್ನಾರದಪ್ರಮುಖಾನೃಷೀನ್ ।
ಸಿದ್ಧಗಂಧರ್ವದೈತೇಯಯಕ್ಷರಾಕ್ಷಸಪನ್ನಗಾನ್ ॥35॥

ತೈಸ್ತೈಃ ಸಮ್ಮಾನ್ಯಮಾನೋಽಸೌ ಪ್ರಶ್ರಯಪ್ರಿಯಭಾಷಣೈಃ ।

ಮೇಲ್ಭಾಗದಲ್ಲಿ ಸಿದ್ಧಪುರುಷರಿಂದ ಸೇವಿಸಲ್ಪಟ್ಟ, ನಿರ್ಮಲವಾದ ನೀರಿನಿಂದಾವೃತವಾದ ಪವಿತ್ರವಾದ ಸ್ವಾಮಿಪುಷ್ಕರಿಣಿ ಸರೋವರವನ್ನು ನೋಡಿದನು. ಅದರ ದಡದಲ್ಲಿಯೇ ಒಂದು ಗುಡಿಸಲನ್ನು ಕಟ್ಟಿಕೊಂಡು ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡಿ ಅನನ್ಯಗತಿಕವಾದ ಮನಸ್ಸನ್ನು ಹೊಂದಿ ಜಪಧ್ಯಾನನಿರತನಾಗಿ ಶ್ರೀನಿವಾಸನನ್ನು ಕುರಿತು ಅತ್ಯುಗ್ರವಾದ ತಪಸ್ಸನ್ನಾಚರಿಸಿದನು. ಅದೇ ಸಮಯದಲ್ಲಿಯೇ ಬ್ರಹ್ಮದೇವರಿಂದ ಅನುಶಾಸಿತರಾದ ಅಗಸ್ತ್ಯರು ಒಂದು ನೂರು ಜನ ಶಿಷ್ಯರಿಂದ ಸಮೇತರಾಗಿ ವೇಂಕಟಾಚಲಕ್ಕೆ ಬಂದು ಪಶ್ಚಿಮ ದಿಕ್ಕಿನಿಂದ ಪರ್ವತವನ್ನು ಪ್ರದಕ್ಷಿಣೆ ಮಾಡಬೇಕೆಂದು ನಿಶ್ಚಯಿಸಿ ಬಹುತರವಾದ ತೀರ್ಥಗಳನ್ನು ಸಂದರ್ಶಿಸುತ್ತಾ ಬಹುಕಾಲ ಆ ಪರ್ವತದಲ್ಲಿಯೇ ಸಂಚರಿಸುತ್ತಾ ನಾರಾಯಣನ ದರ್ಶನವನ್ನು ಬಯಸುತ್ತಿದ್ದ ಬ್ರಹ್ಮ, ಸ್ಕಂದ, ಇಂದ್ರ, ವಿಷ್ವಕ್ಸೇನ, ಸನಕಾದಿ ಯೋಗಿಗಳು, ನಾರದಾದಿ ಮಹರ್ಷಿಗಳು, ಸಿದ್ಧ, ಗಂಧರ್ವರು, ದಾನವರು, ಯಕ್ಷರು, ರಾಕ್ಷಸರು, ಇವರೇ ಮೊದಲಾದ ಭಗದ್ಭಕ್ತರನ್ನು ನೋಡಿದನು. ಕುಮಾರಧಾರಾದಿ ಪುಣ್ಯತೀರ್ಥಗಳಲ್ಲಿ ಸ್ನಾನವನ್ನು ಮಾಡಿ ಅಲ್ಲಲ್ಲಿರುವ ಜಗನ್ನಿಯಾಮಕನಾದ

ಪಶ್ಯನ್ನಾಶ್ಚರ್ಯಭೂತಾನಿ ಸರ್ವಾಣಿ ವಿಚಚಾರ ಹ ॥36॥

ಸ್ನಾತ್ವಾ ತೀರ್ಥೇಷು ಸರ್ವೇಷು ಸ್ಕಂಧಧಾರಾದಿಕೇಷು ಚ ।
ತತ್ರ ತತ್ರಾರ್ಚಯಾಮಾಸ ಗೋವಿಂದಂ ಜಗತಾಂ ಪತಿಮ್ ॥37॥

ಏವಂ ಭ್ರಾಂತ್ವಾ ಗತೇಽಬ್ದಾನಾಂ ಸಹಸ್ರೇ ಮುನಿಸತ್ತಮಃ ।
ನಾಪಶ್ಯತ್ಪುಂಡರೀಕಾಕ್ಷಂ ಚಿಂತಾಶೋಕಪರೋಽಭವತ್ ॥38॥

ತಸ್ಮಿನ್ಕಾಲೇ ಸಮಾಜಗ್ಮುರ್ಧಿಷಣೋಶನಸೌ ಪುನಃ ।
ರಾಜೋಪರಿಚರೋ ನಾಮ ವಸುಶ್ಚ ತಮೃಷೀಶ್ವರಮ್ ॥39॥

'ಅಸ್ಮಾಕಂ ಸಫಲಂ ಜಾತಂ ಜೀವಿತಂ ಮುನಿಸತ್ತಮ ।
ದೃಷ್ಟೋ ಭವಾನ್ಯದಸ್ಮಾಭಿರ್ನಾರಾಯಣ ಇವಾಪರಃ ॥40॥

ಬ್ರಹ್ಮಣಾ ಲೋಕನಾಥೇನ ಯದಾದಿಷ್ಟಾ ವಯಂ ಮುನೇ ।
ಅಚ್ಯುತಾಲೋಕನಪರಾಸ್ತದಿದಂ ಕಥ್ಯತೇ ತವ ॥41॥

ಅಸ್ತಿ ದಕ್ಷಿಣದಿಗ್ಭಾಗೇ ವೇಂಕಟೋ ನಾಮ ಭೂಧರಃ ।
ಶ್ವೇತದ್ವೀಪಾದಪಿ ಹರೇರಾವಾಸೋಽಯಮಭೀಪ್ಸಿತಃ ॥42॥

ತಸ್ಮಿನ್ನದ್ರಾವಗಸ್ತ್ಯಸ್ಯ ಶಂಖಸ್ಯ ಚ ಮಹೀಪತೇಃ ।
ದರ್ಶಯಿಷ್ಯತಿ ಗೋವಿಂದೋ ನಿಜರೂಪಂ ಜಗದ್ಗುರುಃ ॥43॥

ತದಾನೀಂ ಸರ್ವದೇವಾನಾಮೃಷೀಣಾಂ ಯಕ್ಷರಕ್ಷಸಾಮ್ ।

ಗೋವಿಂದನನ್ನು ಪೂಜಿಸುತ್ತಾ ಒಂದು ಸಾವಿರ ವರ್ಷಗಳನ್ನು ಕಳೆದರೂ ಸಹ ಭಗವಂತನು ದರ್ಶನವನ್ನು ಕೊಡದಿರಲು ಬಹು ಖಿನ್ನಮನಸ್ಕನಾದನು.

ಅದೇ ಸಮಯದಲ್ಲಿ ಅಗಸ್ತ್ಯರ ಸಮೀಪಕ್ಕೆ ಶುಕ್ರಾಚಾರ್ಯರು, ಬೃಹಸ್ಪತ್ಯಾಚಾರ್ಯರು, ಮತ್ತು ಉಪರಿಚರವಸುವೆಂಬ ರಾಜನು ಬಂದು 'ಹೇ ಅಗಸ್ತ್ಯರೇ! ನಿಮ್ಮನ್ನು ನೋಡಿಯೇ ನಾವು ಪರಮಾತ್ಮನ ದರ್ಶನವನ್ನು ಹೊಂದಿದಂತೆ ಧನ್ಯರಾಗಿರುವೆವು. ಪರಮಾತ್ಮನ ದರ್ಶನವನ್ನು ಬಯಸಿರುವ ನಮಗೆ ಬ್ರಹ್ಮದೇವರು 'ಭೂಮಿಯ ದಕ್ಷಿಣ ಭಾಗದಲ್ಲಿರುವ ವೇಂಕಟಾಚಲವೆಂಬ ಉತ್ತಮ ಪರ್ವತವೊಂದಿದ್ದು ಅದು ಭಗವಂತನಿಗೆ ಶ್ವೇತದ್ವೀಪಕ್ಕಿಂತಲೂ ಹೆಚ್ಚು ಪ್ರಿಯಕರವಾಗಿರುವದು. ಈ ಪರ್ವತದಲ್ಲಿ ತನ್ನ ದರ್ಶನಾಕಾಂಕ್ಷಿಗಳಾದ ಅಗಸ್ತ್ಯಮಹರ್ಷಿ, ಶಂಖರಾಜ ಇವರಿಗೆ ದರ್ಶನವನ್ನು ದಯಪಾಲಿಸುವನು. ಆ ಸಮಯದಲ್ಲಿ ಅಲ್ಲಿರುವ ದೇವಮನುಷ್ಯಾದಿ

ಅಸ್ಮಾಕಂ ದೇವದೇವಸ್ಯ ದರ್ಶನಂ ಸಂಭವಿಷ್ಯತಿ ॥44॥

ಅಚಿರೇಣೈವ ತದ್ಭಾವಿ ತತಃ ಸಂತ್ಯಕ್ತಕಲ್ಮಷಾಃ ।
ಅನ್ವೇಷ್ಟುಂ ಗಚ್ಛತಾಗಸ್ತ್ಯಂ ತಸ್ಮಿನ್ನಾರಾಯಣಾಚಲೇ ॥45॥

ಇತ್ಯಾಜ್ಞಪ್ತಾ ವಯಂ ಧಾತ್ರಾ ಸಮಾಗಮ್ಯಾತ್ರ ಭಾಗ್ಯತಃ ।
ದೃಷ್ಟವಂತೋ ಮಹಾಭಾಗಂ ಭವಂತಂ ಭೂರಿತೇಜಸಮ್ ॥46॥

ಭವತಾ ಸಹಿತಾ ಗತ್ವಾ ಸ್ವಾಮಿಪುಷ್ಕರಿಣೀತಟೇ ।
ತಮಪ್ಯಾಲೋಕಯಿಷ್ಯಾಮಃ ಶಂಖಂ ಭಾಗವತೋತ್ತಮಮ್ ॥47॥

ಭರದ್ವಾಜ ಉವಾಚ–

ಗೀಷ್ಪತಿಪ್ರಮುಖೈರಿತ್ಥಮಾದಿಷ್ಟಃ ಕುಂಭಸಂಭವಃ ।
ಶೋಕಜಾಲಂ ಪರಿತ್ಯಜ್ಯ ಯಯೌ ತೈಃ ಸಹಿತೋ ದ್ರುತಮ್ ॥48॥

ಸ ದದರ್ಶ ಮಹಾವೃಕ್ಷಾನ್ಫಲಪುಷ್ಪಭರಾನತಾನ್ ।
ಪ್ರರೂಢಶಾಖಾನಿಕರಚ್ಛಾಯಾಚ್ಛಾದಿತದಿಕ್ತಟಾನ್ ॥49॥

ಸಿಂಹದಂತಾವಲವ್ಯಾಘ್ರವರಾಹಮಹಿಷಾದಿಕಾನ್ ।
ಮೃಗಾನಾಲೋಕಯಾಮಾಸ ಪಂಥಾನಂ ಚಾಂತರಾಂತರಾ ॥50॥

ತೈಸ್ತದಾನೀಂ ದದೃಶಿರೇ ಸಾನವೋऽಪ್ಯಂಬುಭೃದ್ಭೃತಃ ।
ಸುವರ್ಣರೌಪ್ಯತಾಮ್ರಾದಿಶೋಭಿತಸ್ತತ್ರ ತತ್ರ ತು ॥51॥

ಭಗವದ್ಭಕ್ತರೆಲ್ಲರೂ ಅವನ ದರ್ಶನವನ್ನು ಪಡೆಯುವರು. ನೀವು ಸಹ ಮನಸ್ಸಿನ ದೋಷಗಳನ್ನು ತ್ಯಜಿಸಿ ನಾರಾಯಣಾದ್ರಿಯಲ್ಲಿರುವ ಅಗಸ್ತ್ಯರನ್ನು ಹುಡುಕಿಕೊಂಡಿ ಹೋಗಿರಿ' ಎಂದು ನುಡಿದರು. ಅವರ ಮಾತಿನಂತೆ ನಾವು ನಿಮ್ಮನ್ನು ಹುಡುಕುತ್ತಾ ಬಂದು ನಿಮ್ಮನ್ನು ಇಲ್ಲಿ ನೋಡಿರುವೆವು. ಇನ್ನುಮುಂದೆ ನಿಮ್ಮಿಂದ ಕೂಡಿಕೊಂಡು ಸ್ವಾಮಿಪುಷ್ಕರಿಣಿಯ ಬಳಿಯಿರುವ ಶಂಖರಾಜನ ಬಳಿಗೆ ಹೋಗಿ ಅವನನ್ನು ನೋಡುವೆವು' ಎಂದು ನುಡಿದರು.

ಬೃಹಸ್ಪತ್ಯಾದಿಗಳ ಮಾತನ್ನು ಕೇಳಿ ಅಗಸ್ತ್ಯರು ತಮ್ಮ ಶೋಕವನ್ನು ತ್ಯಜಿಸಿ ಸ್ವಾಮಿಪುಷ್ಕರಿಣಿಯೆಡೆಗೆ ಹೊರಟರು. ಮಾರ್ಗದಲ್ಲಿ ಹಸಿರಿನಿಂದ ಕಂಗೊಳಿಸುವ, ಫಲ ಪುಷ್ಪಗಳಿಂದ ಆಕರ್ಷಕವಾಗಿದ್ದ ತರು, ಲತೆಗಳನ್ನು, ಸ್ವಚ್ಛಂದವಾಗಿ ಸಂಚರಿಸುತ್ತಿದ್ದ ಆನೆ, ಹುಲಿ, ಸಿಂಹ, ಜಿಂಕೆಯೇ ಮೊದಲಾದ ಮೃಗಗಳನ್ನು, ಕರ್ಣಾನಂದಕರವಾಗಿ ಗಾನಮಾಡುತ್ತಿದ್ದ ಪಕ್ಷಿಗಳನ್ನು, ವಾಸನೆಯನ್ನು ಹೊರಸೂಸುತ್ತಿದ್ದ

ಉಚ್ಚಲಚ್ಛೀಕರಾಸಾರನಿರ್ವಾಹಿತದಿವೌಕಸ ।
ವೇಗೋದ್ಧೃತಶಿಲಾ ದೃಷ್ಟಾಃ ತತಶ್ಚ ಗಿರಿನಿರ್ಝರಾಃ ॥52॥

ತೇಷಾಮಾಪಾದಯಾಮಾಸ ಪ್ರಮೋದಂ ಮಂದಮಾರುತಃ ।
ಕಮಲಾಮೋದಸಂವಾಹೀ ವಿಚರನ್ಗಿರಿಸಾನುಷು ॥53॥
ಶುಕಾನಾಂ ಕೋಕಿಲಾನಾಂ ಚ ತದಾ ಶುಶ್ರುವಿರೇ ಗಿರಃ ॥54॥

ತತ್ರ ತತ್ರ ಸಮಾಸೀನಾನ್ ವಿಸ್ತೀರ್ಣಾಸು ದೃಷತ್ಸು ತೇ ।
ಸಿದ್ಧಾನಪಶ್ಯತ್ಕೃಷ್ಣಸ್ಯ ಗಾಯತೋ ಗುಣವೈಭವಮ್ ॥55॥

ಅಗಸ್ತ್ಯಪ್ರಮುಖಾಃ ಸರ್ವೇ ಪರಿಕ್ರಮ್ಯ ಮುನೀಶ್ವರಾಃ ।
ಸ್ವಾಮಿಪುಷ್ಕರಿಣೀಂ ದಿವ್ಯಾಂ ದದೃಶುರ್ವಿಮಲೋದಕಾಮ್ ॥56॥

ತತ್ತೀರೇ ವಿಹಿತಾವಾಸಮಪಶ್ಯನ್ ಶಂಖಭೂಪತಿಮ್ ।
ವಾಙ್ಮನಃಕಾಯಜಂ ಕರ್ಮ ಸನ್ನಿವೇಶ್ಯ ಸ್ಥಿತಂ ಹರೌ ॥57॥

ಸ ತಾನಾಲೋಕ್ಯ ಸಹಸಾ ಮುನೀಂದ್ರಾನ್ ಸಂಶಿತವ್ರತಾನ್ ।
ಯಥೋಕ್ತಮಕರೋತ್ಪೂಜಾಂ ಪ್ರಣಾಮಸ್ತುತಿಪೂರ್ವಿಕಾಮ್ ॥58॥

ಆಸೀನಾಸ್ತತ್ರ ತೇ ಸರ್ವೇ ಸಂಭಾವ್ಯಾನ್ಯೋ ಯಮುತ್ಸುಕಾಃ ।
ಗೋವಿಂದಕೀರ್ತನಪರಾಃ ಕೃತಾರ್ಥತ್ವಂ ಪ್ರಪೇದಿರೇ ॥59॥

ಇತಿ ಸ್ಕಾಂದೇ ಮಹಾಪುರಾಣೇ 'ಶ್ರೀವೇಂಕಟಾಚಲಂ ಪ್ರತಿಶಂಖಾಗಸ್ತ್ಯಾದ್ಯಾಗಮನವರ್ಣನಮ್' ನಾಮ ಸಪ್ತತ್ರಿಂಶೋಽಧ್ಯಾಯಃ ॥37॥

ಕುಸುಮರಾಶಿಗಳನ್ನು, ಕಮಲಗಳಿಂದ, ನೀಲೋತ್ಪಲಗಳಿಂದ ಕಂಗೊಳಿಸುತ್ತಿದ್ದ ನಾನಾವಿಧವಾದ ಪುಣ್ಯತೀರ್ಥಗಳನ್ನು ದರ್ಶಿಸುತ್ತಾ ನಿರ್ಮಲಜಲದಿಂದ ಕೂಡಿದ ಸ್ವಾಮಿಪುಷ್ಕರಿಣಿಯನ್ನು ನೋಡಿದರು. ಅದರ ತೀರಪ್ರದೇಶದಲ್ಲಿ ವಾಸಮಾಡಿ ಮಾನಸಿಕ,ಕಾಯಿಕ, ವಾಚನಿಕ ಕ್ರಿಯೆಗಳನ್ನು ಪರಮಾತ್ಮನಲ್ಲಿಯೇ ಸಮರ್ಪಿಸುತ್ತಿದ್ದ ಶಂಖಚಕ್ರವರ್ತಿಯನ್ನು ಅವರು ನೋಡಿದರು. ನಿಯಮ ವ್ರತಗಳಲ್ಲಿ ನಿರತನಾದ ಶಂಖನು ಮುನಿಶ್ರೇಷ್ಠರನ್ನು ಕಂಡು, ಸಂಭ್ರಮದಿಂದ ಅವರ ಬಳಿ ಬಂದು ನಮಸ್ಕರಿಸಿ, ಸ್ತುತಿಸಿ, ಅವರನ್ನು ಸ್ವಾಗತಿಸಿ, ತನ್ನ ಆಶ್ರಮದಲ್ಲಿ ಅವರನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದನು. ಅಗಸ್ತ್ಯ, ಬೃಹಸ್ಪತಿ, ಶುಕ್ರಾಚಾರ್ಯರು, ಉಪರಿಚರ ವಸು, ಇವರೆಲ್ಲರೂ ಭಗವಂತನ ಗುಣಾನುಕೀರ್ತನದಲ್ಲಿ ನಿರತರಾಗಿ ತಮ್ಮ ಜನ್ಮದ ಸಾರ್ಥಕ್ಯವನ್ನು ಪಡೆದರು.

ಇಲ್ಲಿಗೆ ಮೂವತ್ತೇಳನೆಯ ಅಧ್ಯಾಯವು ಪರಿಸಮಾಪ್ತವಾಯಿತು.

## ಅಥಾಷ್ಟಾತ್ರಿಂಶೋऽಧ್ಯಾಯಃ ॥38॥

[ಸುವರ್ಣಮುಖರೀಮಾಹಾತ್ಮ್ಯ ಪ್ರಶಂಸಾಯಾಮಗಸ್ತ್ಯಶಂಖಾದಿತಪಸ್ತುಷ್ಟ ಶ್ರೀವೇಂಕಟೇಶಾವಿರ್ಭಾವಾದಿ ಮಾಹಾತ್ಮ್ಯವರ್ಣನಮ್]

ಭರದ್ವಾಜ ಉವಾಚ–

ತೇಷಾಂ ಹರೌ ಜಗನ್ನಾಥೇ ಸಮಾವೇಶಿಚೇತಸಾಮ್ ।
ದಿನತ್ರಯಂ ಗತಂ ತತ್ರ ಪೂಜಾಸ್ತೋತ್ರಪರಾತ್ಮನಾಮ್ ॥1॥

ತೃತೀಯೇ ದಿವಸೇ ಪ್ರಾಪ್ತೇ ತೇ ಸರ್ವೇ ನಿದ್ರಿತಾ ನಿಶಿ ।
ಅಂತೇ ಚತುರ್ಥಯಾಮಸ್ಯ ದದೃಶುಃ ಸ್ವಪ್ನಮುತ್ತಮಮ್ ॥2॥

ಶಂಖಚಕ್ರಗದಾಪಾಣಿಂ ಪ್ರಸನ್ನಂ ಪುರುಷೋತ್ತಮಮ್ ।
ವರದಾನಾಯ ಸಂಪ್ರಾಪ್ತಮಪಶ್ಯನ್ಸ್ಮೇರಲೋಚನಮ್ ॥3॥

ಉತ್ಥಾಯ ಮುದಿತಾತ್ಮಾನೋ ಗೃಹಾನ್ನಿರ್ಗತ್ಯ ಪಾವನೇ ।
ಸ್ವಾಮಿಪುಷ್ಕರಿಣೀತೋಯೇ ಸಸ್ನುರ್ವಿಧಿವದಾದರಾತ್ ॥4॥

ವಿಧಾಯ ವಿಧಿವತ್ಕರ್ಮ ಸರ್ವೇ ದಿನಮುಖೋಚಿತಮ್ ।
ಗೃಹಾನ್ಪ್ರತ್ಯಾಯಯುರ್ದೇವಮಾರಾಧಯಿತುಮಚ್ಯುತಮ್ ॥5॥

## ಮೂವತ್ತೆಂಟನೆಯ ಅಧ್ಯಾಯ

[ ಅಗಸ್ತ್ಯ ಶಂಖಾದಿ ತಪಸ್ತುಷ್ಟನಾದ ವೇಂಕಟೇಶನ ಆವಿರ್ಭಾವ ವರ್ಣನ]

ಹೀಗೆ ಸಕಲಭುವನಾಧೀಶ್ವರನಾದ ಭಗವಂತನನ್ನು ತಮ್ಮ ಮನಸ್ಸಿನಲ್ಲಿ ಏಕಾಗ್ರದಿಂದ ಧ್ಯಾನಿಸುತ್ತಾ ಅವನ ಸ್ತೋತ್ರಪೂಜಾದಿಗಳಿಂದ ಮೂರುದಿನಗಳು ಕಳೆದು ಹೋದವು. ಮೂರನೆಯ ದಿನದ ರಾತ್ರಿಯ ಕೊನೆಯ ಯಾಮದಲ್ಲಿ ಅವರು ಶಂಖಚಕ್ರಗದಾಧಾರಿಯಾದ ಪ್ರಸನ್ನನಾದ ಶ್ರೀನಿವಾಸನು ವರಪ್ರದಾನಮಾಡುವದಕ್ಕಾಗಿ ಬಂದಿರುವಂತೆ ಸ್ವಪ್ನವನ್ನು ಕಂಡರು. ಸಂತುಷ್ಟರಾದ ಅವರೆಲ್ಲರೂ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡಿ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗುವ ಸಂದರ್ಭದಲ್ಲಿ

ಸದ್ಯಃ ಶ್ರೇಯಸ್ಕರಂ ಮಾರ್ಗೇ ನಿಮಿತ್ತಂ ಪಕ್ಷಿಸೂಚಿತಮ್ ।
ದೃಷ್ಟ್ವಾ ಪ್ರಸಾದಂ ದೇವಸ್ಯ ಕರಸ್ಥಂ ಮೇನಿರೇ ತದಾ ॥6॥

ತತಸ್ತ್ರಿಲೋಕಕರ್ತಾರಂ ಪೂಜಯಿತ್ವಾ ಜನಾರ್ದನಮ್ ।
ತುಷ್ಟುವುರ್ವಿವಿಧೈಃ ಸ್ತೋತ್ರೈಃ ಪವಿತ್ರೈರ್ವೇದನಿರ್ಮಿತೈಃ ॥7॥

ಸ್ತೋತ್ರಾವಸಾನೇ ಕೌಂತೇಯ ಮುನೀಂದ್ರಃ ಕುಂಭಸಂಭವಃ ।
ಜಜಾಪ ಶಂಖಸಹಿತೋ ಮಂತ್ರಮಷ್ಟಾಕ್ಷರಂ ಹರೇಃ ॥8॥

ಇತ್ಥಂ ತೇಷಾಂ ಜಗತ್ಸ್ವಾಮಿನ್ಯಚ್ಯುತೇಽರ್ಪಿತಚೇತಸಾಮ್ ।
ಅಗ್ರಭಾಗೇ ಪ್ರಾದುರಭೂದೇಕಂ ತೇಜೋ ಮಹಾದ್ಭುತಮ್ ॥9॥

ಅನೇಕಕೋಟಿಸಂಖ್ಯಾನಾಮಾದಿತ್ಯೇಂದುಹವಿರ್ಭುಜಾಮ್ ।
ಏಕೀಭೂಯಾಂಬರತಲೇ ಜ್ಯೋತಿರ್ಜಾಲಮಿವ ಸ್ಥಿತಮ್ ॥10॥

ತತ್ತೇಜೋ ವೀಕ್ಷ್ಯ ತೇ ಸರ್ವೇಽಮಿತಾಂತಾಶ್ಚರ್ಯಗೋಚರಾಃ ।
ದದೃಶುರ್ನಾರಾಯಣಂ ದಿವ್ಯಂ ಪರಮಾನಂದವಿಗ್ರಹಮ್ ॥11॥

ವಾಙ್ಮಾನಸಪಥಾತೀತಂ ವಿಶ್ರುತೈಶ್ವರ್ಯಭಾಸುರಮ್ ।
ಸಹಸ್ರನೇತ್ರಂ ಸಾಹಸ್ರಬಾಹುಪಾದೈಃ ಸಮನ್ವಿತಮ್ ॥12॥

ತಪ್ತಕಾರ್ತಸ್ವರನಿಭಸ್ಫುರತ್ಕಾಂತಿಮನೋಹರಮ್ ।
ದಂಷ್ಟ್ರಾಕರಾಲಂ ದುರ್ದರ್ಶಂ ವಮಂತಂ ದಹನಚ್ಛಟಾಃ ॥13॥

ಪಕ್ಷಿಗಳ ಶಕುನದಿಂದ ಪರಮಾತ್ಮನು ಶೀಘ್ರದಲ್ಲಿ ಅನುಗ್ರಹಿಸುವದನ್ನು ಮನಗಂಡರು; ಆ ಭಗವಂತನನ್ನು ನಾನಾರೀತಿಯಾಗಿ ಸ್ತುತಿಸಿದರು. ಅದೇ ಸಮಯದಲ್ಲಿ ಮುನಿಶ್ರೇಷ್ಠರಾದ ಅಗಸ್ತ್ಯರು ಶಂಖನಿಂದ ಸಹಿತನಾಗಿ ಅಷ್ಟಾಕ್ಷರೀ ಮಂತ್ರವನ್ನು ಜಪಿಸಿದರು. ಆ ಸಮಯದಲ್ಲಿ ಸಾವಿರಾರು ಸೂರ್ಯರ ಕಾಂತಿಯನ್ನು ಮೀರಿದ ತೇಜಸ್ಸೊಂದು ಅಲ್ಲಿ ಪ್ರಾದುರ್ಭೂತವಾಯಿತು. ಆಗ ಅಲ್ಲಿರುವ ಮಹರ್ಷಿಗಳೆಲ್ಲರೂ ನಾರಾಯಣನನ್ನು ಧ್ಯಾನಮಾಡಿದರು. ನಾರಾಯಣನ ಆ ತೇಜಸ್ಸು ವಾಙ್ಮಾನಸಾತೀತವಾಗಿದ್ದಿತು. ಅನಂತ ಬಾಹು, ಪಾದ, ಮುಖಗಳಿಂದ ಕೂಡಿದ್ದ, ಪುಟಕ್ಕಿಟ್ಟ ಬಂಗಾರದಂತೆ ಹೊಳೆಯುತ್ತಿದ್ದ ಶರೀರಕಾಂತಿಯಿಂದ ಯುಕ್ತನಾಗಿದ್ದ, ಕಂಠದಲ್ಲಿ ಕೌಸ್ತುಭ ಮಣಿಯನ್ನು ಧರಿಸಿದ್ದ, ವಕ್ಷಃಸ್ಥಲದಲ್ಲಿ ಲಕ್ಷ್ಮೀಸಮಾಲಿಂಗಿತನಾಗಿದ್ದ, ಮುಖಗಳಿಂದ ಅಗ್ನಿಯನ್ನು ಉಗುಳುತ್ತಿದ್ದ ಆ ಪರಮಾತ್ಮನ ರೂಪವು ನೋಡಲು ಅಸಾಧ್ಯವಾಗಿದ್ದಿತು. ಅಂತಹ

ಕೌಸ್ತುಭೇನ ವಿರಾಜಂತಂ ದಧಾನಮುರಸಿ ಶ್ರಿಯಮ್ ।
ಅವಿಚಿಂತ್ಯಮನಾದ್ಯಂತಮತ್ಯಂತಭಯದಾಯಕಮ್ ॥14॥

ಪ್ರಕಾಶಯಂತಂ ಬ್ರಹ್ಮಾಂಡಂ ಸರ್ವಮಾತ್ಮನಿ ಸರ್ವಗಮ್ ।
ಅಗಸ್ತ್ಯಶಂಖಪ್ರಮುಖಾಸ್ತೇ ಸರ್ವೇ ಹೃಷ್ಟಚೇತಸಃ ॥15॥

ತಮಾಲೋಕ್ಯ ಜಗನ್ನಾಥಂ ಭೂಯೋ ಭೂಯೇ ವವಂದಿರೇ ।
ಭ್ರಮಂತಿ ಲೋಕರಕ್ಷಾರ್ಥಮಾಯುಧಾನಿ ತದಾ ಹರೇಃ ॥16॥

ನಿಜತೇಜೋಬಲೋಪೇತಾನ್ಯಾಜಗ್ಮುಸ್ತಂ ನಿಷೇವಿತುಮ್ ।
ಚಕ್ರಮರ್ಕಪ್ರಭಂ ದಿವ್ಯಾ ಗದಾ ಖಡ್ಗಶ್ಚ ನಂದಕಃ ॥17॥

ಪುಂಡರೀಕಂ ಚೋಗ್ರರವಃ ಪಾಂಚಜನ್ಯಃ ಶಶಿಪ್ರಭಃ ।
ತದಾ ಬ್ರಹ್ಮಾಂಡಮಖಿಲಂ ಪೂರಯಾಮಾಸ ನಿರ್ಭರಃ ॥18॥

ಪಾಂಚಜನ್ಯಸ್ಯ ನಿನದಃ ಸರ್ವಾಸುರಭಯಂಕರಃ ।
ಪಾಂಚಜನ್ಯಧ್ವನಿಂ ಶ್ರುತ್ವಾ ನಿತಾಂತಾಶ್ಚರ್ಯಭೀಷಣಮ್ ॥19॥

ಆಯಯುರ್ದೇವತಾಃ ಸರ್ವಾಃ ಸ್ವಂ ಸ್ವಂ ವಾಹನಮಾಸ್ಥಿತಾಃ ।
ಬ್ರಹ್ಮಾ ರುದ್ರಃ ಶತಮಖಃ ಸನಕಾದ್ಯಾಶ್ಚ ಯೋಗಿನಃ ॥20॥

ವಸಿಷ್ಠಮುಖ್ಯಾ ಮುನಯೋ ಗಂಧರ್ವೋರಗಕಿನ್ನರಾಃ ।

ಸಕಲ ಜಗತ್ತನ್ನು ತನ್ನಲ್ಲಿಯೇ ಧರಿಸಿ ಬ್ರಹ್ಮಾಂಡವನ್ನು ಪ್ರಕಾಶಿಸುತ್ತಿದ್ದ ನಾರಾಯಣನನ್ನು ನೋಡಿ ಅಗಸ್ತ್ಯ, ಶಂಖ ಮೊದಲಾದ ಋಷಿಗಳು ಅತ್ಯಂತ ಸಂತೋಷದಿಂದ ಅವನನ್ನು ಮೇಲಿಂದ ಮೇಲೆ ನಮಸ್ಕರಿಸಿದರು. ಅಲ್ಲಿಯೇ ಗಾಳಿಯಲ್ಲಿ ಸಂಚರಿಸುತ್ತಿದ್ದ ಭಗವಂತನ ಆಯುಧಗಳು ಅವನನ್ನು ಸೇವಿಸಲು ಬಂದವು. ಸೂರ್ಯನಂತೆ ಹೊಳೆಯುತ್ತಿದ್ದ ಸುದರ್ಶನ ಚಕ್ರ, ದಿವ್ಯವಾದ ಕೌಮೋದಕಿ ಗದೆ, ನಂದಕ ಖಡ್ಗ, ಕಮಲ, ಉಗ್ರಧ್ವನಿಯನ್ನುಂಟು ಮಾಡುವ ಚಂದ್ರನನ್ನು ಹೋಲುವ ಪಾಂಚಜನ್ಯ ಶಂಖಗಳು ಅಲ್ಲಿ ಬಂದು ಪರಮಾತ್ಮನನ್ನು ಸೇರಿದವು. ಆಗ ಸಕಲ ರಾಕ್ಷಸರಿಗೂ ಭಯದಾಯಕವಾದ ಸಹಿಸಲಸಾಧ್ಯವಾದ ಪಾಂಚಜನ್ಯದ ಧ್ವನಿಯು ಬ್ರಹ್ಮಾಂಡವೆಲ್ಲವನ್ನು ವ್ಯಾಪಿಸಿತು. ಅದರ ಧ್ವನಿಯನ್ನು ಕೇಳಿದ ಸಪತ್ನೀಕರೂ, ಸಪರಿವಾರರೂ ಆದ ಬ್ರಹ್ಮ ರುದ್ರ ಇಂದ್ರರೇ ಮೊದಲಾದ ದೇವತೆಗಳು, ಸಿದ್ಧ ಕಿನ್ನರ, ಗಂಧರ್ವ, ಚಾರಣರು, ಋಷಿ ಮುನಿಗಳೇ ಮೊದಲಾದವರು ಪುಷ್ಪವೃಷ್ಟಿಯನ್ನು ಮಾಡುತ್ತಾ ಭಗವಂತನಿದ್ದಲ್ಲಿಗೆ ಬಂದು ಅವನನ್ನು ನಮಸ್ಕರಿಸಿ ಬಹುವಿಧವಾಗಿ ಸ್ತೋತ್ರಮಾಡಿದರು.

ವಿಷ್ವಕ್ಸೇನೋ ಗರುತ್ಮಾಂಶ್ಚ ವಿಷ್ಣುಭೃತ್ಯಾ ಜಯಾದಯಃ ॥21॥

ಸೂರಪಾಶ್ಚೈವ ಯೇ ನಿತ್ಯಾಃ ಶ್ವೇತದ್ವೀಪಾನಿವಾಸಿನಃ ।
ಸಮನೋದ್ರುಮಸಂಭೂತಾ ಸುಮನೋವೃಷ್ಟಿರದ್ಭುತಾ ॥22॥

ಪಪಾತ ಮೇದುರಾಮೋದಮೋದಿತಾಶೇಷಮಾನಸಾ ।
ನನೃತುರ್ದಿವ್ಯಸದೃಶೋ ಜಗುಃ ಕಿನ್ನರಪುಂಗವಾಃ ॥23॥

ತುಷ್ಟುವುರ್ಹರ್ಷತರಲಾಃ ಸುರಗಂಧರ್ವಚಾರಣಾಃ ।
ದೃಷ್ಟ್ವಾ ತೇ ಪುಂಡರೀಕಾಕ್ಷಂ ಪ್ರಸನ್ನಂ ಭಕ್ತವತ್ಸಲಮ್ ॥24॥

ಪ್ರಣಮ್ಯ ತೋಷಯಾಮಾಸುಃ ಸಾಷ್ಟಾಂಗಂ ವಿವಿಧೈಸ್ತವೈಃ ॥25॥

ಬ್ರಹ್ಮಾದಯ ಊಚುಃ–

'ಜಯ ವಿಷ್ಣೋ ಕೃಪಾಸಿಂಧೋ ಜಯ ತಾಮರಸೇಕ್ಷಣ ।
ಜಯ ಲೋಕೈಕವರದ ಜಯ ಭಕ್ತಾರ್ತಿಭಂಜನ ॥26॥

ಅನಂತಮಕ್ಷರಂ ಶಾಂತಮವಾಂಗ್ಮಾನಸಗೋಚರಮ್ ।
ಕೋ ವಾ ಭವಂತಂ ಜಾನಾತಿ ಚಿದಾನಂದಮಯಾತ್ಮಕಮ್ ॥27॥

ಅಣೋರಣುತರಂ ಸ್ಥೂಲಾತ್ ಸ್ಥೂಲಂ ಸರ್ವಾಂತರಸ್ಥಿತಮ್ ।
ತ್ವಾಮಾಮನಂತಿ ಪುರುಷಂ ಪ್ರಕೃತೇಃ ಪರಮಚ್ಯುತಮ್ ॥28॥

ವೇದಾಂತಸಾರರೂಪಂ ತ್ವಾಂ ಸರ್ವಾಂತರ್ಬಾಹ್ಯವರ್ತಿನಮ್ ।
ಕೋ ಹಿ ವರ್ಣಯಿತುಂ ಶಕ್ತೋ ಮಾಯಾಯತ್ತೇಷು ದೇಹಿಷು ॥29॥

ಭವದೀಯಮಿದಂ ರೂಪಂ ದೃಷ್ಟ್ವಾಽತಿಭಯದಾಯಕಮ್ ।

'ಹೇ ಭಗವಂತನೇ! ವಿಷ್ಣುವೇ! ನಿನಗೆ ಜಯವಾಗಲಿ. ಕರುಣಾನಿಧಿಯೇ! ಕಮಲದಲನಯನನೇ ನೀನು ಯಾವಗಲೂ ಉತ್ಕೃಷ್ಟನಾಗಿರುವಿ. ಭಕ್ತಜನದುಃಖನಾಶಕನೇ! ಲೋಕಾನುಗ್ರಹಕಾರಕನೇ! ನಿನಗೆ ಜಯವಾಗಲಿ. ಅಪ್ರಾಕೃತ ಅನಂತಕಲ್ಯಾಣ ಗುಣಪರಿಪೂರ್ಣನೂ, ದೇಶತಃ ಕಾಲತಃ ಗುಣತಃ ಪರಿಮಿತಿ ಶೂನ್ಯನೂ, ಪ್ರಕೃತಿಗಿಂತಲೂ ಶ್ರೇಷ್ಠನೂ, ಅಣುವಿನಲ್ಲಿ ಅಣುವಾಗಿಯೂ, ಮಹತ್ತಿಗಿಂತಲೂ ಮಹತ್ತಮವಾಗಿರುವ, ಸರ್ವವ್ಯಾಪಿಯಾದ ಹೇ ಭಗವಂತನೇ! ನಿನ್ನನ್ನು ಯಾರು ತಾನೇ ತಿಳಿದಾರು? ಅನಂತವೇದವೇದಾಂತಗಳಿಂದ ಸಾಕಲ್ಯೇನ ಅಜ್ಞೇಯನು ಮುಖ್ಯತಃ ಪ್ರತಿಪಾದ್ಯನೂ ಆದ ನಿನ್ನನ್ನು ಯಾರು ತಾನೇ ವರ್ಣಿಸಲು ಸಾಧ್ಯ ನಿನ್ನ ಈ ರೂಪವನ್ನು

ಭಯೋದ್ವಿಗ್ನಾ ವಯಂ ಸರ್ವೇ ಶಾಂತಂ ರೂಪಂ ಭಜಸ್ವ ಹ' ॥30॥

ಭರದ್ವಾಜ ಉವಾಚ–

ಇತಿ ಸ್ತುತೋ ವಿರಿಂಚಾದ್ಯೈಃ ಪ್ರಸನ್ನೋ ಗರುಡಧ್ವಜಃ ।
ಮೇಘಘೋಷಪ್ರತಿಮಯಾ ವಾಚಾ ಸಾದರಮಬ್ರವೀತ್ ॥31॥

'ಭಯಾವಹಾಮಿಮಾಂ ಮೂರ್ತಿಮುತ್ಸೃಜ್ಯಾಹಂ ಪ್ರಿಯಾವಹಮ್ ।
ಶಾಂತಂ ರೂಪಂ ಭಜಿಷ್ಯಾಮಿ ಮಾಂ ಪಶ್ಯತ ನಿರಾಕುಲಾಃ' ॥32॥

ಇತ್ಯುಕ್ತ್ವಾಂತರ್ಹಿತೋ ಭೂತ್ವಾ ತಸ್ಮಿನ್ನೇವ ಕ್ಷಣಾಂತರೇ ।
ವಿಮಾನೇ ರತ್ನಖಚಿತೇ ಬಭೂವ ಸುಖದರ್ಶನಃ ॥33॥

ಚಂದ್ರಬಿಂಬಾನನಃ ಶಾಂತೋ ನೀಲೋತ್ಪಲದಲದ್ಯುತಿಃ ।
ಸುವರ್ಣವರ್ಣವಸನೋ ರತ್ನಭೂಷಣಭೂಷಿತಃ ॥34॥

ಶಂಖಚಕ್ರದಗಾಪದ್ಮಲಸತ್ಕರಚತುಷ್ಟಯಃ ।
ತಮಾಲೋಕ್ಯ ರಮಾಕಾಂತಂ ಭೂಯೋ ಭೂಯೋ ವವಂದಿರೇ ॥35॥

ತಂ ತೋಷಯಿತ್ವಾ ಬ್ರಹ್ಮಾದೀನಭೀಷ್ಟಪ್ರತಿಪಾದನೈಃ ।
ಅವೋಚದ್ವಿನಯಾನಮ್ರಗಸ್ತ್ಯಂ ಮುನಿಪುಂಗವಮ್ ॥36॥

ಶ್ರೀಭಗವಾನುವಾಚ–

'ತ್ವಂ ಮುನೀಂದ್ರ ವ್ರತೈರ್ಘೋರೈಶ್ಚೀರ್ಣೈರ್ಮಾಂ ಪ್ರತಿ ಸಂಪ್ರತಿ ।
ಪರಿಕ್ಲಿಷ್ಟೋಽಸಿ ದಾಸ್ಯಾಮಿ ವರಾಂಸ್ತೇಽಭೀಪ್ಸಿತಾನ್ ವದ ॥37॥

ನಿಶಮ್ಯ ವಾಕ್ಯಂ ಶ್ರೀಭರ್ತುಃ ಪ್ರಣಮ್ಯ ಚ ಪುನಃ ಪುನಃ ।

ನಾವೆಲ್ಲರೂ ಭಯಗ್ರಸ್ತರಾಗಿರುವೆವು. ನಮ್ಮನ್ನನುಗ್ರಹಿಸಲು ಶಾಂತರೂಪವನ್ನು ಸ್ವೀಕರಿಸು' ಎಂದು ನುಡಿದರು.

ಆಗ ಭಗವಂತನು 'ನಿಮಗೆ ಭಯವನ್ನುಂಟುಮಾಡುವ ಈ ರೂಪವನ್ನು ಬಿಟ್ಟು ನಿಮಗೆ ಸುಖವೀಯುವ ಸೌಮ್ಯರೂಪವನ್ನು ಸ್ವೀಕರಿಸುವೆನು. ನೋಡಿರಿ' ಎಂದು ನುಡಿದು ಅದೃಶ್ಯನಾಗಿ ನಂತರ ಅದೇ ಕ್ಷಣದಲ್ಲಿಯೇ ರತ್ನಖಚಿತವಾದ ವಿಮಾನದಲ್ಲಿ, ಚಂದ್ರನಂತೆ ಸುಂದರವಾದ ಮುಖವನ್ನು ಹೊಂದಿದ, ಶಾಂತನಾದ, ಕುಮುದದಂತೆ ನೀಲವರ್ಣದ ಕಾಂತಿಯಿಂದ ಕಂಗೊಳಿಸುತ್ತಿದ್ದ ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿದ್ದ ಲೋಕವಿಲಕ್ಷಣವಾದ

ಸ ರೋಮಾಂಚಿತಸರ್ವಾಂಗಃ ಕುಂಭಜನ್ಮಾ ವಚೋಽಬ್ರವೀತ್ ॥38॥

ಅಗಸ್ತ್ಯ ಉವಾಚ-

'ಯದ್ಧುತಂ ಯತ್ತಪಸ್ತಪ್ತಂ ಯದಧೀತಂ ಶ್ರುತಂ ಮಯಾ ।
ತತ್ಸರ್ವಂ ಸಫಲಂ ಜಾತಮಾದ್ಯತೋಽಸ್ಮಿ ಯತಸ್ತ್ವಯಾ ॥39॥

ಏಷೋಽಹಮೇವ ಧರ್ಮಾತ್ಮಾ ತ್ರಿಷು ಲೋಕೇಷ್ವಪಿ ಪ್ರಭೋ ।
ತ್ವಾಂ ವಿಚಿನ್ವಂತಮಧುನಾ ಮಾಮನ್ವಿಷ್ಯಾಗತೋಽಸಿ ಯತ್ ॥40॥

ತ್ವತ್ಪ್ರಸಾದಾತ್ಪುರೈವಾಹಂ ಪ್ರಾಪ್ತಾಖಿಲಮನೋರಥಃ ।
ನ ಪಶ್ಯಾಮಿ ವಿಚಿಂತ್ಯಾಪಿ ಪ್ರಾಪ್ಯಂ ಸಂಪ್ರತಿ ಮಾಧವ ॥41॥

ತಥಾಪಿ ಚಾಪಲಾದೇತತ್ತವ ವಿಜ್ಞಾಪ್ಯತೇ ಪ್ರಭೋ ।
ತ್ವತ್ಪಾದಾಂಬುಜಯೋರ್ಭಕ್ತಿಂ ಏವಂ ಕುರು ನಿರಂತರಮ್ ॥42॥

ಅವಧಾರಯ ಚೈತತ್ತ್ವಂ ಸುರಪ್ರಾರ್ಥನಯಾ ಮಯಾ ।
ನದೀ ಸುವರ್ಣಮುಖರೀ ಸ್ನಾತಾಘೌಘವಿನಾಶಿನೀ ॥43॥

ಸಮ್ಮೋಹಕರೂಪವನ್ನು ಧರಿಸಿ ಮುನಿಗಳೆದರು ಪ್ರತ್ಯಕ್ಷನಾದನು. ಇದನ್ನು ನೋಡಿದ ಬ್ರಹ್ಮಾದಿ ದೇವತೆಗಳು, ಋಷಿಮುನಿಗಳು ಅವನನ್ನು ಪುನಃ ಪುನಃ ಸ್ತೋತ್ರಮಾಡುತ್ತಾ ಬಹುವಾಗಿ ವಂದಿಸಿದರು.

ಅನಂತರ ಭಗವಂತನನ್ನು ಅಗಸ್ತ್ಯರನ್ನು ಕುರಿತು 'ನನ್ನನ್ನು ಕುರಿತು ನೀನು ಮಾಡಿದ ಬಹುತರ ಶರೀರ ಕ್ಲೇಶ ಸಾಧ್ಯವಾದ ತಪಸ್ಸಿನಿಂದ ನಾನು ಪರಿತುಷ್ಟನಾಗಿರುವೆನು. ನಿನಗೇನು ಬೇಕು, ಅದನ್ನು ತಿಳಿಸು' ಎಂದು ನುಡಿದರು.

ಆಗ ಅಗಸ್ತ್ಯಮಹರ್ಷಿಗಳು 'ನಾನು ಮಾಡಿದ ಯಜ್ಞ, ದಾನ, ತಪಸ್ಸು ಮೊದಲಾದ ಸತ್ಕ್ರಿಯೆಗಳೆಲ್ಲವು ನಿನ್ನ ದರುಶನದಿಂದ ಇಂದು ಸಫಲವೆಂದು ತಿಳಿಯುತ್ತೇನೆ. ನಿನ್ನನ್ನು ಹುಡುಕುತ್ತಾ ಅಲೆಯುತ್ತಿದ್ದ ನನ್ನನ್ನು ಇಂದು ನೀನೇ ಹುಡುಕಿಕೊಂಡು ಬಂದು ಅನುಗ್ರಹಿಸುವಿಯೆಂದರೆ ನಾನು ಅತ್ಯಂತ ಕೃತಾರ್ಥನಾಗಿರುವೆನು. ಪೂರ್ವದಲ್ಲಿ ನಿನ್ನಿಂದ ಸಕಲಾನುಗ್ರಹವನ್ನು ಪಡೆದ ನಾನು ಪ್ರಯತ್ನ ಪೂರ್ವಕವಾಗಿ ವಿಚಾರಿಸಿದರೂ ಸಹ ಇಂದು ಯಾವದೇ ಬಯಕೆಯನ್ನು ಹೊಂದಿರುವದಿಲ್ಲ. ಆದರೂ ಸಹ ಬುದ್ಧಿಚಾಪಲ್ಯದಿಂದ ನಿನ್ನನ್ನು ನಾನು ಬೇಡಿಕೊಳ್ಳುವೆನು. ಹೇ ಸ್ವಾಮಿಯೇ! ನಿನ್ನ ಪಾದಾಂಬುಜಗಳಲ್ಲಿ ನನಗೆ ಯಾವಾಗಲೂ ಭಕ್ತಿಯಿರಲಿ. ಈ ಸುವರ್ಣಮುಖರೀ ನದಿಯು ಸ್ನಾನಮಾತ್ರದಿಂದ ಎಲ್ಲರ ಪಾಪಗಳನ್ನು ಕಳೆಯುವಂತೆ ಅನುಗ್ರಹಿಸಿ

ಸಾ ಭವಚ್ಛೈಲಕಟಕಸಮಾಸನ್ನಾ ಸಮಾಗತಾ ।
ತಾಂ ಕೃತಾರ್ಥಯ ಲೋಕೇಶ ತ್ವದನುಗ್ರಹವೃತ್ತಿಭಿಃ ॥44॥

ಸುವರ್ಣಮುಖರೀತೋಯೇ ಸ್ನಾತ್ವಾ ಯೇ ವೇಂಕಟೇ ಸ್ಥಿತಮ್ ।
ಪಶ್ಯಂತಿ ಭುಕ್ತಿಮುಕ್ತ್ಯೋಸ್ತು ಭೂಯಾಸುರ್ಭಾಜನಾನಿ ತೇ ॥45॥

ಅಲ್ಪಾಯುಷೋ ನರಾ ಮುಢಾ ಜ್ಞಾನಯೋಗಪರಿಚ್ಯುತಾಃ ।
ನ ಶಕ್ನುವಂತಿ ತ್ವಾಂ ದ್ರಷ್ಟುಂ ವ್ರತಾಧ್ಯಯನಕರ್ಮಭಿಃ ॥46॥

ಸದಾಸ್ಮಿನ್ನಾಸ್ಥಿತಃ ಶೈಲೇ ಸರ್ವೇಷಾಂ ಚ ಜಗದ್ಗುರೋ ।
ಪ್ರಸಾದಸುಮುಖೋ ದೇವ ಕಾಂಕ್ಷಿತಾರ್ಥಪ್ರದೋ ಭವ' ॥47॥

ಶ್ರೀ ಭಗವಾನುವಾಚ–

'ಯತ್ಪ್ರಾರ್ಥಿತಂ ತ್ವಯಾ ವಿಪ್ರ ತತ್ತಥೈವ ಭವಿಷ್ಯತಿ ।
ನೂನಮಪ್ರತಿಮಾ ಲೋಕೇ ಮಯಿ ಭಕ್ತಿಃ ಕೃತಾ ತ್ವಯಾ ॥48॥

ಜಾಹ್ನವೀವ ನದೀ ಸೇಯಂ ಸುವರ್ಣಮುಖರೀ ಮುನೇ ।
ಸ್ಯಾದಾಶಾಽಸ್ಯ ಸುರಾಣಾಂ ಚ ವಾಂಛಿತಶ್ರೀವಿಧಾಯಿನೀ ॥49॥

ಸ್ವಾಮಿಪುಷ್ಕರಿಣೀ ಚೇಯಂ ನದೀಮೂರ್ತ್ಯಾ ಸಮನ್ವಿತಾ ।
ಸಂಕ್ರಮಿಷ್ಯತಿ ತಾಂ ದಿವ್ಯಾಂ ನದೀಂ ತೀರ್ಥೌಘಸಂಶ್ರಯಾಮ್ ॥50॥

ವೈಕುಂಠನಾಮ್ನಿ ಶೈಲೇಽಸ್ಮಿನ್ನದ್ಯಪ್ರಭೃತಿ ಸರ್ವದಾ ।

ಅವಳನ್ನು ಕೃತಕೃತ್ಯಳನ್ನಾಗಿ ಮಾಡು. ಸುವರ್ಣ ಮುಖರೀ ನೀರಿನಲ್ಲಿ ಯಾರು ಸ್ನಾನವನ್ನು ಮಾಡಿ, ವೇಂಕಟಾಚಲದಲ್ಲಿ ನಿಂತಿರುವ ನಿನ್ನನ್ನು ಸಂದರ್ಶಿರುವರೋ ಅವರು ಭುಕ್ತಿ–ಮುಕ್ತಿಗಳನ್ನು ಹೊಂದುವರೆಂದು ಅನುಗ್ರಹಿಸು. ಅಲ್ಪಾಯುಷಿಗಳೂ, ಮೂಢರೂ, ಜ್ಞಾನಯೋಗಭ್ರಷ್ಟರೂ, ಸಾಂಗವಾದ ವ್ರತಾಧ್ಯಯನಾದಿ ಸತ್ಕರ್ಮಗಳನ್ನು ಅನುಷ್ಠಾನಿಸದ ಮನುಷ್ಯರು ನಿನ್ನನ್ನು ನೋಡಲಸಮರ್ಥರಾಗಿರುವರು. ಆದ್ದರಿಂದ ಹೇ ಹರಿಯೇ! ಈ ಪರ್ವತದಲ್ಲಿ ಪ್ರತ್ಯಕ್ಷವಾಗಿ ಸನ್ನಿಹಿತನಾಗಿ ಸಕಲರಿಗೂ ಪ್ರಸನ್ನವಾದ ನಿನ್ನ ರೂಪವನ್ನು ತೋರುತ್ತಾ ಅವರ ಇಷ್ಟಾರ್ಥಗಳನ್ನು ನೆರವೇರಿಸಿಕೊಡು' ಎಂದು ಪ್ರಾರ್ಥಿಸಿದರು. ಆಗ ಭಗವಂತನು 'ಹೇ ಅಗಸ್ತ್ಯಮಹರ್ಷಿಯೇ! ನೀನು ಕೇಳಿದಂತೆಯೇ ಆಗುವದು. ಈ ಸುವರ್ಣಮುಖರೀ ನದಿಯು ಗಂಗೆಯಂತೆ ದೇವತೆಗಳಿಂದಲೂ ಸಹ ಸಂಸೇವಿತವಾಗುವದು. ಸ್ವಾಮಿಪುಷ್ಕರಿಣಿಯೇ ನದಿಯ ರೂಪದಿಂದ ಪ್ರವಹಿಸಿ, ಈ ನದಿಯನ್ನು ಬಂದು ಸೇರುವದು. ನಿನ್ನ ಪ್ರಾರ್ಥನೆಯಂತೆ ಇಂದಿನಿಂದ ನಾನು

ಕೃತಾವಾಸೋ ಭವಿಷ್ಯಾಮಿ ಮುನೇ ಪ್ರಾರ್ಥನಯಾ ತವ ॥51॥

ಸುವರ್ಣಮುಖರೀಸ್ನಾನಕ್ಷಾಲಿತಾಘೌಘಕರ್ದಮಾಃ ।
ಅಸ್ಮಿನ್ವೈಕುಂಠಶೈಲೇ ಮಾಂ ಯೇ ಪಶ್ಯಂತಿ ಸಮಾಹಿತಾಃ ॥52॥

ಭುವಿ ಪುತ್ರಾದಿಸಂಪನ್ನಾಃ ಸರ್ವೈಶ್ವರ್ಯಸಮನ್ವಿತಾಃ ।
ಮೃತಾಸ್ತ್ರಿವಿಷ್ಟಪೇ ಭೋಗಾನಾಕಲ್ಪಮನುಭೂಯ ಚ ॥53॥

ಪುನರಾವೃತ್ತಿರಹಿತಂ ಕೇವಲಾನಂದಭಾಸುರಮ್ ।
ಮತ್ಪದಂ ಸಮವಾಪ್ಸ್ಯಂತಿ ನಾತ್ರ ಕಾರ್ಯಾ ವಿಚಾರಣಾ ॥54॥

ಮಾಂ ದ್ರಷ್ಟುಮಾಗತಾನ್ಸರ್ವಾನ್ಪ್ರತೀಕ್ಷ್ಯಾಭೀಪ್ಸಿತೈಃ ಶುಭೈಃ ।
ಯೋಜಯಿಷ್ಯಾಮಿ ಸತತಂ ತ್ವದ್ವಚೋಗೌರವಾನ್ಮುನೇ ॥55॥

ಪುತ್ರಾರ್ಥಿನಾಂ ಬಹೂನ್ಪುತ್ರಾನ್ ಧನಾನಿ ಚ ಧನಾರ್ಥಿನಾಮ್ ।
ತಥೈವಾರೋಗ್ಯಕಾಮಾನಾಂ ರೋಗಶಾಂತಿಂ ಗರೀಯಸೀಮ್ ॥56॥

ತೀವ್ರಾಪತ್ಪರಿಭೂತಾನಾಂ ತಥೈವಾಪನ್ನಿವಾರಣಮ್ ।
ದಾಸ್ಯಾಮ್ಯಭೀಪ್ಸಿತಾನ್ಭೋಗಾನ್ ದುರ್ಲಭಾನಪಿ ಸರ್ವದಾ ॥57॥

ಯೇ ಯಾನ್ಕಾಮಾನಪೇಕ್ಷ್ಯೇಹ ಪ್ರೇಕ್ಷಂತೇ ಮಾಂ ಸಮಾಗತಾಃ ।
ಅವಾಪ್ನುವಂತಿ ತೇ ಸರ್ವೇ ತಾಂಸ್ತಾನ್ಕಾಮಾನ್ನ ಸಂಶಯಃ ॥58॥

ವೈಕುಂಠಸದೃಶವಾದ ಈ ಪರ್ವತದಲ್ಲಿ ಶಾಶ್ವತವಾಗಿ ವಾಸಮಾಡುವೆನು. ಯಾರು ಸುವರ್ಣ ಮುಖರಿ ನದಿಯ ಸ್ನಾನದಿಂದ ತಮ್ಮೆಲ್ಲ ಪಾಪಕರ್ಮಗಳನ್ನು ಕಳೆದುಕೊಂಡು ಸಮಾಹಿತ ಮನಸ್ಕರಾಗಿ ನನ್ನನ್ನು ದರ್ಶಿಸುವರೋ ಅವರಿಗೆ ಈ ಜನ್ಮದಲ್ಲಿ ಪುತ್ರಪೌತ್ರಧನಧಾನ್ಯಾದಿ ಸಮೃದ್ಧಿಯನ್ನು ಹೊಂದಿ, ದೇಹಾವಸಾನದಲ್ಲಿ ಸ್ವರ್ಗಲೋಕವನ್ನು ಹೊಂದಿ ಅಲ್ಲಿ ಅಪರಿಮಿತವಾದ ಸುಖಭೋಗವನ್ನು ಮಾಡಿ ಕೊನೆಗೆ ಪುನರಾವೃತ್ತಿರಹಿತವಾದ ಸಹಜಸುಖಸ್ವರೂಪವಾದ ನನ್ನ ಲೋಕವಾದ ವೈಕುಂಠವನ್ನು ಹೊಂದುವನು. ಇದರಲ್ಲಿ ಯಾವ ಸಂಶಯವೂ ಬೇಡ. ನಿನ್ನ ಮಾತಿನಂತೆ, ಹೇ ಮುನಿಯೇ! ಯಾರು ನನ್ನನ್ನು ಸಂದರ್ಶಿಸಲು ಬರುವರೋ ಅವರನ್ನು ಆದರದಿಂದ ಕಾಣುತ್ತಾ ನಾನು ಯಾವಾಗಲೂ ಅವರ ಮನದಭೀಷ್ಟಗಳನ್ನು ಪೂರೈಸುತ್ತಾ ಮಂಗಳವನ್ನುಂಟುಮಾಡುವೆನು. ಸಂತಾನವನ್ನು ಬಯಸುವವರಿಗೆ ಪುತ್ರ ಪೌತ್ರಾದಿ ಸಂತತಿಯನ್ನು, ಧನಕಾಮರಿಗೆ ಯಥೇಚ್ಛವಾದ ಧನವನ್ನು, ಆರೋಗ್ಯವನ್ನು ಬಯಸುವವರಿಗೆ ರೋಗೋಪಶಮನ ವನ್ನು ಕಷ್ಟದಲ್ಲಿರುವವರ ತಾಪತ್ರಯಗಳನ್ನು ನಿವಾರಿಸಿ ಸಂಪತ್ಪ್ರಾಪ್ತಿಯ ಉಪಾಯವನ್ನು ನಾನು

ಸ್ಥಿತ್ವಾ ವಾ ಯತ್ರ ಕುತ್ರಾಪಿ ಮಾಂ ಸ್ಮರಂತಿ ನರೋತ್ತಮಾಃ ।
ತೇ ಸರ್ವೇ ವಾಂಛಿತಾಂ ಸಿದ್ಧಿಂ ಲಭಂತೇ ಮತ್ಪ್ರಸಾದತಃ' ॥59॥

ಭರದ್ವಾಜ ಉವಾಚ–

ಇತ್ಯುಕ್ತ್ವಾ ತಂ ಮುನಿಂ ದೇವಃ ಶಂಖಮಾಲೋಕ್ಯ ಭೂಪತಿಮ್।
ಶೃಣ್ವತಾಂ ಬ್ರಹ್ಮಮುಖ್ಯಾನಾಮಿದಂ ವಚನಮಬ್ರವೀತ್ ॥60॥

ಶ್ರೀಭಗವಾನುವಾಚ–

'ಪ್ರೀತೋಽಸ್ಮಿ ಶಂಖ ಭಕ್ತ್ಯಾ ತೇ ವೃಣೀಷ್ವಾಭೀಪ್ಸಿತಂ ವರಮ್ ।
ದದಾಮಿ ವರದೋಽಹಂ ತೇ ಕ್ರಶಿಷ್ಠಸ್ಯ ತಪಸ್ಯತಃ' ॥61॥

ಶಂಖ ಉವಾಚ–

'ನ ಯಾಚೇಽನ್ಯನ್ಮಹಾಬಾಹೋ ತ್ವತ್ಪಾದಾಂಬುಜಸೇವನಾತ್ ।
ಯಾಂ ಪ್ರಾಪ್ನುವಂತಿ ತ್ವದ್ಭಕ್ತಾಸ್ತಾಂ ಯಾಚೇ ಗತಿಮುತ್ತಮಾಮ್' ॥62॥

ಶ್ರೀಭಗವಾನುವಾಚ–

'ಯತ್ಪ್ರಾರ್ಥಿತಂ ತ್ವಯಾ ಶಂಖ ತತ್ತಥೈವ ಭವಿಷ್ಯತಿ ।
ಮತ್ಸೇವಾಯೋಗಭವ್ಯಾನಾಮಲಭ್ಯಂ ಕಿಮು ವಿದ್ಯತೇ ॥63॥

ಅಕಲ್ಪಮಿಂದ್ರಲೋಕಸ್ಥೋ ಹ್ಯಪ್ಸರೋಗಣಸೇವಿತಃ ।

ಅನುಗ್ರಹಿಸುತ್ತಾ ಭಕ್ತರನ್ನು ಪೋಷಿಸುವೆನು. ಒಟ್ಟಿನಲ್ಲಿ ಯಾರು ಏನು ಬಯಸಿ ನನ್ನ ದರ್ಶನಾರ್ಥವಾಗಿ ಆಗಮಿಸುವರೋ ಅವರ ಬಯಕೆಗಳೆಲ್ಲವನ್ನು ಪೂರೈಸಿ ಅವರನ್ನು ಅನುಗ್ರಹಿಸುವೆನು. ಇದರಲ್ಲಿ ಯಾವ ಸಂದೇಹವೂ ಬೇಡ. ನನ್ನ ಭಕ್ತರು ಈ ಲೋಕದಲ್ಲಿ ಎಲ್ಲಿಯೇ ನೆಲೆಸಿರಲಿ ಅವರು ನನ್ನನ್ನು ಸ್ಮರಿಸಿದರೆ ಸಾಕು ಅವರಿಗೆ ನಾನು ಅನುಗ್ರಹಿಸಿ ಅವರ ಅಭಿಮತಗಳನ್ನಿತ್ತು ಉದ್ಧರಿಸುವೆ' ಎಂದು ನುಡಿದನು.

ಅನಂತರ ಶಂಖಮಹಾರಾಜನನ್ನು ಕುರಿತು 'ಹೇ ಶಂಖನೇ! ನಿನಗಪೇಕ್ಷಿತವಾದದ್ದನ್ನು ಬೇಡಿಕೋ' ಎಂದು ನುಡಿದಾಗ ಶಂಖನು 'ನಿನ್ನ ಪಾದಾಂಬುಜಸೇವೆಯನ್ನು ಬಿಟ್ಟು ಬೇರೇನನ್ನೂ ನಾನು ಬಯಸುವದಿಲ್ಲ. ನಿನ್ನ ಭಕ್ತರು ಯಾವ ಗತಿಯನ್ನು ಹೊಂದುವರೋ ಅಂತಹ ಉತ್ತಮವಾದ ಗತಿಯನ್ನು ನನಗೆ ಅನುಗ್ರಹಿಸು' ಎಂದು ಸಂಪ್ರಾರ್ಥಿಸಿದನು. ಆಗ ಭಗವಂತನು 'ನೀನೇನು ಬಯಸಿರುವಿಯೋ ಅದು ಆಗಿಯೇ ಆಗುವದು. ನನ್ನ ಸೇವೆಯನ್ನು ಮಾಡುವವರಿಗೆ

ಭುಕ್ತ್ವಾ ಬಹುವಿಧಾನ್ ಭೋಗಾಂಸ್ತತೋ ಮಲ್ಲೋಕಮೇಷ್ಯಸಿ ||64||

ಭರದ್ವಾಜ ಉವಾಚ–

ಏವಂ ದದೌ ವರಾನಿಷ್ಟಾನ್ ಶಂಖಾಯ ಪೃಥಿವೀಪತೇ ।
ನಾರಾಯಣೋ ಜಗದ್ಯೋನಿರ್ಭಜತಾಂ ಕಲ್ಪಭೂರುಹಃ ||65||

ತತೋ ಬ್ರಹ್ಮಾದಿಕಾನ್ಸರ್ವಾನ್ ವಿಸೃಜ್ಯ ಕಮಲೇಕ್ಷಣಃ ।
ಸಂಸ್ತೂಯಮಾನಸ್ತೈರ್ಭಕ್ತ್ಯಾ ತತ್ರೈವಾಂತರ್ದಧೇ ಪ್ರಭುಃ ||66||

ವೇಂಕಟಾದ್ರೇಃ ಪ್ರಭಾವೋಽಯಮಾಖ್ಯಾತೋ ಭವತೇಽರ್ಜುನ ।
ನರಾಃ ಪಾಪೈಃ ಪ್ರಮುಚ್ಯಂತೇ ಶ್ರುತ್ವೇಮಾಂ ಪಾವನೀಂ ಕಥಾಮ್ ||67||

ವಾರಾಹಂ ರೂಪಮುತ್ಸೃಜ್ಯ ಬ್ರಹ್ಮಣಾಽಭ್ಯರ್ಥಿತೋ ಹರಿಃ ।
ಮುಮೋದಾತ್ರಾದ್ಭುತಾಕಾರೋ ಮಾಯಯಾ ಮೋಹಯನ್ ಜಗತ್ ||68||

ಪಶ್ಚಾದಗಸ್ತ್ಯಶಂಖಾಭ್ಯಾಂ ಪ್ರಾರ್ಥಿತಃ ಸುಖದರ್ಶನಮ್ ।
ದದೌ ನಿತಾಂತಸುಭಗಂ ಶಾಂತಂ ಭೋಗಾತ್ಮಕಂ ವಪುಃ ||69||

ನಾರಾಯಣಂ ವೇಂಕಟಾದ್ರಿಂ ಸ್ವಾಮಿಪುಷ್ಕರಿಣೀಂ ತಥಾ ।
ಇಮಾಮಾಖ್ಯಾಂ ಚ ಸಂಸ್ಮೃತ್ಯ ಮುಚ್ಯಂತೇ ಪಾತಕೈರ್ಜನಾಃ ||70||

ದೊರೆಯದಿರುವದಾವದಿದೆ? ಈ ಕಲ್ಪಪೂರ್ತಿಯಾಗಿ ಇಂದ್ರಲೋಕದಲ್ಲಿದ್ದು ಅಪ್ಸರಾದಿಗಳಿಂದ ಕೂಡಿ, ನಾನಾಭೋಗಗಳನ್ನನುಭವಿಸಿ, ಕೊನೆಗೆ ನನ್ನ ಲೋಕವನ್ನು ಹೊಂದುವಿ' ಎಂದು ನುಡಿದನು. ಹೀಗೆ ಭಕ್ತವತ್ಸಲನಾದ ಭಗವಂತನಾದ ಶ್ರೀನಿವಾಸನು ಬ್ರಹ್ಮಾದಿದೇವತೆಗಳಿಂದ ಸ್ತೂಯಮಾನನಾಗಿ, ಅಲ್ಲಿಯೇ ಅಂತರ್ಧಾನನಾದನು.

ಭರದ್ವಾಜರು ನುಡಿಯುತ್ತಾರೆ– 'ಹೀಗೆ ವೇಂಕಟಾಚಲದ ಮಾಹಾತ್ಮ್ಯವು ನನ್ನಿಂದ ಹೇಳಲ್ಪಟ್ಟಿರುವದು. ಈ ಪಾವನತಮವಾದ ಕಥೆಯನ್ನು ಕೇಳುವವನು ಎಲ್ಲ ಪಾಪಗಳಿಂದ ಮೋಚನೆಯನ್ನು ಹೊಂದುವನು. ಬ್ರಹ್ಮಾದಿಗಳಿಂದ ಪ್ರಾರ್ಥಿತನಾದ ಹರಿಯು ಘೋರವಾದ ವರಾಹ ರೂಪವನ್ನು ಬಿಟ್ಟು ತನ್ನ ಮಾಯೆಯಿಂದ ಲೋಕವನ್ನು ಮೋಹಗೊಳಿಸುವವನಾಗಿ ಅದ್ಭುತ ವಿಗ್ರಹನಂತೆ ನಿಂತನು. ಅನಂತರ ಅಗಸ್ತ್ಯ ಶಂಖರು ಪ್ರಾರ್ಥಿಸಲು ಅವರಿಗೆ ಸಕಲ ಸೌಭಾಗ್ಯದಾಯಕವೂ, ಸೌಮ್ಯವೂ ಆನಂದಾತ್ಮಕವೂ ಆದ ತನ್ನ ಸ್ವರೂಪದ ಸುಲಭದರ್ಶನವನ್ನು ಕೊಟ್ಟನು. ನಾರಾಯಣ, ವೇಂಕಟಾಚಲ, ಸ್ವಾಮಿಪುಷ್ಕರಿಣಿ, ಮತ್ತು ಈ ವೃತ್ತಾಂತವನ್ನು ಸ್ಮರಿಸುವವರು

ವೇಂಕಟಾದ್ರಿಸಮಂ ಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ ।
ವೇಂಕಟೇಶಸಮೋ ದೇವೋ ನ ಭೂತೋ ನ ಭವಿಷ್ಯತಿ ॥71॥

ವೇಂಕಟಾದ್ರಿಸಮಂ ಸ್ಥಾನಂ ನ ಭೂತಂ ನ ಭವಿಷ್ಯತಿ ।
ಸ್ವಾಮಿತೀರ್ಥಸರಸ್ತುಲ್ಯಂ ನ ಕುತ್ರಾಪಿ ಚ ವಿದ್ಯತೇ ॥72॥

ಪ್ರಾತುರುತ್ಥಾಯ ಯೇ ನಿತ್ಯಂ ವೇಂಕಟೇಶಂ ಸ್ಮರಂತಿ ವೈ ।
ತೇಷಾಂ ಕರಸ್ಥಾ ಮೋಕ್ಷಶ್ರೀರ್ನಾತ್ರ ಕಾರ್ಯಾ ವಿಚಾರಣಾ ॥73॥

ಸ್ವಾಮಿಪುಷ್ಕರಿಣೀತೀರ್ಥೇ ಸ್ನಾತ್ವಾ ಸರ್ವಾತ್ಮಕಂ ಹರಿಮ್ ।
ಯೇ ವಾ ಪಶ್ಯಂತಿ ನಿಯತಾ ವರಾಹಾಚಲವಾಸಿನಮ್ ॥74॥

ತೇಽಶ್ವಮೇಧಸಹಸ್ರಸ್ಯ ವಾಜಪೇಯಶತಸ್ಯ ಚ ।
ಪ್ರಾಪ್ನುವಂತಿ ಫಲಂ ಪೂರ್ಣಂ ನಾತ್ರ ಕಾರ್ಯಾ ವಿಚಾರಣಾ ॥75॥

ವೇಂಕಟಾಚಲಮಾಹಾತ್ಮ್ಯಂ ಯೇ ಶೃಣ್ವಂತಿ ನರೋತ್ತಮಾಃ ।
ತೇಷಾಂ ಮುಕ್ತಿಶ್ಚ ಭುಕ್ತಿಶ್ಚ ಇಹ ಲೋಕೇ ಪರತ್ರ ಚ ॥76॥

ವೇಂಕಟಾಚಲಮಾಹಾತ್ಮ್ಯಂ ಸಂಕ್ಷಿಪ್ಯ ಕಥಿತಂ ತವ ।
ಅತಃ ಪರಂ ಮಹಾನದ್ಯಾಃ ಪ್ರಭಾವಃ ಕಥ್ಯತೇಽರ್ಜುನ ॥77॥

ಎಲ್ಲ ಪಾಪಗಳಿಂದ ವಿನಿರ್ಮುಕ್ತರಾಗುವರು. ವೇಂಕಟಾಚಲಕ್ಕೆ ಸಮಾನವಾದ ಮತ್ತೊಂದು ಸ್ಥಾನವು ಬ್ರಹ್ಮಾಂಡದಲ್ಲಿ ಎಲ್ಲಿಯೂ ಇರುವದಿಲ್ಲ. ವೇಂಕಟೇಶನಿಗೆ ಸಮಾನನಾದೇವತೆಯು ಹಿಂದಿಲ್ಲ, ಮುಂದೆ ಇರುವದಿಲ್ಲ. ಸ್ವಾಮಿಪುಷ್ಕರಿಣಿಗೆ ಸಮಾನವಾದ ತೀರ್ಥವು ಎಲ್ಲಿಯೂ ಇರುವದಿಲ್ಲ. ಪ್ರಾತಃಕಾಲದಲ್ಲಿ ಯಾರು ವೇಂಕಟೇಶನನ್ನು ಸ್ಮರಿಸುವರೋ ಮುಕ್ತಿಯು ಅವರ ಕೈವಶವಾಗಿರುವದೆಂದು ತಿಳಿಯಬೇಕು. ಇದರಲ್ಲಿ ಯಾವ ಸಂದೇಹವೂ ಬೇಡ. ಸ್ವಾಮಿಪುಷ್ಕರಿಣಿ ಯಲ್ಲಿ ಸ್ನಾನಮಾಡಿ ಅದರ ದಡದಲ್ಲಿರುವ ಭಗವಂತನನ್ನು ಯಾರು ಸಂದರ್ಶಿಸುವರೋ ಅವರು ಸಾವಿರ ಅಶ್ವಮೇಧದ, ನೂರಾರು ವಾಜಪೇಯ ಯಾಗದ ಪೂರ್ಣಫಲವನ್ನು ಹೊಂದುವರು. ಇದರಲ್ಲಿ ಯಾವ ಸಂದೇಹವೂ ಬೇಡ. ವೇಂಕಟಾಚಲದ ಮಾಹಾತ್ಮೆಯನ್ನು ಯಾರು ಭಕ್ತಿಯಿಂದ ಶ್ರವಣಮಾಡುವರೋ ಅವರಿಗೆ ಇಹಲೋಕದಲ್ಲಿ ಭುಕ್ತಿಯೂ (ಸುಖಭೋಗವೂ) ಪರಲೋಕದಲ್ಲಿ ಮುಕ್ತಿಯೂ ಅನಾಯಾಸವಾಗಿ ದೊರೆಯುವದು. ವೇಂಕಟಾಚಲದ ಮಾಹಾತ್ಮ್ಯವನ್ನು ನಿನಗೆ ಸಂಕ್ಷಿಪ್ತವಾಗಿ ಹೇಳಿರುವೆನು. ಇನ್ನು ಮುಂದೆ ಮಹಾನದಿಯ ಮಾಹಾತ್ಮ್ಯವು ಹೇಳಲ್ಪಡುತ್ತದೆ.

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ
ವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ
**'ಸುವರ್ಣಮುಖರೀಮಾಹಾತ್ಮ್ಯಪ್ರಶಂಸಾಯಾಮಗಸ್ತ್ಯಶಂಖಾದಿತಪಸ್ತುಷ್ಟ ಶ್ರೀವೇಂಕಟೇಶಾವಿರ್ಭಾವಾದಿ ಮಾಹಾತ್ಮ್ಯವರ್ಣನಮ್'** ನಾಮಾಷ್ಟತ್ರಿಂಶೋಽಧ್ಯಾಯಃ ॥38॥

* * *

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ **ಸ್ಉವರ್ಣಮುಖರೀ ಮಾಹಾತ್ಮ್ಯಪ್ರಶಂಸನೆಯಲ್ಲಿಯ ವೇಂಕಟೇಶಾವಿರ್ಭಾವಾದಿ** ವರ್ಣನವೆಂಬ ಮೂವತ್ತೆಂಟನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥೈಕೋನಚತ್ವಾರಿಂಶೋಽಧ್ಯಾಯಃ ॥39॥

[ಅಂಜನಾತಪಃಕರಣಪ್ರಕಾರಾದಿವರ್ಣನಮ್]

**ಸೂತ ಉವಾಚ–**

**ಪುತ್ರಹೀನಾಽಂಜನಾ ಪೂರ್ವಂ ದುಃಖಿತಾ ತಪಸಿ ಸ್ಥಿತಾ ।**
**ತಾಂ ದೃಷ್ಟ್ವಾ ಮುನಿಶಾರ್ದೂಲೋ ಮತಂಗೋ ವಿಷ್ಣುತತ್ಪರಃ ॥1॥**

**ಅಂಜನಾಖ್ಯಾಮುವಾಚೇದಮತ್ಯುಗ್ರೇ ತಪಸಿ ಸ್ಥಿತಾಮ್ ॥2॥**

**ಮತಂಗ ಉವಾಚ–**

**'ಸಮುತ್ತಿಷ್ಠಾಂಜನೇ ದೇವಿ ಕಿಮರ್ಥಂ ತಪಸಿ ಸ್ಥಿತಾ ।**
**ವದ ದೇವಿ ಮಹಾಭಾಗೇ ಕಾರ್ಯಂ ತವ ವರಾನನೇ' ॥3॥**

**ಅಂಜನೋವಾಚ–**

**'ಮತಂಗ ಮುನಿಶಾರ್ದೂಲ ವಚನಂ ಮೇ ಶೃಣುಷ್ವ ಹ ।**
**ಪಿತಾ ಮೇ ಕೇಸರೀ ನಾಮ ರಾಕ್ಷಸಃ ಶಿವತತ್ಪರಃ ॥4॥**

**ಶೈವಂ ಘೋರಂ ತಪಶ್ಚಕ್ರೇ ಪುತ್ರಾರ್ಥಂ ತು ಸುದುಷ್ಕರಮ್ ।**
**ಪಾರ್ವತೀಸಹಿತಃ ಶಂಭುರ್ವೃಷಭೋಪರಿ ಸಂಸ್ಥಿತಃ ॥5॥**

## ಮೂವತ್ತೊಂಭತ್ತನೆಯ ಅಧ್ಯಾಯ

[ಅಂಜನಾತಪಃಕರಣಪ್ರಕಾರಾದಿ ವರ್ಣನ]

ಪೂರ್ವದಲ್ಲಿ ಅಂಜನೆಯೆಂಬ ಕಪಿಪತ್ನಿಯು ಮಕ್ಕಳಿರದಿರುವದರಿಂದ ದುಃಖಿತಳಾಗಿ ತಪಸ್ಸಿನಲ್ಲಿ ತೊಡಗಿರುವದನ್ನು ಕಂಡು ಮತಂಗ ಮಹರ್ಷಿಗಳು ಅವಳನ್ನು ಕುರಿತು 'ಯಾಕೆ ತಪಸ್ಸನ್ನಾಚರಿಸುತ್ತಿರುವೆ. ನಿನ್ನ ಮನೋರಥವನ್ನು ತಿಳಿಸು' ಎಂದು ನುಡಿದರು.

ಆಗ ಅಂಜನೆಯು 'ಪೂರ್ವದಲ್ಲಿ ನನ್ನ ತಂದೆಯಾದ ಕೇಸರಿಯೆಂಬ ರಾಕ್ಷಸನು ಮಕ್ಕಳನ್ನು ಪಡೆಯಲು ಶಿವನನ್ನು ಕುರಿತು ಘೋರವಾದ ತಪಸ್ಸನ್ನಾಚರಿಸಿದನು. ಇವನ ತಪಸ್ಸಿಗೆ ಮೆಚ್ಚಿದ ಶಿವನು ಪಾರ್ವತಿಯಿಂದ ಸಹಿತನಾಗಿ ನಂದಿಯನ್ನೇರಿಕೊಂಡು ಪ್ರಾದುರ್ಭೂತನಾಗಿ 'ಹೇ

ಪ್ರಾದುರಾಸೀತ್ತದಾ ದೇವೋ ದದೌ ತಸ್ಮೈ ವರಂ ಶುಭಮ್ ॥6॥

ಶಂಭುರುವಾಚ–

'ಶೃಣು ರಾಜನ್ ಪ್ರವಕ್ಷ್ಯಾಮಿ ವಿಧಿನಾ ನಿರ್ಮಿತಂ ತವ ।
ಅಸ್ಮಿನ್ ಜನ್ಮನ್ಯಪುತ್ರತ್ವಂ ತಥಾಽಪ್ಯನ್ಯದ್ದದಾಮಿ ತೇ ॥7॥

ವಿಶ್ರುತಾ ಸರ್ವಲೇಕೇಷು ಪುತ್ರೀ ತವ ಭವಿಷ್ಯತಿ ।
ತಸ್ಯಾಃ ಪುತ್ರೋ ಮಹಾಬಾಹುಸ್ತವ ಪ್ರೀತಿಂ ಕರಿಷ್ಯತಿ' ॥8॥

ಇತಿ ತಸ್ಮೈ ವರಂ ದತ್ತ್ವಾ ತತ್ರೈವಾಂತರ್ದಧೇ ಹರಃ ।
ಮಾಂ ಲಬ್ಧ್ವಾ ಮತ್ಪಿತಾ ವಿಪ್ರ ಕೃತಕೃತ್ಯೋ ಬಭೂವ ಹ ॥9॥

ತತಃ ಕಾಲಾಂತರೇ ವಿಪ್ರ ಕೇಸರ್ಯಾಖ್ಯೋ ಮಹಾಕಪಿಃ ।
ಯಯಾಚೇ ಮಾಂ 'ದದಸ್ವೇ'ತಿ ಪಿತರಂ ಮೇ ತತಃ ಪಿತಾ ॥10॥

ತಸ್ಮೈ ಮಾಂ ದತ್ತವಾಂಶ್ಚೈವ ಪಾರಿಬರ್ಹಂ ದದೌ ಚ ಸಃ ।
ಗವಾಂ ಲಕ್ಷಸಹಸ್ರಾಣಿ ಗಜಲಕ್ಷಂ ಮಹಾಮನಾಃ ॥11॥

ವಾಜೀನಾಮರ್ಬುದಂ ಚೈವ ರಥಾನಾಮರ್ಬುದಂ ತಥಾ ।
ವಸ್ತ್ರರತ್ನಾನ್ಯನೇಕಾನಿ ದಾಸದಾಸೀ ಸಹಸ್ರಕಮ್ ॥12॥

ಅಂತಃಪುರಚರೀರ್ನಾರೀರ್ನೃತ್ಯಗೀತವಿಶಾರದಾಃ ।
ದದೌ ವಾಸಸ್ಸಹಸ್ರಂ ಚ ಮಯಾ ಸಾಕಂ ಮಹಾಮತೇ ॥13॥

ಪತ್ಯಾ ಮೇ ರಮಮಾಣಾಯಾ ಭೂಯಾನ್ಕಾಲೋ ಗತೋ ಮುನೇ ।

ರಾಕ್ಷಸನೇ! ಈ ಜನ್ಮದಲ್ಲಿ ನಿನಗೆ ಮಕ್ಕಳಾಗುವದಿಲ್ಲವೆಂಬುದು ವಿಧಿಲಿಖಿತವಾಗಿರುವದು. ಆದರೂ ಸಹ ನನ್ನ ಅನುಗ್ರಹದಿಂದ ಸರ್ವಲೋಕಗಳಲ್ಲಿ ಖ್ಯಾತಳಾಗುವ ಮಗಳೊಬ್ಬಳು ನಿನಗೆ ಹುಟ್ಟುವಳು. ಅವಳ ಮಗನು ನಿನಗೆ ಪ್ರಿಯವನ್ನುಂಟುಮಾಡುವನು' ಎಂದು ವರವನ್ನನುಗ್ರಹಿಸಿ ಅಂತರ್ಧಾನನಾದನು. ಇದರಿಂದ ನನ್ನ ತಂದೆಯು ಸಂತುಷ್ಟನಾಗಿ ಕೃತಾರ್ಥನಾದೆನೆಂದು ತಿಳಿದನು. ಕೆಲ ಕಾಲಾನಂತರದಲ್ಲಿ ಕೇಸರಿಯೆಂಬ ಮಹಾಕಪಿಯು ನನ್ನ ತಂದೆಯ ಬಳಿ ಬಂದು ನನ್ನನ್ನು ತನಗೆ ವಿವಾಹ ಮಾಡಿ ಕೊಡು ಎಂದು ಕೇಳಿದನು. ಆಗ ನನ್ನ ತಂದೆಯು ಅನೇಕ ಸಂಖ್ಯಾಕಗಳಾದ ಗೋವುಗಳು, ಆನೆಗಳು, ಕುದುರೆ, ಆನೆ, ರತ್ನಗಳು, ದಾಸದಾಸಿಯರು, ನೃತ್ಯಗೀತಾದಿ ಪರಿಣಿತರಾದ ದಾಸದಾಸಿಯರನ್ನು, ಅಸಂಖ್ಯವಾದ ಬಟ್ಟೆಗಳನ್ನು, ವಿವಾಹ ಕಾಣಿಕೆಯೊಂದಿಗೆ ನನ್ನನ್ನು

ಅಪುತ್ರಾ ದುಃಖಿತಾ ವಿಪ್ರ ವ್ರತಾನಿ ವಿವಿಧಾನಿ ಚ ||14||

ಕೃತಾನಿ ಚ ಮಯಾ ತತ್ರ ಕಿಷ್ಕಿಂಧಾಯಾಂ ಮಹಾಪುರಿ ।
ಮಾಘೇ ಮಾಸಿ ಚ ವಿಪ್ರೇಂದ್ರ ವೈಶಾಖೇ ಕಾರ್ತಿಕೇ ತಥಾ ||15||

ಸ್ನಾನದಾನವ್ರತಾದೀನಿ ಚಾತುರ್ಮಾಸ್ಯವ್ರತಂ ತಥಾ ।
ನಮಸ್ಕಾರಸ್ತಥಾ ವಿಪ್ರ ಪ್ರದಕ್ಷಿಣಮನುತ್ತಮಮ್ ||16||

ಶಾಲಗ್ರಾಮಾನ್ನದಾನಾನಿ ದೀಪದಾನಂ ತಥೈವ ಚ ।
ಗೋದಾನಂ ತಿಲದಾನಂ ಚ ವಸ್ತ್ರದಾನಂ ಮಹಾಮುನೇ ||17||

ಭೂದಾನಂ ವಾರಿದಾನಂ ಚ ದತ್ತ್ವಾ ಪುಷ್ಪಾದಿಕಂ ಮುನೇ ।
ಯಾನಿ ಯಾನಿ ಚ ಮುಖ್ಯಾನಿ ವೈಷ್ಣವಾನಿ ವ್ರತಾನಿ ಚ ।
ಮಯಾ ಕೃತಾನಿ ಸರ್ವಾಣಿ ಸತ್ಪುತ್ರಫಲಕಾಂಕ್ಷಯಾ ||18||

ಶ್ರವಣಾದಿಷು ಯತ್ಪ್ರೋಕ್ತಂ ವ್ರತಂ ವಿಪ್ರೈರ್ಮಹಾತ್ಮಭಿಃ ।
ಮಯಾ ಕೃತಂ ಚ ವಿಪ್ರೇಂದ್ರ ತುಷ್ಟ್ಯರ್ಥಂ ಮಧುವಿದ್ವಿಷಃ ||19||

ಯಾನಿ ಯಾನಿ ಚ ಮುಖ್ಯಾನಿ ಫಲಾನಿ ವಿವಿಧಾನಿ ಚ ।
ಮಯಾ ದತ್ತಾನಿ ಸರ್ವಾಣಿ ಸತ್ಪುತ್ರಫಲಕಾಂಕ್ಷಯಾ ||20||

ಮಯಾ ಕೃತಾನ್ಯಸಂಖ್ಯಾನಿ ವ್ರತಾನಿ ವಿವಿಧಾನಿ ಚ ।
ಪುತ್ರಂ ತಥಾಪ್ಯಲಬ್ಧ್ವಾಽಹಂ ದುಃಖಿತಾ ತಪಸಿ ಸ್ಥಿತಾ ||21||

ಕೇಸರಿಯೊಂದಿಗೆ ವಿವಾಹ ಮಾಡಿಕೊಟ್ಟನು. ವಿವಾಹಾನಂತರದಲ್ಲಿ ಬಹುಕಾಲ ಕಳೆದರೂ ಸಹ ನನಗೆ ಮಕ್ಕಳಾಗಿರುವದಿಲ್ಲ. ಮಕ್ಕಳಿರದಿರುವದರಿಂದ ದುಃಖಿತಳಾದ ನಾನು ಅನೇಕ ವ್ರತಗಳನ್ನು ಆಚರಿಸಿದೆನು. ಕಾರ್ತಿಕ, ಮಾಘ, ವೈಶಾಖ ಮಾಸಗಳಲ್ಲಿ ಸ್ನಾನ, ದಾನಾದಿಗಳನ್ನಾಚರಿಸಿದೆನು. ಚಾತುರ್ಮಾಸ್ಯ ವ್ರತ, ನಮಸ್ಕಾರ-ಪ್ರದಕ್ಷಿಣ ವ್ರತ,ಗಳನ್ನು ಮಾಡಿದೆನು. ಪುತ್ರಾರ್ಥವಾಗಿ ಸಾಲಿಗ್ರಾಮದಾನ, ಅನ್ನದಾನ, ದೀಪದಾನ, ಗೋದಾನ, ತಿಲದಾನ, ವಸ್ತ್ರದಾನ, ಭೂದಾನ, ಜಲದಾನ- ಇವೇ ಮೊದಲಾದ ಸಮಗ್ರದಾನಗಳನ್ನು ಮಾಡಿರುವೆನು. ವಿಷ್ಣುಪ್ರೀತಿಕರವಾದ ಪ್ರಮುಖ ವ್ರತಗಳೆಲ್ಲವೂ ಪುತ್ರಪ್ರಾಪ್ತ್ಯರ್ಥವಾಗಿ ನನ್ನಿಂದ ಅನುಷ್ಠಿಸಲ್ಪಟ್ಟಿರುವ-ವಾದರೂ ಸಹ ನಾನು ಮಕ್ಕಳನ್ನು ಪಡೆದಿರುವದಿಲ್ಲ. ಶ್ರವಣೋಪವಾಸವೇ ಮೊದಲಾದ ವ್ರತಗಳನ್ನು ಮಾಡಿದೆನು. ಅಸಂಖ್ಯವಾದ ದಾನಗಳನ್ನು, ಫಲದಾನಾದಿಗಳನ್ನು ಮಾಡಿದರೂ ಸಹ ನನಗೆ ಸಂತಾನವಿರುವದಿಲ್ಲ. ಆದ್ದರಿಂದ ಹೇ ಮುನಿಶ್ರೇಷ್ಠರೇ! ಸಂತಾನಾರ್ಥವಾಗಿ

ಭವಿಷ್ಯತಿ ಕಥಂ ವಿಪ್ರ ಪುತ್ರಸ್ತ್ರೈಲೋಕ್ಯವಿಶ್ರುತಃ ।
ಯಾಚೇಽಹಂ ತು ಮುನಿಶ್ರೇಷ್ಠ ಪ್ರಣತಾ ಚ ತವಾಗ್ರತಃ ॥22॥

ವದ ತ್ವಂ ಮುನಿಶಾರ್ದೂಲ ದೀನಾಹಂ ತಪಸಿ ಸ್ಥಿತಾ ॥23॥

ಶ್ರೀ ಸುತ ಉವಾಚ–

ಏವಂ ವದಂತೀಂ ತಾಂ ಪ್ರಾಹ ಮತಂಗೋ ಮುನಿಸತ್ತಮಃ ।
'ಶೃಣು ಮದ್ವಚನಂ ದೇವಿ ಪುತ್ರಪೌತ್ರಪ್ರದಾಯಕಮ್ ॥24॥

ಇತೋ ದಕ್ಷಿಣದಿಗ್ಭಾಗೇ ದಶಯೋಜನದೂರತಃ ।
ಘನಾಚಲ ಇತಿ ಖ್ಯಾತೋ ನೃಸಿಂಹಸ್ಯ ನಿವಾಸಭೂಃ ॥25॥

ತಸ್ಯೋಪರಿ ಮಹಾಭಾಗೇ ಬ್ರಹ್ಮತೀರ್ಥಂ ಮನೋಹರಮ್ ।
ತಸ್ಯಾಪಿ ಪೂರ್ವದಿಗ್ಭಾಗೇ ದಶಯೋಜನಮಾತ್ರತಃ ॥26॥

ಸುವರ್ಣಮುಖರೀನಾಮ ನದೀನಾಂ ಪ್ರವರಾ ನದೀ ।
ತಸ್ಯಾ ಏವೋತ್ತರೇ ಭಾಗೇ ವೃಷಭಾಚಲನಾಮತಃ ॥27॥

ತಸ್ಯಾಗ್ರೇ ಸರಸೀ ನಾಮ್ನಾ ಸ್ವಾಮಿಪುಷ್ಕರಿಣೀ ಶುಭಾ ।
ಗತ್ವಾ ದೃಷ್ಟ್ವಾ ಶುಭಂ ತೋಯಂ ಮನಃ ಶುದ್ಧಿಂ ಗಮಿಷ್ಯಸಿ ॥28॥

ನಾನು ತಪಸ್ಸಿನಲ್ಲಿ ತೊಡಗಿರುವೆನು ನಿಮಗೆ ನಮಿಸಿ ಬೇಡುವೆನು. ತ್ರಿಲೋಕಗಳಲ್ಲಿ ಪ್ರಸಿದ್ಧನಾಗುವ ಮಗನು ಹುಟ್ಟುವ ಉಪಾಯವನ್ನು ತಿಳಿಸಿರಿ' ಎಂದು ಪ್ರಾರ್ಥಿಸಿದಳು.

ಆಗ ಮತಂಗ ಮಹರ್ಷಿಗಳು ಅಂಜನೆಯನ್ನು ಕುರಿತು 'ಹೇ ಮಂಗಳೇಯೇ! ನಿನಗೆ ಸತ್ಪುತ್ರನು ಹುಟ್ಟುವ ಬಗೆಯನ್ನು ತಿಳಿಸುವೆನು, ಕೇಳು. ಇಲ್ಲಿಗೆ ದಕ್ಷಿಣದಿಕ್ಕಿನಲ್ಲಿ ಹತ್ತುಯೋಜನ ದೂರದಲ್ಲಿ ಘನಾಚಲವೆಂಬ ಪರ್ವತವಿದ್ದು ನರಸಿಂಹನ ನಿವಾಸಸ್ಥಾನವಾಗಿರುವದು. ಅದರ ಮೇಲೆ ಬ್ರಹ್ಮತೀರ್ಥವೆಂಬ ಮನೋಹರವಾದ ತೀರ್ಥವಿರುವದು. ಆ ಘನಾಚಲದ ಪೂರ್ವದಿಕ್ಕಿನಲ್ಲಿ ಹತ್ತು ಯೋಜನ ದೂರದಲ್ಲಿ ಸುವರ್ಣಮುಖರೀ ಎಂಬ ನದಿಯಿದ್ದು ಅದರ ಉತ್ತರ ಭಾಗದಲ್ಲಿ ವೃಷಭಾಚಲವೆಂಬ ಪರ್ವತವಿರುವದು. ಅದರ ಮೇಲ್ಭಾಗದಲ್ಲಿ ದರ್ಶನಮಾತ್ರದಿಂದ ಮನಃಶುದ್ಧಿ ದಾಯಕವಾದ ಸ್ವಾಮಿಪುಷ್ಕರಿಣಿಯೆಂಬ ಸರೋವರವಿರುವದು. ಅಲ್ಲಿ ವಿಧಿಗನುಸಾರವಾಗಿ ಸ್ನಾನವನ್ನು ಮಾಡಿ ವರಾಹ-ಶ್ರೀನಿವಾಸರನ್ನು ಸಂದರ್ಶಿಸು. ಅಲ್ಲಿಂದ ಉತ್ತರ ದಿಕ್ಕಿನಲ್ಲಿರುವ, ಸಿಂಹ, ಹುಲಿಯೇ ಮೊದಲಾದ ವನ್ಯಮೃಗಗಳಿಂದ ಅಲಂಕೃತವಾದ, ಮಾವು, ಸುರಹೊನ್ನೆ,

ತತ್ರ ಸ್ನಾತ್ವಾ ವಿಧಾನೇನ ವರಾಹಂ ತಂ ಪ್ರಣಮ್ಯ ಚ ।
ವೇಂಕಟೇಶಂ ನಮಸ್ಕೃತ್ಯ ತತೋ ಗಚ್ಛ ವರಾನನೇ ॥29॥

ಉತ್ತರೇ ಸ್ವಾಮಿತೀರ್ಥಸ್ಯ ಸಿಂಹಶಾರ್ದೂಲಸಂಯುತೇ ।
ಚೂತಪುನ್ನಾಗಪನಸೈರ್ಬಕುಲಾಮಲಕೈಃ ಶುಭೈಃ ॥30॥

ಚಂದನಾಗುರುನಿಂಬೈಶ್ಚ ತಾಲಹಿಂತಾಲಕಿಂಶುಕೈಃ ।
ಕಪಿತ್ಥಾಶ್ವತ್ಥಬಿಲ್ವೈಶ್ಚ ಇಂಗುದೈಶ್ಚ ವರಾನನೇ ॥31॥

ಏತಾದೃಶೈರ್ಮಹಾಪುಣ್ಯೈರ್ವೃಕ್ಷೈಶ್ಚ ವಿವಿಧೈಃ ಶುಭೈಃ ।
ವಿಯದ್ಗಂಗೇತಿ ವಿಖ್ಯಾತಂ ತೀರ್ಥಮೇಕಂ ವಿರಾಜತೇ ॥32॥

ತಸ್ಮಿಂಸ್ತೀರ್ಥೇಽಂಜನೇ ದೇವಿ ಸಂಕಲ್ಪವಿಧಿಪೂರ್ವಕಮ್ ।
ಸ್ನಾತ್ವಾ ಪೀತ್ವಾ ಶುಭಂ ತೀರ್ಥಂ ತೀರ್ಥಸ್ಯಾಭಿಮುಖೀ ಸ್ಥಿತಾ ॥33॥

ವಾಯುಮುದ್ದಿಶ್ಯ ಹೇ ದೇವಿ ತಪಃ ಕುರು ವರಾನನೇ ।
ದೇವೈಶ್ಚ ರಾಕ್ಷಸೈರ್ವಿಪ್ರೈರ್ಮನುಜೈರ್ಮುನಿಸತ್ತಮೈಃ ॥34॥

ಭೃಂಗೈಃ ಪಕ್ಷಿಭಿರಸ್ತ್ರೈಶ್ಚ ಶಸ್ತ್ರೈಶ್ಚ ವಿವಿಧೈಃ ಶುಭೈಃ ।
ಅವಧ್ಯೋ ಭವಿತಾ ಪುತ್ರಸ್ತಪಸಾ ತೇ ನ ಸಂಶಯಃ' ॥35॥

ಶ್ರೀ ಸೂತ ಉವಾಚ–

ಇತಿ ಪ್ರೋಕ್ತಾಽಂಜನಾದೇವೀ ತಂ ಪ್ರಣಮ್ಯ ಪುನಃಪುನಃ ।
ಭರ್ತ್ರಾ ಸಾಕಂ ಯಯಾವಾಶು ವೇಂಕಟಾಚಲಸಂಜ್ಞಕಮ್ ॥36॥

ಬಕುಲ, ಧಾತ್ರಿ, ಶ್ರೀಗಂಧ, ಅಗುರು, ಧೂಪ, ಬೇವು, ತಾಲ, ಹಿಂತಾಲ, ಕಪಿತ್ಥ, ಅಶ್ವತ್ಥ, ಬಿಲ್ವ, ಇಪ್ಪಿ, ಇಂಗುದ, ಸಂಪಿಗೆಯೇ ಮೊದಲಾದ ಶುಭವೃಕ್ಷಗಳಿಂದ ಪೂರ್ಣವಾದ, ವಿಯದ್ಗಂಗೆ (ಆಕಾಶ ಗಂಗೆ)ಯೆಂದು ಖ್ಯಾತವಾದ ತೀರ್ಥವೊಂದು ವಿರಾಜಿಸುತ್ತಿರುವದು. ಆ ತೀರ್ಥದಲ್ಲಿ ಸಂಕಲ್ಪಪೂರ್ವಕವಾಗಿ ಸ್ನಾನವನ್ನು ಮಾಡಿ ತೀರ್ಥದ ಅಭಿಮುಖವಾಗಿ ನಿಂತು ವಾಯುದೇವರನ್ನು ಉದ್ದೇಶಿಸಿ ತಪಸ್ಸನ್ನು ಮಾಡು. ಅದರಿಂದ ದೇವದಾನವ ಮಾನವಾದಿಗಳಿಂದ, ಅಸ್ತ್ರಶಸ್ತ್ರಗಳಿಂದ, ಪಶುಪಕ್ಷಿಪತಂಗಾದಿಗಳಿಂದಲೂ ಸಹ ಅವಧ್ಯನಾದ ಬಲಸಮನ್ವಿತನಾದ ಮಗನು ನಿನಗೆ ಹುಟ್ಟುವನು. ಇದರಲ್ಲಿ ಸಂದೇಹಿಸದಿರು' ಎಂದು ನುಡಿದರು.

ಮತಂಗ ಋಷಿಗಳ ಮಾತನ್ನಾಲಿಸಿದ ಅಂಜನೆಯು ತನ್ನ ಪತಿಯಾದ ಕೇಸರಿಯಿಂದ ಸಮೇತಳಾಗಿ

ಕಾಪಿಲಂ ತೀರ್ಥಮಾಸಾದ್ಯ ಸ್ನಾತ್ವಾ ನಿರ್ಮಲಮಾನಸಾ ।
ವೇಂಕಟಾದ್ರಿಂ ಸಮಾರುಹ್ಯ ಸ್ವಾಮಿಪುಷ್ಕರಿಣೀಂ ಯಯೌ ॥37॥

ಸ್ನಾತ್ವಾ ವರಾಹಮಾನಮ್ಯ ವೇಂಕಟೇಶಕೃತಾನತಿಃ ।
ಮತಂಗಸ್ಯ ಋಷೇರ್ವಾಕ್ಯಂ ಸ್ಮರಂತೀ ಚ ಮುಹುರ್ಮುಹುಃ ॥38॥

ವಿಯದ್ಗಂಗಾಂ ಯಯಾವಾಶು ಚಾಂಜನಾ ಮಂಜುಭಾಷಿಣೀ ।
ಸ್ನಾತ್ವಾ ಪೀತ್ವಾ ಶುಭಂ ತೋಯಂ ತೀರೇ ತಸ್ಯ ತದುನ್ಮುಖೀ ॥39॥

ಪ್ರಾಣವಾಯುಂ ಸಮುದ್ದಿಶ್ಯ ತಪಶ್ಚಕ್ರೇ ಯತವ್ರತಾ ।
ಫಲಾಹಾರಾ ಜಲಾಹಾರಾ ನಿರಾಹಾರಾ ತತಃ ಪರಮ್ ॥40॥

ಸಹಸ್ರಾಬ್ದಂ ತಪಶ್ಚಕ್ರೇ ನ್ಯಸ್ತನಾಸಾಗ್ರದೃಷ್ಟಿಕಾ ।
ವಯಸ್ಯಾ ವಿಪುಲಾ ನಾಮ ಶುಶ್ರೂಷಾಮಕರೋಚ್ಛುಭಾ ॥41॥

ವರ್ಷಾಣಾಂ ಚ ಸಹಸ್ರಾಂತೇ ವಾಯುರ್ದೇವೋ ಮಹಾಮತಿಃ ।
ಪ್ರಾದುರಾಸೀತ್ತದಾ ತಾಂ ವೈ ಭಾಷಮಾಣೋ ಮಹಾಮತಿಃ ॥42॥

ಮೇಷಸಂಕ್ರಮಣೇ ಭಾನೌ ಸಂಪ್ರಾಪ್ತೇ ಮುನಿಸತ್ತಮಾಃ ।
ಪೂರ್ಣಿಮಾಖ್ಯೇ ತಿಥೌ ಪುಣ್ಯೇ ಚಿತ್ರಾನಕ್ಷತ್ರ ಸಂಯುತೇ ॥43॥

ತವೇಪ್ಸಿತಮಹಂ ದಾಸ್ಯೇ ವರಂ ವರಯ ಸುವ್ರತೇ ।
ಇತಿ ತದ್ವಚನಂ ಶ್ರುತ್ವಾ ತತಃ ಪ್ರಾಹಾಂಜನಾ ಸತೀ ॥44॥

ವೇಂಕಟಾಚಲಕ್ಕೆ ಹೋಗಿ ಕಪಿಲತೀರ್ಥದಲ್ಲಿ ಸ್ನಾನವನ್ನು ಮಾಡಿ ನಿರ್ಮಲ ಮನಸ್ಸಿನಿಂದ ಪರ್ವತವನ್ನೇರಿ, ಸ್ವಾಮಿಪುಷ್ಕರಿಣಿಗೆ ಬಂದಳು. ಅಲ್ಲಿ ಸ್ನಾನವನ್ನುಮಾಡಿ ವರಾಹದೇವರಿಗೆ ಮತ್ತು ಶ್ರೀನಿವಾಸ ದೇವರಿಗೆ ನಮಸ್ಕರಿಸಿ, ಮತಂಗರ ಮಾತಿನಂತೆ ಆಕಾಶಗಂಗೆಗೆ ಬಂದು ಅಲ್ಲಿ ಸ್ನಾನವನ್ನು ಮಾಡಿ, ತೀರ್ಥವನ್ನು ಸೇವಿಸಿ ಫಲಾಹಾರ, ಜಲಾಹಾರಗಳಿಂದ ಕೊನೆಗೆ ನಿರಾಹಾರಳಾಗಿ ಬಹಳಷ್ಟು ವರ್ಷ ತಪಸ್ಸನ್ನಾಚರಿಸಿದಳು. ವಿಪುಲಾ ಎಂಬ ಅಂಜನೆಯ ಸಖಿಯು ಅವಳ ಶುಶ್ರೂಷೆಯನ್ನು ಮಾಡುತ್ತಿದ್ದಳು.

ಹೀಗೆ ಒಂದು ಸಾವಿರ ವರ್ಷ ಕಳೆದಾಗ ಮೇಷಸಂಕ್ರಮಣದ ದಿನ ಚಿತ್ರಾ ನಕ್ಷತ್ರ ಯುಕ್ತವಾದ ಪೂರ್ಣಿಮೆಯ ತಿಥಿಯಲ್ಲಿ (ಚೈತ್ರಶುಕ್ಲ ಪಕ್ಷ ಪೂರ್ಣಿಮೆಯಂದು) ವಾಯುದೇವರು ಆವಿರ್ಭೂತರಾಗಿ 'ನಿನಗಪೇಕ್ಷಿತವಾದದ್ದನ್ನು ಕೊಡುವೆನು. ಕೇಳಿಕೋ' ಎಂದು ಅನುಗ್ರಹಿಸಿದಾಗ

'ಪುತ್ರಂ ದೇಹಿ ಮಹಾಭಾಗ ವಾಯೋ ದೇವ ಮಹಾಮತೇ' ।
ತಸ್ಯಾಸ್ತದ್ವಚನಂ ಶ್ರುತ್ವಾ ಮಾತರಿಶ್ವಾಽಬ್ರವೀತ್ತತಃ ॥45॥

'ಪುತ್ರಸ್ತೇಽಹಂ ಭವಿಷ್ಯಾಮಿ ಖ್ಯಾತಿಂ ದಾಸ್ಯೇ ಶುಭಾನನೇ' ।
ಇತಿ ತಸ್ಯೈ ವರಂ ದತ್ತ್ವಾ ತತ್ರೈವಾಸ್ತೇ ಮಹಾಬಲಃ ॥46॥

ತದಾ ಬ್ರಹ್ಮಾದಯೋ ದೇವಾ ಇಂದ್ರಾದ್ಯಾ ಲೋಕಪಾಲಕಾಃ ।
ವಸಿಷ್ಠಾದ್ಯಾ ಮಹಾತ್ಮಾನಃ ಸನಕಾದ್ಯಾಶ್ಚ ಯೋಗಿನಃ ॥47॥

ವ್ಯಾಸಾದಯಶ್ಚ ವಿಪ್ರೇಂದ್ರಾ ಲಕ್ಷ್ಮ್ಯಾ ಸಾಕಂ ಜಗತ್ಪತಿಃ ।
ಮುನಿಪತ್ನ್ಯೋ ದೇವಪತ್ನ್ಯಃ ಋಷಿಪತ್ನ್ಯಸ್ತಥೈವ ಚ ॥48॥

ಸಂ ಸ್ವಂ ವಾಹರನಮಾರುಹ್ಯ ದಾರಭೃತ್ಯಸುತಾದಿಭಿಃ ।
ಆಗತಾಸ್ತೇ ಮಹಾತ್ಮಾನೋ ದ್ರಷ್ಟುಂ ತಾಂ ತಪಸಿ ಸ್ಥಿತಾಮ್ ॥49॥

ಆಶ್ಚರ್ಯಮಾಶ್ಚರ್ಯಮಿತಿ ಬ್ರುವಾಣಾ ಬ್ರಹ್ಮಾದಯೋ ದೇವಗಣಾಶ್ಚ ಸರ್ವೇ ।
ಆಲೋಕಯಂತೋ ದಿವಿ ದೂರತಸ್ತೇ ಸ್ಥಿತಾಸ್ತದಾ ಬ್ರಹ್ಮಮಹೇಶಮುಖ್ಯಾಃ ॥50॥

ಇತಿ ಸ್ಕಾಂದೇ ಮಹಾಪುರಾಣೇ ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ
'ಅಂಜನಾತಪಃಕರಣಪ್ರಕಾರಾದಿವರ್ಣನಮ್' ಏಕೋನಚತ್ವಾರಿಂಶೋಽಧ್ಯಾಯಃ ॥39॥

* * *

ಅಂಜನೆಯು 'ಮಗನನ್ನು ಕರುಣಿಸು' ಎಂದು ಸಂಪ್ರಾರ್ಥಿಸಿದಳು. ಆಗ ವಾಯುವು 'ನಿನಗೆ ನಾನೇ ಮಗನಾಗಿ ಪ್ರಸಿದ್ಧಿಯನ್ನು ತಂದುಕೊಡುವೆನು' ಎಂದು ನುಡಿದು ಅಲ್ಲಿಯೇ ಆಕಾಶ ಗಂಗೆಯಲ್ಲಿ ಇರುವವನಾದನು. ಅಂಜನೆಯ ತಪಸ್ಸನ್ನು ನೋಡಲು ಆಗಮಿಸಿದ್ದ ಬ್ರಹ್ಮಾದಿ ದೇವತೆಗಳು, ವಸಿಷ್ಠಾದಿ ಋಷಿಗಳು, ಇಂದ್ರಾದಿ ಲೋಕಪಾಲಕರು, ಸನಕಾದಿ ಯೋಗಿಗಳು, ವ್ಯಾಸಾದಿ ಋಷಿಗಳು, ವಿಪ್ರರು, ಋಷಿಪತ್ನಿಯರು, ದೇವಪತ್ನಿಯರು, ಲಕ್ಷ್ಮೀಸಮೇತನಾದ ನಾರಾಯಣ– ಇವರೆಲ್ಲರೂ ತಪಸ್ಸಿನಲ್ಲಿ ಆಸಕ್ತಳಾಗಿದ್ದ ಅಂಜನೆಯನ್ನು ಮತ್ತು ವಾಯುದೇವರು ಮಾಡಿದ ಅನುಗ್ರಹವನ್ನು ನೋಡಿ 'ಆಶ್ಚರ್ಯ ಆಶ್ಚರ್ಯ' ಎಂದು ನುಡಿದರು.

ಇಲ್ಲಿಗೆ ಸ್ಕಾಂದಪುರಾಣದ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ ನಾರದರ **ಅಂಜನಾತಪಃಕರಣಾದಿ ವರ್ಣನವೆಂಬ** ಮೂವತ್ತೊಂಭತ್ತನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

## ಅಥ ಚತ್ವಾರಿಂಶೋಽಧ್ಯಾಯಃ

[ಅಂಜನಾವರಲಬ್ಧ್ಯಾಕಾಶಗಂಗಾಸ್ನಾನ ಕಾಲನಿರ್ಣಯಾದಿ ವರ್ಣನಮ್]

ಸೂತ ಉವಾಚ–

ಅಂಜನಾಽಪಿ ವರಂ ಲಬ್ಧ್ವಾ ಭರ್ತ್ರಾ ಸಾಕಂ ಮುಮೋದ ಹ ।
ಬ್ರಹ್ಮಾದೀನಾಗತಾನ್ ದೃಷ್ಟ್ವಾ ವಿಸ್ಮಯಾವಿಷ್ಟಮಾನಸಾ ॥1॥

ಪತ್ಯಾ ಸಾಕಂ ತತಃ ಸ್ವಸ್ಥಾ ಚಾಂಜನಾ ಮಂಜುಭಾಷಿಣೀ ।
ಬ್ರಹ್ಮಾದಿಭಿರನುಜ್ಞಪ್ತೋ ವ್ಯಾಸೋ ವೇದವಿದಾಂವರಃ ॥2॥

ಅಂಜನಾಂ ತಾಮುವಾಚೇದಂ ಮೇಘಗಂಭೀರಯಾ ಗಿರಾ ॥3॥

ವ್ಯಾಸ ಉವಾಚ–

'ಅಂಜನೇ ಶೃಣು ಮದ್ವಾಕ್ಯಂ ಸರ್ವಲೋಕೋಪಕಾರಕಮ್ ।
ಮತಂಗಸ್ಯ ಋಷೇರ್ವಾಕ್ಯಂ ಶ್ರುತ್ವಾ ನಿರ್ಮಲಚೇತಸಾ ॥4॥

ಯಸ್ಮಾತ್ತು ವೇಂಕಟಂ ಗತ್ವಾ ತಪಃ ಕೃತ್ವಾ ಸುದುಷ್ಕರಮ್ ।
ಪ್ರಸೂಯತೇ ತ್ವಯಾ ಪುತ್ರಃ ಶೂರಸ್ತ್ರೈಲೋಕ್ಯವಿಕ್ರಮಃ ॥5॥

## ನಲವತ್ತನೆಯ ಅಧ್ಯಾಯ

[ಅಂಜನಾವರಲಬ್ಧಿ–ಆಕಾಶಗಂಗಾ ಸ್ನಾನಕಾಲನಿರ್ಣಯ]

ಕೇಸರಿಯಿಂದ ಸಹಿತಳಾದ ಅಂಜನೆಯು ವಾಯುದೇವರಿಂದ ವರವನ್ನು ಹೊಂದಿ ಬಹಳಷ್ಟು ಸಂತುಷ್ಟಳಾದಳು. ಅದೇ ಸಮಯದಲ್ಲಿ ಬ್ರಹ್ಮಾದಿ ದೇವತೆಗಳನ್ನು ನೋಡಿ ಬಹು ಆಶ್ಚರ್ಯವನ್ನು ಹೊಂದಿದಳು.

ಆಗ ವೇದವ್ಯಾಸದೇವರು ಅಂಜನೆಯನ್ನು ಕುರಿತು 'ಮತಂಗ ಮಹರ್ಷಿಯ ಮಾತಿನಂತೆ ವೇಂಕಟಾಚಲಕ್ಕೆ ಬಂದು ತಪಸ್ಸನ್ನಾಚರಿಸಿರುವಿಯಾದ್ದರಿಂದ ನಿನಗೆ ತ್ರೈಲೋಕ್ಯವಿಖ್ಯಾತನಾದ ಪುತ್ರನು ಜನಿಸುವವನು. ವಾಯುದೇವರು ಪ್ರತ್ಯಕ್ಷರಾದ ದಿನದಂದು ಗಂಗಾದಿ ಸರ್ವತೀರ್ಥಗಳೂ ಸಹ ಆಕಾಶಗಂಗೆಯಲ್ಲಿ ಸನ್ನಿಹಿತವಾಗುವವು. ಬ್ರಹ್ಮಾಂಡದಲ್ಲಿ ವೇಂಕಟಾಚಲಕ್ಕೆ ಸಮಾನವಾದ

ಇದಂ ತೀರ್ಥೋತ್ತಮಂ ತಸ್ಮಾತ್ತತ್ರತ್ಯಕ್ಷದಿವಸೇ ತವ ।
ಗಂಗಾದ್ಯಾನಿ ಚ ತೀರ್ಥಾನಿ ಸಮಾಯಾಂತಿ ಜಗತ್ತ್ರಯೇ ॥6॥

ವೇಂಕಟಾದ್ರಿಸಮಂ ತೀರ್ಥಂ ಬ್ರಹ್ಮಾಂಡೇ ನಾಸ್ತಿ ಕಿಂಚನ ।
ತತ್ರಾಪ್ಯತ್ಯಂತಪುಣ್ಯಾ ವೈ ಸ್ವಾಮಿಪುಷ್ಕರಿಣೀ ಶುಭಾ ॥7॥

ತತೋಽಧಿಕಮಿದಂ ತೀರ್ಥಂ ಪ್ರತ್ಯಕ್ಷಂ ದಿವಸೇ ತವ ।
ಸ್ನಾನಾರ್ಥಂ ಯೇ ಸಮಾಯಾಂತಿ ಚಿತ್ರಾಋಕ್ಷಸಮನ್ವಿತೇ ॥8॥

ಮೇಷೇ ಪೂಷಣಿ ಸಂಪ್ರಾಪ್ತೇ ಪೂರ್ಣಿಮಾಯಾಂ ಶುಭೇ ದಿನೇ ।
ಶೃಣು ತೇಷಾಂ ಫಲಂ ದೇವಿ ವಕ್ಷ್ಯಾಮಿ ತವ ಸುವ್ರತೇ ॥9॥

ಗಂಗಾದಿಸರ್ವತೀರ್ಥೇಷು ದ್ವಾದಶಾಬ್ದಂ ವರಾನನೇ ।
ಯತ್ಫಲಂ ವಿದ್ಯತೇ ದೇವಿ ತತ್ಫಲಂ ಭವತಿ ಧ್ರುವಮ್ ॥10॥

ದಾನಾನಿ ಕುರ್ವತಾಂ ಪುಂಸಾಂ ತೇಷಾಂ ಶೃಣು ಫಲೋನ್ನತಿಮ್ ।
ಸ್ಥಾನೇ ತೂಕ್ತಂ ಫಲಂ ದೇವಿ ವಿದ್ಧಿ ತೇಷಾಂ ವರಾನನೇ ॥11॥

ಅಂಜನೋವಾಚ–

'ಕಾರ್ಯಾಣಿ ಯಾನಿ ದಾನಾನಿ ವೇಂಕಟಾದ್ರೌ ನಗೋತ್ತಮೇ ।
ತಾನಿ ಸರ್ವಾಣಿ ವಿಪ್ರೇಂದ್ರ ವದ ವೇದವಿದಾಂ ವರ' ॥12॥

ವ್ಯಾಸ ಉವಾಚ–

'ಅನ್ನದಾನಂ ವಸ್ತ್ರದಾನಂ ದ್ವಯಮೇತತ್ಪ್ರಶಸ್ಯತೇ ।

ತೀರ್ಥಕ್ಷೇತ್ರವಿರುವದಿಲ್ಲ. ಅದರಲ್ಲಿಯೂ ಅತ್ಯಂತ ಪುಣ್ಯಕರವಾದದ್ದು ಸ್ವಾಮಿಪುಷ್ಕರಿಣಿಯು. ಆದರೆ ಚೈತ್ರಮಾಸದ ಪೂರ್ಣಿಮೆಯ ದಿನ ಚಿತ್ರನಕ್ಷತ್ರವಿರುವ ದಿನ, ವಾಯುದೇವರು ಪ್ರತ್ಯಕ್ಷರಾದ ದಿನದಂದು ಆಕಾಶಗಂಗೆಯು ಸ್ವಾಮಿಪುಷ್ಕರಿಣಿಗಿಂತಲೂ ಅಧಿಕವೆನಿಸುವದು. ಅಂದು ಆಕಾಶಗಂಗೆಯಲ್ಲಿ ಸ್ನಾನಮಾಡುವವರು ಗಂಗಾದಿ ತೀರ್ಥಗಳಲ್ಲಿ ವಿಧಿಗನುಸಾರವಾಗಿ ಹನ್ನೆರಡು ವರ್ಷ ಸ್ನಾನವನ್ನಾಚರಿಸಿದ ಫಲವನ್ನು ಹೊಂದುವರು. ದಾನಗಳನ್ನು ಮಾಡುವವರು ವಿಶಿಷ್ಟ ಫಲಗಳನ್ನು ಹೊಂದುವರು' ಎಂದು ನುಡಿದರು.

ಆಗ ಅಂಜನೆಯು ಯಾವ ಯಾವ ದಾನಗಳನ್ನು ಮಾಡಬೇಕು ಎಂದು ತಿಳಿಯ ಬಯಸಿದಾಗ ವೇಂಕಟಾದ್ರಿಯಲ್ಲಿ ಆಕಾಶಗಂಗೆಯ ಬಳಿ ಮಾಡಬೇಕಾದ ದಾನಗಳನ್ನು ತಿಳಿಸುತ್ತಾರೆ. ಅನ್ನದಾನ,

ಪಿತುಃ ಶ್ರಾದ್ಧಂ ವಿಶೇಷೇಣ ವೇಂಕಟಾದ್ರೌ ನಗೋತ್ತಮೇ ।
ಸುವರ್ಣಂ ಯೇ ಪ್ರಯಚ್ಛಂತಿ ಪ್ರೀತಯೇ ಮಧುಘಾತಿನಃ ॥13॥

ಶಾಲಗ್ರಾಮಶಿಲಾದಾನಂ ಯೇ ಕುರ್ವಂತಿ ನಗೋತ್ತಮೇ ।
ಲಿಂಗಭಂಗಮವಾಪ್ನೋತಿ ಸ್ವಾನುಭೂತಿಂ ಚ ವಿಂದತಿ ॥14॥

ಯೋ ದದಾತಿ ದ್ವಿಜೇಂದ್ರಾಯ ಗೋದಾನಂ ಚ ಕುಟುಂಬಿನೇ ।
ರೋಮಸಂಖ್ಯಾಪ್ರಮಾಣೇನ ವಿಷ್ಣುಲೋಕೇ ವಿರಾಜತೇ ॥15॥

ಭೂಮಿಂ ದದಾತಿ ಯೋ ದೇವಿ ಬ್ರಾಹ್ಮಣಾಯ ಕುಟುಂಬಿನೇ ।
ತಸ್ಯ ಪುಣ್ಯಫಲಂ ವಕ್ತುಂ ಕಃ ಶಕ್ತೋ ದಿವಿ ವಾ ಭುವಿ ॥16॥

ಕನ್ಯಾಂ ದದಾತಿ ಯೋ ದೇವಿ ಶ್ರೋತ್ರಿಯಾಯ ದ್ವಿಜಾತಯೇ ।
ವಿಷ್ಣುಲೋಕಂ ಸಮಾಸಾದ್ಯ ಮೋದತೇ ಪಿತೃಭಿಸ್ಸಹ ॥17॥

ಪ್ರಪಾಂ ಕುರ್ವಂತಿ ಯೋ ದೇವಿ ಶೀತಲೋದಕಸಂಯುತಾಮ್ ।
ತೇಷಾಂ ಪುಣ್ಯಫಲಂ ವಕ್ತುಂ ಶೇಷೇಣಾಪಿ ನ ಶಕ್ಯತೇ ॥18॥

ತಿಲಂ ದದಾತಿ ವಿಪ್ರಾಯ ಶ್ರೋತ್ರಿಯಾಯ ಕುಟುಂಬಿನೇ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ಸ ಗಚ್ಛತಿ ॥19॥

ವಸ್ತ್ರದಾನಗಳು ಅತ್ಯಂತ ಪ್ರಶಸ್ತವೆನಿಸುವವು. ವೇಂಕಟಾದ್ರಿಯಲ್ಲಿ ಪಿತೃಶ್ರಾದ್ಧವು ಪಿತೃಗಳಿಗೆ ವಿಶೇಷ ಪ್ರೀತಿದಾಯಕವಾಗಿರುವದು. ಭಗವತ್ಪ್ರೀತ್ಯರ್ಥವಾಗಿ ಸುವರ್ಣದಾನವನ್ನು ಮಾಡುವವರು ಸ್ವರ್ಗಸುಖವನ್ನನುಭವಿಸುವರು. ಶಾಲಗ್ರಾಮ ಶಿಲಾದಾನವನ್ನು ಮಾಡುವವರು ಲಿಂಗಭಂಗವನ್ನು ಹೊಂದಿ ಸ್ವರೂಪಾನಂದಾನುಭವರೂಪವಾದ ಮುಕ್ತಿಯನ್ನೇ ಹೊಂದುವರು. ಬ್ರಾಹ್ಮಣರಿಗೆ ಗೋದಾನವನ್ನು ಮಾಡುವವರು ಆಕಳಿನ ಕೂದಲುಗಳ ಸಂಖ್ಯೆಯಷ್ಟು ಕಾಲ ವಿಷ್ಣುಲೋಕದಲ್ಲಿ ವಾಸಮಾಡುತ್ತಾರೆ. ಕುಟುಂಬಿಯಾದ ಬ್ರಾಹ್ಮಣರಿಗೆ ಭೂದಾನವನ್ನು ಮಾಡುವವರ ಪುಣ್ಯವನ್ನು ವರ್ಣಿಸಲಶಕ್ಯವಾಗಿರುವದು. ಶ್ರೋತ್ರಿಯ ಬ್ರಾಹ್ಮಣನಿಗೆ ಕನ್ಯಾದಾನವನ್ನು ಮಾಡುವ ವ್ಯಕ್ತಿಯು ಪಿತೃಗಳಿಂದ ಸಮೇತನಾಗಿ ಮೋಕ್ಷವನ್ನು ಹೊಂದಿ ವಿಷ್ಣುಲೋಕದಲ್ಲಿ ಸಂತೋಷವನ್ನು ಅನುಭವಿಸುವನು. ಪ್ರಪಾ (ಅರವಟ್ಟಿಗೆ) ಗಳನ್ನು ನಿರ್ಮಿಸುವವನ ಪುಣ್ಯವನ್ನು ವರ್ಣಿಸಲು ಶೇಷದೇವರೂ ಸಹ ಸಮರ್ಥರೆನಿಸುವದಿಲ್ಲ. ತಿಲದಾನದಿಂದ ಸರ್ವಪಾಪಗಳೂ ನಷ್ಟವಾಗಿ ವಿಷ್ಣುಲೋಕವನ್ನೇ ಹೊಂದುವನು. ವೇದಗಳನ್ನು ತಿಳಿದಿರುವವರು ಧಾನ್ಯದಾನವನ್ನು ಬಹುವಾಗಿ

ಧಾನ್ಯದಾನಂ ಪ್ರಶಂಸಂತಿ ವಿಪ್ರಾ ವೇದವಿದಾಂ ವರಾಃ ।
ಬಹುಪುತ್ರಾ ಭವಿಷ್ಯಂತಿ ಧಾನ್ಯದಾನಂ ಪ್ರಕುರ್ವತಾಮ್ ॥20॥

ಗಂಧಚಂಪಕಪುಷ್ಪಾದೀನ್ ಛತ್ರವ್ಯಜನಚಾಮರಾನ್ ।
ತಾಂಬೂಲಘನಸಾರಾದೀನ್ ಯೋ ದದಾತಿ ದ್ವಿಜಾತಯೇ ॥21॥

ಭುಕ್ತ್ವಾ ಭೋಗಂ ಚಿರಂ ಕಾಲಂ ಸ್ವರ್ಗಲೋಕಂ ತತೋ ವ್ರಜೇತ್ ।
ದಿವ್ಯವರ್ಷಸಹಸ್ರಂ ಚ ಭುಕ್ತ್ವಾ ಭೋಗಾನನೇಕಶಃ ॥22॥

ಸಾರ್ವಭೌಮಸ್ತತೋ ಭೂತ್ವಾ ತತ್ರ ಭುಕ್ತ್ವಾ ಚಿರಂ ಮಹೀಮ್ ।
ತತೋ ವಿಪ್ರತ್ವಮಾಸಾದ್ಯ ವೇದವೇದಾಂತಪಾರಗಃ ॥23॥

ತತೋ ಮುಕ್ತಿಂ ಸಮಾಯಾತಿ ಪ್ರಸಾದಾಚ್ಚಕ್ರಪಾಣಿನಃ ।
ಇತ್ಯೇತತ್ಕಥಿತಂ ದೇವಿ ವೇಂಕಟಾಚಲವೈಭವಮ್ ॥24॥

ಯ ಏತಚ್ಛೃಣುಯಾನ್ನಿತ್ಯಂ ಯಶ್ಚಾಪಿ ಪರಿಕೀರ್ತಯೇತ್ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ಸ ಗಚ್ಛತಿ ॥25॥

ಇತ್ಯೇತತ್ಕಥಿತಂ ಪೂರ್ವಂ ವ್ಯಾಸೇನೈವ ಮಹಾತ್ಮನಾ ।
ಶೃಣುಯಾದ್ವಾ ಪಠೇದ್ವಾಪಿ ಕೃತಕೃತ್ಯೋ ಭವಿಷ್ಯತಿ ॥26॥

ಪ್ರಶಂಸಿಸುವರು. ಧಾನ್ಯದಾನವನ್ನು ಮಾಡಿದ ವ್ಯಕ್ತಿಯು ಬಹುಪುತ್ರರನ್ನು ಪಡೆದು ಸಂತೋಷಿಸುವನು. ಗಂಧ, ಸಂಪಿಗೆಯೇ ಮೊದಲಾದ ಸುಗಂಧಯುತವಾದ ಪುಷ್ಪಗಳನ್ನು, ಛತ್ರ, ಚಾಮರ, ವ್ಯಜನಗಳನ್ನು, ತಾಂಬೂಲ, ಕರ್ಪೂರಾದಿಗಳನ್ನು ಯಾರು ಬ್ರಾಹ್ಮಣರಿಗೆ ದಾನ ಮಾಡುವನೋ ಅವನು ದೇವತೆಗಳ ಮಾನದಿಂದ ಒಂದು ಸಾವಿರ ವರ್ಷದಷ್ಟು ಕಾಲ ಸ್ವರ್ಗದಲ್ಲಿ ಬಹು ಭೋಗಗಳನ್ನನುಭವಿಸಿ ಅನಂತರ ಭೂಮಿಯಲ್ಲಿ ಸಾರ್ವಭೌಮನಾಗಿ ಜನಿಸಿ, ಭೂಮಿಯನ್ನು ಬಹುಕಾಲ ಆಳಿ ಕೊನೆಗೆ ಶೇಷಾಚಲಾಧಿಪತಿಯಾದ ಚಕ್ರಪಾಣಿಯ ಪ್ರಸಾದದಿಂದ ಮುಕ್ತಿಯನ್ನು ಹೊಂದುವನು.

ಹೇ ಅಂಜನೆಯೇ! ನಿನಗೆ ಇಲ್ಲಿಯ ವರೆಗೂ ವೇಂಕಟಾಚಲ ವೈಭವವನ್ನು ಪ್ರಶಂಸಿಸಿರುವೆನು. ಯಾರು ಇದನ್ನು ನಿತ್ಯದಲ್ಲಿ ಕೀರ್ತನಮಾಡುವರೋ, ಯಾರು ಶ್ರವಣಮಾಡುವರೋ ಅವರು ಸರ್ವಪಾಪಗಳಿಂದ ವಿಮುಕ್ತರಾಗಿ ವಿಷ್ಣುಲೋಕವನ್ನೇ ಹೊಂದುವರು.

**ತಸ್ಯೈವ ವಂಶಜಾಃ ಸರ್ವೇ ಮುಕ್ತಿಂ ಯಾಂತಿ ನ ಸಂಶಯಃ ॥27॥**

ಇತಿ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀವರಾಹ ಸಂವಾದೇ **'ಅಂಜನಾವರಲಬ್ಧ್ಯಾಕಾಶಗಂಗಾಸ್ನಾನ ಕಾಲನಿರ್ಣಯಾದಿ ವರ್ಣನಮ್'** ನಾಮ ಚತ್ವಾರಿಂಶೋಽಧ್ಯಾಯಃ ॥40॥

ಶ್ರೀವೇಂಕಟಾಚಲಮಾಹಾತ್ಮ್ಯಂ ಸಮಾಪ್ತಂ

॥ಶ್ರೀ ಕೃಷ್ಣಾರ್ಪಣಮಸ್ತು ॥

॥ಶ್ರೀವೇಂಕಟೇಶಾರ್ಪಣಮಸ್ತು ॥

ಈ ವೇಂಕಟಾಚಲದ ವೈಭವವು ವೇದವ್ಯಾಸದೇವರಿಂದಲೇ ಹಿಂದೆ ಹೇಳಲ್ಪಟ್ಟಿರುವದು. ಇದನ್ನು ಕೇಳುವದರಿಂದ, ಹೇಳುವದರಿಂದ ವ್ಯಕ್ತಿಯು ಕೃತಕೃತ್ಯನಾಗಿ ಅವನ ವಂಶಜರೂ ಸಹ ಮುಕ್ತಿಯನ್ನು ಹೊಂದುವರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಾತ್ಮಕವೆಂದು ಪ್ರಸಿದ್ಧವಾದ ಸ್ಕಾಂದಪುರಾಣದ ಎರಡನೆಯ ಖಂಡವಾದ ವೈಷ್ಣವ ಖಂಡದಲ್ಲಿಯ ವೇಂಕಟಾಚಲ ಮಾಹಾತ್ಮೆಯಲ್ಲಿ ಧರಣೀ ವರಾಹ ಸಂವಾದದಲ್ಲಿ **ಅಂಜನಾವರಲಬ್ಧಿ ಆಕಾಶಗಂಗಾಸ್ನಾನಕಾಲಾದಿ ವರ್ಣನವೆಂಬ** ನಲವತ್ತನೆಯ ಅಧ್ಯಾಯವು ಪರಿಸಮಾಪ್ತವಾಯಿತು.

* * *

ಶ್ರಿಯಃ ಕಾಂತಾಯಕಲ್ಯಾಣನಿಧಯೇ ನಿಧಯೇಽರ್ಥಿನಾಮ್ ।
ಶ್ರೀವೇಂಕಟನಿವಾಸಾಯ ಶ್ರೀನಿವಾಸಾಯ ಮಂಗಲಮ್ ॥



ಶ್ರೀವೇಂಕಟಾದ್ರಿನಿಲಯಃ ಕಮಲಾಕಾಮುಕಃ ಪುಮಾನ್ ।
ಅಭಂಗರವಿಭೂತಿರ್ನಸ್ತರಂಗಯತು ಮಂಗಲಮ್ ॥



॥ ಶ್ರೀ ಕೃಷ್ಣಾರ್ಪಣಮಸ್ತು ॥

## ಇದೇ ಲೇಖಕಕರ

## ಸ್ವತಂತ್ರ–ಖಂಡನಮಂಡನಾತ್ಮಕ– ಅನುವಾದಿತ / ಸಂಪಾದಿತ ಕೃತಿಗಳು

ಶ್ರೀ ಶ್ರೀ ಸತ್ಯಧ್ಯಾನತೀರ್ಥರು ಹಾಗೂ ಶ್ರೀ ಬಾದರಾಯಣ ದರ್ಶನ
ಶ್ರೀಮನ್ನ್ಯಾಯಸುಧಾಲೇಶ ಸಂಗ್ರಹ
ಶ್ರೀಮದ್ವಾಯುಸ್ತುತಿ ವೈಭವಂ (ಈಶಾನಸ್ತುತಿ ಖಂಡನಾತ್ಮಕ)
ದ್ವೈತ ತತ್ವ ಪ್ರಬೋಧಿನೀ (ಅದ್ವೈತ ತತ್ವ ಪ್ರಕಾಶಿಕಾ ಖಂಡನಾತ್ಮಕ)
ವ್ಯಾಸಸಿದ್ಧಾಂತ ದರ್ಪಣಂ (ವ್ಯಾಸತಾತ್ಪರ್ಯ ನಿರ್ಣಯ ಖಂಡನಾತ್ಮಕ)
ವೇದಾಂತ ಸಿದ್ಧಾಂತ ದರ್ಪಣ (ವೇದಾಂತ ಸಿದ್ಧಾಂತ ಖಂಡನಾತ್ಮಕ)
ಸಭಾಸಾರಸಂಗ್ರಹ ಅಸಾರತಾ ಭಂಜನಂ (ಸಭಾಸಾರಸಂಗ್ರಹ ಅಸಾರತಾ ಖಂಡನಾತ್ಮಕ)
ನವ್ಯದುರುಕ್ತಿಖಂಡನಂ (ಮಾಣಿಕ್ಯ ಮಂಜರೀ ಖಂಡನಾತ್ಮಕ)

ಕೃಷ್ಣಾಮೃತಮಹಾರ್ಣವಃ
ಪ್ರಮಾಣಪದ್ಧತಿಃ
ಪ್ರಮಾಣಪದ್ಧತಿಭಾವದೀಪಃ
ಪುರುಷಸೂಕ್ತಾರ್ಥಃ
ಶ್ರೀಬಳಿತ್ಥಾಸೂಕ್ತಂ
ಅಣುಮಧ್ವವಿಜಯಃ
ಅಣು ಜಯತೀರ್ಥ ವಿಜಯಃ
ಜಯತೀರ್ಥ ವಿಜಯಃ
ಜಯತೀರ್ಥಸ್ತುತಿಃ
ಶ್ರೀಪಾದರಾಜಸ್ತುತಿಮಂಜರೀ
ಬ್ರಹ್ಮಣ್ಯತೀರ್ಥಸ್ತುತಿಮಂಜರೀ
ನಯಸಿದ್ಧಾಂತಸಂಗ್ರಹಃ
ಅಣುಭಾಷ್ಯಾರ್ಥಸಂಗ್ರಹಃ
ಅಣುಭಾಷ್ಯ ಪ್ರದೀಪಃ
ಬ್ರಹ್ಮಸೂತ್ರಭಾಷ್ಯಂ
ಬ್ರಹ್ಮಸೂತ್ರಾಣಿ ಅಣುಭಾಷ್ಯಂ ಚ
ಸರ್ವಮೂಲ ಆದ್ಯಂತ ಶ್ಲೋಕಸಂಗ್ರಹಃ
ಶ್ರೀಮದಣುಭಾಷ್ಯಂ
ಶ್ರೀಮದ್ಭಗವದ್ಗೀತಾಸಂಗ್ರಹ

ಧರ್ಮಶಾಸ್ತ್ರದರ್ಪಣಂ
ಶ್ರೀಹನುಮದ್ವ್ರತಕಥಾ
ಮುಖ್ಯಪ್ರಾಣಗದ್ಯಂ
ಶಿವಸ್ತುತಿಃ
ವ್ಯಾಸಾವತಾರ ಕಥಾ ನಿರೂಪಣ
ಸದಾಚಾರಸ್ಮೃತಿಃ
ಶ್ರೀ ಸನ್ನ್ಯಾಯರತ್ನಾವಲೀ ಭಾಗ–೧
ಶ್ರೀ ಸನ್ನ್ಯಾಯರತ್ನಾವಲೀ ಭಾಗ–೨
ವಿಷ್ಣುತತ್ತ್ವಪ್ರಕಾಶಃ
ವಿಷ್ಣುತತ್ತ್ವಪ್ರಸಿದ್ಧಿಃ
ವಿದೇಶಗಮನನಿಷೇಧಃ
ಶ್ರೀವೆಂಕಟೇಶಮಹಾತ್ಮ್ಯಂ–೧
ಶ್ರೀವೇಂಕಟೇಶಮಾಹಾತ್ಮ್ಯಂ–೨
ವಿಷ್ಣುಪುರಾಣ ಭಾಗ–೧
ವಿಷ್ಣುಪುರಾಣ ಭಾಗ–೨
ವಿಷ್ಣುಪುರಾಣ ಭಾಗ–೩
ವಿಷ್ಣುಪುರಾಣ ಭಾಗ–೪